# ಭಾರತದರ್ಶನ
# (Discovery of India)

ಬಹುಕೋಟಿ ಪ್ರಜಾಸಂಖ್ಯೆಯುಳ್ಳ ಭಾರತದಂಥ ಸಂಪದ್ಯುಕ್ತವಾದ ಪುರಾತನ ಭೂಖಂಡ ಸಾವಿರಾರು ಮೈಲಿಗಳ ದೂರದಲ್ಲಿರುವ ಇಂಗ್ಲೆಂಡಿನಂಥ ಸಣ್ಣ ರಾಜ್ಯವೊಂದಕ್ಕೆ ಹೇಗೆ ವಶವಾಗಿ ಅಧೀನವಾಯಿತು ? ಬಹು ಹಿಂದೆ ಪ್ರಪಂಚದ ಬಹುಭಾಗ ಅಜ್ಞಾನದಲ್ಲಿ ಮುಳುಗಿದ್ದಾಗ ಭಾರತ ಶ್ರೀಮಂತವಾದ ಸಂಸ್ಕಾರವನ್ನೂ ಉದಾತ್ತವಾದ ಧರ್ಮ ತತ್ತ್ವಗಳನ್ನೂ ಮೆರೆದು ಧರೆಗೆ ಬೆಳಕಾಯಿತಲ್ಲವೆ? ಆ ಬೆಳಕಿನ ಶಕ್ತಿ ಮೂಲ ಯಾವುದು? ಭಾರತ ಅದನ್ನು ಹೇಗೆ ಕಳೆದುಕೊಂಡಿತು ? ಪೂರ್ಣವಾಗಿ ಕಳೆದುಕೊಂಡಿದೆಯೆ ? ಯಾವ ದೋಷದೌರ್ಬಲ್ಯಗಳಿಗೊಳಗಾಗಿ ಈ ದೇಶ ಶತಶತಮಾನಗಳ ಕಾಲ ದೇಶವಿದೇಶಗಳ ಜನರ ತಂಡೋಪತಂಡಗಳ ಧಾಳಿಗೊಳಪಟ್ಟು ಪರಾಧಿಪತ್ಯಕ್ಕೆ ಸೆರೆಯಾಗಿ ನರಳಿತು ? ಅದರೂ, ಬೇರೆಬೇರೆ ರಾಜ್ಯ ಸಾಮ್ರಾಜ್ಯಗಳು ಪರಧಾಳಿಗಳಿಂದ ನಿರ್ನಾಮವಾಗಿರುವಾಗ ಯಾವ ದುರ್ದಮ್ಯವಾದ ಅಂತಃಶಕ್ತಿಯಿಂದ ಈ ಭಾರತ ಪುನಃ ಪುನಃ ತಲೆಯೆತ್ತಿಕೊಳ್ಳುತ್ತಿದೆ, ಪ್ರಬಲವಾದ ಬ್ರಿಟಿಷ್ ಸಾಮ್ರಾಜ್ಯವನ್ನೂ ಎದುರಿಸಿ ದಾಸ್ಯವನ್ನು ತೊಡೆದು ನಿಂತಿದೆ ? ಪುರಾತನ ನೂತನ ಭಾರತಗಳಿಗೆ ಸಂಬಂಧವಿದೆಯೆ ? ಧರ್ಮ ತತ್ವ ಸಂಸ್ಕಾರಗಳ ಭಾರತ ನೂತನ ವಿಜ್ಞಾನದ ಆಧುನಿಕ ಯುಗದೊಡನೆ ಹೊಂದಿಕೊಳ್ಳಬಲ್ಲುದೆ ? ಇಂದಿನ ಬಲಪ್ರಧಾನವಾದ ತುಮುಲ ಪ್ರಪಂಚದಲ್ಲಿ—ಮುದಿ ಭಾರತ ಇನ್ನೊಮ್ಮೆ ಸತ್ವಶಾಲಿಯಾಗಿ ಪ್ರಭಾವಶಾಲಿಯಾಗಿ ಪುನರ್ನೂತನವಾಗಿ ಬಾಳಬಲ್ಲುದೆ ? ಯೋಚನಾಪರನಾದ ದೇಶಪ್ರೇಮಿಯ ಅಂತರಂಗದಲ್ಲಿ ಹೀಗೆ ಉದ್ಭವಿಸುವ ನಾನಾ ಪ್ರಶ್ನೆಗಳನ್ನು ಮಥಿಸುತ್ತ ಶ್ರೀ ಜವಹರಲಾಲರು ಈ ಗ್ರಂಥದಲ್ಲಿ ಭಾರತದ ಇತಿಹಾಸವನ್ನು, ಆತ್ಮವನ್ನು, ಪುರಾತನ–ನೂತನ ಶಕ್ತಿ ಮೂಲವನ್ನು ತಮ್ಮದೇ ಆದ ಉದಾರವಾದ ದೃಷ್ಟಿಯಿಂದ ಅವಲೋಕಿಸಿದ್ದಾರೆ, ವಿವೇಚಿಸಿದ್ದಾರೆ, ವಿಮರ್ಶಿಸಿದ್ದಾರೆ. ಭಾರತದ ಭವಿಷ್ಯತ್ತಿನಲ್ಲಿ ಆಶಾವಾದಿಯಾದ ಯಾವ ಭಾರತೀಯನೂ ಈ ಮಹತ್ಕೃತಿಯನ್ನು ಓದಿ ಸಂತೋಷಗೊಳ್ಳದಿರಲಾರನು.

# ಭಾರತ ದರ್ಶನ

ಜವಹರಲಾಲ ನೆಹರು

ಅನುವಾದಕ :

ಸಂ. ವಾ. ಕೃಷ್ಣಮೂರ್ತಿರಾವ್

ಪ್ರಕಾಶಕರು:

ಕಾವ್ಯಾಲಯ

ಮೈಸೂರು

೧೯೪೨ ನೆಯ ಆಗಸ್ಟ್ ೯ ರಿಂದ
೧೯೪೫ ನೆಯ ಮಾರ್ಚಿ ೨೮ ರ ವರೆಗೆ
ಅಹಮದ್‌ನಗರದ ಕೋಟೆಯ ಸೆರೆಮನೆಯಲ್ಲಿದ್ದ
ನನ್ನ ಸಹೋದ್ಯೋಗಿಗಳಿಗೆ ಮತ್ತು ಸಹಬಂದಿಗಳಿಗೆ

# ಮುನ್ನುಡಿ.

---

ಈ ಪುಸ್ತಕವನ್ನು ಬರೆದದ್ದು ೧೯೪೪ ನೇ ಏಪ್ರಿಲ್‌ನಿಂದ ಸೆಪ್ಟಂಬರ್ ವರೆಗಿನ ಐದು ತಿಂಗಳಲ್ಲಿ ಅಹಮದ್ ನಗರದ ಕೋಟೆಯ ಸೆರೆಮನೆಯಲ್ಲಿ. ಸೆರೆಮನೆಯಲ್ಲಿನ ನನ್ನ ಕೆಲವು ಸಹಬಂದಿಗಳು ಕರಡು ಪ್ರತಿಯನ್ನು ಓದಿ ಅಮೂಲ್ಯ ಸಲಹೆಗಳನ್ನು ಕೊಟ್ಟಿದಾರೆ. ಸೆರೆಮನೆಯಲ್ಲಿ ಈ ಪುಸ್ತಕವನ್ನು ಪುನ ರಾವಲೋಕನ ಮಾಡಿದಾಗ ಆ ಸಲಹೆಗಳನ್ನು ಗಮನದಲ್ಲಿಟ್ಟುಕೊಂಡು ಕೆಲವು ಹೊಸ ವಿಷಯಗಳನ್ನು ಸೇರಿಸಿದ್ದೇನೆ. ಇಲ್ಲಿ ಬರೆದಿರುವುದಕ್ಕೆಲ್ಲ ನಾನೇ ಹೊಣೆಗಾರ; ಇತರರು ಯಾರೂ ಹೊಣೆಯಾಗಬೇಕಾ ಗಿಯೂ ಇಲ್ಲ, ಒಪ್ಪಬೇಕಾಗಿಯೂ ಇಲ್ಲ. ಆದರೆ ಆಗ ನಡೆಸಿದ ಅಸಂಖ್ಯಾತ ವಿಚಾರವಿನಿಮಯಗಳಿಗೆ ಮತ್ತು ಚರ್ಚೆಗಳಿಗೆ ಅಹಮದ್‌ನಗರದ ನನ್ನ ಸಹಬಂದಿಗಳಿಗೆ ನಾನು ಅತ್ಯಂತ ಋಣಿಯಾಗಿದ್ದೇನೆ; ಏಕೆಂದರೆ ಭಾರತದ ಇತಿಹಾಸ ಮತ್ತು ಸಂಸ್ಕೃತಿಯ ವಿವಿಧರೂಪಗಳ ವಿಷಯದಲ್ಲಿದ್ದ ನನ್ನ ಮನೋ ಭಾವನೆ ತಿಳಿಯಾಯಿತು. ಸ್ವಲ್ಪೇ ದಿನಗಳಾದರೂ ಸೆರೆಮನೆಯು ವಾಸಕ್ಕೆ ಯೋಗ್ಯಸ್ಥಳವಲ್ಲ. ಅನೇಕ ವರ್ಷಗಳಾದರೆ ದೇವರೇ ಗತಿ. ಆದರೆ ಅಲ್ಲಿ ಮಹಾಮೇಧಾವಿಗಳೂ ಸುಸಂಸ್ಕೃತರೂ, ತಾತ್ಕಾಲಿಕ ಉದ್ವೇಗಗಳಿಂದ ಮನೋವಿಕಲರಾಗದ ವಿಶಾಲಹೃದಯರೂ ಆದ ಉನ್ನತ ವ್ಯಕ್ತಿಗಳ ಸಮೀಪ ಸಹವಾಸ ದೊರತುದು ನನ್ನದೊಂದು ಸೌಭಾಗ್ಯ.

ಅಹಮದ್‌ನಗರದ ಕೋಟೆಯಲ್ಲಿ ನನ್ನ ಜೊತೆಗಿದ್ದ ಹನ್ನೊಂದು ಜನ ನನ್ನ ಸಹವಾಸಿಗಳು ಇಡೀ ಭಾರತದ ಒಂದು ಅಡ್ಡಕೊಯಿತದಂತೆ ಇದ್ದರು. ರಾಜಕೀಯ ಮಾತ್ರವಲ್ಲದೆ ಸನಾತನ ಮತ್ತು ಆಧುನಿಕ ಭಾರತೀಯ ಪಾಂಡಿತ್ಯ ಪ್ರೌಢಿಮೆಯನ್ನೂ ಇಂದಿನ ಭಾರತದ ವಿವಿಧ ಮುಖಗಳನ್ನೂ ಪ್ರತಿಬಿಂಬಿಸುತ್ತಿದ್ದರು. ಇಂಡಿಯದ ಇಂದಿನ ಪ್ರಮುಖ ಜೀವಂತ ಭಾಷೆಗಳಲ್ಲೂ ಮತ್ತು ಹಿಂದೆಯೂ ಮತ್ತು ಈಗಲೂ ಇಂಡಿಯದ ಮೇಲೆ ವಿಶೇಷ ಪ್ರಭಾವ ಬೀರಿರುವ ಪ್ರಾಚೀನ ಭಾಷೆಗಳಲ್ಲೂ ಅತ್ಯು ನ್ನತ ಪಾಂಡಿತ್ಯ ಪ್ರೌಢಿಮೆಯುಳ್ಳ ವ್ಯಕ್ತಿಗಳಿದ್ದರು. ಪ್ರಾಚೀನ ಭಾಷೆಗಳಲ್ಲಿ ಸಂಸ್ಕೃತ, ಪಾಲಿ, ಅರಬ್ಬಿ ಮತ್ತು ಪರ್ಷಿಯನ್ ಭಾಷೆಗಳಲ್ಲಿ ಪಾಂಡಿತ್ಯವಿದ್ದವರೂ, ಆಧುನಿಕ ಭಾಷೆಗಳಲ್ಲಿ ಹಿಂದಿ, ಉರ್ದು, ಬಂಗಾಳಿ, ಗುಜರಾತಿ, ಮರಾಠಿ, ತೆಲುಗು, ಸಿಂಧಿ ಮತ್ತು ಉರಿಯ ಭಾಷೆಗಳಲ್ಲಿ ಪಂಡಿತರಾದವರೂ ಇದ್ದರು. ಈ ಸಾಹಿತ್ಯ ಸಂಪತ್ತೆಲ್ಲ ನನಗೆ ಸಿದ್ಧವಿತ್ತು; ಅದರ ಪೂರ್ಣಲಾಭ ಪಡೆಯಲು ನನ್ನ ಅಲ್ಪ ಶಕ್ತಿಯೊಂದೇ ನನಗೆ ಮಿತಿಯಾಗಿತ್ತು. ಅವರೆಲ್ಲರಿಗೂ ನಾನು ಚಿರ ಋಣಿಯಾದರೂ ಮೌಲಾನ ಅಬುಲ್ ಕಲಾಮ್ ಅಜಾದರ ಅಸಾಧಾರಣ ಪಾಂಡಿತ್ಯ ಪ್ರೌಢಿಮೆಯಿಂದ ನಾನು ಮುಗ್ಧನಾಗಿಬಿಡು ತ್ತಿದ್ದೆ; ಒಂದೊಂದು ವೇಳೆ ದಿಗ್ಭ್ರಮೆ ಹೊಂದುತ್ತಿದ್ದೆ. ಅಂತೆಯೇ ಗೋವಿಂದ ವಲ್ಲಭ ಪಂತ, ನರೇಂದ್ರದೇವ ಮತ್ತು ಅಸಫ್ ಅಲಿ ಇವರುಗಳು ವಿಶೇಷ ಗೌರವಾರ್ಹರು.

ಈ ಪುಸ್ತಕವನ್ನು ಮುಗಿಸಿ ಒಂದು ವರ್ಷ ಮೂರು ತಿಂಗಳಾದವು. ಆಗಲೇ ಕೆಲವು ಭಾಗಗಳು ಹಳೆತಾಗಿವೆ. ಅವನ್ನು ಬರೆದ ನಂತರ ಎಷ್ಟೋ ಘಟನೆಗಳಾಗಿವೆ. ಪುನರವಲೋಕಿಸಿ ಬೇರೆ ಬರೆ ಯೋಣವೆನ್ನಿಸುತ್ತಿದೆ; ಆದರೆ ಮನಸ್ಸನ್ನು ಬಿಗಿ ಹಿಡಿದಿದ್ದೇನೆ. ಆ ರೀತಿ ಬರೆಯಲು ಸಾಧ್ಯವೇ ಇಲ್ಲ. ಏಕೆಂದರೆ ಸೆರೆಮನೆಯ ಹೊರಗಿನ ಜೀವನದ ಹಾಸು ಹೊಕ್ಕುಗಳೇ ಬೇರೆ. ಯೋಚನೆಗಾಗಲಿ ಬರ ವಣಿಗೆಗಾಗಲಿ ಕಾಲವೇ ಇಲ್ಲ. ನಾನು ಬರೆದುದನ್ನು ಪುನಃ ಓದಲು ಸಹ ಕಾಲ ದೊರೆಯುವುದಿಲ್ಲ. ಮೊದಲು ಎಲ್ಲವನ್ನು ಕೈಯಲ್ಲೇ ಬರೆದೆ. ಆಮೇಲೆ ಅದನ್ನು ಟೈಪ್ ಮಾಡಲಾಯಿತು. ಟೈಪ್ ಮಾಡಿದ್ದನ್ನು ಓದಲು ನನಗೆ ಕಾಲದೊರೆಯದೆ ಪುಸ್ತಕದ ಮುದ್ರಣ ಹಿಂದೆ ಬಿತ್ತು. ನನ್ನ ಮಗಳು ಇಂದಿರ ನನ್ನ ಸಹಾಯಕ್ಕೆ ಬಂದು ಆ ಹೊರೆಯನ್ನು ಹೊತ್ತಳು. ಕೊನೆಯ ಹಿನ್ನುಡಿಯ ಹೊರತು ಪುಸ್ತಕಕ್ಕೆ ಯಾವುದನ್ನೂ ಸೇರಿಸಿಲ್ಲ; ಬದಲಿಸಿಲ್ಲ; ಸೆರೆಮನೆಯಲ್ಲಿ ಬರೆದಂತೆಯೇ ಇದೆ.

ಗ್ರಂಥಕರ್ತರು ತಮ್ಮ ಪುಸ್ತಕಗಳನ್ನು ನೋಡಿ ಏನೆಂದುಕೊಳ್ಳುತ್ತಾರೋ ನಾನರಿಯೆ. ಆದರೆ ಹಿಂದೆ ನಾನು ಬರೆದುದದ್ದು ನಾನೇ ಓದಿದಾಗ ನನಗೊಂದು ವಿಚಿತ್ರ ಅನುಭವವಾಗುತ್ತದೆ. ಆ ಬರೆವಣಿಗೆ ಸೆರೆಮನೆಯ ವೈಪರೀತ್ಯದ ಸಂಕುಚಿತ ವಾತಾವರಣದಲ್ಲಿ ಬರೆದುದಾಗಿ ಹೊರಗೆ ಓದಿದಾಗ ಈ ಅನುಭವ ಇನ್ನೂ ತೀಕ್ಷ್ಣವಾಗುತ್ತದೆ. ಅದರ ಪರಿಚಯವೇನೋ ಆಗುತ್ತದೆ; ಆದರೂ ಪೂರ್ಣ ಪರಿಚಯವಲ್ಲ. ಬೇರೆ ಯಾರೋ ಒಬ್ಬರು–ನನಗೆ ತೀರ ಸಮೀಪದವರಾದರೂ ಬೇರೆಯವರು–ನನಗೆ ಚಿರಪರಿಚಿತವಾದ ಯಾವುದೊ ಒಂದು ಗ್ರಂಥ ಬರೆಹವನ್ನು ಓದಿದಂತೆ ಆಗುತ್ತದೆ. ಪ್ರಾಯಶಃ ನನ್ನಲ್ಲಿ ಆಗಿರುವ ಪರಿವರ್ತನೆಗೆ ಇವೇ ಒಂದು ಅಳತೆಗೋಲು.

ಈ ಪುಸ್ತಕದ ವಿಷಯದಲ್ಲೂ ನನ್ನ ಅನುಭವವು ಅದೇ ರೀತಿ ಇದೆ. ಅದು ನನ್ನದು ನಿಜ. ಆದರೂ ಪೂರ್ಣ ಈಗಿನ ನನ್ನದಲ್ಲ. ಕ್ಷಣಕಾಲ ಬಾಳಿ, ಬಾಡಿ, ಒಂದು ನೆನಪನ್ನು ಮಾತ್ರ ಬಿಟ್ಟು ಹೋಗಿರುವ ಹಿಂದಿನ ನೆನಹುಗಳ ಪರಿಯಂತೆ ಇದೂ ನನ್ನ ಯಾವುದೊ ಒಂದು ಹಿಂದಿನ ನೆನಹು.

ಆನಂದಭವನ : ಅಲಹಾಬಾದ್,
೨೯ ಡಿಸೆಂಬರ್, ೧೯೪೫.

**ಜವಹರಲಾಲ್ ನೆಹ್ರೂ.**

## ಬಿನ್ನಹ

ಪಂಡಿತ ಜವಹರಲಾಲರು ಪ್ರಪಂಚದ ಮಹಾರಾಜಕಾರಣಿಗಳಲ್ಲಿ ಒಬ್ಬರು, ಭಾವನಾಜೀವಿಗಳು, ಉದಾತ್ತಧ್ಯೇಯನಿಷ್ಠರು. ಅವರು ತಮ್ಮ 'Discovery of India' (ಭಾರತದರ್ಶನ) ಗ್ರಂಥದಲ್ಲಿ ಭಾರತದ ಇತಿಹಾಸ, ಸಾಹಿತ್ಯ ಕಲೆ ಮತ್ತು ಸಂಸ್ಕೃತಿಗಳನ್ನು ಒಂದು ನೂತನ ದೃಷ್ಟಿಯಿಂದ ನೋಡಿ, ಅವುಗಳ ಮೇಲೆ ಹೊಸ ಬೆಳಕನ್ನು ಬೀರಿ ಭಾರತೀಯರಿಗೂ ಪ್ರಪಂಚಕ್ಕೂ ಮಹದುಪಕಾರ ಮಾಡಿದಾರೆ. ಅವರ ಇಂಗ್ಲಿಷ್ ಗ್ರಂಥವು ಈಗಾಗಲೇ ಐದು ಬಾರಿ ಪುನರ್ಮುದ್ರಿತವಾಗಿದೆ. ಇತರ ಭಾಷೆಗಳಲ್ಲೂ ಅದರ ಅನುವಾದಗಳಾಗಿವೆ. ಅದನ್ನು ಕನ್ನಡಿಸಿ ಕನ್ನಡಿಗರಿಗೆ ಅರ್ಪಿಸಲು ಅನುಮತಿ ಇತ್ತುದಕ್ಕಾಗಿ ಪಂಡಿತ ಜವಹರಲಾಲ್‌ರಿಗೂ, ಆ ಅನುಮತಿಯನ್ನು ದೊರಕಿಸಿ ಕೊಡುವುದರಲ್ಲಿ ನೆರವಾದ ಹಿರಿಯರಾದ ಮಾನ್ಯ ರಂಗನಾಥ ರಾಮಚಂದ್ರ ದಿವಾಕರರಿಗೂ, ನನ್ನ ಮಿತ್ರರಾದ ಸಿದ್ದವ್ವನಹಳ್ಳಿ ನಿಜಲಿಂಗಪ್ಪನವರಿಗೂ ತುಂಬ ಋಣಿಯಾಗಿದ್ದೇನೆ. ನನ್ನ ಗೆಳೆಯರಾದ ಶ್ರೀ ಕೂಡಲಿ ಚಿದಂಬರಂ ಮುದ್ರಣದ ಹೊರೆಯನ್ನು ಹೊತ್ತು ಕರಡುಗಳನ್ನು ತಿದ್ದಿ ಗ್ರಂಥವನ್ನು ಅಂದವಾಗಿ ಪ್ರಕಟಿಸಿದ್ದಾರೆ. ಅವರ ಶ್ರಮವನ್ನು ನಾನೆಂದೂ ಮರೆಯಲಾರೆ. ಈ ಗ್ರಂಥಾವಲೋಕನದಿಂದ ಪಂಡಿತ ಜವಹರರ ವಿಶಾಲದೃಷ್ಟಿ ಕಿಂಚಿತ್ತಾದರೂ ಕನ್ನಡಿಗರಿಗೆ ದರ್ಶನವಾಗಿ ಅನುಭಕ್ಕೆ ಬಂದರೆ ನನ್ನ ಶ್ರಮಕ್ಕೆ ತಕ್ಕ ಪ್ರತಿಫಲ ದೊರೆಯಿತೆಂದು ಭಾವಿಸುವ,

ಕನ್ನಡಿಗರ ಸೇವಕ,
**ಸಂತೆಬೆನ್ನೂರು ಕೃಷ್ಣಮೂರ್ತಿರಾವ್**

# ಕೆಲವು ತಿದ್ದುಪಡಿಗಳು

| ಪುಟ | ಸಾಲು | ತಪ್ಪು | ಸರಿ |
|---|---|---|---|
| ೭ | ೨೧ | ಬಹಳದಿಂದಲೂ | ಬಹಳ ಕಾಲದಿಂದಲೂ |
| ೮ | ೯ | ಮನಕೆ ತೋರಿದೆ | ತೋರಿದೆ |
| ೧೪ | ೩೬ | ಯಾಗಪ್ರವೃತ್ತಿಗಿಂತ | ಯುಗಪ್ರವೃತ್ತಿಗಿಂತ |
| ೩೮ | ೩೭ | ಪರಿವರ್ತತೆ | ಪರಿವರ್ತನೆ |
| ೪೩ | ೨೫ | ಭಿನ್ನವೆ | ಭಿನ್ನತೆ |
| ೪೮ | ೩೭ | ದವರ್ಣನೀಯ | ಅವರ್ಣನೀಯ |
| ೬೧ | ೨೩ | ನಿವಾರಿಸಿ. | ನಿವಾರಿಸಿ, |
| ೮೧ | ೪ | ಬಂದು | ಒಂದು |
| ೯೩ | ೧೮ | ಅವುಗಳ | ಅವುಗಳು |
| ೯೫ | ೧೬ | ಆಮೇಲೆ ಸಹ ಅನೇಕ ವಿದ್ಯಾವತಿಯರಾದ ಮಹಿಳೆಯರ ಹೆಸರು ಬಂದಿದೆ. | ಈ ವಾಕ್ಯವನ್ನು ಬಿಟ್ಟು ಓದಿ |
| ೯೭ | ೪ | ಅತೀಂದ್ರವಲ್ಲದ | ಅತೀಂದ್ರಿಯವಲ್ಲದ |
| ೧೦೦ | ೯ | ದಕ್ಷಿಣ ಭಾರತವನ್ನುಳಿದ | ದಕ್ಷಿಣ ಭಾರತವನ್ನುಳಿದು |
| ೧೦೧ | ೧೦ | ಪ್ರಧಾನಿಯು. | ಪ್ರಧಾನಿಯು |
| ೧೦೫ | ೩೮ | ವಾಸ್ತವಿಕ | ವಾಸ್ತವಿಕತೆ |
| ೧೦೬ | ೧ | ಉಜ್ವಲಶಕ್ತಿಯ | ಉಜ್ವಲಶಕ್ತಿ, |
| ೧೦೬ | ೧-೨ | ಪ್ರಭಾವಪೂರ್ಣ, ಚಲನವಲನ ವಸ್ತು | ಪ್ರಭಾವಪೂರ್ಣ ಚಲನಶಕ್ತಿ |
| ೧೧೧ | ೨೯ | ಇತಿಹಾಸದ | “ ಇತಿಹಾಸದ |
| ೧೧೯ | ೭ | ಮುದ್ರಿಸಿ | ಮುದ್ರಿಸಿದ |
| ೧೨೪ | ೧೮ | ಕಪಟ | ಕವಾಟ |
| ೧೨೫ | ೩೬ | ಕಡಿಮೆ | ಕಡಿದು |
| ೧೩೨ | ೧೫ | ಸುಳ್ಳು. | ಸುಳ್ಳು, |
| ೧೩೩ | ೩ | ರಾಮುಘಡ | ರಾಮುಘಡ |
| ೧೩೩ | ೧೨ | ಅದುವರೆಗೆ | ಇದುವರೆಗೆ |
| ೧೩೩ | ೨೮ | ನಾಟಕ ಕಲೆಯಲ್ಲಿ | ನಾಟಕ ಕಲೆಯ |
| ೧೩೬ | ೩೨ | ಇದೇ | ಇದ್ದೇ |
| ೧೩೭ | ೩೧ | ದಾರಿಯೇ | ದಾರಿಯೆ |
| ೧೩೮ | ೧೦-೧೧ | ನಂಬವವರು” ಮುಟ್ಟಾಳರು | ನಂಬುವವರು ಮುಟ್ಟಾಳರು ” |
| ೧೩೯ | ೩೮ | ತುದ | ತುದಿ |
| ೧೩೯ | ೧ | ಹೇಳುವವನು | ಹೇಳುವ |
| ೧೪೦ | ೧೫ | ನಪ್ಪತೆ | ನವ್ಯತೆ |
| ೧೪೨ | ೧೩ | ಉದ್ಧರಿಸಿದರು | ಉದಹರಿಸಿದರು |
| ೧೪೨ | ೧೭ | ಮುಂತಾದ ಮಾತನಾಡುವ | ಮುಂತಾದ |
| ೧೪೫ | ೭ | ದೇಶದ | ದೇವರ |
| ೧೫೩ | ೧೯ | ಈ ವ್ಯಾಧಿಗ್ರಸ್ತ | “ ಈ ವ್ಯಾಧಿಗ್ರಸ್ತ |
| ೧೫೭ | ೧೬ | ಕಾರ್ಯಶಕ್ತತೆ | ಕಾರ್ಯಶಕ್ತಿ |
| ೧೫೬ | ೨೫ | ಬೀರದಂತೆ | ಬೀರಿದಂತೆ |
| ೧೬೦ | ೩ | ಅಂತರ್ಜಾತೀಯ | ಅಂತರ್ಜ್ಯೋತಿಯ |
| ೧೬೪ | ೨೯ | ಸಾಮಾನ | ಸಾಮಾನ್ಯ |
| ೧೬೮ | ೨೦ | ಎಷ್ಟು | ಎಷ್ಟೊ |
| ೧೬೮ | ೨೨ | ಸೃಷ್ಟಿಮಾಡಿತು. | ಸೃಷ್ಟಿಮಾಡಿದ್ದವು. |
| ೧೭೩ | ೨೦ | ಕಾಲದಲ್ಲಿ ” ಅಲ್ಲ | ಕಾಲದಲ್ಲಿ ಅಲ್ಲ ” |
| ೧೭೩ | ೩೨ | ನಿರ್ವೀರ್ಯರು. | ನಿರ್ವೀರ್ಯರು, |
| ೨೧೪ | ೨೬ | ಪದ್ಧತಿಯ | ಪದ್ಧತಿಯು |
| ೨೧೫ | ೩ | ಅಪ್ರಬದ್ಧ | ಅಪ್ರಬುದ್ಧ |
| ೨೧೫ | ೭ | “ ಮನುಷ್ಯನಿಗಿರುವಷ್ಟೇ | ಮನುಷ್ಯನಿಗಿರುವಷ್ಟೇ |
| ೨೧೫ | ೮ | ಸ್ತ್ರೀಪುರುಷರ | “ ಸ್ತ್ರೀ ಪುರುಷರ |
| ೨೧೬ | ೨೯ | ವರ್ಷಾಕಾರಿ | ವರ್ಷಾಕಾಲ |
| ೨೧೭ | ೧೭ | ಸಡಿಲವಿರುವುದು | ಸಡಿಲಿರುವುದು |
| ೨೧೮ | ೪೦ | ಕೊಳ್ಳಬಹುದು | ಕೊಡಬಹುದು |
| ೨೨೦ | ೮ | ರಕ್ಷಣೆ | ರಕ್ಷಣೆಯೂ |

# ವಿಷಯಾನುಕ್ರಮಣಿಕೆ.

ಅಧ್ಯಾಯ : ೭ ಕೊನೆಯ ಅಂಕ

ಬ್ರಿಟಿಷರ ಅಧಿಕಾರ ಪ್ರಾಬಲ್ಯ ಮತ್ತು ರಾಷ್ಟ್ರೀಯ ಚಳವಳಿಯ ಆರಂಭ



ಅಧ್ಯಾಯ : ೮ ಕೊನೆಯ ಅಂಕ (೨) : ರಾಷ್ಟ್ರೀಯತೆ ಮತ್ತು ಸಾಮ್ರಾಜ್ಯ ತತ್ವಗಳ ಘರ್ಷಣೆ



ಅಧ್ಯಾಯ : ೯ ಕೊನೆಯ ಅಂಕ (೩)

ಅಧ್ಯಾಯ ೧೦ : ಪುನಃ ಅಹಮದ್ ನಗರ ಕೋಟೆಯಲ್ಲಿ



ಹಿನ್ನುಡಿ

# ಭಾರತ ದರ್ಶನ

## ಅಧ್ಯಾಯ ೧

### ಅಹಮದ್‌ನಗರದ ಕೋಟೆ

### ೧. ಇಪ್ಪತ್ತುತಿಂಗಳು

**ಅಹಮದ್ ನಗರದ ಕೋಟೆ: ಏಪ್ರಿಲ್ ಹದಿಮೂರು, ೧೯೪೪**

ನಮ್ಮನ್ನು ಇಲ್ಲಿಗೆ ಕರೆತಂದು ಆಗಲೇ ಇಪ್ಪತ್ತು ತಿಂಗಳಮೇಲಾದವು; ನನ್ನ ಒಂಭತ್ತನೇ ಜೈಲು ಯಾತ್ರೆಯಲ್ಲಿ ಇಪ್ಪತ್ತು ತಿಂಗಳು ಮೀರಿವೆ. ನಾವು ಇಲ್ಲಿಗೆ ಬಂದಾಗ—ಕತ್ತಲು ಕವಿದ ಆಕಾಶದ ಬೆಳ್ಗಿರೆಯಂತೆ ಬಾಲಚಂದ್ರನು ನಮ್ಮನ್ನು ಸ್ವಾಗತಿಸಿದನು. ವೃದ್ಧಿಚಂದ್ರನ ಶುಕ್ಲಪಕ್ಷ ಆರಂಭವಾಗಿತ್ತು. ಅಂದಿನಿಂದ, ಪ್ರತಿ ಅಮಾವಾಸ್ಯೆ ಕಳೆದೊಡನೆ ನನ್ನ ಸೆರೆಮನೆವಾಸದಲ್ಲಿ ಒಂದು ತಿಂಗಳು ಕಳೆಯಿತೆಂದು ಜ್ಞಾಪಕವಾಗುತ್ತದೆ. ನನ್ನ ಹಿಂದಿನ ಸೆರೆಮನೆವಾಸವೂ ಹೀಗೆಯೇ ಸೊಡರಸಾಲು ಹಬ್ಬವಾದ ದೀಪಾವಳಿ ಮುಗಿದ ತಾರುಣ್ಯದಲ್ಲಿಯೇ ಶುಕ್ಲಪಕ್ಷದಿಂದ ಆರಂಭ ವಾಯಿತು. ನನ್ನ ಸೆರೆಮನೆವಾಸದಲ್ಲಿ ಸದಾ ನನ್ನ ಒಡನಾಡಿಯಾದ ಚಂದ್ರನು ನಮ್ಮ ಪರಿಚಯ ಹತ್ತಿರವಾದಂತೆಲ್ಲ, ಪ್ರಪಂಚದ ಸೊಬಗನ್ನೂ, ಅನಂತವಾದ ಮೆರವಣಿಗೆಯಂತೆ ಒಂದನ್ನೊಂದು ಹಿಂಬಾಲಿಸುವ ಜೀವನದ ಉಬ್ಬರವಿಳಿತಗಳನ್ನೂ, ನೆಳಲು ಬೆಳಕುಗಳನ್ನೂ ಸಾವುಮರುಹುಟ್ಟು ಗಳನ್ನೂ ಜ್ಞಾಪಿಸುತ್ತ ನನಗೆ ಬಹಳ ಆಪ್ತನಾಗಿದಾನೆ. ಅದೇ ಚಂದ್ರ, ಆದರೂ ಸದಾ ಪರಿವರ್ತನೆ. ಸಂಜೆಗತ್ತಲಿನಲ್ಲಿ ನೆರಳು ಬೃಹದಾಕಾರವಾಗಿ ಬೆಳೆವ ವೇಳೆಯಲ್ಲಿ, ನಡುರಾತ್ರಿಯ ಕಾಳಮೌನದಲ್ಲಿ, ಉಷೆಯ ಉಸಿರೂ ಮರ್ಮರನಿನಾದವೂ ಮೂಡುವ ಎಳನೇಸರಿನ ಆಶೆಯನ್ನು ತೋರುವ ವೇಳೆಯಲ್ಲಿ ಚಂದ್ರನನ್ನು ಬೇರೆ ಬೇರೆ ಕಲಾರೂಪಗಳಲ್ಲಿ ಭಾವಗಳಲ್ಲಿ ನೋಡಿದ್ದೇನೆ. ಏಕೆಂದರೆ ಚಂದ್ರನ ಗಾತ್ರ ಮತ್ತು ರೂಪದಿಂದ ದಿನಗಳನ್ನೂ, ತಿಂಗಳನ್ನೂ ಲೆಕ್ಕಮಾಡಲು ಚಂದ್ರನೆಷ್ಟು ಸಹಕಾರಿ! ತಿಂಗಳಿನ ದಿನವನ್ನು ಸ್ವಲ್ಪ ನಿಕರವಾಗಿಯೇ ಹೇಳಬಹುದು. ಆಗಾಗ ಸ್ವಲ್ಪ ತಿದ್ದಬೇಕಾಗಿ ಬಂದರೂ ಅದು ಒಂದು ಸುಲಭ ಪಂಚಾಂಗ. ಹೊಲಗದ್ದೆಗಳ ರೈತನಿಗೆ ಕಳೆದ ದಿನಗಳನ್ನು ಲೆಕ್ಕ ಮಾಡುವುದಕ್ಕೂ, ಕ್ರಮವಾಗಿ ಪರಿವರ್ತನೆಯಾಗುವ ಋತುಗಳನ್ನು ಅಳೆಯುವದಕ್ಕೂ ಸಹಕಾರಿ.

ಮೂರು ವಾರಗಳು ಪ್ರಪಂಚದ ಯಾವ ಸಮಾಚಾರವೂ ಇಲ್ಲದೆ ಇಲ್ಲಿ ಕಳೆದುಹೋದವು. ಭೇಟಿಗಳು, ಕಾಗದಪತ್ರಗಳು, ವೃತ್ತಪತ್ರಿಕೆ, ರೇಡಿಯೊ ಈ ಯಾವ ಸಂಬಂಧವೂ ಇಲ್ಲ. ನಮ್ಮ ಮೇಲೆ ಕಾವಲಿದ್ದ ಅಧಿಕಾರಿಗಳವಿನಾ ನಾವು ಇಲ್ಲಿರುವುದು ಯಾರಿಗೂ ತಿಳಿಯದ ರಾಜರಹಸ್ಯವೆಂದು ಭಾವಿಸಲ್ಪಟ್ಟಿತ್ತು: ಪಾಪ! ರಹಸ್ಯ ಮಾತ್ರ ಭಾರತಕ್ಕೆಲ್ಲ ತಿಳಿದಿತ್ತು. ಅನಂತರ ವೃತ್ತಪತ್ರಿಕೆ ಗಳು, ಕೆಲವು ವಾರಗಳನಂತರ ಸಮೀಪ ಬಂಧುಗಳಿಂದ ಮನೆವಿಷಯ ಕಾಗದಪತ್ರಗಳು ಬರಲಾರಂಭಿ ಸಿದವು. ಆದರೆ ಈ ಇಪ್ಪತ್ತು ತಿಂಗಳಲ್ಲಿ ಯಾವ ಭೇಟಿಯೂ ಇಲ್ಲ. ಇತರ ಯಾವ ಸಂಪರ್ಕವೂ ಇಲ್ಲ.

ವೃತ್ತಪತ್ರಿಕೆಗಳಲ್ಲಿ ಬಂದ ವರ್ತಮಾನವೆಲ್ಲ ಸರಕಾರದಿಂದ ಕತ್ತರಿಪ್ರಯೋಗವಾಗಿ ಬರುತ್ತಿತ್ತು. ಆದರೂ ಪ್ರಪಂಚದ ಅರ್ಧಕ್ಕಿಂತ ಹೆಚ್ಚುಭಾಗವನ್ನು ದಹಿಸುತ್ತಿದ್ದ ಯುದ್ಧಗತಿಯೂ, ಭಾರತದಲ್ಲಿ ನಮ್ಮ ಜನರ ಮೇಲೆ ಅದರ ಪ್ರಭಾವವೂ ತಕ್ಕಮಟ್ಟಿಗೆ ಅರ್ಥವಾಗುತ್ತಿದ್ದವು ವಿಚಾರಣೆಯಿಲ್ಲದೆ ಸೆರೆಮನೆ

ಗಳಲ್ಲೂ, ನಿರ್ಬಂಧ ಪಾಳೆಯಗಳಲ್ಲೂ ಲಕ್ಷಗಟ್ಟಳೆ ಜನ ಕೊಳೆಯುತ್ತಿರುವರೆಂದೂ, ಸಹಸ್ರಗಟ್ಟಲೆ ಜನರು ಗುಂಡಿನ ಬಾಯಿಗೆ ತುತ್ತಾದರೆಂದೂ, ದಶಸಹಸ್ರಗಟ್ಟಲೆ ಶಾಲೆಕಾಲೇಜುಗಳಿಂದ ಹುಡುಗರು ಓಡಿಸಲ್ಪಟ್ಟಿದ್ದಾರೆಂದೂ, ಸೈನಿಕಾಡಳಿತದಿಂದ ತೀರಭಿನ್ನವಲ್ಲದ ಒಂದು ಆಡಳಿತ ಪರಿಸ್ಥಿತಿ ದೇಶಾದ್ಯಂತ ಪ್ರಾಪ್ತವಾಗಿದೆಯೆಂದೂ, ಎಲ್ಲೆಲ್ಲೂ ಜನ ಭಯಭೀತಿಯಿಂದ ಕಂಗೆಟ್ಟಿದಾರೆಂದೂ ಗೊತ್ತಾಗುತ್ತಿದ್ದುದು ವಿನಾ ನಮ್ಮ ಜನರ ವಿಚಾರ ವಿಶೇಷವೇನೂ ತಿಳಿಯಲು ಅವಕಾಶವೇ ಇರಲಿಲ್ಲ. ಸೆರೆಮನೆಯಲ್ಲಿ ವಿಚಾರಣೆಯಿಲ್ಲದೆ ಕೊಳೆಯುತ್ತಿದ್ದ ಲಕ್ಷಾಂತರ ಜನರ ಪರಿಸ್ಥಿತಿ ನಮಗಿಂತ ಕೀಳಾಗಿತ್ತು; ಅವರ ಭೇಟಿಯ ಮಾತಂತಿರಲಿ, ಅವರಿಗೆ ಪತ್ರಗಳು, ವೃತ್ತಪತ್ರಿಕೆಗಳು, ಪುಸ್ತಕಗಳು, ಯಾವುದಕ್ಕೂ ಅವಕಾಶವಿರಲಿಲ್ಲ. ಆರೋಗ್ಯಕರವಾದ ಆಹಾರವಿಲ್ಲದೆ ಅನೇಕರು ಕಾಹಿಲೆಬಿದ್ದರು ; ಸರಿಯಾದ ಆರೈಕೆ, ಔಷಧೋಪಚಾರ ವಿಲ್ಲದೆ ನಮ್ಮ ಅನೇಕ ಮಿತ್ರರು ಸಾವಿಗೆ ಸಹ ತುತ್ತಾದರು.

ಇಂಡಿಯಾದೇಶದಲ್ಲಿ ಅನೇಕ ಸಹಸ್ರ ಯುದ್ಧಬಂದಿಗಳು—ಇಟಲಿಯವರೇ ಹೆಚ್ಚು ಜನ ಇದ್ದರು. ನಮ್ಮ ಜನರ ಸ್ಥಿತಿಯನ್ನು ಅವರ ಸ್ಥಿತಿಯೊಂದಿಗೆ ಹೋಲಿಸಿ ನೋಡಿದೆವು. ಜಿನೀವ ಒಪ್ಪಂದದ ಪ್ರಕಾರ ಅವರನ್ನು ನೋಡಿಕೊಳ್ಳಲಾಗುತ್ತಿದೆ ಎಂಬುದಾಗಿ ಹೇಳಿದರು. ಆದರೆ ಭಾರತೀಯ ಬಂದಿ ಗಳನ್ನು, ಖೈದಿಗಳನ್ನು ನೋಡಿಕೊಳ್ಳಲು ಆಗಾಗ ನಮ್ಮ ಬ್ರಿಟಿಷ್ ಆಳರಸರು ಮನಬಂದಂತೆ ಮಾಡಿದ ನಿಯಮಗಳಲ್ಲದೆ ಯಾವ ನಿಯಮ, ಶಾಸನ ಅಥವ ಒಪ್ಪಂದವೂ ಇರಲಿಲ್ಲ.

## ೨. ಕ್ಷಾಮ

ಬಣ್ಣಿಸಲಶಕ್ಯವಾದ ಕ್ರೂರ, ಭೀಕರ, ತತ್ತರಗುಟ್ಟಿಸುವ ಕ್ಷಾಮವೂ ಬಂದಿತು. ಮಲಬಾರ್, ಬಿಜಾಪುರ, ಒರಿಸ್ಸ, ಎಲ್ಲಕ್ಕೂ ಮಿಗಿಲಾಗಿ ಕಾಳಿನ ಕಣಜ ಎಂದು ಹೆಸರಾದ ಬಂಗಾಳದಲ್ಲಿ ಗಂಡಸರು, ಹೆಂಗಸರು, ಸಣ್ಣ ಮಕ್ಕಳು ಹೊಟ್ಟೆಗಿಲ್ಲದೆ ದಿನವೂ ಸಹಸ್ರಗಟ್ಟಲೆ ಸಾಯತೊಡಗಿದರು ಕಲ್ಕತ್ತೆಯ ಅರಮನೆಗಳ ಮುಂದೆ, ಬಂಗಾಳದ ಅಸಂಖ್ಯಾತ ಹಳ್ಳಿಗಳ ಮಣ್ಣುಗುಡಿಸಿಲುಗಳಲ್ಲಿ, ರಸ್ತೆಗಳ ಮೇಲೆ ಹೊಲಗದ್ದೆಗಳಲ್ಲಿ ಹೆಣದ ರಾಸಿಗಳು. ಪ್ರಪಂಚದಲ್ಲಿ ಎಲ್ಲ ಕಡೆಯಲ್ಲೂ ಜನರು ಸಾಯುತ್ತಿದ್ದರು, ಯುದ್ಧದಲ್ಲಿ ಒಬ್ಬರನ್ನೊಬ್ಬರು ಕೊಂದು : ಸಾಮಾನ್ಯವಾಗಿ ಶೀಘ್ರ ಮರಣ ಆದರೆ ವೀರಮರಣ ; ಒಂದು ಧ್ಯೇಯಕ್ಕಾಗಿ ಮರಣ, ಒಂದು ಉದ್ದೇಶ ಸಾಫಲ್ಯಕ್ಕಾಗಿ ಮರಣ ; ಈ ನಮ್ಮ ಉನ್ಮತ್ತ ಪ್ರಪಂಚದ ಘಟನೆಗಳಿಗೆ ಬೇರೆ ಮಾರ್ಗವೇ ಇಲ್ಲ ಎಂಬ ದಯಾರಹಿತ ತರ್ಕದಿಂದ ಮರಣ, ನಮ್ಮಿಂದ ತಿದ್ದಲಾಗದ ತಡೆಯಲಾಗದ ಜೀವನಕ್ಕೊಂದು ಹಠಾತ್ತನೆಯ ಮರಣ, ಸಾವು ಎಲ್ಲೆಲ್ಲೂ ಸಾಮಾನ್ಯ ವಾಗಿತ್ತು.

ಆದರೆ ಇಲ್ಲಿ ಸಾವಿಗೆ ಯಾವ ಉದ್ದೇಶವಾಗಲಿ, ತಾರ್ಕಿಕದೃಷ್ಟಿಯಾಗಲಿ, ಆವಶ್ಯಕತೆಯಾಗಲಿ ಇರಲಿಲ್ಲ. ಅದು ಮಾನವನ ಅಯೋಗ್ಯತೆಯ ದಯಾಶೂನ್ಯತೆಯ ಪರಿಣಾಮವಾಗಿ ಬಂದುದು, ಮನುಷ್ಯ ನಿರ್ಮಿತವಾದುದು, ಯಾವ ಪುರುಷಾರ್ಥಸಾಧನೆಯೂ ಇಲ್ಲದೆ ನಿದಾನವಾಗಿ ನುಸುಳಿಬಂದ ಭೀತಿಯ ಫಲಜೀವನ ಮರಣದಲ್ಲಿ ಮಿಲನವಾಗಿ ಮರಣವಾಗಿ ಮುಕ್ತಾಯವಾಗುವ ದೃಶ್ಯ, ಜೀವ ಇನ್ನೂ ಇರು ವಾಗಲೇ ಕೃಶವಾದ ದೇಹ, ಗೂಳಿಬಿದ್ದ ಕಣ್ಣುಗಳಿಂದ ಸಾವು ದೃಷ್ಟಿಬೀರುವ ದೃಶ್ಯ. ಈ ವಿಷಯ ಉಸಿರೆತ್ತುವುದೂ, ಮಾತನಾಡುವುದೂ ಬರೆಯುವುದೂ ತಪ್ಪು. ಒಂದು ದುರ್ಘಟನೆಯನ್ನು ನಾಟಕೀಯ ವನ್ನಾಗಿ ಮಾಡುವುದೇ ? ಇಂಡಿಯಾದಲ್ಲಿ, ಇಂಗ್ಲೆಂಡಿನಲ್ಲಿ ಅಧಿಕಾರಿಗಳು ಸುಳ್ಳು ವರದಿಗಳನ್ನು ಬರೆದರು. ಆದರೆ ಹೆಣಗಳನ್ನು ಬಚ್ಚಿಡಲು ಸಾಧ್ಯವೆ ? ಅಡ್ಡ ಬರಲೇಬೇಕು.

ಈ ಪ್ರೇತಾಗ್ನಿಗೆ ಬಂಗಾಳ ಮತ್ತು ಇತರ ಕಡೆಗಳಲ್ಲಿ ಜನ ಆಹುತಿಯಾಗುತ್ತಿದ್ದಾಗ ಯುದ್ಧ ಕಾಲದ ಆರ್ಥಿಕ ಉನ್ನತಿಯಿಂದ ಇಂಡಿಯಾದೇಶದ ಅನೇಕ ಕಡೆಗಳಲ್ಲಿ ರೈತರಿಗೆ ಆಹಾರ ಸಮೃದ್ಧಿ ಇದೆ ಎಂದು ಅಧಿಕಾರವಾಣಿಯೂ ಹೊರಬಿದ್ದಿತು. ಅನಂತರ ತಪ್ಪೆಲ್ಲ ಸ್ವಪ್ರಭುತ್ವ ಅಧಿಕಾರವುಳ್ಳ ಪ್ರಾಂತೀಯ ಸರಕಾರಗಳ ಜವಾಬ್ದಾರಿಗೆ ಸೇರಿದ್ದು, ರಾಜಕೀಯ ದೃಷ್ಟಿಯಿಂದ ಇಂಡಿಯಾ

ಸರಕಾರವಾಗಲಿ, ಲಂಡನ್‌ನಿಂದ ಇಂಡಿಯಾ ಕಚೇರಿಯಾಗಲಿ ಪ್ರಾಂತ್ಯಾಡಳಿತಗಳಲ್ಲಿ ಕೈಹಾಕುವಂತಿಲ್ಲ ಎಂದು ಹೇಳಲಾಯಿತು. ಅದೇ ರಾಜ್ಯಾಂಗಶಾಸನವನ್ನು ವೈಸರಾಯ್ ತನ್ನ ಏಕಾಧಿಪತ್ಯದ ಅಮಿತ ಅಧಿಕಾರದಿಂದ ಹೊರಡಿಸುತ್ತಿದ್ದ ನೂರಾರು ವಿಶೇಷ ಶಾಸನಗಳಿಂದ, ತೀರ್ಪುಗಳಿಂದ ನಿತ್ಯವೂ ತಳ್ಳಿಹಾಕಿಯೋ, ಮೀರಿಯೋ, ಅಲಕ್ಷ್ಯಮಾಡಿಯೋ ಮಾರ್ಪಡಿಸಿಯೋ ರಾಜ್ಯಭಾರ ಮಾಡುತ್ತಿದ್ದನು. ಅಂತ್ಯದಲ್ಲಿ ಆ ರಾಜ್ಯಾಂಗ ಶಾಸನವೆಂದರೆ ಇಂಡಿಯಾದೇಶದಲ್ಲಿ ಯಾರಿಗೂ ಜವಾಬ್ದಾರನಲ್ಲದ ಮತ್ತು ಪ್ರಪಂಚದ ಎಲ್ಲ ಸರ್ವಾಧಿಕಾರಿಗಳಿಗೂ ಮೀರಿದ ವಿಶೇಷ ಅಧಿಕಾರವುಳ್ಳ ಏಕಮಾತ್ರ ವ್ಯಕ್ತಿಯ ನಿರಂಕುಶ ಸರ್ವಾಧಿಕಾರ. ಅದನ್ನು ನಡೆಸುವವರು ಖಾಯಂ ನೌಕರರು, ಮುಖ್ಯವಾಗಿ ಐ.ಸಿ.ಎಸ್. ಮತ್ತು ಪೋಲಿಸ್ ಅಧಿಕಾರಿಗಳು; ಅವರೆಲ್ಲ ವೈಸರಾಯ್ ಕಾರ್ಯಭಾರಿಗಳಾದ ಗವರ್ನರುಗಳ ಅಧೀನ; ಮಂತ್ರಿಮಂಡಲಗಳಿದ್ದರೂ, ಗವರ್ನರ್ ಅಂತಹ ಮಂತ್ರಿಮಂಡಲಗಳನ್ನು ಮೂಲೆಗೊತ್ತುತ್ತಿದ್ದರು. ಮಂತ್ರಿಗಳು ಒಳ್ಳೆಯವರಾಗಲಿ ಕೆಟ್ಟವರಾಗಲಿ ಅಧಿಕಾರಿಗಳ ಇಷ್ಟದಂತೆ ಇರಬೇಕು; ಮೇಲಿಂದ ಬರುವ ಆಜ್ಞೆಗಳನ್ನು ವಿರೋಧಿಸಬಾರದು; ಅಥವ ತಮ್ಮ ಅಧೀನವೆನ್ನುವ ಅಧಿಕಾರಿಗಳ ವಿವೇಚನೆಯನ್ನು ಪ್ರಶ್ನಿಸಲೂ ಬಾರದು.

ಕೊನೆಯಲ್ಲಿ ಸ್ವಲ್ಪ ಕಣ್ಣು ಒರಸಿದ್ದಾಯಿತು. ಸ್ವಲ್ಪ ಪರಿಹಾರ ದೊರೆಯಿತು. ಆದರೆ ಹತ್ತೊ, ಇಪ್ಪತ್ತೊ, ಮೂವತ್ತೊ ಲಕ್ಷ ಜನ ಸತ್ತರು. ಆ ಭಯಾನಕ ತಿಂಗಳುಗಳಲ್ಲಿ ರೋಗಕ್ಕೆ ತುತ್ತಾದವರು ಎಷ್ಟುಜನ, ಹಸಿವಿನಿಂದ ಸತ್ತವರು ಎಷ್ಟುಜನ ಯಾರಿಗೂ ತಿಳಿಯದು. ಅದಕ್ಕೂ ಹೆಚ್ಚಾಗಿ, ಸಾವಿನಿಂದ ಪಾರಾದರೂ ಎಷ್ಟುಲಕ್ಷಜನ ಹುಡುಗ ಹುಡುಗಿಯರು ದೈಹಿಕ ಮಾನಸಿಕ ಬೆಳವಣಿಗೆಯಲ್ಲಿ ಕುಂಠಿತರಾಗಿದ್ದಾರೆಂಬುದೂ ತಿಳಿಯದು. ಕ್ಷಾಮಡಾಮರದ ಭಯ ಇನ್ನೂ ದೇಶವನ್ನೆಲ್ಲಾ ಆವರಿಸಿಕೊಂಡಿದೆ.

ಅಧ್ಯಕ್ಷ ರೂಸ್‌ವೆಲ್ಟನ ಚತುಃಸ್ವಾತಂತ್ರ್ಯಗಳು. ಹಸಿವಿನಿಂದ ಮುಕ್ತಿ. ಆದರೆ ಇಂಡಿಯಾದೇಶದ ಜನಕೋಟಿಯನ್ನೇ ದಹಿಸುತ್ತಿರುವ ಸ್ವಾತಂತ್ರ್ಯದ ದಾವಾನಲವನ್ನು ಹೇಗೆ ನಿರ್ಲಕ್ಷಿಸಿದರೊ ಹಾಗೆಯೇ ಲಕ್ಷಾಂತರ ಜನರ ದಹಿಸಿದ ಹೊಟ್ಟೆಯ ಹಸಿವಿಗೂ ಅದೇ ಅಲಕ್ಷ್ಯವನ್ನೇ ಸಂಪದ್ಯುಕ್ತ ಇಂಗ್ಲೆಂಡ್ ಮತ್ತು ಇನ್ನೂ ಹೆಚ್ಚಿನ ಶ್ರೀಮಂತಿಕೆಯ ಅಮೆರಿಕವೂ ತೋರಿದವು. ಬೇಕಾದ್ದು ಹಣ ಅಲ್ಲವೆಂದೂ, ಯುದ್ಧಕಾಲದ ಅವಶ್ಯಕತೆಗಳಿಂದ ಆಹಾರ ಒಯ್ಯಲು ಹಡಗುಗಳಲ್ಲಿ ಸ್ಥಳ ಇಲ್ಲವೆಂದೂ ಸಾರಿದರು. ಬಂಗಾಳದ ಈ ಘೋರ ದುರಂತವನ್ನು ಮರೆಮಾಚಲು ಯತ್ನಿಸಿ, ಸರಕಾರವು ಎಷ್ಟೇ ಅಡ್ಡಬಂದರೂ ಇಂಗ್ಲೆಂಡ್ ಮತ್ತು ಅಮೆರಿಕ ದೇಶದ ಮಾನವ ಪ್ರೇಮಿಗಳೂ ಕರುಣಿಗಳೂ ಆದ ಅನೇಕ ಸ್ತ್ರೀಪುರುಷರು ನಮ್ಮ ಸಹಾಯಕ್ಕೆ ಬಂದರು. ಎಲ್ಲಕ್ಕೂ ಹೆಚ್ಚಾಗಿ ಚೀನ ಮತ್ತು ಐರ್ಲೆಂಡ್ ಸರಕಾರಗಳು ತಮ್ಮದೇ ಅನೇಕ ತೊಂದರೆಗಳಿದ್ದಾಗ್ಯೂ, ಕ್ಷಾಮದ ಪೀಡೆಯ ಕಹಿ ಅನುಭವ ಏನೆಂಬುದು ಸ್ವತಃ ಅನುಭವವಿದ್ದುದರಿಂದ ಮತ್ತು ಇಂಡಿಯಾ ದೇಶದ ಜನರ ದೈಹಿಕ ಮಾನಸಿಕ ಕ್ಲೇಶಕ್ಕೆ ಕಾರಣವನ್ನು ಅರಿತಿದ್ದರಿಂದ ಉದಾರವಾಗಿ ಸಹಾಯ ನೀಡಿದವು. ಭಾರತೀಯರ ಜ್ಞಾಪಕಶಕ್ತಿ ಬಹಳ ಪುರಾತನವಾದುದು. ಆದರೆ ಯಾವುದನ್ನೆ ಮರೆಯಲಿ, ಜ್ಞಾಪಕದಲ್ಲಿಟ್ಟಿರಲಿ, ಈ ಔದಾರ್ಯವನ್ನು ಸ್ನೇಹ ಹಸ್ತವನ್ನು ಎಂದೂ ಮರೆಯುವುದಿಲ್ಲ.

## ೩. ಪ್ರಜಾಸತ್ತೆಗಾಗಿ ಯುದ್ಧ

ಏಷ್ಯ, ಯೂರೋಪ್ ಮತ್ತು ಆಫ್ರಿಕ ಖಂಡಗಳಲ್ಲಿ, ಪೆಸಿಫಿಕ್, ಅಟ್ಲಾಂಟಿಕ್ ಮತ್ತು ಹಿಂದೂ ಸಾಗರಗಳಲ್ಲಿ ಯುದ್ಧವು ತನ್ನ ಎಲ್ಲ ಭಯಂಕರ ರೂಪದಲ್ಲಿ ಮುಂದುವರಿದಿದೆ: ಚೀನದಲ್ಲಿ ಸುಮಾರು ಏಳುವರ್ಷ, ಯೂರೋಪ್ ಆಫ್ರಿಕಗಳಲ್ಲಿ ನಾಲ್ಕು ವರ್ಷ ಆರುತಿಂಗಳು, ಮತ್ತು ಎರಡು ವರ್ಷ ನಾಲ್ಕು ತಿಂಗಳ ಪ್ರಪಂಚ ಯುದ್ಧ; ಫ್ಯಾಸಿಸಂ, ನಾಜಿಸಂ ವಿರುದ್ಧಯುದ್ಧ; ಪ್ರಪಂಚದ ಸರ್ವಾಧಿಕಾರ ಪಡೆಯಲು ಯುದ್ಧ. ಈ ಯುದ್ಧವರ್ಷಗಳಲ್ಲಿ ಇಲ್ಲಿ ಮತ್ತು ಇಂಡಿಯಾ ದೇಶದ ಬೇರೆ ಕಡೆಗಳಲ್ಲಿ ಮೂರು ವರ್ಷ ನಾನು ಸೆರೆಮನೆಯಲ್ಲಿ ಕಳೆದಿದ್ದೇನೆ.

ನಾನು ಮತ್ತು ನನ್ನಂತೆ ಇಂಡಿಯಾದಲ್ಲಿ ಅನೇಕರು ಮೊದಮೊದಲು ಫ್ಯಾಸಿಸಂ ಮತ್ತು ನಾಜಿಸಂಗೆ ಯಾವ ಮನೋಭಾವನೆ ತೋರಿದೆವೆಂಬುದು ಜ್ಞಾಪಕವಿದೆ. ಚೀನದ ಮೇಲೆ ಜಪಾನ್ ಧಾಳಿಮಾಡಿದ್ದು ಇಂಡಿಯಾದ ಹೃದಯವನ್ನು ಹೇಗೆ ಕಲಕಿತು ; ಇಂಡಿಯಾ ಚೀನದೇಶಗಳ ಶತಶತ ಮಾನಗಳ ಸ್ನೇಹವನ್ನು ಪುನಃ ಹೇಗೆ ಬೆಸೆಯಿತು ; ಇಟಲಿ, ಅಬಿಸೀನಿಯಾ ದೇಶವನ್ನು ಲೂಟಿಮಾಡಿದ್ದರಿಂದ ಇಂಡಿಯಕ್ಕೆ ಎಷ್ಟು ಬೇಸರವಾಯಿತು ; ಜೆಕೊಸ್ಲೊವೇಕಿಯಾ ವಿಷಯದ ದ್ರೋಹ ನಮ್ಮ ಹೃದಯವನ್ನಿರಿದು ಮನಸ್ಸನ್ನು ಹೇಗೆ ಕಹಿಮಾಡಿತು ; ಸ್ಪೇನ್ ದೇಶದ ಪ್ರಜಾಧಿಪತ್ಯ ಸರಕಾರ ಹೆಜ್ಜೆಹೆಜ್ಜೆಗೂ ವೀರಾವೇಶದಿಂದ ಕಾದಾಡಿ ಹೇಗೆ ನಿರ್ನಾಮವಾಯಿತು ; ಇವೆಲ್ಲ ನನಗೂ, ನನ್ನಂತೆ ಇನ್ನೂ ಅನೇಕರಿಗೂ ಘೋರದುರಂತಗಳಾಗಿ, ವೈಯಕ್ತಿಕವಾಗಿ ಮನನೊಂದಿದೇವೆ.

ನಮ್ಮ ಮನಸ್ಸನ್ನು ಕಲಕಿದ್ದು ಫ್ಯಾಸಿಸಂ ಮತ್ತು ನಾಜಿಸಂಗಳು ನಡೆಸಿದ ಪರಾಕ್ರಮಣದ ಪ್ರತ್ಯಕ್ಷಕಾರ್ಯಗಳು ಮಾತ್ರವಲ್ಲ ; ಎಷ್ಟೇ ಭಯಾನಕವಿದ್ದರೂ ಅದರ ಹಿಂದೆಯೇ ಒದಗಿದ ಅಸಭ್ಯತೆ ಮತ್ತು ಪಾಶವೀವೃತ್ತಿಯೂ ಅಲ್ಲ, ಆದರೆ ಬೊಬ್ಬೆಯಿಟ್ಟು ಕಿರಿಚಿ ಪ್ರಚಾರಮಾಡಿದ ಅವುಗಳ ಆಧಾರಭೂತ ತತ್ವಗಳು ಮತ್ತು ತಮ್ಮ ಜೀವನವನ್ನೇ ಮಾರ್ಪಡಿಸಲು ಇಟ್ಟುಕೊಂಡ ಜೀವನಸಿದ್ಧಾಂತಗಳು. ಏಕೆಂದರೆ ಅವು ನಾವು ತಲೆತಲಾಂತರದಿಂದ ಅಂಟಿಕೊಂಡು ಇಂದೂ ನಂಬಿದ್ದಕ್ಕೆ ತೀರ ಭಿನ್ನವಾಗಿದ್ದುವು. ನಮ್ಮ ಜನಾಂಗದ ಸ್ಮರಣಶಕ್ತಿ ನಮ್ಮನ್ನು ಪೂರ್ಣ ಕೈಬಿಟ್ಟಿದ್ದರೂ, ನಮ್ಮ ನೆಲೆಯನ್ನು ನಾವು ಕಳೆದುಕೊಂಡಿದ್ದರೂ, ಸಭ್ಯತೆಗಾಗಿ ತಮ್ಮ ವೇಷವನ್ನು ಮರೆಮಾಚಿಕೊಂಡುಬಂದ ನಮ್ಮ ಸ್ವಂತ ಅನುಭವಗಳೇ–ನಾಜಿ ತತ್ವಗಳು, ಜೀವದ ಸಿದ್ಧಾಂತಗಳು ರಾಷ್ಟ್ರಪದ್ಧತಿ ಇವುಗಳ ಅಂತಿಮ ಗುರಿ ಏನು ಎಂದು ತಿಳಿಸಲು ಸಾಕಾಗಿದ್ದುವು. ಏಕೆಂದರೆ ಬಹುಕಾಲದಿಂದ ನಮ್ಮಜನ ಅದೇ ತತ್ವಗಳಿಗೆ, ರಾಷ್ಟ್ರಪದ್ಧತಿಗೆ ಬಲಿಯಾಗಿದ್ದರು. ನಾವು ಫ್ಯಾಸಿಸಂ ಮತ್ತು ನಾಸಿಸಂಗೆ ಅಷ್ಟುಬೇಗ ತೀವ್ರ ವಿರೋಧಿಸಿದ್ದಕ್ಕೆ ಅದೇಕಾರಣ.

೧೯೩೬ ನೆ ಮಾರ್ಚಿ ತಿಂಗಳ ಮೊದಲಲ್ಲಿ ಸಿನಾರ್ ಮುಸೊಲಿನಿ ಒತ್ತಾಯಮಾಡಿಕೊಟ್ಟ ಆಹ್ವಾನವನ್ನು ನಾನು ತಿರಸ್ಕರಿಸಿದ್ದು ನನಗೆ ಜ್ಞಾಪಕವಿದೆ. ಇಟಲಿ ಯುದ್ಧಕ್ಕೆ ಸೇರಿದ ಒಡನೆ ಫ್ಯಾಸಿಸ್ಟ್ ಡೂಚೆಯನ್ನು ಬೈಯಲು ಆರಂಭಿಸಿದ ಅನೇಕ ಪ್ರಮುಖ ರಾಜನೀತಿಜ್ಞರು ಆಗ ಆತನನ್ನು ಬಹು ಮಮತೆಯಿಂದ ಮನಮೆಚ್ಚಿ ಹೊಗಳುತ್ತಿದ್ದರು ; ಆತನ ರಾಜ್ಯಭಾರ ಮತ್ತು ಕಾರ್ಯವಿಧಾನವನ್ನು ಕೊಂಡಾಡುತ್ತಿದ್ದರು.

ಎರಡು ವರ್ಷಗಳನಂತರ ಮ್ಯೂನಿಚ್‌ಗೆ ಮುಂಚಿನ ಬೇಸಗೆಯಲ್ಲಿ, ಜರ್ಮನಿಗೆ ಬರಬೇಕೆಂದು ನಾಜಿ ಸರಕಾರದಿಂದ ನನಗೆ ಆಹ್ವಾನ ಬಂದಿತು. ಅದೇ ಆಹ್ವಾನದಲ್ಲಿ ನಾಜಿ ತತ್ವಗಳಿಗೆ ನನ್ನ ವಿರೋಧ ಮನೋಭಾವ ತಮಗೆ ತಿಳಿದಿದೆ ಎಂದೂ, ಆದರೂ ನಾನು ಸ್ವತಃ ಜರ್ಮನಿಯನ್ನು ನೋಡಬೇಕೆಂದೂ ಸೂಚಿಸಲಾಗಿತ್ತು. ಸರಕಾರದ ಅತಿಥಿಯಾಗಿ ಅಥವ ಖಾಸಗಿಯಾಗಿ, ನನ್ನ ಹೆಸರಿನಲ್ಲಿ ಅಥವ ಗುಪ್ತ ಹೆಸರಿನಲ್ಲಿ ನನಗೆ ಇಷ್ಟಬಂದಂತೆ ಎಲ್ಲಿಬೇಕಾದರೂ ಹೋಗಬಹುದೆಂದೂ ತಿಳಿಸಲಾಗಿತ್ತು. ವಂದನೆಗಳೊಡನೆ ಆಗಲೂ ನಿರಾಕರಿಸಿದೆ. ಅದಕ್ಕೆ ಬದಲು ಇಂಗ್ಲೆಂಡ್‌ನ ಆಗಿನ ಮುಖ್ಯ ಮಂತ್ರಿಗೆ ಏನೂ ತಿಳಿಯದ ಆ ದೂರದೇಶವಾದ ಜೆಕೊಸ್ಲೊವೇಕಿಯಾಕ್ಕೆ ಹೋದೆ.

ಮ್ಯೂನಿಚ್‌ಗೆ ಮುಂಚೆ ಇಂಗ್ಲೆಂಡ್‌ನ ಮಂತ್ರಿಮಂಡಲದ ಸದಸ್ಯರನ್ನು ಮತ್ತು ಪ್ರಮುಖ ರಾಜಕಾರಣಿಗಳನ್ನು ಕಂಡು ನನ್ನ ನಾಜಿ, ಫ್ಯಾಸಿಸ್ಟ್ ವಿರೋಧಭಾವನೆಗಳನ್ನು ವ್ಯಕ್ತಗೊಳಿಸಿದೆ. ನನ್ನ ಅಭಿಪ್ರಾಯಗಳು ಅವರಿಗೆ ರುಚಿಸಲಿಲ್ಲ. ಗಮನಿಸಬೇಕಾದ ಅಂಶಗಳು ಇನ್ನೂ ಅನೇಕವಿವೆ ಎಂಬ ಉತ್ತರ ದೊರೆಯಿತು.

ಜೆಕೊಸ್ಲೊವೇಕಿಯಾದ ವಿಷಮ ಸ್ಥಿತಿಯಲ್ಲಿ ಪ್ರೇಗ್, ಸೂಡೆಟನ್‌ಲ್ಯಾಂಡ್, ಲಂಡನ್, ಪ್ಯಾರಿಸ್ ಮತ್ತು ರಾಷ್ಟ್ರಸಂಘದ ಸಭೆ ನಡೆಯುತ್ತಿದ್ದ ಜೆನೀವದಲ್ಲಿ ನಾನು ಕಂಡ ಫ್ರಾಂಕೊ ಬ್ರಿಟಿಷ್ ರಾಜನೀತಿಯನ್ನು ನೋಡಿ ಆಶ್ಚರ್ಯವಾಯಿತು, ಬೇಸರವಾಯಿತು. ಅದನ್ನು ಶಮನ ನೀತಿ ಎಂದರೆ ಬಹಳ ಮೃದುಮಾತು. ಅದರ ಹಿಂದೆ ಹಿಟ್ಲರನ ಭಯವೂ ಇತ್ತು, ಕಳ್ಳತನದ ಮೆಚ್ಚುಗೆಯೂ ಇತ್ತು.

ಈಗ ಫ್ಯಾಸಿಸಂ ಮತ್ತು ನಾಜಿಸಂ ವಿರುದ್ಧ ಘೋರ ಯುದ್ಧ ನಡೆಯುತ್ತಿರುವಾಗ ನಾನು ಮತ್ತು ನನ್ನಂತೆ ಅಭಿಪ್ರಾಯವಿದ್ದವರು ಸೆರೆಮನೆಯಲ್ಲಿ ಕೊಳೆಯುತ್ತಿರುವುದೂ, ಹಿಟ್ಲರ್ ಮುಸ್ಸೊಲಿನಿಗಳನ್ನು ಪುರಸ್ಕರಿಸಿ ಚೀನದ ಮೇಲಿನ ಜಪಾನ್ ದಾಳಿಯನ್ನು ಮೆಚ್ಚಿದವರು ಸ್ವಾತಂತ್ರ್ಯ, ಪ್ರಜಾಸತ್ತೆ ಮತ್ತು ಫ್ಯಾಸಿಸಂ ವಿರುದ್ಧ ತತ್ವಗಳ ಪತಾಕೆಯನ್ನು ಎತ್ತಿ ಹಿಡಿದಿರುವುದೂ ಒಂದು ವಿಧಿಯ ವೈಚಿತ್ರ್ಯ.

ಇಂಡಿಯಾ ದೇಶದಲ್ಲೂ ಈ ಒಂದು ಅಸಾಧ್ಯ ಬದಲಾವಣೆಯನ್ನು ನೋಡಬಹುದು. ಸದಾ ಒಂದಲ್ಲ ಒಂದು ಅನುಗ್ರಹಕ್ಕೆ ಕಾದಿದ್ದು ಅಧಿಕಾರಿಗಳು ಹೇಳುವುದೆಲ್ಲ ವೇದವಾಕ್ಯ ಎಂದು ಪ್ರತಿಧ್ವನಿಗೈಯುವ ಸರಕಾರದ ಬಾಲಹಿಡಿಯುವವರು ಅನೇಕರಿದ್ದಾರೆ. ಎಲ್ಲೆಡೆಯಂತೆ ಇಲ್ಲಿಯೂ ಸಹ, ಸ್ವಲ್ಪದಿನಗಳ ಹಿಂದೆ ಹಿಟ್ಲರ್ ಮುಸ್ಸೊಲಿನಿಗಳನ್ನು ಆದರ್ಶಪುರುಷರೆಂದು ಬಾಯಿತುಂಬ ಹೊಗಳುತ್ತಿದ್ದರು; ಸೋವಿಯಟ್ ಸಂಯುಕ್ತ ರಾಷ್ಟ್ರವನ್ನು ಬಹಿಷ್ಕೃತವೆಂಬಂತೆ ದೂರುತ್ತಿದ್ದರು. ಈಗ ಅದೆಲ್ಲ ಇಲ್ಲ; ಕಾಲ ಬದಲಾವಣೆಯಾಗಿದೆ. ಆಡಳಿತ ವರ್ಗದ, ರಾಜ್ಯದ ಉನ್ನತ ಅಧಿಕಾರಿಗಳೇ ಈಗ ನಾಜಿಸಂ, ಫ್ಯಾಸಿಸಂ ವಿರುದ್ಧ ಪ್ರಚಾರಮಾಡುತ್ತಿದಾರೆ; ಉಸಿರು ಹಿಡಿದು ಪ್ರಜಾಸತ್ತೆಯ ವಿಷಯ ಸಹ ನಿದಾನವಾಗಿ ಏನೋ ಆದರೂ ಆಗಬೇಕಾದ್ದೇ ಎಂದು ಮಾತನಾಡುತ್ತಾರೆ. ಕಾಲಗತಿ ವ್ಯತ್ಯಸ್ತವಾಗಿ ಪರಿಸ್ಥಿತಿ ಬದಲಾಯಿಸಿದ್ದರೆ ಏನುಮಾಡುತ್ತಿದ್ದರೋ? ಊಹೆಗೆ ಅವಕಾಶವೇ ಇಲ್ಲ. ಅಧಿಕಾರ ಯಾರ ಕೈಲಿದ್ದರೂ ಸರಿ ಹೂವು, ಹಾರ, ಬಿನ್ನವತ್ತಳೆಗಳಿಂದ, ಯಾರೇ ಬರಲಿ, ಸ್ವಾಗತಿಸುತ್ತಿದ್ದರು.

ಯುದ್ಧಕ್ಕೆ ಪೂರ್ವ ಅನೇಕವರ್ಷಗಳಿಂದ, ನನ್ನ ಮನಸ್ಸಿನಲ್ಲಿ, ಮುಂಬರುವ ಯುದ್ಧದ ವಿಷಯವೇ ತುಂಬಿತ್ತು. ಅದರ ವಿಷಯ ಚಿಂತಿಸಿ, ಮಾತನಾಡಿ, ಬರೆದು, ನನ್ನ ಮನಸ್ಸನ್ನು ಅಣಿಮಾಡಿದೆ. ಆ ಯುದ್ಧದಲ್ಲಿ ಉನ್ನತ ಆದರ್ಶಗಳು ಪಣಗಳಾಗುತ್ತವೆ; ಆ ಮಹಾಪ್ರಳಯದಿಂದ ಇಂಡಿಯದಲ್ಲಿ ಪ್ರಪಂಚದಲ್ಲಿ ಮಹಾಕ್ರಾಂತಿಕಾರಕ ವ್ಯತ್ಯಾಸಗಳಾಗುತ್ತವೆ; ಆದ್ದರಿಂದ ಆ ಘೋರಯುದ್ಧದಲ್ಲಿ ಇಂಡಿಯ ಮನಸ್ಸಿಟ್ಟು ಪ್ರತ್ಯಕ್ಷಭಾಗಿಯಾಗಬೇಕು ಎಂದು ತೀರ್ಮಾನಿಸಿದ್ದೆ. ಆದರೆ ಆಗ ಇಂಡಿಯಾ ದೇಶಕ್ಕೆ ನೇರವಾದ ಅಪಾಯವನ್ನಾಗಲಿ, ಪ್ರತ್ಯಕ್ಷ ಮುತ್ತಿಗೆಯ ಸಂಭವವನ್ನಾಗಲಿ ಎಣಿಸಿರಲಿಲ್ಲ. ಆದರೂ ಇಂಡಿಯ ತನ್ನ ಪೂರ್ಣಪಾತ್ರವಹಿಸಬೇಕೆಂದಿದ್ದು, ಆದರೆ ಆ ರೀತಿ ಭಾಗವಹಿಸಬೇಕಾದರೆ ಅದು ಪೂರ್ಣಸ್ವತಂತ್ರ ರಾಷ್ಟ್ರವಾಗಿ ಸರಿಸಮಾನತೆಯಿಂದ ಎಂದೂ ಮನಗಂಡಿದ್ದೆ.

ಈ ಎಲ್ಲ ವರ್ಷಗಳಲ್ಲಿ ಸಾಮ್ರಾಜ್ಯ ನೀತಿಯನ್ನು ವಿರೋಧಿಸಿದಂತೆ ಫ್ಯಾಸಿಸಂ, ನಾಜಿಸಂ ವಿರೋಧಿಸಿದ ಇಂಡಿಯಾದೇಶದ ಏಕಮಾತ್ರ ಮಹಾಸಂಸ್ಥೆಯಾದ ರಾಷ್ಟ್ರೀಯ ಮಹಾಸಭೆಯ ಅಭಿಪ್ರಾಯವೂ ಅದೇ ಆಗಿತ್ತು.

ಈಗ ಎರಡು ವರ್ಷಗಳಿಂದ ಅಂತಹ ಕಾಂಗ್ರೆಸ್ ನ್ಯಾಯಬಾಹಿರ, ಪುಂಡು ಸಂಸ್ಥೆಯೆಂದು ಸಾರಲ್ಪಟ್ಟು ಅದು ಯಾವ ರೀತಿ ಕೆಲಸಮಾಡಲೂ ಅವಕಾಶವಿಲ್ಲವಾಗಿದೆ. ರಾಷ್ಟ್ರಮಹಾಸಭೆ ಎಲ್ಲ ಈಗ ಸೆರೆಮನೆಯಲ್ಲಿದೆ. ಅದರ ಪ್ರಾಂತ್ಯಶಾಸನ ಸಭೆಗಳ ಅಧ್ಯಕ್ಷರುಗಳು, ಅದರ ಹಿಂದಿನ ಮಂತ್ರಿಗಳು, ಮುನ್ಸಿಪಾಲಿಟಿಗಳ ಕಾಂಗ್ರೆಸ್ ಮೇಯರುಗಳು ಮತ್ತು ಅಧ್ಯಕ್ಷರುಗಳು ಎಲ್ಲ ಸೆರೆಮನೆಯಲ್ಲಿ.

ಈ ಮಧ್ಯೆ ಪ್ರಜಾಸತ್ತೆಗಾಗಿ, ಅಟ್ಲಾಂಟಿಕ್ ಶಾಸನಕ್ಕಾಗಿ, ಚತುಸ್ಸ್ವಾತಂತ್ರ್ಯಕ್ಕಾಗಿ ಯುದ್ಧ ನಡೆಯುತ್ತಲೇ ಇದೆ.

### ೪ ಸೆರೆಮನೆಯ ಕಾಲಕ್ಷೇಪ–ಕಾರ್ಯೋನ್ಮುಖತೆ

ಸೆರೆಮನೆಯಲ್ಲಿ ಕಾಲವು ತನ್ನ ಸ್ವಭಾವವನ್ನೇ ಪರಿವರ್ತಿಸುವಂತಿದೆ. ವರ್ತಮಾನ ಕಾಲವೇ ನಮಗೆ ಇಲ್ಲವಾಗಿದೆ; ಏಕೆಂದರೆ ನಿರ್ಜೀವ ಗತಕಾಲದಿಂದ ಪ್ರತ್ಯೇಕಿಸುವ ಅನುಭವಗಳು ಮತ್ತು ಆಸಕ್ತಿಯೇ ಅಭಾವವಾಗಿವೆ. ಸಚೇತನವಾಗಿ, ಸಜೀವವಾಗಿ, ಸಾವಿಗೆ ತುತ್ತಾಗಿರುವ ಬಾಹ್ಯ ಪ್ರಪಂಚದ ವಾರ್ತೆ ಸಹ ಗತಕಾಲದ ನಿಶ್ಚಲತೆಯಂತೆ, ಏನೋ ಒಂದು ಕನಸಿನ ಕಲ್ಪನೆಯಂತಿದೆ.

ಹೊರಗಿನ ವಾಸ್ತವಿಕ ಕಾಲವು ಇಲ್ಲವಾಗಿದೆ, ಒಳಗಿನ ಕಾಲ್ಪನಿಕ ಭಾವನೆಯು ಮಾತ್ರ ಉಳಿದಿದೆ; ಅದೂ ತುಂಬ ತಳಮಟ್ಟದಲ್ಲಿ; ನಮ್ಮ ಆಲೋಚನೆಗಳು ಆ ಕಾಲ್ಪನಿಕ ಭಾವನೆಯನ್ನು ಪ್ರಸಕ್ತಕಾಲ ದಿಂದ ಹೊರಗೆಳೆದು ಗತಕಾಲದಲ್ಲೊ, ಭವಿಷ್ಯತ್ತಿನಲ್ಲೊ ಒಂದು ವಿಧವಾದ ವಾಸ್ತವಿಕತೆಯನ್ನೂ ಅನುಭವಿಸಿದಾಗ ಮಾತ್ರ. ಆಗಸ್ಟ್‌ಕಾಂಟೆಯು ಹೇಳಿರುವಂತೆ ನಮ್ಮ ಗತಕಾಲದ ಗೋರಿಗಳಲ್ಲಿ ಸತ್ತ ಶವಗಳಂತೆ ಜೀವಿಸುತ್ತಿದ್ದೇವೆ. ಅದರಲ್ಲೂ ಗತಕಾಲ ಸ್ಮರಣೆಯಲ್ಲೋ ಭವಿಷ್ಯದ ಕಲ್ಪನಾ ಪ್ರಪಂಚದಲ್ಲೋ ನಮ್ಮ ಶೋಷಿತ ಬಂಧಿತ ಮನೋಭಾವನೆಗಳಿಗೆ ಪೋಷಣೆ ಪಡೆಯಲೆತ್ನಿಸುವ ಸೆರೆಮನೆಯಲ್ಲಿ.

ಹಿಂದಿನದರಲ್ಲಿ ಒಂದು ನಿತ್ಯತೆ ಮತ್ತು ಪ್ರಶಾಂತತೆ ಇದೆ. ವರ್ಣಚಿತ್ರದಂತೆ, ಕಂಚು ಅಥವ ಅಮೃತಶಿಲೆಯ ಪ್ರತಿಮೆಯಂತೆ ಶಾಶ್ವತತೆಯ ಸ್ಪರ್ಶವಿದೆ; ಬದಲಾವಣೆ ಎಂಬುದು ಅದಕ್ಕಿಲ್ಲ. ಪ್ರಸ್ತುತ ಕಾಲದ ಸಂಕ್ಷೋಭೆವಿಪ್ಲವಗಳಿಂದ ಕದಲದೆ ತನ್ನ ಗಾಂಭೀರ್ಯವನ್ನು ಪ್ರಶಾಂತ ಮುದ್ರೆಯನ್ನು ಕಾಯ್ದು ಕೊಂಡು ನೊಂದಜೀವಕ್ಕೆ, ತಳಮಳಗೊಂಡ ಮನಸ್ಸಿಗೆ ತನ್ನ ಸಮಾಧಿ ಗುಹೆಯಲ್ಲಿ ಆಶ್ರಯ ಪಡೆಯಲು ಪ್ರೇರೇಪಿಸುತ್ತದೆ. ಅಲ್ಲಿ ಒಂದು ವಿಧವಾದ ಶಾಂತಿ, ಭದ್ರತೆ ಇದೆ ಮತ್ತು ಒಂದು ಬಗೆಯ ಆಧ್ಯಾತ್ಮಿಕ ಸಮಾನತೆಯನ್ನೂ ಕಾಣಬಹುದು.

ಆದರೆ ಅದಕ್ಕೂ ತನ್ನದೇ ಆದ ಹೋರಾಟಗಳು ಸಮಸ್ಯೆಗಳಿಂದ ತುಂಬಿರುವ ಪ್ರಸ್ತುತಕಾಲಕ್ಕೂ ಒಂದು ಸಜೀವ ಸಂಬಂಧವಿಲ್ಲದಿದ್ದರೆ ಅದು ಜೀವನವೇ ಅಲ್ಲ. ಆದರೆ ಜೀವನ ಪೂರ್ಣತೆಗೆ ಅತ್ಯವಶ್ಯವಾದ ಒಂದು ಕ್ರಿಯಾಸಕ್ತಿ ಮತ್ತು ಫಲವಿಲ್ಲದ ಕಲೆಗಾಗಿ ಕಲೆ ಎಂಬಂತಾಗುತ್ತದೆ. ಆ ಆಸಕ್ತಿ ಫಲವಿಲ್ಲದಿದ್ದರೆ ಕ್ರಮೇಣ ನಮ್ಮ ಆಶೆಗಳೂ, ಶಕ್ತಿಯೂ ಬರಿದಾಗುತ್ತದೆ; ಜೀವನದ ತಳಮಟ್ಟವನ್ನು ಮುಟ್ಟಿ ಕ್ರಮೇಣ ಅಸ್ತಿತ್ವವೇ ಇಲ್ಲದಾಗುತ್ತದೆ. ನಾವೂ ಗತಕಾಲದ ಬಂದಿಗಳಾಗುತ್ತೇವೆ. ಅದರ ಜಡಸ್ವಭಾವ ನಮಗೂ ಸ್ವಲ್ಪ ಅಂಟಿಕೊಳ್ಳುತ್ತದೆ. ಸೆರೆಮನೆಯ ಶುಷ್ಕ ಜೀವನ ನಿಯಮಗಳಿಗೆ ದಾಸರಾಗಿ, ಕ್ರಿಯಾಸಕ್ತಿಯೇ ಇಲ್ಲದ ಸೆರೆಮನೆಯಲ್ಲಿ ಮನಸ್ಸು ಈ ರೀತಿ ಪರಿವರ್ತನಗೊಳ್ಳುವುದು ಅತಿಸುಲಭ.

ಆದರೂ ಗತಕಾಲಕ್ಕೆ ನಾವು ಅಂಟಿಕೊಂಡೇ ಇದ್ದೇವೆ. ನಮ್ಮ ನಿಲುವು ಇರವುಗಳೆಲ್ಲ ಗತ ಕಾಲದಿಂದ. ನಾವು ಅದರ ಮಕ್ಕಳಾಗಿ ಅದರಲ್ಲೇ ಮುಳುಗಿದ್ದೇವೆ. ಅದನ್ನು ಅರ್ಥಮಾಡಿಕೊಳ್ಳದೆ, ಅದು ನಮ್ಮೊಳಗೆ ಇರುವ ಏನೋ ಒಂದು ವಸ್ತು ಎಂದುಭಾವಿಸುವುದು ವರ್ತಮಾನ ಕಾಲವನ್ನೇ ಅರಿಯ ದಂತೆ ಅದನ್ನು ಪ್ರಸ್ತುತಕಾಲಕ್ಕೆ ಹೊಂದಿಸಿಕೊಂಡು, ಭವಿಷ್ಯತ್ತಿಗೆ ಬೆಳಸಿ, ಆ ರೀತಿ ಜೋಡಿಸಲಾಗದ ಭಾಗವನ್ನು ಕಿತ್ತೊಗೆದು, ಎಲ್ಲವನ್ನೂ ನಮ್ಮ ಭಾವನೆಗೆ, ಕ್ರಿಯೆಗೆ ಸ್ಪಂದನ ಮತ್ತು ಕಂಪನ ಶಕ್ತಿ ಯನ್ನು ಕೊಡುವ ಸಜೀವವಸ್ತುವನ್ನಾಗಿ ಮಾಡುವುದೇ ಜೀವನ.

ಎಲ್ಲ ಅವಶ್ಯಕ್ರಿಯೆಯೂ ನಮ್ಮ ಅಂತರಾಳದಿಂದ ಉದ್ಭವಿಸುತ್ತದೆ. ಗತಕಾಲದ ವೈಯಕ್ತಿಕ ಅನುಭವ ಮಾತ್ರ ಏಕೆ, ಜನಾಂಗದ ಅನುಭವ ಸಹ ನಮ್ಮನ್ನು ಸಕಾಲದ ಕ್ರಿಯೆಯ ಮನೋ ನಿಶ್ಚಯಕ್ಕೆ ಅಣಿ ಮಾಡುತ್ತದೆ. ಜನಾಂಗದ ಎಲ್ಲ ಸ್ಮರಣ ಶಕ್ತಿ, ಆನುವಂಶಿಕ ಪ್ರಭಾವ, ಸನ್ನಿವೇಶ, ಶಿಕ್ಷಣ, ಸುಷುಪ್ತ ಪ್ರೇರಣೆಗಳು, ಶೈಶವ ಮತ್ತು ಬಾಲ್ಯಾವಸ್ಥೆಯಿಂದ ಮೊದಲುಗೊಂಡು ನಮ್ಮ ಭಾವನೆಗಳು, ಕನಸುಗಳು, ಕ್ರಿಯೆಗಳು ಇವೆಲ್ಲದರ ಅಗಾಧವಾದ ವಿಚಿತ್ರ ಸಮ್ಮಿಶ್ರಶಕ್ತಿ ನಮ್ಮನ್ನು ಆ ಹೊಸಕ್ರಿಯೆಗೆ ನಿರುಪಾಯವಾಗಿ ಮುಂದೂಡುತ್ತದೆ; ಆ ಕ್ರಿಯೆಯೇ ಪುನಃ ನಮ್ಮ ಭವಿಷ್ಯ ವನ್ನು ರೂಪಿಸುವ ಇನ್ನೊಂದು ಕಾರಣಭೂತವೂ ಆಗುತ್ತದೆ. ಭವಿಷ್ಯವನ್ನು ಮಾರ್ಪಡಿಸಿ, ಸ್ವಲ್ಪ ಮಟ್ಟಿಗೆ, ಪ್ರಾಯಶಃ ಬಹುಮಟ್ಟಿಗೆ ನಿರ್ದಿಷ್ಟಗೊಳಿಸುತ್ತದೆ. ಆದರೂ ನಿಶ್ಚಯವಾಗಿ ಅದೇ ಎಲ್ಲ ಕೊನೆಯಲ್ಲ.

ಅರವಿಂದರು ಎಲ್ಲೋ ಒಂದು ಕಡೆ ವರ್ತಮಾನವು "ಶುದ್ಧ ಅಕ್ಷತ ಕಾಲ" ಎಂದಿದ್ದಾರೆ: ಭೂತಕಾಲದಿಂದ ಭವಿಷ್ಯತ್ತನ್ನು ಬೇರ್ಪಡಿಸುವ ಕತ್ತಿಯ ಅಲಗಿನಂತಿರುವ ಕಾಲ ಮತ್ತು ಸ್ಥಿತಿ:

ಈ ಕ್ಷಣದಲ್ಲಿ ಇದೆ ಮರುಕ್ಷಣದಲ್ಲಿಯೇ ಇಲ್ಲ. ಮಾತೇನೋ ಮನೋಹರವಾಗಿದೆ ಆದರೆ ಅರ್ಥ? ಭವಿಷ್ಯತ್ತಿನ ತೆರೆಯ ಮರೆಯಿಂದ ತನ್ನ ನಗ್ನ ಪರಿಶುದ್ಧತೆಯಲ್ಲಿ ನಮ್ಮ ಸಂಪರ್ಕ ಮಾಡಿ ಕ್ಷಣಮಾತ್ರದಲ್ಲಿಯೇ ಗತಕಾಲದ ಮಲಿನತೆಯಲ್ಲಿ ಹಳಸಿ ಮರೆಯಾಗುವ ಅಕ್ಷತಕಾಲ. ಅದನ್ನು ಮಲಿನಗೊಳಿಸುವವರು, ಅತಿಕ್ರಮಿಸುವವರು ನಾವೇನು? ಅಥವ ಗತಕಾಲದ ದಾಂಪತ್ಯದಿಂದ ಕಲುಷಿತವಾಗಿರುವ ಆ ನಿಮಿಷವೇ ಅಷ್ಟು ಪರಿಶುದ್ಧವಲ್ಲವೋ?

ತಾತ್ವಿಕ ಭಾವನೆಯಲ್ಲಿ ಮಾನವಸ್ವಾತಂತ್ರ್ಯವೆಂಬುದು ಇದೆಯೊ? ಅಥವ ಎಲ್ಲವೂ ನಿಯತ ಪ್ರಾರಬ್ಧ ಕರ್ಮದಿಂದ ಬದ್ಧವೊ? ಅದು ನನಗೆ ತಿಳಿಯದು. ಆದರೂ ಗತಕಾಲದ ಘಟನೆಗಳ ಸಂಮಿಶ್ರ ಮನಃ ಪ್ರವೃತ್ತಿಯು ವ್ಯಕ್ತಿತ್ವವನ್ನು ಅದುಮಿ ಆವರಿಸುತ್ತದೆಂದು ಬಲ್ಲೆ. ಪ್ರಾಯಶಃ ಅವನು ಅನುಭವಿಸುವ ಅಂತಃಪ್ರೇರಣೆ ಸ್ವತಂತ್ರಭಾವನೆ ಎಂದು ಮೇಲೆ ತೋರಿದಾಗ್ಯೂ ಪ್ರಾಯಶಃ ಅದೂ ಗತಕಾಲದ ಅನುಭವಕ್ಕೆ ಅಧೀನವಾಗಿದೆ. ಷೋಪನ್ಹಾರ್ ಹೇಳುವಂತೆ "ಮನುಷ್ಯ ಮನ ಬಂದಂತೆ ಮಾಡಬಹುದು, ಆದರೆ ತನ್ನ ಇಷ್ಟದಂತೆ ಮನಸ್ಸುಮಾಡುವುದಿಲ್ಲ." ಶುದ್ಧ ವಿಧಿವಾದವನ್ನೇ ನಂಬಿದರೆ ನಾವು ಪೂರ್ಣ ಕ್ರಿಯಾವಿಹೀನರಾಗಿ ಜೀವಶ್ರವಗಳಂತಾಗುವುದೇ ಖಂಡಿತ. ನನ್ನ ಪ್ರತಿ ಯೊಂದು ರಕ್ತಕಣವೂ ಅದನ್ನು ಪ್ರತಿಭಟಿಸುತ್ತದೆ; ಆದರೆ ಪ್ರತಿಭಟನೆಯೇ ಗತ ಅನುಭವಗಳ ಫಲ ವಾಗಿದ್ದರೂ ಇರಬಹುದು.

ಬಗೆಹರಿಯದ ಈ ಬಗೆಯ ದಾರ್ಶನಿಕ, ಆಧ್ಯಾತ್ಮಿಕ ಸಮಸ್ಯೆಗಳ ಕಡೆ ಸಾಮಾನ್ಯವಾಗಿ ನನ್ನ ಮನಸ್ಸು ಓಡುವುದಿಲ್ಲ. ಕೆಲವುವೇಳೆ ಸೆರೆಮನೆಯ ದೀರ್ಘ ಮೌನದಲ್ಲಿ, ಉಗ್ರ ಕಾರ್ಯಾಚರಣೆ ಯಲ್ಲಿ, ನನ್ನ ಮನಸ್ಸಿನಲ್ಲಿ ಮೂಡಿಬಂದು ಯಾವುದೋ ದುಃಖಸನ್ನಿವೇಶದಲ್ಲಿ ಮನಸ್ಸಿಗೊಂದು ಸಮಾಧಾನ ಅಥವ ನಿರ್ಲಿಪ್ತಭಾವನೆಯನ್ನುಂಟುಮಾಡುತ್ತದೆ. ಆದರೆ ಸಾಧಾರಣವಾಗಿ ನನ್ನ ಮನಸ್ಸೆಲ್ಲ ಕ್ರಿಯೆಯ ಕಡೆ ಅಥವ ಕಾರ್ಯಾಲೋಚನೆಯ ಕಡೆ; ಕ್ರಿಯೆ ಕೈಗೂಡದಿರುವ ವೇಳೆ ಕ್ರಿಯೆಗೆ ಸಿದ್ಧತೆ ಮಾಡಿಕೊಳ್ಳುತ್ತಿದೇನೆ ಎಂದೇ ನನ್ನ ಭಾವನೆ.

ಕ್ರಿಯೆಯ ಕರೆ ಬಹಳದಿಂದಲೂ ನನಗೆ ಅಂಟಿಕೊಂಡಿದೆ. ಆದರೆ ಆ ಕ್ರಿಯೆ ಭಾವನಾರಹಿತ ವಾದುದಲ್ಲ; ಅದರಿಂದಲೇ ಅವಿಚ್ಛಿನ್ನವಾಗಿ ಹರಿದು ಬಂದ ಒಂದು ಪ್ರವಾಹ. ಮತ್ತು ಕೆಲವುಬಾರಿ ಎರಡೂ ಸಮರಸವಾದಾಗ ಭಾವನೆಯಿಂದ ಕ್ರಿಯೆ ಉದ್ಭವಿಸಿ ಕ್ರಿಯೆಯಲ್ಲೇ ಸಾಫಲ್ಯತೆ ಪಡೆದಾಗ, ಕ್ರಿಯೆಯಿಂದ ಪುನಃ ಭಾವೋದ್ರೇಕವಾಗಿ ಅರ್ಥಪೂರ್ಣತೆ ಪಡೆದಾಗ ನಾನು ಆಗೊಂದು ಜೀವನದ ಪೂರ್ಣತೆಯನ್ನು ಅನುಭವಿಸಿದ್ದೇನೆ; ಆ ಒಂದು ಗಳಿಗೆಯಲ್ಲಿ ಉಜ್ವಲ ಶ್ರದ್ಧೆಯನ್ನು ತಾಳಿದ್ದೇನೆ. ಆದರೆ ಅಂತಹ ರಸನಿಮಿಷಗಳು ವಿರಳ, ಬಹುವಿರಳ. ಸಾಮಾನ್ಯವಾಗಿ ಒಂದಕ್ಕೊಂದು ಸಮರಸ ವಾಗುವುದೇ ಇಲ್ಲ; ಎರಡನ್ನೂ ಒಂದೇ ದಾರಿಗೆ ತರಲು ಮಾಡುವ ಪ್ರಯತ್ನವೆಲ್ಲ ವಿಫಲ. ಅನೇಕ ವರ್ಷಗಳ ಹಿಂದೆ ಕ್ರಿಯಾ ಬಾಹುಳ್ಯದಲ್ಲೇ ಮಗ್ನನಾಗಿ ಭಾವೋದ್ರೇಕದ ಆನಂದಾತಿಶಯದಲ್ಲಿ ಬಹು ಕಾಲ ಕಳೆದ ಸಮಯವೂ ಒಂದು ಇತ್ತು. ನನ್ನ ಯೌವನದ ಆ ದಿನಗಳು ಈಗ ಬಹಳ ದೂರ ವಾದಂತಿವೆ. ನನಗೆ ವಯಸ್ಸಾಗುತ್ತ ಬಂದಿದೆ ಎಂದು ಮಾತ್ರವಲ್ಲ; ಆದರೆ ಅಪಾರ ಸಮುದ್ರದಂತಿರುವ ಪ್ರಪಂಚದ ಅನುಭವ ಮತ್ತು ಇಂದಿಗೂ ಅಂದಿಗೂ ಮಧ್ಯೆ ಇರುವ ದುಃಖಮಯ ಭಾವನಾತರಂಗ. ಆ ತುಂಬಿತುಳುಕುವ ಉತ್ಸಾಹ ಈಗಿಲ್ಲ; ಆ ಸಂಯಮರಹಿತ ಆವೇಗ ತಗ್ಗಿದೆ; ಮನಸ್ಸಿನ ಉದ್ವೇಗ, ಅನುಕಂಪ ಹೆಚ್ಚು ಹಿಡಿತದಲ್ಲಿವೆ. ಯೋಚನೆಯ ಹೊರೆ ಅನೇಕವೇಳೆ ಒಂದು ಆತಂಕ; ಎಲ್ಲಿ ಒಂದು ಕಾಲದಲ್ಲಿ ಒಂದು ಮನೋನಿಶ್ಚಯವಿತ್ತೊ ಅಲ್ಲಿ ಈಗ ಅನುಮಾನ ತಲೆಹಾಕುತ್ತಿದೆ. ಪ್ರಾಯಶಃ ಅದು ವಯೋಧರ್ಮವಿರಬಹುದು; ಅಥವ ನಮ್ಮ ತಲೆಮಾರಿನ ಸಾಮಾನ್ಯ ಮಿತಿಯಿದ್ದರೂ ಇರಬಹುದು.

ಆದರೂ ಈಗಲೂ ಸಹ ಆಲೋಚನಾಪರಂಪರೆಯಲ್ಲಿ ಅಲ್ಪಕಾಲ ಹೋರಾಡಿದಮೇಲೆ ಕ್ರಿಯೆಯ ಕರೆಯಿಂದ ನನ್ನ ಹೃದಯಾಂತರಾಳದಲ್ಲಿ ವಿಚಿತ್ರ ಅನುಭವವುಂಟಾಗುತ್ತದೆ. ಅಪಾಯ ಸಂಕಟಗಳ ಕಡೆ ತಿರುಗಿ ಸಾವನ್ನೆದುರಿಸಿ ಅಪಹಾಸ್ಯಮಾಡುವ ಆನಂದೋನ್ಮಾದದ ಸುಂದರ ಅನುಭವವನ್ನು ಪುನಃ

ಪಡೆಯಲು ಕಾತರನಾಗಿದ್ದೇನೆ. ಸಾವಿನ ಭಯ ನನಗಿಲ್ಲದಿದ್ದರೂ ಸಾವಿನ ಹಂಬಲ ನನಗಿಲ್ಲ. ಜೀವನ ಶೂನ್ಯವೆನ್ನುವುದರಲ್ಲಿ ಅಥವಾ ವಿಮುಖತೆಯಲ್ಲಿ ನನಗೆ ನಂಬಿಕೆ ಇಲ್ಲ. ಜೀವನದಲ್ಲಿ ನನಗೆ ಆಶೆಯಿದೆ; ಅದು ಇನ್ನೂ ನನ್ನನ್ನು ಆಕರ್ಷಿಸುತ್ತಿದೆ; ನನ್ನ ಸುತ್ತಲೂ ಅನೇಕ ಅವ್ಯಕ್ತ ಪ್ರತಿಬಂಧಕಗಳು ಬೆಳೆದು ಬಂದಿದ್ದರೂ ಅದರ ಅನುಭವ ಇನ್ನೂ ನನಗೆ ಬೇಕು. ಆದರೆ ಅದೇ ಆಶೆ ಜೀವನದೊಂದಿಗೆ ಆಟವಾಡಿ, ಅದರ ತುತ್ತತುದಿಯಿಂದ ಇಣಿಕಿನೋಡಿ ಅದರ ದಾಸನಾಗಿರದೆ ಪರಸ್ಪರ ಬೆಲೆಯನ್ನು ಹೆಚ್ಚಿಸಿಕೊಳ್ಳ ಬೇಕೆಂದು ಪ್ರೇರಿಸುತ್ತಿದೆ. ಜೀವನದ ಮಂದಗತಿ, ನೀರಸತೆ ನನ್ನನ್ನು ಆವರಿಸಿದಾಗ ಮೇಘ ಮಂಡಲದ ಕೋಲಾಹಲದೊಳಗೆ ನುಗ್ಗಿ

ಮನದಿ ಎಲ್ಲ ಮನನಮಾಡಿ ತುಲನಮಾಡಿದೆ
ಉಳಿದ ದಿನಗಳೆಲ್ಲ ವ್ಯರ್ಥವೆಂದು ಮನಕೆ ತೋರಿದೆ
ಕಳೆದ ದಿನಗಳೆಲ್ಲ ಅಂತೆ ವ್ಯರ್ಥವಾಗಿದೆ
ಜೀವ ಸಾವು ಎರಡು ಈಗ ಸಮಕೆ ತೂಗಿವೆ

ಎಂದು ಹಾಡಲು ನಾನೊಬ್ಬ ವೈಮಾನಿಕನಾಗಬೇಕಿತ್ತು.

### ೫. ಗತಕಾಲ-ವರ್ತಮಾನ ಕಾಲಕ್ಕೆ ಸಂಬಂಧ

ಈ ಕ್ರಿಯಾಸಕ್ತಿ, ಕ್ರಿಯೆಯ ಮೂಲಕ ಜೀವನವನ್ನು ಅನುಭವಿಸುವ ಈ ಆಶೆ ನನ್ನ ಎಲ್ಲ ಭಾವನೆ ಮತ್ತು ಕಾರ್ಯಶಕ್ತಿಯ ಮೇಲೆ ಪರಿಣಾಮವನ್ನುಂಟುಮಾಡಿದೆ. ದೀರ್ಘಾಲೋಚನೆ ಸಹ ಒಂದು ವಿಧವಾದ ಕ್ರಿಯೆಯಲ್ಲದೆ, ಮುಂದಿನ ಕ್ರಿಯೆಯ ಒಂದು ಅಂಶ ಸಹ ಆಗುತ್ತದೆ. ಅದು ಕ್ರಿಯೆಗೂ ಜೀವನಕ್ಕೂ ಅಸಂಬದ್ಧವಾದ ಶೂನ್ಯತೆಯಿಂದ ಬಂದ ಕೇವಲ ಭಾವನಾವಸ್ತುವಲ್ಲ. ಕ್ರಿಯಾ ಮುಹೂರ್ತವಾದ ಇಂದಿನಕಾಲದ ಹುಟ್ಟು ಹಿಂದಿನದರಲ್ಲಿ, ಅದರ ಹರಿತ ಭವಿಷ್ಯತ್ತಿನಲ್ಲಿ; ಇವು ಒಂದಕ್ಕೊಂದು ಬಿಡಿಸಲಾಗದಂತೆ ಹೆಣೆದುಕೊಂಡು ಪರಸ್ಪರ ಸಂಬಂಧಿಸಲ್ಪಟಿವೆ.

ಸೆರೆಮನೆಯ ನನ್ನ ಜೀವನವು ಮೇಲೆ ಕ್ರಿಯಾಶೂನ್ಯವೆಂದು ತೋರಿದರೂ ಹೇಗೋ ಯಾವುದೊ ಒಂದು ಯೋಚನೆ ಯಾವುದೋ ಒಂದು ಭಾವನೆಯ ಮೂಲಕ, ಮುಂಬರುವ ಅಥವ ಕಲ್ಪನೆಯಲ್ಲಿರುವ ಕ್ರಿಯೆಗೆ ಅಂಟಿಕೊಂಡಿದೆ. ಆದರಿಂದಲೇ ನನಗೊಂದು ತೃಪ್ತಿ. ಅತೃಪ್ತಿಯಿಲ್ಲದೆ ಎಲ್ಲವೂ ಶೂನ್ಯ ವಾಗಿ ಜೀವನವೇ ಅಸಹನೀಯವಾದೀತು. ಪ್ರತ್ಯಕ್ಷ ಕ್ರಿಯಾಸಕ್ತಿ ನನಗೆ ಇಲ್ಲವಾದಾಗ ಗತಕಾಲದೆಡೆ ಯಲ್ಲಿ, ಇತಿಹಾಸದೆಡೆಯಲ್ಲಿ ಆ ಬಗೆಯ ಪ್ರವೇಶ ದೊರಕಿಸಿಕೊಳ್ಳಲು ಪ್ರಯತ್ನಪಟ್ಟಿದೇನೆ. ಏಕೆಂದರೆ ನನ್ನ ವೈಯಕ್ತಿಕ ಅನುಭವಗಳು ಕೆಲವು ವೇಳೆ ಐತಿಹಾಸಿಕ ಘಟನೆಗಳಾಗಿವೆ; ಮತ್ತು ನಾನೇ ನನ್ನ ಸ್ವಂತ ಪರಿಮಿತಿಯಲ್ಲಿ ಅಂತಹ ಘಟನೆಗಳಮೇಲೆ ಪ್ರಭಾವ ಬೀರಲು ಕಾರಣನಾಗಿದ್ದೇನೆ. ಇತಿಹಾಸ ಸಹ ನಾನೂ ಅದರೊಂದಿಗೆ ಸ್ವಲ್ಪಮಟ್ಟಿಗೆ ಐಕ್ಯವಾಗಬಹುದಾದ ಒಂದು ಸಜೀವಕಾರ್ಯ ಎಂದು ಭಾವಿಸಲು ಕಷ್ಟವಾಗಿಲ್ಲ.

ನಾನು ಇತಿಹಾಸದ ಕಡೆ ತಿರುಗಿದುದು ಬಹುಕಾಲದಮೇಲೆ, ಅದೂ ಅಸಂಖ್ಯಾತ ಘಟನೆ ಗಳು ಇಸವಿಗಳನ್ನು ಓದಿ ಅವುಗಳಿಂದ ನನ್ನ ಜೀವನಗತಿಗೆ ಸಂಬಂಧವಿಲ್ಲದಂತೆ ನಿರ್ಧಾರಗಳನ್ನೂ ಊಹೆಗಳನ್ನು ಮಾಡುವ ಸರ್ವಸಾಮಾನ್ಯವಾದ ನೇರಮಾರ್ಗದಿಂದಲ್ಲ. ಪ್ರಕೃತಾತೀತ ವಿಷಯಗಳಲ್ಲಿ ಅಥವಾ ಮುಂದಿನ ಜನ್ಮದ ವಿಷಯಗಳಲ್ಲಿ ನನ್ನ ಆಸಕ್ತಿ ಇನ್ನೂ ವಿರಳ. ವಿಜ್ಞಾನ, ಇಂದಿನ ಸಮಸ್ಯೆಗಳು, ನಮ್ಮ ಪ್ರಸಕ್ತ ಜೀವನ ಇವೇ ನನ್ನನ್ನು ಹೆಚ್ಚು ಆಕರ್ಷಿಸಿದವು.

ನನಗೆ ಅಸ್ಪಷ್ಟವಾದ ಭಾವನೆ, ಉದ್ವೇಗ, ಆಸಕ್ತಿಗಳ ಯಾವುದೋ ಒಂದು ಸಂಕೀರ್ಣ ಶಕ್ತಿ ನನ್ನನ್ನು ಹೇಗೋ ಕ್ರಿಯೆಗೆ ಕರೆದೊಯ್ದಿತು; ಆ ಕ್ರಿಯೆ ಪುನಃ ಭಾವನಾ ಪ್ರಪಂಚಕ್ಕೆ ಕಳುಹಿ ಪ್ರಸ್ತುತಕಾಲವನ್ನು ಅರಿಯುವಂತೆ ಮಾಡಿತು. ಪ್ರಸ್ತುತಕಾಲದ ಬೇರುಗಳು ಭೂತಕಾಲದಲ್ಲಿ. ಆದ್ದರಿಂದ ಪ್ರಸ್ತುತ ಕಾಲವನ್ನು ಅರ್ಥಮಾಡಿಕೊಳ್ಳಲು ಗತಕಾಲದಲ್ಲಿ ಏನಾದರೂ ಇದ್ದರೆ ಆ ಜಾಡು

ಹಿಡಿಯೋಣವೆಂದು ಭೂತಕಾಲದೊಳಕ್ಕೆ ಈ ಒಂದು ಅನಾವರಣ ಯಾತ್ರೆ ಮಾಡಿದೆ. ನಾನು ಯಾರು ಎಲ್ಲಿದ್ದೇನೆ ಎಂಬುದನ್ನೂ ಮರೆತು ಗತಕಾಲದ ದೂರದ ವ್ಯಕ್ತಿಗಳ ಮತ್ತು ವೈಭವದ ಸ್ಮರಣೆಯಲ್ಲಿ ಮಗ್ನನಾದರೂ ಪ್ರಸ್ತುತಕಾಲದ ಪ್ರಭಾವದಿಂದ ನಾನೆಂದೂ ದೂರನಾಗಲಿಲ್ಲ. ಅನೇಕವೇಳೆ ನಾನು ಗತಕಾಲದವನೆಂದು ನನಗೆ ಕಂಡುಬಂದರೂ, ಗತಕಾಲದ ಸರ್ವಸ್ವವೂ ಪ್ರಸಕ್ತಕಾಲದಲ್ಲಿ ನನ್ನದು ಎಂಬ ಭಾವನೆಯೂ ನನಗಿದೆ. ಗತಕಾಲದ ಇತಿಹಾಸ ಇಂದಿನ ಇತಿಹಾಸದಲ್ಲಿ ಬೆರೆತಿದೆ; ಸುಖ ದುಃಖಗಳ ಅನುಭವದ ಬಂಧನದಿಂದ ಸಜೀವವಾದ ಅಸ್ತಿತ್ವವಾಗಿದೆ.

ಹಿಂದಿನವಕ್ಕೆ ಇಂದಿನದಾಗುವ ಚೈತನ್ಯವಿದ್ದರೆ, ಇಂದಿನದೂ ಹಳೆತಾಗಿ ದೂರ ಹಿಂದೆ ಹೋಗಿ ಜಡವಿಗ್ರಹರೂಪ ತಾಳಬಹುದು. ಕಾರ್ಯಾಧಿಕ್ಯತೆಯ ಮಧ್ಯದಲ್ಲೇ ಅದು ಯಾವುದೋ ಒಂದು ಹಿಂದಿನ ಘಟನೆ ಎಂಬ ಭಾವನೆ ಏಕಾಏಕಿ ಉದ್ಭವಿಸಿ, ಪುನರ್ಸ್ಮರಣೆಯಲ್ಲಿ ಅದನ್ನು ಕಾಣುತ್ತಿರುವಂತೆ ಭಾಸವಾಗುತ್ತಿತ್ತು.

ಪ್ರಸ್ತುತಕಾಲಕ್ಕೆ ಸಂಬಂಧಿಸಿದಂತೆ ಗತಕಾಲದ ಇತಿಹಾಸದ ಪುನರ್ದರ್ಶನಮಾಡುವ ಪ್ರಯತ್ನದಲ್ಲಿ ಹನ್ನೆರಡು ವರ್ಷಗಳ ಹಿಂದೆ ನಾನು "ಪ್ರಪಂಚದ ಇತಿಹಾಸದ ಕಿರುನೋಟ" ಎಂಬ ಗ್ರಂಥವನ್ನು ನನ್ನ ಮಗಳಿಗೆ ಪತ್ರ ರೂಪದಲ್ಲಿ ಬರೆದೆ. ಇಪ್ಪತ್ತುವರ್ಷದೊಳಗಿನ ಹುಡುಗಿಗೆ ಬರೆದ ಕಾರಣ ಆದಷ್ಟು ಸುಲಭಶೈಲಿಯಲ್ಲಿ ಹೊರನೋಟವನ್ನು ಮಾತ್ರ ಕೊಟ್ಟೆ. ಆದರೂ ಆ ಬರವಣಿಗೆಯ ಹಿಂದೆ ಆವಿಷ್ಕರಣದ ಶೋಧನೆ ಮತ್ತು ಯಾತ್ರೆ ಇತ್ತು. ಒಂದು ಸಾಹಸ ಮನೋಭಾವ ನನ್ನನ್ನು ಆವರಿಸಿತ್ತು. ಬೇರೆಬೇರೆ ಯುಗಗಳ ಕಾಲಗಳ ಜೀವನವು ಒಂದಾಗುತ್ತಲೊಂದು ಅನುಭವಕ್ಕೆ ಬಂದಿತು. ಗತಕಾಲದ ಸ್ತ್ರೀಪುರುಷರು ನನ್ನ ಸ್ನೇಹಿತರಾದರು. ಸೆರೆಮನೆಯಲ್ಲಿ ಕಾಲಬಾಹುಳ್ಯವಿತ್ತು; ಇಷ್ಟೇ ದಿನಗಳಲ್ಲಿ ಮುಗಿಸಬೇಕೆಂಬ ಆತುರವೂ ಇರಲಿಲ್ಲ. ಆದ್ದರಿಂದ ನನ್ನ ಮನಸ್ಸನ್ನು ಹರಿದು ಬಿಟ್ಟು, ಸ್ವಲ್ಪ ಬೇರಿಳಿಯುವಂತೆಮಾಡಿ, ನನ್ನ ಮನೋವೃತ್ತಿಗನುಗುಣವಾಗಿ ಮಗ್ನನಾಗಿ ಪರಿಣಾಮಹೊಂದಿ ಗತಕಾಲದ ಶುಷ್ಕ ಅಸ್ತಿಪಂಜರಕ್ಕೆ ರಕ್ತಮಾಂಸವನ್ನು ತುಂಬಿದೆ.

ಇತ್ತೀಚಿನ ಮತ್ತು ಇನ್ನೂ ಸಮೀಪಕಾಲದ ಮತ್ತು ವ್ಯಕ್ತಿಗಳಿಗೆ ಮಾತ್ರ ಸಂಬಂಧಿಸಿದುದಾದರೂ ಆಮೇಲೆ ನನ್ನ ಆತ್ಮಕಥೆಯನ್ನು ಬರೆಯಲು ಪ್ರೇರೇಪಿಸಿದ್ದೂ ಅದೇ ತೆರನ ಶೋಧನಾಸಕ್ತಿ.

ಈ ಹನ್ನೆರಡು ವರ್ಷಗಳಲ್ಲಿ ನಾನು ಬಹಳ ಬದಲಾವಣೆಯಾಗಿರಬೇಕು. ತುಂಬ ಯೋಚನಾಪರನಾಗಿದ್ದೇನೆ. ಪ್ರಾಯಶಃ ಸಮತೂಕ, ಸಮಚಿತ್ತ ಹೆಚ್ಚಿದೆ, ಒಂದು ವಿಧವಾದ ನಿರ್ಲಿಪ್ತ ಮನೋಭಾವ, ಹೆಚ್ಚಿನ ಆತ್ಮಶಾಂತಿ ಬಂದಿದೆ. ಒಂದು ದುರಂತದಿಂದ ಅಥವಾ ಯಾವುದನ್ನು ನಾನು ಒಂದು ದುರಂತವೆಂದು ಭಾವಿಸಿದ್ದೆನೋ ಅದರಿಂದ ನಾನು ಈಗ ಅಷ್ಟು ಉದ್ರಿಕ್ತನಾಗುವುದಿಲ್ಲ. ಆ ಮನಸ್ಸಿನ ತಳಮಳ, ಕ್ಷೋಭೆ ಕಡಮೆಯಾಗಿದೆ; ಆ ದುರಂತಗಳು ಬಹಳ ದೊಡ್ಡ ಪ್ರಮಾಣದಲ್ಲಿದ್ದರೂ ಆ ಮನೋವೈಕಲ್ಯವೂ ಬಹುಮಟ್ಟಿಗೆ ತಾತ್ಕಾಲಿಕ. ಇದೆಲ್ಲ ಅನಿವಾರ್ಯವೆಂಬ ಮನೋಭಾವನೆ ನನ್ನಲ್ಲಿ ಬೆಳೆಯುತ್ತಿದೆಯೆ? ಅಥವ ನಾನೇ ಕಠಿಣ ಮನಸ್ಕನಾಗುತ್ತಿದೇನೆಯೆ? ಎಂದು ಆಶ್ಚರ್ಯಪಟ್ಟಿದೇನೆ. ವಯೋಧರ್ಮವೆ? ಬಲಹೀನತೆಯೆ? ಜೀವನದಲ್ಲಿ ಆಸಕ್ತಿಯ ಅಭಾವವೆ? ಅನೇಕ ವರ್ಷಗಳ ಸೆರೆಮನೆವಾಸದ ಫಲವೆ? ಕಂಡೂ ಕಾಣದಂತೆ ನಿಧಾನವಾಗಿ ಕಳೆದು ಹೋಗುತ್ತಿರುವ ಜೀವಮಾನದ ವ್ಯಯವೆ? ಅಥವ ಕ್ಷಣಕಾಲ ಮನಸ್ಸಿನಲ್ಲಿದ್ದು ಮರುಗಳಿಗೆಯಲ್ಲೇ ತೆರೆಗಳನ್ನು ಮಾತ್ರ ಹಿಂದೆ ಬಿಟ್ಟು ಮಾಯವಾಗುವ ಮನಸ್ಸನ್ನು ತುಂಬಿರುವ ಯೋಚನೆಗಳ ಫಲವೆ? ಸಂಕಟಕ್ಕೆ ಸಿಲುಕಿದ ಮನಸ್ಸು ಬಿಡುಗಡೆಗೆ ಒಂದು ಮಾರ್ಗವನ್ನು ಹುಡುಕುತ್ತದೆ. ಮೇಲಿಂದ ಮೇಲೆ ಆಘಾತಗಳೊದಗಿದರೆ ಇಂದ್ರಿಯಗಳೂ ಮದದಾಗುತ್ತವೆ; ಮತ್ತು ಪ್ರಪಂಚವೆಲ್ಲ ಇಷ್ಟು ಕೇಡು ಮತ್ತು ಸಂಕಟದಿಂದ ತುಂಬಿರುವಾಗ ಇನ್ನೂ ಸ್ವಲ್ಪ ಹೆಚ್ಚು ಕಡಮೆಯಾದರೂ ಆಗುವುದೇನು ಎಂಬ ಭಾವನೆಯೂ ಬರುತ್ತದೆ. ಆಗ ನಮಗೆ ಉಳಿಯುವುದು ಒಂದುಮಾತ್ರ. ಅದನ್ನು ಮಾತ್ರ ಯಾರೂ ತೆಗೆದುಕೊಂಡುಹೋಗಲು ಸಾಧ್ಯವಿಲ್ಲ: ಧೈರ್ಯದಿಂದ

ಘನತೆಯಿಂದ ಕಾರ್ಯತತ್ಪರನಾಗುವುದು; ಜೀವನಕ್ಕೆ ಒಂದು ಅರ್ಥವನ್ನು ಕೊಟ್ಟಿರುವ ಆದರ್ಶಗಳನ್ನು ಬಿಡದೆ ಅನುಸರಿಸುವುದು. ಆದರೆ ಅದು ರಾಜಕಾರಣಿಯ ಮಾರ್ಗವಲ್ಲ.

ಸಾವು ಹುಟ್ಟಿದ ಪ್ರತಿಯೊಬ್ಬ ವ್ಯಕ್ತಿಯ ಆಜನ್ಮಸಿದ್ಧ ಹಕ್ಕು ಎಂದು ಯಾರೋ ಒಬ್ಬರು ಮೊನ್ನೆತಾನೆ ಹೇಳಿದರು. ಸ್ವಸಿದ್ಧ ವಿಷಯವನ್ನು ಹೇಳಲು ಒಂದು ವಿಚಿತ್ರಮಾರ್ಗ. ಆಜನ್ಮಸಿದ್ಧ ಹಕ್ಕನ್ನು ಯಾರೂ ನಿರಾಕರಿಸಿಲ್ಲ; ನಿರಾಕರಿಸಲೂ ಸಾಧ್ಯವಿಲ್ಲ; ಮತ್ತು ನಾವೆಲ್ಲ ಆದಷ್ಟು ದಿನ ಎಲ್ಲಿಯವರೆಗೆ ಸಾಧ್ಯವೊ ಅಲ್ಲಿಯವರೆಗೆ ಅದನ್ನು ತಪ್ಪಿಸಿಕೊಳ್ಳಲು ಯತ್ನಿಸುತ್ತೇವೆ. ಆದರೂ ಆ ವಾಕ್ಯದಲ್ಲಿ ಒಂದು ವೈಶಿಷ್ಟ್ಯವಿದೆ, ಅದು ಚಿತ್ತಾಕರ್ಷಕವಾಗಿದೆ. ಜೀವ ಕಹಿಯೆಂದು ದೂರುವವರಿಗೆ, ಇಷ್ಟಪಟ್ಟರೆ ಬಿಡುಗಡೆಯ ಮಾರ್ಗ ಸದಾಸಿದ್ಧವಿದೆ. ಆ ಗುರಿ ಸದಾ ನಮ್ಮ ಶಕ್ತಿಗೆ ನಿಲುಕುವಂತಿದೆ. ಜೀವನವನ್ನು ಗೆಲ್ಲಲು ನಮಗೆ ಸಾಧ್ಯವಿಲ್ಲವಾದರೆ ಸಾವನ್ನಾದರೂ ಗೆಲ್ಲಬಹುದು. ನಾವು ಅಶಕ್ತರು ಎಂಬ ಭಾವನೆಯನ್ನು ಕಡಮೆಮಾಡಲು ಒಂದು ಒಳ್ಳೆಯ ಭಾವನೆ.

## ೬. ಜೀವನ ದರ್ಶನ

ಆರೇಳು ವರ್ಷಗಳ ಕೆಳಗೆ ಅಮೆರಿಕೆಯ ಪ್ರಕಟನಕಾರನೊಬ್ಬ ತಾನು ಪ್ರಕಟಿಸಬೇಕೆಂದಿದ್ದ ವಿಚಾರ ಮಾಲೆಯೊಂದಕ್ಕೆ ನನ್ನ ಜೀವನದರ್ಶನದ ಮೇಲೆ ಒಂದು ಪ್ರಬಂಧ ಬರೆಯಲು ಕೇಳಿದ. ಸೂಚನೆಯೇನೋ ನನ್ನ ಮನಸ್ಸನ್ನು ಸೆಳೆಯಿತು. ಆದರೆ ಹಿಂದೇಟುಹಾಕಿದೆ; ಯೋಚಿಸಿದಷ್ಟೂ, ಮನ ಒಪ್ಪದವನಾದೆ. ಕೊನೆಯಲ್ಲಿ ಆ ಪ್ರಬಂಧ ಬರೆಯಲೇ ಇಲ್ಲ.

ನನ್ನ ಜೀವನದರ್ಶನವೇನು? ನನಗೆ ತಿಳಿಯದು. ಕೆಲವು ವರ್ಷಗಳ ಮುಂಚೆ ಪ್ರಾಯಶಃ ನಾನು ಅಷ್ಟು ಅನಿಶ್ಚಿತವಾಗಿರುತ್ತಿರಲಿಲ್ಲ. ನನ್ನ ಯೋಚನೆ ಮತ್ತು ಧ್ಯೇಯಗಳಲ್ಲಿ ಆಗ ಇದ್ದ ನಿರ್ದಿಷ್ಟತೆ ಈಚೆಗೆ ಮಾಯವಾಗಿದೆ. ಕಳೆದ ಕೆಲವು ವರ್ಷಗಳಲ್ಲಿ ಇಂಡಿಯ, ಚೀನ, ಯೂರೋಪ್ ಮತ್ತು ಪ್ರಪಂಚದ ಎಲ್ಲೆಡೆಯ ಘಟನೆಗಳು ಮನಸ್ಸನ್ನು ಕದಡಿ, ಬುಡಮೇಲು ಮಾಡಿ ಖೇದವನ್ನುಂಟುಮಾಡಿವೆ. ಭವಿಷ್ಯದ ರೂಪು ರೇಖೆ ಮೊದಲು ನನ್ನ ಮನಸ್ಸಿನಲ್ಲಿದ್ದಂತೆ ಸ್ಪಷ್ಟವಾಗಿಲ್ಲ; ಅಸ್ಪಷ್ಟತೆ ಮೂಡಿ ಕಪ್ಪಾಗಿದೆ.

ಮೂಲಧ್ಯೇಯಗಳ ವಿಷಯದಲ್ಲಿನ ಈ ಸಂಶಯ ಮತ್ತು ಕಷ್ಟ ನನ್ನ ಕ್ರಿಯಾಸಕ್ತಿಯ ಮೊನಚನ್ನು ಸ್ವಲ್ಪ ಮೊಂಡುಮಾಡಿತೇ ಹೊರತು ನನ್ನ ತತ್‍ಕ್ಷಣದ ಕ್ರಿಯೆಗೆ ಅಡ್ಡಿಬರಲಿಲ್ಲ. ಆದರೆ ನಾನು ಆರಿಸಿಕೊಂಡ ಗುರಿಗೆ, ಗುರಿಯೊಂದರ ಹೊರತು ಉಳಿದೆಲ್ಲವನ್ನೂ ಮರೆತು ಸ್ವಯಂಪ್ರವರ್ತಿತವಾಗಿ ಮುನ್ನುಗ್ಗುವ ಬಾಣದಂತೆ ನನ್ನ ಯೌವನದಲ್ಲಿ ನಡೆಸಿದ ಜೀವನವನ್ನು ನಾನು ಪುನಃ ಈಗ ನಡೆಸಲು ಸಾಧ್ಯವಿಲ್ಲ. ಆದಾಗ್ಯೂ ನನ್ನ ಆದರ್ಶಗಳಿಗೂ ಕ್ರಿಯಾಸಕ್ತಿಗೂ ನೈಜವಾದ್ದೊ ಅಥವ ಕಲ್ಪಿತವೊ ಆದ ಒಂದು ಅನ್ಯೋನ್ಯಸಂಬಂಧವೂ ಮತ್ತು ಕಾರ್ಯೋತ್ಸಾಹವೂ ಇದ್ದುದರಿಂದ ನಾನು ಜೀವನ ನಡೆಸಿದೆ. ಆದರೆ ಕ್ರಮೇಣ ನಾನು ಕಂಡ ರಾಜಕೀಯದಲ್ಲಿ ಒಂದು ಬೇಸರ ಬೆಳೆದು ನನ್ನನ್ನು ಆವರಿಸಿತು. ಕ್ರಮೇಣ ಜೀವನದಲ್ಲಿ ನನಗಿದ್ದ ಮನೋಭಾವನೆಯೇ ಪೂರ್ಣ ವ್ಯತ್ಯಾಸಹೊಂದಿತು.

ಹಿಂದಿನ ಧ್ಯೇಯ ಮತ್ತು ಗುರಿಯೇ ಇಂದಿಗೂ ಆದರ್ಶಗಳಾದವು. ಆದರೆ ಹತ್ತಿರ ಹತ್ತಿರ ಹೋದಂತೆ ಹೃದಯಕ್ಕೊಂದು ಕಾವುಕೊಟ್ಟು ದೇಹಕ್ಕೆ ಜೀವಶಕ್ತಿಯನ್ನು ಕೊಟ್ಟ ಅವುಗಳ ಥಳಥಳಿಸುವ ಸೌಂದರ್ಯ, ಮೆರುಗು ಬಹುಮಟ್ಟಿಗೆ ಕಡಮೆಯಾಯಿತು. ಅನೇಕವೇಳೆ ಅಸತ್ಯಕ್ಕೆ ಜಯವಾಗುತ್ತಿತ್ತು. ಎಲ್ಲಕ್ಕೂ ಅಸಹ್ಯವಾದುದೆಂದರೆ ಯಾವುದನ್ನು ಸತ್ಯವೆಂದು ನಂಬಿದ್ದೆವೊ ಅದನ್ನು ಅಶ್ಲೀಲಗೊಳಿಸಿ ವಿರೂಪಗೊಳಿಸುತ್ತಿದ್ದುದು. ಇಂದಿನ ದುರಾಶೆಯ ಹಿಂಸಾತ್ಮಕ ಮೋಸದ ಜೀವನದಿಂದ ಮಾನವನನ್ನು ಉದ್ಧರಿಸಿ ವಿವೇಕಯುತವಾಗಿ ನಡೆಯಲು ಪೂರ್ವಭಾವಿಯಾಗಿ ಮನುಷ್ಯ ಯುಗಯುಗಾಂತರಗಳಿಂದ ಕಷ್ಟದಲ್ಲಿ ಮುಳುಗಿ ಸಂಕಟವನ್ನನುಭವಿಸಿ ಶಿಕ್ಷಣ ಪಡೆಯ

ಬೇಕೆ? ಮಾನವಸ್ವಭಾವ ಮೂಲತಃ ಅಷ್ಟು ಕೆಟ್ಟದೆ? ಈ ಮಧ್ಯೆ ಈಗಾಗಲಿ, ಮುಂದೆ ಸಮೀಪದಲ್ಲಾಗಲಿ ಆ ಸ್ವಭಾವವು ಪೂರ್ಣಪರಿವರ್ತನಗೊಳ್ಳಲೆಂದು ಮಾಡಿದ ಪ್ರಯತ್ನವೆಲ್ಲ ನಿಷ್ಫಲವಾಗಬೇಕೆ?

ಗುರಿ ಮತ್ತು ಮಾರ್ಗ : ಒಂದಕ್ಕೊಂದರ ಮೇಲಿನ ಕ್ರಿಯೆ ಪ್ರತಿಕ್ರಿಯೆಯಿಂದ, ತಪ್ಪು ಮಾರ್ಗವು ನಮ್ಮೆದುರಿನ ಗುರಿಯನ್ನೇ ವಿಕೃತಿಗೊಳಿಸಿ ಕೆಲವು ವೇಳೆ ಅದನ್ನು ನಾಶಗೊಳಿಸುವಷ್ಟು ಸಹ ಒಂದಕ್ಕೊಂದು ಅಭೇದ್ಯವಾಗಿ ಹೆಣೆದುಕೊಂಡಿವೆಯೆ? ಆದರೆ ನ್ಯಾಯ ಮಾರ್ಗವು ಅಶಕ್ತರಿಗೆ, ಸ್ವಾರ್ಥಪರರಿಗೆ ಅಶಕ್ಯವಾಗಿರಬಹುದು. ಹಾಗಾದರೆ ಮಾಡುವುದೇನು? ಕ್ರಿಯಾಭ್ರಷ್ಟನಾಗುವುದು ಸೋಲನ್ನು ಒಪ್ಪಿದಂತೆ, ಕೆಟ್ಟದಕ್ಕೆ ಮನಸೋತಂತೆ; ಕಾರ್ಯತತ್ಪರನಾಗುವುದೆಂದರೆ ಆ ಕೆಟ್ಟದರೊಂದಿಗೆ ಯಾವುದೊ ರೀತಿಯಲ್ಲಿ, ಆ ಪ್ರಕರಣದಿಂದ ಉದ್ಭವಿಸುವ ಅನಿಷ್ಟ ಪರಿಣಾಮಗಳೊಂದಿಗೆ ಒಂದು ರಾಜಿಗೆ ಬಂದಂತೆ.

ಮೊದಲಿನಿಂದಲೂ ಜೀವನ ಸಮಸ್ಯೆಗಳನ್ನು ನಾನು ವೈಜ್ಞಾನಿಕ ದೃಷ್ಟಿಯಿಂದ ನೋಡಿದವನು; ಹತ್ತೊಂಭತ್ತನೆ ಶತಮಾನದ ಮತ್ತು ಈ ಇಪ್ಪತ್ತನೆ ಶತಮಾನದ ಆದಿಭಾಗದ ವಿಜ್ಞಾನದ ಸುಲಭ ಆಶಾವಾದಿತ್ವದ ವೈಜ್ಞಾನಿಕ ದೃಷ್ಟಿಯಿಂದ. ನಿರಾತಂಕ ಸಂತೃಪ್ತ ಜೀವನ, ನನ್ನ ಸಾಮರ್ಥ್ಯ ಮತ್ತು ಆತ್ಮ ವಿಶ್ವಾಸ ಈ ಆಶಾವಾದಿತ್ವವನ್ನು ಇನ್ನೂ ಬಲಪಡಿಸಿದವು. ಯಾವುದೋ ಬಗೆಯ ಮಾನುಷ್ಯ ದರ್ಶನ ನನಗೆ ಪ್ರಿಯವಾಗಿತ್ತು.

ವಿಚಾರಪರರು ಒಪ್ಪಿ ಆಚರಿಸುತ್ತಿದ್ದ ಹಿಂದೂ, ಇಸ್ಲಾಂ, ಬೌದ್ಧ ಧರ್ಮ ಅಥವ ಕ್ರಿಸ್ತ ಧರ್ಮ ಯಾವುದೂ ನನ್ನ ಮನಸ್ಸಿಗೆ ಹಿಡಿಯಲಿಲ್ಲ. ಅವೆಲ್ಲ ಮೂಢ ಸಂಪ್ರದಾಯಗಳ ವಿಚಾರ ಶೂನ್ಯ ನಂಬಿಕೆಗಳ ಮೇಲೆ ನಿಂತಂತೆ ತೋರಿದವು. ಅವೆಲ್ಲದರ ಹಿಂದೆ ಜೀವನದ ಸಮಸ್ಯೆಗಳನ್ನು ಪ್ರವೇಶಿಸುವ ರೀತಿ ಖಂಡಿತವಾಗಿಯೂ ವೈಜ್ಞಾನಿಕವಾಗಿರಲಿಲ್ಲ. ಏನೋ ಸ್ವಲ್ಪ ಇಂದ್ರಜಾಲ, ವಿಮರ್ಶಾರಹಿತ ಅಂಧಶ್ರದ್ಧೆ, ಪಾರಲೌಕಿಕ ನಂಬಿಕೆ ಇತ್ತು.

ಆದರೂ ಧರ್ಮವು ಮನುಷ್ಯ ಸ್ವಭಾವದ ಯಾವುದೋ ಆಳವಾದ ಅನುಭವದ ಒಳಗಿನ ಅವಶ್ಯಕತೆಯೊಂದನ್ನು ಒದಗಿಸಿದೆ ಎಂಬುದು ಸರ್ವವೇದ್ಯ. ಪ್ರಪಂಚದ ಜನರಲ್ಲಿ ಬಹುಮಂದಿ ಯಾವುದಾದರೂ ಒಂದು ಧಾರ್ಮಿಕ ನಂಬಿಕೆಯಿಲ್ಲದೆ ಇರಲು ಸಾಧ್ಯವಿಲ್ಲ. ಮತ ಆದರ್ಶಮಾದರಿಯ ಸ್ತ್ರೀಪುರುಷರನ್ನು ಒದಗಿಸಿಕೊಟ್ಟಿರುವಂತೆ ಮತಾಂಧರೂ, ಸಂಕುಚಿತ ಮನೋಭಾವದವರೂ ನಿಷ್ಕರುಣಿಗಳೂ ಆದ ಕ್ರೂರಿಗಳಿಗೂ ಎಡೆಕೊಟ್ಟಿದೆ. ಮಾನವ ಜೀವನಕ್ಕೆ ಒಂದು ಬೆಲೆಕೊಟ್ಟಿದೆ. ಆ ಮೂಲ್ಯಗಳು ಇಂದು ಆಚರಣೆಗೆ ಅನುಚಿತ ಅಥವ ಅನರ್ಥಕಾರಕ ಎನ್ನಬಹುದಾದರೂ ಅವು ಈಗಲೂ ಧರ್ಮಾಚರಣೆಯ ನೀತಿಶಾಸ್ತ್ರದ ತಳಹದಿಯಾಗಿವೆ.

ಧರ್ಮವು ಮನುಷ್ಯನ ಅನುಭವಗಳ ಅಸ್ಪಷ್ಟ ಪ್ರಪಂಚದ ವಿಷಯವನ್ನೇ ಕುರಿತು ವಿಚಾರ ಮಾಡಿತು. ಅಸ್ಪಷ್ಟವೆಂದರೆ ಇಂದಿನ ವೈಜ್ಞಾನಿಕ ವಾಸ್ತವಿಕ ಜ್ಞಾನ ರೀತಿಯಲ್ಲಿ. ಧರ್ಮ ಮತ್ತು ವಿಜ್ಞಾನದ ಮಾರ್ಗರೀತಿಯಲ್ಲಿ ಒಂದಕ್ಕೊಂದಕ್ಕೆ ಸಾಮ್ಯವಿಲ್ಲದಿದ್ದರೂ, ಬಹಳ ಮಟ್ಟಿಗೆ ಅವುಗಳ ಸಾಧನಗಳೇ ಬೇರೆಬೇರೆಯಾದರೂ ಅದು ಗೋಚರ ಪ್ರಪಂಚದ ಒಂದು ವಿಸ್ತರಣ ಎಂದು ಭಾವಿಸಬಹುದು. ನಮ್ಮ ಸುತ್ತಲೂ ವಿಶಾಲವಾದ ಅಗೋಚರ ಜಗತ್ತು ಇರುವುದು ಸ್ವತಃಸಿದ್ಧ. ಮಹತ್ಸಾಧನೆಯನ್ನು ಮಾಡಿದ್ದ ವಿಜ್ಞಾನವು ಆಗಾಗ್ಗೆ ಆ ಕಡೆ ತಾತ್ಕಾಲಿಕ ಪ್ರವೇಶ ಮಾಡುತ್ತಿದ್ದರೂ ವಿಜ್ಞಾನಕ್ಕೆ ತಿಳಿದುದು ಅತ್ಯಲ್ಪ. ಪ್ರಾಯಶಃ ಗೋಚರ ಪ್ರಪಂಚದೊಂದಿಗೆ ಜೀವನಗತಿ ವಿಧಾನದೊಂದಿಗೆ ವ್ಯವಹಾರಿಯಾದ ವಿಜ್ಞಾನದ ಸಾಮಾನ್ಯ ಮಾರ್ಗಗಳು, ಅಗೋಚರ ಪ್ರಪಂಚದ ಭೌತಾತೀತ, ಕಲಾಪೂರ್ಣ, ಪಾರಮಾರ್ಥಿಕ ವಿಷಯಗಳಿಗೆ ಪೂರ್ತಿಯಾಗಿ ಅನ್ವಯಿಸಲಿಲ್ಲವೋ? ನಾವು ಕಂಡು, ಕೇಳಿ, ಅನುಭವಿಸುವ, ದಿಕ್ಕಾಲಗಳಲ್ಲಿ ನಿತ್ಯವೂ ವ್ಯತ್ಯಾಸವಾಗುತ್ತಿರುವ ಗೋಚರ ಪ್ರಪಂಚ ಮಾತ್ರ ಪೂರ್ಣ ಜೀವನವಲ್ಲ. ಜೀವನವು ನಿರಂತರವಾಗಿ ಅಗೋಚರ ಪ್ರಪಂಚವನ್ನು ಮುಟ್ಟುತ್ತಿದೆ. ಪ್ರಾಯಶಃ ಅದೇ ಹೆಚ್ಚುಸ್ಥಿರವಿರಬಹುದು, ಅಥವ ಅಷ್ಟೇ ಅಸ್ಥಿರವಸ್ತುಗಳಿಂದ ತುಂಬಿರಬಹುದು. ಆದರೂ ಯಾವ ವಿಚಾರಪರ ಮನುಷ್ಯನೂ ಈ ಅಗೋಚರ ಪ್ರಪಂಚವನ್ನು ಅಲಕ್ಷ್ಯಮಾಡುವಂತಿಲ್ಲ.

ಜೀವನದ ಗುರಿ ಏನು ಎಂದು ವಿಜ್ಞಾನ ತಿಳಿಸುವುದು ಅತ್ಯಲ್ಪ; ಅಥವಾ ಏನನ್ನೂ ಹೇಳುವುದೇ ಇಲ್ಲ. ಈಗ ಅದರ ಮೇರೆಯೂ ವಿಶಾಲಗೊಳ್ಳುತ್ತಿದೆ. ಇನ್ನು ಸ್ವಲ್ಪದಿನಗಳಲ್ಲಿ ಈ ಅದೃಶ್ಯ ಪ್ರಪಂಚ ವನ್ನು ಅದು ಧಾಳಿಮಾಡಬಹುದು. ಸ್ಥೂಲವಾಗಿ ಜೀವನದ ಗುರಿಯನ್ನು ಅರ್ಥಮಾಡಿಕೊಳ್ಳಲು ಸಹಾಯಮಾಡಬಹುದು ; ಅಥವ ಮಾನವನ ಅಸ್ತಿತ್ವದ ಸಮಸ್ಯೆಗಳ ಮೇಲೆ ಬೆಳಕುಬೀರುವ ಕೆಲವು ಕಿರುನೋಟಗಳನ್ನೂ ಒದಗಿಸಿಕೊಡಬಹುದು.

ಧರ್ಮವು ಯೋಗ, ಅಧ್ಯಾತ್ಮ ಮತ್ತು ದರ್ಶನಗಳಲ್ಲಿ ಮಿಳಿತವಾಗಿದೆ. ಹಲವು ಆಕರ್ಷಕ ವ್ಯಕ್ತಿಗಳಿದಾರೆ, ಮಹಾಯೋಗಿಗಳಿದ್ದಾರೆ, ಅವರನ್ನೆಲ್ಲ ಆತ್ಮವಂಚಕರಾದ ಮೂಢರು ಎಂದು ತ್ಯಜಿ ಸಲು ಸಾಧ್ಯವಿಲ್ಲ. ಆದರೂ ಯೋಗವೆಂದರೆ (ಸಂಕುಚಿತ ದೃಷ್ಟಿಯಲ್ಲಿ) ನನ್ನ ವೈ ಮುಳ್ಳಾಗುತ್ತದೆ. ಕಟ್ಟುನಿಟ್ಟಾದ ಮನೋನಿಗ್ರಹವಿಲ್ಲದೆ ಭಾವಜೀವನಕ್ಕೆ ಮಾರುಹೋಗುವುದು, ಉನ್ಮಾದ ಅನುಭವ ಗಳ ತೆರೆಗಳ ಮೇಲೆ ಜೀವಿಸುವುದು, ಅಸ್ಪಷ್ಟ, ಅಸ್ತವ್ಯಸ್ತ ಮೃದುಜೀವನ,–ಇದು ಯೋಗ. ಒಂದೊಂದು ವೇಳೆ ಈ ಅನುಭವ ನಮ್ಮ ಆಂತರಿಕ ಅಗೋಚರ ವಿಧಾನಗಳಿಗೆ ಒಂದು ಒಳನೋಟ ತೋರಬಹುದು. ಆದರೆ ಅದರಿಂದ ಆತ್ಮವಂಚನೆಯೇ ಹೆಚ್ಚು ಸಂಭವ.

ಅಧ್ಯಾತ್ಮವಿದ್ಯೆ ಮತ್ತು ದರ್ಶನಶಾಸ್ತ್ರ ಅಥವ ಆಧ್ಯಾತ್ಮಿಕದರ್ಶನಶಾಸ್ತ್ರ ನನ್ನ ಮನಸ್ಸಿಗೆ ಹೆಚ್ಚು ಹಿಡಿಯುತ್ತದೆ. ಇವಕ್ಕೆ ತುಂಬ ಚಿಂತನ, ತರ್ಕಶಾಸ್ತ್ರದ ಪ್ರಯೋಗ, ವಿಚಾರವಿಮರ್ಶೆ, ಅತ್ಯವಶ್ಯಕ. ಸತ್ಯವಿರಲಿ, ಇಲ್ಲದಿರಲಿ ಕೆಲವು ವಿಷಯಗಳು ಸ್ವತಃಸಿದ್ಧ ಎಂದು ನಂಬಿ, ಆ ಕೆಲವು ಆಧಾರಗಳ ಮೇಲೆಯೇ ಆ ಚಿಂತನ, ತರ್ಕ ಮತ್ತು ವಿಚಾರವಿಮರ್ಶೆ. ಎಲ್ಲ ವಿಚಾರಪರ ವ್ಯಕ್ತಿಗಳೂ ಸ್ವಲ್ಪ ಹೆಚ್ಚುಕಡಮೆ ಅಧ್ಯಾತ್ಮದಲ್ಲಿ, ದರ್ಶನ ಶಾಸ್ತ್ರದಲ್ಲಿ ಕೈಹಾಕುತ್ತಾರೆ. ಕೈಹಾಕದಿರುವುದೆಂದರೆ ಈ ನಮ್ಮ ವಿಶ್ವದ ಅನೇಕ ಪ್ರಶ್ನೆಗಳನ್ನು ಅಲಕ್ಷ್ಯಮಾಡಿದಂತೆ. ಕೆಲವರಿಗೆ ಇತರರಿಗಿಂತ ಅವುಗಳಲ್ಲಿ ಹೆಚ್ಚು ಆಸಕ್ತಿ ಇರಬಹುದು ; ಅಥವ ಕಾಲಕ್ಕನುಗುಣವಾಗಿ ಅವುಗಳ ಪ್ರಾಮುಖ್ಯತೆ ಹೆಚ್ಚುಕಡಮೆಯಾಗಬಹುದು. ಏಷ್ಯ ಯೂರೋಪುಗಳೆರಡರಲ್ಲೂ ಹಿಂದಿನ ಕಾಲದಲ್ಲಿ ಬಾಹ್ಯಪ್ರಪಂಚದ ವಸ್ತುಗಳಿಗಿಂತ ಅಂತರ್ಮುಖ ಜೀವನವೇ ಉತ್ತಮವೆಂದು ಪ್ರಾಮುಖ್ಯತೆ ಕೊಡಲಾಗುತ್ತಿತ್ತು. ಇದರಿಂದ ಅಧಾತ್ಮವಿದ್ಯೆ ಮತ್ತು ದರ್ಶನಶಾಸ್ತ್ರದ ಬೆಳೆವಣಿಗೆಗೆ ಸಹಾಯವಾಯಿತು. ಆಧುನಿಕ ಮಾನವನು ಬಾಹ್ಯಪ್ರಪಂಚದ ವಸ್ತುಗಳಲ್ಲಿ ಹೆಚ್ಚು ಮಗ್ನನಾಗಿದ್ದಾನೆ. ಆದರೂ ಅವನೂ ಸಹ ಉತ್ಕಟಸನ್ನಿವೇಶದಲ್ಲಿ, ಮಾನಸಿಕ ಕ್ಲೇಶದಲ್ಲಿ ಅಧ್ಯಾತ್ಮದ ಕಡೆಗೆ, ದಾರ್ಶನಿಕ ದೃಷ್ಟಿಯ ಕಡೆಗೆ ತಿರುಗುತ್ತಾನೆ.

ನಮ್ಮಲ್ಲನೇಕರು ಸ್ವಲ್ಪವೂ ಯೋಚಿಸದೆ ನಮ್ಮ ತಲೆಮಾರಿನ ಮತ್ತು ಸನ್ನಿವೇಶಕ್ಕೆ ಅನ್ವಯಿ ಸುವ ಸಾಮಾನ್ಯ ದೃಷ್ಟಿಯನ್ನು ಒಪ್ಪಿಕೊಂಡರೂ, ನಮ್ಮಲ್ಲಿ ಎಲ್ಲರಿಗೂ ಯಾವುದೋ ಸ್ಪಷ್ಟ ಅಥವ ಅಸ್ಪಷ್ಟ ಜೀವನ ದರ್ಶನವೊಂದಿದೆ. ಕೆಲವು ಅಧ್ಯಾತ್ಮಿಕ ಭಾವನೆಗಳನ್ನು ನಾವು ಹುಟ್ಟಿ ಬೆಳೆದ ಮತ ಧರ್ಮದ ಭಾಗವೆಂದೂ ಒಪ್ಪುತ್ತೇವೆ. ಅಧ್ಯಾತ್ಮಕ್ಕೆ ನಾನು ಮನಸೋತಿಲ್ಲ. ಅಸ್ಪಷ್ಟ ಚಿಂತನೆ ನನಗೆ ಯಾವಾಗಲೂ ರುಚಿಸದು. ಆದರೂ ಪೂರ್ವಿಕರ ಮತ್ತು ಈಗಿನ ಕಾಲದ ದಾರ್ಶನಿಕರ ಅಧ್ಯಾತ್ಮಿಕ, ದಾರ್ಶನಿಕ ದೃಷ್ಟಿಯ ಕಡಿದಾದ ದಾರಿಯಲ್ಲಿ ನಡೆಯಲು ಪ್ರಯತ್ನಪಟ್ಟು ನನಗೂ ಒಂದೊಂದು ಬಾರಿ ಒಂದು ವಿಧವಾದ ಬೌದ್ಧಿಕ ವಿಸ್ಮಯ ಉಂಟಾಗಿದೆ. ಆದರೆ ಅಲ್ಲಿ ಮನಶ್ಶಾಂತಿ ಎಂದೂ ದೊರೆತಿಲ್ಲ; ಅದರ ಮಾಯಾಜಾಲದಿಂದ ಹೊರಗೆ ಬಂದಾಗ ಮನಸ್ಸಿಗೊಂದು ತೃಪ್ತಿಯಾಗಿದೆ.

ಮುಖ್ಯವಾಗಿ, ನನಗೆ ಈ ಪ್ರಪಂಚದಲ್ಲಿ ಈ ಜೀವನದಲ್ಲಿಯೇ ಆಸಕ್ತಿ; ಯಾವುದೋ ಬೇರೆ ಪ್ರಪಂಚ ಅಥವ ಭವಿಷ್ಯ ಜೀವನದಲ್ಲಿಲ್ಲ. ಆತ್ಮವೆಂಬುದು ಒಂದು ಇದೆಯೆ, ಸತ್ತನಂತರ ಪುನರ್ಜನ್ಮ ಇದೆಯೆ ಇಲ್ಲವೆ ನನಗೆ ತಿಳಿಯದು. ಈ ಪ್ರಶ್ನೆಗಳೆಲ್ಲ ಅತಿ ಪ್ರಾಮುಖ್ಯವಾದರೂ ಅವು ಸ್ವಲ್ಪವೂ ನನ್ನನ್ನು ಬಾಧಿಸುವುದಿಲ್ಲ. ನಾನು ಬೆಳೆದ ಸನ್ನಿವೇಶದಲ್ಲಿ ಆತ್ಮವಿದೆ, ಕಾರ್ಯ ಕಾರಣಸಿದ್ಧಾಂತದ ಕರ್ಮವಾದದಂತೆ ಪುನರ್ಜನ್ಮವಿದೆ ಎಂಬ ನಂಬಿಕೆ ಇದೆ. ಅದರ ಪ್ರಭಾವ ನನ್ನ ಮೇಲೂ ಇದೆ. ಆದ್ದರಿಂದ ಈ ಮೂಲನಂಬಿಕೆಯಲ್ಲಿ ನನಗೂ ಸ್ವಲ್ಪ ವಿಶ್ವಾಸವಿದೆ. ಭೌತಿಕ ದೇಹ ನಶಿಸಿದಮೇಲೆ

ಚ್ಯುತಿಯಿಲ್ಲದ ಆತ್ಮವೊಂದಿರಬಹುದು. ಅಂತಿಮ ಕಾರಣವನ್ನೇ ಯೋಚಿಸುವುದಾದರೆ ಸ್ವಲ್ಪ ತೊಡಕುಗಳು ತೋರಿದಾಗ್ಯೂ ಕಾರ್ಯಕಾರಣವಾದದಿಂದ ನಮ್ಮ ಜೀವನ ಬದ್ಧ ಎನ್ನುವುದೂ ಸರಿ ಯೆಂದು ತೋರುತ್ತದೆ. ಆತ್ಮವಿದೆ ಎಂದು ನಂಬಿದರೆ ಪುನರ್ಜನ್ಮ ಸಿದ್ಧಾಂತದಲ್ಲಿಯೂ ಸ್ವಲ್ಪ ಪಥ್ಯ ವಿರುವಂತಿದೆ.

ಆದರೆ ಧರ್ಮಶ್ರದ್ಧೆಯೆಂದು ಅದನ್ನೇ ಆಗಲಿ, ಬೇರೆ ಸಿದ್ಧಾಂತ ಅಥವ ಪ್ರಮೇಯಗಳಲ್ಲಿ ಆಗಲಿ ನಾನು ನಂಬುವುದಿಲ್ಲ. ಅವು ನಮಗೆ ಏನೂ ತಿಳಿಯದ ಅಜ್ಞೇಯ ಪ್ರಪಂಚದಲ್ಲಿ ನಮ್ಮ ಬೌದ್ಧಿಕ ಮೀಮಾಂಸೆ ಮಾತ್ರ. ಅವು ನನ್ನ ಜೀವನದಮೇಲೆ ಯಾವ ಪರಿಣಾಮವನ್ನೂ ಮಾಡಿಲ್ಲ. ಕ್ರಮೇಣ ಅದು ಸರಿ ಅಥವ ತಪ್ಪು ಎಂದು ನಿರ್ಧರವಾದರೂ ಅದರಿಂದ ನನಗೆ ಏನೂ ವ್ಯತ್ಯಾಸವಾಗುವುದಿಲ್ಲ. ಜನ್ಮಾಂತರದ ಗುಟ್ಟನ್ನರಿಯುವುದು, ಭೌತಾತೀತ ಅದ್ಭುತಗಳ ಶೋಧನೆ ಎಂದು ಹೇಳುವ ಪ್ರೇತವಾದ ಮತ್ತು ಅದರ ಕೂಟಗಳು ಮತ್ತು ಪ್ರೇತಗಳ ಪ್ರತ್ಯಕ್ಷ ಸಂದರ್ಶನ ಮುಂತಾದವುಗಳೆಲ್ಲ ಅವಿವೇಕ, ಉದ್ಧತಮಾರ್ಗ ಎಂದು ನನ್ನ ಭಾವನೆ. ಪ್ರಾಯಶಃ ಇನ್ನೂ ಕೀಳುಮಟ್ಟದ್ದಿರಬಹುದು. ಯಾವುದೋ ಮನೋವ್ಯಾಧಿಯಿಂದ ಸ್ವಲ್ಪ ಬಿಡುಗಡೆ ಅಥವ ಪರಿಹಾರ ಪಡೆಯೋಣವೆಂದು ಬರುವ ಮೂಢರ ನಂಬುಗೆಯ ದುರುಪಯೋಗ. ಈ ಭಾವಾತೀತ ಅದ್ಭುತಗಳಲ್ಲಿ ಸತ್ಯದ ಮೂಲ ಸ್ವಲ್ಪವಿರಬಹುದು ಎಂದು ನಾನು ಒಪ್ಪದಿಲ್ಲ. ಆದರೆ ವಿಷಯದಲ್ಲಿ ಪ್ರವೇಶಿಸುತ್ತಿರುವ ರೀತಿಯೇ ತಪ್ಪು. ಅಲ್ಲಿ ಇಲ್ಲಿ ಚೂರು ಪ್ರಮಾಣಗಳಿಂದ ನಿರ್ಣಯಿಸಿದ ಸಿದ್ಧಾಂತ ತಪ್ಪು ಎಂದು ತೋರುತ್ತದೆ.

ಈ ಪ್ರಪಂಚ ವೀಕ್ಷಣೆ ಮಾಡಿದ ಅನೇಕ ವೇಳೆ ಅಳೆಯಲಾರದ ಆಳದ ಗೂಢ ರಹಸ್ಯಗಳ ಭಾವನೆ ಮೂಡಿದೆ. ಅದನ್ನು ಅರ್ಥಮಾಡಿಕೊಳ್ಳುವ ಆಸಕ್ತಿಯೂ ನನಗೆ ಬರುತ್ತದೆ—ಅದರೊಂದಿಗೆ ಲೀನ ವಾಗಿ, ಅದರ ಪೂರ್ಣಾನುಭವ ಪಡೆಯಬೇಕೆಂದು. ನಿಜವಾದ ಪ್ರತ್ಯಕ್ಷಪ್ರಮಾಣವೆಂಬುದು ಇಲ್ಲವೆಂದು ನಾನು ಅರಿತಿದ್ದರೂ, ಆ ಗೂಡಾರ್ಥವನ್ನು ಗ್ರಹಿಸಲು ಪ್ರತ್ಯಕ್ಷ ಪ್ರಮಾಣದ ಮಾರ್ಗವಾದ ವಿಜ್ಞಾನದ ದಾರಿಯೊಂದೇ ಎಂದು ನನ್ನ ಭಾವನೆ. ಕಾಲ್ಪನಿಕ ದೃಷ್ಟಿ ಅನಿವಾರ್ಯ, ಅತ್ಯವಶ್ಯವೆನ್ನುವುದಾದರೆ ಅದಕ್ಕೂ ಸಾಧ್ಯವಾದಷ್ಟು ವೈಜ್ಞಾನಿಕ ರೀತಿಯ ಮಿತಿ ಇರಬೇಕು.

ಗೂಢ ರಹಸ್ಯವೆಂದರೇನು ಎಂದು ನನಗೆ ತಿಳಿಯದು. ಅದನ್ನು ನಾನು ದೇವರು ಎನ್ನಲಾರೆ. ಏಕೆಂದರೆ ದೇವರು ಎಂದರೆ ನಾನು ನಂಬದಿರುವ ಅನೇಕ ವಿಷಯ ಅದರಲ್ಲಿ ಅಡಕವಾಗಿದೆ. ಯಾವ ದೇವರನ್ನೇ ಆಗಲಿ, ವಿಶ್ವಶಕ್ತಿಯನ್ನೇ ಆಗಲಿ ಮನುಷ್ಯತ್ವಾರೋಪಣದ ರೂಪಿನಲ್ಲಿ ಭಾವಿಸಲಾರೆ. ಅನೇಕರು ಮೇಲಿಂದ ಮೇಲೆ ಆ ರೀತಿ ಭಾವಿಸಿರುವುದು ನನಗೆ ಆಶ್ಚರ್ಯವನ್ನುಂಟುಮಾಡಿದೆ. ದೇವರಿಗೊಂದು ವ್ಯಕ್ತಿತ್ವವಿದೆ ಎಂಬ ಭಾವನೆ ನನಗೆ ಸಮಂಜಸ ಕಾಣುವುದಿಲ್ಲ. ಬೌದ್ಧಿಕ ದೃಷ್ಟಿ ಯಿಂದ ಏಕತ್ವವಾದ ಭಾವನೆಯನ್ನು ನಾನು ಸ್ವಲ್ಪಮಟ್ಟಿಗೆ ಮೆಚ್ಚಿದ್ದೇನೆ. ವೇದಾಂತದ ಅದ್ವೈತ ದರ್ಶನ—ನಾನು ಅದರ ಆಳ ಮತ್ತು ಜಟಿಲತೆಯನ್ನು ಅರ್ಥಮಾಡಿಕೊಂಡಿಲ್ಲವಾದರೂ ನನ್ನನ್ನು ಆಕರ್ಷಿಸಿದೆ. ಅಂತಹ ವಿಷಯಗಳಲ್ಲಿ ಕೇವಲ ಬೌದ್ಧಿಕ ಮೆಚ್ಚುಗೆ ನನ್ನನ್ನು ಬಹುದೂರ ಕರೆ ದೊಯ್ಯಲಾರದು ಎಂದೂ ಅರಿತಿದ್ದೇನೆ. ಆದರೆ ವೇದಾಂತ ಮತ್ತು ಇತರ ಅದೇ ಬಗೆಯ ಪ್ರವೇಶ ಗಳು ಅನಂತದಲ್ಲಿನ ತಮ್ಮ ಅಸ್ಪಷ್ಟ ನಿರಾಕಾರ ದಾಳಿಗಳಿಂದ ನನಗೆ ಭಯೋತ್ಪಾದನೆಯನ್ನೂ ಮಾಡಿವೆ. ಪ್ರಕೃತಿಯ ವೈವಿಧ್ಯತೆ ಮತ್ತು ಪರಿಪೂರ್ಣತೆ ನನ್ನನ್ನು ಅನುಕಂಪಿಸಿ ಸ್ಫೂರ್ತಿಯ ಸಮರಸತೆಯನ್ನುಂಟುಮಾಡುತ್ತದೆ. ಪುರಾತನ ಭಾರತೀಯರ ಅಥವ ಗ್ರೀಕರ ಅಸಂಸ್ಕೃತ ವಿಶ್ವ ದೇವೈಕ್ಯ ವಾತಾವರಣದಲ್ಲಿ-ಆದರೆ ಅದರ ದೇವರು ಅಥವ ದೇವರುಗಳ ಭಾವನೆಯಿಲ್ಲದ ವಾತಾವರಣ ದಲ್ಲಿ ನಾನು ನಿರಾತಂಕವಾಗಿ ವಿರಮಿಸಿದ್ದೇನೆ.

ಜೀವನದಲ್ಲಿ, ತರ್ಕದೃಷ್ಟಿಯಿಂದ ದೃಢಪಡಿಸುವುದು ನನಗೆ ಕಷ್ಟವಾದರೂ ಒಂದುಬಗೆಯ ನೈತಿಕಕಟ್ಟು ಅವಶ್ಯವೆಂದು ನನ್ನ ದೃಢನಂಬಿಕೆ. ಸನ್ಮಾರ್ಗದಲ್ಲಿ ಪ್ರವೃತ್ತರಾಗಿರೆಂದು ಗಾಂಧೀಜಿ ಒತ್ತಾಯಪಡಿಸುವುದು ನನಗೆ ಸಮ್ಮತವಿದೆ. ಪ್ರಾಯಶಃ ನಮ್ಮ ಸಾರ್ವಜನಿಕ ಜೀವನಕ್ಕೆ ಅವರಿಂ

ದಾಗಿರುವ ಮಹದುಪಕಾರಗಳಲ್ಲಿ ಈ ಒತ್ತಾಯವೇ ಅತಿಮುಖ್ಯವಾದುದು. ಈ ಭಾವನೆ ಹೊಸತೇನೂ ಅಲ್ಲ. ಆದರೆ ಆ ನೈತಿಕ ಧರ್ಮವನ್ನು ದೊಡ್ಡ ಪ್ರಮಾಣದಲ್ಲಿ ಸಾರ್ವಜನಿಕ ಜೀವನಕ್ಕೆ ಅಳವಡಿಸಿದ್ದು ನಿಜವಾಗಿ ಹೊಸತು. ಅದು ತುಂಬ ಕಷ್ಟವೇನೋ ನಿಜ; ಮತ್ತು ಪ್ರಾಯಶಃ ಗುರಿ ಮತ್ತು ದಾರಿಗಳೆರಡನ್ನು ಬೇರ್ಪಡಿಸಲು ನಿಜವಾಗಿ ಸಾಧ್ಯವಿಲ್ಲ; ನೈಸರ್ಗಿಕಪೂರ್ಣತೆಯಲ್ಲಿ ಎರಡೂ ಸೇರಿವೆ. ಗುರಿಯನ್ನು ಮಾತ್ರ ಗಮನದಲ್ಲಿಟ್ಟುಕೊಂಡು, ದಾರಿಗೆ ಪ್ರಾಶಸ್ತ್ಯಕೊಡದ ಈ ಪ್ರಪಂಚದಲ್ಲಿ ದಾರಿಕೊಡುವ ಪ್ರಾಮುಖ್ಯತೆ ವಿಚಿತ್ರವಾಗಿ, ಅಸಾಮಾನ್ಯವಾಗಿ, ಕಾಣಬಹುದು. ಇಂಡಿಯದಲ್ಲಿ ಎಷ್ಟರ ಮಟ್ಟಿಗೆ ಯಶಸ್ವಿಯಾಗಿದೆ ನಾನು ಹೇಳಲಾರೆ. ಆದರೆ ಅನೇಕರ ಮನಸ್ಸಿನ ಮೇಲೆ ಗಾಢವಾದ ಶಾಶ್ವತವಾದ ಪ್ರತಿಭೆಯನ್ನು ಬೀರಿದೆ ಎಂಬುದರಲ್ಲಿ ಸಂಶಯವಿಲ್ಲ.

ಮಾರ್ಕ್ಸ್ ಮತ್ತು ಲೆನಿನ್‌ನ್ನು ಕುರಿತ ಅಭ್ಯಾಸ ನನ್ನ ಮನಸ್ಸಿನ ಮೇಲೆ ಬಹಳ ದೊಡ್ಡ ಪರಿಣಾಮವನ್ನುಂಟುಮಾಡಿತು: ಇತಿಹಾಸವನ್ನೂ ಪ್ರಚಲಿತ ವಿಷಯಗಳನ್ನೂ ಹೊಸ ಬೆಳಕಿನಲ್ಲಿ ನೋಡುವ ದೃಷ್ಟಿಯನ್ನು ಕೊಟ್ಟಿತು. ಇತಿಹಾಸ ಮತ್ತು ಸಮಾಜ ವಿಕಾಸನದ ಸನಾತನ ಪರಂಪರೆಯಲ್ಲಿ ಒಂದು ಅರ್ಥ ಮತ್ತು ಕ್ರಮವಿದೆ ಎಂದು ಅರ್ಥವಾಯಿತು, ಭವಿಷ್ಯದ ಮುಸುಕೂ ಸ್ವಲ್ಪ ತಿಳಿಯಲಾಯಿತು. ಸೋವಿಯೆಟ್ ಸಂಯೋಜನೆಯ ಪ್ರತ್ಯಕ್ಷ ಸಾಧನೆಗಳೂ ಅಸಾಧ್ಯಪರಿಣಾಮವನ್ನುಂಟುಮಾಡಿತು. ಅನೇಕವೇಳೆ ಅಲ್ಲಿನ ಒಂದೊಂದು ಘಟನೆ ಅರ್ಥವಾಗುತ್ತಿರಲಿಲ್ಲ ಅಥವ ನನ್ನ ಮನಸ್ಸಿಗೆ ಬರುತ್ತಿರಲಿಲ್ಲ. ದೈನಂದಿನದ ಅಧಿಕಾರದ ರಾಜಕೀಯಕ್ಕೆ ಅಥವ ತಾತ್ಕಾಲಿಕ ಪ್ರಯೋಜನಕ್ಕೆ ಸಂಬಂಧಿಸಿದ್ದು ಎಂದು ತೋರುತ್ತಿತ್ತು. ಮಾನವ ಸೌಖ್ಯಾಭಿವೃದ್ಧಿಯ ಉದ್ವೇಗದಲ್ಲಿ ಈ ಎಲ್ಲ ಘಟನೆಗಳಲ್ಲೂ, ಸ್ವಲ್ಪವಕ್ರತೆಯೂ ಕಂಡುಬಂದರೂ ಸೋವಿಯಟ್ ಕ್ರಾಂತಿಯಿಂದ ಮಾನವ ಸಮಾಜ ದೊಡ್ಡ ಹೆಜ್ಜೆಯಿಂದ ಮುಂದುವರಿದಿದೆ, ಅದು ಅಳಿಸಲಾಗದ ನಿತ್ಯ ಜಾಜ್ವಲ್ಯಮಾನವಾದ ನಂದಾದೀವಿಗೆಯೊಂದನ್ನು ಹೊತ್ತಿಸಿದೆ; ಇಡೀ ವಿಶ್ವವೇ ಬಯಸುವ ಹೊಸ ನಾಗರಿಕತೆಯ ತಳಪಾಯವನ್ನು ಹಾಕಿದೆ ಎನ್ನುವದರಲ್ಲಿ ನನಗೆ ಯಾವ ಸಂಶಯವೂ ಇರಲಿಲ್ಲ. ನಾನೊಬ್ಬ ತೀಕ್ಷ್ಣ ವ್ಯಕ್ತಿ ಸ್ವಾತಂತ್ರ್ಯವಾದಿ, ಆದ್ದರಿಂದ ಸಮಾಜದಲ್ಲೆಲ್ಲ ತೀರ ಅತಿಯಾದ ಸೈನಿಕ ಶಿಸ್ತನ್ನು ಒಪ್ಪಲಾರೆ. ಆದರೂ ಒಂದು ಜಟಿಲವಾದ ಸಮಾಜರಚನೆಯಲ್ಲಿ ವ್ಯಕ್ತಿ ಸ್ವಾತಂತ್ರ್ಯಕ್ಕೆ ಒಂದು ಮಿತಿ ಇರಬೇಕು ಎಂಬುದು ನನಗೆ ಸ್ಪಷ್ಟವಾಗಿದೆ. ಪ್ರಾಯಶಃ ನಿಜವಾದ ವ್ಯಕ್ತಿ ಸ್ವಾತಂತ್ರ್ಯಕ್ಕೆ ಒಂದೇದಾರಿ ಅದು ಸಾಮಾಜಿಕ ಜೀವನದ ಅಂಥ ಯಾವುದಾದರೂ ಒಂದು ಮಿತಿಯಿಂದಲೇ ಇರಬೇಕು. ರಾಷ್ಟ್ರದ ಮಹಾ ಸ್ವಾತಂತ್ರ್ಯದ ಹಿತದಿಂದ ಕಿರಿದಾದ ವ್ಯಕ್ತಿ ಸ್ವಾತಂತ್ರ್ಯಕ್ಕೆ ಆಗಾಗ್ಗೆ ಮಿತಿಯನ್ನು ಕಲ್ಪಿಸಬೇಕಾಗಿ ಬರಬಹುದು.

ಮಾರ್ಕ್ಸ್‌ನ ದರ್ಶನ ದೃಷ್ಟಿಯಲ್ಲಿ ಬಹು ಭಾಗವನ್ನು ನಾನು ಸುಲಭವಾಗಿ ಒಪ್ಪಿದೆ: ಅದರ ಏಕತ್ವವಾದ, ಮತ್ತು ವಸ್ತು ಮನಸ್ಸುಗಳ ಅದ್ವೈತಭಾವ, ವಸ್ತುವಿನ ಕ್ರಿಯಾಶಕ್ತಿ, ವಿಕಾಸ ಮತ್ತು ಅತಿಕ್ರಮಣ ಕ್ರಿಯೆ ಮತ್ತು ಪ್ರಕ್ರಿಯೆ, ಕಾರ್ಯ ಮತ್ತು ಕಾರಣ, ಪ್ರಮೇಯ, ವಿರೋಧಪ್ರಮೇಯ, ಸಂಕೀರ್ಣ ಪ್ರಮೇಯಗಳಿಂದ ಉದ್ಭವಿಸುವ ನಿರಂತರ ಪರಿವರ್ತನೆಯ ಜಿಜ್ಞಾಸ ನನಗೆ ಒಪ್ಪಿಗೆಯಾಗಿದೆ. ಅದರಿಂದ ನನಗೆ ಪೂರ್ಣ ತೃಪ್ತಿಯಾಯಿತೆಂದಲ್ಲ. ನನ್ನ ಮನಸ್ಸಿನ ಎಲ್ಲ ಸಂಶಯಗಳೂ ಅದರಿಂದ ನಿವಾರಣೆಯಾಗಲಿಲ್ಲ. ಎಂತೊ ಏನೊ ತಿಳಿದೂ ತಿಳಿಯದಂತೆ ವೇದಾಂತ ದೃಷ್ಟಿಯಂತಿರುವ ಒಂದು ಭಾವನೆ ನನ್ನಲ್ಲಿ ಸುಳಿಯಲು ಆರಂಭಿಸಿತು; ಅದು ಮನಸ್ಸು ಮತ್ತು ವಸ್ತುವಿನ ಮಧ್ಯದ ಅಂತರವಲ್ಲ, ಮನಸ್ಸಿಗೂ ಮೀರಿದ ಯಾವುದೋ ವಿಷಯ. ಅಲ್ಲದೆ ಅದಕ್ಕೆ ನೈತಿಕ ಹಿನ್ನೆಲೆಯೂ ಇತ್ತು. ನಮ್ಮ ಮನಸ್ಸು ಬೆಳೆದಂತೆ, ನಾಗರಿಕತೆ ಮುಂದುವರಿದಂತೆ ನೈತಿಕ ದೃಷ್ಟಿಯೂ ವ್ಯತ್ಯಾಸ ಹೊಂದುತ್ತದೆ ಎಂದು ಅರಿತುಕೊಂಡೆ. ಆಯಾ ಯುಗದ ಮಾನಸಿಕ ಹವಾಮಾನದಂತೆ ಯುಗದ ನೈತಿಕ ದೃಷ್ಟಿ. ಆದರೂ ಆ ನೈತಿಕ ದೃಷ್ಟಿಗೆ ಯಾಗಪ್ರವೃತ್ತಿಗಿಂತ ಇನ್ನೂ ಹೆಚ್ಚು ನಿತ್ಯತೆಯುಳ್ಳ ಕೆಲವು ಮೂಲ ಪ್ರವೃತ್ತಿಗಳು ಇವೆ. ಕಮ್ಯೂನಿಸಂ ಮತ್ತು ಇತರ ಪಂಗಡಗಳಲ್ಲಿ ಅನೇಕವೇಳೆ ಮೂಲ ಪ್ರವೃತ್ತಿ ಅಥವ ತತ್ವಗಳಿಗೂ ಕ್ರಿಯೆಗೂ ಕಂಡುಬಂದ ವಿಚ್ಛೇದವೂ ನನಗೆ ಸರಿದೋರಲಿಲ್ಲ.

ಆದ್ದರಿಂದ ನನ್ನ ಮನಸ್ಸಿನ ಸ್ಥಿತಿ ನಾನೇ ಸ್ಪಷ್ಟಮಾಡಿಕೊಂಡು ವಿವರಿಸಲು ಸಾಧ್ಯವಿಲ್ಲದ ಕಲಸು ಮೇಲೋಗರವಾಗಿತ್ತು. ನನ್ನ ಮನಸ್ಸಿಗೆ ಎಟುಕದ ಆ ಮೂಲ ಪ್ರಶ್ನೆಗಳ ವಿಷಯ ಹೆಚ್ಚು ಯೋಚಿಸುವ ಬದಲು, ನನ್ನ ದೃಷ್ಟಿಯನ್ನು ಪ್ರಸ್ತುತ ವಿಷಯದ ಕಡೆಗೆ ನೆಟ್ಟು ತಾತ್ಕಾಲಿಕವಾದ ಸಂಕುಚಿತವೆಂದು ತೋರುವ ಜೀವನದ ಸಮಸ್ಯೆಗಳ ಪರಿಹಾರಕ್ಕಾಗಿ ಮಾಡಬೇಕಾದ್ದೇನು, ಹೇಗೆ, ಎಂದು ಯೋಚಿಸುವುದೇ ನನಗೆ ಸಾಮಾನ್ಯವಾಗಿತ್ತು.

ಅಂತಿಮ ಸತ್ಯ ಏನೇ ಆಗಿರಲಿ, ಸ್ವಲ್ಪವಾಗಿಯೊ, ಪೂರ್ತಿಯಾಗಿಯೊ ಅದು ನಮಗೆ ಎಟುಕಲಿ, ಎಟುಕದಿರಲಿ ಮಾನವಜ್ಞಾನ ಭಾಂಡಾರವನ್ನು ವೃದ್ಧಿಗೊಳಿಸಲು, ಆ ಜ್ಞಾನ ಸ್ವಲ್ಪಮಟ್ಟಿಗೆ ಅಥವ ಬಹುಮಟ್ಟಿಗೆ ಆತ್ಮೀಯವಾಗಿರಬಹುದು—ಮತ್ತು ಆ ಜ್ಞಾನವನ್ನು ಮಾನವ ಜೀವನ ಮತ್ತು ಸಾಮಾಜಿಕ ವ್ಯವಸ್ಥೆಯ ಪುರೋಭಿವೃದ್ಧಿ ಮತ್ತು ಉನ್ನತಿಗೆ ಉಪಯೋಗಿಸಿಕೊಳ್ಳಲು ಒಳ್ಳೆಯ ಅಪಾರ ಅವಕಾಶವಿದೆ.

ಹಿಂದಿನ ಕಾಲದಲ್ಲಿ, ಸ್ವಲ್ಪ ಕಡಮೆ ಪ್ರಮಾಣದಲ್ಲಾದರೂ ಈಗಲೂ ಸಹ, ವಿಶ್ವದ ಒಳಗುಟ್ಟಿನ ಪ್ರಶ್ನೆಗೆ ಉತ್ತರ ಕಂಡು ಹಿಡಿಯುವ ಪ್ರಯತ್ನದಲ್ಲಿ ಅನೇಕರು ಮಗ್ನರಾಗಿದ್ದಾರೆ. ಇದರಿಂದ ಅವರು ವಿಶ್ವದ ವೈಯಕ್ತಿಕ ಸಾಮಾಜಿಕ ಸಮಸ್ಯೆಗಳಿಂದ ದೂರರಾಗುತ್ತಾರೆ. ವಿಶ್ವದ ಮರ್ಮವನ್ನರಿಯುವ ಪ್ರಯತ್ನದಲ್ಲಿ ವಿಫಲರಾದಾಗ ನಿರಾಶರಾಗುತ್ತಾರೆ. ಕರ್ತವ್ಯ ವಿಮುಖತೆಯಲ್ಲೋ, ಅಲ್ಪ ವಿಷಯ ಗಳಲ್ಲೋ, ಅಥವ ಯಾವುದಾದರೊಂದು ಅಂಧಸಿದ್ಧಾಂತದಲ್ಲಿ ತೃಪ್ತಿಪಡೆಯುತ್ತಾರೆ. ನಿವಾರಿಸಲು ಸಾಧ್ಯವಿರುವ ಅನೇಕ ಸಾಮಾಜಿಕ ದೋಷಗಳಿಗೆ, ಪಾಪಕರ್ಮದ ಫಲ, ವ್ಯತ್ಯಾಸಪಡಿಸಲಾಗದ ಸ್ವಭಾವಗುಣ, ಸಾಮಾಜಿಕ ವ್ಯವಸ್ಥೆ ಅಥವ ಇಂಡಿಯದಲ್ಲಿ ಪೂರ್ವಜನ್ಮದ ನಿರುಪಾಧಿಕಕರ್ಮ ವಿಶೇಷ ಎಂದು ಆರೋಪಿಸುತ್ತಾರೆ. ಈ ಕಾರಣವಾಗಿ, ವೈಜ್ಞಾನಿಕ ರೀತಿಯಲ್ಲಿ ವಿಚಾರಮಾಡುವ ಪ್ರಯತ್ನ ಸಹ ಮಾಡದೆ ನಮ್ಮಲ್ಲಿ ಅನೇಕರು ವಿಚಾರಶೂನ್ಯತೆಯಲ್ಲಿ, ಕುರುಡು ನಂಬಿಕೆಗಳಲ್ಲಿ, ಅರ್ಥ ವಿಲ್ಲದ ನ್ಯಾಯಸಮ್ಮತವಲ್ಲದ ಸಾಮಾಜಿಕ ದುರಭಿಪ್ರಾಯ ಮತ್ತು ಪೂರ್ವಾಚಾರಗಳಲ್ಲಿ ಆಸರೆ ಪಡೆ ಯುತ್ತೇವೆ. ವಿಚಾರದೃಷ್ಟಿಯ ಮತ್ತು ವಿಜ್ಞಾನ ರೀತಿಯ ಯೋಚನೆ ಸಹ ನಮ್ಮನ್ನು ನಿರೀಕ್ಷಿಸಿದಷ್ಟು ದೂರ ಕೊಂಡೊಯ್ಯಲಾರದೆಂಬುದೂ ನಿಜ. ವಿಷಯದ ಪರಿಣಾಮ ಮತ್ತು ನಿರ್ಧಾರದಲ್ಲಿ ಪ್ರಭಾವ ಬೀರುವ ಸಂದರ್ಭಗಳು ಮತ್ತು ಸಂಬಂಧಗಳು ಅಸಂಖ್ಯಾತವಿವೆ. ಅವುಗಳನ್ನೆಲ್ಲ ಗ್ರಹಿಸಲೂ ಸಾಧ್ಯ ವಿಲ್ಲ. ಆದರೂ ಬಾಹ್ಯವಸ್ತುವಿನ ವಾಸ್ತವಿಕತೆಯನ್ನು ನೋಡಿ, ಪ್ರಯೋಗ ಮತ್ತು ಅಭ್ಯಾಸ ಬಲದಿಂದ ಪ್ರಯತ್ನ ಮತ್ತು ಅದರ ತಪ್ಪುಗಳಿಂದ ಹೆಚ್ಚು ಪರಿಣಾಮಕಾರಿಗಳಾದ ಶಕ್ತಿಗಳನ್ನು ಕಂಡುಹಿಡಿದು ಅಪಾರ ವೈಶಾಲ್ಯದ ಜ್ಞಾನ ಮತ್ತು ಸತ್ಯದ ಕಡೆ ತಡವರಿಸಿ ಹೋಗಲೆತ್ನಿಸಬಹುದು.

ಈ ಉದ್ದೇಶದಿಂದ, ಈ ಪರಿಮಿತಿಯಲ್ಲಿ ಇಂದಿನ ವೈಜ್ಞಾನಿಕ ಜ್ಞಾನದ ಸ್ಥಿತಿಗೆ ಅನುಗುಣ ವಾಗಿ ಕಂಡುದರಿಂದ ಮಾರ್ಕ್ಸ್‌ನ ವಾದವು ಹೆಚ್ಚು ಸಹಾಯಮಾಡುವಂತೆ ನನಗೆ ತೋರಿತು. ಆದರೆ ಆ ಮಾರ್ಗ ಹಿಡಿದರೂ ಸಹ ಅದರಿಂದ ಉದ್ಭವಿಸುವ ಪರಿಣಾಮಗಳು, ಮತ್ತು ಇಂದಿನ ಮತ್ತು ಹಿಂದಿನ ಘಟನೆಗಳ ಅರ್ಥವಿವರಣೆ ಅಷ್ಟು ಸಮಂಜಸ ತೋರಲಿಲ್ಲ. ಮಾರ್ಕ್ಸ್‌ನ ಸಮಾಜ ಬೆಳವಣಿಗೆಯ ಸಾಮಾನ್ಯ ವಿವರಣೆಯು ಬಹುಮಟ್ಟಿಗೆ ಸರಿ. ಆದರೂ ಆತನ ಮರುಗಳಿಗೆಯ ಭವಿಷ್ಯದ ದೃಷ್ಟಿಗೆ ಹೊಂದಿಕೊಳ್ಳದಿದ್ದರೂ ಅನೇಕ ಘಟನೆಗಳು ಬಹಳ ದಿನಗಳ ನಂತರ ಸಂಭವಿಸಿದವು. ಲೆನಿನ್ ಮಾರ್ಕ್ಸ್‌ನ ತತ್ವವನ್ನು ಈ ಕೆಲವು ಅನಂತರದ ಘಟನೆಗಳಿಗೆ ಯಶಸ್ವಿಯಾಗಿ ಅನ್ವಯಿಸಿದನು. ಮತ್ತು ಅಲ್ಲಿಂದೀಚೆಗೆ ಫ್ಯಾಸಿಸಂ, ನಾಜಿಸಂ ವಿಶೇಷ ಘಟನೆಗಳೂ ಮತ್ತು ಅವುಗಳ ಉತ್ಪತ್ತಿಗೆ ಮೂಲಭೂತ ವಾದ ಅನೇಕ ವಿಷಯಗಳೂ ಬೆಳೆದಿವೆ. ಔದ್ಯೋಗಿಕ ಶಿಕ್ಷಣದ ಅಸಾಧ್ಯ ಬೆಳವಣಿಗೆಗೆ ವಿಜ್ಞಾನದ ಅಪಾರ ಜ್ಞಾನಭಂಡಾರದ ಪ್ರಾಯೋಗಿಕ ಯೋಜನೆ ಇವು ಪ್ರಪಂಚದ ರೂಪವನ್ನೇ ವಿದ್ಯುದ್ವೇಗದಿಂದ ವ್ಯತ್ಯಾಸಗೊಳಿಸುತ್ತಿವೆ; ಹೊಸ ಹೊಸ ಸಮಸ್ಯೆಗಳಿಗೂ ಎಡೆಕೊಡುತ್ತಿವೆ.

ಆದ್ದರಿಂದ ಸಮತಾವಾದದ ಮೂಲತತ್ವಗಳನ್ನು ನಾನು ಅಂಗೀಕರಿಸಿದರೂ, ಅದರ ಅಸಂಖ್ಯಾತ ವಾದ ಒಳ ವಾದವಿವಾದಗಳ ಗೋಜಿಗೆ ನಾನು ಹೋಗಲಿಲ್ಲ. ನನಗೆ ಸ್ವಲ್ಪವೂ ಉಪಯೋಗಕಾಣದ

ಸೂಕ್ಷ್ಮತಾತ್ವಿಕ ವಿಚಾರಗಳಲ್ಲಿ ಪರಸ್ಪರ ಜಗಳ ಮತ್ತು ನಿಂದೆಯಲ್ಲಿ ತಮ್ಮ ಶಕ್ತಿಯನ್ನು ಹಾಳು ಮಾಡಿಕೊಳ್ಳುತ್ತಿದ್ದ ಇಂಡಿಯದ ಸಮತಾವಾದಿಗಳನ್ನೂ ಕಂಡರೆ ನನಗೆ ಕೋಪ. ಜೀವನ ಬಹಳ ಜಟಿಲವಾದದ್ದು. ಇಂದು ಅದು ನಮಗೆ ಹಸ್ತಗತವಾಗಿರುವ ಜ್ಞಾನದೃಷ್ಟಿಯಲ್ಲ, ಯಾವುದೇ ಒಂದು ನಿರ್ದಿಷ್ಟ ಸಿದ್ಧಾಂತದ ಚೌಮೂಲೆಯಲ್ಲಿ ಬಂಧಿತವಾಗಿತ್ತೆನ್ನುವದು ತೀರ ತರ್ಕಶೂನ್ಯವಾದದ್ದು.

ನನಗೆ ನಿಜವಾದ ಸಮಸ್ಯೆಗಳೆಂದರೆ ವ್ಯಕ್ತಿಯ ಸಮಸ್ಯೆ. ಸಾಮಾಜಿಕ ಜೀವನದ ಸಮಸ್ಯೆ, ಸಮರಸ ಜೀವನದ ಸಮಸ್ಯೆ,ವ್ಯಕ್ತಿಗಳ ಮತ್ತು ಜನಸಮುದಾಯಗಳ ಮಧ್ಯೆ ಸಂಬಂಧಗಳ ಸಮೀಕರಣದ ಸಮಸ್ಯೆ, ವ್ಯಕ್ತಿಯ ಆಂತರಿಕ ಮತ್ತು ಬಾಹ್ಯ ಜೀವನದ ಯೋಗ್ಯ ಸಮತೂಕದ ಸಮಸ್ಯೆ, ನಿರಾತಂಕವಾಗಿ ಮೇಲ್ಮಟ್ಟದ ಉತ್ತಮ ಸ್ಥಿತಿಗೆ, ಸಾಮಾಜಿಕ ಅಭಿವೃದ್ಧಿಯ ಸಮಸ್ಯೆ ಮತ್ತು ಮಾನವನ ಸತತ ಸಾಹಸದ ಸಮಸ್ಯೆ. ಈ ಸಮಸ್ಯೆಗಳ ಪರಿಹಾರದಲ್ಲಿ ವಿಜ್ಞಾನಮಾರ್ಗದ ರೀತ್ಯ ಪ್ರತ್ಯಕ್ಷ ಅವಲೋಕನ, ನಿಕರವಾದ ಜ್ಞಾನ, ಉದ್ದೇಶಪೂರ್ವಕ ತರ್ಕ ಇವುಗಳನ್ನು ಅನುಸರಿಸಬೇಕು. ಈ ಮಾರ್ಗ ನಮ್ಮ ಸತ್ಯಾನ್ವೇಷಣೆಯಲ್ಲಿ ಎಲ್ಲ ಸಮಯದಲ್ಲಿ ಅನುಕರಣೀಯವಿರಬಹುದು. ಏಕೆಂದರೆ ಕಲೆ, ಕಾವ್ಯ ಮತ್ತು ಕೆಲವು ಅಧ್ಯಾತ್ಮಿಕ ಅನುಭವಗಳು ಬೇರೆ ಗುಂಪಿಗೆ ಸೇರಿದವು, ವಿಜ್ಞಾನದ ಪ್ರತ್ಯಕ್ಷ ಪ್ರಮಾಣಮಾರ್ಗದಿಂದ ನುಸುಳಿಕೊಳ್ಳುವಂತೆ ಇವೆ. ಆದ್ದರಿಂದ ಸತ್ಯ ಮತ್ತು ವಾಸ್ತವಿಕತೆಯನ್ನರಿಯಲು ಅಂತರ್ದೃಷ್ಟಿ ಮುಂತಾದ ಮಾರ್ಗಗಳನ್ನು ನಿರಾಕರಿಸದಿರೋಣ. ವಿಜ್ಞಾನದ ಉದ್ದೇಶಗಳಿಗೆ ಸಹ ಅವು ಅತ್ಯವಶ್ಯಕ. ಆದರೆ ನಮ್ಮ ನಿಲುವು ಮಾತ್ರ ವಿಚಾರದ ಒರೆಗೆ ಹಚ್ಚಿದ ಅದಕ್ಕೂ ಮಿಗಿಲಾಗಿ ಪ್ರಯೋಗ ಮತ್ತು ಅನುಷ್ಠಾನದ ಒರೆಗೆ ಸಿಲುಕುವ ನಿಕರವಾದ ವಾಸ್ತವಿಕ ಜ್ಞಾನದಲ್ಲಿರಬೇಕು ; ಮತ್ತು ಜೀವನದ ದೈನಂದಿನ ಸಮಸ್ಯೆಗಳಿಗೆ ಸಂಬಂಧಪಡದ ಮತ್ತು ಸ್ತ್ರೀಪುರುಷರ ಅವಶ್ಯಕತೆಗಳಿಗೆ ದೂರವಾದ ಭಾವನಾ ಸಮುದ್ರದ ಅಲೆಗಳಿಗೆ ಸಿಕ್ಕದಂತೆ ಎಚ್ಚರದಿಂದ ಇರಬೇಕು. ಸಜೀವ ತತ್ವಶಾಸ್ತ್ರ ಪ್ರಸ್ತುತ ಸಮಸ್ಯೆಗಳಿಗೆ ಉತ್ತರಕೊಡಬೇಕು.

ನಮ್ಮ ಪೂರ್ವಿಕರು ಮತ್ತು ಮಧ್ಯಯುಗದ ಸ್ತ್ರೀ ಪುರುಷರು ಅವರವರ ಕಾಲದ ಸೆರೆಯಾಳುಗಳಾದಂತೆ, ಪ್ರಾಯಶಃ ಸಾಧನೆಗಳಲ್ಲಿ ಹೆಮ್ಮೆಪಡುವ ಆಧುನಿಕ ಯುಗದ ನಾವೂ ನಮ್ಮ ಕಾಲದ ಸೆರೆಯಾಳುಗಳಾಗಿದ್ದೇವೆ. ನಮಗಿಂತ ಮೊದಲು ನಮ್ಮ ಪೂರ್ವಿಕರು ಯೋಚಿಸುತ್ತಿದ್ದಂತೆ ಸತ್ಯಾನ್ವೇಷಣೆಯಲ್ಲಿ ನಮ್ಮ ದೃಷ್ಟಿಕೋಣ, ನಮ್ಮ ಮಾರ್ಗವೇ ಸರಿ ಎಂದು ನಾವೂ ಮೋಸಹೋಗಬಹುದು. ಆ ಸೆರೆಯಿಂದ ತಪ್ಪಿಸಿಕೊಳ್ಳಲು ಅಥವ ಅದು ಒಂದು ಭ್ರಮೆಯಾದರೆ ಆ ಭ್ರಮೆಯನ್ನು ಬಿಡಲು ಸಾಧ್ಯವಿಲ್ಲ.

ಆದರೂ ಸುದೀರ್ಘವಾದ ಇತಿಹಾಸ ಪರಂಪರೆಯಲ್ಲಿ ಎಂದೂ ಆಗದಷ್ಟು ಕ್ರಾಂತಿಕಾರಕ ಪರಿಣಾಮವನ್ನು ಮಾಡಿ ವೈಜ್ಞಾನಿಕರೀತಿ ಮತ್ತು ದೃಷ್ಟಿ ಮಾನವ ಜೀವನವನ್ನು ಪರಿವರ್ತನಗೊಳಿಸಿದೆ ಎಂದು ನನ್ನ ನಂಬುಗೆ ಮತ್ತು ಇದುವರೆಗೆ ನಾವು ಯಾವುದನ್ನು ಅಗೋಚರ, ಅಜ್ಞೇಯವೆಂದು ಭಾವಿಸಿದ್ದೆವೊ ಅದರ ಹೆಬ್ಬಾಗಿಲ ಹತ್ತಿರಕ್ಕೆ ಒಯ್ಯುವ ಮುನ್ನೋಟದ ಮತ್ತು ಇನ್ನೂ ಹೆಚ್ಚಿನ ಕ್ರಾಂತಿಕಾರಕ ಬದಲಾವಣೆಗೆ ಹೊಸಮಾರ್ಗಗಳನ್ನು ತೋರಿಸಿ ಬಾಗಿಲು ತೆರೆದುಕೊಟ್ಟಿದೆ. ವಿಜ್ಞಾನದ ಪರಿಕರ್ಮದ ಸಾಧನೆಗಳು ಸ್ವತಸ್ಸಿದ್ಧವಿವೆ ; ಅಭಾವದ ಆರ್ಥಿಕಸ್ಥಿತಿಯನ್ನು ಸಮೃದ್ಧಿಸ್ಥಿತಿಗೆ ಪರಿವರ್ತಿಸುವ ಶಕ್ತಿಯೂ ವಿದಿತವಾಗಿದೆ ; ಇದುವರೆಗೂ ತತ್ವಶಾಸ್ತ್ರಕ್ಕೆ ಮೀಸಲಾಗಿದ್ದ ಅನೇಕ ಸಮಸ್ಯೆಗಳ ಮೇಲಿನ ವಿಜ್ಞಾನದ ದಾಳಿಯೂ ಹೆಚ್ಚು ಪರಿಣಾಮಕಾರಿಯಾಗುತ್ತಿದೆ. ದೇಶ–ಕಾಲ ಮತ್ತು ಕ್ವಾನ್‌ಟಂ ಸಿದ್ಧಾಂತವು ವಾಸ್ತವಿಕ ಪ್ರಪಂಚದ ಚಿತ್ರವನ್ನೇ ವ್ಯತ್ಯಾಸಮಾಡಿದೆ. ವಸ್ತುಸ್ವಭಾವ, ಅಣುರಚನೆ, ಮೂಲಭೂತ ವಸ್ತುಗಳ ಪರಿವರ್ತನೆ, ಬೆಳಕು ಮತ್ತು ವಿದ್ಯುಚ್ಛಕ್ತಿಗಳ ಪರಸ್ಪರ ಪರಿವರ್ತನ ವಿಷಯಗಳ ಮೇಲಿನ ಇತ್ತೀಚಿನ ಸಂಶೋಧನೆಗಳು ಮಾನವನ ಜ್ಞಾನಭಂಡಾರವನ್ನು ಇನ್ನೂ ಮುಂದೊಯ್ದಿವೆ. ಪ್ರಕೃತಿ ತನ್ನಿಂದ ದೂರವಾದ ಒಂದು ಭಿನ್ನವಸ್ತು ಎಂದು ಈಗ ಮನುಷ್ಯ ಭಾವಿಸುತ್ತಿಲ್ಲ. ಮನುಷ್ಯನ ಪ್ರಗತಿ ಪ್ರಕೃತಿಯ ಲಯಬದ್ಧ ಶಕ್ತಿಯ ಒಂದು ಅಂಗವಿರುವಂತೆ ಕಾಣುತ್ತಿದೆ.

ವಿಜ್ಞಾನದ ಮುನ್ನಡೆಯಿಂದ ಉದ್ಭವಿಸಿದ ಈ ವಿಚಾರ ವಿಪ್ಲವದಿಂದ ವಿಜ್ಞಾನಿಗಳು ಅಧ್ಯಾತ್ಮ ಪ್ರಪಂಚಕ್ಕೆ ಅತಿ ಸಮೀಪದ ಇನ್ನೊಂದು ನೂತನ ಪ್ರಪಂಚದೊಳಕ್ಕೆ ಪ್ರವೇಶಿಸಿದ್ದಾರೆ. ಅವರು ಭಿನ್ನವಾದ, ಅನೇಕವೇಳೆ ಪರಸ್ಪರ ವಿರುದ್ಧವಾದ ತೀರ್ಮಾನಕ್ಕೆ ಬರುತ್ತಾರೆ. ಇನ್ನು ಕೆಲವರು ಇದರಲ್ಲಿ ಆಕಸ್ಮಿಕಕ್ಕೆ ವಿರೋಧವಾದ ಒಂದು ಏಕತೆಯನ್ನು ಕಾಣುತ್ತಾರೆ. ಇನ್ನೂ ಕೆಲವರು, ಉದಾ :— ಬರ್ಟ್ರಂಡ್ ರಸ್ಸೆಲ್, 'ಸಾಂಪ್ರದಾಯಿಕ ತಾತ್ವಿಕರು ಪಾರ್ಮನಿಡೀಸ್ ಕಾಲದಿಂದಲೂ ಪ್ರಪಂಚ ಅಖಂಡ ಎಂದು ನಂಬಿದ್ದಾರೆ. ನನ್ನ ಅತ್ಯಂತಪ್ರಧಾನ ನಂಬಿಕೆಯಲ್ಲಿ ಅದು ಶುದ್ಧ ಅವಿವೇಕ' ಎಂದುಹೇಳುತ್ತಾರೆ. ಅಥವ 'ಮನುಷ್ಯ ತಾನು ಸಾಧಿಸುವ ಪರಿಣಾಮವೇನು ಎಂದ ಪೂರ್ವದೃಷ್ಟಿಯಿಲ್ಲದ ಕಾರಣಗಳ ಫಲ; ಅವನ ಹುಟ್ಟು, ಬೆಳವಣಿಗೆ, ಆಶೆ, ಭಯ, ಪ್ರೇಮ, ನಂಬುಗೆ ಎಲ್ಲವೂ ಅಣುಗಳ ಆಕಸ್ಮಿಕ ಸಂಕೀರ್ಣದ ಫಲ' ಎನ್ನುತ್ತಾರೆ. ಆದಾಗ್ಯೂ ಭೌತಶಾಸ್ತ್ರದ ಇತ್ತೀಚಿನ ಸಂಶೋಧನೆಗಳಿಂದ ಪ್ರಕೃತಿಯಲ್ಲಿ ಮೂಲತಃ ಒಂದು ಏಕತ್ವವಿದೆ ಎಂಬಭಾವನೆಗೆ ಸಮರ್ಥನೆ ದೊರೆಯುತ್ತಿದೆ. "ಎಲ್ಲ ವಸ್ತುಗಳು ಒಂದೇ ಮೂಲವಸ್ತುವಿನಿಂದ ಆಗಿರತಕ್ಕವು ಎಂಬ ನಂಬಿಕೆ ಆಲೋಚನೆಯಷ್ಟೆ ಪುರಾತನವಾದುದು. ಆದರೆ ಪ್ರಕೃತಿಯ ಏಕತ್ವವನ್ನು ಬುಡವಿಲ್ಲದ ಸಿದ್ಧಾಂತ ಅಥವ ಸಾಧ್ಯವಿಲ್ಲದ ಅಭಿಲಾಷೆ ಎಂದಲ್ಲದೆ ನಮಗೆ ತಿಳಿದಿರತಕ್ಕಮಟ್ಟಿಗೆ ತೀಕ್ಷ್ಣವೂ, ಸ್ಪಷ್ಟವೂ ಆದ ಸಾಕ್ಷ್ಯದ ಆಧಾರವುಳ್ಳ ವಿಜ್ಞಾನದ ತತ್ವ ಎಂದು ನೋಡಲು ಶಕ್ತವಾದ ತಲೆಮಾರೆಂದರೆ ಇತಿಹಾಸದಲ್ಲೆಲ್ಲ ಮೊಟ್ಟಮೊದಲನೆಯದು ನಮ್ಮದು." ಎಂದು ಕಾರ್ಲ್ ಕೆ ಡ್ಯಾರೊ * ಹೇಳಿದ್ದಾನೆ.

ಏಷ್ಯ ಮತ್ತು ಯೂರೋಪ್‌ಗಳ ಈ ನಂಬಿಕೆ ಬಹು ಪುರಾತನವಾದುದಾದರೂ ವಿಜ್ಞಾನದ ಇತ್ತೀಚಿನ ಸಿದ್ಧಾಂತಗಳ ಮತ್ತು ಅದ್ವೈತ ವೇದಾಂತದ ತಳಹದಿಯಾದ ಮೂಲ ತತ್ವಗಳ ಹೋಲಿಕೆ ಆಶ್ಚರ್ಯವನ್ನುಂಟುಮಾಡುತ್ತದೆ. ವಿಶ್ವವೆಲ್ಲ ಒಂದು ಮೂಲವಸ್ತುವಿನಿಂದ ಆದುದು, ಆ ಮೂಲವಸ್ತುವಿನ ರೂಪ ಸದಾ ಬದಲಾವಣೆಯಾಗುತ್ತಿರುತ್ತ ಇರುತ್ತದೆ, ಆದರೆ ಅದರ ಶಕ್ತಿಯ ಮೊತ್ತ ಎಂದೂ ವ್ಯತ್ಯಾಸಗೊಳ್ಳುವುದಿಲ್ಲ, ಇವೇ ಆ ತತ್ವಗಳು: ಅಲ್ಲದೆ ವಸ್ತು ವಿವರಣೆಯನ್ನು ಅವುಗಳ ಸ್ವಭಾವದಲ್ಲಿಯೇ ಕಾಣಬೇಕು. ಮತ್ತು ವಿಶ್ವದಲ್ಲಾಗುವ ವ್ಯಾಪಾರಗಳ ವಿವರಣೆಗೆ ಬಾಹ್ಯ ಜೀವನಗಳು ಅಥವ ಅಸ್ತಿತ್ವಗಳು ಅನವಶ್ಯಕ. ಆದ್ದರಿಂದ ವಿಶ್ವವು ಸ್ವಯಂ ವಿಕಸಿತ.

ಈ ಅವ್ಯಕ್ತ ಮೀಮಾಂಸೆ ನಮ್ಮನ್ನೆಲ್ಲಿಗೆ ಒಯ್ಯುತ್ತದೆ ಎಂಬುದು ವಿಜ್ಞಾನ ದೃಷ್ಟಿಗೆ ಬಹುಮುಖ್ಯವಲ್ಲ. ಏಕೆಂದರೆ ಅದು ತನ್ನದೇ ಆದ ನಿಕರವಾದ ಪ್ರತ್ಯಕ್ಷ ಪ್ರಮಾಣದ ಪ್ರಯೋಗಮಾರ್ಗದಿಂದ ಗೊತ್ತಾದ ಜ್ಞಾನದ ಮೇರೆಯನ್ನು ವಿಶಾಲಗೊಳಿಸುತ್ತ, ಆ ಕಾರ್ಯದಲ್ಲಿ ಮಾನವ ಜೀವನವನ್ನು ಮಾರ್ಪಡಿಸುತ್ತ ನೂರು ಮಾರ್ಗಗಳಲ್ಲಿ ಮುಂದುವರಿಯುತ್ತದೆ. ಅತಿ ಮುಖ್ಯ ರಹಸ್ಯಗಳ ಭೇದನ ವಿಜ್ಞಾನಕ್ಕೆ ಅನತಿ ದೂರದಲ್ಲಿರಬಹುದು, ಆದರೂ ಅವು ಹಸ್ತಗತವಾಗದಿರಬಹುದು. ಆದರೂ ವಿಜ್ಞಾನ ತನ್ನ ನಿಯೋಜಿತ ಮಾರ್ಗದಲ್ಲಿ ನಡೆದೇ ನಡೆಯುತ್ತದೆ; ಏಕೆಂದರೆ ಅದರ ಪಯಣ ಅಂತ್ಯವರಿಯದ್ದು. ಸಧ್ಯದಲ್ಲಿ ತತ್ವಶಾಸ್ತ್ರದ 'ಏಕೆ' ಎಂಬುದನ್ನು ಮರೆತು 'ಹೇಗೆ' ಎಂದು ಪ್ರಶ್ನಿಸುತ್ತ ಮುಂದುವರಿಯುತ್ತದೆ. ಅದನ್ನು ಕಂಡು ಹಿಡಿದಂತೆ ಜೀವನಕ್ಕೆ ಹೆಚ್ಚು ಪೂರ್ಣತೆಯನ್ನೂ ಅರ್ಥವನ್ನೂ ಕೊಡುತ್ತದೆ. ಪ್ರಾಯಶಃ 'ಏಕೆ' ಎಂಬುದಕ್ಕೆ ಉತ್ತರ ಹೇಳುವಷ್ಟು ಸ್ವಲ್ಪ ಹತ್ತಿರವಾದರೂ ಕರೆದೊಯ್ಯುತ್ತದೆ.

ಪ್ರಾಯಶಃ ಅಡ್ಡಗೋಡೆಯನ್ನು ನಾವು ದಾಟಲಾರೆವು. ರಹಸ್ಯ ರಹಸ್ಯವಾಗಿಯೇ ಉಳಿಯುತ್ತದೆ. ಎಷ್ಟು ವ್ಯತ್ಯಾಸಹೊಂದಿದರೂ, ಜೀವನ ಒಂದಕ್ಕೊಂದಕ್ಕೆ ಸರಿಬೀಳದ, ಪರಸ್ಪರ ವಿರೋಧ ಪ್ರಕೃತಿಯ ವಿಚಿತ್ರ ಸಂಘಟನೆಯಾಗಿ, ನಿರಂತರ ಹೋರಾಟಗಳ ರಂಗವಾಗಿ, ಗುಣಾವಗುಣಗಳ ಕಂತೆಯಾಗಿಯೇ ಉಳಿಯುತ್ತದೆ.

ಅಥವಾ ಧಾರ್ಮಿಕ ಕಟ್ಟು ಮತ್ತು ನೈತಿಕ ಭಾವನೆಗಳಿಂದ ದೂರವಾದ ವಿಜ್ಞಾನದ ಮುನ್ನ

* Karl K. Darrow : The Renaissance of physics (New York, 1936), P. 301.

ಡೆಯೇ, ಇತರರ ಮೇಲೆ ಸ್ವಾಮ್ಯ ಪಡೆಯಬೇಕೆಂಬ ದುರಾಶೆಗೊಳಗಾದ ದುಷ್ಟ, ಸ್ವಾರ್ಥಪರ ಮನುಷ್ಯರ ಕೈಯಲ್ಲಿ ತಾನೇ ಸಿದ್ಧಗೊಳಿಸಿದ ಭೀಕರ ವಿನಾಶಕಾರಕ ಪರಿಕರಣಗಳ ಮತ್ತು ಅಪಾರ ಶಕ್ತಿಯ ಕೇಂದ್ರೀಕರಣಕ್ಕೆ ಸಾಧಕವಾಗಿ, ತನ್ನ ನಾಶಕ್ಕೆ ತಾನೇ ಕಾರಣವಾಗುತ್ತದೆ. ಅದೇ ರೀತಿ ನಡೆಯುತ್ತಿರುವುದನ್ನು ಕಣ್ಣಾರ ನೋಡುತ್ತಿದೇವೆ. ಈ ಯುದ್ಧದ ಹಿನ್ನೆಲೆಯಲ್ಲಿ ಮಾನವನ ಆತ್ಮದ ಆಂತರಿಕ ಹೋರಾಟವಿದೆ.

ಮಾನವನ ಈ ಆತ್ಮ ಎಷ್ಟು ಆಶ್ಚರ್ಯಕರ. ಅಸಂಖ್ಯಾತ ದೌರ್ಬಲ್ಯಗಳಿದ್ದರೂ ಮನುಷ್ಯ ಯುಗಾಂತರದಿಂದ ಒಂದು ಆದರ್ಶಕ್ಕಾಗಿ, ಸತ್ಯಕ್ಕಾಗಿ, ಧರ್ಮಕ್ಕಾಗಿ, ತನ್ನ ದೇಶ ಮತ್ತು ಮಾನಕ್ಕಾಗಿ, ತನ್ನ ಸರ್ವಸ್ವವನ್ನು ತನ್ನ ಜೀವನವನ್ನೆ ಬಲಿದಾನಮಾಡಿದಾನೆ. ಆ ಆದರ್ಶ ಬೇರೆಯಾಗಬಹುದು, ಆದರೆ ಆ ಆತ್ಮಯಜ್ಞದ ಶಕ್ತಿ ಮಾತ್ರ ಬೆಳೆಯುತ್ತಿದೆ. ಅದೇ ಕಾರಣದಿಂದ ಮಾನವನ ಲೋಪಗಳು ಕ್ಷಮಾರ್ಹ ಮತ್ತು ಅವನಿಗಾಗಿ ನಿರಾಸೆಗೊಳ್ಳುವುದೂ ಸಾಧ್ಯವಿಲ್ಲ. ಅನಾಹುತದ ಮಧ್ಯೆ ಇದ್ದರೂ ತನ್ನ ಘನತೆಯನ್ನು ಕಳೆದುಕೊಂಡಿಲ್ಲ, ತಾನು ಬೆಲೆಕೊಟ್ಟ ವಸ್ತುಗಳಲ್ಲಿ ನಂಬಿಕೆಯನ್ನೂ ಕಳೆದುಕೊಂಡಿಲ್ಲ. ಪ್ರಕೃತಿಯ ಅದ್ಭುತ ಶಕ್ತಿಗಳ ಆಟದ ಬೊಂಬೆಯಾಗಿದ್ದರೂ, ಅನಂತ ವಿಶ್ವದಲ್ಲಿ ಒಂದು ಧೂಳಿನ ಕಣವಾಗಿದ್ದರೂ, ಭೌತಿಕ ಶಕ್ತಿಗಳನ್ನು ಧೈರ್ಯದಿಂದ ಅಣಕಿಸಿದ್ದಾನೆ. ಕ್ರಾಂತಿಯ ಮೆಟ್ಟಲಾದ ತನ್ನ ಮನಶ್ಶಕ್ತಿಯಿಂದ ಅವುಗಳನ್ನು ಜೈಸಲು ಪ್ರಯತ್ನಪಟ್ಟಿದ್ದಾನೆ. ದೇವರುಗಳು ಯಾರೇ ಇರಲಿ, ಮನುಷ್ಯನಲ್ಲಿ ಪೈಶಾಚಿಕ ಅಂಶವೊಂದಿರುವಂತೆ ಅವನಲ್ಲಿ ದೈವಾಂಶವೂ ಇದೆ.

ಭವಿಷ್ಯ ಕತ್ತಲುಗವಿದಿದೆ, ಅನಿಶ್ಚಿತವಿದೆ. ಆದರೆ ಅದಕ್ಕೆ ಕರೆದೊಯ್ಯುವ ದಾರಿಯನ್ನು ಸ್ವಲ್ಪ ದೂರ ಕಾಣಬಹುದು. ಎಷ್ಟೋ ಗಂಡಾಂತರಗಳಿಂದ ಪಾರಾದ ಮನುಷ್ಯ ಆತ್ಮವನ್ನು ನಾಶಮಾಡುವ ಯಾವ ವಸ್ತುವೂ ಇಲ್ಲವೆಂದು ಮನಸ್ಸಿನಲ್ಲಿಟ್ಟುಕೊಂಡು ಭದ್ರವಾಗಿ ಕಾಲೂರಿ ನಡೆಯಲೂಬಹುದು. ಜೀವನದಲ್ಲಿ ಎಷ್ಟೇ ಸಂಕಟವಿದ್ದರೂ ಸಂತೋಷವಿದೆ ಸೌಂದರ್ಯವಿದೆ ಎಂದು ಜ್ಞಾಪಕದಲ್ಲಿಟ್ಟುಕೊಂಡು, ಪ್ರಕೃತಿಯ ಮನಮೋಹಕವನಗಳಲ್ಲಿ ವಿಹರಿಸುವುದು ಹೇಗೆಂದು ಗೊತ್ತಿದ್ದರೆ ಸದಾ ವಿಹರಿಸಲೂ ಬಹುದು.

ಮನುಜ ಪ್ರಯತ್ನದ ಫಲವಿನ್ನೇನು, ಸುಂದರ ಮಹಿಮೆಯ ಉನ್ನತ ಕರುಣೆಯ
ದೈವ ಸಹಾಯವು ತಾನಿನ್ನೇನು, ನಿಲ್ಪುದು ಭಯದಿಂ ಬಿಡುಗಡೆ ಹೊಂದಿ, ಕಾಯ್ವುದು ಜೀವಿಪುದು;
ದ್ವೇಷವನ್ನು ಮೀರಿ ಅಭಯ ಹಸ್ತವನೆತ್ತಿ ಹಿಡಿವುದು ;
ಒಲುಮೆಯ ಬಾಳ್ವೆಯೆ ಚಿರ ಸೌಂದರ್ಯವದೆಂದು ;–
ವಿವೇಕವೆಂಬುದು ತಾನಿನ್ನೇನು ?

ಯುರಿಪಿಡೀಸನ ‘ ಬ್ಯಾಕಿ ’ಯ ಮೇಳಗೀತ.

## ೭. ಗತಕಾಲದ ಹೊರೆ

ನನ್ನ ಸೆರೆಮನೆ ವಾಸದ ಇಪ್ಪತ್ತೊಂದನೆಯ ತಿಂಗಳೂ ಕಳೆಯುತ್ತಿದೆ. ಚಂದ್ರನು ಏರುತ್ತ ಇಳಿಯುತ್ತ ಎರಡು ವರ್ಷವೂ ಕಳೆದು ಹೋಗುತ್ತದೆ. ನನಗೆ ವಯಸ್ಸಾಗುತ್ತಿದೆ ಎಂದು ಜ್ಞಾಪಕ ಕೊಡಲು ಇನ್ನೊಂದು ಹುಟ್ಟಿದ ದಿನವೂ ಬರುತ್ತದೆ. ಈಗಾಗಲೇ ನಾಲ್ಕು ಜನ್ಮದಿನಗಳು ಸೆರೆಮನೆಯಲ್ಲೇ ಕಳೆದಿವೆ, ಇಲ್ಲಿ ಮತ್ತು ಡೆಹ್ರಡೂನ್‌ನಲ್ಲಿ ; ಇನ್ನೂ ಅನೇಕ ನನ್ನ ಹಿಂದಿನ ಸೆರೆಮನೆ ವಾಸಗಳಲ್ಲಿ ಕಳೆದವು ಎಷ್ಟಾಗಿವೆಯೋ ಲೆಕ್ಕವೂ ಇಲ್ಲ.

ಈ ಎಲ್ಲ ಕಾಲದಲ್ಲಿ ನನಗೆ ಬರೆಯಬೇಕೆಂಬ ಆಶೆ ಮತ್ತು ಉತ್ಸಾಹ ಜೊತೆಯಲ್ಲಿ ಬೇಡವೆಂಬ ಸಂಕೋಚ. ನಾನು ನನ್ನ ಹಿಂದಿನ ಸೆರೆಮನೆ ವಾಸಗಳಲ್ಲಿ ಮಾಡಿದಂತೆ ಈಗಲೂ ಒಂದು ಗ್ರಂಥ ಬರೆಯುತ್ತೇನೆಂದು ನನ್ನ ಅನೇಕ ಜನ ಸ್ನೇಹಿತರು ಊಹಿಸಿದರು. ಅದು ಒಂದು ಎರಡನೆಯ ಸ್ವಭಾವವಾಗಿ ಹೋಗಿತ್ತು.

ಆದರೂ ನಾನು ಬರೆಯಲಿಲ್ಲ. ಯಾವ ಒಂದು ವಿಶಿಷ್ಟ ಅರ್ಥವಿಲ್ಲದ ಗ್ರಂಥವನ್ನು ಸುಮ್ಮನೆ ಬರೆದೊಗೆಯಲು ಮನಸ್ಸು ಒಪ್ಪಲಿಲ್ಲ. ಬರೆಯುವುದೇನೋ ಸುಲಭವಿತ್ತು, ಆದರೆ ಏನಾದರೂ ಅರ್ಥಗರ್ಭಿತ ಪರಿಣಾಮಕಾರಿಯಾದ ಬರೆವಣಿಗೆ ಮತ್ತು ನಾನು ಸೆರೆಮನೆಯಲ್ಲಿ ಹಸ್ತಪ್ರತಿಯನ್ನಿಟ್ಟುಕೊಂಡು ಕೊಳೆಯುತ್ತ ಕುಳಿತು ಪ್ರಪಂಚವೇ ಬದಲಾಯಿಸುತ್ತ ಹೋದರೂ ಹಳೆತಾಗದ ಬರೆವಣಿಗೆ ಬೇರೆ ವಿಷಯ. ನಾನು ಬರೆಯುವುದು ಇಂದು ನಾಳೆಗಳಿಗಲ್ಲ, ಪ್ರಾಯಶಃ ಬಹುದೂರದ ಅವ್ಯಕ್ತ ಭವಿಷ್ಯತ್ತಿಗೆ. ಹಾಗಾದರೆ ಯಾರಿಗೆ ಬರೆಯುವುದು ಮತ್ತು ಯಾವ ಕಾಲಕ್ಕಾಗಿ? ಪ್ರಾಯಶಃ ನಾನು ಬರೆಯುವುದು ಬೆಳಕನ್ನೇ ಕಾಣದಿರಬಹುದು. ಏಕೆಂದರೆ ಮುಗಿದ ಯುದ್ಧದ ವರ್ಷಗಳಿಗಿಂತ ನಾನು ಸೆರೆಮನೆಯಲ್ಲಿ ಕಳೆಯುವ ವರ್ಷಗಳಲ್ಲಿ ಇನ್ನೂ ಮಹದ್ವಿಪ್ಲವಗಳನ್ನು ಕಾಣಬಹುದು. ಇಂಡಿಯಾ ದೇಶವೇ ಒಂದು ರಂಗಭೂಮಿಯಾಗಬಹುದು ಮತ್ತು ದೇಶದಲ್ಲಿ ಅಂತಃಕಲಹಗಳು ಹುಟ್ಟಬಹುದು.

ಈ ಎಲ್ಲ ಸನ್ನಿವೇಶಗಳಿಂದ ನಾವು ಪಾರಾದರೂ, ಇಂದಿನ ಸಮಸ್ಯೆಗಳು ಸತ್ತು ಮಣ್ಣುಗೂಡಿ ಹೊಸ ಸಮಸ್ಯೆಗಳೆದ್ದ ಒಂದು ಭವಿಷ್ಯ ಕಾಲಕ್ಕೆ ಬರೆಯುವದಂತೂ ಅತಿ ಸಾಹಸದ ಕೆಲಸ. ಈ ಪ್ರಪಂಚ ಯುದ್ಧವನ್ನು ಒಂದು ದೊಡ್ಡ, ಮಹತ್ಪ್ರಮಾಣದ ಯುದ್ಧ ಎಂದು ಮಾತ್ರ ಭಾವಿಸಲಾರೆ. ಅದು ಆರಂಭವಾದಂದಿನಿಂದ ಅಥವಾ ಅದಕ್ಕೂ ಮುಂಚೆಯೆ, ಅಸಾಧ್ಯವಾದ ಕ್ರಾಂತಿಕಾರಕ ಬದಲಾವಣೆಗಳಾಗುತ್ತವೆ, ಒಳ್ಳೆಯದಕ್ಕೋ ಕೆಟ್ಟದಕ್ಕೋ ಒಂದು ನೂತನ ಪ್ರಪಂಚ ಸೃಷ್ಟಿಯಾಗುತ್ತದೆ ಎಂಬ ಮುಂಬರಿವು ನನಗಿತ್ತು. ಹಾಗಾದರೆ ಕಣ್ಮರೆಯಾದ ಗತಕಾಲದ ವಿಷಯದ ನನ್ನ ಅಲ್ಪ ಬರೆವಣಿಗೆಗೆ ಏನು ಬೆಲೆ?

ಈ ಎಲ್ಲ ಯೋಚನೆಗಳು ನನ್ನನ್ನು ಬಾಧಿಸಿ ಹಿಡಿಯುತ್ತಿದ್ದವು. ಆದರೆ ಅವುಗಳ ಹಿಂದೆ ನನ್ನ ಮನಸ್ಸಿನ ಅಂತರಾಳದಲ್ಲಿದ್ದ ಗಾಢಪ್ರಶ್ನೆಗಳಿಗೆ ಉತ್ತರ ಕಂಡುಹಿಡಿಯುವುದೂ ಕಷ್ಟವಿತ್ತು.

ಆರು ವರ್ಷಗಳಿಗೆ ಮುಂಚೆ ನನ್ನ ಆತ್ಮಕಥೆಯನ್ನು ಬರೆದ ಡೆಹ್ರಡೂನ್ ಸೆರೆಮನೆಯಲ್ಲಿ ನನ್ನ ಹಳೆಯ ಕೊಠಡಿಯಲ್ಲಿ ೧೯೪೦ ನೇ ಅಕ್ಟೋಬರ್‌ನಿಂದ ೧೯೪೧ನೇ ಡಿಸೆಂಬರ್‌ವರೆಗೆ ನನ್ನ ಹಿಂದಿನ ಸೆರೆಮನೆ ವಾಸ ಅನುಭವಿಸಿದಾಗಲೂ ಇದೇ ತೊಂದರೆ, ಯೋಚನೆಗಳು ತೋರಿದ್ದವು. ಹತ್ತು ತಿಂಗಳ ಕಾಲ ಬರೆಯಬೇಕೆಂಬ ಉತ್ಸಾಹವೇ ಬರಲಿಲ್ಲ. ನೆಲವನ್ನಗೆದು ಹೂತೋಟ ಬೆಳೆಸುವುದರಲ್ಲಿ, ಆಗಾಗ ಓದುವುದರಲ್ಲಿ ಕಾಲಕಳೆದೆ. ಕೊನೆಯಲ್ಲಿ ಬರೆದೂ ಬರೆದೆ. ನನ್ನ ಆತ್ಮಕಥೆಯ ಅನುಬಂಧವಾಗಿರಬೇಕೆಂದು ಬರೆದೆ. ಕೆಲವು ದಿನ ಎಡೆಬಿಡದೆ ಬಹುವೇಗದಿಂದ ಬರೆದೆ, ಆದರೆ ಅದು ಮುಗಿಯುವುದರ ಒಳಗೆ ನನ್ನ ನಾಲ್ಕು ವರ್ಷಗಳ ಶಿಕ್ಷೆ ಮುಗಿಯುವ ಅತಿಪೂರ್ವದಲ್ಲಿಯೇ ನನ್ನ ಬಿಡುಗಡೆಯಾಯಿತು.

ನಾನು ಅದನ್ನು ಮುಗಿಸದಿದ್ದುದೇ ಒಳ್ಳೆಯದಾಯಿತು. ಇಲ್ಲದಿದ್ದರೆ ಯಾರಿಗಾದರೂ ಪ್ರಕಟನಕಾರನಿಗೆ ಕಳುಹಿಸಬೇಕಿತ್ತು. ಈಗ ನೋಡಿದರೆ ಅದರ ಅಲ್ಪಬೆಲೆ ಗೊತ್ತಾಗುತ್ತದೆ; ಎಷ್ಟು ಸ್ವಾರಸ್ಯವಿಲ್ಲದ್ದು, ಹಳಸಿದ್ದು ಎಂದು ಗೊತ್ತಾಗುತ್ತದೆ. ಅದರಲ್ಲಿ ಬರೆದ ಘಟನೆಗಳಿಗೆ ಈಗ ಎಲ್ಲ ಬೆಲೆಯೂ ಹೋಗಿದೆ. ಜ್ವಾಲಾಮುಖಿಯ ಸ್ಫೋಟನದಿಂದ ಉದ್ಭವಿಸಿದ ಅಗ್ನಿಪ್ರವಾಹದಿಂದ ಹೂತುಹೋದ ಮರೆತ ಪಳೆಯುಳಿಕೆಗಳಾಗಿವೆ. ಈಗ ನನಗೆ ಅವುಗಳಲ್ಲಿ ಯಾವ ಆಸಕ್ತಿಯೂ ಇಲ್ಲ. ಈಗ ನನ್ನ ಮನಸ್ಸಿನಲ್ಲಿ ಉಳಿದಿರುವುದು ನನ್ನ ಮೇಲೆ ಪರಿಣಾಮಮಾಡಿದ ವೈಯಕ್ತಿಕ ಅನುಭವಗಳು, ಕೆಲವು ವ್ಯಕ್ತಿಗಳ ಮತ್ತು ಘಟನೆಗಳ ಸಂಬಂಧಗಳು, ಅಪಾರ ವೈವಿಧ್ಯವಿದ್ದರೂ ಆಶ್ಚರ್ಯಕರವಾದ ಏಕತೆಯುಳ್ಳ ಇಂಡಿಯದ ಜನಕೋಟಿಯ ಜನಸಮುದಾಯಗಳ ಬಾಂಧವ್ಯ, ಕೆಲವು ಮನೋಸಾಹಸಗಳು, ಅವುಗಳಲ್ಲಿ ಜಯ ದೊರೆತಾಗ ಅಲೆಅಲೆಯಾಗಿ ಬಂದ ದುಃಖ, ಸಮಾಧಾನ, ಸಂತೋಷಗಳು, ಕಾರ್ಯಸಮಯದ ಒಂದು ಉಲ್ಲಾಸ, ಇವುಗಳ ವಿಷಯ ಎಷ್ಟಾದರೂ ಬರೆಯಬಹುದು. ನಮ್ಮ ಆಂತರಿಕ ಜೀವನ, ಭಾವನೆಗಳು, ಯೋಚನೆಗಳ ವಿಷಯದಲ್ಲಿ ಇತರರಿಗೆ ತಿಳಿಸಲಾಗದ ಅಥವ ತಿಳಿಸಬಾರದ ಒಂದು ಆತ್ಮೀಯತೆ ಇದೆ. ಆದರೂ ವೈಯಕ್ತಿಕ ಅಥವ ವ್ಯಕ್ತಿರಹಿತ ಅನುಭವಗಳು ಅತಿ ಮುಖ್ಯ. ವ್ಯಕ್ತಿಯಮೇಲೆ ಅಗಾಧ ಪರಿಣಾಮಮಾಡಿ, ತಿದ್ದುವುದಲ್ಲದೆ ತನ್ನ ಜೀವನ, ದೇಶ, ಮತ್ತು ಇತರ ಜನಾಂಗಗಳಿಗೆ ಆತನ ಪ್ರತಿಕ್ರಿಯೆಯನ್ನೆ ಬದಲಾಯಿಸುತ್ತದೆ.

ಇತರ ಸೆರೆಮನೆಗಳಂತೆ ಇಲ್ಲಿಯೂ ಅಹಮದ್‌ನಗರ ಕೋಟೆಯಲ್ಲಿ ತೋಟದ ಕೆಲಸಕ್ಕೆ ತೊಡಗಿ ಸೂರ್ಯನ ತಾಪ ಹೆಚ್ಚು ಇದ್ದಾಗಲೂ ನೆಲವನ್ನು ಅಗಿಯುತ್ತ, ಹೂಗಿಡಗಳಿಗೆ ಪಾತಿಯನ್ನು ಮಾಡುತ್ತ ದಿನವೂ ಅನೇಕ ಗಂಟೆಗಳನ್ನು ಕಳೆಯುತ್ತಿದ್ದೆ. ನೆಲ ಬಹು ಬಿರುಸಾಗಿತ್ತು, ಕಲ್ಲು, ಹಿಂದಿನ ಕಟ್ಟಡಗಳ ಹಾಳು ಗೋಡೆಗಳು, ಪುರಾತನ ವಸ್ತುಗಳ ಅವಶೇಷಗಳಿಂದ ತುಂಬಿತ್ತು, ಕಾರಣ ಇದೊಂದು ಐತಿಹಾಸಿಕ ಸ್ಥಳ. ಪೂರ್ವಕಾಲದಲ್ಲಿ ಅನೇಕ ಯುದ್ಧಗಳ, ಅರಮನೆಯ ಒಳ ಸಂಚುಗಳ ಬೀಡು. ಆದರೆ ಭಾರತೀಯ ಇತಿಹಾಸದ ಪ್ರಕಾರ ಆ ಇತಿಹಾಸ ಬಹಳ ಹಳೆಯದಲ್ಲ. ಅಥವ ವಿಶಾಲ ವಸ್ತುವಿನ್ಯಾಸದಲ್ಲಿ ಅತಿ ಮುಖ್ಯವೂ ಅಲ್ಲ. ಆದರೆ ಒಂದು ವಿಷಯ ಮಾತ್ರ ಎದ್ದು ಕಾಣುತ್ತದೆ. ಅದನ್ನಾರೂ ಮರೆಯುವಂತಿಲ್ಲ; ಈ ಕೋಟೆಯನ್ನು ಕಾಪಾಡಿದ ಒಬ್ಬ ಸುಂದರ ಸ್ತ್ರೀ ಚಾಂದ್‌ಬೀಬಿಯ ಧೈರ್ಯ. ಕೈಲಿ ಕತ್ತಿಯನ್ನು ಸೆಳೆದು, ಸಾಮ್ರಾಟ್ ಅಕ್ಬರನ ಸೈನ್ಯಗಳನ್ನು ಎದುರಿಸಿದಾಕೆ. ಆಕೆಯ ಸೈನ್ಯದಲ್ಲಿದ್ದವನೇ ಒಬ್ಬ ಆಕೆಯನ್ನು ಕೊಲೆಮಾಡಿದ.

ಈ ದುರದೃಷ್ಟ ಭೂಮಿಯಲ್ಲಿ ಅಗಿಯುತ್ತ, ಹಳೆಯ ಗೋಡೆಗಳ ಭಾಗಗಳು, ಅರಮನೆಗಳ ಮುರುಕು ಗೋಪುರಗಳು ನೆಲಮಟ್ಟದಿಂದ ಕೆಳಗೆ ಭೂಮಿಯಲ್ಲಿ ಹೂತದ್ದನ್ನು ಕಂಡಿದ್ದೇವೆ. ಆಳವಾದ ಅಗೆತ, ಪ್ರಾಕ್ತನ ವಿಮರ್ಶನ ಅಧಿಕಾರಿಗಳಿಗೆ ಸರಿಬೀಳದ ಕಾರಣ, ಬಹಳ ಕೆಳಗೆ ಅಗೆಯಲಾಗಲಿಲ್ಲ. ಆ ರೀತಿ ಅಗೆಯಲು ಸಾಧನಗಳೂ ಇರಲಿಲ್ಲ. ಒಂದು ಸಲ ಒಂದು ಗೋಡೆಯ ಪಕ್ಕದಲ್ಲಿ ಕಲ್ಲಿನಲ್ಲಿ ಕಟ್ಟಿದ ಒಂದು ಸೊಗಸಾದ ಕಮಲವು ನಮ್ಮ ಕಣ್ಣಿಗೆ ಬಿತ್ತು. ಪ್ರಾಯಶಃ ಬಾಗಿಲಿನ ಮೇಲು ಚೌಕಟ್ಟಿರಬಹುದು.

ಡೆಹ್ರ ಡೂನ್ ಸೆರೆಮನೆಯಲ್ಲಿ ಇನ್ನೊಂದು ದುರದೃಷ್ಟ ಶೋಧನೆ ಮಾಡಿದೆ. ಮೂರು ವರ್ಷಗಳ ಕೆಳಗೆ ನನ್ನ ಸಣ್ಣ ಹಿತ್ತಲಿನಲ್ಲಿ ಅಗೆಯುತ್ತಿರುವಾಗ ಯಾವುದೋ ಕಾಲದ ಒಂದು ಆಶ್ಚರ್ಯಕರ ಅವಶೇಷ ನನಗೆ ದೊರೆಯಿತು. ನೆಲಮಟ್ಟದಿಂದ ಸ್ವಲ್ಪ ಆಳದಲ್ಲಿ ಎರಡು ಪುರಾತನ ಗುಡ್ಡೆಗಳು ಸಿಕ್ಕವು. ಎಲ್ಲರೂ ಕುತೂಹಲದಿಂದ ಪರೀಕ್ಷಿಸಿದೆವು. ಮೂವತ್ತು ನಲವತ್ತು ವರ್ಷಗಳ ಹಿಂದೆ ಅಲ್ಲಿ ಉಪಯೋಗದಲ್ಲಿದ್ದ ವಧಾಸ್ಥಾನದ ಭಾಗಗಳಾಗಿದ್ದವು. ಆದರೆ ಸೆರೆಮನೆಯಲ್ಲಿ ಗಲ್ಲಿಗೆ ಏರಿಸುವುದನ್ನು ನಿಲ್ಲಿಸಿ ಹಳೆಯ ಗಲ್ಲಿನ ಮರವನ್ನು ಗುರುತಿಲ್ಲದಂತೆ ಹೊರಗೆ ತೆಗೆದಿದ್ದರು. ನಾವು ಅದರ ತಳಪಾಯವನ್ನು ಕಂಡುಹಿಡಿದು, ಹೊರಗೆಡವಿದ್ದೆವು. ಆ ಕೆಲಸದಲ್ಲಿ ಸಹಾಯಮಾಡಿದ್ದ ನನ್ನ ಜೊತೆಯವರೆಲ್ಲ ಒಂದು ಅಪಶಕುನ ಹೋಯಿತೆಂದು ತೃಪ್ತಿಗೊಂಡರು.

ಈಗ ನನ್ನ ಗುದ್ದಲಿಯನ್ನು ಬದಿಗಿಟ್ಟು ಲೇಖನಿಯನ್ನು ತೆಗೆದುಕೊಂಡಿದ್ದೇನೆ. ಪ್ರಾಯಶಃ ಈಗ ನಾನು ಬರೆಯುವುದು ಸಹ ಡೆಹರಡೂ್ನಲ್ಲಿ ಅರ್ಧ ಬರೆದ ನನ್ನ ಹಸ್ತ ಪ್ರತಿಯ ಗತಿಯನ್ನೇ ಕಾಣಬಹುದು. ಕಾರ್ಯತಃ ಅನುಭವಿಸಲು ಸ್ವತಂತ್ರನಲ್ಲದಿರುವಾಗ ಪ್ರಸಕ್ತ ವಿಷಯ ಬರೆಯಲು ನನಗೆ ಸಾಧ್ಯವಿಲ್ಲ. ಪ್ರಸಕ್ತ ಕಾಲದ ಕಾರ್ಯಾವಶ್ಯಕತೆಯೇ ನನಗೆ ಸ್ಪಷ್ಟ ಹಿಡಿಸಬಹುದಾದದ್ದು. ಆಗ ಒಂದು ವಿಧವಾದ ಲೀಲೆಯಿಂದ ಸುಲಭವಾಗಿ ಬರೆಯಬಲ್ಲೆ. ಸೆರೆಮನೆಯಲ್ಲಿ ಅದು ಇಂದಿನ ಕೋಲಾಹಲವಾಗಿ ಅನುಭವಿಸಲಾಗದ ಅಥವ ನನ್ನ ಹಿಡಿತಕ್ಕೆ ನಿಲುಕದ ಯಾವುದೋ ಅಸ್ಪಷ್ಟ ಛಾಯೆಯಂತಿದೆ. ನಿಜವಾಗಿ ಹೇಳುವುದಾದರೆ ನಾನು ಪ್ರಸಕ್ತ ವಿಷಯವೆಂದು ಹೇಳಲಾರೆ. ಆದರೂ ಭೂತಕಾಲದ ನಿಶ್ಚಲ ಶಿಲಾಮೌನದಂತೆ ಗತ ವಿಷಯವೂ ಅಲ್ಲ.

ನಾನೊಬ್ಬ ಪ್ರವಾದಿಯ ವೇಷ ತಾಳಿ ಭವಿಷ್ಯ ವಿಷಯ ಬರೆಯಲೂ ಸಾಧ್ಯವಿಲ್ಲ. ನನ್ನ ಮನಸ್ಸಿನಲ್ಲಿ ಅನೇಕ ಬಾರಿ ಆ ವಿಷಯ ಯೋಚಿಸಿದ್ದೇನೆ. ಅದರ ಮೇಲ್ಮುಸುಕನ್ನು ಕಿತ್ತೊಗೆದು ನನ್ನದೇ ಆದ ಉಡುಗೆಯಲ್ಲಿ ಅಲಂಕರಿಸಲು ಯತ್ನಿಸಿದ್ದೇನೆ. ಆದರೆ ಅವೆಲ್ಲ ನಿರರ್ಥಕ ಕಲ್ಪನೆಗಳು; ಮತ್ತು ಭವಿಷ್ಯವು ಅನಿಶ್ಚಿತ, ಅಜ್ಞೇಯವಾಗಿಯೇ ಇದೆ. ಪುನಃ ನಮ್ಮ ಆಶೆಗಳನ್ನೆಲ್ಲ ಮಣ್ಣುಪಾಲು ಮಾಡಿ, ಮಾನವಕುಲದ ಕನಸುಗಳನ್ನೆಲ್ಲ ಒಡೆದುಹಾಕುವದಿಲ್ಲವೆಂಬ ಭರವಸೆಯಂತೂ ಇಲ್ಲವೇ ಇಲ್ಲ.

ಉಳಿದಿದೆ ಗತಕಾಲ: ಇತಿಹಾಸಕಾರನಂತೆ ಪಂಡಿತನಂತೆ ಹಿಂದಿನ ಘಟನೆಗಳ ವಿಷಯ

ಪ್ರೌಢರೀತಿಯಲ್ಲಿ ಬರೆಯಲಾರೆ. ಆ ಜ್ಞಾನವಾಗಲಿ, ಶಕ್ತಿಯಾಗಲಿ, ಶಿಕ್ಷಣವಾಗಲಿ ನನ್ನಲ್ಲಿ ಇಲ್ಲ. ಆ ಬಗೆಯ ಕೆಲಸಕ್ಕೆ ಮನಸ್ಸೂ ಇಲ್ಲ. ಪ್ರಸಕ್ತಕಾಲಕ್ಕೆ ಸಂಬಂಧಿಸಿದಾಗ ಗತಕಾಲವು ನನ್ನನ್ನು ಅದುಮುತ್ತದೆ; ಅದರ ಕಾವಿನಿಂದ ನನ್ನ ರಕ್ತವೂ ಕುದಿಯುತ್ತದೆ; ಮತ್ತು ಅದು ಸಜೀವ ಪ್ರಸಕ್ತ ಕಾಲದ ಇನ್ನೊಂದು ಮುಖವಾಗುತ್ತದೆ. ಹಾಗಾಗದೆ ಹೋದರೆ, ಗತಕಾಲ ಬೇಡದ ಜೀವಶೂನ್ಯ ಬರಡು ಮಾಗಿಯ ಕಾಲ. ಹಿಂದೆ ನಾನು ಬರೆದಂತೆ, ನನ್ನ ಇಂದಿನ ಆಲೋಚನೆಗಳು ಮತ್ತು ಕಾರ್ಯಗಳಿಗೆ ಹೊಂದಿಸಿಕೊಂಡು ಮಾತ್ರ ಬರೆಯಬಲ್ಲೆ. ಆ ರೀತಿ ಇತಿಹಾಸ ಬರೆಯುವದರಿಂದ, ಗೈಟೆ ಒಂದು ಬಾರಿ ಹೇಳಿರುವಂತೆ, ಹಿಂದಿನ ತೂಕ ಮತ್ತು ಹೊರೆಯಿಂದ ಮನಸ್ಸು ಸ್ವಲ್ಪ ಹಗುರ ವಾಗುತ್ತದೆ. ಅದು ಮನಶ್ಶಾಸ್ತ್ರದ ವಿಭಜನೆಯಂತೆ, ಆದರೆ ಒಬ್ಬ ವ್ಯಕ್ತಿಯ ಬದಲು ಒಂದು ಜನಾಂಗ ಅಥವ ಮಾನವ ಕುಲಕ್ಕೇ ಅನ್ವಯಿಸಿದಂತೆ.

ಗತಕಾಲದ ಹೊರೆ, ಒಳ್ಳೆಯದು ಕೆಟ್ಟದು ಎರಡರದೂ, ಒಂದೊಂದು ವೇಳೆ ಸಹಿಸಲ ಸಾಧ್ಯ; ಅದರಲ್ಲೂ ಇಂಡಿಯ ಚೀನ ದೇಶಗಳಂತೆ ಬಹು ಪುರಾತನ ಸಂಸ್ಕೃತಿಗಳಿಗೆ ಸೇರಿದ ನಮ್ಮಂಥ ವರಿಗಂತೂ ಉಸಿರನ್ನೇ ಕಟ್ಟುತ್ತದೆ. ನೀಷೆ ಹೇಳುವಂತೆ "ಶತಮಾನಗಳ ವಿವೇಕ ಮಾತ್ರವಲ್ಲ ಅವುಗಳ ಮೌಢ್ಯಸಹ ನಮ್ಮಲ್ಲಿ ಹರಡುತ್ತದೆ. ವಾರಸುದಾರನಾಗುವುದು ಅಪಾಯಕರ."

ನನ್ನ ಆಸ್ತಿ ಏನು? ನಾನು ಯಾವುದಕ್ಕೆ ವಾರಸುದಾರ? ಹತ್ತುಸಾವಿರ ವರ್ಷಗಳ ಮಾನವ ಕುಲದ ಸಾಧನ ಸರ್ವಸ್ವಕ್ಕೆ, ಅದರ ಯೋಚನಾಪರಂಪರೆಗಳಿಗೆ ಅನುಭವಗಳಿಗೆ, ಕಷ್ಟಗಳಿಗೆ ಸುಖ ಗಳಿಗೆ, ಜಯಘೋಷಗಳಿಗೆ, ಕಹಿ ಸೋಲಿನ ಸಂಕಟಕ್ಕೆ ಬಹುದೂರದ ಹಿಂದೆ ಆರಂಭವಾಗಿ ಇನ್ನೂ ಮುಂದೆ ಸಾಗಿ ನಮ್ಮನ್ನು ಕರೆಯುತ್ತಿರುವ ಮಾನವನ ಅದ್ಭುತ ಸಾಹಸಕ್ಕೆ ನಾನು ವಾರಸುದಾರ. ಎಲ್ಲ ಮನುಷ್ಯರಂತೆ ಇದೆಲ್ಲಕ್ಕೆ ಮತ್ತು ಇನ್ನೂ ಹೆಚ್ಚಿನದಕ್ಕೆ. ಆದರೆ ಇಂಡಿಯಾ ದೇಶದ ನಮಗೆ ಒಂದು ವಿಶಿಷ್ಟ ಆಸ್ತಿಯದೆ. ನಮ್ಮದು ಮಾತ್ರ ಎಂದಲ್ಲ. ಏಕೆಂದರೆ ಯಾವುದೂ ಅನ್ಯವಲ್ಲ. ಎಲ್ಲವೂ ಮಾನವ ಕುಲಕ್ಕೇ ಸಾಮಾನ್ಯವಾದದ್ದು, ಆದರೆ ನಮಗೆ ಹೆಚ್ಚು ಅನ್ವಯಿಸತಕ್ಕದ್ದು, ನಮ್ಮ ಎಲುಬು, ರಕ್ತ, ಮಾಂಸಗಳಲ್ಲಿ ಇರುವದು, ನಮ್ಮ ಇಂದಿನ ಇರವು ಮುಂದಿನ ನಿಲುವಿಗೆ ಕಾರಣವಾದ್ದು.

ಈ ಒಂದು ವಿಶಿಷ್ಟ ಆಸ್ತಿಯ ಯೋಚನೆ, ಮತ್ತು ಪ್ರಸಕ್ತಕಾಲಕ್ಕೆ ಅದರ ಅನ್ವಯ ನನ್ನ ಮನಸ್ಸಿನಲ್ಲಿ ಬಹುಕಾಲದಿಂದ ತುಂಬಿದೆ. ವಿಷಯ ನಿರೂಪಣೆಯ ಕಷ್ಟ ಮತ್ತು ಜಟಿಲತೆ ನನಗೆ ಭಯವನ್ನುಂಟುಮಾಡಿದರೂ ಅದರ ಮೇಲ್ಮುಖವನ್ನು ಮಾತ್ರ ತೋರಬಹುದಾದರೂ ಈಗ ನಾನು ಬರೆಯಬೇಕೆನ್ನುವುದು ಅದೇ ವಿಷಯ. ವಿಷಯಕ್ಕೆ ನಾನು ನ್ಯಾಯದೊರಕಿಸಿಕೊಡಲಾರೆ. ಆದರೆ ಆ ಪ್ರಯತ್ನದಲ್ಲಿ ನನ್ನ ಮನಸ್ಸನ್ನು ಸ್ವಲ್ಪ ತಿಳಿಮಾಡಿಕೊಂಡು, ಅದನ್ನು ಮುಂದಿನ ಯೋಚನೆ ಮತ್ತು ಕಾರ್ಯಗಳ ಹಂತಕ್ಕೆ ಅಣಿಮಾಡಿಕೊಂಡು ನನಗಾದರೂ ಸ್ವಲ್ಪ ನ್ಯಾಯ ಸಂಪಾದಿಸಿ ಕೊಳ್ಳಬಲ್ಲೆ.

ನನ್ನ ವಿಷಯ ಪ್ರವೇಶ ಯಾವಾಗಲೂ ವೈಯಕ್ತಿಕವಾಗಿರಬೇಕಾದ್ದು ಅನಿವಾರ್ಯ. ಆ ಯೋಚನೆ ನನಗೆ ಹೇಗೆ ಹೊಳೆಯಿತು, ಹೇಗೆ ರೂಪತಾಳಿತು; ನನ್ನ ಮೇಲೆ ಯಾವ ಪರಿಣಾಮ ಮಾಡಿತು, ಮತ್ತು ನನ್ನ ಕಾರ್ಯವನ್ನು ಯಾವ ರೀತಿ ಮಾರ್ಪಡಿಸಿತು, ಎಂದು. ಸ್ಥೂಲರೂಪದಲ್ಲಿ ವಿಷಯಕ್ಕೆ ಯಾವ ರೀತಿಯಲ್ಲೂ ಸಂಬಂಧ ಪಡದಿದ್ದರೂ ನನ್ನ ಮನಸ್ಸಿಗೊಂದು ಬೇರೆ ಬಣ್ಣ ಕೊಟ್ಟು ಈ ಪೂರ್ಣಸಮಸ್ಯೆಯ ನನ್ನ ಪ್ರವೇಶದ ಮೇಲೆ ಪ್ರಭಾವ ಬೀರಿದ ಕೆಲವು ಕೇವಲ ವೈಯ ಕ್ತಿಕ ಅನುಭವಗಳಿವೆ. ದೇಶಗಳು ಮತ್ತು ಜನಗಳ ಮೇಲಿನ ನಮ್ಮ ಅಭಿಪ್ರಾಯಕ್ಕೆ ಅನೇಕ ಕಾರಣಗಳಿವೆ; ಅವುಗಳಲ್ಲಿ ನಮ್ಮ ವೈಯಕ್ತಿಕ ಸಂಬಂಧಗಳು ಏನಾದರೂ ಇದ್ದರೆ ಅವು ಹೆಚ್ಚು ಪ್ರಭಾವಶಾಲಿಗಳಾಗುತ್ತವೆ. ಒಂದು ದೇಶದ ಜನರ ಪರಿಚಯ ಸ್ವತಃ ನಮಗೆ ತಿಳಿಯದಿದ್ದರೆ ಅವರು ನಮಗೆ ಪರಕೀಯರು ನಮ್ಮಿಂದ ಪ್ರತ್ಯೇಕ ಎಂದು ಭಾವಿಸಿ ತಪ್ಪು ತೀರ್ಮಾನಕ್ಕೆ ಬರು ವುದೇ ಹೆಚ್ಚು.

ನಮ್ಮ ದೇಶದ ವಿಷಯ ತೆಗೆದುಕೊಂಡರೆ ನಮ್ಮ ವೈಯಕ್ತಿಕ ಸಂಬಂಧಗಳನೇಕವಿವೆ. ಈ ಸಂಬಂಧದ ಫಲವಾಗಿ ನಮ್ಮ ಸ್ವದೇಶೀಯರ ವಿಷಯವಾಗಿ ಅನೇಕ ಚಿತ್ರಗಳು ಅಥವ ಯಾವುದೋ ಒಂದು ಮಿಶ್ರ ಚಿತ್ರ ನಮ್ಮ ಮನಸ್ಸಿನಲ್ಲಿ ಮೂಡುತ್ತದೆ. ಅದೇ ರೀತಿ ನನ್ನ ಮನಸ್ಸಿನಲ್ಲೂ ಚಿತ್ರಗಳನ್ನು ಕಲ್ಪಿಸಿಕೊಂಡಿದ್ದೇನೆ. ಕೆಲವು ಚಿತ್ರಗಳು ಸ್ಪಷ್ಟವಾಗಿ, ಜೀವಂತವಾಗಿ, ನನ್ನಲ್ಲೇ ತಮ್ಮ ದೃಷ್ಟಿಯನ್ನು ನೆಟ್ಟು, ಜೀವನದ ಉನ್ನತ ಶಿಖರಗಳನ್ನು ಜ್ಞಾಪಕಕ್ಕೆ ತರುತ್ತವೆ. ಆದರೂ ಅದೆಲ್ಲ ಎಷ್ಟೋ ಹಿಂದಿನ ಎಂದೋ ಓದಿದ ಯಾವುದೋ ಕಥೆಯಂತಿದೆ. ಇನ್ನು ಕೆಲವು ಅವುಗಳ ಸುತ್ತ ನಮ್ಮ ಜೀವನಕ್ಕೊಂದು ಸವಿಯನ್ನು ಕೊಡುವ ಹಳೆಯ ಸ್ನೇಹದ ನೆನಪುಗಳು ಸುತ್ತುಗಟ್ಟಿವೆ. ಇಂಡಿಯದ ಸ್ತ್ರೀಯರು, ಪುರುಷರು, ಮಕ್ಕಳು ಗುಂಪುಕಟ್ಟಿ ನನ್ನನ್ನೇ ನೋಡುತ್ತಿರುವ ಮತ್ತು ಅವರ ಸಹಸ್ರಾರು ಕಣ್ಣುಗಳ ನೋಟದ ಹಿಂದೆ ಏನಿದೆ ಎಂದು ಅಳೆಯಲು ಪ್ರಯತ್ನಿಸುವ ಜನಸ್ತೋಮದ ಚಿತ್ರಗಳು ಅನೇಕ ಇವೆ.

ಕೇವಲ ಒಂದು ವೈಯಕ್ತಿಕ ಚಿತ್ರದಿಂದ ನಾನು ಈ ಕಥೆಯನ್ನು ಆರಂಭಿಸುತ್ತೇನೆ, ಏಕೆಂದರೆ ನನ್ನ ಆತ್ಮಕಥೆಯ ಕೊನೆಯಲ್ಲಿ ನಾನು ಬರೆದ ಕಾಲದ ನಂತರದ ತಿಂಗಳಿನಲ್ಲಿ ನನ್ನ ಮನೋಭಾವನೆ ಹೇಗಿತ್ತು ಎಂದು ತಿಳಿಸಲು ಸಹಕಾರಿಯಾಗುತ್ತದೆ. ಆದರೆ ಅನೇಕ ವೇಳೆ ವೈಯಕ್ತಿಕ ಛಾಯೆ ಅನಿವಾರ್ಯವಾದರೂ ಇದು ಇನ್ನೊಂದು ಆತ್ಮಕಥೆಯಾಗುವುದಿಲ್ಲ.

ಪ್ರಪಂಚದ ಯುದ್ಧ ಮುಂದುವರಿಯುತ್ತಿದೆ. ಒಂದು ಭೀಕರ ವಿಪ್ಲವ ಪ್ರಪಂಚವನ್ನು ದಹಿಸುತ್ತಿರುವಾಗ, ಬೇರೆ ಉಪಾಯವಿಲ್ಲದೆ ನಿಸ್ತೇಜನಾಗಿ ಬಂದಿಯಾಗಿ ಅಹಮದ್ ನಗರ ಕೋಟೆಯಲ್ಲಿ ಕುಳಿತು ಒಂದೊಂದು ಬಾರಿ ಸ್ವಲ್ಪ ಸಿಟ್ಟಿಗೇಳುತ್ತೇನೆ. ಈ ಅನೇಕ ವರ್ಷಗಳು ನನ್ನ ಮನಸ್ಸನ್ನು ಆವರಿಸಿದ್ದ ಅನೇಕ ಮಹದಾಸೆಗಳ ಸಾಹಸಕಾರ್ಯಗಳ ವಿಷಯ ಯೋಚಿಸುತ್ತೇನೆ. ಪ್ರಕೃತಿ ವ್ಯಾಪಾರಗಳನ್ನು ನೋಡುವಂತೆ ಈ ಯುದ್ಧವೂ ಒಂದು ಅಮಾನುಷಘಟನೆ, ಪ್ರಕೃತಿನಿಯಾಮಕ ಪ್ರಳಯ, ಒಂದು ಭೂಕಂಪ, ಪ್ರವಾಹದ ಅನಾಹುತ ಎಂದು ನೋಡಲು ಯತ್ನಿಸುತ್ತಿದ್ದೇನೆ. ಆದರೆ ಅದು ಸಾಧ್ಯವಾಗುವುದಿಲ್ಲ. ಆದರೆ ವಿಶೇಷ ನೋವು, ದ್ವೇಷ ಮತ್ತು ಉದ್ವೇಗದಿಂದ ಪಾರಾಗಲು ನನಗೆ ಬೇರೆ ಮಾರ್ಗ ಯಾವುದೂ ಕಾಣುವುದಿಲ್ಲ. ಈ ಪೈಶಾಚಿಕ ವಿನಾಶಕಾರಕ ವೃತ್ತಿಯ ಬೃಹದ್ ವ್ಯಾಪ್ತಿಯಲ್ಲಿ ನನ್ನ ವೈಯಕ್ತಿಕ ಸಂಕಟಗಳು ಮತ್ತು ನಾನು ತೃಣಮಾತ್ರರಾಗುತ್ತೇವೆ.

೧೯೪೨ ನೇ ಆಗಸ್ಟ್ ಎಂಟನೇದಿನದ ಭಯಂಕರ ಸಂಜೆಯಲ್ಲಿ ಗಾಂಧೀಜಿ ಹೇಳಿದ "ಪ್ರಪಂಚದ ಕಣ್ಣು ಇಂದು ರಕ್ತರಂಜಿತವಿದ್ದರೂ ನಾವು ಮಾತ್ರ ಪ್ರಪಂಚವನ್ನು ಸ್ವಚ್ಛ, ಸಮಾಧಾನಯುಕ್ತ ಕಣ್ಣುಗಳಿಂದ ನೇರ ನೋಡಬೇಕು" ಎಂದು ಹೇಳಿದ್ದು ಜ್ಞಾಪಕಕ್ಕೆ ಬರುತ್ತದೆ.

# ಅಧ್ಯಾಯ ೨: ಬೇಡನ್ ವೀಲರ್ : ಲಾಸೆನ್

## ೧. ಕಮಲ

ನನ್ನ ಹೆಂಡತಿಗೆ ಕಾಹಿಲೆ ವಿಷಮಿಸಿದೆ ಎಂದು ವರ್ತಮಾನ ಬಂದಕಾರಣ ೧೯೩೫ ನೇ ಸೆಪ್ಟೆಂಬರ್ ನಾಲ್ಕನೆಯ ದಿನ ಆಲ್ಮೋರ ಬೆಟ್ಟದ ಬಂದಿಖಾನೆಯಿಂದ ನನಗೆ ಆಕಸ್ಮಿಕ ಬಿಡುಗಡೆ ಆಯಿತು. ಆಕೆ ಜರ್ಮನಿಯ ಬ್ಲಾಕ್ ಫಾರಸ್ಟಿನ ಬೇಡನ್ ವೀಲರ್‌ನಲ್ಲಿ ಒಂದು ವಿಶ್ರಾಂತಿಗೃಹದಲ್ಲಿ ಚಿಕಿತ್ಸೆ ಪಡೆಯುತ್ತಿದ್ದಳು. ಮೋಟಾರಿನಲ್ಲಿ ಹೊರಟು ರೈಲಿನಲ್ಲಿ ಪ್ರಯಾಣಮಾಡಿ ಮಾರನೆ ದಿನವೇ ಅಲಹಾಬಾದ್ ಸೇರಿ ಅದೇ ಮಧ್ಯಾಹ್ನವೇ ವಿಮಾನದಲ್ಲಿ ಯೂರೋಪಿಗೆ ಹೊರಟೆ. ಕರಾಚಿ, ಬಾಗ್ದಾದ್ ಮೂಲಕ ಕೈರೋ ಪಟ್ಟಣವನ್ನು ಸೇರಿ, ಸಮುದ್ರ ವಿಮಾನದಲ್ಲಿ ಅಲೆಕ್ಸಾಂಡ್ರಿಯದಿಂದ ಬ್ರಿಂಡ್ಸಿಗೆ ತಲ್ಪಿದೆ. ಬ್ರಿಂಡ್ಸಿಯಿಂದ ರೈಲಿನಲ್ಲಿ ಸ್ವಿಜರ್ಲೆಂಡಿನ ಬಾಸ್ಲೆ ಪಟ್ಟಣಕ್ಕೆ ಹೋದೆ. ಆಲ್ಮೋರ ಜೈಲಿನಿಂದ

ಹೊರಟ ಐದು ದಿನಗಳ ನಂತರ, ಅಲಹಾಬಾದ್‌ನಿಂದ ನಾಲ್ಕು ದಿನಗಳನಂತರ ಸೆಪ್ಟೆಂಬರ್ ಒಂಭತ್ತನೆ ಸಂಜೆ ಬೇಡನ್ ವೀಲರ್ ಮುಟ್ಟಿದೆ.

ಕಮಲಳನ್ನು ನಾನು ಕಂಡಾಗ ಆಕೆಯ ಮುಖದಲ್ಲಿ ಅದೇ ಹಳೆಯ ಧೈರ್ಯದ ಮುಗುಳ್ನಗೆ; ಆದರೆ ಬಹಳ ನಿಶ್ಶಕ್ತಳಾಗಿದ್ದಳು, ಹೆಚ್ಚು ಮಾತನಾಡಲು ಬಹಳ ಸಂಕಟಪಡುತ್ತಿದ್ದಳು. ಪ್ರಾಯಶಃ ನಾನು ಬಂದದ್ದರಿಂದ ಸ್ವಲ್ಪ ಉತ್ತಮ ಪರಿಣಾಮವಾಯಿತು. ಏನೊ, ಮಾರನೇ ದಿನ ಮತ್ತು ಅನಂತರವೂ ಆಕೆಯ ಸ್ಥಿತಿ ಸ್ವಲ್ಪ ಉತ್ತಮಗೊಂಡಿತು. ಆದರೆ ವಿಷಮತೆ ಇನ್ನೂ ಇದ್ದು ನಿದಾನವಾಗಿ ಆಕೆಯ ಜೀವವನ್ನೇ ಹೀರಿತು. ಅವಳ ಸಾವು ಸಮೀಪಿಸಿದೆ ಎಂದು ಯೋಚಿಸದೆ ಗುಣ ಹೊಂದುತಿದ್ದಾಳೆ, ಈ ವಿಷಗಳಿಗೆಯನ್ನು ಕಳೆದರೆ ಸರಿಹೋಗುತ್ತಾಳೆ ಎಂದು ಭಾವಿಸಿದೆ. ಡಾಕ್ಟರುಗಳು—ಅವರ ಸ್ವಭಾವವೇ ಹಾಗೆ—ಭಯವಿಲ್ಲ ಎಂದು ಭರವಸೆ ಹೇಳುತ್ತಲೇ ಇದ್ದರು. ಸಧ್ಯದ ಗಂಡಾಂತರವೇನೋ ಕಳೆದಂತೆ ಕಂಡಿತು; ಆಕೆಯೂ ಜಗ್ಗಲಿಲ್ಲ. ಮಿತವಾಗಿ ಮಾತನಾಡುತ್ತಿದ್ದೆವು, ಸ್ವಲ್ಪ ಆಯಾಸ ಕಂಡೊಡನೆ ನಾನೇ ಮಾತು ನಿಲ್ಲಿಸುತ್ತಿದ್ದೆ. ಪರ್ಲ್ ಬಕ್‌ಳ 'ದಿ ಗುಡ್ ಅರ್ತ್' ಎಂಬ ಕಾದಂಬರಿಯನ್ನು ಓದುತ್ತಿದ್ದಂತೆ ಜ್ಞಾಪಕ. ಇದರಿಂದ ಅವಳಿಗೆ ಸಂತೋಷವಾಗುತ್ತಿತ್ತು; ಆದರೂ ಓದು ಮಾತ್ರ ಮುಂದೆ ಸಾಗುತ್ತಿರಲಿಲ್ಲ.

ಬೆಳಗ್ಗೆ ಮಧ್ಯಾಹ್ನ ಊರೊಳಗಿನ ನನ್ನ ಹೋಟಲಿನಿಂದ ಆ ವಿಶ್ರಾಂತಿ ಗೃಹಕ್ಕೆ ನಡೆದುಕೊಂಡು ಹೋಗಿ ಅವಳೊಡನೆ ಕೆಲವು ಗಂಟೆ ಕಾಲ ಕಳೆಯುತ್ತಿದ್ದೆ. ಆಕೆಗೆ ಹೇಳಬೇಕೆಂಬ ವಿಷಯಗಳು ಅನೇಕವಿದ್ದವು, ಆದರೂ ನಾನೇ ಬಾಯಿಬಿಗಿ ಹಿಡಿಯುತ್ತಿದ್ದೆ. ಸ್ವಲ್ಪ ಹೊತ್ತು ಹಳೆಯ ದಿನಗಳು, ಹಿಂದಿನ ನೆನಪುಗಳು, ನಮ್ಮಿರ್ವರ ಆಪ್ತರು, ಕೆಲವು ಸಾರಿ ವಿಚಾರಮಗ್ನರಾಗಿ ನಮ್ಮ ಭವಿಷ್ಯ, ನಾವು ಮಾಡಬೇಕೆಂದಿರುವ ಕೆಲಸ ಇವುಗಳ ವಿಷಯ ಮಾತನಾಡುತ್ತಿದ್ದೆವು. ಅವಳು ವಿಷಮಸ್ಥಿತಿಯಲ್ಲಿ ಇದ್ದಾಗ್ಯೂ, ಭವಿಷ್ಯಕ್ಕೆ ಅಂಟಿಕೊಂಡೇ ಇದ್ದಳು. ಆಗಾಗ ಬರುತ್ತಿದ್ದ ಸ್ನೇಹಿತರು ಆಕೆಯ ಸ್ಥಿತಿಯು ತಾವು ನಿರೀಕ್ಷಿಸಿದ್ದಕ್ಕಿಂತ ಹೆಚ್ಚು ಉತ್ತಮಗೊಳ್ಳುತ್ತಿದೆ ಎಂದು ಆಶ್ಚರ್ಯಪಡುತ್ತಿದ್ದರು. ಆ ಜಾಜ್ವಲ್ಯಮಾನವಾದ ಕಣ್ಣುಗಳಿಂದ ಮತ್ತು ಮುಗುಳ್ನಗೆಯಿಂದ ಮೋಸ ಹೋದರು.

ಮಾಗಿಯ ಕಾಲದ ದೀರ್ಘ ಸಂಧ್ಯಾಕಾಲದಲ್ಲಿ ನಾನು ಉಳಿದಿದ್ದ ಭೋಜನಾಲಯದ ಕೊಠಡಿಯಲ್ಲಿ ಏಕಾಂಗಿಯಾಗಿ ಕುಳಿತು ಕಾಲ ಕಳೆಯುತ್ತಿದ್ದೆ. ಅಥವಾ ಹೊಲಗಳ ಮಧ್ಯೆ ಅಥವ ಕಾಡಿನೊಳಗೆ ತಿರುಗಾಡುತ್ತಿದ್ದೆ. ಆಗ ಕಮಲಳ ನೂರಾರು ಚಿತ್ರಗಳು ಆಕೆಯ ಅಗಾಧ ಆತ್ಮಶ್ರೀಯ ನೂರಾರು ರೂಪಗಳು ಒಂದರ ಮೇಲೊಂದು ನನ್ನ ಮನಸ್ಸಿನ ಸ್ಮೃತಿಪಥದಲ್ಲಿ ಸುಳಿದು ಹೋಗುತ್ತಿದ್ದವು. ನಮ್ಮ ಮದುವೆಯಾಗಿ ಸುಮಾರು ಇಪ್ಪತ್ತು ವರ್ಷಗಳಾಗಿದ್ದವು. ಆದರೂ ಎಷ್ಟುಸಲ ಆಕೆಯ ಮಾನಸಿಕ ಆಧ್ಯಾತ್ಮಿಕ ಚಿರನೂತನ ದೃಷ್ಟಿಯು ನನ್ನನ್ನು ವಿಸ್ಮಯಗೊಳಿಸುತಿತ್ತು. ಎಷ್ಟೋ ವಿವಿಧ ರೀತಿಗಳಲ್ಲಿ ಆಕೆಯನ್ನು ಅರಿತಿದ್ದೆ. ಈಚೆಗೆ ಆಕೆಯನ್ನು ಅರ್ಥಮಾಡಿಕೊಳ್ಳಲು ಬಹಳ ಪ್ರಯತ್ನಪಟ್ಟೆ. ಅರ್ಥಮಾಡಿಕೊಳ್ಳಲು ಸಾಧ್ಯವಿರಲಿಲ್ಲವೆಂದಲ್ಲ; ಅನೇಕ ವೇಳೆ ಅವಳನ್ನು ಅರಿತಿದ್ದೇನೆಯೆ, ಅರ್ಥಮಾಡಿಕೊಂಡಿದ್ದೇನೆಯೇ ಎಂದು ನಾನೇ ಆಶ್ಚರ್ಯಪಡುತ್ತಿದ್ದೆ. ನಿಜವಾಗಿಯೂ ಅಸ್ತಿತ್ವವೇ ಇಲ್ಲದ ಗ್ರಹಿಸಲು ಸಹ ಅತಿಕಷ್ಟವಾದ ಮೋಹಿನಿಯಂತೆ ಕಂಡೂ ಕಾಣದ ಯಾವುದೋ ಮೋಹಕ ಶಕ್ತಿ ಅವಳಲ್ಲಿತ್ತು. ಒಂದೊಂದು ವೇಳೆ ನೆಟ್ಟ ನೋಟದಿಂದ ಆಕೆಯ ಕಣ್ಣುಗಳನ್ನು ದೃಷ್ಟಿಸಿದರೆ ಯಾವುದೋ ಹೊಸವ್ಯಕ್ತಿ ನನ್ನನ್ನು ನೋಡುತ್ತಿದ್ದಂತೆ ಭಾಸವಾಗುತ್ತಿತ್ತು.

ಎಲ್ಲೋ ಸ್ವಲ್ಪ ದಿನ ಶಾಲೆಗೆ ಹೋಗಿದ್ದಳೇ ಹೊರತು, ಸರಿಯಾದ ವಿದ್ಯಾಭ್ಯಾಸ ಯಾವುದೂ ಅವಳಿಗಿರಲಿಲ್ಲ. ಆಕೆಯ ಮನಸ್ಸು ಶಿಕ್ಷಣ ವಿಧಾನದ ಪಡಿಯಚ್ಚಿನ ಎರಕವಾಗಿರಲಿಲ್ಲ. ಈಗ ಸರ್ವಸಾಮಾನ್ಯವಾಗಿರುವ ಭಾವನೆಗಳಾವುವೂ ಇಲ್ಲದ ಸರಳ ಸ್ವಭಾವದ ಹುಡುಗಿಯಾಗಿ ನಮ್ಮ ಮನೆಗೆ ಬಂದಳು. ಆ ಹುಡುಗ ದೃಷ್ಟಿ ಕೊನೆಯವರೆಗೂ ಇತ್ತು; ಆದರೆ ಹೆಂಗಸಾಗುತ್ತ ಬಂದಂತೆ ಪ್ರಚಂಡ ಬಿರುಗಾಳಿಗೆ ಮುಂಚೆ ಕಾಣುವ ನಿರ್ಮಲಗಂಭೀರ ಜಲದಂತೆ ಆಕೆಯ ಕಣ್ಣುಗಳ ಆಳವೂ ಮತ್ತು

ಪ್ರಕಾಶವೂ ಹೆಚ್ಚಿದವು. ಸಮತೂಕವಿಲ್ಲದ ಈಗಿನ ಕಾಲದ ಹುಡುಗಿಯರ ಅಭ್ಯಾಸಗಳಾವುವೂ ಇರಲಿಲ್ಲ. ಆಧುನಿಕ ಪದ್ಧತಿಗಳಿಗೇನೊ ಸುಲಭವಾಗಿ ಹೊಂದಿಕೊಂಡಳು. ಆದರೂ ಆಕೆ ಭಾರತ ಮಹಿಳೆಯೇ, ಮುಖ್ಯವಾಗಿ ಕಾಶ್ಮೀರದ ಹೆಣ್ಣುಮಗಳೇ; ಸೂಕ್ಷ್ಮಳಾದರೂ ಬಹು ಗಂಭೀರೆ. ವಯಸ್ಸಾಗಿದ್ದರೂ ಎಳೆಯ ಮಗುವಿನಂತೆ ಕೋಮಲ, ಹುಚ್ಚುಹುಚ್ಚಾಗಿ ನಡೆದರೂ ಬುದ್ಧಿವಂತೆ. ಗೊತ್ತಿಲ್ಲದವರೊಂದಿಗೆ ಅಥವ ಬೇಡವಾದವರೊಂದಿಗೆ ಮಾತೇ ಇಲ್ಲ; ಆದರೆ ತನ್ನ ಪರಿಚಯಸ್ಥರು ಮತ್ತು ಆಪ್ತೇಷ್ಟರ ಮಧ್ಯೆ ತುಳುಕುವ ನಗೆ. ಸರಿಯೋ ತಪ್ಪೋ ಬಹುಬೇಗ ಒಂದು ಅಭಿಪ್ರಾಯಕ್ಕೆ ಬಂದು ಬರುವ ಸ್ವಭಾವ. ಆದರೆ ಒಪ್ಪೊ ನೆಪ್ಪೊ ಮನಸ್ಸು ಮಾಡಿದ ಮೇಲೆ ಕಗ್ಗಲ್ಲು. ಆಕೆಯಲ್ಲಿ ಕಪಟ ಇರಲೇ ಇಲ್ಲ. ಯಾರನ್ನಾದರೂ ಕಂಡರಾಗದಿದ್ದರೆ, ಮುಚ್ಚುಮರೆ ಇಲ್ಲವೇ ಇಲ್ಲ. ಮರೆಮಾಚಲು ಯತ್ನಪಟ್ಟರೂ ಆಕೆಗೆ ಸಾಧ್ಯವಾಗುತ್ತಿರಲಿಲ್ಲ. ತನ್ನ ಪ್ರಾಮಾಣಿಕತೆಯಿಂದ ಆಕೆಯಂತೆ ನನ್ನ ಮೇಲೆ ಪರಿಣಾಮ ಮಾಡಿದವರು ಬಹಳಿಲ್ಲ.

## ೨. ನಮ್ಮ ಮದುವೆ ಮತ್ತು ಆಮೇಲೆ

ನಮ್ಮ ಮದುವೆಯಾದ ಮೊದಲ ದಿನಗಳನ್ನು ಜ್ಞಾಪಿಸಿಕೊಂಡೆ. ಅನೇಕ ವಿಧದಲ್ಲಿ ಆಕೆಯ ಸಹಧರ್ಮಿಯಾಗಿರಬೇಕಾದ್ದು ನನ್ನ ಕರ್ತವ್ಯವಾಗಿದ್ದರೂ ಆ ಸಹವಾಸವನ್ನು ಆಕೆಗೆ ನಾನು ಕೊಡಲಿಲ್ಲ. ಆಕೆಯನ್ನು ಕಂಡರೆ ನನಗೆಅಪಾರವಾದ ಪ್ರೀತಿಯಿದ್ದರೂ ಅವಳನ್ನು ಮರೆತು ಸಹ ಬಿಟ್ಟಿದ್ದೆ. ಏಕೆಂದರೆ ನಾನು ಆಗ ಒಬ್ಬ ಮಂತ್ರ ಮುಗ್ಧನಂತೆ ಹಿಡಿದ ಕಾರ್ಯದಲ್ಲಿ ಸದಾಮಗ್ನನಾಗಿದ್ದೆ; ನನ್ನ ಸುತ್ತಮುತ್ತಲಿನ ಜನರೆಲ್ಲ ನಿಸ್ಸತ್ವ ಪ್ರೇತಗಳುಎಂದು ನನ್ನದೇ ಒಂದು ಕನಸಿನ ಲೋಕದಲ್ಲಿ ಇದ್ದೆ. ನನ್ನ ಶಕ್ತಿ ಮೀರಿ ಕೆಲಸಮಾಡುತ್ತಿದ್ದೆ, ಕೈಗೊಂಡ ಕೆಲಸದ ವಿಷಯವೊಂದೇ ಮನಸ್ಸಿನಲ್ಲಿ ತುಂಬಿ ತುಳುಕುತ್ತಿತ್ತು. ನನ್ನ ಸಮಯವೆಲ್ಲ ಆ ಒಂದು ಕೆಲಸಕ್ಕೆ; ಬೇರೆ ಯಾವುದಕ್ಕೂ ಎಡೆಯಿಲ್ಲ.

ಆದರೂ ಆಕೆಯನ್ನು ಮರೆಯಲು ಸಾಧ್ಯವೇ ಇರಲಿಲ್ಲ. ಲಂಗರಿಗೆ ಬರುವ ನಾವೆಯಂತೆ ಪದೇ ಪದೇ ಆಕೆಯ ಬಳಿ ಬರುತ್ತಿದ್ದೆ. ಮನೆ ಬಿಟ್ಟು ಬಹಳ ದಿನಗಳಾದರೆ, ಆಕೆಯ ಯೋಚನೆಯಿಂದ ತಲೆ ಸ್ವಲ್ಪ ತಂಪಾಗುತ್ತಿತ್ತು; ಬೇಗ ಮನೆಗೆ ಹಿಂದಿರುಗುವ ಕುತೂಹಲ ಹೆಚ್ಚುತ್ತಿತ್ತು. ನನ್ನ ಮನಸ್ಸಿಗೆ ಸಮಾಧಾನ ಕೊಟ್ಟು ನನಗೆ ಶಕ್ತಿದಾಯಕಳಾಗಿ ನನ್ನ ಮನಸ್ಸು ಮತ್ತು ದೇಹಕ್ಕೆ ಹೊಸ ಜೀವಕಳೆಯನ್ನು ಕೊಡಲು ಆಕೆ ಇಲ್ಲದಿದ್ದರೆ ನಾನು ಏನುತಾನೆ ಮಾಡಲು ಸಾಧ್ಯವಿತ್ತು ?

ಆಕೆ ಕೊಟ್ಟುದನ್ನೆಲ್ಲ ನಾನು ಸ್ವೀಕರಿಸಿದ್ದೇನೆ. ಅದಕ್ಕೆ ಪ್ರತಿಯಾಗಿ ಈ ಆರಂಭದ ದಿನಗಳಲ್ಲಿ ನಾನು ಕೊಟ್ಟುದೇನು ? ಕರ್ತವ್ಯ ಭ್ರಷ್ಟನಾದೆನೆಂದು ಎದ್ದು ತೋರುತ್ತದೆ. ಪ್ರಾಯಶಃ ಆ ದಿನಗಳ ಸ್ಮರಣೆಯು ಆಕೆಯ ಮನಸ್ಸಿನಲ್ಲಿ ಬೇರೂರಿತು. ತನ್ನ ಸ್ವಭಾವಸಹಜ ಆತ್ಮಗೌರವ, ಮತ್ತು ತೀಕ್ಷ್ಣಬುದ್ಧಿಯಿಂದ ನನ್ನ ಸಹಾಯವನ್ನು ಆಕೆಯು ಬಯಸಲಿಲ್ಲ. ಆ ಸಹಾಯ ಕೊಡಲು ಉಳಿದವರಿಗಿಂತ ನಾನೇ ಶಕ್ತನಾಗಿದ್ದರೂ ಆಕೆ ಮಾತ್ರ ಕೇಳಲಿಲ್ಲ. ರಾಷ್ಟ್ರೀಯ ಹೋರಾಟದಲ್ಲಿ ತನ್ನದೇ ಒಂದು ವಿಶಿಷ್ಟ ಪಾತ್ರ ವಹಿಸಬೇಕೆಂದು ಆಕೆಯ ಇಚ್ಛೆ ಇತ್ತು; ಆದರೆ ತನ್ನ ಗಂಡನ ಛಾಯೆಯಾಗಿ ಹಿಂಬಾಲಕಳಾಗಿ ಅಲ್ಲ. ತನ್ನ ಆತ್ಮಕ್ಕೆ ಮತ್ತು ಪ್ರಪಂಚಕ್ಕೆ ತನ್ನ ಸಾರ್ಥಕತೆ ತೋರಲೆಂದು. ಪ್ರಪಂಚದಲ್ಲಿ ಇದಕ್ಕಿಂತ ಹೆಚ್ಚು ಇಷ್ಟವಾದದ್ದು ನನಗೆ ಬೇರೆ ಯಾವುದೂ ಇರಲಿಲ್ಲ. ಆದರೆ ಆಕೆಯ ಅಂತರಂಗವನ್ನು ಅರಿತುಕೊಳ್ಳಲು ನನಗೆ ಬಿಡುವೇ ಇರಲಿಲ್ಲ. ಆಕೆಯ ಉತ್ಕಟೇಚ್ಛೆಗೆ, ಅನ್ವೇಷಣೆಗೆ ನಾನು ಕುರುಡನಾದೆ. ಸೆರೆಮನೆಯಲ್ಲಿ ಕಳೆದ ದಿನಗಳೇ ಹೆಚ್ಚು. ನಾನು ಆಕೆಯಿಂದ ದೂರನಾಗುತ್ತಿದ್ದೆ, ಇಲ್ಲವಾದರೆ ಆಕೆ ಕಾಹಿಲೆ ಬೀಳುತ್ತಿದ್ದಳು. ರವೀಂದ್ರರ ನಾಟಕದಲ್ಲಿನ ಚಿತ್ರಾಳಂತೆ 'ನಾನು ಚಿತ್ರಾ. ಪೂಜಿಸಲು ದೇವತೆಯಲ್ಲ. ಅಸಡ್ಡೆಯಿಂದ ಹುಳುವಿನಂತೆ ತಳ್ಳಿಹಾಕಲು ದಯಾಭಿಕ್ಷೆ ಬೇಡುವ ವ್ಯಕ್ತಿಯೂ ಅಲ್ಲ. ನಿನ್ನ ಸಾಹಸದ ಅಪಾರ ಕಾರ್ಯಗಳ ಜೊತೆಯಲ್ಲಿರಲು ನನಗೂ ಅವಕಾಶಕೊಟ್ಟರೆ, ನಿನ್ನ ಜೀವನದ ಮಹತ್ಕಾರ್ಯಗಳಲ್ಲಿ ಸಮಭಾಗಿಯಾಗಲು

ಅವಕಾಶಕೊಟ್ಟರೆ ಆಗ ನೀನು ನನ್ನನ್ನು ಅರ್ಥಮಾಡಿಕೊಳ್ಳುತ್ತೀ." ಎಂದು ಹೇಳುವಂತೆ ಇತ್ತು, ಆಕೆಯ ಅಂತರಂಗ. ಬಾಯಿಂದ ಹೇಳಿಕೊಳ್ಳಲಿಲ್ಲ; ಆದರೆ ಕ್ರಮೇಣ ಈ ಸಂದೇಶವನ್ನು ಅವಳ ಕಣ್ಣುಗಳಲ್ಲಿ ಕಂಡೆ.

೧೯೩೦ರ ಆದಿಭಾಗದಲ್ಲಿ ಆಕೆಯ ಈ ಇಚ್ಛೆಯನ್ನು ಗ್ರಹಿಸಿದೆ. ನಾವಿಬ್ಬರೂ ಒಟ್ಟಿಗೆ ಕೆಲಸ ಮಾಡಿದೆವು; ಆ ಅನುಭವದಲ್ಲಿ ಒಂದು ಹೊಸ ಆನಂದವಿತ್ತು. ಸ್ವಲ್ಪಕಾಲ ಮಾತ್ರ ಜೀವನದ ಆನಂದ ಶಿಖರವನ್ನೇರಿದ್ದಂತೆ ಇತ್ತು. ಮುಂಬರುವ ರಾಷ್ಟ್ರೀಯ ಆಂದೋಳನದ ಗುಡುಗು ಕೇಳಿ ಬರುತ್ತಿತ್ತು, ಕಾರ್ಮೋಡಗಳು ಕವಿಯ ಹತ್ತಿದ್ದವು. ಆ ಸುಖದ ದಿನಗಳು ಬೇಗ ಕೊನೆಗಂಡವು; ಏಪ್ರಿಲ್ ಆರಂಭದಲ್ಲೇ ಶಾಸನಭಂಗ ಚಳವಳಿಯು ಆರಂಭವಾಗಿ ಸರಕಾರದ ದಬ್ಬಾಳಿಕೆಯು ಉಗ್ರರೂಪ ತಾಳಿತ್ತು; ನಾನು ಸೆರೆಮನೆಯನ್ನೂ ಸೇರಿದೆ.

ಗಂಡಸರೆಲ್ಲರೂ ಸೆರೆಮನೆ ಸೇರಿದ್ದೆವು. ಆಗ ಒಂದು ವಿಚಿತ್ರ ಸಂಗತಿ ನಡೆಯಿತು, ನಮ್ಮ ಮಹಿಳೆಯರು ಮುನ್ನುಗ್ಗಿ ಹೋರಾಟ ನಡೆಸಲು ನಿಂತರು. ಮಹಿಳೆಯರೇನೋ ಹೋರಾಟದಲ್ಲಿ ಹಿಂದೆ ಭಾಗವಹಿಸಿ ಇದ್ದರು, ಆದರೆ ಈಗ ತಂಡೋಪತಂಡವಾಗಿ ಕಾರ್ಯರಂಗಕ್ಕಿಳಿಯುವುದು ನೋಡಿ ಬ್ರಿಟಿಷ್ ಸರ್ಕಾರಕ್ಕೆ ಹಾಗಿರಲಿ ಅವರ ಗಂಡಂದಿರಿಗೂ ಆಶ್ಚರ್ಯವಾಯಿತು. ಶ್ರೀಮಂತ ಮತ್ತು ಮಧ್ಯಮವರ್ಗದ ಸುಖಜೀವನದಲ್ಲಿ ತಂಪಿನಲ್ಲಿ ಕೋಮಲವಾಗಿ ಬೆಳದ ಕುಲೀನ ಮಹಿಳೆಯರು, ರೈತ ಮಹಿಳೆಯರು, ಕೂಲಿಗಾರ ಸ್ತ್ರೀಯರು, ಬಡವರು ಬಲ್ಲಿದರು ದಶಸಹಸ್ರಗಟ್ಟಲೆ ಸರಕಾರದ ಆಜ್ಞೆಯನ್ನು ಭಂಗಮಾಡುತ್ತ ಲಾಠಿ ಏಟಿಗೆ ತಲೆ ಒಡ್ಡಿದರು. ಈ ಧೈರ್ಯ ಮತ್ತು ಸಾಹಸದ ದೃಶ್ಯ ಹಾಗಿರಲಿ, ಅವರು ತೋರಿಸಿದ ಸಂಘಟನಾಶಕ್ತಿ ಸಹ ವಿಸ್ಮಯಕಾರಕವಾಗಿ ಇತ್ತು.

ಈ ವಾರ್ತೆಯು ನೈನಿ ಸೆರೆಮನೆಯಲ್ಲಿ ನಮಗೆ ತಿಳಿದಾಗ ನಮಗಾದ ಆನಂದವನ್ನು, ಭಾರತದ ಮಹಿಳೆಯರ ವಿಷಯದಲ್ಲುಂಟಾದ ಅದ್ಭುತ ಗೌರವವನ್ನು ನಾನೆಂದಿಗೂ ಮರೆಯಲಾರೆ. ನಮ್ಮ ಎದೆಯುಬ್ಬಿ, ಕಣ್ಣುಗಳು ಆನಂದ ಭಾಷ್ಪದಲ್ಲಿ ಮುಸಕುಗೊಂಡದ್ದರಿಂದ ಪರಸ್ಪರ ಮಾತನಾಡಲು ಸಹ ಶಕ್ತರಾಗಲಿಲ್ಲ.

ಇಷ್ಟು ಹೊತ್ತಿಗೆ ನನ್ನ ತಂದೆಯವರು ನೈನಿ ಸೆರೆಮನೆಗೆ ಬಂದು ಸೇರಿದ್ದರು. ನಮಗೆ ಗೊತ್ತಿಲ್ಲದ ಎಷ್ಟೋ ವಿಷಯಗಳನ್ನು ಅವರು ತಿಳಿಸಿದರು. ಹೊರಗಡೆ ಶಾಸನ ಭಂಗ ಚಳವಳಿಯ ನಾಯಕರಾಗಿದ್ದರು. ದೇಶಾದ್ಯಂತ ನಡೆಯುತ್ತಿದ್ದ ಈ ಮಹಿಳಾ ಜಾಗ್ರತಿಗೆ ಅವರು ಬೆಂಬಲಕೊಟ್ಟಿದ್ದಿಲ್ಲ. ಪಿತೃಧರ್ಮದ ಹಳೆಯ ಸಂಪ್ರದಾಯದ ಮನೋಧರ್ಮದಿಂದ ಅವರಿಗೆ ಯುವತಿಯರು ಮತ್ತು ವಯಸ್ಕ ಮಹಿಳೆಯರು ಉರಿಯುವ ಬಿಸಿಲಿನಲ್ಲಿ ಬೀದಿಯಲ್ಲಿ ಅಲೆದಾಡುವುದೂ, ಪೋಲೀಸಿನವರೊಂದಿಗೆ ವ್ಯಾಜ್ಯ ಮಾಡುವುದೂ ಸರಿಬೀಳಲಿಲ್ಲ. ಆದರೆ ಜನರ ಮನಸ್ಸಿನ ಕಾವನ್ನು ಅವರು ಅರಿತಿದ್ದರು ! ಆದ್ದರಿಂದ ತಮ್ಮ ಹೆಂಡತಿ, ಹೆಣ್ಣುಮಕ್ಕಳು, ಸೊಸೆಯರು, ಯಾರಿಗೂ ನಿರಾಶೆಗೊಳಿಸಲಿಲ್ಲ. ದೇಶಾದ್ಯಂತ ಮಹಿಳೆಯರು ತೋರಿಸಿದ ಅದ್ಭುತ ಶಕ್ತಿ, ಧೈರ್ಯ, ಕಾರ್ಯದಕ್ಷತೆಯನ್ನು ಕಂಡು ಅವರೇ ಬೆರಗಾಗಿದ್ದರು. ತಮ್ಮ ಮನೆಯ ಹೆಣ್ಣು ಮಕ್ಕಳ ವಿಷಯದಲ್ಲಂತೂ ಪ್ರೇಮಪೂರಿತ ಹೆಮ್ಮೆಯಿಂದ ಮಾತನಾಡುತ್ತಿದ್ದರು.

ಭಾರತೀಯ ಸ್ವಾತಂತ್ರ್ಯ ದಿನಾಚರಣೆಯ ಹುಟ್ಟುಹಬ್ಬವಾದ ೧೯೩೧ ನೆ ಜನವರಿ ೨೬ ನೆಯ ದಿನ ನಮ್ಮ ತಂದೆಯವರ ಸಲಹೆಯಂತೆ ಇಂಡಿಯಾ ದೇಶದ ಸಹಸ್ರಾರು ಬಹಿರಂಗ ಸಭೆಗಳಲ್ಲಿ ಒಂದು 'ಜ್ಞಾಪಕಾರ್ಥ ನಿರ್ಣಯ'ವು ಅಂಗೀಕರಿಸಲ್ಪಟ್ಟಿತು. ಪೋಲೀಸ್‌ನವರು ಈ ಸಭೆಗಳನ್ನು ನಿಷೇಧಿಸಿ ಅನೇಕ ಸಭೆಗಳನ್ನು ಬಲಾತ್ಕಾರವಾಗಿ ಚದುರಿಸಿದರು. ನಮ್ಮ ತಂದೆಯವರು ಕಾಹಿಲೆಯಲ್ಲಿ ತಮ್ಮ ಹಾಸಿಗೆಯಿಂದಲೇ ಈ ಸಭೆಗಳನ್ನು ಏರ್ಪಡಿಸಿದರು. ಅವರ ಸಂಘಟನ ಶಕ್ತಿಗೆ ಅದೊಂದು ಕಿರೀಟಪ್ರಾಯವಾಗಿತ್ತು; ಏಕೆಂದರೆ ಆ ದಿನ ನಮಗೆ ವರ್ತಮಾನ ಪತ್ರಿಕೆ, ಅಂಚೆ, ತಂತಿ, ಟೆಲಿಫೋನ್, ಮುದ್ರಣಮಂದಿರ ಯಾವುದೂ ಇರಲಿಲ್ಲ. ಆದರೂ ಹಿಮಾಚಲದಿಂದ ಕನ್ಯಾಕುಮಾರಿಯ

ವರೆಗೆ ದೂರದ ಮೂಲೆಯ ಹಳ್ಳಿಗಳಲ್ಲಿ ಸಹ ಅದೇ ದಿನ ಅದೇ ಸಮಯಕ್ಕೆ ಅದೇ ನಿರ್ಣಯವನ್ನು ಜನ ತಮ್ಮ ತಮ್ಮ ಪ್ರಾಂತ್ಯ ಭಾಷೆಗಳಲ್ಲಿ ಅಂಗೀಕರಿಸಿದರು. ನಿರ್ಣಯವಾದ ಹತ್ತು ದಿನಗಳಲ್ಲೇ ನಮ್ಮ ತಂದೆಯವರು ತೀರಿಕೊಂಡರು.

ನಿರ್ಣಯ ದೊಡ್ಡದಿತ್ತು: ಅದರಲ್ಲಿ ಒಂದು ಭಾಗ ಮಹಿಳೆಯರಿಗೆ ಸಂಬಂಧಿಸಿದ್ದು. "ಮಾತೃ ಭೂಮಿಯ ಕಷ್ಟ ಸಮಯದಲ್ಲಿ ತಮ್ಮ ಮನೆ ಮಠಗಳನ್ನು ತೊರೆದು ಅಪ್ರತಿಹತವಾದ ಧೈರ್ಯ ಮತ್ತು ಸಹನಶಕ್ತಿಯಿಂದ ಗಂಡಸರೊಂದಿಗೆ ಭುಜಕ್ಕೆ ಭುಜಕೊಟ್ಟು ಭಾರತೀಯ ರಾಷ್ಟ್ರಯೋಧರ ಮೊದಲ ಹೋರಾಟದಲ್ಲಿ ಮುನ್ನುಗ್ಗಿ ಹೋರಾಟದ ಜಯಾಪಜಯಗಳಲ್ಲಿ ಭಾಗಿಗಳಾದ ಮಹಿಳೆ ಯರಿಗೆ ನಮ್ಮ ಹೃತ್ಪೂರ್ವಕ ಅಭಿನಂದನೆಗಳನ್ನು ಮತ್ತು ಗೌರವವನ್ನು ಅರ್ಪಿಸುತ್ತೇವೆ" ಎಂದು ಇತ್ತು.

ಈ ಉತ್ಕ್ರಾಂತಿ ಸಮಯದಲ್ಲಿ ಕಮಲ ಒಳ್ಳೆಯ ಧೈರ್ಯದಿಂದ ಪ್ರಮುಖ ಪಾತ್ರವನ್ನು ವಹಿಸಿದ್ದಳು. ನಗರದ ಎಲ್ಲ ಬಲ್ಲ ಕೆಲಸಗಾರರೂ ಸೆರೆಮನೆಯಲ್ಲಿದ್ದಾಗ ಅಲಹಾಬಾದಿನ ಎಲ್ಲ ಕೆಲಸ ಗಳ ಸಂಘಟನ ಕಾರ್ಯದ ಹೊರೆಯೂ ಅನುಭವವಿಲ್ಲದ ಆಕೆಯ ಹೆಗಲಮೇಲೆ ಬಿದ್ದಿತು. ತನ್ನ ಕೆಚ್ಚಿನಿಂದ, ಕಾರ್ಯಶಕ್ತಿಯಿಂದ ಅನುಭವದ ಕೊರತೆಯನ್ನು ನಿವಾರಿಸಿ ಅಲಹಾಬಾದಿನ ಕಣ್ಮಣಿ ಯಾದಳು.

ನಮ್ಮ ತಂದೆಯ ಕಾಹಿಲೆ ಮತ್ತು ಸಾವಿನ ಸಮಯದಲ್ಲಿ ಪುನಃ ನಾವು ಒಂದುಗೂಡಿದೆವು. ಈಗ ಸಹೋದ್ಯೋಗಿಗಳಾಗಿ, ಪರಸ್ಪರ ಪೂರ್ಣ ಸಹ ಧರ್ಮಿಗಳಾಗಿ ಒಂದು ಹೊಸ ನಿಲುವಿನಲ್ಲಿ ನಮ್ಮ ಪುನರ್ಮಿಲನವಾಯಿತು. ಕೆಲವು ತಿಂಗಳ ನಂತರ ನಮ್ಮ ಮಗಳೊಂದಿಗೆ ಸಿಂಹಳಕ್ಕೆ ಸ್ವಲ್ಪ ವಿಶ್ರಾಂತಿಗಾಗಿ–ಅದೇ ನಮ್ಮ ಕೊನೆಯ ವಿಶ್ರಾಂತಿಯಾಯಿತು—ಹೊರಟಾಗ ನಮಗೆ ಪರಸ್ಪರ ಪುನ ರ್ದರ್ಶನವಾದಂತೆ ತೋರಿತು. ಹಿಂದೆ ನಾವು ಒಟ್ಟಿಗೆ ಕಳೆದ ವರ್ಷಗಳೆಲ್ಲ ಈ ಹೊಸ ಆತ್ಮೀಯ ಬಾಂಧವ್ಯಕ್ಕೆ ಸಿದ್ಧತೆಯಂತೆ ಕಂಡಿತು.

ನಾವು ಬಹುಬೇಗ ಹಿಂದಿರುಗಿದೆವು; ಕೆಲಸ ಕಾದಿತ್ತು; ಸೆರೆಮನೆ ಕರೆಯುತ್ತಿತ್ತು; ವಿಶ್ರಾಂತಿ ಎಂಬುದು ಇನ್ನಿಲ್ಲ. ಕಲೆತು ಕೆಲಸ ಮಾಡಲು ಅವಕಾಶವೂ ಇಲ್ಲ. ಎರಡೆರಡು ವರ್ಷಗಳ ಎರಡು ಸೆರೆಮನೆವಾಸಗಳ ಮಧ್ಯೆ ಕೆಲವು ದಿನಗಳ ಹೊರತು ಒಟ್ಟಿಗೆ ಇರುವ ಸಂಭವವೂ ಇರಲಿಲ್ಲ. ಈ ಎರಡನೆಯ ಸೆರೆಮನೆಯ ವಾಸ ಮುಗಿಯುವ ಮುಂಚೆಯೇ ಕಮಲ ಮರಣೋನ್ಮುಖಳಾದಳು.

೧೯೩೪ ನೆಯ ಫೆಬ್ರವರಿ ತಿಂಗಳಲ್ಲಿ ಕಲ್ಕತ್ತದಿಂದ ಹೊರಟ ವಾರಂಟಿನಿಂದ ನನ್ನ ಬಂಧನ ವಾದಾಗ ನನಗೆ ಕೆಲವು ಬಟ್ಟೆಗಳನ್ನು ತರಲು ಕಮಲ ನಮ್ಮ ಕೊಠಡಿಗೆ ಹೋದಳು. ಆಕೆಯಿಂದ ಬೀಳ್ಕೊಳ್ಳಲು ಹಿಂದೆಯೇ ಹೋದೆ. ಇದ್ದಕ್ಕಿದ್ದ ಹಾಗೆ ನನ್ನನ್ನು ಬಿಗಿದಪ್ಪಿ, ಪ್ರಜ್ಞೆತಪ್ಪಿ ಮೂರ್ಛೆ ಹೋದಳು. ಆಕೆ ಈ ರೀತಿ ಎಂದೂ ಮಾಡಿರಲಿಲ್ಲ. ಸೆರೆಮನೆಗೆ ಹೋಗುವುದು ನಮಗೆ ಆಟವಾಗಿ ಹೋಗಿತ್ತು. ಎಲ್ಲರೂ ಯಾವ ಗೊಂದಲವನ್ನೂ ಎಬ್ಬಿಸದೆ ಸಂತೋಷದಿಂದ ಕಳುಹಿಸಿಕೊಡು ತ್ತಿದ್ದರು. ಆದರೆ ಅದೇ ನಮ್ಮ ಕೊನೆಯ ಸಂದರ್ಶನ ಎಂದು ಆಕೆಗೆ ಏನಾದರೂ ಮುಂಬರಿವು ಇತ್ತೆ?

ಪರಸ್ಪರ ಅವಶ್ಯಕತೆ ಅತ್ಯಧಿಕವಿದ್ದಾಗ, ಆಗತಾನೆ ಒಬ್ಬರನ್ನೊಬ್ಬರು ಅರ್ಥಮಾಡಿಕೊಂಡಿದ್ದಾಗ ಎರಡೆರಡು ವರ್ಷಗಳ ಎರಡು ಸೆರೆಮನೆ ವಾಸಗಳುನಮ್ಮ ನಡುವೆ ಬಂದವು. ದೀರ್ಘ ಸೆರೆಮನೆ ವಾಸದಲ್ಲಿ ಇದೇ ನನ್ನ ಯೋಚನೆಯಾಗಿತ್ತು. ಆದರೂ ನಮ್ಮಿಬ್ಬರ ಪುನರ್ಮಿಲನ ಬಂದೇ ಬರುತ್ತದೆ ಎಂದು ಆಶಿಸಿದ್ದೆ. ಈ ವರ್ಷಗಳನ್ನು ಆಕೆ ಹೇಗೆ ಕಳೆದಳು? ಊಹೆ ಮಾಡಬಲ್ಲೆನಾದರೂ, ತಿಳಿಯದು. ನಮ್ಮ ಸೆರೆಮನೆಯ ಭೇಟಿಗಳಲ್ಲಿ, ಅಥವ ಹೊರಗೆ ಬಂದ ಸ್ವಲ್ಪ ಕಾಲದಲ್ಲಿ ಸ್ವಾಭಾವಿಕತೆಯೇ ಇರುತ್ತಿರಲಿಲ್ಲ. ನಮ್ಮ ಸಂಕಟವನ್ನು ಇನ್ನೊಬ್ಬರಿಗೆ ತೋರಿಸಿ ಮನಸ್ಸಿಗೆ ನೋವು ಮಾಡಬಾರದೆಂದು ಯಾವಾಗಲೂ ಹಸನ್ಮುಖಿಗಳಾಗಿಯೇ ಕಾಣಿಸಿಕೊಳ್ಳುತ್ತಿದ್ದವು. ಆದರೂ ಅನೇಕ ವಿಷಯಗಳಲ್ಲಿ ಆಕೆಯ ಮನಸ್ಸಿಗೆ

ಶಾಂತಿಯಿಲ್ಲ ಎಂಬುದು ಎದ್ದು ಕಾಣುತ್ತಿತ್ತು. ನಾನು ಹೊರಗಿದ್ದರೆ ಪ್ರಾಯಶಃ ಸ್ವಲ್ಪ ಸಹಾಯವಾಗುತ್ತಿದ್ದೆನೋ ಏನೋ? ಆದರೆ ಸೆರೆಮನೆಯಿಂದ ಅದು ಸಾಧ್ಯವಿರಲಿಲ್ಲ.

## ೩. ಮಾನವ ಬಾಂಧವ್ಯದ ಸಮಸ್ಯೆ

ಬೇಡನ್ ವೀಲರ್‌ನಲ್ಲಿ ನಾನೊಬ್ಬನೇ ಏಕಾಂಗಿಯಾಗಿ ಕಾಲ ಕಳೆಯುತ್ತ ಇದ್ದಾಗ ಈ ಎಲ್ಲ ಮತ್ತು, ಇನ್ನೂ ಅನೇಕ—ಯೋಚನೆಗಳು ಹೊಳೆಯಲಾರಂಭಿಸಿದವು. ಸೆರೆಮನೆಯ ಕಾಲವನ್ನು ನಾನು ಸುಲಭವಾಗಿ ಕಳೆಯಲಿಲ್ಲ. ಅದು ಅಭ್ಯಾಸವಾಗಿ ಹೋಗಿತ್ತು; ಆದರೆ ಈ ಹೊಸ ಸನ್ನಿವೇಶ ಅದಕ್ಕಿಂತ ಉತ್ತಮವೇನೂ ಇರಲಿಲ್ಲ. ನಾನು ನಾಜಿ ರಾಜ್ಯದಲ್ಲಿ ಇದ್ದೆ. ಅದರ ವಿಚಿತ್ರ ವೈಪರೀತ್ಯಗಳು ನನಗೆ ಸರಿ ಬೀಳುತ್ತಿರಲಿಲ್ಲ. ಆದರೂ ನಾಜಿಸಂ ನನಗೆ ಯಾವ ಅಡ್ಡಿಯನ್ನೂ ಮಾಡಲಿಲ್ಲ. ಬ್ಲಾಕ್ ಫಾರೆಸ್ಟ್‌ನ ಮೂಲೆಯಲ್ಲಿನ ಆ ಹಳ್ಳಿಯಲ್ಲಿ ಅದರ ಪ್ರಭಾವ ಎದ್ದು ಕಾಣುತ್ತಿರಲಿಲ್ಲ.

ಪ್ರಾಯಶಃ ನನ್ನ ಮನಸ್ಸೆಲ್ಲ ಇತರ ವಿಷಯಗಳ ಮೇಲೆ ಇತ್ತು. ನನ್ನ ಹಿಂದಿನ ಜೀವನ ಚಿತ್ರಪಟವೆಲ್ಲ ಕಣ್ಣೆದುರಿಗೆ ಸುಳಿದು ಹೋಗುತಿತ್ತು. ಪಕ್ಕದಲ್ಲಿ ಸದಾ ಕಮಲಳ ಚಿತ್ರ. ಆಕೆ ಭಾರತ ಮಹಿಳೆಯ—ಏಕೆ ಸ್ತ್ರೀಜಾತಿಯ—ಸಂಕೇತವಾದಳು. ಒಂದೊಂದು ವೇಳೆ ಆಕೆ—ತನ್ನ ಎಲ್ಲ ದೋಷ ದೌರ್ಬಲ್ಯಗಳಿಂದಲೂ ಪ್ರಿಯತಮವಾದ, ಮನಸ್ಸಿಗೆ ಎಟುಕದ ರಹಸ್ಯಗಳಿಂದ ಕೂಡಿದ ನಮ್ಮ ಮಾತೃಭೂಮಿಯಾದ ಭಾರತದ ಭಾವನೆಗಳೊಂದಿಗೆ ಹೇಗೋ ಆಶ್ಚರ್ಯ ರೀತಿಯಲ್ಲಿ ಮಿಳಿತವಾಗುತಿದ್ದಳು. ಕಮಲ ಯಾರು? ಅವಳು ನನಗೆ ಪರಿಚಿತಳೆ? ಅವಳ ನೈಜ ಆತ್ಮವನ್ನು ನಾನು ಬಲ್ಲೆನೆ? ಆವಳು ನನ್ನನ್ನು ಅರಿತು ಅರ್ಥಮಾಡಿಕೊಂಡಿರುವಳೆ? ಏಕೆಂದರೆ ನಾನೂ ಸಹ ನನ್ನ ಆಳವನ್ನು ನಾನೇ ಅರಿಯದ ಅಸಾಧಾರಣ ವ್ಯಕ್ತಿಯಾಗಿದ್ದೆ. ನನ್ನೊಳಗೆ ಅಡಗಿರುವ ರಹಸ್ಯ, ಅದರ ಎಟುಕದ ಆಳ ನನಗೇ ಅರ್ಥವಾಗುತ್ತಿರಲಿಲ್ಲ. ಇದರಿಂದಲೇ ಒಂದೊಂದು ವೇಳೆ ನನ್ನನ್ನು ಕಂಡರೆ ಕಮಲ ಹೆದರುತ್ತಿದ್ದಳೆಂದು ಕಾಣುತ್ತದೆ. ಮದುವೆಯಾಗಲು ನಾನು ಎಂದಿಗೂ ಸಮರ್ಪಕನಾದ ವರನಲ್ಲ. ಕೆಲವು ವಿಷಯಗಳಲ್ಲಿ ನಾನೂ ಕಮಲಳೂ ಉತ್ತರ ದಕ್ಷಿಣ ಧ್ರುವಗಳಂತೆ. ಇನ್ನು ಕೆಲವು ವಿಷಯಗಳಲ್ಲಿ ಅತಿ ಸಮೀಪ: ಆದರೆ ಒಬ್ಬರಿಗೊಬ್ಬರು ಪರಿಪೋಷಕರಲ್ಲ. ನಮ್ಮ ಶಕ್ತಿಯೇ ನಮ್ಮ ಪರಸ್ಪರ ಬಾಂಧವ್ಯದಲ್ಲಿ ದೌರ್ಬಲ್ಯವಾಯಿತು. ಪರಸ್ಪರ ಪೂರ್ಣ ಗ್ರಹಿಕೆ, ಮನಸ್ಸುಗಳ ಮಿಳಿತ ಅಥವ ಕಷ್ಟ ಇವು ನಮ್ಮಲ್ಲಿ ಸಾಧ್ಯ. ಬಂದಂತೆ ಅನುಭವಿಸಿ ಸಾಮಾನ್ಯ ಸಂಸಾರಜೀವನ ನಡೆಸುವಂಥ ವ್ಯಕ್ತಿಗಳಾಗಿರಲಿಲ್ಲ ನಾವಿಬ್ಬರೂ.

ಇಂಡಿಯಾ ದೇಶದ ಅಂಗಡಿಗಳಲ್ಲಿ ಮಾರುತ್ತಿದ್ದ ಅನೇಕ ಪಟಗಳಲ್ಲಿ ನನ್ನ ಮತ್ತು ಕಮಲಳ ಬೇರೆ ಬೇರೆ ಚಿತ್ರಗಳನ್ನು ಒಂದರ ಪಕ್ಕದಲ್ಲಿ ಒಂದನ್ನು ಅಂಟಿಸಿ ಮೇಲೆ "ಆದರ್ಶ ಜೋಡಿ" ಎಂದು ಬರೆದ ಒಂದು ಚಿತ್ರವಿತ್ತು. ಅನೇಕರು ನಮ್ಮನ್ನು ಅದೇ ರೀತಿ ಭಾವಿಸಿದ್ದರು. ಆದರೆ ಆದರ್ಶವನ್ನು ಮುಟ್ಟಲು ಅಥವ ಧರಿಸಲು ಬಹಳ ಕಷ್ಟವಿದೆ. ನಮ್ಮ ಕಷ್ಟಗಳು, ಭೇದಗಳು ಏನೆ ಇರಲಿ, ಜೀವನ ನಮ್ಮಲ್ಲಿ ಎಷ್ಟೇ ಕಣ್ಣುಮುಚ್ಚಾಲೆಯಾಟವನ್ನು ಆಡಿರಲಿ ನಾವು ತುಂಬ ಅದೃಷ್ಟ ಶಾಲಿಗಳು ಎಂದು ಸಿಂಹಳದಲ್ಲಿ ವಿಶ್ರಾಂತಿ ಪಡೆಯುತ್ತಿದ್ದಾಗ ಕಮಲಳಿಗೆ ನಾನು ಹೇಳಿದ್ದು ಇನ್ನೂ ಜ್ಞಾಪಕದಲ್ಲಿದೆ. ಮದುವೆಯು ಒಂದು ವಿಲಕ್ಷಣ ವ್ಯಾಪಾರ; ಸಾವಿರಾರು ವರ್ಷಗಳ ಅನುಭವವಿದ್ದರೂ ಅದು ಹಾಗೆಯೇ ಉಳಿದಿದೆ. ವಿವಾಹಿತ ಜೀವನದ ಅನೇಕ ಭಗ್ನಜೀವಿಗಳನ್ನು ನಾವೂ ಸುತ್ತಲೂ ನೋಡುತ್ತಿದ್ದೇವೆ. ಅಥವ ಎಲ್ಲಕ್ಕೂ ಮಿಗಿಲಾಗಿ ಯಾವುದು ಜಾಜ್ವಲ್ಯಮಾನವಾಹ ಸ್ವರ್ಣಮಂದಿರವಾಗಿರಬೇಕೋ ಅದು ಇಂದು ತುಕ್ಕುಹಿಡಿದು ಮಲಿನವಾಗಿದೆ. "ನಾವು ಎಷ್ಟು ಅದೃಷ್ಟಶಾಲಿಗಳು" ಎಂದು ಹೇಳಿದಾಗ ಆಕೆ ಒಪ್ಪಿದಳು. ನಾವು ಅನೇಕ ಬಾರಿ ವ್ಯಾಜ್ಯವಾಡಿ ಒಬ್ಬರ ಮೇಲೊಬ್ಬರು ಸಿಟ್ಟಾಗಿದ್ದರೂ ನಮ್ಮ ಜೀವನಜ್ಯೋತಿ ಪ್ರಕಾಶವಾಗಿಯೇ ಇತ್ತು. ನಾವಿಬ್ಬರೂ ಜೀವನದಲ್ಲಿ ಹೊಸ ಸಾಹಸಗಳನ್ನು ಕಾಣುತ್ತ ಪರಸ್ಪರ ಆಳವನ್ನು ಅರಿತುಕೊಳ್ಳಲು ಯತ್ನಿಸಿದೆವು.

ಮಾನವ ಬಾಂಧವ್ಯದ ಸಮಸ್ಯೆ ಎಷ್ಟು ಪ್ರಧಾನವಾದದ್ದು ; ಆದರೂ ಅದನ್ನು ನಮ್ಮ ರಾಜಕೀಯ ಆರ್ಥಿಕ ಸಮಸ್ಯೆಗಳ ಗೊಂದಲದಲ್ಲಿ ಎಷ್ಟೋಬಾರಿ ಮರೆತಿದ್ದೇವೆ. ಇಂಡಿಯ, ಚೀನ ದೇಶಗಳ ಸನಾತನ ಮತ್ತು ಜ್ಞಾನಸಂಪನ್ನ ಸಂಸ್ಕೃತಿಗಳು ಇದನ್ನು ಮರೆತಿಲ್ಲ. ಅದರೂ ಸಾಮಾಜಿಕ ನಡತೆಯ ಕೆಲವು ಆದರ್ಶಗಳನ್ನು ಬೆಳೆಸಿದರು. ಅವುಗಳಲ್ಲಿ ಏನೇ ಲೋಪದೋಷಗಳಿರಲಿ ಅವು ವ್ಯಕ್ತಿಗೆ ಒಂದು ಸಮತೂಕಕೊಟ್ಟವು. ಆ ಸಮತೂಕವನ್ನು ಈಗ ನಾವು ಭಾರತದಲ್ಲಿ ಕಾಣುವುದಿಲ್ಲ. ಆದರೆ ಇತರ ವಿಷಯಗಳಲ್ಲಿ ಎಷ್ಟೋ ವಿಷಯಗಳಲ್ಲಿ ಮುಂದುವರಿದ ಪಾಶ್ಚಾತ್ಯ ದೇಶಗಳಲ್ಲಿ ಈ ಸಮತೂಕ ಎಲ್ಲಿದೆ? ಅಥವ ಸಮತೂಕವಿದ್ದರೆ ಜಡಸ್ವಭಾವವಿರಲೇಬೇಕೆ? ಕ್ರಮಾನುಗತ ಪರಿವರ್ತನೆ ಬೇಡವೆ? ಒಂದಕ್ಕಾಗಿ ಇನ್ನೊಂದನ್ನು ಬಲಿಕೊಡಬೇಕೆ? ಸಮತೂಕ, ಆಂತರಿಕ ಮತ್ತು ಬಾಹ್ಯಪ್ರಗತಿಗಳ ಸಮಿಾಕರಣ, ಹಿಂದಿನವರ ವಿವೇಕ, ನೂತನ ಕಾಲದ ಶಕ್ತಿ ಮತ್ತು ವಿಜ್ಞಾನ ಇವುಗಳ ಸಮಿಾಕರಣ ಖಂಡಿತ ಸಾಧ್ಯವಿರಬೇಕು. ಪ್ರಪಂಚದ ಇತಿಹಾಸದಲ್ಲಿ ನಾವು ಈಗ ಯಾವ ಸ್ಥಿತಿಯಲ್ಲಿದ್ದೇವೆ ಎಂದರೆ ಅಂತಹ ಒಂದು ಸಮಿಾಕರಣ ಸಾಧ್ಯವಾಗದಿದ್ದರೆ ನಿಜವಾಗಿಯೂ ವಿನಾಶವೇ ಖಂಡಿತ. ಹೊಸದೂ ಹಳದೂ ಎರಡರ ನಾಶವೂ ಖಂಡಿತ.

### ೪. ೧೯೩೫ ರ ಕ್ರಿಸ್‌ಮಸ್

ಕಮಲಳ ದೇಹಸ್ಥಿತಿ ಉತ್ತಮವಾಗುವಂತೆ ಕಂಡಿತು. ಅಷ್ಟೇನು ಉತ್ತಮ ಕಾಣದಿದ್ದರೂ ಹಿಂದಿನ ಕೆಲವು ವಾರಗಳ ಸ್ಥಿತಿಯನ್ನು ಹೋಲಿಸಿದರೆ ಎಷ್ಟೋ ಹಗುರ ಕಂಡಿತು. ಗಂಡಾಂತರವನ್ನು ದಾಟಿ, ದೇಹಸ್ಥಿತಿ ಸ್ತಿಮಿತಕ್ಕೆ ಬಂದಿತ್ತು. ಅದೇ ಒಂದು ದೊಡ್ಡ ಲಾಭವಾಗಿತ್ತು. ಈ ರೀತಿ ಇನ್ನೊಂದು ತಿಂಗಳು ಕಳೆದಳು. ಇದೇಸಮಯದಲ್ಲಿ ನನ್ನ ಮಗಳು ಇಂದಿರಳೊಂದಿಗೆ ಸ್ವಲ್ಪಕಾಲ ಮಾತ್ರ ಇಂಗ್ಲೆಂಡಿಗೆ ಹೋದೆ. ಅಲ್ಲಿಗೆ ಹೋಗಿ ಎಂಟು ವರ್ಷಗಳಾಗಿದ್ದವು. ಸ್ನೇಹಿತರು ಬರಲೇಬೇಕೆಂದು ಒತ್ತಾಯ ಮಾಡುತ್ತಿದ್ದರು.

ಬೇಡನ್ ವೀಲರ್‌ಗೆ ಹಿಂದಿರುಗಿ ಪುನಃ ನನ್ನ ದಿನಚರಿಯನ್ನು ಆರಂಭಿಸಿದೆ. ಚಳಿಗಾಲ ಆರಂಭವಾಗಿ ಹಿಮಗಡ್ಡೆ ಭೂಮಿಯನ್ನೆಲ್ಲ ಮುಸುಕಿತ್ತು. ಕ್ರಿಸ್‌ಮಸ್ ಹತ್ತಿರ ಬಂದಂತೆ ಕಮಲಳ ದೇಹಸ್ಥಿತಿ ವಿಷಮಿಸುತ್ತಿರುವಂತೆ ಕಂಡಿತು. ಇನ್ನೊಂದು ಗಂಡಾಂತರ ಆರಂಭವಾಗಿತ್ತು. ಅವಳ ಬದುಕು ಸೂಕ್ಷ್ಮವಾಗುತ್ತಬಂದು ಆ ೧೯೩೫ ನೆ ಇಸವಿಯ ಕೊನೆಯ ದಿನಗಳಲ್ಲಿ, ಅವಳು ಇನ್ನು ಬದುಕಿರುವುದು ಎಷ್ಟುದಿನಗಳು ಗಂಟೆಗಳು ಎಂಬುದನ್ನರಿಯದೆ ಕಡುಕಷ್ಟಗಳಲ್ಲಿ ಹಾದುಹೋಗುತ್ತಿದ್ದೆ. ಮಂಜು ಮುಚ್ಚಿದ ಆ ಮಾಗಿಯ ಪ್ರಶಾಂತ ದೃಶ್ಯವು ಕೊರೆಯುವ ಮರಣ ಮೌನದಂತೆ ಇತ್ತು. ನನ್ನ ಹಿಂದಿನ ಆಶಾಕಿರಣಗಳೆಲ್ಲ ನಂದಿಹೋದವು.

ಆದರೂ ಕಮಲ ಈ ಗಂಡಾಂತರದಲ್ಲೂ ಹೋರಾಡಿ ಅತ್ಯಾಶ್ಚರ್ಯ ಶಕ್ತಿ ದೋರಿ ಅದರಿಂದಲೂ ಪಾರಾದಳು. ಸ್ವಲ್ಪ ಉತ್ತಮಗೊಂಡು ಗೆಲುವಾದಳು ; ಬೇಡನ್ ವೀಲರ್ ಬೇಸರವಾಗಿತ್ತು, ಬೇರೆ ಕಡೆಗೆ ಹೋಗೋಣವೆಂದಳು. ಅದಕ್ಕೆ ಇನ್ನೊಂದು ಕಾರಣವೆಂದರೆ ಆ ವಿಶ್ರಾಂತಿ ಗೃಹದಲ್ಲಿ ಆದ ಇನ್ನೊಬ್ಬ ರೋಗಿಯ ಮರಣ. ಆತನು ಆಗಾಗ ಕಮಲಳಿಗೆ ಹೂಗಳನ್ನು ಕಳುಹಿಸುತ್ತಿದ್ದ ಮತ್ತು ಅವಳನ್ನು ಎರಡು ಮೂರು ಬಾರಿ ಬಂದು ನೋಡಿಕೊಂಡು ಹೋಗಿದ್ದ. ಆತ ಒಬ್ಬ ಐರಿಷ್ ಹುಡುಗ. ಕಮಲಳಿಗಿಂತ ಆತನ ಆರೋಗ್ಯ ಉತ್ತಮವಾಗಿತ್ತು. ಆಗಾಗ್ಗೆ ತಿರುಗಾಡಲು ಸಹ ಹೋಗುತ್ತಿದ್ದ. ಅವನ ಸಾವಿನ ಸುದ್ದಿಯನ್ನು ಕಮಲ ತಿಳಿಯದಿರಲೆಂದು ಪ್ರಯತ್ನಪಟ್ಟೆವು; ಸಾಧ್ಯವಾಗಲಿಲ್ಲ. ಕಾಹಿಲೆಯಲ್ಲಿರುವವರಿಗೆ ಅದರಲ್ಲೂ ಆಸ್ಪತ್ರೆಗಳಲ್ಲಿರುವ ದುರದೃಷ್ಟಶಾಲಿಗಳಿಗೆ ತಿಳಿಯಬಾರದ ವಿಷಯವನ್ನು ಹೇಗೋ ತಿಳಿದುಕೊಳ್ಳುವ ಆರನೆಯದೊಂದು ಇಂದ್ರಿಯಶಕ್ತಿ ಇರುತ್ತದೆ.

ಜನವರಿ ತಿಂಗಳಲ್ಲಿ ಕೆಲವು ದಿವಸ ಪ್ಯಾರಿಸ್ ನಗರಕ್ಕೆ ಹೋಗಿ ಹಾಗೇ ಪುನಃ ಅಲ್ಪಕಾಲ ಮಾತ್ರ ಲಂಡನ್ನಿಗೆ ಹೋದೆ. ಪ್ರಪಂಚವು ಪುನಃ ನನ್ನನ್ನು ಸೆಳೆಯುತ್ತಿತ್ತು. ಏಪ್ರಿಲ್‌ನಲ್ಲಿ ಸೇರುವ

ಅಖಿಲ ಭಾರತ ರಾಷ್ಟ್ರ ಮಹಾಸಭೆಯ ಅಧ್ಯಕ್ಷತೆಗೆ ಎರಡನೆಯ ಬಾರಿ ನನ್ನನ್ನು ಆರಿಸಿದ್ದಾರೆ ಎಂಬ ಸುದ್ದಿ ಲಂಡನ್ನಿನಲ್ಲಿ ಇದ್ದಾಗಲೇ ಮುಟ್ಟಿತು. ಅನೇಕ ಸ್ನೇಹಿತರು ಮೊದಲೇ ಎಚ್ಚರಿಸಿದ್ದರಿಂದ ನಾನೂ ಅದನ್ನು ನಿರೀಕ್ಷಿಸಿದ್ದೆ. ಕಮಲಳ ಜೊತೆಗೆ ಚರ್ಚೆ ಸಹ ಮಾಡಿದ್ದೆ. ಈಗ ನನಗೊಂದು ಸಮಸ್ಯೆಯಾಯಿತು. ಈ ಸ್ಥಿತಿಯಲ್ಲಿ ಕಮಲಳನ್ನು ಬಿಟ್ಟು ಹೊರಡುವುದೆ ಅಥವ ಅಧ್ಯಕ್ಷ ಪದವಿಗೆ ರಾಜಿನಾಮೆ ಕೊಡುವುದೆ? ರಾಜಿನಾಮೆ ಆಕೆಗೆ ಇಷ್ಟವಿರಲಿಲ್ಲ. ಆಕೆಯೂ ಸ್ವಲ್ಪ ಗುಣಹೊಂದಿದ್ದಳು. ಪುನಃ ಸ್ವಲ್ಪ ದಿವಸಗಳ ನಂತರ ಆಕೆಯ ಬಳಿ ಬರಬಹುದೆಂದು ಯೋಚಿಸಿದೆವು.

೧೯೩೬ನೆಯ ಇಸವಿಯ ಕೊನೆಯಲ್ಲಿ ಬೇಡನ್ ವೀಲರ್ ಬಿಟ್ಟು ಸ್ವಿಜರ್‌ಲೆಂಡಿನ ಲಾಸೆನ್ ಬಳಿ ಒಂದು ವಿಶ್ರಾಂತಿಮಂದಿರಕ್ಕೆ ಕಮಲಳನ್ನು ಕರೆದುಕೊಂಡು ಹೋದೆ.

## ೫. ಮೃತ್ಯು

ಕಮಲಳಿಗೂ ಮತ್ತು ನನಗೂ ಸ್ವಿಜರ್‌ಲೆಂಡ್ ಚೆನ್ನಾಗಿತ್ತು. ಆಕೆಗೆ ಹೆಚ್ಚು ಸಂತೋಷವಾಯಿತು. ಸ್ವಿಜರ್ಲೆಂಡಿನ ಈ ಪ್ರಾಂತ್ಯ ನನಗೆ ಸ್ವಲ್ಪ ಪರಿಚಯವಿದ್ದುದರಿಂದ ನನಗೂ ಸುಖವಾಗಿತ್ತು. ಆಕೆಯ ದೇಹ ಸ್ಥಿತಿಯಲ್ಲಿ ಯಾವ ಬದಲಾವಣೆಯೂ ಕಾಣಲಿಲ್ಲ; ಆದ್ದರಿಂದ ಯಾವ ಭಯವೂ ತೋರಲಿಲ್ಲ. ನಿದಾನವಾಗಿ ಚೇತರಿಸಿಕೊಳ್ಳುತ್ತ ಇನ್ನೂ ಕೆಲವು ಕಾಲ ಅದೇ ಸ್ಥಿತಿಯಲ್ಲಿರುವಂತೆ ತೋರಿತು.

ಈ ಮಧ್ಯೆ ಇಂಡಿಯಾದಿಂದ ಮೇಲಿಂದಮೇಲೆ ಕರೆ ಬರಲಾರಂಭಿಸಿತು. ಅಲ್ಲಿ ನನ್ನ ಸ್ನೇಹಿತರು ಹಿಂದಿರುಗಬೇಕೆಂದು ಒತ್ತಾಯಮಾಡುತ್ತಿದ್ದರು. ಸದಾ ನನ್ನ ದೇಶದ ಸಮಸ್ಯೆಗಳ ಆಲೋಚನೆಯಲ್ಲಿ ಮನಸ್ಸು ಕುದಿಯ ತೊಡಗಿತು. ಸೆರೆಮನೆಯ ವಾಸದಿಂದಲೋ ಇತರ ಕಾರಣಗಳಿಂದಲೋ ಸಾರ್ವಜನಿಕ ಪ್ರಶ್ನೆಗಳಲ್ಲ ಪ್ರತ್ಯಕ್ಷ ಭಾಗವಹಿಸಲು ನನಗೆ ಸಾಧ್ಯವಾಗಿರಲಿಲ್ಲ. ಮೂಗುದಾರ ಕಿತ್ತು ಹಾಕಿ ಮುನ್ನುಗ್ಗಲು ಹಾತೊರೆಯುತ್ತಿದ್ದೆ. ಪ್ಯಾರಿಸ್ ಮತ್ತು ಲಂಡನ್ ನಗರಗಳ ನನ್ನ ಭೇಟಿಯಿಂದ ಮತ್ತು ಇಂಡಿಯದಿಂದ ಬಂದ ವಾರ್ತೆಯಿಂದ ಪೂರೆ ಬಿಟ್ಟ ಹಾವಿನಂತೆ ಆಗಿದ್ದೆ. ಹಿಂದೇಟು ಹಾಕಲು ಸಾಧ್ಯವೇ ಇರಲಿಲ್ಲ.

ಕಮಲಳ ಸಂಗಡ ಚರ್ಚೆ ಮಾಡಿ ವೈದ್ಯರ ಸಲಹೆ ಪಡೆದೆ. ಇಂಡಿಯಾಕ್ಕೆ ಹಿಂದಿರುಗಬೇಕೆಂದು ಇಬ್ಬರೂ ಒಪ್ಪಿದರು. ಡಚ್ ಕೆ. ಎಲ್. ಎಮ್. ವಿಮಾನಮಾರ್ಗದ ಒಂದು ವಿಮಾನದಲ್ಲಿ ಸ್ಥಳ ಗೊತ್ತು ಮಾಡಿದೆ. ಫೆಬ್ರುವರಿ ೨೮ ನೆ ದಿನ ನಾನು ಲಾಸೆನ್‌ನಿಂದ ಹೊರಡಬೇಕಾಗಿತ್ತು. ಇಷ್ಟೆಲ್ಲ ಆದಮೇಲೆ ನಾನು ಅವಳಿಂದ ಅಗಲಿ ಹೊರಡಲು ಕಮಲಳಿಗೆ ಮನಸ್ಸಿಲ್ಲವೆಂದು ಭಾಸವಾಯಿತು. ಆದರೂ ನನ್ನ ಕಾರ್ಯಕ್ರಮವನ್ನು ಬದಲಾಯಿಸಬೇಕೆಂದು ಆಕೆ ಹೇಳಲಿಲ್ಲ. ಇಂಡಿಯದಲ್ಲಿ ಬಹಳ ದಿನ ಇರುವುದಿಲ್ಲ. ಎರಡು ತಿಂಗಳಲ್ಲಿ ಹಿಂದಿರುಗುತ್ತೇನೆ ಎಂದು ಹೇಳಿದೆ. ಆಕೆಗೆ ಬೇಕೆಂದರೆ ಇನ್ನೂ ಮುಂಚೆಯೇ ಬರುತ್ತೇನೆ. ಕೇಬಲ್ ಕೊಟ್ಟರೆ ವಿಮಾನಮೂಲಕ ಒಂದು ವಾರದಲ್ಲಿ ಬರುತ್ತೇನೆ ಎಂದೆ.

ನಾನು ಹೊರಡಲು ನಾಲ್ಕೈದು ದಿನಗಳು ಮಾತ್ರ ಇದ್ದವು. ಇಂದಿರ ಹತ್ತಿರದಲ್ಲೇ ಬೆಕ್ಸ್‌ನಲ್ಲಿನಲ್ಲಿ ಓದುತ್ತಿದ್ದಳು. ನಮ್ಮೊಟ್ಟಿಗೆ ಆ ಕೊನೆಯ ದಿನಗಳನ್ನು ಕಳೆಯಲು ಬರುವವಳಿದ್ದಳು. ವೈದ್ಯನು ಬಂದು ನನ್ನ ಪ್ರಯಾಣವನ್ನು ಒಂದುವಾರ ಅಥವಾ ಹತ್ತುದಿವಸ ಮುಂದುವರಿಸಲು ಹೇಳಿದ. ಇನ್ನೇನೂ ಹೇಳಲಿಲ್ಲ. ಒಡನೆ ಒಪ್ಪಿ ಆ ಮುಂದಿನ ಕೆ. ಎಲ್. ಎಮ್. ವಿಮಾನದಲ್ಲಿ ಸ್ಥಳ ಇಡಲು ತಿಳಿಸಿದೆ.

ಈ ಕೊನೆಯ ದಿನಗಳು ಕಳೆಯುತ್ತ ಬಂದಂತೆ ಕಮಲಳಲ್ಲಿ ಒಂದು ಅತಿಸೂಕ್ಷ್ಮ ಅಸಾಧ್ಯ ವ್ಯತ್ಯಾಸ ಕಂಡಿತು. ನನಗೆ ತೋರುವಮಟ್ಟಿಗೆ ದೇಹಸ್ಥಿತಿ ಒಂದೇ ಸಮನಿತ್ತು. ಆದರೆ ಆಕೆಯ ಮನಸ್ಸು ಬಾಹ್ಯ ಪ್ರಪಂಚದಿಂದ ದೂರದೂರವಾಗುವಂತೆ ಕಾಣುತ್ತಲಿತ್ತು. ಯಾರೋ ತನ್ನನ್ನು ಕರೆಯುತ್ತಿದ್ದಾರೆ. ನಾನು ಯಾರನ್ನೂ ಕಾಣದಿದ್ದರೂ, ಯಾರೋ ಕೊಠಡಿಯೊಳಗೆ ಬಂದರು, ಯಾವುದೋ ಆಕೃತಿ ಕಾಣಿಸುತ್ತಿದೆ ಎಂದು ಹೇಳುತ್ತಿದ್ದಳು.

ಫೆಬ್ರುವರಿ ೨೮ನೆ ದಿನ ಬೆಳಗಿನ ಜಾವ ಅವಳ ಉಸಿರು ಅಡಗಿತು. ಇಂದಿರ ಅಲ್ಲಿಯೇ ಇದ್ದಳು ಮತ್ತು ಈ ಕೊನೆಯ ದಿನಗಳಲ್ಲಿ ಸದಾ ನಮ್ಮ ಆಪ್ತ ಸ್ನೇಹಿತ ಡಾಕ್ಟರ್ ಅತಲ್ ಸಹ ನಮ್ಮೊಂದಿಗೆ ಇದ್ದರು.

ಸ್ವಿಜರ್ಲೆಂಡಿನ ಹತ್ತಿರದ ಪಟ್ಟಣಗಳ ಸ್ನೇಹಿತರುಗಳು ಬಂದರು. ಲಾಸೆನ್ನಿನ ಸ್ಮಶಾನಕ್ಕೆ ಅವಳನ್ನು ಒಯ್ದೆವು. ಅಷ್ಟು ಬಾರಿ ಅಷ್ಟು ಚೆನ್ನಾಗಿ ನಗುತ್ತಿದ್ದ ಆ ಮುದ್ದು ಮುಖ, ಸುಂದರದೇಹ, ನಾಲ್ಕೇನಿಮಿಷಗಳಲ್ಲಿ ಸುಟ್ಟು ಬೂದಿಯಾಯಿತು. ಆ ಪ್ರತಿಭಾವಂತ, ಉಜ್ವಲ, ಜೀವಂತ ವ್ಯಕ್ತಿಯ ಮೃತ ಉಳಿಕೆ ಒಂದು ಸಣ್ಣ ಮಡಿಕೆಯಲ್ಲಿ.

## ೬ ಮುಸ್ಸೊಲಿನಿ : ಪುನರಾಗಮನ

ಲಾಸನ್ ಮತ್ತು ಯೂರೋಪಿನಲ್ಲಿ ನನ್ನನ್ನು ಬಂಧಿಸಿದ್ದ ಕಟ್ಟು ಕಡಿದು ಹೋಯಿತು. ಅಲ್ಲಿ ಇರಬೇಕಾದ ಅಗತ್ಯವೂ ಇರಲಿಲ್ಲ. ನಿಜವಾಗಿ ನೋಡಿದರೆ ನನ್ನ ಜೀವನದ ಇನ್ನೂ ಏನೋ ಒಂದು ಕಟ್ಟು ಕಡಿದು ಹೋಯಿತು. ಅದರ ಅರಿವು ನನಗೆ ಈಚೀಚೆಗೆ ಕ್ರಮೇಣ ಆಗಿದೆ. ಆ ದುರ್ದಿನಗಳಲ್ಲಿ ನನ್ನ ಮನಸ್ಸೇ ಸರಿಯಿರಲಿಲ್ಲ. ಇಂದಿರ ಮತ್ತು ನಾನು ಕೆಲವು ದಿನಗಳನ್ನು ಶಾಂತಿಯಿಂದ ಕಳೆಯೋಣವೆಂದು ಮಾಂಟ್ರೆಗೆ ಹೋದೆವು.

ಮಾಂಟ್ರೆಯಲ್ಲಿದ್ದಾಗ ಲಾಸೆನ್ನಿನ ಇಟಲಿ ರಾಯಭಾರಿ ನನ್ನನ್ನು ಕಾಣಲು ಬಂದ. ನನ್ನ ನಷ್ಟಕ್ಕಾಗಿ ಮುಸ್ಸೊಲಿನಿಯ ಅನುತಾಪವನ್ನು ಸೂಚಿಸಲೆಂದೇ ಅಲ್ಲಿಗೆ ಬಂದ. ನನಗೆ ಆಶ್ಚರ್ಯವಾಯಿತು, ಏಕೆಂದರೆ ಮುಸ್ಸೊಲಿನಿಯನ್ನು ನಾನು ನೋಡಿರಲಿಲ್ಲ ಮತ್ತು ನನಗೂ ಅವನಿಗೂ ಯಾವ ಪರಿಚಯವೂ ಇರಲಿಲ್ಲ ; ನನ್ನ ವಂದನೆಗಳನ್ನು ಆತನಿಗೆ ತಿಳಿಸಿ ಎಂದು ಹೇಳಿದೆ.

ಕೆಲವು ವಾರಗಳ ನಂತರ ರೋಮ್ ನಗರದಿಂದ ನನ್ನ ಸ್ನೇಹಿತ ಒಬ್ಬ ಬಂದು ಮುಸ್ಸೊಲಿನಿ ನನ್ನನ್ನು ನೋಡಬೇಕೆಂದಿದ್ದಾನೆ ಎಂದು ತಿಳಿಸಿದ. ಆಗ ರೋಮ್‌ಗೆ ಹೋಗುವ ಯೋಚನೆಯೇ ಇರಲಿಲ್ಲ; ಅದೇ ರೀತಿ ತಿಳಿಸಿದೆ. ಸ್ವಲ್ಪ ದಿನಗಳಾದ ಮೇಲೆ ವಿಮಾನದಲ್ಲಿ ಇಂಡಿಯಕ್ಕೆ ಹೊರಡಬೇಕೆಂದಿದ್ದಾಗ ಪುನಃ ಅದೇ ವಿಷಯ ; ಮತ್ತು ಸ್ವಲ್ಪ ಹೆಚ್ಚು ಆಸಕ್ತಿಯೂ ಮತ್ತು ಒತ್ತಾಯವೂ ಅದರಲ್ಲಿ ಇತ್ತು. ಈ ಭೇಟಿಯಿಂದ ತಪ್ಪಿಸಿಕೊಳ್ಳಬೇಕೆಂದಿದ್ದೆ ; ಆದರೂ ಅಗೌರವ ಮಾಡಲು ಇಷ್ಟವಿರಲಿಲ್ಲ; ಆದರೆ ಮುಸ್ಸೊಲಿನಿಯ ಮೇಲಿದ್ದ ತಾತ್ಸಾರವನ್ನು ಬದಿಗಿಡಲೂಬಹುದಾಗಿತ್ತು. ಏಕೆಂದರೆ ಈ 'ಡೂಚೆ' ಎಂಥ ಮನುಷ್ಯ ಎಂದು ತಿಳಿದುಕೊಳ್ಳಬೇಕೆಂಬ ಕುತೂಹಲವೇನೊ ಇತ್ತು. ಆದರೆ ಆಗ ಅಬಿಸೀನಿಯ ಆಕ್ರಮಣ ನಡೆಯುತ್ತಿತ್ತು. ನಾನು ಆತನನ್ನು ಭೇಟಿಮಾಡುವುದೆಂದರೆ ಅನೇಕ ಊಹಾಪೋಹಗಳಿಗೆ ಆಸ್ಪದ ಕೊಟ್ಟಂತೆ. ಫ್ಯಾಸಿಸ್ಟ್ ಪ್ರಚಾರಕ್ಕೆ ಅಷ್ಟೇ ಸಾಕು. ನಾನು ಏನು ನಿರಾಕರಿಸಿದರೂ ಅದಕ್ಕೆ ಬೆಲೆ ಏನು ? ಇಟಲಿಗೆ ಹೋದ ಭಾರತೀಯ ವಿದ್ಯಾರ್ಥಿಗಳು ಮತ್ತು ಇತರರನ್ನು, ಅವನ ಇಷ್ಟಕ್ಕೆ ವಿರೋಧವಾಗಿ ಕೆಲವು ವೇಳೆ ಅವರಿಗೆ ಏನೂ ತಿಳಿಯದಂತೆ ಈ ರೀತಿ ದುರುಪಯೋಗಪಡಿಸಿದ್ದು ನನಗೆ ತಿಳಿದಿತ್ತು. ೧೯೩೧ ರಲ್ಲಿ 'ಜರ್ನೇಲ್-ಡಿ-ಇಟಲಿ' ಎಂಬ ಪತ್ರಿಕೆ ಪ್ರಕಟಿಸಿದ್ದ 'ಗಾಂಧಿ-ಮುಸ್ಸೊಲಿನಿ ಭೇಟಿಯ' ಸುಳ್ಳಿನ ಕಂತೆಯೂ ನನ್ನೆದುರು ಇತ್ತು.

ಆದ್ದರಿಂದ ನನ್ನ ಸ್ನೇಹಿತನಿಗೆ ವ್ಯಸನ ಸೂಚಿಸಿ, ಆಮೇಲೆ ಪತ್ರ ಬರೆದು, ಯಾವ ತಪ್ಪನ್ನೂ ತಿಳಿದುಕೊಳ್ಳಬಾರದೆಂದು ಟೆಲಿಫೋನ್ ಮೂಲಕ ತಿಳಿಸಿದೆ. ಇದೆಲ್ಲ ಕಮಲ ಸಾಯುವ ಮುಂಚೆ. ಆಕೆ ಸತ್ತ ನಂತರ ಯಾವುದು ಹೇಗೆ ಇದ್ದರೂ ನನ್ನ ಮನಸ್ಸು ಭೇಟಿಮಾಡುವ ಸ್ಥಿತಿಯಲ್ಲಿಲ್ಲವೆಂದು ಪುನಃ ತಿಳಿಸಿದೆ.

ನಾನು ಹೊರಡುವ ಕೆ.ಎಲ್.ಎಂ. ವಿಮಾನ ರೋಮ್ ಮುಖಾಂತರ ಹೋಗುತ್ತಿದ್ದುದರಿಂದಲೂ, ನಾನು ಅಲ್ಲಿ ಒಂದು ಸಂಜೆ ಮತ್ತು ರಾತ್ರಿ ಕಳೆಯುವದು ಅನಿವಾರ್ಯವಾದದ್ದರಿಂದಲೂ ಇಷ್ಟೆಲ್ಲ ಅವಶ್ಯವಾಯಿತು. ಈ ಭೇಟಿಯನ್ನೂ ಮತ್ತು ಅಲ್ಲಿ ತಂಗುವುದನ್ನೂ ತಪ್ಪಿಸಿಕೊಳ್ಳಲುಸಾಧ್ಯವಿರಲಿಲ್ಲ.

ಮಾಂಟ್ರೀಯಲ್ಲಿ ಕೆಲವು ದಿನ ಕಳೆದನಂತರ ಜಿನೀವಕ್ಕೆ ಹೋಗಿ ಅಲ್ಲಿಂದ ಮಾರ್ಸೇಲ್ ಸೇರಿ ಕೆ. ಎಲ್. ಎಂ. ವಿಮಾನ ಏರಿದೆ. ಮಧ್ಯಾಹ್ನ ವಿಮಾರಿ ರೋಮ್ ತಲ್ಪಿದಾಗ ಒಬ್ಬ ಉನ್ನತ ಅಧಿಕಾರಿಯು ಬಂದು ಮುಖ್ಯ ಮಂತ್ರಿ ಮುಸ್ಸೊಲಿನಿಯಿಂದ ಒಂದು ಪತ್ರ ಕೊಟ್ಟ. ಡೂಚೆ ನನ್ನನ್ನು ಕಾಣಲು ಇಷ್ಟಪಡುತ್ತಾರೆ, ಸಂಜೆ ಆರು ಗಂಟೆಗೆ ಭೇಟಿ ಏರ್ಪಾಡಾಗಿದೆ ಎಂದು ಬರೆದಿತ್ತು. ನನಗೆ ಆಶ್ಚರ್ಯವಾಗಿ, ಹಿಂದಿನ ಕಾಗದಗಳಲ್ಲಿ ನಾನು ಬರೆದ ವಿಷಯ ಜ್ಞಾಪಿಸಿದೆ. ಆದರೆ ಈಗ ಎಲ್ಲ ಏರ್ಪಾಡೂ ಆಗಿದೆ; ಅದನ್ನೆಲ್ಲ ವ್ಯತ್ಯಾಸಮಾಡಲು ಸಾಧ್ಯವಿಲ್ಲ ಎಂದು ಬಲಾತ್ಕರಿಸಿದ. ಈ ಭೇಟಿ ನಡೆಯದೆ ಹೋದರೆ ತನ್ನ ಕೆಲಸಕ್ಕೂ ಸಂಚಕಾರ ಬರುವುದೆಂದು ತಿಳಿಸಿದ. ನಾನು 'ಡೂಚೆ' ಯನ್ನು ಎರಡು ನಿಮಿಷ ನೋಡಿದರೆ ಸಾಕು, ಪತ್ರಿಕೆಗಳಲ್ಲಿ ಸುದ್ದಿ ಬರುವುದಿಲ್ಲ ಎಂದ. ಡೂಚೆ ಸ್ವತಃ ನನಗೆ ಹಸ್ತಲಾಘವಕೊಟ್ಟು, ನನ್ನ ಹೆಂಡತಿಯ ವಿಯೋಗಕ್ಕೆ ಸಂತಾಪ ಸೂಚಿಸ ಬೇಕೆಂದಿದ್ದಾರೆ ಎಂದು ಹೇಳಿದ. ಈ ರೀತಿ ಸುಮಾರು ಒಂದು ಗಂಟೆ ಇಬ್ಬರೂ ಗೌರವದಿಂದಲೇ ಚರ್ಚೆ ಮಾಡಿದೆವು; ಆದರೆ ಆಯಾಸ ಹೆಚ್ಚುತ್ತಿತ್ತು. ಆ ಒಂದು ಗಂಟೆ ನನಗೆ ಒಂದು ಪರೀಕ್ಷೆಯಾಯಿತು; ಆತನಿಗೂ ಹಾಗೇ ಆಗಿರಬೇಕು. ಭೇಟಿಗೆ ಗೊತ್ತಾದ ಸಮಯ ಬಂದೇ ಬಿಟ್ಟಿತು. ಕೊನೆಗೆ ನಾನೇ ಗೆದ್ದೆ. ನಾನು ಬರಲು ಆಗುವುದಿಲ್ಲ ಎಂದು ಡೂಚೆಯ ಅರಮನೆಗೆ ಟೆಲಿಫೋನ್ ಸುದ್ದಿ ಹೋಯಿತು.

ಆ ಸಂಜೆ ಮುಸ್ಸೊಲಿನಿಗೆ ಒಂದು ಪತ್ರ ಬರೆದು ಆತನ ಆಹ್ವಾನವನ್ನು ಸ್ವೀಕರಿಸಲು ಸಾಧ್ಯ ವಿಲ್ಲದ್ದಕ್ಕಾಗಿ ವ್ಯಸನ ಸೂಚಿಸಿ ಆತನ ಅನುತಾಪಕ್ಕಾಗಿ ವಂದನೆಗಳನ್ನು ತಿಳಿಸಿದೆ.

ನನ್ನ ಪ್ರಯಾಣ ಮುಂದುವರಿಸಿದೆ. ಕೈರೋದಲ್ಲಿ ನನ್ನ ಹಳೆಯ ಸ್ನೇಹಿತರು ನನ್ನನ್ನು ಕಾಣ ಬಂದಿದ್ದರು. ಅಲ್ಲಿಂದ ಮುಂದೆ ಪಶ್ಚಿಮ ಏಷ್ಯದ ಮರುಭೂಮಿಗಳು. ಅನೇಕ ಘಟನೆಗಳು ಮತ್ತು ನನ್ನ ಪ್ರಯಾಣದ ಸಿದ್ಧತೆಗಳೇ ಇದುವರೆಗೆ ನನ್ನ ಮನಸ್ಸು ತುಂಬಿದ್ದವು. ಆದರೆ ಕೈರೊ ಬಿಟ್ಟ ನಂತರ, ಗಂಟೆಗಂಟೆಗೂ, ಈ ಮರುಭೂಮಿಯ ಮೇಲೆ ಹಾರಿ ಹೋಗುವಾಗ ಒಂದು ಭಯಂಕರ ವಿವಿಕ್ತತೆಯನ್ನು, ಶೂನ್ಯತೆಯನ್ನು, ಅಸಾರ್ಥಕತೆಯನ್ನು ಅನುಭವಿಸಿದೆ. ನನ್ನ ಮನೆಗೆ ಒಬ್ಬನೇ ಏಕಾಂಗಿಯಾಗಿ ಹೋಗುತ್ತಿದ್ದೇನೆ; ಇನ್ನು ಅದು ನನಗೆ ಮನೆಯೂ ಅಲ್ಲ. ನನ್ನ ಪಕ್ಕದಲ್ಲಿ ಒಂದು ಬುಟ್ಟಿ; ಆ ಬುಟ್ಟಿಯಲ್ಲಿ ಒಂದು ಸಣ್ಣ ಮಡಕೆ. ಕಮಲಳ ಉಳಿಕೆಯೆಲ್ಲ ಅಷ್ಟೆ. ನಮ್ಮ ಉಜ್ವಲ ಕನಸುಗಳೆಲ್ಲ ಒಡೆದು ನುಚ್ಚುನೂರಾಗಿ ಬೂದಿಯಾಗಿದ್ದವು. ಅವಳು ಇನ್ನಿಲ್ಲ, ಕಮಲ ಇನ್ನಿಲ್ಲ. ಇದೇ ನನ್ನ ಮನಸ್ಸಿನ ಪಲ್ಲವಿಯಾಯಿತು.

ಭೊವಾಲಿ ವಿಶ್ರಾಂತಿ ಮಂದಿರದಲ್ಲಿ ಆಕೆ ಕಾಹಿಲೆ ಮಲಗಿದ್ದಾಗ ಆಕೆಯೊಂದಿಗೆ ನಾನು ಚರ್ಚೆ ಮಾಡಿ ಬರೆದ ನನ್ನ ಜೀವನ ಚರಿತ್ರೆ—'ನನ್ನ ಆತ್ಮಕಥೆ' ಯನ್ನು ಜ್ಞಾಪಿಸಿಕೊಂಡೆ. ಅದನ್ನು ಬರೆಯುತ್ತಿದ್ದಾಗ ಆಗಾದ ಒಂದೆರಡು ಭಾಗಗಳನ್ನು ತೆಗೆದುಕೊಂಡು ಆಕೆಗೆ ಓದುತ್ತಿದ್ದೆ. ಅಲ್ಲಲ್ಲಿ ಕಂಡು ಕೇಳಿದ್ದಳು, ಅಷ್ಟೆ. ಇನ್ನು ಉಳಿದುದನ್ನು ಆಕೆ ನೋಡುವುದೆಲ್ಲಿ? ನಾವಿಬ್ಬರೂ ಸೇರಿ ನಮ್ಮ ಜೀವನ ಪುಸ್ತಕದ ಭಾಗಗಳನ್ನು ಬರೆಯುವುದೂ ಮುಗಿಯಿತು.

ಬಾಗ್ದಾದ್ ನಗರ ಸೇರಿದೊಡನೆ 'ಕಣ್ಮರೆಯಾದ ಕಮಲಳಿಗೆ' ಎಂದು ಅರ್ಪಣೆಯಿಂದ ಗ್ರಂಥಾರಂಭ ಮಾಡಿ ಎಂದು ನನ್ನ ಆತ್ಮಕಥೆಯನ್ನು ಪ್ರಕಟಿಸುವ ಮುದ್ರಣಕಾರರಿಗೆ ಕೇಬಲ್ ಕಳಿಸಿದೆ.

ಕರಾಚಿಗೆ ಬಂದೆ; ಜನಜಂಗುಳಿ, ಅನೇಕ ಪರಿಚಿತ ಮುಖಗಳು. ಅನಂತರ ಅಲಹಾಬಾದ್, ಅಲ್ಲಿ ವೇಗವಾಹಿನಿ ಗಂಗಾಮಾತೆಯ ಮಡಿಲೊಳಗೆ ಮಡಕೆಯಲ್ಲಿದ್ದ ಬೂದಿಯನ್ನು ಚೆಲ್ಲಿದೆವು. ನಮ್ಮ ಪೂರ್ವಜರೆಷ್ಟು ಜನರನ್ನು ಈ ರೀತಿ ಕೊಂಡೊಯ್ದು ಸಮುದ್ರಕ್ಕೆ ಸೇರಿಸಿದ್ದಳೋ; ಆಕೆಯ ತೋಳತೆಕ್ಕೆಯಲ್ಲಿ ನಾವು ಎಷ್ಟು ಜನ ಹಿಂಬಾಲಿಸಬೇಕೋ.

# ಅಧ್ಯಾಯ ೩: ಅನ್ವೇಷಣೆ

## ೧. ಭಾರತದ ಗತವೈಭವ

ಯೋಜನೆ ಮತ್ತು ಕಾರ್ಯಪರಂಪರೆಗಳ ಈ ವರ್ಷಗಳಲ್ಲಿ ನನ್ನ ಮನಸ್ಸಿನಲ್ಲಿದ್ದುದು ಭಾರತ ಒಂದೇ; ಅದನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಮಾಡುತ್ತಿದ್ದೆ. ಆ ಕಡೆ ನನ್ನ ಪ್ರತಿಕ್ರಿಯೆಗಳೇನು ಎಂದು ಚಿಂತನಮಾಡುತ್ತಿದ್ದೆ. ನನ್ನ ಬಾಲ್ಯದ ದಿನಗಳನ್ನು ನೆನಸಿಕೊಂಡು, ಆಗ ನನ್ನ ಭಾವನೆ ಏನಿತ್ತು, ಬೆಳೆಯುತ್ತಿದ್ದ ನನ್ನ ಮನಸ್ಸಿನಲ್ಲಿ ಈ ಭಾವನೆಗೆ ಏನು ಕಲ್ಪನೆ ಇತ್ತು; ಹೊಸ ಅನುಭವಗಳಿಂದ ಅದು ಹೇಗೆ ಒಂದು ಆಕಾರಕ್ಕೆ ಬಂದಿತು ಎಂದು ಜ್ಞಾಪಕಕ್ಕೆ ತರಲು ಪ್ರಯತ್ನಮಾಡಿದೆ. ಕೆಲವು ವೇಳೆ ಆ ಕಲ್ಪನೆ ಎಲ್ಲಿಯೋ ಮರೆಯಾಗುತ್ತಿತ್ತು. ಆದರೂ ಅದು ಪುರಾತನ ಕತೆಗಳು, ಪುರಾಣಗಳು ಮತ್ತು ಆಧುನಿಕ ವಾಸ್ತವಿಕತೆ ಇವುಗಳ ಒಂದು ವಿಚಿತ್ರ ಸಮ್ಮಿಶ್ರಣವಾಗಿ ನಿಧಾನವಾಗಿ ರೂಪಾಂತರ ಹೊಂದುತ್ತ ಅಲ್ಲಿಯೇ ಉಳಿದಿತ್ತು. ಅದರಿಂದ ನನಗೆ ಹೆಮ್ಮೆಯೂ ಆಯಿತು, ನಾಚಿಕೆಯೂ ಆಯಿತು. ನನ್ನ ಸುತ್ತಲು ಕಾಣುತ್ತಿದ್ದ ಅರ್ಥವಿಲ್ಲದ ಅಂಥ ಆಚಾರಗಳು, ಸತ್ವಶೂನ್ಯ ಭಾವನೆಗಳು ಎಲ್ಲಕ್ಕಿಂತ ಹೆಚ್ಚಾಗಿ ದಾಸ್ಯದಲ್ಲಿ ನರಳುವ ನಮ್ಮ ಬಡತನದ ಬಾಳು ಇವುಗಳಿಂದ ನನಗೆ ಬಹಳ ನಾಚಿಕೆಯಾಯಿತು.

ನಾನು ವಯಸ್ಕನಾಗಿ ಭಾರತದ ಸ್ವಾತಂತ್ರ್ಯವೆ ನನ್ನ ಗುರಿ ಎಂದು ಕಾರ್ಯರಂಗಕ್ಕೆ ಇಳಿದೊಡನೆ ನನಗೆ ಭಾರತದ ಹುಚ್ಚು ಹಿಡಿಯಿತು. ಅಸ್ಪಷ್ಟವಿದ್ದರೂ ಎಲ್ಲರ ಮನಸ್ಸಿನಲ್ಲೂ ಸ್ಪಷ್ಟವಾಗಿ ಮೂಡಿ ಗುರಿಯ ಕಡೆಗೆ ಸದಾ ನನ್ನನ್ನು ಸೆಳೆದು ಮುನ್ನೂಕುತ್ತ ನನ್ನನ್ನು ಹಿಡಿತದಲ್ಲಿ ಸಿಕ್ಕಿಸಿಕೊಂಡ ಈ ಭಾರತ ಯಾವುದು. ವ್ಯಕ್ತಿಗೌರವ, ರಾಷ್ಟ್ರಗೌರವ, ಮತ್ತು ಪರದಾಸ್ಯವನ್ನು ಪ್ರತಿಭಟಿಸಿ ನಮ್ಮ ಇಷ್ಟಕ್ಕನುಗುಣವಾಗಿ ನಮ್ಮ ಸ್ವತಂತ್ರಜೀವನವನ್ನು ನಾವು ನಡೆಸಬೇಕೆಂಬ ಮಾನವ ಸಹಜವಾದ ಆಶೆ ಇವುಗಳಿಂದ ನನ್ನ ಉತ್ಸಾಹ ಆರಂಭವಾಗಿರಬೇಕು. ಸನಾತನವೂ ಸಂಪದ್ಯುಕ್ತವೂ ಆದ ಭಾರತದಂಥ ಒಂದು ದೇಶವು ದೂರದ ಒಂದು ಸಣ್ಣ ದ್ವೀಪಕ್ಕೆ ಅಡಿಯಾಳಾಗಿ ದಾಸ್ಯದ ಹೊರೆಯಲ್ಲಿ ನರಳುತ್ತಿದ್ದುದು ಅಸಹ್ಯವೆನಿಸಿತು. ನಮ್ಮ ಕಡು ಬಡತನ ಮತ್ತು ಅವನತಿಗೆ ಈ ದಾಸ್ಯಶೃಂಖಲೆಯೇ ಕಾರಣವಾಗಿದ್ದುದು ಇನ್ನೂ ತುಚ್ಛವೆನಿಸಿತು.

ಆದರೆ ನನ್ನ ಅಂತರಾಳದಲ್ಲಿ ಏಳುತ್ತಿದ್ದ ಪ್ರಶ್ನೆಗಳಿಗೆ ಉತ್ತರಕೊಡಲು ಅದರಿಂದ ಸಾಧ್ಯವಾಗಲಿಲ್ಲ. ನನ್ನ ಪ್ರಾಕೃತಿಕ ಮತ್ತು ಭೌಗೋಲಿಕ ಸ್ವರೂಪವಲ್ಲದೆ ಈ ಭಾರತ ಯಾವುದು? ಹಿಂದೆ ಅದರ ಸ್ವರೂಪವೇನಾಗಿತ್ತು? ಆಗ ಅದಕ್ಕೆ ಶಕ್ತಿ ಏತರಿಂದ ಬಂದಿತು? ಆ ಸನಾತನ ಶಕ್ತಿ ಹೇಗೆ ಮಾಯವಾಯಿತು? ಅದು ಪೂರ್ಣ ಮಾಯವಾಗಿದೆಯೆ? ಕೋಟ್ಯಂತರ ಜನಗಳ ಆವಾಸಸ್ಥಾನವಾಗಿರುವ ಭಾರತಕ್ಕೆ ಈಗ ಅಂತಸ್ಸತ್ವ ಏನಾದರೂ ಇದೆಯೇ? ಆಧುನಿಕ ಪ್ರಪಂಚದಲ್ಲಿ ಅದು ಹೇಗೆ ಹೊಂದಿಕೊಳ್ಳಬಲ್ಲುದು?

ಪ್ರತ್ಯೇಕವಾಗಿರುವುದು ಹಿತವೂ ಅಲ್ಲ, ಸಾಧ್ಯವೂ ಇಲ್ಲ ಎಂದು ಕ್ರಮೇಣ ನನಗೆ ಮನವರಿಕೆಯಾದಮೇಲೆ ಈ ವಿಶಾಲ ಅಂತರ ರಾಷ್ಟ್ರೀಯ ದೃಷ್ಟಿ ನನಗೆ ಬಂದಿತು. ಭಾರತ ಮತ್ತು ಪ್ರಪಂಚದ ಇತರ ದೇಶಗಳ ರಾಜಕೀಯ ಆರ್ಥಿಕ ಮತ್ತು ಸಂಸ್ಕೃತಿಗಳ ಪರಸ್ಪರ ಸಹಕಾರ ಮತ್ತು ಸಂಬಂಧವು ಹೆಚ್ಚು ಆತ್ಮೀಯವಾಗಿರಬೇಕಾದ್ದೇ ಭಾರತದ ಭವಿಷ್ಯ ಎಂದು ಹೊಳೆಯಿತು. ಆದರೆ ಭವಿಷ್ಯದ ಮೊದಲು, ಪ್ರಸ್ತುತ ಸ್ಥಿತಿ, ಅದಕ್ಕೆ ಮೊದಲು, ಸಾವಿರಾರು ವರ್ಷಗಳಿಂದ ಹೆಣೆದುಕೊಂಡು ಬಂದು ಇಂದಿನದಕ್ಕೆ ಮೂಲವಾಗಿರುವ ಗತಕಾಲ. ಆದ್ದರಿಂದ ಅರ್ಥವಿವರಣೆಗೆ ಗತಕಾಲದ ಕಡೆಗೆ ತಿರುಗಿದೆ.

ಭಾರತ ನನಗೆ ರಕ್ತದಲ್ಲಿತ್ತು. ಹೆಸರು ಕೇಳಿದರೇನೆ ನನಗೆ ರೋಮಾಂಚವಾಗುತ್ತಿತ್ತು. ಆದರೂ ಇಂದಿನ ಸ್ಥಿತಿಯನ್ನೂ ಮತ್ತು ಹಿಂದಿನ ಅನೇಕ ಪದ್ಧತಿಗಳನ್ನೂ ಕಂಡು ಅಸಹ್ಯಪಡುವ ಒಬ್ಬ ಪರಕೀಯ ರಂಧ್ರಾನ್ವೇಷಕನಂತೆ ವಿಷಯ ಪ್ರವೇಶಮಾಡಿದೆ. ಸ್ವಲ್ಪಮಟ್ಟಿಗೆ ನನ್ನ ದಾರಿ

ಪಾಶ್ಚಿಮಾತ್ಯರೀತಿಯದಾಗಿತ್ತು. ಎಲ್ಲವನ್ನೂ ಪಾಶ್ಚಿಮಾತ್ಯ ಸ್ನೇಹಿತನೊಬ್ಬ ನೋಡುವಂತೆ ನಾನೂ ನೋಡಹೊರಟೆ. ಭಾರತದ ದೃಷ್ಟಿ ಮತ್ತು ಸ್ವರೂಪವನ್ನು ಬದಲಾಯಿಸಿ ಆಧುನಿಕ ರೂಪ ಕೊಡ ಬೇಕೆಂದು ಕುತೂಹಲನಾದೆ. ಆದರೂ ನನ್ನಲ್ಲಿ ಸಂಶಯ ತರಂಗಗಳು ಎದ್ದವು. ಗತಕಾಲದ ಆಸ್ತಿಯ ಬಹುಭಾಗವನ್ನು ಕಿತ್ತೊಗೆಯಬೇಕೆನ್ನುವ ನಾನು ಭಾರತವನ್ನು ಅರಿತಿದ್ದೇನೆಯೆ? ಕಿತ್ತು ಹಾಕುವುದು ಎಷ್ಟೊ ಇದೆ; ಕಿತ್ತುಹಾಕಲೇ ಬೇಕು. ಆದರೆ ಭಾರತಕ್ಕೆ ಸತ್ವಪೂರ್ಣವೂ ಶಾಶ್ವತವೂ ಆದ ಒಂದು ಶಕ್ತಿ ಇಲ್ಲದಿದ್ದರೆ ಭಾರತ ಹಿಂದೆ ಯಾವ ಅತ್ಯುನ್ನತ ಸ್ಥಿತಿಯಲ್ಲಿತ್ತೋ ಆ ಸ್ಥಿತಿಯನ್ನು ಮುಟ್ಟಲೂ ಸಾಧ್ಯವಿರಲಿಲ್ಲ ಮತ್ತು ಸಹಸ್ರಾರು ಶತಮಾನಗಳಿಂದ ಸುಸಂಸ್ಕೃತ ಜೀವನದಲ್ಲಿ ಬಾಳಲೂ ಸಾಧ್ಯವಾಗುತ್ತ ಇರಲಿಲ್ಲ. ಹಾಗಾದರೆ ಆ ಶಕ್ತಿ ಯಾವುದು?

ವಾಯವ್ಯ ಇಂಡಿಯದ ಸಿಂಧು ಕಣಿವೆಯ ಮೊಹೆಂಜೊದಾರೊ ದಿಣ್ಣೆಯಮೇಲೆ ನಿಂತು ನೋಡಿದೆ. ಸುತ್ತಲೂ ಐದುಸಾವಿರ ವರ್ಷಗಳ ಹಿಂದೆ ಇದ್ದ ಪುರಾತನ ನಗರದ ಮನೆಗಳು ಮತ್ತು ಬೀದಿ ಸಾಲುಗಳು. ಆಗಲೇ ಅದು ಪುರಾತನವೂ ಪೂರ್ಣ ವಿಕಸಿತವೂ ಆದ ನಾಗರಿಕತೆಯಾಗಿತ್ತು. ಪ್ರೊಫೆಸರ್ ಚೈಲ್ಡ್ ಹೇಳುವಂತೆ "ಸಿಂಧು ಕಣಿವೆಯ ನಾಗರಿಕತೆಯಲ್ಲಿ ಜನಜೀವನಕ್ಕೂ ಸುತ್ತಲಿನ ನಿರ್ದಿಷ್ಟ ಸನ್ನಿವೇಶಗಳಿಗೂ ಇರುವ ಅನುಪಮ ಜೋಡಣೆಯನ್ನು ನೋಡಿದರೆ ಅದು ಅನೇಕ ವರ್ಷಗಳ ಸ್ಥಿರಸೈರಣೆಯ ಪ್ರಯತ್ನದ ಫಲವಾಗಿರಬೇಕು. ಅದು ಜೀವಂತವಾಗಿದೆ. ಇಂದಿನ ಭಾರತೀಯ ಸಂಸ್ಕೃತಿಗೆ ಅದು ತಳಪಾಯವಾಗಿದೆ" ಎಂದಿದ್ದಾರೆ. ಐದು ಆರು ಸಾವಿರ ವರ್ಷಗಳಿಂದ ಅವ್ಯಾಹತ ವಾಹಿನಿಯಾಗಿ ಹರಿದು ಬಂದ ಸಂಸ್ಕೃತಿ ಅಥವ ನಾಗರಿಕತೆ ಇಂದೂ ಜೀವಂತವಿದೆ ಎನ್ನುವದು ಅದ್ಭುತ ಕಲ್ಪನೆ. ಅಚಲ ಅಥವ ಪ್ರಗತಿರಹಿತ ಎಂದಲ್ಲ; ಏಕೆಂದರೆ ಭಾರತ ಸದಾ ವ್ಯತ್ಯಾಸ ಹೊಂದು ತ್ತಿದೆ, ಪ್ರಗತಿ ಮಾರ್ಗದಲ್ಲಿ ನಡೆಯುತ್ತಿದೆ. ಪಾರಸಿಕರು, ಐಗುಪ್ತರು, ಗ್ರೀಕರು, ಚೀನೀಯರು, ಅರಬರು, ಮಧ್ಯ ಏಷ್ಯ ಮತ್ತು ಮೆಡಿಟರೇನಿಯನ್ ಸಮುದ್ರದ ಜನಗಳ ಸಂಪರ್ಕ ಭಾರತದೊಂದಿಗೆ ಇದ್ದೇ ಇದೆ. ಅವುಗಳಮೇಲೆ ಭಾರತ ತನ್ನ ಪ್ರಭಾವ ಬೀರಿದರೂ, ಮತ್ತು ಅವುಗಳ ಪ್ರಭಾವ ತನ್ನ ಮೇಲೆ ಬಿದ್ದರೂ, ಭಾರತದ ಸಾಂಸ್ಕೃತಿಕ ತಳಪಾಯ ಭದ್ರವಾಗಿಯೇ ಉಳಿದಿದೆ. ಈ ಶಕ್ತಿಯ ಗುಟ್ಟು ಏನು? ಅದು ಎಲ್ಲಿಂದ ಬಂದಿತು?

ಭಾರತದ ಇತಿಹಾಸವನ್ನೂ ಮತ್ತು ವಿಪುಲ ಪುರಾತನ ಗ್ರಂಥಗಳನ್ನೂ ಓದಿದೆ. ಅವುಗಳ ಹಿಂದಿನ ಭಾವನಾ ಶಕ್ತಿ, ಭಾಷಾ ಸ್ಪಷ್ಟತೆ, ಮನಸ್ಸಿನ ಪರಿಪೂರ್ಣತೆಯಿಂದ ಬಹಳ ಚಕಿತನಾದೆ. ಶತಮಾನ ಗಳ ಹಿಂದೆ ಚೀನ, ಪಶ್ಚಿಮ ಮತ್ತು ಮಧ್ಯ ಏಷ್ಯದಿಂದ ಬಂದು ತಮ್ಮ ಯಾತ್ರೆಗಳ ಇತಿಹಾಸವನ್ನು ಬರೆದಿಟ್ಟಿರುವ ಮಹಾ ಯಾತ್ರಿಕರೊಂದಿಗೆ ಇಂಡಿಯಾ ದೇಶವನ್ನೆಲ್ಲ ಸುತ್ತಿದೆ. ಪೂರ್ವ ಏಷ್ಯ, ಆಂಗ್ ಕೋರ, ಬೋರೊ ಬುದೂರ್, ಮತ್ತು ಇತರ ಸ್ಥಳಗಳಲ್ಲಿ ಇಂಡಿಯದ ಮಹತ್ಸಾಧನೆಗಳ ವಿಚಾರ ಯೋಚಿಸಿದೆ. ಹಳೆಯ ಪುರಾಣ ಇತಿಹಾಸಗಳೊಡನೆ ನಿಕಟ ಬಾಂಧವ್ಯದಿಂದ ನಮ್ಮ ಸಾಹಿತ್ಯ ಮತ್ತು ಆಲೋಚನೆಗಳಮೇಲೆ ಹೆಚ್ಚು ಪ್ರಭಾವ ಬೀರಿರುವ ಹಿಮಾಲಯ ಪರ್ವತಗಳಲ್ಲಿ ತಿರುಗಾಡಿದೆ. ನನ್ನ ಪರ್ವತ ಪ್ರೇಮ, ಮತ್ತು ಕಾಶ್ಮೀರದ ಬಾಂಧವ್ಯ ಕಾಶ್ಮೀರದ ಬೆಟ್ಟದ ಸಾಲುಗಳಿಗೆ ನನ್ನನ್ನು ಸೆಳೆ ದೊಯ್ದವು. ಅಲ್ಲಿ ಇಂದಿನ ಜೀವನ, ಓಜಸ್ಸು ಮತ್ತು ಸೌಂದರ್ಯವನ್ನು ಮಾತ್ರವಲ್ಲ ಗತಕಾಲದ ಹಿಂದಿನ ವೈಭವದ ಸೊಬಗನ್ನೂ ಕಂಡೆ. ಈ ಮಹಾಪರ್ವತ ಶ್ರೇಣಿಯಿಂದ ಭಾರತದ ಫಲವತ್ತಾದ ಮೈದಾನಗಳಿಗೆ ಹರಿಯುವ ಮಹಾನದಿಗಳಿಂದ ಮುಗ್ಧನಾದೆ; ಅವು ನಮ್ಮ ಇತಿಹಾಸದ ಅನಂತ ಮುಖಗಳನ್ನು ಜ್ಞಾಪಕಕ್ಕೆ ತಂದವು. ಸಾವಿರಾರು ವರ್ಷಗಳಿಂದ ಬೇರೆಬೇರೆ ಜನಾಂಗಗಳು, ಪಂಗಡ ಗಳು, ಒಂಟೆಗಳ ಸಾಲು, ಸೈನ್ಯಗಳ ತಂಡಗಳು ಬಂದಿರುವ ಈ ನಮ್ಮ ದೇಶಕ್ಕೆ ಇಂಡಿಯ ಅಥವ ಹಿಂದುಸ್ಥಾನ್ ಎಂದು ಹೆಸರು ತಂದಿರುವ ಆ ಇಂಡಸ್ ಅಥವ ಸಿಂಧು; ಇತಿಹಾಸದಲ್ಲಿ ಹೆಚ್ಚು ಪ್ರಮುಖ ಪಾತ್ರವಹಿಸದಿದ್ದರೂ ಹಿಂದಿನ ಕಥೆಗಳಲ್ಲಿ ಅತಿ ಮುಖ್ಯವೆನಿಸಿ, ಇಂಡಿಯದ ಈಶಾನ್ಯಮೂಲೆಯ ಪರ್ವತಶ್ರೇಣಿಯ ಹೃದಯವನ್ನು ಭೇದಿಸಿಕೊಂಡು ಆಳವಾದ ಕಣಿವೆಗಳ

ಮೂಲಕ ದಾರಿಯನ್ನು ಸೀಳಿಕೊಂಡು ಮುನ್ನುಗ್ಗಿ ಪರ್ವತ ಸಾಲುಗಳು ಮತ್ತು ದಟ್ಟವಾದ ವಕ್ರ ಶ್ರೇಣಿಗಳ ಮಧ್ಯೆ ಗಂಭೀರ ಗತಿಯಿಂದ ಹರಿದುಬರುವ ಬ್ರಹ್ಮಪುತ್ರ; ಸುತ್ತಲೂ ಶ್ರೀ ಕೃಷ್ಣನ ನೃತ್ಯ ವಿನೋದ ಲೀಲೆಗಳ ಅಸಂಖ್ಯಾತ ಇತಿಹಾಸಗಳಿಗೆ ಸ್ಥಾನವಾಗಿರುವ ಯಮುನೆ; ಈ ಎಲ್ಲಕ್ಕಿಂತ ಮಿಗಿಲಾಗಿ ಭಾರತ ಹೃದಯವನ್ನೇ ಸೆರೆಹಿಡಿದು, ಇತಿಹಾಸದ ಮುಂಬೆಳಗಿನಿಂದ ಅಸಂಖ್ಯಾತ ಜನಕೋಟಿಯನ್ನು ತನ್ನ ತೀರಗಳಿಗೆ ಸೆಳೆದಿರುವ ಗಂಗಾನದಿ. ಗಂಗಾಮಾತೆಯ ಕಥೆ ಮೂಲದಿಂದ ಸಮುದ್ರದವರೆಗೆ, ಹಿಂದಿನಿಂದ ಇಂದಿನವರೆಗೆ ಭಾರತದ ನಾಗರಿಕತೆ, ಸಂಸ್ಕೃತಿಗಳ ಕತೆ, ಚಕ್ರಾಧಿಪತ್ಯಗಳ ಉದಯಾಸ್ತಗಳ ಕತೆ, ಗರ್ವದಿಂದ ಮೆರೆಯುವ ಮಹಾ ನಗರಗಳ ಕತೆ, ಮಾನವನ ಮಹಾಸಾಹಸದ ಕತೆ, ಭಾರತೀಯ ದಾರ್ಶನಿಕರ ಮಾನಸಿಕ ಅನ್ವೇಷಣೆಯ ಕತೆ, ಜೀವನ ಸಂಪತ್ತು ಮತ್ತು ಸಫಲತೆ, ಅಂತೆಯೇ ನಿರಸನ ಮತ್ತು ಸಂನ್ಯಾಸದ ಕತೆ, ಏರಿಳಿತಗಳು ಮತ್ತು ಅಭಿವೃದ್ಧಿ ಅವನತಿಗಳ ಕತೆ, ಜೀವ ಮತ್ತು ಸಾವಿನ ಕತೆ.

ಹಳೆಯ ಸ್ಮಾರಕಗಳು, ಪಾಳು ಬೀಡುಗಳು, ಪುರಾತನ ಶಿಲ್ಪಕೃತಿಗಳು, ಭಿತ್ತಿ ಚಿತ್ರಗಳು—ಅಜಂತ, ಎಲ್ಲೋರ, ಎಲಿಫಾಂಟಾ ಗುಹೆಗಳು ಮತ್ತು ಇತರ ಸ್ಥಳಗಳು—ಇವುಗಳನ್ನೆಲ್ಲ ನೋಡಿದೆ. ಎಲ್ಲಿ ಪ್ರತಿಯೊಂದು ಕಲ್ಲೂ ಇಂಡಿಯದ ಇತಿಹಾಸದ ತನ್ನ ಕಥೆ ಹೇಳುತ್ತದೆಯೋ ಆ ಆಗ್ರ ಮತ್ತು ದೆಹಲಿಯ ಇತ್ತೀಚಿನ ಸುಂದರ ಸೌಧಗಳನ್ನೂ ನೋಡಿದೆ.

ನನ್ನ ಸ್ವಂತ ನಗರವಾದ ಅಲಹಾಬಾದ್ ಮತ್ತು ಹರಿದ್ವಾರದಲ್ಲಿ ಕುಂಭಮೇಳ ಮುಂತಾದ ಭಾಗೀರಥೀ ಹಬ್ಬಗಳಿಗೆ ಹೋಗುತ್ತಿದ್ದೆ. ಸಾವಿರಾರು ವರ್ಷಗಳಿಂದ ಭಾರತದ ಮೂಲೆ ಮೂಲೆಗಳಿಂದ ಗಂಗಾನದಿಯಲ್ಲಿ ಸ್ನಾನಮಾಡಲು ನಮ್ಮ ಪೂರ್ವಿಕರು ಬರುತ್ತಿದ್ದಂತೆ ಈಗಲೂ ಲಕ್ಷಾಂತರ ಜನರು ಬಂದು ಸ್ನಾನಮಾಡುವುದನ್ನು ನೋಡಿದೆ. ಹದಿಮೂರು ನೂರು ವರ್ಷಗಳ ಹಿಂದೆ ಚೀನೀ ಯಾತ್ರಿಕರು ಮತ್ತು ಇತರರು ಬರೆದ ಈ ಜಾತ್ರೆಗಳ ವರ್ಣನೆಯನ್ನು ಜ್ಞಾಪಿಸಿಕೊಂಡೆ. ಆ ಕಾಲದಲ್ಲಿಯೇ ಈ ಜಾತ್ರೆಗಳಿಗೆ ಸನಾತನತೆ ಬಂದು ಅದರ ಮೂಲ ಕಾಲಗರ್ಭದಲ್ಲಿ ಅಡಗಿತ್ತು. ಈ ರೀತಿ ಯುಗ ಯುಗಗಳಿಂದ ಭಾರತದ ಈ ಮಹಾನದಿಯು ನಮ್ಮ ಜನರನ್ನು ಸೆಳೆದ ಅರಿಯಲಶಕ್ಯವಾದ ಗಾಢ ನಂಬಿಕೆಯಾದರೂ ಯಾವದು ಎಂದು ಆಶ್ಚರ್ಯಪಟ್ಟೆ.

ಈ ನನ್ನ ಮನೋಭಾವನೆಯ ಹಿನ್ನೆಲೆಯಿಂದ ಕೈಗೊಂಡ ನನ್ನ ಪ್ರವಾಸಗಳಿಂದ, ಯಾತ್ರೆಗಳಿಂದ ಗತಕಾಲದ ಒಂದು ಸೂಕ್ಷ್ಮದರ್ಶನ ನನಗೆ ದೊರೆಯಿತು. ಕೇವಲ ಕಲ್ಪನೆಗೆ ಎಟುಕುವುದರ ಜೊತೆಗೆ ಭಾವನಾಪೂರಿತ ಮೆಚ್ಚುಗೆಯೂ ಸೇರಿತು; ಕ್ರಮೇಣ ಇಂಡಿಯದ ಈ ನನ್ನ ಮನಸ್ಸಿನ ಕಲ್ಪನಾ ಚಿತ್ರಕ್ಕೆ ಒಂದು ವಾಸ್ತವತೆಯ ರೂಪು ಸಹ ದೊರೆಯಲು ಆರಂಭವಾಯಿತು. ನನ್ನ ಪೂರ್ವಿಕರ ನಾಡು ನಕ್ಕು ನಗಿಸಿ ಕಣ್ಣೀರಿಟ್ಟು, ಪ್ರೀತಿಸಿ, ದುಃಖಿಸುತ್ತಿದ್ದ ಜೀವಂತ ಜನರ ನಾಡಾಗಿ ಕಂಡಿತು. ಅವರಲ್ಲಿ ಕೆಲವರು ಜೀವನವನ್ನು ಅರಿತಂತೆ, ಅರ್ಥಮಾಡಿಕೊಂಡಂತೆ ಕಾಣುತ್ತಾರೆ. ತಮ್ಮ ಬುದ್ಧಿ ಕುಶಲತೆಯಿಂದ ಸಾವಿರಾರು ವರ್ಷಗಳಿಂದ ನಡೆದುಬಂದ ಈ ಸ್ಥಿರವಾದ ಸಂಸ್ಕೃತಿಗೆ ರೂಪುಕೊಟ್ಟವರು. ಈ ಗತಕಾಲದ ನೂರಾರು ಚಿತ್ರಗಳು ಕಣ್ಣಿಗೆ ಕಟ್ಟಿದಂತೆ ಮನಸ್ಸನ್ನಾವರಿಸಿದವು. ಆ ಚಿತ್ರಗಳಿಗೆ ಸಂಬಂಧಿಸಿದ ಯಾವುದಾದರೂ ಸ್ಥಳಕ್ಕೆ ಹೋದೊಡನೆ ಆ ಚಿತ್ರಗಳೇ ನನ್ನ ಕಣ್ಣೆದುರು ನಿಲ್ಲುತ್ತಿದ್ದವು. ಕಾಶಿಯ ಬಳಿ ಸಾರನಾಥದಲ್ಲಿ ಭಗವಾನ್ ಬುದ್ಧನೇ ತನ್ನ ಮೊದಲ ಬೋಧೆಯನ್ನು ಹೇಳುತ್ತಿದ್ದಂತೆ ಕಾಣಿಸುತ್ತಿತ್ತು. ಆತನ ಗ್ರಂಥಸ್ಥ ವಾಣಿಯು ಎರಡು ಸಾವಿರದ ಐದುನೂರು ವರ್ಷಗಳನ್ನು ತಳ್ಳಿ ಬಂದ ದೂರದ ಒಂದು ಪ್ರತಿಧ್ವನಿಯಂತೆ ಕೇಳಿ ಬರುತ್ತಿತ್ತು. ಅಶೋಕನ ಶಿಲಾ ಸ್ತಂಭಗಳು ತಮ್ಮ ಶಾಸನಗಳ ಮೂಲಕ ತಮ್ಮ ಮಹಾವಾಣಿಯಲ್ಲಿ ನನ್ನೊಂದಿಗೆ ಮಾತನಾಡುತ್ತಿದ್ದುವು. ಚಕ್ರವರ್ತಿಯಾದಾಗ್ಯೂ ಎಲ್ಲ ರಾಜರಿಗಿಂತ ಚಕ್ರವರ್ತಿಗಳಿಗಿಂತ ದೊಡ್ಡವನಾದ ಮಹಾ ವ್ಯಕ್ತಿಯೆಂದು ಆತನನ್ನು ಸಾರುತ್ತಿದ್ದವು. ಫತ್ತೇಪುರ್ ಸಿಕ್ರಿಯಲ್ಲಿ ಬಾದಷಹ ಅಕ್ಬರನು ತನ್ನ ಚಕ್ರಾಧಿಪತ್ಯವನ್ನೇ ಮರೆತು, ಏನಾದರೂ ಹೊಸ ಅಂಶಗಳನ್ನು ತಿಳಿಯಬೇಕೆಂದು, ಮಾನವನ ಅನಂತ

ಸಮಸ್ಯೆಗೆ ಯಾವುದಾದರೂ ಪರಿಹಾರ ಪಡೆಯಬೇಕೆಂದು ಸರ್ವ ಧರ್ಮಗಳ ಮಹಾ ಪಂಡಿತರುಗಳೊಡನೆ ಚರ್ಚೆಮಾಡಿ, ವಾದಮಾಡುತ್ತ ಕುಳಿತಿರುವುದು ಕಾಣುತ್ತಿತ್ತು.

ಈ ರೀತಿ ಕ್ರಮೇಣ ಭಾರತೀಯ ಇತಿಹಾಸದ ಉಬ್ಬರವಿಳಿತಗಳ, ಗೆಲವು ಸೋಲುಗಳ ಮಹಾ ಚಿತ್ರವು ನನ್ನೆದುರು ಸುಳಿಯಲು ಆರಂಭವಾಯಿತು. ದೇಶದ ಇತಿಹಾಸದಲ್ಲಿ ಐದುಸಾವಿರ ವರ್ಷಗಳಿಂದ ಅನೇಕ ದಂಡಯಾತ್ರೆಗಳು ಮತ್ತು ಕ್ಷೋಭೆಗಳು ಕಂಡುಬಂದರೂ, ಜನಕೋಟಿಯಲ್ಲಿ ಹರಡಿ ಅವರಮೇಲೆ ವಿಶೇಷಪ್ರಭಾವ ಬೀರಿರುವ ಒಂದು ಸಂಸ್ಕೃತಿ ಮತ್ತು ಆ ಸಂಸ್ಕೃತಿಯ ಸಂಪ್ರದಾಯ ಪರಂಪರೆ ನಿರಾತಂಕವಾಗಿ ನಡೆದು ಬಂದಿರುವುದು ಒಂದು ವೈಶಿಷ್ಟ್ಯ. ಅದೇ ರೀತಿ ಒಂದು ಸಂಪ್ರದಾಯ ಪರಂಪರೆ ಮತ್ತು ಸುಸಂಸ್ಕೃತ ಜೀವನ ನಡೆಸಿದ ಇನ್ನೊಂದು ರಾಷ್ಟ್ರವೆಂದರೆ ಚೀನ. ಈ ಗತಕಾಲದ ವೈಭವ ಕ್ರಮೇಣ ಪ್ರಸ್ತುತ ದುರದೃಷ್ಟ ಕಾಲದೊಳಗೆ ಮಿಳಿತವಾಯಿತು. ಗತಕಾಲದ ವೈಭವ ಮತ್ತು ಅಸ್ತಿತ್ವ ಬೇಕಾದಷ್ಟು ಇದ್ದರೂ ಈ ರಾಷ್ಟ್ರ ದಾಸ್ಯರಾಷ್ಟ್ರವಾಗಿ, ಇಂಗ್ಲೆಂಡಿನ ಬಾಲವಾಗಿ ಪರಿಣಮಿಸಿ, ಮನುಷ್ಯನನ್ನು ಪಶುವಾಗಿ ಮಾಡುವ ಘೋರ, ವಿನಾಶಕಾರಕ ಯುದ್ಧ ಪ್ರಪಂಚದಲ್ಲೆಲ್ಲ ನಡೆಯಿತು. ಆದರೆ ಆ ಐದುಸಾವಿರ ವರ್ಷಗಳ ದೃಶ್ಯದಿಂದ ನನಗೊಂದು ತುಲನಾತ್ಮಕ ದೃಷ್ಟಿ ದೊರೆಯಿತು. ಇಂದಿನ ಹೊರೆಯು ಹಗುರವಾದಂತೆ ಕಂಡಿತು. ಬ್ರಿಟಿಷ್ ರಾಜ್ಯಾಡಳಿತೆಯ ನೂರೆಂಭತ್ತು ವರ್ಷಗಳು ಇಂಡಿಯದ ಪುರಾತನ ಇತಿಹಾಸದ ದುರಂತ ಸನ್ನಿವೇಶಗಳಲ್ಲಿ ಒಂದು ಮಾತ್ರ. ಭಾರತ ತನ್ನನ್ನು ತಾನು ಅರಿತುಕೊಳ್ಳುತ್ತದೆ. ಈಗಾಗಲೇ ಈ ಘಟ್ಟದ ಕತೆ ಮುಗಿಯುತ್ತ ಬಂದಿದೆ. ಇಂದಿನ ಪ್ರಳಯಾಗ್ನಿಯಿಂದ ಪ್ರಪಂಚವೂ ಪಾರಾಗುತ್ತದೆ. ಹೊಸ ತಳಹದಿಯಮೇಲೆ ನೂತನಪ್ರಪಂಚ ಸೃಷ್ಟಿಯಾಗುತ್ತದೆ.

## ೨. ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಭಾವನೆ

ಭಾರತದ ಈ ನನ್ನ ಪ್ರತಿಕ್ರಿಯೆ ಅನೇಕ ವೇಳೆ ರಾಗಾನ್ವಿತವಾದದ್ದಾದರೂ ಅದು ಬಗೆ ಬಗೆಯ ನಿಯಮಗಳು ಮತ್ತು ಪರಿಮಿತಿಗಳಿಗೆ ಅಧೀನವಾದದ್ದು. ಅದು ರಾಷ್ಟ್ರೀಯ ಸ್ವಭಾವದ್ದು. ಆದರೆ ಅನೇಕರ ರಾಷ್ಟ್ರೀಯ ಭಾವನೆಗೆ ಯಾವ ನಿಯಮವೂ ಪರಿಮಿತಿಯೂ ಇರುವುದಿಲ್ಲ. ನಮ್ಮ ಕಾಲದ ಭಾರತಕ್ಕೆ ರಾಷ್ಟ್ರೀಯ ಭಾವನೆ ಅತ್ಯವಶ್ಯಕ, ಅದು ಸಹಜವಾದ ಪುಷ್ಟಿಕರವಾದ ಬೆಳವಣಿಗೆಯೂ ಹೌದು. ಯಾವ ದಾಸ್ಯದೇಶಕ್ಕೇ ಆಗಲಿ ರಾಷ್ಟ್ರೀಯ ಸ್ವಾತಂತ್ರ್ಯ ಪ್ರಥಮ ಪ್ರಧಾನ ಪ್ರೇರಕವಾಗಬೇಕು. ಸಹಸ್ರಾರು ವರ್ಷಗಳ ಪ್ರಬಲ ಅಸ್ತಿತ್ವ ಮತ್ತು ವೈಶಿಷ್ಟ್ಯದ ಪ್ರಚಂಡ ಪ್ರಜ್ಞೆಯುಳ್ಳ ಭಾರತಕ್ಕಂತೂ ಇದು ಇನ್ನೂ ಹೆಚ್ಚು ಅಗತ್ಯ.

ಇತ್ತೀಚಿನ ಪ್ರಪಂಚದ ಘಟನೆಗಳಿಂದ ಅಂತರರಾಷ್ಟ್ರೀಯ ಸಂಘರ್ಷಣೆಗಳ ಜನತಾವಿಪ್ಲವಗಳ ಜಂಝಾವಾತದ ಎದುರಿನಲ್ಲಿ ರಾಷ್ಟ್ರೀಯ ಭಾವನೆಗೆ ಎಡೆಯಿಲ್ಲ, ಎಂಬುದರಲ್ಲಿ ತಥ್ಯವಿಲ್ಲ. ಅದು ಇಂದಿಗೂ ಒಂದು ಜನಾಂಗವನ್ನು ಉತ್ತಮ ಪ್ರೇರಣೆಯಿಂದ ಹೊಡೆದೆಬ್ಬಿಸುವ ಶಕ್ತಿ; ಅದರ ಸುತ್ತ ಭಾವಾತಿರೇಕಗಳು, ಸಂಪ್ರದಾಯಗಳು, ಒಂದು ಸಾಂಘಿಕ ಜೀವನ, ಒಂದು ನಿರ್ದಿಷ್ಟ ಗುರಿ ಇವುಗಳ ಭಾವನೆಗಳು ಹೆಣೆದುಕೊಂಡಿವೆ. ಮಧ್ಯಮ ವರ್ಗದ ಗಣ್ಯವ್ಯಕ್ತಿಗಳು ರಾಷ್ಟ್ರೀಯ ಭಾವನೆಯಿಂದ ದೂರವಾಗುತ್ತಿದ್ದಾಗ ಅಥವ ದೂರವಾಗುತ್ತಿದೇವೆಂದು ಅವರು ತಿಳಿಸಿದಾಗ, ಅಂತರರಾಷ್ಟ್ರೀಯ ಭಾವನೆಯಿಂದಲೇ ಉಜ್ವಲಿಸಿದ ಶ್ರಮಜೀವಿ ಮತ್ತು ಜನತಾ ಚಳವಳಿಗಳು ರಾಷ್ಟ್ರೀಯತೆಯ ಕಡೆಗೆ ಸರಿಯುತ್ತಿದ್ದವು. ಯುದ್ಧ ಬಂದೊಡನೆ ಎಲ್ಲೆಡೆಯಲ್ಲೂ ಎಲ್ಲರೂ ರಾಷ್ಟ್ರೀಯ ಭಾವನೆಯ ಬಲೆಗೆ ಸೆರೆಯಾದರು. ರಾಷ್ಟ್ರೀಯತೆಯ ಈ ಪ್ರಚಂಡ ಪುನರುಜ್ಜೀವನ ಅಥವ ಪುನರ್ದರ್ಶನ ಮತ್ತು ಅದರ ಪ್ರಪ್ರಥಮ ಅವಶ್ಯಕತೆಯ ಪ್ರಜ್ಞೆಯು ಹೊಸ ಸಮಸ್ಯೆಗಳನ್ನು ಎಬ್ಬಿಸಿದೆ; ಹಳೆಯ ಸಮಸ್ಯೆಗಳ ರೂಪು, ರಚನೆಗಳನ್ನು ಮಾರ್ಪಡಿಸಿದೆ. ರೂಢಮೂಲವಾದ ಪುರಾತನ ಸಂಪ್ರದಾಯಗಳನ್ನು ಸುಲಭವಾಗಿ ಕಿತ್ತೊಗೆಯಲು ಸಾಧ್ಯವಿಲ್ಲ; ಗಂಡಾಂತರ ಕಾಲದಲ್ಲಿ ಅವು ಉಳಿದೆಲ್ಲ ಭಾವನೆ

ಗಳನ್ನೂ ಅದುಮಿ ಮಾನವ ಮನೋರಾಜ್ಯದ ಪ್ರಧಾನ ಶಕ್ತಿಯಾಗುತ್ತವೆ. ಅನೇಕ ವೇಳೆ ಅವೇ ಭಾವನೆಗಳನ್ನು ಉಪಯೋಗಿಸಿಕೊಂಡು ಉನ್ನತ ತ್ಯಾಗ ಮತ್ತು ಕಾರ್ಯೋನ್ಮುಖತೆಗೆ ಹುರಿದುಂಬಿಸಲು ಉದ್ದೇಶಪೂರ್ವಕ ಪ್ರಯತ್ನ ಸಹ ನಡೆಯುತ್ತದೆ. ಬಹುಮಟ್ಟಿಗೆ ಈ ಸಂಪ್ರದಾಯಗಳನ್ನು ಒಪ್ಪಲೇಬೇಕು; ಆದರೆ ಹೊಸ ಸನ್ನಿವೇಶಗಳಿಗೆ, ಭಾವನೆಗಳಿಗೆ ಅನ್ವಯಿಸುವಂತೆ ಮಾರ್ಪಡಿಸಬೇಕು, ಹೊಂದಿಸಬೇಕು; ಮತ್ತು ಹೊಸ ಸಂಪ್ರದಾಯಗಳನ್ನೂ ರೂಢಿಗೆ ತರಬೇಕು. ರಾಷ್ಟ್ರೀಯ ಭಾವನೆಯು ಗಾಢವೂ, ಬಲವತ್ತರವೂ ಆದುದು; ಭವಿಷ್ಯಕ್ಕೆ ಅರ್ಥವಿಲ್ಲದ ಕೇವಲ ಗತಕಾಲದ ವಸ್ತುವಲ್ಲ; ಆದರೆ ಇಂದಿನ ಕೆಲವು ಅನಿವಾರ್ಯ ಸಂಗತಿಗಳ ಫಲವಾಗಿ ಇತರ ಧ್ಯೇಯಗಳು—ಅಂತರರಾಷ್ಟ್ರೀಯ ಧ್ಯೇಯ, ಜನತಾಶಕ್ತಿಯ ಧ್ಯೇಯ, ಉದ್ಭವಿಸಿವೆ. ಪ್ರಪಂಚದಲ್ಲಿ ಒಂದು ಸಮದೃಷ್ಟಿ, ಆದಷ್ಟು ಕಡಮೆ ಸಂಘರ್ಷಣೆಗಳು ಇರಬೇಕಾದರೆ, ಈ ಎಲ್ಲ ಧ್ಯೇಯಗಳ ಒಂದು ಸಮರಸ ಮಿಳನ ಅತ್ಯವಶ್ಯಕ. ಮಾನವ ಮನೋಧರ್ಮಕ್ಕೆ ಸದಾ ಪ್ರಿಯವಾದ ರಾಷ್ಟ್ರೀಯಭಾವನೆಗೆ ಪುರಸ್ಕಾರವಿರಬೇಕು, ಸ್ಥಾನವಿರಬೇಕು; ಆದರೆ ಅದರ ವ್ಯಾಪ್ತಿ ಕಿರಿದಾಗಿರಬೇಕು, ಮಿತವಾಗಿರಬೇಕು.

ಹೊಸ ಭಾವನೆಗಳಿಗೂ, ಅಂತರರಾಷ್ಟ್ರೀಯ ಶಕ್ತಿಗಳ ಪ್ರಬಲ ಪ್ರಭಾವಗಳಿಗೂ ಒಳಗಾದ ರಾಷ್ಟ್ರಗಳಲ್ಲೇ ರಾಷ್ಟ್ರೀಯಭಾವನೆ ಇನ್ನೂ ಬಲವಾಗಿ ಬೇಕಾಗಿರುವಾಗ ಭಾರತದ ಮನಸ್ಸಿನಮೇಲೆ ಇನ್ನಷ್ಟು ಪ್ರಭಾವ ಬೀರಲೇಬೇಕು. ನಮ್ಮ ರಾಷ್ಟ್ರೀಯ ಭಾವನೆ ನಮ್ಮ ದೌರ್ಬಲ್ಯದ ಸಂಕೇತ, ನಮ್ಮ ಸ್ವಾತಂತ್ರ್ಯದ ಬೇಡಿಕೆಯು ಸಹ ಒಂದು ಸಂಕುಚಿತಭಾವನೆ ಎಂದು ಕೆಲವರ ಮತ. ನಾವು ಬ್ರಿಟಿಷ್ ಸಾಮ್ರಾಜ್ಯದಲ್ಲಿ, ಅಥವ ಬ್ರಿಟಿಷ್ ಪ್ರಜಾಪ್ರಭುತ್ವಗಳ ಕೂಟದಲ್ಲಿ ಕೆಳಮಟ್ಟದ ಪಾಲುಗಾರರಾಗಿದ್ದರೆ ಅದು ನಿಜವಾದ ಅಂತರರಾಷ್ಟ್ರೀಯತೆ ಎಂದು ಅವರ ಮತ. ಆದರೆ ಅವರ ಈ ವಿಚಿತ್ರ ಅಂತರರಾಷ್ಟ್ರೀಯತೆ ಸಂಕುಚಿತ ಬ್ರಿಟಿಷ್ ರಾಷ್ಟ್ರೀಯತೆಯ ಇನ್ನೊಂದು ರೂಪ, ವಿಸ್ತರಣ ಎಂದು ಅವರು ಮರೆಯುತ್ತಾರೆ. ಆಂಗ್ಲ ಭಾರತೀಯ ಐತಿಹಾಸಿಕ ಕಾರಣಗಳು ಆ ರೀತಿಯ ಒಂದು ಭಾವನೆಯು ನಮ್ಮ ಮನಸ್ಸಿನಲ್ಲಿ ಬೇರೂರಲು ಸಂಪೂರ್ಣ ಅವಕಾಶ ಕೊಡದೆ ಇದ್ದಾಗ್ಯೂ ಈ ಬಗೆಯ ಅಂತರರಾಷ್ಟ್ರೀಯತೆಯನ್ನು ನಾವು ಒಪ್ಪಲು ಅಸಾಧ್ಯ. ಆದರೂ ಇಂಡಿಯದ ಉಜ್ವಲ ರಾಷ್ಟ್ರೀಯ ಮನೋಭಾವನೆ ಎಷ್ಟೇ ಕಠಿನವಿದ್ದಾಗ್ಯೂ ನಿಜವಾದ ಅಂತರರಾಷ್ಟ್ರೀಯತೆಗೆ ಮನ್ನಣೆ ತೋರಿ ಸಹಕಾರ ನೀಡಿ, ರಾಷ್ಟ್ರೀಯ ಸ್ವಾತಂತ್ರ್ಯವನ್ನು ಸಹ ವಿಶ್ವಸಂಸ್ಥೆಗೆ ಸ್ವಲ್ಪ ಮಟ್ಟಿಗೆ ಅಧೀನ ಮಾಡಲು ಒಪ್ಪಿ ಇಂಡಿಯ ಇತರ ಜನಾಂಗಗಳಿಗಿಂತ ಎಷ್ಟೋ ಮುಂದುವರಿದಿದೆ.

## ೩. ಭಾರತದ ಶಕ್ತಿ ಮತ್ತು ದೌರ್ಬಲ್ಯ

ಭಾರತದ ಶಕ್ತಿ, ದೌರ್ಬಲ್ಯ ಮತ್ತು ಅವನತಿಗಳ ಮೂಲವನ್ನು ಕಂಡು ಹಿಡಿಯಲು ಬಹು ಹಿಂದೆ ಹೋಗಬೇಕು ಮತ್ತು ದಾರಿಯೂ ದುರ್ಗಮ. ಆದರೂ ಆ ಅವನತಿಯ ಇತ್ತೀಚಿನ ಕಾರಣಗಳು ಸ್ಪಷ್ಟ ಇವೆ. ಔದ್ಯೋಗಿಕ ಕುಶಲತೆಯಲ್ಲಿ ಭಾರತ ಹಿಂದೆ ಬಿದ್ದಿತು. ಅನೇಕ ವಿಷಯಗಳಲ್ಲಿ ಹಿಂದೆ ಇದ್ದ ಯೂರೋಪ್ ಔದ್ಯೋಗಿಕ ಪ್ರಗತಿಯಲ್ಲಿ ಮುಂದುವರಿಯಿತು. ಈ ಔದ್ಯೋಗಿಕ ಪ್ರಗತಿಯ ಹಿಂದೆ ವೈಜ್ಞಾನಿಕ ಮನೋಭಾವನೆ, ಉಕ್ಕೇರುವ ಜೀವನ, ಸಂಶೋಧನೆಯ ಸಾಹಸದ ಪಯಣಗಳ ಪ್ರಭಾವವಿತ್ತು. ನೂತನ ವೈಜ್ಞಾನಿಕ ನೈಪುಣ್ಯದಿಂದ ಪಶ್ಚಿಮ ಯೂರೋಪಿನ ದೇಶಗಳಿಗೆ ಸೈನಿಕಶಕ್ತಿ ಬಂದಿತು. ತಮ್ಮ ಪ್ರಾಬಲ್ಯವನ್ನು ವಿಸ್ತರಿಸಿ ಪೌರ್ವಾತ್ಯ ರಾಷ್ಟ್ರಗಳ ಮೇಲೆ ಸ್ವಾಮ್ಯ ನಡೆಸಲು ಸುಲಭವಾಯಿತು. ಇದು ಭಾರತದ ಕಥೆ ಮಾತ್ರವಲ್ಲ; ಎಲ್ಲ ಪೌರ್ವಾತ್ಯ ದೇಶಗಳ ಪಾಡು.

ಹಿಂದಣ ಕಾಲದಲ್ಲಿ ಭಾರತದಲ್ಲಿ ಸೂಕ್ಷ್ಮಬುದ್ಧಿಗಾಗಲಿ, ಔದ್ಯೋಗಿಕ ಕೌಶಲ್ಯಕ್ಕಾಗಲಿ ಕೊರತೆ ಇರಲಿಲ್ಲ. ಆದರೂ ಈ ರೀತಿ ಏಕೆ ಆಯಿತು ಎಂದು ಕಂಡು ಹಿಡಿಯುವುದು ಬಹಳ ಕಷ್ಟ. ಶತಮಾನಗಳಿಂದ ಈ ಕ್ಷೀಣತೆ ಕ್ರಮವಾಗಿ ಬೆಳೆಯುತ್ತಿರುವುದನ್ನು ಯಾರಾದರೂ ಕಾಣಬಹುದು. ಜೀವನ

ಮತ್ತು ಸಾಹಸದ ಸ್ಫೂರ್ತಿ ಕಡಮೆಯಾಯಿತು. ನಿರ್ಮಾಣ ನೈಪುಣ್ಯ ಮಾಸಿಹೋಗಿ ಅನುಕರಣ ಭಾವನೆ ಬೆಳೆಯಿತು. ಪ್ರಕೃತಿ ಮತ್ತು ವಿಶ್ವದ ರಹಸ್ಯವನ್ನು ಭೇದಿಸಲು ಹೊರಟ ಅದ್ಭುತ ಕ್ರಾಂತಿಕಾರಕ ಭಾವನೆಯ ಬದಲು ವಚನಶೂರ ಭಾಷ್ಯಕಾರರ ಟೀಕೆಗಳು, ಉದ್ದುದ್ದ ವ್ಯಾಖ್ಯಾನಗಳು ಹೆಚ್ಚಿದವು. ಭವ್ಯಕಲೆ ಮತ್ತು ಶಿಲ್ಪಕಲೆಯ ಸ್ಥಾನದಲ್ಲಿ ಭಾವನಾಗಾಂಭೀರ್ಯವೂ ರಚನಾ ಶ್ರೇಷ್ಠತೆಯೂ ಇಲ್ಲದ ಜಟಿಲವಿನ್ಯಾಸ ವಿವರಣೆಯ ಅತಿ ಸೂಕ್ಷ್ಮ ಕುಸುರಿ ಕೆತ್ತನೆಗೆ ಎಡೆಯಾಯಿತು. ಸರಳವೂ ಸ್ಫೂರ್ತಿದಾಯಕವೂ ಆದ ಭಾಷಾಶಕ್ತಿ ಮಾಧುರ್ಯಗಳು ಮಾಯವಾಗಿ ಸಾಹಿತ್ಯದಲ್ಲಿ ಜಟಿಲತೆಯೂ ಅಲಂಕಾರವೂ ಹೆಚ್ಚಿದವು. ದೂರದ ಹೊರ ರಾಷ್ಟ್ರಗಳಿಗೆ ಭಾರತೀಯರು ಹೋಗಿ ಭಾರತ ಸಂಸ್ಕೃತಿಯ ಪ್ರಚಾರಮಾಡಿ ವಲಸೆಹೋಗುವ ಮಹಾಯೋಜನೆಗಳಿಗೆ ಕಾರಣಭೂತವಾದ ಸಾಹಸ ಮತ್ತು ತುಂಬು ಜೀವನದ ಪ್ರವೃತ್ತಿಗಳು ಮಾಯವಾಗುತ್ತಿವೆ. ಸಂಕುಚಿತ ಮಡಿವಂತಿಕೆಯ ಮನೋಭಾವನೆಯಿಂದ ಸಮುದ್ರಯಾನವು ನಿಷೇಧವಾಗುತ್ತದೆ. ವಿಜ್ಞಾನದ ಬೆಳವಣಿಗೆಗೆ ಸಹಾಯವಾಗಬಹುದಾಗಿದ್ದ ಪ್ರಾಚೀನರ ವಿಚಾರಶೂನ್ಯತೆ, ಹಿಂದಿನದರಲ್ಲಿ ಅಂಧಃ ಶ್ರದ್ಧೆ ಬೇರೂರುತ್ತಿವೆ. ಭಾರತೀಯ ಜೀವನವಾಹಿನಿಯು ಗತಶತಮಾನಗಳ ರಾಶಿಯ ಮಧ್ಯೆ ಪುರಾತನತೆಯಲ್ಲಿ ಅಡಗಿ ಪಾಚಿಗಟ್ಟಿ ನಿಧಾನವಾಗಿ ತೆವಳಿ ಬರುವ ತೊರೆಯಂತೆ ಹರಿದುಬರುತ್ತಿದೆ. ಗತಕಾಲದ ಭಾರದ ಹೊರೆ ಅದನ್ನು ಹಿಂಡುತ್ತಿದೆ. ಒಂದು ಬಗೆಯ ಮೂರ್ಛೆ ಬಂದಂತಾಗಿದೆ. ಈ ಬಗೆಯ ಮಾನಸಿಕ ಪ್ರಜ್ಞಾಶೂನ್ಯತೆಯಲ್ಲಿ, ದೈಹಿಕ ದೌರ್ಬಲ್ಯದಲ್ಲಿ ಪ್ರಪಂಚದ ಇತರ ಭಾಗಗಳು ಮುನ್ನುಗ್ಗಿದಾಗ ಭಾರತವು ಅವನತಿ ಮುಟ್ಟಿ ಅತಿ ನಿಷ್ಠೆಯ ಚಲನ ಶೂನ್ಯ ಜೀವನ ನಡೆಸಿದ್ದು ಆಶ್ಚರ್ಯವೇನು.

ಆದರೆ ಈ ದೃಷ್ಟಿಯು ಸಂಪೂರ್ಣವೂ ಅಲ್ಲ ಪೂರ್ಣ ಸರಿಯೂ ಅಲ್ಲ. ಆದರೆ ಈ ಅತಿನಿಷ್ಠೆಯ ಜಡ ಜೀವನ ತಡೆಯಿಲ್ಲದೆ ಬಹುಕಾಲದಿಂದ ನಡೆದುಬಂದಿದ್ದರೆ ಗತಕಾಲದ ಸಂಬಂಧ ಪೂರ್ಣ ಕಡಿದುಹೋಗಿ, ಆ ಯುಗವೇ ಲಯವಾಗಿ, ಅದರ ಸಮಾಧಿಯಮೇಲೆ ನೂತನ ಯುಗವೇ ಒಂದು ಸೃಷ್ಟಿಯಾಗುತ್ತಿತ್ತು. ಆದರೆ ಹಾಗೆ ಹಿಂದಿನ ಸಂಬಂಧ ಕಡಿದುಹೋಗಿಲ್ಲ. ಒಂದು ಸ್ಪಷ್ಟ ವಾಹಿನಿ ಹರಿದು ಬಂದಿದೆ. ಆಗಾಗ ಪುನರುಜ್ಜೀವನದ ಕಿಡಿಗಳೆದ್ದು, ಕೆಲವುವೇಳೆ ಜಾಜ್ವಲ್ಯಮಾನವಾಗಿ ತಕ್ಕಷ್ಟು ಕಾಲ ಬೆಳಗಿವೆ. ಹೊಸದನ್ನು ಅರ್ಥಮಾಡಿಕೊಂಡು ಪ್ರಾಚೀನತೆಯೊಂದಿಗೆ ಅಥವ ಪ್ರಾಚೀನತೆಯಲ್ಲಿ ಉಳಿಸಿಕೊಳ್ಳಬಹುದಾದ್ದರೊಂದಿಗೆ ಹೊಂದಿಸಿಕೊಳ್ಳುವ, ಸಮರಸಮಾಡಿಕೊಳ್ಳುವ ಪ್ರಯತ್ನವನ್ನು ಕಾಣಬಹುದು. ಅನೇಕವೇಳೆ ಹಳೆಯ ರೂಪ ಸಂಕೇತಮಾತ್ರವಾಗಿದ್ದು ಅದರ ಆಂತರಿಕವಸ್ತುವೇ ಬೇರೆಯಾಗಿದೆ. ಆದರೆ ಸತ್ವಪೂರಿತವೂ ಸಜೀವವೂ ಆದದ್ದು ಉಳಿದಿದೆ; ಯಾವುದೋ ಉತ್ಸಾಹವು ಪೂರ್ಣ ಅರಿಯದ ದಾರಿಯಲ್ಲಿ ಜನತೆಯನ್ನು ಕೊಂಡೊಯ್ದಿದೆ; ಹೊಸದು ಹಳತು ಎರಡನ್ನೂ ಒಟ್ಟುಗೂಡಿಸುವ ಆಶೆಯನ್ನು ವ್ಯಕ್ತಪಡಿಸಿದೆ. ಈ ಒಂದು ಉತ್ಸಾಹ ಮತ್ತು ಆಶೆಯಿಂದ ಜೀವನ ಮುಂದುವರಿದಿದೆ; ಹಿಂದಿನದನ್ನೂ ಬಹುಭಾಗ ಉಳಿಸಿಕೊಂಡು ಹೊಸ ಭಾವನೆಗಳನ್ನು ರಕ್ತಗತಮಾಡಿಕೊಳ್ಳುವ ಶಕ್ತಿ ದೊರೆತಿದೆ. ಕೆಲವುವೇಳೆ ಸ್ಪಷ್ಟವೂ ಚೈತನ್ಯಪೂರ್ಣವೂ ಇದ್ದು ಇನ್ನೂ ಕೆಲವುವೇಳೆ ಅರೆನಿದ್ರೆಯ ಅಸ್ಪಷ್ಟ ಧ್ವನಿಯಂತೆ ಕುಗ್ಗಿದ ಯುಗಯುಗಾಂತರದ ಭಾರತದ ಕನಸೊಂದು ಇದೆಯೊ ಇಲ್ಲವೊ ನನಗೆ ತಿಳಿಯದು. ಪ್ರತಿಯೊಂದು ಜನತೆಗೆ ಪ್ರತಿಯೊಂದು ಜನಾಂಗಕ್ಕೆ ಅಂತಹ ಒಂದು ರಾಷ್ಟ್ರಧ್ಯೇಯದ ನಂಬಿಕೆ ಅಥವ ಕಲ್ಪನೆ ಇದ್ದೇ ಇದೆ. ಪ್ರತಿಯೊಂದು ಧ್ಯೇಯದಲ್ಲಿ ಸ್ವಲ್ಪ ಸತ್ಯವಿದ್ದರೂ ಇರಬಹುದು. ಭಾರತೀಯನಾಗಿ ಭಾರತದ ಈ ಧ್ಯೇಯ ಅಥವ ಕಲ್ಪನೆಯು ನನ್ನ ಮೇಲೆಯೂ ಪ್ರಭಾವ ಬೀರಿದೆ. ತಡೆಯಿಲ್ಲದೆ ನೂರಾರು ತಲೆಮಾರುಗಳಿಗೆ ಒಂದು ರೂಪಕೊಡುವ ಶಕ್ತಿ ಯಾವುದಕ್ಕೇ ಇರಲಿ ಅಂತಹ ಒಂದು ಶಾಶ್ವತ ಶಕ್ತಿ ದೊರೆಯಬೇಕಾದರೆ ಅದರ ಮೂಲ ಬಹಳ ಆಳವಾಗಿರಬೇಕು ಮತ್ತು ಕಾಲಕಾಲಕ್ಕೆ ಆ ಶಕ್ತಿಯನ್ನು ಪುನರುಜ್ಜೀವಿಸುವ ಸಾಮರ್ಥ್ಯ ಅದಕ್ಕಿರಬೇಕೆಂದು ನನ್ನ ಭಾವನೆ.

ಅಂತಹ ಒಂದು ಶಕ್ತಿಯ ಧ್ರುವ ಜಲಾಶಯು ಯಾವುದಾದರೂ ಇತ್ತೆ? ಇದ್ದರೆ ಅದು ಬತ್ತಲು ಕಾರಣವೇನು ಅಥವ ಅದನ್ನು ತುಂಬಲು ಕಾಣದ ಶಕ್ತಿಮೂಲಗಳೇನಾದರೂ ಇದ್ದುವೆ? ಇಂದಿನ ಸ್ಥಿತಿಯೇನು? ಈಗಲೂ ನಮಗೆ ನವಚೈತನ್ಯ ಕೊಟ್ಟು ಬಲವಂತರನ್ನಾಗಿ ಮಾಡುವ ಅಂತಹ ಶಕ್ತಿ ಮೂಲಗಳು ಬತ್ತದೆ ಉಳಿದಿವೆಯೆ? ನಮ್ಮದು ಪುರಾತನ ಜನಾಂಗ ಅಥವ ಅನೇಕ ಜನಾಂಗಗಳ ಒಂದು ಬಗೆಯ ಮಿಶ್ರಣ. ನಮ್ಮ ಜನಪದದ ನೆನಪುಗಳು ಇತಿಹಾಸದ ಉಗಮದ ವರೆಗೂ ಮುಟ್ಟವೆ. ನಮ್ಮ ಉತ್ಕ್ರಾಂತಿ ಕಾಲವೆಲ್ಲ ಮುಗಿದು ನಮ್ಮ ಬಾಳಿನ ಕೊನೆಯ ದಿನಗಳಿಗೆ ಬಂದಿದ್ದೇವೆಯೆ? ನಿಶ್ಚೇತನರು, ಶಕ್ತಿಹೀನರು, ಸೃಷ್ಟಿಶೂನ್ಯರು ಆಗಿ, ಶಾಂತಿ, ನಿದ್ರೆ ಎರಡಿದ್ದರೆ ಸಾಕೆಂದು ಕಾಲತಳ್ಳುವ ಮುದುಕರಂತೆ ನಮ್ಮ ಬಾಳಿನ ಸಂಜೆಯಲ್ಲಿದ್ದೇವೆಯೆ?

ಪರಿವರ್ತನೆಯಿಲ್ಲದೆ ಯಾವ ಜನವೂ, ಜನಾಂಗವೂ ಮುಂದುವರಿಯುವುದಿಲ್ಲ. ಸದಾ ಇತರರೊಂದಿಗೆ ಸಂಪರ್ಕವಿಟ್ಟುಕೊಂಡು ನಿದಾನವಾಗಿ ಪರಿವರ್ತನವಾಗುತ್ತಲೇ ಇರುತ್ತದೆ. ನಾಶವೂ ಹತ್ತಿರವಿದ್ದಂತೆ ಕಾಣಬಹುದು; ಹೊಸ ಜನಾಂಗವಾಗಬಹುದು ಅಥವ ಹಳೆಯದೇ ಸ್ವಲ್ಪ ಪರಿವರ್ತನೆ ಹೊಂದಿ ಪುನರುಜ್ಜೀವನ ಪಡೆಯಬಹುದು. ಹಿಂದಿನ ಜನತೆಗೂ ಇಂದಿನ ಜನತೆಗೂ ಸಂಪೂರ್ಣ ಭೇದವಿರಬಹುದು; ಅಥವ ಭಾವನೆಗಳ ಧ್ಯೇಯಗಳ ಜೀವನಾಡಿಗಳು ಒಟ್ಟುಗೂಡಬಹುದು.

ಅನೇಕ ಸುಪ್ರತಿಷ್ಠಿತ ಪ್ರಾಚೀನ ನಾಗರಿಕತೆಗಳು ಮಾಯವಾದ ಅಥವ ಏಕಾಏಕಿ ನಾಶವಾದ ಅನೇಕ ನಿದರ್ಶನಗಳು ಚರಿತ್ರೆಯಲ್ಲಿವೆ ಮತ್ತು ಅವುಗಳ ಸ್ಥಾನವನ್ನೂ ಪ್ರಬಲವಾದ ಹೊಸ ಸಂಸ್ಕೃತಿಗಳು ಆಕ್ರಮಿಸಿಕೊಂಡಿವೆ. ಒಂದು ನಾಗರಿಕತೆ ಅಥವ ಜನತೆಗೆ ಜೀವದಾಯಕವಾದ ಅಂತಶ್ಶಕ್ತಿ ಅಥವ ಪ್ರಾಣಶಕ್ತಿ ಯಾವುದಾದರೂ ಇದೆಯೆ? ಮತ್ತು ಮುದುಕ ಮದವಣಿಗನಾಗಲು ಯತ್ನಿಸಿದಂತೆ ಆ ಶಕ್ತಿಯಿಲ್ಲದೆ ಇತರ ಎಲ್ಲ ಪ್ರಯತ್ನವೂ ನಿಷ್ಪ್ರಯೋಜಕವೆ?

ಪ್ರಪಂಚದ ಇಂದಿನ ಜನಾಂಗಗಳಲ್ಲಿ ಈ ಒಂದು ಜೀವಶಕ್ತಿಯನ್ನು ಅಮೆರಿಕನ್ನರು, ರಷ್ಯನ್ನರು ಚೀನೀಯರಲ್ಲಿ ಮಾತ್ರ ಕಂಡಿದ್ದೇನೆ, ಎಂತಹ ವಿಚಿತ್ರ ಜೋಡಣೆ! ಅಮೆರಿಕನ್ನರ ಮೂಲ ಪುರಾತನ ಪ್ರಪಂಚದಲ್ಲಿದ್ದರೂ ಪ್ರಾಚೀನತೆಯ ಹೊರೆ ಮತ್ತು ತೊಡರುಗಳು ವಿಧಿ ನಿಷೇಧಗಳು ಯಾವುದೂ ಇಲ್ಲದ ಹೊಸ ಜನಾಂಗ ಅವರದು. ಅವರ ಅಪಾರ ಚಟುವಟಿಕೆ ಸುಲಭವಾಗಿ ಅರ್ಥವಾಗುತ್ತದೆ. ಅವರಂತೆಯೇ ಕೆನಡ, ಆಸ್ಟ್ರೇಲಿಯ, ನ್ಯೂಜಿಲೆಂಡ್ ಜನರು ಹಳೆಯ ಪ್ರಪಂಚದಿಂದ ದೂರವಾಗಿ, ಹೊಸ ಜೀವನದ ಸವಿಯನ್ನನುಭವಿಸುತ್ತಿದಾರೆ.

ರಷ್ಯನ್‌ರು ಹೊಸ ಜನಾಂಗವಲ್ಲ, ಆದರೂ ಮೃತ್ಯು ಒದಗಿದಂತೆ ಹಳೆಯದೆಲ್ಲ ಸಂಪೂರ್ಣ ನಾಶವಾಗಿದೆ. ಇಡೀ ಜನಾಂಗವೇ ಪ್ರಪಂಚದ ಇತಿಹಾಸದಲ್ಲೆ ಎಂದೂ ಕಾಣದ ಪುನರವತಾರವನ್ನು ಪಡೆದಿದೆ. ಪುನಃ ನವಯುವಕರಂತೆ ಅದ್ಭುತ ಸತ್ವಶಾಲಿಗಳೂ ಶಕ್ತಿವಂತರೂ ಆಗಿ ಪ್ರಪಂಚವನ್ನೆ ಬೆರಗು ಮಾಡಿದ್ದಾರೆ. ಈಗ ಪುನಃ ಅವರೂ ತಮ್ಮ ಮೂಲವನ್ನು ಅಗೆಯಲು ಆರಂಭಿಸಿದ್ದಾರೆ. ಆದರೂ ಎಲ್ಲ ದೃಷ್ಟಿಯಿಂದ ಹೊಸಜನ ಹೊಸ ಜನಾಂಗ, ಹೊಸ ಸಂಸ್ಕೃತಿ.

ದಲಿತ ಜನತೆಯ ಶಕ್ತಿ ಮತ್ತು ಸಾಮರ್ಥ್ಯದ ಮೂಲವನ್ನು ಹುಡುಕುವ ಪ್ರಯತ್ನದಲ್ಲಿ ಏನೇ ಅಡ್ಡಿ ಬರಲಿ ಅದನ್ನು ಲಕ್ಷಿಸುವುದಿಲ್ಲವೆಂದು ಸಂಕಲ್ಪಮಾಡಿದರೆ ಒಂದು ಜನಾಂಗ ಹೇಗೆ ಪುನರುಜ್ಜೀವನವಾಗಬಹುದು, ನವಯುವಕನಂತೆ ಶಕ್ತಿಯುತವಾಗಬಹುದು ಎಂದು ರಷ್ಯ ತೋರಿಸಿಕೊಟ್ಟದೆ. ಈ ಭಯಂಕರ ವಿನಾಶಕಾರಕ ಯುದ್ಧದಿಂದ, ಯುದ್ಧದಲ್ಲಿ ಅಳಿದುಳಿದ ಕೆಲವು ರಾಷ್ಟ್ರಗಳು ನವಚೈತನ್ಯ ಪಡೆಯಬಹುದು.

ಚೀನೀಯರು ಇವರೆಲ್ಲರಿಗೂ ತೀರ ಭಿನ್ನ. ಅದು ಹೊಸ ಜನಾಂಗವಲ್ಲ ಅಥವ ರಷ್ಯನರಂತೆ ಬುಡಮೇಲಾಗಿ ಪರಿವರ್ತನೆಯ ನೋವನ್ನು ತಿಂದಿಲ್ಲ. ಏಳು ವರ್ಷಗಳ ಯುದ್ಧದಿಂದ ಅವರಲ್ಲಿಯೂ ಪರಿವರ್ತತೆ ಆಗಿರಲೇ ಬೇಕು. ಆದರೆ ಅದು ಈ ಯುದ್ಧದ ಫಲವಾಗಿಯೋ ಅಥವ ಬೇರೆ ಕಾರಣಗಳಿಗಾಗಿಯೋ ಅಥವ ಎರಡೂ ಕಾರಣಗಳಿಂದಲೊ ನಾನರಿಯೆ, ಆದರೆ ಚೀನೀಯರ ಕಾರ್ಯ

ಕುಶಲತೆಯನ್ನು ಕಂಡು ಬೆರಗಾಗಿದ್ದೇನೆ. ಇಂತಹ ಅಪಾರ ಶಕ್ತಿಯುಳ್ಳ ಜನಕ್ಕೆ ಸೋಲೆಂಬುದನ್ನು ನನಗೆ ಊಹಿಸಲು ಸಾಧ್ಯವಿಲ್ಲ.

ಚೀನೀಯರಲ್ಲಿ ಕಂಡ ಅದೇ ಬಗೆಯ ಅಪಾರ ಶಕ್ತಿಯನ್ನು ನಾನು ಕೆಲವುವೇಳೆ ಭಾರತೀಯರಲ್ಲೂ ಕಂಡಿದೇನೆ. ಎಲ್ಲ ಕಾಲದಲ್ಲೂ ಅಲ್ಲ. ಏನೇ ಆಗಲಿ ಸ್ಪಷ್ಟ ವಿವರಣೆ ಸಾಧ್ಯವಿಲ್ಲ. ಪ್ರಾಯಶಃ ನನ್ನ ಆಶೆಗಳು ನನ್ನ ಬಗೆಕದಡಬಹುದು. ಆದರೂ ಭಾರತೀಯರ ಮಧ್ಯೆ ನಾನು ಅಲೆದಾಡುತ್ತಿದ್ದಾಗ ಆ ಶಕ್ತಿಯನ್ನೇ ಹುಡುಕಲೆತ್ನಿಸುತ್ತಿದ್ದೆ. ಆಸಕ್ತಿ ಇದ್ದರೆ ಅವರಿಗೆಂದೂ ಚ್ಯುತಿಯಿಲ್ಲ. ಇಂದಲ್ಲ ನಾಳೆ ನೆಲೆ ಸೇರುತ್ತಾರೆ. ಆದರೆ ಆ ಶಕ್ತಿ ಮಾತ್ರ ಇಲ್ಲವಾದರೆ, ನಮ್ಮ ರಾಜಕೀಯ ಹೋರಾಟಗಳು, ಘೋಷಣೆಗಳು ಎಲ್ಲ ಬೂಟಾಟಿಕೆ; ಅವು ಬಹುದೂರ ನಮ್ಮನ್ನು ಕರೆದೊಯ್ಯಲಾರವು. ಹಿಂದಿನಂತೆ ಹೆಳವರಾಗಿ ತೆವಳುತ್ತ ಅಥವ ಸ್ವಲ್ಪ ವೇಗದಿಂದ ನಡೆಯುತ್ತ ನಮ್ಮಜನ ಮುಂದುವರೆಯುವಂಥ ರಾಜಕೀಯ ವ್ಯವಸ್ಥೆ ನನಗೆ ರುಚಿಸಲಿಲ್ಲ. ಅವರಲ್ಲಿ ಅಪಾರವಾದ ಶಕ್ತಿ ಮತ್ತು ಚೈತನ್ಯ ಸುಪ್ತವಾಗಿ ಅಡಗಿದೆ ಎಂದು ನಾನು ಭಾವಿಸಿದೆ. ಅವುಗಳ ಕಟ್ಟುಗಳನ್ನು ಕಿತ್ತೊಗೆದು ಅವರನ್ನು ಪುನಃ ಯುವಕರಂತೆ ವೀರ್ಯವಂತರನ್ನಾಗಿ ಮಾಡಲು ಬಯಸಿದೆ. ಭಾರತವು ತನ್ನ ಸ್ಥಾನವನ್ನರಿತುಕೊಂಡರೆ ಪ್ರಪಂಚದಲ್ಲಿ ಕೆಳ ಮಟ್ಟದ ಪಾತ್ರವಹಿಸಲು ಸಾಧ್ಯವಿಲ್ಲ. ವಹಿಸಿದರೆ ಪ್ರಮುಖ ಪಾತ್ರವನ್ನೇ ವಹಿಸಬೇಕು ಇಲ್ಲವಾದರೆ ಯಾವ ಪಾತ್ರವನ್ನೂ ವಹಿಸುವುದಿಲ್ಲ. ಮಧ್ಯ ಮಾರ್ಗ ಯಾವುದೂ ನನಗೆ ಕಾಣಲಿಲ್ಲ. ಅಂತಹ ಮಧ್ಯಮಾರ್ಗ ಸಾಧ್ಯವೆಂದೂ ತೋರಲಿಲ್ಲ.

ಕಳೆದ ಇಪ್ಪತ್ತೈದು ವರ್ಷಗಳ ಭಾರತೀಯ ಸ್ವಾತಂತ್ರ್ಯದ ಹೋರಾಟದಲ್ಲಿ ಬ್ರಿಟಿಷರೊಂದಿನ ನಮ್ಮ ಎಲ್ಲ ಹೋರಾಟಗಳಲ್ಲಿ ನನ್ನ ಮತ್ತು ಇತರ ಅನೇಕರ ಮನಸ್ಸಿನ ಹಿನ್ನೆಲೆ ಎಂದರೆ ಭಾರತದ ಪುನರುಜ್ಜೀವನ. ಸ್ವಯಂ ಕಾರ್ಯಾಚರಣೆ, ಸ್ವಯಂಪ್ರೇರಿತ ಕಷ್ಟ ಸಹಿಷ್ಣುತೆ, ಆತ್ಮತ್ಯಾಗ, ಮತ್ತು ಕೆಡಕು, ತಪ್ಪು ಎಂದು ಮನಗಂಡುದಕ್ಕೆ ತಲೆ ಬಾಗದೆ ಅದರಿಂದ ಒದಗುವ ಎಲ್ಲ ಗಂಡಾಂತರ ಮತ್ತು ಆಪತ್ತುಗಳಿಗೆ ನಾವೇ ತಲೆಯೊಡ್ಡುವದರಿಂದ ಭಾರತೀಯರ ಆತ್ಮಗೌರವದ ಒಳಕಿಡಿಯನ್ನು ಉರುಬಿ ಗಾಢನಿದ್ರೆಯಿಂದ ಎಬ್ಬಿಸಬಹುದೆಂದು ಭಾವಿಸಿದ್ದೆ. ಬ್ರಿಟಿಷ್ ಸರಕಾರದೊಂದಿಗೆ ನಿತ್ಯವೂ ಹೋರಾಡುತ್ತಿದ್ದರೂ ನಮ್ಮ ದೃಷ್ಟಿ ಎಲ್ಲ ನಮ್ಮ ಜನತೆಯ ಮೇಲೆ. ಎಷ್ಟರಮಟ್ಟಿಗೆ ಈ ಮೂಲ ಧ್ಯೇಯಕ್ಕೆ ಸಹಾಯಕವೊ ಅಷ್ಟರಮಟ್ಟಿಗೆ ಮಾತ್ರ ರಾಜಕೀಯ ಲಾಭಕ್ಕೆ ಒಂದು ಬೆಲೆ. ಈ ಒಂದು ಮೂಲಧ್ಯೇಯದಿಂದ, ಅನೇಕವೇಳೆ ನಾವು ರಾಜಕಾರಣಿಗಳಂತೆ ಸಂಕುಚಿತ ರಾಜಕೀಯ ದೃಷ್ಟಿಗೇ ಅಂಟಿಕೊಳ್ಳುತ್ತ ಇರಲಿಲ್ಲ. ಭಾರತೀಯ ಮತ್ತು ವಿದೇಶಿ ವಿಮರ್ಶಕರು ನಮ್ಮ ಈ ನಡತೆ ನೋಡಿ ಹುಚ್ಚರು ದುರಭಿಮಾನಿಗಳು ಎನ್ನುತ್ತಿದ್ದರು. ನಾವು ಹುಚ್ಚರು ಹೌದೊ ಅಲ್ಲವೊ ಮುಂದಿನ ಚರಿತ್ರಕಾರನೇ ಹೇಳಬೇಕು. ನಮ್ಮ ಆದರ್ಶ ಉನ್ನತವಾಗಿತ್ತು. ದೃಷ್ಟಿ ದೂರವಿತ್ತು. ಕೇವಲ ಕಾರ್ಯಸಾಧಕ ರಾಜಕಾರಣಿಗಳ ದೃಷ್ಟಿಯಲ್ಲಿ ನಾವು ಅನೇಕ ವೇಳೆ ಹುಚ್ಚರಂತೆ ವರ್ತಿಸಿರಬಹುದು. ಆದರೆ ನಮ್ಮ ಜನರ ರಾಜಕೀಯ ಆರ್ಥಿಕ ಮಟ್ಟವಲ್ಲದೆ ಮಾನಸಿಕ ಮತ್ತು ಆತ್ಮ ಗೌರವವನ್ನು ಸಹ ಉನ್ನತ ಮಟ್ಟಕ್ಕೇರಿಸಬೇಕೆಂಬ ಧ್ಯೇಯವನ್ನು ಎಂದೂ ಮರೆಯಲಿಲ್ಲ. ನಮ್ಮ ಜನರ ಈ ಅಪಾರ ಶಕ್ತಿಯೊಂದನ್ನು ನಾವು ಭದ್ರತಳಹದಿಯ ಮೇಲೆ ಕಟ್ಟಿದರೆ ಉಳಿದೆಲ್ಲವೂ ಹಿಂದೆಯೇ ಬರುವುದೆಂದು ನಂಬಿದ್ದೆವು. ವಿದೇಶೀಯರ ಸೊಕ್ಕಿನ ಅಧಿಕಾರ ದರ್ಪಕ್ಕೆ ಒಳಗಾದ ಕೆಲವು ತಲೆಮಾರುಗಳ ನಾಚಿಕೆಗೇಡಿನ ದಾಸ್ಯ ಜೀವನ ಮತ್ತು ಹಲ್ಲುಗಿರಿಯುವ ಹೇಡಿತನಗಳನ್ನು ಪೂರ್ಣ ಅಳಿಸಬೇಕಾಗಿತ್ತು.

## ೪. ಭಾರತ ದರ್ಶನ

ಗ್ರಂಥಗಳು, ಪುರಾತನ ಸ್ಮಾರಕಗಳು, ಸಂಸ್ಕೃತಿಯ ಗತವೈಭವಗಳು ಸ್ವಲ್ಪ ಮಟ್ಟಿಗೆ ಭಾರತ ಹೃದಯವನ್ನರಿಯಲು ಸಹಾಯಕವಾದರೂ ಅದರಿಂದಲೇ ನನಗೆ ತೃಪ್ತಿಯಾಗಲಿಲ್ಲ. ಅವುಗಳ ಕತೆ ಎಲ್ಲವೂ ಗತಕಾಲದ್ದಾದ್ದರಿಂದ ಉತ್ತರ ಕೊಡುವ ಸಾಮಾರ್ಥ್ಯವೂ ಅವುಗಳಿಗೆ ಇರಲಿಲ್ಲ; ಗತ

ಕಾಲಕ್ಕೂ ಇಂದಿನ ಕಾಲಕ್ಕೂ ನಿಜವಾದ ಸಂಬಂಧ ಏನಾದರೂ ಇದೆಯೇ ಎನ್ನುವುದು ನನಗೆ ಬೇಕಾಗಿತ್ತು. ನನಗೆ ಮತ್ತು ನನ್ನಂತಹ ಅನೇಕರಿಗೆ ಇಂದಿನ ಕಾಲವೆಂದರೆ ಪುರಾತನ ಸಂಪ್ರದಾಯಗಳು, ಕಡುಬಡತನ, ನಿರಂತರ ಗೋಳು ಮತ್ತು ಮಧ್ಯಮ ವರ್ಗದ ಜನರ ಆಧುನಿಕ ಬಾಹ್ಯಜೀವನ ಇವುಗಳಒಂದು ವಿಚಿತ್ರ ಮಿಶ್ರಣವಾಗಿತ್ತು. ನನ್ನ ವರ್ಗ ಅಥವ ಸಂಗಡದ ಜನರ ವಿಚಾರದಲ್ಲಿ ಹೆಮ್ಮೆಪಡುತ್ತ ಇರಲಿಲ್ಲ; ಆದರೂ ಭಾರತದ ಬಿಡುಗಡೆಯ ಹೋರಾಟದಲ್ಲಿ ನಾಯಕರಾಗಲು ಅವರೇ ಸರಿ ಎಂದು ಭಾವಿಸಿದ್ದೆ. ಈ ಮಧ್ಯಮವರ್ಗದ ಜನ ಪಂಜರದ ಗಿಳಿಗಳಂತೆ ಬಂಧನದಲ್ಲಿ ಜೀವಿಸುತ್ತ ಇದ್ದರು. ತಮ್ಮ ಕಟ್ಟನ್ನು ಕಿತ್ತೊಗೆದು ಉನ್ನತವಾದ ಹಿರಿದಾದ ಬಾಳಿಗಾಗಿ ಹಾತೊರೆಯುತ್ತಿದ್ದರು. ಬ್ರಿಟಿಷರ ಆಳ್ವಿಕೆಯ ಚೌಕಟ್ಟಿನಲ್ಲಿ ಆ ಬೆಳವಣಿಗೆಗೆ ಅವಕಾಶವಿಲ್ಲದೆ ಆ ಆಳ್ವಿಕೆಯ ಮೇಲೆ ದಂಗೆಯ ಮನೋಭಾವ ಹುಟ್ಟಿತು. ಆದರೂ ನಮ್ಮನ್ನು ಅವನತಿಗೆ ತುಳಿದ ಆಡಳಿತ ಕ್ರಮದ ಮೇಲೆ ಆ ದ್ವೇಷವು ಹುಟ್ಟಲಿಲ್ಲ. ಬ್ರಿಟಿಷರ ಬದಲು ನಮ್ಮ ಜನರನ್ನು ತಂದು ಆ ಪದ್ಧತಿಯನ್ನು ಸುಧಾರಿಸಬಹುದೆಂದರು. ಮಧ್ಯಮವರ್ಗದ ಜನರೆಲ್ಲ ಅದೇ ಭಾವನೆಯ ಜನರಾದ್ದರಿಂದ ಅದನ್ನು ಎದುರಿಸುವ ಅಥವ ಬುಡಮಟ್ಟ ಕಿತ್ತೊಗೆಯುವ ಮನೋಭಾವ ಅವರಲ್ಲಿ ಹುಟ್ಟಲು ಸಾಧ್ಯವಿರಲಿಲ್ಲ.

ಹಳ್ಳಿಗಳ ಜನಕೋಟಿಯಕಡೆ ನಮ್ಮನ್ನು ಹೊಡೆದೋಡಿಸಿದ ಹೊಸ ಶಕ್ತಿಗಳು ಹುಟ್ಟಿದವು. ಹಳ್ಳಿಗಳ ಅಸ್ತಿತ್ವವನ್ನೇ ಮರೆತು, ಅವುಗಳಿಗೆ ಯಾವ ಪ್ರಾಮುಖ್ಯತೆಯನ್ನೂ ಕೊಡದ ವಿದ್ಯಾವಂತ ಯುವಕರ ಮುಂದೆ ಮೊಟ್ಟಮೊದಲನೆಯಬಾರಿ ಒಂದು ಹೊಸ ಭಾರತ, ವ್ಯತ್ಯಸ್ತ ಭಾರತ, ಬಡತನದ ನಗ್ನತೆಯ ಜೀವನ ಎದುರುನಿಂತಿತು. ಅದರ ಅಸಂಖ್ಯಾತ ಸಮಸ್ಯೆಗಳು ನಮ್ಮ ಹೃದಯವನ್ನೆ ತಲ್ಲಣಿಸಿದವು. ಅದು ಮಾತ್ರವಲ್ಲದೆ ನಮ್ಮ ನಿರ್ಧಾರಗಳು, ಮೂಲ ಉದ್ದೇಶಗಳನ್ನೇ ತಲೆಕೆಳಗೆ ಮಾಡಲಾರಂಭಿಸಿತು. ಈ ರೀತಿ ಭಾರತದರ್ಶನದ ವಾಸ್ತವ ಚಿತ್ರ ನಮಗೆ ದೊರೆಯಿತು. ಆದರಿಂದ ಜ್ಞಾನವೂ ದೊರೆಯಿತು. ಮನಸ್ಸಿನ ಕಳವಳವೂ ಹೆಚ್ಚಿತು. ನಮ್ಮ ಹಿಂದಿನ ಸನ್ನಿವೇಶ ಮತ್ತು ಅನುಭವಗಳಿಗೆ ಅನುಗುಣವಾಗಿ ನಮ್ಮ ಪ್ರತಿಕ್ರಿಯೆಗಳೂ ಭಿನ್ನ ಭಿನ್ನವಾಗಿದ್ದವು. ಕೆಲವರಿಗೆ ಈ ಹಳ್ಳಿಗಾಡಿನ ಜನರ ಸಮೀಪ ಪರಿಚಯವಿದ್ದುದರಿಂದ ಅವರಿಗೆ ಹೊಸ ಅನುಭವವೇನೂ ಆಗಲಿಲ್ಲ; ಅದೆಲ್ಲ ಅನಿವಾರ್ಯ ಎಂದರು. ಆದರೆ ಅದು ನನಗೊಂದು ಹೊಸದರ್ಶನ ಯಾತ್ರೆಯೇ ಆಯಿತು. ನಮ್ಮ ಸಂಗಡದ ನ್ಯೂನತೆ, ದೌರ್ಬಲ್ಯಗಳು ನನಗೆ ಪೂರ್ಣ ತಿಳಿದಿದ್ದರೂ ಭಾರತದ ಲಕ್ಷಾಂತರ ಹಳ್ಳಿಗಳ ಜನತೆಯ ದರ್ಶನದಿಂದ ಮಧ್ಯಮ ವರ್ಗದ ಜನರಲ್ಲಿ ನಾನು ಕಾಣದ ಯಾವುದೊ ಅನಿರ್ವಚನೀಯ ವಸ್ತುವನ್ನು ಅವರಲ್ಲಿ ಕಂಡೆ.

ಈ ಜನತಾಭಾವನೆಗೆ ನಾನು ಒಂದು ದೈವತ್ತ್ವವನ್ನು ಕಲ್ಪಿಸುವುದಿಲ್ಲ. ಅದು ನನಗೆ ಒಂದು ಅವ್ಯವಹಾರಿಕ ಕಲ್ಪನೆಯೂ ಅಲ್ಲ; ವೈವಿಧ್ಯಯುತವೂ ಅಸಂಖ್ಯಾತವೂ ಆಗಿದ್ದರೂ ಭಾರತದ ಜನಕೋಟಿ ನನಗೊಂದು ಸತ್ಯ. ಬಾಯಿ ಇಲ್ಲದ ಜನಜಂಗುಳಿ ಎಂದು ಭಾವಿಸದೆ ಅವರನ್ನು ವ್ಯಕ್ತಿಗಳೆಂದು ಪರಿಗಣಿಸುತ್ತೇನೆ. ನಾವು ಅವರಿಂದ ಹೆಚ್ಚಿನದೇನನ್ನೂ ನಿರೀಕ್ಷಿಸಿರಲಿಲ್ಲ. ಆದ್ದರಿಂದ ಪ್ರಾಯಶಃ ಆ ಭಾವನೆ ನಮ್ಮಲ್ಲಿದ್ದಿರಬಹುದು. ಆದರೆ ಅವರಲ್ಲಿ ನಾನು ಕಂಡ ವ್ಯಕ್ತಿತ್ವ ನನ್ನ ನಿರೀಕ್ಷೆಯನ್ನು ಮೀರಿತ್ತು. ಆ ವ್ಯಕ್ತಿತ್ವ, ಅವರ ದಾರ್ಢ್ಯ ಮತ್ತು ಅಂತಶ್ಶಕ್ತಿಗೆ ಕಾರಣ ಅವರಲ್ಲಿ ಇನ್ನೂ ಅಲ್ಪ ಪ್ರಮಾಣದಲ್ಲಿ ಉಳಿದಿರುವ ಸನಾತನ ಭಾರತೀಯ ಸಂಸ್ಕೃತಿಯ ಸಂಪ್ರದಾಯವೇ ಇರಬೇಕೆಂದು ಹೊಳೆಯಿತು. ಕಳೆದ ಎರಡುನೂರು ವರ್ಷಗಳ ನೂಕುನುಗ್ಗಲಿನಲ್ಲಿ ಆ ಸಂಸ್ಕೃತಿ ಎಷ್ಟೋ ಮಾಸಿತ್ತು. ಆದರೂ ನಿಷ್ಪ್ರಯೋಜಕವೂ, ವಿನಾಶಕಾರಕವೂ ಆದುದು ಎಷ್ಟೋ ಇದ್ದರೂ, ಉಳಿಸಿಕೊಳ್ಳಬೇಕಾದ್ದು ಇನ್ನೂ ಸ್ವಲ್ಪ ಉಳಿದಿತ್ತು.

೧೯೨೦ ರಿಂದ ೩೦ ರ ವರೆಗೆ ನನ್ನ ಕೆಲಸವೆಲ್ಲ ನನ್ನ ಪ್ರಾಂತ್ಯದಲ್ಲಿ ಮಾತ್ರ. ಆಗ್ರ ಮತ್ತು ಅಯೋಧ್ಯೆಯ ಸಂಯುಕ್ತ ಪ್ರಾಂತ್ಯದ ನಲವತ್ತೆಂಟು ಜಿಲ್ಲೆಗಳ ನಗರಗಳು ಮತ್ತೂ ಹಳ್ಳಿಗಳಲ್ಲಿ ಮೇಲಿಂದ ಮೇಲೆ ಅನೇಕ ಕಡೆ ಸಂಚಾರಮಾಡಿದೆ. ಬಹು ದಿನಗಳಿಂದ ನನ್ನ ಪ್ರಾಂತ್ಯವನ್ನು ಹಿಂದೂ

ಸ್ಥಾನದ ಹೃದಯ ಎಂದಿದ್ದಾರೆ. ಅಲ್ಲಿ ಪ್ರಾಚೀನ ಕಾಲದ ಮತ್ತು ಮಧ್ಯಮ ಯುಗದ ನಾಗರಿಕತೆಯ ಅನೇಕ ಸ್ಥಾನ ಮತ್ತು ಕೇಂದ್ರಗಳಿವೆ. ಅನೇಕ ಜನಾಂಗಗಳ ಸಂಸ್ಕೃತಿಗಳಿಗೆ ಅದು ಪುಟವಿಕ್ಕಿದ ಮೂಸೆಯಾಗಿದೆ; ೧೮೫೭ ರ ಕ್ರಾಂತಿ ಹುಟ್ಟಿ ಹರಡಿದ್ದು ಮತ್ತು ನಂದಿ ಹೋದದ್ದು ಅದೇ ಪ್ರಾಂತ್ಯದಲ್ಲಿ. ಇತರರಿಗಿಂತ ಸ್ವಲ್ಪ ಅನುಕೂಲಸ್ಥನೂ, ಸ್ವತಂತ್ರಮನೋಭಾವದ ಕೆಚ್ಚೆದೆಯ ಕಟ್ಟಾಳೂ, ಶುದ್ಧ ನೇಗಿಲಯೋಗಿಯೂ ಆದ ಉತ್ತರ ಮತ್ತು ಪಶ್ಚಿಮ ಜಿಲ್ಲೆಗಳ ದೃಢಾಂಗಿಯಾದ ಜಾಟ್ ರೈತನನ್ನು ನೋಡಿದ್ದು ಇದೇ ಪ್ರಾಂತ್ಯದಲ್ಲಿ. ಮತಾಂತರ ಹೊಂದಿ ಇಸ್ಲಾಂ ಧರ್ಮವನ್ನು ಸ್ವೀಕರಿಸಿದ್ದರೂ ತನ್ನ ಜನ ಮತ್ತು ವಂಶದ ಗೌರವದಿಂದ ಹೆಮ್ಮೆಪಡುವ ರಜಪೂತ ರೈತರು ಮತ್ತು ಜಮೀನುದಾರರು; ನಿಪುಣರೂ ಚತುರರೂ ಆದ ಹಿಂದೂ ಮುಸ್ಲಿಂ ಶಿಲ್ಪಿಗಳು; ಗೃಹಕೈಗಾರಿಕೆಗಳ ಕೆಲಸಗಾರರು; ಒಳ್ಳೆಯ ದಿನಗಳ ಆಶೆಯು ಧೈರ್ಯ ಸಹ ಇಲ್ಲದಿದ್ದರೂ ಆ ಆಶೆ ಮತ್ತು ನಂಬಿಕೆಯಿಂದ ತುಂಬಿ ತಲೆ ತಲಾಂತರಗಳ ದಬ್ಬಾಳಿಕೆ ಮತ್ತು ಬಡತನದ ಬೇಗೆಯಿಂದ ಬೆಂದ ಅಯೋಧ್ಯೆ ಮತ್ತು ಪೂರ್ವ ಜಿಲ್ಲೆಗಳ ರೈತರು ಮತ್ತು ಗೇಣಿದಾರರು;—ಇವರುಗಳ ಪರಿಚಯ ಮಾಡಿಕೊಂಡೆ.

೧೯೩೦ ರಿಂದ ೪೦ ರ ಮಧ್ಯೆ ಸೆರೆಮನೆಯಿಂದ ಹೊರಗಿದ್ದ ವೇಳೆ ಅದರಲ್ಲೂ ೧೯೩೬-೩೭ ರ ಚುನಾವಣೆಗಳ ಪ್ರಚಾರ ಕಾಲದಲ್ಲಿ ಭಾರತದ ಆದ್ಯಂತ ನಗರಗಳಲ್ಲಿ, ಪಟ್ಟಣಗಳಲ್ಲಿ, ಹಳ್ಳಿಗಳಲ್ಲಿ ಸಂಚಾರಮಾಡಿದೆ. ಬಂಗಾಳದ ಹಳ್ಳಿಗಾಡು ಒಂದನ್ನು ನೋಡಿಲ್ಲ; ಅದು ಬಿಟ್ಟು ಉಳಿದೆಲ್ಲ ಪ್ರಾಂತ್ಯಗಳನ್ನೂ ಸುತ್ತಿದೆ. ಮೂಲೆ ಮೂಲೆಗಳ ಹಳ್ಳಿಗಳನ್ನೂ ಮುಟ್ಟಿದೆ. ರಾಜಕೀಯ ಆರ್ಥಿಕ ಸಮಸ್ಯೆಗಳ ವಿಷಯ ಮಾತನಾಡಿದೆ; ನನ್ನ ಭಾಷಣಗಳ ತುಂಬ ರಾಜಕೀಯ ಮತ್ತು ಚುನಾವಣೆಗಳ ವಿಷಯಗಳೇ ತುಂಬಿದ್ದವು. ಆದರೆ ಈ ಎಲ್ಲ ಕಾಲದಲ್ಲಿ ನನ್ನ ಮನಸ್ಸಿನ ಒಂದು ಮೂಲೆಯಲ್ಲಿ, ಹೃದಯಾಂತರಾಳದಲ್ಲಿ ಗಾಢವಾದ, ಸ್ಪಷ್ಟವಾದ ಬೇರೊಂದು ವಿಷಯವಿತ್ತು. ಚುನಾವಣೆಗಳು, ದೈನಂದಿನ ಉದ್ರಿಕ್ತ ಸಮಸ್ಯೆಗಳು ಯಾವುದೂ ಅದಕ್ಕೆ ಬೇಕಿರಲಿಲ್ಲ. ಆದರೆ ನಾನೇ ಇನ್ನೊಂದು ದೊಡ್ಡ ಉದ್ರೇಕಕ್ಕೆ ಒಳಗಾಗಿದ್ದೆ. ನಾನೇ ಒಂದು ಸಂಶೋಧನೆಯ ಮಹಾಯಾತ್ರೆಗಾಗಿ ಹೊರಟಿದ್ದೆ. ಭಾರತ ಮತ್ತು ಭಾರತದ ಜನ ನನ್ನೆದುರು ಹಬ್ಬಿತ್ತು. ಅಪಾರ ಸೊಬಗು ಮತ್ತು ರೂಪು ಲಾವಣ್ಯಗಳಿಂದ ತೇಜಸ್ವಿಯಾದ ಭಾರತ ನನ್ನನ್ನು ಮುಗ್ಧನನ್ನಾಗಿ ಮಾಡಿತು. ನಾನು ನೋಡಿದಷ್ಟೂ, ನನಗೇ ಆಗಲಿ ಅಥವ ಇನ್ಯಾರಿಗೇ ಆಗಲಿ ಅದರ ಗರ್ಭದಲ್ಲಡಗಿರುವ ಭಾವನೆಗಳನ್ನು ಗ್ರಹಿಸಲು ಎಷ್ಟು ಕಷ್ಟವಿದೆ ಎಂಬ ಅರಿವು ಆಗುತ್ತ ಬಂದಿತು. ನನ್ನ ಬುದ್ಧಿಶಕ್ತಿಗೆ ನಿಲುಕದೆ ಇದ್ದುದು ಅದರ ದೇಶವಿಸ್ತಾರವಲ್ಲ; ರೂಪ ಭಿನ್ನತೆಯೂ ಅಲ್ಲ; ಆದರೆ ಒಂದೊಂದು ವೇಳೆ ಕಂಡೂ ಕಾಣದಂತೆ ಕಣ್ಮರೆಯಾಗಿ ಕಾಣುವ ನನ್ನ ಅಳತೆಗೆ ಮೀರಿದ ಯಾವುದೋ ಆತ್ಮದ ಆಳ. ಚಿತ್ರಶಿಲ್ಪಿಯೊಬ್ಬನು ತನ್ನ ಕಲ್ಪನಾಚಿತ್ರಗಳನ್ನು ಒಂದೇ ಹಾಳೆಯ ಮೇಲೆ, ಮೇಲಿಂದ ಮೇಲೆ ಪದರು ಪದರಾಗಿ, ಯಾವ ಮೇಲಿನ ಮಡಿಕೆಯೂ ಕೆಳಗಿನ ಯಾವ ಮಡಿಕೆಯನ್ನೂ ಅಳಿಸದಂತೆ ಅಥವ ಪೂರ್ಣ ಮುಚ್ಚದಂತೆ ಬರೆದ ಒಂದು ಪುರಾತನ ಚಿತ್ರ ಪ್ರತಿಯಂತೆ ಅದು ಕಾಣಿಸುತ್ತಿತ್ತು. ನಮಗೆ ಅದರ ಅರಿವಿಲ್ಲದಿದ್ದರೂ ನಮ್ಮ ಚೇತನ ಅಥವ ಸುಷುಪ್ತ ಜೀವನದಲ್ಲಿ ಈ ಎಲ್ಲ ಮಡಿಕೆಗಳೂ ಅಡಗಿವೆ. ಭಾರತದ ಜಟಿಲವೂ, ರಹಸ್ಯಗರ್ಭಿತವೂ ಆದ ವ್ಯಕ್ತಿತ್ವದಲ್ಲಿ ಅವುಗಳೆಲ್ಲ ಸೇರಿವೆ, ಕಂಡೂಕಾಣದಂತೆ. ಒಂದೊಂದು ವೇಳೆ ಅಣಕಿಸುವಂತೆ ನಗುವ ಆ ಒಗಟಿಯ ಮುಖವನ್ನು ಆಸೇತು ಹಿಮಾಚಲ ಪರ್ಯಂತ ಕಾಣಬಹುದು. ಹೊರಗೆ ನಮ್ಮ ಜನರಲ್ಲಿ ಭಿನ್ನಭಾವಗಳು ಅಸಂಖ್ಯಾತ ಭೇದಗಳು ಕಂಡರೂ, ನಮ್ಮ ರಾಜಕೀಯ ಗತಿ ಅಥವ ದುರದೃಷ್ಟ ಏನೇ ಇದ್ದರೂ ಯುಗಾಂತರಗಳಿಂದ ನಮ್ಮಲ್ಲಿ ಒಂದು ಏಕೀಭಾವನೆಯನ್ನು ತುಂಬಿ ಒಮ್ಮುಖವಾಗಿ ನಡೆಸಿಕೊಂಡು ಬಂದಿರುವ ಐಕ್ಯತೆಯ ಮುದ್ರೆ ಎಲ್ಲೆಲ್ಲೂ ಅದ್ಭುತವಾಗಿ ಎದ್ದು ಕಾಣುತ್ತಿತ್ತು. ಭಾರತದ ಈ ಐಕ್ಯತೆ ನನಗೆ ಇನ್ನು ಕೇವಲ ಮಾನಸಿಕ ಕಲ್ಪನೆಯಾಗಿ ಉಳಿಯಲಿಲ್ಲ. ಒಂದು ಭಾವೋದ್ವೇಗದ ಅನುಭವ ನನ್ನನ್ನು ಆವರಿಸಿತು. ರಾಜಕೀಯ ವಿಭಜನೆ, ದುರ್ಘಟನೆ, ವಿಪ್ಲವ ಯಾವುದೂ ಈ ಭಾರತದ ಐಕ್ಯತೆಯನ್ನು ಒಡೆಯಲು ಸಾಧ್ಯವಾಗಲಿಲ್ಲ.

ಇಂಡಿಯ ದೇಶವಾಗಲಿ ಬೇರೆ ಯಾವ ದೇಶವೇ ಆಗಲಿ ಒಂದೇ ಮಾನವ ಜಾತಿಗೆ ಸೇರಿದೆ ಎಂದು ಭಾವಿಸುವುದು ಮೂರ್ಖತನ. ಭಾರತೀಯರ ಜೀವನ ವಿಭೇದಗಳು, ವ್ಯತ್ಯಾಸಗಳು, ಪಂಗಡ ಗಳು, ಜಾತಿಗಳು, ಮತಧರ್ಮಗಳು ಮತ್ತು ಬುಡಕಟ್ಟುಗಳು ವಿವಿಧ ಮಟ್ಟದ ಸಾಂಸ್ಕೃತಿಕ ಬೆಳ ವಣಿಗೆಗಳು ಇದೆಲ್ಲ ನನಗೆ ತಿಳಿದಿತ್ತು. ಆದರೂ ಒಂದು ಸನಾತನ ಸಂಸ್ಕೃತಿಯ ಹಿನ್ನೆಲೆ, ಒಂದು ಸಾರ್ವತ್ರಿಕ ಜೀವನೋದ್ದೇಶ ಉಳ್ಳ ಜನತೆಗೆ ಅವರದೇ ಆದ ಒಂದು ವೈಶಿಷ್ಟ್ಯ ಭಾವನೆ ಬೆಳೆಯು ತ್ತದೆ; ಮತ್ತು ಆ ಜನಾಂಗದ ಪೀಳಿಗೆಯಲ್ಲಿ ಎಷ್ಟೋ ವೈವಿಧ್ಯ ತೋರಿದರೂ ಆ ಭಾವನೆಯ ಛಾಯೆಯು ಮಾತ್ರ ಅವರಲ್ಲಿ ಎದ್ದು ಕಾಣುತ್ತದೆ. ಚೀನದಲ್ಲಿ ಸಂಪ್ರದಾಯಶರಣ ಅಧಿಕಾರಿಯನ್ನಾಗಲಿ, ಹಳೆಯ ಕಟ್ಟುಗಳನ್ನೆಲ್ಲ ಕಿತ್ತೊಗೆದ ಕಮ್ಯೂನಿಸ್ಟನನ್ನಾಗಲಿ ನೋಡಿ, ಆ ಛಾಯೆ ಇದ್ದೇ ಇದೆ. ನನಗೆ ಬೇಕಾಗಿದ್ದದ್ದು ಭಾರತೀಯರ ಈ ವೈಶಿಷ್ಟ್ಯ. ಕುತೂಹಲ ನನ್ನಲ್ಲಿದ್ದರೂ ಕೇವಲ ಕಾಲಹರಣ ಮಾಡುವ ಕುತೂಹಲದಿಂದಲ್ಲ. ಆದರೆ ಅದರ ಮೂಲಕ ನನ್ನ ಜನರನ್ನು, ದೇಶವನ್ನು ಅರ್ಥಮಾಡಿ ಕೊಳ್ಳಲು ಒಂದು ಬೆಳಕು ದೊರೆಯಬಹುದು, ಮುಂದಿನ ಕಾರ್ಯಕ್ಕೆ ಕಾರ್ಯಾಲೋಚನೆಗೆ ದಾರಿ ಕಾಣಬಹುದು ಎಂದು. ರಾಜಕೀಯವೂ ಮತ್ತು ಚುನಾವಣೆಗಳೂ ದೈನಂದಿನ ಕೆಲಸವಾಗಿತ್ತು. ಬಾಹ್ಯಾ ಲಂಕಾರಗಳಿಂದ ಉದ್ರೇಕಗೊಳ್ಳುವಕಾಲ ಅದು. ಆದರೆ ಭಾರತದ ಭವಿಷ್ಯ ಭವನವನ್ನು ಭದ್ರವಾಗಿ, ಭವ್ಯವಾಗಿ ಸುಂದರವಾಗಿ ಕಟ್ಟಬೇಕಾದರೆ ನಮ್ಮ ತಳಹದಿ ಬಹಳ ಆಳವಾಗಿರಬೇಕು.

## ೫. ಭಾರತ ಮಾತಾ

ಸಭೆ ಸಭೆಯಲ್ಲಿ ಭಾರತದ ಈ ನನ್ನ ಶ್ರೋತೃವೃಂದಕ್ಕೆ ಹಿಂದೂಸ್ಥಾನ ಮತ್ತು ನಮ್ಮ ಮೂಲ ಪುರಾಣ ಪುರುಷ ಭರತನಿಂದ ಸಂಸ್ಕೃತದಲ್ಲಿ ಹೆಸರು ಪಡೆದ ಭಾರತದ ವಿಷಯವಾಗಿ ಉಪನ್ಯಾಸ ಮಾಡಿದ್ದೇನೆ. ನಗರಗಳ ಜನ ಅತಿ ಬುದ್ಧಿವಂತರು, ಅವರಿಗೆ ಇನ್ನೂ ಸ್ವಲ್ಪ ಬಿರುಸುಮಾತು ಬೇಕು. ಆದ್ದರಿಂದ ಅಲ್ಲಿ ಈ ವಿಷಯ ಮಾತನಾಡುತ್ತ ಇರಲಿಲ್ಲ. ಆದರೆ ಮಿತ ದೃಷ್ಟಿಯ ರೈತರಿಗೆ ನಮ್ಮ ದೇಶ, ಅದರ ಸ್ವಾತಂತ್ರ್ಯಕ್ಕಾಗಿ ನಮ್ಮ ಹೋರಾಟ, ಒಂದೊಂದು ಪ್ರಾಂತ್ಯಕ್ಕೂ ವ್ಯತ್ಯಾಸ ಕಂಡರೂ ನಾವೆಲ್ಲ ಭಾರತೀಯರು, ಉತ್ತರದಿಂದ ದಕ್ಷಿಣಕ್ಕೆ ಪೂರ್ವದಿಂದ ಪಶ್ಚಿಮಕ್ಕೆ ಎಲ್ಲಿ ಹೋದರೂ ರೈತನ ಸಮಸ್ಯೆಗಳು ಒಂದೇ, ಸ್ವರಾಜ್ಯವೆಂಬುದು ಕೆಲವರಿಗೆ ಮಾತ್ರವಲ್ಲ, ಎಲ್ಲರಿಗೆ ಮತ್ತು ಎಲ್ಲ ಪ್ರಾಂತ್ಯ ಗಳಿಗೆ ಎಂದು ಮುಂತಾಗಿ ಭಾಷಣಮಾಡುತ್ತಿದ್ದೆ. ಖೈಬರ್ ಕಣಿವೆಯಿಂದ ಕನ್ಯಾಕುಮಾರಿಯವರಿಗೆ ಎಲ್ಲಿ ಹೋದರೂ ಪ್ರಶ್ನೆಗಳೆಲ್ಲ ಒಂದೇ. ಕಾರಣ ರೈತರ ಸಮಸ್ಯೆಗಳು ಒಂದೇ—ಬಡತನ ಸಾಲ ಸ್ವಾಮಿತ್ವ, ಜಮೀನುದಾರ, ಸಾಲಗಾರ; ಗೇಣಿಯ ಹೊರೆ, ಕಂದಾಯ, ಪೋಲೀಸರ ಹಿಂಸೆ, ವಿದೇಶಿ, ಯರ ಆಶ್ರಯದಲ್ಲಿ ಇವೆಲ್ಲ ಕೊಡುತ್ತಿರುವ ಕಿರುಕುಳ, ಎಲ್ಲರಿಗೂ ಬೇಕಾದ ಈ ದಾಸ್ಯ ವಿಮೋಚನೆ. ಭಾರತವೆಲ್ಲ ಒಂದು, ಪ್ರಪಂಚದಲ್ಲಿ ನಾವೂ ಒಂದು ಭಾಗವಾದ್ದರಿಂದ ಪ್ರಪಂಚಕ್ಕೂ ನಮಗೂ ಸಂಬಂಧವಿದೆ ಎಂದು ಯೋಚಿಸಲು ಹೇಳಿದೆ. ಚೀಣ ಸ್ಪೇನ್, ಅಬಿಸೀನಿಯ, ಮಧ್ಯ ಯೂರೋಪ್, ಈಜಿಪ್ಟ್, ಪಶ್ಚಿಮ ರಷ್ಯದ ರಾಷ್ಟ್ರಗಳು ಇವುಗಳಲ್ಲಿ ನಡೆಯುತ್ತಿರುವ ಹೋರಾಟದ ವಿಷಯ ತಿಳಿಸಿದೆ. ಸೋವಿಯೆಟ್ ಯೂನಿಯನ್‌ನಲ್ಲಿ ಆಗಿರುವ ವಿಸ್ಮಯಕಾರಕ ಬದಲಾವಣೆಗಳೂ ಅಮೆರಿಕದ ಅಸಾಧ್ಯ ಪ್ರಗತಿಯ ವಿಷಯವನ್ನೂ ತಿಳಿಸಿದೆ. ಕೆಲಸವೇನೋ ಸುಲಭವಿರಲಿಲ್ಲ, ಆದರೂ ಎಷ್ಟು ಕಷ್ಟವೆಂದು ಭಾವಿಸಿದ್ದೆನೊ,ಅಷ್ಟು ಕಠಿಣವೂ ಕಾಣಲಿಲ್ಲ. ಅವರಿಗೆ ಚಿರಪರಿಚಯವಿದ್ದ ಪುರಾಣಗಳು,ಇತಿಹಾಸಗಳು, ಕತೆಗಳಿಂದ ಭಾರತ ಅವರಿಗೆ ಪರಿಚಯವಾಗಿತ್ತು. ಅವರಲ್ಲಿ ಕೆಲವರು ಭಾರತದ ನಾಲ್ಕು ದಿಕ್ಕು ಗಳಲ್ಲಿರುವ ಪುಣ್ಯಸ್ಥಳಗಳಿಗೆ ಯಾತ್ರೆ ಹೋಗಿ ದೇಶವನ್ನು ನೋಡಿದ್ದರು. ಇನ್ನು ಕೆಲವರು ಮೊದಲ ನೆಯ ಪ್ರಪಂಚ ಯುದ್ಧದಲ್ಲಿ ಮತ್ತು ಇತರ ದಂಡಯಾತ್ರೆಗಳಲ್ಲಿ ಭಾಗವಹಿಸಿದ್ದ ಸೈನಿಕರಿದ್ದರು. ೧೯೩೦ ರ ನಂತರ ಇಡೀ ಪ್ರಪಂಚವನ್ನೇ ಆವರಿಸಿದ ಆರ್ಥಿಕ ಮುಗ್ಗಟ್ಟಿನ ಅನುಭವದಿಂದ ವಿದೇಶ ಗಳ ವಿಷಯ ನಾನು ಮಾತನಾಡುತ್ತಿದ್ದರೂ ಅದು ಅವರಿಗೆ ಹೊಸದಾಗಿ ಕಾಣಲಿಲ್ಲ. ನಾನು ಸಭೆ

ಯನ್ನು ಪ್ರವೇಶಿಸುತ್ತಲೇ ‘ ಭಾರತಮಾತಾಕಿ ಜೈ ’ ಎಂಬ ಗಗನವನ್ನೇ ಭೇದಿಸುವ ಘೋಷವು ನನಗೆ ಸ್ವಾಗತವೀಯುತ್ತಿತ್ತು. ಈ ಘೋಷಣೆಯ ಅರ್ಥವೇನು ? ಈ ಭಾರತಮಾತೆ ಯಾರು ? ಜಯ ಯಾರಿಗೆ ? ಎಂದು ಅವರನ್ನು ಕೇಳುತ್ತಿದ್ದೆ. ನನ್ನ ಪ್ರಶ್ನೆಯಿಂದ ಅವರಿಗೆ ನಗುಬರುತ್ತಿತ್ತು, ಆಶ್ಚರ್ಯವಾಗುತ್ತಿತ್ತು ; ಏನು ಹೇಳಬೇಕೆಂದು ತಿಳಿಯದೆ ಒಬ್ಬರ ಮುಖವನ್ನು ಮತ್ತೊಬ್ಬರೂ, ನನ್ನ ಮುಖವನ್ನು ಎಲ್ಲರೂ ನೋಡುತ್ತಿದ್ದರು. ಈ ಪ್ರಶ್ನೆಯನ್ನು ಕೇಳುತ್ತಲೆ ಇದ್ದೆ. ಕೊನೆಯಲ್ಲಿ ತಲೆ ತಲಾಂತರದಿಂದ ಬೇಸಾಯವನ್ನೇ ನಂಬಿದ್ದ ಜಾಟ್‌ರೈತನೊಬ್ಬ ಎದ್ದು ಅದು ಭೂಮಿತಾಯಿ ಎಂದು ಹೇಳುವನು. ಯಾವ ಭೂಮಿ ? ಅವರ ಹಳ್ಳಿಯ ಸುತ್ತಲ ನೆಲವೇ ? ಅಥವ ಜಿಲ್ಲೆಯ ನೆಲವೆ ? ಪ್ರಾಂತ್ಯವೆ ? ಅಥವ ಭಾರತದ ಇಡೀ ದೇಶವೇ ? ಇದೇ ರೀತಿ ಪ್ರಶ್ನೆ—ಉತ್ತರ ನಡೆದು ಕೊನೆಗೆ ವಿಷಯವನ್ನೆಲ್ಲ ತಿಳಿಸುವಂತೆ ನನಗೇ ಹೇಳುತ್ತಿದ್ದರು. ನಾನು ಅವರಿಗೆ ವಿವರಿಸಲು ಪ್ರಯತ್ನಿಸುತ್ತ, ಇಂಡಿಯ ಅನ್ನುವ ಮಾತಿನಲ್ಲಿ ಅವರು ತಿಳಿದುಕೊಂಡಿದ್ದದ್ದೆಲ್ಲ ಅಡಕವಾಗಿರುವುದಷ್ಟೇ ಅಲ್ಲ— ಅದಕ್ಕೂ ಮಿಗಿಲಾದ ಭಾವನೆಯೂ ಗರ್ಭಿತವಾಗಿದೆ ಎಂದು ಹೇಳುತ್ತಿದ್ದೆ. ಭಾರತದ ಪರ್ವತ ಶ್ರೇಣಿಗಳು, ನದಿಗಳು, ಅರಣ್ಯಮಾಲೆಗಳು, ನಮಗೆ ಆಹಾರ ಒದಗಿಸುವ ವಿಶಾಲ ಹೊಲ ಗದ್ದೆಗಳ ಸಾಲುಗಳು, ಎಲ್ಲ ನಮ್ಮ ಅಚ್ಚುಮೆಚ್ಚಿನ ವಸ್ತುಗಳೇ ; ಆದರೆ ಹಿಮಾಲಯದಿಂದ ಕನ್ಯಾಕುಮಾರಿಯವರೆಗೆ ಹರಡಿರುವ ಈ ನಮ್ಮ ನಾಡಿನ ಜನ—ಅವರು ಮತ್ತು ನಾನು— ಎಲ್ಲಕ್ಕೂ ಮುಖ್ಯ ಎಂದು ತಿಳಿಸುತ್ತಿದ್ದೆ. ಭಾರತಮಾತೆ ಎಂದರೆ ಮುಖ್ಯವಾಗಿ ಈ ಜನಕೋಟಿ. ಭಾರತಮಾತೆಗೆ ಜಯವೆಂದರೆ ಅವರ ಜಯ. ನೀವು ಭಾರತಮಾತೆಯ ಒಂದು ಅಂಗ. ‘ ಭಾರತ ಮಾತೆ ’ ಎಂದರೆ ನೀವೆ ಎಂದು ಹೇಳಿದೆ. ಈ ಭಾವನೆ ನಿಧಾನವಾಗಿ ಅವರ ಮನಸ್ಸಿಗೆ ಇಳಿಯು ತ್ತಲೆ ಒಂದು ಹೊಸ ಶೋಧನೆಯನ್ನೇ ಮಾಡಿದವರಂತೆ ಅವರ ಕಣ್ಣುಗಳಲ್ಲಿ ಒಂದು ನವೀನ ಕಾಂತಿ ಹೊಳೆಯಿತು.

## ೬. ಭಾರತದ ವಿವಿಧತೆ ಮತ್ತು ಒಕ್ಕಟ್ಟು

ಭಾರತದ ವೈವಿಧ್ಯ ಅಪಾರವಾಗಿದೆ; ಅದು ಸ್ಪಷ್ಟವಾಗಿದೆ; ಮೇಲೆಯೇ ಕಾಣುತ್ತದೆ, ಯಾರಾದರೂ ತಿಳಿಯಬಹುದು. ಬಾಹ್ಯರೂಪು ರಚನೆಗಳಲ್ಲಿ, ಮನೋಭಾವನೆಯಲ್ಲಿ ಮತ್ತು ಸಂಪ್ರ ದಾಯಗಳಲ್ಲಿ ಇದು ಕಾಣಿಸುತ್ತದೆ. ಮೇಲೆ ನೋಡಿದರೆ ಗಡಿನಾಡಿನ ಪಠಾಣನಿಗೂ, ದಕ್ಷಿಣ ಭಾರತದ ತಮಿಳನಿಗೂ ಯಾವ ಸಾಮ್ಯವೂ ಇಲ್ಲ. ಅವರ ಬುಡಕಟ್ಟು ಬೇರೆ ಬೇರೆ ಆದಾಗ್ಯೂ ಇಬ್ಬರಲ್ಲೂ ಒಂದು ಬಗೆಯ ಸರ್ವಸಾಮಾನ್ಯ ತಂತುಗಳು ಇವೆ. ಮುಖ, ಆಕೃತಿ, ಅನ್ನ, ಬಟ್ಟೆ, ಭಾಷೆ ಇವುಗಳಲ್ಲೆಲ್ಲ ಭಿನ್ನವೆ. ವಾಯವ್ಯ ಪ್ರಾಂತ್ಯದಲ್ಲಿ ಮಧ್ಯ ಏಷ್ಯದ ವಾತಾವರಣ ಇದೆ. ಗಡಿನಾಡಿನ ಅನೇಕ ಪದ್ಧತಿಗಳು ಕಾಶ್ಮೀರದಂತೆ ಹಿಮಾಲಯದಾಚೆ ಇರುವ ದೇಶಗಳ ಪದ್ಧತಿಯನ್ನು ಹೋಲುತ್ತವೆ. ಪಠಾಣರ ಜನಪದ ಕುಣಿತಗಳು ರಷ್ಯದ ಕಾಸೆಕ್ ಕುಣಿತವನ್ನು ಹೋಲುತ್ತದೆ. ಇಷ್ಟೆಲ್ಲ ಭೇದವಿದ್ದರೂ ಪಠಾಣನನ್ನೇ ಆಗಲಿ, ತಮಿಳನನ್ನೇ ಆಗಲಿ ಕಂಡ ಒಡನೆ ಭಾರತೀಯ ಎಂದು ಹೇಳಬಹುದು. ಆ ಒಂದು ಭಾರತ ಮುದ್ರೆ ಅವರಿಬ್ಬರ ಮುಖದಲ್ಲೂ ಕಾಣುತ್ತದೆ. ಇದಕ್ಕೆ ಕಾರಣ, ಗಡಿನಾಡು ಮತ್ತು ಅಫ್ಘಾನಿಸ್ಥಾನ ಸಹ ಸಾವಿರಾರು ವರ್ಷಗಳ ವರೆಗೆ ಭಾರತದ ಭಾಗವಾಗಿದ್ದುವು. ಇಸ್ಲಾಂ ಪ್ರಾಬಲ್ಯಕ್ಕೆ ಮೊದಲು, ಅಫ್ಘಾನಿಸ್ಥಾನ ಮತ್ತು ಮಧ್ಯೆ ಏಷ್ಯದ ಭಾಗಗಳಲ್ಲಿ ವಾಸಮಾಡುತ್ತ ಇದ್ದ ಪುರಾತನ ತುರ್ಕಿ ಜನರು ಮತ್ತು ಇತರ ಜನಾಂಗಗಳು ಬೌದ್ಧರಾಗಿದ್ದರು. ಅದಕ್ಕೂ ಮುಂಚೆ ಪುರಾಣಗಳ ಕಾಲದಲ್ಲಿ ಹಿಂದೂಗಳಾಗಿದ್ದರು. ಈ ಗಡಿನಾಡು ಭಾರತೀಯ ಸಂಸ್ಕೃತಿಯ ಒಂದು ಪ್ರಧಾನಕೇಂದ್ರವಾಗಿತ್ತು ಈಗಲೂ ಅನೇಕ ಹಳೆಯ ಸ್ಮಾರಕಗಳ ಮತ್ತು ವಿಹಾರಗಳ ಮತ್ತು ಮುಖ್ಯವಾಗಿ, ಎರಡು ಸಾವಿರ ವರ್ಷಗಳ ಹಿಂದೆಯೆ ಕೀರ್ತಿಶಿಖರವನ್ನೇರಿ ಇಂಡಿಯ ಮತ್ತು ಏಷ್ಯದ ಅನೇಕ ಭಾಗಗಳಿಂದ ಶಿಷ್ಯರನ್ನು ಆಕರ್ಷಿಸುತ್ತ ಇದ್ದ ತಕ್ಷಶಿಲಾ ಮಹಾ ವಿಶ್ವವಿದ್ಯಾಲಯದ

ಪಾಳುಗಳಿಂದಲೂ ತುಂಬಿದೆ. ಪರಧರ್ಮಾವಲಂಬನೆ ಸ್ವಲ್ಪ ವ್ಯತ್ಯಾಸವನ್ನೇನೊ ಮಾಡಿತು. ಆದರೆ ಆ ಪ್ರದೇಶಗಳ ಜನರಲ್ಲಿ ಮೂಡಿದ್ದ ಮಾನಸಿಕ ಹಿನ್ನೆಲೆ ಪೂರ್ಣ ಬದಲಾವಣೆಯಾಗಲಿಲ್ಲ.

ಪಠಾಣರು ಮತ್ತು ತಮಿಳರು ಎರಡು ಕೊನೆ. ಈ ಮಧ್ಯೆ ಇತರರು ಎಷ್ಟೋ ಜನರಿದ್ದಾರೆ. ಅವರೆಲ್ಲರಿಗೂ ಭಿನ್ನ ಭಿನ್ನ ಪ್ರವೃತಿಗಳು. ಆದರೂ ಎಲ್ಲರಲ್ಲೂ ಎದ್ದುಕಾಣುವ ಭಾರತ ಮುದ್ರೆ ಇದೆ. ವಂಗೀಯರು, ಮರಾಠರು, ಗುಜರಾತಿಗಳು, ತಮಿಳರು, ಆಂಧ್ರರು, ಉರಿಯದವರು, ಆಸ್ಸಾಮಿನವರು, ಕನ್ನಡಿಗರು, ಮಲಯಾಳಿಗಳು, ಸಿಂಧೀ ಜನರು, ಪಂಜಾಬಿಗಳು, ಪಠಾಣರು, ಕಾಶ್ಮೀರಿಗಳು, ರಜಪೂತರು ಮತ್ತು ಮಧ್ಯರಾಷ್ಟ್ರದಲ್ಲಿನ ಹಿಂದೂಸ್ಥಾನಿ ಮಾತನಾಡುವ ಜನ, ಇವರೆಲ್ಲ ನೂರಾರು ವರ್ಷಗಳಿಂದ ತಮ್ಮ ವೈಯಕ್ತಿಕ ವೈಶಿಷ್ಟ್ಯಗಳನ್ನು ಹೇಗೆ ಉಳಿಸಿಕೊಂಡಿದ್ದಾರೆ; ಪುರಾತನ ಸಂಪ್ರದಾಯಗಳು ಮತ್ತು ಇತಿಹಾಸಗಳಲ್ಲಿ ಕಾಣುವ ಗುಣದೋಷಗಳು ಸ್ವಲ್ಪ ಹೆಚ್ಚು ಕಡಮೆ ಇವರಲ್ಲಿ ಇನ್ನೂ ಹೇಗೆ ಉಳಿದಿವೆ; ಆದರೂ ಒಂದೇ ರಾಷ್ಟ್ರೀಯತೆಯ ಅಸ್ತಿತ್ವ, ಒಂದೇ ನೀತಿ, ಒಂದೇ ಮನೋಭಾವನೆಗಳಿಂದ ಯುಗಾಂತರದಿಂದ ಭಾರತೀಯರಾಗಿ ಉಳಿದಿದ್ದಾರೆ ಎಂಬುದು ಅತ್ಯಾಶ್ಚರ್ಯ. ಈ ಆರ್ಜಿತಗುಣದಲ್ಲಿ ಯಾವುದೋ ಒಂದು ಚಲನಶಕ್ತಿ, ಜೀವಕಳೆ ಇತ್ತು. ಆ ಶಕ್ತಿ ಭಾರತದ ಜನ ಜೀವನದ ರೀತಿಗಳಲ್ಲಿ ಮತ್ತು ಜೀವನದರ್ಶನಗಳಲ್ಲಿ ವ್ಯಕ್ತವಾಯಿತು. ಪುರಾತನ ಇಂಡಿಯ ಪುರಾತನ ಚೀನದಂತೆ ಒಂದು ಪ್ರಪಂಚವೇ ಆಗಿತ್ತು. ಅದು ಎಲ್ಲ ವಸ್ತುಗಳಿಗೆ ಒಂದು ಮುದ್ರೆಯೊತ್ತಿದ ಒಂದು ಸಂಸ್ಕೃತಿ, ಒಂದು ನಾಗರಿಕತೆ. ಅನ್ಯದೇಶೀಯರ ಪ್ರಭಾವ ಬಿದ್ದು, ಆ ಸಂಸ್ಕೃತಿಯ ಮೇಲೆ ಸ್ವಲ್ಪ ಪ್ರತಿಭೆ ಬೀರಿದರೂ ಕೊನೆಯಲ್ಲಿ ಅನ್ಯತೆಯೂ ತಲ್ಲೀನವಾಗುತ್ತಿತ್ತು. ಛಿದ್ರಭಾವನೆ ಏನಾದರೂ ಕಂಡುಬಂದರೆ ಒಡನೆ ಒಟ್ಟುಗೂಡಿಸುವ ಪ್ರಯತ್ನ ನಡೆಯುತ್ತಿತ್ತು. ನಾಗರಿಕತೆಯ ಮುಂಬೆಳಗಿನಿಂದ ಒಂದು ಬಗೆಯ ಅದ್ವೈತಭಾವನೆಯ ಕನಸು ಭಾರತೀಯ ಮನಸ್ಸನ್ನು ಆವರಿಸಿದೆ. ಈ ಏಕತೆ ಹೊರಗಿನವರು ಹೇರಿದ್ದಲ್ಲ, ಬಾಹ್ಯಾವರಣಗಳ ಅಥವಾ ನಂಬಿಕೆಗಳ ಐಕ್ಯತೆಯಲ್ಲ. ಅದು ಅಂತರಾಳದಿಂದ ಬಂದದ್ದು. ಅದರ ನೆರಳಿನಲ್ಲಿ ಎಲ್ಲ ಮತಧರ್ಮಗಳಿಗೆ ಸ್ಥಾನ ಇತ್ತು. ಎಲ್ಲ ಭಿನ್ನಧರ್ಮಗಳಿಗೂ ಮನ್ನಣೆ ಅಲ್ಲದೆ ಪ್ರೋತ್ಸಾಹವು ದೊರೆಯಿತು.

ಒಂದು ರಾಷ್ಟ್ರೀಯ ಪಂಗಡದಲ್ಲಿ ಸಹ,ಅದು ಎಷ್ಟೇ ನಿಕಟವಾಗಿ ಕೂಡಿಕೊಂಡಿದ್ದರೂ ಸಣ್ಣಪುಟ್ಟ ವ್ಯತ್ಯಾಸಗಳು ಇದ್ದೇ ಇರುತ್ತವೆ. ಇನ್ನೊಂದು ರಾಷ್ಟ್ರದ ಪಂಗಡಗಳೊಡನೆ ಹೋಲಿಸಿ ನೋಡಿದಾಗ ಮಾತ್ರ ಆ ರಾಷ್ಟ್ರದ ಮೂಲ ಐಕ್ಯತೆ ಗೊತ್ತಾಗುತ್ತದೆ. ಗಡಿನಾಡಿನಲ್ಲಿ ಎರಡು ರಾಷ್ಟ್ರಗಳ ಮಧ್ಯೆ ಇರುವ ಭಿನ್ನತೆಗಳು ಕಾಣದಿರಬಹುದು ಅಥವ ಬೆರತು ಹೋಗಿರಬಹುದು ಮತ್ತು ಆಧುನಿಕ ಪ್ರಗತಿಯಿಂದ ಎಲ್ಲ ಕಡೆಯಲ್ಲೂ ಒಂದು ಬಗೆಯ ಸಮತೆಕಾಣಬಹುದು. ಪುರಾತನ ಕಾಲದಲ್ಲಿ ಮತ್ತು ಮಧ್ಯಯುಗದಲ್ಲಿ ಈಗಿನ ಜನಾಂಗ ಭಾವನೆ ಇರಲಿಲ್ಲ; ಊಳಿಗ ಮಾನ್ಯದ ಮತ್ತು ಧಾರ್ಮಿಕ, ಜಾತೀಯ, ಸಾಂಸ್ಕೃತಿಕ ಬಾಂಧವ್ಯಗಳಿಗೆ ಹೆಚ್ಚು ಪ್ರಾಮುಖ್ಯತೆ ಇತ್ತು. ಆದರೂ ಇತಿಹಾಸದ ಯಾವ ಕಾಲದಲ್ಲೇ ಆಗಲಿ, ಭಾರತೀಯನು ಇಂಡಿಯದಲ್ಲಿ ಎಲ್ಲಿದ್ದರೂ, ಹೆಚ್ಚು ಕಡಮೆ ಒಂದೇ ಮನೆಯವನಂತೆ ಭಾವಿಸುತ್ತಿದ್ದನು. ಬೇರೆ ಯಾವ ದೇಶದಲ್ಲಿದ್ದರೂ ತಾನೊಬ್ಬ ಪರಕೀಯ, ಹೊಸಬ ಎಂದು ಭಾವಿಸುತ್ತಿದ್ದ. ತನ್ನ ಧರ್ಮ ಅಥವ ಸಂಸ್ಕೃತಿಯನ್ನು ಅವಲಂಬಿಸಿದ ರಾಷ್ಟ್ರಗಳ ವಿಷಯದಲ್ಲಿ ಈ ಪರಕೀಯ ಭಾವನೆ ಅಷ್ಟು ಹೆಚ್ಚು ಇರಲಿಲ್ಲ. ಭಾರತೀಯರಲ್ಲದ ಅನ್ಯಧರ್ಮೀಯರು—ಕ್ರೈಸ್ತರು, ಜ್ಯೂಗಳು, ಪಾರ್ಸಿಗಳು, ಮುಸಲ್ಮಾನರು, ಇಂಡಿಯಾ ದೇಶಕ್ಕೆ ಬಂದು ನೆಲಸಿದ, ಕೆಲವು ತಲೆಮಾರುಗಳಲ್ಲಿ ಭಾರತೀಯರೇ ಆದರು. ಈ ಪರಧರ್ಮಗಳನ್ನವಲಂಬಿಸಿದ ಭಾರತೀಯರು ಮತಾಂತರ ಹೊಂದಿದರೂ ಭಾರತೀಯರಾಗಿಯೇ ಉಳಿದರು. ಇತರ ದೇಶಗಳಲ್ಲಿ, ಅವರ ಮತಧರ್ಮ ಒಂದೇ ಆಗಿದ್ದರೂ ಇವರೆಲ್ಲರನ್ನೂ ಇಂಡಿಯನರು, ಪರದೇಶೀಯರು ಎಂದು ಪರಿಗಣಿಸಲಾರಂಭಿಸಿದರು.

ಇದು ರಾಷ್ಟ್ರೀಯ ಭಾವನೆ ಮುಂದುವರಿದಿರುವ ಕಾಲ. ಇಂಡಿಯ ದೇಶದ ಜನರು ತಮ್ಮಲ್ಲಿ ಒಳ ಭಿನ್ನತೆಗಳೆಷ್ಟೇ ಇದ್ದರೂ ಪರರಾಷ್ಟ್ರಗಳಲ್ಲಿ ಅನೇಕ ಕಾರಣಗಳಿಂದ ತಮ್ಮದೇ ಒಂದು ಪಂಗಡ

ಕಟ್ಟಿಕೊಂಡು ಒಗ್ಗಟ್ಟಿನಿಂದ ರಾಷ್ಟ್ರೀಯ ಭಾವನೆಯಿಂದ ಕೆಲಸ ಮಾಡುತ್ತಿದ್ದಾರೆ. ಭಾರತೀಯ ಕ್ರೈಸ್ತ ಯಾವ ದೇಶಕ್ಕೆ ಹೋದರೂ ಭಾರತೀಯನೆ. ಭಾರತೀಯ ಮುಸಲ್ಮಾನ ತುರ್ಕಿ, ಅರೇಬಿಯ,ಇರಾನ್, ಅಥವ ಇಸ್ಲಾಂ ಧರ್ಮವೇ ಪ್ರಧಾನ ಧರ್ಮವಾಗಿರುವ ಯಾವ ದೇಶಕ್ಕೆ ಹೋದರೂ ಭಾರತೀಯನೆ.

ನಮ್ಮ ತಾಯಿನಾಡಿನ ಕಲ್ಪನೆ ನಮ್ಮಲ್ಲೇ ಒಬ್ಬೊಬ್ಬರಿಗೆ ಒಂದೊಂದು ವಿಧ. ಯಾರಿಬ್ಬರ ಭಾವನೆಯೂ ಒಂದೇ ಇರುವುದಿಲ್ಲ. ಭಾರತದ ಯೋಚನೆ ಬಂದಾಗ ಅನೇಕ ಚಿತ್ರಗಳು ನನ್ನ ಮುಂದೆ ನಿಲ್ಲುತ್ತವೆ: ಅಸಂಖ್ಯಾತ ಹಳ್ಳಿಗಳಿಂದ ತುಂಬಿದ ಮೈದಾನಗಳು; ನಾನು ನೋಡಿದ ಪಟ್ಟಣಗಳು ನಗರಗಳು; ಬಾಡಿ ಬೆಂಡಾಗಿ ಒಣಗಿದ ಭೂಮಿಗೆ ಅಮೃತಧಾರೆಯಾಗಿ ಬಂದು ಅಚಿರಕಾಲಮಾತ್ರದಲ್ಲಿ ದಿಗಂತದವರೆಗೂ ಹಸುರುಡುಗೆಯನ್ನುಡಿಸಿ ಆನಂದ ಸಾಗರದಲ್ಲಿ ಮುಳುಗಿಸುವ ಮಳೆಗಾಲದ ಮೋಹಿನೀ ವಿದ್ಯೆ, ಮಹಾನದಿಗಳು ಮತ್ತು ನಿರರ್ಗಳ ಜಲವಾಹಿನಿಗಳು; ಖೈಬರ್ ಕಣಿವೆ ಮತ್ತು ಅದರ ಸುತ್ತಲ ಉತ್ಸಾಹ ಶೂನ್ಯಪ್ರದೇಶ; ದಕ್ಷಿಣದಲ್ಲಿ ಕನ್ಯಾಕುಮಾರಿಯ ರೋಮಾಂಚಕಾರಕ ದೃಶ್ಯ; ಜನತೆಯ ವ್ಯಕ್ತಿಚಿತ್ರ, ಸಾಮೂಹಿಕ ಚಿತ್ರ, ಎಲ್ಲಕ್ಕೂ ಮಿಗಿಲಾಗಿ ಮಂಜುಮುಚ್ಚಿದ ಹಿಮಪರ್ವತ ಮತ್ತು ಜುಳುಜುಳು ಮರ್ಮರ ನಿನಾದದೊಡನೆ ಹರಿದೋಡುವ ನದಿಗಳ ಮತ್ತು ವಸಂತಕಾಲದ ಸೊಬಗಿನ ಕಾಶ್ಮೀರ ಕಣಿವೆ–ಇವು ಕಣ್ಣಿಗೆ ಕಟ್ಟಿನಿಲ್ಲುತ್ತವೆ. ನಮ್ಮ ಮನ ಬಂದಂತೆ ನಮ್ಮ ಚಿತ್ರ ಚಿತ್ರಿಸಿ, ಆ ಚಿತ್ರವನ್ನು ಕಾಪಾಡುತ್ತೇವೆ. ಉಷ್ಣವಲಯದ ಸೆಕೆಯ ಪ್ರದೇಶದ ಸರ್ವಸಾಮಾನ್ಯ ಚಿತ್ರಕ್ಕಿಂತ ಪರ್ವತ ಶ್ರೇಣಿಯ ಹಿನ್ನೆಲೆ ಇರುವ ಕಾಶ್ಮೀರದ ಈ ಚಿತ್ರ ನನಗೆ ಬಹು ಮೆಚ್ಚು. ಭಾರತವು ಉಷ್ಣವಲಯದಿಂದ ಸಮಶೀತೋಷ್ಣವಲಯದವರೆಗೆ, ಭೂಮಧ್ಯರೇಖೆಯಿಂದ ಏಷ್ಯದ ಶೀತಲ ಹೃದಯದವರೆಗೆ ಹಬ್ಬಿರುವುದರಿಂದ ಎರಡು ಚಿತ್ರಗಳೂ ಅದಕ್ಕೆ ಒಪ್ಪುತ್ತವೆ.

## ೭. ಭಾರತ ಪ್ರವಾಸ

೧೯೩೬ನೆಯ ಕೊನೆ ಮತ್ತು ೧೯೩೭ನೆಯ ಆದಿಭಾಗದಲ್ಲಿ ನನ್ನ ಪ್ರವಾಸದ ವೇಗವೂ ಕ್ರಮೇಣ ಹೆಚ್ಚಿತು, ಮತ್ತು ಒತ್ತಡವೂ ಹೆಚ್ಚಿತು. ಹಗಲು ರಾತ್ರಿ ಎನ್ನದೆ ಸದಾ ತಿರುಗುತ್ತ ಎಲ್ಲಿಯೂ ನಿಲ್ಲದೆ, ಎಲ್ಲಿಯೂ ವಿಶ್ರಾಂತಿ ಪಡೆಯದೆ ಬಿರುಗಾಳಿಯಂತೆ ದೇಶವನ್ನೆಲ್ಲ ಸುತ್ತಿದೆ. ಎಲ್ಲ ಕಡೆಯಿಂದಲೂ ನನಗೆ ಕರೆ. ಸಾರ್ವತ್ರಿಕ ಚುನಾವಣೆಗಳು ತೀರ ಸಮೀಪ ಇದ್ದಕಾರಣ ಕಾಲ ಅತ್ಯಲ್ಪವಿತ್ತು. ನನ್ನ ಪ್ರಚಾರದಿಂದ ಚುನಾವಣೆಯಲ್ಲಿ ಜಯವಾಗುವುದೆಂಬ ಭಾವನೆ ಇತ್ತು. ನನ್ನ ಪ್ರಯಾಣವೆಲ್ಲ ಮೋಟಾರಿನಲ್ಲಿ, ಸ್ವಲ್ಪ ಮಟ್ಟಿಗೆ ವಿಮಾನ ಮತ್ತು ರೈಲಿನಲ್ಲಿ. ಕೆಲವು ವೇಳೆ ಸ್ವಲ್ಪದೂರ ಆನೆ, ಒಂಟೆ, ಕುದುರೆ ಅಥವ ಹಡಗು, ಹುಟ್ಟುಹಾಕುವ ದೋಣಿ, ತೋಡುದೋಣಿ ಅಥವ ಬೈಸಿಕಲ್ ಉಪಯೋಗಿಸುತ್ತಿದ್ದೆ. ಕೆಲವುವೇಳೆ ನಡೆದು ಸಹ ಹೋಗುತ್ತಿದ್ದೆ. ದೊಡ್ಡ ರಸ್ತೆಗಳಿಲ್ಲದ ಒಳನಾಡಿನಲ್ಲಿ ಈ ಎಲ್ಲ ವಾಹನಗಳ ಅವಶ್ಯಕತೆಯೂ ಇತ್ತು. ನನ್ನ ಜೊತೆಯಲ್ಲಿ ಯಾವಾಗಲೂ ಎರಡೆರಡು ಮೈಕ್ರೋಫೋನ್, ಧ್ವನಿವಾಹಕ ಯಂತ್ರಗಳೂ ಇರುತ್ತಿದ್ದುವು. ಅವುಗಳ ಸಹಾಯವಿಲ್ಲದೆ ಅಷ್ಟು ದೊಡ್ಡ ಸಭೆಗಳಲ್ಲಿ ಮಾತನಾಡುವುದು ಸಾಧ್ಯವೇ ಆಗುತ್ತ ಇರಲಿಲ್ಲ; ಮತ್ತು ನನ್ನ ಗಂಟಲೂ ಉಳಿಯುತ್ತಿರಲಿಲ್ಲ. ಧ್ವನಿವಾಹಕ ಯಂತ್ರಗಳನ್ನು ಎಂದೂ ಕಂಡೂ ಕೇಳದ ಟಿಬೆಟ್‌ಗಡಿಯಿಂದ ಬೆಲೂಚಿಸ್ಥಾನದ ಗಡಿಯವರೆಗೆ ಎಲ್ಲ ಅಪರಿಚಿತ ಸ್ಥಳಗಳಿಗೂ ಅವುಗಳನ್ನು ನನ್ನೊಂದಿಗೆ ತೆಗೆದುಕೊಂಡುಹೋದೆ.

ನಸುಬೆಳಕಿನಿಂದ ಮಧ್ಯರಾತ್ರಿಯವರೆಗೂ ಊರಿಂದೂರಿಗೆ ಪ್ರಯಾಣಮಾಡುತ್ತಿದ್ದೆ. ಎಲ್ಲ ಕಡೆಯಲ್ಲೂ ಅಸಾಧ್ಯಜನ ಕಾದಿರುತ್ತಿದ್ದರು; ಮಧ್ಯೆ, ಕಾದು ಕಾದು ನಿಂತಿದ್ದ ಹಳ್ಳಿಯ ರೈತರು ಅನೇಕ ಕಡೆ, ತಡೆದು ನಿಲ್ಲಿಸಿ ಆದರಿಸುತ್ತಿದ್ದರು. ಈ ಸ್ವಾಗತ ಯಾರೂ ಏರ್ಪಡಿಸಿದ್ದಲ್ಲ; ಆದರೆ ನನ್ನ ಕಾರ್ಯಕ್ರಮವನ್ನೆಲ್ಲ ತಲೆಕೆಳಗೆಮಾಡಿ ಮುಂದಿನ ಕೆಲಸಕ್ಕೆ ವಿಘ್ನಮಾಡುತ್ತಿತ್ತು. ಆದರೂ ಈ ಹಸುಗೂಸಿನಂಥ ಜನರನ್ನು ಅಲಕ್ಷ್ಯಮಾಡಿ ಕಂಡೂ ಕಾಣದಂತೆ ಓಡಿಹೋಗುವುದು ಹೇಗೆತಾನೆ ಸಾಧ್ಯ. ಅಡ್ಡಿಯಮೇಲೆ ಅಡ್ಡಿ. ಈ ಮಹಾ ಸಭೆಗಳಲ್ಲಿ ಜನರ ಮಧ್ಯೆ ಹಾದು, ಸಭಾವೇದಿಕೆಯನ್ನು

ಮುಟ್ಟಿ ಪುನಃ ಹಿಂದಿರುಗಲು ಸ್ವಲ್ಪಕಾಲ ಹಿಡಿಯುತ್ತಿತ್ತು. ಪ್ರತಿ ನಿಮಿಷಗಳನ್ನೂ ಎಣಿಕೆಮಾಡ ಬೇಕಾಗಿತ್ತು. ನಿಮಿಷಕ್ಕೆ ನಿಮಿಷಗಳು ಸೇರಿ ಗಂಟೆಗಳಾಗಿಬಿಡುತ್ತಿದ್ದುವು. ಸಂಜೆಯ ಹೊತ್ತಿಗೆ ಎಷ್ಟೋ ಗಂಟೆಗಳು ಹಿಂದೆ ಬೀಳುತ್ತ ಇದ್ದೆ. ಆದರೂ ಜನ ಅರೆಬಟ್ಟೆಯಲ್ಲಿ ಚಳಿಗಾಲವಾದರೂ ನಡುಗುತ್ತ ಕುಳಿತಿರುತ್ತಿದ್ದರು. ಈ ರೀತಿ ನನ್ನ ಕಾರ್ಯಕ್ರಮವು ದಿನಕ್ಕೆ ಹದಿನೆಂಟು ಗಂಟೆಯಾಗುತ್ತ, ಮಧ್ಯರಾತ್ರಿಯವೇಳೆಗೊ, ಅಥವ ಇನ್ನೂ ತಡವಾಗಿಯೋ ದಿನದ ಕಾರ್ಯವನ್ನು ಮುಗಿಸುತ್ತಿದ್ದೆವು. ಒಂದು ಬಾರಿ, ಕರ್ನಾಟಕದಲ್ಲಿ, ಫೆಬ್ರವರಿ ಮಧ್ಯಭಾಗದಲ್ಲಿ, ಎಲ್ಲ ಪೂರ್ವೇತಿಹಾಸವನ್ನೂ ಮೇರೆ ಯನ್ನೂ ಮೀರಿದೆವು. ಆ ದಿನ, ಕಾರ್ಯಕ್ರಮವನ್ನು ನೋಡಿದರೆ ಗಾಬರಿಯಾಗುವಂತೆ ಇತ್ತು. ದಟ್ಟಕಾಡಿನ ಪರ್ವತಶ್ರೇಣಿಯ ಕಣಿವೆಗಳ ಮಧ್ಯೆ ಡೊಂಕುಡೊಂಕಾಗಿ ಹಾದು ಹೋಗುವ ಘಾಟಿ ರಸ್ತೆಗಳಲ್ಲಿ ನಿಧಾನವಾಗಿ ಸಾಗಬೇಕಾಗಿತ್ತು. ದೊಡ್ಡ ಸಭೆಗಳು ಆರು, ಸಣ್ಣ ಸಭೆಗಳು ಅನೇಕ ಇದ್ದುವು. ಬೆಳಗ್ಗೆ ಎಂಟು ಗಂಟೆಗೆ ಕಾರ್ಯಕ್ರಮವನ್ನು ಆರಂಭಿಸಿ (ಏಳು ಗಂಟೆ ಮುಂಚೆಯೇ ನಡೆಯಬೇಕಿದ್ದ ಕೊನೆಯ ಸಭೆಯನ್ನು) ಬೆಳಗಿನ ಜಾವ ನಾಲ್ಕು ಗಂಟೆಗೆ ಮುಗಿಸಿದೆವು; ಮತ್ತು ರಾತ್ರಿ ನಾವು ತಂಗಬೇಕಾಗಿದ್ದ ಸ್ಥಳಕ್ಕೆ ಹೋಗಲು ಇನ್ನೂ ಎಪ್ಪತ್ತು ಮೈಲಿ ಇತ್ತು. ಅದನ್ನು ಸೇರಿದಾಗ ಬೆಳಗ್ಗೆ ೭ ಗಂಟೆ. ಹಗಲು ರಾತ್ರಿ ಪ್ರಯಾಣಮಾಡುತ್ತ ಅನೇಕ ಸಭೆಗಳಲ್ಲಿ ಭಾಷಣಮಾಡಿ ೪೧೫ ಮೈಲಿ ಬಂದಿದ್ದೆವು. ಆ ದಿನ ೨೩ ಗಂಟೆಗಳು ಕೆಲಸಮಾಡಿ ಇನ್ನೊಂದು ಗಂಟೆ ಬಿಟ್ಟು ಮುಂದಿನ ದಿನದ ಕಾರ್ಯಕ್ರಮ ಆರಂಭಿಸಬೇಕಾಗಿತ್ತು.

ಯಾರೋ ಒಬ್ಬರು ಕಷ್ಟಪಟ್ಟು, ಆ ಕಾಲದಲ್ಲಿ ನಾನು ಮಾಡಿದ ಭಾಷಣಗಳನ್ನು ಸುಮಾರು ಒಂದು ಕೋಟಿ ಜನ ಕೇಳಿದರು ಎಂದು ಲೆಕ್ಕ ಹಾಕಿದ್ದರು; ಇನ್ನೂ ಎಷ್ಟೋ ದಶಲಕ್ಷ ಜನರು ನನ್ನ ಪ್ರವಾಸದಲ್ಲಿ ಹೇಗೋ ನನ್ನ ಪರಿಚಯ ಪಡೆದರು. ದೊಡ್ಡ ದೊಡ್ಡ ಸಭೆಗಳಲ್ಲಿ ಒಂದು ಲಕ್ಷಜನ ಇರುತ್ತಿದ್ದರು; ಇಪ್ಪತ್ತುಸಾವಿರ ಜನರ ಸಭೆ ಸರ್ವಸಾಮಾನ್ಯವಾಗಿತ್ತು. ಎಷ್ಟೋ ಊರುಗಳ ಮಧ್ಯೆ ಹಾಯ್ದು ಹೋಗುತ್ತಿದ್ದಾಗ ಊರುಬಿಟ್ಟಂತೆ ಅಂಗಡಿ ಬಾಗಿಲು ಹಾಕಿದ್ದು ಕಾಣುತ್ತಿತ್ತು. ಕಾರಣ ಕೇಳಿದರೆ, ಊರಿನ ಜನರೆಲ್ಲ, ಗಂಡಸರು, ಹೆಂಗಸರು, ಹುಡುಗರು ಎಲ್ಲರೂ ಊರಿನ ಆಚೆ ಸಭೆ ಸೇರುವ ಸ್ಥಳದಲ್ಲಿ ನಾನು ಬರುವುದನ್ನೆ ಕಾದಿದ್ದಾರೆ ಎಂದು ಹೇಳುತ್ತಿದ್ದರು.

ನಾನು ಕಾಹಿಲೆ ಬೀಳದೆ ಈ ಅಸಾಧ್ಯ ದೇಹಶ್ರಮವನ್ನು ಸಹಿಸಲು ಹೇಗೆ ಶಕ್ತನಾದೆ ಎಂದು ಊಹಿಸಲಾರೆ. ಕ್ರಮೇಣ ನನ್ನ ದೇಹ ಪ್ರಕೃತಿಯೇ ಈ ಬಗೆಯ ಅಲೆದಾಟದ ಜೀವನಕ್ಕೆ ಹೊಂದಿ ಕೊಂಡಂತೆ ಕಾಣುತ್ತದೆ. ಎರಡು ಸಭೆಗಳ ಮಧ್ಯೆ ಅರ್ಧಗಂಟೆ ಮೋಟಾರಿನಲ್ಲಿಯೇ ನಿದ್ರೆಮಾಡಿ ಬಿಡುತ್ತಿದ್ದೆ; ಏಳುವುದಕ್ಕೇ ಕಷ್ಟವಾಗುತ್ತಿತ್ತು. ಆದರೆ ಏಳಬೇಕಾಗಿತ್ತು. ಹರ್ಷೋದ್ಗಾರಮಾಡುವ ಜನರ ದೃಶ್ಯ ನನ್ನನ್ನು ನಿದ್ರೆಯಿಂದ ಎಚ್ಚರಿಸುತ್ತ ಇತ್ತು. ಆಹಾರವನ್ನು ಬಹಳ ಕಡಿಮೆಮಾಡಿದೆ. ರಾತ್ರಿಯಂತೂ ಊಟವನ್ನೇ ಬಿಟ್ಟುಬಿಡುತ್ತಿದ್ದೆ. ಆದರೆ ನನ್ನ ಈ ಅದ್ಭುತ ಶಕ್ತಿಗೆ ಜೀವನೋತ್ಸಾಹಕ್ಕೆ ಕಾರಣ ನಾನು ಎಲ್ಲಿಯೇ ಇರಲಿ ನನ್ನ ಸುತ್ತಲೂ ಹೊರಸೂಸುತ್ತಿದ್ದ ಪ್ರೇಮ ಮತ್ತು ಉತ್ಸಾಹ. ನನಗೆ ಇದು ಅಭ್ಯಾಸವಾಗಿತ್ತು, ಆದರೆ ಒಂದು ಪದ್ಧತಿಯಾಗಲಿಲ್ಲ, ಏಕೆಂದರೆ ನಿತ್ಯವೂ ಹೊಸ ಹೊಸ ಅನುಭವವಾಗುತ್ತಿತ್ತು.

## ೮. ಸಾರ್ವತ್ರಿಕ ಚುನಾವಣೆಗಳು

ಭಾರತದಲ್ಲಿ ಬರಲಿದ್ದ ಚುನಾವಣೆಗಾಗಿಯೇ ನನ್ನ ಪ್ರವಾಸ ಏರ್ಪಾಟಾಗಿತ್ತು. ಆದರೆ ಸಾಮಾನ್ಯವಾಗಿ ಚುನಾವಣೆಗಳಲ್ಲಿ ನಡೆಯುವ ಅನೀತಿ ಮತ್ತು ಕುಯುಕ್ತಿಗಳು ನನಗೆ ಸರಿಬೀಳಲಿಲ್ಲ. ಪ್ರಜಾಸತ್ತೆಯಲ್ಲಿ ಚುನಾವಣೆಗಳು ಇರಲೇಬೇಕು ಮತ್ತು ಅದು ಅನಿವಾರ್ಯ. ಆದರೆ ಅನೇಕವೇಳೆ ಚುನಾವಣೆಗಳಲ್ಲಿ ಮಾನವನ ಪಾಶವೀ ವೃತ್ತಿಯೇ ಎದ್ದು ಕಾಣುತ್ತಿತ್ತು ಮತ್ತು ಯೋಗ್ಯರಿಗೆ ಸೋಲಾಗುತ್ತಿತ್ತು. ಸೂಕ್ಷ್ಮಬುದ್ಧಿಯವರಿಗೆ, ಸಮಯ ಕಾದು ಒರಟು ದಬಾವಣೆಯಿಂದ ಮುನ್ನುಗ್ಗಲು

ಸಾಧ್ಯವಿಲ್ಲದವರಿಗೆ ಅವಕಾಶವೇ ಇರಲಿಲ್ಲ; ಸುಮ್ಮನೆ ಹಿಂದುಳಿಯುತ್ತಿದ್ದರು. ಹಾಗಾದರೆ ಪ್ರಜಾಸತ್ತೆ ಎಂದರೆ ಮುಂದಮತಿಗಳಿಗೆ ತಂಟೆಕೋರರಿಗೆ ವಿಚಾರಶೂನ್ಯರಿಗೆ ಮಾತ್ರ ಮೀಸಲೆ?

ಸಣ್ಣ ಚುನಾವಣಾ ಕ್ಷೇತ್ರಗಳಲ್ಲಂತೂ ಈ ತೊಂದರೆಗಳು ವಿಪರೀತ. ದೊಡ್ಡ ಕ್ಷೇತ್ರಗಳಲ್ಲಿ ಇವು ತಲೆ ಎತ್ತಲು ಅಷ್ಟು ಅವಕಾಶವಾಗುತ್ತ ಇರಲಿಲ್ಲ; ಒಂದು ವೇಳೆ ಇದ್ದರೂ ತೊಂದರೆಯಾಗುತ್ತಿರಲಿಲ್ಲ. ದೊಡ್ಡ ದೊಡ್ಡ ಚುನಾವಣಾ ಕ್ಷೇತ್ರಗಳು ಸಹ ಯಾವುದೋ ಅಲ್ಪವಿಷಯ ಅಥವ ಜಾತಿಯ ಪ್ರಶ್ನೆಗಳಮೇಲೆ ಅವಿವೇಕಕ್ಕೊಳಗಾಗಬಹುದಾಗಿತ್ತು. ಆದರೆ ಅಂತಹ ಅನಾಹುತ ತಪ್ಪಿಸಲು ಕೆಲವು ಸದವಕಾಶಗಳೂ ಇರುತ್ತಿದ್ದುವು. ಮತದಾನದ ಹಕ್ಕು ಎಷ್ಟು ವ್ಯಾಪಕವಾದರೆ ಅಷ್ಟು ಮೇಲು ಎಂಬ ನನ್ನ ನಂಬಿಕೆ ದೃಢಪಟ್ಟಿತು. ಆಸ್ತಿ ಅಥವ ವಿದ್ಯೆಯ ಅರ್ಹತೆಯ ಮೇಲಿನ ಸಣ್ಣ ಕ್ಷೇತ್ರಕ್ಕಿಂತ ವಿಶಾಲಕ್ಷೇತ್ರದಲ್ಲಿ ನಂಬಿಕೆ ಹೆಚ್ಚು. ಆಸ್ತಿಯ ಅರ್ಹತೆಯಂತೂ ಬಹಳ ಕೆಟ್ಟದ್ದು. ವಿದ್ಯೆಯ ಅರ್ಹತೆ ಬೇಕೇ ಬೇಕು, ಅವಶ್ಯವೂ ಹೌದು. ಆದರೆ ವಿದ್ಯೆ ಇಲ್ಲದಿದ್ದರೂ ಒಳ್ಳೆಯ ಅನುಭವಸ್ಥ ರೈತನ ಅಭಿಪ್ರಾಯ ಅಲ್ಪ ವಿದ್ಯೆಯ ಮನುಷ್ಯನ ಅಭಿಪ್ರಾಯಕ್ಕಿಂತ ಯಾವ ರೀತಿಯಲ್ಲೂ ಕೀಳಲ್ಲ. ಏನೇ ಆಗಲಿ ಮುಖ್ಯ ಸಮಸ್ಯೆ ರೈತನದಿರುವಾಗ ರೈತನ ಅಭಿಪ್ರಾಯವೇ ಮುಖ್ಯ. ಗಂಡಸರಾಗಲಿ, ಹೆಂಗಸರಾಗಲಿ ವಯಸ್ಕರಿಗೆಲ್ಲ ಮತದಾನದ ಹಕ್ಕು ಇರಲೇಬೇಕೆಂಬುದು ನನ್ನ ಖಚಿತ ಅಭಿಪ್ರಾಯ; ತೊಂದರೆಗಳೇನೋ ಇವೆ. ಆದರೆ ಇಂಡಿಯದಲ್ಲಿ ಆಚರಣೆಗೆ ತರಲು ಇರುವ ವಿರೋಧವೆಲ್ಲ ಆಸ್ತಿವಂತರ ಮತ್ತು ಬಂಡವಾಳಗಾರರ ಭೀತಿಯ ಭೂತಗಳು.

೧೯೩೭ರಲ್ಲಿ ನಡೆದ ಪ್ರಾಂತ್ಯ ಶಾಸನ ಸಭೆಗಳ ಸಾರ್ವತ್ರಿಕ ಚುನಾವಣೆಗಳಲ್ಲಿ ಬಹಳ ಸ್ವಲ್ಪ ಜನರಿಗೆ, ಶೇಕಡ ೧೨ರಷ್ಟು ಜನರಿಗೆ ಮಾತ್ರ, ಮತದಾನದ ಹಕ್ಕು ಇತ್ತು. ಆದರೆ ಹಿಂದೆ ಇದ್ದ ಸಂಖ್ಯೆಯೊಂದಿಗೆ ಹೋಲಿಸಿ ನೋಡಿದರೆ ಇದೇ ಒಂದು ದೊಡ್ಡ ಪ್ರಗತಿಯಾಗಿತ್ತು. ಸಂಸ್ಥಾನಗಳನ್ನು ಬಿಟ್ಟು ಭಾರತದಲ್ಲಿ ಆಗ ೩ ಕೋಟಿ ಜನ ಮತದಾರರಿದ್ದರು. ಸಂಸ್ಥಾನಗಳನ್ನು ಬಿಟ್ಟು ಭಾರತದಲ್ಲಿ ದೇಶಾದ್ಯಂತ ಈ ಚುನಾವಣೆಗಳು ನಡೆಯಬೇಕಾಗಿತ್ತು. ಪ್ರತಿಪ್ರಾಂತ್ಯದಲ್ಲೂ ಶಾಸನ ಸಭೆಗೆ ಚುನಾವಣೆಯಾಗಬೇಕಾಗಿತ್ತು. ಕೆಲವು ಪ್ರಾಂತಗಳಲ್ಲಿ ಎರಡು ಸಭೆಗಳು, ಎರಡು ತರಹೆ ಚುನಾವಣೆಗಳು, ಉಮೇದುವಾರರ ಸಂಖ್ಯೆ ಸಾವಿರಗಟ್ಟಲೆ.

ಚುನಾವಣೆಗಳ ವಿಷಯದಲ್ಲಿ ನನ್ನ ದೃಷ್ಟಿಯೂ ಮತ್ತು ಇನ್ನೂ ಕೆಲವು ಕಾಂಗ್ರೆಸಿನವರ ದೃಷ್ಟಿಯೂ ಸಾಮಾನ್ಯ ದೃಷ್ಟಿಗಿಂತ ಭಿನ್ನವಿತ್ತು. ವ್ಯಕ್ತಿಗಳ ಕಡೆ ನಾನು ಗಮನ ಕೊಡಲಿಲ್ಲ. ಕಾಂಗ್ರೆಸ್ ಪ್ರತಿಬಿಂಬಿಸುವ ರಾಷ್ಟ್ರೀಯ ಚಳವಳಿ ಮತ್ತು ಚುನಾವಣಾ ಘೋಷಣೆಯಲ್ಲಿ ಅಡಕವಾದ ಕಾರ್ಯಕ್ರಮದ ಪರ ದೇಶಾದ್ಯಂತ ಒಂದು ಒಳ್ಳೆಯ ವಾತಾವರಣವನ್ನುಂಟುಮಾಡಬೇಕೆಂದು ಯೋಚಿಸಿದೆ. ಇದರಲ್ಲಿ ನಮಗೆ ಯಶಸ್ಸು ದೊರೆತರೆ ಎಲ್ಲ ಸರಿಹೋಗುವುದು; ಇಲ್ಲವಾದರೆ ಒಂದೆರಡು ಸ್ಥಳಗಳಲ್ಲಿ ಸೋಲಾದರೂ ನಷ್ಟವಿಲ್ಲ ಎಂದೆ.

ತಾತ್ವಿಕ ದೃಷ್ಟಿಯಿಂದ ಮತದಾರರಲ್ಲಿ ಪ್ರಾರ್ಥನೆ ಮಾಡುತ್ತಿದ್ದೆ. ನಮ್ಮ ಧ್ಯೇಯಸಾಧನೆಯ ಮುಂದಾಳುಗಳೆಂದು ಸೂಚಿಸುತ್ತಿದ್ದುದರ ಹೊರತು ಬೇರೆ ವಿಧದಲ್ಲಿ ಉಮೇದುವಾರರ ಮಾತನ್ನೇ ಎತ್ತುತ್ತಿರಲಿಲ್ಲ. ಅನೇಕರು ನನಗೆ ಗೊತ್ತಿದ್ದರು; ಉಳಿದವರ ಪರಿಚಯವೇ ಇರಲಿಲ್ಲ, ನೂರಾರು ಹೆಸರುಗಳನ್ನು ಜ್ಞಾಪಕದಲ್ಲಿಡುವುದು ಅನಾವಶ್ಯಕವಾಗಿ ಕಂಡಿತು. ಕಾಂಗ್ರೆಸ್‌ಗಾಗಿ ದೇಶದ ಸ್ವಾತಂತ್ರ್ಯಕ್ಕಾಗಿ ಸ್ವಾತಂತ್ರ್ಯದ ಹೋರಾಟಕ್ಕಾಗಿ ನಾನು ವೋಟುಬೇಡಿದೆ. ಸ್ವಾತಂತ್ರ್ಯ ಸಿಗುವವರೆಗೆ ನಿರಂತರ ಹೋರಾಟವೆಂದು ವಿನಾ ಯಾವ ಭರವಸೆಯನ್ನೂ ಕೊಡಲಿಲ್ಲ. ನಮ್ಮ ಧ್ಯೇಯ ನಮ್ಮ ಕಾರ್ಯಕ್ರಮಗಳನ್ನು ಒಪ್ಪಿದರೆ, ಅರ್ಥಮಾಡಿಕೊಂಡಿದ್ದರೆ ಮತ್ತು ಅವಕ್ಕನುಗುಣವಾಗಿ ನಡೆಯಲು ಸಿದ್ಧವಿದ್ದರೆ ಮಾತ್ರ ನಮಗೆ ಮತ ಕೊಡಿ ಇಲ್ಲವಾದರೆ ಬೇಡ ಎಂದು ಹೇಳಿದೆ. ನಮ್ಮ ಧ್ಯೇಯ ಮತ್ತು ಕಾರ್ಯಕ್ರಮದಲ್ಲಿ ನಂಬಿಕೆ ಇಲ್ಲದಿದ್ದರೆ ಕಾಂಗ್ರೆಸ್‌ಪರ ವೋಟುಮಾಡಬೇಡಿ ಎಂತಲೂ ಹೇಳಿದೆ. ನಮಗೆ ಯಾವ ಕೃತಕ ಮತದಾನವೂ ಬೇಕಿರಲಿಲ್ಲ; ಅವರ ವಿಶ್ವಾಸಕ್ಕೆ

ಅರ್ಹರೆಂದು ಯಾರಿಗೂ ವೋಟು ಬೇಡಲಿಲ್ಲ. ವೋಟುಗಳೂ ಚುನಾವಣೆಗಳೂ ನಮ್ಮನ್ನು ಬಹು ದೂರ ಕರೆದೊಯ್ಯಲಾರವು. ಅವು ನಮ್ಮ ಮಹಾ ಯಾತ್ರೆಯಲ್ಲಿ ಒಂದು ಸಣ್ಣ ಹೆಜ್ಜೆ ಮಾತ್ರ. ಆ ಓಟಿನ ಅರ್ಥ ತಿಳಿದಿದ್ದೇವೆ ಮುಂದಿನ ಕಾರ್ಯಕ್ಕೆ ಸಿದ್ಧರಾಗಿದ್ದೇವೆ ಎಂಬ ಭರವಸೆಯ ಸೂಚನೆ ಇಲ್ಲದೆ ಸುಮ್ಮನೆ ಓಟು ತುಂಬಿ ನಮಗೆ ಮೋಸಗೊಳಿಸಿದರೆ ನಮ್ಮ ದೇಶಕ್ಕೆ ದ್ರೋಹಮಾಡಿದಂತೆ. ಗುಣಾಢ್ಯರೂ ಸತ್ಯ ನಿಷ್ಠರೂ ಆದ ವ್ಯಕ್ತಿಗಳು ನಮಗೆ ನಮ್ಮ ಪ್ರತಿನಿಧಿಗಳಾಗಿರಬೇಕಿದ್ದರೂ ಕೇವಲ ವ್ಯಕ್ತಿಗಳು ನಮಗೆ ಮುಖ್ಯವಲ್ಲ; ನಾವು ಕೈಗೊಂಡ ಕಾರ್ಯ, ನಂಬಿದ ಸಂಸ್ಥೆ ಮತ್ತು ಯಾರ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿದ್ದೇವೆಯೋ ಆ ಜನಾಂಗ ಮುಖ್ಯ. ಈ ಸ್ವಾತಂತ್ರ್ಯ ಎಂದರೇನು, ನಮ್ಮ ಜನಕೋಟಿಗೆ ಏಕೆ ಬೇಕು ಎಂದು ವಿವರಿಸಿದೆ. ಬಿಳಿಯ ಬಣ್ಣದ ಯಜಮಾನರ ಬದಲು ಕಂದು ಬಣ್ಣದವರು ಬೇಕಿಲ್ಲ. ಜನತೆಗಾಗಿ ಜನತೆಯಿಂದ ಆರಿಸಿದ ಜನತಾ ಸರಕಾರ ಬೇಕು. ಬಡತನ, ದುಃಖ ನಾಶವಾಗಬೇಕು ಎಂದು ಹೇಳಿದೆ.

ಇದೇ ನನ್ನ ಎಲ್ಲ ಭಾಷಣಗಳ ತಿರುಳು. ಈ ಒಂದು ವ್ಯಕ್ತಿ ನಿರ್ದೇಶರಹಿತ ಭಾವನೆಯಿಂದ ಮಾತ್ರ ಚುನಾವಣಾ ಪ್ರಚಾರ ನಡೆಸಲು ನನಗೆ ಸಾಧ್ಯವಿತ್ತು. ಯಾವ ಉಮೇದುವಾರರ ಭವಿಷ್ಯ ಹೇಗಿತ್ತೋ ಅದು ನನಗೆ ಪ್ರಾಮುಖ್ಯವೆಣಿಸಲಿಲ್ಲ. ನನ್ನ ಗುರಿ ಎಲ್ಲ ನಮ್ಮ ಧ್ಯೇಯದಕಡೆಗೆ. ಉಮೇದುವಾರರ ಜಯಾಪಜಯದ ಸಂಕುಚಿತ ಮನೋಭಾವನೆಯಿಂದ ನೋಡಿದರೂ ಅದೇ ಪ್ರಚಾರ ಮಾರ್ಗ ಉತ್ತಮವೆನಿಸಿತು. ಈ ರೀತಿ ಆ ಉಮೇದುವಾರನೂ ಅವನ ಚುನಾವಣಾ ಪ್ರಚಾರವೂ ಒಂದು ಉನ್ನತ ಮಟ್ಟಕ್ಕೆ, ಮೂಲತತ್ವಕ್ಕೆ,–ದಾಸ್ಯವಿಮೋಚನೆಗಾಗಿ ನಡೆಯುತ್ತಿರುವ ರಾಷ್ಟ್ರದ ಮಹಾ ಹೋರಾಟದ ಮಟ್ಟಕ್ಕೆ, ಬಡತನದ ಬೇಗೆಯಲ್ಲಿ ಬೆಂದು ಬಾಡಿದ ಕೋಟ್ಯನುಕೋಟಿ ಬಡವರ ತಲೆ ತಲಾಂತರದ ಶಾಪವಿಮೋಚನೆಯ ಮಟ್ಟಕ್ಕೆ–ಏರಿತು. ಸಮುದ್ರದ ಮೇಲಿನಿಂದ ಬೀಸಿದ ಪ್ರಚಂಡ ಮಾರುತನಂತೆ ನೂರಾರು ಪ್ರಮುಖ ಕಾಂಗ್ರೆಸ್ ಮಹಾನಾಯಕರ ಈ ಸಂದೇಶವು ನಾನಾ ಮೂಲೆ ಮೂಲೆಗಳನ್ನು ಹೊಕ್ಕು ನವ ಚೈತನ್ಯವನ್ನು ತುಂಬಿ, ಕ್ಷುದ್ರಭಾವನೆಗಳನ್ನೂ, ಚುನಾವಣಾ ಕುತಂತ್ರಗಳನ್ನೂ ನಿರ್ಣಯಮಾಡಿತು. ನನ್ನ ಜನತಾ ಹೃದಯದ ಅರಿವು ನನಗಾಯಿತು; ಅವರ ಮೇಲೆ ಪ್ರೇಮ ಮೂಡಿತು; ಆ ಲಕ್ಷೋಪಲಕ್ಷ ಕಣ್ಣುಗಳು ಜನಮನವನ್ನು ನನಗೆ ತಿಳಿಸಿದವು.

ನಿತ್ಯವೂ ಚುನಾವಣೆಯ ವಿಚಾರವನ್ನೆ ಮಾತನಾಡುತ್ತಿದ್ದೆ; ಆದರೂ ಚುನಾವಣೆಗಳು ಮಾತ್ರ ನನ್ನ ಮನಸ್ಸನ್ನು ಆಕ್ರಮಿಸಲಿಲ್ಲ; ಅವು ಮೇಲೆ ಮೇಲೆ ತೇಲುತ್ತಿದ್ದ ನೊರೆ ಮಾತ್ರ. ನನಗೆ ಬೇಕಾಗಿದ್ದುದು ಮತದಾರರು ಮಾತ್ರವಲ್ಲ, ಭಾರತದ ಜನಕೋಟಿ; ಅವರು ಮತದಾರರಿರಲಿ, ಇಲ್ಲದಿರಲಿ, ಪ್ರತಿಯೊಬ್ಬ ಭಾರತೀಯ ಗಂಡಸಿಗೆ, ಹೆಂಗಸಿಗು, ಮಗುವಿಗೆ ನನ್ನ ಸಂದೇಶವನ್ನು ಸಾರುತ್ತಿದ್ದೆ. ಭಾರತ ಜನಕೋಟಿಯೊಂದಿನ ಈ ಭೌತಿಕ ಮತ್ತು ಭಾವಪೂರ್ಣ ಬಾಂಧವ್ಯವೂ ಆ ಸಾಹಸದ ಉದ್ವೇಗವೂ ಪೂರ್ತಿ ನನ್ನನ್ನು ಆವರಿಸಿತ್ತು. ಹತ್ತರಕೂಡ ಹನ್ನೊಂದು ಎಂಬ ಭಾವನೆಯಲ್ಲಿ ಜನ ಹೊರಳಿದತ್ತ ಹೊರಳುವ ಭಾವನೆಯಲ್ಲ. ನನ್ನ ಕಣ್ಣುಗಳು ಆ ಲಕ್ಷೋಪಲಕ್ಷ ಕಣ್ಣುಗಳನ್ನು ಸೆಳೆದಿದ್ದವು; ಒಬ್ಬರನ್ನೊಬ್ಬರು ನೋಡಿದೆವು; ಪ್ರಥಮ ಭೇಟಿಯಾಗುವ ಅಪರಿಚಿತರಂತೆ ಅಲ್ಲ ಆದರೆ ಬಹುಕಾಲದ ಪರಿಚಯವಿದ್ದವರಂತೆ. ಆ ಪರಿಚಯ ಯಾವುದು ಎಂದು ಹೇಳುವುದು ಮಾತ್ರ ಕಷ್ಟ. ಕೈ ಮುಗಿದು ನಮಸ್ಕಾರ ಮಾಡಲು ನಾನು ಕೈಗಳನ್ನು ಜೋಡಿಸಿದಾಗ ಎದುರಿಗೆ ಮುಗಿದ ಕೈಗಳ ಅರಣ್ಯವೇ ಬಂದು ಕಾಣಿಸುತ್ತ ಜನರ ಮುಖದಲ್ಲಿ ಸ್ನೇಹಪೂರ್ಣ ಮುಗುಳ್ನಗೆ. ತೋರಿ, ಮಹಾಸಮುದ್ರದಂತೆ ನೆರೆದಿದ್ದ ಆ ಜನಸಮುದಾಯದಿಂದ, ಸ್ವಾಗತದ ಒಂದು ಕಲಕಲ ಧ್ವನಿ ಎದ್ದು ಅದರ ಆಲಿಂಗನದ ಸುಖದಲ್ಲಿ ಲೀನನಾಗುತ್ತಿದ್ದೆ. ಮಾತನಾಡಿ ನನ್ನ ಸಂತೋಷ ಸಾರುತ್ತಿದ್ದೆ; ಆದರೆ ಅವರಿಗೆ ಎಷ್ಟು ಅರ್ಥವಾಗುತ್ತಿತ್ತೊ ನನಗೆ ತಿಳಿಯದು. ಆದರೆ ಅವರ ಕಣ್ಣುಗಳಲ್ಲಿ ಮಾತ್ರ ಒಂದು ಆಳವಾದ ದವರ್ಣನೀಯ ವರ್ಚಸ್ಸು ಪ್ರಜ್ವಲಿಸುತ್ತಿತ್ತು.

## ೯. ಜನತೆಯ ಸಂಸ್ಕೃತಿ.

ಈ ರೀತಿ ಭಾರತ ಜನಕೋಟಿಯ ಇಂದಿನ ಜೀವನ ನಾಟಕವನ್ನು ನೋಡಿದೆ. ಅವರ ದೃಷ್ಟಿ ಭವಿತವ್ಯದ ಕಡೆ ಇದ್ದರೂ ಗತಕಾಲಕ್ಕೂ ಅವರ ಜೀವನಕ್ಕೂ ಇರುವ ಬಾಂಧವ್ಯದ ಎಳೆಗಳನ್ನು ಕಾಣಲಾರದಿರಲಿಲ್ಲ. ಎಲ್ಲೆಲ್ಲೂ ಅವರ ಜೀವನದ ಮೇಲೆ ಮಹಾಪರಿಣಾಮಕಾರಿಯಾದ ಒಂದು ಸಾಂಸ್ಕೃತಿಕ ಹಿನ್ನೆಲೆಯನ್ನು ಕಂಡೆ. ಜನತೆಯ ದರ್ಶನ, ಸಂಪ್ರದಾಯ, ಇತಿಹಾಸ, ಪುರಾಣ, ಕತೆ ಇವೆಲ್ಲವುಗಳ ಸಮರಸ ಮಿಶ್ರಣವೇ ಈ ಹಿನ್ನೆಲೆ. ಅವುಗಳನ್ನು ಪ್ರತ್ಯೇಕಿಸುವ ಎಲ್ಲೆಯ ಗೆರೆಯನ್ನು ಎಳೆಯಲು ಸಾಧ್ಯವಿರಲಿಲ್ಲ. ಅನಕ್ಷರಸ್ಥರಾದ ನಿರಕ್ಷರ ಕುಕ್ಷಿಗಳಲ್ಲಿ ಸಹ ಈ ಹಿನ್ನೆಲೆಯನ್ನು ಕಾಣಬಹುದಿತ್ತು. ನಮ್ಮ ಮಹಾಪುರಾಣಗಳಾದ ರಾಮಾಯಣ ಮತ್ತು ಮಹಾಭಾರತ ಮತ್ತು ಇತರ ಪುರಾಣಗಳು, ಅವುಗಳ ಲೋಕಪ್ರಿಯ ಭಾಷಾಂತರಗಳು ಸಂಗ್ರಹಗಳು ಜನಜನಿತವಾಗಿದ್ದವು. ಅವುಗಳ ಪ್ರತಿಯೊಂದು ಕತೆ, ಘಟನೆ, ನೀತಿ ಜನಮನದಲ್ಲಿ ನಾಟಿ ಅದಕ್ಕೊಂದು ಪುಷ್ಟಿಯನ್ನು ಘನತೆಯನ್ನು ಕೊಟ್ಟಿದ್ದವು. ಅಕ್ಷರಜ್ಞಾನವಿಲ್ಲದ ಹಳ್ಳಿಯ ಜನರನೇಕರು ನೂರಾರು ಶ್ಲೋಕಗಳನ್ನು ಬಾಯಿಪಾಠ ಹೇಳುತ್ತಿದ್ದರು. ಅವರ ಸಂಭಾಷಣೆಯಲ್ಲಿ ಆ ಪುರಾಣಗಳಿಂದ ಯಾವುದೋ ಕತೆಯನ್ನೊ, ನೀತಿಯನ್ನೊ ವಿಪುಲವಾಗಿ ತೆಗೆದು ತೋರಿಸುತ್ತಿದ್ದರು. ಹಳ್ಳಿಗರು ನಾಲ್ಕು ಜನ ಸೇರಿದ ಕಡೆ ಇಂದಿನ ಒಂದು ಸಾಮಾನ್ಯ ವಿಷಯಕ್ಕೆ ಸಹ ಅಂತಹ ಒಂದು ಸಾಹಿತ್ಯಸ್ವರೂಪಕೊಡುತ್ತಿದ್ದುದು ಆಶ್ಚರ್ಯವಾಗುತ್ತಿತ್ತು. ಲಿಖಿತ ಇತಿಹಾಸದ ನಿಶ್ಚಿತ ಘಟನೆಗಳ ಫಲವಾಗಿ ನನ್ನ ಮನಸ್ಸಿನಲ್ಲಿ ಚಿತ್ರಗಳು ಮೂಡಿದ್ದರೆ ಬರಹಗಾರನಲ್ಲದ ಹಳ್ಳಿಯ ರೈತನ ಮನಸ್ಸಿನಲ್ಲಿ ಸಹ ಇತಿಹಾಸದಿಂದ ಅಲ್ಲದಿದ್ದರೂ, ಪುರಾಣ, ಸಂಪ್ರದಾಯ, ಪೌರಾಣಿಕ ನಾಯಕನಾಯಕಿಯರುಗಳ ಪರಿಚಯದಿಂದ ನಿರ್ಮಿತವಾದ ಒಂದು ಚಿತ್ರಶಾಲೆ ಇದೆ ಎಂಬ ಅರಿವು ನನಗೆ ಬಂದಿತು; ಮತ್ತು ಅದು ತಕ್ಕಷ್ಟು ಸ್ಪಷ್ಟವೂ ಇತ್ತು.

ಅವರ ಮುಖಗಳನ್ನು ಅವರ ಶರೀರಗಳನ್ನು ನಡಗೆಯನ್ನು ಗಮನಿಸಿದೆ. ಅನೇಕ ಮುಖಗಳಲ್ಲಿ ತೀಕ್ಷ್ಣಬುದ್ಧಿಯನ್ನು ಕಾಣಬಹುದಿತ್ತು. ಅನೇಕರು ಆಜಾನುಬಾಹುಗಳಾಗಿ, ಎತ್ತರವಾಗಿ, ದೃಢಕಾಯರಾಗಿದ್ದರು. ಸ್ತ್ರೀಯರಲ್ಲಿ ವಿಲಾಸ ವಿನಯ, ಗಾಂಭೀರ್ಯ ಸ್ಥೈರ್ಯ ಮತ್ತು ಅನೇಕ ವೇಳೆ ಒಂದು ಸಂಕಟದ ದೃಷ್ಟಿಯೂ ಕಾಣುತ್ತಿತ್ತು. ಸೌಂದರ್ಯವೆಲ್ಲ ಸಾಮಾನ್ಯವಾಗಿ ಸ್ವಲ್ಪ ಆರ್ಥಿಕ ಸ್ಥಿತಿ ಉತ್ತಮವಿರುವ ಮೇಲ್ತರಗತಿಯ ಜನರಲ್ಲಿ. ಒಂದೊಂದು ವೇಳೆ ಹಳ್ಳಿಯ ರಸ್ತೆಯಲ್ಲಿ ಅಥವ ಹಳ್ಳಿಯ ಮಧ್ಯೆ ಹಾಯ್ದು ಹೋಗುವಾಗ ಒಬ್ಬ ಸುಂದರ ಪುರುಷನನ್ನೋ, ಸ್ತ್ರೀಯನ್ನೋ ನೋಡಿ ಯಾವುದೋ ಪ್ರಾಚೀನ ಮಂಡೋದಕ ಚಿತ್ರವನ್ನು ಕಂಡಂತೆ ಚಕಿತನಾಗುತ್ತಿದ್ದೆ. ಭಾರತವು ಶತಮಾನಗಳಿಂದ ಅನುಭವಿಸಿದ ಸಂಕಟ ಮತ್ತು ಗಂಡಾಂತರಗಳ ಮಧ್ಯೆ ಈ ಚಿತ್ರ ಇನ್ನೂ ಅಚ್ಚಳಿಯದೆ ಹೇಗೆ ಉಳಿಯಿತು ಮತ್ತು ಸಾಗಿ ಬಂತು ಎಂಬುದೇ ಆಶ್ಚರ್ಯ. ಸನ್ನಿವೇಶ ಉತ್ತಮಗೊಂಡರೆ, ಉತ್ತಮ ಅವಕಾಶ ದೊರೆತರೆ ಈ ಜನದಿಂದ ಏನುತಾನೆ ಸಾಧಿಸಲು ಅಸಾಧ್ಯ.

ಎಲ್ಲಿ ನೋಡಿದರೂ ಬಡತನ ಮತ್ತು ಅದರ ಅನಂತ ಪರಿಣಾಮಪರಂಪರೆ ; ಎಲ್ಲರ ಮುಖದ ಮೇಲೂ ಅದರ ಪೈಶಾಚಿಕ ಮುದ್ರೆ. ಬಡತನ ಜೀವನವನ್ನೇ ಹಿಸುಕಿ ವಿಕಾರಗೊಳಿಸಿ ದುಷ್ಕೃತಿಗೆ ತಳ್ಳಿತ್ತು. ಈ ವಿಕಾರ, ನಿರಂತರ ಅಭಾವ ಮತ್ತು ಅಭದ್ರತೆಯಿಂದ ಅನೇಕ ದುರ್ಗುಣಗಳಿಗೆ ಎಡೆ ಸಿಕ್ಕಿತು. ಇದನ್ನೆಲ್ಲ ನೋಡುವುದಕ್ಕೆ ಬಹಳ ಸಂಕಟವಾಗುತ್ತಿತ್ತು ; ಆದರೂ ಇವೇ ಭಾರತದ ನಿಜಸ್ಥಿತಿಗೆ ಮೂಲಕಾರಣ. ಆಗುವುದು ಆಗುತ್ತೆ ಹೋಗುವುದು ಹೋಗುತ್ತೆ ಎಂಬ ಮನೋಭಾವ ಬಹಳ ಬೆಳೆದಿತ್ತು. ಆದರೂ ಸಹಸ್ರಾರು ವರ್ಷಗಳ ಸಂಸ್ಕೃತಿಯ ಫಲವಾಗಿ ಯಾವ ಸಂಕಟವೂ ಅಳಿಸಲಾರದ ಒಂದು ನಮ್ರತೆ ಒಂದು ಸಭ್ಯತೆ ಅವರಲ್ಲಿ ಇತ್ತು.

## ೧೦. ಎರಡು ಜೀವನ

ಈ ರೀತಿ ಮತ್ತು ಇನ್ನೂ ಅನೇಕ ರೀತಿಯಿಂದ ಇಂದಿನ ಮತ್ತು ಹಿಂದಿನ ಭಾರತದ ದರ್ಶನ

ಪಡೆಯಲು ಯತ್ನಿಸಿದೆ. ಹೀಗೆ ಮೂಡಿದ ಚಿತ್ರಗಳನ್ನೂ ಮತ್ತು ಎಂದೋ ಕಣ್ಮರೆಯಾದ ವ್ಯಕ್ತಿಗಳ ಮತ್ತು ಇಂದಿನ ಜೀವಂತ ವ್ಯಕ್ತಿಗಳ ಪರಿಚಯದಿಂದ ಅಲೆ ಅಲೆಯಾಗಿ ಎದ್ದ ಆಲೋಚನೆಗಳನ್ನೂ ಭಾವನೆಗಳನ್ನೂ ನನ್ನ ಮನಸ್ಸಿನಲ್ಲಿ ಶೇಖರಿಸಿದೆ. ಈ ಮಹಾ ಮೆರವಣಿಗೆಯಲ್ಲಿ ನಾನೂ ಸೇರ ಬಯಸಿ ಅದರ ತುತ್ತ ತುದಿಯಲ್ಲಿ ತೆರಳಲು ಪ್ರಯತ್ನಪಟ್ಟೆ. ಸ್ವಲ್ಪ ದೂರನಿಂತು, ಗುಡ್ಡದ ನೆತ್ತಿಯನ್ನೇರಿ ಕೆಳಗಿನ ಕಣಿವೆಯನ್ನು ನೋಡುತ್ತ ಇದ್ದೆ.

ಈ ಮಹಾಯಾತ್ರೆ ಯಾವ ಉದ್ದೇಶಕ್ಕಾಗಿ? ಈ ಅನಂತ ಯಾತ್ರೆಯ ಗುರಿ ಯಾವುದು? ಒಮ್ಮೊಮ್ಮೆ ಆಯಾಸವಾದಂತೆ ಭ್ರಮನಿರಸನವಾದಂತೆ ಭಾಸವಾಗುತ್ತಿತ್ತು. ಆ ಸಂದರ್ಭಗಳಲ್ಲಿ ಸ್ವಲ್ಪ ದೂರಹೋಗಿ ನಿರ್ಲಿಪ್ತ ಭಾವನೆ ಪಡೆಯಲು ಪ್ರಯತ್ನಮಾಡುತ್ತಲಿದ್ದೆ. ಕ್ರಮೇಣ ನನ್ನ ಮನಸ್ಸು ಆ ಭಾವನೆಗೆ ಹದವಾಯಿತು. ನನಗೊಂದು ಬೆಲೆ ಇದೆ ಎಂಬ ಭಾವನೆ ಹೋಯಿತು; ಏನಾದರೂ ಆಗಲಿ ಎಂಬ ಭಾವನೆ ಮೂಡಿತು. ಅದೇ ರೀತಿ ಯೋಚಿಸಿ ಸ್ವಲ್ಪ ಕೃತಕೃತ್ಯನಾಗುತ್ತ ಇದ್ದರೂ ಬಹು ಮಟ್ಟಿಗೆ ಸಾಧ್ಯವಾಗಲಿಲ್ಲ. ಆ ಬಗೆಯ ನಿಜವಾದ ನಿರ್ಲಿಪ್ತಭಾವನೆ ಬೇರೂರಲು ನನ್ನ ಅಂತರ್ಯದಲ್ಲಿ ಒಂದು ಜ್ವಾಲಾಮುಖಿಯೇ ಕುದಿಯುತ್ತಿರುವುದೇ ಕಾರಣ. ಇದ್ದಕ್ಕಿದ್ದ ಹಾಗೆ ನಾನು ಕಟ್ಟಿದ ಕೋಟೆ ಎಲ್ಲ ನುಚ್ಚು ನೂರಾಗಿ ನನ್ನ ನಿರ್ಲಿಪ್ತತೆ ಎಲ್ಲ ಮಣ್ಣುಗೂಡುತ್ತದೆ.

ಆದರೆ ನನಗೆ ದೊರೆತ ಅಲ್ಪ ಜಯವೂ ನನಗೆ ಸಹಾಯಕವಾಯಿತು. ಪ್ರಚಂಡ ಕಾರ್ಯೋತ್ಸಾಹದ ಮಧ್ಯೆ, ದೂರ ನಿಂತು, ಆಗಂತುಕನಂತೆ ವಿಮರ್ಶೆಮಾಡುವ ಶಕ್ತಿ ಬಂದಿತು. ಒಂದೊಂದು ವೇಳೆ ಒಂದು ಗಂಟೆ ಎರಡು ಗಂಟೆ ನನ್ನ ಸಾಮಾನ್ಯ ಜೀವನದ ಜೂಜಾಟವನ್ನು ಮರೆತು ಧ್ಯಾನ ಮಗ್ನನಾಗಿ, ಅಲ್ಪಕಾಲವಾದರೂ ಬೇರೊಂದು ಜೀವನ ಅನುಭವಿಸುತ್ತಿದ್ದೆ. ಈ ರೀತಿ ಎರಡು ಜೀವನಗಳು ಒಂದಕ್ಕೊಂದು ಬೇರೆಯಾದರೂ ಹೆಣೆದುಕೊಂಡು ಮುಂದುವರಿದವು.

## ಅಧ್ಯಾಯ ೪: ಭಾರತ ಸಂಶೋಧನೆ

### ೧. ಸಿಂಧೂ ಕಣಿವೆಯ ನಾಗರಿಕತೆ

ಪುರಾತನ ಭಾರತದ ಮೊಟ್ಟಮೊದಲ ಚಿತ್ರವೆಂದರೆ ಸಿಂಧೂ ದೇಶದ ಮೊಹೆನ್‌ಜೊದಾರೊ ಮತ್ತು ಪಶ್ಚಿಮ ಪಂಜಾಬಿನ ಹರಪ್ಪಗಳಲ್ಲಿ ಅಗೆದು ತೆಗೆದು ಇರುವ ಸಿಂಧೂ ಕಣಿವೆಯ ನಾಗರಿಕತೆಯ ಅದ್ಭುತ ಅವಶೇಷಗಳು. ಈ ಭೂಶೋಧನೆಗಳು ಇದುವರೆಗಿನ ಪೂರ್ವ ಇತಿಹಾಸದ ಕಲ್ಪನೆಯನ್ನೆ ತಲೆಕೆಳಗೆ ಮಾಡಿವೆ. ದುರದೃಷ್ಟದಿಂದ ಈ ಸ್ಥಳಗಳಲ್ಲಿ ಭೂಗತ ವಸ್ತುಗಳ ಸಂಶೋಧನೆ ಆರಂಭವಾದ ಕೆಲವು ವರ್ಷಗಳಲ್ಲಿಯೇ ಕೆಲಸ ನಿಲ್ಲಿಸಲಾಯಿತು. ಕಳೆದ ಹದಿಮೂರು ವರ್ಷಗಳಿಂದ ಏನೂ ಕೆಲಸ ನಡೆದಿಲ್ಲ. ಕೆಲಸ ನಿಲ್ಲಿಸಿದ್ದು ೧೯೩೦ ರ ನಂತರ ಒದಗಿದ ಆರ್ಥಿಕ ಮುಗ್ಗಟ್ಟಿನಿಂದ. ಸಾಮ್ರಾಜ್ಯದ ಅಟ್ಟಹಾಸ ಮತ್ತು ಠೀವಿಯ ಪ್ರದರ್ಶನಕ್ಕೆ ಯಾವ ಆರ್ಥಿಕ ಮುಗ್ಗಟ್ಟೂ ಅಡ್ಡಬಾರದಿದ್ದರೂ ಇಂತಹ ಕೆಲಸಗಳಿಗೆ ಹಣವಿಲ್ಲ. ಎರಡನೆ ಪ್ರಪಂಚಯುದ್ಧ ಆರಂಭವಾದಂದಿನಿಂದ ಎಲ್ಲ ಕೆಲಸವೂ ನಿಂತುಹೋಯಿತು. ಅಗೆದು ಹೊರಕ್ಕೆ ತೆಗೆದಿರುವುದನ್ನು ಕಾಪಾಡುವ ಕಾರ್ಯ ಸಹ ನಿಲ್ಲಿಸಲಾಗಿದೆ. ೧೯೩೧ ರಲ್ಲಿ, ೧೯೩೬ ರಲ್ಲಿ ಈ ರೀತಿ ಎರಡುಬಾರಿ ಮೊಹೆಂಜೊದಾರೊಗೆ ಹೋಗಿದ್ದೇನೆ. ಎರಡನೆಯಬಾರಿ ಹೋದಾಗ, ಮಳೆ ಧೂಳು, ಮರಳಿನ ಬಿಸಿಗಾಳಿ ಇವು ಅಗೆದು ತೆಗೆದ ಅನೇಕ ಕಟ್ಟಡಗಳಿಗೆ ಹಾನಿಮಾಡಿದ್ದವು. ಮರಳು ಮತ್ತು ಮಣ್ಣಿನ ಹೊದಿಕೆಯಲ್ಲಿ ಐದು ಸಾವಿರ ವರ್ಷಗಳಿಂದ ಜೋಪಾನವಾಗಿದ್ದ ಈ ಕಟ್ಟಡಗಳು ಗಾಳಿ ಮಳೆಗಳ ಹೊಡೆತಕ್ಕೆ ಸಿಕ್ಕಿದ್ದರೆ ಬಹುಬೇಗ ನಾಶವಾಗುತ್ತಿದ್ದವು. ಗತಕಾಲದ ಈ ಅಮೂಲ್ಯ ಅವಶೇಷಗಳನ್ನು ಕಾಪಾಡಲು ಯಾವ ಉಚಿತ ಕಾರ್ಯ ಕ್ರಮವನ್ನೂ ಕೈಗೊಂಡಿರಲಿಲ್ಲ. ಆ ಸ್ಥಳದ ಮೇಲ್ವಿಚಾರಣೆಗೆ ನೇಮಕವಾದ ಪ್ರಾಕ್ತನ ವಿಮರ್ಶನ ಶಾಖೆಯ ಅಧಿಕಾರಿ ಆ ಕಟ್ಟಡಗಳನ್ನು ಇದ್ದ

ಸ್ಥಿತಿಯಲ್ಲಿ ಇಡಲು ತನಗೆ ಬೇಕಾದ ಹಣ, ಸಹಾಯ ಅಥವ ಇನ್ನಾವ ಸಲಕರಣೆಯನ್ನೂ ಒದಗಿಸಿಲ್ಲ ವೆಂದು ತಿಳಿಸಿದ. ಈ ಕಳೆದ ಎಂಟು ವರ್ಷಗಳಲ್ಲಿ ಏನಾಗಿದೆಯೊ ನಾನರಿಯೆ. ಪ್ರಾಯಶಃ ಇನ್ನೂ ಹೆಚ್ಚಿನ ಹಾನಿಯಾಗುತ್ತಿರಬೇಕು; ಇನ್ನು ಸ್ವಲ್ಪ ವರ್ಷಗಳಲ್ಲಿ ಮೊಹೆಂಜೊದಾರೊವಿನ ವಿಶಿಷ್ಟ ಸ್ವರೂಪವೇ ನಾಶವಾಗುತ್ತದೆ.

ಈ ದುರಂತ ಅಕ್ಷಮ್ಯ. ಏನು ಕೊಟ್ಟರೂ ದೊರೆಯಲಾರದ ಅಮೂಲ್ಯವಸ್ತು ನಾಶಹೊಂದುತ್ತದೆ. ಉಳಿಯುವುದು ಕೆಲವು ಚಿತ್ರಗಳು, ಮತ್ತು ಹೀಗೆಂದು ಜ್ಞಾಪಕ ಕೊಡುವ ಕೆಲವು ವಿವರಣೆಗಳು.

ಮೊಹೆಂಜೊದಾರೋ ಮತ್ತು ಹರಪ್ಪಗಳಿಗೆ ಮಧ್ಯೆ ಬಹುದೂರವಿದೆ. ಈ ಎರಡು ಸ್ಥಳಗಳಲ್ಲಿ ಭೂಶೋಧನೆ ನಡೆದದ್ದೂ ಕೇವಲ ಆಕಸ್ಮಿಕ. ಈ ಎರಡು ಸ್ಥಳಗಳ ಮಧ್ಯೆ ಇನ್ನೂ ಅನೇಕ ಮಹಾ ನಗರಗಳೂ, ಪುರಾತನ ಮಾನವನ ಕುಶಲ ಕರ್ಮದ ಅನೇಕ ಪಳೆಯುಳಿಕೆಗಳೂ ಭೂಗತವಾಗಿವೆ ಎಂಬುದರಲ್ಲಿ ಸಂಶಯವಿಲ್ಲ. ಈ ನಾಗರಿಕತೆ ಭಾರತದ ಬಹುಭಾಗದಲ್ಲಿ, ಮುಖ್ಯವಾಗಿ, ಉತ್ತರ ಹಿಂದೂ ಸ್ಥಾನದಲ್ಲಿ ತುಂಬ ಹರಡಿತ್ತು. ಭಾರತದ ಪುರಾತನ ಇತಿಹಾಸದ ಶೋಧನಾ ಕಾರ್ಯವನ್ನು ಪುನಃ ಕೈಗೊಂಡು ಅದ್ಭುತ ಸಂಶೋಧನೆಗಳನ್ನು ಕಂಡುಹಿಡಿಯುವ ಕಾಲವೂ ಬರಬಹುದು. ಈ ನಾಗರಿಕತೆಯ ಕುರುಹುಗಳು ಪಶ್ಚಿಮದಲ್ಲಿ ಬಹುದೂರದ ಕಾಥೆವಾಡದಲ್ಲಿ, ಪಂಜಾಬಿನ ಅಂಬಾಲಾ ಜಿಲ್ಲೆಯಲ್ಲಿ ದೊರೆತಿವೆ. ಗಂಗಾನದಿಯ ಕಣಿವೆಯಲ್ಲೂ ಹಬ್ಬಿತ್ತು ಎಂದು ನಂಬಲು ಸಾಕಾದ ಪ್ರಮಾಣಗಳಿವೆ. ಆದ್ದರಿಂದ ಅದು ಸಿಂಧೂ ಕಣಿವೆಯ ನಾಗರಿಕತೆ ಎನ್ನುವುದಕ್ಕಿಂತ ಹೆಚ್ಚಿನದಾಗಿತ್ತು. ಮೊಹೆಂಜೊದಾರೊದಲ್ಲಿ ದೊರೆತಿರುವ ಲಿಪಿಯ ಅರ್ಥ ಇನ್ನೂ ತಿಳಿದಿಲ್ಲ.

ಆದರೆ ಈಗ ತಿಳಿದಿರುವಷ್ಟು ಸಹ ಅತಿಮಹತ್ವದ ವಿಷಯವಾಗಿದೆ. ಸಿಂಧೂ ಕಣಿವೆಯ ನಾಗರಿಕತೆ ಒಳ್ಳೆಯ ಉಚ್ಛ್ರಾಯಸ್ಥಿತಿಯಲ್ಲಿತ್ತು. ಪ್ರಾಯಶಃ ಆ ಮಟ್ಟಕ್ಕೆ ಬರಲು ಸಹಸ್ರಾರು ವರ್ಷಗಳಾದರೂ ಆಗಿರಬೇಕು. ಅದು ಬಹುಮಟ್ಟಿಗೆ ಲೌಕಿಕ ನಾಗರಿಕತೆಯಾಗಿದ್ದುದು ಒಂದು ಅತ್ಯಾಶ್ಚರ್ಯ; ಧಾರ್ಮಿಕ ವಿಷಯವಿದ್ದರೂ ಅದಕ್ಕೇ ಪ್ರಾಧಾನ್ಯವಿರಲಿಲ್ಲ. ಮುಂದೆ ಭಾರತದಲ್ಲಿ ಉದಯಿಸಿದ ಸಾಂಸ್ಕೃತಿಕ ಯುಗಗಳಿಗೂ ಅದೇ ಉಗಮಸ್ಥಾನ.

ಸರ್ ಜಾನ್ ಮಾರ್ಷಲ್ "ಮೊಹೆಂಜೊದಾರೊ ಹರಪ್ಪಗಳಲ್ಲಿ ದೊರೆತ ನಾಗರಿಕತೆ ಪ್ರಥಮಾವಸ್ಥೆಯ ನಾಗರಿಕತೆಯಲ್ಲ. ಅನೇಕ ಶತಮಾನಗಳ ಮಾನವ ಪ್ರಯತ್ನದಿಂದ ಭಾರತ ಭೂಮಿಯಲ್ಲಿ ಬೇರುಬಿಟ್ಟಿರುವ ಹಳತಾದ ಸಹಸ್ರಾರು ವರ್ಷಗಳ ಹಿಂದಿನ ನಾಗರಿಕತೆ. ಪರ್ಷಿಯ, ಮೆಸೊಪೊಟೋಮಿಯ, ಈಜಿಪ್ಟ್ ದೇಶಗಳಂತೆ ಇಂಡಿಯ ಸಹ ನಾಗರಿಕತೆಯನ್ನು ಹರಡುವ ಉದ್ಯಮ ಆರಂಭಿಸಿ, ಬೆಳೆಸಿದ ದೇಶ ಎಂದು ಇನ್ನು ಮುಂದೆ ಪರಿಗಣಿಸಬೇಕು" ಎಂದಿದ್ದಾರೆ. ಮತ್ತು "ಇಂಡಿಯದ ಇತರ ಭಾಗಗಳಲ್ಲಿ ಅಲ್ಲದಿದ್ದರೂ ಪಂಜಾಬ್ ಮತ್ತು ಸಿಂಧು ದೇಶಗಳಲ್ಲಿ ಮೆಸೊಪೊಟೇಮಿಯ ಮತ್ತು ಈಜಿಪ್ಟ್‌ಗಳಲ್ಲಿ ಇದ್ದ ಮಾದರಿಯ ಮತ್ತು ಕೆಲವು ವಿಷಯಗಳಲ್ಲಿ ಅದಕ್ಕೂ ಮುಂದುವರಿದಿದ್ದ—ಒಂದೇ ಬಗೆಯ ಉತ್ತಮ ನಾಗರಿಕತೆ ಹರಡಿತ್ತು" ಎಂದು ಹೇಳಿದಾರೆ.

ಸಿಂಧೂ ಕಣಿವೆಯ ಈ ಜನ ಆ ಕಾಲದ ಸುಮೇರಿಯನ್ ನಾಗರಿಕತೆಯೊಂದಿಗೆ ಅನೇಕ ವಿಧವಾಗಿ ಸಂಬಂಧ ಬೆಳಸಿದ್ದರು. ಅಕ್ಕಡದಲ್ಲಿ ಪ್ರಾಯಶಃ ಭಾರತೀಯ ವರ್ತಕರ ಒಂದು ಪಾಳೆಯವೇ ಇದ್ದಂತೆ ಸಾಕ್ಷ್ಯ ದೊರೆಯುತ್ತದೆ. "ಸಿಂಧೂನದೀತೀರದ ನಗರಗಳಲ್ಲಿ ತಯಾರಾದ ಮಾಲುಗಳು ಟೈಗ್ರಿಸ್ ಮತ್ತು ಯೂಫ್ರೆಟಿಸ್ ನದೀದಡದ ಪೇಟೆಗಳಲ್ಲಿ ಮಾರಾಟಕ್ಕೆ ದೊರೆಯುತ್ತಿದ್ದವು. ಅದೇ ರೀತಿ ಸುಮೇರಿಯನ್ ನಾಗರಿಕತೆಯ ಕೆಲವು ಕಲಾವಸ್ತುಗಳು, ಮೆಸೊಪೊಟೇಮಿಯದ ಅಲಂಕಾರ ಸಾಮಗ್ರಿಗಳು, ಒಂದು ದುಂಡು ಮುದ್ರೆ ಸಿಂಧುದಡದಲ್ಲಿ ದೊರೆತಿವೆ. ವ್ಯಾಪಾರವು ಕಚ್ಚಾಮಾಲು, ಮತ್ತು ಭೋಗದ ಮಾಲುಗಳಲ್ಲಿ ಮಾತ್ರ ನಡೆಯುತ್ತಿರಲಿಲ್ಲ. ಅರಬ್ಬಿ ಸಮುದ್ರದಿಂದ ನಿತ್ಯವೂ ಬರುತ್ತಿದ್ದ ಮೀನು ಮೊಹೆಂಜೊದಾರೊ ನಾಗರಿಕರಿಗೆ ಆಹಾರವಸ್ತುವಾಗಿತ್ತು" (ಗಾರ್ಡನ್ ಚೈಲ್ಡ್).

ಇಂಡಿಯದಲ್ಲಿ ಅಷ್ಟು ಪ್ರಾಚೀನಕಾಲದಲ್ಲಿಯೇ ಹತ್ತಿಯಿಂದ ಬಟ್ಟೆ ತಯಾರಿಸುತ್ತಿದ್ದರು. ಮಾರ್ಷಲ್ ಸಿಂಧು ಕಣಿವೆಯ ನಾಗರಿಕತೆಯನ್ನು ಅದೇ ಕಾಲದ ಈಜಿಪ್ಟ್ ಮತ್ತು ಮೆಸೊಪೊಟೇಮಿಯ ನಾಗರಿಕತೆಗಳೊಂದಿಗೆ ತುಲನಮಾಡುತ್ತ "ಈ ರೀತಿ ಕೆಲವು ಮುಖ್ಯ ಅಂಶಗಳನ್ನೇ ತಿಳಿಸಬೇಕಾದರೆ ಆ ಕಾಲದಲ್ಲಿ ಬಟ್ಟೆ ತಯಾರಿಕೆಗೆ ಹತ್ತಿಯನ್ನು ಉಪಯೋಗಿಸುತ್ತ ಇದ್ದುದು ಇಂಡಿಯದಲ್ಲಿ ಮಾತ್ರ ; ಮುಂದೆ ೨,೦೦೦-೩,೦೦೦ ವರ್ಷಗಳವರೆಗೂ ಅದು ಪಾಶ್ಚಾತ್ಯ ದೇಶಗಳಿಗೆ ಹರಡಲೇ ಇಲ್ಲ. ಮೊಹೆಂಜೋದಾರೋದಲ್ಲಿ ಕಾಣುವ ಸುಸಜ್ಜಿತ ಸ್ನಾನಘಟ್ಟಗಳನ್ನು, ಭವ್ಯವಾದ ಕಟ್ಟಡಗಳನ್ನು ಈಜಿಪ್ಟ್, ಮೆಸೊಪೊಟೇಮಿಯಗಳಲ್ಲಾಗಲಿ, ಪಶ್ಚಿಮ ಏಷ್ಯದ ಇತರ ಯಾವ ದೇಶಗಳಲ್ಲಿಯೇ ಆಗಲಿ ಎಲ್ಲಿಯೂ ಕಾಣಲಾರೆವು. ಆ ದೇಶಗಳಲ್ಲಿ ಅಪಾರ ಹಣ, ಬುದ್ಧಿಶಕ್ತಿಯೆಲ್ಲ ದೇವರುಗಳಿಗೆ ಸುಂದರ ದೇವಾಲಯಗಳನ್ನು ಕಟ್ಟುವದರಲ್ಲಿ ಅಥವ ರಾಜರುಗಳ ಅರಮನೆ ಅಥವ ಗೋರಿಗಳ ನಿರ್ಮಾಣ ಕಾರ್ಯದಲ್ಲಿ ವೆಚ್ಚವಾಗುತ್ತಿತ್ತು. ಸಾಮಾನ್ಯ ಜನರಿಗೆ ಸಣ್ಣ ಮಣ್ಣಿನ ಗುಡಿಸಲುಗಳೇ ಗತಿಯಾಗಿತ್ತು. ಸಿಂಧುನದಿ ಕಣಿವೆಯಲ್ಲಿ ಈ ಚಿತ್ರ ವ್ಯತ್ಯಸ್ತವಾಗಿತ್ತು. ವಿಶಾಲವಾದ ಅಚ್ಚುಕಟ್ಟಾದ ಸುಂದರ ಸೌಧಗಳು ನಿರ್ಮಾಣವಾಗುತ್ತಿದ್ದುದು ಸಾಮಾನ್ಯ ಜನರ ಸೌಖ್ಯಕ್ಕೆ" ಎಂದಿದ್ದಾರೆ. ಈ ಸಾರ್ವಜನಿಕ ಮತ್ತು ಖಾಸಗಿ ಸ್ನಾನಘಟ್ಟಗಳು, ಉತ್ತಮ ಚರಂಡಿ ವ್ಯವಸ್ಥೆ ಮೊಹೆಂಜೊದಾರೋದಲ್ಲೆ ಮೊದಲು ಬೆಳಕಿಗೆ ಬಂದಿರುವುದು. ಸುಟ್ಟ ಇಟ್ಟಿಗೆಯಿಂದ ಕಟ್ಟಿದ ಎರಡು ಮಹಡಿಮನೆಗಳಲ್ಲಿ ಸ್ನಾನದ ಮನೆಗಳು, ಆಳುಗಳಿಗೆ ವಾಸದ ಮನೆ, ವಿಶ್ರಾಂತಿ ಗೃಹಗಳು ಮುಂತಾದುವನ್ನು ನೋಡಬಹುದು.

ಈ ಭೂಗರ್ಭಶೋಧನೆಯನ್ನು ಸ್ವತಃ ನಡೆಸಿ, ಸಿಂಧು ಕಣಿವೆಯ ನಾಗರಿಕತೆಯ ವಿಷಯದಲ್ಲಿ ಸರ್ವಪಾರಂಗತನೆನಿಸಿದ ಮಾರ್ಷಲ್ ಇನ್ನೊಂದು ಕಡೆ "ಸಿಂಧು ಕಣಿವೆಯ ನಾಗರಿಕತೆಯಲ್ಲಿ ಕಾಣುವ ಧರ್ಮ ಮತ್ತು ಕಲೆಗೆ ಒಂದು ಮಹತ್ತರ ವೈಶಿಷ್ಟ್ಯವಿದೆ, ಪ್ರತ್ಯೇಕ ಭಾವಮುದ್ರೆ ಇದೆ. ಅಲ್ಲಿ ದೊರೆತ ಮಣ್ಣಿನ ಸಾಮಾನಿನ ಕುರಿಗಳು, ನಾಯಿಗಳು ಮತ್ತು ಇತರ ಪ್ರಾಣಿಗಳ ಮಾದರಿಗಳು, ಮುದ್ರೆಗಳ ಮೇಲಿನ ಇಳಿಕೆತ್ತನೆಗಳು, ಅದರಲ್ಲೂ ಮುಖ್ಯವಾಗಿ ಕೆತ್ತನೆ ಕಲೆಯ ಕುಸುರಿ ಕೆಲಸದಲ್ಲಿ, ಆಕೃತಿ ಮತ್ತು ರೇಖಾ ವಿನ್ಯಾಸದಲ್ಲಿ ಬೇರೆ ಎಲ್ಲಿಯೂ ಮೀರಿಸಲಾಗದ ಒಂದು ವಿಶಿಷ್ಟ ರೀತಿಯ ಭವ್ಯತೆ ಮತ್ತು ಕೌಶಲ್ಯ ಬೀರುವ ಸಣ್ಣ ಕೋಡಿನ ಹಿಣಿಲು ಹೋರಿಗಳು—ಇವುಗಳನ್ನು ಇತರ ದೇಶಗಳ ಸಮಕಾಲೀನ ನಾಗರಿಕತೆಯಲ್ಲಿ ಎಲ್ಲಿಯೂ ಕಾಣಲಾರೆವು. ಹರಪ್ಪದಲ್ಲಿ ದೊರೆತಿರುವ ಮನುಷ್ಯನ ಎರಡು ಪ್ರತಿಮೆಗಳ ಸುಂದರ ಶಿಲ್ಪ ಕುಶಲತೆಗೆ ಸಾಮ್ಯವನ್ನು ಕಾಣಬೇಕಾದರೆ ಪುರಾತನ ಗ್ರೀಸಿಗೇ ಬರಬೇಕು. ಸಿಂಧು ಜನರ ಮತಧರ್ಮವನ್ನು ಇತರ ದೇಶಗಳ ಜನರಲ್ಲಿಯೂ ಕಾಣಬಹುದು. ಇತಿಹಾಸ ಪೂರ್ವ ಯುಗದ, ಇತಿಹಾಸ ಕಾಲದ ಯಾವ ಧರ್ಮವನ್ನು ತೆಗೆದು ಕೊಂಡರೂ ಸಾಮಾನ್ಯವಾಗಿ ಈ ಹೋಲಿಕೆ ಇದ್ದೇ ಇದೆ. ಒಟ್ಟಿನಲ್ಲಿ ಅವರ ಧರ್ಮ ಇಂದಿನ ಹಿಂದೂ ಧರ್ಮಕ್ಕಿಂತ ತೀರ ಭಿನ್ನವಲ್ಲದ ಭಾರತೀಯ ಧರ್ಮ" ಎಂದಿದ್ದಾರೆ.

ಈ ರೀತಿ ಸಿಂಧು ಕಣಿವೆಯ ನಾಗರಿಕತೆಗೂ ಆ ಕಾಲದ ಪರ್ಷಿಯ, ಮೆಸೊಪೊಟೇಮಿಯ ಈಜಿಪ್ಟ್ ನಾಗರಿಕತೆಗಳಿಗೂ ವ್ಯಾಪಾರ ಮತ್ತು ಇತರ ಬಾಂಧವ್ಯ ಇತ್ತು ; ಅವುಗಳಿಗಂತ ಎಷ್ಟೊ ವಿಧದಲ್ಲಿ ಮುಂದುವರಿದಿತ್ತು. ಅದು ಶ್ರೀಮಂತ ವರ್ತಕರ, ಪಟ್ಟಣಿಗರ ನಾಗರಿಕತೆ. ವರ್ತಕರು ತುಂಬ ಬಲಿಷ್ಠರಾಗಿ ಪ್ರಭಾವಶಾಲಿಗಳಾಗಿದ್ದರು. ಇಂದೂ ಇಂಡಿಯದ ಅನೇಕ ಪಟ್ಟಣಗಳಲ್ಲಿ ಕಾಣಬಹುದಾದಂತೆ ಬೀದಿಗಳ ಎರಡು ಕಡೆಗಳಲ್ಲೂ ಅಂಗಡಿಗಳ ಸಾಲುಗಳಿದ್ದವು. ಪ್ರೊಫೆಸರ್ ಚೈಲ್ಡ್: "ಸಿಂಧುನಗರದ ಕುಶಲಕರ್ಮಿಗಳು ವ್ಯಾಪಾರಕ್ಕಾಗಿ ಸಾಮಾನುಗಳನ್ನು ತಯಾರಿಸುತ್ತಿದ್ದರು. ವ್ಯಾಪಾರದ ಸೌಕರ್ಯಕ್ಕೆ ಯಾವುದಾದರೂ ನಾಣ್ಯ ಬಳಕೆಯಲ್ಲಿತ್ತೆ ಅಥವ ಬೆಲೆನಿಗದಿಯೇನಾದರೂ ಇತ್ತೆ ಎಂದು ಹೇಳಲು ಸಾಧ್ಯವಿಲ್ಲ. ವಿಶಾಲವಾಗಿ, ಅಚ್ಚುಕಟ್ಟಾಗಿರುವ ಅನೇಕ ಮನೆಗಳಲ್ಲಿ ಕಾಣುವ ಉಗ್ರಾಣಗಳನ್ನು ನೋಡಿದರೆ ಅವು ವರ್ತಕರ ಮನೆಗಳೇ ಆಗಿರಬೇಕು ಎಂದು ಭಾಸವಾಗು

ತ್ತದೆ. ಅವುಗಳ ಸಂಖ್ಯೆ ಮತ್ತು ವೈಶಾಲ್ಯ ನೋಡಿದರೆ ಆ ವರ್ತಕರು ತುಂಬ ಐಶ್ವರ್ಯವಂತರಿದ್ದರು, ಅಭಿವೃದ್ಧಿ ಹೊಂದಿ ಒಳ್ಳೆಯ ಉಚ್ಛ್ರಾಯ ಸ್ಥಿತಿಯಲ್ಲಿದ್ದರು ಎಂದು ಸ್ಪಷ್ಟವಾಗುತ್ತದೆ." "ಚಿನ್ನದ ಒಡವೆಗಳು, ಬೆಳ್ಳಿಯ ಸಾಮಾನುಗಳು, ವಜ್ರವೈಡೂರ್ಯಾದಿ ರತ್ನಗಳು, ಮಣ್ಣಿನ ಸಾಮಾನುಗಳು, ತಾಮ್ರ ಮತ್ತು ಇತರ ಲೋಹದ ಆಯುಧಗಳು ಮತ್ತು ಇತರ ಸಲಕರಣೆಗಳು ಈ ಭೂಶೋಧನೆಯಲ್ಲಿ ಹೇರಳವಾಗಿ ದೊರೆತಿವೆ. ಉತ್ತಮ ರೀತಿಯಲ್ಲಿ ನಿರ್ಮಿತವಾದ ಬೀದಿಸಾಲುಗಳನ್ನೂ, ಬಿಡದೆ ಕ್ಲುಪ್ತಕಾಲಕ್ಕೆ ಶುಚಿಗೊಳಿಸಲು ಅನುಕೂಲವಾಗುತ್ತಿದ್ದ ಉತ್ತಮ ಚರಂಡಿ ವ್ಯವಸ್ಥೆಯನ್ನೂ ನೋಡಿದರೆ ಅಲ್ಲಿನ ನಗರಾಡಳಿತದ ದಕ್ಷತೆ ವ್ಯಕ್ತಪಡುತ್ತದೆ. ಪ್ರವಾಹದ ಅನಾಹುತದಿಂದ ಪುನರ್ನಿರ್ಮಾಣದ ಆವಶ್ಯಕತೆಗಳಿಗನುಗುಣವಾಗಿ ವ್ಯವಸ್ಥಿತ ನಗರ ನಿರ್ಮಾಣ ಕ್ರಮಗಳನ್ನನುಸರಿಸಿ ಬೀದಿ ಸಾಲುಗಳನ್ನು, ಓಣಿಗಳನ್ನು ಬಿಟ್ಟು ಮನೆಗಳನ್ನು ಕಟ್ಟಲು ಒತ್ತಾಯಮಾಡುವ ಅಧಿಕಾರ ಆ ನಗರಾಡಳಿತಕ್ಕೆ ಇತ್ತು" ಎಂದು ಪ್ರೊಫೆಸರ್ ಚೈಲ್ಡ್ ಹೇಳಿದ್ದಾರೆ.

ಸಿಂಧು ನಾಗರಿಕತೆಗೂ ಇಂದಿನ ಭಾರತಕ್ಕೂ ಮಧ್ಯೆ ಎಷ್ಟೋ ಅಂತರವಿದೆ. ಎಷ್ಟೋ ಕಾಲ ಕಳೆದಿದೆ. ಅದರ ವಿಷಯ ನಮಗೆ ಏನೂ ತಿಳಿಯದು. ಒಂದು ಕಾಲಕ್ಕೂ ಇನ್ನೊಂದು ಕಾಲಕ್ಕೂ ಮಧ್ಯೆ ಸೇರಿಸುವ ಕೊಂಡಿ ನಮಗೆ ಕಾಣುವುದಿಲ್ಲ. ಎಷ್ಟೋ ವಿದ್ಯಮಾನಗಳು ನಡೆದು, ಎಷ್ಟೋ ವ್ಯತ್ಯಾಸವಾಗಿದೆ. ಆದರೂ ಇಂದಿನ ಆಧುನಿಕ ಭಾರತಕ್ಕೂ, ಆರೇಳು ಸಾವಿರ ವರ್ಷಗಳ ಹಿಂದೆ ಸಿಂಧೂ ಕಣಿವೆಯ ನಾಗರಿಕತೆಯ ಆರಂಭದ ಪ್ರಾಚೀನತೆಗೂ ಮೂಲತಃ ಏನೋ ಒಂದು ಶಾಶ್ವತ ಸಂಬಂಧ, ಅವಿಚ್ಛಿನ್ನತೆ ಇದೆ ಎಂಬ ಭಾವನೆ ಉತ್ಪನ್ನವಾಗುತ್ತದೆ. ಈಗಲೂ ಜನರಲ್ಲಿ ಬಳಕೆಯಲ್ಲಿರುವ ಸಂಪ್ರದಾಯಗಳು, ಅಭ್ಯಾಸಗಳು, ಜನ ಸಾಮಾನ್ಯದಲ್ಲಿ ಕಾಣುವ ಪದ್ಧತಿಗಳು, ಕುಶಲಮಾರ್ಗಗಳು, ಉಡುಪುಗಳು, ಇವುಗಳನ್ನು ಹರಪ್ಪ ಮೊಹೆಂಜೊದಾರೊಗಳಲ್ಲಿ ಕಾಣುವದರೊಂದಿಗೆ ಹೋಲಿಸಿ ನೋಡಿದರೆ ಅವುಗಳಲ್ಲಿ ಕಾಣುವ ಸೌಮ್ಯ ಅತ್ಯಾಶ್ಚರ್ಯವನ್ನುಂಟುಮಾಡುತ್ತದೆ. ಪಶ್ಚಿಮ ಏಷ್ಯದ ಮೇಲೆ ಇದರ ಪರಿಣಾಮ ಅಗಾಧವಾಗಿತ್ತು.

ಇಂಡಿಯದ ಇತಿಹಾಸದ ಈ ಮುಂಬೆಳಗಿನಲ್ಲಿ ಇಂಡಿಯ ಅಳುವ ಮಗುವಾಗಿರಲಿಲ್ಲ. ಅನೇಕ ವಿಧದಲ್ಲಿ ಪ್ರಬುದ್ಧಮಾನಕ್ಕೆ ಬಂದಿತ್ತು. ಕೈಗೆ ಎಟುಕದ ಅಸ್ಪಷ್ಟ ಅತಿ ಲೌಕಿಕ ಪ್ರಪಂಚದ ಕನಸು ಕಾಣುತ್ತ ಜೀವನದ ಹೆದ್ದಾರಿಯನ್ನು ತುಳಿಯುತ್ತಿತ್ತು. ಸುಂದರ ವಸ್ತುಗಳ ನಿರ್ಮಾಣ ಮಾತ್ರವಲ್ಲದೆ ಜನೋಪಯುಕ್ತವೂ ಆಧುನಿಕ ನಾಗರಿಕತೆಯ ಮುಖ್ಯ ಕುರುಹೂ ಆದ ಉತ್ತಮ ಸ್ನಾನ ಮಂದಿರಗಳನ್ನು, ಚರಂಡಿ ವ್ಯವಸ್ಥೆಯನ್ನು ನಿರ್ಮಾಣಮಾಡಿ ಕಲಾಭಿವೃದ್ಧಿಯಲ್ಲಿ, ಜೀವನ ಸೌಕರ್ಯದಲ್ಲಿ ಬಹಳ ಕಾರ್ಯ ಕುಶಲತೆಯನ್ನು ಪಡೆದು ಇತ್ತು.

## ೨. ಆರ್ಯರ ಪ್ರವೇಶ.

ಈ ಸಿಂಧೂ ನಾಗರಿಕತೆಯ ಜನ ಯಾರು ಮತ್ತು ಎಲ್ಲಿಂದ ಬಂದವರು? ಇನ್ನೂ ನಮಗೆ ತಿಳಿಯದು. ಪ್ರಾಯಶಃ ಆ ಸಂಸ್ಕೃತಿ ಒಂದು ದೇಶೀಯ ಸಂಸ್ಕೃತಿಯೇ ಇದ್ದರೂ ಇರಬಹುದು; ಪ್ರಾಯಶಃ ಇರಬೇಕು. ಅದರ ಬೇರುಗಳು, ಶಾಖೆಗಳು ದಕ್ಷಿಣ ಇಂಡಿಯದಲ್ಲಿ ಈಗಲೂ ದೊರೆಯಬಹುದು. ಕೆಲವು ವಿದ್ವಾಂಸರುಗಳು ದಕ್ಷಿಣ ಇಂಡಿಯದ ದ್ರಾವಿಡ ಜನರಿಗೂ ಅವರ ಸಂಸ್ಕೃತಿಗೂ ಸಿಂಧೂ ಸಂಸ್ಕೃತಿಗೂ ಬಹಳ ಹೋಲಿಕೆ ಇವೆ ಎನ್ನುತ್ತಾರೆ. ಅಥವ ಹೊರದೇಶದಿಂದ ಇಂಡಿಯಕ್ಕೆ ವಲಸೆ ಬಂದುದಾದರೂ ಪ್ರಾಯಶಃ ಮೊಹೆಂಜೊದಾರೊ ಕಾಲಕ್ಕೇನೆ ಬಂದು ಸಾವಿರಾರು ವರ್ಷಗಳಾಗಿರಬೇಕು. ಯಾವ ದೃಷ್ಟಿಯಿಂದ ನೋಡಿದರೂ ಅವರು ಇಂಡಿಯದಲ್ಲೇ ಹುಟ್ಟಿ ಬೆಳೆದವರು.

ಸಿಂಧೂ ಸಂಸ್ಕೃತಿ ಏನಾಯಿತು ಮತ್ತು ಅದು ಕೊನೆಗಂಡದ್ದು ಹೇಗೆ? ಕೆಲವರು (ಗಾರ್ಡನ್ ಚೈಲ್ಡ್ ಅವರಲ್ಲಿ ಒಬ್ಬ) ಯಾವುದೋ ಒಂದು ಮಹಾ ಪ್ರಳಯದಿಂದ ನಾಶವಾಗಿರಬೇಕು ಎನ್ನುತ್ತಾರೆ. ಸಿಂಧೂ ನದಿಯ ಮಹಾ ಪ್ರವಾಹದಲ್ಲಿ ಅನೇಕ ವೇಳೆ ನಗರಗಳು ಹಳ್ಳಿಗಳು ಲೆಕ್ಕವಿಲ್ಲದಷ್ಟು ಮುಳುಗಿ

ನಿರ್ನಾಮವಾಗಿರುವುದು ಪ್ರಸಿದ್ಧವಿದೆ. ಅಥವ ದೇಶದ ವಾಯುಗುಣದ ವ್ಯತ್ಯಾಸದಿಂದ ಫಲವತ್ತಾದ ಭೂಮಿ ಕ್ರಮೇಣ ನಿರ್ಜಲ ಪ್ರದೇಶವಾಗಿ, ಹೊಲ ಗದ್ದೆಗಳಿಂದ ನಲಿವ ಕೃಷೀವಲನಾಡು ಮರುಭೂಮಿಯಾಗಬಹುದು. ಮೊಹೆಂಜೊದಾರೊ ಅವಶೇಷಗಳು ಪದರು ಪದರಾದ ಮರಳು ಮಡಿಕೆಗಳ ಮೇಲೆ ದೊರೆತಿವೆ. ನಗರದ ತಳಪಾಯ ಮೇಲೆ ಮೇಲೆ ಬರುತ್ತಿದೆ. ಜನ ತಮ್ಮ ವಾಸದ ಮನೆಗಳನ್ನು ಮೊದಲಿನ ತಳಪಾಯಗಳಿಗಿಂತ ಹೆಚ್ಚು ಹೆಚ್ಚು ಎತ್ತರದಲ್ಲಿ ಕಟ್ಟಿದ್ದಾರೆ. ಭೂಗರ್ಭದಿಂದ ಅಗೆದು ತೆಗೆದ ಕೆಲವು ಮನೆಗಳಿಗೆ ಎರಡು ಮೂರು ಅಂತಸ್ತುಗಳಿವೆ. ಆದರೂ ನೆಲಮಟ್ಟ ಮೇಲೆ ಮೇಲೆ ಬಂದಂತೆ ಕ್ರಮೇಣ ಹೊಸ ಅಂತಸ್ತನ್ನು ಕಟ್ಟಿದಂತೆ ಇದೆ. ಬಹು ಪೂರ್ವದಲ್ಲಿ ಸಿಂಧೂ ದೇಶ ಸಂಪತ್ಸಮೃದ್ಧ ಫಲವತ್ತಾದ ದೇಶವಾಗಿತ್ತು ; ಮಧ್ಯಕಾಲದಿಂದ ಅದರ ಬಹುಭಾಗ ಬರಡು ಮರುಭೂಮಿಯಾಯಿತು.

ಆದ್ದರಿಂದ ಈ ವಾಯುಗುಣ ವ್ಯತ್ಯಾಸಗಳು ಆ ಭಾಗಗಳ ಜನರ ಮೇಲೆ, ಅವರ ಜೀವನವಿಧಾನದ ಮೇಲೆ ಮಹತ್ಪರಿಣಾಮವನ್ನುಂಟುಮಾಡಿರಬೇಕು. ಆದರೆ ಆ ಪರಿಣಾಮ ಆಕಸ್ಮಿಕವಾದ ದುರಂತವಲ್ಲ, ಕ್ರಮೇಣದ್ದಾಗಿರಬೇಕು. ಹೇಗೇ ಆಗಲಿ ಈ ವಾಯುಗುಣ ವ್ಯತ್ಯಾಸವು ಈ ನಗರ ನಾಗರಿಕತೆ ಹರಡಿದ್ದ ವಿಶಾಲ ಕ್ಷೇತ್ರದ ಒಂದು ಸಣ್ಣ ಭಾಗದಲ್ಲಿ ಮಾತ್ರ ಪರಿಣಾಮಕಾರಿಯಾಗಿರಬೇಕು. ಈಗ ತಿಳಿದು ಬಂದ ಮಟ್ಟಿಗೆ ಈ ನಾಗರಿಕತೆ ಗಂಗಾನದಿ ಕಣಿವೆಯಲ್ಲಿ ಮತ್ತು ಪ್ರಾಯಶಃ ಇನ್ನೂ ಮುಂದೆ ಹರಡಿತ್ತೆಂದು ಗೊತ್ತಾಗಿದೆ. ಒಂದು ನಿರ್ಧಾರಕ್ಕೆ ಬರಲು ತಕ್ಕಷ್ಟು ಸಾಕ್ಷ್ಯ ಪ್ರಮಾಣಗಳಿಲ್ಲ. ಪ್ರಾಯಶಃ ಮರಳು ಬಂದು ಈ ಪುರಾತನ ನಗರಗಳ ಮೇಲೆ ಹರಿದು ಮುಚ್ಚಿ ಹೂತಿಟ್ಟಿರಬೇಕು ; ಇತರ ನಗರಗಳು ಮತ್ತು ಈ ನಾಗರೀಕತೆಯ ಉಳಿದ ಸಾಕ್ಷ್ಯಗಳು ಕ್ರಮವಾಗಿ ಖಿಲವಾಗಿ ಕಾಲಾನುಕ್ರಮದಲ್ಲಿ ನಾಶವಾಗಿರಬೇಕು. ಪ್ರಾಯಶಃ ಮುಂದೆ ದೊರೆಯುವ ಭೂಶೋಧನೆಗಳಿಂದ ಅನಂತರದ ಸಂಬಂಧಗಳು ದೊರೆತರೂ ದೊರೆಯಬಹುದು.

ಸಿಂಧೂ ಕಣಿವೆಯ ನಾಗರಿಕತೆ ಮತ್ತು ಮುಂದಿನ ಕಾಲದ ನಾಗರಿಕತೆಯಲ್ಲಿ ಒಂದು ವಿಧವಾದ ಅವಿಚ್ಛಿನ್ನತೆ ಕಂಡುಬಂದರೂ ಕಾಲದೃಷ್ಟಿಯಿಂದ ಮತ್ತೂ ಈ ನಾಗರಿಕತೆಯ ಹಿಂದೆಯೇ ಬಂದ ನಾಗರಿಕತೆ ಯಾವುದು ಎಂಬ ದೃಷ್ಟಿಯಿಂದ ಒಂದು ವಿಧವಾದ ಭಗ್ನತೆ ನ್ಯೂನತೆ ಕಂಡುಬರುತ್ತದೆ. ಈ ಮುಂದಿನ ನಾಗರಿಕತೆಯಲ್ಲಿ ನಗರಗಳು, ನಗರ ಜೀವನ ಸ್ವಲ್ಪಮಟ್ಟಿಗೆ ಇದ್ದರೂ ಪ್ರಾಯಶಃ ಆರಂಭದಲ್ಲಿ ಅದು ಕೃಷಿಕ ನಾಗರಿಕತೆಯಾಗಿ ಇರಬೇಕು. ವಾಯುವ್ಯ ಮೂಲೆಯಿಂದ ಆ ಮೇಲೆ ಬಂದು ನೆಲಸಿದ ಆರ್ಯರು ಪ್ರಾಯಶಃ ಈ ಕೃಷಿಕ ಜೀವನಕ್ಕೆ ಬಹಳ ಪ್ರಾಮುಖ್ಯತೆ ಕೊಟ್ಟಿರಬೇಕು.

ಆರ್ಯರು ಈ ರೀತಿ ವಲಸೆ ಬಂದುದು ಸಿಂಧೂ ಕಣಿವೆಯ ನಾಗರಿಕತೆಯ ಕಾಲದಿಂದ ಸಾವಿರ ವರ್ಷಗಳ ನಂತರ ಎಂದು ತಿಳಿದು ಬಂದಿದೆ. ಆದರೂ ಇಷ್ಟು ಸಹ ಅಂತರ ಇಲ್ಲದೆ ಇರಬಹುದು. ಆಗಿಂದಾಗ್ಯೆ ವಾಯುವ್ಯ ಮೂಲೆಯಿಂದ ವಲಸೆಗಾರರ ಪಂಗಡಗಳು, ತಂಡಗಳು ಬಂದು ನೆಲಸಿ ಇತ್ತೀಚಿಗೆ ಬಂದವರಂತೆ ಅವರೂ ಇಂಡಿಯದ ಜನರೊಂದಿಗೆ ಬೆರೆತುಹೋಗಿರಬಹುದು. ಸಿಂಧೂ ಕಣಿವೆಯ ನಾಗರಿಕತೆಯ ಪ್ರತಿನಿಧಿಗಳು ಪ್ರಾಯಶಃ ದ್ರಾವಿಡರೇ ಇರಬೇಕು ಮತ್ತು ಮೊದಲನೆಯ ಮಹಾಸಾಂಸ್ಕೃತಿಕ ಸಂಯೋಜನೆ, ಬೆಸುಗೆ ಈ ದ್ರಾವಿಡ ಆರ್ಯರ ಮಧ್ಯೆ ನಡೆದಿರಬೇಕು. ಈ ಸಂಯೋಜನೆ ಮತ್ತು ಒಕ್ಕೂಟದ ಫಲವಾಗಿ, ಎರಡೂ ನಾಗರಿಕತೆಗಳ ವೈಶಿಷ್ಟ್ಯಗಳನ್ನುಳ್ಳ ಇಂಡಿಯದ ಬುಡಕಟ್ಟುಗಳು ಮತ್ತು ಮೂಲಸಂಸ್ಕೃತಿ ಉತ್ಪನ್ನವಾಯಿತು. ಮುಂದಿನ ಕಾಲಗಳಲ್ಲಿ ಇರಾಣಿಗಳು, ಗ್ರೀಕರು, ಪಾರ್ಥಿಯನ್ನರು, ಬ್ಯಾಕ್ಟ್ರಿಯನರು, ಸಿಥಿಯನರು, ಹೂಣರು, ತುರ್ಕಿ ಜನರು (ಇಸ್ಲಾಂಗೆ ಮೊದಲು), ಪುರಾತನ ಕ್ರೈಸ್ತರು, ಯೆಹೂದಿಗಳು, ಜೊರೊಸ್ಟ್ರಿಯನರು ಮುಂತಾಗಿ ಎಷ್ಟೋ ಜನ ಬಂದರು. ಆದರೆ ಇವರು ಸ್ವಲ್ಪ ಅಲೆ ಎಬ್ಬಿಸಿ ತಣ್ಣಗಾಗಿ ಸ್ವಲ್ಪ ಕಾಲದಲ್ಲೆ ಭಾರತದ ಜನಕೋಟಿಯಲ್ಲಿ ಸೇರಿಹೋದರು. ಡಾಡ್‌ವೆಲ್ ಹೇಳುವಂತೆ "ಇಂಡಿಯ ಎಲ್ಲವನ್ನೂ ಆಪೋಶನ ತೆಗೆದುಕೊಳ್ಳುವ

ಒಂದು ಮಹಾಸಾಗರ. ಇಂಡಿಯದಲ್ಲಿ ಕಟ್ಟುನಿಟ್ಟಾದ ಜಾತಿಪದ್ಧತಿ ಮತ್ತು ಒಂದು ಬಗೆಯ ಬಹಿಷ್ಕಾರ ನೀತಿ ಕಂಡುಬಂದರೂ ಈ ರೀತಿ ವಿದೇಶೀಯರನ್ನು ಅವರ ನಾಗರಿಕತೆಯನ್ನು ಜೀರ್ಣಿಸಿಕೊಳ್ಳುವ ಅದ್ಭುತಶಕ್ತಿಯಿರುವದು ಅತ್ಯಾಶ್ಚರ್ಯಕರವಾಗಿದೆ. ಪ್ರಾಯಶಃ ಈ ಒಂದು ಶಕ್ತಿಯಿಂದಲೇ ತನ್ನ ಜೀವನಶಕ್ತಿಯನ್ನುಳಿಸಿಕೊಂಡು ಕಾಲಕಾಲಕ್ಕೆ ನವಶಕ್ತಿಯನ್ನು ಪಡೆದು ಪುಷ್ಟಿ ಪಡೆಯುತ್ತಿದ್ದಿತೆಂದು ಕಾಣುತ್ತದೆ. ಮುಸ್ಲಿಮರು ಬಂದಾಗಲೂ ಅವರಮೇಲೂ ಅಸಾಧ್ಯ ಪರಿಣಾಮವಾಯಿತು. ವಿನ್ಸೆಂಟ್ ಸ್ಮಿತ್ ಹೇಳುವಂತೆ "ಈ ವಿದೇಶೀಯರು (ಮುಸ್ಲಿಂ ತುರ್ಕಿ ಜನ) ಸಹ ತಮ್ಮ ಹಿಂದೆ ಬಂದ ಶಕರು ಮತ್ತು ಯೂ-ಚಿಗಳಂತೆ ಹಿಂದೂ ಧರ್ಮದ ಅದ್ಭುತ ಸಮೀಕರಣಶಕ್ತಿಗೆ ಒಳಗಾಗಿ ಕ್ರಮೇಣ ಹಿಂದೂಗಳಂತೆಯೇ ಆದರು" ಎಂದಿದಾನೆ.

## ೩. ಹಿಂದೂಧರ್ಮ ಎಂದರೇನು?

ಮೇಲಿನ ಅವತರಣಿಕೆಯಲ್ಲಿ ವಿನ್‌ಸೆಂಟ್ ಸ್ಮಿತ್ 'ಹಿಂದೂಧರ್ಮ' 'ಹಿಂದೂಗಳಂತಾದರು' ಎಂದಿದಾನೆ. ಭಾರತ ಸಂಸ್ಕೃತಿಯ ವಿಶಾಲ ದೃಷ್ಟಿಯಿಂದ ಅಲ್ಲದಿದ್ದರೆ ಈ ಪದಪ್ರಯೋಗಗಳು ಸರಿಯಲ್ಲವೆಂದು ನನ್ನ ಅಭಿಮತ. ಇಂದಿನ ಸಂಕುಚಿತ ಜಾತೀಯ ದೃಷ್ಟಿಯಲ್ಲಿ ಮೋಸಹೋಗಬಹುದು. 'ಹಿಂದೂ' ಎಂಬ ಶಬ್ದ ಪುರಾತನ ಸಾಹಿತ್ಯದಲ್ಲಿ ಎಲ್ಲಿಯೂ ಬಂದಿಲ್ಲ. ಎಂಟನೆಯ ಶತಮಾನದ ಒಂದು ತಂತ್ರ ಗ್ರಂಥದಲ್ಲಿ ಹಿಂದೂ ಎಂದರೆ ಒಂದು ಬುಡಕಟ್ಟಿನಜನ ಎಂದು ಹೇಳಿರುವಂತೆ ಕೇಳಿದ್ದೇನೆ. ಜಾತಿಯ ಪ್ರಶ್ನೆಯೇ ಅಲ್ಲಿ ಇಲ್ಲ. ಆದರೆ 'ಅವೆಸ್ತ'ದಲ್ಲಿ ಮತ್ತು ಪಾರ್ಸಿ ಸಾಹಿತ್ಯದಲ್ಲಿ ಅನೇಕ ಬಾರಿ ಬಂದಿರುವದರಿಂದ ಆ ಶಬ್ದ ತುಂಬ ಹಳೆಯದಿರಬೇಕು. ಪಶ್ಚಿಮ ಮತ್ತು ಮಧ್ಯ ಏಷ್ಯದ ಜನರು ಆಗ ಮತ್ತು ಸಾವಿರಾರು ವರ್ಷಗಳ ನಂತರ ಸಹ 'ಇಂಡಿಯ' ಶಬ್ದಕ್ಕೆ ಪ್ರತಿಯಾಗಿ ಸಿಂಧೂನದಿಯ ಈಚೆ ವಾಸಮಾಡುವ ಜನರಿಗೆ 'ಹಿಂದೂ' ಎಂದು ಕರೆಯುತ್ತಿದ್ದರು. ಅದು 'ಇಂಡಸ್' ನದಿಯ ಈಗಿನ ಮತ್ತು ಪ್ರಾಚೀನ ಭಾರತೀಯ ಹೆಸರಾದ 'ಸಿಂಧೂ' ಎಂಬ ಹೆಸರಿನಿಂದ ಉತ್ಪನ್ನವಾಗಿದೆ. ಈ 'ಸಿಂಧು' ಶಬ್ದದಿಂದಲೇ ಹಿಂದೂ, ಹಿಂದೂಸ್ಥಾನ್, ಇಂಡಾಸ್, ಇಂಡಿಯಾ ಪದಗಳು ಹುಟ್ಟಿದವು. ಏಳನೆಯ ಶತಮಾನದಲ್ಲಿ ಇಂಡಿಯಾದೇಶಕ್ಕೆ ಬಂದ ಚೀನಾ ಯಾತ್ರಿಕನಾದ ಇತ್ಸಿಂಗ್‌ನು ಉತ್ತರದ ಜನ ಎಂದರೆ ಮಧ್ಯ ಏಷ್ಯದ ಜನ ಇಂಡಿಯಕ್ಕೆ ಹಿಂದು (ಸಿನ್-ಟು) ಎಂದು ಕರೆಯುತ್ತಾರೆ. ಆದರೆ ಅದು ಬಳಕೆಯಲ್ಲಿರುವ ಹೆಸರಲ್ಲ. ಇಂಡಿಯಕ್ಕೆ ತಕ್ಕ ಹೆಸರೆಂದರೆ 'ಆರ್ಯದೇಶ' ಎಂದಿದಾನೆ. ಜಾತಿಯನ್ನು ಹೇಳಲು 'ಹಿಂದೂ' ಶಬ್ದ ಉಪಯೋಗಕ್ಕೆ ಬಂದುದು ಇತ್ತೀಚೆಗೆ.

ಭಾರತದಲ್ಲಿ ಮತವನ್ನು ಒಂದು ಸನಾತನ ಸಮಗ್ರ ಹೆಸರಿನಿಂದ ಆರ್ಯ ಧರ್ಮ ಎಂದು ಕರೆಯುತ್ತಿದ್ದರು. ಧರ್ಮ ಎನ್ನುವದು ಮತಕ್ಕಿಂತಲೂ ಹೆಚ್ಚು ಅರ್ಥಗರ್ಭಿತ ಶಬ್ದ. ಅದರ ಮೂಲಶಬ್ದದ ಅರ್ಥ ಧಾರಣ ಎಂದು. ಅದು ಒಂದು ವಸ್ತುವಿನ ಆಂತರಿಕ ರಚನೆ, ಆಂತರಿಕ ಜೀವನದ ನಿಯಮ. ನೀತಿ ನಿಯಮಗಳು, ನ್ಯಾಯಧರ್ಮ, ಮಾನವನ ಕರ್ತವ್ಯ ಮತ್ತು ಹೊರೆಗಳ ಸಮಗ್ರ ಭಾವನೆ. ಆರ್ಯಧರ್ಮ ಎಂದರೆ ಇಂಡಿಯದಲ್ಲಿ ಹುಟ್ಟಿದ ಎಲ್ಲ ಧರ್ಮಗಳ-ವೈದಿಕ ಮತ್ತು ಅವೈದಿಕ ಸಾರ. ಬೌದ್ಧರು, ಜೈನರು ಮತ್ತು ವೇದಮತಾವಲಂಬಿಗಳು ಎಲ್ಲರೂ ಆ ಶಬ್ದವನ್ನು ಉಪಯೋಗಿಸಿದರು. ಬುದ್ಧನು ತನ್ನ ನಿರ್ವಾಣ ಮಾರ್ಗವನ್ನು 'ಆರ್ಯಮಾರ್ಗ' ಎಂದು ಕರೆದು ಇರುತ್ತಾನೆ.

ಪೂರ್ವ ಕಾಲದಲ್ಲಿ ವೈದಿಕ ಧರ್ಮ ಎಂದರೆ ಮುಖ್ಯವಾಗಿ ವೇದಗಳನ್ನೇ ಮೂಲ ಮತ್ತು ಪ್ರಮಾಣವಾಗಿಟ್ಟುಕೊಂಡು ಹುಟ್ಟಿದ ಎಲ್ಲ ದರ್ಶನಗಳು, ನೀತಿಬೋಧೆಗಳು, ವಿಧಿಗಳು ಮತ್ತು ಸಂಪ್ರದಾಯಗಳು ಮಾತ್ರ ಎಂಬ ನಂಬಿಕೆಯೂ ಇತ್ತು. ಈ ರೀತಿ ವೇದಗಳನ್ನು ಆಧಾರವೆಂದು ನಂಬಿದವರೆಲ್ಲ ವೈದಿಕ ಧರ್ಮದವರು ಎಂದು ಕರೆಯಬಹುದು.

ಸನಾತನ ಧರ್ಮ ಎಂದರೆ ಪೂರ್ವಕಾಲದ ಧರ್ಮ ಎಂದು ಅರ್ಥ. ಇದು ಬೌದ್ಧಮತ, ಜೈನ ಮತಗಳನ್ನೊಳಗೊಂಡು ಎಲ್ಲ ಭಾರತೀಯ ಮತಗಳಿಗೂ ಅನ್ವಯಿಸುತ್ತದೆ. ಆದರೆ ಈಗ ಹಿಂದೂಗಳಲ್ಲಿ ಪೂರ್ವಾಚರಣೆಯಲ್ಲಿದ್ದೇವೆ ಎಂದು ನಂಬಿರುವ ಶಾಸ್ತ್ರನಿಷ್ಠ ಪಂಗಡಗಳಿಗೆ ಮಾತ್ರ ಅನ್ವಯಿಸುತ್ತದೆ.

ಬೌದ್ಧಮತ, ಜೈನಮತ ನಿಶ್ಚಯವಾಗಿಯೂ ಹಿಂದೂ ಮತಗಳಲ್ಲ; ವೈದಿಕ ಧರ್ಮವಂತೂ ಖಂಡಿತ ಅಲ್ಲ. ಆದರೂ ಅವು ಹುಟ್ಟಿದ್ದು ಇಂಡಿಯದಲ್ಲಿ. ಭಾರತದ ಜನಜೀವನ, ಸಂಸ್ಕೃತಿ ಮತ್ತು ದರ್ಶನಗಳ ಮುಖ್ಯ ಅಂಗಗಳಾಗಿವೆ. ಭಾರತದ ಯಾವ ಬೌದ್ಧ ಅಥವ ಜೈನರೇ ಆದರೂ ಹದಿನಾರಾಣೆ ಭಾರತೀಯ ಭಾವನೆ ಮತ್ತು ಸಂಸ್ಕೃತಿಯ ಶಿಶುಗಳು. ಆದರೂ ಅವರು ಇಬ್ಬರೂ ಹಿಂದೂ ಧರ್ಮಿಗಳಲ್ಲ. ಆದ್ದರಿಂದ ಭಾರತೀಯ ಸಂಸ್ಕೃತಿಯನ್ನು ಹಿಂದೂ ಸಂಸ್ಕೃತಿ ಎಂದು ಕರೆಯುವುದು ತಪ್ಪು. ಬಹು ಕಾಲದ ನಂತರ ಇಸ್ಲಾಂ ಧರ್ಮದ ಘರ್ಷಣೆಯಿಂದ ಈ ಸಂಸ್ಕೃತಿಯು ಬಹುಮಟ್ಟಿಗೆ ಮಾರ್ಪಾಟಾಯಿತು; ಆದರೂ ಮೂಲತಃ ಭಾರತೀಯ ಸಂಸ್ಕೃತಿಯಾಗಿಯೇ ಉಳಿದು ತನ್ನ ವೈಶಿಷ್ಟ್ಯವನ್ನುಳಿಸಿಕೊಂಡಿತು. ಈಗ ಪಾಶ್ಚಾತ್ಯ ಔದ್ಯೋಗಿಕ ನಾಗರಿಕತೆ ನೂರಾರು ವಿಧದಲ್ಲಿ ಹಿಂದೂ ಧರ್ಮದ ಮೇಲೆ ಮಹತ್ಪರಿಣಾಮ ಮಾಡುತ್ತಿದೆ. ಇದರ ಅಂತಿಮ ಪರಿಣಾಮ ಏನು ಎಂದು ಖಚಿತ ಹೇಳಲು ಯಾರಿಗೂ ಸಾಧ್ಯವಿಲ್ಲ.

ಹಿಂದೂಧರ್ಮ ಮತ ದೃಷ್ಟಿಯಿಂದ ಅಸ್ಪಷ್ಟ, ಅನಿರ್ದಿಷ್ಟ, ಬಹುಮುಖ; ಯಾರಿಗೆ ಏನುಬೇಕಾದರೂ ಆಗಿ ಕಾಣಬಹುದು. ಖಚಿತವಾಗಿ ವಿವರಿಸಲೂ ಸಾಧ್ಯವಿಲ್ಲ. ಸಾಮಾನ್ಯವಾಗಿ ಮತ ಎನ್ನುವ ಅರ್ಥದೃಷ್ಟಿಯಿಂದ ಅದನ್ನು ಒಂದು ಮತ ಎಂದು ಹೇಳುವುದೂ ಕಷ್ಟ. ಒಂದಕ್ಕೊಂದಕ್ಕೆ ವಿರೋಧವಿರುವ ಅನೇಕ ನಂಬಿಕೆಗಳು ಸಂಪ್ರದಾಯಗಳು ಅದರಲ್ಲಿ ಅಡಗಿವೆ. ಅವುಗಳಲ್ಲಿ ಕೆಲವು ಅತ್ಯುತ್ಕೃಷ್ಟ ಇನ್ನು ಕೆಲವು ಅತಿ ನಿಕೃಷ್ಟ. ಆದರೆ ಮುಖ್ಯ ತಿರುಳು ಮಾತ್ರ ತಾನೂ ಬಾಳಿ ಇತರರೂ ಬಾಳಲೆಂದು. ಮಹಾತ್ಮಾ ಗಾಂಧಿ ಅದನ್ನು ಈ ರೀತಿ ವರ್ಣಿಸಿದ್ದಾರೆ "ಹಿಂದೂ ಧರ್ಮವೆಂದರೆ ಅಹಿಂಸಾ ಮಾರ್ಗದಲ್ಲಿ ಸತ್ಯಶೋಧನೆ ಎಂದು ಹೇಳುತ್ತೇನೆ. ದೇವರಲ್ಲಿ ನಂಬಿಕೆಯೇ ಇಲ್ಲದಿರುವವನೂ ಹಿಂದೂ ಎಂದು ಕರೆದುಕೊಳ್ಳಬಹುದು. ಧರ್ಮ ಎಂದರೆ ಅವಿಚ್ಛಿನ್ನ ಸತ್ಯಾನ್ವೇಷಣೆ. ಹಿಂದೂ ಧರ್ಮ ಸತ್ಯ ಧರ್ಮ. ಸತ್ಯವೇ ದೇವರು. ದೇವರಿಲ್ಲವೆಂದು ಹೇಳುವವರನ್ನು ನಮ್ಮಲ್ಲಿ ನೋಡಿದ್ದೇವೆ. ಆದರೆ ಸತ್ಯದ ನಿರಾಕರಣೆಯನ್ನು ನಾವು ಕಂಡಿಲ್ಲ." ಹಿಂದೂ ಧರ್ಮವೆಂದರೆ ಸತ್ಯ ಮತ್ತು ಅಹಿಂಸೆ ಎಂದು ಗಾಂಧಿಯ ಮತ. ಆದರೆ ಅನೇಕ ಶ್ರೇಷ್ಠ ವಿದ್ವಾಂಸರು ಗಾಂಧಿಜಿ ಹೇಳುವ ಅಹಿಂಸೆ ಹಿಂದೂ ಧರ್ಮಕ್ಕೆ ಮುಖ್ಯವಲ್ಲ ಎಂದು ಹೇಳುತ್ತಾರೆ. ಅಂದರೆ ಹಿಂದೂ ಧರ್ಮದ ಹೆಗ್ಗುರುತು ಸತ್ಯ ಎಂಬುದೊಂದೇ. ಇದು ಖಂಡಿತವಾಗಿಯೂ ಲಕ್ಷಣನಿರೂಪಣೆಯಲ್ಲ.

ಆದ್ದರಿಂದ ಭಾರತೀಯ ಸಂಸ್ಕೃತಿಗೆ ಅಥವ ಅದರ ಮೂಲ ರೂಪಕ್ಕೆ ಸಹ ಹಿಂದೂ ಅಥವ ಹಿಂದೂ ಧರ್ಮ ಎಂದು ಕರೆಯುವುದು ತಪ್ಪು ಮತ್ತು ಉಚಿತವೂ ಅಲ್ಲ. ಪುರಾತನ ಗ್ರಂಥಗಳಲ್ಲಿ ಕಾಣುವ ವಿವಿಧ ಭಾವನೆಗಳೇ ಆ ಸಂಸ್ಕೃತಿಯ ಮುಖ್ಯ ಸಂದೇಶವಾದರೂ ಅವನ್ನು ಹಿಂದೂ ಎನ್ನುವುದು ಸರಿಯಲ್ಲ. ಹಿಂದೂ, ಹಿಂದೂ ಧರ್ಮ ಎಂಬ ಶಬ್ದಗಳನ್ನು ಈಗಿನ ಕಾಲದಲ್ಲಿ ಆ ಅರ್ಥದಲ್ಲಿ ಉಪಯೋಗಿಸುವುದಂತೂ ಇನ್ನೂ ತಪ್ಪು. ಎಲ್ಲಿಯವರೆಗೆ ಸನಾತನಧರ್ಮ ಮತ್ತು ದರ್ಶನಗಳು ಜೀವನದ ಮುಖ್ಯ ಮಾರ್ಗ ಸೂಚಿಗಳಾಗಿ, ಪ್ರಪಂಚವನ್ನೆದುರಿಸಲು ಒಂದು ದೃಷ್ಟಿಪಥವಾಗಿತ್ತು, ಅಲ್ಲಿಯವರೆಗೆ ಬಹುಮಟ್ಟಿಗೆ ಹಿಂದೂಧರ್ಮ ಮತ್ತು ಭಾರತೀಯ ಸಂಸ್ಕೃತಿ ಒಂದೇ ಎನ್ನಬಹುದು. ಆದರೆ ಅನೇಕ ರೀತಿಯ ಕಟ್ಟುನಿಟ್ಟುಗಳ, ನಿಯಮಗಳ ಒಂದು ವಿಧಿ ಬದ್ಧ ಮತ ಎಂದಿನಿಂದ ಆರಂಭವಾಯಿತೋ, ಅಂದಿನಿಂದ ಹಿಂದೂಧರ್ಮ ಆ ಸಮಷ್ಟಿ ಸಂಸ್ಕೃತಿಯನ್ನು ಮೀರಿ ಒಂದು ವಿಧದಲ್ಲಿ ಉತ್ತಮವಾಯಿತು. ಇನ್ನೊಂದು ರೀತಿಯಿಂದ ಸಂಕುಚಿತವಾಯಿತು. ಒಬ್ಬ ಕ್ರೈಸ್ತ ಅಥವ ಮುಸ್ಲಿಮನು ಭಾರತೀಯ ಜೀವನ ಮತ್ತು ಸಂಸ್ಕೃತಿಯನ್ನು ಅವಲಂಬಿಸಿದರೂ ಧರ್ಮನಿಷ್ಠ ಕ್ರೈಸ್ತನಾಗಿ ಅಥವ ಮುಸ್ಲಿಂ ಆಗಿ ಇರಬಹುದಿತ್ತು. ಆಗ ಭಾರತೀಯನಾಗಿಬಿಡುತ್ತಿದ್ದ. ತನ್ನ ಧರ್ಮದಲ್ಲಿದ್ದುಕೊಂಡು ಭಾರತೀಯನಾಗುತ್ತಿದ್ದ.

ದೇಶ, ಸಂಸ್ಕೃತಿ ಮತ್ತು ಇತಿಹಾಸ ಪರಂಪರೆಯ ದೃಷ್ಟಿಯಿಂದ ಇಂಡಿಯನ್ ಎಂಬ ಶಬ್ದಕ್ಕೆ ಸರಿಯಾದ ಅರ್ಥ ಹಿಂದೂಸ್ಥಾನದ ಸಂಕೇತ ಶಬ್ದವಾದ 'ಹಿಂದ್' ನಿಂದ ಬಂದ ಹಿಂದಿ ಎಂದು.

ಈಗಲೂ ಇಂಡಿಯಕ್ಕೆ ಹಿಂದ್ ಎಂದು ಕರೆಯುತ್ತಾರೆ. ಪಶ್ಚಿಮ ಏಷ್ಯದ ದೇಶಗಳಲ್ಲಿ, ಇರಾಣ, ತುರ್ಕಿ, ಇರಾಕ್, ಅಫ್ಘಾನಿಸ್ಥಾನ, ಈಜಿಪ್ಟ್ ಮುಂತಾದ ದೇಶಗಳಲ್ಲಿ ಈಗಲೂ ಹಿಂದ್ ಎಂದೇ ಕರೆಯುತ್ತಾರೆ. ಪ್ರತಿಯೊಬ್ಬ ಭಾರತೀಯನನ್ನೂ 'ಹಿಂದಿ' ಎಂದೇ ಕರೆಯುತ್ತಾರೆ. 'ಹಿಂದಿ'ಗೆ ಯಾವ ಮತದ ಸಂಬಂಧವೂ ಇಲ್ಲ. ಮುಸ್ಲಿಂ ಆಗಲಿ, ಕ್ರಿಶ್ಚಿಯನ್ ಆಗಲಿ, ಹಿಂದೂ ಆಗಲಿ ಎಲ್ಲ ಭಾರತೀಯರೂ 'ಹಿಂದಿ'ಗಳು. ಭಾರತೀಯರನ್ನೆಲ್ಲ ಹಿಂದೂಗಳು ಎಂದು ಅಮೆರಿಕನ್ನರು ಕರೆಯುವುದು ದೊಡ್ಡ ತಪ್ಪಲ್ಲ. ಅದರ ಬದಲು 'ಹಿಂದಿ' ಎಂದು ಕರೆದರೆ ಸರಿಹೋಗುತ್ತದೆ. ಆದರೆ ಸಂಸ್ಕೃತ ಭಾಷೆಯ ದೇವನಾಗರಿ ಲಿಪಿ ದೃಷ್ಟಿಯಿಂದ 'ಹಿಂದಿ' ಎಂದರೆ ಒಂದು ಲಿಪಿ ಎಂಬ ಭಾವನೆ ಬಂದಿರುವುದು ದುರದೃಷ್ಟ. ಆದ್ದರಿಂದ 'ಹಿಂದಿ' ಎಂಬ ಶಬ್ದವನ್ನು ಅದರ ಸಹಜ ಅರ್ಥದಲ್ಲಿ, ವಿಶಾಲಭಾವನೆಯಲ್ಲಿ ಉಪಯೋಗಿಸಲು ಸಾಧ್ಯವಿಲ್ಲ. ಪ್ರಾಯಶಃ ಇಂದಿನ ವಾಗ್ಯುದ್ಧಗಳು ತಣ್ಣಗಾದ ಮೇಲೆ 'ಹಿಂದಿ'ಯನ್ನು ಅದರ ನಿಜವಾದ ನ್ಯಾಯವಾದ ಅರ್ಥದಲ್ಲಿ ಉಪಯೋಗಿಸಲು ಸಾಧ್ಯವಾಗಬಹುದು. ಈಗ 'ಇಂಡಿಯನ್' ಎಂಬುದರ ಬದಲು ಹಿಂದೂಸ್ತಾನಿ ಎಂಬ ಶಬ್ದ ಬಳಕೆಯಲ್ಲಿದೆ. ಅದೂ 'ಹಿಂದೂಸ್ಥಾನ'ದಿಂದಲೇ ಬಂದಿರುವುದು. ಆದರೆ ಅದನ್ನು ಬಾಯಿತುಂಬ ಹೇಳಬೇಕಾಗುತ್ತದೆ. ಅಲ್ಲದೆ ಅದಕ್ಕೆ 'ಹಿಂದಿ'ಯಂತೆ ಯಾವ ಐತಿಹಾಸಿಕ ಅಥವ ಸಾಂಸ್ಕೃತಿಕ ಸಂಬಂಧವೂ ಇಲ್ಲ. ಪುರಾತನ ಕಾಲದ ಭಾರತೀಯ ಸಂಸ್ಕೃತಿಗೆ 'ಹಿಂದೂಸ್ಥಾನಿ' ಎಂದು ಹೇಳುವದು ನಿಜವಾಗಿಯೂ ಹಾಸ್ಯಾಸ್ಪದ.

ನಮ್ಮ ಸಾಂಸ್ಕೃತಿಕ ಸಂಪ್ರದಾಯವನ್ನು ಇಂಡಿಯನ್, ಹಿಂದಿ, ಹಿಂದೂಸ್ಥಾನಿ, ಅಥವ ಬೇರೆ ಯಾವ ಹೆಸರಿನಿಂದಲೇ ಕರೆಯಲಿ, ಮುಖ್ಯವಾಗಿ ಭಾರತೀಯ ದರ್ಶನ ದೃಷ್ಟಿಯಿಂದ ಉದ್ಭವಿಸಿದ ಸಂಯೋಜಕ ಅಂತಶ್ಶಕ್ತಿಯೇ ಭಾರತೀಯ ಸಂಸ್ಕೃತಿಯ ಮತ್ತು ಜನತೆಯ ಪ್ರಗತಿಗೆ ಮುಖ ಕಾರಣವಾಗಿತ್ತು. ಪರದೇಶದವರಿಂದ ಬಂದ ಪ್ರತಿ ಒಂದು ದಾಳಿಯಿಂದಲೂ ಈ ಸಂಸ್ಕೃತಿಯ್ಯ ಸತ್ವಪರೀಕ್ಷೆಯಾಗುತ್ತಿತ್ತು. ಅಂತರ್ಗತ ಮಾಡಿಕೊಳ್ಳುವ ಒಂದು ಹೊಸ ಸಂಶೋಧನಾ ಶಕ್ತಿಯಿಂದ ಆ ದಾಳಿಯನ್ನು ಎದುರಿಸಿ ಜೀರ್ಣಿಸಿಕೊಳ್ಳುತ್ತಿತ್ತು. ಇದರಿಂದ ಒಂದು ನವಚೈತನ್ಯವೂ ದೊರೆಯುತ್ತಿತ್ತು. ಸಾಂಸ್ಕೃತಿಕ ಹಿನ್ನೆಲೆ ಮತ್ತು ಮೂಲ ತಳಹದಿ ಒಂದೆ ಇರುತ್ತಿದ್ದರೂ ಸಂಸ್ಕೃತಿ ಸಂಪರ್ಕದ ಹೊಸ ಹೂಗಳು ಅರಳುತ್ತಿದ್ದವು. ಸಿ. ಇ ಎಮ್. ಜೋಡ್—"ಕಾರಣವೇನೆ ಇರಲಿ, ಭಿನ್ನತೆಯಲ್ಲಿ ಐಕ್ಯತೆ ಅನೇಕ ಭಿನ್ನಭಾವನೆಗಳಲ್ಲಿ ಮತ್ತು ಜನಗಳಲ್ಲಿ ಒಂದು ಸಮರಸತೆಯನ್ನುಂಟುಮಾಡುವ ಶಕ್ತಿ ಮತ್ತು ಇಚ್ಛೆ ಭಾರತೀಯರ ವೈಶಿಷ್ಟ್ಯ. ಈ ವೈಶಿಷ್ಟ್ಯವೇ ಭಾರತವು ಮಾನವ ಕುಲಕ್ಕೆ ಕೊಟ್ಟ ಮಹಾಪ್ರಸಾದ" ಎಂದಿದಾನೆ.

### ೪. ಅತಿ ಪ್ರಾಚೀನ ಸಾಕ್ಷ್ಯಗಳು : ವೇದ ಮತ್ತು ಪುರಾಣಗಳು

ಸಿಂಧೂನದಿಯ ನಾಗರಿಕತೆಯ ಭೂಶೋಧನೆಗೆ ಮೊದಲು ವೇದಗಳೇ ಭಾರತೀಯ ಸಂಸ್ಕೃತಿಯ ಅತಿ ಪ್ರಾಚೀನ ಸಾಕ್ಷ್ಯಗಳೆಂಬ ನಂಬಿಕೆ ಇತ್ತು. ವೇದಗಳ ಕಾಲನಿರ್ಣಯದಲ್ಲಿ ಯೂರೋಪಿನ ವಿದ್ವಾಂಸರುಗಳು ಅವು ಇತ್ತೀಚಿನವೆಂದೂ, ಭಾರತೀಯ ವಿದ್ವಾಂಸರು ಬಹಳ ಹಿಂದಿನವೆಂದೂ ಹೇಳುತ್ತ ಬಹಳ ಜಿಜ್ಞಾಸೆ ನಡೆಯುತ್ತಿತ್ತು. ಅದಷ್ಟು ಹಿಂದೆ ಹೋಗಿ ನಮ್ಮ ಪುರಾತನ ಸಂಸ್ಕೃತಿಯ ಪ್ರಾಮುಖ್ಯತೆ ಹೆಚ್ಚಿಸಬೇಕೆಂಬ ಭಾರತೀಯರ ಆಶೆ ವಿಚಿತ್ರವಾಗಿದೆ. ಪ್ರೊಫೆಸರ್ ವಿಂಟರ್ ನಿಟ್ಸ್ ವೇದಗಳ ಕಾಲ ಕ್ರಿಸ್ತಪೂರ್ವ ೨೦೦೦ ಅಥವ ೨೫೦೦೦ ಎಂದಿದ್ದಾನೆ. ಇದು ಮೊಹೆಂಜೊದಾರೊ ಯುಗದ ಸಮೀಪಕ್ಕೆ ಬರುತ್ತದೆ.

ಸಾಮಾನ್ಯವಾಗಿ ಋಗ್ವೇದದ ಋಕ್ಕುಗಳ ಕಾಲ ಕ್ರಿಸ್ತಪೂರ್ವ ೧೫೦೦ ಎಂದು ಈಗ ಎಲ್ಲರೂ ಒಪ್ಪುತ್ತಾರೆ. ಆದರೆ ಮೊಹೆಂಜೊದಾರೊ ಭೂಶೋಧನೆಯಾದಮೇಲೆ ವೇದಗಳು ಇನ್ನೂ ಹಿಂದಿನವು ಎಂದು ಹೇಳುವ ಚಟ ಕೆಲವರಿಗೆ ಹಿಡಿದಿದೆ. ಕಾಲ ಯಾವುದೇ ಇರಲಿ ಈ ಸಾಹಿತ್ಯ ಗ್ರೀಸ್ ಅಥವ

ಇಸ್ರೇಲ್ ಸಾಹಿತ್ಯಗಳಿಗಿಂತ ಮುಂಚಿನದು. ನಮಗೆ ಇದುವರೆಗೆ ದೊರೆತಿರುವ ಮಾನವನ ಮನೋಭಾವನೆಗಳ ಮೊದಲ ಸಾಕ್ಷ್ಯ ಎನ್ನುವುದರಲ್ಲಿ ಯಾವ ಸಂದೇಹವೂ ಇಲ್ಲ. "ಆರ್ಯ ಮನುಜನ ಮೊದಲವಾಣಿ" ಎಂದಿದ್ದಾನೆ ಮ್ಯಾಕ್ಸ್‌ಮುಲ್ಲರ್.

ಸಂಪತ್ಸಮೃದ್ಧ ಭಾರತದಲ್ಲಿ ಆರ್ಯನು ವಲಸೆ ಬಂದು ನೆಲಸಿದಾಗ ಹಾಡಿದ ಗೀತಗಳೇ ವೇದಗಳು. ಮೂಲ ಬುಡಕಟ್ಟು ಒಂದೇ ಇದ್ದು ಇರಾಣದಲ್ಲಿ ಅವೆಸ್ತ ಆಗಿದ್ದದ್ದು ಭರತಭೂಮಿಯಲ್ಲಿ ವಿಸ್ತಾರಗೊಂಡು ವೇದಗಳಾದುವು. ವೇದಗಳ ಭಾಷೆಗೂ, ಅವೆಸ್ತ ಭಾಷೆಗೂ ಹೆಚ್ಚು ಸಾಮ್ಯವಿದೆ. ಪುರಾಣಗಳ ಸಂಸ್ಕೃತ ಭಾಷೆಗಿಂತ ಅವೆಸ್ತ ಭಾಷೆಗೂ ವೇದಭಾಷೆಗೂ ಸಮೀಪ ಬಾಂಧವ್ಯವಿದೆ.

ಮೂಲ ಧರ್ಮಗ್ರಂಥಗಳು ಅಪೌರುಷೇಯ ಎಂದು ಎಲ್ಲ ಧರ್ಮಿಗಳು ನಂಬಿರುವಾಗ ವಿವಿಧ ಧರ್ಮಗ್ರಂಥಗಳನ್ನು ಅವಲೋಕಿಸುವುದೆಂತು? ವಿಭಜನೆ ಮಾಡಿ, ವಿಮರ್ಶೆಮಾಡಿ, ಅದೂ ಒಂದು ಮಾನವ ಸ್ವಭಾವ ವಿವರಣೆ ಎಂದು ನೋಡುವುದೆಂದರೆ ಧರ್ಮಭೀರುಗಳ ಕೋಪಾನಲಕ್ಕೆ ತುತ್ತಾಗಬೇಕು. ಆದರೆ ವಿಧಿಯಿಲ್ಲ.

ಧರ್ಮ ಗ್ರಂಥಗಳ ಅಭ್ಯಾಸ ನನಗೆ ರುಚಿಸುವುದಿಲ್ಲ. ತಮ್ಮ ದೃಷ್ಟಿಯ ನೇರಕ್ಕೆ ನೋಡುವ ಮಾರ್ಗ ನನಗೆ ಸರಿತೋರುವುದಿಲ್ಲ. ಧರ್ಮಾಚರಣೆಯ ಬಾಹ್ಯಾಧಾರಗಳಿಂದ ಮೂಲಕ್ಕೆ ಹೋಗಲು ಪ್ರೋತ್ಸಾಹ ದೊರೆಯಲಿಲ್ಲ. ಆದರೂ ತಿಳಿಯದೆ ಇರುವುದು ಒಂದು ಗುಣವಲ್ಲ, ದೋಷ. ಅನೇಕವೇಳೆ ದೊಡ್ಡ ಲೋಪ. ಆದ್ದರಿಂದ ಈ ಗ್ರಂಥಗಳ ಕಡೆ ಮನಸ್ಸು ಓಡುತ್ತದೆ. ಕೆಲವಂತೂ ಮಾನವ ಕೋಟಿಯಮೇಲೆ ಮಹತ್ಪರಿಣಾಮ ಮಾಡಿದೆ; ಅಷ್ಟು ಪರಿಣಾಮಕಾರಿಯಾಗಿರಬೇಕಾದರೆ ಅದರಲ್ಲಿ ಏನೋ ಒಂದು ಆತ್ಮಶಕ್ತಿ, ಆತ್ಮಸತ್ವ, ಜೀವಂತ ಶಕ್ತಿ ಮೂಲ ಇರಲೇಬೇಕು. ಅವುಗಳ ಬಹುಭಾಗ ಓದಲು ತುಂಬ ಕಷ್ಟವಾಯಿತು. ಎಷ್ಟೇ ಪ್ರಯತ್ನಪಟ್ಟರೂ ಆಸಕ್ತಿಯೇ ಹುಟ್ಟುತ್ತಿರಲಿಲ್ಲ. ಆದರೆ ಕೆಲವು ಭಾಗಗಳ ಅದ್ಭುತ ಸೌಂದರ್ಯದಿಂದ ಮುಗ್ಧನಾದೆ. ಯಾವುದೋ ಒಂದುವಾಕ್ಯ, ಶಬ್ದ ಸಮುಚ್ಚಯ ಮಿಂಚಿನ ಹೊಳೆಯಂತೆ ನನ್ನ ಮನಸ್ಸಿನಲ್ಲಿ ಸುಳಿದು, ನಾಟಿ, ಆಗ ನಿಜವಾದ ಮಹತ್ತಿನ ಸಾಮೀಪ್ಯದ ಸ್ವಾನುಭವವಾಗುತ್ತಿತ್ತು. ಬುದ್ಧ ಅಥವ ಕ್ರಿಸ್ತನ ಕೆಲವು ಮಾತುಗಳಲ್ಲಿ ಒಂದು ಅಪೂರ್ವವಾದ ಅರ್ಥ ಹೊಳೆದು ಸಾವಿರಾರು ವರ್ಷಗಳ ಕೆಳಗೆ ನುಡಿದಾಗ ಆ ಮಾತುಗಳು ಎಷ್ಟು ಸಮಂಜಸವೋ ಈಗಲೂ ಅಷ್ಟೇ ಸಮಂಜಸವೆಂದು ಸ್ಪಷ್ಟಕಾಣುತ್ತಿತ್ತು. ಕಾಲ ದೇಶಾತೀತವಾದ ಒಂದು ನಿತ್ಯತೆ, ಅಪ್ರತಿಹತ ಸತ್ಯ ಕಾಣುತ್ತಿತ್ತು. ಸಾಕ್ರಟೀಸನ ವಿಷಯ, ಚೀನಿ ದಾರ್ಶನಿಕರ ವಿಷಯ, ಉಪನಿಷತ್ತುಗಳು ಅಥವ ಭಗವದ್ಗೀತೆಯನ್ನು ಓದಿಗಾಗ ಈ ರೀತಿ ಅನುಭವವಾಗುತ್ತಿತ್ತು. ತತ್ವಶಾಸ್ತ್ರದಲ್ಲಾಗಲಿ, ಯಜ್ಞಯಾಗಾದಿ ವಿಧಿ ವಿವರಗಳಲ್ಲಾಗಲಿ, ನನ್ನೆದುರಿನ ಸಮಸ್ಯೆಗಳಿಗೆ ಅಪ್ರಕೃತವಾದ ವಿಷಯುಗಳಲ್ಲಿ ಆಗಲಿ ನನಗೆ ಯಾವ ಆಸಕ್ತಿಯೂ ಇರಲಿಲ್ಲ. ಪ್ರಾಯಶಃ ನಾನು ಓದಿದ ಅನೇಕ ಗ್ರಂಥಗಳ ಒಳ ಅರ್ಥ ನನಗೆ ತಿಳಿಯದೆ ಹೋಗಿದ್ದರೂ ಇರಬಹುದು. ಕೆಲವುಬಾರಿ ಎರಡನೆಯ ಸಲ ಓದಿದಾಗ ಹೆಚ್ಚು ಅರ್ಥವಾಗುತ್ತಿತ್ತು. ಕೆಲವು ಕ್ಲಿಷ್ಟ ಭಾಗಗಳನ್ನು ಅರ್ಥಮಾಡಿಕೊಳ್ಳಲು ಯಾವ ಪ್ರಯತ್ನವನ್ನೂ ಮಾಡಲಿಲ್ಲ. ನನಗೆ ಪ್ರಾಮುಖ್ಯ ತೋರದ ವಿಷಯಗಳನ್ನು ಬಿಟ್ಟುಬಿಡುತ್ತಿದ್ದೆ. ಉದ್ದನೆಯ ಟೀಕೆಗಳೂ, ಅನುಬಂಧಗಳೂ ಬೇಕಿರಲಿಲ್ಲ. ಚರ್ಚೆಮಾಡದೆ, ಅನುಮಾನಪಡದೆ, ಅಲ್ಲಿರುವುದೆಲ್ಲ ಸಂಪೂರ್ಣ ಸತ್ಯ, ಅದೊಂದು ಪವಿತ್ರಗ್ರಂಥ ಎಂದು ನಾನು ಯಾವ ಗ್ರಂಥವನ್ನೂ ಓದಲಿಲ್ಲ. ಆ ರೀತಿ ಓದಲು ಆರಂಭಿಸಿದೊಡನೆ ಅದು ನನ್ನ ಮನಸ್ಸಿಗೆ ಎಳ್ಳಷ್ಟೂ ಹಿಡಿಯುತ್ತಿರಲಿಲ್ಲ. ಗ್ರಂಥಕರ್ತರು ಪ್ರಭಾವಶಾಲಿಗಳೂ, ದೂರದರ್ಶಿಗಳೂ ಆದ ಸಾಮಾನ್ಯ ಮಾನವರು. ಅವತಾರ ಪುರುಷರಲ್ಲ. ದೇವಾಂಶ ಪುರುಷರೂ ಅಲ್ಲ. ಮತ್ತು ನನಗೆ ನಿಶ್ಚಿತ ಜ್ಞಾನವಿಲ್ಲದವರಾದರೂ ನಮ್ಮಂತೆಯೇ ಹುಟ್ಟುಸಾವಿಗೆ ಒಳಗಾದವರು ಎಂದು ಓದಲು ಆರಂಭಿಸಿದಾಗ ಮಾತ್ರ ಸಹೃದಯನಾಗಿ, ತೆರೆದ ಮನಸ್ಸಿನಿಂದ ಓದಲು ನನಗೆ ಸಾಧ್ಯವಾಗುತ್ತಿತ್ತು.

ನನ್ನ ದೃಷ್ಟಿಯಲ್ಲಿ ದೇವಾಂಶ ಸಂಭೂತ ಅಥವ ಅತಿಮಾನುಷ ವ್ಯಕ್ತಿಯಾಗಿ ಇರದೆ ಸಾಮಾನ್ಯ

ಮನುಷ್ಯನಾಗಿದ್ದು ತನ್ನ ಮಾನಸಿಕ ಆಧ್ಯಾತ್ಮಿಕ ಸಾಧನೆಯಿಂದ ಮಹೋನ್ನತಿಯ ಶಿಖರವನ್ನು ಮುಟ್ಟಿ, ಇತರರನ್ನೂ ಮೇಲಕ್ಕೆತ್ತಲು ಮಾಡಿದ ಪ್ರಯತ್ನವೇ ಒಂದು ಮಹತ್ಕಾರ್ಯ. ಕೆಲವು ಧರ್ಮ ಸಂಸ್ಥಾಪಕರು ಅಸಾಧಾರಣ ವ್ಯಕ್ತಿಗಳು ಆದರೆ ಮಾನವ ವ್ಯಕ್ತಿಗಳಲ್ಲ ಎಂದೊಡನೆ ನನ್ನ ಗೌರವವೆಲ್ಲ ಮಾಯವಾಗುತ್ತದೆ. ನನ್ನ ಮನಸ್ಸಿನಮೇಲೆ ಪರಿಣಾಮ ಮಾಡಿರುವುದು ಮತ್ತು ನನಗೆ ಆಶಾದಾಯಕ ವಾಗಿ ಕಾಣುವುದು ಮಾನವನ ಮಾನಸಿಕ ಮತ್ತು ಆಧ್ಯಾತ್ಮಿಕ ಬೆಳವಣಿಗೆ; ಸಂದೇಶ ಸಾರಲು ಬಂದದೂತನ ಕಾರ್ಯವಲ್ಲ.

ಪುರಾಣದ ಪ್ರಭಾವವೂ ನನ್ನಮೇಲೆ ಇದೇ ರೀತಿ. ಈ ಕತೆಗಳ ಘಟನೆಗಳನ್ನೆಲ್ಲ ಜನ ನಂಬು ತ್ತಿರುವುದು ಮೂಢತನ, ನಾಚಿಕೆಗೇಡು. ಆ ನಂಬಿಕೆ ಮಾಯವಾಯಿತೆಂದರೆ ಒಂದು ಹೊಸ ಬೆಳಕು, ನೂತನ ಸೌಂದರ್ಯ, ಭಾವನಾಸಂಪತ್ತಿನ ಅದ್ಭುತ ವಿಕಸನ, ಮಾನವ ಸಹಜ ನೀತಿ ಪಾಠಗಳು ಗೋಚರವಾಗುತ್ತವೆ. ಗ್ರೀಕ್ ದೇವರು ಮತ್ತು ದೇವತೆಗಳನ್ನು ಈಗ ಯಾರೂ ನಂಬುವುದಿಲ್ಲ. ಆದ್ದರಿಂದ ಯಾವ ಕಷ್ಟವೂ ಇಲ್ಲದೆ ಅವುಗಳನ್ನು ಮೆಚ್ಚಿ ನಮ್ಮ ಮನಶ್ಶಕ್ತಿಯನ್ನು ಬೆಳಸಬಹುದು. ಆದರೆ ಅವುಗಳನ್ನು ದೇವರೆಂದು ನಂಬಿದರೆ ಎಂತಹ ಹೊರೆ. ಆ ನಂಬಿಕೆಯ ಹೊರೆಯಲ್ಲಿಯೇ ಅವುಗಳ ಸೌಂದರ್ಯವೂ ಅಳಿಸಿಹೋಗುತ್ತದೆ. ನಮ್ಮ ಭಾರತೀಯ ಪುರಾಣಗಳು ಸಮೃದ್ಧಿಯಲ್ಲಿ, ವೈಶಾಲ್ಯದಲ್ಲಿ, ಸೌಂದಯದಲ್ಲಿ, ಅರ್ಥವಿವರಣೆಯಲ್ಲಿ ಇನ್ನೂ ಹೆಚ್ಚು ಪರಿಪುಷ್ಟ. ಈ ಉಜ್ವಲ ಕನಸು ಗಳಿಗೆ ಸುಂದರ ಭಾವನೆಗಳಿಗೆ ರೂಪುಗೊಟ್ಟ ಸ್ತ್ರೀಪುರುಷರು ಎಂತಹ ಮಹದ್ವ್ಯಕ್ತಿಗಳು; ಈ ಯೋಚನೆಗಳನ್ನು, ಭಾವನೆಗಳನ್ನು ಯಾವ ಸುವರ್ಣಖನಿಯಿಂದ ಅಗೆದು ತೆಗೆದರು ಎಂದು ಆಶ್ಚರ್ಯ ಚಕಿತನಾಗಿದ್ದೇನೆ.

ಧರ್ಮಗ್ರಂಥಗಳು ಮಾನವ ಮನೋಜನ್ಯ ಎಂದಾಗ ಇವುಗಳನ್ನು ಬರೆದ ಕಾಲ, ಅವು ಬೆಳೆದ ಸನ್ನಿವೇಶ ಮತ್ತು ಮಾನಸಿಕ ದಶೆ, ಮತ್ತು ನಮಗೂ ಅವುಗಳಿಗೂ ಮಧ್ಯೆ ಇರುವ ಕಾಲ, ಭಾವನೆ, ಮತ್ತು ಅನುಭವಗಳ ಅಂತರಗಳನ್ನು ಜ್ಞಾಪಕದಲ್ಲಿಟ್ಟಿರಬೇಕಾಗುತ್ತೆ. ಮೇಲೆ ಹೆಪ್ಪುಗಟ್ಟಿರುವ ಮತಸಂಪ್ರದಾಯಗಳು, ವಿಧಿನಿರ್ಬಂಧಗಳ ಕಟ್ಟುಗಳನ್ನು ಒಡೆದು ಯಾವ ಸಾಮಾಜಿಕ ಹಿನ್ನೆಲೆಯಲ್ಲಿ ಬೆಳೆಯಿತು. ಎನ್ನುವುದನ್ನು ಜ್ಞಾಪಕದಲ್ಲಿಡಬೇಕಾಗುತ್ತದೆ. ಮಾನವ ಜೀವನದ ಅನೇಕ ಸಮಸ್ಯೆ ಗಳಲ್ಲಿ ಒಂದು ಅಚಲವಾದ ನಿತ್ಯತೆ, ಶಾಶ್ವತತೆಯ ಸ್ಪರ್ಶವಿದೆ; ಆದ್ದರಿಂದ ಈ ಪುರಾತನ ಗ್ರಂಥಗಳಲ್ಲಿ ಒಂದು ಅಚಲವಾದ ಆಸಕ್ತಿ ಇದೆ. ಆದರೆ ಆ ಕಾಲಕ್ಕೆ ಸಂಬಂಧಿಸಿದ ಅನೇಕ ಇತರ ಸಮಸ್ಯೆಗಳೂ ಇವೆ; ಈಗ ನಮಗೆ ಅವುಗಳಿಂದ ಯಾವ ಉಪಯೋಗವೂ ಇಲ್ಲ.

### ೪. ವೇದಗಳು

ಹಿಂದೂಗಳಲ್ಲಿ ಅನೇಕರು ವೇದಗಳನ್ನು ಅಪೌರುಷೇಯ ಎಂದು ನಂಬಿದ್ದಾರೆ. ಇದೊಂದು ನಮ್ಮ ದುರದೃಷ್ಟ. ಇದರಿಂದ ಅವುಗಳ ನಿಜವಾದ ಅರ್ಥವೇ ಮಾಯವಾಗುತ್ತದೆ. ಮನಸ್ಸಿನ ಆಲೋಚನೆಗಳ ಮೊದಲಘಟ್ಟದಲ್ಲಿ ಮಾನವನ ಮಾನಸಿಕ ಬೆಳವಣಿಗೆ ಹೇಗೆ ಆಯಿತು ಎಂಬುದೇ ಮರೆಯಾಗುತ್ತದೆ. ಎಂತಹ ಅದ್ಭುತ ಮನಸ್ಸು ಅದು! ವಿದ್ = ತಿಳಿ ಎಂಬ ಧಾತುವಿನಿಂದ ಹೊರಟ ವೇದಗಳಲ್ಲಿರುವುದು ಆಗ ಮಾನವನಿಗೆ ನಿಲುಕಿದ್ದ ಜ್ಞಾನ ಭಂಡಾರ. ಅದರಲ್ಲಿ ಗೀತಗಳು, ಪ್ರಾರ್ಥನೆಗಳು, ಯಜ್ಞವಿಧಿ ಗಳು, ಯಂತ್ರತಂತ್ರಗಳು, ಪ್ರಕೃತಿ ಸೌಂದರ್ಯದ ಉಜ್ವಲ ಕವನಗಳೂ ಇನ್ನೂ ಅನೇಕ ವಿಷಯಗಳು ತುಂಬಿವೆ. ಅವುಗಳಲ್ಲಿ ವಿಗ್ರಹಾರಾಧನೆ ಎಲ್ಲಿಯೂ ಇಲ್ಲ, ದೇವರುಗಳಿಗೆ ಗುಡಿಗಳಿಲ್ಲ. ಅವುಗಳ ಆದ್ಯಂತ ಪಸರಿಸುವ ಜೀವನಶಕ್ತಿ, ಜೀವನಶ್ರದ್ಧೆ ನಮ್ಮನ್ನು ಬೆರಗು ಮಾಡುತ್ತವೆ. ವೈದಿಕ ಆರ್ಯರು ಜೀವನೋತ್ಸಾಹಭರಿತರಾಗಿದ್ದುದರಿಂದ ಆತ್ಮದ ಕಡೆ ಅವರು ಹೆಚ್ಚು ಲಕ್ಷ್ಯ ಕೊಡಲಿಲ್ಲ. ಸಾವಿನ ಉಡಿಯಲ್ಲಿ ಏನೋ ಒಂದು ಜನ್ಮಾಂತರ ಇದೆ ಎಂಬ ಅಸ್ಪಷ್ಟ ಭಾವನೆ ಮಾತ್ರ ಅವರಿಗಿತ್ತು.

ಕ್ರಮೇಣ ದೇವರ ಭಾವನೆ ಬೆಳೆಯುತ್ತದೆ. ಮೊದಲು ಅನುಗ್ರಹ ಶಕ್ತಿಯಿರುವ ಸ್ವರ್ಗಲೋಕದ

ದೇವತೆಗಳು, ಅನಂತರ ಏಕದೈವ ವಾದ, ಆಮೇಲೆ ಏಕದೈವವಾದದೊಂದಿಗೆ ಬೆರೆತ ಏಕತ್ವವಾದ ಭಾವನೆ ಬೆಳೆದಂತೆ ಹೊಸಕ್ಷೇತ್ರ ದೊರೆಯುತ್ತದೆ; ಪ್ರಕೃತಿಯ ರಹಸ್ಯವನ್ನೆಳೆಯುವ ಪ್ರಯತ್ನ ನಡೆಯುತ್ತದೆ; ವಿಚಾರಬುದ್ಧಿ ಆರಂಭವಾಗುತ್ತದೆ. ಈ ಪ್ರಗತಿಯ ಹೊತ್ತಿಗೆ ಶತಮಾನಗಳು ಕಳೆಯುತ್ತವೆ. ಅಷ್ಟು ಹೊತ್ತಿಗೆ ವೇದಗಳ ಕಾಲ ಮುಗಿದು (ವೇದ+ಅಂತ=ಕೊನೆ) ವೇದಾಂತ ಅಥವ ಉಪನಿಷದ್ದರ್ಶನಕ್ಕೆ ಬರುತ್ತೇವೆ.

ಮಾನವಕುಲಕ್ಕೆ ದೊರೆತ ಪ್ರಥಮಗ್ರಂಥವೆಂದರೆ ವೇದಗಳಲ್ಲಿ ಮೊದಲನೆಯದಾದ ಋಗ್ವೇದ. ಅದರಲ್ಲಿ ಮಾನವನ ಮನಸ್ಸಿನ ಮೊದಲ ಭಾವನಾತರಂಗವನ್ನು, ಕಾವ್ಯಜ್ಯೋತಿಯನ್ನು, ಪ್ರಕೃತಿ ಸೌಂದರ್ಯ ಮತ್ತು ರಹಸ್ಯಗಳ ವಿಷಯವಾಗಿ ಮನೋಮುಗ್ಧತೆಯನ್ನು ಕಾಣುತ್ತೇವೆ. ಈ ಸನಾತನ ಗೀತಗಳಲ್ಲಿ ಡಾ. ಮ್ಯಾಕ್‌ನಿಕಲ್ ಹೇಳುವಂತೆ "ಸಾವಿರಾರು ವರ್ಷಗಳ ಹಿಂದೆ, ಈ ನಮ್ಮ ಪ್ರಪಂಚದ ಉದ್ದೇಶವೇನು, ಅದರಲ್ಲಿ ಮನುಷ್ಯನ ಜೀವನದ ಉದ್ದೇಶವೇನು ಎಂಬ ಗುರಿಯನ್ನು ತಿಳಿಯಹೊರಟ ಜನರ ಧೀರೋದಾತ್ತ ಸಾಹಸದ ಕತೆಗಳ ಬೇರುಗಳು ಇಲ್ಲಿ ಇವೆ. ಇಂಡಿಯ ಆ ದಾರಿಯಲ್ಲಿ ಒಂದೇ ಸಮನೆ ನಡೆಯುತ್ತ ಬಂದಿದೆ" ಎಂದಿದಾನೆ.

ಆದರೂ ಋಗ್ವೇದದ ಮೊದಲಲ್ಲಿಯೇ ಸಿಂಧೂಕಣಿವೆಯ ನಾಗರಿಕತೆ, ಮೆಸೊಪೊಟೇಮಿಯ ಮತ್ತು ಇತರ ನಾಗರಿಕತೆಗಳು ಬೆಳೆದು ನಾಗರಿಕ ಜೀವನ ನಡೆಸಿ ನಾಗರಿಕ ಭಾವನೆಗಳನ್ನು ಹರಡಿ ಯುಗಾಂತರಗಳಾಗಿದ್ದವು. ಆದ್ದರಿಂದ ಋಗ್ವೇದದಲ್ಲಿನ "ಋಷಿಗಳಿಗೆ, ನಮ್ಮ ಪೂರ್ವಜರಿಗೆ, ಪ್ರಥಮ ಮಾರ್ಗದರ್ಶಕರಿಗೆ" ಎಂಬ ಅರ್ಪಣೆ ಬಹಳ ಉಚಿತವಿದೆ.

ರವೀಂದ್ರನಾಥ ಠಾಕೂರರು ಈ ವೇದಗೀತಗಳನ್ನು ವರ್ಣಿಸುತ್ತ "ಇವು ಜೀವನದಲ್ಲಿನ ಆಶ್ಚರ್ಯ ಮತ್ತು ಭಯಗಳಿಗೆ ಆಗಿನ ಜನತೆ ತೋರಿದ ಸಾಮೂಹಿಕ ಪ್ರತಿಕ್ರಿಯೆಯ ಕಾವ್ಯಸಾಹಿತ್ಯ: ನಾಗರಿಕತೆಯ ಮುಂಬೆಳಗಿನಲ್ಲೇ ಜೀವನ ಸಹಜವಾದ ಅನಂತ ರಹಸ್ಯವನ್ನು ಕಂಡ ಸಾಹಸಿಗಳ, ಸರಳ ಜೀವಿಗಳ, ಎಚ್ಚತ್ತ ಜನರ ಭಾವನೆಗಳು; ಪಂಚ ಭೂತಗಳಿಗೆ, ಪ್ರತಿಯೊಂದು ಪ್ರಕೃತಿ ಶಕ್ತಿಗೆ ಜೀವತ್ವವನ್ನು ಆರೋಪಿಸಿದ ಅವರ ನಿಷ್ಕಪಟ ಭಕ್ತಿ—ಧೀರರ, ಸಾಹಸಿಗಳ, ಸುಖಜೀವಿಗಳ ಭಕ್ತಿ. ಜೀವನದ ರಹಸ್ಯಭಾವನೆ ಜೀವನಕ್ಕೊಂದು ಮೋಹಶಕ್ತಿಯನ್ನೇ ಕೊಟ್ಟಿತು; ದಿಗ್ಭ್ರಮೆಯಿಂದ ಜೀವನ ಹೊರೆಯಾಗಲಿಲ್ಲ. ಆಗಾಗ 'ಜ್ಞಾನಿಗಳು ಬೇರೆಬೇರೆ ಹೆಸರಿನಿಂದ ಕರೆದರೂ ಸತ್ಯವು ಒಂದೇ' ಎಂದು ಆತ್ಮಾನುಭವದಿಂದ ಹೊರಟ ಕಿಡಿಗಳು ಆಗಾಗ ಕಂಡರೂ, ಆ ಭಕ್ತಿ ವಾಸ್ತವ ವಿಶ್ವದ ವಿರೋಧ ವೈವಿಧ್ಯಗಳ ಚಿಂತೆಯಲ್ಲಿ ದಿಗ್ಭ್ರಮೆ ಹೊಂದದ ಜನಾಂಗದ ಭಕ್ತಿ" ಎಂದಿದ್ದಾರೆ.

ಆದರೆ ಆ ಯೋಚನಾಪರಂಪರೆ ಕ್ರಮೇಣ ಬೆಳೆದು ಬಂದಿತು. ಕೊನೆಗೆ ವೇದಕರ್ತೃ "ಎಲೈ ಭಕ್ತಿಯೇ, ನಮಗೆ ನಂಬಿಕೆಯನ್ನು ನೀಡು" ಎಂದಿದ್ದಾನೆ. 'ಕಾಣದ ದೇವರಿಗೆ' ಮ್ಯಾಕ್ಸ್ ಮುಲ್ಲರ್ ಎಂದು ಕರೆದಿರುವ ಸೃಷ್ಟಿ ಗೀತೆಯಲ್ಲಿ ಗೂಢವಾದ ಪ್ರಶ್ನೆಗಳನ್ನು ತುಂಬಿದ್ದಾನೆ.

೧. ಆಗ ಅಲ್ಲಿ ಇಲ್ಲದುದೂ ಇರಲಿಲ್ಲ, ಇದ್ದುದೂ ಇರಲಿಲ್ಲ. ವಾಯುಮಂಡಲವೂ ಇರಲಿಲ್ಲ. ಅದರಾಚೆ ನಭೋಮಂಡಲವೂ ಇರಲಿಲ್ಲ. ಮುಚ್ಚಿರುವುದೇನು, ಎಲ್ಲಿ? ಆಶ್ರಯದಾತನಾರು? ಅಳೆಯಲಾರದ ಆಳದ ಜಲವಿತ್ತೇನು?

೨. ಸಾವು ಇರಲಿಲ್ಲ, ಅಮೃತತತ್ವವೂ ಇರಲಿಲ್ಲ. ಹಗಲು ರಾತ್ರಿಗಳ ಭೇದವೂ ಇರಲಿಲ್ಲ. ಶೂನ್ಯ ಪ್ರಾಣವಿದ್ದರೂ, ಒಂದು ವಸ್ತು ಮಾತ್ರ, ಸಹಜ ಸ್ವಭಾವದಿಂದ ಉಸಿರಾಡುತ್ತಿತ್ತು. ಅದು ಹೊರತು ಬೇರೊಂದಿರಲಿಲ್ಲ.

೩. ಕತ್ತಲು. ಕತ್ತಲಿನ ಮರೆಯಲ್ಲಿ ಎಲ್ಲವೂ ಅಭೇದ್ಯ ಪ್ರಳಯ. ಇದ್ದುದೆಲ್ಲವೂ ಶೂನ್ಯ, ನಿರಾಕಾರ. ಅಗ್ನಿಶಕ್ತಿಯ ಮಹತ್ತಿನಿಂದ ವ್ಯಕ್ತಿಯ ಉತ್ಪತ್ತಿಯಾಯಿತು.

೪. ಆಮೇಲೆ, ಮೊದಲು ಹುಟ್ಟಿದ್ದು ಆಶೆ. ಆಶೆಯೇ ಬೀಜಮೂಲ, ಮತ್ತು ಉತ್ಸಾಹದ,

ಅಂಕುರ. ತಮ್ಮ ಹೃದ್ಭಾವನೆಗಳಿಂದ ಅನ್ವೇಷಕರಾಗಿ ಹೊರಟ ಮಹರ್ಷಿಗಳು ಸತ್ ಮತ್ತು ಅಸತ್‌ಗಳ ಪರಸ್ಪರ ಸಂಬಂಧವನ್ನರಿತರು.

೫. ಅವುಗಳ ವಿಭಜನರೇಖೆ ಅಡ್ಡ ಬೆಳೆಯಿತು. ಅದರ ಮೇಲೆ ಏನು? ಕೆಳಗೆ ಏನು? ಸೃಷ್ಟಿಕರ್ತರಿದ್ದರು. ಮಹಾಶಕ್ತಿಗಳು ಇದ್ದುವು; ಇಲ್ಲಿ ಸ್ವತಂತ್ರಕಾರ್ಯ. ಅಲ್ಲಿ ಮಹಾಶಕ್ತಿ.

೬. ಅದರ ಹುಟ್ಟು ಎಲ್ಲಿ, ಈ ದೃಷ್ಟಿಯ ಮೂಲವೆಲ್ಲಿ ಎಂಬುದನ್ನು ತಿಳಿದವರು ಯಾರು, ತಿಳಿಸುವವರು ಯಾರು?

ಪ್ರಪಂಚ ಸೃಷ್ಟಿಯಾದ ಮೇಲೆ ದೇವರುಗಳ ಸೃಷ್ಟಿಯಾಯಿತು. ಎಂದರೆ ಅದು ಮೊದಲು ಸೃಷ್ಟಿಯಾದುದು ಹೇಗೆ ಎಂದು ತಿಳಿದವರು ಯಾರು?

೭. ಈ ಸೃಷ್ಟಿಯ ಪ್ರಥಮ ಮೂಲಕರ್ತನು ಅದನ್ನು ಸೃಷ್ಟಿಮಾಡಿದನೋ ಮಾಡಲೇ ಇಲ್ಲವೊ. ಅತ್ಯುನ್ನತ ಸ್ವರ್ಗದಲ್ಲಿದ್ದು ವಿಶ್ವವನ್ನೆಲ್ಲ ಆಳುವ ಆ ವಿಶ್ವಚಕ್ಷುವಿಗೆ ಪ್ರಾಯಶಃ ತಿಳಿದಿರಬಹುದು: ಪ್ರಾಯಶಃ ಅವನಿಗೂ ತಿಳಿಯದೆ ಇರಬಹುದು.

## ೬. ಜೀವನಸ್ವೀಕಾರ ಮತ್ತು ನಿರಾಕರಣೆ

ಈ ರೀತಿ ಅತಿ ಪ್ರಾಚೀನಕಾಲದಲ್ಲಿ ಅವ್ಯಕ್ತವಾಗಿ ಆರಂಭವಾದ ಭಾರತೀಯ ಧ್ಯಾನದರ್ಶನ, ಜೀವನ, ಸಂಸ್ಕೃತಿ, ಸಾಹಿತ್ಯ ವಾಹಿನಿಗಳು ಮಹಾನದಿಗಳಾಗಿ ಮುಂದೆ ಮುಂದೆ ಹೋದಂತೆ ಪಾತ್ರ ವೈಶಾಲ್ಯವನ್ನೂ, ತುಂಬು ಜೀವನವನ್ನೂ ಪಡೆದು ಅನೇಕವೇಳೆ ಉಕ್ಕೇರಿ ಜನಜೀವನವನ್ನು ತಮ್ಮ ನವರಸದಿಂದ ಚೇತನಗೊಳಿಸಿವೆ. ಈ ಸಹಸ್ರಾರು ವರ್ಷಗಳ ಕಾಲಮಾನದಲ್ಲಿ ಕೆಲವು ವೇಳೆ ತಮ್ಮ ಮಾರ್ಗವನ್ನೇ ಬದಲಾಯಿಸಿವೆ; ಬತ್ತಿದಂತೆಯೂ ಭಾಸವಾಗುತ್ತವೆ, ಆದರೂ ತಮ್ಮ ಮೂಲವೈಶಿಷ್ಟ್ಯವನ್ನು ಕಾಪಾಡಿಕೊಂಡಿವೆ. ಜೀವನದಲ್ಲಿ ಒಂದು ದೃಢವಾದ ಆಸಕ್ತಿ ಇಲ್ಲದಿದ್ದರೆ ಅದು ಸಾಧ್ಯವಾಗುತ್ತಿರಲಿಲ್ಲ. ಈ ಜೀವಧಾರಣಶಕ್ತಿಯೇ ಒಂದು ಗುಣವಲ್ಲ. ಭಾರತದಲ್ಲಿ ಅನೇಕ ವರ್ಷಗಳಿಂದ ಕಂಡು ಬಂದಿರುವಂತೆ ಜಡಜೀವನ, ಕ್ಷಯಪೀಡಿತಜೀವನಕ್ಕೂ ಕಾರಣವಾಗಿದೆ. ಆದರೂ ಮೇಲಿಂದ ಮೇಲೆ ಯುದ್ಧಗಳ–ಕ್ಷೋಭೆಗಳ ಆಘಾತದಿಂದ ಒಂದು ಸುಪ್ರತಿಷ್ಠಿತವೂ, ಉನ್ನತವೂ ಆದ ನಾಗರಿಕತೆ ಕುಸಿದು ಬೀಳುತ್ತಿರುವ ಈ ಕಾಲದಲ್ಲಿ ಅದು ನಾವು ಗಮನಿಸಬೇಕಾದ ಅತಿ ಮುಖ್ಯ ವಿಷಯ. ಎಲ್ಲವೂ ಕರಗಿ ನೀರಾಗುತ್ತಿರುವ ಈ ಮಹಾಯುದ್ಧದ ಮೂಸೆಯಿಂದ ಮಾನವಕುಲದ ಮಹತ್ಸಾಧನೆಗಳನ್ನೆಲ್ಲ ಉಳಿಸಿಕೊಂಡು, ಇದ್ದ ಲೋಪದೋಷಗಳನ್ನೆಲ್ಲ ನಿವಾರಿಸಿ. ಇಲ್ಲದುದನ್ನು ಸೇರಿಸಿ ಪಾಶ್ಚಾತ್ಯ ಪೌರ್ವಾತ್ಯಗಳೆರಡಕ್ಕೂ ಮೆಚ್ಚುಗೆಯಾಗುವ ಸರ್ವಸುಂದರ ಸಂಸ್ಕೃತಿಯೊಂದು ಒಡಮೂಡುವುದೆಂದು ನಮ್ಮ ಹಿರಿಯಾಸೆ. ಆದರೂ ವಸ್ತುಗಳ ಮತ್ತು ಮನುಷ್ಯ ಜೀವಿಗಳ ನಾಶಮಾತ್ರವಲ್ಲದೆ, ಜೀವನಕ್ಕೆ ಒಂದು ಅರ್ಥಕೊಡುವ ಅಗತ್ಯವಾದ ಪುರುಷಾರ್ಥಗಳ ಬಿಡುವಿಲ್ಲದ ಮತ್ತು ವ್ಯಾಪಕವಾದ ನಾಶ ಗಮನಾರ್ಹವಾಗಿದೆ. ಇಂದಿನ ಉನ್ನತ ಔದ್ಯೋಗಿಕ ನಾಗರಿಕತೆಯಿಂದ ನಾವು ಅನೇಕ ಮಾರ್ಗಗಳಲ್ಲಿ ಅದ್ಭುತ ಪ್ರಗತಿ ಪಡೆದು ಹಿಂದೆಂದೂ ಕಾಣದ ಶ್ರೇಷ್ಠಸುಖಜೀವನ ನಡೆಸುತ್ತಿದ್ದರೂ, ಅದರಲ್ಲಿ ಏನಾದರೂ ಒಂದು ಮುಖ್ಯ ಲೋಪವಿದೆಯೆ? ಆತ್ಮನಾಶದ ಬೀಜ ಅದರಲ್ಲಿಯೇ ಅಡಗಿದೆಯೆ?

ಪರರಾಷ್ಟ್ರದ ದಾಸ್ಯಕ್ಕೆ ಒಳಗಾದ ದೇಶ ಇಂದಿನ ಸ್ಥಿತಿಯನ್ನು ಮರೆತು ಗತಕಾಲದ ಕನಸುಗಳಲ್ಲಿ ಗತವೈಭವದ ಸ್ಮರಣೆಯಲ್ಲಿ ಮನಶ್ಶಾಂತಿ ಪಡೆಯಲು ಯತ್ನಿಸುತ್ತದೆ. ನಮ್ಮಲ್ಲಿ ಅನೇಕರು ಇದನ್ನೊಂದು ಅಪಾಯಕಾರಕ ಹುಚ್ಚು ಕಸಬನ್ನಾಗಿ ಮಾಡಿಕೊಂಡಿದ್ದಾರೆ. ಪ್ರಪಂಚದಲ್ಲಿ ಇತರ ಅನೇಕ ವಿಷಯಗಳಲ್ಲಿ ನಾವು ಬಹಳ ಹೀನಸ್ಥಿತಿಯಲ್ಲಿದ್ದರೂ, ಅಧ್ಯಾತ್ಮದಲ್ಲಿ ಮಾತ್ರ ನಾವು ಇನ್ನೂ ಅತ್ಯುನ್ನತ ಸ್ಥಿತಿಯಲ್ಲಿಯೇ ಇದ್ದೇವೆಂದು ಭಾವಿಸುವುದೂ ತಪ್ಪು. ದೇಶದಲ್ಲಿ ಸ್ವಾತಂತ್ರ್ಯ ಮತ್ತು ಅವಕಾಶ ಇಲ್ಲದಿರುವಾಗ, ಅಥವ ಉಪವಾಸ ಮತ್ತು ಸಂಕಟ ತಾಂಡವವಾಡುತ್ತಿರುವಾಗ ಆಧ್ಯಾತ್ಮಿಕವಾಗಲಿ, ಇತರ ಯಾವುದೇ ಉನ್ನತಿಯನ್ನೇ ಆಗಲಿ ಹೊಂದಲು ಸಾಧ್ಯವೇ ಇಲ್ಲ. ಅನೇಕ ಪಾಶ್ಚಾತ್ಯ

ಲೇಖಕರು ಭಾರತೀಯರು ಪರಲೋಕಾಸಕ್ತರು ಎಂಬ ಭಾವನೆಯನ್ನು ಪುಷ್ಟೀಕರಿಸಿದ್ದಾರೆ. ಎಲ್ಲ ದೇಶಗಳಲ್ಲಿ ಬಡವರು ಮತ್ತು ಅದೃಷ್ಟಹೀನರು ಕ್ರಾಂತಿ ಪುರುಷರಾಗದಿದ್ದರೆ ಸ್ವಲ್ಪಮಟ್ಟಿಗಾದರೂ ಪರಲೋಕಸಾಧಕರಾಗಲೇ ಬೇಕು, ಕಾರಣ ಈ ಪ್ರಪಂಚದಲ್ಲಿ ಅವರಿಗೆ ಸ್ಥಾನವಿಲ್ಲ. ಪರದಾಸ್ಯ ದಲ್ಲಿರುವ ಜನರ ಗತಿಯೂ ಅಷ್ಟೇ.

ಮನುಷ್ಯ ಪ್ರಾಪ್ತವಯಸ್ಕನಾಗುತ್ತ ಬಂದಂತೆ ಬಾಹ್ಯ ವಾಸ್ತವಿಕ ಪ್ರಪಂಚದಲ್ಲಿ ಮಾತ್ರ ಮಗ್ನ ನಾಗುವುದಿಲ್ಲ; ತೃಪ್ತಿಯನ್ನೂ ಪಡೆಯಲಾರ. ಯಾವುದಾದರೊಂದು ಒಳ ಅರ್ಥ, ಮಾನಸಿಕ ಆತ್ಮ ತೃಪ್ತಿ ಬೇಕು. ಜನಾಂಗಗಳು, ನಾಗರಿಕತೆಗಳು ಪ್ರಬುದ್ಧಮಾನಕ್ಕೆ ಬಂದು, ಹಳತಾದ ಮೇಲೆ ಅವುಗಳಿಗೂ ಅದೇ ರೀತಿ ತೃಪ್ತಿ ಬೇಕು. ಪ್ರತಿಯೊಂದು ನಾಗರಿಕತೆಗೆ, ಪ್ರತಿಯೊಂದು ಜನಾಂಗಕ್ಕೆ ಈ ರೀತಿ ಬಾಹ್ಯಜೀವನ, ಅಂತರಂಗಜೀವನ ಎಂದು ಎರಡು ಸಮಾನಾಂತರ ವಾಹಿನಿಗಳಿವೆ. ಎಲ್ಲಿಯ ವರೆಗೆ ಎರಡೂ ಮಿಳಿತವಾಗಿ ಅಥವ ಸಮೀಪವರ್ತಿಯಾಗಿ ಪ್ರವಹಿಸುತ್ತವೆಯೋ ಅಲ್ಲಿಯವರೆಗೆ ಒಂದು ಸಮತೂಕ, ಚಿರಸ್ಥಾಯಿತ್ವ ಇರುತ್ತದೆ. ಅವು ದೂರವಾದೊಡನೆ ಮನಃಕ್ಲೇಶದ, ಆತ್ಮನಾಶದ ಹೋರಾಟ ಆರಂಭವಾಗುತ್ತದೆ.

ಋಗ್ವೇದ ಸಂಹಿತೆಗಳ ಕಾಲದಿಂದ ಜೀವನ ಮತ್ತು ಭಾವನೆಗಳ ಈ ಎರಡು ಲಹರಿಗಳ ಬೆಳ ವಣಿಗೆಯನ್ನೂ ಕಾಣುತ್ತೇವೆ. ಮೊದಮೊದಲಿನ ಸೂಕ್ತಗಳಲ್ಲಿ ಬಾಹ್ಯಪ್ರಪಂಚ, ಪ್ರಕೃತಿಯಸೌಂದರ್ಯ ಮತ್ತು ರಹಸ್ಯ, ಜೀವನೋತ್ಸಾಹ ಮತ್ತು ಸತ್ವ ಇವುಗಳನ್ನೇ ಕಾಣುತ್ತೇವೆ. ಗ್ರೀಕರ ಒಲಿಂಪಸ್ ದೇವತೆಗಳಂತೆ ನಮ್ಮ ದೇವರುಗಳೂ ದೇವತೆಗಳೂ ತುಂಬ ಮಾನವಸಹಜ ಸ್ವಭಾವದವರು. ಮಾನವ ಸ್ತ್ರೀಪುರುಷರ ಸಂಗಡ ಬಂದು ಬೆರತುಕೊಳ್ಳುತ್ತಾರೆ. ಇಬ್ಬರ ಮಧ್ಯೆ ನಿರ್ದಿಷ್ಟ ಭೇದಭಾವನೆಯ ಗೆರೆ ಇಲ್ಲ. ಅನಂತರ ವಿಚಾರಶಕ್ತಿ ಮೂಡಿ, ಆಲೋಚನೆಗಾರಂಭವಾಗಿ ಬೇರೊಂದು ಪ್ರಪಂಚದ ರಹಸ್ಯ ಹಿರಿದಾಗುತ್ತದೆ. ಜೀವನವೇನೋ ಸಂತುಷ್ಟವಾಗಿ ಮುಂದುವರಿಯುತ್ತದೆ. ಆದರೆ ಅದರ ಬಾಹ್ಯಪ್ರಕಾಶನಗಳ ಕಡೆಗೆ ಒಂದು ತಾತ್ಸಾರಭಾವ ಮೂಡುತ್ತದೆ. ದೃಷ್ಟಿ ಅದೃಶ್ಯ ಪ್ರಪಂಚದೆಡೆ ತಿರುಗಿದಂತೆ ಸಾಧಾರಣವಾಗಿ ಕಂಡು, ಕೇಳಿ, ಅನುಭವಿಸಲಾಗದ ರೀತಿಯ ಒಂದು ಔದಾಸೀನ್ಯಭಾವನೆ ಜೀವನದಕಡೆ ಬೆಳೆಯುತ್ತದೆ. ಇವೆಲ್ಲದರ ಉದ್ದೇಶವೇನು? ಪ್ರಪಂಚದ ಗುರಿ ಏನು? ಗುರಿ ಇದ್ದರೆ ಮನುಷ್ಯ ಜೀವನವನ್ನು ಅದರೊಂದಿಗೆ ಸಮರಸಗೊಳಿಸುವುದು ಹೇಗೆ? ವ್ಯಕ್ತ ಅವ್ಯಕ್ತ ಪ್ರಪಂಚಗಳಿಗೆ ಒಂದು ಸಮರಸದ ಸಂಬಂಧ ಕಲ್ಪಿಸಲು ಸಾಧ್ಯವೆ? ಆ ರೀತಿ ಜೀವನಕ್ಕೊಂದು ಸರಿಯಾದ ಮಾರ್ಗ ಕಂಡುಹಿಡಿಯಲು ಸಾಧ್ಯವೆ?

ಈ ರೀತಿ ಇತರ ದೇಶಗಳಲ್ಲಿ ಕಂಡುಬರುವಂತೆ ಇಂಡಿಯದಲ್ಲಿ ಸಹ ಭಾವನೆ ಮತ್ತು ಕಾರ್ಯಗಳ ದ್ವಂದ್ವ ವಾಹಿನಿಯನ್ನು—ಜೀವನ ಸ್ವೀಕಾರ ಮತ್ತು ಜೀವನ ವಿಮುಖತೆಗಳನ್ನು–ಕಾಲ ಬದಲಾಯಿಸಿ ದಂತೆ ಒಂದುಬಾರಿ ಜೀವನ ಸ್ವೀಕಾರಕ್ಕೆ ಪ್ರಾಮುಖ್ಯತೆ ಇನ್ನೊಂದುಬಾರಿ ಜೀವನ ವಿಮುಖತೆಗೆ ಪ್ರಾಮುಖ್ಯತೆ, ಈ ರೀತಿ ಒಟ್ಟಿಗೆ ಹರಿಯುವುದನ್ನು ಕಾಣಬಹುದು. ಆದರೂ ಈ ಸಂಸ್ಕೃತಿಯ ಮೂಲ ಹಿನ್ನೆಲೆ ಪರಲೋಕದಲ್ಲಿ; ಇಹಲೋಕದ ನಿಷ್ಪ್ರಯೋಜಕತೆಯಲ್ಲಿ. ದಾರ್ಶನಿಕ ಭಾಷೆಯಲ್ಲಿ ಪ್ರಪಂಚವೆಲ್ಲ ಮಾಯೆ ಎಂದಾಗ ಆ ಭಾವನೆ ಸಹ ನಿರಪೇಕ್ಷವಲ್ಲ. (ಪ್ಲೇಟೋನ ಸತ್ಯತೆಯ ನೆರಳಿ ನಂತೆ ಅದು) ಅಂತಿಮ ಸತ್ಯ ಎಂಬುದರ ಸಾಪೇಕ್ಷ ಭಾವನೆ ಮಾತ್ರ ಇದ್ದಂತೆ ಪ್ರಪಂಚವನ್ನು ಅಂಗೀ ಕರಿಸಿ, ಅದರ ಜೀವನ ನಡೆಸಿ, ಅದರ ನಾನಾ ಸೌಂದರ್ಯಾನುಭವವನ್ನು ಪಡೆಯಿತು. ತನ್ನ ಶಾಖೋಪ ಶಾಖೆಗಳಾದ ಅನೇಕ ಮತಗಳಲ್ಲಿ ಕಂಡು ಬರುವಂತೆ ಪ್ರಾಯಶಃ ಸೆಮಿಟಿಕ್ ಸಂಸ್ಕೃತಿಯೂ ಮತ್ತು ಆರಂಭ ದಿನಗಳ ಕ್ರೈಸ್ತ ಮತವೂ ಖಂಡಿತವಾಗಿಯೂ ಹೆಚ್ಚು ಪರೋಕ್ಷ ಮಾರ್ಗಿಗಳಾಗಿದ್ದವು. ಟಿ. ಇ. ಲಾರೆನ್ಸ್ ಹೇಳುವಂತೆ "ಉಳಿದ ಅಥವ ಅಳಿದ ಎಲ್ಲ ಸೆಮಿಟಿಕ್ ಮತಗಳಲ್ಲಿದ್ದ ಸಾಮಾನ್ಯ ತಳಹದಿ ಎಂದರೆ ಪರಲೋಕ ಚಿಂತನೆ". ಇದರಿಂದ ಸ್ವೇಚ್ಛಾಪ್ರವರ್ತನೆಗೆ ಇಲ್ಲವೆ ಆತ್ಮನಿಗ್ರಹಕ್ಕೆ ಎಡೆಯಾಯಿತು.

ಭಾರತೀಯರು, ತಮ್ಮ ಸಂಸ್ಕೃತಿಯ ಎಲ್ಲ ಉಚ್ಛ್ರಾಯಸ್ಥಿತಿಗಳಲ್ಲಿ ಜೀವನದಲ್ಲಿಯೂ ಪ್ರಕೃತಿಯಲ್ಲಿಯೂ ಪೂರ್ಣ ಆನಂದಾನುಭವವನ್ನು ಪಡೆಯುತ್ತಿದ್ದರು. ಜೀವನರೀತಿ, ಸಂಗೀತ, ಸಾಹಿತ್ಯ, ಗಾನ, ನೃತ್ಯ, ಚಿತ್ರಕಲೆ, ನಾಟಕ ಇವುಗಳ ಪ್ರಗತಿಯಲ್ಲಿ, ವಿಡಂಬನಾತ್ಮಕ ಲೈಂಗಿಕ ಶಾಸ್ತ್ರದ ಪ್ರಗತಿಯಲ್ಲಿ ಸಹ ಒಂದು ಪರಮ ಸುಖವನ್ನು ಕಾಣುತ್ತಿದ್ದರು. ಪರಲೋಕಚಿಂತನೆ ಅಥವ ಇಹಲೋಕದ ನಿಸ್ಸಾರತೆಯ ಆಧಾರದ ಮೇಲೆ ನಿಂತ ಯಾವ ಜೀವನ ದೃಷ್ಟಿಯಲ್ಲೂ, ಸಂಸ್ಕೃತಿಯಲ್ಲೂ ಈ ಬಗೆಯ ವಿವಿಧ ರೀತಿಯ ಪೂರ್ಣ ತೇಜಸ್ವಿ ಜೀವನದ ನಿದರ್ಶನಗಳನ್ನು ಕಾಣಲು ಸಾಧ್ಯವಿಲ್ಲ. ಮೂಲತಃ ಪರಲೋಕ ಚಿಂತನೆಯಲ್ಲೇ ಮಗ್ನವಾದ ಯಾವ ಸಂಸ್ಕೃತಿಯೂ ಸಾವಿರಾರು ವರ್ಷಗಳು ಬಾಳಿ ಬದುಕಲೂ ಸಾಧ್ಯವಿಲ್ಲ.

ಆದರೂ ಕೆಲವರು ಭಾರತೀಯ ಭಾವನೆ ಮತ್ತು ಸಂಸ್ಕೃತಿ ಎಂದರೆ ಮುಖ್ಯವಾಗಿ ಜೀವನ ನಿರಸನ ತತ್ವವನ್ನು ಅವಲಂಬಿಸಿದೆ, ಜೀವನದ ಅಸ್ತಿತ್ವವನ್ನಲ್ಲ ಎಂದು ಭಾವಿಸಿದ್ದಾರೆ. ಈ ಎರಡು ತತ್ವಗಳೂ ಸ್ವಲ್ಪ ಹೆಚ್ಚು ಸ್ವಲ್ಪ ಕಡಮೆ ಪ್ರಮಾಣದಲ್ಲಿ ಎಲ್ಲ ಪುರಾತನ ಸಂಸ್ಕೃತಿಗಳಲ್ಲೂ ಧರ್ಮಗಳಲ್ಲೂ ಕಂಡು ಬರುತ್ತದೆ. ಆದರೂ, ಕೆಲವು ದರ್ಶನಗಳು ಜೀವನ ನಿರಸನಕ್ಕೆ ಪ್ರಾಮುಖ್ಯತೆ ತೋರಿದರೂ, ಭಾರತೀಯ ಸಂಸ್ಕೃತಿ ಮಾತ್ರ ಒಟ್ಟಿನಲ್ಲಿ ಜೀವನ ನಿರಸನಕ್ಕೆ ಪ್ರಾಮುಖ್ಯತೆ ಕೊಡಲಿಲ್ಲ. ಇದರಲ್ಲಿ ಕಂಡುಬರುವ ನಿರಸನ ದೃಷ್ಟಿ ಸಹ ಕ್ರೈಸ್ತ ಮತದಲ್ಲಿ ಕಾಣುವುದಕ್ಕಿಂತ ಕಡಮೆ. ಬೌದ್ಧ ಮತ್ತು ಜೈನ ಧರ್ಮಗಳು ಜೀವನದ ವಿಮುಖತೆಯನ್ನು ಬೋಧಿಸಿದವು. ಭಾರತೀಯ ಇತಿಹಾಸದಲ್ಲಿ, ಒಂದು ಕಾಲದಲ್ಲಿ, ಜನರು ಅಧಿಕ ಸಂಖ್ಯೆಯಲ್ಲಿ ಬೌದ್ಧ ವಿಹಾರಗಳಲ್ಲಿ ವಾಸಮಾಡುತ್ತ ಇದ್ದಾಗ ಜನತೆಯಲ್ಲಿ ದೊಡ್ಡ ಪ್ರಮಾಣದಲ್ಲಿ ಜೀವನವಿಮುಖತೆಯನ್ನು ಕಾಣಬಹುದಿತ್ತು. ಇದಕ್ಕೆ ಕಾರಣ ನನಗೆ ತಿಳಿಯದು. ಇದೇ ರೀತಿ ಅಥವ ಇನ್ನು ದೊಡ್ಡ ಪ್ರಮಾಣದಲ್ಲಿ ಯೂರೋಪಿನ ಮಧ್ಯಯುಗದಲ್ಲಿ; ಪ್ರಪಂಚ ಮುಳುಗಿ ಹೋಗುತ್ತದೆ, ಎಂಬ ಭಾವನೆ ಬಹುಜನರಲ್ಲಿ ಹರಡಿದ್ದುದನ್ನು ಕಾಣಬಹುದು. ಪ್ರಾಯಶಃ ರಾಜಕೀಯ ಆರ್ಥಿಕ ಕಾರಣಗಳಿಂದ ಉಂಟಾದ ನಿರಾಶಾಭಾವನೆಯಿಂದ ಈ ರೀತಿ ಆತ್ಮತ್ಯಾಗದ ಜೀವನವು ನಿರಸನ ಬುದ್ಧಿಯನ್ನು ಹುಟ್ಟಿಸಿರಬಹುದು.

ತಾತ್ವಿಕ ಪ್ರವೇಶ ಅಥವ ಪ್ರವೇಶಗಳು ಏನೆ ಇರಲಿ, ಬೌದ್ಧಮತ ವಿಪರೀತಕ್ಕೆ ಹೋಗುವುದಿಲ್ಲ. ಮಧ್ಯವರ್ತಿಯಾದ ಸ್ವರ್ಣಮಾರ್ಗದ ಮತ ಅದು. ನಿರ್ವಾಣದ ಕಲ್ಪನೆ ಸಹ ಅನೇಕರು ತಿಳಿದಿರುವಂತೆ ಒಂದು ಬಗೆಯ ಶೂನ್ಯತೆಯಲ್ಲ. ಅದು ಒಂದು ನಿಯತಸ್ಥಿತಿ. ಆದರೆ ಮಾನವನ ಕಲ್ಪನೆಗೆ ಎಟುಕದ ಕಾರಣ ಅದನ್ನು ನಿಷೇಧಾರ್ಥಕ ಶಬ್ದಗಳಿಂದ ವಿವರಿಸಿದರು. ಭಾರತೀಯ ಭಾವನೆ ಮತ್ತು ಸಂಸ್ಕೃತಿಯ ಆದರ್ಶಫಲವಾದ ಬೌದ್ಧಮತ ಜೀವನ ನಿರಸನ ಅಥವ ತ್ಯಾಗದ ಧರ್ಮವಾಗಿದ್ದರೆ ಅದರ ಪ್ರಭಾವ ಕೋಟ್ಯಂತರ ಬೌದ್ಧ ಧರ್ಮಿಗಳ ಮೇಲೆ ಆಗಬೇಕಾಗಿತ್ತು. ಆದರೆ ನಿಶ್ಚಯವಾಗಿ ನೋಡಿದರೆ ಬೌದ್ಧ ಧರ್ಮ ಹರಡಿರುವ ರಾಷ್ಟ್ರಗಳಲ್ಲಿ ಅದರ ವಿರೋಧವೇ ಕಾಣುತ್ತಿದೆ. ಜೀವನದಲ್ಲಿ ಆಸ್ತಿಕತೆಯಿಂದ ಏನಾಗಬಹುದು ಎಂಬುದಕ್ಕೆ ದೊಡ್ಡ ನಿದರ್ಶನ ಅದು.

ಭಾರತೀಯ ದರ್ಶನಗಳು ಜೀವನದ ಅಂತಿಮ ಗುರಿಯ ಕಡೆ ಹೆಚ್ಚು ಗಮನ ಕೊಡುತ್ತಿದ್ದುದೆ ಈ ಒಂದು ಗೊಂದಲಕ್ಕೆ ಕಾರಣವಿರಬಹುದು. ತನ್ನ ತತ್ವದ ಪಾರಲೌಕಿಕ ವಿಷಯವನ್ನು ಮರೆಯಲು ಅದಕ್ಕೆ ಎಂದೂ ಸಾಧ್ಯವಿಲ್ಲ. ಆದ್ದರಿಂದ ತುಂಬು ಜೀವನವನ್ನು ಸ್ವೀಕರಿಸಿದರೂ, ಜೀವನ ದಾಸ್ಯಕ್ಕೆ ಜೀವನದ ಬಲಿಗೆ ಒಪ್ಪಲಿಲ್ಲ. ನಿಮ್ಮ ಸರ್ವ ಬಲವನ್ನೂ, ಶಕ್ತಿಯನ್ನೂ ಉಪಯೋಗಿಸಿ ನ್ಯಾಯವಾದ ಕರ್ಮಮಾಡಿ, ಕರ್ಮಕ್ಕೆ ದಾಸರಾಗಬೇಡಿ, ಆ ಕರ್ಮದ ಫಲಕ್ಕಾಗಿ ಕಾತರರಾಗಬೇಡಿ ಎಂದು ಸಾರಿತು. ಜೀವನದಲ್ಲಿ, ಕರ್ಮದಲ್ಲಿ ಒಂದು ನಿಷ್ಕಾಮ ಭಾವನೆಯನ್ನು ಕಲಿಸಿತು; ಅವುಗಳಿಂದ ವಿಮುಖತೆಯನ್ನಲ್ಲ. ಇತರ ಅನೇಕ ದರ್ಶನಗಳಲ್ಲಿ ಕಂಡು ಬರುವಂತೆ ಭಾರತೀಯ ಭಾವನೆ ಮತ್ತು ದರ್ಶನದಲ್ಲಿ ಈ ನಿಷ್ಕಾಮಭಾವನೆ ಉದ್ದಕ್ಕೂ ಹರಿದುಬಂದಿದೆ. ಇದು ವ್ಯಕ್ತ ಮತ್ತು ಅವ್ಯಕ್ತ ಪ್ರಪಂಚಗಳ ಮಧ್ಯೆ ಸರಿಯಾದ ಸಮತೂಕ ಮತ್ತು ನಿಲುವು ಇರುವುದು ಅವಶ್ಯವೆಂದು ಇನ್ನೊಂದು ರೀತಿಯಲ್ಲಿ

ಹೇಳಿದಂತೆ. ಏಕೆಂದರೆ ವ್ಯಕ್ತ ಪ್ರಪಂಚದಲ್ಲಿ ಕರ್ಮ ಬಂಧನವೇ ಹೆಚ್ಚಾದರೆ ಇನ್ನೊಂದು ಪ್ರಪಂಚವೇ ಮರೆತು ಮಾಯವಾಗುತ್ತದೆ ಮತ್ತು ಆ ಕರ್ಮ ಅಂತಿಮ ಗುರಿಯಿಲ್ಲದುದಾಗುತ್ತದೆ.

ಭಾರತೀಯ ಮನಸ್ಸಿನ ಈ ಮೊದಲ ಸಾಹಸೋದ್ಯಮಗಳಲ್ಲಿ ಸತ್ಯಕ್ಕೆ ಮಹತ್ವವಿದೆ, ಸತ್ಯದ ಅವಲಂಬನೆಯಿದೆ, ಸತ್ಯಪರಾಯಣತೆ ಇದೆ. ಜಾತಿ ಮತ ಸಿದ್ಧಾಂತಗಳು ಅಪೌರುಷೇಯ ದರ್ಶನಗಳೂ ಆ ಮಟ್ಟಕ್ಕೆ ಏರಲಾರದ ಅಲ್ಪಮತಿಗಳಿಗೆ ಮೀಸಲಾಗಿದೆ. ಸ್ವಾನುಭವದ ಜ್ಞಾನ ಪ್ರಯೋಗದಿಂದ ವಿಷಯ ಪ್ರವೇಶ ಮಾಡುತ್ತಿದ್ದ ಕಾಲ ಅದು. ಎಲ್ಲ ಭಾವಮಯ ಮತ್ತು ಭೌತಾತೀತ ಅನುಭವಗಳಂತೆ ಅವ್ಯಕ್ತ ಪ್ರಪಂಚದ ಆ ಅನುಭವ ವ್ಯಕ್ತ ಬಾಹ್ಯ ಪ್ರಪಂಚದ ಅನುಭವಕ್ಕಿಂತ ಭಿನ್ನವಿರುತ್ತಿತ್ತು. ನಮಗೆ ಗೋಚರವಿರುವ ಮೂರು ಪರಿಮಾಣಗಳ ಪ್ರಪಂಚವನ್ನು ಮೀರಿದ ಬೇರೊಂದು ವಿಶಾಲ ಪ್ರಪಂಚಕ್ಕೆ ಹೋಗುತ್ತಿದ್ದಂತೆ ಭಾಸವಾಗುತ್ತಿತ್ತು. ಅದನ್ನು ಮೂರು ಪರಿಮಾಣಗಳಲ್ಲಿ ವಿವರಿಸುವುದೂ ಶಕ್ಯವಿರಲಿಲ್ಲ. ಆ ಅನುಭವ ಏನು, ಅದು ಸತ್ಯ ಮತ್ತು ವಾಸ್ತವಿಕತೆಯ ಅಂಶ ಏನಾದರೂ ಇರುವ ಒಂದು ದಿವ್ಯದೃಷ್ಟಿಯೇ ಅಥವ ಸಿದ್ಧಿಯೆ ಅಥವ ಕಾಲ್ಪನಿಕ ದೃಷ್ಟಿಭ್ರಮೆಯೆ ನನಗೆ ತಿಳಿಯದು. ಪ್ರಾಯಶಃ ಅನೇಕ ವೇಳೆ ಆತ್ಮವಂಚನೆಯೂ ಇರಬಹುದು. ಆದರೆ ಮತತತ್ವದ ದೇವತಾಶಾಸ್ತ್ರದ ಅವಲಂಬನೆಯಿಲ್ಲದೆ ಸ್ವಪ್ರಯತ್ನದಿಂದ ಜೀವನದ ಬಾಹ್ಯ ವಿಷಯದಾಚೆ ಏನಿದೆ ಎಂದು ಕಂಡುಹಿಡಿಯಲು ಹೊರಟ ಪ್ರಯತ್ನ ಮತ್ತು ಪ್ರವೇಶ ನನಗೆ ಅತಿ ಮುಖ್ಯ.

ಭಾರತದಲ್ಲಿ ತಾತ್ವಿಕ ಅನ್ವೇಷಣೆ ಕೇವಲ ಕೆಲವು ತಾತ್ವಿಕರ ಅಥವ ಪಂಡಿತರ ಸ್ವತ್ತಾಗಿರಲಿಲ್ಲ ದರ್ಶನವು ಜನತೆಯ ಸಾಮಾನ್ಯ ಧರ್ಮದ ಒಂದು ಮುಖ್ಯ ಅಂಶವಾಗಿತ್ತು. ಕಂಡೂ ಕಾಣದಂತೆ ಹೇಗೋ ಜನ ಜೀವನದಲ್ಲಿ ಪ್ರವಹಿಸಿ ಚೀನದಂತೆ ಇಂಡಿಯದಲ್ಲೂ ಒಂದು ದಾರ್ಶನಿಕ ದೃಷ್ಟಿಯನ್ನು ಹುಟ್ಟಿಸಿತು. ಕೆಲವರು ಆ ದರ್ಶನವನ್ನು ಎಲ್ಲ ಘಟನೆಗಳ ಕಾರಣ ಮತ್ತು ಸಿದ್ಧಾಂತಗಳನ್ನು ತಿಳಿದುಕೊಳ್ಳುವ ಗಾಢವಾದ ಜಟಿಲ ಪ್ರಯತ್ನ, ಜೀವನದ ಗುರಿಯನ್ನು ಅರಿಯುವ ಪ್ರಯತ್ನ, ಜೀವನದ ಅನೇಕ ವಿರೋಧಾಭಾಸಗಳಲ್ಲಿ ಒಂದು ನೈಸರ್ಗಿಕ ಐಕ್ಯತೆಯನ್ನು ಕಂಡುಹಿಡಿಯುವ ಪ್ರಯತ್ನ ಎಂದು ತಿಳಿದಿದ್ದಾರೆ. ಆದರೆ ಬಹುಜನರಿಗೆ ಅದು ಸರಳವಿಷಯವಾಗಿತ್ತು. ಅದು ಅವರಿಗೆ ಅಂತಿಮ ಗುರಿಯಾಗಿ ಕಾರ್ಯಕಾರಣಗಳ ಭಾವನೆಯನ್ನು ಕೊಟ್ಟು ಕಷ್ಟ ನಿಷ್ಠುರಗಳನ್ನು ಎದೆಗೊಟ್ಟು ಎದುರಿಸುವ ಮತ್ತು ಸಂತುಷ್ಟಿ ಮತ್ತು ಸಂಯಮವನ್ನು ಕಳೆದುಕೊಳ್ಳದ ಒಂದು ಅಸಾಧ್ಯ ಧೈರ್ಯವನ್ನು ಅವರಿಗೆ ಕೊಟ್ಟಿತು. "ಚೀನ ಮತ್ತು ಇಂಡಿಯದ ಸನಾತನ ವಿವೇಕ, ತಾ-ಓ ಅಥವ ಸತ್ಯಮಾರ್ಗದ ಗುರಿ, ಪೂರ್ಣತೆಯನ್ನು ಪಡೆಯುವುದು, ಜೀವನದ ವಿವಿಧ ಕಾರ್ಯವನ್ನು ಜೀವನ ಆನಂದದಲ್ಲಿ ಸಮರಸಗೊಳಿಸುವುದು" ಎಂದು ರವೀಂದ್ರರು ಡಾಕ್ಟರ್ ತಾಯ್–ಚಿತಾವೊಗೆ ಬರೆದರು. ಈ ವಿವೇಕದ ಒಂದು ಅಂಶ ನಿರಕ್ಷರಕುಕ್ಷಿಗಳೂ ಜ್ಞಾನಶೂನ್ಯರೂ ಆದರೂ ಜನತೆಯ ಮನಸ್ಸಿನಲ್ಲಿ ಮೂಡಿತು. ಏಳುವರ್ಷಗಳ ಕಾಲ ಘೋರಯುದ್ಧವನ್ನು ನಡೆಸಿದರೂ ಚೀನೀಯರು ತಮ್ಮ ಧರ್ಮಶ್ರದ್ಧೆಯ ನಿಲುವನ್ನು, ಮನಸ್ಸಿನ ಹರ್ಷವನ್ನು ಕಳೆದುಕೊಳ್ಳದೆ ಇರುವುದನ್ನು ನೋಡಿದ್ದೇವೆ. ಭಾರತದಲ್ಲಿ ನಮ್ಮ ಹೋರಾಟ ಬಹುಕಾಲದಿಂದ ನಡೆದಿದೆ. ಬಡತನ, ಕಷ್ಟಜೀವನ ನಮ್ಮ ಬೆನ್ನು ಅಂಟಿಬಂದಿವೆ. ಆದರೂ ನಕ್ಕು, ಹಾಡಿ, ಕುಣಿದು ನಲಿಯುತ್ತಾರೆ; ಇನ್ನೂ ಜನರು ಆಶಾಶೂನ್ಯರಾಗಿಲ್ಲ.

## ೭. ಸಂಘಟನೆ ಮತ್ತು ಸಮಾಜ ವ್ಯವಸ್ಥೆ : ಜಾತಿ ಪದ್ಧತಿಯ ಆರಂಭ.

ಆರ್ಯರ ಆಗಮನದಿಂದ ಇಂಡಿಯದಲ್ಲಿ ಹೊಸ ಸಮಸ್ಯೆಗಳು ಉದ್ಭವಿಸಿದವು.—ಜನಾಂಗದ ಸಮಸ್ಯೆಗಳು ಮತ್ತು ರಾಜಕೀಯ ಸಮಸ್ಯೆಗಳು. ಸೋತ ದ್ರಾವಿಡರಿಗೆ ಸಹಸ್ರಾರು ವರ್ಷಗಳ ನಾಗರಿಕತೆಯ ಹಿನ್ನೆಲೆ ಇತ್ತು; ಆರ್ಯರು ದ್ರಾವಿಡರಿಗಿಂತ ತಾವು ಬಹಳ ಶ್ರೇಷ್ಠರೆಂದು ಭಾವಿಸಿದ್ದರು. ಆದ್ದರಿಂದ ಇಬ್ಬರಮಧ್ಯೆ ಅಂತರಾಳ ಬಹಳ ದೊಡ್ಡದಿತ್ತು. ಇದಲ್ಲದೆ ಕೆಲವರು ಹಿಂದುಳಿದ ಅನಾಗರಿಕ ಜನರು,

ಅಲೆಮಾರಿಗಳು, ಕಾಡುಜನರು ಇದ್ದರು. ಈ ಜನಗಳ ಮಧ್ಯದ ಹೋರಾಟ ಮತ್ತು ಪರಸ್ಪರ ಪರಿಣಾಮದಿಂದ ಮುಂದಿನ ಶತಮಾನಗಳಲ್ಲಿ ಭಾರತೀಯ ಜೀವನದಲ್ಲಿ ಪ್ರಚಂಡ ಪರಿಣಾಮಮಾಡಿದ ಜಾತಿ ಪದ್ಧತಿಯು ಕ್ರಮೇಣ ರೂಪುಗೊಂಡಿತು. ಪ್ರಾಯಶಃ ಇದು ಆರ್ಯರದೂ ಅಲ್ಲ ದ್ರಾವಿಡರದೂ ಅಲ್ಲ. ಅಂದಿನ ವಾಸ್ತವ ಪರಿಸ್ಥಿತಿಗನುಗುಣವಾಗಿ ವಿವಿಧ ಜನಾಂಗಗಳನ್ನು ಒಂದು ಸಮಾಜ ರಚನೆಯಲ್ಲಿ ಒಟ್ಟುಗೂಡಿಸುವ ಪ್ರಯತ್ನ. ಆದರೆ ಅದರ ಬೆಲೆಯನ್ನು ತದನಂತರದ ಮೌಲ್ಯಗಳಿಂದ ಅಥವ ಬೆಳವಣಿಗೆಯಿಂದ ನಿಷ್ಕರ್ಷೆಮಾಡಲು ಸಾಧ್ಯವಿಲ್ಲ. ಆ ಕಾಲಕ್ಕೆ ಅದು ಸರಿತೋರಿತು. ಪ್ರಾಯಶಃ ಚೀನಾ ಒಂದು ಬಿಟ್ಟರೆ ಉಳಿದೆಲ್ಲ ನಾಗರಿಕತೆಗಳಲ್ಲಿ ಈ ಬಗೆಯ ಒಂದು ವಿಂಗಡಣೆ ನಡೆದಿದೆ. ಇರಾಣದಲ್ಲಿ ಸಸ್ಸೇನಿಯನ್ ಯುಗದಲ್ಲಿ ಆರ್ಯರ ಇನ್ನೊಂದು ಶಾಖೆಯಲ್ಲಿ ನಾಲ್ಕು ಪಂಗಡಗಳಿದ್ದವು. ಆದರೆ ಅವು ಕಠಿಣ ಜಾತಿಗಳಾಗಿ ಪರಿಣಮಿಸಲಿಲ್ಲ. ಗ್ರೀಸ್ ಮೊದಲುಗೊಂಡು ಈ ಎಲ್ಲ ಪುರಾತನ ನಾಗರೀಕತೆಗಳಲ್ಲಿ ಸಾಮೂಹಿಕ ಗುಲಾಮಗಿರಿಯಿತ್ತು. ಮನೆಯ ಆಳುಗಳು ಕೆಲವರಿದ್ದರೂ ಭಾರತದಲ್ಲಿ ಆ ಬಗೆಯ ಸಾಮೂಹಿಕದಾಸ್ಯ ಇರಲಿಲ್ಲ. ಪ್ಲೇಟೊ ತನ್ನ 'ರಿಪಬ್ಲಿಕ್' ನಲ್ಲಿ ಚಾತುರ್ವರ್ಣಕ್ಕೆ ಸಮಾನವಾದ ನಾಲ್ಕು ಪಂಗಡಗಳನ್ನು ಹೇಳುತ್ತಾನೆ. ಮಧ್ಯಯುಗದ ಕ್ಯಾಥೋಲಿಕ್ ಮತದಲ್ಲಿ ಸಹ ಈ ಬಗೆಯ ಭೇದಗಳಿದ್ದವು.

ಆರ್ಯರು ಮತ್ತು ಅನಾರ್ಯರ ಮಧ್ಯೆ ಗೆರೆಕೊರೆದಂತೆ ಕಟ್ಟುನಿಟ್ಟಾದ ವಿಭಜನೆಯಿಂದ ಜಾತಿಗಳಾದವು. ಅನಾರ್ಯರನ್ನು ಪುನಃ ದ್ರಾವಿಡ ಜನಾಂಗಗಳು, ಆನಾಗರಿಕರು ಎಂದು ವಿಂಗಡಿಸಿದರು. ಆರ್ಯರೆಲ್ಲ ಒಂದೇ ಗುಂಪಿನವರಾಗಿದ್ದರು. ಒಳಭೇದಗಳಿರಲಿಲ್ಲ. ಆರ್ಯ ಶಬ್ದದ ಮೂಲಧಾತುವಿನ ಅರ್ಥ 'ಉಳು' ಎಂದು. ಆರ್ಯರೆಲ್ಲರೂ ಕೃಷಿಕರಾಗಿದ್ದರು. ವ್ಯವಸಾಯದಲ್ಲಿ ನಿರತರಾಗಿರುವವರಿಗೆ ಗೌರವವಿತ್ತು. ನೆಲವನ್ನು ಉಳುವ ಕೃಷಿಕ ಪುರೋಹಿತನಾಗಿ, ಸೈನಿಕನಾಗಿ, ವ್ಯಾಪಾರಿಯಾಗಿ ಕೆಲಸಮಾಡುತ್ತಿದ್ದ. ಪೌರೋಹಿತ್ಯಕ್ಕೆಂದು ಒಂದು ಮೀಸಲಾದ ಪಂಗಡವಿರಲಿಲ್ಲ. ಆರ್ಯರನ್ನು ಅನಾರ್ಯರಿಂದ ಪ್ರತ್ಯೇಕಿಸಲು ವ್ಯವಸ್ಥೆಗೊಳಿಸಿದ ಜಾತಿ ವಿಭಜನೆಗಳು ಆರ್ಯರ ಮೇಲೆ ಪರಿಣಾಮಮಾಡಿದವು. ಕಾರ್ಯವಿಭಜನೆ, ಪ್ರಾವೀಣ್ಯತೆ ಹೆಚ್ಚಿದಂತೆ ಹೊಸಪಂಗಡಗಳಾಗಿ ಹೊಸಜಾತಿಗಳಾದವು.

ಗೆದ್ದವರು ಸೋತವರನ್ನು ನಿರ್ನಾಮಮಾಡುವುದು ಅಥವ ಗುಲಾಮರನ್ನಾಗಿ ಮಾಡುವುದೇ ವಾಡಿಕೆಯಾಗಿದ್ದ ಕಾಲದಲ್ಲಿ ಈ ಜಾತಿಪದ್ಧತಿಯು ಬಹುವಿಧ ಕಾರ್ಯವೈಶಿಷ್ಟ್ಯಕ್ಕನುಗುಣವಾಗಿ ಒಂದು ಶಾಂತಿಯುತ ಪರಿಹಾರ ಮಾರ್ಗವನ್ನು ತೋರಿತು. ಜೀವನವಿಭಜನೆಗಳಾದವು. ಕೃಷಿಕ ಜನಸಮುದಾಯದಿಂದ ಕೃಷಿ, ಕೈಗಾರಿಕೆ, ವ್ಯಾಪಾರವನ್ನವಲಂಬಿಸಿದವರು ವೈಶ್ಯರಾದರು ; ರಾಜರು, ಯೋಧರು, ಕ್ಷತ್ರಿಯರಾದರು; ರಾಷ್ಟ್ರದ ಆದರ್ಶಗಳನ್ನು ಕಾಪಾಡಿಕೊಂಡು ಬಂದು, ಅನುಷ್ಠಾನದಲ್ಲಿಟ್ಟು, ರಾಷ್ಟ್ರ ನೀತಿಯ ಮಾರ್ಗದರ್ಶಕರಾದ ಪುರೋಹಿತರು ಮತ್ತು ಜ್ಞಾನಿಗಳು ಬ್ರಾಹ್ಮಣರಾದರು. ಈ ಮೂರು ವರ್ಣಗಳ ಕೆಳಗೆ ಶ್ರಮಜೀವಿಗಳು, ಕೂಲಿಮಾಡುವವರು, ಇತರ ಕೃಷಿಕರು ಶೂದ್ರರಾದರು. ಸ್ಥಳೀಯ ಪಂಗಡಗಳು ಕ್ರಮೇಣ ಕೊನೆಯ ಶೂದ್ರ ಜಾತಿಯಲ್ಲಿ ಸೇರಿಕೊಂಡು ಶೂದ್ರರಾದರು. ಈ ಸಮ್ಮಿಶ್ರಣ ಕಾರ್ಯ ತಡೆಯಿಲ್ಲದೆ ನಡೆದಿದೆ. ಮೊದಲು ಮೊದಲು ಜಾತಿಗಳು ಒಂದಕ್ಕೊಂದು ಬೆರೆಯುತ್ತಿದ್ದವು ; ಕಾಠಿನ್ಯತೆ ಬಂದುದು ಬಹಳ ದಿನಗಳಾದ ಮೇಲೆ. ರಾಜ್ಯಾಡಳಿತಗಾರರಿಗೆ ಹೆಚ್ಚು ಸ್ವಾತಂತ್ರ್ಯವಿತ್ತು. ಯುದ್ಧದಲ್ಲಿ ಗೆದ್ದೋ ಅಥವಾ ಇನ್ನಾವ ರೀತಿಯಲ್ಲೋ ಅಧಿಕಾರ ದೊರೆತೊಡನೆ ಯಾವ ಜಾತಿಯವನಾದರೂ ಕ್ಷತ್ರಿಯನಾಗುತ್ತಿದ್ದ; ಪುರೋಹಿತನ ಸಹಾಯದಿಂದ ಯಾವುದೋ ಒಂದು ಸನಾತನ ಆರ್ಯಪುರುಷನ ವಂಶಜನೆಂದು ವಂಶವೃಕ್ಷವನ್ನು ಸೃಷ್ಟಿಸುತ್ತಿದ್ದ.

ಕ್ರಮೇಣ ಆರ್ಯ ಎಂಬ ಶಬ್ದಕ್ಕೆ ಜನಾಂಗದ ಅರ್ಥ ಹೋಗಿ ಕುಲೀನ ಎಂಬ ಅರ್ಥ ಬಂದಿತು. ಅಂತೆಯೇ ಅನಾರ್ಯ ಎಂದರೆ ನಿಕೃಷ್ಟ ಎಂದು ಅರ್ಥವಾಗಿ, ಸಾಮಾನ್ಯವಾಗಿ ಕಾಡುಜನರ ಅಲೆಮಾರಿಗಳ ಹೆಸರಾಯಿತು.

ಭಾರತೀಯರು ವಿಶ್ಲೇಷಣ ರೀತಿಯಲ್ಲಿ ಬಹು ಚತುರರು. ತಮ್ಮ ಭಾವನೆಗಳನ್ನು, ಆಲೋಚನೆಗಳನ್ನು, ಜೀವನ ಕಾರ್ಯಗಳನ್ನು ವಿಂಗಡಿಸುವದರಲ್ಲಿ ತೀವ್ರ ಆಸಕ್ತರು. ಸಮಾಜವನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿದ್ದಲ್ಲದೆ ವ್ಯಕ್ತಿ ಜೀವವನ್ನೂ ನಾಲ್ಕು ಭಾಗಗಳಾಗಿ ಮಾಡಿದರು. ಮೊದಲನೆಯದು ಬಾಲ್ಯ, ಬೆಳವಣಿಗೆ, ಜ್ಞಾನಾರ್ಜನೆ, ಆತ್ಮ ಶಿಕ್ಷಣ, ಆತ್ಮ ಸಂಯಮ ಮತ್ತು ಬ್ರಹ್ಮಚರ್ಯದ ಶಿಷ್ಯವೃತ್ತಿ. ಎರಡನೆಯದು, ಪ್ರಪಂಚಾನುಭವದ ಗೃಹಸ್ಥಾಶ್ರಮ. ಮೂರನೆಯದು, ಸಮದೃಷ್ಟಿಯಿಂದ ಪ್ರಪಂಚಪರಿಜ್ಞಾನವನ್ನು ಪಡೆದು ನಿಷ್ಕಾಮ ಕರ್ಮದಿಂದ ಸಾರ್ವಜನಿಕ ಸೇವೆಯ ವಾನಪ್ರಸ್ಥ. ನಾಲ್ಕನೆಯದು ಪ್ರಪಂಚ ವಿಷಯಗಳಿಗೆ ದೂರನಾಗಿ ವಿರಕ್ತ ಜೀವನ ನಡೆಸುವ ಸಂನ್ಯಾಸ. ಈ ರೀತಿ ಮಾನವ ಸ್ವಭಾವ ಸಹಜವಾದ ಪೂರ್ಣ ಜೀವನಾಸಕ್ತಿ ಮತ್ತು ಜೀವನ ನಿರಸನ ದೃಷ್ಟಿ, ಎರಡನ್ನೂ ಜೀವನ ಕ್ರಮದಲ್ಲಿ ಸಮಂಜಸಗೊಳಿಸಿದರು.

ಚೀನಾದಂತೆ ಇಂಡಿಯದಲ್ಲಿ ಸಹ ವಿದ್ಯೆ ಮತ್ತು ಪಾಂಡಿತ್ಯಕ್ಕೆ ಬಹಳ ಗೌರವವಿತ್ತು. ಪಂಡಿತನಾದವನು ಮಹಾಜ್ಞಾನಿ ಮತ್ತು ಸದ್ಗುಣಿ ಎಂಬ ಭಾವನೆಯಿತ್ತು. ಜ್ಞಾನಿಗಳ ಎದುರಿನಲ್ಲಿ ಸಾಮ್ರಾಟರೂ, ಮಹಾವೀರರೂ ಶರಣಾಗತರಾಗುತ್ತಿದ್ದರು. ಪ್ರಾಚೀನ ಭಾರತೀಯ ಸಿದ್ಧಾಂತದಂತೆ ಅಧಿಕಾರ ನಡೆಸತಕ್ಕವರಲ್ಲಿ ಸಂಪೂರ್ಣ ನಿಸ್ವಾರ್ಥತೆ ಅಸಾಧ್ಯ. ಅದರ ವೈಯಕ್ತಿಕ ಹಿತಾಹಿತಗಳು, ಮತ್ತು ಒಲವುಗಳಿಗೂ ಸಾರ್ವಜನಿಕ ಕರ್ತವ್ಯಕ್ಕೂ ಘರ್ಷಣೆಗಳಾಗುವ ಸಂಭವವಿತ್ತು. ಆದ್ದರಿಂದ ನೈತಿಕ ಉನ್ನತಿಯನ್ನು ಕಾಪಾಡಿಕೊಂಡು ಮೌಲ್ಯನಿರ್ಧಾರ ಮಾಡುವ ಕಾರ್ಯವನ್ನು ಜೀವನದಲ್ಲಿ ಯಾವ ಆಶೆ ಪ್ರತ್ಯಾಶೆಗಳು, ದಾಕ್ಷಿಣ್ಯಗಳು, ಯೋಚನೆಗಳೂ ಇಲ್ಲದೆ, ಒಂದು ನಿರ್ಲಿಪ್ತ ಭಾವನೆಯಿಂದ ಪ್ರಪಂಚದ ಸಮಸ್ಯೆಗಳನ್ನು ನೋಡಬಲ್ಲ ಸ್ವತಂತ್ರ ತತ್ವಜ್ಞಾನಿಗಳಿಗೆ ಒಪ್ಪಿಸಲಾಗಿತ್ತು. ಈ ಜ್ಞಾನ ಸಾಧಕರ, ತತ್ವ ಜ್ಞಾನಿಗಳ ಪಂಗಡಕ್ಕೆ ಸಮಾಜ ಜೀವನದಲ್ಲಿ ಉನ್ನತ ಸ್ಥಾನವಿತ್ತು. ಅವರು ಸರ್ವಮಾನ್ಯರಾಗಿ, ಪೂಜ್ಯರಾಗಿದ್ದರು. ಅವರ ತರುವಾಯ ಕರ್ಮವೀರರು, ರಾಷ್ಟ್ರಪತಿಗಳು, ಮಹಾಯೋಧರುಗಳು; ಅವರು ಎಷ್ಟೇ ಶಕ್ತಿವಂತರಾಗಿದ್ದರೂ ತತ್ವಜ್ಞಾನಿಗಳಿಗಿದ್ದ ಗೌರವ ಅವರಿಗಿರಲಿಲ್ಲ. ಶ್ರೀಮಂತಿಕೆಗೆ ಇನ್ನೂ ಕಡಮೆ ಗೌರವ. ಯೋಧರಾದ ಕ್ಷತ್ರಿಯರಿಗೆ ಅತ್ಯುನ್ನತ ಗೌರವ ಸಲ್ಲದಿದ್ದರೂ ತುಂಬ ಮರ್ಯಾದೆ ಇತ್ತು. ಚೀನಾದಂತೆ ಭಾರತದಲ್ಲಿ ಅವರನ್ನು ನಿಕೃಷ್ಟರೆಂದು ಕಾಣುತ್ತಿರಲಿಲ್ಲ.

ಕ್ರೈಸ್ತ ಧರ್ಮದ ಪ್ರಾಬಲ್ಯದ ಕಾಲದಲ್ಲಿ ರೋಮನ್ ಕ್ರೈಸ್ತ ಧರ್ಮವು ತಾತ್ವಿಕ, ಧಾರ್ಮಿಕ, ನೈತಿಕ ಮುಂದಾಳುತನವನ್ನು ವಹಿಸಿಕೊಂಡು, ರಾಷ್ಟ್ರಧರ್ಮದ ಸಾಮಾನ್ಯ ನಿಯಮಗಳನ್ನು ಸಹ ವಿಧಿಸುತ್ತಿದ್ದಾಗ, ಮಧ್ಯಯುಗದ ಯೂರೋಪಿನಲ್ಲಿ ಸ್ವಲ್ಪ ಹೆಚ್ಚು ಕಡಮೆ ಇದೇ ಬಗೆಯ ಸಿದ್ಧಾಂತ ಅನುಸರಣೆಯಲ್ಲಿತ್ತು. ಕಾರ್ಯತಃ ಪ್ರಾಪಂಚಿಕ ಅಧಿಕಾರದಲ್ಲ ರೋಮಿಗೆ ತುಂಬ ಆಸಕ್ತಿ ಇತ್ತು. ಕ್ರೈಸ್ತ ಗುರುಗಳು ಅಧಿಕಾರವೆಲ್ಲ ತಮ್ಮದೆನ್ನುತ್ತಿದ್ದರು. ಭಾರತದಲ್ಲಿ, ಬ್ರಾಹ್ಮಣರು ಜ್ಞಾನಿಗಳನ್ನು, ದಾರ್ಶನಿಕರನ್ನು ಸಮಾಜಸೇವೆಗೆ ಕೊಡುವುದರ ಜೊತೆಗೆ ತಮ್ಮ ಅಸ್ತಿತ್ವದ ವೈಶಿಷ್ಟ್ಯವನ್ನು ಕಾಪಾಡಿಕೊಳ್ಳಲು ಉದ್ಯುಕ್ತರಾದರು. ಒಂದು ರೂಢಮೂಲ ಶಕ್ತಿಯುತ ಪೌರೋಹಿತ್ಯದ ಪಂಗಡವಾದರು. ಆದರೂ ಈ ವರ್ಣಾಶ್ರಮ ಧರ್ಮವು ವಿವಿಧ ಪ್ರಮಾಣದಲ್ಲಿ ಭಾರತೀಯ ಜೀವನದ ಮೇಲೆ ಬಹಳ ಪರಿಣಾಮಮಾಡಿದೆ. ಜ್ಞಾನಿಯಾಗಿ, ದಾನಿಯಾಗಿ ಸದ್ಗುಣಿಯಾಗಿ, ಆತ್ಮಸಂಯಮಿಯಾಗಿ, ಪರರಿಗಾಗಿ ಆತ್ಮತ್ಯಾಗ ಮಾಡಲು ಸಿದ್ಧನಾಗಿ ಇರುವುದೇ ಮಾನವ ಜೀವನದ ಆದರ್ಶಧ್ಯೇಯ ಎಂಬ ಭಾವನೆಗೆ ಕಾರಣವಾಗಿದೆ. ಎಲ್ಲ ಸುರಕ್ಷಿತ, ಪ್ರತಿಷ್ಠಿತ ಪಂಗಡಗಳಂತೆ ಬ್ರಾಹ್ಮಣರಲ್ಲಿ ಸಹ ಅನೇಕ ದುರ್ಗುಣಗಳು ಕಂಡುಬಂದಿವೆ. ಅನೇಕರಲ್ಲಿ ವಿದ್ಯೆಯೂ ಇಲ್ಲ ಗುಣವೂ ಇಲ್ಲ, ಆದರೂ ಜನತೆ ಅವರಿಗೆ ವಿಶೇಷ ಗೌರವವನ್ನು ತೋರಿಸುತ್ತಿದೆ. ಅದಕ್ಕೆ ಕಾರಣ ಅವರ ಅಧಿಕಾರ ಶಕ್ತಿಯಲ್ಲ, ಐಶ್ವರ್ಯವೂ ಅಲ್ಲ. ಆದರೆ ಮೇಲಿಂದ ಮೇಲೆ ಮಹಾ ಮೇಧಾವಿಗಳು ಅವರಲ್ಲಿ ಅವತರಿಸಿರುವುದರಿಂದ ಮತ್ತು ಲೋಕಕಲ್ಯಾಣಕ್ಕಾಗಿ ಅವರು ಮಾಡಿರುವ ಸಾರ್ವಜನಿಕ ಸೇವೆ ಮತ್ತು ಆತ್ಮತ್ಯಾಗವು ಅಪಾರವಾಗಿರುವುದರಿಂದ, ಕಾಲಕಾಲಕ್ಕೆ ಜನ್ಮತಾಳಿದ ಮಹಾ ವಿಭೂತಿಗಳ ಮಾರ್ಗಗಳನ್ನು ಇಡೀ

ಜನಾಂಗವೇ ಆಚರಿಸಿ ಕೃತಕೃತ್ಯತೆ ಪಡೆಯಿತು. ಆದರೂ ಜನತೆಯು ಗುಣವಿಶೇಷಕ್ಕೆ ಗೌರವ ಕೊಟ್ಟಿತೇ ಹೊರತು ಅಧಿಕಾರ ಪದವಿಗಲ್ಲ. ಜ್ಞಾನ ಮತ್ತು ಗುಣ ಯಾವ ವ್ಯಕ್ತಿಯಲ್ಲೇ ಇರಲಿ ಆತನಿಗೆ ಗೌರವ ಸಲ್ಲಿಸುವುದು ಸಂಪ್ರದಾಯವಾಯಿತು. ಈ ರೀತಿ ಅನೇಕ ಬ್ರಾಹ್ಮಣೇತರರನ್ನು, ಅಸ್ಪೃಶ್ಯ ರನ್ನು ಗೌರವಿಸಿದ್ದಾರೆ ಮತ್ತು ಅವರಿಗೆ ಗುರುಪದವಿಯನ್ನೂ ಕೊಟ್ಟಿದ್ದಾರೆ. ಅಧಿಕಾರ ಪದವಿಗೆ ಯೋಧ ಪದವಿಗೆ ಜನ ಭಯಭಕ್ತಿಯನ್ನು ತೋರಿದರೂ, ಈ ವಿಶೇಷ ಗೌರವವನ್ನೆಂದಿಗೂ ತೋರಲಿಲ್ಲ.

ಇಂದಿನ ಹಣಯುಗದಲ್ಲಿ ಸಹ ಈ ಸತ್ಸಂಪ್ರದಾಯ ಮಾಸಿಹೋಗಿಲ್ಲ. ಅದರಿಂದಲೇ ಬ್ರಾಹ್ಮಣ ನಲ್ಲದಿದ್ದರೂ, ಯಾವ ಅಧಿಕಾರಸ್ಥಾನದ ಅಥವ ಶ್ರೀಮಂತಿಕೆಯ ದರ್ಪ ಅಥವ ಒತ್ತಾಯವಿಲ್ಲದೆ ಇದ್ದರೂ ಗಾಂಧಿಜಿ ಜನಕೋಟಿಯ ಹೃದಯವನ್ನು ಕಲಕಬಲ್ಲರು; ಭಾರತದ ಮಹಾ ನಾಯಕನಾಗಿ ರಾಷ್ಟ್ರಸೂತ್ರಗಳನ್ನು ನಡೆಸಬಲ್ಲರು. ಒಂದು ರಾಷ್ಟ್ರದ ಸಾಂಸ್ಕೃತಿಕ ಹಿನ್ನೆಲೆಗೆ, ಅದರ ವ್ಯಕ್ತ ಅಥವ ಅವ್ಯಕ್ತ ಧ್ಯೇಯಕ್ಕೆ ಇದು ಒಳ್ಳೆಯ ಒರೆಗಲ್ಲು; ಇನ್ನೆಂಥ ನಾಯಕನನ್ನು ತಾನೆ ಅದು ಹಿಂಬಾಲಿಸ ಬಲ್ಲುದು.

ಇಂಡಿಯದ ನಾಗರಿಕತೆ ಅಥವ ಭಾರತೀಯ ಆರ್ಯರ ಸಂಸ್ಕೃತಿಯ ಜೀವಾಳ 'ಧರ್ಮ'ದಲ್ಲಿ. ಧರ್ಮವು ಜಾತಿ ಅಥವ ಮತಕ್ಕಿಂತ ಉನ್ನತವಾದದ್ದು. ಅದರಲ್ಲಿ ಕರ್ತವ್ಯಭಾವನೆಯಿದೆ. ತನಗಾಗಿ ಮತ್ತು ಇತರರಿಗಾಗಿ ತನ್ನ ಕರ್ತವ್ಯ ಪಾಲನೆ ಮಾಡುವುದೇ ಧರ್ಮ. ಈ ಧರ್ಮ, ವಿಶ್ವದ ಸಕಲ ವಸ್ತುಗಳ ವ್ಯಾಪಾರಗಳನ್ನು ನಿಯಂತ್ರಿಸುವ ಮೂಲನೈತಿಕನಿಯಮವಾದ "ಋತ"ದ ಒಂದು ಅಂಶ ಮಾತ್ರ. ಅಂತಹ ಒಂದು ನಿಯಮವಿದ್ದರೆ ಮನುಷ್ಯ ಅದಕ್ಕೆ ಹೊಂದಿಕೊಂಡು ಅದರೊಂದಿಗೆ ಸಮ ರಸತೆಯಿಂದಿರುವಂತೆ ಜೀವನ ವ್ಯಾಪಾರ ನಡೆಸಬೇಕು. ಮನುಷ್ಯ ತನ್ನ ಕರ್ತವ್ಯ ತಾನು ಮಾಡಿದರೆ, ಆ ಕರ್ತವ್ಯವು ನೈತಿಕ ದೃಷ್ಟಿಯಿಂದ ಸರಿಯಿದ್ದರೆ ಪ್ರತಿಫಲ ತನಗೆ ತಾನೇ ಹಿಂಬಾಲಿಸುತ್ತದೆ. ಅಧಿಕಾರಕ್ಕೆ ಬಹಳ ಬೆಲೆ ದೊರೆಯಲಿಲ್ಲ. ಹಿಂದಿನ ಕಾಲದಲ್ಲಿ ಸಾಮಾನ್ಯವಾಗಿ ಈ ನಿಷ್ಕಾಮ ದೃಷ್ಟಿಯನ್ನು ಎಲ್ಲ ಕಡೆಯಲ್ಲೂ ಕಾಣುತ್ತೇವೆ. ಇಂದಿನ ಕಾಲದ ವ್ಯಕ್ತಿಯ ಅಧಿಕಾರ, ಪಂಗಡಗಳ ಅಧಿಕಾರ, ರಾಷ್ಟ್ರಗಳ ಅಧಿಕಾರದ ಆಶೆಗೆ ಈ ದೃಷ್ಟಿ ತೀರ ವಿರುದ್ಧವಿದೆ.

### ೮. ಭಾರತೀಯ ಸಂಸ್ಕೃತಿಯ ಅವಿಚ್ಛಿನ್ನತೆ

ಈ ರೀತಿ ಆರಂಭವಾದ ಸಂಸ್ಕೃತಿಯು ಮುಂದಿನ ಯುಗಗಳಲ್ಲಿ ಸಂಪಸ್ಸಮೃದ್ಧವಾಗಿ ಸರ್ವಾಂಗ ಸುಂದರವಾಗಿ ಪ್ರಫುಲ್ಲಿತವಾಯಿತು. ಮತ್ತು ಕ್ರಮೇಣ ಅನೇಕ ವ್ಯತ್ಯಾಸಗಳಾದರೂ ಆ ನಾಗರಿಕತೆ ಇಂದಿಗೂ ಅಮೃತವಾಹಿನಿಯಾಗಿ ಮುಂದುವರಿಯುತ್ತಿದೆ. ಮೂಲಧ್ಯೇಯಗಳು, ವಿಧಿನಿಯಮಗಳು ರೂಪುಗೊಂಡವು. ಸಾಹಿತ್ಯ, ತತ್ವಶಾಸ್ತ್ರ, ಕಲೆ, ನಾಟಕ ಮತ್ತು ಜೀವನದ ಎಲ್ಲ ಕಾರ್ಯಗಳಲ್ಲಿ ಈ ಧ್ಯೇಯಗಳ ಮತ್ತು ವಿಶ್ವದೃಷ್ಟಿಯ ಮೂಲಾಧಾರವನ್ನು ಕಾಣಬಹುದು. ಇಲ್ಲಿಯೇ, ಮುಂದೆ, ಶಾಖೋಪಶಾಖೆಗಳಾಗಿ ಬೃಹದಾಕಾರವಾಗಿ ಬೆಳೆದು ಸರ್ವಸ್ವವನ್ನೂ ತನ್ನ ವಜ್ರಮುಷ್ಟಿಯಲ್ಲಿ ಬಿಗಿ ಹಿಡಿದುಕೊಂಡು ಸಮಾಜ ವಿಭಜನೆಯ ಮತ್ತು ಮಡಿವಂತಿಕೆಯ ಇಂದಿನ ಜಾತಿಪದ್ಧತಿಯ ಬೀಜ ವನ್ನೂ ಕಾಣಬಹುದು. ಯಾವುದೋ ಒಂದು ಕಾಲದ ಅವಶ್ಯಕತೆಗಾಗಿ, ಅಂದಿನ ಸಮಾಜರಚನೆಯ ಭದ್ರತೆಗಾಗಿ, ಅಂತಃಶಕ್ತಿ ಮತ್ತು ಸಮತೂಕಕ್ಕಾಗಿ ರಚಿತವಾದ ಜಾತಿಪದ್ಧತಿ ಆ ಸಮಾಜ ರಚನೆಗೇನೆ ಮಾನವ ಮನಸ್ಸಿಗೇನೆ ಒಂದು ಸೆರೆಮನೆಯಾಯಿತು.

ಆದರೂ ಓಟ ಬಹುದೊಡ್ಡದು; ಅದರ ಚೌಕಟ್ಟಿನಲ್ಲೇ ನಾನಾಮುಖವಾಗಿ ವಿಕಾಸಹೊಂದಲು ಇದ್ದ ಮೂಲ ಜೀವಶಕ್ತಿಯಿಂದ ಇಂಡಿಯದಲ್ಲಿ ಈ ಪದ್ಧತಿಯು ಕಾಶ್ಮೀರದಿಂದ ಕನ್ಯಾಕುಮಾರಿಯ ವರೆಗೆ ಮಾತ್ರವಲ್ಲದೆ ಪೂರ್ವ ಸಮುದ್ರಗಳಾಚೆ ಸಹ ಹರಡಿತು ಮತ್ತು ಮೇಲಿಂದ ಮೇಲೆ ಆಘಾತಗಳು, ದಂಡಯಾತ್ರೆಗಳು ಒದಗಿದರೂ ಉಳಿದು, ಚೇತರಿಸಿಕೊಂಡು ತನ್ನ ಅಸ್ತಿತ್ವವನ್ನು ಕಾದುಕೊಂಡಿದೆ.

ಪ್ರೊಫೆಸರ್ ಮೆಕ್‌ಡೊನೆಲ್‌ರು ತಮ್ಮ ಸಂಸ್ಕೃತಸಾಹಿತ್ಯ ಚರಿತ್ರೆಯಲ್ಲಿ " ಭಾರತೀಯ ಸಾಹಿತ್ಯದ ಪ್ರಾಮುಖ್ಯತೆಯು ಒಟ್ಟಿನಲ್ಲಿ ಅದರ ನವೀನತೆಯಲ್ಲಿದೆ. ಕ್ರಿಸ್ತಪೂರ್ವ ನಾಲ್ಕನೆಯ ಶತಮಾನದ ಅಂತ್ಯಭಾಗದಲ್ಲಿ ಗ್ರೀಕರು ವಾಯುವ್ಯದಲ್ಲಿ ದಂಡೆತ್ತಿ ಬಂದಾಗ ಭಾರತೀಯರು ಪರರ ಪ್ರಭಾವವಿಲ್ಲದ ತಮ್ಮದೇ ಒಂದು ರಾಷ್ಟ್ರೀಯ ಸಂಸ್ಕೃತಿಯನ್ನು ಬೆಳೆಸಿಕೊಂಡು ಬಂದಿದ್ದರು. ಆಮೇಲೆ ಪರ್ಷಿಯನರು, ಗ್ರೀಕರು, ಸಿಥಿಯನರು, ಮಹಮ್ಮದೀಯರು ಪದೇ ಪದೇ ಅಲೆಅಲೆಯಾಗಿ ದಂಡೆತ್ತಿಬಂದು ಜಯಶೀಲರಾದರೂ ಭಾರತೀಯ ಆರ್ಯರ ರಾಷ್ಟ್ರಜೀವನ ಮತ್ತು ಸಾಹಿತ್ಯದ ಪ್ರಗತಿ ಮಾತ್ರ ಬ್ರಿಟಿಷರ ಆಳ್ವಿಕೆಯವರೆಗೂ ವ್ಯತ್ಯಸ್ತವಾಗದೆ ನಿರಾತಂಕವಾಗಿ ನಡೆದುಬಂದಿದೆ. ಇಂಡೊ ಯೂರೊಪಿಯನ್ ಬುಡಕಟ್ಟಿನ ಯಾವ ಶಾಖೆಯೂ ಈ ರೀತಿ ಪರರ ಸಂಪರ್ಕವಿಲ್ಲದೆ ವಿಕಾಸಗೊಳ್ಳಲಿಲ್ಲ. ಚೀನಾ ಒಂದರ ವಿನಾ ಬೇರಾವ ದೇಶವೂ ಈ ರೀತಿ ಮೂರು ಸಾವಿರ ವರ್ಷಗಳಿಂದ ನಿರಾತಂಕವಾಗಿ ಬೆಳೆದು ಬಂದ ಭಾಷೆ ಮತ್ತು ಸಾಹಿತ್ಯ, ಧರ್ಮಶ್ರದ್ಧೆ, ಸಂಪ್ರದಾಯ, ನಾಟಕ ಮತ್ತು ಸಮಾಜ ಪದ್ಧತಿಗಳ ಅಭಿನ್ನ ಚಿತ್ರವನ್ನು ತೋರಲಾರದು.

ಆದರೂ ಭಾರತವು ಸಂಪರ್ಕಶೂನ್ಯವಾಗಿರಲಿಲ್ಲ. ಅದರ ಬಹುಕಾಲದ ಇತಿಹಾಸ ಪರಂಪರೆಯಲ್ಲಿ ಇರಾನಿಗಳು, ಗ್ರೀಕರು, ಚೀನಿಗಳು, ಮಧ್ಯ ಏಷ್ಯದವರು ಮತ್ತು ಇತರರ ಅವಿಚ್ಛಿನ್ನ ಸಜೀವ ಸಂಪರ್ಕವಿತ್ತು. ಈ ಸಂಪರ್ಕವಿದ್ದೂ ಅದರ ಮೂಲ ಸಂಸ್ಕೃತಿ ಉಳಿದಿರಬೇಕಾದರೆ ಆ ರೀತಿ ಉಳಿಯಲು ಅದಕ್ಕೆ ಒಂದು ಅಮೃತತ್ವವನ್ನು ಕೊಟ್ಟು ಜೀವನರಹಸ್ಯವನ್ನರಿಯುವಂತೆ ಮಾಡಿದ ಯಾವುದೋ ಒಂದು ಅಂತಶ್ಶಕ್ತಿ, ಆ ಸಂಸ್ಕೃತಿಯಲ್ಲಿಯೇ ಇರಬೇಕು. ಏಕೆಂದರೆ ಅದರ ಈ ಮೂರು ಅಥವ ನಾಲ್ಕು ಸಾವಿರ ವರ್ಷಗಳ ಸಾಂಸ್ಕೃತಿಕ ಪ್ರಗತಿ ಮತ್ತು ಅವಿಚ್ಛಿನ್ನತೆಯು ಅದ್ಭುತವಾಗಿದೆ.

ಜಗದ್ವಿಖ್ಯಾತ ವಿದ್ವಾಂಸನೂ, ಪೌರ್ವಾತ್ಯ ಸಂಸ್ಕೃತಿ ಮೀಮಾಂಸನ ವಿಚಕ್ಷಣನೂ ಆದ ಮ್ಯಾಕ್ಸ್ ಮುಲ್ಲರ್ " ಅತ್ಯಾಧುನಿಕ ಮತ್ತು ಅತಿ ಪ್ರಾಚೀನ ಹಿಂದೂ ದರ್ಶನಗಳಲ್ಲಿ ಮೂರು ಸಾವಿರ ವರ್ಷಗಳಿಗೆ ಮೀರಿದ ಒಂದು ನಿಜವಾದ ಅಭೇದ್ಯ ಅವಿಚ್ಛಿನ್ನತೆ ಇದೆ" ಎಂದಿದ್ದಾನೆ. ೧೮೮೨ ರಲ್ಲಿ ಕೇಂಬ್ರಿಜ್ ವಿಶ್ವವಿದ್ಯಾನಿಲಯದಲ್ಲಿ ಕೊಟ್ಟ ಉಪನ್ಯಾಸಗಳಲ್ಲಿ ಅತಿ ಉತ್ಸಾಹದಿಂದ " ಪ್ರಕೃತಿದತ್ತ ಸಂಪತ್ತು, ಶಕ್ತಿ, ಮತ್ತು ಸೌಂದರ್ಯಗಳನ್ನು—ಕೆಲವು ವಿಷಯಗಳಲ್ಲಿ ಭೂಸ್ವರ್ಗವನ್ನು-ಕಾಣಬೇಕೆಂದು ಪ್ರಪಂಚದಲ್ಲೆಲ್ಲ ಹುಡುಕಿದರೆ ಅದು ಇಂಡಿಯ. ಮನುಷ್ಯನ ಮನಸ್ಸು ತನ್ನ ಕೆಲವು ಅಪೂರ್ವ ಭಾವನೆಗಳನ್ನು ಸರ್ವಸುಂದರವಾಗಿ ಬೆಳೆಸಿ ಪ್ರಪಂಚಕ್ಕೆ ಮಹಾ ವರಪ್ರದಾನ ಮಾಡಿದುದೆಲ್ಲಿ; ಜೀವನದ ಮಹಾ ಸಮಸ್ಯೆಗಳ ಮೇಲೆ ಆಳವಾಗಿ ಚಿಂತನಮಾಡಿದುದೆಲ್ಲಿ, ಮತ್ತು ಪ್ಲೇಟೊ, ಕ್ಯಾಂಟ್‌ರನ್ನು ಅಭ್ಯಾಸಮಾಡಿದವರೂ ಮಾನ್ಯಮಾಡಬೇಕಾದಂಥ ಸಮಸ್ಯಾ ಪರಿಹಾರಗಳು ಕೆಲವನ್ನು ತೋರಿದುದೆಲ್ಲಿ ಎಂದರೆ ಇಂಡಿಯ. ಗ್ರೀಕರು, ರೋಮನರು, ಒಂದು ಸೆಮಿಟಿಕ್ ಪಂಗಡವಾದ ಯೆಹೂದ್ಯರ ಸಂಸ್ಕೃತಿಯ ನೆರಳಿನಲ್ಲೇ ಬೆಳೆದ ಯುರೋಪಿಯನರಾದ ನಾವು ನಮ್ಮ ಆಂತರಿಕ ಜೀವನವನ್ನು ಸರ್ವವ್ಯಾಪ್ತಿಯುಳ್ಳದ್ದನ್ನಾಗಿ, ವಿಶ್ವದೃಷ್ಟಿಯುಳ್ಳದ್ದನ್ನಾಗಿ ಪರಿಪೂರ್ಣಮಾಡಿಕೊಳ್ಳಬೇಕಾದರೆ, ಇಹಜೀವನದಲ್ಲಿ ಮಾತ್ರವಲ್ಲದೆ ಪುನರ್ಜನ್ಮ ಮತ್ತು ಶಾಶ್ವತಜೀವನಕ್ಕೆ ಸಹ ಅತ್ಯವಶ್ಯವಾದ ಸಮಾಧಾನವನ್ನು ಪಡೆಯಬೇಕಾದರೆ ಯಾವ ಸಾಹಿತ್ಯದಿಂದ ಎಂದರೆ ಭಾರತೀಯ ಸಾಹಿತ್ಯದಿಂದ ಎಂದಿದಾನೆ.

ಸುಮಾರು ಅರ್ಧಶತಮಾನದ ನಂತರ ರೋಮರೋಲಾ ಅದೇ ಧಾಟಿಯಲ್ಲಿ " ಮನುಷ್ಯನು ಜೀವನದ ಕನಸುಗಳನ್ನು ಕಾಣಲು ಆರಂಭಮಾಡಿದ ಮೊದಲ ದಿನಗಳಿಂದಲೂ ಮಾನವ ಜೀವನದ ಎಲ್ಲ ಕನಸುಗಳಿಗೆ ಈ ಪ್ರಪಂಚದಲ್ಲಿ ಒಂದು ಆಗರವೆಂದರೆ ಇಂಡಿಯ " ಎಂದಿದ್ದಾನೆ.

### ೯. ಉಪನಿಷತ್ತುಗಳು

ಸುಮಾರು ಕ್ರಿಸ್ತಪೂರ್ವ ೮೦೦ ರ ಕಾಲದ ಉಪನಿಷತ್ತುಗಳು ಇಂಡೋ ಆರ್ಯರ ಭಾವನಾವಿಕಾ

ಸದ ಇನ್ನೊಂದು ದೊಡ್ಡ ಘಟ್ಟ. ಆರ್ಯರು ಬಂದು ನೆಲಸಿ ಬಹುದಿನಗಳಾಗಿದ್ದವು. ಹೊಸದನ್ನು ಹಳೆಯದರ ಜೊತೆಗೆ ಹೊಂದಿಸಿಕೊಂಡು, ಅನಾಗರಿಕ ಪೂಜಾಪದ್ಧತಿಗಳ ಹಿನ್ನೆಲೆ ಇದ್ದರೂ ಆರ್ಯರ ಆದರ್ಶ, ಭಾವನೆಗಳ ಪ್ರಭಾವಕ್ಕೊಳಗಾಗಿ ಸ್ತಿಮಿತವೂ, ಸಂಪದ್ಯುಕ್ತವೂ ಆದ ಒಂದು ನಾಗರಿಕತೆ ನೆಲಸಿತ್ತು. ವೇದಗಳಿಗೆ ಗೌರವ ದೊರೆತರೂ ಆ ಗೌರವದಲ್ಲೂ ಒಂದು ಅವ್ಯಕ್ತವಿಡಂಬನ ದೃಷ್ಟಿ ಇದೆ. ವೇದ ದೇವತೆಗಳಿಂದ ತೃಪ್ತಿಯಿಲ್ಲ. ಪುರೋಹಿತರ ಯಜ್ಞಯಾಗಾದಿಗಳು ಅಪಹಾಸ್ಯಕ್ರೀಡಾಗಿವೆ. ಆದರೂ ಹಿಂದಿನದನ್ನು ಬುಡ ಮೇಲುಮಾಡುವ ಪ್ರಯತ್ನವಿಲ್ಲ; ಅಲ್ಲಿಂದಲೇ ಮುಂದಿನ ಪ್ರಗತಿಯ ಉಗಮವಾಗಿದೆ.

ಉಪನಿಷತ್ತುಗಳಲ್ಲಿ ಅಂತಃಪ್ರೇರಣೆಯ ವಿಚಾರ ದೃಷ್ಟಿ ಇದೆ; ಮನೋಸಾಹಸ ಮತ್ತು ವಸ್ತುವಿಷಯಸತ್ಯಾನ್ವೇಷಣೆಯ ಮನೋವೇಗವಿದೆ. ಈ ಸತ್ಯಾನ್ವೇಷಣೆಯ ಮಾರ್ಗ ಆಧುನಿಕ ವಿಜ್ಞಾನಶಾಸ್ತ್ರದ ವಾಸ್ತವಿಕ ಮಾರ್ಗವಲ್ಲದಿದ್ದರೂ, ಆ ಪ್ರವೇಶದಲ್ಲಿಯೇ ಒಂದು ವಿಜ್ಞಾನಮಾರ್ಗದ ಛಾಯೆ ಇದೆ. ಸಿದ್ಧಾಂತ ಯಾವುದೂ ಅಡ್ಡಬರುವುದಿಲ್ಲ. ಅಲ್ಪವಿಷಯಗಳೂ, ಇಂದು ಅರ್ಥವಿಲ್ಲದ ಸಮಂಜಸವಲ್ಲದ ವಿಷಯಗಳೂ ಅನೇಕ ಇವೆ. ಮುಖ್ಯವಾಗಿ ಆತ್ಮಸಾಕ್ಷಾತ್ಕಾರಕ್ಕೆ,—ಮೂಲತಃ ಒಂದೇ ಆದ ವ್ಯಕ್ತಿಗತ ಆತ್ಮ ಮತ್ತು ಪರಮಾತ್ಮನ—ಜ್ಞಾನಸಾಧನೆಗೆ ಪ್ರಾಮುಖ್ಯತೆ ಕೊಟ್ಟವೆ. ವಾಸ್ತವಿಕ ಬಾಹ್ಯ ಪ್ರಪಂಚವನ್ನು ಮಾಯೆಯೆಂದು ಭಾವಿಸಿಲ್ಲ, ಆದರೆ ಒಂದು ಸಾಪೇಕ್ಷ ಭಾವನೆಯಿಂದ ಸತ್ಯ, ಅಂತಃ ಸತ್ಯತೆಯ ಒಂದು ಭಾವ ಎಂದಿದಾರೆ.

ಉಪನಿಷತ್ತುಗಳಲ್ಲಿ ಅನೇಕ ಅನುಮಾನಗಳಿವೆ. ಅವುಗಳಿಗೆ ಅನೇಕ ವ್ಯಾಖ್ಯಾನಗಳಾಗಿವೆ. ಆದರೆ ಅದು ದಾರ್ಶನಿಕನ ಅಥವ ಪಂಡಿತನ ಕೆಲಸ. ಸಾಮಾನ್ಯ ಒಲವು ಏಕತ್ವವಾದದಕಡೆ. ಅವುಗಳ ಪ್ರಯತ್ನವೆಲ್ಲ ಭಯಂಕರ ಚರ್ಚೆಗೆ ಎಡೆಗೊಡುತ್ತಿದ್ದ ಆಗಿನ ಕಾಲದ ಭೇದ ವೈಷಮ್ಯಗಳನ್ನು ಕಡಮೆಮಾಡುವ ಪ್ರಯತ್ನವೆಂದು ಎದ್ದುಕಾಣುತ್ತದೆ. ಅದರ ಮಾರ್ಗ ಸಂಘಟನೆಯ ಮಾರ್ಗ. ತಂತ್ರಶಕ್ತಿ ಮತ್ತು ಅತಿಮಾನುಷ ಜ್ಞಾನದಲ್ಲಿ ಆಸಕ್ತಿಯನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸಲಾಗಿದೆ. ಜ್ಞಾನಶೂನ್ಯ ಯಜ್ಞಯಾಗಾದಿಗಳು ವ್ಯರ್ಥ,–'ಜ್ಞಾನಿಗಳು, ಪಂಡಿತರು ಎಂದು ಭಾವಿಸಿ ಅವುಗಳಲ್ಲಿಯೇ ನಿರತರಾದವರು ಕುರುಡನಿಗೆ ಕುರುಡ ಮಾರ್ಗದರ್ಶಕನಾದಂತೆ ಗುರಿಯಿಲ್ಲದೆ ವ್ಯರ್ಥ ತೊಳಲಿ ಗುರಿಮುಟ್ಟದೆ ನಿರಾಶರಾಗುತ್ತಾರೆ' ಎಂದಿದೆ. ವೇದಗಳು ಸಹ ಕೆಳಮಟ್ಟದ ಜ್ಞಾನ. ಆತ್ಮ ಸಾಕ್ಷಾತ್ಕಾರದ ಜ್ಞಾನವೇ ದಿವ್ಯಜ್ಞಾನ. ನೈತಿಕ ಶಿಕ್ಷಣವಿಲ್ಲದೆ ದಾರ್ಶನಿಕಜ್ಞಾನ ನಿಷ್ಫಲ. ತಾತ್ವಿಕ ಸಾಹಸದೊಂದಿಗೆ ಸಾಮಾಜಿಕ ಕಾರ್ಯ ತತ್ಪರತೆಯನ್ನು ಸಮಂಜಸಗೊಳಿಸುವ ಪ್ರಯತ್ನ ಸತತವಾಗಿ ನಡೆದಿದೆ. ಜೀವನದ ಕರ್ತವ್ಯ, ಧರ್ಮಗಳ ಪಾಲನೆ ನಿಷ್ಕಾಮಕರ್ಮದಿಂದ ನಡೆದಿದೆ.

ಪ್ರಾಯಶಃ ವೈಯಕ್ತಿಕ ಪರಿಪೂರ್ಣತೆಯ ನೀತಿಗೆ ಅತಿ ಪ್ರಾಮುಖ್ಯತೆ ದೊರೆತು ಸಾಮಾಜಿಕ ದೃಷ್ಟಿಗೆ ಧಕ್ಕೆ ಬಂದಿತು. ಪುರುಷನಿಗಿಂತ ಶ್ರೇಷ್ಠವಾದುದು ಇನ್ನೊಂದಿಲ್ಲ ಎಂದು ಉಪನಿಷತ್ತುಗಳು ಸಾರುತ್ತಿವೆ. ಸಮಾಜ ಭದ್ರತೆ ದೃಢಗೊಂಡಿರಬೇಕು; ಆದ್ದರಿಂದ ಮನುಷ್ಯನ ಮನಸ್ಸೆಲ್ಲ ಆತ್ಮೋನ್ನತಿಯ ಕಡೆಗೆ ಹೊರಳಿದೆ. ಈ ಅನ್ವೇಷಣೆಯಲ್ಲಿ, ಅಂತರಿಕ್ಷಗಳಲ್ಲಿ, ಅಂತರಂಗದ ಅಂತರಾಳಗಳಲ್ಲಿ ಅವನ ಮನಸ್ಸು ಅಲೆಯಿತು. ಚೀನ, ಗ್ರೀಸ್, ರೋಮ್ ರಾಜ್ಯಗಳು ಒಂದೊಂದು ಕಾಲದಲ್ಲಿ ಒಂದೊಂದು ಜಗತ್ಕೇಂದ್ರವೆಂದು ಭಾವಿಸಿದ್ದಂತೆ ಭಾರತದಲ್ಲಿಯೂ ಆ ಭಾವನೆ ಇದ್ದಿರಬಹುದಾದರೂ ಈ ಪುರಾತನ ಭಾರತೀಯ ದೃಷ್ಟಿ ಒಂದು ಸಂಕುಚಿತ ರಾಷ್ಟ್ರೀಯ ದೃಷ್ಟಿಯಲ್ಲ. "ಮಾನವ ಪ್ರಪಂಚದ ಜೀವನವೆಲ್ಲ ಪರಸ್ಪರ ಅವಲಂಬಿತ" ಎಂದು ಮಹಾಭಾರತದ ಉಕ್ತಿ.

ಉಪನಿಷತ್ತುಗಳಲ್ಲಿ ಚರ್ಚಿಸಿರುವ ಪ್ರಶ್ನೆಗಳ ತಾತ್ವಿಕದೃಷ್ಟಿ ನನಗೆ ಅರ್ಥಮಾಡಿಕೊಳ್ಳಲು ಸ್ವಲ್ಪ ಕಷ್ಟ. ಆದರೆ ಅಂಥ ಶ್ರದ್ಧೆ ಮತ್ತು ಸಿದ್ಧಾಂತ ವಾದದಲ್ಲಿ ಮುಳುಗಿದ ಈ ಸಮಸ್ಯೆಗಳನ್ನು ಪ್ರವೇಶಿಸುವ ರೀತಿಗೆ ಮನ ಸೋತಿದ್ದೇನೆ. ಆ ಪ್ರವೇಶ ಮತೀಯವಲ್ಲ; ಆದರೆ ದಾರ್ಶನಿಕ. ಅಲ್ಲಿ ಕಾಣುವ ಬುದ್ಧಿ ತೀಕ್ಷ್ಣತೆ, ಪ್ರಶ್ನಿಸುವ ರೀತಿ, ಮತ್ತು ವಿಚಾರ ಪರಿಪೂರ್ಣತೆಯ ಹಿನ್ನೆಲೆ ಬಹು

ಸೊಗಸಾಗಿವೆ. ಅನೇಕ ವೇಳೆ ಗುರುಶಿಷ್ಯರಲ್ಲಿ ನಡೆದ ಪ್ರಶ್ನೆ ಮತ್ತು ಉತ್ತರಗಳ ರೂಪ ಕ್ಲಿಷ್ಟವಾಗಿದೆ. ಉಪನಿಷತ್ತುಗಳು ಗುರುಗಳ ಉಪನ್ಯಾಸದ ಅಥವ ಶಿಷ್ಯರು ಬರೆದುಕೊಂಡ ಟಿಪ್ಪಣಿಗಳು ಎಂದು ಕೆಲವರು ಸೂಚಿಸುತ್ತಾರೆ. ಪ್ರೊಫೆಸರ್ ಡಬ್ಲ್ಯು. ಥಾಮಸ್ 'ಭಾರತದ ಆಸ್ತಿ' (Legacy of India) ಎಂಬ ಗ್ರಂಥದಲ್ಲಿ "ಉಪನಿಷತ್ತುಗಳಿಗೆ ಒಂದು ಗುಣ ವೈಶಿಷ್ಟ್ಯ ಮತ್ತು ನಿಶ್ಶಂಕಿತ ಮಾನವೀಯತೆಯ ದೃಷ್ಟಿಯನ್ನು ಕೊಡುವುದು ಅದರ ಮಾತಿನ ಉತ್ಕಟ ಪ್ರಾಮಾಣಿಕತೆ. ಅದು ಒಂದು ಮಹಾಸಮಸ್ಯೆಯ ವಿಚಾರದಲ್ಲಿ ಸ್ನೇಹಿತರು ಮಾಡುವ ಆಪ್ತಾಲೋಚನೆಯಂತೆ ಇದೆ ಎಂದಿದ್ದಾನೆ. ಅವುಗಳ ವಿಷಯದಲ್ಲಿ ಸಿ. ರಾಜಗೋಪಾಲಾಚಾರ್ಯರು "ವಿಶಾಲಭಾವನೆ, ಗಂಭೀರಭಾವನಾಲಹರಿ, ಸತ್ಯಾನ್ವೇಷಣೆಯ ದಾಹ ಇವುಗಳ ಉದ್ವೇಗದಿಂದ ಉದ್ಭೂತವಾದ ನಿರ್ಭಯಶೋಧನಾದೃಷ್ಟಿಯಿಂದ ಉಪನಿಷತ್ತುಗಳ ಗುರುಶಿಷ್ಯರು ವಿಶ್ವದ ಸ್ಪಷ್ಟರಹಸ್ಯವನ್ನು ಅಗೆಯುವುದನ್ನು ನೋಡಿದರೆ ಪ್ರಪಂಚದ ಈ ಪವಿತ್ರ ಪುರಾತನ ಗ್ರಂಥಗಳು ಈಗಲೂ ಅತ್ಯಾಧುನಿಕವೂ ಸರ್ವಾದರಣೀಯವೂ ಆದ ಗ್ರಂಥಗಳಾಗಿವೆ."

ಉಪನಿಷತ್ತುಗಳ ಮುಖ್ಯ ಗುಣ ಸತ್ಯಾವಲಂಬನೆ. "ಸತ್ಯಮೇವ ಜಯತೇ ನಾನೃತಂ ಸತ್ಯೇನ ಪಂಥಾ ವಿತತೋ ದೇವಯಾನಃ" (ಗೆಲುವು ಸತ್ಯಕ್ಕೆ, ಅಸತ್ಯಕ್ಕಲ್ಲ. ಸತ್ಯವೇ ದೇವಮಾರ್ಗ). ಸರ್ವಶ್ರೇಷ್ಠ ಪ್ರಾರ್ಥನೆ ಬೆಳಕಿಗಾಗಿ ಮತ್ತು ಜ್ಞಾನಕ್ಕಾಗಿ. "ಅಸತ್ಯದಿಂದ ಸತ್ಯಕ್ಕೆ ನಡೆಸು. ಕತ್ತಲೆಯಿಂದ ಬೆಳಕಿಗೆ ನಡೆಸು. ಮರಣದಿಂದ ಅಮೃತತ್ವಕ್ಕೆ ನಡೆಸು" ಎಂದು.

"ಅಸತೋ ಮಾಂ ಸದ್ಗಮಯ
ತಮಸೋ ಮಾಂ ಜ್ಯೋತಿರ್ಗಮಯ
ಮೃತ್ಯೋರ್ಮಾಮೃತಂ ಗಮಯ"

ಶಾಂತಿಯಿಲ್ಲದ ಮನಸ್ಸು ಸದಾ ಪ್ರಶ್ನಿಸುತ್ತ, ಸದಾ ಅನ್ವೇಷಣೆ ಮಾಡುತ್ತ ಪುನಃಪುನಃ ಹೊರಗೆ ಇಣಿಕಿನೋಡುತ್ತದೆ. "ಮನಸ್ಸು ತನ್ನ ನೆಲೆ ಸೇರುವುದು. ಯಾವ ಆಣತಿಯಂತೆ? ಪ್ರಪ್ರಥಮ ಜೀವೋತ್ಪತ್ತಿಯಾದ ಆಣತಿಯಿಂದ? ಕಣ್ಣುಗಳು ನೋಡುವಂತೆ, ಕಿವಿ ಕೇಳುವಂತೆ ಆಜ್ಞೆಮಾಡಿದ ದೇವರು ಯಾರು? ವಾಯು ಅಚಲವಾಗಿ ನಿಲ್ಲದೇಕೆ? ಮನುಷ್ಯನ ಮನಸ್ಸಿಗೆ ಶಾಂತಿ ಏಕೆ ಇಲ್ಲ? ನೀರು ಒಂದು ಕ್ಷಣವೂ ನಿಲ್ಲದಂತೆ ಹರಿಯುವುದೇಕೆ? ಏನನ್ನು ಅರಸುತ್ತ ಹರಿಯುತ್ತಿದೆ. ಇದು ಮಾನವನ ಮನಸ್ಸಿನ ಅನಂತಕರೆ. ಮಾರ್ಗಮಧ್ಯೆ ವಿಶ್ರಾಂತಿಯೂ ಇಲ್ಲ, ಮಾರ್ಗಕ್ಕೆ ಕೊನೆಯೂ ಇಲ್ಲ. ಐತರೇಯ ಬ್ರಾಹ್ಮಣದಲ್ಲಿ ನಾವು ಕೈಗೊಳ್ಳಬೇಕಾದ ಈ ಅನಂತ ಯಾತ್ರೆಯ ವಿಷಯವಾಗಿ ಒಂದು ಮಂತ್ರವಿದೆ. ಪ್ರತಿ ಶ್ಲೋಕದ ಕೊನೆಯಲ್ಲೂ ಚರೈವೇತಿ, ಚರೈವೇತಿ—ಎಲೈ ದಾರಿಗನೆ ಮುಂದೆಸಾಗು, ಮುಂದೆಸಾಗು!" ಎಂದಿದೆ.

ಈ ಅನ್ವೇಷಣೆಯಲ್ಲಿ ಸಾಮಾನ್ಯವಾಗಿ ಎಲ್ಲ ಮತಗಳಲ್ಲೂ ಕಾಣಬಹುದಾದ ಸರ್ವಶಕ್ತ ದೇವರ ಎದುರಿನಲ್ಲಿ ತೋರುವ ದೈನ್ಯತೆ ಇಲ್ಲ. ಸುತ್ತಲಿನ ಸನ್ನಿವೇಶಗಳನ್ನೂ ಜಯಿಸುವ ಮನಸ್ಸನ್ನು ಕಾಣುತ್ತೇವೆ. "ನನ್ನ ದೇಹ ಸುಟ್ಟು ಬೂದಿಯಾಗುತ್ತದೆ. ನನ್ನ ಉಸಿರು ಅವಿಶ್ರಾಂತವೂ ಅಮೃತವೂ ಆದ ವಾಯುಮಂಡಲವನ್ನು ಸೇರಿಕೊಳ್ಳುತ್ತದೆ; ಆದರೆ ನಾನೂ ನನ್ನ ಕರ್ಮಗಳೂ ಅಲ್ಲಿ. ಎಲೈ ಮನಸ್ಸೆ ಇದು ಸದಾ ನಿನ್ನ ಸ್ಮರಣೆಯಲ್ಲಿರಲಿ, ಸದಾ ಸ್ಮರಣೆಯಲ್ಲಿರಲಿ." ಒಂದು ಪ್ರಾತಃಸ್ಮರಣೆಯಲ್ಲಿ ಸೂರ್ಯನನ್ನು ಕುರಿತು "ಎಲೈ ದೇದೀಪ್ಯಮಾನನಾದ ದಿವ್ಯ ಪ್ರಭೆಯುಳ್ಳ ಸೂರ್ಯನೆ, ನಿನಗೆ ಕಾಂತಿಯನ್ನು ಕೊಟ್ಟವನು ನಾನೇ" ಎಂದು ಇದೆ. ಎಂತಹ ಉನ್ನತ ಆತ್ಮವಿಶ್ವಾಸ.

ಆತ್ಮ ಎಂದರೇನು? ನಿಷೇದಾರ್ಥಕವಾಗಿ ಅಲ್ಲದೆ ಅದನ್ನು ವಿವರಿಸಲು, ಅಥವ ನಿರ್ದೇಶಿಸಲು ಸಾಧ್ಯವಿಲ್ಲ; "ಇದಲ್ಲ, ಇದಲ್ಲ" ಎಂದು ಅಥವ "ಅದೇ ನೀನು" ಎಂದು. ಪ್ರಜ್ವಲಿತ ಅಗ್ನಿಯಿಂದ ಹೊರಟು ಪುನಃ ಅಗ್ನಿಯನ್ನೇ ಸೇರುವ ಕಿಡಿಯಂತೆ ಜೀವಾತ್ಮ ಪರಮಾತ್ಮನ ಒಂದು ಕಿಡಿಮಾತ್ರ. ಅಗ್ನಿಯು ಪ್ರಪಂಚದಲ್ಲಿ ಯಾವ ವಸ್ತುವನ್ನು ದಹಿಸುತ್ತದೆಯೋ ಆ ವಸ್ತುವಿನ ಆಕಾರವನ್ನು ತಾಳು

ವಂತೆ ಅಂತರಾತ್ಮನು ಸ್ವತಃ ಆಕಾರ ರಹಿತನಾದರೂ, ಯಾವ ವಸ್ತುವನ್ನು ಪ್ರವೇಶಿಸುತ್ತಾನೆಯೋ ಆ ವಸ್ತುವಿನ ಆಕಾರವನ್ನೆ ತಾಳುತ್ತಾನೆ. ಎಲ್ಲ ವಸ್ತುಗಳ ಮುಖ್ಯ ಸಾರವೂ ಒಂದೇ ಎಂಬ ಈ ಪರಿಜ್ಞಾನ ನಮಗೂ ಅವುಗಳಿಗೂ ಮಧ್ಯೇ ಇರುವ ಪ್ರತಿಬಂಧಕಗಳನ್ನು ನಾಶಮಾಡುತ್ತದೆ; ಪ್ರಕೃತಿಗೂ ಮನುಷ್ಯನಿಗೂ ಒಂದು ಐಕ್ಯತೆಯನ್ನು ಬಾಹ್ಯಪ್ರಪಂಚದ ವೈಚಿತ್ರ್ಯ ಮತ್ತು ವೈವಿಧ್ಯತೆಯಲ್ಲಿ ಮೂಲತಃ ಇರುವ ಐಕ್ಯತೆಯನ್ನು ಉಂಟುಮಾಡುತ್ತದೆ. "ಎಲ್ಲವೂ ಆತ್ಮಮಯ ಎಂದು ಅರಿತವನಿಗೆ ದುಃಖವೆಲ್ಲಿ. ಆತ್ಮನಲ್ಲೆ ನೆಟ್ಟ ದೃಷ್ಟಿಯುಳ್ಳವನಿಗೆ ಭ್ರಮೆ ಎಲ್ಲಿ?" "ಸರ್ವಸ್ವವನ್ನೂ ಆತ್ಮನಲ್ಲಿ ಕಾಣುವವನು ಆತ್ಮನನ್ನು ಸರ್ವಸ್ವದಲ್ಲಿ ಕಾಣುವವನು ಆ ಆತ್ಮನಿಂದ ಅಡಗುವುದೆಲ್ಲಿ."

ಎಲ್ಲ ಜಾತಿಮತಗಳ, ಬಾಹ್ಯ ಅಂತರ್ಭೇದಗಳಿಂದ ದೂರವಾಗಿರುವ ಈ ವಿಶ್ವ ವ್ಯಾಪಕ ದೃಷ್ಟಿಯನ್ನು ಇಂಡೋ ಆರ್ಯರ ಉಗ್ರ ವ್ಯಕ್ತಿವಾದ ಮತ್ತು ಮಡಿವಂತಿಕೆಯೊಂದಿಗೆ ಹೋಲಿಸಿ ತುಲನ ಮಾಡುವುದು ಒಳ್ಳೆಯದು. ಈ ದೃಷ್ಟಿ ಒಂದು ವಿಧವಾದ ತಾತ್ವಿಕ ಪ್ರಜಾಸತ್ತೆ. "ಎಲ್ಲದರಲ್ಲೂ ಒಂದೇ ವಸ್ತುವನ್ನು ಕಾಣುವವನು, ಒಂದು ವಸ್ತುವಿನಲ್ಲಿ ಎಲ್ಲವನ್ನೂ ಕಾಣುವವನು ಯಾವ ವಸ್ತುವನ್ನೂ ಕಡೆಗಣಿಸಲಾರ" ಇದು ಒಂದು ಸಿದ್ಧಾಂತ ಮಾತ್ರವಾದರೂ ಅದು ಜೀವನದ ಮೇಲೆ ಸ್ವಲ್ಪ ಮಟ್ಟಿಗಾದರೂ ಪ್ರಭಾವಬೀರಿರಬೇಕು. ಚೀನಿಯರಂತೆ ಭಾರತೀಯ ಸಂಸ್ಕೃತಿಯ ಮುಖ್ಯ ವೈಶಿಷ್ಟ್ಯಗಳಾದ ಪರಸ್ಪರ ಸಹಿಷ್ಣುತೆ, ಯುಕ್ತಾಯುಕ್ತ ವಿವೇಚನೆ, ಸ್ವತಂತ್ರ ಧರ್ಮಾಚರಣೆಯಲ್ಲಿ ಸಹನೆ, ತಾನೂ ಬದುಕಿ ತನ್ನ ನೆರೆಯೂ ಬದುಕಲೆಂಬ ಆಶೆ ಮತ್ತು ಶಕ್ತಿಗಳನ್ನು ಕೊಟ್ಟಿರಬೇಕು. ಮತ ಧರ್ಮದಲ್ಲಿಯಾಗಲಿ ಸಂಸ್ಕೃತಿಯಲ್ಲಾಗಲಿ ಸರ್ವಾಧಿಕಾರತ್ವ ಇರಲಿಲ್ಲ. ಈ ವಿವೇಕಪೂರ್ಣ ಪುರಾತನ ನಾಗರಿಕತೆಯ ಜ್ಞಾನಸಂಪತ್ತು ಅಪಾರವಿದ್ದುದಲ್ಲದೆ ಯಾವ ಸಂಕುಚಿತ ಮನೋಭಾವನೆಯೂ ಎಂದೂ ಇರಲಿಲ್ಲ.

ಉಪನಿಷತ್ತಿನ ಒಂದು ಪ್ರಶ್ನೆಗೆ ಬಹಳ ಅರ್ಥಗರ್ಭಿತವೂ, ಅತ್ಯಾಶ್ಚರ್ಯವೂ ಆದ ಉತ್ತರ ಕೊಟ್ಟಿದ್ದಾರೆ. ಪ್ರಶ್ನೆ ಈ ರೀತಿ ಇದೆ. "ಈ ವಿಶ್ವ ಏನು, ಎಲ್ಲಿಂದ ಹುಟ್ಟಿತು? ಎಲ್ಲಿಗೆ ಹೋಗುತ್ತದೆ"? ಅದಕ್ಕೆ ಉತ್ತರ "ಸ್ವತಂತ್ರದಲ್ಲಿ ಹುಟ್ಟುತ್ತದೆ, ಸ್ವತಂತ್ರದಲ್ಲಿ ಇರುತ್ತದೆ, ಸ್ವತಂತ್ರದಲ್ಲಿ ಲಯವಾಗುತ್ತದೆ." ಇದರ ಖಚಿತವಾದ ಅರ್ಥವೇನೆಂಬುದನ್ನು ನಾನು ಹೇಳಲಾರೆ. ಆದರೆ ಇಷ್ಟುಮಾತ್ರ ಹೇಳಬಹುದು. ಉಪನಿಷತ್ಕಾರರಿಗೆ ಸ್ವತಂತ್ರಾಭಿಲಾಷೆ ಜೀವದುಸಿರಾಗಿತ್ತು, ಎಲ್ಲವನ್ನೂ ಅದರ ಹಿನ್ನೆಲೆಯಲ್ಲಿ ನೋಡುತ್ತಿದ್ದರು. ಸ್ವಾಮಿ ವಿವೇಕಾನಂದರು ಈ ದೃಷ್ಟಿಗೆ ಬಹಳ ಮಹತ್ವ ಕೊಟಿದ್ದರು.

ಆ ಪುರಾತನ ಯುಗದ ಪ್ರಪಂಚಕ್ಕೆ ಹೋಗಿ ಅಂದಿನ ಮಾನಸಿಕ ಸನ್ನಿವೇಶವನ್ನು ಪ್ರವೇಶಿಸಲು ನಮ್ಮ ಊಹೆಗೂ ಸಾಧ್ಯವಿಲ್ಲ. ಆ ಬರವಣಿಗೆಯ ರೀತಿ ಸಹ ನಮಗೆ ತುಂಬ ಅಪರಿಚಿತ, ನೋಡಲು ವಿಚಿತ್ರ,ಅನುವಾದ ಮಾಡಲು ಕಷ್ಟತಮ. ಆ ಜೀವನದ ಹಿನ್ನೆಲೆಯೇ ತೀರ ಭಿನ್ನ. ಇಂದಿನ ಜೀವನದಲ್ಲಿ ಎಷ್ಟೋ ವಿಷಯಗಳು ವಿಚಿತ್ರವೂ ಅರ್ಥಶೂನ್ಯವೂ ಆಗಿಕಂಡರೂ, ಅಭ್ಯಾಸಬಲದಿಂದ ಅವೆಲ್ಲ ಸರಿ ಎಂದು ಭಾವಿಸುತ್ತೇವೆ. ಆದರೆ ನಮಗೆ ಅಭ್ಯಾಸವಿಲ್ಲದುದನ್ನು ಅರ್ಥಮಾಡಿಕೊಂಡು ಮೆಚ್ಚುವುದು ಬಹುಕಷ್ಟ. ಈ ಎಲ್ಲ ಕಷ್ಟಗಳಿದ್ದರೂ, ಅಸಾಧ್ಯ ಪ್ರತಿಬಂಧಕಗಳಿದ್ದರೂ, ಭಾರತೀಯ ಇತಿಹಾಸದ ಆದ್ಯಂತವೂ ಉಪನಿಷತ್ಸಂದೇಶಕ್ಕೆ ಅದ್ಭುತ ಪುರಸ್ಕಾರ ದೊರೆತಿದೆ; ಅದರಿಂದ ರಾಷ್ಟ್ರಮನಸ್ಸು ಮತ್ತು ಗುಣ ಎರಡೂ ಅದ್ಭುತವಾಗಿ ರೂಪುಗೊಂಡಿವೆ. ಯಾವ ಹಿಂದೂದರ್ಶನವನ್ನೇ ತೆಗೆದುಕೊಂಡರೂ—ಅಸಂಪ್ರದಾಯ ಬೌದ್ಧ ಧರ್ಮವೂ ಸೇರಿ–ಅದರ ಮೂಲ ಉಪನಿಷತ್ತುಗಳಲ್ಲಿದೆ" ಎಂದು ಬ್ಲೂಮ್‌ಫೀಲ್ಡ್ ಹೇಳುತ್ತಾನೆ.

ಪ್ರಾಚೀನ ಹಿಂದೂದರ್ಶನ ಇರಾನದ ಮೂಲಕ ಗ್ರೀಸ್ ದೇಶದಲ್ಲಿ ಹರಡಿ ಅಲ್ಲಿನ ದಾರ್ಶನಿಕರು ಮತ್ತು ವಿದ್ವಾಂಸರ ಮೇಲೆ ಪ್ರಭಾವ ಬೀರಿತು. ಅನೇಕ ವರ್ಷಗಳ ನಂತರ ಪ್ಲೋಟಿನಸ್ ಇರಾನಿ ಮತ್ತು ಭಾರತೀಯ ತತ್ವಶಾಸ್ತ್ರಗಳನ್ನು ಅಭ್ಯಾಸ ಮಾಡಬೇಕೆಂದು ಪಾಶ್ಚಾತ್ಯ ದೇಶಗಳಿಗೆ ಬಂದನು.

ಉಪನಿಷತ್ತುಗಳಲ್ಲಿನ ಗೂಢತತ್ವದೃಷ್ಟಿ ಆತನ ಮೇಲೆ ವಿಶೇಷ ಪರಿಣಾಮ ಮಾಡಿತು. ಈ ಅನೇಕ ತಾತ್ವಿಕ ವಿಚಾರಗಳು ಪ್ಲೋಟಿನಸ್‌ನಿಂದ ಸಂತ ಅಗಸ್ಟೀನ್‌ಗೆ ಹೋಗಿ ಅವನ ಮೂಲಕ ಇಂದಿನ ಕ್ರೈಸ್ತ ಮತದ ಮೇಲೆ ಪ್ರಭಾವ ಬೀರಿದವು.

ಕಳೆದ ಒಂದೂವರೆ ಶತಮಾನಗಳ ಯೂರೋಪಿಯನರ ಭಾರತೀಯ ತತ್ವಶಾಸ್ತ್ರದ ಪುನರ್ದರ್ಶನವು ಯೂರೋಪಿನ ದಾರ್ಶನಿಕರು ಮತ್ತು ವಿದ್ವಾಂಸರ ಮೇಲೆ ಬಲವತ್ತರ ಪರಿಣಾಮಮಾಡಿದೆ. ನಿರಾಶಾವಾದಿಯಾದ ಶೋಪನ್‌ಹಾರನು ಈ ಸಂದರ್ಭದಲ್ಲಿ " ಉಪನಿಷತ್ತುಗಳ ಪ್ರತಿಯೊಂದು ವಾಕ್ಯದಿಂದಲೂ ಅಗಾಧವೂ, ಸ್ವತಂತ್ರವೂ, ಭವ್ಯವೂ ಆದ ಭಾವನೆಗಳು ಉದ್ಭವಿಸುತ್ತವೆ. ಎಲ್ಲಿ ನೋಡಿದರೂ ಉನ್ನತವೂ, ಪವಿತ್ರವೂ ಮತ್ತು ಶ್ರದ್ಧಾ ಪೂರ್ಣವೂ ಆದ ಭಾವನೆ ಇದೆ....ಪ್ರಪಂಚದಲ್ಲೆಲ್ಲೂ ಅಷ್ಟು ಉಪಯುಕ್ತವೂ ಉತ್ಕರ್ಷಕವೂ ಆದ ಅಧ್ಯಯನ ಬೇರೊಂದಿಲ್ಲ....ಅವು ಉತ್ತುಂಗ ಜ್ಞಾನದ ಮುಕ್ತಾ ಫಲಗಳು.....ಇಂದೋ ನಾಳೆಯೊ ವಿಶ್ವದ ಜನತೆಯ ಧರ್ಮವಾಗಲು ಯೋಗ್ಯವಾದವುಗಳು " ಎಂದಿದಾನೆ. ಪುನಃ " ಉಪನಿಷತ್ತುಗಳ ಅಧ್ಯಯನ ನನ್ನ ಜೀವನಕ್ಕೆ ಶಾಂತಿಯನ್ನು ಕೊಟ್ಟಿದೆ; ಮರಣದ ಮುಕ್ತಿಯನ್ನೂ ಕೊಡುತ್ತದೆ." ಎಂದಿದಾನೆ. ಇದರ ಮೇಲೆ ಮ್ಯಾಕ್ಸ್ ಮುಲ್ಲರ್ "ಶೋಪನ್‌ಹಾರನು ಹುಚ್ಚಾಬಟ್ಟೆ ಬರೆಯುವ ವ್ಯಕ್ತಿಯಲ್ಲ. ಗೂಢ ಅಸ್ಪಷ್ಟ ಭಾವನೆಗಳಿಂದ ಮೋಸಹೋಗಿ ಮನ ಸೋಲುವವನಲ್ಲ. ವೇದಾಂತ ವಿಷಯದಲ್ಲಿ ನನಗೂ ಅದೇ ಉತ್ಸಾಹವಿದೆ ಎಂದು ಹೇಳಲು ನನಗೆ ನಾಚಿಕೆಯೂ ಇಲ್ಲ; ಭಯವೂ ಇಲ್ಲ. ನನ್ನ ಜೀವನ ಪಥದಲ್ಲಿ ವೇದಾಂತವು ನನಗೆ ತೋರಿದ ಸಹಾಯಕ್ಕಾಗಿ ನಾನು ಎಷ್ಟು ಋಣಿಯಾಗಿದ್ದರೂ ತೀರದು " ಎಂದಿದ್ದಾನೆ.

ಇನ್ನೊಂದು ಕಡೆ ಮ್ಯಾಕ್ಸ್ ಮುಲ್ಲರ್ " ವೇದಾಂತ ದರ್ಶನಕ್ಕೆ ಉಪನಿಷತ್ತುಗಳು ಮೂಲ. ಈ ವೇದಾಂತ ಪದ್ಧತಿಯಲ್ಲಿ ಮಾನವ ಭಾವನೆ ತನ್ನ ಅತ್ಯುನ್ನತ ಶಿಖರವನ್ನು ಮುಟ್ಟಿದೆ. ನನ್ನ ಅತ್ಯಂತ ಸುಖನಿಮಿಷಗಳು ನಾನು ವೇದಾಂತವನ್ನು ಪಠಿಸುವಾಗ. ಅವು ನನಗೆ ನವ ಅರುಣೋದಯದ ಹೊಂಬೆಳಕಂತೆ, ಉನ್ನತ ಗಿರಿತಟದ ಶುಭ್ರ ಗಾಳಿಯಂತೆ,—ಒಂದು ಬಾರಿ ಅರ್ಥವಾಯಿತೆಂದರೆ ಅಷ್ಟು ಸರಳಸತ್ಯ " ಎಂದಿದಾನೆ.

ಆದರೆ ಉಪನಿಷತ್ತುಗಳನ್ನು ಮತ್ತು ಇತ್ತೀಚಿನ ಭಗವದ್ಗೀತೆಯನ್ನು ಅತ್ಯಂತ ಮುಕ್ತಕಂಠದಿಂದ ಹೊಗಳಿರುವುದೆಂದರೆ ಐರ್ಲೆಂಡಿನ ಕವಿಯಾದ ಜಿ. ಡಬ್ಲ್ಯು. ರಸ್ಸೆಲ್‌ರು. " ಆಧುನಿಕರಲ್ಲಿ ಗೈಟೆ, ವರ್ಡ್ಸ್‌ವರ್ತ್, ಎಮರ್ಸನ್, ಥೋರೊ ಮುಂತಾದ ಕೆಲವರಲ್ಲಿ ಈ ಅಂತಃಸತ್ವ ಮತ್ತು ವಿವೇಕದ ಕೆಲವಂಶ ಇವೆ. ಆದರೆ ಅವರು ಹೇಳಿರುವುದೆಲ್ಲವನ್ನು ಮತ್ತು ಇನ್ನೂ ಇತರ ಅನೇಕ ವಿಷಯಗಳನ್ನು ಭಾರತೀಯರ ಮಹಾ ಪವಿತ್ರ ಗ್ರಂಥಗಳಲ್ಲಿ ಕಾಣಬಹುದು. ಭಗವದ್ಗೀತೆ ಮತ್ತು ಉಪನಿಷತ್ತುಗಳಲ್ಲಿನ ಸರ್ವಸಂಪೂರ್ಣ ಜ್ಞಾನ ಸಂಪತ್ತು ದೈವಿಕವಾದದ್ದು. ವಾಸ್ತವಿಕ ದೃಷ್ಟಿಯಿಂದ ಇದು ನಿಶ್ಚಿತ ಎಂದು ಒಂದು ಆತ್ಮ ನಿರ್ಣಯದಿಂದ ಬರೆಯುವ ಮುನ್ನ ಉಪನಿಷತ್ಕಾರರು ಸಹಸ್ರಾರು ವಿಭೂತಿ ಪುರುಷರು ಯಾವುದೋ ಕಾಣದ ವಸ್ತುವಿನೊಡನೆ ಅವಿಶ್ರಾಂತ ಹೋರಾಡಿ ಪಡೆದ ಅನುಭವವನ್ನು ಒಂದು ಪ್ರಶಾಂತಸ್ಮರಣೆಯಿಂದ ನೋಡಿ ಬರೆದಿರಬೇಕು " ಎಂದಿದಾನೆ.*

## ೧೦. ವ್ಯಕ್ತಿ ಪ್ರಾಧಾನ್ಯ ತತ್ವಶಾಸ್ತ್ರದ ಅನುಕೂಲ ಪ್ರತಿಕೂಲಗಳು.

ಫಲದಾಯಕ ಪ್ರಗತಿಯಾಗಬೇಕಾದರೆ ದೈಹಿಕ ಮತ್ತು ಮಾನಸಿಕ ಶಿಕ್ಷಣ ಆವಶ್ಯಕ. ದೇಹ

---

*ಛಾಂದೋಗ್ಯ ಉಪನಿಷತ್ತಿನ ಈ ಶ್ಲೋಕ ಅರ್ಥಗರ್ಭಿತವಿದೆ " ಸೂರ್ಯನು ಹುಟ್ಟುವುದೂ ಇಲ್ಲ; ಮುಳುಗುವುದೂ ಇಲ್ಲ. ಸೂರ್ಯ ಮುಳುಗುತ್ತಾನೆಂದು ಜನ ಯೋಚಿಸಿದಾಗ ದಿನದ ಅಂತ್ಯವನ್ನು ಮುಟ್ಟಿ ರಾತ್ರಿಯಾಗುತ್ತದೆ. ಅಲ್ಲಿ ರಾತ್ರಿಯಾದದ್ದು ಹಗಲಾಗುತ್ತದೆ. ಬೆಳಗ್ಗೆ ಜನ ಎದ್ದಾಗ ಸೂರ್ಯ ಹುಟ್ಟಿದ ಎಂದರೆ ರಾತ್ರಿಯನ್ನು ಮುಗಿಸಿ ಇಲ್ಲಿ ಹಗಲು; ಅಲ್ಲಿ ಹಗಲು ಮುಗಿದು ರಾತ್ರಿ. ಸೂರ್ಯ ಮುಳುಗುವುದೇ ಇಲ್ಲ."

ದಾರ್ಢ್ಯ ಮತ್ತು ಮನೋನೈರ್ಮಲ್ಯ ಅತ್ಯವಶ್ಯಕವೆಂದು ಉಪನಿಷತ್ತುಗಳಲ್ಲಿ ಮೇಲಿಂದ ಮೇಲೆ ಒತ್ತಾಯ ಮಾಡಿದ್ದಾರೆ. ಜ್ಞಾನ ಸಂಪಾದನೆಗೇ ಆಗಲಿ, ಅಥವ ಬೇರೆ ಯಾವ ಸಾಧನೆಗೇ ಆಗಲಿ ಆತ್ಮ ಸಂಯಮ, ದೇಹ ದಂಡನ ಮತ್ತು ಆತ್ಮತ್ಯಾಗ ಅತ್ಯಗತ್ಯ. ಈ ಬಗೆಯ ಒಂದು ವಿಧವಾದ ದೇಹ ದಂಡನೆ ಅಥವ ತಪಸ್ಸಿನ ಕಲ್ಪನೆ ಭಾರತೀಯ ಮಹಾಜ್ಞಾನಿಗಳಲ್ಲಿ ಮತ್ತು ಸಾಮಾನ್ಯಜನರಲ್ಲಿ ಅಂತರ್ಗತವಾಗಿದೆ. ಸಾವಿರ ವರ್ಷಗಳ ಹಿಂದೆ ಇದ್ದಂತೆ ಈಗಲೂ ಈ ಭಾವನೆ ಇದೆ; ಗಾಂಧೀಜಿಯವರ ನಾಯಕತ್ವದಲ್ಲಿ ಇಂಡಿಯಾ ದೇಶವನ್ನು ತಲ್ಲಣಿಸಿದ ಮಹಾ ಹೋರಾಟಗಳ ಹಿಂದಿನ ಮನೋಭಾವನೆಯನ್ನು ಅರ್ಥಮಾಡಿಕೊಳ್ಳಲು ಇದು ಅತ್ಯಾವಶ್ಯಕ.

ಉಪನಿಷತ್ಕಾರರ ಉನ್ನತ ಭಾವನೆಗಳು, ಅವರು ಚಲಿಸುತ್ತಿದ್ದ ಶುದ್ಧ ಮಾನಸಿಕ ವಾತಾವರಣ ಆ ಭಾವನೆಗಳ ಅರ್ಥವನ್ನು ಗ್ರಹಿಸಲು ಸಮರ್ಥರಾದ ಕೆಲವು ನಿಯೋಜಿತ ವ್ಯಕ್ತಿಗಳಿಗೆ ಮಾತ್ರ ಸಾಧ್ಯವಿತ್ತು. ಇದೆಲ್ಲ ಜನ ಸಾಮಾನ್ಯರ ತಿಳಿವಿನ ಮಟ್ಟವನ್ನು ಮೀರಿದ್ದು. ರಚನಾತ್ಮಕ ವ್ಯಕ್ತಿಗಳ ಸಂಖ್ಯೆ ಯಾವಾಗಲೂ ಅತ್ಯಲ್ಪ; ಆದರೆ ಬಹು ಸಂಖ್ಯಾತರ ಶ್ರುತಿಗನುಗುಣವಾಗಿರುತ್ತದೆ ಮತ್ತು ಸದಾ ಬಹು ಸಂಖ್ಯಾತರನ್ನು ಮೇಲುಮಟ್ಟಕ್ಕೊಯ್ಯುವ್ದು ಇಬ್ಬರ ಮಧ್ಯದ ಅಂತರ ಆದಷ್ಟು ಕಡಮೆಯಾಗುವಂತೆ, ಮತ್ತು ಒಂದು ಸಾಂಸ್ಕೃತಿಕ ಸಮತೂಕ ಮತ್ತು ಪ್ರಗತಿ ಫಲಿಸುವಂತೆ ಅವರನ್ನು ಮುಂದಕ್ಕೊಯ್ಯುತ್ತದೆ. ಈ ರಚನಾತ್ಮಕ ಅಲ್ಪಸಂಖ್ಯಾತರಿಲ್ಲದೆ ಹೋದರೆ ಎಲ್ಲ ನಾಗರಿಕತೆಗಳಿಗೂ ನಾಶ ಖಂಡಿತ. ಆದರೆ ರಚನಾತ್ಮಕ ದೃಷ್ಟಿಯ ಅಲ್ಪಸಂಖ್ಯಾತರಿಗೂ, ಬಹುಸಂಖ್ಯಾತರಿಗೂ ಇರಬೇಕಾದ ಮಧುರ ಬಾಂಧವ್ಯ ಕಡಿದರೂ ನಾಶವಾಗುತ್ತದೆ. ಸಮಾಜದಲ್ಲಿ ಅತ್ಯವಶ್ಯವಾದ ಸಾಮಾಜಿಕ ಒಗ್ಗಟ್ಟು ಹಾಳಾಗುತ್ತದೆ. ಕೊನೆಯಲ್ಲಿ ಆ ಅಲ್ಪಸಂಖ್ಯಾತರೇ ತಮ್ಮ ರಚನಾತ್ಮಕ ದೃಷ್ಟಿಯನ್ನು ನಾಶಮಾಡಿಕೊಂಡು ಬರಡು ಜನರಾಗುತ್ತಾರೆ.

ಎಲ್ಲರಂತೆ ನನಗೆ ಸಹ ಉಪನಿಷತ್ತುಗಳ ಕಾಲಸ್ಥಿತಿಯನ್ನು ಊಹಿಸುವುದಕ್ಕೆ ಮತ್ತು ಅಂದು ಘರ್ಷಣೆಯಲ್ಲಿದ್ದ ನಾನಾ ಶಕ್ತಿಗಳನ್ನು ವಿಭಜನೆ ಮಾಡುವದಕ್ಕೆ ಆಗದು. ಆದರೂ, ಸೂಕ್ಷ್ಮಮತಿಗಳಾದ ಅಲ್ಪಸಂಖ್ಯಾತರಿಗೂ ಮಂದಮತಿಗಳಾದ ಜನಸಾಮಾನ್ಯಕ್ಕೂ ಮಾನಸಿಕ ಸಂಸ್ಕೃತಿ ಭೇದ ಅಜಗಜಾಂತರವಿದ್ದರೂ ಇಬ್ಬರಿಗೂ ಮಧ್ಯೆ ಒಂದು ಬಾಂಧವ್ಯವಿತ್ತೆಂದೂ ವೈಷಮ್ಯವಂತೂ ಇರಲಿಲ್ಲವೆಂದೂ ನಾನು ಊಹಿಸುತ್ತೇನೆ. ಅವರ ವರ್ಣಾಶ್ರಮ ಧರ್ಮದ ಸಮಾಜದಲ್ಲಿ ಬೇರೆ ಬೇರೆ ಮಾನಸಿಕ ಮಟ್ಟಗಳೂ ಇದ್ದವು. ಸಮಾಜ ಅದನ್ನೊಪ್ಪಿ ಅದಕ್ಕೆ ಅವಕಾಶವನ್ನೂ ಕಲ್ಪಿಸಿತ್ತು. ಇದರಿಂದ ಒಂದು ವಿಧವಾದ ಸಾಮಾಜಿಕ ಸಮರಸತೆಯುಂಟಾಗಿ, ವಿರಸಗಳನ್ನು ತಪ್ಪಿಸುತ್ತಿದ್ದರು. ಉಪನಿಷತ್ತುಗಳ ಹೊಸ ಭಾವನೆಗಳನ್ನು ಸಹ, ಅದರ ಬಹುಮಟ್ಟಿನ ಒಳ ಅರ್ಥ ಕಡಮೆಯಾದರೂ ಜನಸಾಮಾನ್ಯರಲ್ಲಿ ರೂಢಿಯಿರುವ ಕುರುಡುನಂಬಿಕೆಗಳು ಮತ್ತು ಪಕ್ಷಪಾತಗಳಿಗೆ ಅನ್ವಯಿಸುವಂತೆ ಅನುವಾದಿಸುತ್ತಿದ್ದರು. ವರ್ಣಾಶ್ರಮ ಧರ್ಮಕ್ಕೆ ಯಾವ ಲೋಪವೂ ಬರಲಿಲ್ಲ; ಹಾಗೆಯೇ ಉಳಿಯಿತು. ಏಕತ್ವವಾದದ ಭಾವನೆ ಧಾರ್ಮಿಕ ಉದ್ದೇಶಗಳಿಗಾಗಿ ಏಕದೇವತಾ ವಾದವಾಯಿತು. ಯಾವುದೋ ಒಂದು ಮಟ್ಟಕ್ಕೆ ಅವಶ್ಯವೆಂದು ಅನಾಗರಿಕ ನಂಬಿಕೆಗಳು ಮತ್ತು ಪೂಜಾ ಪದ್ಧತಿಗಳಿಗೆ ಸಹ ಮನ್ನಣೆ ಮಾತ್ರವಲ್ಲ, ಪ್ರೋತ್ಸಾಹವೂ ದೊರೆಯಿತು.

ಈ ರೀತಿ ಉಪನಿಷದ್ಭಾವನೆಗಳು ಜನಸಾಮಾನ್ಯದಲ್ಲಿ ಹರಡಿದರೂ ಯಾವ ಪ್ರಭಾವವನ್ನೂ ಬೀರಲಿಲ್ಲ. ರಚನಾತ್ಮಕ ಅಲ್ಪಸಂಖ್ಯಾತರಿಗೂ, ಬಹುಸಂಖ್ಯಾತರಿಗೂ ಮಧ್ಯದ ಬೌದ್ಧಿಕ ಅಂತರ ಹೆಚ್ಚುತ್ತ ಬಂದಿತು. ಕಾಲಕ್ರಮೇಣ ಹೊಸ ಪ್ರವೃತ್ತಿಗಳಿಗೆ ಅವಕಾಶವಾಯಿತು. ಭೌತವಾದ, ಅಜ್ಞೇಯತಾವಾದ, ನಿರೀಶ್ವರವಾದಗಳ ಪ್ರಚಂಡಮಾರುತಗಳೆದ್ದವು. ಇದರಿಂದ ಪುನಃ ಬೌದ್ಧ, ಜೈನ ಮತಗಳು, ರಾಮಾಯಣ ಮತ್ತು ಮಹಾಭಾರತ ಸಂಸ್ಕೃತ ಮಹಾಪುರಾಣಗ್ರಂಥಗಳು ಹುಟ್ಟಿದವು. ಇಲ್ಲಿ ಪುನಃ ಭಿನ್ನಭಿನ್ನ ಮತಗಳ ಮತ್ತು ಭಾವನಾಮಾರ್ಗಗಳ ಸಮೀಕರಣ ಪ್ರಯತ್ನ ಮತ್ತೆ ನಡೆದಿದೆ. ಜನರ ಅಥವ ರಚನಾತ್ಮಕ ಅಲ್ಪಸಂಖ್ಯಾತರ ರಚನಾಶಕ್ತಿ ಪುನಃ ಈ ಕಾಲಗಳಲ್ಲಿ

ಸ್ಪಷ್ಟ ಪ್ರತ್ಯಕ್ಷವಾಗಿದೆ. ಪುನಃ ಅಲ್ಪಸಂಖ್ಯಾತರಿಗೂ ಬಹುಸಂಖ್ಯಾತರಿಗೂ ಒಂದು ಬಾಂಧವ್ಯ ಬೆಳೆದುಬರುತ್ತದೆ. ಒಟ್ಟಿನಲ್ಲಿ ಒಟ್ಟಿಗೇ ಹೋಗುತ್ತಾರೆ.

ಈ ರೀತಿ ವಿಚಾರಶಕ್ತಿ ಮತ್ತು ಕಾರ್ಯಶೀಲತೆ, ಸಾಹಿತ್ಯ ಮತ್ತು ನಾಟಕ, ವಾಸ್ತುಶಿಲ್ಪ ಮತ್ತು ಶಿಲ್ಪಕಲೆ ಮತ್ತು ಭಾರತದಿಂದಾಚೆ ಬಹುದೂರ ವಲಸೆ, ಸಂಸ್ಕೃತಿ ಮತ್ತು ಪ್ರಚಾರ ಪ್ರಸರಣ ಕಾರ್ಯದಲ್ಲಿ ನವಜೀವನ ನಿರ್ಮಾಣ ಪ್ರಯತ್ನಗಳು ಅಲೆಅಲೆಯಾಗಿ ಕಾಲಕಾಲಕ್ಕೆ ಪ್ರವಹಿಸಿವೆ. ಮಧ್ಯೆ ಮಧ್ಯೆ ಅಂತರ್ದೋಷಗಳಿಂದ, ಬಾಹ್ಯ ಆಗಂತುಕ ಕಾರಣಗಳಿಂದ ವಿರಸಜೀವನದ, ಘರ್ಷಣೆಗಳ ಕಾಲಗಳೂ ಇವೆ. ಆದರೂ ಅಂತ್ಯದಲ್ಲಿ ಅವುಗಳನ್ನು ಎದುರಿಸಿ ಪುನಃ ನಿರ್ಮಾಣಕಾರ್ಯದ ನವಯುಗ ಆರಂಭವಾಗುತ್ತದೆ. ಇಂತಹ ಬಹುಮುಖ ಕಾರ್ಯೋತ್ಸಾಹದ ಕೊನೆಯ ಮಹಾಯುಗವೆಂದರೆ ಕ್ರಿಸ್ತಶಕ ನಾಲ್ಕನೆಯ ಶತಮಾನದಿಂದ ಆರಂಭವಾದ ಆದರ್ಶಯುಗ. ಸುಮಾರು ಕ್ರಿಸ್ತಶಕ ೧೦೦೦ ದ ಹೊತ್ತಿಗೆ ಅಥವ ಸ್ವಲ್ಪ ಮುಂಚೆ ಭಾರತದಲ್ಲಿ ಅಂತರ್ಗ್ಲಾನಿಯ ಸೂಚನೆಗಳು ಕಾಣುತ್ತವೆ; ಆದರೂ ಸನಾತನ ಕಲಾಭಿಜ್ಞತೆ ಅಚ್ಚಳಿಯದೆ ಉಳಿದು ಉತ್ತಮಕೃತಿಗಳನ್ನು ಕೊಟ್ಟಿದೆ. ಭಿನ್ನ ಸಂಸ್ಕೃತಿಯ ಹಿನ್ನೆಲೆಯ ನೂತನ ಜನಾಂಗಗಳ ಆಗಮನದಿಂದ ಭಾರತದ ದಣಿದ ಮನಸ್ಸು ಮತ್ತು ಆತ್ಮಕ್ಕೆ ಹೊಸ ಕಾರ್ಯಶಕ್ತಿ ಬಂದಿತು. ಆ ಘರ್ಷಣೆಗಳಿಂದ ಹೊಸ ಸಮಸ್ಯೆಗಳು ಉದ್ಭವಿಸಿ, ಅವುಗಳ ಪರಿಹಾರಕ್ಕೆ ಹೊಸ ಪ್ರಯತ್ನಗಳೂ ನಡೆದವು.

ಇಂಡೊ ಆರ್ಯರ ಈ ತೀಕ್ಷ್ಣ ವ್ಯಕ್ತಿವಾದದಿಂದ ಅಂತ್ಯದಲ್ಲಿ ಸತ್ಪರಿಣಾಮಗಳ ಜೊತೆಯಲ್ಲಿ ಕೆಲವು ದುಷ್ಪರಿಣಾಮಗಳೂ ಆದವು. ಇತಿಹಾಸದ ಯಾವುದೋ ಒಂದು ನಿರ್ದಿಷ್ಟಕಾಲದಲ್ಲಿ ಮಾತ್ರವಲ್ಲ ಯುಗಯುಗಗಳಲ್ಲಿ ಪುನಃ ಪುನಃ ಅತ್ಯುನ್ನತ ಅವತಾರ ಪುರುಷರು ಉದ್ಭವಿಸಿದರು. ಅದು ಸಮಗ್ರ ಸಂಸ್ಕೃತಿಗೆ ಒಂದು ಅಮೋಘವಾದ ಆದರ್ಶ ಮತ್ತು ನೈತಿಕ ಹಿನ್ನೆಲೆಯನ್ನು ಕೊಟ್ಟಿತು. ಆ ಹಿನ್ನೆಲೆ ನಮ್ಮ ಇಂದಿನ ಜೀವನಮಾರ್ಗದಲ್ಲಿ ಹೆಚ್ಚು ಪ್ರಭಾವಶಾಲಿಯಾಗದಿದ್ದರೂ ಜೀವನಕ್ಕೆ ಅಂಟಿಕೊಂಡಿತ್ತು. ಇನ್ನೂ ಅಂಟಿಕೊಂಡಿದೆ. ಈ ಹಿನ್ನೆಲೆಯ ಸಹಾಯದಿಂದ ಮತ್ತು ಆದರ್ಶ ಪುರುಷರ ಮಾರ್ಗಾನುಸರಣಶಕ್ತಿಯಿಂದ ಸಾಮಾಜಿಕ ಭದ್ರತೆಯನ್ನು ಕಾಪಾಡಿಕೊಂಡು ಬಂದರು. ಮತ್ತು ಆ ಭದ್ರತೆಯಲ್ಲಿ ಬಿರುಕುಬರುವ ವೇಳೆಗಳಲ್ಲಿ ಪುನಃ ಪುನಃ ಪುನರುಜ್ಜೀವನ ಕಾರ್ಯವನ್ನೂ ನಡೆಸಿದರು. ಈ ನಾಗರಿಕತೆ ಮತ್ತು ಸಂಸ್ಕೃತಿಯ ಅದ್ಭುತ ವಿಕಸನವು ಉತ್ತಮ ಸಂಗಡದ ಅಲ್ಪಸಂಖ್ಯಾತರಲ್ಲಿ ಮಾತ್ರ ಕಂಡುಬಂದರೂ ಅದರ ರಸವತ್ತಾದಸಾರ ಸಾಮಾನ್ಯ ಜನತೆಯಲ್ಲೂ ಹರಡಿತ್ತು. ಪರಮತ ಮತ್ತು ಪರಧರ್ಮ ಸಹಿಷ್ಣುತೆಯಿಂದ ಸಮಾಜವನ್ನು ಛಿದ್ರಛಿದ್ರ ಮಾಡುವ ಘರ್ಷಣೆಗಳನ್ನು ನಿವಾರಿಸಿದರು; ಸಾಮಾನ್ಯವಾಗಿ ಸರ್ವದಾ ಒಂದು ವಿಧವಾದ ಸಾಮಾಜಿಕ ಸಮತೂಕವಿತ್ತು. ವಿಶಾಲ ಸಾಮಾಜಿಕ ಚೌಕಟ್ಟಿನಲ್ಲಿ ಜನ ತಮತಮಗೆ ಇಷ್ಟಬಂದ ಜೀವನ ನಡೆಸಲು ತಕ್ಕಷ್ಟು ಸ್ವಾತಂತ್ರ್ಯವನ್ನು ಕೊಟ್ಟು ಜ್ಞಾನವೃದ್ಧ, ಅನುಭವ ಪೂರ್ಣ ಜನಾಂಗದ ವಿವೇಕವನ್ನು ತೋರಿದರು. ಇವೆಲ್ಲ ಮಹಾ ಅದ್ಭುತ ಸಾಧನೆಗಳು.

ಆದರೆ ಈ ವ್ಯಕ್ತಿ ಪ್ರಾಧಾನ್ಯತೆಯಿಂದಲೇ ಮನುಷ್ಯನ ಸಾಮಾಜಿಕ ದೃಷ್ಟಿಗೆ, ಸಾಮಾಜಿಕ ಕರ್ತವ್ಯಕ್ಕೆ ಯಾವ ಬೆಲೆಯೂ ದೊರೆಯದಂತಾಯಿತು. ಪ್ರತಿಯೊಬ್ಬ ವ್ಯಕ್ತಿಯ ಜೀವನವೂ ವಿಭಜನೆಯಾಗಿ, ನಿರ್ದಿಷ್ಟವಾಗಿತ್ತು; ವರ್ಣಾಶ್ರಮ ಧರ್ಮದ ಚೌಕಟ್ಟಿನಲ್ಲಿ ತನ್ನ ಸಂಕುಚಿತ ವಾತಾವರಣದಲ್ಲಿ ತನ್ನ ಕರ್ತವ್ಯ ಮತ್ತು ಭಾರ ನಿರ್ವಹಣೆ. ಸಮಗ್ರ ಸಮಾಜದ ಕಲ್ಪನೆಯೂ ಇರಲಿಲ್ಲ. ಆ ಸಮಾಜಕ್ಕೆ ಕರ್ತವ್ಯವೂ ಇರಲಿಲ್ಲ. ತಾನೂ ಸಮಾಜದ ಒಂದು ಅಂಗ ಎಂಬ ಐಕ್ಯತೆಯ ಭಾವನೆಯನ್ನೂ ಅವನಲ್ಲಿ ಬೆಳೆಸಲಿಲ್ಲ. ಈ ಭಾವನೆ ಬಹುಮಟ್ಟಿಗೆ ಇತ್ತೀಚಿನದು ಮತ್ತು ಯಾವ ಪ್ರಾಚೀನ ಸಮಾಜದಲ್ಲಿಯೂ ಕಂಡುಬರುವುದಿಲ್ಲ. ಆದ್ದರಿಂದ ಪ್ರಾಚೀನ ಭಾರತದಲ್ಲಿ ಅದನ್ನು ನೋಡಲೆತ್ನಿಸುವುದು ಸರಿಯಲ್ಲ. ಆದರೂ ವ್ಯಕ್ತಿಶ್ರೇಷ್ಠತೆ, ಪ್ರತ್ಯೇಕತೆ, ವರ್ಣಾಶ್ರಮ ಧರ್ಮಕ್ಕೆ ಇರುವ ಪ್ರಾಧಾನ್ಯ ಇಂಡಿಯದಲ್ಲಿರುವಂತೆ ಬೇರೆ ಎಲ್ಲೂ ಇಲ್ಲ, ಕೊನೆಗೆ ಅದೇ ನಮ್ಮ ಜನರ ಮಾನಸಿಕ

ಪ್ರವೃತ್ತಿಗೆ ಒಂದು ಸೆರೆಮನೆಯಾಯಿತು: ಅದರಿಂದ ಬಹುಕಷ್ಟಕ್ಕೆ ಸಿಕ್ಕಿದ್ದ ಸಾಮಾನ್ಯ ಕೀಳು ಜನರಿಗೆ ಮಾತ್ರವಲ್ಲ, ಆದರೆ ಉತ್ತಮ ವರ್ಗದವರಿಗೆ ಸಹ. ನಮ್ಮ ಇತಿಹಾಸ ಪರಂಪರೆಯ ಎಲ್ಲ ಕಾಲದಲ್ಲಿ ಅದೊಂದು ದೊಡ್ಡ ದೋಷ. ಜಾತಿಮತಗಳ ಕಾಠಿಣ್ಯತೆಯು ಬೆಳೆದುಬಂದಂತೆ ಮನಸ್ಸಿನ ಕಾಠಿಣ್ಯತೆಯೂ ಬೆಳೆದು ಜನಾಂಗದ ಸೃಷ್ಟಿಶಕ್ತಿ ಅಡಗಿಹೋಯಿತು.

ಇನ್ನೊಂದು ವಿಚಿತ್ರ ಸಂಗತಿ ಎದ್ದುಕಾಣುತ್ತದೆ. ಎಲ್ಲಬಗೆಯ ನಂಬಿಕೆ ಮತ್ತು ಸಂಪ್ರದಾಯ ಗಳು, ಎಲ್ಲ ಮತಾಂಧತೆ ಮತ್ತು ಮೌಢ್ಯಕ್ಕೆ ದೊರೆತ ವಿಶೇಷ ಮನ್ನಣೆಯಿಂದ ಹಾನಿಯೂ ಆಯಿತು. ಅದರಿಂದ ಅನೇಕ ದುಷ್ಟಪದ್ಧತಿಗಳು ಉಳಿಯಲು ಸಾಧ್ಯವಾಯಿತು. ಪ್ರಗತಿ ವಿರುದ್ಧವಾದ ಅನೇಕ ಸಂಪ್ರದಾಯಗಳ ಭಾರವನ್ನು ಕಿತ್ತೊಗೆಯಲು ಜನತೆಗೆ ಸಾಧ್ಯವಾಗಲಿಲ್ಲ. ಬೆಳೆಯುತ್ತಿದ್ದ ಪುರೋಹಿತರ ಪಂಗಡ ಈ ಸನ್ನಿವೇಶವನ್ನು ತಮ್ಮ ಸ್ವಾರ್ಥಕ್ಕೆ ದುರುಪಯೋಗ ಪಡಿಸಿಕೊಂಡು ಜನತೆಯ ಮೌಢ್ಯದ ತಳಹದಿಯ ಮೇಲೆ ತಮ್ಮ ಬಲವಾದ ಸ್ವಾರ್ಥದ ಕೋಟೆಯನ್ನು ಕಟ್ಟಿದರು. ಆದರೆ ಈ ಪುರೋಹಿತವರ್ಗ ಕ್ರೈಸ್ತಮತದ ಕೆಲವು ಪಂಗಡಗಳ ಪ್ರಾಬಲ್ಯವನ್ನು ಎಂದೂ ಪಡೆಯಲಿಲ್ಲ, ಏಕೆಂದರೆ ಆ ಪದ್ಧತಿಗಳನ್ನು ಅನೇಕ ಧರ್ಮಸ್ಥಾಪಕರು ತೀವ್ರವಾಗಿ ಖಂಡಿಸಿದ್ದಾರೆ; ಮತ್ತು ಬೇರೆ ಧರ್ಮವನ್ನು ಅವಲಂಬಿಸಲು ಅವಕಾಶವೂ ಇತ್ತು. ಆದರೆ ಸಾಮಾನ್ಯ ಜನರನ್ನು ಮರುಳುಮಾಡಿ ಸ್ವಪ್ರಯೋಜನ ಪಡೆಯಲು ತಕ್ಕಷ್ಟು ಶಕ್ತಿಯುತವಾಗಿತ್ತು.

ಈ ಸ್ವತಂತ್ರ ವಿಚಾರ ಮತ್ತು ಮತಾಂಧತೆ ಒಟ್ಟಿಗೆ ಜೊತೆಯಲ್ಲೆ ಉಳಿದುಬಂದವು; ಅವುಗಳಿಂದ ವಿದ್ವತ್ತು ಮತ್ತು ಮತನಿರ್ಬಂಧದ ಆಚಾರಗಳು ಬೆಳೆದವು. ಯಾವಾಗಲೂ ಪ್ರಾಚೀನ ಗ್ರಂಥಗಳನ್ನೆ ಆಧಾರವಾಗಿ ಎತ್ತಿ ತೋರಿಸುತ್ತಿದ್ದರು. ಆದರೆ ವ್ಯತ್ಯಸ್ತ ಪರಿಸ್ಥಿತಿಗನುಗುಣವಾಗಿ ಅವುಗಳ ಸತ್ಯಾರ್ಥ ವಿವರಣೆಗೆ ಪ್ರಯತ್ನಮಾಡಲಿಲ್ಲ. ನಿರ್ಮಾಣಶಕ್ತಿ ಮತ್ತು ಆತ್ಮಶಕ್ತಿ ಕುಂದಿತು; ಪೂರ್ಣ ಜೀವನ ಮತ್ತು ಅರ್ಥದ ತಿರುಳೆಲ್ಲ ಹೋಗಿ ಹೊರಗಿನ ಚಿಪ್ಪು ಮಾತ್ರ ಉಳಿಯಿತು. ಅರವಿಂದ ಘೋಷರು "ಉಪನಿಷತ್ಕಾಲದ, ಬುದ್ಧನಕಾಲದ ಅಥವ ಇತ್ತೀಚಿನ ಆದರ್ಶಯುಗದ ಪ್ರಾಚೀನ ಭಾರತೀಯ ಯಾವನಾದರೂ ಇಂದಿನ ಭಾರತಕ್ಕೆ ಬಂದು, ಹದಿನೈದು ಆಣೆ ಸತ್ವವನ್ನು ತ್ಯಾಜ್ಯಮಾಡಿ ಉಳಿದ ಪ್ರಾಚೀನತೆಯ ಬಾಹ್ಯರೂಪು, ತಿರುಳಿಲ್ಲದ ಕರಟ ಮತ್ತು ಚಿಂದಿಯಲ್ಲಿ ಮೆರೆಯುವ ಭಾರತೀಯರ ಇಂದಿನ ಜೀವನವನ್ನು ನೋಡಿದರೆ ಮತ್ತು ಮಾನಸಿಕ ದೌರ್ಬಲ್ಯ, ನಿಶ್ಚಲತೆ, ಪ್ರಗತಿಶೂನ್ಯ ಪುನರುಕ್ತಿ, ವಿಜ್ಞಾನದ ವಿರತಿ, ಕಲೆಯ ಬಹುಕಾಲದ ಬಂಜೆತನ, ನಿರ್ಮಾಣಶಕ್ತಿಯ ಬಹುತರ ಬಲಹೀನತೆಯನ್ನು ನೋಡಿದರೆ ವಿಸ್ಮಿತರಾಗುತ್ತಾರೆ" ಎಂದಿದ್ದಾರೆ.

### ೧೧. ಚಾರ್ವಾಕಮತ

ಗ್ರೀಸ್, ಇಂಡಿಯ ಮತ್ತು ಇತರ ಕಡೆಗಳಲ್ಲಿ ಎಲ್ಲೆಲ್ಲೂ ಪ್ರಪಂಚದ ಪ್ರಾಚೀನ ಸಾಹಿತ್ಯ ನಮಗೆ ದೊರೆಯದೆ ಇರುವುದು ನಮ್ಮ ದೊಡ್ಡ ದುರದೃಷ್ಟ. ಈ ಗ್ರಂಥಗಳೆಲ್ಲ ಮೂಲತಃ ಭೂರ್ಜ ಪತ್ರ ಅಥವ ತಾಳೆಗರಿಯಲ್ಲಿ ಬರೆದವುಗಳಾಗಿ ಆಮೇಲೆ ಕಾಗದದಲ್ಲಿ ಬರೆದಿರಬೇಕಾದ್ದರಿಂದ ಪ್ರಾಯಶಃ ಈ ಪರಿಸ್ಥಿತಿ ಅನಿವಾರ್ಯ. ಗ್ರಂಥದ ಕೆಲವು ಪ್ರತಿಗಳು ಮಾತ್ರ ಇರುತ್ತಿದ್ದವು. ಅವು ಕಳೆದು ಹೋದರೆ, ಅಥವ ನಾಶವಾದರೆ ಇತರ ಗ್ರಂಥಗಳಲ್ಲಿನ ಉಲ್ಲೇಖನಗಳಿಂದ ಅಥವ ಅದರ ಉದಾಹರಣೆಗಳಿಂದ ಅದನ್ನು ಕಂಡು ಹಿಡಿಯಬೇಕಾಗಿತ್ತು. ಇಷ್ಟಾದರೂ ಸುಮಾರು ೫೦–೬೦ ಸಾವಿರ ಸಂಸ್ಕೃತ ಗ್ರಂಥಗಳ ಕರಡು ಪ್ರತಿಗಳು, ಅಥವ ಅವುಗಳ ಭಿನ್ನ ಪ್ರತಿಗಳು ದೊರೆತು, ಪಟ್ಟಿಯಾಗಿವೆ; ಹೊಸ ಶೋಧನೆಗಳು ನಡೆಯುತ್ತಲೇ ಇವೆ. ಅನೇಕ ಪುರಾತನ ಭಾರತೀಯ ಗ್ರಂಥಗಳು ಭಾರತದಲ್ಲಿ ದೊರೆತೇ ಇಲ್ಲ. ಚೀನೀ ಭಾಷೆಯಲ್ಲೋ, ಟಿಬೆಟ್ ಭಾಷೆಯಲ್ಲೊ ಅವುಗಳ ಅನುವಾದಗಳು ದೊರೆತಿವೆ. ಪ್ರಾಯಶಃ ಗುರುಪೀಠಗಳ, ಮಠಗಳ, ವಿದ್ವಾಂಸರುಗಳ ಪುಸ್ತಕಭಂಡಾರಗಳನ್ನು ಶೋಧಿಸಿದರೆ ಅನೇಕ ಉದ್ಗ್ರಂಥಗಳು ದೊರೆಯಬಹುದು. ಈ ಕೆಲಸ ಮತ್ತು ಹಸ್ತಪ್ರತಿಗಳನ್ನು ವಿಮರ್ಶಾ

ತ್ಮಕ ದೃಷ್ಟಿಯಿಂದ ಪರೀಕ್ಷೆಮಾಡಿ ಅವಶ್ಯಬಿದ್ದರೆ ಮುದ್ರಣ ಮತ್ತು ಅನುವಾದ ಮಾಡಬೇಕಾದ್ದು ನಾವು ನಮ್ಮ ದಾಸ್ಯಶೃಂಖಲೆಗಳನ್ನು ಕಿತ್ತೊಗೆದು ಸ್ವತಂತ್ರರಾದೊಡನೆ ಮಾಡಬೇಕಾದ ಅಗತ್ಯ ಕೆಲಸ ಗಳಲ್ಲಿ ಅತಿ ಮುಖ್ಯವಾದದ್ದು. ಅಂತಹ ಅಭ್ಯಾಸದಿಂದ ಭಾರತೀಯ ಇತಿಹಾಸದ ಅನೇಕ ಹೊಸ ವಿಷಯಗಳು ಬೆಳಕಿಗೆ ಬರುತ್ತವೆ ಮತ್ತು ಐತಿಹಾಸಿಕ ಘಟನೆಗಳು ಮತ್ತು ವ್ಯತ್ಯಸ್ಥ ಭಾವನೆಗಳ ಸಾಮಾಜಿಕ ಹಿನ್ನೆಲೆ ಮುಖ್ಯವಾಗಿ ಬೆಳಕಿಗೆ ಬರುತ್ತದೆ. ಯಾವ ವ್ಯವಸ್ಥಿತ ಪ್ರಯತ್ನವೂ ಇಲ್ಲದೆ ಅನೇಕಬಾರಿ ನಾಶವಾಗಿ ನಷ್ಟವಾದಾಗ್ಯೂ ೫೦,೦೦೦ ಕ್ಕೆ ಮೇಲ್ಪಟ್ಟು ಹಸ್ತಪ್ರತಿಗಳು ದೊರೆತಿವೆ ಎಂದರೆ ಆ ಪುರಾತನ ಕಾಲದ ಸಾಹಿತ್ಯ, ನಾಟಕ, ದರ್ಶನ ಮತ್ತು ಇತರ ಶಾಸ್ತ್ರಗಳ ಬೆಳವಣಿಗೆ ಎಷ್ಟು ವಿಪುಲವಾಗಿರಬೇಕು ಎಂಬುದು ಸ್ಪಷ್ಟವಾಗುತ್ತದೆ ಅನೇಕ ಹಸ್ತಪ್ರತಿಗಳನ್ನು ಇನ್ನೂ ಆಮೂಲಾಗ್ರವಾಗಿ ನೋಡಿ ಸಹ ಇಲ್ಲ.

ಈ ರೀತಿ ಕಳೆದು ಹೋದ ಗ್ರಂಥರಾಶಿಗಳಲ್ಲಿ ಉಪನಿಷತ್ತುಗಳ ಕಾಲಾನಂತರ ಬೆಳೆದ ಚಾರ್ವಾಕ ಮತದ ಗ್ರಂಥಗಳೆಲ್ಲ ನಾಶವಾಗಿವೆ. ಅದಕ್ಕೆ ದೊರೆಯುವ ಉಲ್ಲೇಖನಗಳೆಂದರೆ ಅದರ ವಿಮರ್ಶೆಗಳು ಮತ್ತು ಚಾರ್ವಾಕ ಮತವನ್ನು ಖಂಡಿಸುವ ಅಸಾಧ್ಯ ಪ್ರಯತ್ನಗಳು. ಆದರೆ ಅನೇಕ ಶತಮಾನಗಳ ಪರ್ಯಂತ ಚಾರ್ವಾಕ ಮತ ಭಾರತದಲ್ಲಿ ಮನೆಮಾಡಿಕೊಂಡಿತ್ತು, ಅನೇಕರ ಮೇಲೆ ತನ್ನ ಪ್ರಭಾವ ಬೀರಿತ್ತು ಎನ್ನುವುದಕ್ಕೆ ಲೇಶವೂ ಅನುಮಾನವಿಲ್ಲ. ಕ್ರಿ. ಪೂರ್ವ ನಾಲ್ಕನೆಯ ಶತಮಾನದಲ್ಲಿ ಕೌಟಿಲ್ಯ ರಾಜಕೀಯ ಆರ್ಥಿಕ ವ್ಯವಸ್ಥೆಯ ಮೇಲೆ ಬರೆದ ಅರ್ಥ ಶಾಸ್ತ್ರದಲ್ಲಿ ಭಾರತೀಯ ದಿವ್ಯದರ್ಶನಗಳಲ್ಲಿ ಚಾರ್ವಾಕಮತವೂ ಒಂದು ಎಂದು ಉಲ್ಲೇಖವಿದೆ.

ಆದ್ದರಿಂದ ಈ ದರ್ಶನದ ವಿಮರ್ಶಕರನ್ನು, ಅದನ್ನು ಹಳಿಯುವವರನ್ನೇ ನಾವು ಅವಲಂಬಿಸ ಬೇಕಾಗಿದೆ. ಅವರೆಲ್ಲ ಅದನ್ನು ಅಪಹಾಸ್ಯಕ್ಕೀಡುಮಾಡಿ, ಅದರ ನ್ಯೂನತೆಯನ್ನೇ ತೋರಿಸತಕ್ಕ ವರು. ಅದರ ಸ್ವರೂಪ ಹೇಗೆ ಇತ್ತು ಎಂದು ಕಂಡುಹಿಡಿಯಲು ಇದೊಂದು ತೊಡಕು. ಆದರೂ ಅವರು ಹಳಿಯುವದರಲ್ಲಿ ತೋರುವ ಉತ್ಸಾಹವನ್ನು ನೋಡಿದರೇನೆ ಅವರ ದೃಷ್ಟಿಗೆ ಅದು ಎಷ್ಟು ಮುಖ್ಯ ವೆನಿಸಿರಬೇಕೆನ್ನುವುದು ಸ್ಪಷ್ಟವಾಗುತ್ತದೆ. ಪ್ರಾಯಶಃ ಚಾರ್ವಾಕಮತದ ಸಾಹಿತ್ಯದ ಬಹುಭಾಗ ವನ್ನು ಸನಾತನ ಧರ್ಮಾನುವರ್ತಿಗಳು ಮತ್ತು ಪುರೋಹಿತರು ನಾಶಮಾಡಿರಬೇಕು.

ಚಾರ್ವಾಕರು ಅಧಿಕಾರವರ್ಗದ ಮೇಲೆ ದಂಗೆ ಎದ್ದರು. ಜ್ಞಾನ, ಮತ ಮತ್ತು ಮತಧರ್ಮ ದಲ್ಲಿ ಎಲ್ಲ ಸ್ವಾರ್ಥವನ್ನೂ ವಿರೋಧಿಸಿದರು. ವೇದಗಳು, ಪುರೋಹಿತವರ್ಗ ಮತ್ತು ಶಿಷ್ಟಾಚಾರಗ ಳನ್ನು ಅಲ್ಲಗಳೆದರು; ಭಾವನೆ ಸ್ವತಂತ್ರವಿರಬೇಕು ; ಊಹಾಪ್ರತಿಜ್ಞೆಗಳನ್ನು ಅಥವ ಪೂರ್ವಾಚಾರದ ಅಧಿಕಾರವನ್ನು ಅವಲಂಬಿಸಿರಬಾರದು ಎಂದು ಸಾರಿದರು. ಎಲ್ಲ ತಂತ್ರಗಳನ್ನೂ ಅಂಧಶ್ರದ್ಧೆಯನ್ನೂ ನಿಂದಿಸಿದರು. ಸಾಧಾರಣವಾಗಿ ಅವರ ದೃಷ್ಟಿಯನ್ನು ಅನೇಕ ವಿಧದಲ್ಲಿ ಇಂದಿನ ಭೌತಿಕ ದೃಷ್ಟಿಗೆ ಹೋಲಿಸಬಹುದು. ಪ್ರಾಚೀನತೆಯ ಶೃಂಖಲೆಗಳಿಂದ, ಅದರ ಹೊರೆಯಿಂದ, ಅಗೋಚರವಸ್ತು ವಿಷಯಗಳ ಚಿಂತನೆಯಿಂದ, ಕಾಲ್ಪನಿಕದೇವರುಗಳ ಪೂಜೆಯಿಂದ ಬಿಡುಗಡೆಹೊಂದಲು ಯತ್ನ ಮಾಡಿತು. ಯಾವುದು ದೃಷ್ಟಿಗೆ ಗೋಚರವೋ ಅದಕ್ಕೆ ಮಾತ್ರ ಅಸ್ತಿತ್ವ ಕೊಡಬಹುದು ; ಉಳಿದೆಲ್ಲ ಊಹೆ ಅಥವ ಭಾವನೆ, ನಿಜವಿರಲು ಎಷ್ಟು ಸಾಧ್ಯವೋ ಇಲ್ಲದಿರಲು ಸಹ ಅಷ್ಟೇ ಸಾಧ್ಯ. ಆದ್ದರಿಂದ ವಿವಿಧ ವಸ್ತುಗಳ ವಾಸ್ತವರೂಪ ಮತ್ತು ಈ ಪ್ರಪಂಚ ಅಷ್ಟುಮಾತ್ರ ನಿಜ ಎಂದು ಭಾವಿಸಬಹುದು. ಬೇರೆ, ಕಾಣದ ಯಾವ ಲೋಕವೂ ಇಲ್ಲ. ಸ್ವರ್ಗವೂ ಇಲ್ಲ, ನರಕವೂ ಇಲ್ಲ, ದೇಹದಿಂದ ಹೊರತಾಗಿ ಬೇರೆ ಆತ್ಮವೂ ಇಲ್ಲ. ಮನಸ್ಸು, ಬುದ್ಧಿ ಮತ್ತು ಇತರ ಎಲ್ಲವೂ ಮೂಲಭೂತ ವಸ್ತುಗಳಿಂದ ಹುಟ್ಟಿವೆ. ಪ್ರಾಕೃತಿಕ ಘಟನೆಗಳು ಮಾನವೀಯತೆಯ ಮೌಲ್ಯಕ್ಕೆ ಯಾವ ಪ್ರಾಧಾನ್ಯವನ್ನೂ ಕೊಡುವುದಿಲ್ಲ. ನಾವು ಒಳ್ಳೆಯದೆನ್ನಲಿ, ಕೆಟ್ಟುದೆನ್ನಲಿ ಎರಡೂ ಒಂದೇ. ನೀತಿಧರ್ಮ ಎನ್ನುವುದು ಮಾನವಕಲ್ಪಿತ ರೂಢಿಮಾತ್ರ.

ಇದೆಲ್ಲವನ್ನೂ ನಾವು ಈಗ ಒಪ್ಪುತ್ತೇವೆ. ಅದು ಎರಡು ಸಾವಿರ ವರ್ಷಗಳ ಹಿಂದಿನದು ಎನ್ನುವದಕ್ಕಿಂತ ನಮ್ಮ ಕಾಲದ್ದೆನ್ನುವಂತಿದೆ. ಈ ಭಾವನೆಗಳು, ಈ ಸಂಶಯ ಮತ್ತು ತಳಮಳಗಳು, ಸಾಂಪ್ರದಾಯಿಕ ಅಧಿಕಾರದ ವಿರುದ್ಧದ ಈ ಮಾನಸಿಕ ದಂಗೆ ಹೇಗೆ ಉದ್ಭವಿಸಿತು? ಅಂದಿನ ರಾಜಕೀಯ ಮತ್ತು ಸಾಮಾಜಿಕ ಸ್ಥಿತಿ ನಮಗೆ ಏನೂ ತಿಳಿಯದು; ಆದರೆ ಅದು ರಾಜಕೀಯ ಹೋರಾಟದ ಕಾಲ; ಸಾಮಾಜಿಕ ವಿಪ್ಲವದ ಕಾಲ; ಧರ್ಮ ಶಿಥಿಲವಾಗುವ ಕಾಲ; ಮಾನಸಿಕ ತೃಪ್ತಿಗಾಗಿ ಹೊಸ ಬೆಳಕಿಗಾಗಿ ವಿಶೇಷ ಬೌದ್ಧಿಕ ವಿಚಾರ ಮತ್ತು ಶೋಧನೆ ನಡೆದ ಕಾಲ ಎಂದು ಸ್ಪಷ್ಟವಾಗುತ್ತದೆ. ಈ ಒಂದು ಮಾನಸಿಕ ಕ್ಷೋಭೆಯಿಂದ ಮತ್ತು ಸಾಮಾಜಿಕ ನ್ಯೂನತೆಯಿಂದ ಹೊಸ ದಾರಿ ಹಿಡಿದು ಹೊಸ ದರ್ಶನಗಳು ರೂಪುಗೊಂಡವು. ಕ್ರಮಬದ್ಧ, ಉಪನಿಷತ್ತುಗಳ ಭಾವನಾತ್ಮಕ ಪ್ರವೇಶವಲ್ಲ, ಆದರೆ ಸೂಕ್ಷ್ಮವಿಚಾರ ಮತ್ತು ವಾದಸರಣಿಯ ದರ್ಶನಗಳು ಅನೇಕ ರೂಪದಲ್ಲಿ ಹೊರ ಹೊಮ್ಮಿದವು; ಜೈನ ಬೌದ್ಧ ಮತ್ತು ಹಿಂದೂ ದರ್ಶನಗಳು ಅವತರಿಸುತ್ತವೆ. ಪುರಾಣಗಳು ಮತ್ತು ಭಗವದ್ಗೀತೆ ಇದೇ ಕಾಲದವು. ಈ ಕಾಲದಲ್ಲಿ ದರ್ಶನಗಳು ಮತ್ತು ಸಿದ್ಧಾಂತಗಳು ಒಂದರಮೇಲೊಂದು ತಡೆಯಿಲ್ಲದೆ ಬಂದು, ಪರಸ್ಪರ ಪ್ರತಿಕ್ರಿಯೆ ಮಾಡಿದ ಕಾಲವಾದ್ದರಿಂದ ನಿಶ್ಚಿತ ಕ್ರಮಾನುಗತ ಚರಿತ್ರೆಯನ್ನು ಬರೆಯಲು ಸಾಧ್ಯವಿಲ್ಲ. ಬುದ್ಧನ ಕಾಲ ಕ್ರಿಸ್ತಪೂರ್ವ ಆರನೆಯ ಶತಮಾನ. ಈ ಕೆಲವು ಘಟನೆಗಳು ಆತನಿಗೆ ಮೊದಲೇನಡೆದಿದ್ದವು. ಇನ್ನುಳಿದವು ಅನಂತರದವು ಅಥವ ಒಟ್ಟಿಗೆ ಬೆಳೆದವು.

ಬೌದ್ಧ ಧರ್ಮದ ಉಚ್ಛ್ರಾಯ ಸ್ಥಿತಿಯಲ್ಲಿ ಪರ್ಷಿಯ ಸಾಮ್ರಾಜ್ಯ ಸಿಂಧೂನದಿಯವರೆಗೆ ಹರಡಿತ್ತು. ಇಂಡಿಯದ ಗಡಿಯವರೆಗೂ ಒಂದು ದೊಡ್ಡ ಪರರಾಷ್ಟ್ರ ಬಂದದ್ದು ಜನಮನದ ಮೇಲೆ ಅಸಾಧ್ಯ ಪರಿಣಾಮ ಮಾಡಿರಬೇಕು. ಕ್ರಿಸ್ತಪೂರ್ವ ನಾಲ್ಕನೆಯ ಶತಮಾನದಲ್ಲಿ ವಾಯವ್ಯ ಮೂಲೆಯಲ್ಲಿ ಅಲೆಕ್ಸಾಂಡರ್ ಇಂಡಿಯದ ಮೇಲೆ ಸ್ವಲ್ಪ ಕಾಲ ದಂಡೆತ್ತಿ ಬಂದ. ಅದೇನೊ ಅಲ್ಪ ವಿಷಯ. ಆದರೆ ಇಂಡಿಯದಲ್ಲಿ ಅದರಿಂದ ಅದ್ಭುತ ಬದಲಾವಣೆಗಳಾದವು. ಅಲೆಕ್ಸಾಂಡರನ ಮರಣದ ಮರುಕ್ಷಣದಲ್ಲಿಯೇ ಚಂದ್ರಗುಪ್ತ ಮೌರ್ಯನು ಚಕ್ರಾಧಿಪತ್ಯವನ್ನು ಕಟ್ಟಿದ. ಐತಿಹಾಸಿಕ ದೃಷ್ಟಿಯಿಂದ ಇಂಡಿಯದಲ್ಲಿ ಅದೇ ಮೊದಲನೆಯ ಶಕ್ತಿಯುತ, ವಿಶಾಲ, ಕೇಂದ್ರೀಕೃತ ರಾಷ್ಟ್ರ. ಇಂಡಿಯದಲ್ಲಿ, ಇತಿಹಾಸದಲ್ಲಿ ಅಂಥ ಅನೇಕ ರಾಜರುಗಳು ಚಕ್ರವರ್ತಿಗಳು ಇದ್ದಾರೆ. ಮಹಾಪುರಾಣ ಒಂದರಲ್ಲಿ ಭಾರತದ ಪ್ರಾಯಶಃ ಉತ್ತರ ಹಿಂದೂಸ್ಥಾನದ ರಾಜ್ಯಪದವಿಗಾಗಿ ಒಂದು ಮಹಾಯುದ್ಧವೂ ನಡೆದಿದೆ. ಪ್ರಾಯಶಃ ಪುರಾತನ ಭಾರತವೂ ಪುರಾತನ ಗ್ರೀಸಿನಂತೆ ಸಣ್ಣ ಸಣ್ಣ ರಾಜ್ಯಗಳ ಒಂದು ಗುಂಪಾಗಿರಬೇಕು. ಜನಗಳ ಪ್ರಜಾಪ್ರಭುತ್ವಗಳು ಕೆಲವು ಇದ್ದವು. ಕೆಲವು ಬಹು ದೊಡ್ಡವೂ ಇದ್ದವು, ಇನ್ನು ಕೆಲವು ಸಣ್ಣ ಪಾಳೆಯಪಟ್ಟುಗಳೂ ಇದ್ದವು. ಗ್ರೀಸಿನಲ್ಲಿದ್ದಂತೆ ಇನ್ನೂ ಕೆಲವು ಪ್ರಬಲ ವರ್ತಕ ಮಂಡಲಗಳ ನಗರ ರಾಜ್ಯಗಳಿದ್ದವು. ಬುದ್ಧನ ಕಾಲದಲ್ಲಿ ಈ ಬಗೆಯ ಗಣರಾಜ್ಯಗಳು ಅನೇಕವಿದ್ದವು. ಮಧ್ಯ ಮತ್ತು ಉತ್ತರ ಹಿಂದೂಸ್ಥಾನದಲ್ಲಿ ನಾಲ್ಕು ಮುಖ್ಯ ರಾಜ್ಯಗಳಿದ್ದವು. ಅವುಗಳಲ್ಲಿ ಗಾಂಧಾರ ಅಥವ ಅಫ್ಘಾನಿಸ್ಥಾನವೂ ಸೇರಿತ್ತು. ರಚನೆ ಏನೇ ಇರಲಿ ನಗರಾಡಳಿತ ಮತ್ತು ಗ್ರಾಮ ಪಂಚಾಯಿತಿಯ ಪ್ರತಿಷ್ಠೆ ಅದ್ಭುತವಿತ್ತು. ಸಾಮ್ರಾಜ್ಯಾಧಿಕಾರವನ್ನು ಒಪ್ಪಿದರೂ ಸಾಮ್ರಾಟನಿಗೆ ರಾಜ್ಯದ ಒಳಾಡಳಿತದಲ್ಲಿ ಪ್ರವೇಶವಿರಲಿಲ್ಲ. ಗ್ರೀಸ್‌ನಲ್ಲಿದ್ದಂತೆ ಪ್ರಾಯಶಃ ಉತ್ತಮ ವರ್ಗದವರ ಸ್ವತ್ತಾಗಿದ್ದ ಒಂದು ವಿಧವಾದ ಅರೆಬರೆಯ ಪ್ರಜಾಪ್ರಭುತ್ವವಿತ್ತು.

ಪುರಾತನ ಗ್ರೀಸ್ ಮತ್ತು ಇಂಡಿಯಗಳು ಅನೇಕ ವಿಧದಲ್ಲಿ ಭಿನ್ನವಿದ್ದರೂ ಇನ್ನು ಕೆಲವು ವಿಷಯಗಳಲ್ಲಿ ಬಹಳ ಸಾಮ್ಯವಿರುವುದನ್ನು ನೋಡಿದರೆ ಎರಡು ನಾಗರಿಕತೆಗಳ ಹಿನ್ನೆಲೆಯೂ ಒಂದೇ ವಿಧವಾಗಿದ್ದಿರಬೇಕೆಂಬ ಭಾವನೆಯುಂಟಾಗುತ್ತದೆ. ಅಥಿನಿಯನ್ ಪ್ರಜಾಪ್ರಭುತ್ವದ ವಿನಾಶಕ್ಕೆ ಕಾರಣಭೂತವಾದ ಪೆಲೊಪೊನೇಷಿಯನ್ ಯುದ್ಧವನ್ನು ಪುರಾತನ ಭಾರತದ ಮಹಾಭಾರತ ಯುದ್ಧಕ್ಕೆ ಹೋಲಿಸಬಹುದು. ಹೆಲೆನಿಸಮ್ ಮತ್ತು ನಗರ ಪ್ರಜಾಪ್ರಭುತ್ವಗಳ ನಾಶವಾದನಂತರ ಜನರಲ್ಲಿ ಒಂದು ವಿಧವಾದ ಸಂಶಯ ಮತ್ತು ನಿರಾಶಾಭಾವನೆ ಉದ್ಭವಿಸಿತು. ಅದ್ಭುತಗಳು ಮತ್ತು

ಅಪೌರುಷೇಯತೆಯ ಕಡೆಗೆ ಮನಸ್ಸು ತಿರುಗಿ ಜನತೆಯ ಮೂಲ ಆದರ್ಶಗಳು ಅಧೋಗತಿಗಿಳಿದವು. ಇಹಪ್ರಪಂಚಕ್ಕಿಂತ ಪರಲೋಕಕ್ಕೆ ಹೆಚ್ಚು ಪ್ರಾಧಾನ್ಯತೆ ದೊರೆಯಿತು. ಸ್ಟೋಯಿಕ್ ಮತ್ತು ಎಪಿಕ್ಯೂರಿಯನ್ ದರ್ಶನಗಳು ಜನ್ಮ ತಾಳಿದವು.

ಅಲ್ಪ ಮತ್ತು ಅನೇಕವೇಳೆ ವಿರುದ್ಧ ಪ್ರಮಾಣಗಳಿಂದ ಐತಿಹಾಸಿಕ ತುಲನೆಮಾಡುವುದು ಅಪಾಯಕರ ಮತ್ತು ಅಡ್ಡದಾರಿಗೆಳೆದಂತೆ. ಆದರೂ ಆ ಚಾಪಲ್ಯ ಹೋಗುವುದಿಲ್ಲ. ಮಹಾಭಾರತ ಯುದ್ಧದ ನಂತರದ ಪ್ರಕ್ಷುಬ್ಧ ಮಾನಸಿಕ ವಾತಾವರಣವನ್ನು ನೋಡಿದರೆ ಹೆಲೆನಿಕ್ ಕಾಲಾನಂತರದ ಗ್ರೀಸಿನಂತೆಯೇ ಕಾಣುತ್ತದೆ. ಆದರ್ಶಗಳಲ್ಲಿ ಅಸಭ್ಯತೆ ಮೂಡಿ ಹೊಸ ದರ್ಶನ ಮಾರ್ಗಾನ್ವೇಷಣೆಗಾರಂಭವಾಯಿತು. ರಾಜಕೀಯದಲ್ಲೂ, ಆರ್ಥಿಕ ಸ್ಥಿತಿಯಲ್ಲೂ ಇದೇಬಗೆಯ ಅಂತರ್ವಿಪ್ಲವಗಳು ಆಗಿರಬೇಕು. ಗಣರಾಜ್ಯಗಳು, ನಗರ ರಾಷ್ಟ್ರಗಳು ನಾಶವಾಗಿ ರಾಜ್ಯಶಕ್ತಿಯ ಕೇಂದ್ರೀಕರಣ ಪ್ರಯತ್ನ ನಡೆದಿರಬೇಕು.

ಆದರೆ ಈ ಸಾಮ್ಯದಿಂದ ಹೆಚ್ಚು ಲಾಭವಿಲ್ಲ. ಇನ್ನು ಕೆಲವು ಶತಮಾನಗಳು ಮೆಡಿಟರೇನಿಯನ್ ತೀರದಲ್ಲಿ ಗ್ರೀಕ್ ನಾಗರಿಕ ಜೀವಂತವಿದ್ದು ರೋಮ್ ಮತ್ತು ಯೂರೋಪಿನ ಮೇಲೆ ತನ್ನ ಪ್ರತಿಭೆಯನ್ನು ಬೀರಿದರೂ ಈ ಆಘಾತಗಳಿಂದ ಗ್ರೀಸ್ ಚೇತರಿಸಿಕೊಳ್ಳಲೇ ಇಲ್ಲ. ಆದರೆ ಭಾರತವು ಮಾತ್ರ ಆತ್ಯಾಶ್ಚರ್ಯಕರವಾಗಿ ತನ್ನ ಸ್ವಾಸ್ಥ್ಯವನ್ನು ಪಡೆಯಿತು. ಪುರಾಣ ಮತ್ತು ಬೌದ್ಧ ಯುಗಗಳ ಸಾವಿರಾರು ವರ್ಷಗಳಲ್ಲಿ ಅದ್ಭುತ ನಿರ್ಮಾಣಶಕ್ತಿಯನ್ನು ವ್ಯಕ್ತಪಡಿಸಿತು. ತತ್ವಶಾಸ್ತ್ರ, ಸಾಹಿತ್ಯ, ನಾಟಕ, ಗಣಿತಶಾಸ್ತ್ರ ಮತ್ತು ಕಲೆಗಳಲ್ಲಿ ಅಸಂಖ್ಯಾತ ಮಹಾ ವ್ಯಕ್ತಿಗಳು ಕಾಣುತ್ತಾರೆ. ಕ್ರಿಸ್ತಶಕೆಯ ಆರಂಭಕಾಲದ ಅದ್ಭುತಶಕ್ತಿ ಸ್ಫೋಟನದಿಂದ ವಲಸೆಸಾಹಸಗಳ ಪ್ರಯತ್ನ ನಡೆದು ಪೂರ್ವಸಮುದ್ರಗಳಾಚೆಯ ದೂರದ್ವೀಪಗಳಿಗೆ ಭಾರತೀಯರ ಮತ್ತು ಅವರ ಸಂಸ್ಕೃತಿಯ ಸೀಮೋಲ್ಲಂಘನವು ಸಹ ಆಯಿತು.

## ೧೨. ಪುರಾಣಗಳು, ಇತಿಹಾಸ, ಶಿಷ್ಟಾಚಾರ ಮತ್ತು ಕಾಲ್ಪನಿಕಕಥೆಗಳು

ಪ್ರಾಚೀನ ಭಾರತದ ಮಹಾ ಪುರಾಣಗಳಾದ ರಾಮಾಯಣ ಮಹಾಭಾರತಗಳು ಪ್ರಾಯಶಃ ಅನೇಕ ಶತಮಾನಗಳಲ್ಲಿ ರೂಪುಗೊಂಡಿರಬೇಕು. ಅನಂತರ ಪ್ರಕ್ಷಿಪ್ತಗಳೂ ಆಗಿರಬೇಕು. ಇಂಡೊ ಆರ್ಯರ ಆರಂಭದ ದಿನಗಳು, ಅವರ ವಿಜಯಗಳು, ಅವರು ವಿಸ್ತಾರಗೊಂಡು ಬಲಪಡಿಸಿಕೊಳ್ಳುತ್ತಿದ್ದಾಗ ನಡೆದ ಅಂತರ್ಯುದ್ಧಗಳು ಇವುಗಳ ಕಥೆ. ಆದರೆ ಅವುಗಳ ರಚನೆ ಮತ್ತು ಸಂಕೀರ್ಣ ಅನಂತರ. ಭಾರತ ಜನಮನದ ಮೇಲೆ ಈ ಎರಡು ಗ್ರಂಥಗಳು ಮಾಡಿರುವ ಅದ್ಭುತ ಪ್ರಭಾವದಂತೆ ಬೇರೆಲ್ಲೂ ಯಾವ ಗ್ರಂಥದಿಂದಲೂ ಆಗಿಲ್ಲ. ಪ್ರಾಚೀನತೆಯ ದಿಗಂತದಲ್ಲಿ ಉದ್ಭವಿಸಿದ್ದರೂ ಭಾರತೀಯರ ಜೀವನದಲ್ಲಿ ಈ ಮಹಾ ಕಾವ್ಯಗಳು ಇಂದಿಗೂ ಸಜೀವಶಕ್ತಿಗಳಾಗಿವೆ. ಮೂಲ ಸಂಸ್ಕೃತ ಗ್ರಂಥಗಳು ಕೆಲವು ವಿದ್ವಾಂಸರಿಗೆ ಮಾತ್ರ ಪರಿಚಯವಿರಬಹುದು. ಆದರೆ ಅನುವಾದಗಳಲ್ಲಿ, ರೂಪಾಂತರಗಳಲ್ಲಿ ಮತ್ತು ಸಂಪ್ರದಾಯ ಮತ್ತು ಪುರಾಣಗಳು ಜನಸಾಮಾನ್ಯದಲ್ಲಿ ಹರಡಿ, ಜನಜೀವನದ ಹಾಸುಹೊಕ್ಕಾಗಬಹುದಾದ ಅಸಂಖ್ಯಾತ ವಿಧಗಳಲ್ಲಿ ಭಾರತ ಜನತೆಗೆ ರಕ್ತಗತವಾಗಿವೆ. ಮಹಾಜ್ಞಾನಿಯಿಂದ ಮೊದಲುಗೊಂಡು ಓದು ಬರಹವಿಲ್ಲದ ಸರಳ ಹಳ್ಳಿಗನವರೆಗೆ ವಿವಿಧಮಟ್ಟದ ಸಂಸ್ಕೃತಿಯ ಎಲ್ಲ ಜನರಿಗೂ ಏಕಕಾಲದಲ್ಲಿ ಅವರವರ ಭಿನ್ನ ರುಚಿಗನುಗುಣವಾಗಿ ಮಾನ್ಯವಾದ ಭಾರತೀಯ ಸಂಸ್ಕೃತಿಯ ವೈಶಿಷ್ಟಗಳು ಅವು. ನಾನಾರೀತಿಯಲ್ಲಿ ವಿಂಗಡವಾಗಿ ವರ್ಣ ವಿಭಜನೆಯಿಂದ ಬಹುಮುಖವಾದ ಸಮಾಜದಲ್ಲಿ ನೈತಿಕ ಜೀವನದ ಮತ್ತು ಸಾಹಸಪರಂಪರೆಯ ಸಾಮಾನ್ಯ ಹಿನ್ನೆಲೆಯನ್ನು ಕೊಟ್ಟು ಒಗ್ಗಟ್ಟನ್ನುಂಟುಮಾಡಿದ ಪುರಾತನ ಭಾರತೀಯರ ರಹಸ್ಯವನ್ನರಿತುಕೊಳ್ಳಲು ಈ ಮಹಾಕಾವ್ಯಗಳು ಸ್ವಲ್ಪ ಮಟ್ಟಿಗೆ ಸಹಾಯಕವಾಗಿವೆ. ಜನತೆಯ ದೃಷ್ಟಿ ಏಕತ್ರವಾಗಿರುವಂತೆ ಮನಃಪೂರ್ವಕವಾಗಿ ಸಾಹಸಪಟ್ಟರು. ಆ ಪ್ರಯತ್ನದಿಂದ ಎಲ್ಲ ಕಷ್ಟಗಳನ್ನೂ ಎದುರಿಸಿ ನಿವಾರಿಸಿಕೊಳ್ಳಲು ಸಾಧ್ಯವಾಯಿತು.

ನನ್ನ ಬಾಲ್ಯದಲ್ಲಿ ನಾನು ಮೊದಲು ಕೇಳಿದ ಕಥೆಗಳು ಇನ್ನೂ ಜ್ಞಾಪಕದಲ್ಲಿವೆ. ಯೂರೋಪಿನಲ್ಲಿ ಅಥವ ಅಮೆರಿಕದಲ್ಲಿ ಮಕ್ಕಳು ಕೇಳುವ ಅದ್ಭುತ ಅಥವ ಸಾಹಸದ ಕಥೆಗಳಂತೆ ನನಗೆ ನನ್ನ ತಾಯಿಯೋ ಅಥವ ಮನೆಯ ಬೇರೆ ಮುದುಕಿಯರೊ ಈ ಪುರಾಣ ಕಥೆಗಳನ್ನು ಹೇಳಿರಬೇಕು. ನನಗೆ ಅವುಗಳಲ್ಲಿ ಅದ್ಭುತವೂ ಇತ್ತು ಸಾಹಸವೂ ಇತ್ತು. ಮತ್ತು ಅವರು ಪ್ರತಿ ವರ್ಷವೂ ರಾಮಾಯಣ ಕಥೆಯನ್ನು ಆಡಿ ತೋರಿಸುತ್ತಿದ್ದ ಬಯಲಾಟಗಳನ್ನು ನೋಡಲು ನನ್ನನ್ನು ಕರೆದುಕೊಂಡು ಹೋಗುತ್ತಿದ್ದರು. ಅದನ್ನು ನೋಡಲು ಅಸಂಖ್ಯಾತ ಜನರು ನೆರೆಯುತ್ತಿದ್ದರು. ಮೆರವಣಿಗೆಯಲ್ಲಿ ಹೋಗುತ್ತಿದ್ದರು. ಸ್ವಲ್ಪ ಒರಟು ಕಾಣಬಹುದು. ಆದರೆ ಅದು ಜಾತ್ರೆ ಸಮಯ ಮತ್ತು ಕಥೆಯು ಎಲ್ಲರಿಗೂ ಬಾಯಿಪಾಠವಾಗಿತ್ತು. ಈ ರೀತಿ ಭಾರತೀಯ ಪುರಾಣ ಕಥೆ ಮತ್ತು ಪ್ರಾಚೀನ ಪರಂಪರೆ ನನ್ನ ಮನಸ್ಸಿನಲ್ಲಿ ನುಸುಳಿ ನನ್ನ ಮನೋಭಾವನೆಯ ಇತರ ವಸ್ತುಗಳೊಂದಿಗೆ ಎಲ್ಲ ವಿಧದಲ್ಲಿ ಬೆರೆತು ಹೋಯಿತು. ಕತೆ ಎಲ್ಲವೂ ವಾಸ್ತವಿಕಸತ್ಯ ಎಂದು ಈ ಕಥೆಗಳಿಗೆ ನಾನು ಬಹಳ ಮಹತ್ವ ಕೊಡಲಿಲ್ಲ. ಆದರೆ ಪಶ್ಚಿಮ ಏಷ್ಯ ಮತ್ತು ಯೂರೋಪ್ ವಿಶೇಷ ಲಾಭ ಪಡೆದಿರುವ ಪ್ರಾಣಿಗಳ ಕಥೆಗಳ ಖನಿಯಂತಿರುವ ಪಂಚತಂತ್ರ ಮತ್ತು ಅರೇಬಿಯನ್ ನೈಟ್ಸ್ ಕಥೆಗಳು ಎಷ್ಟು ಕಾಲ್ಪನಿಕ ಸತ್ಯವೋ ಈ ಕಥೆಗಳು ಅಷ್ಟೆ ಸತ್ಯವೆಂದು ಕಂಡವು.* ನಾನು ದೊಡ್ಡವನಾದಂತೆ ಇತರ ಚಿತ್ರಗಳು ನನ್ನ ಚಿತ್ತ ಭಿತ್ತಿಯಲ್ಲಿ ಮನೆಮಾಡಿದವು. ಭಾರತೀಯ ಮತ್ತು ಯೂರೋಪಿಯನ್ ರಂಜಕ ಕಥೆಗಳು, ಗ್ರೀಕ್ ಪುರಾಣಕಥೆಗಳು ಆರ್ಕನ ಜೋನ್ ಕಥೆ, ಪಾತಾಳದಲ್ಲಿ ಪಾಪಚ್ಚಿಯ ಕಥೆ, ಅಕ್ಬರ್ ಬೀರ್ಬಲ್ ಕಥೆ, ಷರ್‌ಲಾಕ್ ಹೋಮ್ಸ್, ಕಿಂಗ್ ಆರ್ಥರ್ ಮತ್ತು ಅವನ ಶೂರರು, ಸಿಪಾಯಿ ದಂಗೆಯ ಯುವಕ ನಾಯಕಿ ಝಾನ್ಸಿ ರಾಣಿ, ರಜಪೂತರ ಧೈರ್ಯ ಮತ್ತು ಸಾಹಸದ ಕಥೆಗಳು ಇವು ಮತ್ತು ಇನ್ನೂ ಎಷ್ಟೋ ಕಥೆಗಳು ನನ್ನ ಮನಸ್ಸಿನಲ್ಲಿ ಕಲಸುಮೇಲೋಗರದಂತೆ ತುಂಬಿದವು. ಆದರೆ ಇವೆಲ್ಲದರ ಹಿನ್ನೆಲೆ ನಾನು ಬಾಲ್ಯದಲ್ಲಿಯೇ ಕೇಳಿ ನನ್ನ ಮನಸ್ಸಿನಲ್ಲಿ ನಾಟಿದ್ದ ಭಾರತೀಯ ಪುರಾಣ ಕಥೆಗಳು.

ಅನೇಕ ಪ್ರಭಾವಗಳಿಂದ ಹದವಾದ ನನ್ನ ಮನಸ್ಸಿನ ಸ್ಥಿತಿಯೇ ಹೀಗಾದಮೇಲೆ ಇತರರ ಮನಸ್ಸಿನ ಮೇಲೆ, ಅದರಲ್ಲೂ ಅಕ್ಷರಜ್ಞಾನವಿಲ್ಲದ ನಮ್ಮ ಸಾಮಾನ್ಯ ಜನಕೋಟಿಯ ಮೇಲೆ ನಮ್ಮ ಪುರಾಣಗಳು ಮತ್ತು ಸನಾತನ ಪರಂಪರೆಗಳು ಎಷ್ಟು ಪ್ರಭಾವ ಬೀರಿರಬೇಕೆಂಬುದನ್ನು ಅರಿತುಕೊಂಡೆ. ಸಂಸ್ಕೃತಿ ಮತ್ತು ನೀತಿಯ ದೃಷ್ಟಿಗಳೆರಡರಿಂದಲೂ ಆ ಪ್ರಭಾವ ಬಹಳ ಒಳ್ಳೆಯದು. ಈ ಕಥೆಗಳ ಸೌಂದರ್ಯ ಮತ್ತು ಕಲ್ಪನಾಸಂಕೇತವನ್ನು ಮತ್ತು ಅವುಗಳಲ್ಲಿ ಅಡಕವಾಗಿರುವ ರೂಪಕವನ್ನು ಕಡೆಗಣಿಸುವುದನ್ನು, ನಾಶಮಾಡುವುದನ್ನು ನಾನೆಂದೂ ಸಹಿಸಲಾರೆ.

---

*ಪಂಚತಂತ್ರವು ಏಷ್ಯದ ಮತ್ತು ಯೂರೋಪಿನ ಭಾಷೆಗಳಲ್ಲಿ ಅಸಂಖ್ಯಾತವಾಗಿ ಅನುವಾದವಾಗಿ ಮತ್ತು ರೂಪಾಂತರವಾಗಿರುವ ಇತಿಹಾಸ ಬಹು ದೊಡ್ಡದು, ತೊಡಕು ಮತ್ತು ಆಶ್ಚರ್ಯಕರ. ಮೊದಲು ಪರ್ಷಿಯದ ದೊರೆಯಾದ ಖುಸ್ರೊ ಅನುಷರ್ವಾನ್‌ನ ಅಪೇಕ್ಷೆಯಂತೆ 6 ನೆಯ ಶತಮಾನದ ಮಧ್ಯದಲ್ಲಿ ಸಂಸ್ಕೃತದಿಂದ ಪಹಲವಿ ಭಾಷೆಗೆ ಅನುವಾದವಾಯಿತು. ಮರುಕ್ಷಣ ಕ್ರಿ. ಶ. 570 ರಲ್ಲಿ ಸಿರಿಯನ್ ಭಾಷೆಗೂ ಅನಂತರ ಅರಬ್ಬಿ ಭಾಷೆಗೂ ಅನುವಾದವಾಯಿತು. 11 ನೆಯ ಶತಮಾನದಲ್ಲಿ ಸಿರಿಯನ್, ಅರಬ್ಬಿ, ಪಾರ್ಸಿ ಭಾಷೆಗಳಲ್ಲಿ ಹೊಸ ಅನುವಾದಗಳಾಗಿ ಪಾರ್ಸಿ ಅನುವಾದ ಗ್ರಂಥಕ್ಕೆ 'ಕಾಲಿಯ ದಮನ್' ಎಂದು ಹೆಸರಾಯಿತು. ಈ ಅನುವಾದಗಳ ಮೂಲಕ ಪಂಚತಂತ್ರವು ಯೂರೋಪ್ ಸೇರಿತು. 11 ನೆಯ ಶತಮಾನದ ಅಂತ್ಯಭಾಗದಲ್ಲಿ ಸಿರಿಯನ್ ಭಾಷೆಯಿಂದ ಗ್ರೀಕ್ ಭಾಷಾಂತರವಾಯಿತು. ಅನಂತರ ಸ್ವಲ್ಪ ದಿನಗಳ ಮೇಲೆ ಹೀಬ್ರು ಭಾಷೆಯಲ್ಲಿ. 15 ಮತ್ತು 16 ನೆಯ ಶತಮಾನಗಳಲ್ಲಿ ಅನೇಕ ಭಾಷಾಂತರಗಳು, ರೂಪಾಂತರಗಳು—ಲ್ಯಾಟಿನ್, ಇಟಾಲಿಯನ್, ಸ್ಪಾನಿಷ್, ಜರ್ಮನ್, ಸ್ವೀಡಿಷ್, ಡೇನಿಷ್, ಡಚ್, ಐಸ್‌ಲ್ಯಾಂಡಿಷ್, ಫ್ರೆಂಚ್, ಇಂಗ್ಲಿಷ್, ಹಂಗೇರಿಯನ್, ತುರ್ಕಿ. ಅನೇಕ ಸ್ಲ್ಯಾವ್ ಭಾಷೆಗಳಲ್ಲಿ ಭಾಷಾಂತರಗಳಾದವು. ಈ ರೀತಿ ಪಂಚತಂತ್ರದ ಕಥೆಗಳು ಏಷ್ಯದ ಮತ್ತು ಯೂರೋಪ್ ಸಾಹಿತ್ಯದಲ್ಲಿ ಸೇರಿಹೋದವು.

ಭಾರತೀಯ ಪುರಾಣಸಾಹಿತ್ಯವಿರುವುದು ಮಹಾಕಾವ್ಯಗಳಲ್ಲಿ ಮಾತ್ರವಲ್ಲ; ವೇದಕಾಲದಿಂದ ಇದೆ; ಸಂಸ್ಕೃತ ಸಾಹಿತ್ಯದಲ್ಲಿ ಅನೇಕ ರೂಪಭೇದಗಳಲ್ಲಿ ಬಂದಿದೆ; ಕವಿಗಳು, ನಾಟಕಕರ್ತರು ಅವುಗಳ ಸುತ್ತಲೂ ತಮ್ಮ ಕತೆಗಳನ್ನು ಕಲ್ಪನಾಚಿತ್ರಗಳನ್ನು ಹೆಣೆದು ಪೂರ್ಣ ಕೃತಕೃತ್ಯರಾಗಿದ್ದಾರೆ. ಸುಂದರಿಯೊಬ್ಬಳ ಪಾದಸ್ಪರ್ಶದಿಂದ ಅಶೋಕವೃಕ್ಷ ಹೂಬಿಡುವುದಂತೆ! ಪ್ರೇಮಕ್ಕಧಿಪತಿಯಾದ ಕಾಮದೇವ ಮತ್ತು ಆತನ ಮಡದಿಯಾದ ರತಿದೇವಿ ಅವರ ಸ್ನೇಹಿತನಾದ ವಸಂತನೊಡನೆ ಆಡುವ ಆಟಗಳನ್ನು ನೋಡುತ್ತೇವೆ. ಕಾಮದೇವ ಬಹುಸಾಹಸದಿಂದ ತನ್ನ ಹೂಬಾಣವನ್ನು ಶಿವನಿಗೇ ಗುರಿಯಿಟ್ಟು ಹೊಡೆದು ಶಿವನ ಮೂರನೆಯ ಕಣ್ಣಿನ ಅಗ್ನಿಯಿಂದ ಸುಟ್ಟು ಬೂದಿಯಾಗುತ್ತಾನೆ. ಆದರೆ ಅಶರೀರನಾಗಿ ಅನಂಗನಾಗಿ ಚಿರಂಜೀವಿಯಾಗಿದ್ದಾನೆ!

ಅನೇಕ ಪುರಾಣಗಳ, ಕತೆಗಳ ಕಥಾವಸ್ತು ಸಾಹಸ, ಸತ್ಯನಿಷ್ಠೆ, ಪ್ರತಿಜ್ಞಾಪಾಲನೆ; ಏನೆ ಬರಲಿ, ಮರಣವೇ ಒದಗಲಿ, ಮತ್ತು ಮರಣದ ಆಚೆಸಹ ಲೋಕಕಲ್ಯಾಣಕ್ಕಾಗಿ ದೃಢವಿಶ್ವಾಸ, ಧೈರ್ಯ, ಸತ್ಕಾರ್ಯ ಮತ್ತು ತ್ಯಾಗ. ಕೆಲವುವೇಳೆ ಕಥೆ ಕೇವಲ ಕಾಲ್ಪನಿಕವಿರಬಹುದು ಅಥವ ಕಲ್ಪನೆ ಮತ್ತು ವಾಸ್ತವಿಕತೆಯ ಜೋಡಣೆಯಿರಬಹುದು. ಸಂಪ್ರದಾಯದ ನೆರಳಿನಲ್ಲಿ ಬೆಳೆದುಬಂದ ಯಾವುದೋ ಘಟನೆಯ ಒಂದು ಉತ್ಪ್ರೇಕ್ಷೆಯಿರಬಹುದು. ಕಲ್ಪನೆ ಮತ್ತು ವಾಸ್ತವಿಕತೆ ಎರಡೂ ಅಭೇದ್ಯವಾಗಿ ಹೆಣೆದುಕೊಂಡು ಇತಿಹಾಸವೆಂಬ ಭಾವನೆಗೆ ಅವಕಾಶಕೊಟ್ಟಿದೆ. ಆದ್ದರಿಂದ ನಡೆದ ವಿಷಯ ನಡೆದಂತೆ ತಿಳಿಯದೆ ಇರಬಹುದು; ಆದರೆ ಇನ್ನೊಂದು ವಿಧದಲ್ಲಿ ಅತಿ ಮುಖ್ಯವಾದ ಅಂಶವನ್ನು ತಿಳಿಸುತ್ತದೆ—ಏನು ನಡೆಯಿತೆಂದು ಜನ ಭಾವಿಸಿದ್ದರು, ತಮ್ಮ ಪೂರ್ವಿಕರು ಏನು ಸಾಹಸಕೃತ್ಯಗಳನ್ನು ಸಾಧಿಸಬಲ್ಲರೆಂದು ತಿಳಿದಿದ್ದರು, ಅವರನ್ನು ಪ್ರೇರಿಸಿದ ಆದರ್ಶಗಳೇನು—ಎಂಬುದನ್ನು. ಆದ್ದರಿಂದ ವಾಸ್ತವಿಕವೋ, ಕಾಲ್ಪನಿಕವೊ ಅವರ ಜೀವನದಲ್ಲಿ ಒಂದು ಚೇತನ ವಸ್ತುವಾಯಿತು. ನಿತ್ಯ ಜೀವನದ ಹೋರಾಟ ಮತ್ತು ಅಸಹ್ಯತೆಯಿಂದ ಹೊರಗೆಳೆದು, ಗುರಿ ಬಹುದೂರವಿದ್ದರೂ ದಾರಿ ಕಡಿದಾಗಿದ್ದರೂ ಸದಾ ಸಾಹಸದ ಮಾರ್ಗ ಮತ್ತು ಆದರ್ಶಜೀವನದ ಕಡೆಗೆ ಮೇಲಿಂದ ಮೇಲಕ್ಕೊಯ್ಯುವ ಸಜೀವ ವಸ್ತುವಾಗಿತ್ತು.

ಪುರಾತನ ರೋಮನರ ಸಾಹಸದ ಕಥೆಗಳು, ಲುಕ್ರೇಷಿಯ ಮತ್ತು ಇತರರ ಕಥೆಗಳು ಕೃತಕ ಮತ್ತು ಸುಳ್ಳು ಕತೆಗಳು ಎಂದವರನ್ನು ಗೈಟೆ ಖಂಡಿಸುತ್ತ ಇದ್ದನಂತೆ. 'ನಿಜವಾಗಿಯೂ ಕೃತಕ ಮತ್ತು ಸುಳ್ಳಾದರೆ ಅದು ಅಸಂಬದ್ಧ ಮತ್ತು ನಿಷ್ಫಲವಾಗಿರಬೇಕೆ ವಿನಾ, ಎಂದಿಗೂ ಸುಂದರವೂ ಪ್ರೇರಕವೂ ಆಗಲಾರದು. ರೋಮನರು ಇಂತಹ ಕಲ್ಪನೆಗಳನ್ನು ಕಾಣುವಷ್ಟು ಮಹತ್ತನ್ನು ಪಡೆದು ಇದ್ದರೆ, ನಾವು ಅವುಗಳನ್ನು ನಂಬುವಷ್ಟಾದರೂ ದೊಡ್ಡಸ್ತಿಕೆ ತೋರೋಣ' ಎಂದು ಹೇಳಿದನಂತೆ.

ಈ ರೀತಿ ಈ ಕಾಲ್ಪನಿಕ ಇತಿಹಾಸವು, ವಾಸ್ತವಿಕತೆ ಮತ್ತು ಕಲ್ಪನೆಯ ಬೆರಕೆಯು, ಕೆಲವು ವೇಳೆ ಬರೀ ಕಲ್ಪನೆಯು, ಸಾಂಕೇತಿಕ ಸತ್ಯವಾಯಿತು ಮತ್ತು ಅದು ಆ ಕಾಲದ ಜನರ ಮನಸ್ಸು, ಹೃದಯ ಮತ್ತು ಉದ್ದೇಶಗಳು ಏನಿದ್ದುವೆಂದು ತಿಳಿಸುತ್ತದೆ. ಮುಂದಿನ ಇತಿಹಾಸದ ಭಾವನೆ ಮತ್ತು ಕಾರ್ಯದ ತಳಹದಿಯಾಯಿತೆಂಬ ದೃಷ್ಟಿಯಿಂದಲೂ ಅದರಲ್ಲಿ ಸತ್ಯಾಂಶವಿದೆ. ಪುರಾತನ ಭಾರತೀಯ ಇತಿಹಾಸದ ಕಲ್ಪನೆ ಎಲ್ಲವೂ ದರ್ಶನ ಮತ್ತು ಧರ್ಮದ ವಿಚಾರಸರಣಿಯ ಮತ್ತು ನೈತಿಕ ಭಾವನೆಯ ಪ್ರಭಾವಕ್ಕೊಳಗಾಗಿತ್ತು. ನಡೆದದ್ದು ನಡೆದಂತೆ ಚರಿತ್ರೆಯನ್ನು ಬರೆಯುವ ಅಥವ ಘಟನೆಗಳನ್ನು ತಿಳಿಸುವ ಪ್ರಯತ್ನಕ್ಕೆ ಯಾವ ಪ್ರಾಮುಖ್ಯತೆಯನ್ನು ಕೊಡಲಿಲ್ಲ. ಮಾನವೀಘಟನೆಗಳು ಮತ್ತು ಕಾರ್ಯಗಳು ಮಾನವ ನಡತೆಯ ಮೇಲೆ ಯಾವ ಪರಿಣಾಮ ಮಾಡುತ್ತವೆ ಎಂಬುದೊಂದೇ ಅವರಿಗೆ ಮುಖ್ಯವಾಯಿತು. ಗ್ರೀಕರಂತೆ ಇವರೂ ವಿಶೇಷ ಭಾವನಾಜೀವಿಗಳು; ಕಲಾಪ್ರಿಯರು, ಹಿಂದಿನ ಘಟನೆಗಳಿಂದ ಮುಂದಿನ ನಡತೆಗೆ ಒಂದು ನೀತಿ, ಪಾಠ ಕಲಿಯುವುದೇ ಅವರಿಗೆ ಮುಖ್ಯವಾಗಿದ್ದುದರಿಂದ ಹಿಂದಿನ ಘಟನೆಗಳನ್ನು ವಿವರಿಸುವಾಗಲೂ ಅದೇ ಕಲಾಪ್ರಿಯತೆ ಮತ್ತು ಕಲ್ಪನಾಲಹರಿಯನ್ನು ಕಾಣುತ್ತೇವೆ.

ಗ್ರೀಕರಂತೆ ಚೀನೀಯರು ಮತ್ತು ಅರಬ್ಬಿ ಜನರಂತೆ ಭಾರತೀಯರು ಹಿಂದಿನ ಕಾಲದಲ್ಲಿ ಚರಿತ್ರಕಾರರಾಗಿರಲಿಲ್ಲ. ಅದು ನಮ್ಮ ದುರದೃಷ್ಟ. ನಿಕರವಾಗಿ ಕಾಲವನ್ನಾಗಲಿ ವಂಶಪರಂಪರೆಯನ್ನಾಗಲಿ ನಮ್ಮಲ್ಲಿ ಕಂಡು ಹಿಡಿಯಲು ಸಾಧ್ಯವಿಲ್ಲ; ಒಂದರೊಳಗೊಂದರ ಘಟನೆಗಳ ಕಲಸುಮೇಲೋಗರ, ಒಂದರ ಮೇಲೊಂದರ ವ್ಯಾಪನೆ; ಎಲ್ಲವೂ ಬಂದು ದೊಡ್ಡ ಗೊಂದಲ. ಭಾರತೀಯ ಇತಿಹಾಸದ ಈ ಗೊಂಡಾರಣ್ಯದಿಂದ ಭಾರತೀಯ ಇತಿಹಾಸ ಸಂಶೋಧಕರು ಬಹು ತಾಳ್ಮೆಯಿಂದ ಈಚೀಚಿಗೆ ಕ್ರಮೇಣ ನಾಡನ್ನು ಕಾಣುತ್ತಿದ್ದಾರೆ. ಇತಿಹಾಸವೆನ್ನಬಹುದಾದರೆ ೧೨ ನೆಯ ಶತಮಾನದಲ್ಲಿ ಕಲ್ಹಣನು ಬರೆದ ಕಾಶ್ಮೀರದೇಶದ ಚರಿತ್ರೆ 'ರಾಜತರಂಗಿಣಿ' ಒಂದೆ. ಉಳಿದುದಕ್ಕೆಲ್ಲ ಮಹಾಕಾರ್ಯಗಳ ಕಾಲ್ಪನಿಕ ಇತಿಹಾಸ ಮತ್ತು ಇತರ ಗ್ರಂಥಗಳು, ಆಗಿನ ಕಾಲದ ಕೆಲವು ಕಡತಗಳು, ಶಾಸನಗಳು, ಶಿಲ್ಪ ಮತ್ತು ಕಲಾಕೃತಿಗಳು, ನಾಣ್ಯಗಳು ಮತ್ತು ಸಂಸ್ಕೃತ ಸಾಹಿತ್ಯಭಂಡಾರದಲ್ಲಿ ಅಲ್ಲಲ್ಲಿ ಕಾಣುವ ಚಾರಿತ್ರಕ ವಿಷಯಗಳಿಗೇ ಹೋಗಬೇಕು. ಇವುಗಳಲ್ಲದೆ ಹಿಂದಿನ ಕಾಲದಲ್ಲಿ ಪ್ರವಾಸ ಬಂದ ಗ್ರೀಸ್ ಮತ್ತು ಚೀನಿ ಯಾತ್ರಿಕರು ಮತ್ತು ಈಚಿನ ಅರಬ್ಬಿ - ಪ್ರವಾಸಿಗಳು ಬರೆದಿರುವ ಅನೇಕ ಪ್ರವಾಸ ಸಾಹಿತ್ಯಗಳಿವೆ.

ಈ ಐತಿಹಾಸಿಕ ದೃಷ್ಟಿಯ ಅಭಾವ ಜನತೆಯ ಮೇಲೆ ಯಾವ ಪರಿಣಾಮವನ್ನೂ ಮಾಡಲಿಲ್ಲ. ಇತರ ದೇಶಗಳಂತೆ, ಏಕೆ ಅದಕ್ಕೂ ಹೆಚ್ಚಾಗಿ, ಭಾರತೀಯರು ತಲೆತಲಾಂತರದಿಂದ ಹರಿದು ಬಂದ ಜನಜನಿತ ಪ್ರತೀತಿಗಳಿಂದ, ಪುರಾಣಗಳಿಂದ, ಕತೆಗಳಿಂದ ತಮ್ಮ ಪುರಾತನ ಐತಿಹ್ಯವನ್ನು ರಚಿಸಿಕೊಂಡರು. ಈ ಕಾಲ್ಪನಿಕ ಇತಿಹಾಸ ಮತ್ತು ವಾಸ್ತವಿಕತೆ ಮತ್ತು ಕತೆಯ ಮಿಶ್ರಣವೇ ಎಲ್ಲರಲ್ಲೂ ಹರಡಿ ಜನತೆಗೆ ಒಂದು ಭದ್ರವೂ, ಶಾಶ್ವತವೂ ಆದ ಸಂಸ್ಕೃತಿಯ ಹಿನ್ನೆಲೆಯನ್ನು ಕೊಟ್ಟವು. ಆದರೆ ಐತಿಹಾಸಿಕ ದೃಷ್ಟಿಯನ್ನು ಅಲಕ್ಷ್ಯಮಾಡಿದುದರಿಂದ ಆದ ದುಷ್ಪರಿಣಾಮ ಅಧಿಕವಾಗಿದೆ. ವಾಸ್ತವಿಕತೆಯ ಎದುರಿನಲ್ಲಿ ದೃಷ್ಟಿಕೋಣದ ಅಸ್ಪಷ್ಟತೆ, ಜೀವನದ ವಾಸ್ತವಿಕತೆಯಿಂದ ದೂರ ಇರುವಿಕೆ, ಮೂಢನಂಬಿಕೆ ಮತ್ತು ಮನಸ್ಸಿನ ಅಸ್ಥಿರತೆಗಳು ತಲೆದೋರಿದವು. ಆದರೆ ಅದೇ ಮನಸ್ಸು ಬಹುಕಷ್ಟತಮವಾದ ಆದರೆ ಸ್ವಭಾವತಃ ಅಸ್ಪಷ್ಟವೂ ಅನಿರ್ದಿಷ್ಟವೂ ಆದ ದರ್ಶನ ಪ್ರಪಂಚದಲ್ಲಿ ಸ್ವಲ್ಪವೂ ಅಸ್ಪಷ್ಟತೆಯನ್ನು ಕಾಣಲಿಲ್ಲ. ಅಲ್ಲಿ ವಿಭಾಜಕವೂ ಆಗಿತ್ತು, ಸಂಯೋಜಕವೂ ಆಗಿತ್ತು; ಅನೇಕವೇಳೆ ವಿಮರ್ಶಾತ್ಮಕವಿತ್ತು ಮತ್ತು ಸಂದೇಹಾತ್ಮಕವೂ ಇತ್ತು. ಆದರೆ ವಾಸ್ತವಿಕತೆಯನ್ನು ಅರಿತುಕೊಳ್ಳುವದರಲ್ಲಿ ಮಾತ್ರ ವಿಮರ್ಶಾರಹಿತವಾಗಿತ್ತು; ಪ್ರಾಯಶಃ ವಾಸ್ತವಿಕತೆಗೆ ಪ್ರಾಮುಖ್ಯತೆ ಇಲ್ಲದುದೇ ಅದಕ್ಕೆ ಕಾರಣವಿರಬಹುದು.

ವಿಜ್ಞಾನ ಮತ್ತು ಆಧುನಿಕ ಪ್ರಪಂಚದ ಸಂಪರ್ಕದಿಂದ ಹೆಚ್ಚು ವಿಮರ್ಶಾತ್ಮಕ ದೃಷ್ಟಿ, ಸಾಕ್ಷ್ಯಾಧಾರ ತೋಲನದೃಷ್ಟಿ, ಸಂಪ್ರದಾಯವೆಲ್ಲ ಸಂಪ್ರದಾಯವಾದ್ದರಿಂದಲೇ ಅನುಸರಣೀಯ ಯೋಗ್ಯವೆಂದು ಒಪ್ಪದ ತಿರಸ್ಕಾರ ದೃಷ್ಟಿ ಬೆಳೆದು ವಾಸ್ತವಿಕತೆಗೆ ಉತ್ತಮ ಬೆಲೆ ದೊರೆತಿದೆ. ಅನೇಕ ದಕ್ಷರಾದ ಚರಿತ್ರಕಾರರು ಕಾರ್ಯನಿರತರಾಗಿದ್ದಾರೆ. ಅವರು ತಪ್ಪು ಮಾಡಿದರೂ ವಾಸ್ತವಿಕತೆಯ ಪಕ್ಷಪಾತಿಗಳಾಗಿ ಮಾಡುತ್ತಾರೆ. ಅವರ ಕಾರ್ಯ ಜೀವಂತ ಚರಿತ್ರೆಗಿಂತ ಹೆಚ್ಚು ವಾಸ್ತವವಿದೆ. ಆದರೂ ಈಗಲೂ ಸಹ ಸಂಪ್ರದಾಯಗಳಿಗೆ ನಾವು ಏಕಾಏಕಿ ಹೇಗೆ ಶರಣು ಹೋಗುತ್ತೇವೆ; ನಮ್ಮಲ್ಲಿ ತುಂಬ ಬುದ್ಧಿ ಕುಶಲರು ಎನ್ನುವವರ ವಿಮರ್ಶಾತ್ಮಕ ದೃಷ್ಟಿ ಸಹ ಹೇಗೆ ಕುರುಡಾಗುತ್ತದೆ ಎನ್ನುವುದನ್ನು ನೋಡಿದರೆ ಆಶ್ಚರ್ಯವಾಗುತ್ತದೆ. ಪ್ರಾಯಶಃ ಇಂದಿನ ದಾಸ್ಯ ಜೀವನದಲ್ಲಿ ಕುದಿಯುವ ನಮ್ಮ ರಾಷ್ಟ್ರೀಯ ಭಾವನೆ ಅದಕ್ಕೆ ಕಾರಣವಿರಬಹುದು. ರಾಜಕೀಯ ಆರ್ಥಿಕ ಸ್ವಾತಂತ್ರ್ಯ ನಮಗೆ ದೊರೆತಾಗ ಮಾತ್ರ ನಮ್ಮ ಮನಸ್ಸು ಸಾಮಾನ್ಯ ರೀತಿಯಲ್ಲಿ, ವಿಮರ್ಶಾತ್ಮಕ ದೃಷ್ಟಿಯಿಂದ ಕೆಲಸ ಮಾಡಬಲ್ಲದು.

ಇತ್ತೀಚೆಗೆ ನಡೆದ ಒಂದು ಮುಖ್ಯ ಘಟನೆಯಿಂದ ವಿಮರ್ಶನ ದೃಷ್ಟಿಗೂ, ರಾಷ್ಟ್ರೀಯ ಶಿಷ್ಟಾಚಾರಕ್ಕೂ ಹೇಗೆ ಘರ್ಷಣೆ ಬರುತ್ತದೆ ಎಂಬುದು ಸ್ಪಷ್ಟವಾಗುತ್ತದೆ. ಭಾರತದ ಬಹುಭಾಗದಲ್ಲಿ

ಬಳಕೆಯಲ್ಲಿರುವುದು ವಿಕ್ರಮಶಕೆ. ಆದರೆ ಎಣಿಕೆ ಸೌರಮಾನ ರೀತ್ಯ, ಆದರೆ ತಿಂಗಳುಗಳೆಲ್ಲ ಚಾಂದ್ರ ಮಾನ. ಕಳೆದ ತಿಂಗಳು ೧೯೪೪ ನೆ ಏಪ್ರಿಲ್‌ನಲ್ಲಿ ಈ ಶಕೆಯಂತೆ ಎರಡು ಸಾವಿರ ವರ್ಷಗಳಾಗಿ ಹೊಸ ಸಹಸ್ರಾಬ್ಧಿ ಆರಂಭವಾಯಿತು. ಭಾರತದಾದ್ಯಂತ ಈ ಉತ್ಸವವನ್ನು ಆಚರಿಸುತ್ತಿದ್ದಾರೆ. ಅದಕ್ಕೆ ಕಾರಣ ಯುಗದ ಎಣಿಕೆಯಲ್ಲಿ ಅದು ಒಂದು ದೊಡ್ಡ ಸಂಧ್ಯಾಕಾಲ. ಯುಗಪುರುಷನಾದ ವಿಕ್ರಮ ಅಥವ ವಿಕ್ರಮಾದಿತ್ಯ ಮಹದ್ವ್ಯಕ್ತಿ ಎಂದು ಜನಪ್ರಿಯನಾಗಿದಾನೆ. ಅವನ ಹೆಸರಿನಲ್ಲಿ ಅನೇಕ ಕತೆಗಳಿವೆ. ಮಧ್ಯಯುಗದಲ್ಲಿ ಅನೇಕ ಕತೆಗಳು ರೂಪಾಂತರ ಹೊಂದಿ ವಿವಿಧ ರೀತಿಯಲ್ಲಿ ಏಷ್ಯದ ಇತರ ಭಾಗಗಳಿಗೆ ಮತ್ತು ಯುರೋಪಿಗೆ ಸಹ ಹೋದವು.

ವಿಕ್ರಮ ಒಬ್ಬ ರಾಷ್ಟ್ರವೀರನೆಂದು, ಆದರ್ಶ ರಾಜಪುತ್ರನೆಂದು ಬಹುಕಾಲದ ಪ್ರತೀತಿ ಇದೆ. ಪರದಾಳಿಯನ್ನು ಎದುರಿಸಿ ವಿದೇಶೀಯರನ್ನು ಓಡಿಸಿದ ಮಹಾವೀರನೆಂದು ಜನ ಅವನನ್ನು ಸ್ಮರಿಸುತ್ತಾರೆ. ಆದರೆ ಅವನ ಯಶಸ್ಸಿಗೆ ಮುಖ್ಯ ಕಾರಣ ಅವನ ರಾಜಾಸ್ಥಾನದ ಸಾಹಿತ್ಯ ಮತ್ತು ಸಂಸ್ಕೃತಿಯ ಪ್ರತಿಭೆ; ಅವನ ಆಸ್ಥಾನದಲ್ಲಿದ್ದ ಮಹಾಕವಿಗಳು, ಕಲಾವಿದರು, ಗಾಯಕ ಶ್ರೇಷ್ಠರು, —ನವರತ್ನಗಳು. ಈ ಕತೆಗಳಲ್ಲೆಲ್ಲ ಅವನ ಪರೋಪಕಾರ ಬುದ್ಧಿ, ಸ್ವಪ್ರಯೋಜನವನ್ನು ಬೆಳಸದೆ ತನ್ನ ಜನರಿಗಾಗಿ ಮಾಡಿದ ಅವನ ಆತ್ಮತ್ಯಾಗ, ಔದಾರ್ಯ, ಪರಸೇವೆ, ಧೈರ್ಯ ಇವುಗಳ ವರ್ಣನೆ ಇದೆ. ನಿರಹಂಕಾರಕ್ಕೆ ಆತ ತವರುಮನೆ. ಆದರೆ ಆತನ ಜನಪ್ರಿಯತೆಗೆ ಮುಖ್ಯ ಕಾರಣ ಅವನ ಸದ್ಗುಣ ಮತ್ತು ಕಲಾಭಿಜ್ಞತೆ. ಅವನ ಯುದ್ಧ ಸಾಮರ್ಥ್ಯ ಅಥವ ಅವನ ವಿಜಯೋತ್ಸವಗಳ ವರ್ಣನೆ ಆ ಕತೆಗಳಲ್ಲಿ ಸ್ವಲ್ಪವೂ ಇಲ್ಲ. ಆತನ ಸದ್ಗುಣ ಮತ್ತು ತ್ಯಾಗಬುದ್ಧಿಗೆ ಕೊಟ್ಟಿರುವ ಪ್ರಾಮುಖ್ಯತೆ ಭಾರತೀಯ ಭಾವನೆ ಮತ್ತು ಆದರ್ಶಗಳ ವೈಶಿಷ್ಟ್ಯ. ಸೀಸರ್‌ನಂತೆ ವಿಕ್ರಮಾದಿತ್ಯನ ಹೆಸರು ಒಂದು ಸಂಕೇತವಾಯಿತು, ಒಂದು ಬಿರುದು ಆಯಿತು. ಅನಂತರ ಬಂದ ಅನೇಕರು ಅವನ ಹೆಸರನ್ನು ಇಟ್ಟುಕೊಂಡರು. ಚರಿತ್ರೆಯಲ್ಲಿ ವಿಕ್ರಮಾದಿತ್ಯ ಎಂಬ ಹೆಸರಿನ ಅನೇಕ ರಾಜರುಗಳಿರುವುದರಿಂದ ಇನ್ನೂ ಹೆಚ್ಚು ತೊಡಕೆದ್ದಿತು.

ಆದರೆ ಈ ವಿಕ್ರಮ ಯಾರು? ಅವನು ಇದ್ದುದು ಯಾವಾಗ. ಚಾರಿತ್ರದೃಷ್ಟಿಯಿಂದ ಎಲ್ಲವೂ ಅಸ್ಪಷ್ಟ. ಕ್ರಿಸ್ತ ಪೂರ್ವ ೫೭ ರ ಸುಮಾರಿನಲ್ಲಿ. ವಿಕ್ರಮ ಸಂವತ್ಸರ ಆರಂಭವಾಗಬೇಕಾದಾಗ ಅಂತಹ ವ್ಯಕ್ತಿ ಯಾರೂ ಇಲ್ಲ. ಆದರೆ ಕ್ರಿಸ್ತಶಕ ನಾಲ್ಕನೆಯ ಶತಮಾನದಲ್ಲಿ ಉತ್ತರ ಇಂಡಿಯದಲ್ಲಿ ಒಬ್ಬ ವಿಕ್ರಮಾದಿತ್ಯ ಇದ್ದಾನೆ. ಹೂಣರೊಡನೆ ಯುದ್ಧ ಮಾಡಿ ಅವರನ್ನು ಓಡಿಸಿದವನು. ತನ್ನ ಆಸ್ಥಾನದಲ್ಲಿ 'ನವರತ್ನ' ಗಳಿಗೆ ಆಶ್ರಯ ಕೊಟ್ಟವನೆಂಬುವವನೂ ಇವನೇ. ಈ ಕಥೆಗಳಲ್ಲೆಲ್ಲ ಬರುವವನೂ ಅವನೇ. ಹಾಗಾದರೆ ಕ್ರಿಸ್ತಶಕ ನಾಲ್ಕನೆಯ ಶತಮಾನದ ಈ ವಿಕ್ರಮಾದಿತ್ಯನಿಗೂ ಕ್ರಿಸ್ತಪೂರ್ವ ೫೭ ರಿಂದ ಆರಂಭವಾಗುವ ಯುಗಕ್ಕೂ ಸಂಬಂಧ ಕಲ್ಪಿಸುವುದು ಹೇಗೆ. ಮಧ್ಯ ಇಂಡಿಯದ ಮಾಳವ ದೇಶದಲ್ಲಿ ಕ್ರಿಸ್ತ ಪೂರ್ವ ೫೭ ರಿಂದ ಆರಂಭವಾದ ಯುಗ ಒಂದು ಬಳಕೆಯಲ್ಲಿತ್ತು. ಪ್ರಾಯಶಃ ವಿಕ್ರಮನನಂತರ ಅನೇಕ ವರ್ಷಗಳ ಮೇಲೆ ಈ ಯುಗಕ್ಕೂ ವಿಕ್ರಮನಿಗೂ ಸಂಬಂಧಕಲ್ಪಿಸಿ ಅವನ ಹೆಸರಿನಿಂದ ಕರೆದು ಇರಬೇಕು. ಎಲ್ಲವೂ ಅಸ್ಪಷ್ಟ ಮತ್ತು ಅನಿಶ್ಚಿತ.

೨,೦೦೦ ವರ್ಷಗಳ ಹಿಂದೆ ಆರಂಭವಾದ ಈ ಯುಗಕ್ಕೂ ಮತ್ತು ಈ ವಿಕ್ರಮನಿಗೂ ಹೇಗಾದರೂ ಗಂಟುಹಾಕಬೇಕೆಂದು ಭಾರತೀಯರಲ್ಲಿ ಅಗ್ರಗಣ್ಯರಾದವರು ಸಹ ಚರಿತ್ರೆಯೊಂದಿಗೆ ಹೇಗೆ ಜೂಜಾಡಿದ್ದಾರೆಂಬುದನ್ನು ನೋಡಿದರೆ ಆಶ್ಚರ್ಯವಾಗುತ್ತದೆ- ದಂಡಯಾತ್ರೆ ಬಂದ ವಿದೇಶೀಯರೊಡನೆ ಆತನ ಹೋರಾಟ ಮತ್ತು ಭಾರತವನ್ನು ಒಂದುಗೂಡಿಸಿ ಒಂದು ರಾಷ್ಟ್ರೀಯ ರಾಜ್ಯವನ್ನು ಕಟ್ಟಲು ಆತನಿಗಿದ್ದ ಹಿರಿಯಾಸೆಗೆ ಕೊಟ್ಟಿರುವ ಪ್ರಾಮುಖ್ಯತೆ ಸಹ ಅದ್ಭುತವಾಗಿದೆ. ವಿಕ್ರಮನ ಕಾರ್ಯಕ್ಷೇತ್ರವೆಲ್ಲ ಉತ್ತರ ಮತ್ತು ಮಧ್ಯ ಹಿಂದೂಸ್ಥಾನದಲ್ಲಿ.

ಇತಿಹಾಸ ವೀಕ್ಷಣೆ ಮತ್ತು ಲೇಖನದಲ್ಲಿ ರಾಷ್ಟ್ರೀಯತೆಯ ಪ್ರಚೋದನೆ ಮತ್ತು ರಾಷ್ಟ್ರೀಯ ಉತ್ಸುಕತೆಯ ಪ್ರಭಾವಕ್ಕೊಳಗಾದವರು ಭಾರತೀಯರು ಮಾತ್ರವಲ್ಲ. ಪ್ರತಿಯೊಂದು ಜನಾಂಗ ಮತ್ತು

ಜನ ತಮ್ಮ ಪೂರ್ವೇತಿಹಾಸಕ್ಕೆ ಈ ರೀತಿ ಬಣ್ಣ ಕೊಟ್ಟು; ವಿಕೃತಿಮಾಡಿ ಪ್ರಯೋಜನ ಪಡೆದಿದ್ದಾರೆ. ಮುಖ್ಯವಾಗಿ ಆಂಗ್ಲರೇ ಬರೆದ ನಾವು ಓದುವ ಭಾರತೀಯ ಚರಿತ್ರೆಗಳಲ್ಲೆಲ್ಲ ಬ್ರಿಟಿಷರ ಆಳ್ವಿಕೆಯಿಂದ ಆಗಿರುವ ಪ್ರಯೋಜನ, ಬ್ರಿಟಿಷರ ಆಳ್ವಿಕೆಯ ಅವಶ್ಯಕತೆ, ಅದರ ಸ್ತೋತ್ರ ಮತ್ತು ಅದರ ಹಿಂದಿನ ಸಾವಿರಾರು ವರ್ಷಗಳ ಚರಿತ್ರೆಯ ಮುಚ್ಚುಮರೆಯಿಲ್ಲದ ಅವಹೇಳನ. ನಿಜವಾಗಿ ಹೇಳುವುದಾದರೆ ಅವರಿಗೆ ಭಾರತೀಯ ಇತಿಹಾಸ ಆರಂಭವಾಗುವುದು ಬ್ರಿಟಿಷರ ಕಾಲದಿಂದ. ಅದಕ್ಕೆ ಹಿಂದೆ ನಡೆದುದೆಲ್ಲ ಈ ದೈವೇಚ್ಛೆಗೆ ಪೂರ್ವ ಸಿದ್ಧತೆ! ಬ್ರಿಟಿಷರ ರಾಜ್ಯಭಾರ ಮತ್ತು ಗುಣ ವರ್ಣನೆಗೆ ಬ್ರಿಟಿಷರ ಕಾಲವನ್ನು ಸಹ ವಿಕೃತಿಗೊಳಿಸಲಾಗಿದೆ. ಕ್ರಮೇಣ ನಿಜವಾದ ದೃಷ್ಟಿ ಮೂಡುತ್ತಿದೆ. ಯಾವುದೋ ಕೆಲವು ಉದ್ದೇಶ ಸಾಧನೆಗಾಗಿ, ಅಥವ ವೈಯಕ್ತಿಕ ಊಹೆ ಮತ್ತು ವಕ್ರನೀತಿಯಿಂದ ಚರಿತ್ರೆಯನ್ನು ವಿಕೃತಿಗೊಳಿಸಿದ ನಿದರ್ಶನಗಳಿಗೆ ಪೂರ್ವದ ಇತಿಹಾಸಕ್ಕೆ ಹೋಗುವದು ಅನವಶ್ಯಕ. ಇಂದಿನ ಚರಿತ್ರೆಯಲ್ಲೇ ತುಂಬಿವೆ. ನಾವೇ ಕಂಡು ಸ್ವತಃ ಅನುಭವಿಸಿದ ಘಟನೆಗಳನ್ನೇ ಆ ರೀತಿ ವಿಕೃತಿಗೊಳಿಸಲು ಸಾಧ್ಯವಾದರೆ ಪುರಾತನ ಚರಿತ್ರೆಯ ಪಾಡೇನು?

ಆದಾಗ್ಯೂ ಯಾವ ವಿಮರ್ಶೆಯ ಗೋಜಿಗೂ ಹೋಗದೆ, ಸ್ವಲ್ಪವೂ ಹಿಂದುಮುಂದೆ ನೋಡದೆ ಶಿಷ್ಟಾಚಾರವೇ ಚರಿತ್ರೆ ಎಂದು ಭಾರತೀಯರು ಬಹುಭಾಗ ಒಪ್ಪುತ್ತಾರೆ. ಈ ರೀತಿ ಆಳವಾಗಿ ಯೋಚನೆ ಮಾಡದೆ, ಸುಲಭವಾಗಿ ನಿರ್ಧಾರಕ್ಕೆ ಬರುವ ಪದ್ಧತಿಯನ್ನು ಬಿಟ್ಟುಬಿಡಬೇಕು. ಪುರಾಣ ಮತ್ತು ಕಾಲ್ಪನಿಕ ಕತೆಗಳ ಕಾಲವನ್ನು, ದೇವರುಗಳು ಮತ್ತು ದೇವತೆಗಳನ್ನು ಎಲ್ಲಿಯೋ ಬಿಟ್ಟು ಬಹುದೂರ ಬಂದಿದ್ದೇನೆ. ಆ ದಿನಗಳಲ್ಲಿ ತುಂಬುಜೀವನವಿತ್ತು, ಜೀವನಕ್ಕೂ ಪ್ರಕೃತಿಗೂ ಒಂದು ನಿಕಟ ಬಾಂಧವ್ಯವಿತ್ತು, ಮಾನವನ ಮನಸ್ಸು ಆಶ್ಚರ್ಯ ಮತ್ತು ಆನಂದದಿಂದ ವಿಶ್ವರಹಸ್ಯವನ್ನು ದಿಟ್ಟಿಸುತ್ತಿತ್ತು; ಸ್ವರ್ಗ ಮರ್ತ್ಯಗಳೆರಡೂ ಸಮಿಾಪವಿದ್ದಂತೆ ಕಾಣುತ್ತಿದ್ದವು; ದೇವರುಗಳು, ದೇವತೆಗಳು, ಒಲಿಂಪಸ್‌ನಿಂದ ದೇವರುಗಳು ಇಳಿದುಬಂದು ಸ್ತ್ರೀಪುರುಷರೊಡನೆ ಆಟವಾಡಿ, ಕೆಲವು ವೇಳೆ ಶಿಕ್ಷಿಸುತ್ತಿದ್ದಂತೆ, ಇಲ್ಲಿಯೂ ಸಹ ಕೈಲಾಸ ಅಥವ ತಮ್ಮ ಇತರ ಹಿಮಾಲಯ ಪರ್ವತದ ಆವಾಸಗಳಿಂದ ಇಳಿದು ಬರುತ್ತಿದ್ದರು. ಈ ಒಂದು ತುಂಬುಜೀವನದಿಂದ ಭಾವನಾಸಂಪತ್ತಿನಿಂದ ಮಹಾಶೂರರೂ, ಸುಂದರ ಪುರುಷರೂ ಆದ ದೇವಾನುದೇವತೆಗಳ ಪುರಾಣಗಳು, ಉಪಾಖ್ಯಾನಗಳು ಬೆಳೆದವು. ಅದಕ್ಕೆ ಕಾರಣ ಪುರಾತನ ಭಾರತೀಯರು ಪುರಾತನ ಗ್ರೀಕರಂತೆ ಸೌಂದರ್ಯ ಮತ್ತು ಜೀವನೋಪಾಸಕರು. ಒಲಿಂಪಸ್ ದೇವತೆಗಳ ಸೌಂದರ್ಯ ವೈಭವವನ್ನು ಪ್ರೊಫೆಸರ್ ಗಿಲ್ಬರ್ಟ್ ಮರ್‍ರೆ ವರ್ಣಿಸಿದ್ದಾರೆ. ಆ ವರ್ಣನೆ ಪುರಾತನ ಭಾರತೀಯರ ಮನೋಕಲ್ಪನಾ ಸೌಂದರ್ಯಕ್ಕೂ ತುಂಬ ಚೆನ್ನಾಗಿ ಅನ್ವಯಿಸುತ್ತದೆ. "ಅವು ಕಲಾವಿದನ ಕನಸುಗಳು, ಆದರ್ಶಗಳು, ರೂಪಕಗಳು; ತಮ್ಮಿಂದಾಚೆ ಇರುವ ಯಾವುದೋ ಅಗೋಚರ ವಸ್ತುವಿನ ಸಂಕೇತಗಳು. ಅರ್ಧ ತಿರಸ್ಕೃತ ಸಂಪ್ರದಾಯದ ಅರಿಯದ ನಟನೆಯ ಮತ್ತು ಹಿರಿಯಾಸೆಯ ದೇವತೆಗಳು. ಅನೇಕ ಉಜ್ವಲ, ಆತ್ಮಶೋಧಕ ತರ್ಕ ಅನುಮಾನಗಳಿಗೆ ಎಟುಕದಿದ್ದರೂ ಸಂಶಯಾತ್ಮದಾರ್ಶನಿಕರು ಪ್ರಾರ್ಥಿಸಿ ಪೂಜಿಸಬಹುದಾದ ದೇವತೆಗಳು. ಯಾರಿಗೂ ಆ ದೇವತೆಗಳ ಅಸ್ತಿತ್ವದಲ್ಲಿ ನಂಬಿಕೆ ಇಲ್ಲ." ಪ್ರೊಫೆಸರ್ ಮರ್‍ರೇ ಹೇಳುವ ಮುಂದಿನ ಮಾತುಗಳೂ ಸಹ ಇನ್ನೂ ಚೆನ್ನಾಗಿ ಭಾರತಕ್ಕೆ ಅನ್ವಯಿಸುತ್ತವೆ. "ಮಾನವ ಸೃಷ್ಟಿಯ ಅತ್ಯಂತ ಸುಂದರ ವಿಗ್ರಹ ದೇವರಲ್ಲ, ದೈವತ್ವ ಕಲ್ಪನೆಗೆ ಪೂರಕವಾದ ಒಂದು ಸಂಕೇತ. ಆದ್ದರಿಂದ ಕಾಲ್ಪನಿಕ ದೇವರು ವಾಸ್ತವವಲ್ಲ; ಆದರೆ ವಾಸ್ತವಿಕತೆ ಅಥವ ಸತ್ಯದ ಕಲ್ಪನೆಗೆ ಒಂದು ಸಂಕೇತ ಮಾತ್ರ. ಈ ಮಧ್ಯೆ ಜ್ಞಾನ ವಿರೋಧವಾಗಿ ಯಾವ ಸಂದೇಶವನ್ನೂ ಸಾರಲಿಲ್ಲ, ತನ್ನ ಆತ್ಮಜ್ಯೋತಿಗೆ ವ್ಯತಿರಿಕ್ತವಾಗಿ ಪಾಪಕೃತ್ಯ ಮಾಡಲು ಮಾನವನಿಗೆ ಯಾವ ಅನುಜ್ಞೆಯನ್ನೂ ಕೊಡಲಿಲ್ಲ" ಎಂದಿದಾನೆ.

ಕ್ರಮೇಣ ವೇದಕಾಲದ ದೇವರುಗಳು ಮತ್ತು ದೇವತೆಗಳು ಕಣ್ಮರೆಯಾದರು. ಕಠಿಣವೂ, ಗೂಢವೂ ಆದ ತತ್ವಶೋಧನೆ ಬಲಗೊಂಡಿತು. ಆದರೆ ಜನಮನದಲ್ಲಿನ ಈ ದೇವತೆಗಳ ಚಿತ್ರವನ್ನು ಅಳಿಸಲಾಗಲಿಲ್ಲ. ಸುಖದುಃಖಗಳಲ್ಲಿ ಭಾಗಿಗಳೂ ಹಿತರಕ್ಷಕರೂ ಆಗಿ ಜನತೆಯ ಅಸ್ಪಷ್ಟ ಆತ್ಮಪ್ರೇರಿತ

ಆದರ್ಶಗಳೂ, ಹೆಬ್ಬಯಕೆಗಳ ಸಂಕೇತಗಳೂ ಆಗಿ ಜನಮನದಲ್ಲಿ ಉಳಿದರು. ಈ ದೇವತೆಗಳ ಸುತ್ತ ಕವಿಗಳು ಭಾವಾವೇಶದ, ಕಲ್ಪನಾಸೌಂದರ್ಯದ ಚಿತ್ರಭಿತ್ತಿಗಳನ್ನು ಕೆತ್ತಿದರು. ಎಫ್. ಡಬ್ಲ್ಯು. ಬೇಲ್ ಭಾರತೀಯ ಪುರಾಣ ಕತೆಗಳ ತನ್ನ ಚಿಕ್ಕ ಹೊತ್ತಿಗೆಗಳಲ್ಲಿ ಈ ಸುಂದರ ಕತೆಗಳನ್ನು ಬಹು ಚೆನ್ನಾಗಿ ಉಪಯೋಗಿಸಿದ್ದಾನೆ. ಇವುಗಳಲ್ಲಿ "ದಿ ಡಿಜಿಟ್ ಆಫ್ ದಿ ಮೂನ್" ಎಂಬ ಗ್ರಂಥದಲ್ಲಿ ಸ್ತ್ರೀಯ ಸೃಷ್ಟಿಕ್ರಮವನ್ನು ತಿಳಿಸಿದ್ದಾನೆ. "ದೇವಶಿಲ್ಪಿಯಾದ 'ತ್ವಷ್ಟೃ ಸ್ತ್ರೀಯನ್ನು ಸೃಷ್ಟಿಸಲು ಬರುವ ಹೊತ್ತಿಗೆ ಮನುಷ್ಯನನ್ನು ಸೃಷ್ಟಿಮಾಡುವುದರಲ್ಲಿ ತನ್ನ ಎಲ್ಲ ಶ್ರೇಷ್ಠ ಸಾಮಗ್ರಿಗಳನ್ನೂ ಮುಗಿಸಿದ್ದನಂತೆ. ದಿಕ್ಕುತೋರದೆ ದೀರ್ಘಾಲೋಚನೆಮಾಡಿ ಚಂದ್ರನ ಗೋಳಾಕರ, ಲತೆಗಳ ಕೊಂಕು, ಕುಡಿಗಳ ಆಶ್ರಯ ವೃತ್ತಿ, ಗರಿಕೆಯ ಬಳುಕು, ಅಲಗಿನ ತೆಳವು, ಹೂಗಳ ಅರಳುವಿಕೆ, ಎಲೆಗಳ ಹಗುರ, ಆನೆಯ ಸೊಂಡಿಲಿನ ಬಾಚು, ಚಿಗರಿಯ ನೋಟ, ಜೇನಿನ ಸಾಲ್ಗೂಡು, ಎಳೆಬಿಸಿಲಿನ ಮಂದಹಾಸ, ಮೋಡಗಳ ಅಶ್ರುಧಾರೆ, ವಾಯುವಿನ ಚಂಚಲತೆ, ಮೊಲದ ಅಂಜುಬುರುಕುತನ, ನವಿಲಿನ ವೈಯಾರ, ಗಿಳಿಮೈಯ ಕೋಮಲತೆ, ಕಗ್ಗಲ್ಲಿನ ಕಾಠಿಣ್ಯ, ಮಧುವಿನ ಮಾಧುರ್ಯ, ಹುಲಿಯ ರೋಷ, ಅಗ್ನಿಯ ಬೆಚ್ಚನೆಯ ಪ್ರಕಾಶ, ಹಿಮದ ಚಳಿ, ಸ್ವರ್ಣಚೂಡ ಪಕ್ಷಿಯ ಕಿಕಿಕಿ ಹರಟೆ, ಕೋಗಿಲೆಯ ಇಂಚರ, ಬಕನ ಬಿನ್ನಾಣ, ಚಕ್ರವಾಕನ ನಿಷ್ಠೆ ಇವೆಲ್ಲವನ್ನೂ ಸೇರಿಸಿ, ಸ್ತ್ರೀ ಸೃಷ್ಟಿಮಾಡಿ ಮನುಷ್ಯನಿಗೆ ದಾನಮಾಡಿದನಂತೆ.

## ೧೩. ಮಹಾಭಾರತ

ಪುರಾಣ ಗ್ರಂಥಗಳ ಕಾಲನಿರ್ಣಯವು ಬಹುಕಷ್ಟ. ಆರ್ಯರು ಭಾರತಕ್ಕೆ ಬಂದು ನೆಲಸಿ ಬುಡಭದ್ರತೆ ಮಾಡಿಕೊಳ್ಳುತ್ತಿದ್ದ ಬಹುಹಿಂದಿನ ಕಾಲ. ಬರವಣಿಗೆಯಲ್ಲಿ ಅನೇಕ ಕವಿಗಳ ಕೈವಾಡವೂ ಕ್ರಮಕ್ರಮೇಣ ಪ್ರಕ್ಷಿಪ್ತ ಭಾಗಗಳನ್ನು ಸೇರಿಸಿರುವುದೂ ಸ್ಪಷ್ಟ ತೋರುತ್ತದೆ. ರಾಮಾಯಣ ಮಹಾಕಾವ್ಯದಲ್ಲಿ ಒಂದೇ ವಿಧವಾದ ರಚನಾಶೈಲಿ ಇದೆ. ಮಹಾಭಾರತವು ಅನೇಕ ಪುರಾಣಕತೆಗಳ ಮಹಾಸಮುದ್ರ. ಈ ಎರಡು ಕಾವ್ಯಗಳೂ ಬುದ್ಧನ ಕಾಲಕ್ಕಿಂತಲೂ ಹಿಂದೆ ಹುಟ್ಟಿರಬೇಕು. ಅನಂತರ ಅನೇಕ ಭಾಗಗಳು ಸೇರಿರಬೇಕು.

ಫ್ರಾನ್ಸಿನ ಚರಿತ್ರಕಾರನಾದ ಮೈಕೇಲ್ ೧೮೬೪ ರಲ್ಲಿ ರಾಮಾಯಣದ ವಿಷಯವಾಗಿ ಬರೆಯುತ್ತ "ಮನಸ್ಸು ಮತ್ತು ಇಷ್ಟ ಎರಡಿದ್ದರೆ ಈ ಪಾತ್ರೆಯಿಂದ ಯಾರಿಗೆಬೇಕಾದರೂ ಮನದಣಿಯುವಂತೆ ಜೀವನದ ಸುಖವನ್ನು ಪಡೆಯಬಹುದು. ಯೌವನದ ಆನಂದವನ್ನು ಅನುಭವಿಸಬಹುದು. ಪಾಶ್ಚಿಮಾತ್ಯದಲ್ಲಿ ಎಲ್ಲವೂ ಸಂಕುಚಿತ. ಗ್ರೀಸ್ ಬಹುಚಿಕ್ಕದು, ಉಸಿರು ಕಟ್ಟುತ್ತದೆ; ಜೂಡಿಯ ಮರುಭೂಮಿ, ಬಾಯಿ ಒಣಗುತ್ತದೆ. ಮಹಾಏಷ್ಯದ ಕಡೆಗೆ, ಪೌರ್ವಾತ್ಯದ ಗಾಂಭೀರ್ಯದ ಕಡೆ ಸ್ವಲ್ಪ ನೋಡೋಣ. ಅಲ್ಲಿದೆ, ಹಿಂದೂ ಸಾಗರದಂತೆ ವಿಶಾಲವೂ, ಪವಿತ್ರ ತಮವೂ, ದಿವಸ್ಪತಿಯಂತೆ ಪ್ರತಿಭಾ ಪೂರ್ಣವೂ ಆದ ಒಂದೂ ಒಡಕು ಶಬ್ದವಿಲ್ಲದ ದೈವಿಕ ಮಾಧುರ್ಯದ ಮಹಾಕಾವ್ಯ. ಅದರಲ್ಲಿ ಒಂದು ಗಂಭೀರ ಶಾಂತಿ ಇದೆ. ಯುದ್ಧದ ತುಮುಲವಿದ್ದರೂ ಅನಂತ ಸೌಂದರ್ಯವಿದೆ. ವಿಶ್ವವ್ಯಾಪಕವಿರುವ ಅಪರಿಮಿತ ಬಾಂಧವ್ಯವಿದೆ. ಆಳವೂ, ಮೇರೆ ಇಲ್ಲದದೂ ಆದ ಪ್ರೇಮ, ಕರುಣೆ ಮತ್ತು ದಯೆಯ ಸಾಗರವಿದೆ," ಎಂದಿದಾನೆ.

ರಾಮಾಯಣ ಮಹಾಕಾವ್ಯ ಅತಿಮಹತ್ವದ್ದಾಗಿ, ಜನಪ್ರಿಯವಾಗಿದ್ದರೂ ನಿಜವಾಗಿಯೂ ಮಹಾಭಾರತವೇ ಪ್ರಪಂಚದ ಮಹಾಗ್ರಂಥಗಳಲ್ಲಿ ಒಂದು. ಅದೊಂದು ಬೃಹದ್ಗ್ರಂಥ, ಸಂಪ್ರದಾಯಗಳ ಐತಿಹಾಸಿಕ ಕತೆಗಳ ಮತ್ತು ಪ್ರಾಚೀನ ಭಾರತದ ರಾಜಕೀಯ ಸಾಮಾಜಿಕ ಸಂಸ್ಥೆಗಳ ಸಂಪ್ರದಾಯಗಳ ಮಹಾಕೋಶ. ಕಳೆದ ಹತ್ತಾರು ವರ್ಷಗಳಿಂದ ಅನೇಕ ಭಾರತೀಯ ವಿದ್ವಾಂಸರು ಒಂದು ಅಧಿಕಾರಯುತ ಮುದ್ರಣವನ್ನು ಕೊಡಬೇಕೆಂದು, ದೊರೆತ ಎಲ್ಲ ಮೂಲಪ್ರತಿಗಳನ್ನಿಟ್ಟುಕೊಂಡು ಪರಿಶೀಲನೆಮಾಡಿ, ಶೋಧಿಸುವ ಕಾರ್ಯದಲ್ಲಿ ತೊಡಗಿದ್ದಾರೆ. ಕೆಲವು ಭಾಗಗಳೂ ಅಚ್ಚಾಗಿವೆ; ಆದರೆ

ಕೆಲಸ ಮಾತ್ರ ಇನ್ನೂ ಮುಗಿದಿಲ್ಲ. ಪ್ರಪಂಚವನ್ನೇ ಆವರಿಸಿರುವ ಈ ಘೋರಯುದ್ಧ ಸಮಯದಲ್ಲಿ ಸಹ ರಷ್ಯದ ಪ್ರಾಚ್ಯವಿದ್ವಾಂಸರು ಮಹಾಭಾರತವನ್ನು ರಷ್ಯನ್ ಭಾಷೆಗೆ ಅನುವಾದ ಮಾಡಿದ್ದಾರೆ.

ಪ್ರಾಯಶಃ ಈ ಕಾಲದಲ್ಲಿ ವಿದೇಶೀಯರು ಭಾರತಕ್ಕೆ ಬಂದು ನೆಲಸಿ ತಮ್ಮ ಆಚಾರ ವ್ಯವಹಾರಗಳನ್ನು ಭಾರತದಲ್ಲಿ ಹರಡುತ್ತಿದ್ದರು. ಈ ಅನೇಕ ಆಚಾರಗಳು ಆರ್ಯಪದ್ಧತಿಗೆ ತೀರ ಭಿನ್ನವಾದವು. ಆದ್ದರಿಂದ ವಿರುದ್ಧ ಸಂಪ್ರದಾಯಗಳ ಮತ್ತು ಭಾವನೆಗಳ ಮಿಶ್ರಣವನ್ನು ಇಲ್ಲಿ ಕಾಣುತ್ತೇವೆ. ಆರ್ಯರಲ್ಲಿ ಬಹುಪತ್ನಿತ್ವ ಇರಲಿಲ್ಲ. ಆದರೂ ಮಹಾಭಾರತ ಕಥೆಯ ನಾಯಕಿಯೊಬ್ಬಳು ಐವರು ಸಹೋದರರಿಗೆ ಪತ್ನಿ. ಕ್ರಮಕ್ರಮವಾಗಿ ಪೂರ್ವನಿವಾಸಿಗಳು ಮತ್ತು ಅನಂತರ ಬಂದು ನೆಲಸಿದ ವಿದೇಶೀಯರು ಆರ್ಯರೊಂದಿಗೆ ಮಿಳಿತವಾದರು. ವೈದಿಕ ಮತವೂ ಅದರಂತೆಯೇ ಮಾರ್ಪಾಡಾಗುತ್ತ ಬಂದಿತು; ಇಂದಿನ ಹಿಂದೂ ಧರ್ಮದ ಸರ್ವವ್ಯಾಪಕ ರೂಪವನ್ನು ಪಡೆಯುತ್ತ ಇತ್ತು. ಸತ್ಯವೆಂಬುದು ಯಾರೊಬ್ಬರ ಮೀಸಲು ಆಸ್ತಿಯಲ್ಲ, ಅದರ ಅನ್ವೇಷಣೆ ಮತ್ತು ದರ್ಶನಕ್ಕೆ ಅನೇಕ ಮಾರ್ಗಗಳಿವೆ ಎಂಬ ಮೂಲ ತತ್ವವನ್ನು ಒಪ್ಪಿದ್ದರಿಂದ ಇದು ಸಾಧ್ಯವಾಯಿತು. ಆದ್ದರಿಂದ ಭಾರತದಲ್ಲಿ ಎಲ್ಲ ಭಿನ್ನ ಧರ್ಮಗಳಿಗೆ ವಿರೋಧ ಧರ್ಮಗಳಿಗೆ ಸಹನೆ ದೊರೆಯಿತು.

ಇಂಡಿಯದ ಅಥವ ಭಾರತೀಯರ ಐತಿಹಾಸಿಕ ಮೂಲಪುರುಷನೆಂದು ಹೆಸರಾದ ಭರತನಿಂದ ಹೆಸರು ಪಡೆದ ಭಾರತವರ್ಷದ ಮೂಲ ಐಕ್ಯತೆಗೆ ಪ್ರಾಧಾನ್ಯ ಕೊಡುವ ಮಹಾಪ್ರಯತ್ನವು ನಿರ್ದಿಷ್ಟವಾಗಿ ಮೊದಲು ನಡೆದಿರುವುದು ಮಹಾಭಾರತದಲ್ಲಿ. ಮೊಟ್ಟಮೊದಲ ಹೆಸರು 'ಆರ್ಯಾವರ್ತ' ಅಥವ ಆರ್ಯರ ದೇಶ ಎಂದಿತ್ತು; ಆದರೆ ಅದು ಭಾರತದ ಮಧ್ಯೆ ಇರುವ ವಿಂಧ್ಯಪರ್ವತದ ಉತ್ತರಕ್ಕಿರುವ ದೇಶಕ್ಕೆ ಮಾತ್ರ ಅನ್ವಯಿಸುತ್ತ ಇತ್ತು. ಪ್ರಾಯಶಃ ಆ ಕಾಲದಲ್ಲಿ ಆರ್ಯರು ವಿಂಧ್ಯಪರ್ವತವನ್ನು ದಾಟಬಂದಿರಲಿಲ್ಲ. ರಾಮಾಯಣದ ಕಥೆ ಆರ್ಯರ ದಕ್ಷಿಣಭಾರತದ ದಿಗ್ವಿಜಯದ ಕಥೆ. ಮಹಾಭಾರತದಲ್ಲಿ ವರ್ಣಿತವಾಗಿರುವುದು ಅನಂತರ ದೇಶದಲ್ಲಿ ನಡೆದ ಒಳದಂಗೆಯ ವರ್ಣನೆ. ಕ್ರಿಸ್ತಪೂರ್ವ ನಾಲ್ಕನೆಯ ಶತಮಾನದಲ್ಲಿ ಭಾರತದ—ಪ್ರಾಯಶಃ ಉತ್ತರ ಭಾರತದ ಒಡೆತನಕ್ಕಾಗಿ ಇದು ನಡೆದಿರಬೇಕು. ಇಂಡಿಯದೇಶ ಅಥವ ಭಾರತವರ್ಷವು ಒಂದು ಎಂಬ ಭಾವನೆ ಇಲ್ಲಿಂದ ಆರಂಭವಾಗುತ್ತದೆ. ಈ ಭಾವನೆಯಲ್ಲಿ ಗಾಂಧಾರ ದೇಶವಾದ ಅಫ್ಘಾನಿಸ್ಥಾನವೂ ಸೇರಿದೆ. ಕಾಂದಹಾರ ಪಟ್ಟಣದ ಹೆಸರು ಬಂದಿರುವುದು ಗಾಂಧಾರದಿಂದ. ಗಾಂಧಾರ ಆಗ ಭಾರತ ವರ್ಷದ ಒಂದು ಮುಖ್ಯಭಾಗವಾಗಿತ್ತು. ಮಹಾರಾಣಿಯು ಗಾಂಧಾರದಿಂದ ಬಂದ ಗಾಂಧಾರಿ. ಈಗಿನ ನಗರದ ಹತ್ತಿರವಿದ್ದ ಡಿಳ್ಳಿ ಅಥವ ದೆಹಲಿ ಆಗಿನ ಹಸ್ತಿನಾಪುರ ಅಥವ ಇಂದ್ರಪ್ರಸ್ಥವಾಗಿ ಭಾರತದ ರಾಜಧಾನಿಯಾಗಿತ್ತು.

ಸಹೋದರಿ ನಿವೇದಿತ (ಮಾರ್ಗರೆಟ್ ನೋಬಲ್) ಮಹಾಭಾರತದ ವಿಷಯ ಬರೆಯುತ್ತ "ವಿದೇಶೀಯನಿಗೆ ಮುಖ್ಯವಾಗಿ ಹೊಳೆಯುವ ವಿಷಯಗಳು ಎರಡು. ವೈವಿಧ್ಯತೆಯಲ್ಲಿ ಕಾಣುವ ಒಗ್ಗಟ್ಟು ಮೊದಲನೆಯದು; ತನ್ನದೇ ಆದ ಸಮಾವೇಶ, ಸಂಘಟನಶಕ್ತಿ, ಮತ್ತು ಒಂದು ಧೀರೋದಾತ್ತ ಶಿಷ್ಟಾಚಾರವುಳ್ಳ ಸಮಗ್ರ, ಕೇಂದ್ರೀಕೃತ ಭಾರತದ ಭಾವನೆಯನ್ನು ಓದುಗರ ಮನಸ್ಸಿನ ಮೇಲೆ ಸತತವಾಗಿ ಒತ್ತಿ ಒತ್ತಿ ಹೇಳುವ ಪ್ರಯತ್ನ ಎರಡನೆಯದು" ಎಂದಿದಾಳೆ.

ಮಹಾಭಾರತದಲ್ಲಿ ಕೃಷ್ಣನ ಕತೆಗಳೂ ಮತ್ತು ಭಗವದ್ಗೀತಾ ಮಹಾಕಾವ್ಯವೂ ಸೇರಿವೆ. ಗೀತಾದರ್ಶನವನ್ನು ಬಿಟ್ಟರೂ ಮಹಾಭಾರತವು ರಾಜ್ಯನಿರ್ವಹಣದ ಮತ್ತು ಜೀವನದ ನೀತಿ ಮತ್ತು ಧರ್ಮಕ್ಕೆ ಸಾಮಾನ್ಯವಾಗಿ ಮಹತ್ವ ಕೊಟ್ಟಿದೆ. ಧರ್ಮದ ಈ ತಳಹದಿ ಇಲ್ಲದೆ ನಿಜವಾದ ಸುಖವಿಲ್ಲ; ಮತ್ತು ಸಮಾಜ ಭದ್ರತೆಯೂ ಇಲ್ಲ. ಮುಖ್ಯ ಗುರಿ ಸಾಮಾಜಿಕ ಸೌಖ್ಯ; ಯಾವ ಒಂದು ಪಂಗಡದ ಸೌಖ್ಯವಲ್ಲ; ಇಡೀ ಪ್ರಪಂಚದ ಸುಖ; ಕಾರಣ, ಇಡೀ ಮಾನವ ಪ್ರಪಂಚದ ರಚನೆಯೇ ಪರಸ್ಪರ ಅವಲಂಬಿತ. ಆದರೂ ಧರ್ಮವು ಸಾಪೇಕ್ಷವಾದುದು. ಸತ್ಯ, ಅಹಿಂಸೆ ಮುಂತಾದ ಕೆಲವು ಮೂಲ ತತ್ವಗಳಲ್ಲದೆ ಕಾಲ ಮತ್ತು ಸನ್ನಿವೇಶಗಳನ್ನೂ ಅವಲಂಬಿಸಿದೆ. ಈ ಮೂಲ ತತ್ವಗಳು ಶಾಶ್ವತವಾ

ದವು, ವ್ಯತ್ಯಾಸವಾಗುವುದಿಲ್ಲ ; ಆದರೆ ಕರ್ತವ್ಯ ಮತ್ತು ಉತ್ತರವಾದಿತ್ವದ ಎರಕವಾದ ಧರ್ಮವು ಮಾತ್ರ ಕಾಲಸ್ಥಿತಿಗನುಗುಣವಾಗಿ ವ್ಯತ್ಯಾಸ ಹೊಂದುತ್ತದೆ. ಇಲ್ಲಿ ಮತ್ತು ಇತರ ಕಡೆಗಳಲ್ಲಿ ಅಹಿಂಸೆಗೆ ಕೊಟ್ಟಿರುವ ಮಹತ್ವವು ಆಶ್ಚರ್ಯವನ್ನುಂಟುಮಾಡುತ್ತದೆ; ಏಕೆಂದರೆ ಈ ಅಹಿಂಸೆಗೂ ಧರ್ಮ ಸ್ಥಾಪನೆಗಾಗಿ ಮಾಡುವ ಯುದ್ಧಕ್ಕೂ ವಿರೋಧ ಬಂದಂತೆ ಕಾಣುವುದಿಲ್ಲ. ಈ ಮಹಾಕಾವ್ಯವೆಲ್ಲ ಒಂದು ಮಹಾಯುದ್ಧದ ವರ್ಣನೆ. ಪ್ರಾಯಶಃ ಹಿಂಸಾಕೃತ್ಯದಿಂದ ಪ್ರತ್ಯಕ್ಷ ದೂರನಾಗಿರುವ ಬದಲು ಯುದ್ಧವೇ ಅನಿವಾರ್ಯವೆಂದಾಗ ಹಿಂಸಾಮನೋವೃತ್ತಿ, ಕ್ರೋಧ ಮತ್ತು ವೈರತ್ವವಿಲ್ಲದೆ ಸದುದ್ದೇಶ ಆತ್ಮನಿಗ್ರಹಮತ್ತು ಸಂಯಮಗಳಿಂದ ಮಾಡಿದ ಯುದ್ಧವೂ ಅಹಿಂಸಾ ಯುದ್ಧವೆಂದು ಭಾವಿಸಿರಬೇಕು.

ಮಹಾಭಾರತವು ಯಾರಿಗೆ ಯಾವ ರತ್ನವನ್ನು ಬೇಕಾದರೂ ದೊರಕಿಸುವಂಥ ರತ್ನಾಕರ. ಅದರಲ್ಲಿ ಜೀವನ ವೈವಿಧ್ಯಸಮೃದ್ಧಿ, ಉತ್ಸುಕತೆ ಸಂಪೂರ್ಣ ಇವೆ. ಸಂನ್ಯಾಸ ಮತ್ತು ಜೀವನ ನಿರಸನ ವನ್ನು ಬೋಧಿಸಿದ ಇನ್ನೊಂದು ಭಾರತೀಯ ಭಾವನೆಗೂ ಇದಕ್ಕೂ ಅಜಗಜಾಂತರ. ಇದರಲ್ಲಿ ನೀತಿ ಮತ್ತು ಧರ್ಮ ಬೇಕಾದಷ್ಟಿದ್ದರೂ ಇದು ಒಂದು ನೀತಿಧರ್ಮಗ್ರಂಥವಲ್ಲ. ಮಹಾಭಾರತದ ಸಾರ ವನ್ನು ಒಂದು ವಾಕ್ಯದಲ್ಲಿ ಹೇಳಬೇಕೆಂದರೆ "ನಿನಗೆ ಅಹಿತವಾದುದನ್ನು ಇತರರಿಗೆ ಎಂದೂ ಮಾಡ ಬೇಡ" ಎಂದು. ಸಾಮಾಜಿಕ ಸೌಖ್ಯಕ್ಕೆ ಪ್ರಾಮುಖ್ಯತೆ ಕೊಟ್ಟಿರುವುದು ಒಂದು ವೈಶಿಷ್ಟ್ಯ. ಸಾಮಾನ್ಯ ವಾಗಿ ಭಾರತೀಯರು ಸಾಮಾಜಿಕ ಹಿತಕ್ಕಿಂತ ವೈಯಕ್ತಿಕ ಪರಿಪೂರ್ಣತೆಗೆ ಮಹತ್ವಕೊಡುತ್ತಾರೆ ಎಂಬ ಆರೋಪಣೆ ಇದೆ. "ಯಾವುದು ಸಾರ್ವತ್ರಿಕ ಸೌಖ್ಯಕ್ಕೆ ಸಹಕಾರಿಯಲ್ಲವೊ, ಯಾವುದನ್ನು ಮಾಡಲು ನೀನು ನಾಚಿಕೆ ಪಡುತ್ತೀಯೋ ಅದನ್ನು ಮಾಡಬೇಡ" ಎಂದು ಮಹಾಭಾರತವು ಸಾರುತ್ತದೆ.

ಮತ್ತು "ಸತ್ಯ, ಆತ್ಮಸಂಯಮ, ಸಂನ್ಯಾಸ, ಔದಾರ್ಯ, ಅಹಿಂಸೆ, ಅಚಲವಾದ ಸದ್ಗುಣ ಇವೇ ಶ್ರೇಯಸ್ಸಿನದಾರಿ. ಜಾತಿ ಅಥವ ವಂಶವಲ್ಲ." ಅಮೃತತ್ವ ಮತ್ತು ಜೀವನಕ್ಕಿಂತ ಸದ್ಗುಣ ಶ್ರೇಷ್ಠವಾದುದು." "ತ್ಯಾಗವಿಲ್ಲದೆ ನಿಜವಾದ ಸುಖವು ಸಾಧ್ಯವಿಲ್ಲ." ಎಂದು ಹೇಳುತ್ತದೆ. ಹಣದಾಸೆಗೆ ಸಿಲುಕಿರುವವನನ್ನು "ರೇಷ್ಮೆ ಹುಳುವಿನ ಸಾವು ಅದರ ಐಶ್ವರ್ಯದಿಂದಲೇ" ಎಂದು ಹಾಸ್ಯಮಾಡಿದೆ. ಕೊನೆಯದಾಗಿ "ಅತೃಪ್ತಿಯೇ ಪ್ರಗತಿಯ ಉತ್ತೇಜಕ" ಎಂದು ಹೇಳುವುದನ್ನು ನೋಡಿದರೆ ಅದರ ಜೀವನವು ಎಷ್ಟು ಸತ್ವಪೂರಿತವೂ ಮತ್ತು ಪ್ರಗತಿಪರವೂ ಇತ್ತೆಂಬುದು ಭಾಸವಾಗುತ್ತದೆ.

ಮಹಾಭಾರತದಲ್ಲಿ ವೇದಕಾಲದ ಅನೇಕ ದೈವತ್ವ ವಾದವಿದೆ, ಉಪನಿಷತ್ಕಾಲದ ಏಕತ್ವವಾದವೂ ಇದೆ. ಅವರ ದೃಷ್ಟಿಯು ರಚನಾತ್ಮಕವಿದೆ; ಸ್ವಲ್ಪ ಹೆಚ್ಚು ಕಡಮೆ ವಿಚಾರಪೂರ್ಣವಿದೆ; ಮತ್ತು ಪ್ರತ್ಯೇಕ ಭಾವನೆಯು ಬಹುಮಟ್ಟಿಗೆ ಕಡಿಮೆ ಇದೆ. ವರ್ಣಧರ್ಮದ ಕಟ್ಟುನಿಟ್ಟು ಹೆಚ್ಚಿಲ್ಲ. ಒಂದು ವಿಧವಾದ ಆತ್ಮನಂಬಿಕೆ ಇತ್ತು. ಆದರೆ ಪರದಾಳಿಯಿಂದ ಪುರಾತನ ವ್ಯೂಹದ ಭದ್ರತೆ ಶಿಥಿಲವಾದಾಗ ಆ ಆತ್ಮನಂಬಿಕೆ ಕಡಮೆಯಾಯಿತು. ಆಂತರಿಕ ಐಕ್ಯತೆ ಮತ್ತು ಶಕ್ತಿಯನ್ನು ವೃದ್ಧಿಗೊಳಿಸಲು ಹೆಚ್ಚಿನ ಸಮತಾಭಾವದ ಆವಶ್ಯಕತೆ ಉದ್ಭವಿಸಿತು. ಹೊಸ ನಿಷೇಧಗಳು ರಚಿತವಾದವು. ಆಚರಣೆ ಯಲ್ಲಿ ಗೋಮಾಂಸ ಭಕ್ಷಣೆಯು ಮೊದಲು ಸಂಪೂರ್ಣ ನಿಷಿದ್ಧವಾಯಿತು. ಮಹಾಭಾರತದಲ್ಲಿ ಅತಿಥಿಸತ್ಕಾರದಲ್ಲಿ ಅತಿಥಿಗಳಿಗೆ ಗೋಮಾಂಸ ಮತ್ತು ಎತ್ತಿನ ಮಾಂಸವನ್ನು ಉಪಯೋಗಿಸಿದ ವರ್ಣನೆ ಇದೆ.

## ೧೪. ಭಗವದ್ಗೀತೆ

ಭಗವದ್ಗೀತೆ ಮಹಾಭಾರತದ ಒಂದು ಭಾಗ, ಆ ಮಹಾ ನಾಟಕದಲ್ಲಿ ಒಂದು ದೃಶ್ಯ. ಆದರೆ ತನ್ನದೇ ಒಂದು ವೈಶಿಷ್ಟ್ಯದಿಂದ ಸ್ವಸಂಪೂರ್ಣವಿದೆ. ಏಳುನೂರು ಶ್ಲೋಕಗಳ ಒಂದು ಸಣ್ಣ ಕಾವ್ಯ– ವಿಲಿಯಮ್ ಫಾನ್ ಹಂಬೋಲ್ಟ್ ಹೇಳಿರುವಂತೆ "ಈ ಬಗೆಯ ಅತಿಸುಂದರ ದಾರ್ಶನಿಕ ಕಾವ್ಯ ಪ್ರಪಂಚದ ಇನ್ನಾವ ಭಾಷೆಯಲ್ಲೂ ಇಲ್ಲ." ಬುದ್ಧನಿಗಿಂತ ಮುಂಚೆ ರಚಿಸಿ ಬರೆದು ಇದ್ದರೂ ಅದರ

ಲೋಕಪ್ರಿಯತೆ ಮತ್ತು ಪ್ರಭಾವಕ್ಕೆ ಕುಂದುಬಂದಿಲ್ಲ; ಎಂದಿನಂತೆ ಈಗಲೂ ಅದಕ್ಕೆ ಗೌರವ ಸಲ್ಲುತ್ತ ಇದೆ. ಪ್ರತಿಯೊಬ್ಬ ದಾರ್ಶನಿಕನೂ, ತತ್ವಜ್ಞಾನಿಯೂ ಅದನ್ನೇ ಆಧಾರವಾಗಿಟ್ಟುಕೊಂಡು, ತನಗೆ ತೋರಿದ ರೀತಿಯಲ್ಲಿ ಅರ್ಥವಿವರಣೆ ಮಾಡಿದ್ದಾನೆ. ವಿಷಮಕಾಲದಲ್ಲಿ, ಸಂದಿಗ್ಧ ಪರಿಸ್ಥಿತಿಗಳಲ್ಲಿ, ಮನಸ್ಸಿನಲ್ಲಿ ಸಂಶಯ ಮತ್ತು ಕರ್ತವ್ಯಘರ್ಷಣೆಗಳಿಂದ ತುಮುಲವೆದ್ದಾಗ ಬೆಳಕನ್ನು ಕಾಣಲು, ಮಾರ್ಗದರ್ಶನಕ್ಕೆ ಗೀತೆಯ ಕಡೆ ತಿರುಗುವುದೇ ಹೆಚ್ಚು. ಅದಕ್ಕೆ ಕಾರಣ ಆ ಕವನವೇ ಒಂದು ಸಂದಿಗ್ಧ ಕಾಲದ ಗೀತೆ: ರಾಜಕೀಯ ಮತ್ತು ಸಾಮಾಜಿಕ ಸಂದರ್ಭಗಳ ಸಂದಿಗ್ಧ ಕಾಲ; ಮತ್ತು ಅದಕ್ಕೂ ಹೆಚ್ಚಾಗಿ ಮಾನವ ಧರ್ಮದಲ್ಲಿ ಒಂದು ಸಂದಿಗ್ಧ ಕಾಲ. ಗೀತೆಯ ಮೇಲೆ ಹಿಂದಿನಕಾಲದ ಟೀಕೆಗಳು ಅಸಂಖ್ಯಾತ; ಈಗಲೂ ಎಡೆಬಿಡದೆ ವ್ಯಾಖ್ಯಾನಗಳು ಬರುತ್ತಲೇ ಇವೆ. ಇಂದಿನ ಕಾಲದ ಕರ್ಮ ವೀರರೂ, ಮಹಾಜ್ಞಾನಿಗಳೂ ಆದ ತಿಲಕ್, ಅರವಿಂದ ಘೋಷ್, ಗಾಂಧಿ—ಸಹ ಟೀಕೆ ಬರೆದು ತಮ್ಮದೇ ಆದ ಅರ್ಥವಿವರಣೆ ಕೊಟ್ಟಿದ್ದಾರೆ. ಗಾಂಧೀಜಿಯ ಅಹಿಂಸಾತತ್ವಕ್ಕೆ ಗೀತೆಯೇ ಆಧಾರ; ಉದ್ದೇಶ ಒಳ್ಳೆಯದಾದರೆ ಹಿಂಸೆ ಮತ್ತು ಯುದ್ಧ ಅನಿವಾರ್ಯ ಎಂಬ ಇತರರ ದೃಷ್ಟಿಗೂ ಗೀತೆಯೇ ಆಧಾರ.

ಮಹಾಭಾರತ ಯುದ್ಧವು ಆರಂಭವಾಗಬೇಕೆನ್ನುವಾಗ ಯುದ್ಧರಂಗದಲ್ಲೇ ಕೃಷ್ಣಾರ್ಜುನರ ಸಂವಾದದಿಂದ ಕಾವ್ಯ ಆರಂಭವಾಗುತ್ತದೆ. ಯುದ್ಧದ ಚಿಂತನೆ, ಅದರ ಪರಿಣಾಮವಾಗಿ ಜನರ ಸಾವು, ಬಂಧುಭಾಂಧವರ ಕೊಲೆ, ಇವೆಲ್ಲ ಯಾವ ಉದ್ದೇಶಕ್ಕಾಗಿ ಎಂದು ಅರ್ಜುನನಿಗೆ ಅಸಹ್ಯತೋರಿ ಮನಸ್ಸು ಕದಡಿದೆ. ಇಷ್ಟು ನಷ್ಟವನ್ನುಂಟುಮಾಡಿ, ಮಹಾ ಪಾಪಕೃತ್ಯವನ್ನೆಸಗಿ ಬರುವ ಲಾಭವಾದರೂ ಏನು? ಮೊದಲಿನ ಆದರ್ಶಗಳೆಲ್ಲ ಅದೃಶ್ಯವಾಗುತ್ತವೆ; ಮೌಲ್ಯಗಳೆಲ್ಲ ಮಣ್ಣುಪಾಲಾಗುತ್ತವೆ. ಯುಗಯುಗಕ್ಕೂ ಕರ್ತವ್ಯ ಕರ್ಮಗಳಿಂದ ನೀತಿಯ ಕಟ್ಟುಗಳಿಂದ ಹಿಂಸೆಗೊಳಗಾಗಿ ನುಚ್ಚುನೂರಾದ ಮಾನವ ಧರ್ಮದ ಸಂಕೇತವಾಗುತ್ತಾನೆ ಅರ್ಜುನ. ಈ ವ್ಯಕ್ತಿ ಸಂವಾದವು ನಮ್ಮನ್ನು ಹೆಜ್ಜೆಯಿಂದ ಹೆಜ್ಜೆಗೆ ವೈಯಕ್ತಿಕ ಕರ್ತವ್ಯ ಮತ್ತು ಸಾಮಾಜಿಕ ನಡತೆಯ ಉನ್ನತಮಟ್ಟಕ್ಕೆ ಹೆಚ್ಚಿನ ನಿಸ್ವಾರ್ಥ ವಾತಾವರಣಕ್ಕೆ ಮಾರ್ಗಜೀವನವನ್ನೇ ನೀತಿಯ ನೆಲಗಟ್ಟಿನ ಮೇಲೆ ಕಟ್ಟುವದಕ್ಕೆ, ಸರ್ವವ್ಯಾಪಕವಾದ ಒಂದು ಧಾರ್ಮಿಕ ದೃಷ್ಟಿಗೆ ಕರೆದೊಯ್ಯುತ್ತವೆ. ಆದರಲ್ಲಿ ತಾತ್ವಿಕ ವಿಚಾರಗಳು ಎಷ್ಟೋ ಅಡಗಿವೆ; ಮಾನವ ಪ್ರಗತಿಗೆ ಇರುವ ಮೂರು ಮಾರ್ಗಗಳನ್ನೂ ಸಮಾಧಾನಮಾಡಿ, ಸಮನ್ವಯ ಗೊಳಿಸುವ ಪ್ರಯತ್ನ ನಡೆದಿದೆ: ಜ್ಞಾನಮಾರ್ಗ, ಕರ್ಮಮಾರ್ಗ ಮತ್ತು ಭಕ್ತಿಮಾರ್ಗ. ಪ್ರಾಯಶಃ ಎಲ್ಲಕ್ಕಿಂತ ಭಕ್ತಿಮಾರ್ಗಕ್ಕೆ ಹೆಚ್ಚು ಪ್ರಾಮುಖ್ಯತೆ. ವಿಶ್ವರೂಪಿಯ ಅವತಾರವಾದರೂ ಒಬ್ಬ ಅವತಾರ ಪುರುಷನನ್ನು ದೇವರು ಎಂದು ಕರೆಯಲಾಗಿದೆ. ಮಾನವನ ಅಸ್ತಿತ್ವಕ್ಕೊಂದು ಧಾರ್ಮಿಕ ಹಿನ್ನೆಲೆಯನ್ನು ಕೊಡುವುದೇ ಗೀತೆಯ ಮುಖ್ಯ ಸಂದೇಶ. ನಿತ್ಯಜೀವನದ ವಾಸ್ತವಿಕ ಸಮಸ್ಯೆಗಳೆಲ್ಲ ಉದ್ಭವಿಸುವುದೂ ಇದೇ ದೃಷ್ಟಿಯಿಂದ. ಜೀವನದ ಹೊರೆ ಮತ್ತು ಕರ್ತವ್ಯ ನಿರ್ವಹಣೆಗೆ ಕರ್ಮಮಾಡು, ಆದರೆ ಧಾರ್ಮಿಕ ಹಿನ್ನೆಲೆ ಮತ್ತು ವಿಶ್ವದ ಉನ್ನತ ಉದ್ದೇಶ ಸದಾ ನಿನ್ನ ದೃಷ್ಟಿಯಲ್ಲಿರಲಿ ಎಂದು ಗೀತಾ ವಾಕ್ಯ. ಕ್ರಿಯಾಶೂನ್ಯತೆಗೆ ಧಿಕ್ಕಾರವಿದೆ ಮತ್ತು ಕ್ರಿಯೆ ಮತ್ತು ಜೀವನ ಉನ್ನತ ಯುಗಧರ್ಮಕ್ಕನುಗುಣವಾಗಿರಬೇಕು ಎಂದು ಹೇಳಿದೆ. ಏಕೆಂದರೆ ಯುಗಧರ್ಮ ಯುಗಯುಗಕ್ಕೂ ಬದಲಾವಣೆಯಾಗುತ್ತದೆ. ಯುಗಧರ್ಮವನ್ನು ಮಾತ್ರ ಎಂದೂ ಮರೆಯಬಾರದು.

ಆಧುನಿಕ ಭಾರತದಲ್ಲಿ ಎಲ್ಲಿ ನೋಡಿದರೂ ನಿರಾಶೆ, ಎಲ್ಲಿ ನೋಡಿದರೂ ಕ್ರಿಯಾಶೂನ್ಯತೆ. ಆದ್ದರಿಂದ ಕ್ರಿಯೆಯ ಉತ್ಸಾಹದ ಈ ಪಾಂಚಜನ್ಯ ವಿಶೇಷ ಪ್ರಭಾವವನ್ನು ಬೀರಿದೆ. ಈ ಕ್ರಿಯೆಯನ್ನೂ ಇಂದಿನ ಯುಗಕ್ಕನುಸಾರವಾಗಿ ಸಾಮಾಜಿಕ ಉನ್ನತಿ, ಸಮಾಜಸೇವೆ—ವ್ಯವಹಾರ ಯೋಗ್ಯವೂ, ಪರಹಿತನಿಷ್ಠವೂ, ದೇಶಾಭಿಮಾನ ಯುಕ್ತವೂ, ಮಾನವೀಯತೆಯಿಂದ ಕೂಡಿದುದೂ ಆದ ಸಮಾಜ ಸೇವೆ ಎಂದು ವ್ಯಾಖ್ಯಾನಮಾಡಲು ಅವಕಾಶವಿದೆ. ಗೀತೆಯ ಮಾತಿನಲ್ಲಿ ಅಂತಹ ಕ್ರಿಯೆ ಅತ್ಯವಶ್ಯಕ. ಆದರೆ ಧಾಮಿಕ ಆದರ್ಶ ಅದರ ಹಿಂದೆ ಇರಬೇಕು. ಅಂತಹ ಕ್ರಿಯೆ ಅಥವ ಕರ್ಮ ನಿಷ್ಕಾಮ

ಕರ್ಮವಾಗಿರಬೇಕು. ಪ್ರತಿಫಲಾಪೇಕ್ಷೆ ಅದಕ್ಕಿರಬಾರದು. ಉತ್ತಮ ಕರ್ಮದಿಂದ ಉತ್ತಮಪ್ರತಿಫಲ ಬಂದೇ ಬರುತ್ತದೆ; ತಕ್ಷಣವೇ ಅದು ನಮಗೆ ಕಾಣದಿರಬಹುದು; ಆದರೆ ಕಾರ್ಯಕಾರಣ ನೀತಿ ಎಲ್ಲ ಸಂದರ್ಭಗಳಿಗೂ ಅನ್ವಯಿಸಲೇ ಬೇಕು.

ಗೀತಾ ಸಂದೇಶವು ಮತೀಯವಲ್ಲ. ಯಾವ ಒಂದು ಪ್ರತ್ಯೇಕ ತತ್ವಶಾಸ್ತ್ರಜ್ಞರ ಪಂಗಡಕ್ಕೂ ಹೇಳಿದ್ದಲ್ಲ. ಬ್ರಾಹ್ಮಣನಾಗಲಿ, ಶ್ವಪಚನಾಗಲಿ, ಎಲ್ಲರಿಗೂ ಮಾರ್ಗದರ್ಶಿಯಾಗಿದೆ; "ಎಲ್ಲ ದಾರಿಗಳೂ ನನ್ನ ಕಡೆ" ಎಂದು ಸಾರುತ್ತದೆ. ಈ ಒಂದು ಸರ್ವೋಪಯುಕ್ತತೆಯಿಂದಲೇ ಎಲ್ಲ ಧರ್ಮಗಳಿಗೂ, ಎಲ್ಲ ದರ್ಶನಗಳಿಗೂ ಸರ್ವಾದರಣೀಯವಾಗಿದೆ. ಶತಮಾನಗಳು ಕಳೆದರೂ ಮಾಸದ ಯಾವುದೋ ಒಂದು ನಿತ್ಯನವ್ಯತೆಯ ಶಕ್ತಿ ಅದರಲ್ಲಿರುವಂತೆ ತೋರುತ್ತದೆ. ಸೂಕ್ಷ್ಮವಿಚಾರ ಮತ್ತು ಸಂಶೋಧನೆ, ಚಿಂತನ ಮತ್ತು ಕ್ರಿಯೆ, ತಿಕ್ಕಾಟ ಮತ್ತು ವಿರೋಧಗಳೊಳಗಿದರೂ ಒಂದು ಸಮತಾದೃಷ್ಟಿ ಮತ್ತು ಸಮಕಾಲೀನರ ಶಕ್ತಿ ಅದರಲ್ಲಿದೆ. ಒಂದು ಠೀವಿ ಇದೆ. ಭಿನ್ನತೆಯಲ್ಲಿ ಒಂದು ಐಕ್ಯತೆ ಇದೆ. ಸನ್ನಿವೇಶ ಬದಲಾವಣೆಯಾದರೂ ಜೈಸುವ ಶಕ್ತಿಯಿದೆ; ಆದರೆ ಅದು ಸನ್ನಿವೇಶದಿಂದ ಹಿಂದೇಟುಹಾಕಿ, ಓಡಿ ಹೋಗುವದರಲ್ಲಿಲ್ಲ. ಆದರೆ ಅದನ್ನೇ ಅಳವಡಿಸಿಕೊಳ್ಳುವ ಮೂಲಕ ಗೀತೆಯು ಹುಟ್ಟಿದ ಎರಡು ಸಾವಿರದ ಐದುನೂರು ವರ್ಷಗಳಿಂದ ಭಾರತದ ಜನಕೋಟಿಯು ಮೇಲಿಂದಮೇಲೆ ವ್ಯವ್ಯಸ್ಥವಾಗಿ, ಉನ್ನತಿಗೇರಿ, ಅವನತಿಯನ್ನೂ ಮುಟ್ಟಿದೆ. ಅನುಭವದಮೇಲೆ ಅನುಭವವನ್ನು ಪಡೆದಿದೆ. ದರ್ಶನಗಳಮೇಲೆ ದರ್ಶಗಳು ಬಂದರೂ, ಗೀತೆಯಲ್ಲಿ ಸದಾ ಒಂದು ಜೀವಾಮೃತವನ್ನು ಕಂಡಿದೆ. ಮಾನವ ಪ್ರಗತಿ ಭಾವನೆಗೆ ಹೊಂದಿಕೊಳ್ಳುವ, ಮಾನವನ ಮನಸ್ಸನ್ನು ಕಲಕುವ, ಮತ್ತು ತಾತ್ವಿಕ ಸಮಸ್ಯೆಗಳಿಗೆ ಅನ್ವಯಿಸುವ ಒಂದು ನಿತ್ಯ ನೂತನತೆಯನ್ನು ಅದರಲ್ಲಿ ಕಂಡಿದೆ.

## ೧೫. ಪ್ರಾಚೀನ ಭಾರತದಲ್ಲಿ ಜೀವನ ಮತ್ತು ಸಾಧನೆ

ಪ್ರಾಚೀನ ಭಾರತದ ದಾರ್ಶನಿಕ ಮತ್ತು ತತ್ವಜ್ಞಾನದ ಬೆಳವಣಿಗೆಯನ್ನು ಕಂಡುಹಿಡಿಯಲು ಅನೇಕ ಪಂಡಿತರು, ದಾರ್ಶನಿಕರು ತುಂಬ ಕೆಲಸ ಮಾಡಿದ್ದಾರೆ. ಐತಿಹಾಸಿಕ ಘಟನೆಗಳ ಅನುಕ್ರಮಣಿಕೆಯನ್ನು ನಿರ್ಧರಿಸಲು ಮತ್ತು ಆ ಕಾಲದ ಸ್ಥೂಲ ರಾಜಕೀಯ ನಕ್ಷೆಗಳನ್ನು ಸಿದ್ಧಮಾಡಲು ಅನೇಕ ಪ್ರಯತ್ನಗಳು ನಡೆದಿವೆ. ಆದರೆ ಆ ದಿನಗಳ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿ ಜನರು ನಡೆಸಿದ ಜೀವನ, ಮಾಡುತ್ತಿದ್ದ ಕಾರ್ಯವಿಧಾನ, ಅವರ ವಸ್ತುನಿರ್ಮಾಣ ಕೌಶಲ್ಯ, ವ್ಯಾಪಾರ ಸಾಮರ್ಥ್ಯ ಏನು ಮತ್ತು ಹೇಗೆ ಎಂದು ತಿಳಿದುಕೊಳ್ಳಲು ಯಾವ ಪ್ರಯತ್ನವೂ ನಡೆದಿಲ್ಲ. ಇತ್ತೀಚೆಗೆ ಮಾತ್ರ ಈ ವಿಷಯಗಳಿಗೆ ಹೆಚ್ಚು ಗಮನ ಕೊಡುತ್ತಿರಲಾಗಿದೆ; ಭಾರತೀಯ ವಿದ್ವಾಂಸರಿಂದ ಕೆಲವು, ಅಮೆರಿಕ ದೇಶದ ವಿದ್ವಾಂಸನಿಂದ ಒಂದು ಈರೀತಿ ಗ್ರಂಥಗಳು ಪ್ರಕಟವಾಗಿವೆ. ಆದರೂ ಮಾಡಬೇಕಾದ ಕೆಲಸ ಎಷ್ಟೋ ಇದೆ. ಮಹಾಭಾರತ ಒಂದೇ ಆಗಿನ ಸಾಮಾಜಿಕ ಮತ್ತು ಇತರ ಅಂಶಗಳ ಒಂದು ಖನಿ. ಇತರ ಗ್ರಂಥಗಳಿಂದ ಸಹ ಅನೇಕ ಉಪಯುಕ್ತ ವಿಷಯಗಳನ್ನು ಸಂಗ್ರಹಿಸಬಹುದು. ಆದರೆ ಆ ಗ್ರಂಥಗಳನ್ನು ಈ ವೈಶಿಷ್ಟ್ಯ ದೃಷ್ಟಿಯಿಂದ ವಿಮರ್ಶಿಮಾಡಬೇಕು. ಇನ್ನೊಂದು ಅಮೂಲ್ಯ ಗ್ರಂಥವೆಂದರೆ ಕ್ರಿ. ಪೂರ್ವ ನಾಲ್ಕನೆಯ ಶತಮಾನದ ಕೌಟಿಲ್ಯನ ಅರ್ಥಶಾಸ್ತ್ರ; ಅದರಿಂದ ಮೌರ್ಯ ಚಕ್ರಾಧಿಪತ್ಯದ ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ಸೈನಿಕ ವ್ಯವಸ್ಥೆಗಳ ವಿವರಗಳನ್ನು ಕಾಣಬಹುದು.

ಬುದ್ಧನ ಕಾಲಕ್ಕೂ ಪೂರ್ವದ ಭಾರತದ ಚಿತ್ರವನ್ನು ನೋಡಬೇಕಾದರೆ ಜಾತಕ ಕತೆಗಳಿಗೇ ಹೋಗಬೇಕು. ಈ ಜಾತಕಗಳಿಗೆ ಈಗಿನ ರೂಪ ಬಂದುದು ಬುದ್ಧನ ತರುವಾಯ. ಬುದ್ಧನ ಹಿಂದಿನ ಅವತಾರಗಳನ್ನು ಅವು ವರ್ಣಿಸುವುದರಿಂದ ಬೌದ್ಧ ಸಾಹಿತ್ಯದಲ್ಲಿ ಅವುಗಳಿಗೆ ಮುಖ್ಯ ಸ್ಥಾನವಿದೆ. ಆದರೆ ಕತೆಗಳು ಬಹು ಹಿಂದಿನವು; ಬುದ್ಧನಿಗಿಂತ ಹಿಂದಿನ ಕಾಲದವು. ಆದ್ದರಿಂದ ಆ ಕಾಲದ ಭಾರತದ ಜೀವನದಮೇಲೆ ಎಷ್ಟೋ ಬೆಳಕನ್ನು ಬೀರುತ್ತವೆ. ಪ್ರೊಫೆಸರ್ ರೈಸ್ ಡೇವೀಸ್, "ಇದು

ವರೆಗೆ ದೊರೆತಿರುವ ಜನತಾ ಸಾಹಿತ್ಯದಲ್ಲಿ ಇವುಗಳೆ ತುಂಬ ಪ್ರಾಚೀನವಾದವು, ಪೂರ್ಣವಾದವು ಮತ್ತು ಬಹು ಮುಖ್ಯವಾದವು" ಎಂದಿದಾನೆ. ಭಾರತದಲ್ಲಿ ಈಚೆಗೆ ಬರೆದು, ಪಶ್ಚಿಮ ಏಷ್ಯ ಮತ್ತು ಯೂರೋಪಿಗೆ ಹರಡಿದ ಅನೇಕ ಪ್ರಾಣಿಗಳ ಮತ್ತು ಇತರ ಕತೆಗಳಿಗೆಲ್ಲ ಜಾತಕಗಳೇ ಮೂಲ.

ಭಾರತದ ಎರಡು ಪ್ರಮುಖ ಜನಾಂಗಗಳಾದ ಆರ್ಯರು ದ್ರಾವಿಡರು ಕೊನೆಯಲ್ಲಿ ಮಿಳಿತವಾಗುತ್ತಿದ್ದ ಕಾಲದ ಕತೆಗಳೇ ಜಾತಕ ಕತೆಗಳು. ಅವುಗಳಲ್ಲಿ ಆಗಿನ ಸಮಾಜದ ಅನೈಕಮತ್ಯ ಮತ್ತು ಅವ್ಯವಸ್ಥೆ ಎದ್ದುಕಾಣುತ್ತದೆ. ಯಾವ ಒಂದು ವಿಂಗಡಣೆಯನ್ನೂ ಮಾಡಲು ಸಾಧ್ಯವಿಲ್ಲ. ಜಾತಿಪದ್ಧತಿಯಂತಹ ವ್ಯವಸ್ಥೆಯನ್ನಂತೂ ಆಗ ಊಹಿಸಲು ಸಾಧ್ಯವೇ ಇಲ್ಲ.

ಜಾತಕಗಳು ಜನತೆಯ ಸಂಪ್ರದಾಯವನ್ನು ಪ್ರತಿಬಿಂಬಿಸುತ್ತವೆ ಎಂದು ಹೇಳಬಹುದು. ವೈದಿಕ ಅಥವ ಬ್ರಾಹ್ಮಣ ಸಂಪ್ರದಾಯ ಮತ್ತು ಕ್ಷತ್ರಿಯ ಅಥವ ರಾಜಸಂಪ್ರದಾಯಕ್ಕಿಂತ ಇದು ಭಿನ್ನವಾದುದು.

ಅನೇಕ ರಾಜ್ಯಗಳ ಪಟ್ಟಿಗಳು, ರಾಜಮನೆತನಗಳ ವಂಶವೃಕ್ಷಗಳು ಇವೆ. ಮೊದಲು ಆಯ್ಕೆಯಿಂದ ದೊರೆಯುತ್ತಿದ್ದ ರಾಜತ್ವ ಕ್ರಮೇಣ ಹಿರಿಯ ಮಗನದಾಗಿ ಅನುವಂಶೀಯವಾಗುತ್ತದೆ. ಈ ಉತ್ತರಾಧಿಕಾರದಲ್ಲಿ ಸ್ತ್ರೀಗೆ ಅವಕಾಶವಿಲ್ಲ. ಆದರೂ ಕೆಲವು ವಿನಾಯಿತಿಗಳಿವೆ. ಚೀನದಲ್ಲಿರುವಂತೆ ಎಲ್ಲ ಅನಿಷ್ಟಕ್ಕೂ ರಾಜನೇ ಉತ್ತರವಾದಿ; ಏನಾದರೂ ಕಷ್ಟ ಸಂಭವಿಸಿದರೆ ಅದಕ್ಕೆ ಕಾರಣ ರಾಜನಲ್ಲಿ ಏನೊ ದೋಷವಿದೆ. ಮಂತ್ರಿಮಂಡಲವಿರುತ್ತಿತ್ತು. ಯಾವುದೋ ಬಗೆಯ ಶಾಸನ – ಸಭೆಯೂ ಇದ್ದಂತೆ ಪ್ರಮಾಣ ದೊರೆಯುತ್ತದೆ. ಅನೂಚೂನವಾಗಿ ನಡೆದು ಬಂದ ಸಂಪ್ರದಾಯಗಳಿಗನುಸಾರವಾಗಿ ನಡೆಯಬೇಕೆಂದಿದ್ದರೂ ರಾಜನು ನಿರಂಕುಶ ಪ್ರಭುತ್ವವನ್ನು ನಡೆಸುತ್ತ ಇದ್ದ. ರಾಜಗುರುವಿಗೆ ಸಲಹೆಗಾರನೆಂದೂ ಮತ್ತು ಧರ್ಮ ಕರ್ಮಗಳ ದಿಗ್ದರ್ಶಕನೆಂದೂ ರಾಜಾಸ್ಥಾನದಲ್ಲಿ ಬಹಳ ಗೌರವ. ನ್ಯಾಯಬಾಹಿರರೂ, ಕ್ರೂರಕರ್ಮಿಗಳೂ ಆದ ರಾಜರ ಮೇಲೆ ಜನರು ದಂಗೆ ಎದ್ದ ಪ್ರಸಂಗಗಳೂ, ರಾಜರಿಗೆ ಅವರ ತಪ್ಪಿಗಾಗಿ ಮರಣ ದಂಡನೆ ಗುರಿಪಡಿಸಿದ ದೃಷ್ಟಾಂತಗಳೂ ಇವೆ.

ಗ್ರಾಮ ಸಭೆಗಳಿಗೆ ತುಂಬ ಸ್ವಾತಂತ್ರ್ಯವಿತ್ತು. ಮುಖ್ಯ ಉತ್ಪತ್ತಿ ಎಂದರೆ ಭೂಕಂದಾಯ. ಬೆಳೆದ ಬೆಳೆಯಲ್ಲಿ ರಾಜಪಾಲೇ ಭೂಕಂದಾಯ. ಅದನ್ನು ಯಾವಾಗಲೂ ಧಾನ್ಯ ರೂಪದಲ್ಲಿಯೇ ಕೊಡಬಹುದಾಗಿತ್ತು ; ಒಂದೊಂದು ವೇಳೆ ಧನರೂಪದಲ್ಲಿಯೂ ಕೊಡಬಹುದಾಗಿತ್ತು. ಪ್ರಾಯಶಃ ಇದು ಉತ್ಪತ್ತಿಯ ಆರರಲ್ಲಿ ಒಂದು ಅಂಶವಾಗಿತ್ತು. ಮುಖ್ಯವಾಗಿ ಅದು ಕೃಷಿಕ ಸಂಸ್ಕೃತಿ. ಸ್ವತಂತ್ರ ಗ್ರಾಮಜೀವನವೇ ಅದಕ್ಕೆ ಮೂಲಾಧಾರ. ದೇಶದ ರಾಜಕೀಯ ಆರ್ಥಿಕ ರಚನೆ ಈ ಗ್ರಾಮಪಂಚಾಯಿತಿಗಳಿಂದ. ಅವುಗಳನ್ನು ದಶಕಗಳಾಗಿ, ಶತಕಗಳಾಗಿ ವಿಂಗಡಿಸಿದ್ದರು. ಹಣ್ಣಿನ ವ್ಯವಸಾಯ, ಪಶುಪಾಲನೆ, ಗೋವಳ ವೃತ್ತಿ ಬಹು ಜನರ ಅವಲಂಬನೆಯಾಗಿತ್ತು. ಎಲ್ಲಿ ನೋಡಿದರೂ ತೋಟಗಳು, ಉದ್ಯಾನಗಳು. ಮತ್ತು ಹಣ್ಣು ಹೂಗಳಿಗೆ ವಿಶೇಷ ಬೆಲೆ. ಅಲ್ಲಿ ವಿವರಿಸಿರುವ ಹೂಗಳಪಟ್ಟಿಯೇ ಅಸಾಧ್ಯವಿದೆ; ಮಾವು, ದ್ರಾಕ್ಷಿ, ಬಾಳೆ ಹಣ್ಣು, ಖರ್ಜೂರ ಈ ಹಣ್ಣುಗಳೆಂದರೆ ಪ್ರಾಣ. ನಗರಗಳಲ್ಲಿ ವ್ಯಂಜನಗಳ ಹಣ್ಣು ಹೂವಾಡಿಗರ ಅಂಗಡಿಗಳು ವಿಶೇಷವಾಗಿರುತ್ತಿದ್ದಂತೆ ಕಾಣುತ್ತದೆ. ಈಗಿನಂತೆ ಆಗಲೂ ಸಹ ಹೂಮಾಲೆ ಭಾರತೀಯರ ಪ್ರಿಯವಸ್ತುವಾಗಿತ್ತು.

ಮುಖ್ಯವಾಗಿ ಆಹಾರಕ್ಕಾಗಿ ಬೇಟೆಯಾಡುವುದು ಒಂದು ನಿಯಮಿತ ಕೆಲಸವಾಗಿತ್ತು. ಕೋಳಿ, ಮೀನು ಮುಂತಾಗಿ ಮಾಂಸಾಹಾರ ಸಾಮಾನ್ಯವಾಗಿತ್ತು. ಜಿಂಕೆಯ ಮಾಂಸಕ್ಕೆ ತುಂಬ ಬೆಲೆಯಿತ್ತು. ಮತ್ಸ್ಯಗೃಹಗಳೂ, ವಧಾಸ್ಥಾನಗಳೂ ಇದ್ದವು. ಅಕ್ಕಿ, ಗೋಧಿ, ರಾಗಿ, ಜೋಳ ಮುಖ್ಯ ಆಹಾರವಸ್ತುಗಳು. ಕಬ್ಬಿನಿಂದ ಸಕ್ಕರೆ ಮಾಡುತ್ತಿದ್ದರು. ಹಾಲು, ಮೊಸರು, ಬೆಣ್ಣೆ, ತುಪ್ಪಕ್ಕೆ ಹೆಚ್ಚು

---

* Richard Fick, 'The Social Organisation in North-East India in Buddha's time.' Ratilal Mehta: 'Pre Buddhist India' (1939).

ಬೆಲೆ ಇತ್ತು. ಮಾದಕ ಪದಾರ್ಥಗಳ ಸೇವನೆ ಇತ್ತು. ಅಕ್ಕಿ, ಹಣ್ಣು, ಮತ್ತು ಕಬ್ಬಿನಿಂದ ಮದ್ಯ ವನ್ನು ಮಾಡುತ್ತಿದ್ದರು.

ಲೋಹಗಳು ಮತ್ತು ರತ್ನಗಳಿಗಾಗಿ ಗಣಿಗಳ ಕೆಲಸ ನಡೆಯುತ್ತಿತ್ತು. ಚಿನ್ನ, ಬೆಳ್ಳಿ, ತಾಮ್ರ, ಕಬ್ಬಿಣ, ಸೀಸ, ತವರ, ಹಿತ್ತಾಳೆ ಲೋಹಗಳ ಹೆಸರು ಅವುಗಳಲ್ಲಿ ಉಲ್ಲೇಖವಾಗಿವೆ. ರತ್ನಗಳಲ್ಲಿ ವಜ್ರ ಕೆಂಪು ಮುತ್ತು ಮತ್ತು ಪ್ರವಾಳಗಳ ಉಲ್ಲೇಖವಿದೆ. ಚಿನ್ನ, ಬೆಳ್ಳಿ, ತಾಮ್ರದ ನಾಣ್ಯಗಳ ಹೆಸರಿವೆ. ವ್ಯಾಪಾರದಲ್ಲಿ ಪಾಲುದಾರಿಕೆ ಇತ್ತು. ಬಡ್ಡಿಯಮೇಲೆ ಸಾಲ ದೊರೆಯುತ್ತಿತ್ತು.

ರೇಷ್ಮೆ, ಉಣ್ಣೆ ಮತ್ತು ಹತ್ತಿಯ ಬಟ್ಟೆಗಳು ತಯಾರಾಗುತ್ತಿದ್ದವು. ನೂಲುವುದು, ನೇಯು ವುದು, ಬಣ್ಣಹಾಕುವುದು ತುಂಬ ಅಭಿವೃದ್ಧಿಗೊಂಡಿದ್ದ ಮತ್ತು ವ್ಯಾಪಕವಾದ ಉದ್ಯಮಗಳಾಗಿದ್ದವು. ಲೋಹದ ಉದ್ಯಮಗಳು, ಯುದ್ಧಕ್ಕೆ ಬೇಕಾದ ಶಸ್ತ್ರಾಸ್ತ್ರಗಳನ್ನೊದಗಿಸುತ್ತಿದ್ದವು. ಮನೆಕಟ್ಟಲು ಕಲ್ಲು, ಮರ, ಇಟ್ಟಿಗೆಗಳನ್ನು ಉಪಯೋಗಿಸುತ್ತಿದ್ದರು. ಬಡಗಿಯರು ಗಾಡಿಗಳು, ರಥಗಳು, ಹಡಗುಗಳು, ಮಂಚಗಳು, ಕುರ್ಚಿಗಳು, ಬೆಂಚುಗಳು, ಕಪಾಟುಗಳು, ಆಟಿಕೆಗಳು ಮುಂತಾದ ಅನೇಕ ಸಾಮಾನು ಗಳನ್ನು ಮಾಡುತ್ತಿದ್ದರು. ಬಿತ್ತದ ಕೆಲಸಗಾರರು ಚಾಪೆಗಳು, ಬುಟ್ಟಿಗಳು, ಬೀಸಣಿಗೆಗಳು, ಕೊಡೆ ಗಳನ್ನು ಮಾಡುತ್ತಿದ್ದರು. ಎಲ್ಲ ಹಳ್ಳಿಗಳಲ್ಲೂ ಕುಂಬಾರರು ಇದ್ದರು. ಹೂಗಳಿಂದಲೂ ಶ್ರೀಗಂಧ ದಿಂದಲೂ ಅನೇಕ ಗಂಧಗಳನ್ನು, ತೈಲಗಳನ್ನು, ಸುಗಂಧದ್ರವ್ಯಗಳನ್ನು, ಗಂಧದ ಹುಡಿಯನ್ನು ಸಹ ಮಾಡುತ್ತಿದ್ದರು. ಅನೇಕ ಔಷಧಗಳನ್ನು ಭೇಷಜಗಳನ್ನು ತಯಾರಿಸುತ್ತಿದ್ದರು. ಮೃತಶರೀರಗಳನ್ನು ಸಹ ನಶಿಸದಂತೆ ಕಾಪಾಡಿಡುತ್ತಿದ್ದರು.

ಕುಶಲಕರ್ಮಿಗಳು ಮತ್ತು ಕೆಲಸಗಾರರಲ್ಲದೆ ಜಾತಕಗಳಲ್ಲಿ ಇತರ ವೃತ್ತಿಗಳ ಹೆಸರೂ ಇವೆ. ಶಿಕ್ಷಣವೃತ್ತಿಯವರು, ವೈದ್ಯರು, ಶಸ್ತ್ರವೈದ್ಯರು, ದಳ್ಳಾಳಿಗಳು, ವ್ಯಾಪಾರಗಾರರು, ಸಂಗೀತಗಾರರು, ಜ್ಯೋತಿಷ್ಕರು, ಕಾಯಿಪಲ್ಯಗಳ ವ್ಯಾಪಾರಿಗಳು, ಕಲಾವಿದರು, ನಾಟ್ಯಶಾಸ್ತ್ರ ಪ್ರವೀಣರು, ಹಾವಾಡಿ ಗರು, ಡೊಂಬರು, ಗೊಂಬೆಯಾಟದವರು, ಕೇಣಿ ವ್ಯಾಪಾರಿಗಳು ಇವರೆಲ್ಲರ ಹೆಸರುಗಳೂ ಇವೆ.

ಮನೆಗಳಲ್ಲಿ ದಾಸ್ಯಜೀವನ ಸಾಮಾನ್ಯವಾಗಿದ್ದಂತೆ ತೋರುತ್ತದೆ. ಮತ್ತು ಇತರ ಕೆಲಸಗಳಿಗೆ ವೇತನ ಕೊಡುತ್ತಿದ್ದರು. ಆಗಲೂ ಕೆಲವು ಅಸ್ಪೃಶ್ಯರಿದ್ದರು. ಅವರನ್ನು ಚಂಡಾಲರೆಂದು ಕರೆಯುತ್ತಿ ದ್ದರು. ಅವರ ಮುಖ್ಯ ಕೆಲಸ ಪ್ರೇತಸಂಸ್ಕಾರ.

ವರ್ತಕ ಸಂಘಗಳು, ಕಸಬುದಾರ ಸಂಘಗಳು ತುಂಬ ಪ್ರಾಮುಖ್ಯತೆ ಪಡೆದಿದ್ದವು. "ಆರ್ಥಿಕ ಕಾರಣಗಳಿಂದ, ಬಂಡವಾಳ ಸರಿಯಾಗಿ ವಿನಿಯೋಗವಾಗಲಿ ಎಂಬ ದೃಷ್ಟಿಯಿಂದ, ಪರಸ್ಪರ ಪರಿಚಯ ಸಂಪರ್ಕ ಉತ್ತಮವಾಗಲಿ ಎಂಬ ದೃಷ್ಟಿಯಿಂದ ಮತ್ತು ತಮ್ಮ ಸಮಾಜದ ನ್ಯಾಯವಾದ ಹಕ್ಕು ಬಾಧ್ಯತೆಗಳ ರಕ್ಷಣೆಗಾಗಿ ಈ ಸಂಘಗಳು ಹುಟ್ಟಿರುವುದನ್ನು ಭಾರತೀಯ ಸಂಸ್ಕೃತಿಯ ಮೊಟ್ಟಮೊದ ಲಿನ ಹಂತದಲ್ಲಿಯೇ ನೋಡಬಹುದು" ಎಂದು ಫಿಕ್ ಹೇಳಿದ್ದಾನೆ. ಹದಿನೆಂಟು ಕಸಬುದಾರ ಸಂಘಗಳಿದ್ದವು ಎಂದು ಜಾತಕಗಳು ಹೇಳುತ್ತವೆ. ಆದರಲ್ಲಿ ಉಲ್ಲೇಖಿತವಿರುವುದು ನಾಲ್ಕು ಮಾತ್ರ— ಮರಗೆಲಸದವರು, ಗಾರೆಕೆಲಸದವರು, ಕಮ್ಮಾರರು, ಚರ್ಮದಕೆಲಸದವರು ಮತ್ತು ಬಣ್ಣಗಾರರು.

ಮಹಾಕಾವ್ಯಗಳಲ್ಲಿ ಸಹ ವರ್ತಕರ ಮತ್ತು ಉದ್ಯೋಗಿಗಳ ಸಂಘಗಳ ಉಲ್ಲೇಖವಿದೆ. ಮಹಾ ಭಾರತದಲ್ಲಿ "ವರ್ತಕ ಸಂಘಗಳ ಸಂಘಟನೆಯೇ ಅವುಗಳ ಲಕ್ಷಣೋಪಾಯ" ಎಂದಿದೆ. ವರ್ತಕ ಸಂಘಗಳ ವಿರೋಧವನ್ನು ಅಲಕ್ಷಿಸಿ ಯಾವ ಶಾಸನವನ್ನೂ ಮಾಡುವುದಕ್ಕೂ ದೊರೆಗೆ ಅವಕಾಶ ಕೊಡುತ್ತಿರಲಿಲ್ಲ. ವರ್ತಕ ಸಂಘಗಳ ಪ್ರಾಬಲ್ಯ ಅಷ್ಟು ಬಲವಾಗಿತ್ತು. ರಾಜದೃಷ್ಟಿಯಲ್ಲಿ ಗೌರವ ಸಲ್ಲ ಬೇಕಾದವರಲ್ಲಿ ಗುರುಗಳ ನಂತರ ಈ ವರ್ತಸಂಘಗಳ ನಾಯಕರು ಬರುತ್ತಿದ್ದರು. * ವರ್ತಕರ ಮುಖ್ಯಸ್ಥನಾದ ಶ್ರೇಷ್ಠಿಯು ಈಗಿನ ಸೇಠ್ ಅಥವ ಸೆಟ್ಟಿ ಬಹಳ ಪ್ರಮುಖ ವ್ಯಕ್ತಿಯಾಗಿದ್ದ.

---

* ಪ್ರೊ. ಇ. ವಾಷ್‌ಬರ್ನ್ ಹಾಪ್‌ಕಿನ್ಸ್—'ಕೇಂಬ್ರಿಜ್ ಇಂಡಿಯಾ ಚರಿತ್ರೆ'ಯಲ್ಲಿ, ಸಂ. ೧, ಪು. ೨೬೯.

ಜಾತಕ ಕಥೆಗಳಿಂದ ಇನ್ನೊಂದು ಮುಖ್ಯವಾ ಅಂಶದ ವ್ಯಕ್ತಪಡುತ್ತದೆ. ಒಂದೇ ಉದ್ಯೋಗದಲ್ಲಿ ನಿರತರಾದ ಜನರಿಗೆಲ್ಲ ಪ್ರತ್ಯೇಕ ಅಗ್ರಹಾರಗಳನ್ನೋ ಗ್ರಾಮಗಳನ್ನೋ ಏರ್ಪಡಿಸುವುದು. ಈ ರೀತಿ ಸಾವಿರಾರು ಸಂಸಾರಗಳ ಬಡಗಿಯರ ಗ್ರಾಮಗಳು, ಕಮ್ಮಾರರ ಗ್ರಾಮಗಳು, ಮುಂತಾಗಿ ಇದ್ದವು. ಇಂತಹ ವೈಶಿಷ್ಟ್ಯವುಳ್ಳ ಗ್ರಾಮಗಳು ನಗರಗಳ ಸಮೀಪ ಇರುತ್ತಿದ್ದವು. ಆ ಗ್ರಾಮಗಳಲ್ಲಿ ತಯಾರಾದ ವಸ್ತುಗಳನ್ನು ನಗರಗಳು ಕೊಂಡು ಅವರಿಗೆ ಜೀವನೋಪಾಯವನ್ನು ಒದಗಿಸುತ್ತಿದ್ದವು. ಇಡೀಗ್ರಾಮವೇ ಒಂದು ಸಹಕಾರ ತತ್ವದಿಂದ ಕೆಲಸಮಾಡಿ ದೊಡ್ಡ ದೊಡ್ಡ ಬೇಡಿಕೆಗಳನ್ನು ಪೂರೈಸುತ್ತಿದ್ದವು. ಪ್ರಾಯಶಃ ಈರೀತಿ ಪ್ರತ್ಯೇಕ ವಾಸ ಮತ್ತು ವ್ಯವಸ್ಥೆಯಿಂದ ಜಾತಿಪದ್ಧತಿ ಹುಟ್ಟಿ ಹರಡಿರಬೇಕು. ಬ್ರಾಹ್ಮಣರು ಮತ್ತು ಶ್ರೀಮಂತರ ಮಾರ್ಗವನ್ನೇ ಉದ್ಯೋಗಿ ಮತ್ತು ವ್ಯಾಪಾರಿ ಸಂಘಗಳವರೂ ಅನುಸರಿಸಿದರು.

ಅಲ್ಲಲ್ಲಿ ಪ್ರಯಾಣಿಕರ ವಿಶ್ರಾಂತಿ ಗೃಹಗಳೂ ಆಸ್ಪತ್ರೆಗಳೂ ಇದ್ದ ದೊಡ್ಡ ರಾಜಮಾರ್ಗಗಳು ಉತ್ತರ ಹಿಂದೂಸ್ಥಾನದಿಂದ ಹೊರಟು ದೇಶದ ಮೂಲೆ ಮೂಲೆಗೂ ಹರಡಿದ್ದವು. ದೇಶದ ಒಳವ್ಯಾಪಾರ ಮಾತ್ರವಲ್ಲದೆ ಪರದೇಶಗಳೊಂದಿನ ವ್ಯಾಪಾರವು ಸಹ ಬಹಳ ಉಚ್ಛ್ರಾಯ ಸ್ಥಿತಿಯಲ್ಲಿತ್ತು. ಕ್ರಿಸ್ತಪೂರ್ವ ಐದನೆ ಶತಮಾನದಲ್ಲಿ ಈಜಿಪ್ಟ್‌ದೇಶದ ಮೆಂಫಿಸ್‌ನಲ್ಲಿ ಭಾರತೀಯ ವರ್ತಕರ ಒಂದು ಅಗ್ರಹಾರವಿತ್ತು. ಭಾರತೀಯರ ಮುಖವಾಡಗಳು ಅಲ್ಲಿ ದೊರೆತಿರುವುದೇ ಅದಕ್ಕೆ ಸಾಕ್ಷಿ. ಪ್ರಾಯಶಃ ಏಷ್ಯದ ಆಗ್ನೇಯ (SE) ಮೂಲೆಯ ದ್ವೀಪಗಳಿಗೂ ಭಾರತಕ್ಕೂ ವ್ಯಾಪಾರ ಸಂಬಂಧವಿದ್ದಿರಬೇಕು. ಪರದೇಶಗಳೊಡನೆ ವ್ಯಾಪಾರವೆಂದರೆ ಹಡಗಿನ ವ್ಯಾಪಾರ. ಒಳನಾಡಿನ ವ್ಯಾಪಾರಕ್ಕೂ, ಸಮುದ್ರಯಾನಕ್ಕೂ ಉಪಯುಕ್ತವಾದ ಹಡಗುಗಳನ್ನು ಭಾರತದಲ್ಲಿ ಕಟ್ಟುತ್ತಿದ್ದರೆಂಬುದು ನಿರ್ವಿವಾದ. ದೂರದಿಂದ ಬಂದ ವರ್ತಕರು ಯಾನತೆರಿಗೆ ಕೊಡುತ್ತಿದ್ದರೆಂದು ಮಹಾಕಾವ್ಯಗಳಲ್ಲಿ ಉಲ್ಲೇಖವಿದೆ.

ವರ್ತಕರ ಸಮುದ್ರಯಾನ ವರ್ಣನೆ ಜಾತಕಗಳಲ್ಲಿ ಬೇಕಾದಷ್ಟಿದೆ. ಪಶ್ಚಿಮ ತೀರದ ಬ್ರೋಚ್ ಬಂದರಿಗೆ, ಉತ್ತರಕ್ಕೆ ಗಾಂಧಾರ ಮತ್ತು ಮಧ್ಯ ಏಷ್ಯಕ್ಕೆ ಮರಳುಗಾಡುಗಳ ಮೂಲಕ ಒಂಟೆಗಳ ಮೇಲೆ ಪ್ರಯಾಣ ಹೋಗುತ್ತಿದ್ದರು. ಬ್ರೋಚ್‌ನಿಂದ ಪರ್ಷಿಯಾ ಕೊಲ್ಲಿಯ ಟ್ಯಾಬಿಲಾನ್ (ಬಾವೇರು) ನಗರಕ್ಕೆ ಹಡಗುಗಳು ಹೋಗುತ್ತಿದ್ದವು. ಜಾತಕಗಳ ಪ್ರಕಾರ ನದೀಪ್ರಯಾಣ ತುಂಬ ಇತ್ತು. ಕಾಶಿಯಿಂದ ಪಾಟ್ನ, ಚಂಪ (ಭಾಗಲ್ಪುರ) ಮುಂತಾದ ನಗರಗಳಿಗೆ ಹೋಗಿ ಸಮುದ್ರ ತೀರ ಸೇರಿ ಅಲ್ಲಿಂದ ದಕ್ಷಿಣದ ಬಂದರುಗಳು, ಸಿಂಹಳ ಮತ್ತು ಮಲಯಾಕ್ಕೆ ಹೋಗುತ್ತಿದ್ದವು. ಕಾವೇರಿ ತೀರದ ಕಾವೇರಿಪಟ್ಟಣ ಒಂದು ಪ್ರಖ್ಯಾತ ಅಂತರ ರಾಷ್ಟ್ರೀಯ ವ್ಯಾಪಾರದ ಬಂದರು ಆಗಿತ್ತೆಂದು ಪ್ರಾಚೀನ ತಮಿಳುಕಾವ್ಯಗಳು ತಿಳಿಸುತ್ತವೆ. ನೂರಾರು ವರ್ತಕರು ಮತ್ತು ವಲಸೆಗಾರರು ಹಡಗನ್ನೇರಿದರೆಂದು ಜಾತಕಗಳಲ್ಲಿರುವುದರಿಂದ ಈ ಹಡಗುಗಳು ಗಾತ್ರದಲ್ಲಿ ದೊಡ್ಡವೂ ಇರಬೇಕು.

ಮಿಲಿಂದ ಪ್ರಶ್ನೆಯಲ್ಲಿ (ಮಿಲಿಂದ ಕ್ರಿಸ್ತಶಕ ಒಂದನೆಯ ಶತಮಾನದಲ್ಲಿ ಉತ್ತರ ಹಿಂದೂಸ್ಥಾನದಲ್ಲಿದ್ದ ಒಬ್ಬ ಬ್ಯಾಕ್ಟ್ರಿಯ ರಾಜ; ಪ್ರಸಿದ್ಧನಾದ ಬೌದ್ಧಮತಾನುಯಾಯಿ) " ಸಮುದ್ರತೀರ ಪಟ್ಟಣದಲ್ಲಿ ಪದೇಪದೇ ಹಡಗಿನ ಹೇರುಗಳ ಬಾಡಿಗೆಯನ್ನು ತೆಗೆದುಕೊಂಡು ಶ್ರೀಮಂತನಾದ ಹಡಗುಗಳ ಯಜಮಾನ ಸಮುದ್ರಯಾನಮಾಡಿ ವಂಗ (ಬಂಗಾಳ) ದೇಶ, ತಕ್ಕೋಲ, ಚೀನ, ಸುವೀರ, ಸೂರತ್ ಅಲೆಕ್ಸಾಂಡ್ರಿಯ, ಚೋರಮಂಡಳ, ವಿಶಾಲಭಾರತ ಅಥವ ಹಡಗುಗಳು ತಂಗುವ ಇತರ ಯಾವುದಾದರೂ ಸ್ಥಳಗಳಿಗೆ ಹೋಗುವಂತೆ " ಎಂದು ಇದೆ. *

ಇಂಡಿಯಾದೇಶದಿಂದ ರೇಷ್ಮೆ, ಮಲ್ಲು, ನಯವಾದ ಬಟ್ಟೆಗಳು, ಚಾಕು, ಕತ್ತರಿ ಮುಂತಾದ ಹರಿತವಾದ ಸಾಮಾನುಗಳು, ಕವಚಗಳು, ಕಿನ್ಖಾಪು, ಕಸೂತಿ ಸಾಮಾನು, ರತ್ನಗಂಬಳಿಗಳು, ಸುಗಂಧದ್ರವ್ಯಗಳು, ಔಷಧಗಳು, ದಂತ ಮತ್ತು ದಂತದ ಸಾಮಾನುಗಳು, ಒಡವೆಗಳು, ಚಿನ್ನ ಇವೇ

* ಶ್ರೀಮತಿ ಸಿ.ಎ.ಎಫ್. ರೈಸ್ ಡೇವಿಡ್ಸ್ ಕೇಂಬ್ರಿಜ್ಜ್ ಇಂಡಿಯ ಚರಿತ್ರೆಯಲ್ಲಿ ಉಲ್ಲೇಖಿಸಿದ್ದಾರೆ.

ಮುಖ್ಯವಾಗಿ ಭಾರತೀಯ ವರ್ತಕರು ತೆಗೆದುಕೊಂಡು ಹೋಗಿ ವ್ಯಾಪಾರ ಮಾಡುತ್ತಿದ್ದ ವಸ್ತುಗಳು.

ಇಂಡಿಯದ ಅಥವ ಉತ್ತರ ಭಾರತದ ಯುದ್ಧೋಪಯುಕ್ತ ಶಸ್ತ್ರಾಸ್ತ್ರಗಳು ತುಂಬ ಹೆಸರಾಗಿದ್ದವು. ಅದರಲ್ಲೂ ಅದರ ಉಕ್ಕು, ಕತ್ತಿ, ಕಠಾರಿಗಳು ಬಹಳ ಪ್ರಸಿದ್ಧಿ. ಕ್ರಿಸ್ತಪೂರ್ವ ಐದನೆಯ ಶತಮಾನದಲ್ಲಿ ಭಾರತೀಯರ ಒಂದು ದೊಡ್ಡ ಸೈನ್ಯ—ಅಶ್ವ ಮತ್ತು ಪದಾತಿದಳ ಪಾರ್ಸಿ ಸೇನೆಯೊಂದಿಗೆ ಗ್ರೀಸಿಗೆ ಹೋಗಿತ್ತು. ಅಲೆಕ್ಸಾಂಡರ್ ಪರ್ಷಿಯಾದೇಶದ ಮೇಲೆ ದಂಡೆತ್ತಿಬಂದಾಗ ಯುದ್ಧಕ್ಕೆ ಬೇಕಾದ ಕತ್ತಿಗಳು ಮತ್ತು ಇತರ ಆಯುಧಗಳನ್ನು ಪಾರಸೀಕರು ಇಂಡಿಯಾದಿಂದ ಬಹುಬೇಗ ತರಿಸಿಕೊಂಡರೆಂದು 'ಷಹನಾಮ' ಎಂಬ ಫಿರ್ದೂಸಿಯ ಪ್ರಸಿದ್ಧ ಪಾರ್ಸಿ ಮಹಾಕಾವ್ಯದಲ್ಲಿ ಹೇಳಿದೆ. ಇಸ್ಲಾಂಪೂರ್ವದ ಅರಬ್ಬಿ ಭಾಷೆಯಲ್ಲಿ ಕತ್ತಿಗೆ 'ಮುಹನ್ನದ್' ಎಂದು ಕರೆದಿದೆ. ಅಂದರೆ 'ಹಿಂದ್' ನಿಂದ ಅಥವ ಇಂಡಿಯಾದಿಂದ ಬಂದದ್ದು ಎಂದು. ಈಗಲೂ ಈ ಶಬ್ದ ಬಳಕೆಯಲ್ಲಿದೆ.

ಕಬ್ಬಿಣದ ಉಪಯೋಗದಲ್ಲಿ ಪ್ರಾಚೀನಭಾರತ ಬಹಳ ಶೋಧನೆ ನಡೆಸಿ ಮುಂದುವರಿದಿದ್ದಂತೆ ಕಾಣುತ್ತದೆ. ಇಂದಿನ ವಿಜ್ಞಾನಿಗಳನ್ನೆಲ್ಲ ಬೆರಗುಗೊಳಿಸಿರುವ ಒಂದು ಪ್ರಸಿದ್ಧ ಕಬ್ಬಿಣದ ಕಂಬ ದೆಹಲಿಯ ಬಳಿ ಇದೆ. ತುಕ್ಕು ಹಿಡಿಯದೆ, ಗಾಳಿ ಮರಗಳ ಹೊಡೆತಕ್ಕೆ ಸಿಕ್ಕದಂತೆ ಇರಬೇಕಾದರೆ ಅದನ್ನು ಹೇಗೆ ಮಾಡಿರಬೇಕೆಂದು ಇನ್ನೂ ಕಂಡುಹಿಡಿಯಲಾಗಿಲ್ಲ. ಅದರಮೇಲಿನ ಲಿಪಿ ಕ್ರಿಸ್ತಶಕ ನಾಲ್ಕರಿಂದ ಏಳನೆಯ ಶತಮಾನದವರೆಗೆ ಆಳಿದ ಗುಪ್ತರ ಕಾಲದ ಲಿಪಿಯಲ್ಲಿದೆ. ಕೆಲವು ವಿದ್ವಾಂಸರು ಲಿಪಿ ಈಚೆಗೆ ಬರೆದಿರಬೇಕು, ಸ್ತಂಭ ಇನ್ನೂ ಪುರಾತನ ಕಾಲದ್ದಿರಬೇಕು ಎಂದು ಹೇಳುತ್ತಾರೆ.

ಸೈನಿಕದೃಷ್ಟಿಯಿಂದ ಕ್ರಿಸ್ತಪೂರ್ವ ನಾಲ್ಕನೆಯ ಶತಮಾನದ ಅಲೆಕ್ಸಾಂಡರನ ಭಾರತದಮೇಲಿನ ದಂಡಯಾತ್ರೆ ಒಂದು ಅಲ್ಪವಿಷಯ. ಅದು ಒಂದು ಗಡಿನಾಡಿನ ದಂಡಯಾತ್ರೆ ಮಾತ್ರ. ಅದರಿಂದ ಅವನಿಗೆ ಯಾವ ಲಾಭವೂ ದೊರೆಯಲಿಲ್ಲ. ಗಡಿನಾಡಿನ ಒಬ್ಬ ನಾಯಕನೇ ಆತನನ್ನು ಯಶಸ್ವಿಯಾಗಿ ತಡೆಗಟ್ಟಿದ್ದರಿಂದ ಭಾರತದಮೇಲೆ ದಂಡೆತ್ತಿಬರಲು ಬಹಳ ಹಿಂದು ಮುಂದು ನೋಡಬೇಕಾಯಿತು. ಗಡಿನಾಡಿನ ಒಬ್ಬ ನಾಯಕನೇ ಇಷ್ಟು ಬಲಿಷ್ಠನಾದರೆ ದಕ್ಷಿಣದಲ್ಲಿದ್ದ ಮಹಾರಾಷ್ಟ್ರಗಳ ಶಕ್ತಿ ಎಷ್ಟಿರಬೇಕು? ಪ್ರಾಯಶಃ ಅವನ ಸೈನ್ಯ ಮುಂದುವರಿಯಲು ನಿರಾಕರಿಸಿ ಹಿಂದಿರುಗಲು ಕಾರಣ ಇದೇ ಇರಬೇಕು.

ಭಾರತದ ಸೈನ್ಯಶಕ್ತಿಯ ನಿಜವಾದ ಪ್ರದರ್ಶನವು ಅಲೆಕ್ಸಾಂಡರನು ಹಿಂತಿರುಗಿ ಸತ್ತುಹೋದ ಸ್ವಲ್ಪ ದಿನಗಳಲ್ಲೇ ಸೆಲ್ಯೂಕಸ್ ಇನ್ನೊಂದು ದಂಡಯಾತ್ರೆ ಬಂದಾಗ ನಡೆಯಿತು. ಚಂದ್ರಗುಪ್ತನಿಂದ ಅವನಿಗೆ ಸೋಲಾಗಿ ಪಲಾಯನಮಾಡಬೇಕಾಯಿತು. ಯಾವ ಸೈನ್ಯಕ್ಕೂ ಇಲ್ಲದ ವಿಶೇಷ ಶಕ್ತಿಯೊಂದು ಭಾರತೀಯ ಸೈನ್ಯಕ್ಕಿತ್ತು. ಇಂದಿನ ಕಾಲದ 'ಟ್ಯಾಂಕ್'ಗಳಿಗೆ ಹೋಲಿಸಬಹುದಾದ ಪಳಗಿದ ಆನೆಗಳ ಸೈನ್ಯ. ಕ್ರಿಸ್ತಪೂರ್ವ ೩೦೨ರಲ್ಲಿ ಏಷ್ಯಮೈನರ್‌ನಲ್ಲಿ ಆಂಟಿಗೋನಸ್ ಮೇಲೆದಂಡೆತ್ತಿ ಹೋದಾಗ ಸೆಲ್ಯೂಕಸ್ ನಿಕೇಟರ್ ಇಂತಹ ೫೦೦ ಆನೆಗಳನ್ನು ತೆಗೆದುಕೊಂಡು ಹೋಗಿದ್ದ. ಯುದ್ಧ ಇತಿಹಾಸಕಾರರು ಈ ಆನೆಗಳೇ ಯುದ್ಧದ ಇತಿಹಾಸಕ್ಕೆ ಮುಖ್ಯ ಕಾರಣವೆಂದೂ, ಯುದ್ಧದಲ್ಲಿ ಆಂಟಿಗೋನಸ್ ಮಡಿದು ಅವನ ಮಗ ಡೆಮಿಟ್ರಿಯಸ್ ಪಲಾಯನಮಾಡಲು ಸಹಾಯಕವಾದುವೆಂದೂ ಬರೆಯುತ್ತಾರೆ.

ಆನೆಗಳ ಶಿಕ್ಷಣ, ಕುದುರೆ ಸಾಕುವಿಕೆ ಮುಂತಾದ ವಿಷಯಗಳ ಮೇಲೆ ದೊಡ್ಡ ದೊಡ್ಡ ಗ್ರಂಥಗಳಿವೆ. ಒಂದೊಂದಕ್ಕೂ ಶಾಸ್ತ್ರ ಎಂದಿದ್ದಾರೆ. ಈಗ ಶಾಸ್ತ್ರ ಎಂದರೆ ಧರ್ಮಗ್ರಂಥ ಅಥವ ಪವಿತ್ರಗ್ರಂಥ ಎಂಬ ಅರ್ಥವಿದೆ; ಆದರೆ ಮೊದಲು ನಾಟ್ಯದಿಂದ ಮೊದಲುಗೊಂಡು ಗಣಿತದವರೆಗೆ ಎಲ್ಲ ಜ್ಞಾನ ಮತ್ತು ವಿಜ್ಞಾನಗಳಿಗೂ ಯಾವ ಭೇದವಿಲ್ಲದೆ ಉಪಯೋಗಿಸುತ್ತಿದ್ದರು. ನಿಜವಾಗಿ ನೋಡಿದರೆ ವೈದಿಕ ಮತ್ತು ಲೌಕಿಕ ಜ್ಞಾನಕ್ಕೆ ಯಾವ ಭೇದವೂ ಇರಲಿಲ್ಲ. ಒಂದರಲ್ಲೊಂದು ಪ್ರವೇಶಿಸುತ್ತಿದ್ದವು. ಜೀವನೋಪಯುಕ್ತ ಜ್ಞಾನವೆಲ್ಲದರಲ್ಲೂ ಸಂಶೋಧನೆ ನಡೆಯುತ್ತಿತ್ತು.

ಭಾರತದಲ್ಲಿ ಬರವಣಿಗೆ ಬಹಳ ಹಿಂದೆಯೇ ತಿಳಿದಿತ್ತು. ನವಶಿಲಾಯುಗದ ಮಡಕೆಗಳಮೇಲೆ ಬ್ರಾಹ್ಮಿಲಿಪಿಯ ಅಕ್ಷರಗಳಿವೆ. ಮೊಹೆಂಜೊದಾರೋದಲ್ಲಿ ದೊರೆತ ಲಿಪಿಯನ್ನು ಇನ್ನೂ ಅರ್ಥಮಾಡಿ

ಕೊಳ್ಳಲು ಸಾಧ್ಯವಾಗಿಲ್ಲ. ಭಾರತದ ಎಲ್ಲ ಕಡೆಗಳಲ್ಲಿ ದೊರೆತಿರುವ ಬ್ರಾಹ್ಮಿ ಲಿಪಿಯೇ ದೇವನಾಗರಿ ಮತ್ತು ಇತರ ಲಿಪಿಗಳಿಗೆ ಮೂಲ. ಅಶೋಕನ ಕೆಲವು ಶಾಸನಗಳು ಬ್ರಾಹ್ಮಿಲಿಪಿಯಲ್ಲಿವೆ. ವಾಯವ್ಯ ಪ್ರಾಂತ್ಯದ ಕೆಲವು ಶಾಸನಗಳು 'ಖರೋಷ್ಟಿ' ಭಾಷೆಯಲ್ಲಿವೆ.

ಕ್ರಿಸ್ತಪೂರ್ವ ೬ನೆಯ ಶತಮಾನದಲ್ಲಿಯೇ ಪಾಣಿನಿಯು ಸಂಸ್ಕೃತ ಭಾಷೆಯ ವ್ಯಾಕರಣವನ್ನು ಬರೆದನು. ಅದೊಂದು ಮಹಾಗ್ರಂಥ. ಪೂರ್ವದಲ್ಲಿದ್ದ ವ್ಯಾಕರಣಗಳ ವಿಷಯ ಪ್ರಸ್ತಾಪಿಸಿದ್ದಾನೆ. ಅಷ್ಟರಲ್ಲಿ ಸಂಸ್ಕೃತ ನಾನಾ ರೂಪದಲ್ಲಿ ಬೆಳೆದು, ವಿಪುಲ ಸಾಹಿತ್ಯವನ್ನು ಪಡೆದಿತ್ತು. ಪಾಣಿನಿಯ ಗ್ರಂಥ ಕೇವಲ ವ್ಯಾಕರಣ ಮಾತ್ರವಲ್ಲ. ಲೆನಿನ್‌ಗ್ರಾಡ್‌ನ ಸೋವಿಯಟ್ ಪ್ರೊಫೆಸರ್ ಆದ ಷೆರ್ ಬಾಟ್‌ಸ್ಕಿಯು ಅದನ್ನು "ಮಾನವಮನೋಸಾಹಸದ ಒಂದು ಅತ್ಯುತ್ತಮ ಕೃತಿ." ಎಂದಿದ್ದಾನೆ. ಈಚೆಗೆ ಅನೇಕ ವ್ಯಾಕರಣಗಳು ಹುಟ್ಟಿದ್ದರೂ ಸಂಸ್ಕೃತ ವ್ಯಾಕರಣಕ್ಕೆ ಪಾಣಿನಿಯ ಗ್ರಂಥವೇ ಈಗಲೂ ಅಧಿಕೃತ ಗ್ರಂಥ. ಪಾಣಿನಿಯ ವ್ಯಾಕರಣದಲ್ಲಿ ಗ್ರೀಕ್‌ಲಿಪಿಯ ಉಲ್ಲೇಖವಿದೆ. ಇದರಿಂದ ಅಲೆಗ್ಸಾಂಡರನು ಪೂರ್ವದೇಶಗಳಿಗೆ ದಂಡಯಾತ್ರೆ ಬರುವ ಮುಂಚೆಯೇ ಭಾರತಕ್ಕೂ ಗ್ರೀಕರಿಗೂ ಏನೋ ಸಂಬಂಧವಿತ್ತೆಂಬುದು ಸ್ಪಷ್ಟವಾಗುತ್ತದೆ.

ಖಗೋಳ ಶಾಸ್ತ್ರದ ಅಧ್ಯಯನ ವಿಶೇಷವಾಗಿ ನಡೆಯುತ್ತಿತ್ತು; ಅನೇಕವೇಳೆ ಅದು ಜ್ಯೋತಿಷ್ಯಕ್ಕೆ ತಿರುಗುತ್ತಿತ್ತು. ವೈದ್ಯಗ್ರಂಥಗಳು ಅನೇಕವಿದ್ದುವು; ಆಸ್ಪತ್ರೆಗಳೂ ಇದ್ದುವು. ಭಾರತೀಯ ವೈದ್ಯ ಶಾಸ್ತ್ರಕ್ಕೆ ಮೂಲ ಪುರುಷನು ಧನ್ವಂತರಿ ಎಂದು ಐತಿಹ್ಯವಿದೆ. ಬಹು ಪ್ರಸಿದ್ಧವಿರುವ ವೈದ್ಯ ಗ್ರಂಥಗಳೆಲ್ಲ ಕ್ರಿಸ್ತಾಬ್ದಿಯ ಆರಂಭಕಾಲದವುಗಳು–ಚರಕನ ವೈದ್ಯಗ್ರಂಥ ಸುಶ್ರುತನ ಶಸ್ತ್ರ ಚಿಕಿತ್ಸಾಗ್ರಂಥ. ಚರಕನು ವಾಯವ್ಯದಲ್ಲಿ ರಾಜಧಾನಿಯನ್ನು ಮಾಡಿಕೊಂಡು ಆಳುತ್ತಿದ್ದ ಕಾನಿಷ್ಕನ ಆಸ್ಥಾನದಲ್ಲಿ ರಾಜವೈದ್ಯ ನಾಗಿ ಇದ್ದನಂತೆ. ಈ ಗ್ರಂಥಗಳಲ್ಲಿ ಅನೇಕ ರೋಗಗಳ ಹೆಸರುಗಳಿವೆ. ಅವುಗಳ ನಿದಾನ ಮತ್ತು ಚಿಕಿತ್ಸಾ ಮಾರ್ಗಗಳನ್ನು ತಿಳಿಸುತ್ತವೆ. ಶಸ್ತ್ರಚಿಕಿತ್ಸೆ, ಪ್ರಸೂತಿಕಾ ಚಿಕಿತ್ಸೆ, ಸ್ನಾನ, ಪಾನೀಯ, ದೇಹನೈರ್ಮಲ್ಯ, ಶಿಶುಪೋಷಣೆ ಮತ್ತು ವೈದ್ಯವಿದ್ಯೆ ಎಲ್ಲವನ್ನೂ ತಿಳಿಸುತ್ತವೆ. ಪ್ರಾಯೋಗಿಕ ಪದ್ಧತಿ ಇದೆ. ಶಸ್ತ್ರಚಿಕಿತ್ಸಾ ಶಿಕ್ಷಣವು ಮೃತ ಶರೀರಗಳ ವಿಶ್ಲೇಷಣದ ಮೂಲಕ ನಡೆಯುತ್ತಿತ್ತು. ಸುಶ್ರುತ ಅನೇಕ ಶಸ್ತ್ರಾಸ್ತ್ರಗಳನ್ನು ಹೇಳಿದ್ದಾನೆ. ಶಸ್ತ್ರಚಿಕಿತ್ಸೆಯಲ್ಲಿ ಅಂಗಾಂಗಗಳ ವಿಚ್ಛೇದನ, ಕರುಳಿನ ಶಸ್ತ್ರಚಿಕಿತ್ಸೆ, ಹೊಟ್ಟೆಯನ್ನು ಕೊಯ್ದು ಹೆರಿಗೆಮಾಡಿಸುವುದು, ಕಣ್ಣುಪರೆತೆಗೆಯುವುದು ಮುಂತಾದ ಶಸ್ತ್ರಚಿಕಿತ್ಸೆಗಳನ್ನು ತಿಳಿಸಲಾಗಿದೆ. ಗಾಯಗಳಿಗೆ ಹೊಗೆಹಾಕಿ ಕ್ರಿಮಿದೋಷರಹಿತವಾಗಿ ಇಡುತ್ತಿದ್ದರು. ಕ್ರಿಸ್ತಪೂರ್ವ ಮೂರನೆಯ ಶತಮಾನದಲ್ಲಿ ಪಶುವೈದ್ಯಶಾಲೆಗಳೂ ಇದ್ದವು. ಇವು ಪ್ರಾಯಶಃ ಜೈನ ಮತ್ತು ಬೌದ್ಧಮತಗಳ ಅಹಿಂಸಾ ತತ್ವದ ಪ್ರಭಾವದಿಂದ ಆಗಿದ್ದರೂ ಇರಬಹುದು.

ಗಣಿತ ಶಾಸ್ತ್ರದಲ್ಲಿ ಪ್ರಾಚೀನ ಭಾರತೀಯರು ಚರಿತ್ರಾರ್ಹವಾದ ಸಂಶೋಧನೆಗಳನ್ನು ನಡೆಸಿದರು. ಮುಖ್ಯವಾಗಿ 'ಶೂನ್ಯ' ಸಂಕೇತ, ದಶಮಾಂಶದ ಉಪಯೋಗ, 'ಋಣ' ಸಂಕೇತದ ಉಪಯೋಗ, ತಿಳಿಯದ ಮೊತ್ತವನ್ನು ತಿಳಿಸಲು ವರ್ಣಮಾಲೆಯ ಅಕ್ಷರಗಳನ್ನು ಬೀಜಗಣಿತದಲ್ಲಿ ಉಪಯೋಗಿಸುವುದು–ಅವರಿಗೆ ತಿಳಿದಿತ್ತು. ಈ ಸಂಶೋಧನೆಗಳಿಗೂ ಅವುಗಳ ವಾಸ್ತವಿಕ ಉಪಯೋಗಕ್ಕೂ ಬಹಳ ಅಂತರವಿರುತ್ತಿದ್ದುದರಿಂದ ಈ ಸಂಶೋಧನಗಳ ಕಾಲನಿರ್ಣಯವು ಬಹಳ ಕಷ್ಟ. ಆದರೆ, ಗಣಿತ, ಬೀಜಗಣಿತ, ರೇಖಾಗಣಿತಗಳ ಆರಂಭದಶೆಯು ಅತಿ ಪ್ರಾಚೀನ ಎಂಬುದು ಮಾತ್ರ ಸ್ಪಷ್ಟವಿದೆ. 'ದಶಮ'ವು ಋಗ್ವೇದ ಕಾಲದಲ್ಲಿ ಸಹ ಗಣಿಕೆಯ ಆಧಾರವಾಗಿತ್ತು. ಅತ್ಯುನ್ನತ ಸಂಖ್ಯೆಗಳಿಗೆ ಅನೇಕ ಹೆಸರುಗಳನ್ನು ಕಂಡು ಹಿಡಿದಿದ್ದರು. ಪ್ರಾಚೀನ ಭಾರತೀಯರ ಕಾಲ ಮತ್ತು ಸಂಖ್ಯಾಭಾವನೆ ಅತ್ಯದ್ಭುತವಾದುದು. ಸಾವಿರ ಅಥವ ಹತ್ತುಸಾವಿರಕ್ಕಿಂತ ಹೆಚ್ಚಿನ ಸಂಖ್ಯೆಗಳಿಗೆ ಗ್ರೀಕರು, ರೋಮನರು, ಪಾರಸಿಕರು, ಅರಬ್ಬರಿಗೆ ಯಾವ ಹೆಸರುಗಳೂ ಗೊತ್ತಿರಲಿಲ್ಲ. ಭಾರತದಲ್ಲಿ ನಿರ್ದಿಷ್ಟವಾದ ೧೮ ಹೆಸರುಗಳಿದ್ದವು—$೧೦^{೧೮}$ ರ ವರಗೆ ಅಥವ ಇನ್ನೂ ಹೆಚ್ಚಾಗಿ. ಬುದ್ಧನ ವಿದ್ಯಾರ್ಥಿದೆಸೆಯಲ್ಲಿ ಆತನು $೧೦^{೫೦}$ ರ ವರಗಿನ ಸಂಖ್ಯೆಗಳ ಹೆಸರುಗಳನ್ನು ಹೇಳುತ್ತಿದ್ದನಂತೆ.

ಅದೇ ರೀತಿ ಇನ್ನೊಂದು ಕಡೆ ಕಾಲವನ್ನು ಅತಿ ಸೂಕ್ಷ್ಮವಾಗಿ ಅಂದರೆ ಸುಮಾರು ೧/೧೭ ನೆಯ ಸೆಕೆಂಡಿನಷ್ಟರ ವರೆಗೆ ವಿಭಾಗಿಸಿದ್ದರು. ಉದ್ದದಲ್ಲಿ ಅತಿ ಸೂಕ್ಷ್ಮಪ್ರಮಾಣವೆಂದರೆ ೧.೩ x $೭^{-೧೦}$ ಅಂಗುಲದಷ್ಟಾಗಿತ್ತು. ಈ ಮಹತ್ಸಂಖ್ಯೆಯೂ, ಅಲ್ಪಸಂಖ್ಯೆಯೂ ಕೇವಲ ಊಹಾಪೂರ್ಣವಿದ್ದರೂ ತಾತ್ವಿಕ ಉದ್ದೇಶಗಳಿಗಾಗಿ ಉಪಯೋಗಿಸುತ್ತಿದ್ದರು. ಏನೇ ಆಗಲಿ ಪ್ರಾಚೀನ ಭಾರತೀಯರು ಕಾಲ, ದೇಶಗಳ ವಿಚಾರದಲ್ಲಿ ಇತರ ಯಾವ ಜನಾಂಗಗಳಲ್ಲಿಯೂ ಕಾಣದ ಬೃಹತ್ ಕಲ್ಪನೆಗಳನ್ನು ಇಟ್ಟುಕೊಂಡು ಇದ್ದರು. ಅವರ ಮಾರ್ಗ ದೊಡ್ಡದು. ಭಾವನೆಗಳೂ ದೊಡ್ಡವು. ಅವರ ಪುರಾಣ ಕತೆಗಳಲ್ಲಿ ಸಹ ಕೋಟ್ಯನುಕೋಟಿ ವರ್ಷಗಳ ಕಾಲದ ಐತಿಹ್ಯ. ಆಧುನಿಕ ಭೂಗರ್ಭಶಾಸ್ತ್ರದ ಕಾಲ ಗಳಿಂದ ಆಗಲಿ ಅಥವ ಖಗೋಳಶಾಸ್ತ್ರದ ದೂರಗಳಿಂದ ಆಗಲಿ ಖಂಡಿತವಾಗಿಯೂ ಅವರು ಬೆರಗಾಗು ತ್ತಿರಲಿಲ್ಲ. ಈ ಒಂದು ಹಿನ್ನೆಲೆಯಿಂದಲೇ ಡಾರ್ವಿನ್ ತತ್ವ ಅಥವ ಇತರ ಕ್ರಾಂತಿಕಾರಕ ತತ್ವಗಳಿಂದ ಯೂರೋಪ್ ದೇಶದಲ್ಲಿ ಹತ್ತೊಂಭತ್ತನೆಯ ಶತಮಾನದ ಮಧ್ಯಕಾಲದಲ್ಲಾದಂತೆ ಇಂಡಿಯದಲ್ಲಿ ವಿಪ್ಲವಗಳೂ, ಅಂತಃಕಲಹಗಳೂ ಆಗಿಲ್ಲ. ಯೂರೋಪಿನ ಜನಮನದ ಕಾಲಪರಿಮಿತಿ ಕೆಲವು ಸಾವಿರ ವರ್ಷಗಳನ್ನು ಮೀರಿರಲಿಲ್ಲ.

'ಅರ್ಥಶಾಸ್ತ್ರ'ದಲ್ಲಿ ಕ್ರಿಸ್ತಪೂರ್ವ ನಾಲ್ಕನೆಯ ಶತಮಾನದಲ್ಲಿಯೇ ಉತ್ತರ ಹಿಂದೂಸ್ಥಾನದಲ್ಲಿ ಬಳಕೆಯಲ್ಲಿದ್ದ ತೂಕ ಮತ್ತು ಅಳತೆಯ ಪ್ರಮಾಣಗಳನ್ನು ಕೊಟ್ಟಿದೆ. ಪೇಟೆಗಳಲ್ಲಿ ತೂಕಗಳನ್ನು ಬಹಳ ದಕ್ಷತೆಯಿಂದ ಪರೀಕ್ಷಿಸುತ್ತಿದ್ದರು.

ಮಹಾಕಾವ್ಯಗಳ ಕಾಲದಲ್ಲಿ ಪಟ್ಟಣ ಅಥವ ನಗರಗಳಿಂದ ಸ್ವಲ್ಪ ದೂರದಲ್ಲಿ ಸೈನ್ಯ ಶಿಕ್ಷಣವೂ ಸೇರಿ ಎಲ್ಲ ಬಗೆಯ ಶಿಕ್ಷಣ ಮತ್ತು ವಿದ್ಯಾರ್ಜನೆಗಾಗಿ ವಿದ್ಯಾರ್ಥಿಗಳು ಬಂದು ಸೇರುತ್ತಿದ್ದ ಪ್ರಸಿದ್ಧ ರಾದ ಗುರುಗಳ ಅರಣ್ಯಾಶ್ರಮಗಳ ವಿಶ್ವವಿದ್ಯಾನಿಲಯಗಳಿದ್ದುವೆಂದು ಅನೇಕ ಕಡೆ ಉಲ್ಲೇಖವಿದೆ. ವಿದ್ಯಾರ್ಥಿಗಳು ಇಂದ್ರಿಯನಿಗ್ರಹ ಮತ್ತು ಕ್ರಮಜೀವನವನ್ನು ನಡೆಸಲು ಅನುಕೂಲವಾಗಿರಲೆಂದೂ ಮತ್ತು ನಗರಜೀವನದ ಮೋಹಕ್ಕೆ ಬಲಿಬೀಳದಿರಲೆಂದೂ ಈ ಅರಣ್ಯಾಶ್ರಮಗಳಿಗೆ ಹೆಚ್ಚು ಪುರಸ್ಕಾರ ವಿತ್ತು. ಯುವಕರು ಕೆಲವು ವರ್ಷಗಳು ಈರೀತಿ ಶಿಕ್ಷಣ ಪಡೆದ ಮೇಲೆ ಹಿಂದಿರುಗಿ ಗೃಹಸ್ಥಾಶ್ರಮಿ ಗಳಾಗಿ, ರಾಷ್ಟ್ರಕರಾಗಿ ಜೀವನ ನಡೆಸುತ್ತಿದ್ದರು. ಪ್ರಾಯಶಃ ಈ ಆಶ್ರಮಗಳಲ್ಲಿ ಬಹಳ ಸ್ವಲ್ಪ ಜನರು ಇರುತ್ತಿದ್ದರು ; ಆದರೆ ಗುರುವಿನ ಮಹತ್ವದಿಂದ ವಿಶೇಷವಾಗಿ ಶಿಷ್ಯರು ಕಲೆಯುತ್ತ ಇದ್ದರು.

ಕಾಶಿಯೂ ಅನಾದಿಯಿಂದ ಒಂದು ವಿದ್ಯಾಪೀಠವಾಗಿದೆ; ಬುದ್ಧನ ಕಾಲದಲ್ಲಿಯೇ ಬಹಳ ಪ್ರಸಿದ್ಧವಾದ ಪ್ರಾಚೀನ ಜ್ಞಾನ ಕೇಂದ್ರವೆಂದು ಹೆಸರಾಗಿತ್ತು. ಕಾಶಿನಗರದ ಬಳಿ ಹರಿಣೋದ್ಯಾನ (Deer Park) ದಲ್ಲಿ ಬುದ್ಧನು ತನ್ನ ಮೊದಲ ಉಪದೇಶವನ್ನು ಬೋಧಿಸಿದ್ದು. ಆದರೆ ಆಗಿನ ಕಾಲದಲ್ಲಿ ಮತ್ತು ಈಚೆಗೆ ಭಾರತದ ಇತರ ಕಡೆಗಳಲ್ಲಿ ಇದ್ದ ವಿಶ್ವವಿದ್ಯಾನಿಲಯಗಳಂತೆ ಕಾಶಿ ಎಂದೂ ಒಂದು ವಿಶ್ವವಿದ್ಯಾನಿಲಯವಾಗಿ ಇರಲಿಲ್ಲ. ಒಬ್ಬ ಗುರು ಮತ್ತು ಆತನ ಶಿಷ್ಯರು ಈ ರೀತಿ ಅನೇಕ ಪಂಗಡಗಳು ಅಲ್ಲಿದ್ದಂತೆಯೂ, ಈ ಪಂಗಡಗಳ ಮಧ್ಯೆ, ವಾಗ್ಯುದ್ಧವೂ, ವಾದಗಳೂ ನಡೆಯುತ್ತಿದ್ದಂತೆಯೂ ತೋರುತ್ತದೆ.

ಆದರೆ ವಾಯವ್ಯದಲ್ಲಿ, ಈಗಿನ ಪೆಷಾವರ್ ಬಳಿ ಪುರಾತನವೂ, ಸುಪ್ರಸಿದ್ಧವೂ ಆದ ತಕ್ಷಶಿಲ ವಿಶ್ವವಿದ್ಯಾನಿಲಯವಿತ್ತು. ಅದು ವಿಜ್ಞಾನ, ಮುಖ್ಯವಾಗಿ ವೈದ್ಯವಿದ್ಯೆ, ಮತ್ತು ಕಲೆಗಳಿಗಾಗಿ ಬಹಳ ಪ್ರಸಿದ್ಧವಿತ್ತು. ಭಾರತದ ಮೂಲೆ ಮೂಲೆಗಳಿಂದ ವಿದ್ಯಾರ್ಥಿಗಳು, ಅಲ್ಲಿಗೆ ಬರುತ್ತಿ ದ್ದರು. ಜಾತಕ ಕಥೆಗಳಲ್ಲಿ ಶ್ರೀಮಂತರ ಮಕ್ಕಳು ಮತ್ತು ಬ್ರಾಹ್ಮಣರು ಯಾವ ರಕ್ಷಕರೂ ಇಲ್ಲದೆ ನಿಶ್ಶಸ್ತ್ರರಾಗಿ ವಿದ್ಯಾರ್ಜನೆಗಾಗಿ ತಕ್ಷಶಿಲೆಗೆ ಹೋಗುತ್ತಿದ್ದ ನಿದರ್ಶನಗಳಿವೆ. ಬಹಳ ಅನು ಕೂಲ ಸ್ಥಾನದಲ್ಲಿದ್ದ ಕಾರಣ ಪ್ರಾಯಶಃ ಮಧ್ಯ ಏಷ್ಯ ಮತ್ತು ಅಫ್ಘಾನಿಸ್ಥಾನದಿಂದಲೂ ವಿದ್ಯಾರ್ಥಿ ಗಳು ಬರುತ್ತಿದ್ದಿರಬೇಕು. ತಕ್ಷಶಿಲ ವಿಶ್ವವಿದ್ಯಾನಿಲಯದ ವಿದ್ಯಾರ್ಥಿ ಎನ್ನುವದು ಒಂದು ಗೌರವ ಮತ್ತು ದೊಡ್ಡ ಪ್ರಶಸ್ತಿಯಾಗಿತ್ತು. ಅಲ್ಲಿಯ ವೈದ್ಯ ಶಾಲೆಯಲ್ಲಿ ಶಿಕ್ಷಣಪಡೆದ ವೈದ್ಯರಿಗೆ ಬಹಳ

ಬೆಳೆಯಿತ್ತು. ಬುದ್ಧನಿಗೆ ಕಾಯಿಲೆಯಾದರೆ ಯಾವಾಗಲೂ ತಕ್ಷಶಿಲೆಯಲ್ಲಿ ಶಿಕ್ಷಣ ಪಡೆದ ಪ್ರಸಿದ್ಧ ವೈದ್ಯರನ್ನು ಕರೆತರುತ್ತಿದ್ದರಂತೆ ಕ್ರಿಸ್ತ ಪೂರ್ವ ಆರು ಮತ್ತು ಏಳನೆ ಶತಮಾನಗಳಲ್ಲಿದ್ದ ಮಹಾ ವೈಯಾಕರಣಿ ಪಾಣಿನಿ ತಕ್ಷಶಿಲೆಯಲ್ಲಿ ಓದಿದ್ದನಂತೆ.

ತಕ್ಷಶಿಲೆ ಈ ರೀತಿ ಬುದ್ಧನ ಕಾಲದ ಪೂರ್ವದ ವಿಶ್ವವಿದ್ಯಾನಿಲಯ ಮತ್ತು ಬ್ರಾಹ್ಮಣ ಸಂಸ್ಕೃತಿಯ ಜ್ಞಾನ ಕೇಂದ್ರ. ಬುದ್ಧನ ಕಾಲದಲ್ಲಿ ಬೌದ್ಧ ವಿದ್ವಾಂಸರಿಗೂ ಅದು ಕೇಂದ್ರವಾಗಿ ಭಾರತದ ಎಲ್ಲ ಕಡೆಗಳಿಂದ ಮತ್ತು ಪರರಾಷ್ಟ್ರಗಳಿಂದ ಬೌದ್ಧ ವಿದ್ಯಾರ್ಥಿಗಳು ಬರುತ್ತಿದ್ದರು. ಅದು ಮೌರ್ಯ ಸಾಮ್ರಾಜ್ಯದ ವಾಯುವ್ಯ ಪ್ರಾಂತ್ಯದ ರಾಜಧಾನಿಯಾಗಿತ್ತು.

ಶಾಸನಕಾರರಲ್ಲಿ ಮೊದಲಿಗನಾದ ಮನುವಿನಂತೆ ಮಹಿಳೆಯರ ಸ್ಥಿತಿಯು ಬಹಳ ಕೀಳಾಗಿತ್ತು. ಅವರು ಯಾರನ್ನಾದರೂ—ತಂದೆ, ಗಂಡ ಅಥವ ಮಗನನ್ನು ಅವಲಂಬಿಸಿಯೇ ಇರಬೇಕಾಗಿತ್ತು. ಧರ್ಮ ಶಾಸ್ತ್ರದ ಪ್ರಕಾರ ಅವರೂ ಇತರ ವಸ್ತುಗಳಂತೆ. ಆದರೂ ಪುರಾಣ ಮಹಾಕಾವ್ಯಗಳ ಅನೇಕ ಕತೆಗಳಲ್ಲಿ ಕಾಣುವಂತೆ ಆ ನಿಯಮವು ಅಷ್ಟು ಕಠಿಣವಾಗಿ ಆಚರಣೆಯಲ್ಲಿರಲಿಲ್ಲ; ಮನೆ ಮತ್ತು ಸಮಾಜದಲ್ಲಿ ಆಕೆಗೆ ಒಳ್ಳೆಯ ಗೌರವವಿತ್ತು. ಅದೇ ಶಾಸನಕರ್ತ ಮನುವು "ಸ್ತ್ರೀಯರಿಗೆ ಎಲ್ಲಿ ಮನ್ನಣೆ ಇದೆಯೋ ಅಲ್ಲಿ ದೈವ ಸಾನ್ನಿಧ್ಯವಿದೆ" ಎಂದಿದ್ದಾನೆ. ತಕ್ಷಶಿಲೆ ಅಥವ ಇತರ ಪುರಾತನ ವಿಶ್ವವಿದ್ಯಾನಿಲಯಗಳಲ್ಲಿ ಸ್ತ್ರೀ ವಿದ್ಯಾರ್ಥಿಗಳು ವಿದ್ಯಾರ್ಜನೆ ಮಾಡುತ್ತಿದ್ದಂತೆ ಕಾಣುವುದಿಲ್ಲ. ಆದರೆ ಅವರಲ್ಲಿ ಕೆಲವರು ಎಲ್ಲಿಯೋ ವಿದ್ಯಾರ್ಜನೆ ಮಾಡಿರಬೇಕು; ಅನೇಕ ಕಡೆ ಬಹಳ ವಿದ್ಯಾವತಿಯರೂ ಮಹಾಜ್ಞಾನಿಗಳೂ ಆದ ಸ್ತ್ರೀಯರ ಹೆಸರು ಬಂದಿದೆ. ಆಮೇಲೆ ಸಹ ಅನೇಕ ಘನವಿದ್ಯಾವತಿಯರಾದ ಮಹಿಳೆಯರ ಹೆಸರು ಬಂದಿದೆ. ಆಮೇಲೆ ಸಹ ಅನೇಕ ಘನವಿದ್ಯಾವತಿಯರಾದ ಮಹಿಳೆಯರ ಹೆಸರನ್ನು ಕಾಣುತ್ತೇವೆ. ಪ್ರಾಚೀನ ಭಾರತದಲ್ಲಿ ಮಹಿಳೆಯ ಸ್ಥಾನ ಹೀನಸ್ಥಿತಿಯಲ್ಲಿದ್ದರೂ ಇಂದಿನ ದೃಷ್ಟಿಯಿಂದ ನೋಡಿದರೆ ಪ್ರಾಚೀನ ಗ್ರೀಸ್, ರೋಮ್, ಕ್ರೈಸ್ತಮತ ಮಧ್ಯಯುರೋಪಿನ ಕ್ಯಾನನ್‌ಶಾಸನ, ಅಷ್ಟೇ ಏಕೆ, ೧೯ನೆಯ ಶತಮಾನದ ಆದಿ ಭಾಗದ ಆಧುನಿಕ ಕಾಲದವರೆಗಿನ ಯುರೋಪಿನ ಮಹಿಳೆಯರ ಸ್ಥಿತಿಗಿಂತ ಉತ್ತಮವಾಗಿತ್ತು.

ಮನು ಮತ್ತು ಈಚಿನ ಶಾಸನಕರ್ತರೆಲ್ಲ ವ್ಯಾಪಾರದಲ್ಲಿ ವಿವಿಧ ಪಾಲುಗಾರಿಕೆ ಕ್ರಮಗಳನ್ನು ತಿಳಿಸಿದ್ದಾರೆ. ಮನು ಹೇಳುವದು ಧರ್ಮಗುರುಗಳ ವಿಷಯ ಮಾತ್ರ. ಯಾಜ್ಞವಲ್ಕ್ಯನು ವ್ಯಾಪಾರ ಮತ್ತು ವ್ಯವಸಾಯ ವಿಷಯಗಳಲ್ಲೂ ಪಾಲುಗಾರಿಕೆ ಇತ್ತೆಂದು ಹೇಳುತ್ತಾನೆ. ಅದರಿಂದೀಚಿನ ನಾರದನು "ಪ್ರತಿಯೊಬ್ಬ ಪಾಲುದಾರನ ನಷ್ಟ, ವೆಚ್ಚ, ಲಾಭವು ಅವನ ಬಂಡವಾಳದ ಪ್ರಮಾಣಕ್ಕನುಸಾರವಾಗಿ ಸಮ, ಹೆಚ್ಚು ಅಥವ ಕಡಮೆ ಇರುತ್ತದೆ ಎಂದಿದ್ದಾನೆ. ಸಂಗ್ರಹ, ಆಹಾರ, ಜಕಾತಿ ನಷ್ಟ, ಬಾಡಿಗೆ, ರಕ್ಷಣೆಗಳ ವೆಚ್ಚವನ್ನು ಪ್ರತಿಯೊಬ್ಬ ಪಾಲುದಾರನೂ ತನ್ನ ಒಪ್ಪಂದದಂತೆ ಕೊಡಬೇಕು" ಎಂದು ಹೇಳಿದ್ದಾನೆ.

ಮನುವಿನ ಭಾವನೆಯಂತೆ ಆ ಕಾಲದ ರಾಜ್ಯವೆಂದರೆ ಒಂದು ಸಣ್ಣ ರಾಜ್ಯ. ಈ ಕಲ್ಪನೆಯು ಬೆಳೆಯುತ್ತಿತ್ತು. ಬದಲಾವಣೆಯಾಗುತ್ತಿತ್ತು. ಕೊನೆಕೊನೆಗೆ ಕ್ರಿಸ್ತಪೂರ್ವ ನಾಲ್ಕನೆಯ ಶತಮಾನದ ಮೌರ್ಯ ಚಕ್ರಾಧಿಪತ್ಯಕ್ಕೂ, ಮತ್ತು ಗ್ರೀಕರೊಂದಿನ ಅಂತರರಾಷ್ಟ್ರೀಯ ಬಾಂಧವ್ಯಕ್ಕೂ ಅನ್ವಯಿಸಿತು.

ಭಾರತದಲ್ಲಿ ಕ್ರಿಸ್ತಪೂರ್ವ ನಾಲ್ಕನೆಯ ಶತಮಾನದಲ್ಲಿ ರಾಯಭಾರಿಯಾಗಿದ್ದ ಮೆಗಾಸ್ತನೀಸ್ ಭಾರತದಲ್ಲಿ ದಾಸ್ಯ ಪದ್ಧತಿಯೇ ಇಲ್ಲ ಎಂದು ಸ್ಪಷ್ಟ ಹೇಳಿದ್ದಾನೆ. ಆದರೆ ಇದು ತಪ್ಪು. ಮನೆ ಆಳುತನದ ದಾಸ್ಯವಿತ್ತು ಮತ್ತು ಭಾರತೀಯ ಗ್ರಂಥಗಳಲ್ಲಿ ದಾಸ್ಯ ಜೀವನವನ್ನು ಉತ್ತಮಪಡಿಸಬೇಕೆಂದು ಹೇಳಿದೆ. ಈ ದಾಸ್ಯಪದ್ಧತಿ ವಿಶೇಷ ಪ್ರಮಾಣದಲ್ಲಿರಲಿಲ್ಲ. ಶ್ರಮ ಜೀವನಕ್ಕಾಗಿ ಆಗ ಅನೇಕ ದೇಶಗಳಲ್ಲಿದ್ದಂತೆ ಗುಲಾಮರ ಪಡೆಗಳಿರಲಿಲ್ಲ. ಪ್ರಾಯಶಃ ಈ ಕಾರಣದಿಂದ ಮೆಗಾಸ್ತನೀಸ್ ಭಾರತದಲ್ಲಿ ದಾಸ್ಯವಿರಲಿಲ್ಲ ಎಂದು ಹೇಳಿರಬಹುದು. "ಆರ್ಯನನ್ನು ದಾಸ್ಯಕ್ಕೆಂದೂ ತಳ್ಳ ಬಾರದು" ಎಂಬುದು

ಒಂದು ನಿಯಮವಾಗಿತ್ತು. ಆರ್ಯನಾರು, ಅನಾರ್ಯನಾರು ಎಂದು ಹೇಳುವುದು ಕಷ್ಟ. ಆದರೆ ಆಗಿನ ಕಾಲದಲ್ಲಿ ಆರ್ಯರೆಂದರೆ ಮೂಲ ಚಾತುರ್ವರ್ಣಗಳು ಎಂದು ಹೇಳಬಹುದು. ಆದರಲ್ಲಿ ಶೂದ್ರರೂ ಸೇರಿದ್ದರು, ಆದರೆ ಅಸ್ಪೃಶ್ಯರು ಸೇರಿರಲಿಲ್ಲ.

ಚೀನದಲ್ಲಿ ಸಹ ಪ್ರಾಚೀನ ಹಾನ್‌ವಂಶದ ಕಾಲದ ಆರಂಭದಿನಗಳಲ್ಲಿ ಮುಖ್ಯವಾಗಿ ಮನೆಕೆಲಸಕ್ಕೆ ಗುಲಾಮರಿದ್ದರು. ವ್ಯವಸಾಯ ಮತ್ತು ದೊಡ್ಡ ಕಾಮಗಾರಿಗಳಲ್ಲಿ ಅವರನ್ನು ಉಪಯೋಗಿಸುತ್ತಿರಲಿಲ್ಲ. ಭಾರತ ಮತ್ತು ಚೀನ ಎರಡು ದೇಶಗಳಲ್ಲೂ ಈ ಮನೆಯ ಜೀತದಾಳುಗಳು ಒಟ್ಟು ಜನಸಂಖ್ಯೆಯ ಪ್ರಮಾಣದಲ್ಲಿ ಅತ್ಯಲ್ಪ. ಈ ಮುಖ್ಯ ದೃಷ್ಟಿಯಿಂದ ಭಾರತೀಯ ಮತ್ತು ಚೀನೀ ಸಮಾಜಕ್ಕೂ ಪ್ರಾಚೀನ ಗ್ರೀಕ್ ಮತ್ತು ರೋಮನ್ ಸಮಾಜಕ್ಕೂ ಬಹಳ ಅಂತರವಿತ್ತು.

ಆ ಪುರಾತನ ಕಾಲದಲ್ಲಿ ಭಾರತೀಯರು ಹೇಗೆ ಇದ್ದರು ? ಅಷ್ಟು ದೂರದ ಮತ್ತು ಅನೇಕ ವಿಧದಲ್ಲಿ ಇಂದಿಗಿಂತ ಭಿನ್ನವಿರುವ ಕಾಲದ ಚಿತ್ರವು ಕಲ್ಪನೆಗೆ ಸಹ ಕಷ್ಟ. ಆದರೂ ನಮಗೆ ದೊರೆತಿರುವ ನಾನಾವಿಧ ಅಂಶಗಳಿಂದ ಒಂದು ಮಸಕು ಚಿತ್ರವನ್ನು ಊಹಿಸಬಹುದು. ಅವರು ಹಗುರ ಮನಸ್ಸಿನವರೂ ಆತ್ಮನಂಬಿಕೆಯುಳ್ಳವರೂ ತಮ್ಮ ಶಿಷ್ಟಾಚಾರಗಳಲ್ಲಿ ಗೌರವವಿಟ್ಟವರೂ, ಅವ್ಯಕ್ತದ ಸಂಶೋಧನೆಯಲ್ಲಿ ಆಸಕ್ತರೂ ಪ್ರಕೃತಿ ಮತ್ತು ಮಾನವ ಜೀವನದ ಸಮಸ್ಯೆಗಳನ್ನು ಪ್ರಶ್ನಿಸಿ ವಿಚಾರ ಮಾಡುವವರೂ, ತಾವು ಸೃಜಿಸಿದ ಪರಿಮಿತಿ ಮತ್ತು ಮೌಲ್ಯಕ್ಕೆ ಬಹು ಬೆಲೆ ಕೊಡುವವರೂ, ಆದರೂ ಸುಖಜೀವಿಗಳೂ, ಸಂತೋಷಪುರುಷರೂ, ಮರಣಕ್ಕೆ ಅಂಜದವರೂ ಆಗಿದ್ದರು ಎಂದು ಹೇಳಬಹುದು. ಉತ್ತರ ಹಿಂದೂಸ್ಥಾನದಲ್ಲಿ ಅಲೆಕ್ಸಾಂಡರನ ದಂಡಯಾತ್ರೆಯ ಚರಿತ್ರಕಾರನಾದ ಆರ್ರಿಯನ್ ಭಾರತೀಯರ ಹಗುರ ಜೀವನವನ್ನು ಕಂಡು ತುಂಬ ಆಶ್ಚರ್ಯಪಟ್ಟು " ಭಾರತೀಯರಷ್ಟು ಸಂಗೀತಪ್ರಿಯ, ನಾಟ್ಯಪ್ರಿಯ ಜನಾಂಗ ಬೇರೊಂದಿಲ್ಲ " ಎಂದಿದ್ದಾನೆ.

## ೧೬ ಮಹಾವೀರ ಮತ್ತು ಬುದ್ಧ: ಜಾತಿ

ಪುರಾಣ ಮಹಾಕಾವ್ಯಗಳ ಕಾಲದಿಂದ ಬುದ್ಧನ ಕಾಲದವರೆಗೆ ಉತ್ತರ ಹಿಂದೂ ಸ್ಥಾನದಲ್ಲಿ ಈ ಬಗೆಯ ಒಂದು ಹಿನ್ನೆಲೆ ಇತ್ತು. ರಾಜಕೀಯದಲ್ಲಿ ಆರ್ಥಿಕ ದೃಷ್ಟಿಯಲ್ಲಿ ಅದು ಸದಾ ವ್ಯತ್ಯಾಸಗೊಳ್ಳುತ್ತಾಯಿತ್ತು. ಮತ್ತು ಸಂಘಟನೆ ಮತ್ತು ಸಂಸೃಷ್ಟಿ ಜೀವನ ಮತ್ತು ಔದ್ಯೋಗಿಕ ಪ್ರಾವೀಣ್ಯತೆಯೂ ಮುಂದುವರಿಯುತ್ತಲೇ ಇದ್ದವು. ಭಾವನಾ ಪ್ರಪಂಚದಲ್ಲಿ ವಿಕಾಸವೂ ಇನ್ನು ಕೆಲವು ವೇಳೆ ಘರ್ಷಣೆಗಳೂ ಆಗುತ್ತಲೇ ಇದ್ದವು. ಉಪನಿಷತ್ತುಗಳ ತರುವಾಯ ಅನೇಕ ಮಾರ್ಗಗಳಲ್ಲಿ ಜ್ಞಾನ ಮತ್ತು ಕ್ರಿಯಾಸಕ್ತಿಯ ಅಭಿವೃದ್ಧಿಯು ನಡೆಯುತ್ತಲೇ ಇತ್ತು. ಪೌರೋಹಿತ್ಯ ಮತ್ತು ಕರ್ಮ ಕಾಂಡಗಳಿಗೆ ಈ ಆಸಕ್ತಿಗಳೇ ಪ್ರತಿಕ್ರಿಯೆಗಳಾದವು. ತಮ್ಮ ಕಣ್ಣೆದುರಿನ ಅನೇಕ ವಿಷಯಗಳನ್ನು ಕಂಡು ಅಸಹ್ಯಪಟ್ಟುಕೊಂಡ ಮಾನವ ಮನಸ್ಸಿನಲ್ಲುಂಟಾದ ಕ್ರಾಂತಿಯ ಫಲವಾಗಿ ಉಪನಿಷತ್ತುಗಳು ಉದ್ಭವಿಸಿದವು. ಸ್ವಲ್ಪ ದಿನಗಳ ನಂತರ ಅದೇ ಕಾರಣದಿಂದ ಚಾರ್ವಾಕಮತ, ಜೈನಮತ, ಬೌದ್ಧಮತಗಳ ಉದ್ಭವವೂ ಮತ್ತು ಭಗವದ್ಗೀತೆಯಲ್ಲಿ ಆಗ ಬಳಕೆಯಲ್ಲಿದ್ದ ಎಲ್ಲ ವಿವಿಧ ಧರ್ಮಾಚರಣೆಗಳ ಸಂಘಟನ ಸಮನ್ವಯ ಪ್ರಯತ್ನವೂ ನಡೆಯಿತು. ಈ ಎಲ್ಲ ಪ್ರಯತ್ನಗಳ ಫಲವಾಗಿ ಭಾರತೀಯ ಷಡ್ದರ್ಶನಗಳು ಹುಟ್ಟಿದವು. ಆದರೆ, ಈ ಎಲ್ಲ ಮಾನಸಿಕ ಹೋರಾಟ ಮತ್ತು ಕ್ರಾಂತಿಯ ಹಿಂದೆ ಒಂದು ಸ್ಪಷ್ಟವಾದ ಪ್ರಗತಿಪರ ರಾಜಕೀಯ ಜೀವನವು ನಡೆದುಬಂದಿತ್ತು.

ಜೈನ ಮತ್ತು ಬೌದ್ಧ ಮತಗಳೆರಡೂ ಒಂದು ದೃಷ್ಟಿಯಿಂದ ವೈದಿಕ ಧರ್ಮದಿಂದಲೇ ಹುಟ್ಟಿದ್ದರೂ, ಅದಕ್ಕಿಂತ ಭಿನ್ನವಾದ ಧರ್ಮಗಳು ಮತ್ತು ಅದರ ಕವಲುಗಳು. ವೇದ ಪ್ರಾಮಾಣ್ಯವನ್ನು ಅವು ಒಪ್ಪುವುದಿಲ್ಲ. ಎಲ್ಲಕ್ಕೂ ಮುಖ್ಯವಾಗಿ ಕಾರಣ, ಮೂಲ ಒಂದು ಇದೆ ಎನ್ನುವುದನ್ನೇ ಅವರು ಒಪ್ಪುವುದಿಲ್ಲ. ಅಥವ ಆ ವಿಷಯವಾಗಿ ಏನನ್ನೂ ಹೇಳುವುದಿಲ್ಲ. ಎರಡರಲ್ಲೂ ಅಹಿಂಸೆಗೆ ಮತ್ತು ಬ್ರಹ್ಮಚಾರಿಗಳಾದ ಸನ್ಯಾಸಿಗಳಿಗೆ ಮತ್ತು ಭಿಕ್ಷುಗಳಿಗೆ ಪ್ರಾಧಾನ್ಯ. ಎರಡು ಧರ್ಮಗಳ ಪ್ರವೇಶದಲ್ಲೂ

ಒಂದು ವಿಧವಾದ ವಾಸ್ತವಿಕತೆ ಮತ್ತು ವಿಚಾರ ದೃಷ್ಟಿ ಇದೆ. ಅದೃಷ್ಟ ಪ್ರಪಂಚದ ವಿಷಯ ನಾವು ಚರ್ಚಿಸುವಾಗ ಇಷ್ಟೇ ಸಾಲದು ನಿಜ. ಸತ್ಯ ನಮ್ಮ ನಿಲುವಿಗೆ ಸಾಪೇಕ್ಷ ಎನ್ನುವುದು ಜೈನಧರ್ಮದ ಮೂಲ ತತ್ವಗಳಲ್ಲಿ ಒಂದು. ಜೀವನ ಮತ್ತು ಭಾವನೆಗಳಲ್ಲಿ ಸಂನ್ಯಾಸ ಮಾರ್ಗಕ್ಕೆ ಅತಿ ಪ್ರಾಮುಖ್ಯತೆ ಕೊಟ್ಟ ಅತೀಂದ್ರವಲ್ಲದ ಮತ್ತು ಅತಿ ಕಠಿಣವಾದ ನೈತಿಕ ಧರ್ಮ ಅದು.

ಜೈನ ಧರ್ಮ ಸಂಸ್ಥಾಪಕನಾದ ಮಹಾವೀರ ಮತ್ತು ಬೌದ್ಧಧರ್ಮ ಸಂಸ್ಥಾಪಕನಾದ ಬುದ್ಧ ಇಬ್ಬರೂ ಸಮಕಾಲೀನರು ಮತ್ತು ಕ್ಷತ್ರಿಯವಂಶದವರು. ಬುದ್ಧ ಕ್ರಿಸ್ತಪೂರ್ವ ೫೪೪ ರಲ್ಲಿ ತನ್ನ ಎಂಭತ್ತನೆಯ ವಯಸ್ಸಿನಲ್ಲಿ ಕಾಲವಾದನು. ಬೌದ್ಧಯುಗದ ಆರಂಭವೂ ಅಂದಿನಿಂದ. ಇದು ಸಾಂಪ್ರದಾಯಿಕ ಕಾಲ. (ಐತಿಹಾಸಿಕರು ಇನ್ನೂ ಸ್ವಲ್ಪ ಈಚೆಗೆ, ಕ್ರಿಸ್ತಪೂರ್ವ ೪೮೭ರಲ್ಲಿ ಎಂದು ಹೇಳುತ್ತಾರೆ. ಆದರೆ ಈಗ ಅವರೂ ಸಹ ಸಾಂಪ್ರದಾಯಿಕ ಕಾಲನಿರ್ಣಯವೇ ಸರಿ ಎಂದು ಒಪ್ಪಿದ್ದಾರೆ.) ಬೌದ್ಧಯುಗದ ೨೫೦೦ನೆಯ ವರ್ಷದ ಯುಗಾದಿ ಹಬ್ಬದ ದಿನ 'ವೈಶಾಖ ಪೌರ್ಣಿಮೆ' ಎಂದು ಪ್ರಸಿದ್ಧವಾದ ವೈಶಾಖ ಶುದ್ಧ ಹುಣ್ಣಿಮೆಯ ದಿನ ಇದನ್ನು ಬರೆಯುತ್ತಿರುವುದು ಒಂದು ವಿಶೇಷ. ಬುದ್ಧನು ಹುಟ್ಟಿದ್ದೂ, ಆತನಿಗೆ ಜ್ಞಾನದರ್ಶನವಾದದ್ದೂ ಮತ್ತು ಕೊನೆಯಲ್ಲಿ ಕಾಲವಾದದ್ದೂ ವೈಶಾಖ ಶುಕ್ಲ ಪೌರ್ಣಿಮಿಯ ದಿನವೇ ಅಂತೆ.

ಬುದ್ಧನು ರೂಢಮೂಲವಾದ ಮತಾಚಾರ, ಮೂಢನಂಬಿಕೆ, ಕರ್ಮಕಾಂಡ ಮತ್ತು ಪೌರೋಹಿತ್ಯ ಮತ್ತು ಅದರ ಪರಿವಾರಕ್ಕೆ ಅಂಟಿಕೊಂಡಿದ್ದ ಎಲ್ಲ ಹಕ್ಕುದಾರಿಗಳನ್ನೂ ಧೈರ್ಯದಿಂದ ವಿರೋಧಿಸಿದ. ತತ್ವಶಾಸ್ತ್ರದ ಮತ್ತು ಮತೀಯ ದೃಷ್ಟಿಯನ್ನೂ ಪವಾಡಗಳನ್ನೂ, ಅಪೌರುಷೇಯ ವೇದಗಳನ್ನೂ, ಅಲೌಕಿಕ ವ್ಯಾಪಾರಗಳನ್ನೂ ಖಂಡಿಸಿದ. ತರ್ಕ, ವಿಚಾರ ಮತ್ತು ಅನುಭವದ ಅಡಿಗಲ್ಲಿನ ಮೇಲೆ ತನ್ನ ಸಂದೇಶವನ್ನು ನಿರ್ಮಿಸಿದ. ನೀತಿಧರ್ಮಕ್ಕೆ ಪ್ರಾಮುಖ್ಯತೆಕೊಟ್ಟ. ಮನಶ್ಶಾಸ್ತ್ರದ ವಿಶ್ಲೇಷಣ ಪದ್ಧತಿಯ ರೀತ್ಯ, ಆತ್ಮಕ್ಕೆ ಎಡೆಗೊಡದ ಮನಶ್ಶಾಸ್ತ್ರದ ರೀತ್ಯ ತನ್ನ ಧರ್ಮವನ್ನು ರಚಿಸಿದ. ತತ್ವಶಾಸ್ತ್ರದ ಜಟಿಲತೆಯ ದುರ್ಗಂಧದ ನಂತರ ಪರ್ವತಾಗ್ರದಿಂದ ಬೀಸುವ ಶುಭ್ರ ತಂಗಾಳಿಯಂತೆ ಆತನ ಸಮಸ್ಯಾ ಪ್ರವೇಶವೇ ಹಿತಕರವಾಗಿದೆ.

ಬುದ್ಧನು ಪ್ರತ್ಯಕ್ಷ ಮತಖಂಡನೆಯನ್ನು ಮಾಡಲಿಲ್ಲ. ಆದರೂ ಅವನ ಧರ್ಮದಲ್ಲಿ ಮತ ಪದ್ಧತಿಗೆ ಸ್ಥಾನವಿಲ್ಲ. ಮತ್ತು ಆತನ ರೀತಿನೀತಿ ಮತ್ತು ಕಾರ್ಯಾಚರಣೆಯಿಂದ ಮತ ಪದ್ಧತಿ ಸಡಿಲವಾಯಿತು. ಪ್ರಾಯಶಃ ಆತನ ಕಾಲದಲ್ಲಿ ಮತ್ತು ಅನಂತರ ಅನೇಕ ದಿನಗಳವರೆಗೆ ಮತ ಪದ್ಧತಿ ಬಹಳ ಸಡಿಲವಾಗಿತ್ತು. ಮತದ ಕಟ್ಟಿಗೆ ಸಿಕ್ಕಿಬಿದ್ದ ಯಾವ ಜನಾಂಗವೂ ಪರದೇಶ ವ್ಯಾಪಾರದಲ್ಲಿ ಮತ್ತು ಇತರ ಯಾವ ವಿದೇಶಿ ಸಾಹಸೋದ್ಯಮಗಳಲ್ಲಿ ಭಾಗವಹಿಸಲು ಸಾಧ್ಯವಿಲ್ಲ; ಆದರೂ ಬುದ್ಧನ ಕಾಲದ ನಂತರವೂ ಒಂದು ಸಾವಿರದ ಐದುನೂರು ವರ್ಷಗಳು ಅಥವ ಇನ್ನೂ ಹೆಚ್ಚು ಕಾಲ ಭಾರತಕ್ಕೂ ಸುತ್ತ ಮುತ್ತಲ ಇತರ ದೇಶಗಳಿಗೂ ಸಮುದ್ರ ವ್ಯಾಪಾರ ಅಭಿವೃದ್ಧಿ ಹೊಂದುತ್ತಿತ್ತು. ಮತ್ತು ಭಾರತೀಯ ವಲಸೆ ಪಡೆಗಳು ಉಚ್ಛ್ರಾಯ ಸ್ಥಿತಿಯಲ್ಲಿದ್ದವು. ವಾಯವ್ಯ ಪ್ರಾಂತ್ಯದ ಮೂಲಕ ವಿದೇಶೀಯರ ತಂಡಗಳು ನಿರಂತರ ಪ್ರವಹಿಸುತ್ತಿದ್ದವು. ಭಾರತವು ಅವುಗಳನ್ನೆಲ್ಲ ಜೀರ್ಣ ಮಾಡಿಕೊಳ್ಳುತ್ತ ಇತ್ತು.

ಈ ಜೀರ್ಣಶಕ್ತಿ ಇಕ್ಕೆಲದಿಂದಲೂ ನಡೆಯುತ್ತಿದ್ದುದು ಒಂದು ಅತ್ಯಾಶ್ಚರ್ಯದ ಸಂಗತಿ. ಕೆಳಗಡೆಯಿಂದ ಹೊಸ ಜಾತಿಗಳು ಉದ್ಭವಿಸುತ್ತಿದ್ದವು. ದಂಡೆತ್ತಿ ಬಂದು ಜಯಶೀಲರಾದವರೆಲ್ಲ ಕ್ಷತ್ರಿಯರೋ ಅರಸು ಮನೆತನದವರೋ ಆಗಿ ಬಿಡುತ್ತಿದ್ದರು. ಕ್ರಿಸ್ತಾಬ್ಧಿಯ ಆರಂಭದ ಮೊದಲು ಮತ್ತು ಅನಂತರ ಎರಡು ಮೂರು ಶತಮಾನಗಳ ನಾಣ್ಯಗಳಲ್ಲಿ ಈ ತೀವ್ರ ವ್ಯತ್ಯಾಸವನ್ನು ಕಾಣಬಹುದು: ರಾಜನ ಹೆಸರು ವಿದೇಶೀಯವಾದರೂ ಅವನ ಮಗ ಮತ್ತು ಮೊಮ್ಮಗನ ಹೆಸರು ಸಂಸ್ಕೃತದಲ್ಲಿ ಮತ್ತು ರಾಜ್ಯಾಭಿಷೇಕವು ಕ್ಷತ್ರಿಯರಿಗೆ ವಿಧಾಯಕವಾದ ಶಾಸ್ತ್ರೋಕ್ತವಾದ ರೀತಿಯಲ್ಲಿ.

ಅನೇಕ ಕ್ಷತ್ರಿಯ ರಜಪೂತ ವಂಶಗಳು ಕ್ರಿಸ್ತಪೂರ್ವ ೨ನೆಯ ಶತಮಾನದ ಶಕ ಅಥವ ಸಿಥಿಯ

ನರ ದಂಡಯಾತ್ರೆಯ ಕಾಲದಲ್ಲಿ ಆರಂಭವಾದವು. ಅಥವ ಸ್ವಲ್ಪಕಾಲದ ನಂತರ ಬಂದ ಶ್ವೇತ ಹೂಣರಿಂದ ಆರಂಭವಾದವು. ಇವರೆಲ್ಲ ಭಾರತದ ಧರ್ಮವನ್ನು ಸಂಸ್ಥೆಗಳನ್ನು ಒಪ್ಪಿದರು, ಅನಂತರ ಪುರಾಣ ಮಹಾಕಾವ್ಯಗಳ ನಾಯಕರ ಅನುವಂಶೀಯರೆಂದು ಕರೆಸಿಕೊಳ್ಳಲಾರಂಭಿಸಿದರು. ಈ ರೀತಿ ಕ್ಷತ್ರಿಯರಿಗೆ ಮುಖ್ಯವಾಗಿ ಬೇಕಾದದ್ದು ವಂಶವಲ್ಲ: ಆದರೆ ಸ್ಥಾನ ಮತ್ತು ಕೆಲಸ. ಆದ್ದರಿಂದ ವಿದೇಶೀಯರು ಆ ಗುಂಪಿನಲ್ಲಿ ಸೇರಿಕೊಳ್ಳುವುದು ಅತಿ ಸುಲಭವಾಯಿತು.

ಭಾರತೀಯ ಇತಿಹಾಸದ ಮಹಾ ಕಾಲಮಾನದಲ್ಲಿ ಅನೇಕ ಮಹಾಪುರುಷರು ಮತ ಧರ್ಮದ ಕಟ್ಟುಗಳಿಗೆ ಮತ್ತು ಪೌರೋಹಿತ್ಯಕ್ಕೆ ವಿರುದ್ಧವಾಗಿ ಪದೇ ಪದೇ ಜನರನ್ನು ಎಚ್ಚರಿಸಿದ್ದಾರೆ; ಮತ್ತು ಅನೇಕ ವಿಪ್ಲವಗಳೂ ನಡೆದಿವೆ. ಆದರೂ ಕ್ರಮೇಣ, ನಿದಾನವಾಗಿ, ಕಂಡೂ ಕಾಣದಂತೆ ದೈವ ನಿಯಾಮಕವೋ ಎಂಬಂತೆ ಜಾತಿಪದ್ಧತಿ ಹೆಮ್ಮರವಾಗಿ ಬೆಳೆದು, ಹಬ್ಬಿ, ತನ್ನ ಸಹಸ್ರ ಬಾಹುಗಳ ಜಟಿಲ ಮುಷ್ಟಿಯಲ್ಲಿ ಭಾರತೀಯ ಜೀವನದ ಸಾರಸರ್ವಸ್ವವನ್ನೂ ಹಿಂಡಿ ಹಿಸುಕುತ್ತಿದೆ. ಜಾತಿ ಪದ್ಧತಿಯಮೇಲೆ ಬಂಡಾಯಹೂಡಿದವರನ್ನು ಅನೇಕರು ಹಿಂಬಾಲಿಸಿದ್ದಾರೆ. ಆದರೆ ಕಾಲಕ್ರಮೇಣ ಅವರೇ ಒಂದು ಜಾತಿಯಾಗಿದ್ದಾರೆ. ಮೂಲ ಧರ್ಮದಮೇಲೆ ದಂಗೆ ಎದ್ದ ಮತ್ತು ಅದಕ್ಕೆ ಅನೇಕ ದೃಷ್ಟಿಯಿಂದ ಭಿನ್ನವಾದ ಜೈನಧರ್ಮ ಜಾತಿಪದ್ಧತಿಯನ್ನು ಸಹನೆಯಿಂದ ನೋಡಿತು ಮತ್ತು ತನ್ನೊಳಗೇ ಜಾತಿಯನ್ನು ಕಲ್ಪಿಸಿಕೊಂಡಿತು. ಈಗಲೂ ಅದೇ ರೀತಿಯಲ್ಲಿ ಉಳಿದು ಹಿಂದೂ ಧರ್ಮದ ಒಂದು ಶಾಖೆಯಾಗಿ ಮುಂದುವರಿಯುತ್ತಿದೆ. ಜಾತಿಪದ್ಧತಿಗೆ ಎಡೆಗೊಡದ ಮತ್ತು ತನ್ನ ಭಾವನೆ ಮತ್ತು ದೃಷ್ಟಿಕೋಣದಲ್ಲಿ ಪೂರ್ಣ ಸ್ವತಂತ್ರವಾದ ಬೌದ್ಧ ಮತಕ್ಕೆ ಕಟ್ಟಕಡೆಗೆ ಭಾರತದಲ್ಲಿ ಸ್ಥಾನವೇ ಇಲ್ಲವಾಯಿತು. ಆದರೆ ಅದು ಭಾರತದಮೇಲೆ ಹಿಂದೂಧರ್ಮದಮೇಲೆ ಮಹತ್ಪರಿಣಾಮವನ್ನುಂಟುಮಾಡಿದೆ. ಕ್ರೈಸ್ತಧರ್ಮ ಹದಿನೆಂಟುನೂರು ವರ್ಷಗಳ ಹಿಂದೆ ಇಲ್ಲಿಗೆ ಬಂದು ನೆಲಸಿತು; ಕ್ರಮೇಣ ಅದರಲ್ಲೂ ಅವರದೇ ಜಾತಿಗಳಾದವು. ತನ್ನ ಧರ್ಮದಲ್ಲಿ ಯಾವ ಭಿನ್ನಭಾವನೆಯೂ ಇರಕೂಡದೆಂದು ಘಂಟಾಘೋಷವಾಗಿ ಖಂಡಿಸಿದ ಮುಸ್ಲಿಂ ಸಮಾಜ ರಚನೆಯಲ್ಲಿ ಸಹ ಈ ಜಾತಿಯ ಪ್ರಭಾವ ಸ್ವಲ್ಪಮಟ್ಟಿಗೆ ಇದೆ.

ನಮ್ಮ ಕಾಲದಲ್ಲೇ ಜಾತಿ ಪದ್ಧತಿಯ ಕ್ರೌರ್ಯವನ್ನು ಭೇದಿಸಲು ಮಧ್ಯಮವರ್ಗದಲ್ಲಿ ಅನೇಕ ಚಳವಳಿಗಳು ಹುಟ್ಟಿವೆ. ಸಾಮಾನ್ಯ ಜನಕೋಟಿಯ ದೃಷ್ಟಿಯಿಂದ ಸ್ವಲ್ಪ ಪರಿಣಾಮಮಾಡಿದೆ, ಆದರೆ ಕ್ರಾಂತಿಕಾರಕ ಪರಿಣಾಮವಾಗಿಲ್ಲ. ಅದಕ್ಕೆ ಕಾರಣ ಈ ಸುಧಾರಣಾ ಚಳವಳಿಗಳೆಲ್ಲ ಮೂಲ ಮತವನ್ನು ಪ್ರತ್ಯಕ್ಷ ವಿರೋಧಿಸಿದ್ದರಿಂದ. ಅನಂತರ ಗಾಂಧೀಜಿ ಬಂದು ಈ ಸಮಸ್ಯೆಗೆ ಕೈಹಾಕಿದರು. ಅದು ಸನಾತನ ಭಾರತೀಯ ಸಂಪ್ರದಾಯ ರೀತಿಯಲ್ಲಿ, ಪರೋಕ್ಷಮಾರ್ಗದಿಂದ; ಮತ್ತು ಅವರ ಕಣ್ಣು ಜನಸಾಮಾನ್ಯದ ಮೇಲೆ. ಖಂಡತುಂಡ ವಾದಮಾಡಿದ್ದಾರೆ, ಮೇಲೆ ಬಿದ್ದು ಕೆಣಕಿದ್ದಾರೆ, ಹಟ ತೊಟ್ಟಿದ್ದಾರೆ, ಆದರೆ ಚಾತುರ್ವರ್ಣ್ಯದ ಮೂಲ ಆಧಾರಭೂತ ಗುಣಧರ್ಮದ ತತ್ವವನ್ನು ಮಾತ್ರ ವಿರೋಧಿಸಿಲ್ಲ. ಇಡೀ ಜಾತಿಪದ್ಧತಿಯ ಬುಡಕ್ಕೇನೆ ಪೆಟ್ಟು ಬೀಳುವುದೆಂದು ತಿಳಿದ್ದೂ ಅಸಂಖ್ಯಾತ ಬೆಳೆದು ಹಬ್ಬಿರುವ ಜಾತಿಭೇದಗಳನ್ನು ಒಳಪಂಗಡಗಳನ್ನು ಉಗ್ರವಾಗಿ ಖಂಡಿಸಿದ್ದಾರೆ. ಅಸ್ತಿಭಾರವೇ ಕಳಚಿ ಬೀಳುತ್ತಿದೆ. ಜನಸಾಮಾನ್ಯದ ಮೇಲೆ ಅಸಾಧ್ಯ ಪರಿಣಾಮವಾಗಿದೆ. ಅವರಿಗೆ ಇಡೀ ಸಮಾಜ ಒಂದಾಗಿ ಇರಬೇಕು ಇಲ್ಲವೇ ಒಡೆದು ಚೂರಾಗಬೇಕು. ಆದರೆ ಗಾಂಧಿಗಿಂತ ಇನ್ನೂ ದೊಡ್ಡ ಶಕ್ತಿಯೊಂದು ಕೆಲಸಮಾಡುತ್ತಿದೆ: ಆಧುನಿಕ ಜೀವನ ಪರಿಸ್ಥಿತಿ. ಅಂತೂ ಕೊನೆಗೆ ಈ ಬಹು ಪ್ರಾಚೀನವಾದ ಜಗ್ಗದ ಈ ಜೀರ್ಣವಾದ ಸನಾತನ ಅವಶೇಷ ಮರಣೋನ್ಮುಖವಾದಂತಿದೆ.

ಮೂಲದಲ್ಲಿ ವರ್ಣಭೇದದಿಂದಲೇ ಹುಟ್ಟಿದ ಜಾತಿಪದ್ಧತಿಯೊಂದಿಗೆ ನಾವು ಇಲ್ಲಿ ಭಾರತದಲ್ಲಿ ಹೋರಾಡುತ್ತಿರುವಾಗ, ಪಾಶ್ಚಾತ್ಯರಲ್ಲಿ ಹೊಸಹೊಸ, ಪ್ರತ್ಯೇಕ, ದುರಹಂಕಾರದ ಜಾತಿಗಳು, ಕೆಲವು ಜನಾಂಗ ವೈಶಿಷ್ಟ್ಯ ಭಾವನೆಯಿಂದ, ಇನ್ನು ಕೆಲವು ರಾಜಕೀಯ ಮತ್ತು ಆರ್ಥಿಕ ಸ್ವಾರ್ಥತೆಯಿಂದ, ಪ್ರಜಾಪ್ರಭುತ್ವದ ಸೋಗಿನಲ್ಲಿಯೇ ಹುಟ್ಟಿಕೊಂಡಿವೆ.

ಬುದ್ಧನಿಗೂ ಮುಂಚೆ, ಕ್ರೈಸ್ತನಿಗಿಂತ ಏಳುನೂರು ವರ್ಷಗಳ ಹಿಂದೆ ಒಬ್ಬ ಭಾರತೀಯ ಮಹಾ ಜ್ಞಾನಿ ಮತ್ತು ಧರ್ಮಶಾಸ್ತ್ರಜ್ಞ ಯಾಜ್ಞವಲ್ಕ್ಯ "ಸದ್ಗುಣಕ್ಕೆ ಕಾರಣ ನಮ್ಮ ಜಾತಿಯಲ್ಲ, ನಮ್ಮ ಮೈಬಣ್ಣವೂ ಅಲ್ಲ; ಅದು ಸಾಧನೆಯಿಂದ ಮಾತ್ರ ಸಾಧ್ಯ. ಆದ್ದರಿಂದ ತನಗೆ ತಾನು ಬಯಸದಂತೆ ಯಾರೂ ಯಾರಿಗೂ ಬಯಸದಿರಲಿ" ಎಂದು ಹೇಳಿದ್ದಾನಂತೆ.

## ೧೭. ಚಂದ್ರಗುಪ್ತ ಮತ್ತು ಚಾಣಕ್ಯ. ಮೌರ್ಯ ಸಾಮ್ರಾಜ್ಯಸ್ಥಾಪನೆ

ಬೌದ್ಧಮತವು ಕ್ರಮೇಣ ಭಾರತದಲ್ಲೆಲ್ಲ ಹರಡಿತು. ಆರಂಭದಲ್ಲಿ ರಾಜಮನೆತನಗಳಿಗೂ ಬ್ರಾಹ್ಮಣರಿಗೂ ಮಧ್ಯೆ ಹುಟ್ಟಿದ ಒಂದು ಕ್ಷತ್ರಿಯ ಚಳವಳಿಯಾದರೂ ಅದರ ನೈತಿಕ ಮತ್ತು ಪ್ರಜಾಸತ್ತಾತ್ಮಕ ದೃಷ್ಟಿ ಅದರಲ್ಲೂ ಮುಖ್ಯವಾಗಿ ಪೌರೋಹಿತ್ಯ ಮತ್ತು ಕರ್ಮಕಾಂಡದ ಮೇಲಿನ ವಿರೋಧಭಾವನೆ ಜನರ ಮನಸ್ಸನ್ನು ಆಕರ್ಷಿಸಿತು. ಜನಸಾಮಾನ್ಯದಲ್ಲಿ ಒಂದು ಸುಧಾರಣಾ ಮನೋಭಾವನೆಯನ್ನು ಹುಟ್ಟಿಸಿ ಕೆಲವು ಬ್ರಾಹ್ಮಣ ದಾರ್ಶನಿಕರನ್ನು ಸಹ ಆಕರ್ಷಣೆಮಾಡಿತು. ಆದರೆ ಬ್ರಾಹ್ಮಣರು ಸಾಮಾನ್ಯವಾಗಿ ಬೌದ್ಧಮತವನ್ನು ಖಂಡಿಸಿದರು. ಬೌದ್ಧರನ್ನು ಪಾಷಂಡಿಗಳು, ಸನಾತನ ಧರ್ಮ ವಿರೋಧಿಗಳು ಎಂದು ದೂರಿದರು. ಬಾಹ್ಯ ಬೆಳೆವಣಿಗೆಗಿಂತ ಮುಖ್ಯವಾಗಿ ಬೌದ್ಧಮತ ಮತ್ತು ಸನಾತನಧರ್ಮಗಳಿಗೆ ಒಂದರಮೇಲೊಂದರ ಪರಸ್ಪರ ಪ್ರಭಾವ ಅಧಿಕವಾಗಿತ್ತು ಮತ್ತು ಕ್ರಮೇಣ ಬ್ರಾಹ್ಮಣರ ಪ್ರಾಬಲ್ಯ ಕಡಮೆಯಾಯಿತು. ಎರಡೂವರೆ ಶತಮಾನಗಳ ನಂತರ ಅಶೋಕ ಚಕ್ರವರ್ತಿಯು ಬೌದ್ಧಮತವನ್ನು ಅವಲಂಬಿಸಿದನು. ಭಾರತದಲ್ಲಿ ಮತ್ತು ಭಾರತದ ಹೊರದೇಶಗಳಲ್ಲಿ ಶಾಂತಿಯುತ ಬೌದ್ಧ ಧರ್ಮ ಪ್ರಸಾರಣೆಗೆ ತನ್ನ ಸರ್ವಶಕ್ತಿಯನ್ನೂ ವಿನಿಯೋಗಿಸಿದ.

ಈ ಎರಡು ಶತಮಾನಗಳಲ್ಲಿ ಭಾರತದಲ್ಲಿ ಮಹಾ ಪರಿವರ್ತನೆಗಳಾದವು. ವಿವಿಧ ಜನಾಂಗಗಳ ಸಂಪರ್ಕವನ್ನು ಹೆಚ್ಚಿಸುವುದರಲ್ಲಿ ಸಣ್ಣ ಪಾಳೆಯಗಳು, ರಾಜ್ಯಗಳು ಮತ್ತು ಸ್ವತಂತ್ರ ಪ್ರಜಾಪ್ರಭುತ್ವಗಳನ್ನು ಒಂದುಗೂಡಿಸುವುದರಲ್ಲಿ ಮಹತ್ಪ್ರಯತ್ನಗಳಾಗುತ್ತಿದ್ದವು. ಒಂದು ಕೇಂದ್ರೀಕೃತ ಏಕಾಧಿಪತ್ಯವನ್ನು ಸ್ಥಾಪಿಸುವ ಆಶೆ ಬೆಳೆಯುತ್ತಲೇ ಇತ್ತು. ಈ ಎಲ್ಲ ಪ್ರಯತ್ನಗಳ ಫಲವಾಗಿ ಒಂದು ಶಕ್ತಿಸಮರ್ಥವೂ ಮತ್ತು ಸರ್ವಾಂಗಸುಂದರವೂ ಆದ ಸಾಮ್ರಾಜ್ಯವು ಜನ್ಮ ತಾಳಿತು. ವಾಯವ್ಯ ಮೂಲೆಯಲ್ಲಿನ ಅಲೆಕ್ಸಾಂಡರಿನ ದಂಡಯಾತ್ರೆಯು ಈ ಭಾವನೆಗೆ ಪುಷ್ಟಿಯನ್ನು ಕೊಟ್ಟಿತು. ಅಂದಿನ ಪರಿವರ್ತನೆಯ ಪರಿಸ್ಥಿತಿಯನ್ನು ಸದುಪಯೋಗ ಮಾಡಿಕೊಂಡು ತಮ್ಮ ಇಷ್ಟಕ್ಕನುಗುಣವಾಗಿ ಯೋಚಿಸಬಲ್ಲ ಇಬ್ಬರು ಮಹಾಪುರುಷರು ಆಗ ಜನ್ಮತಾಳಿದರು. ಅವರೇ ಚಂದ್ರಗುಪ್ತಮೌರ್ಯ ಮತ್ತು ಅವನ ಅಮಾತ್ಯನೂ ಮತ್ತು ಮಂತ್ರಾಲೋಚಕನೂ ಆದ ಬ್ರಾಹ್ಮಣ ಚಾಣಕ್ಯ. ಈ ಇಬ್ಬರ ಮೈತ್ರಿಯು ಅದ್ಭುತವಾದ ಫಲಕೊಟ್ಟಿತು. ಇಬ್ಬರೂ ಮಗಧದೇಶದ ನಂದರ ರಾಜ್ಯದ ರಾಜಧಾನಿಯಾದ ಪಾಟಲಿಪುತ್ರ (ಈಗಿನ ಪಾಟ್ನ)ದಿಂದ ಗಡಿಪಾರಾದವರು. ಇಬ್ಬರೂ ವಾಯವ್ಯದಲ್ಲಿ ತಕ್ಷಶಿಲೆಗೆ ಹೋಗಿ ಅಲ್ಲಿ ಅಲೆಕ್ಸಾಂಡರನು ಬಿಟ್ಟುಹೋಗಿದ್ದ ಗ್ರೀಕರೊಡನೆ ಸಂಪರ್ಕ ಬೆಳೆಸಿದರು. ಚಂದ್ರಗುಪ್ತನು ಅಲೆಕ್ಸಾಂಡರನ ಭೇಟಿಮಾಡಿದ. ಅವನ ವಿಜಯೋತ್ಸವಗಳು, ಮತ್ತು ಪ್ರತಾಪಗಳನ್ನು ಕೇಳಿದ. ಅವನಂತೆ ತಾನೂ ಪ್ರಸಿದ್ಧನಾಗಬೇಕೆಂಬ ಆಕಾಂಕ್ಷೆ ತಾಳಿದ. ಇಬ್ಬರೂ ಸಮಯಕಾದು ಸಿದ್ಧತೆ ಮಾಡಿಕೊಂಡರು. ಮಹಾ ಆಶಾಪೂರಿತ ಯೋಚನೆಗಳನ್ನು ಹೂಡಿದರು. ಮತ್ತು ಅವುಗಳನ್ನು ಕಾರ್ಯಗತ ಮಾಡಲು ಸಮಯ ಕಾಯುತ್ತಿದ್ದರು.

ಹಿಂದೆಯೇ ಕ್ರಿಸ್ತಪೂರ್ವ ೩೨೩ ರಲ್ಲಿ ಬ್ಯಾಬಿಲಾನ್ ನಗರದಲ್ಲಿ ಅಲೆಕ್ಸಾಂಡರ್ ಮರಣ ಹೊಂದಿದನೆಂಬ ವಾರ್ತೆ ಬಂದಿತು. ತಕ್ಷಣವೇ ಚಂದ್ರಗುಪ್ತ ಮತ್ತು ಚಾಣಕ್ಯ ಇಬ್ಬರೂ ಪುರಾತನವೂ ಚಿರನೂತನವೂ ಆದ ರಾಷ್ಟ್ರೀಯತ್ವದ ಕೂಗನ್ನೆಬ್ಬಿಸಿ ಜನರನ್ನು ಪರದೇಶದ ಧಾಳಿಕಾರರ ಮೇಲೆ ದಂಗೆ ಎಬ್ಬಿಸಿದರು. ಗ್ರೀಕ್ ಸೈನ್ಯವನ್ನು ಓಡಿಸಿ ತಕ್ಷಶಿಲೆಯನ್ನು ಹಿಡಿದರು. ರಾಷ್ಟ್ರೀಯತೆಯ ಕರೆಯನ್ನು ಕೇಳಿ ಅನೇಕರು ಚಂದ್ರಗುಪ್ತನ ಸಹಾಯಕ್ಕೆ ಬಂದರು. ಅವರೊಂದಿಗೆ ಉತ್ತರ ಹಿಂದೂಸ್ಥಾನದ

ಮಾರ್ಗವಾಗಿ ಪಾಟಲಿಪುತ್ರ ನಗರವನ್ನು ಸೇರಿದರು. ಅಲೆಕ್ಸಾಂಡರ್ ಮರಣಹೊಂದಿದ ಎರಡು ವರ್ಷಗಳ ಒಳಗೆ ಚಂದ್ರಗುಪ್ತನು ಪಾಟಲಿಪುತ್ರವನ್ನು ಹಿಡಿದು ಮೌರ್ಯ ಸಾಮ್ರಾಜ್ಯವನ್ನು ಸ್ಥಾಪಿಸಿದನು.

ಅಲೆಕ್ಸಾಂಡರನ ಸೇನೆಯ ಮಹಾ ಸೇನಾನಿಯಾದ ಸೆಲ್ಯೂಕಸ್ ಅಲೆಕ್ಸಾಂಡರನ ತರುವಾಯ ಏಷ್ಯಾಮೈನರ್‌ನಿಂದ ಭಾರತದವರೆಗಿನ ರಾಜ್ಯಗಳಿಗೆ ಅಧಿಪತಿಯಾದನು. ಆತನು ಪುನಃ ಭಾರತದ ವಾಯವ್ಯ ಗಡಿಯಲ್ಲಿ ತನ್ನ ಅಧಿಕಾರ ಸ್ಥಾಪನೆಮಾಡಲು ಪ್ರಯತ್ನಮಾಡಿ ಒಂದು ಸೈನ್ಯದೊಡನೆ ಸಿಂಧೂನದಿಯನ್ನು ದಾಟಿದನು. ಅವನಿಗೆ ಸೋಲಾಯಿತು. ಕಾಬೂಲ್ ಮತ್ತು ಹೀರತ್ ವರೆಗೆ ಆಫ್ಘಾನಿಸ್ಥಾನದ ಒಂದು ಭಾಗವನ್ನೇ ಚಂದ್ರಗುಪ್ತನಿಗೆ ಬಿಟ್ಟುಕೊಡಬೇಕಾಗಿ ಬಂದಿತು. ಅಲ್ಲದೆ ಸೆಲ್ಯುಕಸ್‌ನ ಮಗಳನ್ನು ಚಂದ್ರಗುಪ್ತನು ಮದುವೆಯಾದನು. ದಕ್ಷಿಣ ಭಾರತವನ್ನುಳಿದ ಚಂದ್ರಗುಪ್ತನು ಇಡೀ ಭಾರತದ ಅಧಿಪತಿಯಾದನು. ಅರಬ್ಬಿ ಸಮುದ್ರದಿಂದ ಬಂಗಾಳಕೊಲ್ಲಿಯ ವರೆಗೆ, ಉತ್ತರದಲ್ಲಿ ಕಾಬೂಲ್ ವರೆಗೆ ಅವನ ರಾಜ್ಯವು ಹಬ್ಬಿತ್ತು. ಮೊಟ್ಟಮೊದಲನೆಯ ಬಾರಿ ಇತಿಹಾಸ ಕಾಲದಲ್ಲಿ ಒಂದು ದೊಡ್ಡ ಕೇಂದ್ರಿಕೃತ ಸರಕಾರವು ಸ್ಥಾಪನೆಯಾಯಿತು. ಪಾಟಲಿಪುತ್ರ ನಗರವೇ ಈ ಸಾಮ್ರಾಜ್ಯಕ್ಕೆ ರಾಜಧಾನಿಯಾಯಿತು.

ಈ ಹೊಸ ರಾಜ್ಯವಾದರೂ ಹೇಗಿತ್ತು? ನಮ್ಮ ಪುಣ್ಯದಿಂದ ಭಾರತೀಯ ಮತ್ತು ಗ್ರೀಸ್ ಚರಿತ್ರಕಾರರಿಬ್ಬರೂ ಪೂರ್ಣ ಚಿತ್ರವನ್ನು ಕೊಟ್ಟಿದ್ದಾರೆ. ಸೆಲ್ಯೂಕಸ್‌ನ ರಾಯಭಾರಿಯಾಗಿ ಬಂದಿದ ಮೆಗಸ್ತನೀಸ್ ಲಿಖಿತ ವರದಿಯನ್ನು ಕೊಟ್ಟಿದ್ದಾನೆ. ಇದಕ್ಕೂ ಮುಖ್ಯವಾಗಿ ಕೌಟಿಲ್ಯನ ಅರ್ಥಶಾಸ್ತ್ರದಿಂದ ಆಗಿನ ಕಾಲದ ಚರಿತ್ರೆಯು ತಿಳಿಯುತ್ತದೆ. ಕೌಟಿಲ್ಯ ಚಾಣಕ್ಯನ ಇನ್ನೊಂದು ಹೆಸರು. ಹೀಗೆ ಮಹಾವಿದ್ವಾಂಸನಾಗಿದ್ದುದು ಮಾತ್ರ ಅಲ್ಲದೆ ಸಾಮ್ರಾಜ್ಯವನ್ನು ಸ್ಥಾಪನೆಮಾಡಿ, ಬೆಳೆಸಿ ಕಾಪಾಡುವುದರಲ್ಲಿ ಪ್ರಮುಖ ಪಾತ್ರ ವಹಿಸಿದ ಒಬ್ಬ ಮಹಾಪುರುಷನೇ ಬರೆದ ಗ್ರಂಥವಿದೆ. ಚಾಣಕ್ಯನನ್ನು ಭಾರತೀಯ ಮೆಕಿಯವೆಲ್ಲಿ ಎನ್ನುತ್ತಾರೆ. ಸ್ವಲ್ಪ ಮಟ್ಟಿಗೆ ಈ ಹೋಲಿಕೆ ನಿಜ. ಆದರೆ ಚಾಣಕ್ಯನು ಎಲ್ಲ ದೃಷ್ಟಿಯಲ್ಲೂ ಉನ್ನತ ಪುರುಷ, ಬುದ್ಧಿಯಲ್ಲಿ, ಕಾರ್ಯದಲ್ಲಿ ಇನ್ನೂ ಉನ್ನತನು. ಆತನು ಕೇವಲ ರಾಜನ ಹಿಂಬಾಲಕನಾಗಿರಲಿಲ್ಲ, ಮತ್ತು ಮಹಾಶಕ್ತನಾದ ಸಾಮ್ರಾಟನ ದೀನ ಮಂತ್ರಿಯೂ ಆಗಿರಲಿಲ್ಲ. ಆಗಿನ ಕಾಲದ ವರ್ಣನೆಯು ಇರುವ 'ಮುದ್ರಾರಾಕ್ಷಸ' ನಾಟಕದಲ್ಲಿ ಅವನ ಚಿತ್ರವು ಎದ್ದು ಕಾಣುತ್ತದೆ. ಧೈರ್ಯದಲ್ಲಿ, ಯುಕ್ತಿಯಲ್ಲಿ, ಗಾಂಭೀರ್ಯದಲ್ಲಿ, ಸೇಡಿನ ಮನೋಭಾವದಲ್ಲಿ, ಅವಮಾನವನ್ನು ಮರೆಯದೆ ಉದ್ದೇಶವನ್ನು ಸಾಧಿಸುವುದರಲ್ಲಿ ಶತ್ರುವನ್ನು ಮೋಸಮಾಡಿ ದಾರಿತಪ್ಪಿಸಿ ಎಲ್ಲ ಉಪಾಯವನ್ನೂ ಉಪಯೋಗಿಸಿ ಸೋಲಿಸುವುದರಲ್ಲಿ ಅದ್ವಿತೀಯನಾಗಿದ್ದನು. ಸಾಮ್ರಾಜ್ಯದ ಸೂತ್ರಗಳನ್ನೆಲ್ಲ ತನ್ನ ಕೈಯಲ್ಲಿಟ್ಟುಕೊಂಡಿದ್ದನು. ಚಕ್ರವರ್ತಿಯನ್ನು ತನ್ನ ಒಬ್ಬ ಪ್ರಿಯಶಿಷ್ಯನಂತೆ ನೋಡುತ್ತಿದ್ದನೇವಿನಾ ತನ್ನ ಯಜಮಾನನೆಂದು ಭಾವಿಸಲಿಲ್ಲ. ಸರಳನಾದರೂ ಕಠಿನ ಜೀವಿ. ಉನ್ನತ ಪದವಿಯ ಆಡಂಬರ ಅಥವ ಅಧಿಕಾರ ದರ್ಪವು ಅವನಿಗೆ ಸೇರದು. ತನ್ನ ವಚನವನ್ನು ಪಾಲಿಸಿ ಕಾರ್ಯ ಸಾಧನೆ ಆದೊಡನೆ ನಿಜವಾದ ಬ್ರಾಹ್ಮಣನಂತೆ ಧ್ಯಾನಾಸಕ್ತ ಜೀವನ ನಡೆಸಲು ಇಷ್ಟಪಟ್ಟನು.

ತನ್ನ ಕಾರ್ಯ ಸಾಧನೆಯಲ್ಲಿ ಚಾಣಕ್ಯನು ಧರ್ಮವೋ, ಅಧರ್ಮವೋ, ಉಪೇಕ್ಷೆ ಮಾಡುವ ಸ್ವಭಾವದವನಲ್ಲ; ಆದರೆ ತನ್ನ ಗುರಿ ಸಾಧನೆಯಲ್ಲಿ ಅನುಚಿತ ಮಾರ್ಗದಿಂದ ತನ್ನ ಧ್ಯೇಯವೇ ಹಾಳಾಗಬಹುದೆಂದು ತಿಳಿದಿದ್ದನು. ಕ್ಲಾಸ್‌ವಿಟ್ಸ್‌ಗಿಂತ ಅನೇಕ ಕಾಲದ ಹಿಂದೆಯೇ "ಇತರ ಮಾರ್ಗಗಳು ವಿಫಲವಾದಾಗ ಅನುಸರಿಸುವ ರಾಜ ನೀತಿಯೇ ಯುದ್ಧ" ಎಂದು ಚಾಣಕ್ಯ ಹೇಳಿದ್ದನು. ಆದರೆ ಯುದ್ಧವು ಒಂದು ಆದರ್ಶ ಧ್ಯೇಯಕ್ಕಾಗಿ ನಡೆಯಬೇಕು. ಯುದ್ಧಕ್ಕಾಗಿಯೇ ಯುದ್ಧ ಮಾಡಬಾರದು. ಯುದ್ಧದ ಧ್ಯೇಯವು ಕೇವಲ ಶತ್ರುವಿನ ಸೋಲು ಮತ್ತು ನಾಶವಲ್ಲ, ಯುದ್ಧದ ಪರಿಣಾಮವಾಗಿ ರಾಷ್ಟ್ರದ ಉನ್ನತಿಯೇ ರಾಜ ನೀತಿಜ್ಞನ ಗುರಿಯಾಗಿರಬೇಕು.

ಯುದ್ಧವು ಶಸ್ತ್ರಸಜ್ಜಿತ ಸೈನ್ಯದಿಂದಲೇ ನಡೆಯಬೇಕು. ಆದರೆ ಶಸ್ತ್ರಾಸ್ತ್ರದ ಶಕ್ತಿಗಿಂತ ಶತ್ರುವನ್ನು ಅನೀತಿ ಮಾರ್ಗಕ್ಕೆಳೆಸಿ, ಅವನ ಸೈನ್ಯದಲ್ಲಿ ಒಡಕುತಂದು ಯುದ್ಧಾರಂಭದ ಮೊದಲೇ ಅವನ ನಾಶ ಅಥವ ನಾಶಸನ್ನಿಹಿತ ಮಾಡುವ ಕುಶಾಗ್ರ ಬುದ್ಧಿಯು ಅತಿ ಮುಖ್ಯ. ತನ್ನ ಕಾರ್ಯ ಸಾಧನೆಯಲ್ಲಿ ಚಾಣಕ್ಯನು ಯಾವುದಕ್ಕೂ ಹೇಸದವನೂ, ಕಠಿಣ ಮನಸ್ಕನೂ ಆಗಿದ್ದರೂ, ಚತುರನೂ ಉನ್ನತ ಮನಸ್ಕನೂ ಆದ ಶತ್ರುವನ್ನು ನಾಶ ಮಾಡುವದಕ್ಕಿಂತ ಉಪಾಯದಿಂದ ಒಲಿಸಿಕೊಳ್ಳುವುದು ಮೇಲೆಂದು ಅರಿತಿದ್ದನು. ಆತನ ಅಂತಿಮ ವಿಜಯವು ಶತ್ರುವಿನ ಪಾಳೆಯದಲ್ಲಿ ಅಸಮಾಧಾನ, ಒಡಕು ತಂದು ಅನೀತಿಯನ್ನುಂಟುಮಾಡುವುದರಿಂದಲಾದರೂ ಆ ವಿನಾಶ ಸಮಯದಲ್ಲೇ ಶತ್ರುವಿಗೆ ಔದಾರ್ಯ ತೋರಿಸೆಂದು ಚಂದ್ರಗುಪ್ತನಿಗೆ ವಿವೇಕ ಹೇಳಿದ. ಚಾಣಕ್ಯನೇ ತನ್ನ ಮಂತ್ರಿ ಪದವಿಯ ಅಧಿಕಾರ ಮುದ್ರೆಯನ್ನು ಎದುರಾಳಿಯ ಮಂತ್ರಿಯ ಕೈಗೆ ಕೊಟ್ಟನಂತೆ. ಅದಕ್ಕೆ ಕಾರಣ ಆ ಪ್ರಧಾನಿಯು. ತನ್ನ ರಾಜನಿಗೆ ಅಷ್ಟು ರಾಜನಿಷ್ಠನಾಗಿದ್ದ. ಆ ಕಥೆ ಮುಗಿಯುವುದು ಶತ್ರುವಿನ ಸೋಲು ಮತ್ತು ಅಪಮಾನದಲ್ಲಿ ಅಲ್ಲ ಆದರೆ ಮುಖ್ಯ ಶತ್ರುವು ಸೋತಿದ್ದರೂ ಆತನನ್ನು ಒಲಿಸಿಕೊಂಡು ಶಾಂತಿ ಸಮಾಧಾನದ ಭದ್ರವಾದ ಅಡಿಗಲ್ಲಿನ ಮೇಲೆ ಭದ್ರವಾಗಿ ಕಟ್ಟಿದ ಒಂದು ಹೊಸ ರಾಷ್ಟ್ರ ನಿರ್ಮಾಣದಲ್ಲಿ.

ಮೌರ್ಯ ಸಾಮ್ರಾಜ್ಯವು ಗ್ರೀಕ್ ಪ್ರಪಂಚದೊಡನೆ ರಾಯಭಾರಸಂಬಂಧವನ್ನಿಟ್ಟುಕೊಂಡಿತು ; ಸೆಲ್ಯೂಕಸ್‌ನ ವಂಶಜರು ಟೋಲೆಮಿ ಫಿಲೆಡೆಲ್ಫಸ್‌ರೊಂದಿಗೆ ಸಹ ಸಂಬಂಧವಿತ್ತು. ಪರಸ್ಪರ ವ್ಯಾಪಾರ ವ್ಯವಹಾರದಮೇಲೆ ಈ ಸಂಬಂಧವು ತುಂಬ ಅನ್ಯೋನ್ಯವಿತ್ತು. "ಕ್ಯಾಸ್ಪಿಯನ್ ಮತ್ತು ಕಪ್ಪು ಸಮುದ್ರಗಳ ಮಾರ್ಗವಾಗಿ ಯೂರೋಪಿಗೆ ಸಾಗುತ್ತಿದ್ದ ಭಾರತೀಯ ವಸ್ತುಗಳಿಗೆ ಮಧ್ಯ ಏಷ್ಯದಲ್ಲಿದ್ದ ಆಕ್ಸಸ್ ನದಿಯು ಒಂದು ಮುಖ್ಯ ಮಾರ್ಗವಾಗಿತ್ತು" ಎಂದು ಸ್ಟ್ರಾಬೊ ಹೇಳುತ್ತಾನೆ. ಈ ಮಾರ್ಗ ಕ್ರಿಸ್ತಪೂರ್ವ ಮೂರನೆಯ ಶತಮಾನದಲ್ಲಿ ಬಹಳ ಜನಾದರಣೀಯವಾಗಿತ್ತು ; ಆಗ ಮಧ್ಯ ಏಷ್ಯ ಫಲವತ್ತಾದ ಸಂಪದ್ಯುಕ್ತ ಪ್ರದೇಶವಾಗಿತ್ತು. ಸುಮಾರು ಸಾವಿರ ವರ್ಷಗಳ ನಂತರ ಒಣಗಿ ಮರುಭೂಮಿಯಾಯಿತು. ಚಂದ್ರಗುಪ್ತನ ಅಶ್ವಶಾಲೆಯಲ್ಲಿ ಅರಬ್ಬಿ ಕುದುರೆಗಳಿದ್ದವೆಂದು ಅರ್ಥ ಶಾಸ್ತ್ರವು ತಿಳಿಸುತ್ತದೆ.

## ೧೮. ರಾಜ್ಯರಚನೆ

ಕ್ರಿಸ್ತಪೂರ್ವ ೩೨೧ ರಲ್ಲಿ ಜನ್ಮತಾಳಿ, ಭಾರತದ ಬಹು ಭಾಗವನ್ನಾಕ್ರಮಿಸಿ ಉತ್ತರದಲ್ಲಿ ಕಾಬೂಲ್‌ವರೆಗೆ ವಿಸ್ತಾರವಾಗಿದ್ದ ಈ ರಾಜ್ಯದ ರಚನೆ ಹೇಗೆ ಇತ್ತು ? ಎಲ್ಲ ಸಾಮ್ರಾಜ್ಯಗಳಿದ್ದಂತೆ ಮತ್ತು ಈಗಲೂ ಇರುವಂತೆ ನಿರಂಕುಶಾಧಿಪತ್ಯ, ಕೇಂದ್ರದಲ್ಲಿ ಸರ್ವಾಧಿಕಾರವಿತ್ತು. ಆದರೆ ನಗರಗಳಲ್ಲಿ, ಹಳ್ಳಿಗಳಲ್ಲಿ ಬಹುಮಟ್ಟಿನ ಸ್ಥಳೀಯ ಸ್ವಾತಂತ್ರ್ಯವಿತ್ತು. ಚುನಾಯಿತ ವೃದ್ಧರು ಈ ಸ್ಥಳೀಯ ಅಧಿಕಾರಗಳನ್ನು ನಿರ್ವಹಿಸುತ್ತಿದ್ದರು. ಈ ಸ್ಥಳೀಯ ಸ್ವಾತಂತ್ರ್ಯಕ್ಕೆ ಬಹಳ ಬೆಲೆಯಿತ್ತು. ಯಾವ ರಾಜನಾಗಲಿ, ಚಕ್ರವರ್ತಿಯಾಗಲಿ ಈ ಸ್ಥಳೀಯ ಸ್ವಾತಂತ್ರ್ಯವನ್ನು ಅಪಹರಿಸುವ ಧೈರ್ಯ ಮಾಡಲಿಲ್ಲ. ಆದರೂ ಕೇಂದ್ರ ಸರ್ಕಾರದ ಪ್ರಭಾವ ಮತ್ತು ಸರ್ವತೋಮುಖ ಕಾರ್ಯ ಚಟುವಟಿಕೆಗಳು ಸರ್ವವ್ಯಾಪಕವಿದ್ದವು ; ಕೆಲವು ವಿಷಯಗಳಲ್ಲಿ ಮೌರ್ಯ ಚಕ್ರಾಧಿಪತ್ಯವು ಈಗಿನ ಸರ್ವಾಧಿಕಾರ ಪ್ರಭುತ್ವವನ್ನು ಬಹುಮಟ್ಟಿಗೆ ಹೋಲುತ್ತದೆ. ಈಗಿನ ಕಾಲದಹಾಗೆ ರಾಜ್ಯಾಧಿಕಾರದಿಂದ ವ್ಯಕ್ತಿ ಸ್ವಾತಂತ್ರ್ಯದ ಅಪಹರಣವಾದಂತೆ ಆಗಿನ ಸಂಪೂರ್ಣ ಕೃಷಿಯುಗದಲ್ಲಿ ಖಂಡಿತ ಸಾಧ್ಯವಿರಲಿಲ್ಲ. ಆದರೆ ಈ ತೊಂದರೆಗಳಿಷ್ಟೇ ಇದ್ದರೂ ರಾಷ್ಟ್ರಜೀವನವನ್ನು ಹಿಡಿತದಲ್ಲಿಟ್ಟುಕೊಂಡು ನಿಯತಮಾರ್ಗದಲ್ಲೊಯ್ಯಲು ಪ್ರಯತ್ನ ನಡೆಯಿತು. ಕೇವಲ ಕಂದಾಯವನ್ನು ವಸೂಲುಮಾಡಿ, ಒಳಹೊರಗಿನ ಶಾಂತಿ ರಕ್ಷಣೆ ಮಾಡಿದರೆ ಆಯಿತೆಂಬ ಪೋಲಿಸ್ ರಾಜ್ಯಕ್ಕೂ ಅದಕ್ಕೂ ಬಹಳ ಅಂತರವಿತ್ತು. ಎಲ್ಲೆಲ್ಲೂ ಹಬ್ಬಿದ್ದ, ಕಠಿಣವಾದ ಅಧಿಕಾರವರ್ಗವಿತ್ತು. ಗೂಢಚಾರರಿದ್ದರೆಂದೂ ಅಲ್ಲಲ್ಲಿ ಉಲ್ಲೇಖ

ವಿದೆ. ಅನೇಕರೀತಿಯಿಂದ ವ್ಯವಸಾಯವನ್ನು ಹತೋಟಿಯಲ್ಲಿಡಲಾಗಿತ್ತು. ಬಡ್ಡಿಯ ದರವನ್ನು ನಿಗದಿಮಾಡಲಾಗಿತ್ತು. ಆಹಾರ ವಸ್ತುಗಳು ಪೇಟೆಗಳು, ಕೈಗಾರಿಕೆಗಳು, ವಧಾಸ್ಥಾನಗಳು, ಕಾಲ್ನಡೆಗಳು, ರಕ್ಷಣೆ, ನೀರಿನ ಹಕ್ಕುಗಳು, ಆಟಪಾಟಗಳು, ವೇಶ್ಯಾವಾಟಿಕೆಗಳು, ಪಾನೀಯ ಮಂದಿರಗಳು ಇವುಗಳ ಪರಿಶೀಲನೆ ಮೇಲಿಂದಮೇಲೆ ನಡೆಯುತ್ತಿದ್ದವು. ತೂಕ ಮತ್ತು ಅಳತೆಯ ಪ್ರಮಾಣವನ್ನು ನಿಗದಿಮಾಡಲಾಗಿತ್ತು. ಆಹಾರಧಾನ್ಯಗಳ ಕಳ್ಳ ಶೇಖರಣೆ ಮತ್ತು ಬೆರಕೆ ಮಾಡುವುದನ್ನು ಉಗ್ರವಾಗಿ ಶಿಕ್ಷಿಸಲಾಗುತ್ತಿತ್ತು. ವ್ಯಾಪಾರ ತೆರಿಗೆಯನ್ನು ವಿಧಿಸಲಾಗಿತ್ತು. ಅದೇ ರೀತಿ ಧರ್ಮಾಚರಣೆಗೂ ಒಂದು ವಿಧವಾದ ತೆರಿಗೆ ವಿಧಿಸಲಾಗಿತ್ತು. ದೇವಸ್ಥಾನಗಳಲ್ಲಿ ಯಾವುದಾದರೂ ನಿಯಮದ ಉಲ್ಲಂಘನೆ ಅಥವಾ ಅಸಭ್ಯವರ್ತನೆ ನಡೆದಾಗ ದೇವಸ್ಥಾನದ ಹಣವೆಲ್ಲ ಸರ್ಕಾರದ ಬೊಕ್ಕಸಕ್ಕೆ ಸೇರುತ್ತ ಇತ್ತು. ಶ್ರೀಮಂತರು ರಾಷ್ಟ್ರದ ಭೀಕರ ಸಂಕಟವನ್ನು ದುರುಪಯೋಗ ಪಡಿಸಿಕೊಂಡು ಲಾಭಬಡಕರಾದರೆ ಅಥವ ಹಣವನ್ನು ದುರುಪಯೋಗ ಪಡಿಸಿಕೊಂಡರೆ ಅವರ ಆಸ್ತಿ ಎಲ್ಲವೂ ಸರ್ಕಾರಕ್ಕೆ ಸೇರುತ್ತಿತ್ತು. ಆರೋಗ್ಯ ರಕ್ಷಣೆಯೂ ಮತ್ತು ಆಸ್ಪತ್ರೆಗಳ ವ್ಯವಸ್ಥೆಯೂ ಚೆನ್ನಾಗಿತ್ತು. ಮುಖ್ಯ ನಗರಗಳಲ್ಲಿ ವೈದ್ಯರಿರುತ್ತಿದ್ದರು. ವಿಧವೆಯರು, ಅನಾಥರು, ರೋಗಿಗಳು, ಮತ್ತು ಅಂಗ ವಿಹೀನರಿಗೆ ಸರ್ಕಾರವು ವೇತನಕೊಡುತ್ತಿತ್ತು. ಕ್ಷಾಮ ನಿವಾರಣೆಯ ಕಾರ್ಯವು ರಾಷ್ಟ್ರದ ವಿಶೇಷ ಕರ್ತವ್ಯವಾಗಿತ್ತು. ಕ್ಷಾಮ ನಿವಾರಣೆ ಮತ್ತು ಆಹಾರ ಪೂರೈಕೆಗೆ ರಾಜ್ಯದ ಎಲ್ಲ ಕಣಜಗಳಲ್ಲಿ ಬೆಳೆದ ದವಸದಲ್ಲಿ ಅರ್ಧವನ್ನು ಸದಾ ಮೀಸಲಾಗಿ ಕಾದಿಡುತ್ತಿದ್ದರು.

ಪ್ರಾಯಶಃ ಈ ನಿಯಮಗಳು ಮತ್ತು ನಿಬಂಧನೆಗಳೆಲ್ಲವೂ ಹಳ್ಳಿಗಳಿಗಿಂತ ಪಟ್ಟಣಗಳಿಗೆ ಹೆಚ್ಚಾಗಿ ಅನ್ವಯಿಸುತ್ತಿದ್ದವೆಂದು ತೋರುತ್ತದೆ. ಪ್ರಾಯಶಃ ಮಾತಿಗಿಂತ ಕಾರ್ಯವು ಬಹುಹಿಂದೆ ಇತ್ತೆಂದು ತೋರುತ್ತದೆ. ಆದರೂ ಮಾತು ಕೇಳಲು ಅದ್ಭುತವಾಗಿದೆ. ಗ್ರಾಮಾಂತರ ಪ್ರಜೆಗಳಂತೂ ಪೂರ್ಣ ಸ್ವತಂತ್ರರಾಗಿದ್ದರು.

ಚಾಣಕ್ಯನ ಅರ್ಥಶಾಸ್ತ್ರದಲ್ಲಿ ಅಸಂಖ್ಯಾತ ವಿಷಯಗಳು ಅಡಗಿವೆ. ರಾಜ್ಯನೀತಿ ಮತ್ತು ರಾಜ್ಯ ಕಾರ್ಯದ ಎಲ್ಲ ಅಂಶಗಳೂ ಅದರಲ್ಲಿ ವಿವರಿಸಲ್ಪಟ್ಟಿವೆ. ರಾಜ, ಆತನ ಪ್ರಧಾನಿಗಳು, ಮಂತ್ರಿಗಳು, ಮಂತ್ರಾಲೋಚನಾಸಭೆ, ರಾಜ್ಯದ ವಿವಿಧ ಅಂಗಗಳು, ಯುದ್ಧ ಮತ್ತು ಶಾಂತಿ ಕಾಲದ ರಾಜನೀತಿ ಎಲ್ಲ ಅದರಲ್ಲಿದೆ. ಹಸ್ತಿ, ಅಶ್ವ, ರಥ, ಪದಾತಿಗಳನ್ನೊಳಕೊಂಡ ಚಂದ್ರಗುಪ್ತನ ಮಹಾ ಸೇನೆಯ ವಿವರವಿದೆ.* ಆದಾಗ್ಯೂ "ಬರೀ ಸಂಖ್ಯೆ ಇದ್ದರೆ ಮಾತ್ರ ಸಾಲದು. ಶಿಸ್ತು ಸಂಘಟನೆ ಮತ್ತು ಸರಿಯಾದ ನಾಯಕತ್ವವಿಲ್ಲದೆ ಅದೇ ಒಂದು ಭಾರವಾಗಬಹುದು" ಎಂದಿದ್ದಾನೆ ಚಾಣಕ್ಯ. ರಕ್ಷಣೆ ಮತ್ತು ಕೋಟೆಕೊತ್ತಲಗಳ ವಿಷಯವನ್ನೂ ತಿಳಿಸಿದ್ದಾನೆ.

ಅದರಲ್ಲಿ ಉಲ್ಲೇಖಿಸಿರುವ ಇತರ ವಿಷಯಗಳೆಂದರೆ ವ್ಯಾಪಾರ ಉದ್ಯಮ, ಶಾಸನ ರೀತಿ, ನ್ಯಾಯಾಸ್ಥಾನಗಳು, ಸ್ಥಳೀಯ ಆಡಳಿತ, ಸಾಮಾಜಿಕ ಸಂಪ್ರದಾಯಗಳು, ವಿವಾಹ ಮತ್ತು ವಿವಾಹ ವಿಚ್ಛೇದನ, ತೆರಿಗೆ ವಿಧಿಸುವ ನೀತಿ ಮತ್ತು ತೆರಿಗೆಗಳು, ವ್ಯವಸಾಯ, ಗಣಿಗಳು ಮತ್ತು ಕಾರ್ಖಾನೆಗಳ ಕೆಲಸ, ಕುಶಲಕರ್ಮಿಗಳು, ಪೇಟೆಗಳು, ಹಣ್ಣಿನ ವ್ಯವಸಾಯ, ಕೈಗಾರಿಕಾ ವಸ್ತುನಿರ್ಮಾಣ; ನೀರಾವರಿ ಕೆಲಸಗಳು, ನಾಲೆಗಳು, ಹಡಗುಗಳು ಮತ್ತು ಯಾನಸೌಕರ್ಯ, ಸಂಘಗಳು, ಜನಗಣಿತಿಯ ಕೆಲಸ, ಮೀನು ಹಿಡಿಯುವುದು, ವಧಾಗೃಹಗಳು, ರಹದಾರಿಗಳು, ಸೆರೆಮನೆಗಳು. ವಿಧವಾ ವಿವಾಹಕ್ಕೆ ಅವಕಾಶವಿತ್ತು. ಕೆಲವು ಸಂದರ್ಭಗಳಲ್ಲಿ ವಿವಾಹವಿಚ್ಛೇದನಕ್ಕೂ ಅವಕಾಶವಿತ್ತು.

ಚೀನ ದೇಶದಲ್ಲಿ ತಯಾರಾದ 'ಚೀನ ಪಟ್ಟೆ' ಎಂಬ ರೇಷ್ಮೆ ಬಟ್ಟೆಯ ಹೆಸರಿನ ಉಲ್ಲೇಖವಿದೆ. ಭಾರತದಲ್ಲಿ ತಯಾರಾದ ರೇಷ್ಮೆಯನ್ನು ಈ ಬಟ್ಟೆಯಿಂದ ಗುರ್ತಿಸಲು ಈ ರೀತಿ ಕರೆದಿದ್ದಾರೆ.

---

* (ಪ್ರಾಯಶಃ ಚತುರಂಗದ ಆಟ ಈ ಸೈನ್ಯದ ನಾಲ್ಕು ಅಂಗಗಳ ಭಾವನೆಯಿಂದಲೇ ಹುಟ್ಟಿರಬೇಕು. ನಾಲ್ಕು ಜನರು ಆಡುವ ಈ ಆಟವನ್ನು ಆಲ್ಬೆರುನಿ ವರ್ಣಿಸಿದ್ದಾನೆ.)

ಪ್ರಾಯಶಃ ಭಾರತೀಯ ರೇಷ್ಮೆ ಸ್ವಲ್ಪ ಒರಟು ಇರಬಹುದು. ಚೀನಾ ರೇಷ್ಮೆಯು ಆಗ ಭಾರತದಲ್ಲಿ ದೊರೆಯುತ್ತಿದ್ದಿತೆಂದರೆ ಕ್ರಿಸ್ತಪೂರ್ವ ನಾಲ್ಕನೆಯ ಶತಮಾನದಲ್ಲಿಯೇ ಚೀನ ಇಂಡಿಯಾಗಳ ಮಧ್ಯೆ ವ್ಯಾಪಾರ ವ್ಯವಹಾರವಿತ್ತೆಂಬುದು ಸ್ಪಷ್ಟ.

ತನ್ನ ರಾಜ್ಯಾಭಿಷೇಕ ಕಾಲದಲ್ಲಿ ರಾಜನಾಗುವವನು ಪ್ರಜೆಗಳ ಸೇವೆಗಾಗಿ "ನಾನು ನಿಮ್ಮನ್ನು ಹಿಂಸಿಸಿದರೆ ನನ್ನ ವಂಶ ನಿರ್ವಂಶವಾಗಲಿ, ನನ್ನ ಜೀವ ಹೋಗಲಿ, ನನ್ನ ಗತಿ ಹಾಳಾಗಲಿ" ಎಂದು ಪ್ರಮಾಣಮಾಡಬೇಕಾಗಿತ್ತು. "ತನ್ನ ಪ್ರಜೆಗಳ ಸೌಖ್ಯದಲ್ಲಿ, ಅವರ ಪುರೋಭಿವೃದ್ಧಿಯಲ್ಲಿ ರಾಜನ ಸೌಖ್ಯ. ತನಗೆ ಇಷ್ಟವಾದುದೆಲ್ಲ ಒಳ್ಳೆಯದೆಂದು ಭಾವಿಸಬಾರದು. ತನ್ನ ಪ್ರಜೆಗಳಿಗೆ ಇಷ್ಟವಾದುದೇ ಒಳ್ಳೆಯದು." "ರಾಜನು ಕಾರ್ಯಶೀಲನಾದರೆ ಪ್ರಜೆಗಳೂ ಕಾರ್ಯಶೀಲರಾಗುತ್ತಾರೆ". ಸಾರ್ವಜನಿಕ ಕೆಲಸವು ರಾಜನ ಇಷ್ಟಾನಿಷ್ಟಕ್ಕೆ ಗುರಿಯಾಗಿ ತೊಂದರೆಗೀಡಾಗಬಾರದು. ಸದಾ ಅವನು ಸಾರ್ವಜನಿಕ ಸೇವೆಗೆ ಸಿದ್ಧನಿರಬೇಕು. ರಾಜ ದುರ್ಮಾರ್ಗಿಯಾದರೆ ಅವನನ್ನು ಪದಚ್ಯುತನನ್ನಾಗಿಮಾಡಿ ಬೇರೊಬ್ಬನನ್ನು ರಾಜನನ್ನಾಗಿ ಆರಿಸಲು ಪ್ರಜೆಗಳಿಗೆ ಅಧಿಕಾರವಿತ್ತು.

ಅನೇಕ ನಾಲೆಗಳಿದ್ದವು. ಅವುಗಳನ್ನು ನೋಡಿಕೊಳ್ಳಲು ನೀರಾವರಿ ಇಲಾಖೆ ಇತ್ತು. ಬಂದರುಗಳು, ತೆಪ್ಪಗಳು, ಸೇತುವೆಗಳು ಮತ್ತು ನದಿಗಳ ಮೇಲಕ್ಕೂ ಕೆಳಕ್ಕೂ ನಡೆಯುತ್ತ ಇದ್ದ ದೋಣಿಗಳ ವ್ಯಾಪಾರಕ್ಕೆ ಮತ್ತು ಸಮುದ್ರದಾಚೆ ಬರ್ಮ ಮುಂತಾದ ದೇಶಗಳಿಗೆ ಹೋಗಿಬರುತ್ತಿದ್ದ ದೋಣಿಗಳ ಮತ್ತು ಹಡಗುಗಳ ಮೆಲ್ವಿಚಾರಣೆಗೆ ಒಂದು ನಾವಿಕಾ ಇಲಾಖೆ ಇತ್ತು. ಸೈನ್ಯದ ಅಂಗವಾಗಿ ಒಂದು ನಾವಿಕಾ ಪಡೆಯೂ ಇದ್ದಿರಬೇಕು.

ಸಾಮ್ರಾಜ್ಯದ ವ್ಯಾಪಾರವು ಬಹಳ ಅಭಿವೃದ್ಧಿ ಹೊಂದಿತ್ತು. ದೇಶದ ಮೂಲೆಮೂಲೆಗೂ ರಾಜಮಾರ್ಗಗಳು ಹರಡಿದ್ದುವು. ಅಲ್ಲಲ್ಲಿ ಪ್ರಯಾಣಿಕರಿಗೆ ವಸತಿ ಸೌಕರ್ಯವಿತ್ತು. ಮುಖ್ಯ ರಸ್ತೆಗೆ ರಾಜಮಾರ್ಗ ಎಂದು ಹೆಸರಿತ್ತು. ಇದು ನೇರವಾಗಿ ದೇಶದ ಮಧ್ಯೆ ಹಾಯ್ದು ವಾಯುವ್ಯದ ಗಡಿಯವರೆಗೆ ಹಬ್ಬಿತ್ತು. ಪರದೇಶದ ವರ್ತಕರಿಗೆ ವಿಶೇಷ ಮರ್ಯಾದೆಯೂ ಆದರವೂ ಇತ್ತು. ಅನ್ಯದೇಶದವರೆಂದು ವಿಶೇಷ ಸೌಲಭ್ಯಗಳು ದೊರೆಯುತ್ತಿದ್ದವು. ಪ್ರಾಚೀನ ಐಗುಪ್ತರು ತಮ್ಮ ದ್ರವ್ಯ ರಕ್ಷಿತಶವಗಳಿಗೆ ಭಾರತದಿಂದ ಬಂದ ಮಲ್ ಬಟ್ಟೆಯನ್ನು ಉಡಿಸುತ್ತಿದ್ದರಂತೆ; ಮತ್ತು ತಮ್ಮ ಬಟ್ಟೆಗಳಿಗೆ ಇಂಡಿಯ ನೀಲಿಯಿಂದ ಬಣ್ಣಹಾಕುತ್ತಿದ್ದರಂತೆ. ಪ್ರಾಚೀನ ಭೂಶೋಧನೆಯಲ್ಲಿ ಒಂದು ವಿಧವಾದ ಗಾಜು ಸಹ ದೊರೆತಿದೆ. ಗ್ರೀಕ್ ರಾಯಭಾರಿಯಾದ ಮೆಗಾಸ್ತನೀಸ್ ಭಾರತೀಯರು ಅಲಂಕಾರ ಪ್ರಿಯರು, ಸೌಂದರ್ಯೋಪಾಸಕರು, ತಮ್ಮ ನಿಲುವನ್ನು ಎತ್ತರಿಸಿಕೊಳ್ಳಲು ಪಾದರಕ್ಷೆ ಸಹ ಧರಿಸುತ್ತಿದ್ದರು ಎಂದು ಹೇಳುತ್ತಾನೆ.

ಮೌರ್ಯ ಸಾಮ್ರಾಜ್ಯದಲ್ಲಿ ವಿಲಾಸ ಜೀವನವು ಹೆಚ್ಚಿತು. ಜೀವನವು ಹೆಚ್ಚು ಜಟಿಲವಾಯಿತು, ವಿಶೇಷ ನೈಪುಣ್ಯತೆ ಪಡೆಯಿತು, ಮತ್ತು ಸುಸಂಘಟಿತವಾಯಿತು. ಪಥಿಕ ಗೃಹಗಳು, ಭೋಜನ ಶಾಲೆಗಳು, ಉಪಹಾರಮಂದಿರಗಳು, ಛತ್ರಶಾಲೆಗಳು ಜೂಜುಕಟ್ಟೆಗಳು ಅಸಂಖ್ಯಾತವಾದವು. ಕೆಲವು ಪಂಗಡಗಳು, ಕಸಬುದಾರರು ತಮ್ಮದೇ ಸಭಾ ಮಂದಿರಗಳನ್ನು ಮಾಡಿಕೊಂಡಿರುತ್ತಾರೆ; ಕಸಬುದಾರರು ಸಾರ್ವಜನಿಕ ಔತಣಗಳನ್ನು ನಡೆಸುತ್ತಾರೆ. ಅನೇಕ ಬಗೆಯ ನರ್ತಕ ನರ್ತಕಿಯರು, ಸಂಗೀತಗಾರರು ಮತ್ತು ನಟರಿಗೆ ಮನರಂಜನೆಯಿಂದ ಒಳ್ಳೆಯ ಸಂಪಾದನೆಯಿದೆ. ಅವರು ಹಳ್ಳಿಗಳಿಗೆ ಸಹ ಹೋಗುತ್ತಾರೆ. ಗೃಹ ಜೀವನ ಮತ್ತು ಕೃಷಿಕರ್ಮ ಹಾಳಾಗುವುದರಿಂದ ಈ ಪ್ರದರ್ಶನಗಳಿಗೆ ಸಾರ್ವಜನಿಕ ಸಭಾಮಂದಿರಗಳು ಇರಕೂಡದೆಂದು "ಅರ್ಥಶಾಸ್ತ್ರ" ಗ್ರಂಥಕರ್ತನು ಹೇಳುತ್ತಾನೆ. ಸಾರ್ವಜನಿಕ ಮನರಂಜನೆಗಳನ್ನು ಏರ್ಪಡಿಸಲು ಸಹಾಯಮಾಡಿದ್ದರೆ ಶಿಕ್ಷೆ ವಿಧಿಸಲಾಗುತ್ತಿದ್ದಿತೆಂದು ಅವನೇ ಹೇಳುತ್ತಾನೆ. ಅದೇ ಉದ್ದೇಶಕ್ಕಾಗಿ ಕಟ್ಟಿದ ಕ್ರೀಡಾರಂಗಗಳಲ್ಲಿ ನಾಟಕ, ಮುಷ್ಟಿಯುದ್ಧ ಮುಂತಾದ ಮನುಷ್ಯರ ಮತ್ತು ಮೃಗಗಳ ಪಂದ್ಯಗಳನ್ನು ಜನರ ಮನರಂಜನೆಗಾಗಿ ರಾಜನ್ನೇ ಏರ್ಪಡಿಸುತ್ತಿದ್ದನು. ವಿಶೇಷ ವಸ್ತುಗಳ ಚಿತ್ರಗಳ ಪ್ರದರ್ಶನಗಳೂ ನಡೆಯುತ್ತಿದ್ದವು. ಜಾತ್ರೆಗಳ

ಸಮಯದಲ್ಲಿ ಅನೇಕ ದೀಪೋತ್ಸವಗಳು ನಡೆಯುತ್ತಿದ್ದುವು. ರಾಜಮೆರವಣಿಗೆಗಳೂ ಬೇಟೆಗಳೂ ನಡೆಯುತ್ತಿದ್ದವು.

ಈ ಮಹಾ ಸಾಮ್ರಾಜ್ಯದಲ್ಲಿ ಅನೇಕ ಜನನಿಬಿಡನಗರಗಳಿದ್ದವು. ಶೋಣ ಮತ್ತು ಗಂಗಾನದಿಗಳ ಸಂಗಮದಲ್ಲಿ ಗಂಗಾತೀರದ ಮಹಾ ನಗರವಾದ ಪಾಟಲಿಪುತ್ರ (ಈಗಿನ ಪಾಟ್ನ), ಅದರ ಮುಖ್ಯ ನಗರ. ಮೆಗಾಸ್ತನೀಸ್ ಈ ರೀತಿ ವರ್ಣಿಸಿದ್ದಾನೆ: “ಈ ನದಿ ಮತ್ತು ಇನ್ನೊಂದು ನದಿಯ ಸಂಗಮದಲ್ಲಿ ೯.೨ ಮೈಲು ಉದ್ದ ೧.೭ ಮೈಲು ಅಗಲವಿರುವ ಪಾಲಿಬೋತ್ರವೆಂಬ ಮಹಾನಗರವಿದೆ. ಸಮಾಂತರ ಚತುರ್ಭುಜದ ಆಕಾರದಲ್ಲಿದೆ. ಸುತ್ತಲೂ ಮರದ ಗೋಡೆಯಿದೆ. ಗೋಡೆಯ ಮಧ್ಯೆ ಬಾಣಗಳನ್ನು ಹೊಡೆಯಲು ಅಲ್ಲಲ್ಲಿ ಕಿಂಡಿಗಳಿವೆ. ರಕ್ಷಣೆಗಾಗಿಯೂ ಮತ್ತು ನಗರದ ಕೊಳಕನ್ನು ಕೂಡಿಡುವುದಕ್ಕೂ ಎದುರಿನಲ್ಲಿ ಕಂದಕವಿದೆ. ಸುತ್ತಲೂ ಹರಡಿದ್ದ ಈ ಕಂದಕದ ಅಗಲ ೬೦೦ ಅಡಿ, ಆಳ ಮೂವತ್ತು ಅಡಿ. ಗೋಡೆಯಮೇಲೆ ೫೭೦ ಗೋಪುರಗಳಿವೆ ಮತ್ತು ನಾಲ್ಕುನೂರ ಅರುವತ್ತು ಬಾಗಿಲುಗಳಿವೆ.

ಈ ಗೋಡೆಯನ್ನು ಮಾತ್ರ ಮರದಿಂದ ಮಾಡಿಲ್ಲ. ಮುಕ್ಕಾಲು ಪಾಲು ಮನೆಗಳೆಲ್ಲ ಮರದಲ್ಲಿಯೇ ಕಟ್ಟಿದವು. ಪ್ರಾಯಶಃ ಆ ಪ್ರಾಂತ್ಯ ಪದೇ ಪದೇ ಭೂಕಂಪಗಳಿಗೆ ಈಡಾಗುತ್ತಿದ್ದ ಕಾರಣ ಮುಂಜಾಗ್ರತೆಯಿಂದ ಆ ರೀತಿ ಮರದಿಂದ ಕಟ್ಟುತ್ತಿದ್ದಿರಬೇಕು. ೧೯೩೪ರ ಬೀಹಾರ ಭೂಕಂಪವೇ ಅದಕ್ಕೆ ಸಾಕ್ಷಿ. ಮನೆಗಳೆಲ್ಲ ಮರವಾದ್ದರಿಂದ ಬೆಂಕಿಯಿಂದ ಕಾಪಾಡಲು ವಿಶೇಷ ಮುಂಜಾಗ್ರತೆ ಮಾಡಲಾಗಿತ್ತು. ಪ್ರತಿಯೊಂದು ಮನೆಯ ಯಜಮಾನನೂ ಏಣಿಗಳು, ಕೊಕ್ಕೆಗಳು ಮತ್ತಾ ನೀರು ತುಂಬಿದ ಪಾತ್ರೆಗಳನ್ನು ಇಡಬೇಕಾಗಿತ್ತು.

ಪಾಟಲಿಪುತ್ರದ ನಗರ ಸಭೆಗೆ ಮುವತ್ತಾರು ಜನ ಚುನಾಯಿತ ಸದಸ್ಯರಿದ್ದರು. ಆ ಸಭೆಯನ್ನು ಆರು ಸಮಿತಿಗಳಾಗಿ ವಿಂಗಡಿಸಿದ್ದರು. ಪ್ರತಿ ಸಮಿತಿಗೂ ಐದು ಜನ ಸದಸ್ಯರು. ಒಂದೊಂದು ಸಮಿತಿಯೂ ಕೈಗಾರಿಕೆ ಮತ್ತು ಕುಶಲವಿದ್ಯೆ, ಜನನ ಮರಣ, ವಸ್ತು ನಿರ್ಮಾಣ ಕಾರ್ಯ, ಪ್ರಯಾಣಿಕರ ಮತ್ತು ಯಾತ್ರಿಕರ ಸೌಕರ್ಯ ಮುಂತಾದ ಕೆಲಸಗಳನ್ನು ನೋಡಿಕೊಳ್ಳುತ್ತಿದ್ದವು. ಒಟ್ಟು ನಗರ ಸಭೆಯು ಹಣಕಾಸು, ಆರೋಗ್ಯರಕ್ಷಣೆ, ನೀರಿನ ಪೂರೈಕೆ, ಸಾರ್ವಜನಿಕ ಕಟ್ಟಡಗಳು ಮತ್ತು ಉದ್ಯಾನವನಗಳ ಆಡಳಿತ ನೋಡುತ್ತಿದ್ದರು.

## * ೧೯. ಬುದ್ಧನ ಉಪದೇಶ

ಭಾರತದ ಬಾಹ್ಯಸ್ವರೂಪವನ್ನೇ ಮಾರ್ಪಡಿಸುತ್ತಿದ್ದ ಈ ರಾಜಕೀಯ ಆರ್ಥಿಕ ವಿಪ್ಲವಗಳ ಹಿಂದೆ ಬೌದ್ಧ ಧರ್ಮದ ಕ್ರಾಂತಿಕಾರಕ ಹಿನ್ನೆಲೆ ಇತ್ತು. ಸನಾತನಧರ್ಮದ ಮೇಲಿನ ಧಾಳಿ ಮತ್ತು ಅದರ ಅಧಿಕಾರವರ್ಗದ ಮೂಲೋತ್ಪಾಟನೆಗಾಗಿ ನಡೆಸಿದ ಹೋರಾಟದ ಪ್ರಕೋಪವಿತ್ತು. ಸದಾ ಕಿವಿಸೋಲುತ್ತಿದ್ದ ಚರ್ಚೆ ಮತ್ತು ವಾಗ್ವಾದಕ್ಕಿಂತ ಹೆಚ್ಚಾಗಿ ಒಬ್ಬ ಮಹಾತೇಜಸ್ವಿಯಾದ ಅದ್ಭುತ ಪುರುಷನ ವ್ಯಕ್ತಿತ್ವವು ಭಾರತದ ಜನರ ಮನಸ್ಸನ್ನು ಸೆಳೆದಿತ್ತು. ಆತನ ನೆನಪು ಇನ್ನು ಜನರ ಮನಸ್ಸಿನಲ್ಲಿ ಮಾಸಿರಲಿಲ್ಲ. ಆತನ ಉಪದೇಶ ಸನಾತನ ಆದರೂ ತಾತ್ವಿಕ ಚರ್ವಿತ ಚರ್ವಣದಲ್ಲಿ ಮಗ್ನರಾದವರಿಗೆ ಅತಿ ನೂತನವೂ, ಅಪೂರ್ವವೂ ಆಗಿ ಕಂಡು ವಿದ್ವಾಂಸರ ಮನಸ್ಸನ್ನೂ ಸೆಳೆಯಿತು. ಜನತೆಯ ಹೃದಯದಲ್ಲಂತೂ ಆಳವಾಗಿ ಬೇರೂರಿತು. “ಎಲ್ಲ ದೇಶಗಳಿಗೂ ಹೋಗಿ ಈ ಉಪದೇಶ ಸಾರಿರಿ. ದೀನರು, ಹೀನರು, ಶ್ರೀಮಂತರು, ಉನ್ನತ ಸ್ಥಾನದಲ್ಲಿರುವವರು ಎಲ್ಲರೂ ಒಂದೇ, ಎಲ್ಲ ನದಿಗಳು ಸಮುದ್ರದಲ್ಲಿ ಒಂದುಗೂಡುವಂತೆ ಎಲ್ಲ ಜಾತಿಗಳೂ ಈ ಧರ್ಮದಲ್ಲಿ ಒಂದುಗೂಡುವುವು” ಎಂದು ಹೇಳಿದನು. ಆತನ ಉಪದೇಶದ ಗುರಿ ವಿಶ್ವದ ಕಲ್ಯಾಣ, ಮತ್ತು ವಿಶ್ವಪ್ರೇಮ, ಏಕೆಂದರೆ “ಈ ಪ್ರಪಂಚದಲ್ಲಿ ದ್ವೇಷದಿಂದ ದ್ವೇಷ ಎಂದಿಗೂ ನಂದುವುದಿಲ್ಲ”, ಮತ್ತು “ಮನುಷ್ಯನು ಕೋಪವನ್ನು ದಯೆಯಿಂದ ಗೆಲ್ಲಲಿ, ದುರ್ಗುಣವನ್ನು ಸುಗುಣದಿಂದ ಜೈಸಲಿ.”

ಆ ಆದರ್ಶವು ಸದಾಚಾರ ಮತ್ತು ಆತ್ಮಸಂಯಮದಿಂದ ಬಂದುದು. "ಯುದ್ಧದಲ್ಲಿ ಸಾವಿರ ಜನರನ್ನು ಜೈಸಬಹುದು ಆದರೆ ತನ್ನನ್ನು ತಾನು ಗೆದ್ದವನೇ ನಿಜವಾದ ವೀರ." "ಅಂತ್ಯಜ ಅಥವ ಬ್ರಾಹ್ಮಣನಾಗುವುದು ತನ್ನ ಹುಟ್ಟಿನಿಂದಲ್ಲ. ನಡತೆಯಿಂದ ಮಾತ್ರ". ಪಾಪಕರ್ಮಿಯನ್ನು ಸಹ ನಿಂದಿಸಬಾರದು. ಏಕೆಂದರೆ "ಗಾಯದ ಮೇಲೆ ಮೆಣಸಿನಪುಡಿ ಹಾಕಿದಂತೆ ಕಠಿಣೋಕ್ತಿಯಿಂದ ತಪ್ಪು ಮಾಡಿದವನ ಮನಸ್ಸು ನೋಯಿಸದವರು ಯಾರು?" "ಇನ್ನೊಬ್ಬನನ್ನು ಜಯಿಸುವುದರಿಂದ ಅನಿಷ್ಟ ಪರಿಣಾಮಗಳಾಗುತ್ತವೆ-". ಗೆಲುವಿನಿಂದ ದ್ವೇಷ ಹುಟ್ಟುತ್ತದೆ, ಏಕೆಂದರೆ ಸೋತವನು ದುಃಖಿಯಾಗುತ್ತಾನೆ.

ಯಾವ ಧರ್ಮದ ಅಧಿಕಾರವಾಣಿಯೂ ಇಲ್ಲದೆ ಯಾವ ದೇವರ ಅಥವ ಪರಲೋಕದ ಮಾತನ್ನೂ ಎತ್ತದೆ ಇದನ್ನೆಲ್ಲ ಆತನು ಉಪದೇಶ ಮಾಡಿದ. ವಿಚಾರತರ್ಕ ಮತ್ತು ಅನುಭವವೇ ಆತನ ಆಧಾರಸ್ತಂಭಗಳು. ಅವರವರ ಮನಸ್ಸೇ ಅವರಿಗೆ ಸತ್ಯದ ಅರಿವನ್ನುಂಟುಮಾಡುತ್ತದೆ ಎಂದು ಹೇಳಿದ. "ನನ್ನ ಮೇಲಿನ ಗೌರವದಿಂದ ಒಪ್ಪಬೇಡಿ; ಬೆಂಕಿಯಲ್ಲಿ ಚಿನ್ನವನ್ನು ಪುಟಕ್ಕಿಟ್ಟಂತೆ ಮೊದಲು ಪರೀಕ್ಷೆ ಮಾಡಿ ಒಪ್ಪಿರಿ" ಎಂದು ಹೇಳಿದನಂತೆ. ಸತ್ಯದ ಅಜ್ಞಾನವೇ ಎಲ್ಲ ದುಃಖಗಳ ಮೂಲ. ಒಬ್ಬ ದೇವರು ಅಥವ ಪರವಸ್ತು ಇದೆಯೋ ಇಲ್ಲವೋ ಏನೂ ಹೇಳುವುದಿಲ್ಲ. ಒಪ್ಪುವುದೂ ಇಲ್ಲ, ಇಲ್ಲವೆಂದು ನಿರಾಕರಿಸುವುದೂ ಇಲ್ಲ; ನಿರ್ದಿಷ್ಟ ಜ್ಞಾನ ಎಲ್ಲಿ ಸಾಧ್ಯವಿಲ್ಲವೋ ಅಲ್ಲಿ ತೀರ್ಮಾನ ಹೇಳದಿರಬೇಕು. ಒಂದು ಪ್ರಶ್ನೆಗೆ ಉತ್ತರವಾಗಿ "ಪರವಸ್ತು ಎಂದರೆ ಜ್ಞಾನ ವಸ್ತುಗಳಿಗೆ ಯಾರ ಸಂಬಂಧವೂ ಇಲ್ಲದ ಒಂದು ವಸ್ತು; ಎಂದರೆ ಜ್ಞಾತವಿಚಾರದಿಂದ ಅದರ ಅಸ್ತಿತ್ವವನ್ನು ದೃಢಪಡಿಸಲು ಸಾಧ್ಯವಿಲ್ಲ. ಇತರ ವಸ್ತುಗಳಿಗೆ ಸಂಬಂಧವಿರದ ವಸ್ತು ಒಂದಿದೆ ಎಂದು ತಿಳಿಯುವುದಾದರೂ ಹೇಗೆ. ವಿಶ್ವಪ್ರಪಂಚವೇ ನಮಗೆಲ್ಲ ತಿಳಿದಂತೆ ಪರಸ್ಪರ ಸಂಬಂಧಗಳ ಒಂದು ವ್ಯವಸ್ಥೆ. ಸಂಬಂಧವಿಲ್ಲದ ಅಥವ ಸಂಬಂಧಪಡಲಾರದ ಯಾವ ವಸ್ತುವೂ ನಮಗೆ ತಿಳಿದಿಲ್ಲ" ಎಂದು ಉತ್ತರಕೊಟ್ಟನಂತೆ. ಆದ್ದರಿಂದ ನಮ್ಮ ದೃಷ್ಟಿಗೆ ಗೋಚರವಾಗುವ ಮತ್ತು ನಮ್ಮ ನಿರ್ದಿಷ್ಟ ಜ್ಞಾನಕ್ಕೆ ಎಟುಕುವ ಮಿತಿಯನ್ನು ಮಾತ್ರ ಮೀರಬಾರದು.

ಇದೇ ರೀತಿ ಆತ್ಮವಿದೆಯೋ ಇಲ್ಲವೇ ಎಂಬ ವಿಷಯದಲ್ಲೂ ಬುದ್ಧನು ಯಾವ ಸ್ಪಷ್ಟ ಅಭಿಪ್ರಾಯವನ್ನೂ ತಿಳಿಸಿಲ್ಲ, ತಿರಸ್ಕರಿಸಿಯೂ ಇಲ್ಲ, ಪುರಸ್ಕರಿಸಿಯೂ ಇಲ್ಲ. ಆ ಪ್ರಶ್ನೆಯನ್ನೇ ಚರ್ಚಿಸಲು ನಿರಾಕರಿಸುತ್ತಾನೆ. ಆಗಿನ ಭಾರತೀಯ ಮನೋಭಾವನೆಯೆಲ್ಲ ಆತ್ಮ, ಪರಮಾತ್ಮ, ಏಕತ್ವವಾದ, ಏಕದೈವತಾವಾದ ಮುಂತಾದ ತಾತ್ವಿಕ ಕಲ್ಪನೆಗಳಲ್ಲಿಯೇ ಮಗ್ನವಾಗಿದ್ದ ಕಾಲದಲ್ಲಿ ಬುದ್ಧನು ಅದನ್ನೆಲ್ಲ ನಿರಾಕರಿಸಿದ್ದು ಒಂದು ಆಶ್ಚರ್ಯ. ಆದರೆ ಬುದ್ಧನು ಯಾವ ತಾತ್ವಿಕ ವಿಚಾರಕ್ಕೂ ಎಡೆಗೊಡಲಿಲ್ಲ. ಆದರೆ ಪ್ರಕೃತಿ ನಿಯಮದ ನಿತ್ಯತೆಯಲ್ಲಿ, ವಿಶ್ವಕರ್ತೃತ್ವದಲ್ಲಿ ಪೂರ್ವಾವಸ್ಥೆಯಿಂದ ಮುಂದಿನ ಪ್ರತಿಯೊಂದು ಅವಸ್ಥೆಯೂ ನಿಯಮಿತ ಎನ್ನುವುದರಲ್ಲಿ ಸದ್ಗುಣಕ್ಕೂ ಸುಖಕ್ಕೂ, ದುರ್ಗುಣಕ್ಕೂ ದುಃಖಕ್ಕೂ ಪರಸ್ಪರ ಸಂಬಂಧವಿದೆ ಎನ್ನುವುದರಲ್ಲಿ ಆತನು ನಂಬಿದ್ದನು.

ಅನುಭವ ಪ್ರಪಂಚದಲ್ಲಿ 'ಅದು ಇದೆ' 'ಅದು ಇಲ್ಲ' ಎಂಬ ಶಬ್ದಗಳನ್ನು ವಿವರಣೆಗಳನ್ನು ಉಪಯೋಗಿಸುತ್ತೇವೆ. ವಸ್ತುಗಳ ಬಾಹ್ಯ ಸ್ಥಿತಿಯನ್ನು ಬಿಟ್ಟು ಸ್ವಲ್ಪ ಹಿಂದೆ ಹೋದರೆ ಈ ಎರಡು ವಿವರಣೆಗಳೂ ತಪ್ಪು ಇರಬಹುದು; ಪ್ರಾಯಶಃ ನಿಜ ಸ್ಥಿತಿಯನ್ನು ವಿವರಿಸಲು ನಮ್ಮ ಭಾಷೆ ಅಸಮರ್ಥವಿರಬಹುದು. ಸತ್ಯವು 'ಇದೆ' ಮತ್ತು 'ಇಲ್ಲ' ಎಂಬುದರ ಮಧ್ಯೆ ಅಥವ ಅವುಗಳೆರಡರ ಆಚೆ ಎಲ್ಲೋ ಇರಬಹುದು. ನದಿಯು ಸದಾ ಹರಿಯುತ್ತಲೇ ಇರುತ್ತದೆ; ಕ್ಷಣಕ್ಷಣಕ್ಕೂ ಅದೇ ನದಿಯಾಗಿ ಕಂಡರೂ ನೀರು ಮಾತ್ರ ಪ್ರತಿಕ್ಷಣದಲ್ಲೂ ಬೇರೆಯಾಗುತ್ತದೆ. ಬೆಂಕಿಯೂ ಹೀಗೆಯೇ. ಜ್ವಾಲೆ ಉರಿಯುತ್ತಲೇ ಇರುತ್ತದೆ. ಅದೇ ರೂಪ, ಅದೇ ಆಕೃತಿ, ಆದರೂ ಅದೇ ಜ್ವಾಲೆಯುಲ್ಲ; ಪ್ರತಿಕ್ಷಣವೂ ಪ್ರತ್ಯೇಕ. ಆದರೂ ಸರ್ವವೂ ಸದಾ ಪರಿವರ್ತನೆಯಾಗುತ್ತಲಿದೆ. ಈ ಬಹುಮುಖ ಜೀವನವೆಲ್ಲ ಯಾವುದೋ ಗಮ್ಯದೆಡೆಗೆ ಹರಿಯುವ ಅನಂತವಾಹಿನಿ. ವಾಸ್ತವಿಕ ಶಾಶ್ವತವೂ ಅಲ್ಲ,

ಅಪರಿವರ್ತಿತವೂ ಅಲ್ಲ, ಆದರೆ ಒಂದು ಬಗೆಯ ಉಜ್ವಲ ಶಕ್ತಿಯ ಪ್ರಭಾವ ಪೂರ್ಣ, ಚಲನವಲನ ವಸ್ತು ಕ್ರಮಾನುಗತ ಪರಿಣಾಮ ಪರಂಪರೆ. ಕಾಲದ ಕಲ್ಪನೆಯು ಆ ಈ ಘಟನೆಯಿಂದ ಕೇವಲ ರೂಢಿಯಿಂದ ಬೇರ್ಪಡಿಸಿದ ಭಾವನೆ. ಪರಿವರ್ತನೆಯಾಗುವ ಶಾಶ್ವತ ವಸ್ತುವಿನ ಅಂತರ್ಭಾಗ ಯಾವುದೂ ಇಲ್ಲದಿರುವುದರಿಂದ ಒಂದು ಇನ್ನೊಂದರ ಕಾರಣದಿಂದ ಎಂದು ಹೇಳಲು ಸಾಧ್ಯವಿಲ್ಲ. ಇತರ ವಸ್ತುಗಳೊಡನೆ ಒಂದು ವಸ್ತುವಿನ ಸಂಬಂಧದ ಅಂತರ್ನಿಯಮವೇ ಆ ವಸ್ತುವಿನ ಮೂಲತತ್ವ. ನಮ್ಮ ದೇಹಗಳು ಮತ್ತು ಆತ್ಮಗಳು ಕ್ಷಣಕ್ಷಣಕ್ಕೂ ಪರಿವರ್ತನೆ ಹೊಂದುತ್ತಿವೆ. ಹೋದ ಕ್ಷಣದಲ್ಲಿದ್ದಂತೆ ಈ ಕ್ಷಣದಲ್ಲಿಲ್ಲ; ಅವು ಇಲ್ಲವಾಗಿ ಅವುಗಳಂತೆ ಬೇರೆ ಯಾವುವೊ ಆದರೆ ಪ್ರತ್ಯೇಕವಾದ ವಸ್ತುಗಳಾಗಿ ಅವೂ ಗತಕಾಲವನ್ನು ಸೇರುತ್ತವೆ. ಒಂದು ದೃಷ್ಟಿಯಲ್ಲಿ ಪ್ರತಿಕ್ಷಣವೂ ನಾವು ಸಾಯುತ್ತಿದ್ದೇವೆ, ಮತ್ತು ಪುನರ್ಜನ್ಮ ತಾಳುತ್ತಿದ್ದೇವೆ; ಈ ಅನುಕ್ರಮಣ ಪರಂಪರೆ ಅವಿಚ್ಛಿನ್ನ ಅನನ್ಯತೆಯ ರೂಪುಕೊಟ್ಟಿದೆ. ಅದು "ಸದಾ ಪರಿವರ್ತನೆಯಾಗುತ್ತಿರುವ ಅನನ್ಯತೆಯ ನೈರಂತರ್ಯ." ಎಲ್ಲವೂ ಪರಿವರ್ತನೆ, ಚಲನೆ, ರೂಪಾಂತರ.

ಭೌತಕಾರ್ಯವನ್ನು ಯಾವುದೋ ನಿಯತಮಾರ್ಗದಲ್ಲೇ ಭಾವಿಸಿ, ಅರ್ಥಮಾಡಿಕೊಳ್ಳುತ್ತಿರುವ ನಮಗೆ ಈ ವಿಷಯಗಳನ್ನೆಲ್ಲ ಗ್ರಹಿಸುವುದು ಕಷ್ಟ. ಆದರೂ ಆಧುನಿಕ ಭೌತಶಾಸ್ತ್ರ ಮತ್ತು ಆಧುನಿಕ ತತ್ವಶಾಸ್ತ್ರಗಳ ಭಾವನೆಗೆ ಬೌದ್ಧದರ್ಶನ ಎಷ್ಟು ಸಮೀಪವಿದೆ ಎಂಬುದನ್ನು ಗಮನಿಸಿದರೆ ಆತ್ಯಾಶ್ಚರ್ಯ ವಾಗುತ್ತದೆ.

ಬುದ್ಧನ ಮಾರ್ಗ ಮನಶ್ಶಾಸ್ತ್ರದ ವಿಶ್ಲೇಷಣ ಪದ್ಧತಿ. ಅಲ್ಲಿಯೂ ಸಹ ಆಧುನಿಕ ವಿಜ್ಞಾನ ಶಾಸ್ತ್ರಗಳಲ್ಲೊಂದಾದ ಮನಶ್ಶಾಸ್ತ್ರದ ಇತ್ತೀಚಿನ ಸಂಶೋಧನೆಗಳಿಗೆ ಎಷ್ಟು ಸಮೀಪವಿದ್ದಾನೆಂದು ನೋಡಿದರೆ ಆಶ್ಚರ್ಯವಾಗುತ್ತದೆ. ಪರಮಾತ್ಮನ ಸಂಪರ್ಕವಿಲ್ಲದೆ ಮಾನವ ಜೀವನವನ್ನು ಯೋಚಿಸಿ ಪರೀಕ್ಷಿಸಲಾಯಿತು. ಏಕೆಂದರೆ ಅಂತಹ ಪರಮಾತ್ಮನಿದ್ದರೂ ಅವನು ನಮ್ಮ ಜ್ಞಾನದೃಷ್ಟಿಗೆ ಅತೀತ. ಮನಸ್ಸು ಮನಶ್ಶಕ್ತಿಗಳ ಸಂಗ್ರಹವಾದ ದೇಹದ ಒಂದು ಅಂಗ. ವ್ಯಕ್ತಿಯೂ ಈರೀತಿ ಮಾನಸಿಕ ಅವಸ್ಥೆಗಳ ಒಂದು ಗುಚ್ಛ, ಆತ್ಮವು ಭಾವನೆಗಳ ಒಂದು ವಾಹಿನಿಮಾತ್ರ. "ನಮ್ಮ ಭಾವನೆಗಳ ಪರಿಣಾಮವೇ ನಮ್ಮ ಇಂದಿನ ಇರವು."

ಜೀವನದಲ್ಲಿ ನೋವು ಮತ್ತು ಸಂಕಟಗಳಿಗೆ ಮಹತ್ವ ಕೊಡಲಾಗಿದೆ. ಬುದ್ಧನು ಬೋಧಿಸಿದ ನಾಲ್ಕು ಮಹಾ ಸತ್ಯಗಳು ಈ ಸಂಕಟ, ಅದರ ಕಾರಣ, ಅದರ ನಿವಾರಣೆಯ ಸಾಧ್ಯಾಸಾಧ್ಯತೆ ಮತ್ತು ನಿವಾರಣಾಮಾರ್ಗಗಳ ವಿಷಯವನ್ನೇ ತಿಳಿಸುತ್ತವೆ. ಅವನು ತನ್ನ ಶಿಷ್ಯರಿಗೆ ಬೋಧೆಮಾಡುತ್ತ, "ಯುಗಯುಗಗಳಿಂದ ನೀವು ಈ ಸಂಕಟವನ್ನು ಅನುಭವಿಸುತ್ತಾಬಂದಾಗ ಚತುಸ್ಸಾಗರಗಳ ನೀರಿಗಿಂತ ಹೆಚ್ಚು ಕಣ್ಣೀರು ಸುರಿಸಿದ್ದೀರಿ; ಈ ಜೀವನ ಯಾತ್ರೆಯಲ್ಲಿ ದಾರಿತಪ್ಪಿ ಅಲೆದು ವ್ಯಥೆಪಟ್ಟಿ ಅತ್ತಿದ್ದೀರಿ; ಏಕೆಂದರೆ ನಿಮಗೆ ಅಹಿತವಾದುದೇ ನಿಮ್ಮ ಪಾಲಿಗೆ ಬಂದಿತು; ನಿಮಗೆ ಪ್ರಿಯವಾದದ್ದು ನಿಮ್ಮ ಪಾಲಿಗೆ ಬರಲಿಲ್ಲ" ಎಂದು ಹೇಳಿದನಂತೆ.

ಈ ಸಂಕಟ ಸ್ಥಿತಿಯ ನಿವಾರಣೆಯೇ 'ನಿರ್ವಾಣ.' 'ನಿರ್ವಾಣ' ಎಂದರೇನು ಎನ್ನುವುದರಲ್ಲಿ ಅನೇಕರು ಅನೇಕ ವಿಧವಾಗಿ ಅರ್ಥಮಾಡುತ್ತಾರೆ. ನಮ್ಮ ಪರಿಮಿತ ಮನೋಭಾವನೆಗಳ ಪ್ರಮಾಣದಲ್ಲಿ, ಅಸಮರ್ಥ ಭಾಷೆಯಲ್ಲಿ ಅಲೌಕಿಕ ಗಹನಸ್ಥಿತಿಯನ್ನು ವರ್ಣಿಸುವುದು ಬಹುಕಷ್ಟ. ನಿರ್ವಾಣ ಎಂದರೆ ನಿರ್ನಾಮವಾಗುವುದು, ನಾಶವಾಗುವುದು ಎಂದು ಕೆಲವರ ಮತ. ಆದರೆ ಬುದ್ಧನು "ಅದು ಒಂದು ಉತ್ಕಟಕ್ರಿಯಾವಸ್ಥೆ" ಎಂದು ಹೇಳಿದನಂತೆ. ಅದು ದುರ್ವ್ಯಾಮೋಹದ ನಾಶ, ಬರಿ ನಾಶವಲ್ಲ. ಇದಲ್ಲ ಇದಲ್ಲ ಎಂದು ಹೇಳಬಹುದೇ ವಿನಾ ಇದೇ ಎಂದು ಹೇಳಲು ಸಾಧ್ಯವಿಲ್ಲ.

ಬುದ್ಧನ ಮಾರ್ಗ ಭೋಗಾಸಕ್ತ ಜೀವನಕ್ಕೂ, ಆತ್ಮನಿಗ್ರಹಕ್ಕೂ ಮಧ್ಯಮಾರ್ಗ. ತಾನೇ ದೇಹ ದಂಡನೆ ಮಾಡಿಕೊಂಡ ತನ್ನ ಅನುಭವದಿಂದ, ದೇಹಶಕ್ತಿಯಿಲ್ಲದವನು ಸನ್ಮಾರ್ಗದಲ್ಲಿ ಮುಂದುವರಿಯಲಾರ ಎಂದು ಹೇಳಿದ. ಈ ಮಧ್ಯಮಾರ್ಗವೇ ಆರ್ಯರ ಅಷ್ಟವಿಧಮಾರ್ಗ. ಸದಾಚಾರ, ಸದಾಶೆ,

ಸನ್ನುಡಿ, ಸನ್ನಡತೆ, ಸಜ್ಜೀವನ, ಸತ್ಪ್ರಯತ್ನ, ಸದ್ಭಾವನೆ ಮತ್ತು ಸತ್ಪ್ರಾರ್ಥನೆ. ಇವೆಲ್ಲ ಆತ್ಮೋನ್ನತಿಯ ವಿಷಯ ಇದರಲ್ಲಿ ವರಪ್ರಸಾದವೇನೂ ಇಲ್ಲ. ಯಾರೇ ಆಗಲಿ ಈ ದಾರಿಯಲ್ಲಿ ನಡೆದು ಕೃತಕೃತ್ಯನಾದರೆ ಆತನಿಗೆ ಸೋಲೆಂಬುದಿಲ್ಲ. ಆತ್ಮಾರ್ಪಣೆ ಮಾಡಿದ ಮನುಷ್ಯನ ವಿಜಯವನ್ನು ಅಪಜಯಗೊಳಿಸಲು ದೇವರಿಗೂ ಸಾಧ್ಯವಿಲ್ಲ.

ಬುದ್ಧನು ತನ್ನ ಶಿಷ್ಯರಿಗೆ ಅವರ ತಿಳಿವಿನ ಮಟ್ಟಕ್ಕೆ ನಿಲುಕುವ ಮತ್ತು ಆಚರಣೆಗೆ ಸಾಧ್ಯವಾದ ಬೋಧೆಯನ್ನೇ ಮಾಡಿದ. ಆತನ ಬೋಧೆ ಎಲ್ಲ ವಸ್ತುವಿನ ಪೂರ್ಣ ರಹಸ್ಯವನ್ನು ತಿಳಿಸುವ ಪ್ರಯತ್ನ ವಲ್ಲ; ಎಲ್ಲವನ್ನೂ ವಿವರಿಸುವ ಉದ್ದೇಶವೂ ಅದಕ್ಕಿರಲಿಲ್ಲ. ಒಂದು ಬಾರಿ ಕೆಲವು ತರಗೆಲೆಗಳನ್ನು ತನ್ನ ಕೈಲಿ ತೆಗೆದುಕೊಂಡು, ತನ್ನ ಕೈಲಿರುವ ಎಲೆಗಳಲ್ಲದೆ ಬೇರೆ ಎಲೆಗಳು ಏನಾದರೂ ಇವೆಯೇ ಎಂದು ತನ್ನ ಪ್ರಿಯ ಶಿಷ್ಯನಾದ ಆನಂದನನ್ನು ಕೇಳಿದನಂತೆ. “ಮಾಗಿಯ ಎಲೆಗಳು ಸುತ್ತಲೂ ಉದುರುತ್ತಿವೆ. ಇನ್ನೂ ಎಣಿಸಲಾರದಷ್ಟು ಎಲೆಗಳಿವೆ” ಎಂದನಂತೆ. ಆಗ ಬುದ್ಧ “ಅದೇ ರೀತಿ ಕೆಲವು ಸತ್ಯಗಳನ್ನು ಮಾತ್ರ ನಿಮಗೆ ತಿಳಿಸಿದ್ದೇನೆ. ಇವಲ್ಲದೆ ಸಾವಿರಾರು ಸತ್ಯಗಳು ಎಣಿಸಲಾರದಷ್ಟಿವೆ” ಎಂದನಂತೆ.

## ೨೦. ಬುದ್ಧನ ಕಥೆ

ಬುದ್ಧನ ಕಥೆಯು ಬಾಲ್ಯದಲ್ಲಿಯೇ ನನ್ನ ಮನಸ್ಸನ್ನು ಸೆಳೆಯಿತು; ಅನೇಕ ಅಂತರ್ಯುದ್ಧಗಳು ನೋವು ಸಂಕಟಗಳನ್ನು ಅನುಭವಿಸಿ ಬುದ್ಧನಾದ ಆ ಹುಡುಗ ಸಿದ್ಧಾರ್ಥನು ನನ್ನ ಆದರ್ಶ ಪುರುಷ ನಾದ. ಎಡ್ವಿನ್ ಆರ್‌ನಾಲ್ಡ್‌ನ ಏಷ್ಯದ ಜ್ಯೋತಿ (Light of Asia) ನನ್ನ ಮೆಚ್ಚಿನ ಪುಸ್ತಕವಾ ಯಿತು. ಅನೇಕ ವರ್ಷಗಳ ನಂತರ ನನ್ನ ಪ್ರಾಂತ್ಯದಲ್ಲಿ ನಾನು ದೀರ್ಘ ಪ್ರವಾಸ ಮಾಡಿದಾಗ ಬುದ್ಧನ ಇತಿಹಾಸಕ್ಕೆ ಸಂಬಂಧಿಸಿದ ಸ್ಥಳಗಳನ್ನೆಲ್ಲ ನೋಡಿದೆ. ಕೆಲವು ವೇಳೆ ಅದೇ ಉದ್ದಿಶ್ಯದಿಂದ ಪ್ರಯಾಣಹೋಗುತ್ತಿದ್ದೆ. ಇವುಗಳೆಲ್ಲವೂ ನನ್ನ ಪ್ರಾಂತ್ಯ ಅಥವ ಅದರ ಸಮೀಪದಲ್ಲಿವೆ. ಇದೋ ಇಲ್ಲಿ (ನೇಪಾಲದ ಗಡಿಯಲ್ಲಿ) ಬುದ್ಧನ ಜನ್ಮಸ್ಥಳ, ಇಲ್ಲಿ ಅವನು ಓಡಾಡಿದ ಸ್ಥಳ, ಇಲ್ಲಿ (ಬೀಹಾರಿನ ಗಯ ದಲ್ಲಿ) ಬೋಧಿ ವೃಕ್ಷದ ಕೆಳಗೆ ಕುಳಿತು ಬೆಳಕನ್ನು ಕಂಡ ಸ್ಥಳ, ಇಲ್ಲಿ ಅವನು ತನ್ನ ಪ್ರಥಮ ಬೋಧೆ ಯನ್ನು ಉಪದೇಶ ಮಾಡಿದ ಸ್ಥಳ, ಇಲ್ಲಿ ಅವನು ದೇಹವಿಟ್ಟ ಸ್ಥಳ; ಎಲ್ಲವೂ ಇಲ್ಲಿಯೇ?

ಬೌದ್ಧ ಧರ್ಮವು ಇನ್ನೂ ಜೀವಂತ ಮತ್ತು ಪ್ರಧಾನ ಧರ್ಮವಾಗಿರುವ ದೇಶಗಳಿಗೆ ಹೋದಾಗ ಅವರ ದೇವಸ್ಥಾನಗಳನ್ನು ವಿಹಾರಗಳನ್ನು ನೋಡಲು ಹೋಗುತ್ತಿದ್ದೆ. ಅವರ ಸಂನ್ಯಾಸಿಗಳನ್ನೂ, ಇತರರನ್ನೂ ಕಂಡು ಬೌದ್ಧಮತವು ಜನರಿಗೆ ಯಾವ ಪ್ರಯೋಜನಮಾಡಿದೆ ಎಂದು ತಿಳಿದುಕೊಳ್ಳಲು ಪ್ರಯತ್ನ ಮಾಡಿದೆ. ಅವರ ಮೇಲೆ ಯಾವ ಪ್ರಭಾವ ಬೀರಿತ್ತು, ಅವರ ಮನಸ್ಸಿನ ಮೇಲೆ, ಮುಖದಮೇಲೆ ಯಾವ ವರ್ಚಸ್ಸನ್ನು ಬೀರಿತ್ತು, ಆಧುನಿಕ ಜೀವನಕ್ಕೆ ಅವರ ಪ್ರತಿಕ್ರಿಯೆ ಏನು? ಎಷ್ಟೋ ವಿಷಯ ನನಗೆ ಸರಿತೋರಲಿಲ್ಲ. ವಿಚಾರಪೂರಿತ ನೈತಿಕ ಧರ್ಮದ ಮೇಲೆ ಅಸಾಧ್ಯ ಶಬ್ದಾಡಂಬರದ ಹೊರೆ, ವಿಧಿ ಕ್ರಮಗಳು, ಶಾಸ್ತ್ರ ನಿಯಮಗಳು, ಮತ್ತು ಬುದ್ಧನೇ ಬೇಡವೆಂದ ತಾತ್ವಿಕವಾದಗಳು ಮತ್ತು ಇಂದ್ರಜಾಲ ವಿದ್ಯೆ ಸಹ ಬೆಳೆದು ಜೊಂಡುಗಟ್ಟಿತ್ತು. ಬುದ್ಧನು ಎಚ್ಚರಿಕೆ ಕೊಟ್ಟಿದ್ದರೂ ಅವನನ್ನು ದೈವತ್ವಕ್ಕೇರಿಸಿದ್ದರು. ದೇವಸ್ಥಾನಗಳಲ್ಲಿ, ಇತರ ಕಡೆಗಳಲ್ಲಿ ಅವನ ಬೃಹದಾಕಾರದ ವಿಗ್ರಹಗಳು ನನ್ನನ್ನೇ ದಿಟ್ಟಿಸಿ ನೋಡುತ್ತಿದ್ದವು. ಬುದ್ಧನೇ ಪುನರವತಾರ ಮಾಡಿದರೆ ಏನು ಅಂದುಕೊಳ್ಳುತ್ತಾನೋ ಎಂದು ಚಕಿತನಾದೆ. ಸಂನ್ಯಾಸಿಗಳನೇಕರು ಜ್ಞಾನ ಶೂನ್ಯರು; ದುರಂಹಕಾರಿಗಳು; ತಮಗಲ್ಲದಿದ್ದರೂ ತಮ್ಮ ಕಾಷಾಯಗಳಿಗೆ ಪೂಜಾಪೇಕ್ಷಿಗಳು. ಪ್ರತಿಯೊಂದು ದೇಶದಲ್ಲೂ ರಾಷ್ಟ್ರದ ಹುಟ್ಟುಗುಣವು ಧರ್ಮದಮೇಲೂ ತನ್ನ ದರ್ಪ ತೋರಿಸಿತ್ತು. ತನ್ನ ಪೂರ್ವಪದ್ಧತಿಯ ಮತ್ತು ಜೀವನ ಕ್ರಮದ ವೈಶಿಷ್ಟ್ಯಕ್ಕನುಗುಣವಾಗಿ ಧರ್ಮವನ್ನು ವಿಕೃತಿಗೊಳಿಸಿತು.

ಇನ್ನೆಷ್ಟೋ ವಿಷಯಗಳು ನನ್ನ ಮನಸ್ಸಿಗೆ ಮೆಚ್ಚಿಗೆಯಾದವು. ಕೆಲವು ವಿಹಾರಗಳಲ್ಲಿ ಅವಕ್ಕೆ ಸೇರಿದ ಶಾಲೆಗಳಲ್ಲಿ ಶಾಂತಿಯುತ ಅಧ್ಯಯನ ಮತ್ತು ಧ್ಯಾನದ ವಾತಾವರಣವಿತ್ತು. ಅನೇಕ ಸಂನ್ಯಾಸಿಗಳ ಮುಖದ ಮೇಲೆ ಶಾಂತಿ ಮತ್ತು ತುಷ್ಟಿಯ ಮುದ್ರೆ ಇತ್ತು, ಒಂದು ವಿಧವಾದ ಗಾಂಭೀರ್ಯ, ಮೃದು ಸ್ವಭಾವ, ನಿರ್ಲಿಪ್ತ ಮನೋಭಾವನೆ ಮತ್ತು ಪ್ರಪಂಚವ್ಯಸನಗಳಿಂದ ದೂರವಾದ ಸ್ವಾತಂತ್ರ್ಯ ಅವರಲ್ಲಿ ಕಾಣುತ್ತಿತ್ತು. ಇದೆಲ್ಲ ಇಂದಿನ ಜೀವನಕ್ಕೆ ಹೊಂದಿಕೊಂಡಿದೆಯೆ? ಅಥವ ಅದಕ್ಕೆ ಹೆದರಿ ಓಡಿಹೋಗುವ ಮನೋವೃತ್ತಿಯೆ? ಇದನ್ನೆಲ್ಲ ಜೀವನದ ಅನಂತ ಹೋರಾಟದೊಡನೆ ಸಮನ್ವಯಗೊಳಿಸಿ ನಮ್ಮನ್ನು ಪೀಡಿಸುತ್ತಿರುವ ಪಾಶವೀ ವೃತ್ತಿ, ದುರಾಕ್ರಮಣ ಮತ್ತು ಹಿಂಸೆಯನ್ನು ಹತೋಟಿಯಲ್ಲಿಡಲು ಸಾಧ್ಯವಿಲ್ಲವೆ?

ಬೌದ್ಧಮತದ ನಿರಾಶಾವಾದವು ನನ್ನ ಜೀವನ ದೃಷ್ಟಿಗೆ ಸರಿಹೋಗಲಿಲ್ಲ; ಜೀವನ ಮತ್ತು ಅದರ ಸಮಸ್ಯೆಗಳಿಗೆ ಹಿಮ್ಮುಖವಾಗಿ ಹಿಂದೇಟುಹಾಕುವುದೂ ಒಪ್ಪಿಗೆಯಾಗಲಿಲ್ಲ. ಎಲ್ಲಿಯೋ, ನನ್ನ ಮನಸ್ಸಿನ ಹಿನ್ನೆಲೆಯಲ್ಲಿ, ದೈವಭಕ್ತಿಯಿಲ್ಲದ ನಾನು ಮನುಷ್ಯನಂತೆ, ಪ್ರಕೃತಿ ಮತ್ತು ಜೀವನದ ಪೂರ್ಣತೆಯನ್ನು ಬಯಸುವ ಮತ್ತು ಜೀವನ ಸಹಜವಾದ ಹೋರಾಟಗಳಿಗೆ ಹೆದರಿಕೊಳ್ಳದ ಒಬ್ಬ ಅಮತೀಯನಾಗಿದ್ದೆ. ನನ್ನ ಅನುಭವಗಳು, ನನ್ನ ಸುತ್ತಮುತ್ತಲಿನ ನೋವು ಮತ್ತು ಸಂಕಟಗಳು ಆ ಮನೋಭಾವನೆಯನ್ನು ನಾಶಮಾಡಿರಲಿಲ್ಲ.

ಬೌದ್ಧಧರ್ಮವು ನಿಷ್ಕ್ರಿಯೆ ಮತ್ತು ನಿರಾಶಾವಾದವನ್ನು ಬೋಧಿಸುವುದೆ? ಅದರ ಅನುವಾದಕರು ಆರೀತಿ ಹೇಳಬಹುದು. ಅದರ ಅನುಯಾಯಿಗಳೇ ಅನೇಕರು ಆರೀತಿ ಅಭಿಪ್ರಾಯ ಪಡಬಹುದು. ಅದರ ಸೂಕ್ಷ್ಮವಿಚಾರಗಳನ್ನು, ಅನಂತರದ ಜಟಿಲತೆಯನ್ನು ಮತ್ತು ತಾತ್ವಿಕ ಬೆಳೆವಣಿಗೆಯನ್ನು ತೀರ್ಮಾನಮಾಡಲು ನನಗೆ ಸಾಧ್ಯವಿಲ್ಲ; ಆದರೆ ಬುದ್ಧನ ವಿಷಯ ಯೋಚನೆಮಾಡಿದಾಗ ನನ್ನ ಎದೆಯಲ್ಲಿ ಒಂದು ಬಿರುಗಾಳಿಯೇ ಏಳುತ್ತದೆ. ನಿಷ್ಕ್ರಿಯೆ ಮತ್ತು ನಿರಾಶೆಯನ್ನು ಬೋಧಿಸಿದ ಈ ಧರ್ಮ ಅಷ್ಟು ಅಸಂಖ್ಯಾತ ಜನಸ್ತೋಮದ ಮೇಲೆ—ಅವರಲ್ಲಿ ಕೆಲವರು ಮಹಾಮೇಧಾವಿಗಳು—ಅಂತಹ ಒಂದು ಪ್ರಬಲವಾದ ಪ್ರಭಾವ ಬೀರಿತ್ತೆಂದು ಊಹಿಸುವುದೂ ಸಾಧ್ಯವಿಲ್ಲ.

ಅಸಂಖ್ಯಾತ ಪ್ರೇಮಪೂರ್ಣ ಹಸ್ತಗಳು ಕಲ್ಲಿನಲ್ಲಿ, ಅಮೃತಶಿಲೆಯಲ್ಲಿ, ಕಂಚಿನಲ್ಲಿ ಕೆತ್ತಿದ ಬುದ್ಧನ ಕಲ್ಪನಾಚಿತ್ರಗಳು ಭಾರತೀಯ ಭಾವನೆಯ ಪೂರ್ಣ ಆದರ್ಶದ ಅಥವ ಅದರ ಒಂದು ಮುಖ್ಯ ದೃಷ್ಟಿಯ ಸಂಕೇತ. ಕಮಲದ ಹೂವಿನ ಮೇಲೆ ಶಾಂತ ನಿಶ್ಚಲ ಮುಖಮುದ್ರೆಯಿಂದ, ಕಾಮರಹಿತನಾಗಿ, ಮೋಹಾತೀತನಾಗಿ, ಪ್ರಪಂಚದ ಪ್ರಚಂಡ ಬಿರುಗಾಳಿ ಮತ್ತು ಹೋರಾಟದಿಂದ ದೂರನಾಗಿ, ಕುಳಿತ ಬುದ್ಧನು ನಮ್ಮ ನಿಲುವಿಗೆ ಬಹುದೂರವಿದ್ದಂತೆ, ದೃಷ್ಟಿಗೆ ಎಟುಕದಂತೆ ಕಾಣುತ್ತಾನೆ. ಪುನಃ ಇನ್ನೊಮ್ಮೆ ನೋಡಿದರೆ ಆ ಪ್ರಶಾಂತ, ನಿಶ್ಚಲ ಮುಖಮುದ್ರೆಯ ಹಿಂದೆ ನಮ್ಮ ಅನುಭವದ ರಾಗ ಭಾವೋದ್ವೇಗಗಳಿಗಿಂತ ಅತ್ಯಾಶ್ಚರ್ಯವೂ, ಅತಿ ತೀಕ್ಷ್ಣವೂ ಆದ ರಾಗ ಮತ್ತು ಭಾವೋನ್ಮಾದವಿರುವಂತೆ ತೋರುತ್ತದೆ. ಆತನ ಕಣ್ಣುಗಳು ಮುಚ್ಚಿವೆ, ಆದರೆ ಯಾವುದೋ ಒಂದು ಆತ್ಮಶಕ್ತಿ ಒಡೆದು ನೋಡುವಂತಿದೆ. ದೇಹಾದ್ಯಂತ ಒಂದು ಜೀವಶಕ್ತಿ ಪ್ರವಹಿಸುತ್ತದೆ. ಯುಗಯುಗಗಳು ಉರುಳುತ್ತವೆ. ಬುದ್ಧನು ನಿಜವಾಗಿ ಬಹುದೂರವಿದ್ದಂತೆ ತೋರುವುದಿಲ್ಲ. ಅವನ ವಾಣಿಯು ನಮ್ಮ ಕಿವಿಯಲ್ಲಿ ಮಾತನಾಡುತ್ತದೆ. "ಹೋರಾಟಕ್ಕೆ ಹೆದರಿ ಓಡಬೇಡ; ಶಾಂತಚಿತ್ತನಾಗಿ ಎದುರಿಸು. ಜೀವನದಲ್ಲಿ ಸದಾ ಪ್ರವೃದ್ಧಿಯ ಪ್ರಗತಿಯ ಮಹದವಕಾಶಗಳನ್ನು ನೋಡು" ಎಂದು ಹೇಳುತ್ತದೆ.

ಇಂದಿಗೂ ಎಂದಿನಂತೆ ವ್ಯಕ್ತಿತ್ವಕ್ಕೆ ಮಹತ್ವವಿದೆ, ಅದರಲ್ಲೂ ಮಾನವ ಮನಸ್ಸಿನ ಮೇಲೆ ಅದ್ಭುತ ಪರಿಣಾಮ ಮಾಡಿದ, ಹೆಸರು ಕೇಳಿದೊಡನೆ ಇಂದಿಗೂ ರೋಮಾಂಚವನ್ನುಂಟುಮಾಡುವ ಮಹಾ ಪುರುಷ ಬುದ್ಧನು ಬಾರ್ತ್ ಹೇಳುವಂತೆ "ಪ್ರಶಾಂತಮುದ್ರೆಯ ಸುಂದರ ಗಾಂಭೀರ್ಯದ, ಸಕಲ ಪ್ರಾಣಿಗಳಲ್ಲೂ ಅಪಾರ ದಯೆಯ, ಎಲ್ಲ ಆರ್ತರ ಮಾತಿಗೆ ಕಿವಿಗೊಡುವ ದೈನ್ಯತೆಯ, ಸಂಪೂರ್ಣ ನೈತಿಕ ಸ್ವಾತಂತ್ರ್ಯ ಮತ್ತು ಎಲ್ಲ ವಿರೋಧ ಭಾವನೆಯಿಂದ ದೂರನಾದ ವ್ಯಕ್ತಿಯ ಮೂರ್ತಸ್ವರೂಪ"

ನಿದ್ದಿರಬೇಕು. ಅಂತಹ ಮಹಾನುಭಾವನಿಗೆ ಜನ್ಮ ಕೊಡಬಲ್ಲ ರಾಷ್ಟ್ರದಲ್ಲಿ ಜನಾಂಗದ ವಿವೇಕದ ಅಂತಃಶಕ್ತಿಯ ನಿಧಿಯೂ ಇರಬೇಕು.

## ೨೧. ಅಶೋಕ

ಚಂದ್ರಗುಪ್ತ ಮೌರ್ಯನು ಭಾರತ ಮತ್ತು ಪಾಶ್ಚಾತ್ಯ ಪ್ರಪಂಚದ ಮಧ್ಯೆ ನಡೆಸಿದ ವ್ಯವಹಾರ ಸಂಬಂಧವು ಅವನ ಮಗ ಬಿಂದುಸಾರನ ಕಾಲದಲ್ಲೂ ಮುಂದುವರಿಯಿತು. ಈಜಿಪ್ಟ್ ದೇಶದ ಟಾಲೆಮಿ ಕಡೆಯಿಂದಲೂ, ಪಶ್ಚಿಮ ಏಷ್ಯದ ಸೆಲ್ಯೂಕಸ್ ನಿಕಟಾರ್‌ನ ಮಗ ಮತ್ತು ಉತ್ತರಾಧಿಕಾರಿಯಾದ ಆಂಟಿಯೋಕಸ್‌ನಿಂದಲೂ ಪಾಟಲಿಪುತ್ರದ ರಾಜಸಭೆಗೆ ರಾಯಭಾರಿಗಳು ಬರುತ್ತಿದ್ದರು. ಚಂದ್ರಗುಪ್ತನ ಮೊಮ್ಮಗನಾಗ ಅಶೋಕನು ಈ ಸಂಬಂಧವನ್ನು ಇನ್ನೂ ವೃದ್ಧಿಗೊಳಿಸಿದನು. ಮುಖ್ಯವಾಗಿ ಬೌದ್ಧಮತಪ್ರಸಾರದಿಂದ ಆತನ ಕಾಲದಲ್ಲಿ ಭಾರತವು ಬಹು ಮುಖ್ಯವಾದ ಅಂತರ ರಾಷ್ಟ್ರೀಯ ಕೇಂದ್ರವಾಯಿತು.

ಅಶೋಕನು ಕ್ರಿಸ್ತಪೂರ್ವ ೨೭೩ರಲ್ಲಿ ಈ ಮಹಾ ಸಾಮ್ರಾಜ್ಯಕ್ಕೆ ಅಧಿಪತಿಯಾದನು. ವಿಶ್ವ ವಿದ್ಯಾ ನಿಲಯದ ಕೇಂದ್ರವಾದ ತಕ್ಷಶಿಲೆಯೇ ರಾಜಧಾನಿಯಾಗಿದ್ದ ವಾಯುವ್ಯ ಪ್ರಾಂತ್ಯಕ್ಕೆ ಮೊದಲು ಆತನು ಅಧಿಕಾರಿಯಾಗಿದ್ದನು. ಇಷ್ಟುಹೊತ್ತಿಗೆ ಭಾರತದ ಬಹುಭಾಗವು ಸಾಮ್ರಾಜ್ಯದಲ್ಲಿ ಸೇರಿ ಏಷ್ಯದವರೆಗೆ ಹರಡಿತ್ತು. ನೈರುತ್ಯ ಮೂಲೆಯೂ ಮತ್ತು ದಕ್ಷಿಣದ ಸ್ವಲ್ಪಭಾಗ ಮಾತ್ರ ಅದರ ಆಧಿಪತ್ಯಕ್ಕೆ ಸೇರಿರಲಿಲ್ಲ. ಇಡೀ ಭಾರತವನ್ನು ಒಂದು ಕೇಂದ್ರ ರಾಜ್ಯಾಡಳಿತದೊಳಗೆ ತಂದು ಒಟ್ಟುಗೂಡಿಸಬೇಕೆಂಬ ಹಿಂದಿನ ಹಿರಿಯಾಸೆಯು ಅಶೋಕನನ್ನೂ ಹಿಡಿಯಿತು. ಒಡನೆ ಪೂರ್ವ ತೀರದ ಕಳಿಂಗ ರಾಜ್ಯವನ್ನು ಗೆಲ್ಲಲು ದಂಡೆತ್ತಿಹೋದ. ಕಳಿಂಗ ಈಗಿನ ಒರಿಸ್ಸ ಮತ್ತು ಆಂಧ್ರದೇಶದ ಕೆಲವು ಭಾಗವಾಗಿತ್ತು. ಈ ಯುದ್ಧದಲ್ಲಿ ಅನೇಕ ಜನರು ಕೊಲೆಯಾದರು. ಈ ಸುದ್ದಿಯು ಅಶೋಕನ ಕಿವಿ ಮುಟ್ಟಿದೊಡನೆ ಶೋಕದಲ್ಲಿ ಮುಳುಗಿದ ಮತ್ತು ಯುದ್ಧವೆಂದರೆ ಅವನಿಗೆ ಅಸಹ್ಯಹುಟ್ಟಿತು. ಪ್ರಪಂಚದ ಇತಿಹಾಸದಲ್ಲಿ ವಿಜಯಶಾಲಿಗಳಾದ ರಾಜರ ಮತ್ತು ಸೇನಾನಾಯಕರ ಪರಂಪರೆಯಲ್ಲಿ ವಿಜಯೋನ್ಮತ್ತನಾಗಿರಬೇಕಾದಾಗ ಯುದ್ಧವನ್ನೇ ತ್ಯಜಿಸಲು ನಿರ್ಧರಮಾಡಿದ ಮಹಾಪುರುಷನೆಂದರೆ ಅಶೋಕ ಒಬ್ಬನೆ. ದಕ್ಷಿಣ ಭಾರತದ ತುದಿಯೊಂದನ್ನು ಬಿಟ್ಟು—ಮನಸ್ಸುಮಾಡಿದ್ದರೆ ಅದೂ ಅವನದಾಗುತ್ತಿತ್ತು—ಇಡೀ ಭಾರತವೇ ಅವನ ಅಧೀನವಾಗಿತ್ತು. ಆದರೆ ತಿರುಗಿ ಆಕ್ರಮಣಮಾಡಲು ನಿರಾಕರಿಸಿದ. ಅವನಲ್ಲಿ ಅಸಾಧ್ಯ ಮಾನಸಿಕ ಪರಿವರ್ತನೆಯಾಯಿತು. ಬುದ್ಧನ ಉಪದೇಶದ ಪ್ರಭಾವದಿಂದ ಬೇರೆ ಕ್ಷೇತ್ರದಲ್ಲಿ ಸಾಹಸಮಾಡಿ ಜಯಶೀಲನಾದ.

ಅಶೋಕನ ಮನಸ್ಸಿನಮೇಲೆ ಯಾವ ಪರಿಣಾಮವಾಯಿತು, ಮುಂದೆ ಅವನು ಏನುಮಾಡಿದ ಎಂಬುದು ಅವನೇ ಕೆತ್ತಿಸಿದ ಶಿಲಾಲೇಖನಗಳಲ್ಲಿ, ಲೋಹ ಪಟಗಳಲ್ಲಿ ಬರೆದಿಟ್ಟ ಶಾಸನಗಳಲ್ಲಿ ಅವನ ಮಾತುಗಳಿಂದಲೇ ತಿಳಿಯುತ್ತದೆ. ಈ ಶಾಸನಗಳು ಭಾರತದ ನಾನಾಕಡೆಗಳಲ್ಲಿ ಈಗಲೂ ನಮಗೆ ದೊರೆಯುತ್ತವೆ. ಅವುಗಳಿಂದ ಅವನ ಸಂದೇಶ ಅವನ ಪ್ರಜೆಗಳಿಗೆ ಮಾತ್ರವಲ್ಲ, ಮುಂದಿನ ಪೀಳಿಗೆಗಳಿಗೂ ದೊರೆಯಿತು. ಒಂದು ಶಾಸನದಲ್ಲಿ ಈ ರೀತಿ ಹೇಳಿದೆ :

"ಚಕ್ರವರ್ತಿ ಸಾರ್ವಭೌಮನು ರಾಜ್ಯಾಭಿಷಿಕ್ತನಾದ ಎಂಟು ವರ್ಷಕ್ಕೆ ಕಳಿಂಗ ರಾಜ್ಯವನ್ನು ಜಯಿಸಿದನು. ೧೫೦ ಸಾವಿರ ಜನರು ಸೆರೆಸಿಕ್ಕರು ; ಒಂದು ನೂರು ಸಾವಿರ ಜನರ ವಧೆಯಾಯಿತು. ಅದಕ್ಕೂ ಎಷ್ಟೋಪಾಲು ಜನರು ಸತ್ತರು.

"ಕಳಿಂಗರಾಜ್ಯ ಅಧೀನವಾದೊಡನೆ ಸಾಮ್ರಾಟ್ ಅಶೋಕನು ಭಕ್ತಿಧರ್ಮದ ರಕ್ಷಣೆಗಾಗಿ ಪ್ರತಿಜ್ಞೆಮಾಡಿದನು. ಆ ಧರ್ಮದ ಮೇಲೆ ವಿಶ್ವಾಸವೂ ನಿಷ್ಠೆಯೂ ಅಪಾರವಾಗಿ ಬೆಳೆಯಿತು. ಹಿಂದೆಂದೂ ದಾಸ್ಯಕ್ಕೀಡಾಗದ ಒಂದು ರಾಜ್ಯವನ್ನು ಗೆಲ್ಲಬೇಕಾದರೆ ಕೊಲೆ ಸಾವು ಮತ್ತು ಅನೇಕರ ಬಂಧನ ಅನಿವಾರ್ಯ. ಆದ್ದರಿಂದ ಕಳಿಂಗರಾಜ್ಯವನ್ನು ಅಧೀನಮಾಡಿಕೊಳ್ಳಲು ಆದ ಕೊಲೆಯಿಂದ ಚಕ್ರ

ವರ್ತಿಯ ಮನಸ್ಸಿನಲ್ಲಿ ಪಶ್ಚಾತ್ತಾಪ ಉದ್ಭವಿಸಿತು. ಮಹಾಸಾಮ್ರಾಟನಿಗೆ ಅದೊಂದು ದೊಡ್ಡ ವ್ಯಸನ ಮತ್ತು ದುಃಖ."

ಕಳಿಂಗ ಯುದ್ಧದಲ್ಲಿ ಕೊಲೆಯಾದವರ ಅಥವ ಸೆರೆಸಿಕ್ಕಿದವರ ನೂರರಲ್ಲೊಂದು ಪಾಲು, ಸಾವಿರದಲ್ಲಿ ಒಂದು ಪಾಲು ಸಹ ಇನ್ನು ಎಂದೂ ಕೊಲ್ಲಬಾರದು, ಬಂಧಿಸಲಾಗದು ಎಂಬುದು ಸಾಮ್ರಾಟನ ಹಟ. ಕರ್ತವ್ಯ ಧರ್ಮದಿಂದ ಅಥವ ದಯಾಧರ್ಮದಿಂದ ಜನರ ಹೃದಯವನ್ನು ಸೂರೆಗೊಳ್ಳುವುದೇ ನಿಜವಾದ ವಿಜಯ. ಅಂತಹ ವಿಜಯಗಳನ್ನು ಅಶೋಕನು ತನ್ನ ಅಧೀನ ರಾಜ್ಯಗಳಲ್ಲಿ ಮಾತ್ರವಲ್ಲ, ದೂರದೇಶಗಳಲ್ಲಿ ಸಹ ಗಳಿಸಿದ್ದನೆಂದು ಆ ಶಾಸನ ಹೇಳುತ್ತದೆ. ಇಷ್ಟೇ ಅಲ್ಲದೆ :

"ಯಾರಾದರೂ ಒಂದು ಕೆಡುಕುಮಾಡಿದರೆ ಅದನ್ನು ಸಹ ಎಷ್ಟು ಸಾಧ್ಯವೋ ಅಷ್ಟು ಚಕ್ರವರ್ತಿಯು ಸಹಿಸಿಕೊಳ್ಳಬೇಕು. ಚಕ್ರವರ್ತಿಯು ತನ್ನ ರಾಜ್ಯದ ಕಾಡುಜನರನ್ನು ಸಹ ಕರುಣೆಯಿಂದ ನೋಡುತ್ತಾನೆ. ಅವರ ಜೀವನವನ್ನು ತಿದ್ದಲು ಪ್ರಯತ್ನಮಾಡುತ್ತಾನೆ. ಆ ರೀತಿ ಮಾಡದೆ ಹೋದರೆ ಚಕ್ರವರ್ತಿಯು ಪುನಃ ವ್ಯಥೆಪಡುತ್ತಾನೆ. ಎಲ್ಲ ಜೀವಿಗಳೂ ನಿರ್ಭಯರಾಗಿ, ಆತ್ಮ ಸಂಯಮದಿಂದ, ಮನಶ್ಯಾಂತಿಯಿಂದ ಸುಖವಾಗಿ ಬಾಳಲೆಂಬುದೇ ಸಾಮ್ರಾಟನ ಆಸೆ" ಎಂದು ಹೇಳುತ್ತದೆ.

ಭಾರತದಲ್ಲಿ, ಏಷ್ಯದ ಇತರ ಭಾಗಗಳಲ್ಲಿ, ಇನ್ನೂ ಜನರ ಮನಸ್ಸನ್ನು ಸೆಳೆದಿರುವ ಈ ಮಹಾಚಕ್ರವರ್ತಿಯು ಬೌದ್ಧಧರ್ಮ, ಸದ್ಗುಣ ಮತ್ತು ವಿಶ್ವಪ್ರೇಮಗಳ ಪ್ರಚಾರಕ್ಕೆ ಮತ್ತು ಸಾರ್ವಜನಿಕೋಪಯುಕ್ತ ಕಾರ್ಯಗಳಿಗೆ ಆತ್ಮ ನಿವೇದನ ಮಾಡಿದ. ಆತನು ತನ್ನ ಆತ್ಮೋನ್ನತಿ ಮತ್ತು ಧ್ಯಾನದಲ್ಲಿಯೇ ಮಗ್ನನಾಗಿ ಆದುದಾಗಲೆಂದು ಕ್ರಿಯಾಶೂನ್ಯನಾಗಿ ನೋಡುತ್ತ ಕುಳಿತುಕೊಳ್ಳುವ ವ್ಯಕ್ತಿಯಾಗಿರಲಿಲ್ಲ. ತನ್ನ ಕಾಲವನ್ನೆಲ್ಲ ಸಾರ್ವಜನಿಕ ಕೆಲಸಗಳಿಗೆ ಮೀಸಲಾಗಿಟ್ಟಿದ್ದ ಮತ್ತು ಸೇವೆಗೆ ಸದಾ ಸಿದ್ಧನಿದ್ದ. "ಎಲ್ಲಕಾಲದಲ್ಲಿ, ಎಲ್ಲ ಕಡೆಗಳಲ್ಲಿ, ರಾಣಿವಾಸದಲ್ಲಿರಲಿ ಶಯ್ಯಾಗೃಹದಲ್ಲಿರಲಿ, ಭೋಜನದಲ್ಲಿರಲಿ, ಅಂತರ್ಗೃಹದಲ್ಲಿರಲಿ, ರಥದಲ್ಲಿರಲಿ, ರಾಜೋದ್ಯಾನದಲ್ಲಿರಲಿ ವರದಿಗಾರರು ಪ್ರಜಾಕಾರ್ಯವನ್ನು ನನಗೆ ತಿಳಿಸುತ್ತಲೇ ಇರಬೇಕು. ಯಾವ ಸಮಯವಿರಲಿ, ಯಾವ ಸ್ಥಳವಿರಲಿ, ನಾನು ದುಡಿಯುವುದು ಸರ್ವರ ಸುಖಕ್ಕಾಗಿ".

ಆತನ ದೂತರು ಮತ್ತು ರಾಯಭಾರಿಗಳು ಸಿರಿಯ, ಈಜಿಪ್ಟ್, ಮೆಸೆಡೋನಿಯ, ಸೈರೀನ್ ಮತ್ತು ಎಪಿರಸ್ ರಾಜ್ಯಗಳಿಗೆ ಶುಭ ರಾಜ ಸಂದೇಶದೊಂದಿಗೆ ಬುದ್ಧನ ಉಪದೇಶವನ್ನು ತೆಗೆದುಕೊಂಡು ಹೋದರು. ಮಧ್ಯ ಏಷ್ಯ, ಬರ್ಮ ಮತ್ತು ಸಯಾಮ್ ದೇಶಗಳಿಗೂ ಹೋದರು. ತನ್ನ ಮಗ ಮಹೇಂದ್ರ ಮತ್ತು ಮಗಳು ಸಂಘಮಿತ್ರರನ್ನು ದಕ್ಷಿಣಕ್ಕೆ ಸಿಂಹಳಕ್ಕೆ ಕಳುಹಿಸಿದನು. ಎಲ್ಲೆಡೆಯಲ್ಲೂ ಮನಸ್ಸು ಮತ್ತು ಹೃದಯವನ್ನು ಒಲಿಸಿಕೊಳ್ಳುವ ಪ್ರಯತ್ನ ನಡೆಯಿತು. ಎಲ್ಲಿಯೂ ಯಾವ ನಿರ್ಬಂಧವೂ ಅಥವ ಒತ್ತಾಯವೂ ಇರಲಿಲ್ಲ. ಅತಿನಿಷ್ಠ ಬೌದ್ಧ ಧರ್ಮಿಯಾದರೂ ಇತರ ಧರ್ಮಗಳಿಗೆ ಗೌರವವನ್ನೂ ಸಹನೆಯನ್ನೂ ತೋರಿದನು. ಒಂದು ಶಾಸನದಲ್ಲಿ :

"ಎಲ್ಲ ಧರ್ಮಗಳೂ ಪರಸ್ಪರ ಗೌರವವನ್ನು ತೋರಿಸಬೇಕು. ಈ ಆಚರಣೆಯಿಂದ ತನ್ನ ಧರ್ಮಕ್ಕೆ ಉನ್ನತ ಗೌರವ ತೋರಿಸಿದಂತಾಗುವುದಲ್ಲದೆ ಇತರರ ಧರ್ಮಗಳಿಗೆ ಸೇವೆಯನ್ನೂ ಸಲ್ಲಿಸಿದಂತೆ ಆಗುತ್ತದೆ" ಎಂದು ಹೇಳಿದ್ದಾನೆ.

ಬೌದ್ಧ ಮತವು ಸ್ವಲ್ಪ ಕಾಲದಲ್ಲೇ ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಭಾರತದಾದ್ಯಂತ ಹರಡಿತು. ನೇಪಾಳ್ ದೇಶದಲ್ಲೂ ಮನೆ ಮಾಡಿ ಕೊನೆಗೆ ತಿಬೆಟ್, ಚೀನ, ಮಂಗೋಲಿಯ ದೇಶಗಳಿಗೆ ಸಹ ಹರಡಿತು. ಇದರ ಫಲವಾಗಿ ಭಾರತದಲ್ಲಿ ಸಸ್ಯಾಹಾರ ಮತ್ತು ಮದ್ಯಪಾನ ನಿರೋಧ ಬೆಳೆಯಿತು. ಅಲ್ಲಿಯವರೆಗೆ ಬ್ರಾಹ್ಮಣರು ಸಹ ಮಾಂಸಾಹಾರ ಮದ್ಯಪಾನ ಮಾಡುತ್ತಿದ್ದರು. ಪಶು ಯಜ್ಞ ನಿಷಿದ್ಧವಾಯಿತು.

ಪರದೇಶಗಳೊಂದಿನ ಪರಸ್ಪರ ಸಂಬಂಧದಿಂದಲೂ, ಧರ್ಮಪ್ರಚಾರಗಳಿಂದಲೂ ಭಾರತ ಮತ್ತು

ಇತರ ದೇಶಗಳ ಮಧ್ಯೆ ವ್ಯಾಪಾರವೂ ಅಭಿವೃದ್ಧಿ ಹೊಂದಿರಬೇಕು. ಮಧ್ಯ ಏಸ್ಯದ ಸಿಂಕಿಯಾಂಗ್ ಪ್ರಾಂತ್ಯದ ಖೊಟಾನಿನಲ್ಲಿ ಭಾರತೀಯರ ಒಂದು ವಲಸೆಬೀಡು ಇತ್ತಂತೆ. ಭಾರತದ ವಿಶ್ವವಿದ್ಯಾನಿಲಯಗಳು, ಅದರಲ್ಲೂ ಮುಖ್ಯವಾಗಿ ತಕ್ಷಶಿಲೆಗೆ ಪರದೇಶಗಳಿಂದ ವಿದ್ಯಾರ್ಥಿಗಳು ಬರುತ್ತಿದ್ದರು.

ಅಶೋಕ ಒಬ್ಬ ಮಹಾ ನಿರ್ಮಾಣಕರ್ತೃ. ಆತನು ಕೆಲವು ಮಹಾ ಮಂದಿರಗಳನ್ನು ಕಟ್ಟಲು ಸಹಾಯ ಮಾಡಲು ಪರದೇಶದ ಕುಶಲಕರ್ಮಿಗಳನ್ನು ನೇಮಿಸಿದ್ದನಂತೆ. ಸ್ತೂಪಗಳು ಪರ್ಸಿಪೊಲಿಸ್‌ನ್ನು ಹೋಲುವುದರಿಂದ ಈ ರೀತಿ ಹೇಳಬಹುದು. ಆದರೆ ಈ ಪ್ರಾಚೀನ ಶಿಲ್ಪಕಲೆಯಲ್ಲಿ ಮತ್ತು ಇತರ ಪಳೆಯುಳಿಕೆಗಳಲ್ಲಿ ಕಾಣುವ ಕಲೆಯಲ್ಲಿ ಭಾರತೀಯ ಕಲೆಯ ಸಂಪ್ರದಾಯ ವೈಶಿಷ್ಟ್ಯವನ್ನು ಕಾಣಬಹುದು.

ಸುಮಾರು ಮೂವತ್ತು ವರ್ಷಗಳ ಹಿಂದೆ ಪ್ರಾಕ್ತನ ವಿಮರ್ಶನ ವಿಚಕ್ಷಣರು ಪಾಟಲಿಪುತ್ರದಲ್ಲಿ ಅಶೋಕನ ಅರಮನೆಯಲ್ಲಿನ ಅನೇಕ ಕಂಭಗಳ ಸಭಾಂಗಣವನ್ನು ಅಗೆದು ತೆಗೆದರು. ಇಂಡಿಯ ಸರ್ಕಾರದ ಪ್ರಾಕ್ತನ ವಿಮರ್ಶನ ಶಾಲೆಯ ಮುಖ್ಯ ಅಧಿಕಾರಿಗಳಾದ ಡಾಕ್ಟರ್ ಸ್ಪೂನರ್ " ಇಲ್ಲಿನ ಕಂಬಗಳು ಇಷ್ಟು ಒಳ್ಳೆ ಸ್ಥಿತಿಯಲ್ಲಿವೆ ಎಂದು ನಂಬುವುದು ಸಹ ಕಷ್ಟ. ಕಟ್ಟುವಾಗ ಎರಡು ಸಾವಿರ ವರ್ಷಗಳ ಹಿಂದೆ ಎಷ್ಟು ನಯವಾಗಿ ಮೃದುವಾಗಿ ಇದ್ದುವೋ ಈಗಲೂ ಸಹ ಕಂಭಗಳು ಅಷ್ಟೇ ಚೆನ್ನಾಗಿವೆ " ಎಂದಿದ್ದಾರೆ. ಅಷ್ಟು ಪುರಾತನ ಕಾಲದ ಮರವು ನಾಶ ಹೊಂದದೆ ಉಳಿದಿರುವುದೇ ಒಂದು ಅದ್ಭುತ. ಒಂದಕ್ಕೊಂದನ್ನು ಕೂಡಿಸಿರುವದು ಎಲ್ಲಿ ಎಂದು ತಿಳಿಯಲಾಗದಷ್ಟು ನಿರ್ದೋಷವಾಗಿದೆ ಜೋಡಣೆಯ ರೇಖೆ. ಇದನ್ನು ನೋಡಿದವರೆಲ್ಲ ಆಶ್ಚರ್ಯದಿಂದ ಬೆರಗಾದರು. ಪ್ರಾಯಶಃ ಆಕೃತಿನಿರ್ಮಾಣದ ಸೂಕ್ಷ್ಮ ಕೌಶಲ್ಯವನ್ನೂ ಯೋಜನಾ ನೈಪುಣ್ಯವನ್ನೂ ಮೀರಿಸಲು ಈಗಲೂ ಯಾರಿಗೂ ಸಾಧ್ಯವಾಗಲಾರದು " ಎಂದಿದ್ದಾರೆ.

ಭಾರತದ ಇತರ ಭಾಗಗಳಲ್ಲಿ ಭೂಶೋಧನೆಯಲ್ಲಿ ದೊರೆತಿರುವ ಕಟ್ಟಡಗಳಲ್ಲಿ ಸಹ ಮರದ ದಿಣ್ಣೆಗಳು, ತೊಲೆಗಳು, ಇನ್ನೂ ಉತ್ತಮಸ್ಥಿತಿಯಲ್ಲಿ ಉಳಿದಿವೆ. ಎಲ್ಲಾದರೂ ಇದು ಒಂದು ಆಶ್ಚರ್ಯವೇ ಸರಿ. ಆದರೆ ವಾಯುಗುಣದಿಂದ ಮತ್ತು ಕ್ರಿಮಿಗಳ ಹಾವಳಿಯಿಂದ ಮರಗಳು ನಾಶವಾಗುತ್ತಿರುವ ಭಾರತದಲ್ಲಿ ಇದು ಖಂಡಿತ ಒಂದು ಅದ್ಭುತವೇ ಸರಿ. ಆ ಮರಕ್ಕೆ ಯಾವುದೋ ಬಗೆಯ ಲೇಪನ ಚಿಕಿತ್ಸೆ ಮಾಡಿರಬೇಕು. ಆ ಚಿಕಿತ್ಸೆ ಏನು ಎಂಬುದು ಇನ್ನೂ ಒಂದು ರಹಸ್ಯ.

ಪಾಟಲಿಪುತ್ರ ಮತ್ತು ಗಯಾ ನಗರಗಳ ಮಧ್ಯೆ ಈಚೆಗೆ ಬಹಳ ಪ್ರಖ್ಯಾತಿಗೆ ಬಂದಿರುವ ಅವಶೇಷಗಳು ಇವೆ. ಇದರ ಆರಂಭ ಯಾವುದೆಂಬುದು ತಿಳಿಯುವುದಿಲ್ಲ. ಅದರ ವಿಷಯದಲ್ಲಿ ಅಶೋಕನ ಕಾಲದ ಸಾಕ್ಷ್ಯಗಳಿಲ್ಲ.

ನಲವತ್ತೊಂದು ವರ್ಷಕಾಲ ವಿಶೇಷ ಪರಿಶ್ರಮದಿಂದ ರಾಜ್ಯವನ್ನಾಳಿ ಕ್ರಿಸ್ತಪೂರ್ವ ೨೩೨ರಲ್ಲಿ ಅಶೋಕನು ಮರಣ ಹೊಂದಿದ. ಹೆಚ್. ಜಿ. ವೆಲ್ಸ್ ತನ್ನ ಇತಿಹಾಸರೂಪರೇಖೆ (Outline of History) ಯಲ್ಲಿ ಇತಿಹಾಸದ ಸಾಲುಗಳಲ್ಲಿ ಸಂದಣಿಸಿಬರುವ ಚಕ್ರವರ್ತಿಗಳು, ರಾಜಾಧಿರಾಜರುಗಳು, ರಾಜ ಮಾರ್ತಾಂಡರುಗಳ ದಶ ಸಹಸ್ರಗಟ್ಟಲೆ ಹೆಸರುಗಳಲ್ಲಿ ಅಶೋಕನ ಹೆಸರು ಮಾತ್ರ ಧ್ರುವ ನಕ್ಷತ್ರದಂತೆ—ಪ್ರಾಯಶಃ ಏಕಾಂಗಿಯಾಗಿ-ಜಾಜ್ವಲ್ಯಮಾನವಾಗಿದೆ. ವೋಲ್ಗಾದಿಂದ ಜಪಾನವರೆಗೆ ಈಗಲೂ ಅವನ ಹೆಸರಿಗೆ ಗೌರವ ಸಲ್ಲುತ್ತಿದೆ. ಚೀನ, ತಿಬೆಟ್ ಮತ್ತು ಈಗ ಅವನ ಧರ್ಮವನ್ನವಲಂಬಿಸದಿದ್ದರೂ ಭಾರತವೂ ಸಹ ಅವನ ಮಹಾತ್ಮೆಯ ಪರಂಪರೆಯನ್ನು ಕಾದುಕೊಂಡಿವೆ. ಕಾನ್‌ಸ್ಟೆಂಟೈನ್ ಅಥವ ಚಾರ್ಲೆಮೇನ್‌ರ ಹೆಸರುಗಳನ್ನು ಕೇಳಿರುವವರಿಗಿಂತ ಹೆಚ್ಚು ಜನ ಇಂದಿಗೂ ಅವನ ಹೆಸರನ್ನು ಸ್ಮರಿಸುತ್ತಾರೆ."

---

# ಅಧ್ಯಾಯ ೫: ಯುಗಾಂತರಗಳು

## ೧. ಗುಪ್ತರ ಕಾಲದಲ್ಲಿ ರಾಷ್ಟ್ರೀಯಭಾವ ಮತ್ತು ಸಾಮ್ರಾಜ್ಯಭಾವ

ಮೌರ್ಯ ಸಾಮ್ರಾಜ್ಯವು ಬಲಗುಂದಿ ಸುಂಗ ರಾಜವಂಶಕ್ಕೆ ಅವಕಾಶಕೊಟ್ಟಿತು. ಸುಂಗರ ರಾಜ್ಯ ಬಹಳ ಚಿಕ್ಕದು. ದಕ್ಷಿಣದಲ್ಲಿ ಮಹಾರಾಷ್ಟ್ರಗಳು ಉದ್ಭವಿಸುತ್ತ ಇದ್ದವು. ಉತ್ತರದಲ್ಲಿ ಬ್ಯಾಕ್ಟ್ರಿಯನರು ಅಥವ ಇಂಡೋ ಗ್ರೀಕರು ಕಾಬೂಲಿನಿಂದ ಪಂಜಾಬ್‌ವರೆಗೆ ಹರಡುತ್ತ ಇದ್ದರು; ಮಿನಾಂಡರನ ನಾಯಕತ್ವದಲ್ಲಿ ಪಾಟಲೀಪುತ್ರವನ್ನು ಮುತ್ತಿಗೆ ಹಾಕುವ ಪ್ರಯತ್ನದಲ್ಲಿದ್ದರು; ಆದರೆ ಅಷ್ಟರಲ್ಲಿ ಸೋತು ಹಿಂದಿರುಗಿದರು. ಮಿನಾಂಡರ್ ಭಾರತೀಯ ಸಂಸ್ಕೃತಿ ಮತ್ತು ವಾತಾವರಣಕ್ಕೆ ಮನ ಸೋತು ಬುದ್ಧನಾದ. ಬೌದ್ಧ ಗ್ರಂಥಗಳಲ್ಲಿ ರಾಜಮಿಲಿಂದ ಎಂದು ಪ್ರಸಿದ್ಧನಾಗಿದ್ದಾನೆ. ಮತ್ತೆ ಆತನೂ ಒಬ್ಬ ಬೌದ್ಧಗುರುವೆಂದೇ ಭಾವಿಸಲ್ಪಟ್ಟಿದಾನೆ. ಭಾರತೀಯ ಮತ್ತು ಗ್ರೀಕ್ ಸಂಸ್ಕೃತಿಗಳ ಸಂಯೋಗ ದಿಂದ ಅಫ್ಘಾನಿಸ್ಥಾನ ಮತ್ತು ಗಡಿನಾಡಿನಲ್ಲೆಲ್ಲ ಹಬ್ಬಿರುವ ಗಾಂಧಾರದ ಗ್ರೀಕ್ ಬೌದ್ಧಕಲೆ ಹುಟ್ಟಲು ಅವಕಾಶವಾಯಿತು.

ಮಧ್ಯ ಇಂಡಿಯದಲ್ಲಿ ಸಾಂಚಿಯ ಹತ್ತಿರ ಬೆಸ್ನಗರದಲ್ಲಿ ಕ್ರಿಸ್ತಪೂರ್ವ ಒಂದನೆಯ ಶತಮಾನದ ಸಂಸ್ಕೃತ ಲಿಪಿ ಶಾಸನವಿರುವ ಹೆಲಿಯೊಡೊರಸ್ ಕಂಬ ಎನ್ನುವ ಒಂದು ಕಲ್ಲು ಕಂಬವಿದೆ. ವಾಯವ್ಯ ಪ್ರಾಂತ್ಯಕ್ಕೆ ಬಂದ ಗ್ರೀಕರು ಹೇಗೆ ಭಾರತೀಯರಾದರು, ಭಾರತೀಯ ಸಂಸ್ಕೃತಿ ಅವರನ್ನು ತನ್ನೊಳಗೆ ಹೇಗೆ ಸೇರಿಸಿಕೊಂಡಿತು ಎಂಬುದಕ್ಕೆ ಇದು ಒಂದು ಕಿರು ನೋಟ. ಆ ಶಾಸನ ಈ ರೀತಿ ಇದೆ. "ಆಪದ್ರಕ್ಷನಾದ ಕಾಶಿಪುತ್ರ ಭಾಗಭದ್ರನ ರಾಜಾಸ್ಥಾನಕ್ಕೆ ಆತನ ರಾಜ್ಯಭಾರದ ಹದಿನಾಲ್ಕನೆಯ ವರ್ಷದಲ್ಲಿ ಆಂಟಿಯಾಲ್ಕಿಡಾಸ್ ಮಹಾರಾಜನ ಗ್ರೀಕ್ ರಾಯಭಾರಿಯಾಗಿ ಬಂದ ಡೈಯಾನ್‌ನ ಮಗನೂ, ತಕ್ಷಶಿಲೆಯ ವಾಸಸ್ಥನೂ, ವಿಷ್ಣು ಆರಾಧಕನೂ ಆದ ಹೆಲಿಯೊಡೊರಸ್ ದೇವದೇವನಾದ ವಾಸುದೇವ (ವಿಷ್ಣುವಿನ) ಈ ಗರುಡಗಂಭವನ್ನು ನಿಲ್ಲಿಸಿದನು.

"ಅಮರ ಸಿದ್ಧಾಂತಗಳು ಮೂರು: ಆತ್ಮನಿಗ್ರಹ, ಆತ್ಮತ್ಯಾಗ ಮತ್ತು ಆತ್ಮಸಾಕ್ಷಿ. ಇವು ಗಳ ಸರಿಯಾದ ಆಚರಣೆಯೇ ಮೋಕ್ಷಕ್ಕೆ ಮಾರ್ಗ."

ಮಧ್ಯ ಏಷ್ಯದ ಶಕರು ಅಥವ ಸಿಥಿಯನರು ಆಕ್ಸಸ್ ಕಣಿವೆಯಲ್ಲಿ ನೆಲಸಿದ್ದರು. ಅದಕ್ಕೂ ಪೂರ್ವದಿಂದ ಬಂದ ಯೂಯೇ ಚಿ ಅವರನ್ನು ಅಲ್ಲಿಂದ ಓಡಿಸಿ ಉತ್ತರ ಭಾರತದೊಳಕ್ಕೆ ನೂಕಿದ. ಈ ಶಕರು ಬೌದ್ಧ ಮತ್ತು ಹಿಂದೂ ಧರ್ಮಗಳನ್ನು ಅವಲಂಬಿಸಿದರು. ಯೂಯೇ ಚಿಗಳಲ್ಲಿ ಕುಶಾನರೆಂಬ ಒಂದು ಪಂಗಡ ತಮ್ಮ ಸ್ವಸಾಮರ್ಥ್ಯದಿಂದ ರಾಜ್ಯಸ್ಥಾಪನೆಮಾಡಿ ಉತ್ತರ ಹಿಂದೂಸ್ಥಾನವನ್ನೆಲ್ಲ ಆಕ್ರಮಿಸಿದರು. ಅವರು ಶಕರನ್ನೂ ಸೋಲಿಸಿ ಅವರನ್ನು ಇನ್ನೂ ದಕ್ಷಿಣಕ್ಕೆ ದೂಡಿದರು. ಶಕರು ಕಾಥೇವಾಡ ಮತ್ತು ದಕ್ಷಿಣಕ್ಕೆ ಬಂದರು. ಆಮೇಲೆ ಕುಶಾನರು ಸಂಪೂರ್ಣ ಉತ್ತರ ಹಿಂದೂಸ್ಥಾನ ಮತ್ತು ಮಧ್ಯ ಏಷ್ಯದ ಬಹುಭಾಗದಲ್ಲಿ ವಿಶಾಲವೂ ಭದ್ರವೂ ಆದ ಒಂದು ಸಾಮ್ರಾಜ್ಯವನ್ನು ಕಟ್ಟಿದರು. ಅವರಲ್ಲಿ ಕೆಲವರು ಹಿಂದೂ ಧರ್ಮವನ್ನವಲಂಬಿಸಿದರು. ಆದರೆ ವಿಶೇಷವಾಗಿ ಬೌದ್ಧ ಮತವನ್ನೇ ಸೇರಿದರು. ಅವರ ಪ್ರಖ್ಯಾತ ರಾಜನಾದ ಕಾನಿಷ್ಕ ಬುದ್ಧ ಚರಿತ್ರೆಯಲ್ಲಿ ಒಬ್ಬ ಮಹಾ ಪುರುಷ. ಅನೇಕ ಸತ್ಕಾರ್ಯಗಳನ್ನೂ ಜನೋಪಯುಕ್ತ ಕಾರ್ಯಗಳನ್ನೂ ಮಾಡಿದ್ದಾನೆ. ತಾನು ಬುದ್ಧನಾದರೂ ರಾಷ್ಟ್ರದ ಧರ್ಮವು ಯಾವುದೋ ಸಂಮಿಶ್ರ ಧರ್ಮವಾಗಿತ್ತು. ಅದರಲ್ಲಿ ಒಂದು ಬಗೆಯ ಸರ್ವಧರ್ಮ ಸಮೀಕರಣವಿತ್ತು. ಜೊರೋಸ್ಟರ್ ಧರ್ಮದ ಛಾಯೆ ಸಹ ಅದರಲ್ಲಿದ್ದಿತಂತೆ. ಕುಶಾನಚಕ್ರಾಧಿಪತ್ಯ ಎಂದು ಹೆಸರುಪಡೆದ ಈ ಗಡಿರಾಜ್ಯದ ರಾಜಧಾನಿ ಈಗಿನ ಪೆಷಾವರ್ ಬಳಿ ಇತ್ತು. ಸಮೀಪದಲ್ಲೆ ತಕ್ಷಶಿಲೆ ಇದ್ದುದರಿಂದ ಅನೇಕ ಜನಾಂಗಗಳು ಮತ್ತು ಜನರು ಸೇರುತ್ತಿದ್ದ ನಗರವಾಯಿತು. ಈ ರೀತಿ ಭಾರತೀಯರು, ಸಿಥಿಯನರು, ಯೂಯೇ ಚಿಗಳು,

ಇರಾಣರು, ಬ್ಯಾಕ್ಟ್ರಿಯನ್ ಗ್ರೀಕರು, ತುರ್ಕಿಜನರು, ಚೀನೀಯರು ಅಲ್ಲಿ ಕಲೆಯುತ್ತಿದ್ದರು. ಭಿನ್ನ ಭಿನ್ನ ಸಂಸ್ಕೃತಿಗಳು ಒಂದರ ಮೇಲೊಂದು ಪರಸ್ಪರ ಪರಿಣಾಮ ಮಾಡಿದವು. ಐತಿಹಾಸಿಕ ದೃಷ್ಟಿಯಿಂದ ಚೀನೀ ಮತ್ತು ಭಾರತೀಯರ ಮೊದಲ ಬಾಂಧವ್ಯ ಇಲ್ಲಿಂದ ಆರಂಭವಾಯಿತೆನ್ನಬಹುದು. ಕ್ರಿಸ್ತಶಕ ೬೪ ರಲ್ಲಿ ಚೀನದ ರಾಯಭಾರಿ ಭಾರತಕ್ಕೆ ಬಂದನು. ಅಲ್ಪವಾದರೂ ಆಗ ಚೀನದಿಂದ ಇಂಡಿಯಕ್ಕೆ ಬಂದ ಪೀಚ್ ಮತ್ತು ಪೇರು ಹಣ್ಣುಗಳ ಗಿಡಗಳು ಭಾರತೀಯರಿಗೆ ಬಹಳ ಪ್ರಿಯ ವಸ್ತುಗಳಾದವು. ಗೋಬಿ ಮರುಭೂಮಿಯ ಅಂಚಿನಲ್ಲಿ ತುರ್ಫಾನ್ ಮತ್ತು ಕುಚ್ ನಗರಗಳಲ್ಲಿ ಭಾರತೀಯ, ಚೀನೀ ಮತ್ತು ಇರಾನಿ ಸಂಸ್ಕೃತಿಗಳ ಸಮಾಕರಣವಾಯಿತು. ವಿಚಿತ್ರ ವೈಶಿಷ್ಟ್ಯದ ಸಂಸ್ಕೃತಿಗಳುದ್ಭವಿಸಿದವು.

ಕುಶಾನರ ಕಾಲದಲ್ಲಿ ಬೌದ್ಧ ಮತದಲ್ಲಿ ಅಂತರ್ಭೇದ ಉದ್ಭವಿಸಿ ಮಹಾಯಾನ ಹೀನಯಾನ ಎಂದು ಎರಡು ಪಂಗಡಗಳಾಗಿ ಬೌದ್ಧ ಮತವು ಇಬ್ಭಾಗವಾಯಿತು. ಇಬ್ಬರ ಮಧ್ಯೆ ಚರ್ಚೆಗಾರಂಭ ವಾಯಿತು. ಭಾರತೀಯ ಸಂಪ್ರದಾಯದಂತೆ ಮಹಾಸಭೆಗಳು ಸೇರಿ ದೇಶದ ಮೂಲೆ ಮೂಲೆಗಳಿಂದ ಪ್ರತಿನಿಧಿಗಳು ಬಂದು ಚರ್ಚೆಗಳಲ್ಲಿ ಭಾಗವಹಿಸಿದರು. ಈ ಚರ್ಚೆಗಳಲ್ಲೆಲ್ಲ ಕ್ರಿಸ್ತಶಕ ಒಂದನೆಯ ಶತಮಾನದಲ್ಲಿ ಜೀವಿಸಿದ್ದ ನಾಗಾರ್ಜುನನ ಹೆಸರು ಅತಿ ಮುಖ್ಯವಾದುದು. ಬೌದ್ಧ ಧರ್ಮಜ್ಞರಲ್ಲಿ, ಭಾರತೀಯ ದಾರ್ಶನಿಕರಲ್ಲಿ ಆತ ಅತ್ಯುನ್ನತ ವ್ಯಕ್ತಿ. ಭಾರತದಲ್ಲಿಮಹಾಯಾನ ಪಂಥವು ಜಯಭೇರಿ ಹೊಡೆದದ್ದು ಆತನಿಂದ. ಚೀನಾಕ್ಕೆ ಹರಡಿದ್ದು ಮಹಾಯಾನ, ಸಿಂಹಳ ಮತ್ತು ಬ್ರಹ್ಮದೇಶದಲ್ಲಿ ಹೀನಯಾನ ಹರಡಿತು.

ಕುಶಾನರು ಭಾರತೀಯರಾಗಿ ಭಾರತೀಯ ಸಂಸ್ಕೃತಿಯ ಪೋಷಕರಾದರು. ಆದರೂ ಅವರ ಆಡಳಿತವನ್ನು ಕೊನೆಗಾಣಿಸಲು ರಾಷ್ಟ್ರೀಯ ಚಳವಳಿಯೊಂದು ಒಳಗೊಳಗೆ ಹೊಗೆಯಾಡುತ್ತಿತ್ತು. ಅನಂತರ ಗಡಿನಾಡಿನ ಮೂಲಕ ವಿದೇಶೀಯರ ಹೊಸ ಹೊಸ ತಂಡಗಳು ಭಾರತವನ್ನು ಪ್ರವೇಶಿಸಿ ದಾಗ ಈ ರಾಷ್ಟ್ರೀಯ ಆಂದೋಲನವೂ ಪರಾಕ್ರಮಣ ವಿರೋಧದ ಚಳವಳಿಯೂ ಕ್ರಿಸ್ತಶಕ ನಾಲ್ಕ ನೆಯ ಶತಮಾನದ ಆದಿಭಾಗದಲ್ಲಿ ಉಗ್ರರೂಪವನ್ನು ತಾಳಿದವು. ಚಂದ್ರಗುಪ್ತನೆಂದೇ ಹೆಸರುಳ್ಳ ಇನ್ನೊಬ್ಬ ರಾಜನು ಪರಕೀಯರನ್ನು ಓಡಿಸಿ ಪುನಃ ಒಂದು ವಿಶಾಲವೂ ಬಲಿಷ್ಠವೂ ಆದ ರಾಜ್ಯವನ್ನು ಕಟ್ಟಿದನು.

ಈ ರೀತಿ ಯುದ್ಧದಲ್ಲಿಯೂ, ಶಾಂತಕಾಲದ ಕಲಾ ವೈಭವದಲ್ಲಿಯೂ ಪ್ರಖ್ಯಾತರಾದ ಮಹಾ ಚಕ್ರವರ್ತಿಗಳ ಪರಂಪರೆಯುಳ್ಳ ಸಾಮ್ರಾಟ್‌ಗುಪ್ತರ ಕಾಲವು ಕ್ರಿಸ್ತಶಕ ೩೨೦ ರಲ್ಲಿ ಆರಂಭವಾಯಿತು. ಮೇಲಿಂದ ಮೇಲೆ ಒದಗಿದ ದಂಡಯಾತ್ರೆಗಳಿಂದ ರಾಷ್ಟ್ರೀಯ ಭಾವನೆಯು ಬಲಗೊಂಡು ಬೇರೂರಿತು. ಸನಾತನ ಬ್ರಾಹ್ಮಣರು, ಕ್ಷತ್ರಿಯರು ತಮ್ಮ ಮನೆಮಠಗಳ ರಕ್ಷಣೆಗಾಗಿ ತಮ್ಮ ಸಂಸ್ಕೃತಿಯ ಉಳಿವಿ ಗಾಗಿ ದೇಶದ ಹಿತದೃಷ್ಟಿಯಿಂದ ತುಂಬ ಯೋಚನೆ ಮಾಡಿದ ಕಾಲ ಅದು. ಭಾರತೀಯ ಸಂಸ್ಕೃತಿ ಯೊಳಗೆ ಐಕ್ಯವಾದ ವಿದೇಶೀಯರನ್ನು ಭಾರತೀಯರೆಂದು ಒಪ್ಪಿಕೊಂಡರು; ಆದರೆ ಉಳಿದೆಲ್ಲ ಪರಕೀ ಯರನ್ನು ಉಗ್ರವಾಗಿ ವಿರೋಧಿಸಿ ಎದುರಿಸಿದರು. ವೈದಿಕ ಬ್ರಾಹ್ಮಣ ಧರ್ಮದ ಆದರ್ಶದ ಆಧಾರದ ಮೇಲೆ ಒಂದು ಬಲವಾದ ಏಕಛತ್ರಾಧಿಪತ್ಯವನ್ನು ಕಟ್ಟುವ ಪ್ರಯತ್ನ ನಡೆಯಿತು. ಆದರೆ ಹಳೆಯ ಆತ್ಮವಿಶ್ವಾಸ ಮಾಯವಾಗುತ್ತಿತ್ತು. ಈ ಆದರ್ಶಗಳು ತಮ್ಮ ನೈಜಸ್ವಭಾವಕ್ಕೆ ವಿರುದ್ಧವಾದ ಒಂದು ಕಾಠಿಣ್ಯತೆಯನ್ನು ತಾಳುತ್ತಿರುವಂತೆ ತೋರುತ್ತಿತ್ತು. ಬಾಹ್ಯದಲ್ಲೂ ಆಂತರ್ಯದಲ್ಲೂ ಭಾರತೀಯ ದೃಷ್ಟಿಯೂ ತನ್ನ ಚಿಪ್ಪಿನೊಳಗೇ ಸಂಕುಚಿಸುವಂತೆ ತೋರುತ್ತ ಇತ್ತು.

ಆದರೂ ಆ ಚಿಪ್ಪು ಆಳವಾಗಿಯೂ ವಿಶಾಲವಾಗಿಯೂ ಇತ್ತು. ಹಿಂದೆಯೇ ಆರ್ಯಾವರ್ತ ಅಥವ ಭಾರತವರ್ಷ ಎಂದು ಕರೆದ ಈ ದೇಶಕ್ಕೆ ಬಂದಾಗ ಈ ಹೊಸ ಜನಾಂಗಕ್ಕೂ ದೇಶದ ಪುರಾ ತನ ಸಂಸ್ಕೃತಿಗೂ ಮತ್ತು ಜನರಿಗೂ ಒಂದು ಸಂಘಟನೆಯನ್ನು ಹೇಗೆ ಕಲ್ಪಿಸಬೇಕು ಎಂಬು ದೊಂದು ಮಹತ್ಪ್ರಶ್ನೆ ಎದ್ದಿತ್ತು. ಭಾರತದ ಮನಸ್ಸು ಆ ಕಡೆ ಯೋಚಿಸಿ ಯೋಚಿಸಿ ಕೊನೆಯಲ್ಲಿ ಪ್ರಾಚೀನ ಭಾರತದ ಮತ್ತು ಆರ್ಯ ಸಂಸ್ಕೃತಿಗಳೆರಡರ ಸಮಾಕರಣದ ಬಲವಾದ ತಳಹದಿಯ ಮೇಲೆ

ಒಂದು ಶಾಶ್ವತ ಪರಿಹಾರವನ್ನು ಕಲ್ಪಿಸಿತ್ತು. ಅದೇ ರೀತಿ ಬೇರೆ ವಿದೇಶೀಯರು ಬಂದಾಗ ಅವರನ್ನೂ ಭಾರತೀಯರನ್ನಾಗಿ ಸೇರಿಸಿಕೊಂಡರು. ಆದರಿಂದ ಯಾವ ವ್ಯತ್ಯಾಸವೂ ಕಾಣಲಿಲ್ಲ. ವ್ಯಾಪಾರ ಮತ್ತು ಇತರ ಕಾರಣಗಳಿಂದ ಭಾರತಕ್ಕೂ ಇತರ ದೇಶಗಳಿಗೂ ಅನೇಕ ವ್ಯವಹಾರ ವಿದ್ದರೂ ಭಾರತವು ತನ್ನ ಪಾಡನ್ನು ತಾನು ನೋಡಿಕೊಳ್ಳುತ್ತ ಇತ್ತು; ಬೇರೆ ಕಡೆಗಳಲ್ಲಿ ಏನಾಯಿ ತೆಂಬುದಕ್ಕೆ ವಿಶೇಷ ಗಮನ ಕೊಡುತ್ತಿರಲಿಲ್ಲ. ಆದರೆ ಭಿನ್ನ ರೀತಿಯ ಭಿನ್ನ ದೇಶೀಯರಿಂದ ಪದೇ ಪದೇ ದಂಡಯಾತ್ರೆಗಳೊದಗಿ ಜನರು ತಲ್ಲಣಿಸಿದ್ದರು. ತನ್ನ ರಾಜಕೀಯ ಆಡಳಿತ ಮಾತ್ರವಲ್ಲದೆ ತನ್ನ ಸಂಸ್ಕೃತಿಯ ಆದರ್ಶಗಳು ಮತ್ತು ಸಾಮಾಜಿಕ ರಚನೆಯು ಸಹ ಕಳಚಿ ಬೀಳುವ ಸ್ಥಿತಿಗೆ ತರುತ್ತಿದ್ದ ಈ ಸ್ಫೋಟಕಗಳನ್ನು ಅಲಕ್ಷ್ಯ ಮಾಡುವಂತೆ ಇರಲಿಲ್ಲ. ಮುಖ್ಯವಾಗಿ ಈ ಪ್ರತಿಕ್ರಿಯೆ ರಾಷ್ಟ್ರೀಯ ಭಾವನೆಯದಾಗಿತ್ತು; ಅದರಲ್ಲಿ ರಾಷ್ಟ್ರೀಯ ಭಾವನೆಯ ಶಕ್ತಿಯೂ ಮತ್ತು ಸಂಕುಚಿತ ದೃಷ್ಟಿಯೂ ಇತ್ತು. ಧರ್ಮ, ತತ್ತ್ವ ಶಾಸ್ತ್ರ, ಇತಿಹಾಸ, ಸಂಪ್ರದಾಯ, ಸಾಮಾಜಿಕ ರಚನೆ, ಇವು ಗಳೆಲ್ಲವನ್ನೂ ಅಂದಿನ ಹಿಂದೂ ಅಥವ ಬ್ರಾಹ್ಮಣಧರ್ಮ ಭಾರತೀಯ ಜೀವನದಲ್ಲಿ ಸಮನ್ವಯ ಮಾಡಿತು. ಈ ಸಮಗ್ರ ದೃಷ್ಟಿಯು ಆ ರಾಷ್ಟ್ರೀಯ ಭಾವನೆಯ ಸಂಕೇತವಾಯಿತು. ಇಂದಿನ ಎಲ್ಲ ರಾಷ್ಟ್ರೀಯ ಭಾವನೆಗಳ ಮೂಲ ಆದರ್ಶಗಳಂತೆ ಆ ಧರ್ಮವು ಜನಾಂಗ ಮತ್ತು ಸಂಸ್ಕೃತಿಯ ಭಾವನೆಗಳಿಂದ ಆಳವಾದ ಅಲೆಗಳನ್ನೆಬ್ಬಿಸುವ ಒಂದು ಪ್ರಬಲವಾದ ರಾಷ್ಟ್ರೀಯ ಧರ್ಮವಾಯಿತು. ಭಾರತೀಯ ಭಾವನೆಯ ಶಿಶುವಾದ ಬೌದ್ಧ ಧರ್ಮದಲ್ಲೂ ಆದರದೇ ಒಂದು ರಾಷ್ಟ್ರೀಯ ಹಿನ್ನೆಲೆ ಇತ್ತು. ಭಾರತವು ಬುದ್ಧನು ಜೀವಿಸಿ, ಉಪದೇಶಮಾಡಿ, ನಿರ್ಯಾಣ ಹೊಂದಿದ ಮತ್ತು ಮಹಾ ಜ್ಞಾನಿಗಳೂ ಸಂತರೂ ಧರ್ಮಪ್ರಚಾರ ಮಾಡಿದ ಪುಣ್ಯ ಭೂಮಿ. ಆದರೆ ಬೌದ್ಧ ಧರ್ಮವು ಮುಖ್ಯವಾಗಿ ಅಂತರ ರಾಷ್ಟ್ರೀಯ ಧರ್ಮ; ಒಂದು ವಿಶ್ವ ಧರ್ಮ. ಮತ್ತು ಅದು ದೂರ ದೇಶಗಳಿಗೆ ವ್ಯಾಪಿಸಿ ಬೆಳೆದಂತೆಲ್ಲ ಇನ್ನೂ ಹೆಚ್ಚು ಅಂತರ ರಾಷ್ಟ್ರೀಯವಾಯಿತು. ಆದ್ದರಿಂದ ಪುನಃ ಪುನಃ ರಾಷ್ಟ್ರೀಯ ಪುನರುಜ್ಜೀವನ ಕಾಲಗಳಲ್ಲಿ ಸನಾತನ ಬ್ರಾಹ್ಮಣ ಮತವೇ ರಾಷ್ಟ್ರೀಯತೆಯ ಸಂಕೇತ ವಾಗುವುದು ಸ್ವಾಭಾವಿಕವಾಯಿತು.

ಆ ಧರ್ಮ ಮತ್ತು ತತ್ವ ಶಾಸ್ತ್ರವು ಭಾರತದ ಇತರ ಅನೇಕ ಧರ್ಮಗಳಿಗೆ ಮತ್ತು ಜನಾಂಗ ಗಳಿಗೆ ಸಹನೆಯನ್ನು ತೋರಿದವು ಮತ್ತು ಆಶ್ರಯ ಕೊಟ್ಟವು. ತಮ್ಮ ವಿಶಾಲವಾದ ಚೌಕಟ್ಟಿನಲ್ಲಿ ಅವು ಗಳನ್ನೂ ಸೇರಿಸಿಕೊಳ್ಳುತ್ತಲೇ ಮುಂದುವರಿದವು. ಆದರೆ ವಿದೇಶೀಯರಿಗೆ ಮಾತ್ರ ಅವಕಾಶ ಕೊಡಲು ಪ್ರಬಲವಾಗಿ ವಿರೋಧಿಸುತ್ತಿದ್ದವು ಮತ್ತು ಅವುಗಳ ಪ್ರಭಾವಕ್ಕೆ ಬಲಿಬೀಳದಂತೆ ಆತ್ಮ ರಕ್ಷಣೆ ಮಾಡಿಕೊಳ್ಳುತ್ತಿದ್ದವು. ಆ ರೀತಿ ಮಾಡುವಾಗ ರಾಷ್ಟ್ರೀಯ ಭಾವನೆಯ ಶಕ್ತಿ, ಹೆಚ್ಚಿದಾಗ ಅನೇಕ ಸಂದರ್ಭಗಳಲ್ಲಿ ಆಗುವಂತೆ ಸಾಮ್ರಾಜ್ಯ ಭಾವನೆಯಾಗಿ ಬಿಡುತ್ತಿತ್ತು. ಗುಪ್ತರಕಾಲವು ಪ್ರತಿಭಾಯುಕ್ತವೂ ಚಟುವಟಿಕೆಯುಳ್ಳದ್ದೂ, ಸುಸಂಸ್ಕೃತವೂ, ಪೂರ್ಣಜೀವಂತವೂ ಆದಾಗ್ಯೂ ಶೀಘ್ರದಲ್ಲೇ ಸಾಮ್ರಾಜ್ಯ ಸ್ವರೂಪವನ್ನು ತಾಳಿತು. ಅವರಲ್ಲಿ ವಿಶೇಷ ಪ್ರಖ್ಯಾತನಾದ ಸಮುದ್ರ ಗುಪ್ತನನ್ನು ಇಂಡಿಯಾದ ನೆಪೋಲಿಯನ್ ಎಂದು ಕರೆದಿದ್ದಾರೆ. ಸಾಹಿತ್ಯ ಮತ್ತು ಕಲೆಯ ದೃಷ್ಟಿ ಯಿಂದ ಅದು ಒಂದು ಸ್ವರ್ಣಯುಗ.

ನಾಲ್ಕನೆಯ ಶತಮಾನದ ಆರಂಭದಿಂದ ಸುಮಾರು ಒಂದೂವರೆ ಶತಮಾನದವರೆಗೆ ಉತ್ತರ ಹಿಂದೂಸ್ಥಾನದಲ್ಲಿ ಒಂದು ಶಕ್ತಿಯುತ ಪ್ರಗತಿಪೂರ್ಣರಾಜ್ಯದ ಮೇಲೆ ಗುಪ್ತರು ರಾಜ್ಯವಾಳಿದರು. ಅಲ್ಲಿಂದ ಮುಂದೆ ಇನ್ನೊಂದು ನೂರೈವತ್ತು ವರ್ಷ, ಅವರ ಸಂತತಿಯವರು ರಾಜರಾಗಿದ್ದರು. ಆದರೆ ಈಗ ಅವರು ಆತ್ಮರಕ್ಷಣೆಯಲ್ಲಿದ್ದರು ಮತ್ತು ರಾಜ್ಯವು ಕ್ರಮೇಣ ಸಣ್ಣದಾಗುತ್ತ ಬಂದಿತು. ಮಧ್ಯ ಏಷ್ಯದಿಂದ ಹೊಸ ಜನರು ದಂಡೆತ್ತಿ ಬರಲಾರಂಭಿಸಿದರು. ಇವರನ್ನು ಶ್ವೇತಹೂಣರೆಂದು ಕರೆಯು ತ್ತಿದ್ದರು. ಅವರೇ ಅತ್ತಿಲನ ಕೈಕೆಳಗೆ ಯುರೋಪನ್ನು ಕೊಳ್ಳೆ ಹೊಡೆದಂತೆ ಭಾರತವನ್ನು ಕೊಳ್ಳೆ ಹೊಡೆಯಲಾರಂಭಿಸಿದರು. ಅವರ ಪಾಶವೀವೃತ್ತಿ, ಪೈಶಾಚಿಕ ಕ್ರೌರ್ಯ ಜನರನ್ನು ರೊಚ್ಚಿಗೆಬ್ಬಿಸಿತು.

ಕೊನೆಗೆ ಯಶೋವರ್ಮನ ನಾಯಕತ್ವದಲ್ಲಿ ಒಂದು ಸಂಯುಕ್ತ ಬಲದಿಂದ, ಒಗ್ಗಟ್ಟಿನಿಂದ ಅವರನ್ನು ಎದುರಿಸಿದರು. ಹೂಣರ ಶಕ್ತಿ ಮುರಿಯಿತು. ಅವರ ನಾಯಕ ಮಿಹಿರಗುಳ ಸೆರೆಯಾಳಾದ, ಆದರೆ ಗುಪ್ತರ ವಂಶಿಕನಾದ ಬಾಲಾದಿತ್ಯ ದೇಶರೂಢಿಯಂತೆ ಆತನಿಗೆ ಕರುಣೆತೋರಿ ಭಾರತವನ್ನು ಬಿಟ್ಟು ಹೋಗಲು ಆಜ್ಞೆ ಮಾಡಿದ. ಮಿಹಿರಗುಳ ಸ್ವಲ್ಪ ದಿನಗಳಲ್ಲೇ ಹಿಂತಿರುಗಿ ಬಂದು ಜೀವದಾತನನ್ನು ಮೋಸದಿಂದ ಕೊಂದು ಅವನ ಔದಾರ್ಯಕ್ಕೆ ಪ್ರತೀಕಾರಮಾಡಿದ.

ಆದರೆ ಹೂಣರ ರಾಜ್ಯ ಭಾರತದಲ್ಲಿ ಬಹುಕಾಲ ನಡೆಯಲಿಲ್ಲ. ಐವತ್ತು ವರ್ಷಗಳು ಮಾತ್ರ ನಡೆಯಿತು. ಅವರಲ್ಲಿ ಕೆಲವರು ಇಲ್ಲಿಯೇ ಸಣ್ಣ ಸಣ್ಣ ಪಾಳೆಯ ಪಟ್ಟುಗಳಾಗಿ ಉಳಿದು ಆಗಾಗ್ಯೆ ತೊಂದರೆ ಕೊಡುತ್ತಿದ್ದರು; ಕ್ರಮೇಣ ಅವರು ಭಾರತ ಜನತೆಯ ಮಹಾಸಾಗರದಲ್ಲಿ ಮುಳುಗಿ ಹೋದರು. ಈ ಪಾಳೆಯಗಾರರಲ್ಲಿ ಕೆಲವರು ಕ್ರಿಸ್ತಶಕ ಏಳನೆಯ ಶತಮಾನದ ಆದಿಯಲ್ಲಿ ಪುನಃ ಕಿರುಕುಳ ಕೊಡಲಾರಂಭಿಸಿದರು. ಕನೂಜದ ರಾಜನಾದ ಹರ್ಷವರ್ಧನ ಅವರನ್ನು ಸದೆಬಡಿದು, ಉತ್ತರ ಮತ್ತು ಮಧ್ಯ ಹಿಂದೂಸ್ಥಾನದಲ್ಲಿ ಒಂದು ಪ್ರಬಲ ರಾಜ್ಯವನ್ನು ಕಟ್ಟಿದನು. ಆತನು ಬಹಳ ನಿಷ್ಠನಾದ ಬೌದ್ಧಧರ್ಮಿ ಆದರೆ ಮಹಾಯಾನ ಬೌದ್ಧನಾದ್ದರಿಂದ ಆ ಧರ್ಮವು ಅನೇಕ ವಿಧದಲ್ಲಿ ಹಿಂದೂ ಧರ್ಮದಂತೆಯೇ ಇತ್ತು. ಆತನು ಹಿಂದೂ ಮತ್ತು ಬೌದ್ಧ ಧರ್ಮಗಳೆರಡನ್ನೂ ಪ್ರೋತ್ಸಾಹಿಸಿದ. ಪ್ರಸಿದ್ಧ ಚೀನೀ ಯಾತ್ರಿಕನಾದ ಹುಯನ್‌ತ್ಸಾಂಗ್ ಕ್ರಿಸ್ತಶಕ ೬೨೯ ರಲ್ಲಿ ಭಾರತಕ್ಕೆ ಬಂದದ್ದೂ ಈತನ ಕಾಲದಲ್ಲೇ. ಹರ್ಷವರ್ಧನನು ಕವಿ ಮತ್ತು ನಾಟಕಕರ್ತೃ. ಅವನ ಆಸ್ಥಾನದಲ್ಲಿ ಅನೇಕ ಕಲಾವಿದರೂ ಕವಿಗಳೂ ಇದ್ದರು. ಅವನ ರಾಜಧಾನಿಯಾದ ಉಜ್ಜಯಿನಿ ಸಾಂಸ್ಕೃತಿಕ ಚಟುವಟಿಕೆಗಳಿಗೆ ಒಂದು ಪ್ರಸಿದ್ಧ ಕೇಂದ್ರವಾಗಿತ್ತು. ಕ್ರಿ.ಶ. ೬೪೮ ರಲ್ಲಿ ಹರ್ಷವರ್ಧನ ಕಾಲವಾದನು. ಅದೇ ಕಾಲದಲ್ಲಿ ಇಸ್ಲಾಂ ಧರ್ಮವು ಅರೇಬಿಯ ಮರುಭೂಮಿಯಿಂದ ಹೊರಟು ಆಫ್ರಿಕ ಮತ್ತು ಏಷ್ಯಾಖಂಡಗಳಲ್ಲಿ ಬಹುಬೇಗ ಹಬ್ಬಲು ಆರಂಭಿಸಿತ್ತು.

## ೨. ದಕ್ಷಿಣ ಭಾರತ

ದಕ್ಷಿಣ ಭಾರತದಲ್ಲಿ, ಮೌರ್ಯ ಚಕ್ರಾಧಿಪತ್ಯವು ಕುಸಿದುಬಿದ್ದಮೇಲೆ ಸುಮಾರು ಒಂದು ಸಾವಿರ ವರ್ಷಗಳಿಗೂ ಹೆಚ್ಚುಕಾಲ ದೊಡ್ಡ ದೊಡ್ಡ ರಾಜ್ಯಗಳು ಪ್ರಾಬಲ್ಯಕ್ಕೆ ಬಂದವು. ಆಂಧ್ರರು ಶಕರನ್ನು ಸೋಲಿಸಿದ್ದರು ಮತ್ತು ಕುಶಾನರ ಸಮಕಾಲೀನರಾಗಿದ್ದರು. ಅನಂತರ ಪಶ್ಚಿಮದಲ್ಲಿ ಚಾಲುಕ್ಯರ ಚಕ್ರಾಧಿಪತ್ಯ. ಆ ಮೇಲೆ ರಾಷ್ಟ್ರಕೂಟರು. ಇನ್ನೂ ದಕ್ಷಿಣದಲ್ಲಿ, ಭಾರತದಿಂದ ಅನೇಕ ಬಾರಿ ದಂಡಯಾತ್ರೆ ಮಾಡಿ ವಸಾಹತುಗಳನ್ನು ಸ್ಥಾಪಿಸಿದ ಪಲ್ಲವರು ಇದ್ದರು. ಆ ಮೇಲೆ ಚೋಳರ ಚಕ್ರಾಧಿಪತ್ಯವು ಇಡೀ ಪರ್ಯಾಯದ್ವೀಪವನ್ನೇ ಆಕ್ರಮಿಸಿ ಸಿಂಹಳ ಮತ್ತು ದಕ್ಷಿಣ ಬ್ರಹ್ಮದೇಶವನ್ನು ಸಹ ಅಧೀನಪಡಿಸಿಕೊಂಡಿತ್ತು. ಚೋಳರಾಜರುಗಳಲ್ಲಿ ಪ್ರಖ್ಯಾತರಾದವರಲ್ಲಿ ಕೊನೆಯವನಾದ ರಾಜೇಂದ್ರ ಕ್ರಿ.ಶ. ೧೦೪೪ ರಲ್ಲಿತೀರಿಕೊಂಡ.

ದಕ್ಷಿಣ ಭಾರತವು ಮುಖ್ಯವಾಗಿ ಅದರ ನಯವಸ್ತುಗಳ ಸಮುದ್ರ ವ್ಯಾಪಾರಕ್ಕೆ ಪ್ರಸಿದ್ಧಿ ಪಡೆದಿತ್ತು. ದಕ್ಷಿಣ ರಾಷ್ಟ್ರಗಳು ನೌಕಾಬಲವುಳ್ಳ ರಾಷ್ಟ್ರಗಳು. ಅವರ ಹಡಗುಗಳು ದೂರ ದೇಶಗಳಿಗೆ ವ್ಯಾಪಾರಸರಕನ್ನೊಯ್ಯುತ್ತಿದ್ದವು. ಗ್ರೀಕರು, ಅಲ್ಲಿ ವಲಸೆ ಬಂದು ನೆಲಸಿದ್ದರು ಮತ್ತು ರೋಮನ್ ನಾಣ್ಯಗಳು ಅಲ್ಲಿ ದೊರೆತಿವೆ. ಚಾಲುಕ್ಯ ರಾಜನೂ ಪರ್ಷಿಯದ ಸಸ್ಸನಿದ್ ರಾಜನೂ ಪರಸ್ಪರ ರಾಯಭಾರಿಗಳನ್ನು ವಿನಿಮಯಿಸಿದ್ದರು.

ಉತ್ತರ ಹಿಂದೂಸ್ಥಾನದಲ್ಲಿ ಪದೇ ಪದೇ ದಂಡಯಾತ್ರೆಗಳಾಗುತ್ತಿದ್ದರೂ ದಕ್ಷಿಣ ಭಾರತದ ಮೇಲೆ ಯಾವ ಪರಿಣಾಮವೂ ಆಗಲಿಲ್ಲ. ಪರೋಕ್ಷಪರಿಣಾಮವೆಂದರೆ ಅನೇಕರು ಉತ್ತರ ಭಾರತದಿಂದ ದಕ್ಷಿಣಕ್ಕೆ ಬಂದು ನೆಲಸಿದರು. ಅನೇಕ ಶಿಲ್ಪಿಗಳು, ಕುಶಲಕರ್ಮಿಗಳು, ಉದ್ಯೋಗಿಗಳು ಬಂದರು. ಈ ರೀತಿ ದಕ್ಷಿಣ ಭಾರತವು ಪ್ರಾಚೀನ ಕಲಾಸಂಪ್ರದಾಯಕ್ಕೆ, ಸಂಪತ್ತಿಗೆ ನೆಲೆವನೆ

ಯಾಯಿತು. ಉತ್ತರ ಭಾರತವು ವಿದೇಶೀಯರ ದಂಡಯಾತ್ರೆಗಳ ಸುಳಿಗೆ ಸಿಕ್ಕಿತು. ಬರುಬರುತ್ತ ಈ ಪರಿವರ್ತನೆಗೆ ಇನ್ನೂ ಹೆಚ್ಚಿನ ಪ್ರೋತ್ಸಾಹ ದೊರೆತು ದಕ್ಷಿಣ ಭಾರತವು ಹಿಂದೂ ಧರ್ಮನಿಷ್ಠೆಗೆ ತವರುಮನೆಯಾಯಿತು.

## ೩. ಶಾಂತಿಯುತ ಪ್ರಗತಿ ಮತ್ತು ಯುದ್ಧ ರೀತಿ

ಮೇಲಿಂದ ಮೇಲೆ ಒದಗಿದ ದಂಡಯಾತ್ರೆಗಳ, ಸಾಮ್ರಾಜ್ಯಗಳ ಮೇಲೆ ಸಾಮ್ರಾಜ್ಯಗಳು ಬಂದ ಸಂಕ್ಷೇಪ ಇತಿಹಾಸದಿಂದ ಭಾರತದಲ್ಲಿ ಆಗ ಏನು ನಡೆಯುತ್ತಿತ್ತು ಎಂಬುದರ ಕಲ್ಪನೆ ಸಹ ಆಗುವುದಿಲ್ಲ ; ತಪ್ಪು ಅಭಿಪ್ರಾಯವೂ ಹುಟ್ಟುತ್ತದೆ. ಈ ಕಾಲವು ಸುಮಾರು ಒಂದು ಸಾವಿರ ವರ್ಷಗಳ ಕಾಲದ್ದು. ಮಧ್ಯೆ ಮಧ್ಯೆ ಬಹು ಕಾಲ ಶಾಂತಿಯುತ ವ್ಯವಸ್ಥಿತ ರಾಜ್ಯಭಾರವಿತ್ತು. ಮೌರ್ಯರು, ಕುಶಾನರು, ಮತ್ತು ಗುಪ್ತರು, ದಕ್ಷಿಣದಲ್ಲಿ ಆಂಧ್ರರು, ಚಾಳುಕ್ಯರು, ರಾಷ್ಟ್ರಕೂಟರು ಮತ್ತು ಇತರರು ಈ ರೀತಿ ಪ್ರತಿಯೊಂದು ರಾಜ್ಯವೂ ೨೦೦-೩೦೦ ವರ್ಷ ಅಥವ ಇನ್ನೂ ಹೆಚ್ಚು ಕಾಲ ಭಾರತದಲ್ಲಿನ ಬ್ರಿಟಿಷ್ ಸಾಮ್ರಾಜ್ಯದ ಕಾಲಕ್ಕಿಂತ ಹೆಚ್ಚು ಕಾಲ ಅಧಿಕಾರ ನಡೆಸಿದವು. ಇವರೆಲ್ಲ ದೇಶೀಯ ರಾಜ ಮನೆತನಗಳವರು. ಉತ್ತರದ ಗಡಿಯಿಂದ ಬಂದ ಕುಶಾನರಂಥವರು ಸಹ ಈ ದೇಶ ಮತ್ತು ಅದರ ಸಂಸ್ಕೃತಿಯನ್ನವಲಂಬಿಸಿ ದೇಶೀಯ ರಾಜಮನೆತನಗಳಂತೆಯೇ ವರ್ತಿಸಿದರು. ಗಡಿನಾಡಿನಲ್ಲಿ, ಆಗಾಗ ಅಕ್ಕಪಕ್ಕದ ರಾಜ್ಯಗಳಲ್ಲಿ ಘರ್ಷಣೆ ಮತ್ತು ಯುದ್ಧಗಳಾಗುತ್ತಿದ್ದವು. ಆದರೆ ಸಾಮಾನ್ಯವಾಗಿ ದೇಶದಲ್ಲಿ ಶಾಂತಿ ನೆಲೆಸಿತು. ರಾಜರುಗಳು ಕಲೆ ಮತ್ತು ಸಂಸ್ಕೃತಿಯ ಅಭಿವೃದ್ಧಿಯನ್ನು ಪ್ರೋತ್ಸಾಹಿಸುತ್ತಿದ್ದರು. ಈ ಚಟುವಟಿಕೆಗಳು ರಾಜ್ಯದಿಂದ ರಾಜ್ಯಕ್ಕೆ ಸೀಮೋಲ್ಲಂಘನ ಮಾಡುತ್ತಿದ್ದವು. ಕಾರಣ ಸಾಹಿತ್ಯ ಮತ್ತು ಸಂಸ್ಕೃತಿಯ ಹಿನ್ನೆಲೆಯು ಭಾರತಕ್ಕೆಲ್ಲ ಒಂದೇ ಆಗಿತ್ತು. ಪ್ರತಿಯೊಂದು ತಾತ್ವಿಕ, ಧಾರ್ಮಿಕ ಜಿಜ್ಞಾಸೆಯೂ ಮಠಗಳಿಗೆಯಲ್ಲಿ ದೇಶಾದ್ಯಂತವೂ ಹರಡಿ ಉತ್ತರ ದಕ್ಷಿಣದೆರಡೂ ಕಡೆಯಲ್ಲೂ ವಾದ ವಿವಾದಗಳು ಜರುಗುತ್ತಿದ್ದವು.

ಎರಡು ರಾಜ್ಯಗಳಿಗೆ ಯುದ್ಧವಾದಾಗ, ಅಥವ ದೇಶದಲ್ಲಿ ರಾಜಕೀಯ ಕ್ಷೋಭೆ ಎದ್ದಾಗ ಸಹ ಜನಸಮುದಾಯದ ಚಟುವಟಿಕೆಗಳಿಗೆ ಯಾವ ಆತಂಕವೂ ಬರುತ್ತಿರಲಿಲ್ಲ. ಯುದ್ಧದಲ್ಲಿ ನಿರತರಾದ ರಾಜರುಗಳು ಗ್ರಾಮಗಳ ಸ್ಥಳೀಯ ಸ್ವಾತಂತ್ರ್ಯಕ್ಕೆ ಯಾವ ಧಕ್ಕೆಯನ್ನೂ ತರುತ್ತಿರಲಿಲ್ಲ. ಯಾವ ರೀತಿಯಲ್ಲೂ ಬೆಳೆದ ಫಸಲನ್ನು ನಷ್ಟಪಡಿಸುವುದಿಲ್ಲ, ಅಚಾತುರ್ಯದಿಂದ ನಷ್ಟಪಡಿಸಿದರೆ ಪರಿಹಾರ ಕೊಡುತ್ತೇವೆ ಎಂದು ರಾಜರುಗಳು ಗ್ರಾಮಸ್ಥರೊಡನೆ ಒಪ್ಪಂದ ಮಾಡಿಕೊಂಡ ಬಗ್ಗೆ ಸಾಕ್ಷ್ಯ ದೊರೆತಿದೆ. ಆದರೆ ಹೊರಗಿನಿಂದ ದಂಡೆತ್ತಿ ಬಂದ ಪರಕೀಯರಿಗಾಗಲಿ ಅಥವ ಪ್ರಾಯಶಃ ಅಧಿಕಾರಕ್ಕಾಗಿ ನಡೆಯುತ್ತಿದ್ದ ಅಂತರ್ಯುದ್ಧಗಳಿಗಾಗಲಿ ಇದು ಅನ್ವಯಿಸುತ್ತಿದ್ದಿಲ್ಲ.

ಪ್ರಾಚೀನ ಹಿಂದೂ ಆರ್ಯರ ಯುದ್ಧ ನೀತಿಯಲ್ಲಿ, ಯಾವ ಅಧರ್ಮ ಯುದ್ಧವನ್ನೂ ಮಾಡಕೂಡದು. ಧರ್ಮ ರಕ್ಷಣೆಗಾಗಿ ಧರ್ಮ ಯುದ್ಧ ನಡೆಯಬೇಕು ಎನ್ನುವದು ಮುಖ್ಯವಿಧಿ. ತತ್ವಕ್ಕೂ ಅನುಷ್ಠಾನಕ್ಕೂ ಎಷ್ಟರ ಸಾಮ್ಯವಿತ್ತೆಂಬುದು ಬೇರೆ ವಿಚಾರ. ವಿಷ ಪೂರಿತವಾದ ಬಾಣಗಳು, ಗುಪ್ತಾಸ್ತ್ರಗಳು, ನಿದ್ರಾವಶರಾದವರನ್ನು ಕೊಲ್ಲುವುದು, ಬಂದಿಗಳಾಗಿ ಅಥವ ಶರಣು ಬಂದವರನ್ನು ಕೊಲ್ಲುವುದು ನಿಷಿದ್ಧವಿತ್ತು. ಒಳ್ಳೆಯ ಕಟ್ಟಡಗಳನ್ನು ನಾಶ ಮಾಡಬಾರದೆಂದೂ ವಿಧಿಸಲಾಗಿತ್ತು. ಆದರೆ ಇದೆಲ್ಲ ಚಾಣಕ್ಯನ ಕಾಲದ ಹೊತ್ತಿಗೆ ವ್ಯತ್ಯಾಸವಾಗುತ್ತ ಇತ್ತು. ಅವನು ಶತ್ರುವಿನ ನಾಶಕ್ಕೆ ಇನ್ನೂ ನಾಶಕಾರಕ ಮತ್ತು ಮೋಸದ ಮಾರ್ಗಗಳು ಅವಶ್ಯವೆಂದರೆ ಅನುಮೋದಿಸುತ್ತಾನೆ.

ಚಾಣಕ್ಯನು ತನ್ನ ಅರ್ಥ ಶಾಸ್ತ್ರದಲ್ಲಿ ನೂರಾರು ಜನರನ್ನು ಒಟ್ಟಿಗೆ ನಾಶಮಾಡತಕ್ಕ ಯಂತ್ರಗಳು ಮತ್ತೂ ಯಾವುದೋ ಸ್ಫೋಟಕ ವಸ್ತುಗಳ ವಿಷಯವನ್ನು ತಿಳಿಸುವುದು ಅತಿ ಮಹತ್ವದ ವಿಷಯ. ಕಂದಕ ಯುದ್ಧದ ವಿಷಯವನ್ನು ಸಹ ತಿಳಿಸುತ್ತಾನೆ. ಅವೆಲ್ಲ ಏನು—ಎಂದು ಈಗ ಹೇಳಲು ನಿಜವಾಗಿಯೂ ಸಾಧ್ಯವಿಲ್ಲ. ಪ್ರಾಯಶಃ ರೂಢಿಯಲ್ಲಿದ್ದ ಕೆಲವು ಇಂದ್ರಜಾಲ ಶಕ್ತಿಯ

ಕತೆಗಳಿದ್ದರೂ ಇರಬಹುದು. ಅದು ಸಿಡಿಮದ್ದೇ ಇರಬೇಕೆಂದು ಊಹಿಸಲು ಯಾವ ಆಧಾರವೂ ಇಲ್ಲ.

ಬೆಂಕಿ, ಯುದ್ಧ, ಕ್ಷಾಮಗಳ ಹಾವಳಿಗೆ ಸಿಕ್ಕಿ ದೇಶದಲ್ಲಿ ಒಳಾಡಳಿತವು ಕುಸಿದು ಬಿದ್ದಾಗ ಭಾರತವು ತನ್ನ ಇತಿಹಾಸ ಪರಂಪರೆಯಲ್ಲಿ ಅನೇಕ ಸಂಕಟಗಳನ್ನು ಅನುಭವಿದೆ. ಆದರೂ ಈ ಇತಿಹಾಸದ ಸ್ಥೂಲ ವೀಕ್ಷಣೆಯಿಂದ ಯೂರೋಪಿಗಿಂತ ಭಾರತದಲ್ಲಿ ಬಹು ದೀರ್ಘಕಾಲದ ಶಾಂತಿಯುತ, ವ್ಯವಸ್ಥಿತ ಜೀವನ ನಡೆದು ಬಂದಿದೆ ಎಂಬುದು ವ್ಯಕ್ತವಾಗುತ್ತದೆ. ತುರ್ಕಿ ಜನರ ಮತ್ತು ಅಫ್ಘನರ ದಂಡಯಾತ್ರೆಯ ನಂತರ ಸಹ, ಮೊಗಲ ಸಾಮ್ರಾಜ್ಯ ಕುಸಿದು ಬೀಳುವವರೆಗೆ ಅದೇ ರೀತಿಯ ವ್ಯವಸ್ಥಿತ ಜೀವನ ಇತ್ತು. ಬ್ರಿಟಿಷರ ಆಳ್ವಿಕೆಯ ನಂತರವೇ ದೇಶದಲ್ಲಿ ಮೊಟ್ಟಮೊದಲು ಶಾಂತಿ ಮತ್ತು ವ್ಯವಸ್ಥೆಯು ನೆಲಸಿತೆಂದು ಹೇಳುತ್ತಿರುವ ಭ್ರಮೆಯನ್ನು ನೋಡಿದರೆ ಆಶ್ಚರ್ಯವಾಗುತ್ತದೆ. ಬ್ರಿಟಿಷರ ಆಳ್ವಿಕೆಯು ಆರಂಭವಾದಾಗ ದೇಶದ ರಾಜಕೀಯ ಮತ್ತು ಆರ್ಥಿಕ ರಚನೆಯು ಮುರಿದಿತ್ತು, ದೇಶವು ಬಹಳ ಹೀನಸ್ಥಿತಿಯಲ್ಲಿತ್ತು ಎನ್ನುವುದು ನಿಜ. ಬ್ರಿಟಿಷರು ಇಲ್ಲಿ ಬೇರುಬಿಡಲು ಅದೇ ಮುಖ್ಯ ಕಾರಣ.

### ೪. ಭಾರತದ ಸ್ವಾತಂತ್ರ್ಯಾಭಿಲಾಷೆ

ಸೈನ್ಯ ಸಾಲ್ಗಳ ಎದುರು ಬಾಗಿತ್ತು ಮೂಡಣವು
ಕಡೆಗಣಿಸಿ ನೂಕಿದೆಡೆ ತಾಳ್ಮೆಯಲಿ ಬಿದ್ದು;
ಪರದಾಳಿಗಳು ಅಬ್ಬರಿಸಿ ಸಾಗಿರಲು ಮೇಲೆ ಮೇಲೆ
ತಡೆಯದೆಯೆ, ತಿರುತಿರುಗಿ ಮುಳುಗಿತ್ತು ಮೂಡಣವು ಚಿಂತೆಯಲಿ.

ಕವಿಯ ಈ ಸಾಲ್ಗಳನ್ನು ಪದೇ ಪದೇ ಉದಹರಿಸುತ್ತಾರೆ. ಪೌರ್ವಾತ್ಯವು ಅದರಲ್ಲಿಯೂ 'ಇಂಡಿಯ' ಎಂಬ ಹೆಸರಿನ ಪೌರ್ವಾತ್ಯಭಾಗವು ಸದಾ ಆಲೋಚನಾಪರ. ಅದರಲ್ಲೂ ವ್ಯವಹಾರ ಕುಶಲರ ದೃಷ್ಟಿಯಲ್ಲಿ ಭಾರತದ ಯೋಚನೆಗಳೆಲ್ಲ ಗುರಿಯಿಲ್ಲದ ಅಸಂಬದ್ಧ ವಿಷಯಗಳ ವಿಚಾರದಲ್ಲಿ. ಭಾರತವು ಜ್ಞಾನಕ್ಕೆ ಮತ್ತು ಮಹಾ ಜ್ಞಾನಿಗಳಾದ ವಿದ್ವಾಂಸರಿಗೆ ಬಹಳ ಗೌರವಕೊಟ್ಟಿದೆ. ಅಲ್ಲದೆ ಖಡ್ಗಧಾರಿಗಳಾದ ಕ್ಷತ್ರಿಯರೂ ಧನಿಕರಾದ ಶ್ರೀಮಂತರೂ ಜ್ಞಾನಿಗಳಿಗಿಂತ ಕೀಳು ಎಂದೇ ಭಾರತದ ಭಾವನೆ. ತನ್ನ ಅವನತಸ್ಥಿತಿಯಲ್ಲಿ ಸಹ ಜ್ಞಾನಕ್ಕೇ ಪ್ರಾಶಸ್ತ್ಯಕೊಟ್ಟು ಅದರಲ್ಲೇ ಒಂದು ಮನಶ್ಶಾಂತಿಯನ್ನು ಪಡೆದಿದೆ.

ಆದರೆ ಇಂಡಿಯ ಎಲ್ಲ ಕಾಲಗಳಲ್ಲಿಯೂ ಪರದಾಳಿಗೆ ಮೌನದಿಂದ ತಲೆಬಾಗಿದೆ ಎಂಬುದಾಗಲಿ, ಶತ್ರು ಸೇನೆಗಳಿಗೆ ಸುಮ್ಮನೆ ಮುನ್ನುಗ್ಗಲು ಅವಕಾಶಕೊಟ್ಟಿದೆ ಎಂಬುದಾಗಲಿ ನಿಜವಲ್ಲ. ಸದಾ ಅವುಗಳನ್ನು ಎದುರಿಸಿದೆ, ಎಷ್ಟೋವೇಳೆ ಜಯಶಾಲಿಯಾಗಿದೆ; ಕೆಲವು ವೇಳೆ ವಿಫಲವಾದರು ಆ ಸೋಲನ್ನು ಮರೆಯದೆ ಅದನ್ನೇ ಮುಂದಿನ ಪ್ರಯತ್ನಕ್ಕೆ ಸೋಪಾನವಾಗಿ ಉಪಯೋಗಿಸಿಕೊಂಡಿದೆ. ಆ ಪ್ರಯತ್ನದಲ್ಲಿ ಎರಡು ಮಾರ್ಗವನ್ನು ಅವಲಂಬಿಸಿದೆ, ಕಾದಾಡಿ ಹೊಡೆದೋಡಿಸುವುದು ಒಂದು ಮಾರ್ಗ; ಸಾಧ್ಯವಾಗದೆ ಹೋದರೆ ಉಳಿದವರನ್ನು ತಾನೇ ಜೀರ್ಣಿಸಿಕೊಳ್ಳುವದು ಎರಡನೆಯ ಮಾರ್ಗ. ಅಲೆಕ್ಸಾಂಡರ್‌ನ ಸೈನ್ಯವನ್ನು ಬಹಳ ಯಶಸ್ವಿಯಾಗಿ ತಡೆಗಟ್ಟಿತು ಮತ್ತು ಆತನು ಮರಣ ಹೊಂದಿದ ಅತ್ಯಲ್ಪಕಾಲದಲ್ಲೇ ಉತ್ತರದಲ್ಲಿದ್ದ ಗ್ರೀಕ್ ಸೈನ್ಯವನ್ನೆಲ್ಲ ಸದೆಬಡೆದೋಡಿಸಿತು. ಅನಂತರ ಇಂಡೊ ಗ್ರೀಕರನ್ನೂ ಮತ್ತು ಇಂಡೊ ಸಿಥಿಯನರನ್ನೂ ತನ್ನೊಳಗೇ ಐಕ್ಯ ಮಾಡಿಕೊಂಡು ಕೊನೆಯಲ್ಲಿ ಹೂಣರೊಡನೆ ಅನೇಕ ಕಾಲ ಯುದ್ಧಮಾಡಿ ಕಟ್ಟಕಡೆಗೆ ಅವರನ್ನು ಓಡಿಸಿತು, ಉಳಿದವರನ್ನು ಪುನಃ ತನ್ನೊಳಗೆ ಸೇರಿಸಿಕೊಂಡಿತು. ಅರಬರು ಬಂದವರು ಸಿಂಧು ನದಿಯ ಬಳಿಯೇ ನಿಂತರು. ತುರ್ಕಿ ಜನರು ಮತ್ತು ಅಫ್ಘನರಿಗೆ ಮುಂದುವರಿಯಲು ಬಹುಕಾಲ ಹಿಡಿಯಿತು. ದೆಹಲಿಯ ಸಿಂಹಾಸನದ ಮೇಲೆ ಭದ್ರವಾಗಿ ಕೂಡಲು ಬಹಳ ದಿನಗಳು ಬೇಕಾಯಿತು. ಅದೊಂದು ತಡೆಯಿಲ್ಲದ ಬಹುಕಾಲದ ಹೋರಾಟ. ಈ ಮಧ್ಯೆ ಬಂದವರು ಭಾರತೀಯರಾಗಿ ಬದಲಾವಣೆ ಹೊಂದುತ್ತಿದ್ದರು. ಇತರ ಭಾರತೀ

ಯರಿಗಿಂತ ಅವರು ಯಾವುದರಲ್ಲೂ ಕಡಮೆ ಇರುತ್ತಿರಲಿಲ್ಲ. ಭಿನ್ನತೆಯಲ್ಲಿ ಐಕ್ಯತೆಯನ್ನುಂಟುಮಾಡಿ ಈರೀತಿ ಸಾರ್ವತ್ರಿಕ ರಾಷ್ಟ್ರೀಯತ್ವವನ್ನು ಬೆಳೆಸುವ ಸನಾತನ ಭಾರತೀಯರ ಆದರ್ಶಕ್ಕೆ ಅಕ್ಬರ್ ಬಾದಶಹನೇ ಮಹಾಪ್ರತಿನಿಧಿಯಾದನು; ಭಾರತದೊಂದಿಗೆ ಅವನು ಏಕೀಭವಿಸಿದುದರಿಂದಲೇ ಪರಕೀಯನಾದರೂ ಭಾರತವು ಅವನನ್ನು ಹಿಂಬಾಲಿಸಿತು. ಅದೇ ಕಾರಣದಿಂದಲೇ ಭದ್ರವಾದ ತಳಹದಿಯನ್ನು ಹಾಕಿ ಒಂದು ಮಹಾ ವೈಭವಯುಕ್ತ ಸಾಮ್ರಾಜ್ಯವನ್ನು ಕಟ್ಟಲು ಅವನಿಗೆ ಸಾಧ್ಯವಾಯಿತು. ಆತನ ವಂಶೀಕರು ಎಲ್ಲಿಯವರೆಗೆ ಈ ನೀತಿಯನ್ನು ತಮ್ಮ ದೃಷ್ಟಿಪಥದಲ್ಲಿಟ್ಟುಕೊಂಡು ರಾಷ್ಟ್ರದ ಇಚ್ಛೆಗನುಸಾರವಾಗಿ ನಡೆದರೋ ಅಲ್ಲಿಯವರೆಗೆ ಆ ಚಕ್ರಾಧಿಪತ್ಯವು ಬೆಳೆದು ಉಳಿಯಿತು. ಆದರೆ ಆ ದಾರಿಯನ್ನು ಬಿಟ್ಟು ಅಡ್ಡ ದಾರಿಯನ್ನು ಎಂದಿನಿಂದ ಹಿಡಿದು ರಾಷ್ಟ್ರದ ಪ್ರಗತಿಗೆ ಅಡ್ಡ ಬಂದರೋ ಅಂದಿನಿಂದ ಅವರ ಶಕ್ತಿಯು ಕುಂದುತ್ತ ಬಂದಿತು. ಅವರ ಚಕ್ರಾಧಿಪತ್ಯವೂ ನುಚ್ಚು ನೂರಾಯಿತು. ಸಂಕುಚಿತ ದೃಷ್ಟಿಯಿದ್ದರೂ ಪುನರುಜ್ಜೀವಿತ ರಾಷ್ಟ್ರೀಯ ಭಾವನೆಯ ಹೊಸ ಚಳವಳಿಗಳೆದ್ದುವು. ಶಾಶ್ವತವಾದ ರಾಜ್ಯವನ್ನು ಕಟ್ಟಲು ಅವುಗಳಿಗೆ ಶಕ್ತಿ ಸಾಲದಾದರೂ ಮೊಗಲರ ಸಾಮ್ರಾಜ್ಯವನ್ನು ನಾಶಮಾಡಿದವು. ಸ್ವಲ್ಪಕಾಲ ಯಶಸ್ಸೂ ದೊರೆಯಿತು. ಆದರೆ ಅವುಗಳ ದೃಷ್ಟಿ ಎಲ್ಲವೂ ಪ್ರಾಚೀನತೆಯಲ್ಲಿಯೇ ನೆಟ್ಟು ಪ್ರಾಚೀನ ವೈಭವವನ್ನೇ ಪುನರುತ್ಥಾನಗೊಳಿಸಬೇಕೆಂದು ಪ್ರಯತ್ನಪಟ್ಟುವು. ಈ ಮಧ್ಯೆ ಶತ ಶತಮಾನಗಳಿಂದ ರಾಷ್ಟ್ರದಲ್ಲಿ ಬೇರೂರಿ ಬೆಳೆದು ಬಂದಿರುವ ಅನೇಕ ವಿಷಯಗಳನ್ನು ಅಲಕ್ಷ್ಯ ಮಾಡಲು ಸಾಧ್ಯವಿಲ್ಲ, ಬದಿಗೊತ್ತಲಾಗುವುದಿಲ್ಲ. ಗತಕಾಲವೆಂದಿಗೂ ವರ್ತಮಾನಕಾಲವಾಗಲಾರದು; ಅವರ ಕಾಲದ ಆ ವರ್ತಮಾನಕಾಲ ಸಹ ಕೊಳೆತು ಪಾಚಿಗಟ್ಟಿದ್ದ ಕ್ರಿಯಾಶೂನ್ಯ ಕಾಲ ಎನ್ನುವುದನ್ನು ಮರೆತರು. ಪಶ್ಚಿಮ ದೇಶಗಳಲ್ಲಿ ಹೊಸ ದೃಷ್ಟಿ ಮತ್ತು ಹೊಸ ಮಾರ್ಗಗಳನ್ನವಲಂಬಿಸಿದ ಒಂದು ಹೊಸ ಜೀವಂತ ಪ್ರಪಂಚ ಉದ್ಭವಿಸುತ್ತಿದೆ; ಬ್ರಿಟಿಷರು ಆ ಹೊಸ ಪ್ರಪಂಚದ ಪ್ರತಿನಿಧಿಗಳು ಎನ್ನುವುದು ಅವರಿಗೆ ತಿಳಿಯದಾಯಿತು. ಬ್ರಿಟಿಷರು ಜಯಶೀಲರಾದರು. ಆದರೆ ಉತ್ತರ ಭಾರತದಲ್ಲಿ ಇನ್ನೂ ನೆಲೆಸಿರಲಿಲ್ಲ; ಅಷ್ಟರಲ್ಲಿಯೇ ಮಹಾ ದಂಗೆ ಎದ್ದು ಸ್ವಾತಂತ್ರ್ಯ ಸಂಗ್ರಾಮವಾಗಿ ಪರಿಣಮಿಸಿತು ಮತ್ತು ಬ್ರಿಟಿಷ್ ರಾಜ್ಯಭಾರವೂ ಕೊನೆಗಾಣುವುದರಲ್ಲಿಯೂ ಇತ್ತು. ಸ್ವಾತಂತ್ರ್ಯಾಭಿಲಾಷೆ, ಪರಮಾಧಿಕಾರದ ಆಶೆ, ಪರದಾಸ್ಯಕ್ಕೆ ತಲೆಬಾಗಬಾರದೆಂಬ ಹಟ ಸದಾ ಇದ್ದೇ ಇದ್ದವು.

## ೬. ಪ್ರಗತಿಯೋ ? ಶಾಂತಿಯೋ ?

ನಮ್ಮ ಜನದ ದೃಷ್ಟಿ ಸಂಕುಚಿತ ದೃಷ್ಟಿ. ನಮ್ಮ ಪುರಾತನ ಸಂಸ್ಕೃತಿಯಲ್ಲಿ, ಗತ ವೈಭವದಲ್ಲಿ ಬಹಳ ಹೆಮ್ಮೆ. ಅದನ್ನು ಉಳಿಸಿಕೊಳ್ಳಲೆಂದು ಅಡ್ಡ ಗೋಡೆಗಳನ್ನು ಕಟ್ಟಿ ಒಂದು ಚಕ್ರ ವ್ಯೂಹವನ್ನೇ ರಚಿಸಿದ್ದೇವೆ. ಈರೀತಿ ಕುಲದ ಭಾವನೆ ದಿನ ದಿನಕ್ಕೂ ಬಿಗಿಯಾಗುತ್ತಿದ್ದರೂ ಜಾತಿಮತಗಳ ಕಟ್ಟು ಬಲಗೊಳ್ಳುತ್ತಿದ್ದರೂ ಇತರರಂತೆ ನಮ್ಮ ಕುಲಗೋತ್ರಗಳ ಪಾರಿಶುದ್ಧತೆಯಲ್ಲಿ ಹೆಮ್ಮೆಗೊಳ್ಳುತ್ತ ಇದ್ದರೂ ನಮ್ಮಲ್ಲಿ ಅನೇಕ ಬುಡಕಟ್ಟಿನ ಜನರು ಬೆರೆತು ಹೋಗಿದ್ದಾರೆ–ಆರ್ಯರು, ದ್ರಾವಿಡರು, ತುರೇನಿಯನರು, ಸೆಮೆಟಿಕ್ ಜನರು ಮತ್ತು ಮಂಗೋಲಿಯನರು. ಆರ್ಯರು ಮೇಲಿಂದ ಮೇಲೆ ಅಲೆಯಲೆಯಾಗಿ ಇಲ್ಲಿಗೆ ಬಂದು ದ್ರಾವಿಡರೊಂದಿಗೆ ಬೆರೆತರು. ಅವರ ನಂತರದ ಸಹಸ್ರಾರು ವರ್ಷಗಳಲ್ಲಿ ಅನೇಕ ಜನಾಂಗಗಳು, ಪಂಗಡಗಳು ಮೇಲಿಂದ ಮೇಲೆ ವಲಸೆ ಬಂದಿದ್ದಾರೆ—ಮೀಡಿಯನರು, ಇರಾನಿಗಳು, ಗ್ರೀಕರು, ಬ್ಯಾಕ್ಟ್ರಿಯನರು, ಪಾರ್ಥಿಯನರು, ಶಕರು ಅಥವ ಸಿಥಿಯನರು, ಕುಶಾನರು ಅಥವ ಯುಯೇಚಿಗಳು, ತುರ್ಕಿ ಜನರು, ಮಂಗೋಲಿಯರ್ು, ತುರುಕರು ಮತ್ತು ಇತರರು ಸಣ್ಣ ದೊಡ್ಡ ಗುಂಪುಗಳಲ್ಲಿ ಬಂದು ಭಾರತದಲ್ಲಿ ನೆಲೆಸಿ ಮನೆಮಾಡಿಕೊಂಡರು. ಡಾಡ್ವೆಲ್–"ಇಂಡಿಯ" ಎಂಬ ಗ್ರಂಥದಲ್ಲಿ ಮಹಾ ಕ್ರೂರಿಗಳೂ, ಯುದ್ಧ ಸಾಹಸಿಗಳೂ ಆದ ಜನರು ಪದೇ ಪದೇ ಭಾರತದ ಮೈದಾನ ಪ್ರದೇಶಗಳ ಮೇಲೆ ದಂಡೆತ್ತಿ ಬಂದರು, ಅಲ್ಲಿನ ರಾಜರನ್ನು ಸೋಲಿಸಿದರು, ಅವರ ನಗರಗಳನ್ನು ಹಿಡಿದು ನಾಶಮಾಡಿದರು, ಹೊಸ ರಾಜ್ಯಗಳನ್ನು ಸ್ಥಾಪಿಸಿ ತಮ್ಮದೇ ನೂತನ ರಾಜಧಾನಿಗಳನ್ನು ನಿರ್ಮಿಸಿದರು; ಅನಂತರ ಮಾನವ ಕುಲದ ಮತ್ತೊಂದು ಮಹಾ ಅಲೆಯಲ್ಲಿ ನಿರ್ನಾಮ

ವಾದರು. ಅವರ ನಂತರದವರಿಗೆ ಉಳಿದ ಆಸ್ತಿ ಎಂದರೆ ಸ್ವಲ್ಪ ಹೊಸ ರಕ್ತ, ಸ್ವಲ್ಪ ಹೊಸ ಸಂಪ್ರದಾಯಗಳು ; ಸುತ್ತಲಿನ ಸನ್ನಿವೇಶ ಅದನ್ನೇ ಅಧೀನ ಪಡಿಸಿಕೊಂಡು, ಸಜಾತೀಯವನ್ನಾಗಿ ಮಾಡಿಕೊಂಡಿತು—ಎಂದಿದ್ದಾನೆ.

ಈ ರೀತಿ ಅಧೀನ ಮಾಡಿಕೊಳ್ಳುವ ಶಕ್ತಿಗೆ ಕಾರಣವೇನು? ಭೂಗೋಲ ಮತ್ತು ವಾಯುಗುಣ ಪ್ರಭಾವದ ಒಂದು ವಿಶಿಷ್ಟ ವಾತಾವರಣ. ಆದರೆ ಎಲ್ಲಕ್ಕೂ ಮಿಗಿಲಾಗಿ ಭಾರತೀಯ ಇತಿಹಾಸದ ಮುಂಬೆಳಗಿನಲ್ಲಿ, ಭಾರತದ ಯೌವನದ ನವ್ಯತೆಯಲ್ಲಿ ಅದರ ಸುಷುಪ್ತ ಮನಸ್ಸಿನ ಮೇಲೆ ಮುದ್ರಿಸಿ ಯಾವುದೋ ಒಂದು ಶಕ್ತಿದಾಯಕ ಪ್ರೇರಣೆ; ಯಾವುದೋ ಅಸಾಧಾರಣ ಪ್ರವೃತ್ತಿ ಅಥವ ಜೀವನದ ಮೌಲ್ಯದ ಭಾವನೆ ಇರಬೇಕು. ಆ ಪ್ರೇರಣೆಯು ಇನ್ನೂ ಶಕ್ತಿಯುತವಾಗಿ ಉಳಿದಿತ್ತು ಮತ್ತು ಎಷ್ಟೇ ಭಿನ್ನ ಸಂಸ್ಕೃತಿಯವರಿರಲಿ ಭಾರತಕ್ಕೆ ಬಂದವರನ್ನೆಲ್ಲ ತನ್ನವರನ್ನಾಗಿ ಮಾಡಿಕೊಳ್ಳುವ ಶಕ್ತಿಯು ಅದಕ್ಕೆ ಇತ್ತು. ಈ ದೇಶದಲ್ಲಿ ಹುಟ್ಟಿ ಬೆಳಗಿದ ಸಂಸ್ಕೃತಿಗೆ ಈ ಪ್ರೇರಣೆಯೇ ಜೀವಜ್ಯೋತಿಯಾಗಿ ಇರಬಹುದೆ? ಮತ್ತು ಇತಿಹಾಸ ಪರಂಪರೆಯಲ್ಲಿ ಜನತೆಯ ಮೇಲೆ ತನ್ನ ಪ್ರಭಾವ ಬೀರುತ್ತ ಬಂದಿರಬಹುದೆ?

ಭಾರತೀಯ ಸಂಸ್ಕೃತಿಯ ಬೆಳವಣಿಗೆಯ ತಳಹದಿಯಾಗಿ ಒಂದು ಪ್ರೇರಣ ಶಕ್ತಿ ಅಥವ ಜೀವನಾದರ್ಶದ ವಿಷಯ ಪ್ರಸ್ತಾಪಿಸುವುದು ಅವಿವೇಕವಾಗಿ ಮತ್ತು ಧೋರಣೆಯಾಗಿ ತೋರಬಹುದು. ಒಬ್ಬ ವ್ಯಕ್ತಿಯೇ ತನ್ನ ಜೀವನದಲ್ಲಿ ನೂರಾರು ಕಡೆಗಳಿಂದ ಪೋಷಣೆಯನ್ನು ಪಡೆಯುತ್ತಾನೆಂದಮೇಲೆ ಒಂದು ಜನಾಂಗ ಅಥವಾ ಸಂಸ್ಕೃತಿಯ ಜೀವನ ಇನ್ನೂ ಹೆಚ್ಚು ಜಟಿಲವಾಗಿರಬೇಕು. ಭಾರತದ ಮೇಲ್ಪದರದಲ್ಲಿ ಸಹಸ್ರಾರು ಭಾವನೆಗಳು ಬಿರುಗಾಳಿಯ ಹೊಡೆತಕ್ಕೆ ಸಿಕ್ಕಿದ ಹಡಗಿನಿಂದ ತೇಲಿಬರುವ ವಸ್ತುಗಳಂತೆ ತೆರೆ ತೆರೆಯಾಗಿ ತೇಲಿಬರುತ್ತವೆ; ಒಂದಕ್ಕೆ ಒಂದು ವಿರೋಧ. ಯಾವುದಾದರೂ ಒಂದನ್ನು ಭದ್ರವಾಗಿ ಹಿಡಿದುಕೊಂಡು ಅದೇ ಸರಿಯೆಂದು ವಾದಿಸುವುದೂ ಸುಲಭ; ಇನ್ನೊಂದರ ಆಧಾರದ ಮೇಲೆ ಅದನ್ನು ಉರುಳಿಸುವುದೂ ಅಷ್ಟೇ ಸುಲಭ. ಎಲ್ಲೆಡೆಯಲ್ಲೂ ಹೀಗೆಯೇ; ಅದರಲ್ಲೂ ಸಜೀವ ವಸ್ತುಗಳಿಗೆ ನಿರ್ಜೀವ ವಸ್ತುಗಳೆಷ್ಟೋ ಅಂಟಿಕೊಂಡಿರುವ ಪುರಾತನವೂ ವಿಶಾಲವೂ ಆದ ಈ ನಮ್ಮ ದೇಶದಲ್ಲಂತೂ ಅತಿ ಸುಲಭ. ಅತಿ ಕಷ್ಟತಮವಾದ ಘಟನೆಗಳನ್ನು ಸುಲಭವಾಗಿ ವಿಂಗಡಮಾಡುವುದರಲ್ಲೂ ಒಂದು ಕೆಡುಕು ಇದೆ. ಭಾವನೆ ಮತ್ತು ಕ್ರಿಯಾಶಕ್ತಿಗಳ ಬೆಳವಣಿಗೆಯಲ್ಲಿ ವಿಶೇಷ ವ್ಯತ್ಯಾಸ ಕಾಣುವುದು ಬಹಳ ಅಪರೂಪ. ಭಾವನೆಗಳು ಒಂದರ ಹಿಂದೆ ಒಂದು ಓಡುತ್ತಿರುತ್ತವೆ. ಭಾವನೆಗಳಲ್ಲಿ ಸಹ ಬಾಹ್ಯಸ್ವರೂಪ ಇದ್ದಂತೆಯೇ ಉಳಿದರೂ ಒಳಗಿನ ತಿರುಳು ಪೂರ್ಣ ವ್ಯತ್ಯಾಸ ಹೊಂದಿರುತ್ತದೆ. ಅಥವ ಅನೇಕವೇಳೆ ಪ್ರಪಂಚದ ಪರಿಸ್ಥಿತಿ ವ್ಯತ್ಯಾಸದ ವೇಗದೊಡನೆ ಓಡಲಾರದೆ ಹಿಂದುಳಿದು ಪ್ರಪಂಚಕ್ಕೇ ಹೊರೆಯಾಗುತ್ತವೆ.

ಯುಗ ಯುಗಾಂತರಗಳಿಂದ ನಾವು ವ್ಯತ್ಯಾಸ ಹೊಂದುತ್ತಲೇ ಬಂದಿದ್ದೇವೆ. ಯಾವ ಕಾಲದಲ್ಲು ನಾವು ಹಿಂದೆ ಇದ್ದಂತೆಯೇ ಇರಲಿಲ್ಲ. ಇಂದಿಗು ಸಹ ಜನಾಂಗ ದೃಷ್ಟಿಯಿಂದ ಮೊದಲಿಗಿಂತ ಬಹಳ ವ್ಯತ್ಯಾಸ್ತ ಹೊಂದಿದ್ದೇವೆ. ನನ್ನ ಸುತ್ತ ಮುತ್ತಲೂ ಇತರ ಕಡೆಗಳಂತೆ ಇಂಡಿಯದಲ್ಲಿ ಸಹ ಈ ವ್ಯತ್ಯಸ್ತ ಜೀವನ ವಾಮನ ಪಾದಗಳಿಂದ ಮುಂದೋಡುತ್ತಿದೆ. ಆದರೂ ಚೀನ ಮತ್ತು ಭಾರತದ ಸಂಸ್ಕೃತಿಗಳಲ್ಲಿ ಯಾವುದೋ ಒಂದು ವಿಶಿಷ್ಟ ಶಾಶ್ವತಶಕ್ತಿ, ಒಂದು ಹೊಂದಾಣಿಕೆಯ ಶಕ್ತಿ ಇದೆ ಎಂಬುದನ್ನೂ ಮತ್ತು ಆ ಶಕ್ತಿಯು ಏನೇ ವ್ಯತ್ಯಾಸ, ವಿಪ್ಲವಗಳು ಬರಲಿ ಅನೇಕ ವರ್ಷಗಳ ಕಾಲ ಆ ಮೂಲ ವ್ಯಕ್ತಿತ್ವವನ್ನು ಕಾಪಾಡಲು ಸಮರ್ಥವಾಗಿದೆ ಎಂಬ ಭಾವನೆಯನ್ನು ನನ್ನ ಮನಸ್ಸಿನಿಂದ ಅಳಿಸಲು ಸಾಧ್ಯವಾಗಿಲ್ಲ. ಜೀವನಕ್ಕೂ ಪ್ರಕೃತಿಗೂ ಹೊಂದಿಕೊಂಡು ಸಮರಸತೆಯಿಂದ ಕೆಲಸ ಮಾಡಿರದೆ ಆರೀತಿ ಪರಿಣಾಮ ಮಾಡಲು ಸಾಧ್ಯವಾಗುತ್ತಿರಲಿಲ್ಲ. ಒಳ್ಳೆಯದಕ್ಕೊ, ಕೆಟ್ಟದಕ್ಕೊ, ಅಥವ ಎರಡಕ್ಕೂ ಬಹುಮಟ್ಟಿಗೆ ತಮ್ಮ ಪ್ರಾಚೀನ ಸಂಪ್ರದಾಯಗಳಿಗೆ ಕಟ್ಟು ಹಾಕಿದ ಈ ಶಕ್ತಿ ಬಹು ಬಲಯುತವಾದದ್ದಿರಬೇಕು; ಇಲ್ಲವಾದರೆ ಅಷ್ಟು ಕಾಲ ಬದುಕಿರಲು ಸಾಧ್ಯವಾಗುತ್ತಿರಲಿಲ್ಲ.

ಪ್ರಾಯಶಃ ಅದರ ಉಪಯುಕ್ತತೆ ಅನೇಕ ವರ್ಷಗಳ ಹಿಂದೆಯೇ ಕ್ಷೀಣಿಸಿರಬೇಕು ಮತ್ತು ಅಂದಿನಿಂದಲೂ ಒಂದು ಹೊರೆಯಾಗಿ, ಆತಂಕವಾಗಿರಬೇಕು. ಅಥವ ಈಚಿನ ಶತಮಾನಗಳ ಕಿಟ್ಟವು ಪದರುಗಟ್ಟಿ, ಸತ್ವವನ್ನೆಲ್ಲ ಹೀರಿ ಬರೀ ಕರಟವನ್ನು ಮಾತ್ರ ಬಿಟ್ಟಿರಬೇಕು.

ಪ್ರಾಯಶಃ ಪ್ರಗತಿಯ ಭಾವನೆಗೂ ಭದ್ರತೆ ಮತ್ತು ಸುರಕ್ಷತೆಯ ಭಾವನೆಗೂ ಸದಾ ಘರ್ಷಣೆ ನಡೆಯುತ್ತಲೇ ಇರುತ್ತದೆ. ಎರಡಕ್ಕೂ ಎಂದೂ ಸರಿ ಹೋಗುವುದಿಲ್ಲ. ಒಂದಕ್ಕೆ ಬದಲಾವಣೆಯಾಗುವುದು ಬೇಕು; ಇನ್ನೊಂದಕ್ಕೆ ಬದಲಾವಣೆ ಇಲ್ಲದೆ, ಇದ್ದಂತೆ ಇರುವ ಸುರಕ್ಷಿತ ಸ್ಥಳಬೇಕು. ಪ್ರಗತಿ ಭಾವನೆ ಬಹಳ ಇತ್ತೀಚಿನದು. ಪಾಶ್ಚಿಮಾತ್ಯರಿಗೆ ಸಹ ತೀರ ಹೊಸದು. ಪ್ರಾಚೀನ ಮತ್ತು ಮಧ್ಯಯುಗದ ಸಂಸ್ಕೃತಿಗಳು ತಮ್ಮ ಹಿಂದಿನದನ್ನೇ ಸ್ವರ್ಣಯುಗವೆಂದು ಭಾವಿಸಿ ಅಲ್ಲಿಂದ ಅವನತಿಯಾಗುತ್ತ ಬಂದಿದೆ ಎಂದು ಭಾವಿಸಿದ್ದರು. ಭಾರತದಲ್ಲಿ ಸಹ ಪ್ರಾಚೀನ ಕಾಲಕ್ಕೇ ಪುರಸ್ಕಾರ. ಇಲ್ಲಿ ಬೆಳೆದ ಸಂಸ್ಕೃತಿಗೂ ತಳಹದಿ ಸುರಕ್ಷತೆ ಮತ್ತು ಭದ್ರತೆ. ಈ ದೃಷ್ಟಿಯಿಂದ ಪಾಶ್ಚಿಮಾತ್ಯರಲ್ಲಿ ಉದಯಿಸಿದ ಎಲ್ಲ ಸಂಸ್ಕೃತಿಗಳಿಗಿಂತ ಭಾರತ ಸಂಸ್ಕೃತಿ ತುಂಬ ಯಶಸ್ವಿಯಾಗಿತ್ತು. ಜಾತಿ ಪದ್ಧತಿ ಮತ್ತು ಅವಿಭಕ್ತ ಕುಟುಂಬದ ಆಧಾರದ ಮೇಲೆ ಕಟ್ಟಿದ ಸಮಾಜ ರಚನೆ ಅದಕ್ಕೆ ಸಹಾಯಕವಾಯಿತು; ಮತ್ತು ಆ ಪಂಗಡಕ್ಕೊಂದು ಸಮಾಜಭದ್ರತೆಯನ್ನು ಕೊಟ್ಟಿತಲ್ಲದೆ ವಯಸ್ಸು, ಅಂಗವಿಕಲತೆ ಅಥವ ಬೇರಾವ ಕಾರಣದಿಂದಲಾದರೂ ತನ್ನ ರಕ್ಷಣೆಗೆ ವ್ಯವಸ್ಥೆ ಮಾಡಿಕೊಳ್ಳಲಾರದ ವ್ಯಕ್ತಿಗೆ ಒಂದು ವಿಧವಾದ ಭದ್ರತೆಯನ್ನು ಒದಗಿಸಿತು. ಈ ವ್ಯವಸ್ಥೆಯಿಂದ ದುರ್ಬಲರಿಗೆ ಸಹಾಯವಾದರೂ ಸ್ವಲ್ಪ ಮಟ್ಟಿಗೆ ಸಬಲರಿಗೆ ಅಡ್ಡಿಯಾಗುತ್ತದೆ. ಅಸಾಧಾರಣ, ಅಥವ ಪ್ರತಿಭಾಶಾಲಿಯ ವೆಚ್ಚದಲ್ಲಿ ಸಾಮಾನ್ಯರಿಗೆ ಪ್ರೋತ್ಸಾಹಿಸಿದಂತಾಗುತ್ತದೆ. ಎಲ್ಲವನ್ನೂ ಮೇಲ್ಮಟ್ಟಕ್ಕೋ ಕೆಳಮಟ್ಟಕ್ಕೋ ಅಂತೂ ಸಮಮಾಡುತ್ತದೆ; ವ್ಯಕ್ತಿತ್ವಕ್ಕೆ ಅವಕಾಶ ಕಡಮೆ. ಭಾರತೀಯ ತತ್ವಶಾಸ್ತ್ರ ಅತ್ಯಂತ ವ್ಯಕ್ತಿವೈಲಕ್ಷಣ್ಯಯುತವಾಗಿದ್ದು, ಒಂದು ವಿಧವಾದ ವೈಯಕ್ತಿಕ ಆತ್ಮವಿಕಾಸಕ್ಕೆ ಸಂಪೂರ್ಣ ಅವಕಾಶ ಕೊಟ್ಟರೂ ಭಾರತೀಯ ಸಮಾಜ ರಚನೆ ಮಾತ್ರ ಜಾತಿವಾರು ಇದ್ದು ಆ ಜಾತಿ ಪಂಗಡಗಳಿಗೇ ಪ್ರಾಮುಖ್ಯತೆ ಕೊಟ್ಟಿತ್ತು. ತನಗೆ ತೋರಿದಂತೆ ಚಿಂತಿಸಿ ನಂಬಲು ವ್ಯಕ್ತಿಗೆ ಸಂಪೂರ್ಣ ಸ್ವಾತಂತ್ರ ವಿತ್ತು; ಆದರೆ ಸಾಮಾಜಿಕ ಮತ್ತು ಮತ ಸಂಪ್ರದಾಯಗಳನ್ನು ಮಾತ್ರ ಚಾಚೂತಪ್ಪದೆ ನಡೆಸಬೇಕು.

ಈ ಎಲ್ಲ ನಿಯಮಾನುಚರಣೆಯಿದ್ದರೂ ಆ ಒಂದು ಪಂಗಡದ ಒಳಗೆ ಬಹುಮಟ್ಟಿನ ಸ್ವಾತಂತ್ರ್ಯವಿತ್ತು. ಸಂಪ್ರದಾಯದಿಂದ ವ್ಯತ್ಯಾಸವಾಗದೆ ಯಾವ ಶಾಸನ, ಸಾಮಾಜಿಕ ಕಟ್ಟಳೆಯು ಇರಲಿಲ್ಲ. ಹೊಸ ಪಂಗಡಗಳು ತಮ್ಮದೇ ಪದ್ಧತಿಗಳು, ನಂಬಿಕೆಗಳು, ಅನುಷ್ಠಾನಗಳನ್ನು ಇಟ್ಟುಕೊಂಡಿದ್ದರು. ಎಲ್ಲರೂ ಒಂದು ದೊಡ್ಡ ಆವರಣದಲ್ಲಿರಲು ಅವಕಾಶವಿತ್ತು. ಈ ಒಂದು ಮೃದುಸ್ವಭಾವ, ಹೊಂದಿಕೊಳ್ಳುವ ಗುಣ ಇದ್ದುದರಿಂದಲೇ ಪರದೇಶದ ಜನರು ಸಮಾಜದಲ್ಲಿ ಅಡಕವಾಗಲು ಸಹಾಯವಾಯಿತು. ಇದೆಲ್ಲದರ ಹಿಂದೆ ಕೆಲವು ಮೂಲ ನೀತಿಧರ್ಮಗಳು, ಜೀವನದಲ್ಲಿ ಒಂದು ತಾತ್ವಿಕಭಾವನೆ, ಮತ್ತು ಇತರರ ನಡೆನುಡಿಗಳಲ್ಲಿ ಸಹನೆ ಇದ್ದವು.

ಎಂದಿನವರೆಗೆ ಭದ್ರತೆ ಮತ್ತು ರಕ್ಷಣೆಯೇ ಮುಖ್ಯ ಗುರಿಯಾಗಿತ್ತೊ ಅಲ್ಲಿಯವರೆಗೆ ಈ ಒಂದು ರಚನೆಯು ಯಶಸ್ವಿಯಾಗಿ ಕೆಲಸ ಮಾಡಿತು; ಆರ್ಥಿಕ ವಿಪ್ಲವಗಳು ಒದಗಿದಾಗ ಸಹ ಕಾಲಕ್ಕನುಗುಣವಾಗಿ ಹೊಂದಿಕೊಂಡು ನಡೆದುಬಂದಿತು. ಹಳೆಯ ಜಡಭಾವನೆಗಳಿಗೆ ಪ್ರತಿಯಾಗಿ ಸಾಮಾಜಿಕ ಪುರೋಭಿವೃದ್ಧಿಯ ಹೊಸ ಪ್ರಗತಿ ಭಾವನೆಗಳು ಹುಟ್ಟಿದಾಗ ಈ ರಚನೆಗೆ ನಿಜವಾದ ಪೆಟ್ಟುಬಿದ್ದಿತು. ಪಾಶ್ಚಾತ್ಯ ದೇಶಗಳಂತೆ ಪೌರ್ವಾತ್ಯದಲ್ಲಿ ಸಹ ಈ ಪ್ರಗತಿ ಭಾವನೆಯು ರೂಢಮೂಲವಾದ ಪುರಾತನ ಪದ್ಧತಿಗಳನ್ನು ಬುಡ ಮೇಲುಮಾಡುತ್ತಿದೆ. ಪಾಶ್ಚಾತ್ಯರಲ್ಲಿ ಮುಖ್ಯಧ್ಯೇಯವು ಪ್ರಗತಿಯಾಗಿದ್ದರೂ ರಕ್ಷಣೆಯ ಅವಶ್ಯಕತೆಯ ಕೂಗು ಕೇಳಹತ್ತಿದೆ. ಭಾರತದಲ್ಲಿ ರಕ್ಷಣೆಯ ಅಭಾವದಿಂದಲೇ ಜನರು ತಮ್ಮ ಹಳೆಯ ಜಾಡನ್ನು ಬಿಟ್ಟು ಹೊರಹೊರಟಿದ್ದಾರೆ; ಮತ್ತು ತಮಗೆ ನಿಜವಾದ ರಕ್ಷಣೆ ದೊರೆಯಬೇಕಾದರೆ ಪ್ರಗತಿಯೊಂದೇ ಪರಮಸಾಧನ ಎಂದು ನಂಬಿದ್ದಾರೆ.

ಪ್ರಾಚೀನ ಮತ್ತು ಮಧ್ಯಯುಗದ ಭಾರತದಲ್ಲಿ ಸಮಾಜರಚನೆಗೆ ಪ್ರಗತಿಯ ಪ್ರತಿಭಟನೆ ಯಾವುದೂ ಇರಲಿಲ್ಲ. ಆದರೂ ಮಾರ್ಪಾಟು ಮತ್ತು ಹೊಂದಾಣಿಕೆಯ ಅವಶ್ಯಕತೆಯು ಅಗತ್ಯವೆಂದು ಜನತೆಯು ಸದಾ ತಿಳಿದಿತ್ತು; ಆದ್ದರಿಂದ ಸಂಘಟನೆಯು ಉತ್ಸಾಹವೂ ಬೆಳೆದಿತ್ತು. ಈ ಸಂಘಟನೆ ಭಾರತದ ಹೊರಗಿನಿಂದ ಬಂದ ವಿವಿಧ ಜನರ ಸಂಘಟನೆ ಮಾತ್ರವಲ್ಲ; ವ್ಯಕ್ತಿಯ ಬಾಹ್ಯಜೀವನದ ಮತ್ತು ಆಂತರಿಕ ಜೀವನದ ಸಮೀಕರಣ, ಪ್ರಕೃತಿ ಮತ್ತು ಮನುಷ್ಯನ ಏಕೀಭಾವವಾಗತ್ತು. ಈಗ ಇರುವಂತೆ ಆಗ ಸಮಾಜದಲ್ಲಿ ಆಳವಾದ ಅಂತರವೂ ಇರಲಿಲ್ಲ, ಭೇದವೂ ಇರಲಿಲ್ಲ. ಈ ಒಂದು ಸಾಮಾನ್ಯ ಸಂಸ್ಕೃತಿಯ ಹಿನ್ನೆಲೆಯು ಭಾರತಕ್ಕೊಂದು ರೂಪುಕೊಟ್ಟಿತು ಮತ್ತು ಎಷ್ಟೇ ಅನೈಕ್ಯತೆಗಳಿದ್ದರೂ ಒಂದು ಐಕ್ಯತೆಯನ್ನು ಕೊಟ್ಟಿತು. ರಾಜ್ಯರಚನೆಯ ತಳಹದಿಯಾಗಿ ಸ್ಥಳೀಯ ಸ್ವರಾಜ್ಯವುಳ್ಳ ಗ್ರಾಮಪಂಚಾಯಿತಿಗಳಿದ್ದವು. ರಾಜರುಗಳು ಎಷ್ಟೋ ಜನ ಆಗಿಹೋದರೂ ಮೂಲ ಗ್ರಾಮಜೀವನವು ನಾಶವಾಗಲಿಲ್ಲ. ರಾಜ್ಯಶಕ್ತಿಯು ನೋಡಲು ಎಷ್ಟೇ ಕ್ರೂರವೆಂದು ತೋರಿದರೂ, ಅದನ್ನು ಹದ್ದಿನಲ್ಲಿಡಲು ಅನೇಕ ಸಾಂಪ್ರದಾಯಿಕ ಮತ್ತು ವಿಧಿಬದ್ಧ ಮಾರ್ಗಗಳಿದ್ದವು. ಯಾವ ರಾಜನೇ ಆಗಲಿ ಗ್ರಾಮಸ್ಥರ ಹಕ್ಕು ಬಾಧ್ಯತೆಗಳಲ್ಲಿ ಪ್ರವೇಶಿಸಲು ಅವಕಾಶವಿರಲಿಲ್ಲ. ಈ ಸಾಂಪ್ರದಾಯಿಕ ಹಕ್ಕುಬಾಧ್ಯತೆಗಳಿಂದ ಜನತೆಗೂ ವ್ಯಕ್ತಿಗೂ ಸ್ವಲ್ಪ ಸ್ವಾತಂತ್ರ್ಯವಿತ್ತು.

ಇಂದಿನ ಭಾರತೀಯರಲ್ಲಿ ನಿಜವಾದ ಭಾರತೀಯರೆಂದು, ತಮ್ಮ ಸಂಸ್ಕೃತಿ ಮತ್ತು ಸಂಪ್ರದಾಯಗಳಲ್ಲಿ ಹೆಮ್ಮೆಪಡುವವರಲ್ಲಿ ರಜಪೂತರು ಅಗ್ರಗಣ್ಯರು. ಗತಕಾಲದ ಅವರ ಶೌರ್ಯ ಸಾಹಸ ಕಾರ್ಯಗಳು ಆ ಪರಂಪರೆಯ ಒಂದು ಜೀವಂತ ಅಂಗವಾಗಿದೆ. ಆದರೂ ರಜಪೂತರಲ್ಲಿ ಅನೇಕರು ಇಂಡೊ ಸಿಥಿಯನರ ವಂಶಜರು, ಇನ್ನು ಕೆಲವರು ಹೂಣ ವಂಶಜರು. ಇವರೆಲ್ಲ ಭಾರತಕ್ಕೆ ಹೊರಗಿನಿಂದ ಬಂದವರು. ಜಾಠರಿಗಿಂತ ಭೂಮಿತಾಯಿಯ ನಚ್ಚಿನ ಮಕ್ಕಳಿಲ್ಲ; ಆದರೆ ಒಂದು ಅಂಗುಲ ಭೂಮಿಗಾಗಿ ತಮ್ಮ ಪ್ರಾಣವನ್ನೇ ಕೊಡಲು ಸಿದ್ಧರಿರುವ ಈ ಜಾಠರು ಭಾರತೀಯ ರೈತರಲ್ಲ; ಆಜಾನುಬಾಹುಗಳು ಮತ್ತು ದೃಢಕಾಯರೂ ಆದ ಅವರೂ ಸಿಥಿಯನರಿಂದ ಬಂದವರು. ಕಾಥೇವಾಡದ ಎತ್ತರದ ನಿಲುವಿನ ಅಂದವಾದ ಮೈಕಟ್ಟಿನ 'ಕಥಿ'ಗಳೂ ಹಾಗೆಯೇ. ನಮ್ಮ ಜನರ ವಂಶಮೂಲವನ್ನು ಕೆಲವು ಕಡೆ ಸ್ವಲ್ಪ ನಿಕರವಾಗಿ ಹೇಳಬಹುದು; ಇನ್ನು ಕೆಲವು ಸಂದರ್ಭಗಳಲ್ಲಿ ಸಾಧ್ಯವೇ ಇಲ್ಲ. ಆದರೆ ಅವರ ವಂಶಮೂಲ ಏನೇ ಇರಲಿ ಅವರೆಲ್ಲ ಭಾರತೀಯರಾಗಿದ್ದಾರೆ. ಭಾರತೀಯರ ಪುರಾತನ ಸಂಪ್ರದಾಯಗಳು ತಮ್ಮವೆಂದೇ ಭಾವಿಸಿ, ಭಾರತೀಯ ಸಂಸ್ಕೃತಿಯಲ್ಲಿ ತಾವೂ ಇತರರೊಡನೆ ಭಾಗಿಗಳಾಗಿ ನಡೆದು ಬಂದಿದ್ದಾರೆ.

ಹೊರಗಿನಿಂದ ಬಂದು ಭಾರತದ ಜನಕೋಟಿಯಲ್ಲಿ ಐಕ್ಯರಾದ ಜನರೆಲ್ಲ ಭಾರತ ಸಂಸ್ಕೃತಿಯಿಂದ ವಿಶೇಷ ಪ್ರಯೋಜನ ಪಡೆದಿದ್ದರೂ, ಭಾರತ ಸಂಸ್ಕೃತಿಗೆ ತಮ್ಮದೂ ಕಾಣಿಕೆ ಸಲ್ಲಿಸಿದ್ದಾರೆ; ಆ ಸಂಸ್ಕೃತಿಯ ಶಕ್ತಿಯಿಂದ ಭಾರತದ ಸಂಸ್ಕೃತಿ ಪುಷ್ಟಿಗೂಡಿಕೊಂಡಿದೆ. ಆದರೆ ಪ್ರತ್ಯೇಕವಾಗಿಯೇ ಇದ್ದು, ಭಾರತದ ಜೀವನದಲ್ಲಿ ಮತ್ತು ಅದರ ವಿವಿಧ ಸಂಪದಭಿವೃದ್ಧಿ ಸಂಸ್ಕೃತಿಯಲ್ಲಿ ಭಾಗಿಯಾಗದೆ ಉಳಿದ ಜನಾಂಗವು ಭಾರತ ಜನತೆಯ ಮೇಲೆ ಯಾವ ಶಾಶ್ವತ ಪರಿಣಾಮವನ್ನೂ ಮಾಡಲಿಲ್ಲ. ತಾನೂ ನಾಶವಾಯಿತು; ಜೊತೆಗೆ ಭಾರತದ ಪ್ರಗತಿಗೂ ಹಾನಿಮಾಡಿತು.

## ೬. ಭಾರತ ಮತ್ತು ಇರಾಣ

ಭಾರತದ ಜನ ಜೀವನ ಮತ್ತು ಸಂಸ್ಕೃತಿಯೊಂದಿಗೆ ಬಾಂಧವ್ಯ ಬೆಳೆಸಿ ಅವುಗಳ ಮೇಲೆ ಪ್ರಭಾವ ಬೀರಿದ ಅನೇಕ ಜನರು ಮತ್ತು ಜನಾಂಗಗಳಲ್ಲಿ ಅತಿ ಪ್ರಾಚೀನವೂ ಮತ್ತು ಪ್ರಬಲವೂ ಆದ ಜನಾಂಗವೆಂದರೆ ಇರಾಣಿಗಳು. ಈ ಸಂಬಂಧವು ಸಿಂಧೂ ಆರ್ಯರ ನಾಗರಿಕತೆಗಿಂತ ಹಿಂದಿನದು. ಏಕೆಂದರೆ ಸಿಂಧೂ ಆರ್ಯರೂ ಮತ್ತು ಪುರಾತನ ಇರಾಣಿಗಳೂ ಒಂದೇ ಬುಡಕಟ್ಟಿನವರು; ಬೇರೆ ಬೇರೆ ದೇಶಗಳಿಗೆ ಹೋಗಿ ಬೇರೆ ಬೇರೆ ದಾರಿಹಿಡಿದರು. ಜನಾಂಗ ಸಂಬಂಧವಲ್ಲದೆ ಅವರ ಧರ್ಮ ಮತ್ತು ಭಾಷೆಗಳಿಗೂ ಒಂದೇ ಹಿನ್ನೆಲೆ ಇತ್ತು. ವೇದ ಧರ್ಮಕ್ಕೂ, ಜೊರಾಷ್ಟ್ರ ಧರ್ಮಕ್ಕೂ

ಅನೇಕ ವಿಷಯಗಳು ಸಾಮಾನ್ಯವಾಗಿವೆ. ವೇದ ಭಾಷೆಯಾದ ಸಂಸ್ಕೃತಕ್ಕೂ 'ಅವೆಸ್ಟ'ದ ಭಾಷೆಯಾದ ಪುರಾತನ ಪಹ್ಲವಿ ಭಾಷೆಗೂ ಬಹಳ ಹೋಲಿಕೆ ಇದೆ. ಮಹಾಕಾವ್ಯಗಳ ಸಂಸ್ಕೃತ ಮತ್ತು ಪಹ್ಲವಿ ಬೇರೆ ಬೇರೆಯಾಗಿ ಬೆಳೆದವು, ಆದರೆ ಇತರ ಆರ್ಯ ಭಾಷೆಗಿರುವಂತೆ ಅವುಗಳ ಮೂಲ ಶಬ್ದಗಳು ಎರಡು ಭಾಷೆಗಳಿಗೂ ಒಂದೇ. ಎರಡು ಭಾಷೆಗಳೂ ಮತ್ತು ಎಲ್ಲಕ್ಕೂ ಹೆಚ್ಚಾಗಿ ಅವುಗಳ ಕಲೆ ಮತ್ತು ಸಂಸ್ಕೃತಿಗಳು ತಮ್ಮ ತಮ್ಮ ಸನ್ನಿವೇಶಗಳಿಗನುಗುಣವಾಗಿ ವ್ಯತ್ಯಾಸ ಗೊಂಡವು. ಪರ್ಷಿಯಾ ದೇಶದ ಕಲೆ ಪರ್ಷಿಯಾ ದೇಶದ ಭೂಗುಣ ಮತ್ತು ಪ್ರಕೃತಿ ಸೌಂದರ್ಯಕ್ಕೆ ನಿಕಟವಾಗಿ ಅಂಟಿಕೊಂಡಿದೆ. ಪ್ರಾಯಶಃ ಇರಾಣಿ ಕಲಾ ಸಂಪ್ರದಾಯದ ಅವಿಚ್ಛಿನ್ನತೆಗೆ ಕಾರಣ ಇದೇ ಇರಬಹುದು. ಅದೇ ರೀತಿಯಾಗಿ ಸಿಂಧೂ ಆರ್ಯರ ಕಲಾ ಸಂಪ್ರದಾಯ ಹಿಮ ಆಚ್ಛಾದಿತ ಪರ್ವತಶ್ರೇಣಿಗಳ, ನಿಬಿಡವಾದ ಕಾನನ ಪುಂಜಗಳ, ಉತ್ತರ ಹಿಂದೂಸ್ಥಾನದ ಮಹಾನದಿಗಳ ಸುತ್ತ ಬೆಳೆದು ಬಂದಿದೆ.

ಭಾರತದಂತೆ ಇರಾಣ ಸಂಸ್ಕೃತಿಯು ಸಹ ದಂಡೆತ್ತಿ ಬಂದ ಪರಕೀಯರನ್ನು ತನ್ನ ಪ್ರಭಾವಕ್ಕೆ ಅಧೀನ ಮಾಡಿಕೊಂಡಿತು. ತನ್ನೊಳಗೇ ಐಕ್ಯಮಾಡಿಕೊಳ್ಳುವಷ್ಟು ಪ್ರಬಲವಾಗಿತ್ತುಅದರ ಸಾಂಸ್ಕೃತಿಕ ತಳಹದಿಯ ಶಕ್ತಿ. ಏಳನೆಯ ಶತಮಾನದಲ್ಲಿ ಇರಾಣರನ್ನು ಗೆದ್ದ ಅರಬ್ಬಿ ಜನರು ಅತ್ಯಲ್ಪ ಕಾಲ ದಲ್ಲೆ ಇರಾಣಿ ಸಂಸ್ಕೃತಿಗೆ ಮಾರು ಹೋದರು. ತಮ್ಮ ಮರುಭೂಮಿಯ ಸರಳ ಜೀವನವನ್ನು ಬಿಟ್ಟು ಇರಾಣಿ ಸಂಸ್ಕೃತಿಯ ಕೃತಕ ಜೀವನವನ್ನು ಆರಂಭಿಸಿದರು. ಯೂರೋಪಿನಲ್ಲಿ ಫ್ರೆಂಚ್ ಭಾಷೆ ಯಂತೆ ವಿಶಾಲ ಏಷ್ಯದ ಬಹುಭಾಗದಲ್ಲಿ ಪಾರ್ಸಿ ಭಾಷೆ ಸುಸಂಸ್ಕೃತ ಜನರ ಭಾಷೆಯಾಯಿತು. ಇರಾಣಿ ಕಲೆ ಮತ್ತು ಸಂಸ್ಕೃತಿ ಪಶ್ಚಿಮದಲ್ಲಿ ಕಾನ್‌ಸ್ಟೆಂಟಿನೋಪಲ್‌ನಿಂದ ಗೋಬಿ ಮರುಭೂಮಿಯ ಸೆರಗಿನವರೆಗೆ ಹಬ್ಬಿತ್ತು.

ಭಾರತದಲ್ಲಿ ಈ ಇರಾಣಿ ಪ್ರಭಾವ ನಿರರ್ಗಳವಾಗಿತ್ತು. ಅಫ್ಘನರ ಮತ್ತು ಮೊಗಲರ ಕಾಲಗಳಲ್ಲಿ ಭಾರತದಲ್ಲಿ ಪರ್ಷಿಯ್ನ ರಾಜಭಾಷೆಯಾಗಿತ್ತು. ಬ್ರಿಟಿಷರ ಕಾಲದ ಆರಂಭದವರೆಗೂ ಇದೇ ಪರಿಸ್ಥಿತಿ ಇತ್ತು. ಇಂದಿನ ಭಾರತೀಯ ಭಾಷೆಗಳಲ್ಲೆಲ್ಲ ಅನೇಕ ಪಾರಸಿ ಶಬ್ದಗಳು ತುಂಬಿವೆ. ಈ ಭಾಷೆಗಳೆಲ್ಲ ಸಂಸ್ಕೃತ ಜನ್ಯವಾದುದರಿಂದ ಇದು ಸ್ವಾಭಾವಿಕ, ಅದರಲ್ಲೂ ಮುಖ್ಯವಾಗಿ ಹಿಂದೂಸ್ತಾನಿಯಂತೂ ಮಿಶ್ರಭಾಷೆ; ದಕ್ಷಿಣ ಭಾರತದ ದ್ರಾವಿಡಭಾಷೆಗಳು ಸಹ ಪಾರಸಿ ಭಾಷೆಯ ಪ್ರಭಾವದಿಂದ ಪಾರಾಗ ಲಿಲ್ಲ. ಭಾರತದಲ್ಲಿ ಹಲವು ಪ್ರಖ್ಯಾತ ಪಾರಸಿ ಕವಿಗಳೂ ಇದ್ದರು. ಇಂದಿಗೂ ಹಿಂದೂ ಮುಸ್ಲಿಮರಲ್ಲಿ ಪಾರ್ಸಿ ಭಾಷೆಯಲ್ಲಿ ಪ್ರಸಿದ್ಧರಾದ ಪಂಡಿತರಿದ್ದಾರೆ.

ಸಿಂಧೂ ಕಣಿವೆಯ ನಾಗರಿಕತೆಗೂ ಮತ್ತು ಆಗಿನ ಕಾಲದಲ್ಲಿ ಇರಾಣ ಮತ್ತು ಮೆಸೊಪೊಟೋ ಮಿಯದಲ್ಲಿದ್ದ ನಾಗರಿಕರಿಗೂ ಯಾವುದೋ ಸಂಬಂಧವಿದ್ದಿರಬೇಕೆಂಬುದರಲ್ಲಿ ಯಾವ ಅನುಮಾನವೂ ಇಲ್ಲ. ಕೆಲವು ರೇಖಾಚಿತ್ರಗಳಲ್ಲಿ ಮತ್ತು ಮುದ್ರೆಗಳಲ್ಲಿ ಕಂಡುಬರುವ ಸಾಮ್ಯವು ಅತಿ ವಿಸ್ಮಯಕಾರಕ ವಿವೆ. ಅಕೀಮಿರ್ಯ ಕಾಲಕ್ಕೆ ಪೂರ್ವದಲ್ಲಿ ಇರಾಣ ಮತ್ತು ಇಂಡಿಯ ದೇಶಗಳಿಗೆ ವ್ಯವಹಾರ ಸಂಬಂಧವಿತ್ತೆಂಬುದಕ್ಕೆ ಸಾಕ್ಷ್ಯವೂ ದೊರೆತಿದೆ. ಅವೆಸ್ಟದಲ್ಲಿ ಇಂಡಿಯದ ಉಲ್ಲೇಖವಿದೆ ಮತ್ತು ಉತ್ತರ ಭಾರತದ ಒಂದು ವರ್ಣನೆಯೂ ಇದೆ. ಋಗ್ವೇದದಲ್ಲಿ ಪರ್ಷಿಯಕ್ಕೆ ಸಂಬಂಧಿಸಿದ ಉಲೇಖ ಗಳಿವೆ. ಪಾರ್ಸಿ ಜನರಿಗೆ 'ಪಾರ್ಶವರು' ಎಂದೂ ಅನಂತರ 'ಪಾರಸಿಕರು' ಎಂದೂ ಕರೆದಿದ್ದಾರೆ. ಪಾರಸಿ ಎಂಬುದು 'ಪಾರಸಿಕ' ಎಂಬುದರಿಂದ ಹುಟ್ಟಿದ್ದು. ಪಾರ್ಥಿಯನರನ್ನು 'ಪಾರ್ಥವ' ರೆಂದು ಕರೆದಿದ್ದಾರೆ. ಈ ರೀತಿ ಭಾರತ ಮತ್ತು ಇರಾಣ ದೇಶಗಳೆರಡು ಅಕೀಮಿರ್ಯ ಸಂತತಿಯ ಕುಲಕ್ಕೂ ಮೊದಲಿನಿಂದ ಅತಿ ಪ್ರಾಚೀನ ಕಾಲದಿಂದ ಪರಸ್ಪರ ಸಾಂಸ್ಕೃತಿಕ ಮೈತ್ರಿಯನ್ನು ಬೆಳೆಸಿ ಕೊಂಡು ಬಂದಿವೆ. ರಾಜಾಧಿರಾಜನಾದ ಸೈರಸ್ ಮಹಾರಾಜನ ಕಾಲದಲ್ಲಿ ಇನ್ನೂ ಹೆಚ್ಚಿನ ಬಾಂಧ ವ್ಯದ ಸಾಕ್ಷ್ಯದೊರೆಯುತ್ತದೆ. ಸೈರಸ್ ಪ್ರಾಯಶಃ ಕಾಬೂಲ್ ಮತ್ತು ಬೆಲೂಚಿಸ್ಥಾನದವರೆಗೆ ಭಾರತದ ಗಡಿಯವರೆಗೆ ಬಂದಿದ್ದನು. ಕ್ರಿಸ್ತಪೂರ್ವ ಆರನೆಯ ಶತಮಾನದಲ್ಲಿ ಡೇರಿಯಸ್ ಕಾಲದಲ್ಲಿ

ಪಾರಸಿ ಚಕ್ರಾಧಿಪತ್ಯ ಸಿಂಧೂದೇಶ ಮತ್ತು ಪಶ್ಚಿಮ ಪಂಜಾಬ್ ಪ್ರಾಂತ್ಯವನ್ನೊಳಗೊಂಡು ವಾಯುವ್ಯ ಭಾರತದವರೆಗೆ ಹಬ್ಬಿತ್ತು. ಭಾರತೀಯ ಇತಿಹಾಸದಲ್ಲಿ ಈ ಕಾಲಕ್ಕೆ ಜೊರಾಷ್ಟ್ರರಕಾಲ ಎಂದು ಹೆಸರಿದೆ. ಪ್ರಾಯಶಃ ಆದರ ಪ್ರಭಾವವೂ ವಿಶಾಲವಾಗಿದ್ದಿರಬೇಕು. ಸೂರ್ಯಾರಾಧನೆಗೆ ಪ್ರೋತ್ಸಾಹವಿತ್ತು.

ಡೇರಿಯಸ್‌ನ ಭಾರತದ ಪ್ರಾಂತ್ಯ ಅವನ ಚಕ್ರಾಧಿಪತ್ಯದಲ್ಲೆಲ್ಲ ಬಹುಫಲವತ್ತಾದುದೂ, ಜನನಿಬಿಡವಾದುದೂ ಆಗಿತ್ತು. ಈಗಿನಕಾಲದ ನಿರ್ಜಲ ಮರಳ್ಗಾಡಾಗಿರುವ ಸಿಂಧೂದೇಶವು ಆಗ ಬಹಳ ಫಲವತ್ತಾಗಿರಬೇಕು. ಹೆರೊಡೊಟಸ್‌ನು ಭಾರತೀಯರ ಐಶ್ವರ್ಯ ಮತ್ತು ಜನಸಾಂದ್ರತೆಯನ್ನೂ ಭಾರತೀಯರು ಡೇರಿಯಸ್‌ಗೆ ತೋರಿಸುತ್ತಿದ್ದ ಗೌರವವನ್ನೂ ವರ್ಣಿಸಿದ್ದಾನೆ. "ನಮಗೆ ಗೊತ್ತಿರುವ ಇತರ ಎಲ್ಲ ಜನರಿಗಿಂತ ಭಾರತೀಯರ ಜನಸಂಖ್ಯೆಯೇ ಬಹಳ ಹೆಚ್ಚಿನದು. ಇತರರೆಲ್ಲರ ಕಾಣಿಕೆಗಿಂತ ಹೆಚ್ಚು ಕಾಣಿಕೆ ಕೊಡುತ್ತಿದ್ದರು. ಮೂವತ್ತುಲಕ್ಷ ಪೌಂಡು ಸ್ಟರ್ಲಿಂಗ್ ಬೆಲೆಯಾಗುವಷ್ಟು, ಚಿನ್ನದ ಗಟ್ಟಿಗಳನ್ನು ಕೊಡುತ್ತಿದ್ದರು." ಪಾರಸಿ ಸೈನ್ಯದಲ್ಲಿ ಭಾರತೀಯ ಕಾಲಾಳು, ಅಶ್ವದಳ, ರಥದಳಗಳೂ ಅನಂತರ ಹಸ್ತಿದಳಗಳೂ ಇದ್ದುವೆಂದು ತಿಳಿಸುತ್ತಾನೆ.

ಕ್ರಿಸ್ತಪೂರ್ವ ಏಳನೆಯ ಶತಮಾನಕ್ಕೆ ಪೂರ್ವದಿಂದ ಮತ್ತು ಆಮೇಲೆ ಅನೇಕ ಶತಮಾನಗಳ ಕಾಲ ಪರ್ಷಿಯ ಮತ್ತು ಭಾರತಗಳ ಮಧ್ಯೆ ವ್ಯಾಪಾರದ ಮೂಲಕ ಸಂಬಂಧವಿತ್ತೆಂಬುದಕ್ಕೆ ಬೇಕಾದಷ್ಟು ಸಾಕ್ಷ್ಯದೊರೆತಿದೆ. ಆದರಲ್ಲೂ ಮುಖ್ಯವಾಗಿ ಅತಿಪೂರ್ವದಲ್ಲಿ ಇಂಡಿಯ ಮತ್ತು ಬೇಬಿಲಾನ್ ಮಧ್ಯೆ ನಡೆಯುತ್ತಿದ್ದ ವ್ಯಾಪಾರ ಪರ್ಷಿಯಕೊಲ್ಲಿಯ ಮೂಲಕ ನಡೆಯುತ್ತಿತ್ತೆಂದು ನಂಬಲಾಗಿದೆ. ೬ನೆಯ ಶತಮಾನದಿಂದೀಚೆ ಸೈರಸ್ ಮತ್ತು ಡೇರಿಯಸ್ಸನ ದಂಡಯಾತ್ರೆಗಳಿಂದ ಪ್ರತ್ಯಕ್ಷ ಸಂಬಂಧವೇ ಬೆಳೆಯಿತು. ಅಲೆಕ್ಸಾಂಡರನ ವಿಜಯದಿಂದ ಅನೇಕ ಶತಮಾನಗಳಕಾಲ ಪರ್ಷಿಯ ಗ್ರೀಕರ ರಾಜ್ಯಭಾರಕ್ಕೆ ಅಧೀನವಾಗಿತ್ತು. ಭಾರತದೊಂದಿಗೆ ಸಂಬಂಧ ಇದ್ದೇಇತ್ತು. ಆಶೋಕನ ಕಟ್ಟಡಗಳ ಶಿಲ್ಪಕಲೆ ಪರ್ಸಿಪೊಲೀಸ್ ಶಿಲ್ಪಕಲೆಯ ಮಾದರಿಯನ್ನು ಅನುಸರಿಸಿತಂತೆ. ವಾಯುವ್ಯ ಭಾರತ ಮತ್ತು ಆಫ್ಘಾನಿಸ್ಥಾನಗಳಲ್ಲಿ ಬೆಳೆದ ಗ್ರೀಕ್-ಬೌದ್ಧಕಲೆಯಲ್ಲಿ ಇರಾಣಿಕಲೆಯ ಛಾಯೆಇತ್ತು. ಕಲೆ ಮತ್ತು ಸಂಸ್ಕೃತಿಯ ಚಟುವಟಿಕೆಗಳಿಗೆ ಹೆಸರಾದ ಕ್ರಿಸ್ತಶಕ ೪ ಮತ್ತು ೫ನೆಯ ಶತಮಾನಗಳಲ್ಲಿ ಗುಪ್ತರಕಾಲದಲ್ಲಿ ಭಾರತಕ್ಕೂ ಇರಾಣಕ್ಕೂ ಪರಸ್ಪರ ವ್ಯವಹಾರ ಬೆಳೆಯಿತು.

ಗಡಿ ಪ್ರದೇಶದ ಕಾಬೂಲ್, ಕಾಂದಹಾರ ಮತ್ತು ಸೀಸ್ತಾನ್‌ಗಳು ಭಾರತೀಯರೂ ಇರಾಣಿಗಳೂ ಸೇರುತ್ತಿದ್ದ ಪ್ರದೇಶಗಳಾಗಿದ್ದವು. ಅನೇಕವೇಳೆ ರಾಜಕೀಯ ಕಾರಣಗಳಿಂದ ಅವು ಭಾರತದ ಗಡಿಯೊಳಗು ಇರುತ್ತಿದ್ದವು. ಈಚೆಗೆ ಪಾರ್ಥಿಯನರ ಕಾಲದಲ್ಲಿ ಆ ಪ್ರದೇಶಗಳನ್ನು "ಶ್ವೇತಭಾರತ" ಎಂದು ಕರೆಯುತ್ತಿದ್ದರು. ಈ ಭಾಗಗಳ ವಿಷಯದಲ್ಲಿ ಫ್ರೆಂಚ್ ವಿದ್ವಾಂಸನಾದ ಜೆಮ್ಸ್ ಡಾರ್‌ಮೆಸ್ಟರ್ "ಆ ಭಾಗಗಳಲ್ಲಿ ಹಿಂದೂ ನಾಗರಿಕತೆ ಹರಡಿತ್ತು. ಕ್ರಿಸ್ತ ಪೂರ್ವದ ಎರಡು ಮತ್ತು ಕ್ರಿಸ್ತ ಶಕೆಯ ಎರಡು ಶತಮಾನಗಳಲ್ಲಿ ಅವುಗಳನ್ನು 'ಶ್ವೇತಭಾರತ' ಎಂದು ಕರೆಯುತ್ತಿದ್ದರು. ಮುಸಲ್ಮಾನರು ಆ ಪ್ರದೇಶಗಳನ್ನು ಗೆಲ್ಲುವವರೆಗೆ ಅವು ಇರಾಣೀಯಕ್ಕಿಂತ ಹೆಚ್ಚಾಗಿ ಭಾರತೀಯ ಪ್ರದೇಶಗಳಾಗಿದ್ದವು.

ಉತ್ತರದಲ್ಲಿ ವ್ಯಾಪಾರಿಗಳೂ ಮತ್ತು ಪ್ರವಾಸಿಕರೂ ಭೂಮಾರ್ಗದಿಂದ ಭಾರತಕ್ಕೆ ಬರುತ್ತಿದ್ದರು. ದಕ್ಷಿಣ ಭಾರತವು ಸಮುದ್ರ ಮಾರ್ಗವನ್ನು ಅವಲಂಬಿಸಿತ್ತು. ಸಮುದ್ರ ವ್ಯಾಪಾರದಿಂದ ಪರದೇಶ ವ್ಯವಹಾರ ಬೆಳೆದಿತ್ತು. ಸಸ್ಸನಿದ್‌ರ ಪರ್ಷಿಯ ಮತ್ತು ದಕ್ಷಿಣ ಭಾರತದ ಒಂದು ರಾಜ್ಯ ಪರಸ್ಪರ ರಾಯಭಾರಿಗಳನ್ನು ಕಳುಹಿಸಿದ್ದಂತೆ ಸಾಕ್ಷ್ಯ ದೊರೆತಿದೆ.

ತುರುಕರು, ಆಫ್ಘನರು, ಮೊಗಲರು ಭಾರತವನ್ನು ಗೆದ್ದ ಕಾರಣ ಮಧ್ಯ ಮತ್ತು ಪಶ್ಚಿಮ ಏಷ್ಯದ ರಾಜ್ಯಗಳಿಗೂ ಭಾರತಕ್ಕೂ ಬೇಗ ಬಾಂಧವ್ಯ ಬೆಳೆಯಲು ಅನುಕೂಲವಾಯಿತು. ಯುರೋಪಿನ ಪುನರುಜ್ಜೀವನ ಕಾಲದ ಹದಿನೈದನೆಯ ಶತಮಾನದಲ್ಲಿ ಸಾಮರಖಂಡ ಮತ್ತು ಬೊಖಾರದಲ್ಲಿ ಇರಾಣದ ಅದ್ಭುತ ಪ್ರಭಾವದಿಂದ ತೈಮೂರ್‌ಯುಗದ ಪುನರುಜ್ಜೀವನವು ಪ್ರಫುಲ್ಲಿತವಾಗಿತ್ತು. ಅದೇ ತೈಮೂರ್ ವಂಶದ ರಾಜಕುಮಾರನಾದ ಬಾಬರ್ ಸಾಮಾಜಿಕ ಸನ್ನಿವೇಶದಿಂದ ಬಂದು ದೆಹಲಿಯ ಸಿಂಹಾಸನ

ವನ್ನು ಆಕ್ರಮಿಸಿದನು. ಇದು ನಡೆದ ೧೬ನೆಯ ಶತಮಾನವು ಇರಾಣದಲ್ಲಿ ಸಫಾವಿಸ್ ಆಳ್ವಿಕೆಯಲ್ಲಿ ಒಂದು ಅದ್ಭುತ ಕಲಾ ಪುನರುಜ್ಜೀವನ ಕಾಲ. ಪರ್ಷಿಯನ್ ಕಲೆಯ ಸ್ವರ್ಣಯುಗ ಎನ್ನುತ್ತಾರೆ ಆ ಕಾಲವನ್ನು. ಬಾಬರನ ಮಗನಾದ ಹುಮಾಯೂನ್ ಆಶ್ರಯಪಡೆದದ್ದು ಸಫಾವಿ ದೊರೆಯಲ್ಲಿ ಮತ್ತು ಅವನ ಸಹಾಯದಿಂದಲೇ ಪುನಃ ಇಂಡಿಯಕ್ಕೆ ಬಂದದ್ದು. ಇಂಡಿಯದ ಮೊಗಲ್ ಚಕ್ರವರ್ತಿಗಳು ಇರಾನದೊಂದಿಗೆ ನಿಕಟಬಾಂಧವ್ಯ ಬೆಳೆಸಿದ್ದರು. ಮೊಗಲ್ ಚಕ್ರವರ್ತಿಗಳ ರಾಜ ಸಭೆಯಲ್ಲಿ ಕೀರ್ತಿಯನ್ನೂ ಬಹುಮಾನವನ್ನೂ ಪಡೆಯಬೇಕೆಂದು ವಿದ್ವಾಂಸರು ಮತ್ತು ಕಲಾವಿದರು ತಂಡೋಪತಂಡವಾಗಿ ಗಡಿಯನ್ನು ದಾಟಿ ಬರುತ್ತಿದ್ದರು.

ಭಾರತೀಯ ಆದರ್ಶಗಳ ಮತ್ತು ಪಾರಸಿ ಭಾವನೆಗಳ ಮಿಳನದಿಂದ ಒಂದು ಹೊಸ ಶಿಲ್ಪಕಲೆಯೂ ಭಾರತದಲ್ಲಿ ಬೆಳೆಯಿತು. ದೆಹಲಿ ಮತ್ತು ಆಗ್ರ ನಗರಗಳ ಗಂಭೀರ ಸರ್ವಸುಂದರ ಸೌಧಗಳು ಆ ಕಲೆಯ ಮುಕ್ತಾ ಫಲಗಳು. ಇವುಗಳಲ್ಲಿ ಅತಿ ಮುಖ್ಯವಾದ ತಾಜ್‌ಮಹಲನ್ನು ಕಂಡು ಫ್ರೆಂಚ್ ವಿದ್ವಾಂಸ ನಾದ ಗ್ರೌಸೆ "ಇರಾನದ ಆತ್ಮವು ಭಾರತೀಯ ದೇಹದಲ್ಲಿ ಅವತಾರ ಮಾಡಿದೆ" ಎಂದಿದ್ದಾನೆ.

ತಮ್ಮ ಬುಡಕಟ್ಟಿನಲ್ಲಿ ಮತ್ತು ಇತಿಹಾಸ ಪರಂಪರೆಯಲ್ಲಿ ಭಾರತೀಯರಿಗೂ ಇರಾಣದ ಜನ ರಿಗೂ ಇರುವಷ್ಟು ಸಮೀಪ ಬಾಂಧವ್ಯ ಬೇರೆ ಯಾರಲ್ಲೂ ಕಾಣದು. ಈ ನಿರರ್ಗಳ, ಮೈತ್ರಿಯುತ, ಗೌರವಯುತ ಬಾಂಧವ್ಯವು ಬಹುಕಾಲ ನಡೆಯಿತು. ಕೊನೆಯ ನೆನಪು ಮಾತ್ರ ಅತ್ಯಲ್ಪಕಾಲದ್ದಾ ದರೂ ಅತಿ ಭಯಂಕರವಾಗಿತ್ತು. ಎರಡು ನೂರು ವರ್ಷಗಳ ಹಿಂದೆ ನಾದಿರ್‌ಷಹನು ದಂಡಯಾತ್ರೆ ಬಂದು ದೆಹಲಿಯನ್ನು ಕೊಳ್ಳೆಹೊಡೆದುದು ಒಂದು ದುರ್ದೈವ.

ಅನಂತರದ ಬ್ರಿಟಿಷರ ಆಗಮನದಿಂದ ಏಷ್ಯದ ನಮ್ಮ ನೆರೆಹೊರೆಯ ಜನರಿಗೂ ನಮಗೂ ಇದ್ದ ಬಾಂಧವ್ಯ ಮಾರ್ಗಗಳೆಲ್ಲ ಮುಚ್ಚಿದವು. ಕಪಟ ಬಂಧನ ಮಾಡಿದರು. ನಮ್ಮನ್ನು ಯೂರೋಪಿನ ಸಮೀಪಕ್ಕೆ ಅದರಲ್ಲೂ ಇಂಗ್ಲೆಂಡಿನ ಸಮೀಪಕ್ಕೆ ಕರೆದೊಯ್ಯುವ ಹೊಸ ಸಮುದ್ರ ಮಾರ್ಗಗಳನ್ನು ತೋರಿಸಿದರು. ಇಂಡಿಯ, ಇರಾಣ, ಮಧ್ಯ ಏಷ್ಯ, ಚೀನಗಳಿಗೆ ಆಧುನಿಕ ಯುಗದ ವಿಮಾನ ಸೌಕರ್ಯ ಒದಗುವವರೆಗೆ ನಮ್ಮ ಹಿಂದಿನ ಸ್ನೇಹಸಂಪರ್ಕದ ಭೂಮಾರ್ಗಗಳೆಲ್ಲ ಅಂದಿನಿಂದ ಮಾಯ ವಾದವು. ಈ ರೀತಿ ಆಕಸ್ಮಿಕವಾಗಿ ಇದ್ದಕ್ಕಿದ್ದಂತೆ ಭಾರತವು ಏಷ್ಯದ ಇತರ ರಾಷ್ಟ್ರಗಳಿಂದ ಬೇರೆ ಯಾದದ್ದು ಬ್ರಿಟಿಷರ ಆಳ್ವಿಕೆಯ ಒಂದು ಅತಿ ವಿಚಿತ್ರದುಷ್ಪರಿಣಾಮ.*

ಆದರೆ ಕಡಿಯದ ಬಾಂಧವ್ಯ ಒಂದು ಇನ್ನೂ ಉಳಿದಿದೆ. ಅದು ಇಂದಿನದಲ್ಲ; ಪುರಾತನ ಇರಾಣದೊಂದಿನದು. ಹದಿಮೂರು ಶತಮಾನಗಳ ಹಿಂದೆ ಇಸ್ಲಾಂ ಧರ್ಮವು ಇರಾಣ ದೇಶಕ್ಕೆ ಬಂದಾಗ ಸನಾತನ ಜೊರಾಷ್ಟ್ರಧರ್ಮದ ಅನುಯಾಯಿಗಳು ಕೆಲವರು ಭಾರತಕ್ಕೆ ಬಂದು ನೆಲಸಿದರು. ಇಲ್ಲಿ ಅವರಿಗೆ ಆಶ್ರಯ ದೊರೆತು ಪಶ್ಚಿಮ ತೀರದಲ್ಲಿ ನೆಲೆಸಿದರು ಅವರ ಧರ್ಮ ಮತ್ತು ನಡೆನುಡಿ ಗಳಿಗೆ ಯಾವ ಆತಂಕವೂ ಬರಲಿಲ್ಲ. ಅವರೂ ಇನ್ನೊಬ್ಬರ ಗೋಜಿಗೆ ಹೋಗಲಿಲ್ಲ. ಈ ಪಾರ್ಸಿ ಜನರು ಸದ್ದಿಲ್ಲದೆ ಯಾವ ಆಡಂಬರವೂ ಇಲ್ಲದೆ ಭಾರತೀಯರಾಗಿ ಭಾರತದಲ್ಲಿ ಮನೆಮಾಡಿಕೊಂಡರೂ

---

* ಪ್ರೊಫೆಸರ್ ಇ. ಜೆ. ರ್‍ಯಾಪ್ಸನ್‌ರು ಕೇಂಬ್ರಿಜ್ ಭಾರತೀಯ ಇತಿಹಾಸದಲ್ಲಿ "ಸಣ್ಣ ಪುಟ್ಟ ರಾಜ್ಯಗಳನ್ನು ಒಂದು ದೊಡ್ಡ ರಾಜ್ಯವನ್ನಾಗಿ ಒಂದುಗೂಡಿಸಿದ ಶಕ್ತಿಯು ಮುಖ್ಯವಾಗಿ ನೌಕಾಶಕ್ತಿ; ಸಮುದ್ರ ಮಾರ್ಗಗಳೆಲ್ಲ ತನ್ನ ಅಧೀನದಲ್ಲಿದ್ದುದರಿಂದ ರಕ್ಷಣಾದೃಷ್ಟಿಯಿಂದ ಭೂಮಾರ್ಗಗಳನ್ನು ಮುಚ್ಚುವುದು ಅತ್ಯಾವಶ್ಯಕವಾಯಿತು. ಇಂಡಿಯ ಚಕ್ರಾಧಿಪತ್ಯದ ಗಡಿಯ ರಾಷ್ಟ್ರಗಳ ವಿಚಾರದಲ್ಲಿ ಇದೇ ಬ್ರಿಟಿಷರ ರಾಜನೀತಿ, ಅಫ್ಘಾನಿಸ್ಥಾನ, ಬೆಲೂಚಿಸ್ಥಾನ ಮತ್ತು ಬ್ರಹ್ಮದೇಶಗಳು ಆದೇಕಾರಣದಿಂದ ಭಾರತದಿಂದ ದೂರವಾದವು. ಒಳಗಿನ ರಾಜಕೀಯ ಐಕ್ಯಮತ್ಯದ ಜೊತೆಗೆ ಹಿಂದೆಯೇ ಹೊರಗೆ ರಾಜಕೀಯ ಪ್ರತ್ಯೇಕತೆಯೂ ಬೆಳೆಯಿತು. ಆದರೆ ಈ ರಾಜಕೀಯ ಪ್ರತ್ಯೇಕತೆಯು ಬಹಳ ಇತ್ತೀಚಿನದು ಮತ್ತು ಭಾರತೀಯ ಇತಿಹಾಸಕ್ಕೆ ತೀರ ಹೊಸದು. ಪ್ರಸ್ತುತಕಾಲವನ್ನು ಪ್ರಾಚೀನಕಾಲದಿಂದ ಕಡಿದು ಹಾಕಿರುವ ಒಂದು ಮಹಾ ಘಟನೆ.

ತಮ್ಮ ಸನಾತನ ಸಂಪ್ರದಾಯಗಳಿಗೆ ಅಂಟಿಕೊಂಡ ಒಂದು ಸಣ್ಣ ಪಂಗಡವಾಗಿ ಪ್ರತ್ಯೇಕವಾಗಿಯೇ ಉಳಿದಿರುವುದು ಒಂದು ಆಶ್ಚರ್ಯ. ಅಂತರ್ಜಾತೀಯ ವಿವಾಹಗಳೂ ನಡೆದಿದ್ದರೂ ಅವು ಅತಿ ವಿರಳ. ಭಾರತೀಯರಲ್ಲಿ ಸಾಮಾನ್ಯವಾಗಿ ತಮ್ಮ ತಮ್ಮ ಮತದಲ್ಲೆ ಮದುವೆಯಾಗುವುದು ಸಾಮಾನ್ಯ ವಾದುದರಿಂದ ಈ ಪದ್ಧತಿಯು ಏನೂ ಹೊಸದಾಗಿ ಕಾಣಲಿಲ್ಲ. ಅವರ ಸಂಖ್ಯೆಯೂ ಹೆಚ್ಚು ಬೆಳೆದಿಲ್ಲ, ಎಲ್ಲ ಒಟ್ಟು ಸೇರಿ ಒಂದು ಲಕ್ಷ ಜನ. ವ್ಯಾಪಾರ ಉದ್ಯಮದಲ್ಲಿ ನಿಸ್ಸೀಮರು, ಅವರಲ್ಲನೇಕರು ಭಾರತದ ಕೈಗಾರಿಕೆಗಳ ನಾಯಕರು, ಇರಾಣದೊಂದಿಗೆ ಅವರಿಗೆ ಯಾವ ಸಂಪರ್ಕವೂ ಇಲ್ಲ, ಅವರೆಲ್ಲ ಪೂರ್ಣ ಭಾರತೀಯರು. ಆದರೆ ಅವರು ಪೂರ್ವ ಸಂಪ್ರದಾಯಗಳನ್ನೂ ಅವರ ಪೂರ್ವ ಜನ್ಮಭೂಮಿಯ ಸ್ಮರಣೆಯನ್ನೂ ಬಿಟ್ಟಿಲ್ಲ.

ಇರಾಣದಲ್ಲಿ ಇತ್ತೀಚೆಗೆ ಇಸ್ಲಾಂಯುಗದ ಪೂರ್ವದ ತಮ್ಮ ನಾಗರಿಕತೆಯ ಕಡೆ ನೋಡುವ ಆಶೆಯು ಬಲಗೊಳ್ಳುತ್ತಿದೆ. ಇದಕ್ಕೂ ಧರ್ಮಕ್ಕೂ ಯಾವ ಸಂಬಂಧವೂ ಇಲ್ಲ. ಅದು ಕೇವಲ ಸಾಂಸ್ಕೃತಿಕ ಮತ್ತು ರಾಷ್ಟ್ರೀಯ ದೃಷ್ಟಿಯದು; ಅತಿ ಪ್ರಾಚೀನಕಾಲದಿಂದ ನಿರರ್ಗಳವಾಗಿ ಪ್ರವಹಿಸಿದ ಸಂಸ್ಕೃತಿ ಸಂಪ್ರದಾಯಗಳಲ್ಲಿ ಲಾಭ ಪಡೆದು ಹೆಮ್ಮೆಗೊಳ್ಳುವ ದೃಷ್ಟಿಯದು.

ಪ್ರಪಂಚದ ಘಟನೆಗಳು ಮತ್ತು ಸಮಷ್ಟಿ ಪ್ರಶ್ನೆಗಳು ಪುನಃ ಏಷ್ಯದ ಜನಾಂಗಗಳ ಒಕ್ಕೂಟಕ್ಕೆ ದಾರಿ ತೋರುತ್ತಿವೆ. ಯುರೋಪಿನ ಪ್ರಭುತ್ವವನ್ನು ಒಂದು ಕೆಟ್ಟಕನಸಿನಂತೆ ಮರೆತು ಪ್ರಾಚೀನ ಕಾಲದ ಹಳೆಯ ಸ್ನೇಹ ಮತ್ತು ಒಟ್ಟಿನ ಸಾಹಸಗಳು ಪುನಃ ಸ್ಮರಣೆಗೆ ಬರುತ್ತಿವೆ. ಸ್ವಲ್ಪ ದಿನಗಳಲ್ಲಿಯೇ ಭಾರತವು ಚೀನಾದೊಡನೆ ಬಾಂಧವ್ಯ ಬೆಳೆಸಿದಂತೆ ಇರಾಣದೊಡನೆಯೂ ಮೈತ್ರಿಯನ್ನು ಬೆಳೆಸುವುದರಲ್ಲಿ ಅನುಮಾನವಿಲ್ಲ.

ಎರಡು ತಿಂಗಳ ಹಿಂದೆ ಭಾರತಕ್ಕೆ ಬಂದ ಇರಾಣ ಸಂಸ್ಕೃತಿ ಗೋಷ್ಠಿಯ ನಾಯಕನು ಅಲಹಾಬಾದಿನಲ್ಲಿ "ಇರಾಣಿಗಳೂ ಭಾರತೀಯರೂ ಇರಾಣದ ಒಂದು ಕತೆಯಲ್ಲಿ ಪೂರ್ವಕ್ಕೊಬ್ಬ ಪಶ್ಚಿಮಕ್ಕೊಬ್ಬ ಹೋಗಿ ಅಗಲಿದ ಸಹೋದರರಂತೆ. ಅವರ ವಂಶೀಕರು ಪರಸ್ಪರ ಪರಿಚಯವನ್ನೇ ಮರೆತಿದ್ದರು. ಅವರಿಬ್ಬರಲ್ಲೂ ಉಳಿದಿರುವ ಪದ್ಧತಿ ಎಂದರೆ ಅವರ ಮುರಳಿ ಗಾನದ ಕೆಲವು ಹರಕು ಗೀತೆಗಳ ಹಳೆಯ ರಾಗಗಳು. ಅನೇಕ ಶತಮಾನಗಳ ನಂತರ ಆ ರಾಗ ಶ್ರವಣದಿಂದ ಪುನಃ ಪರಸ್ಪರ ಪರಿಚಯವಾಗಿ ಪುರ್ನಮಿಲನವಾಯಿತು. ಅದೇ ರೀತಿ ನಾವು ಸಹ ನಮ್ಮ ಕೊಳಲಗಾನದಿಂದ ಪುರಾತನ ಗೀತೆಗಳನ್ನು ನುಡಿಸಲು ಬಂದಿದೇವೆ. ಭಾರತೀಯ ಸಹೋದರರೇ ಆ ಗೀತೆಗಳನ್ನು ಕೇಳಿ ನಿಮ್ಮ ಇರಾಣಿ ಸಹೋದರರನ್ನು ಗುರುತಿಸಿ ನಮ್ಮನ್ನು ಅಪ್ಪಿಕೊಳ್ಳಿ" ಎಂದು ಹೇಳಿದನು.

## ೭ ಭಾರತ ಮತ್ತು ಗ್ರೀಸ್

ಯೂರೋಪಿನ ಎಲ್ಲ ಸಂಸ್ಕೃತಿಗಳಿಗೆ ಪುರಾತನ ಗ್ರೀಸ್ ತೌರುಮನೆ ಎಂದು ಪ್ರಸಿದ್ಧಿಯಾಗಿದೆ. ಪೌರ್ವಾತ್ಯಕ್ಕೂ ಪಾಶ್ಚಿಮಾತ್ಯಕ್ಕೂ ಇರುವ ಮೂಲ ಭಿನ್ನತೆಯ ವಿಷಯವಾಗಿ ಎಷ್ಟೋ ಗ್ರಂಥಗಳು ಹುಟ್ಟಿವೆ. ಇದು ನನಗೆ ಅರ್ಥವಾಗುವುದಿಲ್ಲ. ಅದೆಲ್ಲ ಬಹುಮಟ್ಟಿಗೆ ಯಾವವಿಚಾರವೂ ಇಲ್ಲದೆ, ವಿಜ್ಞಾನ ದೃಷ್ಟಿಯಿಲ್ಲದೆ ಅಸ್ಪಷ್ಟ ಭಾವನೆಗಳಿಂದ ಬರೆದದ್ದು. ಅನೇಕ ಯೂರೋಪಿಯನ್ ವಿದ್ವಾಂಸರು ಮೊನ್ನೆ ಮೊನ್ನಿನವರೆಗೆ ಉತ್ತಮ ವಸ್ತು ಯಾವುದಿದ್ದರೂ ಗ್ರೀಸ್ ಮತ್ತು ರೋಮಿನಿಂದ ಬಂದುದೇ ಇರಬೇಕು ಎಂದು ಭಾವಿಸಿದ್ದರು. ಸರ್ ಹೆನ್ರಿಮೇನ್ ಎಲ್ಲೋ ಒಂದೆಡೆ ಕುರುಡು ಪ್ರಕೃತಿ ಶಕ್ತಿಯೊಂದನ್ನು ಬಿಟ್ಟರೆ ಪ್ರಪಂಚದಲ್ಲಿ ಗ್ರೀಕ್ ಜನ್ಯ ವಸ್ತುವಿನಾ ಬೇರೆ ಯಾವುದಕ್ಕೂ ಚಲನಶಕ್ತಿಯೇ ಇಲ್ಲ ಎಂದಿದ್ದಾನೆ. ಗ್ರೀಕ್ ಮತ್ತು ಲ್ಯಾಟಿನ್ ಭಾಷೆಗಳಲ್ಲಿ ಮಹಾ ಪಂಡಿತರಾದ ಯೂರೋಪಿನ ವಿದ್ವಾಂಸರಿಗೆ ಭಾರತ ಮತ್ತು ಚೀನಾದೇಶಗಳ ಪರಿಚಯವೇ ಇರಲಿಲ್ಲ. ಆದರೂ ಪ್ರೊಫೆಸರ್ ಇ.ಆರ್. ಡಾಡ್ಸ್ "ಗ್ರೀಕ್ ಸಂಸ್ಕೃತಿಯ ಉದಯ ಪೌರ್ವಾತ್ಯ ಹಿನ್ನೆಲೆಯಲ್ಲಿ. ಯುರೋಪಿಯನ್ ಮಹಾ ಪಂಡಿತರ ಮನಸ್ಸಿನಲ್ಲಿ ಮಾತ್ರವಲ್ಲದೆ ಈ ಹಿನ್ನೆಲೆಯು ಯಾವಾಗಲೂ ಸಂಬಂಧ ಕಡಿಮೆ ಬೀಳಲಿಲ್ಲ." ಎಂದಿದ್ದಾನೆ.

ಯೂರೋಪಿನಲ್ಲಿ ಪಾಂಡಿತ್ಯವೆಂದರೆ ಗ್ರೀಕ್, ಹೀಬ್ರೂ ಮತ್ತು ಲ್ಯಾಟಿನ್ ಭಾಷೆಗಳ ಪಾಂಡಿತ್ಯ. ಆ ಪಂಡಿತರ ದೃಷ್ಟಿಯಲ್ಲಿ ಪ್ರಪಂಚವೆಂದರೆ ಮೆಡಿಟರೇನಿಯನ್ ತೀರದ ಪ್ರಪಂಚ. ಈ ಪ್ರಪಂಚದ ಮೂಲತತ್ವವು ಪುರಾತನ ರೋಮನರ ಉದ್ದೇಶಕ್ಕಿಂತ ಹೆಚ್ಚು ಭಿನ್ನವಿರಲಿಲ್ಲ. ಆಗಾಗ ಮಾತ್ರ ಸ್ವಲ್ಪ ಮಾರ್ಪಾಡಾಗುತ್ತಿತ್ತು. ಅವರ ಇತಿಹಾಸ ಮತ್ತು ಭೌಗೋಲಿಕ ರಾಜಕೀಯವು ಈ ತತ್ವಕ್ಕೆ ಅಧೀನವಾಗಿತ್ತು. ಸಂಸ್ಕೃತಿ ಮತ್ತು ನಾಗರಿಕತೆಯ ಬೆಳವಣಿಗೆ ಮಾತ್ರವಲ್ಲದೆ ಅವರ ವೈಜ್ಞಾನಿಕ ಬೆಳವಣಿಗೆಗೆ ಸಹ ಈ ತತ್ವವು ಅಡ್ಡ ಬಂದಿತು. ಅವರ ಮನಸ್ಸಿನಲ್ಲೆಲ್ಲ ಪ್ಲೇಟೋ ಮತ್ತು ಅರಿಸ್ಟಾಟಿಲ್. ಹಿಂದಿನ ಕಾಲದ ಏಷ್ಯನರ ಅನೇಕ ಅದ್ಭುತ ಕಾರ್ಯಗಳು ಅವರ ಕಿವಿಗೆ ಬಿದ್ದರೂ ಅವನ್ನು ಸುಲಭವಾಗಿ ಒಪ್ಪುತ್ತ ಇರಲಿಲ್ಲ.' ಅದನ್ನು ಎದುರಿಸಿ, ಹೇಗೋ ತಮ್ಮ ಹಿಂದಿನ ಚಿತ್ರದ ಚೌಕಟ್ಟಿನೊಳಗೇ ಸೇರಿಸಿಬಿಡುವ ಮನೋಭಾವನೆ ಇತ್ತು. ವಿದ್ವಾಂಸರ ಮನೋಭಾವನೆಯೇ ಈರೀತಿ ಇರುವಾಗ ನಿರಕ್ಷರ ಕುಕ್ಷಿಗಳಾದ ಯೂರೋಪಿಯನ್ ಜನಸ್ತೋಮವು ಪೂರ್ವಪಶ್ಚಿಮಗಳೆರಡಕ್ಕೂ ಮೂಲ ಭಿನ್ನತೆ ಇದ್ದೇಇದೆ ಎಂದು ನಂಬಲೇ ಬೇಕು. ಯೂರೋಪಿನ ಔದ್ಯೋಗೀಕರಣ, ಅದರಿಂದ ಲಭಿಸಿದ ಆಪಾರ ಧನಸಂಪತ್ತು ಸಾಮಾನ್ಯ ಜನರ ಮನಸ್ಸಿನಲ್ಲಿ ಈ ಭಿನ್ನತೆಯ ಕಲ್ಪನೆಯನ್ನು ಇನ್ನೂ ಹೆಚ್ಚುಮಾಡಿತು. ಒಂದು ವಿಚಿತ್ರ ತರ್ಕ ಪದ್ಧತಿಯಿಂದ ಪುರಾತನ ಗ್ರೀಸ್ ಆಧುನಿಕ ಯೂರೋಪ್ ಮತ್ತು ಅಮೆರಿಕಾಗಳಿಗೆ ಪಿತೃಸ್ಥಾನವೋ ಮಾತೃ ಸ್ಥಾನವೋ ಆಯಿತು. ಆದರೆ ಪ್ರಪಂಚದ ಪೂರ್ವೇತಿಹಾಸದ ಹೊಸ ಜ್ಞಾನವು ಕೆಲವು ವಿದ್ವಾಂಸರ ಮನಸ್ಸಿನಲ್ಲಿದ್ದ ಈಭಾವನೆಗಳನ್ನು ತಲೆಕೆಳಗೆ ಮಾಡಿತು. ಆದರೆ ಸಾಮಾನ್ಯ ಜನತೆಯಲ್ಲಿ ಅವರ ಯುಗಾಂತರದ ಅಭಿಪ್ರಾಯಗಳೇ ಶಾಶ್ವತ ಉಳಿದವು. ಒಮ್ಮೊಮ್ಮೆ ಕೆಲವು ಕಲ್ಪನೆಗಳು ಮೇಲೆ ಮೇಲೆ ಸುಳಿದು ಅವರ ಮನಸ್ಸಿನ ಚಿತ್ರದ ಹಿಂದೆ ಮರೆಯಾಗುತ್ತಿದ್ದವು.

ಯೂರೋಪ್ ಮತ್ತು ಅಮೆರಿಕ ಔದ್ಯೋಗೀಕರಣದಲ್ಲಿ ಬಹಳ ಮುಂದುವರಿದು, ಏಷ್ಯ ಈ ವಿಚಾರದಲ್ಲಿ ಹಿಂದೆ ಬಿದ್ದಿದೆಯೇ ಹೊರತು ಬೇರೆ ಅರ್ಥದಲ್ಲಿ ಪಾಶ್ಚಾತ್ಯ ಪೌರ್ವಾತ್ಯ ಎಂಬ ಪದಭೇದಗಳ ಉಪಯೋಗ ನನಗೆ ಹಿಡಿಯುವುದಿಲ್ಲ, ಈ ಔದ್ಯೋಗಿಕರಣವು ಪ್ರಪಂಚದ ಇತಿಹಾಸದಲ್ಲೇ ಹೊಸದು. ಇನ್ನಾವುದಕ್ಕೂ ಸಾಧ್ಯವಾಗದಷ್ಟರ ಮಟ್ಟಿಗೆ ಪ್ರಪಂಚದ ಸ್ಥಿತಿಯನ್ನೆ ವ್ಯತ್ಯಾಸಗೊಳಿಸಿದೆ. ಇನ್ನೂ ವ್ಯತ್ಯಾಸಗೊಳಿಸುತ್ತಿದೆ. ಆಧುನಿಕ ಯೂರೋಪ್ ಮತ್ತು ಅಮೆರಿಕಗಳ ನಾಗರಿಕತೆಗೂ ಗ್ರೀಕ್ ನಾಗರಿಕತೆಗೂ ಯಾವ ಸಜೀವ ಸಂಬಂಧವೂ ಇಲ್ಲ. ಸುಖಜೀವನವೇ ಮಾನವನ ಬಾಳ್ವೆಯ ನಿಜವಾದ ಮುಖ್ಯ ಗುರಿ ಎಂಬ ಆಧುನಿಕ ಭಾವನೆಯು ಗ್ರೀಕ್‌ರದು. ಉಳಿದೆಲ್ಲ ಪುರಾತನ ಸಂಸ್ಕೃತಿಗಳಿಗೆ ಇದು ತೀರ ಅಪರಿಚಿತ. ಗ್ರೀಕರು, ಭಾರತೀಯರು, ಚೀಣೀಯರು, ಇರಾಣಿಗಳು ಎಲ್ಲರೂ ಜೀವನದಲ್ಲಿ ಒಂದು ಸಮತೂಕ ಮತ್ತು ಸಮರಸತೆಯನ್ನು ಕೊಟ್ಟು, ನಮ್ಮ ಎಲ್ಲ ಕಾರ್ಯಗಳಿಗೆ ಹಿನ್ನೆಲೆಯಾದ ಒಂದು ಜೀವನ ಧರ್ಮ ಮತ್ತು ದರ್ಶನದ ಅನ್ವೇಷಣೆಯಲ್ಲಿದ್ದರು. ಈ ಆದರ್ಶವು ಜೀವನದ ಪ್ರತಿಯೊಂದು ಅಂಗದಲ್ಲಿ—ಸಾಹಿತ್ಯದಲ್ಲಿ ಕಲೆಯಲ್ಲಿ—ಸಂಸ್ಥೆಗಳಲ್ಲಿ ಎದ್ದು ಮೂಡಿ ಒಂದು ಸಮಸ್ಥಿತಿಯನ್ನು ಸಾಮರಸ್ಯವನ್ನು ಉಂಟುಮಾಡುತ್ತದೆ. ಪ್ರಾಯಶಃ ಈ ಕಲ್ಪನೆಗಳು ಪೂರ್ಣ ಸಾಧುವಲ್ಲದಿರಬಹುದು; ಜೀವನದ ವಾಸ್ತವಚಿತ್ರವು ಬೇರೆ ಇದ್ದಿರಬಹುದು. ಆದರೂ ಇಂದಿನ ಯೂರೋಪ್ ಮತ್ತು ಅಮೆರಿಕದ ದೃಷ್ಟಿಗೂ ಪುರಾತನ ಗ್ರೀಕರ ಜೀವನ ದೃಷ್ಟಿ ಮತ್ತು ಪ್ರವೇಶಕ್ಕೂ ಇರುವ ಅಜಗಜಾಂತರವನ್ನು ಗಮನಿಸುವುದು ಒಳ್ಳೆಯದು. ಆಧುನಿಕ ಜೀವನದ ಕಠಿನ ವಿಧ್ವಂಸಕ ಜ್ವಾಲೆಯಿಂದ ತಪ್ತ ಜೀವನಕ್ಕೊಂದು ತಂಪನ್ನೆರಚಲು, ಅಥವ ತಮ್ಮ ಅಂತರಾತ್ಮದ ಯಾವುದೊ ಯಾತನೆಗೆ ಸಮಾಧಾನ ಕೊಡಲು ಅಮೆರಿಕನರು ಯುರೊಪಿಯನ್‌ರು ತಮ್ಮ ವಿರಾಮ ಕಾಲದಲ್ಲಿ ಗ್ರೀಕರನ್ನು ಸ್ತೋತ್ರ ಮಾಡುತ್ತಾರೆ ಮತ್ತು ಅವರೊಂದಿಗೆ ದೂರದ ಸಂಬಂಧವನ್ನು ಕಲ್ಪಿಸಿಕೊಳ್ಳುತ್ತಾರೆ.

ಪೂರ್ವದಲ್ಲಾಗಲಿ, ಪಶ್ಚಿಮದಲ್ಲಿ ಆಗಲಿ ಪ್ರತಿಯೊಂದು ದೇಶಕ್ಕೆ ಮತ್ತು ಜನಕ್ಕೆ ಒಂದು ವ್ಯಕ್ತಿತ್ವವಿದೆ; ಒಂದು ಸಂದೇಶವಿದೆ; ಮತ್ತು ಆ ವ್ಯಕ್ತಿತ್ವವು ಜೀವನದ ಸಮಸ್ಯೆಗಳನ್ನು

ತನ್ನದೇ ಒಂದು ವೈಶಿಷ್ಟ್ಯ ಮಾರ್ಗದಿಂದ ಬಿಡಿಸಲು ಯತ್ನಿಸಿದೆ. ಗ್ರೀಸಿಗೂ ಒಂದು ನಿರ್ದಿಷ್ಟ ಸ್ಥಾನವಿದೆ; ಆ ದಾರಿಯಲ್ಲಿ ಅದು ಅತ್ಯುನ್ನತ ಸ್ಥಾನ; ಅಂತೆಯೇ ಭಾರತ, ಚೀಣ ಮತ್ತು ಇರಾಣ. ಪ್ರಾಚೀನ ಭಾರತಕ್ಕೂ ಪ್ರಾಚೀನ ಗ್ರೀಸಿಗೂ ಎಷ್ಟೋ ಅಂತರವಿದ್ದರೂ ಪ್ರಾಚೀನ ಭಾರತ ಮತ್ತು ಚೀನಗಳ ಮಧ್ಯೆ ಎಷ್ಟೋ ಭಿನ್ನತೆ ಇದ್ದರೂ ಒಂದೇ ಭಾವನಾದೃಷ್ಟಿ ಇರುವಂತೆ ಕೆಲವು ವಿಷಯಗಳಲ್ಲಿ ಸಾಮ್ಯವಿದೆ. ಎಲ್ಲರಿಗೂ ಒಂದು ವಿಶಾಲವಾದ, ಸಹನೆಯ ಅಸಂಸ್ಕೃತ ದೃಷ್ಟಿ ಇತ್ತು. ಜೀವನೋತ್ಸಾಹವಿತ್ತು ಮತ್ತು ಸನಾತನ ಜನಾಂಗದ ಅನುಭವ ಪೂರ್ಣ ವಿವೇಕವಿತ್ತು. ಪ್ರತಿಯೊಂದು ಜನಾಂಗವೂ ತನ್ನ ಅಂತಃ ಪ್ರವೃತ್ತಿಗನುಗುಣವಾಗಿ, ತನ್ನ ಪ್ರಾಕೃತಿಕ ಸನ್ನಿವೇಶಗಳ ಪ್ರಭಾವವನ್ನನುಸರಿಸಿ ವಿಕಾಸಹೊಂದಿತು. ಮತ್ತು ಇತರ ದೃಷ್ಟಿಗಳಿಗಿಂತ ತನಗೆ ಯುಕ್ತ ತೋರಿದ ಜೀವನದ ಯಾವುದೋ ಒಂದು ದೃಷ್ಟಿಗೆ ಪ್ರಾಶಸ್ತ್ಯಕೊಟ್ಟಿತು. ಈ ಪ್ರಾಶಸ್ತ್ಯವು ಪ್ರತಿಯೊಂದು ಜನಾಂಗಕ್ಕೂ ಬೇರೆಯಾಗಿತ್ತು. ಗ್ರೀಕ್ ಜನಾಂಗವು ವಾಸ್ತವಜೀವನಕ್ಕೇ ಪ್ರಾಶಸ್ತ್ಯ ಕೊಟ್ಟರು. ತಮ್ಮ ಸುತ್ತಮುತ್ತಲಿನ ಸೌಂದರ್ಯದಲ್ಲಿ ಅಥವ ಅವರೇ ಸೃಷ್ಟಿಸಿದ ಸೌಂದರ್ಯದಲ್ಲಿ ಆನಂದವನ್ನು ಅನುಭವಿಸುತ್ತಿದ್ದರು. ಭಾರತೀಯರು ಸಹ ವಾಸ್ತವ ಜೀವನದಲ್ಲಿ ಈ ಆನಂದವನ್ನೂ ಮತ್ತು ಸಾಮರಸ್ಯವನ್ನೂ ಪಡೆದರು; ಆದರೆ ಅದರ ಜೊತೆಗೆ ಅವರ ದೃಷ್ಟಿಯು ಇನ್ನೂ ಆಳವಾದ ಜ್ಞಾನಾರ್ಜನೆಯ ಕಡೆಗೆ ನೆಟ್ಟಿತ್ತು ಮತ್ತು ಅವರ ಮನಸ್ಸು ವಿಚಿತ್ರ ಪ್ರಶ್ನೆಗಳ ಕಡೆಗೆ ಹರಿಯುತ್ತಿತ್ತು. ಚೀಣೀಯರು ಈ ಪ್ರಶ್ನೆಗಳನ್ನು, ಅವುಗಳ ರಹಸ್ಯವನ್ನು ಅರಿತುಕೊಂಡು ಅವುಗಳ ಜಟಿಲತೆಯಲ್ಲೇ ಸಿಕ್ಕಿಕೊಳ್ಳದ ವಿವೇಕವನ್ನು ತೋರಿಸಿದರು. ತನ್ನ ತನ್ನ ವೈಶಿಷ್ಟ್ಯದ ಮಾರ್ಗದಲ್ಲಿ ಪ್ರತಿಯೊಂದು ಜನಾಂಗವೂ ತನ್ನ ಜೀವನದ ಪೂರ್ಣತೆಯನ್ನು ಮತ್ತು ಸೌಂದರ್ಯವನ್ನು ವ್ಯಕ್ತಗೊಳಿಸಲು ಪ್ರಯತ್ನಪಟ್ಟಿತು. ಭಾರತ ಮತ್ತು ಚೀನದೇಶಗಳ ತಳಹದಿಯು ಬಲವಾಗಿತ್ತು; ಅವಕ್ಕೆ ಹೆಚ್ಚಿನ ಸಹನ ಸಾಮರ್ಥ್ಯವಿತ್ತು ಎಂಬುದು ಚರಿತ್ರೆಯಿಂದ ದೃಢವಾಗಿದೆ. ಬಹಳ ತೊನೆದಾಡಿ, ಹೀನಸ್ಥಿತಿಗೆ ಬಂದು, ಭವಿಷ್ಯವು ಅನಿಶ್ಚಿತವಿದ್ದರೂ ಇನ್ನೂ ಜೀವಂತವಾಗಿವೆ. ಪುರಾತನ ಗ್ರೀಸ್ ಎಷ್ಟೇ ವೈಭವದಿಂದ ಮೆರೆದರೂ ಅತ್ಯಲ್ಪಕಾಲ ಬಾಳಿತು. ಆ ಸಂಸ್ಕೃತಿಯು ತನ್ನ ಅದ್ಭುತಸಾಧನೆಗಳಲ್ಲಿ, ಅನಂತರ ಬಂದ ಸಂಸ್ಕೃತಿಗಳ ಸಂಸ್ಕಾರದಲ್ಲಿ, ತನ್ನ ಕ್ಷಣಿಕ-ಉಜ್ಜ್ವಲ ತುಂಬು ಜೀವನದ ನೆನಪಿನಲ್ಲಿ ಉಳಿಯಿತೆ ವಿನಾ ದೀರ್ಘಕಾಲ ತಾನೇ ಬಾಳಲಿಲ್ಲ. ಪ್ರಾಯಶಃ ಪ್ರಸಕ್ತ ಜೀವನಕ್ಕೇ ಹೆಚ್ಚು ಬೆಲೆ ಕೊಟ್ಟುದರಿಂದ ಬೇಗಪ್ರಾಚೀನತೆಯ ಪದರಿನಲ್ಲಡಗಿಹೋಯಿತು.

ಇಂದಿನ ಯುರೋಪಿನ ಜನಾಂಗಗಳು ತಾವು ಹೆಲೆನಿಕ್ ಸತ್ವದ ಶಿಶುಗಳೆಂದು ಹೆಮ್ಮೆಗೊಳ್ಳುತ್ತಿದ್ದರೂ ಪ್ರಾಯಶಃ ಭಾರತವೇ ಪುರಾತನ ಗ್ರೀಸಿನ ಸತ್ವಕ್ಕೆ ದೃಷ್ಟಿಗೆ ಹೆಚ್ಚು ಹತ್ತಿರವಿದೆ. ನಮ್ಮ ಆನುವಂಶೀಯ ನಿಶ್ಚಿತ ಭಾವನೆಗಳು ನಮ್ಮ ವಿಚಾರಪೂರ್ಣದೃಷ್ಟಿಯನ್ನು ಮುಬ್ಬುಗೊಳಿಸಿರುವುದರಿಂದ ಇದನ್ನು ನಾವು ಮರೆತಿದ್ದೇವೆ. ಭಾರತವು ಧರ್ಮ, ದರ್ಶನ, ಧ್ಯಾನ ಮತ್ತು ತತ್ವವಿಚಾರಗಳಲ್ಲೇ ಮಗ್ನವಾಗಿದೆ; ಈ ಪ್ರಪಂಚದ ವಿಷಯವು ಅದಕ್ಕೆ ಬೇಕಿಲ್ಲ; ಪರಲೋಕ ಮತ್ತು ಜನ್ಮಾಂತರಗಳ ಕನಸು ಕಾಣುತ್ತ ಮೈಮರೆತಿದೆ ಎಂಬ ಪ್ರತೀತಿ ಇದೆ. ಪ್ರಾಯಶಃ ಈ ರೀತಿ ಹೇಳುವರು, ಭಾರತವು ಮುಂದೆಯೂ ಅದೇರೀತಿ ಚಿಂತಾಮಗ್ನವಾಗಿದ್ದರೆ, ಕಲ್ಪನಾ ಪ್ರಪಂಚದಲ್ಲೇ ಇದ್ದರೆ ಯಾರ ಅಡ್ಡಿಯೂ ಇಲ್ಲದೆ ಪ್ರಪಂಚದ ಸುಖವನ್ನೆಲ್ಲ ತಮ್ಮದನ್ನಾಗಿ ಅನುಭವಿಸಬಹುದು, ಜೀವನದ ಪೂರ್ಣತೆಯನ್ನು, ಜೀವನಾನಂದವನ್ನು ನಿರಾತಂಕವಾಗಿ ಸವಿಯಬಹುದು ಎಂಬ ಅಭಿಲಾಷೆಯಿಂದ ಹೇಳುತ್ತಿರಬಹುದು. ನಿಜ, ಇಂಡಿಯ ಆ ರೀತಿಯಲ್ಲಿ ಇದ್ದುದೂ ನಿಜ. ಅದಕ್ಕಿಂತ ಹೆಚ್ಚಾಗಿ ಬಾಳಿದ್ದೂ ನಿಜ. ಬಾಲ್ಯಾವಸ್ಥೆಯ ನಿಷ್ಕಾಪಟ್ಯವನ್ನೂ, ಉದಾಸೀನತೆಯನ್ನೂ ಭಾರತವು ಅರಿತಿದೆ; ಯೌವನದ ಭಾವೋದ್ರೇಕವನ್ನೂ ಪರವಶತೆಯನ್ನೂ ಅರಿತಿದೆ; ಬಹುಕಾಲದ ಸುಖ ದುಃಖಗಳ ಅನುಭವದಿಂದ ಬರುವ ಪರಿಪಕ್ವ ಜೀವನದ ತುಂಬು ವಿವೇಕವನ್ನು ಅರಿತಿದೆ; ಮತ್ತು ಪುನಃ ತನ್ನ ಬಾಲ್ಯಾವಸ್ಥೆಯನ್ನು, ಯೌವನವನ್ನು, ಪರಿಪಕ್ವ ಜೀವನವನ್ನು

ಪುನರುಜ್ಜೀವನಗೊಳಿಸಿಕೊಂಡಿದೆ. ಯುಗಾಂತರಗಳ ಕಾಲಮಾನ ಮತ್ತು ದೇಶ ವಿಸ್ತಾರದ ಅಸಾಧ್ಯ ಜಡತ್ವದಿಂದ ಕುಗ್ಗಿದೆ; ಶುಷ್ಕ ಪದ್ಧತಿಗಳು ದುಸ್ಸಂಪ್ರದಾಯಗಳು ದೇಹದೊಳಗೆ ಮನೆ ಮಾಡಿವೆ. ಅನೇಕ ಪರೋಪಜೀವಿಗಳು ಅಂಟಿಕೊಂಡು ರಕ್ತವನ್ನೇ ಹೀರುತ್ತಿವೆ; ಆದರೆ ಇವುಗಳೆಲ್ಲದರ ಹಿಂದೆ ಯುಗಾಂತರದ ಅದ್ಭುತ ಶಕ್ತಿ ಇದೆ ಮತ್ತು ಪ್ರಾಚೀನ ಜನಾಂಗದ ಸುಷುಪ್ತ ವಿವೇಕವಿದೆ. ಏಕೆಂದರೆ ನಾವು ಅತಿ ಪುರಾತನರು; ಅನಂತ ಶತಮಾನಗಳು ನಮ್ಮ ಕಿವಿಯಲ್ಲುಸುರುತ್ತಿವೆ; ಗತಕಾಲದ ಸ್ಮರಣೆಯೂ ಕನಸುಗಳೂ ಇನ್ನೂ ನಮ್ಮನ್ನು ಆವರಿಸಿದ್ದರೂ ನಮ್ಮ ಯೌವನದ ಶಕ್ತಿಯನ್ನು ಪುನಃ ಪುನಃ ಪಡೆಯುವ ಮಾರ್ಗವೂ ನಮಗೆ ಗೊತ್ತಿದೆ.

ಈ ಅನಂತ ಕಾಲಯಾನದಲ್ಲಿ ಭಾರತಕ್ಕೊಂದು ಜೀವಶಕ್ತಿಯನ್ನು ಕೊಟ್ಟು, ಶಕ್ತಿಯುತವಾಗಿ ಉಳಿಸಿರುವುದು ಯಾವುದೋ ಒಂದು ರಹಸ್ಯ ತತ್ವವಲ್ಲ, ಅಲೌಕಿಕ ಜ್ಞಾನವಲ್ಲ, ಆದರೆ ಒಂದು ಕರುಣಾಪೂರ್ಣಮಾನವೀಯತೆ, ಒಂದು ವಿವಿಧ ಸ್ನೇಹಪೂರ್ಣ ಸಂಸ್ಕೃತಿ, ಜೀವನದ ಮತ್ತು ಜೀವನ ರಹಸ್ಯ ಮಾರ್ಗಗಳ ಆಳವಾದ ಜ್ಞಾನ. ಈ ಜ್ಞಾನದ ಅದ್ಭುತ ಶಕ್ತಿಯು ಶ್ರೇಷ್ಠ ಸಾಹಿತ್ಯ ಮತ್ತು ಕಲೆಯಲ್ಲಿ ಕಾಲಕಾಲಕ್ಕೆ ಹರಿದು ಬಂದಿದೆ. ನಮಗೆ ದೊರೆತಿರುವ ಸಾಹಿತ್ಯ ಮತ್ತು ಕಲಾವಸ್ತುಗಳು ಅತ್ಯಲ್ಪ; ಹೆಚ್ಚಿನಭಾಗ ಇನ್ನೂ ಭೂಗತವಾಗಿದೆ ಅಥವ ಪ್ರಕೃತಿಯಿಂದಲೂ ಮಾನವನ ದೌರ್ಜನ್ಯದಿಂದಲೂ ಹಾಳಾಗಿದೆ. ಎಲಿಫಾಂಟ ಗುಹೆಗಳ ತ್ರಿಮೂರ್ತಿವಿಗ್ರಹದ ಆಳವಾದ ಜ್ಞಾನಪೂರ್ಣವೂ ಅರ್ಥಪೂರ್ಣವೂ ಆದ ತೇಜಃಪುಂಜವಾದ ಕಣ್ಣುಗಳನ್ನು ನೋಡಿದರೆ, ನಮ್ಮನ್ನು ಪರವಶರನ್ನಾಗಿ ಮಾಡುವ ಭರತಮಾತೆಯ ಬಹುಮುಖ ವಿಗ್ರಹವೇ ಇರುವಂತೆ ತೋರುತ್ತದೆ. ಅಜಂತ ಚಿತ್ರಕಲೆಯಲ್ಲಿ ವಿಶೇಷ ಕೋಮಲತೆ ಇದೆ, ಮಾಧುರ್ಯವಿದೆ; ಜೀವನ ಮತ್ತು ಸೌಂದರ್ಯಪ್ರೇಮವಿದೆ. ಆದರೂ ಯಾವುದೋ ಪರವಸ್ತುವಿನ ಗಾಢವಾದ ಭಾವನೆ ಇರುವಂತೆ ಇದೆ.

ಭೂಗೋಳ ದೃಷ್ಟಿಯಿಂದ, ಹವಾಗುಣದಿಂದ ಭಾರತಕ್ಕೂ ಗ್ರೀಸಿಗೂ ಬಹಳ ವ್ಯತ್ಯಾಸವಿದೆ. ಇಂಡಿಯದಲ್ಲಿರುವಂತೆ ಅಲ್ಲಿ ನಿಜವಾದ ನದಿಗಳೇ ಇಲ್ಲ, ದೊಡ್ಡ ಕಾಡುಗಳಿಲ್ಲ, ಗಿಡಗಳಿಲ್ಲ. ಸಮುದ್ರವು ತನ್ನ ಅಪಾರತೆಯಿಂದ, ಉಬ್ಬರವಿಳಿತಗಳಿಂದ ಭಾರತೀಯರ ಮೇಲಿನ ಪರಿಣಾಮಕ್ಕಿಂತ ಹೆಚ್ಚು ಪರಿಣಾಮವನ್ನು ಗ್ರೀಕರ ಮೇಲೆ ಮಾಡಿತು. ಪ್ರಾಯಶಃ ಸಮುದ್ರತೀರದ ಭಾರತೀಯರ ಮೇಲೆ ಸ್ವಲ್ಪ ಹೆಚ್ಚು ಪರಿಣಾಮ ಆಗಿರಬಹುದು. ಭಾರತೀಯ ಜೀವನವು ವಿಶಾಲವಾದ ಮೈದಾನಗಳ, ಉನ್ನತ ಪರ್ವತಗಳ, ಮಹಾನದಿಗಳ ಮತ್ತು ಘೋರಾರಣ್ಯಗಳ ವರ್ಷೀಯ ಜೀವನ. ಗ್ರೀಸಿನಲ್ಲೂ ಕೆಲವು ಪರ್ವತಗಳಿದ್ದವು. ಭಾರತೀಯರು ತಮ್ಮ ದೇವತೆಗಳಿಗೆ, ಋಷಿಗಳಿಗೆ ಹಿಮಾಲಯದಲ್ಲಿ ಮನೆ ಮಾಡಿಕೊಟ್ಟಂತೆ ಗ್ರೀಕರು ತಮ್ಮ ದೇವತೆಗಳಿಗೆ ಒಲಿಂಪಸ್ ಪರ್ವತದಲ್ಲಿ ಮನೆ ಮಾಡಿದರು. ಇಬ್ಬರಲ್ಲೂ ಇತಿಹಾಸದಿಂದ ಬೇರ್ಪಡಿಸಲಾಗದಂತೆ ಕಲ್ಪನೆಯನ್ನು ವಾಸ್ತವಿಕತೆಯಿಂದ ಬೇರೆ ಮಾಡಲಾಗದಂತೆ ಪುರಾಣಗಳು ಹುಟ್ಟಿದವು. ಪುರಾತನ ಗ್ರೀಕರು ಕೇವಲ ಭೋಗ ಜೀವಿಗಳೂ ಆಗಿರಲಿಲ್ಲ, ವಿರಕ್ತರೂ ಆಗಿರಲಿಲ್ಲ. ಜೀವನ ಸುಖವು ಕೆಟ್ಟದು, ನೀತಿಬಾಹಿರವಾದುದು ಎಂದು ವಿಮುಖರಾಗಲು ಯತ್ನಿಸಲಿಲ್ಲ. ಆಧುನಿಕರಂತೆ ಸುಖಲೋಲುಪತೆಯೇ ಸರ್ವಸ್ವ ಎಂದು ಅದನ್ನೇ ಬೆನ್ನುಹತ್ತಿಯೂ ಹೋಗಲಿಲ್ಲ. ಯಾವ ಪ್ರತಿಬಂಧಕಗಳೂ ಇಲ್ಲದೆ ದೊಡ್ಡಮಾರ್ಗದಲ್ಲಿ ಜೀವನ ನಡೆಸಿದರು; ಯಾವ ಕೆಲಸಕ್ಕೆ ಕೈಹಾಕಿದರೂ ಪೂರ್ಣಶ್ರದ್ಧೆಯಿಂದ ಕಾರ್ಯ ನಿರ್ವಹಿಸುತ್ತಿದ್ದರು; ಮತ್ತು ಈ ರೀತಿಯಲ್ಲಿ ಹೇಗೋ ನಮ್ಮ ಇಂದಿನ ಸ್ಥಿತಿಗಿಂತ ಹೆಚ್ಚು ಉತ್ಸಾಹಿಗಳಿದ್ದಂತೆ ತೋರುತ್ತದೆ. ಭಾರತದಲ್ಲಿ ಸಹ ಅದೇ ಬಗೆಯ ಒಂದು ಜೀವನೋತ್ಸಾಹ ವಿದ್ದಂತೆ ನಮ್ಮ ಪ್ರಾಚೀನ ಸಾಹಿತ್ಯದಿಂದಲೂ ತಿಳಿಯುತ್ತದೆ. ಗ್ರೀಸಿನಲ್ಲಿ ಇದ್ದಂತೆ ಭಾರತದಲ್ಲಿ ಸಹ ಜೀವನದಲ್ಲಿ ಒಂದು ವಿರಕ್ತ ಭಾವವೂ ಇತ್ತು. ಆದರೆ ಅದು ಕೇವಲ ಸ್ವಲ್ಪ ಜನರಲ್ಲಿ ಮಾತ್ರ ಇತ್ತು, ಜನ ಸಾಮಾನ್ಯತೆಗೆ ಹರಡಲಿಲ್ಲ. ಜೈನ ಮತ್ತು ಬೌದ್ಧ ಧರ್ಮಗಳ ಪ್ರಭಾವದಿಂದ ಈ ಭಾವನೆಗೆ ವಿಶೇಷ ಪ್ರಾಮುಖ್ಯತೆ ದೊರೆತರೂ ಜನ ಜೀವನದ ಹಿನ್ನೆಲೆಯಲ್ಲಿ ಯಾವ ವಿಶೇಷ ಮಾರ್ಪಾಟೂ ಆಗಲಿಲ್ಲ.

ಭಾರತ ಮತ್ತು ಗ್ರೀಸ್ ಎರಡು ದೇಶಗಳಲ್ಲೂ ಜೀವನದ ವಾಸ್ತವಿಕತೆಯನ್ನು ಒಪ್ಪಿಕೊಂಡು ತುಂಬುಜೀವನ ನಡೆಸಿದರು. ಆದರೂ ಯಾವುದೋ ಒಂದು ಆಂತರಿಕ ಜೀವನದ ಪಾರಮ್ಯತೆಯಲ್ಲಿ ನಂಬಿಕೆಯನ್ನಿಟ್ಟಿದ್ದರು. ಇದರಿಂದ ಜಿಜ್ಞಾಸೆ ಮತ್ತು ಮೀಮಾಂಸೆಗೆ ಅವಕಾಶವಾಯಿತು. ಆದರೆ ಈ ವಿಚಾರದೃಷ್ಟಿಯು ವಾಸ್ತವಿಕ ಅನುಭವದ ಕಡೆಗೆ ಹೆಚ್ಚು ಗಮನ ಕೊಡಲಿಲ್ಲ. ಆದರೆ ಸ್ಪಷ್ಟ ಸತ್ಯಗಳೆಂದು ನಂಬಿದ ಕೆಲವು ಪ್ರಮಾಣಗಳ ಆಧಾರದ ಮೇಲೆ ತಾರ್ಕಿಕ ವಿಮರ್ಶೆಯು ಮುಂದು ವರಿಯಿತು. ವಿಜ್ಞಾನ ಪದ್ಧತಿಯ ಆರಂಭಕ್ಕೆ ಮೊದಲು ಎಲ್ಲ ಕಡೆಯಲ್ಲೂ ಸಾಮಾನ್ಯವಾಗಿ ಇದೇ ರೀತಿ ಇತ್ತು. ಪ್ರಾಯಶಃ ಈ ವಿಚಾರ ವಿಮರ್ಶೆಯು ಕೆಲವು ವಿದ್ವಾಂಸರಲ್ಲಿ ಮಾತ್ರ ನಡೆಯುತ್ತಿದ್ದಿರ ಬಹುದು. ಆದರೂ ಸಾಮಾನ್ಯ ಜನರ ಮೇಲೆ ಅದರ ಪ್ರಭಾವ ಬೀಳದೆ ಇರಲಿಲ್ಲ ಮತ್ತು ಅವರ ಸಾರ್ವಜನಿಕ ಸಭೆಗಳಲ್ಲಿ ಇತರ ಎಲ್ಲ ವಿಷಯಗಳನ್ನು ಚರ್ಚಿಸುತ್ತ ಇದ್ದಂತೆ ದಾರ್ಶನಿಕ ವಿಚಾರ ಗಳನ್ನೂ ಚರ್ಚಿಸುತ್ತಿದ್ದರು. ಈಗಲೂ ಮುಖ್ಯವಾಗಿ ಗ್ರಾಮಾಂತರಗಳಲ್ಲಿ ಕಂಡುಬರುವಂತೆ ಭಾರ ತೀಯ ಜೀವನವು ಮತೀಯ ಜೀವನವಾಗಿತ್ತು. ಜನರು ಸಂತೆಪೇಟೆಗಳಲ್ಲಿ, ದೇವಸ್ಥಾನ ಅಥವ ಮಸೀದಿಯ ಒಳಾಂಗಣದಲ್ಲಿ, ಬಾವಿಕಟ್ಟೆ, ಪಂಚಾಯತಿ ಮಂದಿರ ಅಥವ ಸಾರ್ವಜನಿಕ ಸಭಾಸ್ಥಾನ ಗಳಲ್ಲಿ ಸಭೆ ಸೇರಿ ದೈನಂದಿನ ವರ್ತಮಾನಗಳನ್ನೂ, ತಮ್ಮ ಅವಶ್ಯಕತೆಗಳನ್ನೂ ಚರ್ಚಿಸುತ್ತಿದ್ದರು. ಸಾರ್ವಜನಿಕ ಅಭಿಪ್ರಾಯ ಈ ರೀತಿ ರೂಪುಗೊಂಡು ಪ್ರಕಟವಾಗುತ್ತಿದ್ದಿತು. ಈ ಚರ್ಚೆಗಳಿಗೆ ಬೇಕಾದ ವಿರಾಮವೂ ಇತ್ತು.

ಆದರೂ ಗ್ರೀಕ್ ಸಂಸ್ಕೃತಿಯಲ್ಲಿ ಇತರ ಸಂಸ್ಕೃತಿಗಳಿಗಿಂತ ವಿಶೇಷವಾಗಿ ಕೆಲವು ಮಹಾ ಸಾಧನಗಳಿವೆ. ಪ್ರಾಯೋಗಿಕ ವಿಜ್ಞಾನದ ಆರಂಭದೆಸೆಯು ಬೆಳೆದದ್ದು ಗ್ರೀಸಿಗಿಂತ ಹೆಚ್ಚಾಗಿ ಅಲೆಕ್ಸಾಂಡ್ರಿಯ ಸುತ್ತಮುತ್ತಲಿನ ಹೆಲೆನಿಕ್ ಪ್ರಪಂಚದಲ್ಲಿ. ಕ್ರಿಸ್ತಪೂರ್ವ ೩೩೦ ರಿಂದ ೧೩೦ ರ ವರೆಗೆ ಎರಡು ಶತಮಾನಗಳ ಕಾಲದಲ್ಲಿ ವೈಜ್ಞಾನಿಕ ಪ್ರಗತಿ, ಯಂತ್ರೋಪಕರಣಗಳ ರಚನೆ ಬಹಳ ಮುಂದುವರಿಯಿತು. ಇದಕ್ಕೆ ಸರಿತೂಗುವ ಕಾಲವು ಭಾರತದ ಇತಿಹಾಸದಲ್ಲೆಲ್ಲೂ ಕಾಣುವುದಿಲ್ಲ. ಏಕೆ, ಹದಿನೇಳನೆಯ ಶತಮಾನದಿಂದೀಚೆಗೆ ಪುನಃ ವಿಜ್ಞಾನವು ದೊಡ್ಡ ಹೆಜ್ಜೆ ಇಡಲು ಆರಂಭಿಸುವ ವರೆಗೂ ಎಲ್ಲಿಯೂ ಅಂತಹ ಕಾಲವು ಕಾಣುವುದಿಲ್ಲ. ರೋಮನ್ ಚಕ್ರಾಧಿಪತ್ಯಕ್ಕೆ ವಿಶಾಲದೇಶ, ಗ್ರೀಕ್ ನಾಗರಿಕತೆಯ ಸಂಪರ್ಕ, ಅನೇಕ ಜನರ ಅನುಭವ ಮತ್ತು ಜ್ಞಾನ ಭಂಡಾರವನ್ನು ಸೂರೆ ಗೊಳ್ಳುವ ಅವಕಾಶ, ಇವೆಲ್ಲ ವಿಶೇಷವಾಗಿ ಇದ್ದರೂ, ವಿಜ್ಞಾನ, ಶೋಧನೆ ಮತ್ತು ಯಂತ್ರೋಪಕರಣ ರಚನೆಗೆ ಅಲ್ಲಿ ಯಾವ ಹೆಚ್ಚಿನ ಅವಕಾಶವೂ ದೊರೆಯಲಿಲ್ಲ. ಯೂರೋಪಿನ ಪುರಾಣ ಕಾಲದ ನಾಗರಿಕತೆಯು ಕುಸಿದು ಬಿದ್ದೊಡನೆ ವಿಜ್ಞಾನ ಜ್ಯೋತಿಯನ್ನು ಮಧ್ಯ ಯುಗದಲ್ಲಿ ಬೆಳಗುತ್ತ ಬಂದವರು ಅರಬ್ಬಿ ಜನರು.

ಸಮಾಜ ರಚನೆಯ ಜಟಿಲತೆ, ವ್ಯಾಪಾರಾಭಿವೃದ್ಧಿ ಮುಂತಾದ ಸಾಮಾಜಿಕ ಅವಶ್ಯಕತೆಗಳಿಂದ ಭಾರತದಲ್ಲಿ ಗಣಿತಶಾಸ್ತ್ರ, ಬೀಜಗಣಿತ, ಶೂನ್ಯದ ಉಪಯೋಗ, ಸಂಖ್ಯೆಯ ಸ್ಥಾನ ನಿರ್ದೇಶದಿಂದ ಬೆಲೆಯ ನಿರ್ಧಾರ ಮುಂತಾದ ಶೋಧನೆಗಳು ಮುಂದುವರಿದಂತೆಯೇ ಅಲೆಕ್ಸಾಂಡ್ರಿಯದ ಸುತ್ತಲು ನಡೆದ ವಿಜ್ಞಾನ ಚಟುವಟಿಕೆಗೆ ಮತ್ತು ಸಂಶೋಧನೆಗೆ ಸಹ ಆ ಕಾಲದ ಜನರ ಸಾಮಾಜಿಕ ಬೆಳೆವ ಣಿಗೆ, ಸಮುದ್ರಯಾನಗಳ ಅವಶ್ಯಕತೆಯೇ ಕಾರಣವಾಯಿತು. ಒಟ್ಟನಲ್ಲಿ ಪ್ರಾಚೀನ ಗ್ರೀಕರಲ್ಲಿ ಈ ವಿಜ್ಞಾನದೃಷ್ಟಿ ಇತ್ತೊ ಏನೋ. ಮನುಷ್ಯನು ಪ್ರಕೃತಿಯೊಡನೆ ಏಕೀಭವಿಸಿ ಸಮರಸತೆಯನ್ನು ಕಾಣುವುದೇ ಅವರ ದಾರ್ಶನಿಕ ದೃಷ್ಟಿ. ಈ ಸಾಂಪ್ರದಾಯಿಕ ದೃಷ್ಟಿಯೇ ಅವರ ಜೀವನದಲ್ಲೂ ಇದ್ದಿರಬೇಕು. ಗ್ರೀಸ್ ಮತ್ತು ಭಾರತಗಳೆರಡಕ್ಕೂ ಈ ಜೀವನ ದೃಷ್ಟಿ ಸಾಮಾನ್ಯವಾಗಿದೆ.

ಭಾರತದಂತೆ ಗ್ರೀಸ್‌ನಲ್ಲಿ ಸಹ ವರ್ಷವನ್ನು ಋತುಸಂಕ್ರಾಂತಿಯನ್ನು ಸೂಚಿಸುವ ನಾಡ ಹಬ್ಬಗಳಿಂದ ವಿಭಜನೆ ಮಾಡಿದ್ದರು. ಈ ರೀತಿ ಪ್ರಕೃತಿಯ ಸ್ವಭಾವಕ್ಕನುಗುಣವಾಗಿ ಮನುಷ್ಯ ಹೊಂದಿಕೊಳ್ಳುತ್ತಿದ್ದ. ಭಾರತದಲ್ಲಿ ಸಹ ವಸಂತಕಾಲವನ್ನು, ಸುಗ್ಗಿಯಕಾಲವನ್ನು ಸೂಚಿಸುವ

ಹಬ್ಬಗಳನ್ನು ಇನ್ನೂ ಆಚರಿಸುತ್ತಿದೇವೆ—ಮಾಗಿಯ ಕೊನೆಯನ್ನು ಸೂಚಿಸುವ ದೀಪೋತ್ಸವದ ದೀಪಾವಳಿ, ವಸಂತಾಗಮನವನ್ನು ಸೂಚಿಸುವ ಹೋಳಿಹಬ್ಬ ಮತ್ತು ಪುರಾಣ ಕಥೆಗಳ ಮಹಾನಾಯಕರ ವಿಷಯದ ಹಬ್ಬಗಳು. ಈ ಕೆಲವು ಹಬ್ಬಗಳಲ್ಲಿ ಈಗಲೂ ಜನರು ನೃತ್ಯ, ಸಂಗೀತಗಳಲ್ಲಿ ಮೈಮರೆಯುತ್ತಾರೆ, ನಾಡಹಾಡುಗಳು, ರಾಸಲೀಲೆ, ಕೃಷ್ಣ ಗೋಪಿಯರ ನೃತ್ಯ ಮುಂತಾದ ಜಾನಪದ ನೃತ್ಯಗಳಿವೆ.

ರಾಜ ಮನೆತನಗಳು ಮತ್ತು ಶ್ರೀಮಂತರಲ್ಲಿ ಕೆಲವರನ್ನು ಬಿಟ್ಟರೆ ಪ್ರಾಚೀನ ಭಾರತದಲ್ಲಿ ಸ್ತ್ರೀಯರು ಅವರುದ್ಧರಾಗಿರಲಿಲ್ಲ. ಆಗಿನಕಾಲದಲ್ಲಿ ಪ್ರಾಯಶಃ ಭಾರತಕ್ಕಿಂತ ಹೆಚ್ಚಾಗಿ ಗ್ರೀಸಿನಲ್ಲೇ ಸ್ತ್ರೀಪುರುಷರ ಪ್ರತ್ಯೇಕಜೀವನ ಹೆಚ್ಚು ಇತ್ತು. ಪ್ರಾಚೀನ ಭಾರತೀಯ ಸಾಹಿತ್ಯದಲ್ಲಿ ಪ್ರಸಿದ್ಧರೂ ಮಹಾವಿಜ್ಞಾನಿಗಳೂ ಆದ ಅನೇಕ ಸ್ತ್ರೀಯರ ಹೆಸರುಗಳಿವೆ. ಅವರಲ್ಲಿ ಕೆಲವರು ಸಾರ್ವಜನಿಕ ಚರ್ಚೆಗಳಲ್ಲಿ ಭಾಗವಹಿಸುತ್ತಿದ್ದರು. ಗ್ರೀಸ್‌ನಲ್ಲಿ ವಿವಾಹವು ಕೇವಲ ಒಂದು ಒಪ್ಪಂದದ ವಿಚಾರವಾಗಿತ್ತು. ಭಾರತದಲ್ಲಿ ಇನ್ನೂ ಅನೇಕ ಬಗೆಯ ವಿವಾಹಗಳ ಉಲ್ಲೇಖವಿದ್ದರೂ ವಿವಾಹವು ಒಂದು ಪವಿತ್ರ ವಿಧಿ.

ಗ್ರೀಕ್ ಸ್ತ್ರೀಯರಿಗೆ ಭಾರತದಲ್ಲಿ ಒಳ್ಳೆಯ ಸ್ವಾಗತವಿತ್ತು. ಪ್ರಾಚೀನ ನಾಟಕಗಳಲ್ಲಿ ಕಂಡು ಬರುವಂತೆ ರಾಜಸಭೆಯಲ್ಲಿ ಕಂಚುಕಿಯರು ಗ್ರೀಕ್ ಕನ್ಯೆಯರು. ಬೇರಿಗಾಜಾ (ಪಶ್ಚಿಮ ತೀರದ ಭಡೂಚ) ಬಂದರಿಗೆ ಗ್ರೀಸ್‌ನಿಂದ ಭಾರತಕ್ಕೆ ಆಮದಾಗಿ ಬರುತ್ತಿದ್ದ ಅಪರೂಪ ವಸ್ತುಗಳೆಂದರೆ "ಗಾನಕಲಾವಿದರಾದ ಹುಡುಗರು, ಸ್ಫುರದ್ರೂಪಿ ಕನ್ನೆಯರು." ಮೆಗಾಸ್ತನೀಸ್ ಮೌರ್ಯ ಚಕ್ರವರ್ತಿ ಚಂದ್ರಗುಪ್ತನ ಜೀವನವನ್ನು ವರ್ಣಿಸುತ್ತ "ರಾಜನ ಊಟಕ್ಕೆ ಅಡಿಗೆ ಮಾಡಿದ ಸ್ತ್ರೀಯರೇ ಬಡಿಸುತ್ತಿದ್ದರು. ಎಲ್ಲ ಭಾರತೀಯರೂ ಸಾಮಾನ್ಯವಾಗಿ ಉಪಯೋಗಿಸುತ್ತಿದ್ದಂತೆ ರಾಜನಿಗೆ ಅವರು ಮಧುವನ್ನೂ ಬಡಿಸುತ್ತಿದ್ದರು" ಎಂದು ಹೇಳಿದ್ದಾನೆ ಮಾದಕ ದ್ರವ್ಯಗಳಲ್ಲಿ ಕೆಲವಂತೂ ಗ್ರೀಸ್ ದೇಶಗಳಿಂದ ಅಥವ ಅವರ ಅಧೀನ ರಾಷ್ಟ್ರಗಳಿಂದ ಬಂದಿರಬೇಕು. ತಮಿಳು ಕವಿಯೊಬ್ಬ "ತಂಪಾದ ಸುವಾಸನೆಯುಳ್ಳ ಮಧುವನ್ನು 'ಯವನರು' (ಅಯೋನಿಯನರು ಅಥವ ಗ್ರೀಕರು) ತಮ್ಮ ಹಡಗುಗಳಲ್ಲಿ ತರುತ್ತಿದ್ದರು" ಎಂದು ಬರೆದಿದಾನೆ. ಒಂದು ಗ್ರೀಕ್ ಗ್ರಂಥದಲ್ಲಿ, ಪಾಟಲಿಪುತ್ರದ ದೊರೆಯೊಬ್ಬ (ಪ್ರಾಯಶಃ ಅಶೋಕನ ತಂದೆಯಾದ ಬಿಂದುಸಾರ) ಆಂಟಿಯೋಕಸ್‌ನಿಗೆ ಸಿಹಿ ಮಧು, ಒಣಗಿದ ಅಂಜೂರ ಮತ್ತು ಒಬ್ಬ ಸೋಫಿಸ್ಟ್ ದಾರ್ಶನಿಕ ಇವರನ್ನು ಕೊಂಡು ಕಳುಹಿಸಲು ಬರೆದಿದ್ದ ಎಂದು ಹೇಳಿದೆ. ಆಂಟಿಯೋಕಸ್ "ಅಂಜೂರ ಮತ್ತು ದ್ರಾಕ್ಷಾರಸವನ್ನು ಕಳುಹಿಸುತ್ತೇವೆ. ಗ್ರೀಕ್ ಶಾಸನದ ಪ್ರಕಾರ ದಾರ್ಶನಿಕನ ವಿಕ್ರಯಕ್ಕೆ ಅವಕಾಶವಿಲ್ಲ" ಎಂದು ಉತ್ತರಕೊಟ್ಟನಂತೆ.

ಗ್ರೀಕ್ ಸಾಹಿತ್ಯದಲ್ಲಿ ಕಂಡುಬರುವಂತೆ ಸಮಲಿಂಗ ರತಿಗೆ ನಿಷೇಧವಿರಲಿಲ್ಲ. ನಿಶ್ಚಯವಾಗಿ ನೋಡಿದರೆ ಒಂದು ಬಗೆಯ ಮೆಚ್ಚುಗೆಯೂ ಇದೆ. ಪ್ರಾಯಶಃ ಯೌವನದಲ್ಲಿ ಸ್ತ್ರೀಪುರುಷರ ಪ್ರತ್ಯೇಕ ಜೀವನದ ಪರಿಣಾಮವಿದ್ದರೂ ಇರಬಹುದು. ಇರಾಣದಲ್ಲಿಯೂ ಈ ಪದ್ಧತಿಯು ಆಚರಣೆಯಲ್ಲಿತ್ತು. ಪಾರ್ಸಿ ಸಾಹಿತ್ಯದಲ್ಲಿ ಇದಕ್ಕೆ ಅನೇಕ ನಿದರ್ಶನಗಳಿವೆ. ಪ್ರಿಯ ವ್ಯಕ್ತಿಯನ್ನು ಸಖನೆಂದು ಬಣ್ಣಿಸುವುದು ಒಂದು ಸಾಹಿತ್ಯ ಪದ್ಧತಿ ಅಥವ ಸಂಪ್ರದಾಯವಿದ್ದಂತೆ ತೋರುತ್ತದೆ. ಸಂಸ್ಕೃತ ಸಾಹಿತ್ಯಕ್ಕೆ ಇದು ತೀರ ಅಪರಿಚಿತ. ಸಮಲಿಂಗರತಿ ಭಾರತದಲ್ಲಿ ಇರಲೂ ಇಲ್ಲ; ಅದಕ್ಕೆ ಪುರಸ್ಕಾರವೂ ಸಿಗಲಿಲ್ಲ.

ಗ್ರೀಸ್ ಮತ್ತು ಭಾರತದ ಸಂಬಂಧವು ಅತಿ ಪ್ರಾಚೀನ ಇತಿಹಾಸ ಕಾಲದಿಂದಲೂ ನಡೆದು ಬಂದಿದೆ. ಅನಂತರ ಗ್ರೀಸಿನ ಅಧೀನಕ್ಕೆ ಬಂದ ಪಶ್ಚಿಮ ಏಷ್ಯದ ದೇಶಗಳಿಗೂ ಭಾರತಕ್ಕೂ ಇನ್ನೂ ಹೆಚ್ಚಿನ ಸಂಬಂಧ ಬೆಳೆಯಿತು. ಮಧ್ಯ ಇಂಡಿಯದ ಉಜ್ಜಯಿನಿಯ ಖಗೋಳ ಶಾಸ್ತ್ರದ ಮಹಾ ಸಮೀಕ್ಷಾ ಮಂದಿರಕ್ಕೂ ಈಜಿಪ್ಟ್ ದೇಶದ ಅಲೆಕ್ಸಾಂಡ್ರಿಯದ ಸಮೀಕ್ಷಾಮಂದಿರಕ್ಕೂ ಸಂಬಂಧ ವಿತ್ತಂತೆ. ಈ ಮಹಾ ವ್ಯವಹಾರಕಾಲದಲ್ಲಿ ಜ್ಞಾನ ಮತ್ತು ಸಂಸ್ಕೃತಿಗಳ ಪ್ರಪಂಚದಲ್ಲಿ ಸಹ ಈ

ಎರಡು ಪ್ರಾಚೀನ ನಾಗರಿಕ ಜನಾಂಗಗಳ ಮಧ್ಯೆ ಎಷ್ಟೋ ವ್ಯವಹಾರ ನಡೆದಿರಬೇಕು. ಯಾವುದೋ ಒಂದು ಗ್ರೀಕ್ ಗ್ರಂಥದಲ್ಲಿ ಕೆಲವು ಭಾರತೀಯ ವಿದ್ವಾಂಸರು ಹೋಗಿ ಸಾಕ್ರೆಟೀಸ್‌ನನ್ನು ಕಂಡು ಪ್ರಶ್ನೆಮಾಡಿದಂತೆ ಪ್ರತೀತಿ ಇದೆ ಎಂದು ಬರೆದಿದೆಯಂತೆ. ಪೈಥಾಗೊರಾಸ್‌ನ ದಾರ್ಶನಿಕ ದೃಷ್ಟಿಗೆ ಭಾರತೀಯ ದರ್ಶನವು ಬಹುಮಟ್ಟಿಗೆ ಕಾರಣ. ಪ್ರೊ|| ಹೆಚ್. ಜಿ. ರಾಬಿನ್‌ಸನ್ "ಪೈಥಾಗೊರಾಸ್ ಪಂಥದವರು ಬೋಧಿಸುತ್ತಿದ್ದ ಧಾರ್ಮಿಕ, ದಾರ್ಶನಿಕ, ಗಣಿತಶಾಸ್ತ್ರದ ತತ್ವಗಳೆಲ್ಲ ಕ್ರಿಸ್ತಪೂರ್ವ ಆರನೆಯ ಶತಮಾನದಲ್ಲೇ ಭಾರತೀಯರಿಗೆ ತಿಳಿದಿತ್ತು" ಎಂದು ಹೇಳಿದ್ದಾನೆ. ಯೂರೋಪಿನ ಕಾವ್ಯ ಪಂಡಿತನಾದ ಅರ್ವಿಕ್‌ನು ಪ್ಲೇಟೋನ 'ದಿ ರಿಪಬ್ಲಿಕ್' ಎಂಬ ಗ್ರಂಥಕ್ಕೆ ಭಾರತೀಯ ದರ್ಶನದ ಆಧಾರದ ಮೇಲೆ ಟೀಕೆ ಮಾಡಿದ್ದಾನೆ. ಗ್ನಾಸ್ಟಿಸಿಸಂ ಎಂಬ ಅಧ್ಯಾತ್ಮ ರಹಸ್ಯಜ್ಞಾನ ವಾದವು ಗ್ರೀಕರ ಪ್ಲೇಟೊದರ್ಶನವನ್ನೂ ಭಾರತೀಯದರ್ಶನವನ್ನೂ ಬೆಸೆಯಲು ಮಾಡಿದ ನಿರ್ದಿಷ್ಟ ಪ್ರಯತ್ನವಾಗಿದೆ. ಪ್ರಾಯಶಃ ಕ್ರಿಸ್ತಶಕೆಯ ಆದಿಭಾಗದಲ್ಲಿ ಟೈಯಾನ ನಗರದ ದಾರ್ಶನಿಕನಾದ ಅಪಲೋನಿಯಸ್ ವಾಯವ್ಯ ಭಾರತದ ತಕ್ಷಶಿಲೆ ವಿಶ್ವವಿದ್ಯಾನಿಲಯವನ್ನು ಭೇಟಿಮಾಡಿರಬೇಕು.

ಮಧ್ಯ ಏಷ್ಯದ ಜೋರ್ಸಾಸ್‌ನಲ್ಲಿ ಹುಟ್ಟಿದ ಮಹಾಯಾತ್ರಿಕನೂ ಜ್ಞಾನಿಯೂ ಆದ ಪರ್ಷಿಯದ ಆಲ್ಬೆರೂನಿ ಕ್ರಿಸ್ತಶಕ ಹನ್ನೊಂದನೆಯ ಶತಮಾನದಲ್ಲಿ ಭಾರತಕ್ಕೆ ಬಂದನು. ಇಸ್ಲಾಂ ಧರ್ಮದ ಆರಂಭದೆಸೆಯಲ್ಲಿ ಬಾಗದಾದಿನಲ್ಲಿ ಆಗಲೇ ಜನಮನ್ನಣೆ ಪಡೆದಿದ್ದ ಗ್ರೀಕ್ ತತ್ವಶಾಸ್ತ್ರವನ್ನು ಅಭ್ಯಾಸಮಾಡಿದ್ದನು. ಭಾರತಕ್ಕೆ ಬಂದೊಡನೆ ಭಾರತೀಯ ದರ್ಶನವನ್ನು ಅಭ್ಯಾಸಮಾಡಲು ಸಂಸ್ಕೃತವನ್ನು ಕಲಿತುಕೊಂಡನು. ಎರಡು ದರ್ಶನಗಳಿಗೂ ಇರುವ ಸಾಮ್ಯವನ್ನು ಕಂಡು ವಿಸ್ಮಯ ಗೊಂಡನು. ಭಾರತದ ಮೇಲೆ ಅವನು ಬರೆದ ಗ್ರಂಥದಲ್ಲಿ ಎರಡನ್ನೂ ಹೋಲಿಸಿ ಬರೆದಿದ್ದಾನೆ. ಗ್ರೀಕರ ಭೂಗೋಳಶಾಸ್ತ್ರ ರೋಮನರ ಖಗೋಳಶಾಸ್ತ್ರಗಳ ಮೇಲೆ ಇದ್ದ ಸಂಸ್ಕೃತ ಗ್ರಂಥಗಳನ್ನೂ ಉಲ್ಲೇಖಿಸಿದ್ದಾನೆ.

ಒಂದರಮೇಲೊಂದು ಪ್ರಭಾವ ಬೀರಿದರೂ ತಮ್ಮ ಅಸ್ತಿತ್ವವನ್ನುಳಿಸಿಕೊಂಡು ತಮ್ಮ ತಮ್ಮ ವೈಶಿಷ್ಟ್ಯ ಮಾರ್ಗದಲ್ಲಿ ಮುಂದುವರಿಯಲು ಗ್ರೀಕ್ ಮತ್ತು ಭಾರತೀಯ ನಾಗರಿಕತೆಗಳೆರಡಕ್ಕೂ ಅಪಾರಶಕ್ತಿಯಿತ್ತು. ಇತ್ತೀಚೆಗೆ ಒಳ್ಳೆಯದೆಲ್ಲಕ್ಕೂ ಗ್ರೀಸ್ ಅಥವ ರೋಮ್ ಮೂಲ ಎಂದು ಹೇಳುವ ಸ್ವಭಾವ ಕಡಿಮೆಯಾಗುತ್ತಿದೆ. ಏಷ್ಯದ ಆದರಲ್ಲೂ ಮುಖ್ಯವಾಗಿ ಇಂಡಿಯದ ಪಾತ್ರಕ್ಕೆ ಪ್ರಾಶಸ್ತ್ಯದೊರೆಯುತ್ತಿದೆ. ಪ್ರೊಫೆಸರ್ ಟಾರ್ನ್ "ವಿಶಾಲ ದೃಷ್ಟಿಯಿಂದ ನೋಡಿದರೆ ಗ್ರೀಸಿನಿಂದ ಏಷ್ಯ ತೆಗೆದುಕೊಂಡದ್ದು ಬಾಹ್ಯ ವಿಷಯಗಳನ್ನು ಮಾತ್ರ; ತಿರುಳು ಅದಕ್ಕೆ ಬೇಕಿರಲಿಲ್ಲ—ನಾಗರಿಕ ಸಂಸ್ಥೆಗಳನ್ನು ಮಾತ್ರ ತೆಗೆದುಕೊಂಡಿತು—ಅಂತಃಶಕ್ತಿಯನ್ನೆಂದೂ ತೆಗೆದುಕೊಳ್ಳಲಿಲ್ಲ. ಏಕೆಂದರೆ ಅಂತಃ ಶಕ್ತಿಯಲ್ಲಿ ಗ್ರೀಕರಿಗಿಂತ ತಾನು ಮುಂದು ಎಂಬ ಭಾವನೆ ಏಷ್ಯಕ್ಕಿತ್ತು. ಆ ರೀತಿ ಏಷ್ಯ ಮುಂದೆ ಇದ್ದುದೂ ನಿಜ" ಎಂದಿದ್ದಾನೆ. ಪುನಃ "ಭಾರತೀಯ ನಾಗರಿಕತೆಯು ಗ್ರೀಕ್ ನಾಗರಿಕತೆ ಯೊಂದಿಗೆ ಸರಿಸಮಾನತೆಯಿಂದ ಪೈಪೋಟಿ ನಡೆಸುವಷ್ಟು ಶಕ್ತಿಯುತವಿತ್ತು. ಆದರೆ ಧಾರ್ಮಿಕ ವಿಷಯ ಒಂದು ಬಿಟ್ಟರೆ ಇತರ ವಿಷಯಗಳಲ್ಲಿ ಬ್ಯಾಬಿಲಾನಿಯರ್ದಂತೆ ಪ್ರಭಾವ ಬೀರಲು ಶಕ್ತವಾಗ ಲಿಲ್ಲ. ಆದರೂ ಕೆಲವು ವಿಷಯಗಳಲ್ಲಿ ಭಾರತೀಯ ಪ್ರಭಾವವೇ ಹೆಚ್ಚು ಇತ್ತು ಎಂದು ಊಹಿಸಲು ತಕ್ಕಷ್ಟು ಕಾರಣಗಳಿವೆ." ಬುದ್ಧನ ವಿಗ್ರಹ ಒಂದನ್ನು ಬಿಟ್ಟರೆ ಗ್ರೀಕರೂ ಭಾರತೀಯ ಇತಿಹಾಸವೂ ಈಗ ಹೇಗೆ ಇದೆಯೋ ಹಾಗೇ ಇರುತ್ತಿತ್ತು" ಎಂದಿದ್ದಾನೆ.

ಭಾರತಕ್ಕೆ ವಿಗ್ರಹಾರಾಧನೆ ಗ್ರೀಸ್‌ದೇಶದಿಂದ ಬಂದಿರುವುದು ಒಂದು ಕೌತುಕದ ವಿಷಯ. ವೇದ ಧರ್ಮದಲ್ಲಿ ಯಾವ ಬಗೆಯ ವಿಗ್ರಹಗಳಿಗೂ, ಪ್ರತಿಮಾ ಪೂಜೆಗೂ ಅವಕಾಶವಿಲ್ಲ. ದೇವರುಗಳಿಗೆ ಯಾವ ದೇವಸ್ಥಾನಗಳೂ ಇರಲಿಲ್ಲ. ಪ್ರಾಯಶಃ ಭಾರತದ ಪ್ರಾಚೀನ ಧರ್ಮಗಳಲ್ಲಿ ವಿಗ್ರಹಾರಾಧ ನೆಯ ಗುರುತು ಅಲ್ಲಲ್ಲಿ ಕಾಣಬಹುದು. ಆದರೂ ಅದು ಹೆಚ್ಚು ಬಳಕೆಯಲ್ಲಿರಲಿಲ್ಲ. ಬೌದ್ಧ ಧರ್ಮದ ಆರಂಭದಲ್ಲಿ ವಿಗ್ರಹಾರಾಧನೆಗೆ ಬಹಳ ವಿರೋಧವಿತ್ತು. ಬುದ್ಧನ ವಿಗ್ರಹಗಳನ್ನೂ

ಪ್ರತಿಮೆಗಳನ್ನೂ ಮಾಡಲಾಗದೆಂದು ನಿಷೇಧವೇ ಇತ್ತು. ಆದರೆ ಆಫ್ಘಾನಿಸ್ಥಾನ ಮತ್ತು ಗಡಿ ದೇಶಗಳಲ್ಲಿ ಗ್ರೀಕರ ಕಲೆಯು ಪ್ರಭಾವ ಹೆಚ್ಚಾಗಿತ್ತು. ಕ್ರಮೇಣ ಭಾರತಕ್ಕೂ ಹರಡಿತು. ಆದರೂ ಬುದ್ಧನ ವಿಗ್ರಹಗಳನ್ನು ಆರಂಭದಲ್ಲಿ ಮಾಡಲಿಲ್ಲ. ಬುದ್ಧನ ಹಿಂದಿನ ಅವತಾರಗಳೆಂಬ ಬೋಧಿಸತ್ವದ 'ಅಪೋಲೊ' ಮಾದರಿಯ ವಿಗ್ರಹಗಳು ಮಾತ್ರ ಹುಟ್ಟಿದವು. ಅನಂತರ ಬುದ್ಧನ ಪ್ರತಿಮೆಗಳು, ವಿಗ್ರಹಗಳೇ ಬರಲಾರಂಭಿಸಿದವು. ವೇದ ಧರ್ಮದಲ್ಲಿ ವಿಗ್ರಹಾರಾಧನೆ ಬಾರದಿದ್ದರೂ ಹಿಂದೂ ಧರ್ಮದ ಕೆಲವು ರೂಪಗಳಲ್ಲಿ ವಿಗ್ರಹಾರಾಧನೆಗೆ ಪ್ರೋತ್ಸಾಹ ದೊರೆಯಿತು. ಹಿಂದೂಸ್ಥಾನಿ ಮತ್ತು ಪಾರ್ಸಿಭಾಷೆಯಲ್ಲಿ ಪ್ರತಿಮೆ ಅಥವ ವಿಗ್ರಹಕ್ಕೆ ಈಗಲೂ ಬುತ್ (ಪುತ್) ಎಂದು ಇದೆ. 'ಬುತ್' ಶಬ್ದ 'ಬುದ್ಧ' ಶಬ್ದದಿಂದ ಹುಟ್ಟಿದುದು.

ಮಾನವನ ಮನಸ್ಸು ಜೀವನದಲ್ಲಿ, ಪ್ರಕೃತಿಯಲ್ಲಿ, ವಿಶ್ವದಲ್ಲಿ ಒಂದು ವಿಧವಾದ ಅದ್ವೈತವನ್ನು ಕಾಣಲು ಹಾತೊರೆಯುತ್ತಿರುವಂತೆ ತೋರುತ್ತದೆ. ಆ ಆಶೆ ಸಾಧುವಿರಲಿ, ಅಸಾಧುವಿರಲಿ ಮನಸ್ಸಿನ ಮುಖ್ಯ ಆಶೆ ಫಲಿಸಬೇಕು. ಪ್ರಾಚೀನಕಾಲದ ದಾರ್ಶನಿಕರು ಈ ಅನ್ವೇಷಣೆಯಲ್ಲೇ ನಿರತರಾಗಿದ್ದರು. ಇಂದಿನ ವಿಜ್ಞಾನಿಗಳೂ ಅದೇ ಆಶೆಯಿಂದ ಮುಂದುವರಿಯುತ್ತಿದಾರೆ. ನಮ್ಮ ಎಲ್ಲ ಕಾರ್ಯರಚನೆ, ಯೋಜನೆ, ಶಿಕ್ಷಣದ ಧ್ಯೇಯ, ಸಾಮಾಜಿಕ, ರಾಜಕೀಯ ರಚನೆಗಳಿಗೆ ಹಿನ್ನೆಲೆ ಈ ಐಕ್ಯತೆಯು ಮತ್ತು ಸಮರಸತೆಯ ಅನ್ವೇಷಣೆ. ಈಗ ಕೆಲವು ಮಹಾ ವಿದ್ವಾಂಸರು, ಮತ್ತು ದಾರ್ಶನಿಕರು ಈ ಮೂಲ ಭಾವನೆ ಎಲ್ಲ ಸುಳ್ಳು. ಈ ಆಕಸ್ಮಿಕ ವಿಶ್ವದಲ್ಲಿ ಯಾವ ನಿಯಮವೂ ಇಲ್ಲ, ಯಾವ ಏಕತ್ವವೂ ಇಲ್ಲ ಎಂದು ಹೇಳುತ್ತಿದಾರೆ. ಅದರಲ್ಲಿ ಸತ್ಯಾಂಶವಿದ್ದರೂ ಇರಬಹುದು. ಆದರೂ ಈ ತಪ್ಪುಭಾವನೆಯಿಂದ ಸಹ—ಒಂದು ವೇಳೆ ತಪ್ಪೇ ಇದ್ದರೆ—ಭಾರತ ಗ್ರೀಕ್ ಮತ್ತು ಇತರ ಕಡೆಗಳಲ್ಲಿ ಈ ಏಕತ್ವದ ಅನ್ವೇಷಣೆಯಿಂದ ಉತ್ತಮ ಫಲ ದೊರೆಯಿತು ಮತ್ತು ಜೀವನದಲ್ಲಿ ಒಂದ ಸಮರಸತೆ, ಸಮತೋಲನ ಮತ್ತು ಪರಿಪೂರ್ಣತೆ ಬಂದಿತೆಂಬುದು ನಿರ್ವಿವಾದ.

## ೮. ಪ್ರಾಚೀನ ಭಾರತದ ನಾಟಕ ಕಲೆ

ಯೂರೋಪಿಯನ್‌ರು ಪುರಾತನ ಭಾರತೀಯ ನಾಟಕಗಳನ್ನು ಕಂಡೊಡನೆ ಅವುಗಳೆಲ್ಲ ಗ್ರೀಕ್ ನಾಟಕದಿಂದ ಉಗಮವಾಗಿರಬೇಕು ಅಥವ ಗ್ರೀಕ್ ನಾಟಕದ ಪ್ರಭಾವ ಅವುಗಳ ಮೇಲೆ ಬಹುಮಟ್ಟಿಗೆ ಬಿದ್ದಿರಬೇಕು ಎಂದು ಸಿದ್ಧಾಂತಮಾಡತೊಡಗಿದರು. ಅಲ್ಲಿನವರೆಗೆ ಪ್ರಾಚೀನ ಭಾರತೀಯ ನಾಟಕಗಳು ಯಾವುವೂ ದೊರೆತಿರಲಿಲ್ಲವಾದ್ದರಿಂದಲೂ ಮತ್ತು ಅಲೆಗ್ಸಾಂಡರನ ದಂಡಯಾತ್ರೆಯ ನಂತರ ಭಾರತದ ಗಡಿಯಲ್ಲಿ ಗ್ರೀಕ್ ರಾಜ್ಯಗಳು ಸ್ಥಾಪಿತವಾದ್ದರಿಂದಲೂ ಈ ವಾದಕ್ಕೆ ಸ್ವಲ್ಪ ಅವಕಾಶವಿತ್ತು. ಅನೇಕ ಶತಮಾನಗಳ ಕಾಲ ಈ ರಾಜ್ಯಗಳು ಬಾಳಿದವು. ಆಗ ಗ್ರೀಕ್ ನಾಟಕಗಳ ಪ್ರದರ್ಶನಗಳೂ ನಡೆದಿರಬೇಕು. ಯೂರೋಪಿಯನ್ ವಿದ್ವಾಂಸರು ಹತ್ತೊಂಭತ್ತನೆಯ ಶತಮಾನದಲ್ಲೆಲ್ಲ ಈ ಪ್ರಶ್ನೆಯನ್ನು ಚರ್ಚೆಮಾಡಿ ಸೂಕ್ಷ್ಮವಿಚಕ್ಷಣೆಮಾಡಿದರು. ಭಾರತೀಯ ರಂಗಮಂಟಪವು ತನ್ನ ಹುಟ್ಟಿನಲ್ಲಿ, ಆ ಹುಟ್ಟಿನ ಹಿನ್ನೆಲೆಯ ಭಾವನೆಯಲ್ಲಿ ಮತ್ತು ಬೆಳವಣಿಗೆಯಲ್ಲಿ ಪೂರ್ಣ ಸ್ವತಂತ್ರವಾಗಿತ್ತೆಂದು ಈಗ ಸಾಮಾನ್ಯವಾಗಿ ಎಲ್ಲರೂ ಒಪ್ಪುತ್ತಾರೆ. ಅದರ ಆದಿಯನ್ನು ಋಗ್ವೇದದ ಕೆಲವು ನಾಟಕೀಯ ಪ್ರಾರ್ಥನೆಗಳಲ್ಲಿ, ಸಂಭಾಷಣೆಗಳಲ್ಲಿ ಕಾಣಬಹುದು. ರಾಮಾಯಣ ಮತ್ತು ಮಹಾಭಾರತಗಳಲ್ಲಿ ನಾಟಕದ ಉಲ್ಲೇಖವಿದೆ. ಕೃಷ್ಣನ ಕಥೆಯ ಗೀತೆಗಳು, ಸಂಗೀತ ಮತ್ತು ನಾಟ್ಯಗಳಿಂದ ಆರಂಭವಾಯಿತು. ಕ್ರಿಸ್ತಪೂರ್ವ ಆರು ಮತ್ತು ಏಳನೆಯ ಶತಮಾನಗಳಲ್ಲಿದ್ದ ಮಹಾವೈಯ್ಯಾಕರಣಿಯಾದ ಪಾಣಿನಿಯು ನಾಟಕದ ಕೆಲವು ರೂಪಭೇದಗಳನ್ನು ತಿಳಿಸುತ್ತಾನೆ.

ರಂಗಮಂಟಪದ ಕಲೆಯ ಮೇಲೆ ಬರೆದ ಒಂದು ದೊಡ್ಡ ಗ್ರಂಥವು ನಾಟ್ಯಶಾಸ್ತ್ರ—ಕ್ರಿಸ್ತಶಕ ಮೂರನೆಯ ಶತಮಾನದಲ್ಲಿ ಹುಟ್ಟಿದರೂ ಅದು ಅದೇ ವಿಷಯದ ಮೇಲೆ ಬರೆದ ಹಿಂದಿನ ಅನೇಕ ಗ್ರಂಥಗಳ ಆಧಾರದ ಮೇಲೆ ಬರೆದದ್ದು. ನಾಟ್ಯಕಲೆಯು ಪೂರ್ಣ ಪ್ರಬುದ್ಧಮಾನಕ್ಕೆ ಬಂದು, ಸಾರ್ವ

ಜನಿಕ ಪ್ರದರ್ಶನಗಳು ಸರ್ವಸಾಮಾನ್ಯವಾದಾಗ ಮಾತ್ರ ಅಂತಹ ಗ್ರಂಥವು ಹೊರಬೀಳಲು ಸಾಧ್ಯ. ಎಷ್ಟೋ ಗ್ರಂಥರಾಶಿಯು ಅದರ ಮೊದಲೇ ಹುಟ್ಟಿರಬೇಕು ಮತ್ತು ಅದರ ಹಿಂದೆ ಅನೇಕ ಶತಮಾನಗಳ ಕ್ರಮಾನುಗತ ಪ್ರಗತಿಯಾಗಿರಬೇಕು. ಚೋಟಾನಾಗಪುರದ ರಾಮಘಡ ಬೆಟ್ಟಗಳಲ್ಲಿ ಕ್ರಿಸ್ತಪೂರ್ವ ಎರಡನೆಯ ಶತಮಾನದಲ್ಲಿದ್ದು ಭೂಗತವಾಗಿದ್ದ ಒಂದು ಪುರಾತನ ನಾಟಕಮಂದಿರವು ದೊರೆತಿದೆ. ನಾಟ್ಯಶಾಸ್ತ್ರದಲ್ಲಿ ವರ್ಣಿತವಾಗಿರುವ ನಾಟಕ ಮಂದಿರಗಳ ಸಾಮಾನ್ಯ ವರ್ಣನೆಯನ್ನು ಅನುಸರಿಸಿಯೇ ಈ ನಾಟಕ ಮಂದಿರವಿದೆ.

ಕೆಲವು ವಿದ್ವಾಂಸರು ಸಂಸ್ಕೃತ ನಾಟಕದ ಉತ್ಕ್ರಾಂತಿ ಕಾಲವು ಐದನೆಯ ಶತಮಾನವೆಂದು ಅಭಿಪ್ರಾಯಪಟ್ಟರೂ ಕ್ರಿಸ್ತಪೂರ್ವ ಮೂರನೆಯ ಶತಮಾನದ ಹೊತ್ತಿಗೆ ಸಂಸ್ಕೃತ ನಾಟಕವು ಒಂದು ಸಂಪೂರ್ಣ ಸ್ವರೂಪವನ್ನು ತಾಳಿತ್ತೆಂದು ನಂಬಲಾಗಿದೆ. ನಮಗೆ ದೊರೆತಿರುವ ನಾಟಕಗಳಲ್ಲಿ ಪೂರ್ವದ ಕವಿಗಳ ಮತ್ತು ಇನ್ನೂ ದೊರೆಯದ ಅವರ ನಾಟಕಗಳ ಪ್ರಶಂಸೆ ಇದೆ. ಈಚಿನ ಅನೇಕ ನಾಟಕಕರ್ತರು ಸ್ಮರಿಸಿ ಗೌರವಿಸಿರುವ ಭಾಸಕವಿ ಅಂತಹ ಕವಿಗಳಲ್ಲೊಬ್ಬನಾಗಿದ್ದ. ಈ ಶತಮಾನದ ಆದಿಯಲ್ಲಿ ಅವನ ಹದಿಮೂರು ನಾಟಕಗಳು ದೊರೆತವು. ಪ್ರಾಯಶಃ ಅದುವರೆಗೆ ದೊರೆತಿರುವ ಸಂಸ್ಕೃತ ನಾಟಕಗಳಲ್ಲಿ ಅತಿ ಹಿಂದಿನವೆಂದರೆ ಕ್ರಿಸ್ತಾಬ್ಧಿಯ ಸಮಿಾಪದಲ್ಲಿ ಅಥವ ಆದಿಭಾಗದಲ್ಲಿದ್ದ ಅಶ್ವಘೋಷನ ನಾಟಕಗಳು. ಇವು ತಾಳೆಯಗರಿಯ ಮೇಲೆ ಬರೆದ ಹಸ್ತಪ್ರತಿಯ ಚೂರುಗಳು ಮಾತ್ರ. ಗೋಬಿ ಮರುಭೂಮಿಯ ಅಂಚಿನಲ್ಲಿರುವ ತುರ್ಫಾನ್ ನಗರದಲ್ಲಿ ಅವು ಸಿಕ್ಕಿದ್ದು ಒಂದು ವಿಚಿತ್ರ. ಅಶ್ವಘೋಷನು ಒಬ್ಬ ಬೌದ್ಧ ಸಾಧು. ಇಂಡಿಯ, ಚೀನಾ ಮತ್ತು ಟಿಬೆಟ್ ದೇಶಗಳಲ್ಲಿ ಬಹುಕಾಲ ಜನಪ್ರಿಯವಾಗಿದ್ದು ಪ್ರಸಿದ್ಧವಾಗಿದ್ದ 'ಬುದ್ಧಚರಿತ' ಎಂಬ ಜೀವನ ಚರಿತೆಯನ್ನು ಬರೆದಿದ್ದ. ಹಿಂದಿನ ಕಾಲದ ಚೀನೀ ಭಾಷಾಂತರ ಒಂದನ್ನು ಒಬ್ಬ ಭಾರತೀಯ ವಿದ್ವಾಂಸನು ಮಾಡಿದ್ದಾನೆ.

ಪ್ರಾಚೀನ ಭಾರತ ನಾಟಕಕಲೆಯ ಇತಿಹಾಸಕ್ಕೆ ಈ ಸಂಶೋಧನೆಗಳು ಹೊಸದೊಂದು ಯಥಾ ದೃಷ್ಟಿಯನ್ನು ಕೊಟ್ಟಿವೆ; ಪ್ರಾಯಶಃ ಹೊಸ ಶೋಧನೆಗಳು ಗಳಿಕೆಗಳು ಭಾರತೀಯ ಸಂಸ್ಕೃತಿಯ ಈ ಮನಮೋಹಕ ಬೆಳವಣಿಗೆಯ ಮೇಲೆ ಹೊಸ ಬೆಳಕನ್ನು ಬೀರಬಹುದು. ಏಕೆಂದರೆ ಸಿಲ್ವೆನ್ ಲೆವಿಯವರು ತಮ್ಮ ಭಾರತೀಯ ರಂಗಮಂಟಪ ಎಂಬ ಗ್ರಂಥದಲ್ಲಿ "ಈ ನಾಟಕಗಳಲ್ಲಿ ಮಾನವ ನಾಗರಿಕತೆಯ ಉದಯದ ಮಹಾ ವ್ಯಕ್ತಿತ್ವವು ಚಿತ್ರಿತವಾಗಿದೆ. ಉತ್ತಮ ಜೀವನದ ದೃಶ್ಯವನ್ನು ಅಲ್ಲಿ ಕಾಣುತ್ತೇವೆ. ಬಹಳ ಚಮತ್ಕಾರರೂಪದಲ್ಲಿ, ಗಂಭೀರ ಸಂಭಾಷಣೆಯಲ್ಲಿ, ರಸಘಟ್ಟಗಳಂತೆ ಈ ನಾಟಕಗಳನ್ನು ನೋಡುತ್ತೇವೆ. ಈ ನಾಟಕಗಳಲ್ಲಿ ಚಿತ್ರಿತವಾಗಿರುವ ಭಾರತೀಯ ಸಂಪ್ರದಾಯ ಗಳ, ಸಿದ್ಧಾಂತಗಳ ಮತ್ತು ಸಂಸ್ಥೆಗಳ ಸ್ವರೂಪದರ್ಶನದಿಂದ ಅಂದಿನ ಭಾರತೀಯ ಜೀವನದ ಅಮೂಲ್ಯ ಚಿತ್ರವನ್ನು ಈ ನಾಟಕಕಲೆಯಲ್ಲಿ ಚಿತ್ರ ವಿನ್ಯಾಸದಲ್ಲಿ ಕಾಣುತ್ತೇವೆ" ಎಂದು ಹೇಳಿದ್ದಾರೆ.

ಮೊಟ್ಟಮೊದಲು ಪುರಾತನ ಭಾರತೀಯ ನಾಟಕದ ವಿಷಯ ಯೂರೋಪಿಗೆ ಪರಿಚಯವಾದದ್ದು ೧೭೮೯ ರಲ್ಲಿ, ಸರ್ ವಿಲಿಯಂ ಜೋನ್ಸ್‌ನ ಕಾಳಿದಾಸನ ಶಾಕುಂತಲ ನಾಟಕದ ಅನುವಾದದಿಂದ. ಈ ಹೊಸ ಶೋಧನೆಯಿಂದ ಯೂರೋಪಿನ ಭಾರತೀಯ ವಿದ್ವಾಂಸರಲ್ಲಿ ಒಂದು ಹೊಸ ಕ್ರಾಂತಿಯೇ ಆಯಿತು. ಗ್ರಂಥದ ಮುದ್ರಣಗಳು ಒಂದರ ಹಿಂದೆ ಒಂದು ಬಂದವು. ಸರ್ ವಿಲಿಯಂ ಜೋನ್ಸನ ಇಂಗ್ಲಿಷ್ ಭಾಷಾಂತರದಿಂದ ಜರ್ಮನ್, ಫ್ರೆಂಚ್, ಡೇನಿಷ್ ಮತ್ತು ಇಟಾಲಿಯನ್ ಭಾಷೆಗಳಲ್ಲಿ ಭಾಷಾಂತರಗಳು ಬಂದವು. ಈ ಅನುವಾದವನ್ನು ಓದಿದ ಗೈಟೆಯ ಮೇಲೆ ಅದ್ಭುತ ಪರಿಣಾಮವಾಯಿತು; ಆತನು ಶಾಕುಂತಲ ನಾಟಕವನ್ನು ಮುಕ್ತಕಂಠದಿಂದ ಹೊಗಳಿದನು. ಸಂಸ್ಕೃತ ನಾಟಕದ ಸಾಮಾನ್ಯ ಸಂಪ್ರದಾಯದಂತೆ ಬರೆದ ಕಾಳಿದಾಸನ ಪ್ರಸ್ತಾವನೆಯನ್ನು ಓದಿ ಅದರಂತೆ ತನ್ನ 'ಫಾಸ್ಟ್' ಗ್ರಂಥಕ್ಕೆ ಸಹ ಪ್ರಸ್ತಾವನೆಯನ್ನು ಬರೆಯಬೇಕೆಂದು ನಿರ್ಧರಿಸಿದನಂತೆ.

ಸಂಸ್ಕೃತ ಸಾಹಿತ್ಯದಲ್ಲಿ ಕಾಳಿದಾಸನೇ ಮಹಾಕವಿ, ಶ್ರೇಷ್ಠ ನಾಟಕ ಕರ್ತ ಎಂದು ಎಲ್ಲರೂ

ಒಪ್ಪಿದ್ದಾರೆ. ಸಿಲ್ವೆನ್‌ಲೆವಿ "ಹಿಂದೂಸ್ಥಾನದ ಕಾವ್ಯ ಮತ್ತು ಸಾಹಿತ್ಯ ಲೋಕದಲ್ಲಿ ಕಾಳಿದಾಸನ ಸ್ಥಾನ ಉಜ್ವಲವಿದೆ. ನಾಟಕ, ಮಹಾಕಾವ್ಯ ಮತ್ತು ವಿರಹ ಗೀತೆಗಳ ರಚನೆಯಲ್ಲಿ ಈತನ ಕಲಾ ಪ್ರತಿಭೆ ಇನ್ನೂ ಮಾಸದೆ ಪ್ರಜ್ವಲಿಸುತ್ತಿದೆ. ಸರಸ್ವತಿಯ ವರ ಪುತ್ರರಲ್ಲಿ ಕಾಳಿದಾಸನು ಅದ್ವಿತೀಯ ನಿದ್ದಾನೆ ಮತ್ತು ಇಡೀ ಮಾನವ ಪ್ರಪಂಚಕ್ಕೇ ಶ್ರೇಷ್ಠ ನಾಟಕ ಕರ್ತನೆಂದು ಪರಿಚಯನಾಗಿದ್ದಾನೆ. ಅದರಿಂದ ಹಿಂದೂಸ್ಥಾನದ ಗೌರವವೂ ಹೆಚ್ಚಿದೆ. ಶಾಕುಂತಲ ನಾಟಕವನ್ನು ಕಾಳಿದಾಸನು ಉಜ್ಜಯಿನಿಯಲ್ಲಿ ಬರೆದು ಅನೇಕ ಶತಮಾನಗಳಾದರೂ ಪಾಶ್ಚಿಮಾತ್ಯ ಪ್ರಪಂಚಕ್ಕೆ ಅದರ ಪರಿಚಯ ವಾದದ್ದು ವಿಲಿಯಂ ಜೋನ್ಸ್‌ನ ಅನುವಾದದಿಂದ ಮಾತ್ರ. ಶ್ರೇಷ್ಠ ಸಾಹಿತಿಗಳ ಮಧ್ಯೆ ಕಾಳಿದಾಸನ ಸ್ಥಾನ ಧ್ರುವತಾರೆಯಂತೆ ಉನ್ನತವಾಗಿದೆ. ಮಾನವ ಮನೋವಿಕಾಸವನ್ನೆಸಗಿ ಪ್ರಗತಿಮಾರ್ಗಕ್ಕೊಯ್ದ ಯುಗಪ್ರವರ್ತಕನಂತೆ ನಾಟಕ ಕಲೆಯಲ್ಲಿ ಕಾಳಿದಾಸನೂ ಒಬ್ಬ ಯುಗ ಪುರುಷನಾಗಿದ್ದಾನೆ. ಕಾಳಿದಾಸನ ಹೆಸರೇ ಚರಿತ್ರಾರ್ಹವಾದುದಲ್ಲದೆ ಕಾಳಿದಾಸನೇ ಸ್ವಯಂ ಚರಿತ್ರಕಾರನಾಗಿದ್ದಾನೆ.

ಕಾಳಿದಾಸನು ಇತರ ನಾಟಕಗಳನ್ನೂ ಕೆಲವು ದೊಡ್ಡ ಕವನಗಳನ್ನೂ ಬರೆದವನು. ಅವನ ಕಾಲವು ಇನ್ನೂ ನಿರ್ದೇಶವಾಗಿಲ್ಲ. ಪ್ರಾಯಶಃ ಕ್ರಿಸ್ತಶಕ ನಾಲ್ಕನೆಯ ಶತಮಾನದ ಕೊನೆಯಲ್ಲಿ ಗುಪ್ತ ವಂಶದ ಎರಡನೆ ಚಂದ್ರಗುಪ್ತ ವಿಕ್ರಮಾದಿತ್ಯನ ಆಳ್ವಿಕೆಯಲ್ಲಿ ಉಜ್ಜಯಿನಿಯಲ್ಲಿದ್ದಂತೆ ಕಾಣುತ್ತದೆ. ವಿಕ್ರಮಾದಿತ್ಯನ ರಾಜಸಭೆಯ ನವರತ್ನಗಳಲ್ಲಿ ಕಾಳಿದಾಸನು ಒಬ್ಬನಾಗಿದ್ದ ಎಂದು ಪ್ರತೀತಿ ಇದೆ. ಅವನ ವಿದ್ವತ್ತಿಗೆ ಮನ್ನಣೆಯು ದೊರೆಯಿತು; ಅವನ ಜೀವಮಾನದಲ್ಲಿಯೇ ಪೂರ್ಣ ಯಶಸ್ಸೂ ದೊರೆಯಿತು. ಜೀವನ ಕಾಠಿನ್ಯ, ಒರಟು ಜೀವನ ಇವುಗಳ ಸುಳಿವೂ ಇಲ್ಲದೆ ಸುಂದರ ಮತ್ತು ಕೋಮಲ ಜೀವನ ಸುಖವನ್ನೇ ಅನುಭವಿಸುತ್ತ ಪ್ರೀತಿಯ ಪುತ್ಥಳಿಯಂತೆ ಪ್ರಪಂಚದಲ್ಲಿ ಬಾಳಿದ ಅದೃಷ್ಟವಾಸಿಗಳಲ್ಲಿ ಕಾಳಿದಾಸನು ಒಬ್ಬನಾಗಿದ್ದ. ಈ ಜೀವನ ಪ್ರೇಮದ ಮತ್ತು ಪ್ರಕೃತಿ ಸೌಂದರ್ಯದ ಭಾವಾವೇಶವು ಅವನ ಕೃತಿಗಳಲ್ಲಿ ಎದ್ದು ಕಾಣುತ್ತದೆ.

ಕಾಳಿದಾಸನ ದೀರ್ಘ ಕವಿತೆಗಳಲ್ಲಿ ಮೇಘದೂತ ಒಂದು. ಸೆರೆ ಸಿಕ್ಕು ತನ್ನ ಪ್ರಿಯಳಿಂದ ಅಗಲಿದ ಪ್ರೇಮಿಯೊಬ್ಬನು ಮಳೆಗಾಲದಲ್ಲಿ ಮೇಘ ಒಂದನ್ನು ಕಂಡು "ನಿನ್ನ ವಿರಹದಲ್ಲಿಯೇ ಚಿಂತಾಮಗ್ನ ನಾಗಿದ್ದಾನೆ" ಎಂದು ಹೋಗಿ ಸಂದೇಶ ಹೇಳು ಎಂದು ಮೇಘವನ್ನು ಕೇಳಿಕೊಳ್ಳುತ್ತಾನೆ. ಅಮೆರಿಕೆಯ ವಿದ್ವಾಂಸನಾದ ರೈಡರ್ ಈ ಕವನಕ್ಕೆ ಮತ್ತು ಕಾಳಿದಾಸನಿಗೆ ಅದ್ಭುತ ಮೆಚ್ಚಿಗೆಯನ್ನು ವ್ಯಕ್ತಗೊಳಿಸಿದ್ದಾನೆ. ಆ ಕಾವ್ಯದ ಎರಡು ಭಾಗಗಳ ವಿಷಯ ಪ್ರಸ್ತಾಪಿಸುತ್ತ ಪೂರ್ವಾರ್ಧವು ಬಾಹ್ಯ ಪ್ರಕೃತಿಯ ವರ್ಣನೆಯಾದರೂ ಮಾನವ ಭಾವನೆಯೊಂದಿಗೆ ಹೆಣೆದುಕೊಂಡಿದೆ; ಉತ್ತರಾರ್ಧವು ಮಾನವನ ಹೃದಯದ ಚಿತ್ರವಾದರೂ ಪ್ರಕೃತಿ ಸೌಂದರ್ಯದ ಚೌಕಟ್ಟಿನಲ್ಲಿದೆ. ಇವುಗಳೆರಡರಲ್ಲಿ ಯಾವುದು ಉತ್ತಮ ಎಂದು ಯಾರಿಂದಲೂ ಹೇಳಲಾಗದಷ್ಟು ಕುಶಲತೆಯಿಂದ ಕವಿಯು ಕಾವ್ಯ ರಚನೆ ಮಾಡಿದ್ದಾನೆ. ಈ ಸುಂದರ ಕಾವ್ಯವನ್ನು ಮೂಲ ಸಂಸ್ಕೃತದಲ್ಲಿ ಓದಿದ ಕೆಲವರಿಗೆ ಪೂರ್ವಾರ್ಧವು ಉತ್ತಮವೆನಿಸುತ್ತದೆ. ಇನ್ನು ಕೆಲವರಿಗೆ ಉತ್ತರಾರ್ಧವು ಉತ್ತಮವೆನಿಸುತ್ತದೆ. ಯೂರೋಪ್ ಹತ್ತೊಂಭತ್ತನೆಯ ಶತಮಾನದವರೆಗೆ ಕಲಿಯದ ಸತ್ಯ ಒಂದನ್ನು ಕಾಳಿದಾಸನು ಐದನೆಯ ಶತಮಾನದಲ್ಲೆ ಅರ್ಥಮಾಡಿಕೊಂಡ. ಪ್ರಪಂಚ ಸೃಷ್ಟಿಯು ಮನುಷ್ಯನಿಗೆ ಮಾತ್ರ ಅಲ್ಲ; ಮಾನವ ಜೀವನ ವಲ್ಲದೆ ಇತರ ವಸ್ತುಗಳ ಘನತೆ ಮತ್ತು ಬೆಲೆಯನ್ನು ಮನುಷ್ಯನು ತಿಳಿದುಕೊಂಡಾಗ ಮಾತ್ರ ಅವನು ತನ್ನ ಪೂರ್ಣ ಉನ್ನತಿಯನ್ನು ಮುಟ್ಟುತ್ತಾನೆ ಎಂಬುದೇ ಆ ಸತ್ಯ. ಯೂರೋಪ್ ಅದನ್ನು ಇನ್ನೂ ಪೂರ್ಣ ಅರಿತಿಲ್ಲ. ಕಾಳಿದಾಸನಿಗೆ ಈ ಸತ್ಯದ ಅರಿವು ಉಂಟಾದದ್ದು ಅವನ ಬುದ್ಧಿಶಕ್ತಿಯ ಮೇಲ್ಮೆಯನ್ನು ಸಾರುತ್ತದೆ. ಈ ಗುಣವು ಮಹಾ ಕಾವ್ಯಕ್ಕೂ ಅತ್ಯವಶ್ಯಕ, ಕಾವ್ಯ ಸೌಂದರ್ಯಕ್ಕೂ ಅವಶ್ಯಕ. ಕಾವ್ಯನಿರರ್ಗಳತೆಯೂ ಅನೇಕ ಕವಿಗಳಲ್ಲಿದೆ. ಬುದ್ಧಿಶಕ್ತಿಯೂ ಅನೇಕರಲ್ಲಿದೆ. ಆದರೆ ಪ್ರಪಂಚ ಹುಟ್ಟಿದಂದಿನಿಂದ ಎರಡೂ ಸಮಾನವಾಗಿರುವ ನಿದರ್ಶನಗಳು ಹನ್ನೆರಡಕ್ಕಿಂತ ಹೆಚ್ಚು ಇಲ್ಲ. ಈ ಸಮಾವೇಶದ ಸಾಮರಸ್ಯವಿದ್ದುದರಿಂದಲೇ ಕಾಳಿದಾಸನ ಸ್ಥಾನ ಅನಕ್ರಿಯನ್, ಹಾರೆಸ್, ಷೆಲ್ಲಿ

ಅವರ ಜೊತೆಯಲ್ಲಿ ಅಲ್ಲ; ಆದರೆ ಸಾಫೋಕ್ಲಿಸ್, ವರ್ಜಿಲ್ ಮತ್ತು ಮಿಲ್ಟನ್‌ರ ಜೊತೆಯಲ್ಲಿ" ಎಂದು ಹೇಳಿದ್ದಾನೆ.

ಪ್ರಾಯಶಃ ಕಾಳಿದಾಸನಿಗೂ ಬಹುದಿನಗಳ ಹಿಂದೆಯೇ ಶೂದ್ರಕನ ಮೃಚ್ಛಕಟಿಕ ಅಥವಾ ಮಣ್ಣಿನಗಾಡಿ' ಎಂಬ ಇನ್ನೊಂದು ಪ್ರಸಿದ್ಧ ಕೋಮಲ ಕಲ್ಪನಾನಾಟಕವು ಹುಟ್ಟಿತ್ತು. ಕಲ್ಪನೆಯಾದರೂ ನಮ್ಮ ಮನಸ್ಸನ್ನು ಕಲಕುವ ಮತ್ತು ಅಂದಿನ ಜನರ ಮನಸ್ಸು ಮತ್ತು ನಾಗರಿಕತೆಯನ್ನು ತೋರಿಸುವ ಒಂದು ವಾಸ್ತವಿಕತೆ ಇದೆ. ಎರಡನೆ ಚಂದ್ರಗುಪ್ತನ ಕಾಲದಲ್ಲಿ ಅದೇ ಸುಮಾರಿನಲ್ಲಿ ಇನ್ನೊಂದು ಅದ್ಭುತವಾದ ನಾಟಕವು ಹುಟ್ಟಿತು. ವಿಶಾಖದತ್ತನ 'ಮುದ್ರಾರಾಕ್ಷಸ' ಅಥವಾ 'ರಾಜಮುದ್ರೆ' ಇದೊಂದು ರಾಜಕೀಯ ನಾಟಕ. ಇದರಲ್ಲಿ ಶೃಂಗಾರರಸವಾಗಲಿ ಪುರಾಣಕಥೆಯಾಗಲಿ ಯಾವುದೂ ಇಲ್ಲ. ಚಂದ್ರಗುಪ್ತಮೌರ್ಯನ ಕಾಲವನ್ನು ಚಿತ್ರಿಸುತ್ತದೆ. ಅವನ ಮುಖ್ಯ ಪ್ರಧಾನಿಯೂ, ಅರ್ಥಶಾಸ್ತ್ರದ ಗ್ರಂಥಕರ್ತನೂ ಆದ ಚಾಣಕ್ಯನೇ ನಾಟಕದ ಕಥಾನಾಯಕ. ಈಗಿನ ಕಾಲಕ್ಕೆ ಬಹಳ ಸಮಯೋಚಿತ ನಾಟಕವಾಗಿದೆ.

ಏಳನೆಯ ಶತಮಾನದ ಆದಿಯಲ್ಲಿ ಒಂದು ಹೊಸ ಸಾಮ್ರಾಜ್ಯವನ್ನು ಸ್ಥಾಪಿಸಿದ ಹರ್ಷಚಕ್ರವರ್ತಿಯು ಸ್ವತಃ ನಾಟಕಕರ್ತನಾಗಿದ್ದ. ಅವನು ಬರೆದ ನಾಟಕಗಳಲ್ಲಿ ಮೂರುಮಾತ್ರ ದೊರಕಿವೆ. ಸುಮಾರು ಏಳನೆಯ ಶತಮಾನದಲ್ಲಿ ಸಂಸ್ಕೃತ ಸಾಹಿತ್ಯದಲ್ಲಿ ಪ್ರಸಿದ್ಧನಾದ ಇನ್ನೊಬ್ಬ ಕವಿ ಭವಭೂತಿಯು ನಾಟಕಗಳನ್ನು ಬರೆದ. ಭಾಷಾಲಾಲಿತ್ಯವೇ ಅವನ ಮುಖ್ಯಗುಣವಾದ್ದರಿಂದ ಅವನ ನಾಟಕಗಳ ಅನುವಾದ ಸುಲಭಸಾಧ್ಯವಲ್ಲ. ಆದರೂ ಕಾಳಿದಾಸನನ್ನು ಬಿಟ್ಟರೆ ಜನರ ಮನಸ್ಸನ್ನು ಸೂರೆಗೊಂಡಿರುವವರಲ್ಲಿ ಎರಡನೆಯವನೇ ಭವಭೂತಿ. ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದಲ್ಲಿ ಸಂಸ್ಕೃತ ಪ್ರಾಧ್ಯಾಪಕನಾಗಿದ್ದ ವಿಲ್ಸನ್ ಇವರಿಬ್ಬರ ವಿಷಯವಾಗಿ "ಭವಭೂತಿ ಕಾಳಿದಾಸರ ಕಾವ್ಯಗಳಲ್ಲಿ ತುಂಬಿ ತುಳುಕುವಷ್ಟು ಗಾನಮಾಧುರ್ಯವನ್ನೂ, ಭಾಷಾಸೌಂದರ್ಯವನ್ನೂ, ಅತ್ಯುನ್ನತ ಭಾವನೆಗಳನ್ನೂ ಬೇರೊಂದು ಭಾಷೆಯಲ್ಲಿ ಊಹಿಸುವುದು ಅಸಾಧ್ಯ" ಎಂದಿದ್ದಾರೆ.

ಈ ರೀತಿ ಸಂಸ್ಕೃತ ನಾಟಕವಾಹಿನಿಯೂ ಅನೇಕ ಶತಮಾನಗಳ ಕಾಲ ಅವಿಚ್ಛಿನ್ನವಾಗಿ ಪ್ರವಹಿಸಿತು. ಆದರೆ ಒಂಭತ್ತನೆಯ ಶತಮಾನದಲ್ಲಿ ಮುರಾರಿಯನಂತರ ಕಾವ್ಯಗುಣವು ಬಹಳ ಕೆಳಮಟ್ಟಕ್ಕೆ ಇಳಿಯಿತು. ಈ ಇಳಿಮುಖ ಮತ್ತು ಕ್ರಮಾನುಗತ ಅವನತಿಯನ್ನು ಜೀವನದ ಎಲ್ಲ ಕಾರ್ಯ ಚಟುವಟಿಕೆಗಳಲ್ಲೂ ಕಾಣಬಹುದು. ಇಂಡೊ ಆಫ್ಘನರು ಮತ್ತು ಮೊಗಲರ ಕಾಲದಲ್ಲಿ ರಾಜಾಶ್ರಯವು ತಪ್ಪಿದ್ದರಿಂದಲೂ ರಾಷ್ಟ್ರದ ಧರ್ಮಕ್ಕೂ ನಾಟಕಕ್ಕೂ ಸಮೀಪ ಸಂಬಂಧವಿದ್ದುದರಿಂದಲೂ ಕಲಾರೂಪದಲ್ಲಿ ನಾಟಕಕ್ಕೆ ಇಸ್ಲಾಂ ಧರ್ಮದಿಂದ ತಿರಸ್ಕಾರ ಬಂದುದರಿಂದಲೂ ಸ್ವಲ್ಪಮಟ್ಟಿಗೆ ನಾಟಕ ಕಲೆ ಹಿಂದೆ ಬಿದ್ದಿತೆಂದು ಕೆಲವರ ಮತ. ಜನಪದ ನಾಟಕಗಳು ಮುಂದುವರಿದೇ ಬಂದವು. ಆದರೆ ಈ ಸಾಹಿತ್ಯ ಪ್ರಧಾನ ನಾಟಕವು ಬಹಳ ಪಂಡಿತರಂಜಕವೂ, ಕೃತಕವೂ ಆಗಿ ರಾಜಾಶ್ರಯದಿಂದಲೇ ಬೆಳೆದು ಬಂದಿತು. ಆದ್ದರಿಂದ ರಾಜಕೀಯ ವಿಪ್ಲವಗಳಿಂದ ಮೇಲೆ ಸ್ವಲ್ಪ ಅಪ್ರತ್ಯಕ್ಷ ಪರಿಣಾಮವಾದರೂ ಮೂಲತಃ ಈ ವಾದದಲ್ಲಿ ಯಾವ ತಿರುಳೂ ಇಲ್ಲ. ನಿಜವಾಗಿ ನೋಡಿದರೆ ಈ ರಾಜಕೀಯ ವಿಪ್ಲವಗಳಿಗೆ ಬಹಳ ಮುಂಚೆಯೇ ಸಂಸ್ಕೃತ ನಾಟಕವು ಕೆಳಮಟ್ಟಕ್ಕೆ ಬರಲಾರಂಭಿಸಿರುವುದನ್ನು ನೋಡಬಹುದು. ಈ ರಾಜಕೀಯ ವಿಪ್ಲವಗಳು ಸಹ ಕೆಲವು ಶತಮಾನಗಳ ಕಾಲ ಉತ್ತರ ಹಿಂದೂಸ್ಥಾನದಲ್ಲಿ ಮಾತ್ರ ಸಂಭವಿಸಿದವು. ಈ ನಾಟಕದಲ್ಲಿ ನಿಜವಾದ ಅಂತಃಸತ್ವವಿದ್ದರೆ ದಕ್ಷಿಣ ಭಾರತದಲ್ಲಿ ಮುಂದುವರಿಯಬಹುದಾಗಿತ್ತು. ಅಲ್ಲಲ್ಲಿ ಕೆಲವು ಮತಾಂಧತೆಯ ಕಾಲವನ್ನು ಬಿಟ್ಟರೆ ಇಂಡೋ ಆಫ್ಘನ್, ತುರ್ಕಿ ಮತ್ತು ಮೊಗಲ್ ರಾಜರುಗಳು ಸ್ವಲ್ಪ ಹೆಚ್ಚು ಕಡಮೆ ಸಾಮಾನ್ಯವಾಗಿ ಭಾರತೀಯ ಸಂಸ್ಕೃತಿಗೆ ಪ್ರೋತ್ಸಾಹ ಕೊಡುತ್ತಲೇ ಬಂದಿದ್ದಾರೆ. ಕೆಲವು ವೇಳೆ ಸ್ವಲ್ಪ ಮಾರ್ಪಾಟಾಗಿ ಇನ್ನು ಕೆಲವು ವೇಳೆ ಪುಷ್ಟಿಗೊಂಡಿದೆ. ಮುಸ್ಲಿಂ ರಾಜಾಸ್ಥಾನಗಳಲ್ಲಿ, ಶ್ರೀಮಂತ ಮನೆತನಗಳಲ್ಲಿ ಭಾರತೀಯ ಸಂಗೀತಕ್ಕೆ ಪೂರ್ಣ, ಉತ್ಸಾಹಪೂರಿತ ಆಶ್ರಯ ದೊರೆಯಿತು. ಮುಸ್ಲಿ

ಮರಲ್ಲಿ ಕೆಲವರು ಸಂಗೀತ ಕಲೆಯಲ್ಲಿ ಅಸಾಧಾರಣ ಪಾಂಡಿತ್ಯ ಪ್ರೌಢಿಮೆಯನ್ನು ಪಡೆದವರೂ ಇದಾರೆ. ಸಾಹಿತ್ಯ ಮತ್ತು ಕಾವ್ಯರಚನೆಗೂ ಮುಸ್ಲಿಮರಿಂದ ಪ್ರೋತ್ಸಾಹ ದೊರೆಯಿತು. ಹಿಂದಿಯಲ್ಲಿ ಅನೇಕ ಮುಸ್ಲಿಂ ಕವಿಗಳಿದ್ದಾರೆ. ಬಿಜಾಪುರದ ದೊರೆಯಾದ ಆದಿಲ್‌ಷಾ ಭಾರತೀಯ ಸಂಗೀತ ಶಾಸ್ತ್ರದ ಮೇಲೆ ಹಿಂದಿಯಲ್ಲಿ ಒಂದು ಗ್ರಂಥ ಬರೆದಿದ್ದಾನೆ. ಭಾರತೀಯ ಕಾವ್ಯ ಮತ್ತು ಸಂಗೀತ ಎರಡರಲ್ಲೂ ಹಿಂದೂ ದೇವರುಗಳು ಮತ್ತು ದೇವತೆಗಳ ಸ್ತುತಿ ಇದೆ. ಆದರೂ ಮುಸ್ಲಿಂಮರು ಆಕ್ಷೇಪಿಸಲಿಲ್ಲ. ಹಳೆಯ ರೂಪಕಗಳು ಮತ್ತು ಉಪಮೆಗಳನ್ನೆ ಉಪಯೋಗಿಸಿದರು. ಎಲ್ಲೋ ಕೆಲವು ಸಂದರ್ಭಗಳನ್ನು ಬಿಟ್ಟರೆ ವಿಗ್ರಹಗಳ ತಯಾರಿಕೆ ಒಂದರ ವಿನಾ ಬೇರೆ ಯಾವ ಕಲಾ ಸೃಷ್ಟಿಯನ್ನೂ ಮುಸ್ಲಿಂ ರಾಜರು ನಿಷೇಧಮಾಡಲಿಲ್ಲ.

ಆ ಕಾಲದಲ್ಲಿ ಇನ್ನೂ ಎಷ್ಟೋ ವಿಷಯಗಳು ಅವನತಿ ಹೊಂದಿದಂತೆ ಸಂಸ್ಕೃತ ನಾಟಕವೂ ಅವನತಿಗಿಳಿಯಿತು; ಮತ್ತು ಸೃಷ್ಟಿಶಕ್ತಿಯು ಕಡಮೆಯಾಗುತ್ತ ಬಂದಿತು. ಆಫ್ಘನರು, ತುರ್ಕೀ ಜನರು ದೆಹಲಿ ಸಿಂಹಾಸನವನ್ನು ಆಕ್ರಮಿಸುವ ಮೊದಲೆ ಈ ಕ್ಷೀಣದೆಶೆ ಆರಂಭವಾಗಿತ್ತು. ಅನಂತರ ರಾಜಮನೆತನಗಳ ಪ್ರೌಢಭಾಷೆಯಾದ ಪಾರಸಿ ಭಾಷೆಯೊಂದಿಗೆ ಸಂಸ್ಕೃತ ಭಾಷೆಯೂ ಪೈಪೋಟಿ ನಡೆಸಬೇಕಾಯಿತು. ಆದರೂ ದೈನಂದಿನ ಜೀವನದ ಭಾಷೆಗಳಿಗೂ ಸಂಸ್ಕೃತ ನಾಟಕಗಳ ಭಾಷೆಗೂ ಇರುವ ಅಪಾರ ಅಂತರ ಒಂದು ಕಾರಣ, ನಿಜವಾದ ಕಾರಣವೆಂದು ತೋರುತ್ತದೆ. ಕ್ರಿಸ್ತಶಕ ೧೦೦೦ ದ ಸುಮಾರಿನಲ್ಲಿ ಜನರು ಮಾತನಾಡುತ್ತಿದ್ದ ಭಾಷೆಗಳಲ್ಲಿ ಸಾಹಿತ್ಯ ಬೆಳೆಯಲು ಆರಂಭವಾಯಿತು.

ಇಷ್ಟೆಲ್ಲ ಆದರೂ ಮಧ್ಯಕಾಲದಲ್ಲಿ ಮತ್ತು ಇತ್ತೀಚಿಗೆ ಸಹ ಸಂಸ್ಕೃತ ನಾಟಕಗಳು ಹುಟ್ಟುತ್ತಲೇ ಇರುವುದು ಒಂದು ಆಶ್ಚರ್ಯ. ೧೮೯೨ ರಲ್ಲಿ ಷೇಕ್ಸ್‌ಪಿಯರ್ ಮಹಾ ಕವಿಯ "ಮಿಡ್‌ಸಮ್ಮರ್ ನೈಟ್ಸ್ ಡ್ರೀಮ್" ಎಂಬ ನಾಟಕದ ಸಂಸ್ಕೃತ ಅನುವಾದ ಬಂದಿತು. ಹಳೆಯ ನಾಟಕಗಳ ಹಸ್ತಪ್ರತಿಗಳು ಇನ್ನೂ ಬೆಳಕಿಗೆ ಬರುತ್ತಲೇ ಇವೆ. ೧೮೯೦ ರಲ್ಲಿ ಪ್ರೊಫೆಸರ್ ಸಿಲ್ವೆನ್‌ಲೆವಿಯವರು ಮಾಡಿದ ಪಟ್ಟಿಯಲ್ಲಿ ೧೮೯ ಜನ ಕವಿಗಳ ೩೭೭ ನಾಟಕಗಳಿವೆ. ಈಚಿನ ಪಟ್ಟಿಯೊಂದರಲ್ಲಿ ೬೫೦ ನಾಟಕಗಳಿವೆ.

ಪ್ರಾಚೀನ ನಾಟಕಗಳ ಭಾಷೆಯು (ಕಾಳಿದಾಸ ಮೊದಲಾದವರದು) ಮಿಶ್ರಭಾಷೆ. ಸಂಸ್ಕೃತ ಮತ್ತು ಒಂದೋ ಎರಡೋಬಗೆಯ, ಸಾಮಾನ್ಯ ಜನರು ಬಳಸುತ್ತಲಿದ್ದ ಪ್ರಾಕೃತ. ಒಂದೇ ನಾಟಕದಲ್ಲಿ ಸುಸಂಸ್ಕೃತರು ಸಂಸ್ಕೃತದಲ್ಲಿ ಮಾತನಾಡುತ್ತಾರೆ. ವಿದ್ಯಾವಿಹೀನರಾದ ಸಾಮಾನ್ಯ ಜನರು ಮತ್ತು ಕೆಲವು ಅಪವಾದಗಳಿದ್ದರೂ ಸಾಮಾನ್ಯವಾಗಿ ಸ್ತ್ರೀಯರು ಪ್ರಾಕೃತದಲ್ಲಿ ಮಾತನಾಡುತ್ತಾರೆ. ಕಾವ್ಯ ಭಾಗ ಮತ್ತು ಭಾವಗೀತೆಗಳೆಲ್ಲ ಸಂಸ್ಕೃತದಲ್ಲಿವೆ. ಈ ಭಾಷಾ ಸಮ್ಮಿಶ್ರಣದಿಂದ ಪ್ರಾಂಶಃ ಸಾಮಾನ್ಯ ಜನರಿಗೆ ನಾಟಕವು ಅರ್ಥವಾಗುತ್ತಿತ್ತು. ಸಾಹಿತ್ಯದ ಭಾಷೆಗೂ ಸಾಮಾನ್ಯ ಜನರ ಕಲಾಭಿರುಚಿಯ ಅವಶ್ಯಕತೆಗೂ ಇದು ಒಂದು ಸಮಾಧಾನದಂತೆ ಇತ್ತು. ಸಮಾಜದ ಒಂದು ವಿಶಿಷ್ಟ ಪಂಗಡದಿಂದ ಹುಟ್ಟಿ, ಸಾಮಾನ್ಯ ಜೀವನದಿಂದ ದೂರವಿದ್ದ ಮತ್ತು ನಾಟಕವಿಷಯದ ಆಯ್ಕೆಯಲ್ಲೂ ಜನಸಾಮಾನ್ಯಕ್ಕೆ ಅಪರಿಚಿತವಿದ್ದ ಫ್ರೆಂಚ್ ದುರಂತ ನಾಟಕಗಳಿಗೆ ಸಿಲ್ವೆನ್‌ಲೆವಿ ಇವುಗಳನ್ನು ಹೋಲಿಸಿದ್ದಾನೆ. ಈ ಶ್ರೇಷ್ಠ ತರಗತಿಯ ಸಾಹಿತ್ಯ ನಾಟಕಗಳಲ್ಲದೆ ಪ್ರೇಕ್ಷಕರಿಗೆ ಚಿರಪರಿಚಿತವಾದ ಭಾರತೀಯ ಪುರಾಣ ಕಥೆಗಳ ಮಹಾಕಾವ್ಯಗಳ ಕಥೆಗಳ ಆಧಾರದ ಮೇಲೆ ರಚಿತವಾದ ಜನಪದ ನಾಟಕಗಳು ಇದೇ ಇವೆ. ಅವುಗಳಲ್ಲಿ ನಾಟಕೀಯ ವಸ್ತುಗಳಿಗಿಂತ ಪಾತ್ರಗಳ ವೇಷಭೂಷಣಗಳೇ ಹೆಚ್ಚಾಗಿರುತ್ತಿತ್ತು. ಇವು ಆಯಾ ಭಾಗದ ಜನರ ಭಾಷೆಯಲ್ಲಿರುತ್ತಿದ್ದವು. ಆದ್ದರಿಂದ ಸ್ಥಳೀಯ ಮನ್ನಣೆ ಪಡೆದಿದ್ದವು. ಸಂಸ್ಕೃತ ನಾಟಕಗಳು ಸಮಗ್ರ ಭಾರತದ ವಿದ್ವಾಂಸರ ಭಾಷೆಯಾದ ಸಂಸ್ಕೃತದಲ್ಲಿರುತ್ತಿದ್ದುದರಿಂದ ಭಾರತಾದ್ಯಂತ ಪ್ರಸಿದ್ಧವಾಗಿದ್ದವು.

ಈ ಸಂಸ್ಕೃತ ನಾಟಕಗಳು ಅಭಿನಯಿಸಬೇಕೆಂದೇ ಬರೆದವು. ರಂಗಸ್ಥಳದ ಸೂಚನೆಗಳ ಮತ್ತು ಪ್ರೇಕ್ಷಕರು ಕುಳಿತುಕೊಳ್ಳಲು ನಿಯಮಗಳ ವಿವರಗಳನ್ನು ತಿಳಿಸಿರುತ್ತವೆ. ಸ್ತ್ರೀಯರೂ

ನಾಟಕದಲ್ಲಿ ಪಾತ್ರವಹಿಸುತ್ತಿದ್ದರು. ಈ ಪದ್ಧತಿಯು ಗ್ರೀಕರಲ್ಲಿ ಇರಲಿಲ್ಲ. ಗ್ರೀಕ್ ಮತ್ತು ಸಂಸ್ಕೃತ ಗಳೆರಡರಲ್ಲೂ ಪ್ರಕೃತಿಯ ಸಾಮೀಪ್ಯದ ಅರಿವು ಇದೆ ಮತ್ತು ಮಾನವಜೀವನ ಪ್ರಕೃತಿಯ ಒಂದು ಅಂಗ ಎಂಬ ಭಾವನೆ ಇದೆ. ಅವುಗಳಲ್ಲಿ ಒಂದು ವಿಶೇಷಭಾವನಾಶಕ್ತಿ ಇದೆ. ಅವುಗಳಲ್ಲಿ ಚಿತ್ರಿತವಾದ ಜೀವನವು ಅರ್ಥಗರ್ಭಿತವೂ, ಅರ್ಥಪೂರ್ಣವೂ ಕಾವ್ಯಮಯವೂ ಇದ್ದಂತೆ ತೋರುತ್ತದೆ.

ಗ್ರೀಕ್ ನಾಟಕಗಳ ಮುಖ್ಯ ತಳಹದಿಯು ದುರಂತ, ಮತ್ತು ದೌರ್ಜನ್ಯದ ಪ್ರಶ್ನೆ. ಮನುಷ್ಯನು ದುಃಖಪಡುವುದೇಕೆ? ಪ್ರಪಂಚದಲ್ಲಿ ಪಾಪ ಇರುವುದೇಕೆ? ಧರ್ಮ ಮತ್ತು ದೇವರ ರಹಸ್ಯವೇನು? ಸರ್ವಶಕ್ತ ವಿಧಿಯ ಎದುರು ದಾರಿ ಕಾಣದೆ ಗುರಿಯಿಲ್ಲದೆ ಹೋರಾಡುವ ಕ್ಷಣಿಕ ಜೀವನದ ಮನುಷ್ಯನು ಎಷ್ಟು ದಯಾಪಾತ್ರ ಪ್ರಾಣಿ. ವಿಧಿ ನಿಯಮವನ್ನು ಎಲ್ಲರೂ ಅನುಭವಿಸಲೇಬೇಕು. ಯುಗಯುಗಗಳು ಕಳೆದರೂ ಆ ನಿಯಮದಿಂದ ಕೂದಲೆಳೆಯಷ್ಟೂ ಕದಲಲು ಸಾಧ್ಯವಿಲ್ಲ. ಕಷ್ಟ ಸಹಿಷ್ಣುತೆಯಿಂದ ಮನುಷ್ಯನು ಪಾಠ ಕಲಿಯಬೇಕು. ಅದೃಷ್ಟವಿದ್ದರೆ ಕಷ್ಟದಿಂದ ಪಾರಾಗುತ್ತಾನೆ ಎನ್ನುವುದೇ ಗ್ರೀಕ್ ನಾಟಕಗಳ ಶ್ರುತಿ.

ಏರಿಬಹ ಅಲೆಗಳಲಿ ಬಿರುಗಾಳಿ ಎದುರಿನಲಿ
ದೂರ ತೀರವ ಸೇರ್ದ ಮಾನವನೆ ಸುಖಿಯು;
ಹೋರಾಡಿ ಧೈರ್ಯದಲಿ ಸ್ವಾತಂತ್ರವನು ಗಳಿಸಿ
ವೀರನಹ ಮಾನವನೆ ಧನ್ಯಾತ್ಮ ಸುಖಿಯು;
ಅಣ್ಣ ತಮ್ಮದಿರಲ್ಲೆ ಭೇದ ತಾ ತೋರುತಿದೆ
ಧನಕನಕವಸ್ತುವಿನಲಿ ಶಕ್ತಿ ಧೈರ್ಯದಲಿ;
ಜೀವನದ ನಾಟಕದ ಕಲೆಯ ವೈಚಿತ್ರ್ಯವಿದು
ವಿಧಿ ಲಿಖಿತ ನಿಯಮವಿದ ಮೀರಿದವರಿಲ್ಲ
ತಿಳಿದವರು ಬಹಳಿಲ್ಲ ಕಾಲಗರ್ಭದಲಿ.
ಜನಕೋಟಿ, ಆಶೆಯಲಿ ತೇಲುತಿದೆ ಸಾಗುತಿದೆ
ಜಯವಕ್ಕು ಕೆಲಬರಿಗೆ ಸೋಲು ಅನಿಬರಿಗೆ
ಅಳಿವುದು ಆಶೆಯದು ಮೊಳೆತು ತಾ ಚಿಗುರುವುದು.(ಯುರಿಪಿಡೀಸನ 'ಬ್ಯಾಕಿ' ನಾಟಕದಿಂದ)

ಮನುಷ್ಯನು ಸಂಕಟದಲ್ಲಿ ನರಳಿ ಜೀವನವನ್ನು ಎದುರಿಸುವ ಶಕ್ತಿಯನ್ನು ಪಡೆಯುತ್ತಾನೆ. ಆದರೆ ಯಾರೂ ಬಿಡಿಸಲಾರದ ಅಂತಿಮ ಸಮಸ್ಯೆಯೊಂದಿದೆ; ತನ್ನ ಪ್ರಶ್ನೆಗಳಿಗೆಲ್ಲ ಉತ್ತರ ದೊರೆಯುವುದಿಲ್ಲ. ಪಾಪ ಪುಣ್ಯದ ಪ್ರಶ್ನೆಯನ್ನು ಬಿಡಿಸಲು ಸಾಧ್ಯವಿಲ್ಲ ಎಂದೂ ಅರಿಯುತ್ತಾನೆ.

ಒಗಟುಗಳೆಷ್ಟೋ ಇರಬಹುದು
ನಿರಾಶೆ ಭಯ ಕವಿದಿರಬಹುದು
ದೇವಸೃಷ್ಟಿಗದು ಮಿತಿಯಿಲ್ಲ
ಮಾನವನೆಣಿಸುವ ದಾರಿಯು ಬೇರೆ
ದೈವ ನಿಯಾಮಕ ದಾರಿಯೇ ಬೇರೆ. (ಯುರಿಪಿಡೀಸನ'ಅಲ್ಸೆಸ್ಟಿಸ್'ನಾಟಕದಿಂದ)

ಗ್ರೀಕ್ ದುರಂತ ನಾಟಕಗಳಲ್ಲಿ ಕಂಡುಬರುವ ಶಕ್ತಿ ಮತ್ತು ಗಾಂಭೀರ್ಯವುಳ್ಳ ನಾಟಕಗಳು ಸಂಸ್ಕೃತ ದಲ್ಲಿ ಯಾವುದೂ ಇಲ್ಲ. ನಿಜವಾಗಿ ನೋಡಿದರೆ ಸಂಸ್ಕೃತದಲ್ಲಿ ದುರಂತ ನಾಟಕಗಳೇ ಇಲ್ಲ. ಅದಕ್ಕೆ ಕಾರಣ ನಾಟಕ ದುರಂತದಲ್ಲಿ ಕೊನೆಗಾಣಕೂಡದೆಂದು ನಿಷೇಧವಿತ್ತು. ಜನಸಾಮಾನ್ಯದಲ್ಲಿ ಬೇರೂರಿದ್ದ ಮತ ಧರ್ಮಗಳನ್ನು ನಾಟಕ ಕರ್ತರು ಒಪ್ಪಿದ್ದರಿಂದ ಅಂತಹ ಮೂಲ ಪ್ರಶ್ನೆಗಳನ್ನು ನಾಟಕಗಳಲ್ಲಿ ಚರ್ಚಿಸಲು ಅವಕಾಶವೇ ಇರಲಿಲ್ಲ. ಈ ಮತಧರ್ಮದಲ್ಲಿ ಪುನರ್ಜನ್ಮ ಮತ್ತು ಕರ್ಮ ಫಲ ತತ್ವಗಳು ಮುಖ್ಯವಾದವು. ಆಕಸ್ಮಿಕವಾದ ಅಥವ ಕರ್ಮ ಫಲವಲ್ಲದ ದುಃಖಕ್ಕೆ ಅವಕಾಶವೇ ಇರಲಿಲ್ಲ. ಏಕೆಂದರೆ ಇಂದಿನ ಜನ್ಮದಲ್ಲಿ ಅನುಭವಿಸುವುದೆಲ್ಲ ಹಿಂದಿನ ಜನ್ಮದ ಕರ್ಮಫಲ. ಗುರಿ

ಯಿಲ್ಲದ ಕುರುಡು ಶಕ್ತಿ ಯಾವುದೂ ಮಾನವಜೀವನದ ಮಧ್ಯೆ ಒದಗುವಂತಿರಲಿಲ್ಲ. ಅದನ್ನು ಎದುರಿಸಬೇಕಾದ್ದೂ ಇರಲಿಲ್ಲ. ಎದುರಿಸಿದರೂ ಉಪಯೋಗವಿರಲಿಲ್ಲ. ಇಷ್ಟು ಸುಲಭ ವಿವರಣಗಳಿಂದ ದಾರ್ಶನಿಕರಿಗೆ, ತತ್ವಜ್ಞಾನಿಗಳಿಗೆ ತೃಪ್ತಿಯಾಗಲಿಲ್ಲ. ಅಂತಿಮ ಕಾರಣವನ್ನೂ, ಪೂರ್ಣಜ್ಞಾನ ವನ್ನೂ ಅರಿತುಕೊಳ್ಳಲು ಈ ಸಾಮಾನ್ಯ ತತ್ವವನ್ನು ಮೀರಿ ಹೋಗುತ್ತಲೇ ಇದ್ದರು. ಆದರೆ ಜನ ಸಾಮಾನ್ಯರಲ್ಲಿ ಆ ನಂಬಿಕೆಗಳೇ ರೂಢಮೂಲವಿದ್ದವು. ನಾಟಕಕರ್ತರು ಅವುಗಳನ್ನು ಎದುರಿಸುವ ಧೈರ್ಯಮಾಡಲಿಲ್ಲ. ನಾಟಕಗಳು ಮತ್ತು ಸಂಸ್ಕೃತ ಕಾವ್ಯವು ಈ ಭಾರತೀಯ ರೂಢಮೂಲ ಭಾವನೆಯನ್ನು ಸಂಪೂರ್ಣ ಪ್ರತಿಬಿಂಬಿಸಿದವು. ಎಲ್ಲಿಯೂ ಅದಕ್ಕೆ ವಿರೋಧ ಮನೋಭಾವವು ಕಾಣುವುದಿಲ್ಲ. ನಾಟಕ ರಚನೆಯ ನಿಯಮಗಳು ಕಠಿನವಿದ್ದವು, ಅವುಗಳನ್ನು ಮೀರುವುದು ಸುಲಭವಿರಲಿಲ್ಲ. ಆದರೂ ವಿಧಿಯ ದಾಸರಾಗಿ ಏನೇ ಕಷ್ಟಗಳು ಬರಲಿ ನಾಯಕನು ಅವುಗಳನ್ನು ಎದುರಿಸಬಲ್ಲ ಧೈರ್ಯಶಾಲಿ. ಚಾಣಕ್ಯನು 'ಮುದ್ರಾರಾಕ್ಷಸ'ದಲ್ಲಿ "ಅದೃಷ್ಟವನ್ನೆ ನಂಬುವವರು" ಮುಟ್ಠಾಳರು ಎಂದಿದ್ದಾನೆ; ಆತ್ಮಶಕ್ತಿಯನ್ನವಲಂಬಿಸದೆ ಸಹಾಯಕ್ಕಾಗಿ ಆಕಾಶ ನೋಡುತ್ತಾರೆ. ಸ್ವಲ್ಪ ಕೃತಕತೆ ಕಾಣುತ್ತದೆ: ನಾಯಕ ಯಾವಾಗಲೂ ನಾಯಕ; ನೀಚ ಯಾವಾಗಲೂ ನೀಚ ನಾಗಿಯೇ ಇರುತ್ತಾನೆ; ಮಿಶ್ರಗುಣದ ಪಾತ್ರಗಳು ಬಹು ವಿರಳ. ಆದರೂ ಅದ್ಭುತನಾಟಕೀಯ ಸನ್ನಿವೇಶಗಳನ್ನು, ಹೃದಯವಿದ್ರಾವಕ ದೃಶ್ಯಗಳನ್ನು ಕನಸಿನ ಚಿತ್ರದಂತೆ ಕಾಣುವ ಜೀವನದ ಹಿನ್ನೆಲೆ ಯನ್ನು ಸತ್ಯವಾದರೂ ಅದ್ಭುತ ಕಾಲ್ಪನಿಕ ಚಿತ್ರವನ್ನು ಕವಿಯ ಭವ್ಯ ಭಾವನೆಯಲ್ಲಿ ಗಂಭೀರ ಭಾಷೆ ಯಲ್ಲಿ ನೋಡಬಹುದು. ವಾಸ್ತವ ಜೀವನ ಆ ರೀತಿ ಇರದಿದ್ದರೂ ಭಾರತೀಯ ಜೀವನವು ಆಗ ಹೆಚ್ಚು ಶಾಂತಿಯುತವೂ ಭದ್ರವೂ ಆಗಿದ್ದಂತೆಯೂ, ತನ್ನ ನೆಲೆಯನ್ನು ತಾನು ಅರಿತು, ತನ್ನ ಸಮಸ್ಯೆ ಗಳಿಗೆ ಉತ್ತರವನ್ನು ಕಂಡುಕೊಂಡಂತೆಯೂ ಕಾಣುತ್ತದೆ. ಈ ಭಾರತೀಯ ಜೀವನ ವಾಹಿನಿಯು ಗಂಭೀರವಾಗಿ ಪ್ರವಹಿಸುತ್ತದೆ; ಅಲ್ಲಲ್ಲಿ ಬಿರುಗಾಳಿ, ಚಂಡಮಾರುತಗಳಿದ್ದರೂ ಮೇಲ್ಭಾಗ ಮಾತ್ರ ಕದಲುತ್ತದೆ. ಗ್ರೀಕ್ ದುರಂತ ನಾಟಕಗಳಲ್ಲಿ ಕಾಣುವ ಭೀಕರ ಚಂಡಮಾರುತಗಳು ಯಾವುವೂ ಇಲ್ಲ. ಪೂರ್ಣ ಮಾನವೀಯತೆಯು ಇದೆ. ಕಲಾಭಿರುಚಿಯ ಮಾಧುರ್ಯವಿದೆ, ತಾರ್ಕಿಕ ಪೂರ್ಣತೆ ಇದೆ. "ಭಾರತೀಯ ನಾಟಕವು ಇಂದಿಗೂ ಭಾರತೀಯ ಪ್ರತಿಭೆಯ ಅತ್ಯಂತ ಸುಂದರ ಸೃಷ್ಟಿ" ಎಂದು ಸಿಲ್ವೆನ್ ಲೆವಿ ಹೇಳುತ್ತಾರೆ.

ಪ್ರೊಫೆಸರ್ ಎ. ಬೆರಿಡೇಲ್‌ಕೀತ್ "ಸಂಸ್ಕೃತ ನಾಟಕವು ಭಾರತೀಯ ಕಾವ್ಯ ಸಾಹಿತ್ಯದ ಶ್ರೇಷ್ಠ ಮುಕ್ತಾಫಲ, ಆತ್ಮಜ್ಞಾನಿಗಳಾದ ಭಾರತೀಯ ಸಾಹಿತ್ಯ ಸೃಷ್ಟಿಕರ್ತರು ಸಾಧಿಸಿದ ಸಾಹಿತ್ಯಕಲೆಯ ಅತ್ಯುನ್ನತ ಶಿಖರ. ಇತರ ಎಷ್ಟೋ ವಿಷಯಗಳಲ್ಲಿ ಬ್ರಾಹ್ಮಣನು, ದೂಷಣೆಗೆ ಒಳಗಾಗಿದ್ದರೂ ಆತನೇ ಭಾರತದ ಧೀಶಕ್ತಿಯ ಮೂಲ. ಭಾರತೀಯ ದರ್ಶನದಂತೆ, ತನ್ನ ಮಾನಸಿಕ ಸಾಧನೆಯ ಇನ್ನೊಂದು ಪ್ರಯತ್ನದಿಂದ ಅತ್ಯಂತ ಸೂಕ್ಷ್ಮವೂ, ಪ್ರತಿಭಾಯುಕ್ತವೂ ಆದ ನಾಟಕ ರೂಪವನ್ನು ಕಂಡು ಹಿಡಿದ.

೧೯೨೪ರಲ್ಲಿ "ಮೃಚ್ಛಕಟಿಕ"ದ ಇಂಗ್ಲಿಷ್ ಅನುವಾದ ಪ್ರದರ್ಶನವು ನ್ಯೂಯಾರ್ಕ್ ನಗರದಲ್ಲಿ ನಡೆಯಿತು. 'ನೇಷನ್' ಪತ್ರಿಕೆಯ ನಾಟಕ ವಿಮರ್ಶಕ ಜೋಸೆಫ್ ವುಡ್ ಕ್ರಚ್ ಎಂಬಾತನು "ತಾತ್ವಿಕರು ಹೇಳುವ ರಂಗಮಂಟಪದ ಶುದ್ಧಕಲೆಯ ನಿಜವಾದ ನಿದರ್ಶನವು ಇಲ್ಲಿ ಪ್ರೇಕ್ಷಕರಿಗೆ ದೊರೆಯುತ್ತದೆ. ಪ್ರಾಚ್ಯದ ವಿವೇಕವು ಗೂಢ ಅಲೌಕಿಕ ತತ್ವಗಳಲ್ಲಿಲ್ಲ. ಆದರೆ ಹೀಬ್ರೂಮತದ ಕಠಿಣ ಧರ್ಮಾನುಷ್ಠಾನದಿಂದ ಪೂರ್ಣ ಕುಲಗೆಟ್ಟ ಸಾಂಪ್ರದಾಯಿಕ ಕ್ರೈಸ್ತ ಧರ್ಮಕ್ಕಿಂತ ತುಂಬ ಆಳವೂ ಮತ್ತು ಸತ್ಯವೂ ಆದ ದಯೆಯಲ್ಲವೆ ಎಂಬ ಭಾವನೆ ಇಲ್ಲಿ ಉಂಟಾಗುತ್ತದೆ. ನಾಟಕವು ಪೂರ್ಣ ಕೃತಕ ವಾದರೂ ತುಂಬ ಹೃದಯಭೇದಕವಿದೆ; ಏಕೆಂದರೆ ವಾಸ್ತವಿಕತೆಯ ತೋರುಗಾಣಿಕೆ ಇಲ್ಲದೆ ವಾಸ್ತವವೇ ಆಗಿದೆ. ಕವಿಯು ಯಾರೇ ಇರಲಿ, ನಾಲ್ಕನೆಯ ಶತಮಾನದವನಿರಲಿ ಎಂಟನೆಯ ಶತಮಾನದವನಿರಲಿ ಆತನು ಗುಣಶಾಲಿಯೂ, ವಿವೇಕಿಯೂ ಆಗಿರಬೇಕು. ಆ ಗುಣವೂ ಮತ್ತು ವಿವೇಕವೂ ತುದ

ನಾಲಗೆಯಿಂದ ಬರುವುದಲ್ಲ, ಕುಳಿತಲ್ಲೆ ಆಚಾರ ಹೇಳುವವನು ಸುಲಭವಾಗಿ ಓದುವ ಲೇಖನಿಯಿಂದ ಬರುವುದಲ್ಲ ಆದರೆ ಹೃದಯದಿಂದ ಹೊರಹೊಮ್ಮುವುದು. ನವಯೌವನದ ಸೌಂದರ್ಯ, ಪ್ರೇಮ, ಮತ್ತು ಉತ್ಕೃಷ್ಟ ಸಹನೆಯೂ ಆತನ ಗಾಂಭೀರ್ಯಕ್ಕೊಂದು ಹದವನ್ನು ಕೊಟ್ಟಿತು. ಕಲ್ಪನಾ ಚಮತ್ಕಾರದ ಒಂದು ತೊಡಕಿನ ಕಥೆ, ವಿಷಯ ಅತ್ಯಲ್ಪ; ಆದರೂ ಅದು ಮಾನವನ ದಯೆಗೆ ಮತ್ತು ಸದ್ಗುಣದಲ್ಲಿ ನಂಬಿಕೆಗೆ ಒಂದು ಮಾರ್ಗವಾಗಬಹುದು ಎಂದು ಅರಿತುಕೊಳ್ಳುವಷ್ಟು ಅನುಭವಶಾಲಿಯಾಗಿದ್ದ....ಅಂಥ ಒಂದು ನಾಟಕ ಆಳವಾದ ಅನುಭವ ಪೂರ್ಣ ನಾಗರಿಕತೆಯಿಂದ ಮಾತ್ರ ಹುಟ್ಟಬಲ್ಲುದು. ಎದುರು ಬಂದ ಎಲ್ಲ ಸಮಸ್ಯೆಗಳನ್ನೆದುರಿಸಿ ತನ್ನ ದಾರಿಯನ್ನರಿತ ನಾಗರಿಕತೆಯು ಇಂತಹ ಒಂದು ಶಾಂತ ನಿಷ್ಕಪಟ ವಾತಾವರಣದಲ್ಲೆ ಮನಶ್ಶಾಂತಿ ಪಡೆಯಬೇಕು. ಮ್ಯಾಕ್‌ಬೆತ್ ಮತ್ತು ಒಥೆಲ್ಲೊ ಎಷ್ಟೇ ದೊಡ್ಡ ವ್ಯಕ್ತಿಗಳೂ, ಹೃದಯವನ್ನು ತಲ್ಲಣಿಸತಕ್ಕವರೂ ಇದ್ದರೂ ಅವರು ಪಾಶವೀ ಸ್ವಭಾವದ ನಾಯಕರು. ಏಕೆಂದರೆ ಆ ಪಾತ್ರಗಳು ಷೇಕ್ಸ್‌ಪಿಯರನ ಭಾವಾವೇಶದ ತುಮುಲ ಹೊಸಜೀವನದ ಶೀಲಕ್ಕೂ ಪಶುಜೀವನದಿಂದ ರಕ್ತಗತವಾಗಿ ಬಂದ ನೈತಿಕಭಾವನೆಗಳಿಗೂ ಮಧ್ಯೆ ಎದ್ದ ಹೋರಾಟದ ಫಲ. ನಮ್ಮ ಆಧುನಿಕ ಕಾಲದ ವಾಸ್ತವಿಕ ನಾಟಕಗಳು ಸಹ ಅದೇ ಬಗೆಯ ಮನೋವಿಕಲ್ಪದ ಫಲ. ಆದರೆ ಸಮಸ್ಯೆಗಳು ಪರಿಹಾರವಾಗಿ ಭಾವೋದ್ರೇಕವು ಮನಃಸ್ಥೈರ್ಯದಿಂದ ಶಾಂತವಾದಾಗ ಉಳಿಯುವುದು ರೂಪರಚನೆಯೊಂದೆ. ನಮ್ಮ ಯೂರೋಪಿನ ಪೂರ್ವೇತಿಹಾಸದಲ್ಲಿ ಎಲ್ಲೂ ಇಷ್ಟು ಸುಸಂಸ್ಕೃತ ಕೃತಿಯನ್ನು ಮಹಾಕಾವ್ಯವನ್ನು ಕಾಣಲಾರೆವು" ಎಂದಿದ್ದಾನೆ.

## ಸಂಸ್ಕೃತದ ಜೀವಾಳ ಮತ್ತು ದಾರ್ಢ್ಯ

ಅಪಾರವಾದ ಭಾಷಾಸಂಪತ್ತು, ಪ್ರತಿಭೆ, ಎಲ್ಲ ಬಗೆಯ ಕಾವ್ಯ ಸಮೃದ್ಧಿ ಸಂಸ್ಕೃತಭಾಷೆಗೆ ಇದೆ. ಆದರೂ ಅದು ಎರಡು ಸಾವಿರದ ಆರುನೂರು ವರ್ಷಗಳ ಹಿಂದೆ ಪಾಣಿನಿಯು ಬರೆದ ವ್ಯಾಕರಣದ ಚೌಕಟ್ಟಿನಲ್ಲಿಯೇ ಬೆಳೆದಿದೆ. ಅದು ವಿಶಾಲವಾಗಿ ಹಬ್ಬಿ, ಸರ್ವತೋಮುಖವಾಗಿ ತನ್ನ ಸಂಪತ್ತನ್ನು ಅಭಿವೃದ್ಧಿಪಡಿಸಿಕೊಂಡು ಪುಷ್ಟವೂ, ಸರ್ವಾಂಗಸುಂದರವೂ ಆಗಿ ಬೆಳೆದರೂ ಅದರ ಬುಡವು ಮಾತ್ರ ಯಾವಾಗಲೂ ಭದ್ರವಿತ್ತು. ಸಂಸ್ಕೃತ ಸಾಹಿತ್ಯವು ಅವನತಸ್ಥಿತಿಗೆ ಬಂದಾಗ ಅದರ ಶಕ್ತಿಯು ಸ್ವಲ್ಪ ಕುಂದಿತು, ಭಾಷಾಸರಳತೆಯು ಹೋಯಿತು ಮತ್ತು ರಚನಾ ಜಟಿಲತೆಯು ಹೆಚ್ಚಿತು; ಉಪಮೆ ಮತ್ತು ಲಕ್ಷಣಗಳ ಅವಾಂತರವು ಹೆಚ್ಚಾಯಿತು. ಶಬ್ದ ಸಂಯೋಜನೆಗೆ ಸಹಾಯವಾಗಲೆಂದು ರಚಿಸಿದ ವ್ಯಾಕರಣ ನಿಯಮಗಳು ಪಂಡಿತರ ಕೈಯಲ್ಲಿ ಜಟಿಲ ಶಬ್ದ ಜೋಡಣೆಗೆ ಅವರ ಪಾಂಡಿತ್ಯ ಪ್ರದರ್ಶನಕ್ಕೆ ಅನುಕೂಲವಾದವು.

ಸರ್ ವಿಲಿಯಮ್ ಜೋನ್ಸ್ ೧೭೮೪ರಲ್ಲೆ "ಸಂಸ್ಕೃತಭಾಷೆಯು ಎಷ್ಟೇ ಪ್ರಾಚೀನವಿರಲಿ ಅದಕ್ಕೆ ಅದ್ಭುತ ರಚನಾಶಕ್ತಿಯಿದೆ. ಗ್ರೀಕ್ ಭಾಷೆಗಿಂತ ಸ್ವಸಂಪೂರ್ಣವಿದೆ, ಲ್ಯಾಟಿನ್ ಭಾಷೆಗಿಂತ ವಿಪುಲವಿದೆ; ಎರಡೂ ಭಾಷೆಗಳಿಗಿಂತ ಪೂರ್ಣಪರಿಶುದ್ಧವಿದೆ. ಆದರೂ ಧಾತುಗಳ ಮೂಲ ಸ್ವರೂಪದಲ್ಲೂ ವ್ಯಾಕರಣರೂಪಗಳಲ್ಲೂ ಸಂಸ್ಕೃತಕ್ಕೂ ಈ ಎರಡು ಭಾಷೆಗಳಿಗೂ ಇರುವ ಸಾಮ್ಯವು ಕೇವಲ ಆಕಸ್ಮಿಕಕ್ಕಿಂತ ಹೆಚ್ಚು ಇದೆ. ಯಾವ ಭಾಷಾ ಪಂಡಿತನೇ ಆಗಲಿ ಈ ಸಮೀಪ ಸಂಬಂಧವನ್ನು ನೋಡಿದರೆ ಈ ಮೂರು ಭಾಷೆಗಳೂ ಪ್ರಾಯಶಃ ಈಗ ಅದೃಶ್ಯವಿರುವ ಯಾವುದೋ ಒಂದೇ ಮೂಲದಿಂದ ಹೊರಟಿರಬೇಕೆಂದು ಊಹಿಸದೆ ಅವುಗಳನ್ನು ವಿಮರ್ಶೆಮಾಡಲು ಸಾಧ್ಯವೇ ಇಲ್ಲ" ಎಂದು ಹೇಳಿದ್ದಾನೆ.

ವಿಲಿಯಂ ಜೋನ್ಸ್ ತರುವಾಯ ಇಂಗ್ಲಿಷ್, ಫ್ರೆಂಚ್, ಜರ್ಮನ್ ಮತ್ತು ಇತರ ಯೂರೊಪಿಯನ್ ವಿದ್ವಾಂಸರು ಸಂಸ್ಕೃತವನ್ನು ಅಭ್ಯಾಸಮಾಡಿ ತುಲನಾತ್ಮಕ ಭಾಷಾ ಶಾಸ್ತ್ರವೆಂಬ ಹೊಸ ವಿಜ್ಞಾನಕ್ಕೆ ತಳಹದಿಯನ್ನು ಹಾಕಿದರು. ಈ ಹೊಸ ಶಾಸ್ತ್ರಭಾಗದಲ್ಲಿ ಜರ್ಮನರ ವಿದ್ವತ್ತು ಬಹಳ ಮುಂದುವರಿಯಿತು. ೧೯ನೆಯ ಶತಮಾದ ಈ ಸಂಸ್ಕೃತ ಸಾಹಿತ್ಯದಲ್ಲಿನ ಇತ್ತೀಚಿನ ಸಂಶೋಧನೆಯ ಗೌರವವೆಲ್ಲ ಅವರಿಗೆ ಸಲ್ಲಬೇಕಾಗುತ್ತದೆ. ಪ್ರಾಯಶಃ ಪ್ರತಿಯೊಂದು ಜರ್ಮನ್ ವಿಶ್ವವಿದ್ಯಾನಿಲಯದಲ್ಲೂ

ಸಂಸ್ಕೃತಶಾಖೆ ಇತ್ತು; ಅದರ ಆಡಳಿತಕ್ಕೆ ಒಬ್ಬರೊ, ಇಬ್ಬರೊ ಸಂಸ್ಕೃತ ಪ್ರಾಧ್ಯಾಪಕರಿರುತ್ತಿದ್ದರು. ಭಾರತೀಯ ವಿದ್ವತ್ತು ಅಪಾರವಿದ್ದರೂ ಪುರಾತನ ಸಂಪ್ರದಾಯವೇ ಹೆಚ್ಚಾಗಿತ್ತು. ವಿಮರ್ಶಾ ದೃಷ್ಟಿ ಇರಲಿಲ್ಲ. ಅರಬ್ಬಿ ಮತ್ತು ಪಾರಸಿ ಭಾಷೆಗಳ ಹೊರತಾಗಿ ಬೇರೆ ಪ್ರಾಚೀನ ಪರಭಾಷೆಗಳ ಪರಿಚಯವೇ ಇರುತ್ತಿರಲಿಲ್ಲ. ಯೂರೋಪಿಯನರ ಪ್ರೋತ್ಸಾಹದಿಂದ ಒಂದು ಹೊಸ ಬಗೆಯ ವಿದ್ವತ್ತು ಆರಂಭವಾಯಿತು. ಅನೇಕ ಭಾರತೀಯರು ನೂತನ ಸಂಶೋಧನೆಗಳ ಮಾರ್ಗದಲ್ಲಿ ಮತ್ತು ವಿಮರ್ಶಾತ್ಮಕ ಮತ್ತು ತುಲನಾತ್ಮಕ ಅಭ್ಯಾಸದಲ್ಲಿ ಶಿಕ್ಷಣ ಪಡೆಯಲು ಯೂರೋಪಿಗೆ ಅದರಲ್ಲೂ ಹೆಚ್ಚಾಗಿ ಜರ್ಮನಿಗೆ ಪ್ರಯಾಣಬೆಳೆಸಿದರು. ಈ ಭಾರತೀಯರಿಗೆ ಯೂರೋಪಿಯನರಿಗಿಂತ ಒಂದು ಅನುಕೂಲವಿದ್ದರೂ ಇನ್ನೊಂದು ಬಗೆಯ ಪ್ರತಿಕೂಲವೂ ಇತ್ತು. ಅವರ ಕೆಲವು ಪೂರ್ವ ಪ್ರತಿಷ್ಠಿತ ಅಭಿಪ್ರಾಯಗಳು, ವಂಶಾನುಗತ ನಂಬಿಕೆಗಳು ಮತ್ತು ಸಂಪ್ರದಾಯಗಳು ಅವರ ನಿಷ್ಪಕ್ಷಪಾತ ವಿಮರ್ಶೆಗೆ ಅಡ್ಡಿಬಂದುವು. ಕವಿ ಹೃದಯವನ್ನರಿತು ಕಾವ್ಯ ಸತ್ವವನ್ನು ತಿಳಿದುಕೊಳುವ ಶಕ್ತಿ, ಅದರ ವಿಕಸನದ ಸನ್ನಿವೇಶವನ್ನು ಊಹಿಸಿ ಅದರೊಂದಿಗೆ ಹೆಚ್ಚು ತಲ್ಲೀನವಾಗುವ ಶಕ್ತಿಯ ಅತಿ ಮಹತ್ವದ ಅನುಕೂಲವೂ ಇತ್ತು.

ವ್ಯಾಕರಣ ಮತ್ತು ಭಾಷಾಶಾಸ್ತ್ರಕ್ಕಿಂತ ಭಾಷೆಯು ಅತಿ ಮುಖ್ಯವಾದದ್ದು. ಅದು ಒಂದು ಜನಾಂಗದ ಅಂತಃಶಕ್ತಿಯ ಅಸ್ತಿತ್ವದ ಮತ್ತು ಸಂಸ್ಕೃತಿಯ ಕಾವ್ಯರೂಪ ಮತ್ತು ಇಂದಿನ ಜನಾಂಗ ರಚನೆಗೆ ರೂಪಕೊಟ್ಟ ಭಾವನೆಗಳ ಮತ್ತು ಕಲ್ಪನೆಗಳ ಜೀವಂತ ಮೂರ್ತ ಸ್ವರೂಪ. ಶಬ್ದಾರ್ಥವು ಯುಗದಿಂದ ಯುಗಕ್ಕೆ ವ್ಯತ್ಯಾಸವಾಗಬಹುದು. ಹಳೆಯ ಭಾವನೆಗಳು ಹಳೆಯ ರೂಪದಲ್ಲೇ ನಷ್ಟತೆಯನ್ನು ಪಡೆಯಬಲ್ಲವು. ಪುರಾತನ ಶಬ್ದದ ಅಥವ ಶಬ್ದಸಮುದಾಯದ ಅರ್ಥವನ್ನು ಅದರ ಒಳಗುಟ್ಟನ್ನು ಅರಿಯುವುದು ಬಹು ಕಷ್ಟ. ಪ್ರಾಚೀನ ಯುಗದಲ್ಲಿ ಆ ಭಾಷೆಯನ್ನು ಬಳಸಿದವರ ಮನೋ ಪ್ರಪಂಚವನ್ನು ಪ್ರವೇಶಿಸಲು ಮತ್ತು ಆ ಹಳೆಯ ಅರ್ಥವನ್ನು ಗ್ರಹಿಸಲು ಯಾವುದೋ ಒಂದು ಬಗೆಯ ಭಾವಾವೇಶದ ಮತ್ತು ಕಾವ್ಯಮಯ ಜೀವನ ಅತ್ಯವಶ್ಯಕ. ಭಾಷೆ ಎಷ್ಟು ಪುಷ್ಟವೂ, ವಿಪುಲವೂ ಇದೆಯೋ ಆ ಪ್ರವೇಶವೂ ಅಷ್ಟೇ ಕಠಿನ. ಇತರ ಪ್ರಾಚೀನ ಭಾಷೆಗಳಂತೆ ಸಂಸ್ಕೃತದಲ್ಲಿ ಸಹ ಕಾವ್ಯ ಸೌಂದರ್ಯ ಮಾತ್ರವಲ್ಲದೆ ಆಳವಾದ ಅರ್ಥವೂ ಪರಭಾಷೆಗಳಿಗೆ ಅನುವಾದಮಾಡಲಾಗದ ಇನ್ನೂ ಅನೇಕ ವಿಶಿಷ್ಟ ಭಾವನೆಯುಳ್ಳ ಮತ್ತು ಭಿನ್ನ ಅಂತಸತ್ವ ಮತ್ತು ದೃಷ್ಟಿಯ ಶಬ್ದಗಳೂ ಬಹಳ ಇವೆ. ಸಂಸ್ಕೃತದ ವ್ಯಾಕರಣ ಮತ್ತು ತತ್ವಶಾಸ್ತ್ರದಲ್ಲಿ ಸಹ ಬಲವಾದ ಕಾವ್ಯಶಕ್ತಿಯಿದೆ. ಅದರ ಪ್ರಾಚೀನ ನಿಘಂಟು ಒಂದು ಕಾವ್ಯರೂಪದಲ್ಲಿದೆ.

ಸಂಸ್ಕೃತ ಭಾಷೆಯಲ್ಲಿ ನಿಷ್ಣಾತರಾದ ನಮ್ಮಲ್ಲಿ ಕೆಲವರಿಗೆ ಸಹ ಈ ಪ್ರಾಚೀನ ಭಾಷೆಯ ಅಂತಃಶಕ್ತಿಯನ್ನು ಗ್ರಹಿಸಿ ಆ ಪ್ರಾಚೀನ ಯುಗದ ಪ್ರಪಂಚವನ್ನು ಕಾಣುವುದು ಬಹು ಕಷ್ಟ. ಆದರೂ ಪ್ರಾಚೀನ ಪ್ರಪಂಚವು ನಮಗೆ ಇನ್ನೂ ಅಂಟಿಕೊಂಡಿರುವುದರಿಂದಲೂ, ಆ ಪ್ರಾಚೀನ ಸಂಪ್ರದಾಯಗಳು ಇನ್ನೂ ನಮ್ಮ ಆಸ್ತಿಯಾಗಿರುವುದರಿಂದಲೂ ನಮಗೆ ಆ ಶಕ್ತಿಯು ಸ್ವಲ್ಪ ಇದ್ದರೂ ಇರಬಹುದು. ಭಾರತದ ಆಧುನಿಕ ಭಾಷೆಗಳೆಲ್ಲ ಸಂಸ್ಕೃತ ಜನ್ಯ. ಅವುಗಳ ಶಬ್ದ ಸಂಪತ್ತು, ಮತ್ತು ರಚನಾ ರೂಪ ಎಲ್ಲವೂ ಸಂಸ್ಕೃತದಿಂದ ಬಂದುವು. ಸಂಸ್ಕೃತಕಾವ್ಯ ಮತ್ತು ತತ್ವಶಾಸ್ತ್ರದ ಅನೇಕ ಅಮೂಲ್ಯ ಅರ್ಥ ಗರ್ಭಿತ ಶಬ್ದಗಳ ಅನುವಾದವು ಅಶಕ್ಯವಾದರೂ ಅವು ನಮ್ಮ ಜಾನಪದ ಭಾಷೆಗಳಲ್ಲಿ ಇನ್ನೂ ಪ್ರಚುರವಿವೆ. ಜನರು ಆಡುವ ಭಾಷೆಯಾಗಿ ಬಹು ಹಿಂದೆಯೇ ನಿಂತು ಮೃತಭಾಷೆಯಾದರೂ ಈಗಲೂ ಅದರಲ್ಲಿ ಅದ್ಭುತಶಕ್ತಿಯಿದೆ. ಆದರೆ ವಿದೇಶೀಯರು ಎಷ್ಟೇ ವಿದ್ವಾಂಸರಿರಲಿ ಅವರಿಗೆ ಈ ಕಷ್ಟ ಇನ್ನೂ ಹೆಚ್ಚು. ವಿದ್ವಾಂಸರು ಮತ್ತು ಪಂಡಿತರು ಕವಿಗಳಲ್ಲದಿರುವುದು ಒಂದು ದುರದೃಷ್ಟ. ಈ ಭಾಷೆಯ ಅರ್ಥನಿರೂಪಣೆಗೆ ವಿದ್ವತ್ಪೂರ್ಣ ಕವಿಗಳೇ ಬೇಕು. ಈ ವಿದ್ವಾಂಸರಿಂದ ಸಾಮಾನ್ಯವಾಗಿ ನಮಗೆ ದೊರಕುವುದು "ಸಾಹಿತ್ಯಸತ್ವದ ಅಪಭ್ರಂಶ" ಎಂದು ಬಾರ್ತ್ ಎಂಬ ಫ್ರೆಂಚ್ ವಿದ್ವಾಂಸನು ಹೇಳುತ್ತಾನೆ.

ಈ ವಿಮರ್ಶಾತ್ಮಕ ಭಾಷಾಶಾಸ್ತ್ರದ ಅಭ್ಯಾಸವೂ ಮತ್ತು ಸಂಶೋಧನಕಾರ್ಯವೂ ಬಹಳಮಟ್ಟಿಗೆ

ನಡೆದಿದ್ದರೂ ಕಾವ್ಯ ಮತ್ತು ಭಾವನಾದೃಷ್ಟಿಯಿಂದ ನಡೆದಿರುವ ಸಂಸ್ಕೃತ ಭಾಷಾಪ್ರವೇಶವನ್ನು ನೋಡಿದರೆ ಏನೂ ಸಾಲದು. ಇಂಗ್ಲಿಷ್ ಅಥವ ಬೇರೆ ಯಾವ ಅನುವಾದವನ್ನು ತೆಗೆದುಕೊಂಡರೂ ಮೂಲಗ್ರಂಥಕ್ಕೆ ಅನ್ಯಾಯ ಮಾಡದ ಅಥವಾ ಯೋಗ್ಯ ಎನ್ನುವ ಯಾವ ಅನುವಾದವೂ ಇನ್ನು ಆಗಿಲ್ಲ. ಅನೇಕ ಕಾರಣಗಳಿಂದ ಭಾರತೀಯರು, ವಿದೇಶೀಯರು ಇಬ್ಬರೂ ಈ ಕಾರ್ಯದಲ್ಲಿ ಜಯಶಾಲಿಗಳಾಗಿಲ್ಲ. ಅಪಾರ ಸೌಂದರ್ಯ, ಮಹದ್ಭಾವನೆ, ಆಳವಾದ ಜ್ಞಾನ ಮತ್ತು ಕೇವಲ ಭಾರತದ ಹಿರಿಮೆ ಮಾತ್ರವಲ್ಲದೆ ಮಾನವ ಕುಲದ ಹಿರಿಮೆಯನ್ನೇ ಪ್ರಪಂಚವು ಅರಿಯದಂತಾಗಿದೆ. ನಿಜವಾಗಿ ಇದೊಂದು ಮಹಾ ದುರದೃಷ್ಟ. ಕಠಿಣವಾದ ಅನುಶಾಸನ, ಪವಿತ್ರಭಾವನೆ ಮತ್ತು ಅಂತಃ ಶಕ್ತಿಯಿಂದ ಇಂಗ್ಲಿಷ್ ಅನುವಾದಕರು ಬೈಬಲನ್ನು ಅನುವಾದಮಾಡಿ ಒಂದು ಮಹಾಗ್ರಂಥವನ್ನು ಇಂಗ್ಲಿಷ್ ಜನರಿಗೆ ಒದಗಿಸಿ ಇಂಗ್ಲಿಷ್ ಭಾಷೆಗೆ ಒಂದು ಶಕ್ತಿಯನ್ನೂ, ಗೌರವವನ್ನೂ ಸಂಪಾದಿಸಿಕೊಟ್ಟರು. ಯೂರೋಪಿನ ವಿದ್ವಾಂಸರು ಮತ್ತು ಕವಿಗಳು ಅನೇಕ ತಲೆಮಾರುಗಳಿಂದ ಅತಿ ಪ್ರೇಮದಿಂದ ಗ್ರೀಕ್ ಮತ್ತು ಲ್ಯಾಟಿನ್ ಮಹಾ ಕಾವ್ಯಗಳನ್ನು ಅಭ್ಯಾಸಮಾಡಿ ಅನೇಕ ಯೂರೋಪಿಯನ್ ಭಾಷೆಗಳಲ್ಲಿ ಸುಂದರ ಅನುವಾದಗಳನ್ನು ಒದಗಿಸಿದ್ದಾರೆ. ಸಂಸ್ಕೃತ ಮಹಾ ಕಾವ್ಯಗಳ ಸಂಬಂಧದಲ್ಲಿ ಇನ್ನೂ ಈ ಕೆಲಸ ನಡೆಯದಿರುವುದು ದುರದೃಷ್ಟ; ಯಾವಾಗ ನಡೆಯುತ್ತದೆ ಅಥವ ನಡೆಯುವ ಸಂಭವವಿದೆಯೆ ಎಂದು ನಾನು ಹೇಳಲಾರೆ. ನಮ್ಮ ವಿದ್ವಾಂಸರುಗಳ ಸಂಖ್ಯೆ ಹೆಚ್ಚುತ್ತಿದೆ; ವಿದ್ವತ್ತು ಬೆಳೆಯುತ್ತಿದೆ; ಕವಿಗಳೂ ನಮ್ಮಲ್ಲಿದ್ದಾರೆ, ಆದರೆ ಇಬ್ಬರ ಮಧ್ಯೆ ಇರುವ ಅಂತರವು ಅಪಾರವಿದೆ ಮತ್ತು ದಿನೇ ದಿನೇ ಹೆಚ್ಚುತ್ತಿದೆ. ನಮ್ಮ ದೃಷ್ಟಿಶಕ್ತಿಯು ಬೇರೆ ಯಾವಕಡೆಗೋ ಹರಿಯುತ್ತಿದೆ; ಇಂದಿನ ಜೀವನದ ಜಟಿಲಸಮಸ್ಯೆಗಳು ಮಹಾಕಾವ್ಯಗಳ ಅಭ್ಯಾಸಕ್ಕೆ ಅವಕಾಶವನ್ನು ಕೊಡುವುದಿಲ್ಲ. ಭಾರತದಲ್ಲಂತೂ ನಾವು ಬೇರೆ ದಾರಿಯನ್ನೇ ಹಿಡಿದು ಗುರಿಯನ್ನು ಸಾಧಿಸಬೇಕಾಗಿದೆ. ಪುರಾತನಕಾಲದಲ್ಲಿ ಮಹಾ ಕಾವ್ಯಗಳ ಅಭ್ಯಾಸಕ್ಕೆ ನಾವು ಬಹಳ ಪ್ರಾಶಸ್ತ್ಯ ಕೊಟ್ಟೆವು. ನಮ್ಮ ಕಾವ್ಯಸೃಷ್ಟಿಯ ಅಂತಶ್ಶಕ್ತಿಯನ್ನು ಕಳೆದುಕೊಂಡದ್ದರಿಂದ ಅಷ್ಟು ವಿಶ್ವಾಸದಿಂದ ಹೆಮ್ಮೆ ಪಡುತ್ತಿದ್ದ ಮಹಾ ಕಾವ್ಯಗಳಿಂದಲೂ ನಾವು ಸ್ಫೂರ್ತಿ ಪಡೆಯದಾದೆವು. ಭಾರತೀಯ ಮಹಾ ಕಾವ್ಯಗಳ ಅನುವಾದಗಳು ಬರುತ್ತವೆಯೆಂದೂ, ವಿದ್ವಾಂಸರು ಸಂಸ್ಕೃತ ಶಬ್ದಗಳ ಮತ್ತು ಹೆಸರುಗಳ ಶುದ್ಧ ಉಚ್ಚಾರಣೆಗೆ ದಾರಿ ತೋರುವರೆಂದೂ ಸ್ವರಭೇದಗಳ ಪರಿಚಯ ಮಾಡಿ ಕೊಡುವರೆಂದೂ, ವಿವರವಾದ ಅರ್ಥಕೋಶ, ವಿವರಣೆ ಮತ್ತು ಉಪಮಾನಗಳನ್ನು ಕೊಡುವರೆಂದೂ, ನಂಬಿದ್ದೇನೆ. ಸಾಹಿತ್ಯ ದೃಷ್ಟಿಯಿಂದ ಎಲ್ಲ ಆಡಂಬರವೂ ಇರುತ್ತದೆ; ಆದರೆ ಜೀವಾಳ ಮಾತ್ರ ಇರುವುದಿಲ್ಲ. ಸೌಂದರ್ಯ, ಗಾನ ಮಾಧುರ್ಯ ಕಲ್ಪನಾ ಸಾಹಸಗಳಿಂದ ತುಂಬಿ ತುಳುಕುತ್ತ ಸುಂದರ ಸಜೀವವಸ್ತುವಾದ ಯೌವನ ಸೌಂದರ್ಯ ಯಾವುದೂ ಇರುವುದಿಲ್ಲ. ನಿರ್ಜೀವ, ನಿಸ್ಸತ್ವ, ಜೀರ್ಣವಸ್ತು ಮಾತ್ರ ಕಾಣುತ್ತದೆ. ಅದರಲ್ಲಿ ದೊರೆಯುವುದು ಪಾಂಡಿತ್ಯದ ಕೊಳಕುವಾಸನೆ ಮತ್ತು ಶ್ರಮದ ಜಿಗುಟು.

ಜನಸಾಮಾನ್ಯದ ಬಳಕೆಯ ಭಾಷೆಯಾಗಿ ನಿಂತೊಡನೆ ಸಂಸ್ಕೃತವು ಮೃತಭಾಷೆಯಾಯಿತೆಂದು ಹೇಳಲು ಸಾಧ್ಯವಿಲ್ಲ ಕಾಳಿದಾಸನ ಕಾಲದಲ್ಲಿ ಸಹ ಭಾರತಾದ್ಯಂತ ವಿದ್ವಜ್ಜನರ ಭಾಷೆಯಾಗಿದ್ದರೂ ಅದು ಜನಸಾಮಾನ್ಯದ ಬಳಕೆಯ ಭಾಷೆಯಾಗಿರಲಿಲ್ಲ. ಈ ರೀತಿ ಅನೇಕ ಶತಮಾನಗಳ ಕಾಲ ಆಗ್ನೇಯ ಮತ್ತು ಮಧ್ಯ ಏಷ್ಯದ ಭಾರತದ ವಲಸೆ ರಾಜ್ಯಗಳಿಗೂ ಹಬ್ಬಿತ್ತು. ಕ್ರಿಸ್ತಶಕ ಏಳನೆಯ ಶತಮಾನದಲ್ಲಿ ಕಾಂಬೋಡಿಯದಲ್ಲಿ ಸಂಸ್ಕೃತ ಕಾವ್ಯವಾಚನ ಮತ್ತು ನಾಟಕಗಳ್ಳ ನಡೆದುದಕ್ಕೆ ಸಾಕ್ಷ್ಯ ದೊರೆತಿದೆ. ತಾಯ್‌ಲ್ಯಾಂಡ್ (ಸೈಯಾಮ್) ನಲ್ಲಿ ಈಗಲೂ ಕೆಲವು ಸಮಾರಂಭಗಳನ್ನು ಸಂಸ್ಕೃತ ಪ್ರಾರ್ಥನೆಯಿಂದ ಆರಂಭಿಸುತ್ತಾರೆ. ಭಾರತದಲ್ಲಿ ಸಂಸ್ಕೃತದ ಅಂತಃಶಕ್ತಿಯು ಅದ್ಭುತವಾಗಿದೆ. ಹದಿಮೂರನೆಯ ಶತಮಾನದ ಆರಂಭದಲ್ಲಿ ಆಫ್ಘನ್ ರಾಜರುಗಳು ದೆಹಲಿಯ ಸಿಂಹಾಸನವನ್ನು ಏರಿದಾಗ ಭಾರತದ ಬಹು ಭಾಗಕ್ಕೆ ಪಾರಶಿ ಭಾಷೆಯು ರಾಜಭಾಷೆಯಾಯಿತು. ಕ್ರಮೇಣ ಅನೇಕ ವಿದ್ಯಾವಂತರು ಸಂಸ್ಕೃತ ಬಿಟ್ಟು ಪಾರ್ಸಿ ಕಲಿಯಲಾರಂಭಿಸಿದರು. ಜನರ ಬಳಕೆಯ

ಭಾಷೆಗಳೂ ಬೆಳೆದವು ಮತ್ತು ಅವುಗಳಲ್ಲೂ ಸಾಹಿತ್ಯ ಸೃಷ್ಟಿಯಾಯಿತು. ಇಷ್ಟೆಲ್ಲ ಆಘಾತಗಳು ಒದಗಿದರೂ ಸಂಸ್ಕೃತವು ಮುಂದುವರಿಯಿತು; ಆದರೆ ಅದರ ಮಟ್ಟ ಸ್ವಲ್ಪ ಕೆಳಗೆ ಇಳಿಯಿತು. ಡಾಕ್ಟರ್ ಎಫ್. ಎಫ್. ಥಾಮಸ್ ೧೯೩೭ ರಲ್ಲಿ ತಿರುವಾಂಕೂರಿನಲ್ಲಿ ನಡೆದ ಪ್ರಾಚ್ಯ ಸಮ್ಮೇಳನದ ಅಧ್ಯಕ್ಷರಾಗಿ ತಮ್ಮ ಅಧ್ಯಕ್ಷ ಭಾಷಣದಲ್ಲಿ ಭಾರತದಲ್ಲಿ ಸಂಸ್ಕೃತವು ಎಂತಹ ಅದ್ಭುತ ಸಂಘಟನ ಶಕ್ತಿಯಾಗಿತ್ತು, ಈಗಲೂ ಎಷ್ಟು ಪ್ರಚಂಡ ಶಕ್ತಿಯಾಗಿದೆ ಎಂದು ತೋರಿಸಿದ್ದಾರೆ. ಇಂದಿನ ಭಾರತಕ್ಕೆ ಸಹ ಒಂದು ಬಗೆಯ ಸರಳ ಸಂಸ್ಕೃತ, ಮೂಲ ಸಂಸ್ಕೃತ ರಾಷ್ಟ್ರೀಯ ಭಾಷೆಯಾಗಲು ಪ್ರೋತ್ಸಾಹಿಸ ಬೇಕೆಂದು ಸೂಚಿಸಿರುತ್ತಾರೆ! "ಅನೇಕ ಸಾಮಾಜಿಕ ವಿಪ್ಲವಗಳೂ, ಧರ್ಮ ಸುಧಾರಣೆಗಳೂ, ವಿದೇಶೀಯರ ದಂಡಯಾತ್ರೆಗಳಾದರೂ ಇಂದಿನ ಭಾರತಕ್ಕೂ ಪ್ರಾಚೀನ ಭಾರತಕ್ಕೂ ನಿಕಟವೂ ಗಾಢವೂ ಆದ ಬಾಂಧವ್ಯವಿದೆ. ಈಗಲೂ ಭಾರತಾದ್ಯಂತ ಮಾತನಾಡುವ ಏಕಮಾತ್ರ ಭಾಷೆ ಎಂದರೆ ಸಂಸ್ಕೃತ. ಇಂಗ್ಲೀಷರ ಆಳ್ವಿಕೆ, ಇಂಗ್ಲೀಷ್ ಶಿಕ್ಷಣ ನಡೆಯುತ್ತ ಒಂದು ಶತಮಾನ ಗತಿಸಿದಾಗ್ಯೂ ಈಗಲೂ 'ದಾಂತೆ' ಕಾಲದಲ್ಲಿ ಯೂರೋಪಿನ ಜನರಿಗೆ ಲ್ಯಾಟಿನ್ ತಿಳಿದುದಕ್ಕಿಂತ ಹೆಚ್ಚಾಗಿ ಭಾರತದಲ್ಲಿ ಜನರಿಗೆ ಸಂಸ್ಕೃತವು ತಿಳಿದಿದೆ" ಎಂದು ಮ್ಯಾಕ್ಸ್‌ಮುಲ್ಲರ್ ಬಹು ಹಿಂದೆಯೆ ವ್ಯಕ್ತಪಡಿಸಿದ ಅಭಿಪ್ರಾಯವನ್ನು ಒಪ್ಪಿ ಉದ್ಧರಿಸಿದರು.

'ದಾಂತೆ' ಕಾಲದಲ್ಲಿ ಯುರೋಪಿನಲ್ಲಿ ಲ್ಯಾಟಿನ್ ಎಷ್ಟು ಜನರಿಗೆ ತಿಳಿದಿತ್ತೋ ನಾನರಿಯೆ. ಈಗ ಸಂಸ್ಕೃತವು ಎಷ್ಟು ಜನರಿಗೆ ತಿಳಿದಿದೆ ಎಂಬುದು ಗೊತ್ತಿಲ್ಲ. ಆದರೂ ಈಗಲೂ ಸಂಸ್ಕೃತ ಬಲ್ಲವರು, ಅದರಲ್ಲು ಮುಖ್ಯವಾಗಿ ದಕ್ಷಿಣ ಭಾರತದಲ್ಲಿ, ಅನೇಕರಿದ್ದಾರೆ ಎಂದು ಮಾತ್ರಬಲ್ಲೆ. ಹಿಂದಿ, ಬಂಗಾಳಿ, ಮರಾಠಿ, ಗುಜರಾತಿ ಮುಂತಾದ ಮಾತನಾಡುವ ಸುಲಭ ಸಂಸ್ಕೃತಜನ್ಯ ಭಾಷೆಗಳನ್ನು ಮಾತನಾಡುವವರಿಗೆ ಸಂಸ್ಕೃತವನ್ನು ಅರ್ಥ ಮಾಡಿಕೊಳ್ಳುವುದು ಕಷ್ಟವಲ್ಲ. ಇಂದಿನ ಉರ್ದು ಭಾಷೆಯು ಅದೇ ಒಂದು ಇಂಡೊ ಆರ್ಯ ಭಾಷೆಯಾಗಿ ಅದರಲ್ಲೂ ಶೇಕಡ ೮೦ರಷ್ಟು ಸಂಸ್ಕೃತಜನ್ಯ ಶಬ್ದಗಳಿವೆ. ಪಾರಸಿ ಮತ್ತು ಸಂಸ್ಕೃತ ಭಾಷೆಗಳ ಮೂಲರೂಪ ಒಂದೇ ಇರುವದರಿಂದ ಒಂದುಶಬ್ದ ಸಂಸ್ಕೃತದಿಂದ ಹುಟ್ಟಿದ್ದೆ ಅಥವ ಪಾರಸಿ ಭಾಷೆಯಿಂದ ಹುಟ್ಟಿದ್ದೆ ಹೇಳುವುದು ಬಹುಕಷ್ಟ. ದಕ್ಷಿಣ ಭಾರತದ ದ್ರಾವಿಡ ಭಾಷೆಗಳು ಮೂಲದಲ್ಲಿ ಬೇರೆಯಾದರೂ ಸಂಸ್ಕೃತದಿಂದ ಅನೇಕ ಶಬ್ದಗಳನ್ನು ಮೂಲರೂಪದಲ್ಲೋ, ರೂಪಾಂತರಿಸಿಯೋ ಬಳಸಿಕೊಂಡಿವೆ. ಅವುಗಳ ಶಬ್ದಕೋಶದಲ್ಲಿ ಅರ್ಧದಷ್ಟು ಸಂಸ್ಕೃತಶಬ್ದಗಳಿವೆ.

ಸಂಸ್ಕೃತದಲ್ಲಿ ನಾಟಕಗಳ ನಾನಾವಿಷಯಗಳ ಮೇಲೆ, ಮಧ್ಯಯುಗದಲ್ಲಿ ಮತ್ತು ಈಚೆಗೆ ವಿಪುಲ ಗ್ರಂಥರಾಶಿಯು ಬೆಳೆದಿದೆ. ಗ್ರಂಥಗಳು ಮತ್ತು ಸಂಸ್ಕೃತ ಮಾಸಪತ್ರಿಕೆಗಳು ಈಗಲೂ ಬರುತ್ತಿವೆ. ಮಟ್ಟವು ಮಾತ್ರ ಉನ್ನತವಾಗಿಲ್ಲ ಮತ್ತು ಸಂಸ್ಕೃತ ಸಾಹಿತ್ಯದ ಪ್ರೌಢಿಮೆಗೆ ಅವುಗಳಿಂದ ಏನೂ ಪ್ರಯೋಜನವಿಲ್ಲ. ಆದರೆ ಅಷ್ಟು ದೀರ್ಘಕಾಲದಿಂದ ಈಗಲೂ ಸಹ ಸಂಸ್ಕೃತವು ಜನರನ್ನು ಮುಗ್ಧಗೊಳಿಸಿರುವುದೇ ಆತ್ಯಾಶ್ಚರ್ಯ. ವಿದ್ವಾಂಸರ ಕೆಲವು ಮಹಾ ಸಭೆಗಳಲ್ಲಿ ಈಗಲೂ ಸಂಸ್ಕೃತದಲ್ಲಿ ಭಾಷಣಗಳಾಗುತ್ತವೆ.

ಈ ರೀತಿ ಸಂಸ್ಕೃತವು ಅವಿಚ್ಛಿನ್ನವಾಗಿ ಬಳಕೆಯ ಭಾಷೆಯಾಗಿ ಬಂದುದರಿಂದ ಆಧುನಿಕ ಭಾರತೀಯ ಭಾಷೆಗಳು ಪುಷ್ಟಿಗೊಂಡು ಬೆಳೆಯಲು ಅವಕಾಶವಾಗಲಿಲ್ಲ. ವಿದ್ವಾಂಸರು ಅವುಗಳನ್ನು ಅಶ್ಲೀಲಭಾಷೆಗಳು, ಸ್ವತಂತ್ರ ಕಾವ್ಯಗಳ ಅಥವ ಪ್ರೌಢ ಗ್ರಂಥಗಳ ರಚನೆಗೆ ಯೋಗ್ಯವಾದವುಗಳಲ್ಲ ಎಂದು ಭಾವಿಸಿದ್ದರು. ಈ ಬಗೆಯ ಪ್ರಬಲ ವಿರೋಧವಿದ್ದರೂ ಕಾಲಕ್ರಮೇಣ ದೇಶೀಯ ಭಾಷೆಗಳು ರೂಪುಗೊಂಡು, ವಿವಿಧ ಸಾಹಿತ್ಯ ಸೃಷ್ಟಿಯಿಂದ ತಮ್ಮ ಸಾಹಿತ್ಯ ಶ್ರೀಯನ್ನು ಬೆಳೆಸಿಕೊಂಡವು.

ಆಧುನಿಕ ತಾಯ್‌ಲ್ಯಾಂಡ್‌ನಲ್ಲಿ ಪಾರಿಭಾಷಿಕ, ವೈಜ್ಞಾನಿಕ, ರಾಜಕೀಯ ವಿಷಯಗಳಿಗೆ ಹೊಸ ಶಬ್ದಗಳನ್ನು ಹುಡುಕಬೇಕಾಗಿ ಬಂದಾಗ ಅವರು ಅನೇಕ ಶಬ್ದಗಳನ್ನು ಸಂಸ್ಕೃತದಿಂದಲೇ ತೆಗೆದು ಕೊಂಡಿರುವುದು ಒಂದು ವಿಶೇಷ.

ಆದರ್ಶ ಪುರುಷನಲ್ಲದಿದ್ದರೂ ರಾಜಕಾರಣದಲ್ಲಿ ಯಶಸ್ಸು ಪಡೆಯಬಹುದು. ಒಬ್ಬ ನ್ಯಾಯವಾದಿ ವಾದ ಸಾಮರ್ಥ್ಯದಲ್ಲಿ ಅದ್ವಿತೀಯನಾಗಿ, ನ್ಯಾಯಶಾಸ್ತ್ರ ಪಾರಂಗತನಿದ್ದರೂ ಇತರ ವಿಷಯಗಳು ಏನೂ ತಿಳಿಯದೆ ಇರಬಹುದು. ಆಧುನಿಕ ಯುಗದ ನಿಜವಾದ ಪ್ರತಿನಿಧಿಯಾದ ವಿಜ್ಞಾನಿಯು ಸಹ ತನ್ನ ಅಧ್ಯಯನ ಮಂದಿರ ಅಥವ ಪ್ರಯೋಗ ಶಾಲೆಯಿಂದ ಹೊರಗೆ ಹೋದ ವೇಳೆ ಅನೇಕ ಬಾರಿ ವಿಜ್ಞಾನಮಾರ್ಗ ಮತ್ತು ದೃಷ್ಟಿಯನ್ನು ಮರೆಯುತ್ತಾನೆ.

ನಮ್ಮ ನಿತ್ಯ ಜೀವನದಮೇಲೆ ವಾಸ್ತವಿಕ ರೀತಿಯಲ್ಲಿ ಪರಿಣಾಮಮಾಡತಕ್ಕ ಸಮಸ್ಯೆಗಳ ವಿಷಯವೂ ಹೀಗೆಯೆ. ದರ್ಶನ ಮತ್ತು ತತ್ವಶಾಸ್ತ್ರಗಳಲ್ಲಿ ಈ ಸಮಸ್ಯೆಗಳು ಬಹುದೂರ ಇವೆ; ಸ್ವಲ್ಪ ಸ್ಥಿರವೆಂದು ಕಾಣುತ್ತವೆ. ಅಲ್ಲದೆ ನಮ್ಮ ನಿತ್ಯ ಜೀವನಕ್ಕೆ ಸಂಬಂಧವೂ ಕಡಮೆ. ಕಠಿಣ ನಿಯಮ ಬದ್ಧ ಜೀವನ ಮತ್ತು ಮಾನಸಿಕ ಶಿಕ್ಷಣವಿಲ್ಲದೆ ನಮ್ಮಲ್ಲಿ ಅನೇಕರಿಗೆ ಅದು ಅವರ ಅರಿವಿನ ಮಟ್ಟ ವನ್ನು ಮೀರಿದ್ದು. ಆದರೂ ನಮ್ಮಲ್ಲಿ ಪ್ರತಿಯೊಬ್ಬನಿಗೂ ತಿಳಿದೋ, ತಿಳಿಯದೆಯೋ ಒಂದು ಜೀವನ ದರ್ಶನವಿದೆ. ನಾವಾಗಿ ಯೋಚನೆಮಾಡಿ ಒಪ್ಪದೆ ಇದ್ದುದಾದರೆ ಅನುವಂಶೀಯವಾಗಿ ಬಂದದ್ದು, ಅಥವ ಪರರ ಉಪದೇಶವನ್ನು ಅವಲಂಬಿಸಿ ಸ್ವಯಂಸಿದ್ಧವೆಂದು ಭಾವಿಸಿದ್ದು. ಅಥವ ಈ ಯೋಚನಾ ಪರಂಪರೆಯ ತೊಡಕಿನಿಂದ ತಪ್ಪಿಸಿಕೊಳ್ಳಬೇಕೆಂದರೆ ಯಾವುದೋ ಒಂದು ಮತದಲ್ಲಿ, ಸಿದ್ಧಾಂತದಲ್ಲಿ, ಅಥವ ರಾಷ್ಟ್ರೀಯ ಭವಿಷ್ಯದಲ್ಲಿ ಅಥವ ಮನಸ್ಸಿಗೊಂದು ಶಾಂತಿಕೊಡುವ ಯಾವುದೋ ಅಸ್ಪಷ್ಟ ಮಾನವ ಸೇವಾಕಾರ್ಯದಲ್ಲಿ ನಿರತರಾಗಿ ಶಾಂತರಾಗಬಹುದು. ಅನೇಕ ಸಂದರ್ಭಗಳಲ್ಲಿ ಇವೆಲ್ಲ ಮತ್ತು ಇನ್ನೂ ಅನೇಕ ಮಾರ್ಗಗಳು ಒಂದೊಂದಕ್ಕೂ ಯಾವ ಸಂಬಂಧವೂ ಇಲ್ಲದಿದ್ದರೂ, ಒಂದೇ ಬಾರಿ ನಮ್ಮೆದುರು ನಿಲ್ಲುತ್ತವೆ. ನಮಗೆ ಅನೇಕ ಜೀವನ ಮುಖಗಳಿವೆ; ಪ್ರತಿಯೊಂದು ಜೀವನ ಮುಖವೂ ಒಂದೊಂದು ಪ್ರತ್ಯೇಕ ವಿಭಾಗವಾಗಿಯೇ ಇರುತ್ತದೆ.

ಅತ್ಯುನ್ನತ ಜೀವನದ ಕೆಲವು ಆದರ್ಶವ್ಯಕ್ತಿಗಳನ್ನು ಬಿಟ್ಟರೆ, ಪ್ರಾಚೀನಕಾಲದ ಮಾನವನ ವ್ಯಕ್ತಿತ್ವ ಇಂದಿನ ವ್ಯಕ್ತಿತ್ವಕ್ಕಿಂತ ಕೆಳಮಟ್ಟದಲ್ಲಿದ್ದರೂ ಪ್ರಾಯಶಃ ಮಾನವ ಜೀವನದಲ್ಲಿ ಹೆಚ್ಚು ಒಗ್ಗಟ್ಟು ಮತ್ತು ಸಮರಸತೆ ಇತ್ತು. ಮಾನವ ಕುಲವು ಅನುಭವಿಸುತ್ತಿರುವ ಈ ದೀರ್ಘಸಂಕ್ರಾಂತಿ ಕಾಲದಲ್ಲಿ ಆ ಒಗ್ಗಟ್ಟನ್ನು ನಾವು ಮುರಿದಿದ್ದೇವೆ. ಇನ್ನೂ ಹೊಸ ಸಂಬಂಧ ಕಲ್ಪಿಸಲು ಸಾಧ್ಯವಾಗಿಲ್ಲ. ಇನ್ನೂ ಅದೇ ಮತಧರ್ಮದ ಮಾರ್ಗವನ್ನೇ ಅನುಸರಿಸುತ್ತಿದೇವೆ; ಜೀರ್ಣ ಸಂಪ್ರದಾಯಗಳು ಮತ್ತು ಮೂಢ ನಂಬಿಕೆಗಳಿಗೇ ಅಂಟಿಕೊಂಡಿದ್ದೇವೆ; ಆದರೂ ವಿಜ್ಞಾನ ಮಾರ್ಗದಲ್ಲಿ ವೈಜ್ಞಾನಿಕ ರೀತಿಯಲ್ಲಿ ಜೀವಿಸುತ್ತಿದೇವೆ ಎಂದು ಹರಟುತ್ತೇವೆ, ಆತ್ಮವಂಚನೆಮಾಡಿಕೊಳ್ಳುತ್ತೇವೆ. ಪ್ರಾಯಶಃ ವಿಜ್ಞಾನ ಮಾರ್ಗದ ಜೀವನ ದೃಷ್ಟಿಯು ಬಹಳ ಸಂಕುಚಿತವಿರಬಹುದು; ಜೀವನದ ಅನೇಕ ಸತ್ಯ ವೈಶಿಷ್ಟ್ಯವನ್ನು ಅಲಕ್ಷ್ಯ ಮಾಡಿರಬಹುದು; ಆ ಕಾರಣದಿಂದ ಐಕ್ಯತೆ ಮತ್ತು ಸಮರಸತೆಗೆ ಸರಿಯಾದ ಉಗಮ ಮೂಲ ದೊರೆಯದಿರಬಹುದು. ಮೊದಲಿಗಿಂತ ಹೆಚ್ಚು ಔನ್ನತ್ಯದ ಮಾನವ ವ್ಯಕ್ತಿತ್ವಕ್ಕೆ ಒಂದು ಹೊಸ ಸಮರಸತೆಯನ್ನು ನಾವು ಪಡೆಯಲು ಸಾಧ್ಯವಾಗಬಹುದು.

ಆದರೆ ಸಮಸ್ಯೆಯು ಈಗ ಅತಿ ಕಷ್ಟವೂ ಜಟಿಲವೂ ಆಗಿದೆ. ಏಕೆಂದರೆ ಅದು ಈಗ ಮಾನವ ವ್ಯಕ್ತಿತ್ವದ ಮೇರೆಯನ್ನು ದಾಟಿದೆ. ಪ್ರಾಚೀನ ಕಾಲದ ಮತ್ತು ಮಧ್ಯಯುಗದ ಕ್ಷೇತ್ರಮಿತಿಯಲ್ಲಿ ಒಂದು ವಿಧವಾದ ಸಮರಸ ವ್ಯಕ್ತಿತ್ವವನ್ನು ಬೆಳಸುವುದು ಸುಲಭಸಾಧ್ಯವಿತ್ತು. ನಗರ ಮತ್ತು ಗ್ರಾಮಗಳ ಸಣ್ಣ ಪ್ರಪಂಚದಲ್ಲಿ ನಿಯಮಬದ್ಧ ಸಾಮಾಜಿಕ ರಚನೆ ಮತ್ತು ಆಚರಣೆಯ ಭಾವನೆ ಗಳಿಂದ ವ್ಯಕ್ತಿ ಮತ್ತು ಸಮಾಜಗಳೆರಡೂ ಪರಧಾಳಿಯನ್ನೆದುರಿಸಿ ಸುರಕ್ಷಿತವಾಗಿ ಸ್ವಸಂತೃಪ್ತ ಜೀವನ ವನ್ನು ನಡೆಸಿದವು. ಈಗ ಒಬ್ಬ ವ್ಯಕ್ತಿಯ ಕಾರ್ಯಕ್ಷೇತ್ರವು ವಿಶ್ವವನ್ನೇ ಆವರಿಸಿದೆ. ವಿವಿಧ ಭಾವನೆಯ ಸಾಮಾಜಿಕ ರಚನೆಗಳಿಗೆ ಒಂದಕ್ಕೊಂದಕ್ಕೆ ಘರ್ಷಣೆಯಾಗುತ್ತಿದೆ; ಮತ್ತು ಅವೆಲ್ಲದರ ಹಿಂದೆ ಭಿನ್ನ ಭಿನ್ನ ಜೀವನದರ್ಶನಗಳಿವೆ. ಎಲ್ಲಿಯೋ ಹುಟ್ಟಿದ ಚಂಡಮಾರುತವು ಇನ್ನೊಂದು ಕಡೆ ಸುಂಟರಗಾಳಿಯನ್ನು ಎಬ್ಬಿಸುತ್ತದೆ. ಬೇರೊಂದು ಕಡೆ ಅಪಭ್ರಮಣಮಾರುತವನ್ನೆಬ್ಬಿಸುತ್ತದೆ.

ಆದ್ದರಿಂದ ಇಂದಿನ ಜೀವನದಲ್ಲಿ ಸಮರಸತೆಯನ್ನು ಕಾಣಲು ಸಾಧ್ಯವಾಗಬೇಕಾದರೆ ಪ್ರಪಂಚದಲ್ಲೆಲ್ಲ ಒಂದು ಬಗೆಯ ಸಾಮಾಜಿಕ ಸಮರಸತೆಯ ಬೆಂಬಲವಿರಬೇಕು.

ಇತರ ದೇಶಗಳಿಗಿಂತ ಭಾರತದಲ್ಲಿ ಸಮಾಜರಚನೆಯಲ್ಲಿ ಸನಾತನ ಭಾವನೆಯೂ ಮತ್ತು ಅದಕ್ಕೆ ತಳಹದಿಯಾದ ಜೀವನದರ್ಶನವೂ ಈಗಲೂ ಸ್ವಲ್ಪಮಟ್ಟಿಗೆ ಜೀವಂತ ಇವೆ. ಸಮಾಜಕ್ಕೊಂದು ಭದ್ರತೆ ಕೊಟ್ಟು ಜೀವನ ರೀತಿಗನುಗುಣವಾಗಿದ್ದ ಯಾವುದೋ ಒಂದು ವಿಶೇಷ ಸದ್ಗುಣವು ಇರದಿದ್ದರೆ ಅದು ಸಾಧ್ಯವಾಗುತ್ತಿರಲಿಲ್ಲ. ಸಮಾಜರಚನೆಯಲ್ಲಿನ ದುರ್ಗುಣವು ಸದ್ಗುಣವನ್ನು ನಾಶಮಾಡದಿದ್ದರೆ ಅಂತ್ಯದಲ್ಲಿ ಖಿಲವಾಗುತ್ತಿರಲಿಲ್ಲ ಮತ್ತು ಆ ರಚನೆಯು ಜೀವನದಿಂದ ದೂರವಾದ ಒಂದು ಹೊಗೆಯಾಗಿ ಜೀವನ ವಿಕಾಸಕ್ಕೆ ಆತಂಕವಾಗುತ್ತಿರಲಿಲ್ಲ. ಏನೇ ಆಗಲಿ ಈಗ ಅವುಗಳನ್ನು ಪ್ರತ್ಯೇಕ ಘಟನೆಗಳೆಂದು ಕಾಣಲು ಸಾಧ್ಯವಿಲ್ಲ. ವಿಶ್ವದ ಪರಿಸ್ಥಿತಿಯೊಡನೆ ತುಲನಮಾಡಿ ವಿಶ್ವದೊಂದಿಗೆ ಸಮರಸವಾಗಿರುವಂತೆ ಮಾಡಬೇಕಾಗಿದೆ.

"ಭಾರತದಲ್ಲಿ ಧರ್ಮವು ಕೇವಲ ಒಂದು ಸಿದ್ಧಾಂತವಲ್ಲ. ವಿವಿಧ ಧಾರ್ಮಿಕ ಬೆಳವಣಿಗೆಯ ಮಟ್ಟದ ಮತ್ತು ವಿವಿಧ ಜೀವನ ಮಟ್ಟದ ದಿನಚರ್ಯೆಗೆ ಒಂದು ಕಾರ್ಯಕ್ರಮದ ವೇಳಾಪತ್ರಿಕೆ. ಧರ್ಮವು ಜೀವನದಿಂದ ದೂರವಿರುವ ಒಂದು ಸಿದ್ಧಾಂತವೆಂದು ನಂಬಿರುವುದು ಒಂದು ಬಗೆ. ಆದರೆ ಮಾನವನ ನಡತೆಗೆ ನಿರ್ಣೀತವಾದ ಕಾರ್ಯವಿಧಾನ ಎನ್ನುವುದಾದರೆ ಜೀವನಕ್ಕನುಗುಣವಾಗಿದ್ದು ಜೀವನವನ್ನು ಪೋಷಿಸಬೇಕು. ಇಲ್ಲವಾದರೆ ಜೀವನವನ್ನು ಸಂಕುಚಿತಗೊಳಿಸುತ್ತದೆ. ಈ ಕಾರ್ಯವಿಧಾನದ ಮೂಲ ಉದ್ದೇಶವು ಅದರ ಕಾಯಶಕ್ತತೆ, ಜೀವನಾನುಸರಣೆಯ ಪರಿಸ್ಥಿತಿಗನುಗುಣವಾದ ಪರಿವರ್ತನ ಶಕ್ತಿಯು ಎಲ್ಲಿಯವರೆಗೆ ಇದ್ದು ಸಾಧ್ಯವೊ ಅಲ್ಲಿಯವರೆಗೆ ಅದರ ಉಪಯೋಗ; ಮತ್ತು ಅದು ತನ್ನ ನಿಯಮಿತ ಕರ್ತವ್ಯಪಾಲನೆಯನ್ನೂ ಮಾಡುತ್ತದೆ. ಜೀವನ ಪಥವನ್ನು ಬಿಟ್ಟು ಅಡ್ಡದಾರಿ ಹಿಡಿದೊಡನೆ ಸಾಮಾಜಿಕ ಅವಶ್ಯಕತೆಗಳಿಂದ ದೂರವಾಗುತ್ತದೆ; ಜೀವನಕ್ಕೂ ಅದಕ್ಕೂ ಮಧ್ಯೆ ಅಂತರವು ಹೆಚ್ಚುತ್ತದೆ; ಅದರ ಅಂತಸ್ಸತ್ವವೂ ಮತ್ತು ಪ್ರಾಮುಖ್ಯತೆಯೂ ಮಾಯವಾಗುತ್ತದೆ.

ತಾತ್ವಿಕ ಸಿದ್ಧಾಂತಗಳ ಮತ್ತು ಕಲ್ಪನೆಗಳ ವಿಚಾರ ಸರಣಿಯಲ್ಲಿ ನಿತ್ಯಪರಿವರ್ತನವಾಗುತ್ತಿರುವ ಜೀವನದ ತಿರುಳಿಗೆ ಎಡೆಯಿಲ್ಲ; ಆದರೆ ಅದರ ಹಿಂದೆ ಇರುವ-ಅಂಥದು ಇದ್ದರೆ—ಶಾಶ್ವತ ಸತ್ಯಕ್ಕೆ. ಆದ್ದರಿಂದ ತಾತ್ವಿಕ ಸಿದ್ಧಾಂತಗಳಲ್ಲಿ ಕಲ್ಪನೆಗಳಲ್ಲಿ ಬಾಹ್ಯಪರಿವರ್ತನಗಳಿಂದ ವ್ಯತ್ಯಸ್ತವಾಗದ ಒಂದು ಸತ್ಯತೆ ಇದೆ. ಆದರೆ ಅವುಗಳ ವಿಕಾಸವು ಅವುಗಳ ಸನ್ನಿವೇಶದ ಫಲ, ಮತ್ತು ಅದು ಯಾವ ಮನಸ್ಸಿನ ಆ ಕಲ್ಪನೆಯೋ ಆ ಮನಸ್ಸಿನ ವಿಕಸನಮಟ್ಟದ ಫಲ. ಅದರ ಪ್ರತಿಭೆ ಬೀರದಂತೆ ಜನಸಾಮಾನ್ಯದ ಜೀವನದರ್ಶನವೂ ಪರಿವರ್ತನವಾಗುತ್ತದೆ. ಭಾರತದಲ್ಲಿ ತತ್ವಶಾಸ್ತ್ರವು ಅಲ್ಪಸಂಖ್ಯೆಯ ಮಹಾ ಜ್ಞಾನಿಗಳ ಸ್ವತ್ತಾದರೂ, ಇತರ ದೇಶಗಳಿಗಿಂತ ಹೆಚ್ಚು ಪ್ರಭಾವಕಾರಿಯಾಗಿದೆ. ರಾಷ್ಟ್ರ ದೃಷ್ಟಿಯನ್ನು ರೂಪುಗೊಳಿಸುವುದರಲ್ಲಿ ಮತ್ತು ಮನಸ್ಸಿಗೊಂದು ವಿಶಿಷ್ಟಭಾವನಾ ನಿಲುವನ್ನು ಕೊಡುವುದರಲ್ಲಿ ಬಹಳ ಪರಿಣಾಮಕಾರಿಯಾಗಿದೆ.

ಈ ಕಾರ್ಯದಲ್ಲಿ ಬೌದ್ಧ ದರ್ಶನವು ಬಹಳ ಪ್ರಮುಖಪಾತ್ರವನ್ನು ವಹಿಸಿತು, ಮತ್ತು ಮಧ್ಯಯುಗದಲ್ಲಿ ಇಸ್ಲಾಂ ಧರ್ಮವು ಹಿಂದೂ ಧರ್ಮದ ಮತ್ತು ಇಸ್ಲಾಂ ಧರ್ಮದ ಸಾಮಾಜಿಕ ಮತ್ತು ಧಾರ್ಮಿಕ ಬುನಾದಿಯನ್ನು ಒಂದುಕೂಡಿಸುವ ಪ್ರಯತ್ನದ ಫಲವಾಗಿ ಹುಟ್ಟಿದ ಹೊಸ ಮತಗಳ ಮೂಲಕ ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ರಾಷ್ಟ್ರದೃಷ್ಟಿಯ ಮೇಲೆ ತನ್ನ ಪ್ರಭಾವವನ್ನು ಬೀರಿತು. ಆದರೂ ಈ ರೀತಿ ರಾಷ್ಟ್ರೀಯ ಪ್ರಭಾವವನ್ನುಂಟುಮಾಡಿರುವದರಲ್ಲಿ ಅತಿ ಮುಖ್ಯವಾದುವೆಂದರೆ "ಭಾರತೀಯ ಷಡ್ದರ್ಶನಗಳು" ಎಂಬ ಆರು ದರ್ಶನಪಂಥಗಳು. ಈ ದರ್ಶನಗಳಲ್ಲಿ ಕೆಲವು ಬೌದ್ಧ ದರ್ಶನದ ಪ್ರಭಾವಕ್ಕೆ ಒಳಗಾದವು. ಇವೆಲ್ಲವನ್ನೂ ಶಾಸ್ತ್ರಸಮ್ಮತವೆಂದು ಹೇಳುತ್ತಾರೆ. ಎಲ್ಲಕ್ಕೂ ಮೂಲಪ್ರತ್ಯಯಗಳನೇಕವಿದ್ದರೂ ಒಂದೊಂದೂ ತನ್ನ ವಿಷಯ ಪ್ರವೇಶದಲ್ಲಿ ಮತ್ತು ನಿರ್ಣಯದಲ್ಲಿ ಭಿನ್ನವಾಗಿದೆ. ಬಹುದೇವತಾವಾದವಿದೆ. ವ್ಯಕ್ತಿ ದೇವತೆಯ ದೇವತಾವಾದವಿದೆ, ಶುದ್ಧ

ಏಕತ್ವವಾದವಿದೆ, ದೇವತ್ವವನ್ನೇ ಪೂರ್ಣವಾಗಿ ನಿರಾಕರಿಸಿ ವಿಕಾಸವಾದ ತಳಹದಿಯ ಮೇಲೆ ಕಟ್ಟಿದ ದರ್ಶನವೂ ಇದೆ. ಭಾವವಾದವೂ ಇದೆ, ವಾಸ್ತವವಾದವೂ ಇದೆ. ಬಹು ಜಟಿಲವೂ, ಸರ್ವ ಸಮಾವೇಶಕವೂ ಆದ ಭಾರತೀಯ ಮನಸ್ಸಿನ ವಿವಿಧ ಮುಖಗಳು ಪ್ರತ್ಯೇಕವಾಗಿಯೂ ಸಮಗ್ರವಾಗಿಯೂ ಇಲ್ಲಿ ಕಾಣುತ್ತವೆ." ಈ ಎರಡು ವಿಷಯಗಳನ್ನೂ ತೋರಿಸಿದ ಮ್ಯಾಕ್ಸ್‌ಮುಲ್ಲರ್, "........ಈ ಆರು ದರ್ಶನಗಳ ವೈವಿಧ್ಯತೆಯ ಹಿಂದೆ ಸಾಮಾನ್ಯ ಜನತೆಯ ರಾಷ್ಟ್ರೀಯ ದರ್ಶನವೆಂದು ಹೇಳಬಹುದಾದ ಒಂದು ಅಪಾರ ನಿಧಿ ಇದೆ........ಇದರಿಂದ ಪ್ರತಿಯೊಬ್ಬ ದಾರ್ಶನಿಕನೂ ತನಗೆ ಬೇಕಾದ ರತ್ನಗಳನ್ನು ಆಯ್ದುಕೊಂಡನು" ಎಂದಿದ್ದಾನೆ.

ಇವೆಲ್ಲಕ್ಕೂ ಮೂಲ ಪೂರ್ವ ಭಾವನೆಗಳು ಒಂದೇ. ಸೃಷ್ಟಿಯಲ್ಲಿ ಒಂದು ನಿಯಮ ರಚನೆ ಇದೆ; ಆ ಸೃಷ್ಟಿಯು ನಿಯಮಕ್ಕನುಸಾರವಾಗಿ ಮುಂದುವರಿಯುತ್ತಿದೆ, ಮತ್ತು ಅದು ಲಯಬದ್ಧವಿದೆ. ಇಂತಹ ಭಾವನೆಯು ಅತ್ಯವಶ್ಯಕ, ಏಕೆಂದರೆ ಅದಿಲ್ಲದೆ ಸೃಷ್ಟಿಯನ್ನು ವಿವರಿಸಲು ಯಾವ ದರ್ಶನವನ್ನೂ ರಚಿಸಲು ಸಾಧ್ಯವಾಗುವುದಿಲ್ಲ. ಕಾರ್ಯಕಾರಣ ಸಂಬಂಧದ ಹೇತುವಾದವು ಅನಿವಾರ್ಯವಾದರೂ ಪ್ರತಿಯೊಬ್ಬ ವ್ಯಕ್ತಿಗೂ ತನ್ನ ಗತಿಯನ್ನು ತಾನು ರೂಪಿಸಿಕೊಳ್ಳಲು ತಕ್ಕಷ್ಟು ಸ್ವಾತಂತ್ರ್ಯವಿದೆ. ಪುನರ್ಜನ್ಮದಲ್ಲಿ ನಂಬಿಕೆಯಿದೆ. ನಿಸ್ವಾರ್ಥ ಪ್ರೇಮ ಮತ್ತು ನಿಷ್ಕಾಮ ಕರ್ಮಕ್ಕೆ ಪ್ರಾಧಾನ್ಯತೆ ದೊರೆತಿದೆ. ತರ್ಕ ಮತ್ತು ನಿಮಿತ್ತ ಆಧಾರದ ಮೇಲೆ ಪರಿಣಾಮಕಾರಿಯಾದ ವಾದವಿವಾದಗಳು ನಡೆದಿವೆ. ಆದರೆ ಇವೆರಡಕ್ಕಿಂತ ಆತ್ಮಪ್ರೇರಣೆ ಮುಖ್ಯವೆಂದು ಗಣಿಸಲಾಗಿದೆ. ಹೊರಗಿನ ವಿಷಯಗಳಿಗೆ ಎಷ್ಟರಮಟ್ಟಿಗೆ ಸಾಧ್ಯವೊ ಅಷ್ಟರಮಟ್ಟಿಗೆ ಸಕಾರಣವಾಗಿ ಸಾಮಾನ್ಯ ಚರ್ಚೆ ಎಲ್ಲವೂ ಕಾರಣ ಬದ್ಧವಾಗಿ ನಡೆದಿದೆ. ಷಡ್ದರ್ಶನಗಳು ಶಾಸ್ತ್ರೀಯ ನಿಜ, ವೇದ ಪ್ರಾಮಾಣ್ಯವನ್ನು ಒಪ್ಪುತ್ತವೆ; ಆದರೆ ಜೀವನದ ಸಮಸ್ಯೆಗಳನ್ನು ಮಾನವೀಯತೆಯ ಮಾರ್ಗದಿಂದ ಚರ್ಚಿಸುತ್ತವೆ. ನಿರ್ಣೀತ ಸಿದ್ಧಾಂತಗಳಿಗೆ ಪಾವಿತ್ರತೆಯನ್ನು ಕೊಡುವುದರ ವಿನಾ ನಿತ್ಯ ಉಪಯುಕ್ತ ಕಾರ್ಯಗಳಿಗೂ ವೇದಗಳು ಸಹಾಯಕವಾಗಿವೆ. ಆ ಸಿದ್ಧಾಂತಕ್ಕೆ ಬರುವುದರಲ್ಲಿ ಅನೇಕವೇಳೆ ವೇದಗಳಿಂದ ಯಾವ ಸಹಾಯವೂ ದೊರೆತಿಲ್ಲ ಮತ್ತು ಅದರ ಮೂಲ ತತ್ವಕ್ಕೂ ಆ ಸಿದ್ಧಾಂತಕ್ಕೂ ಯಾವ ಸಾಮರಸ್ಯವೂ ಇಲ್ಲ.

### ೧೪. ಷಡ್ದರ್ಶನಗಳು

ಭಾರತೀಯ ದರ್ಶನ ಪಂಥಗಳ ಆರಂಭದ ದಿನಗಳಿಗೆ ಹೋಗಬೇಕಾದರೆ ಬೌದ್ಧ ಯುಗಕ್ಕಿಂತ ಹಿಂದೆ ಹೋಗಬೇಕು. ಬ್ರಾಹ್ಮಣ ದರ್ಶನಗಳು ಬೌದ್ಧ ದರ್ಶನಗಳ ಜೊತೆಗೆ ಅನೇಕವೇಳೆ ಪರಸ್ಪರ ಖಂಡನೆಮಾಡುತ್ತ, ಇನ್ನು ಅನೇಕವೇಳೆ ಒಂದರಿಂದೊಂದು ಲಾಭ ಹೊಂದುತ್ತ ಕ್ರಮ ಕ್ರಮವಾಗಿ ಮುಂದುವರಿಯುತ್ತವೆ. ಕ್ರೈಸ್ತಯುಗದ ಆರಂಭದ ಹೊತ್ತಿಗೆ ಇಂತಹ ಅನೇಕ ದರ್ಶನಗಳ ಗೊಂದಲದಿಂದ ಬ್ರಾಹ್ಮಣ ಮತದ ಷಡ್ದರ್ಶನಗಳು ರೂಪುಗೊಂಡು ಘನೀಭೂತವಾಗಿದ್ದವು. ಒಂದೊಂದಕ್ಕೂ ಸ್ವತಂತ್ರವಾದ ಪ್ರವೇಶವಿದೆ. ಪ್ರತ್ಯೇಕವಾದ ಸಾಮರ್ಥ್ಯವಿದೆ; ಆದರೂ ಒಂದೊಂದೂ ಇನ್ನೊಂದರಿಂದ ಬಹಿಷ್ಕೃತವಲ್ಲ; ಎಲ್ಲವೂ ಒಂದು ಮಹಾ ಯೋಜನೆಯ ಬೇರೆ ಬೇರೆ ಭಾಗಗಳು.

(೧) ನ್ಯಾಯ (೨) ವೈಶೇಷಿಕ (೩) ಸಾಂಖ್ಯ (೪) ಯೋಗ (೫) ಮೀಮಾಂಸ ಮತ್ತು (೬) ವೇದಾಂತ–ಇವೇ ಆರು ದರ್ಶನಗಳು.

ನ್ಯಾಯಮಾರ್ಗ ವಿಶ್ಲೇಷಣ ಮತ್ತು ತರ್ಕದ ಮಾರ್ಗ. ನ್ಯಾಯವೆಂದರೆ ತರ್ಕ ಅಥವ ಯುಕ್ತ ರೀತಿ ವಿಚಾರಮಾಡುವ ವಿಜ್ಞಾನ. ಪರಸ್ಪರ ಮೂಲಭೇದಗಳು ಅನೇಕವಿದ್ದರೂ ಸ್ವಲ್ಪಮಟ್ಟಿಗೆ ಅರಿಸ್ಟಾಟಲ್‌ನ ಅನುಗಮನ ತರ್ಕಸರಣಿ (syllogism) ಯನ್ನು ಹೋಲುತ್ತದೆ. ನ್ಯಾಯ ತರ್ಕ ಸರಣಿಯ ಮೂಲ ತತ್ವಗಳನ್ನು ಇತರ ಎಲ್ಲ ದರ್ಶನ ಪಂಥಗಳವರೂ ಒಪ್ಪಿಯಾರು. ಮತ್ತು ಒಂದು ಬಗೆಯ ಮಾನಸಿಕ ಶಿಕ್ಷಣವಾಗಿ ಪ್ರಾಚೀನ ಯುಗದಲ್ಲಿ ಮತ್ತು ಮಧ್ಯ ಯುಗದಲ್ಲಿ ಅಲ್ಲದೆ ಈಗಲೂ ಸಹ ಎಲ್ಲ ಭಾರತೀಯ ಪಾಠ ಶಾಲೆಗಳಲ್ಲಿ ಮತ್ತು ವಿಶ್ವವಿದ್ಯಾನಿಲಯಗಳಲ್ಲಿ ನ್ಯಾಯ ಶಾಸ್ತ್ರವು ಪಾಠ

ಕ್ರಮದಲ್ಲಿ ಮುಖ್ಯ ಅಂಗವಾಗಿದೆ. ಸಾಂಪ್ರದಾಯಿಕ ಪದ್ಧತಿಯಂತೆ ಸಂಸ್ಕೃತ ಪಾಠ ನಡೆಯುವ ಶಾಲೆಗಳ ಹೊರತು, ಆಧುನಿಕ ಭಾರತೀಯ ಪದ್ಧತಿಯಲ್ಲಿ ಅದಕ್ಕೆ ಸ್ಥಾನವಿಲ್ಲ. ಸಂಸ್ಕೃತ ಶಾಲೆಗಳ ಪಠ್ಯ ಕ್ರಮದಲ್ಲಿ ನ್ಯಾಯ ಅತ್ಯವಶ್ಯಕವೆಂದು ಪ್ರಮುಖ ಸ್ಥಾನವನ್ನು ಕೊಡಲಾಗಿದೆ. ತತ್ವಶಾಸ್ತ್ರದ ಅಭ್ಯಾಸಕ್ಕೆ ಅದು ಅತ್ಯುಪಯುಕ್ತವಾದ ಸಾಧನ ಮಾರ್ಗವೆಂದು ಮಾತ್ರವಲ್ಲ, ಪ್ರತಿಯೊಬ್ಬ ವಿದ್ಯಾವಂತನಿಗೂ ಅತ್ಯವಶ್ಯ ಇರಬೇಕಾದ ಮಾನಸಿಕ ಶಿಕ್ಷೆ. ಯೂರೋಪಿನ ಶಿಕ್ಷಣ ಕ್ರಮದಲ್ಲಿ ಅರಿಸ್ಟಾಟಲಿನ ತರ್ಕ ಶಾಸ್ತ್ರಕ್ಕೆ ಇದ್ದ ಪ್ರಮುಖಸ್ಥಾನ ಭಾರತೀಯ ಸನಾತನ ಶಿಕ್ಷಣ ಪದ್ಧತಿಯಲ್ಲಿ ನ್ಯಾಯಕ್ಕೆ ದೊರೆತಿದೆ.

ರೀತಿ ಏನೋ ಆಧುನಿಕ ವಿಜ್ಞಾನ ಮಾರ್ಗದ ವಾಸ್ತವಿಕ ಪರೀಕ್ಷಾಕ್ರಮಕ್ಕಿಂತ ತೀರ ಭಿನ್ನವಾದುದು. ಆದರೂ ತನ್ನದೇ ಒಂದು ರೀತಿಯ ವಿಮರ್ಶನ ಮತ್ತು ವಿಜ್ಞಾನ ಪದ್ಧತಿ ಇತ್ತು; ಕೇವಲ ನಂಬಿಕೆಯನ್ನೇ ಆಶ್ರಯಿಸದೆ ಜ್ಞಾನವಸ್ತುಗಳನ್ನು ವಿಮರ್ಶನ ಬುದ್ಧಿಯಿಂದ ಪರೀಕ್ಷಿಸತೊಡಗಿತು. ತರ್ಕಬದ್ಧ ಪ್ರಮಾಣ ಮಾರ್ಗದಿಂದ ಕ್ರಮಾನುಗತವಾಗಿ ಮುಂದುವರಿಯಿತು. ಆದರ ಹಿಂದೆ ಸ್ವಲ್ಪ ನಂಬಿಕೆಯೂ ಇತ್ತು. ತಾರ್ಕಿಕ ವಿಚಾರಕ್ಕೆ ಎಟುಕದ ಕೆಲವು ಮೂಲ ಭಾವನೆಗಳಿದ್ದವು. ಕೆಲವು ಮೂಲ ಸಿದ್ಧಾಂತಗಳನ್ನು ಒಪ್ಪಿಕೊಂಡು ಅವುಗಳ ಆಧಾರದ ಮೇಲೆ ಈ ಪದ್ಧತಿಯ ರಚನೆಯಾಯಿತು. ದೇವರ ವ್ಯಕ್ತಿತ್ವದಲ್ಲಿ ನಂಬಿಕೆ ಇತ್ತು. ಪ್ರತಿ ವ್ಯಕ್ತಿಯ ಆತ್ಮಗಳಲ್ಲಿ, ಪರಮಾಣು ಪ್ರಪಂಚದಲ್ಲಿ ನಂಬಿಕೆ ಇತ್ತು. ವ್ಯಕ್ತಿಯು ಆತ್ಮವೂ ಅಲ್ಲ, ದೇಹವೂ ಅಲ್ಲ. ಎರಡರ ಸಮಾವೇಶದ ಫಲ. ಆತ್ಮಗಳ ಮತ್ತು ಪ್ರಕೃತಿಯ ಸಂಕೀರ್ಣವೇ ಸತ್ಯವೆಂದು ಭಾವಿಸಲಾಗಿತ್ತು.

ವೈಶೇಷಿಕ ಪಂಥವು ಅನೇಕ ರೀತಿಯಲ್ಲಿ ನ್ಯಾಯ ಪಂಥವನ್ನೇ ಹೋಲುತ್ತದೆ. ಜೀವಭೇದ, ವಸ್ತುಭೇದಗಳಿಗೆ ಪ್ರಾಮುಖ್ಯತೆ ಕೊಟ್ಟು ವಿಶ್ವವು ಪರಮಾಣುಮಯುವೆಂಬ ಸಿದ್ಧಾಂತವನ್ನು ಪ್ರತಿಪಾದಿಸುತ್ತದೆ. ವಿಶ್ವವು ನೀತಿಧರ್ಮಕ್ಕಧೀನ; ಸರ್ವವೂ ಅದಕ್ಕನುಗುಣವಾಗಿ ವರ್ತಿಸುತ್ತದೆ. ದೇವರು ಒಬ್ಬನಿದ್ದಾನೆ ಎಂಬ ತತ್ವವನ್ನು ಸ್ಪಷ್ಟವಾಗಿ ಒಪ್ಪಿಲ್ಲ. ನ್ಯಾಯ ಮತ್ತು ವೈಶೇಷಿಕ ದರ್ಶನಗಳಿಗೂ ಆರಂಭದ ಬೌದ್ಧದರ್ಶನಕ್ಕೂ ಅನೇಕ ವಿಷಯಗಳಲ್ಲಿ ಹೋಲಿಕೆ ಇದೆ. ಒಟ್ಟಿನಲ್ಲಿ ಅವುಗಳ ದೃಷ್ಟಿ ವಾಸ್ತವಿಕದೃಷ್ಟಿ.

ಕ್ರಿಸ್ತಪೂರ್ವ ಏಳನೆಯ ಶತಮಾನದಲ್ಲಿ ಕಪಿಲ ಮಹರ್ಷಿಯು ಬುದ್ಧನ ಕಾಲಕ್ಕಿಂತ ಹಿಂದಿನ ಅನೇಕ ಸನಾತನ ತತ್ತ್ವ ವಿಚಾರಗಳಿಂದ ಪ್ರತಿಪಾದಿಸಿದ ಸಾಂಖ್ಯದರ್ಶನ ಬಹಳ ಪ್ರೌಢವಾಗಿದೆ. "ಪ್ರಪಂಚದ ಇತಿಹಾಸದಲ್ಲಿ ಮೊಟ್ಟಮೊದಲು ಮಾನವ ಮನಸ್ಸಿನ ಪೂರ್ಣ ಸ್ವಾತಂತ್ರ್ಯವನ್ನೂ ಸ್ವಾಧೀನತೆಯನ್ನೂ, ಮತ್ತು ಸ್ವಶಕ್ತಿಯಲ್ಲಿ ಪೂರ್ಣವಿಶ್ವಾಸವನ್ನೂ ವ್ಯಕ್ತಗೊಳಿಸಿರುವುದು ಕಪಿಲ ಋಷಿಯ ದರ್ಶನದಲ್ಲಿ" ಎಂದು ರಿಚರ್ಡ್‌ಗಾರ್ಟ್ ಹೇಳಿದ್ದಾನೆ.

ಬೌದ್ಧ ಧರ್ಮದ ಉನ್ನತಿಯ ಕಾಲದಲ್ಲಿ ಸಾಂಖ್ಯದರ್ಶನವು ಒಂದು ಸುಸಂಘಟಿತ ಪಂಥವಾಗಿತ್ತು. ಈ ಸಿದ್ಧಾಂತವು ಮಾನವ ಮನಸ್ಸಿನಿಂದ ಉದ್ಭೂತವಾದ ಕೇವಲ ತಾತ್ವಿಕ ಮತ್ತು ದಾರ್ಶನಿಕ ಭಾವನೆಗಳಿಂದ ಕೂಡಿದ್ದು, ವಾಸ್ತವಿಕ ದೃಷ್ಟಿಗೂ ಅದಕ್ಕೂ ಯಾವ ಸಂಬಂಧವೂ ಇರಲಿಲ್ಲ. ಪ್ರತ್ಯಕ್ಷ ಪ್ರಮಾಣ ಅಸಾಧ್ಯವಿರುವ ಪ್ರಮೇಯಗಳಲ್ಲಿ ಪ್ರತ್ಯಕ್ಷ ಪ್ರಮಾಣ ಸಾಧ್ಯವೂ ಇರಲಿಲ್ಲ. ಬೌದ್ಧ ಮತದಂತೆ ಸಾಂಖ್ಯ ಮತವು ತಾರ್ಕಿಕ ಮಾರ್ಗದಲ್ಲಿ ವಿಚಾರಮಾಡತೊಡಗಿತು ಮತ್ತು ಬೌದ್ಧ ದರ್ಶನದ ವಾದವನ್ನು ಯಾವ ಪ್ರಾಮಾಣ್ಯದ ಸಹಾಯವನ್ನೂ ಪಡೆಯದೆ ಅದೇ ತರ್ಕಬದ್ಧ ವಿಚಾರ ಸರಣಿಯಲ್ಲಿ ಎದುರಿಸಿತು. ಈ ತಾರ್ಕಿಕ ದೃಷ್ಟಿಯಲ್ಲಿ ದೇವರಿಗೆ ಸ್ಥಾನವಿಲ್ಲದಾಯಿತು. ಆದ್ದರಿಂದ ಸಾಂಖ್ಯದರ್ಶನದಲ್ಲಿ ವ್ಯಕ್ತಿಗತ ದೇವರೂ ಇಲ್ಲ. ವ್ಯಕ್ತಿರಹಿತ ದೇವರೂ ಇಲ್ಲ. ಏಕ ದೇವತಾವಾದವೂ ಇಲ್ಲ. ಏಕತ್ವವಾದವೂ ಇಲ್ಲ. ಆದರ ದೃಷ್ಟಿ ನಿರೀಶ್ವರ ವಾದದ ದೃಷ್ಟಿ. ನಿಸರ್ಗಾತಿರಿಕ್ತ ಧರ್ಮದ ತಳಹದಿಯನ್ನೆ ನಿರ್ಮೂಲಮಾಡಲು ಪ್ರಯತ್ನಪಟ್ಟವು. ವಿಶ್ವದ ಪುಷ್ಟಿ ಜೀವದಿಂದ ಆದುದಲ್ಲ; ಸತತವಾಗಿ ನಡೆದು ಬಂದ ವಿಕಾಸದಿಂದ ಆದುದು. ಜಡ ಮತ್ತು ಜೀವಗಳ ಪರಸ್ಪರ ಪರಿಣಾಮದ ಫಲ; ಜಡವೂ ಸ್ವಭಾವತಃ ಶಕ್ತಿ ಸ್ವರೂಪ. ಈ ವಿಕಾಸ ನಿರಂತರವಾದುದು.

ಸಾಂಖ್ಯ ಮತವನ್ನು ದ್ವೈತದರ್ಶನವೆಂದು ಕರೆಯುತ್ತಾರೆ. ಏಕೆಂದರೆ ಅದರ ರಚನೆ ಎರಡು ಮೂಲ ಹೇತುಗಳನ್ನು ಅವಲಂಬಿಸಿದೆ ; ಸದಾ ಚೈತನ್ಯಪೂರ್ಣವೂ, ವಿಪರ್ಯಾಸ ಸ್ವಭಾವದ್ದೂ ಆದ ಪ್ರಕೃತಿ ಅಥವ ಶಕ್ತಿ, ಮತ್ತು ನಾಶರಹಿತ ಜೀವ ಅಥವ ಪುರುಷ. ಪುರುಷ ಅಥವ ಜೀವದ ಸಂಖ್ಯೆ ಅಸಂಖ್ಯಾತ. ಸ್ವತಃ ಚೈತನ್ಯರಹಿತವಾದ ಪುರುಷನ ಸಂಪರ್ಕದಿಂದ ಪ್ರಕೃತಿಯ ವಿಕಾಸವಾಗಿ ವಿಶ್ವದ ನಿರಂತರ ಸೃಷ್ಟಿಗೆ ಕಾರಣವಾಗುತ್ತದೆ. ಕಾರಣ ತತ್ತ್ವವನ್ನು ಒಪ್ಪುತ್ತದೆ ; ಆದರೆ ಕಾರ್ಯ ಕಾರಣದಲ್ಲಿಯೇ ಅಡಗಿದೆ ಎಂದು ವಾದಿಸುತ್ತದೆ. ಕಾರ್ಯ ಕಾರಣ ಎರಡೂ ಒಂದೇ ವಸ್ತುವಿನ ವ್ಯಕ್ತ ಮತ್ತು ಅವ್ಯಕ್ತ ರೂಪಗಳಾಗುತ್ತವೆ. ನಮ್ಮ ವ್ಯವಹಾರ ದೃಷ್ಟಿಯಿಂದ ಕಾರ್ಯಕಾರಣಗಳೆರಡು ಪ್ರತ್ಯೇಕ ಮತ್ತು ಭಿನ್ನವಾದವು, ಆದರೆ ಮೂಲತಃ ಅವೆರಡೂ ಒಂದೇ.

ಈ ರೀತಿ ಚರ್ಚೆ ಮುಂದುವರಿದು ಅವ್ಯಕ್ತ ಪ್ರಕೃತಿ ಅಥವ ಶಕ್ತಿಯು ಪುರುಷ ಅಥವ ಚೈತನ್ಯ ವಸ್ತುವಿನ ಮತ್ತು ಕಾರ್ಯಕಾರಣ ಸಂಬಂಧದ ಪ್ರಭಾವದಿಂದ ಅಪಾರ ಜಟಿಲತೆಯಿಂದ, ವಿವಿಧ ಧಾತುಗಳಿಂದ ತುಂಬಿದ ನಿಸರ್ಗವು ಹೇಗೆ ಆವಿರ್ಭವಿಸಿದೆ ಮತ್ತು ಸದಾ ರೂಪಾಂತರ ಹೊಂದುತ್ತ ಮುಂದುವರಿಯುತ್ತಿದೆ ಎಂಬುದನ್ನು ತೋರಿಸಿದೆ. ಪ್ರಪಂಚದಲ್ಲಿ ಅಣುವಿನಿಂದ ಮೊದಲುಗೊಂಡು ಮಹದ್ವಸ್ತುವಿನವರೆಗೆ ಒಂದು ಅವಿಚ್ಛಿನ್ನತೆ ಮತ್ತು ಅಭಿನ್ನತೆ ಇದೆ. ಈ ಭಾವನೆ ಎಲ್ಲವೂ ತಾತ್ವಿಕವಾದದ್ದು. ಕೆಲವು ಪ್ರಾಕ್ಕಲ್ಪನೆಗಳ ಆಧಾರದ ಮೇಲೆ ಹೂಡಿದ ವಾದವು ದೀರ್ಘವೂ, ಜಟಿಲವೂ ತರ್ಕಪೂರ್ಣವೂ ಇದೆ.

ಪತಂಜಲಿಯ ಯೋಗದರ್ಶನವು ಮುಖ್ಯವಾಗಿ ದೈಹಿಕ ಮತ್ತು ಮಾನಸಿಕ ಶಿಕ್ಷಣದ ಮೂಲಕ ಆಧ್ಯಾತ್ಮಿಕ ಮತ್ತು ವಿಷಯಕ ಶಿಕ್ಷಣವನ್ನು ಕೊಡುವ ಮಾರ್ಗ. ಪತಂಜಲಿಯು ಈ ಪ್ರಾಚೀನ ದರ್ಶನ ಪಂಥವನ್ನು ಕ್ರೋಢೀಕರಿಸಿದ್ದು ಮಾತ್ರವಲ್ಲ, ಆತನು ಪಾಣಿನಿಯ ಸಂಸ್ಕೃತ ವ್ಯಾಕರಣಕ್ಕೆ ಒಂದು ಪ್ರಸಿದ್ಧವಾದ ವ್ಯಾಖ್ಯಾನವನ್ನೂ ಬರೆದು ಇರುತ್ತಾನೆ. "ಮಹಾಭಾಷ್ಯ" ಎಂಬ ಈ ಟೀಕಾ ಗ್ರಂಥವು ಪಾಣಿನಿಯ ಗ್ರಂಥದಷ್ಟೆ ಶ್ರೇಷ್ಠ ಕಾವ್ಯವಾಗಿದೆ. "ಭಾರತದ ಆದರ್ಶ ವೈಜ್ಞಾನಿಕ ಗ್ರಂಥವೆಂದರೆ ಪತಂಜಲಿಯ ಮಹಾಭಾಷ್ಯದೊಂದಿಗೆ ಪಾಣಿನಿಯ ವ್ಯಾಕರಣ" ಎಂದು ಲೇನಿನ್ ಗ್ರಾಡಿನ ಪ್ರೊಫೆಸರ್ ಷೆರ್‌ಬಾಟ್ಸ್ಕಿ ಹೇಳಿದ್ದಾನೆ.

ಅರ್ಥ ತಿಳಿಯದಿದ್ದರೂ ಯೋಗಶಬ್ದವು ಈಗ ಯೂರೋಪ್ ಮತ್ತು ಅಮೆರಿಕೆಗಳಿಗೆ ತುಂಬ ಪರಿಚಯವಾಗಿದೆ. ಬುದ್ಧನಂತೆ ಆಸನಾರೂಢನಾಗಿ ತನ್ನ ನಾಭಿಯನ್ನೋ ಮೂಗಿನ ತುದಿಯನ್ನೋ ನೆಟ್ಟ ದೃಷ್ಟಿಯಿಂದ ನೋಡುವುದರಲ್ಲಿ ಪಂಡಿತರಾದ ಕೆಲವರು ಕೆಲವು ವಿಶೇಷ ದೇಹಲಕ್ಷಣಗಳನ್ನು ತಿಳಿದು ಕೊಂಡು ಪಾಶ್ಚಿಮಾತ್ಯರಲ್ಲಿ ಯೋಗಶಾಸ್ತ್ರ ಪಂಡಿತರೆಂಬ ನಂಬಿಕೆಯನ್ನು ಹುಟ್ಟಿಸಿ ಅಲ್ಪಜ್ಞರನ್ನೂ, ವಿಸ್ಮಯ ಕುತೂಹಲರನ್ನೂ ಮೋಸ ಮಾಡುತ್ತಾರೆ. ಆದರೆ ಈ ಪಂಥವು ಈ ಎಲ್ಲ ಯುಕ್ತಿಗಳಿಂದ ಹೆಚ್ಚಿನದು. ಮನಸ್ಸಿಗೆ ಸರಿಯಾದ ಶಿಕ್ಷಣವನ್ನು ಕೊಡುವುದರ ಮೂಲಕ ಆತ್ಮಜ್ಞಾನದ ಕೆಲವು ಉನ್ನತ ಮಟ್ಟಗಳನ್ನು ಮುಟ್ಟಬಹುದು. ಎಂಬ ಮನಶ್ಶಾಸ್ತ್ರದ ಭಾವನೆಯ ಆಧಾರವನ್ನವಲಂಬಿಸಿದೆ. ಪ್ರಪಂಚದ ಅಥವ ಸತ್ಯದ ಪೂರ್ವಭಾವನೆಯ ತತ್ತ್ವ ಸಿದ್ಧಾಂತಕ್ಕೆ ಪ್ರತಿಯಾಗಿ ಆತ್ಮಾನ್ವೇಷಣೆಯಿಂದ ಆತ್ಮಜ್ಞಾನವನ್ನು ಪಡೆಯುವ ಮಾರ್ಗ. ಆದ್ದರಿಂದ ಇದು ಪ್ರಾಯೋಗಿಕ; ಮತ್ತು ಪ್ರಯೋಗ ನಡೆಸಲು ಅವಶ್ಯವಾದ ಯೋಗ್ಯ ಸನ್ನಿವೇಶಗಳೇನೆಂಬುದನ್ನೂ ತಿಳಿಸುತ್ತದೆ. ಆದ್ದರಿಂದ ಯಾವ ದರ್ಶನ ಪಂಥವೇ ಆಗಲಿ ಅದರ ದಾರ್ಶನಿಕ ದೃಷ್ಟಿ ಏನೆ ಇರಲಿ ಯೋಗವನ್ನೂ ಒಂದು ಮಾರ್ಗವನ್ನಾಗಿ ಉಪಯೋಗಿಸಬಹುದು. ಇದರಿಂದ ನಿರೀಶ್ವರವಾದಿಗಳಾದ ಸಾಂಖ್ಯದರ್ಶನ ಪಂಥದವರೂ ಇದನ್ನು ಉಪಯೋಗಮಾಡಿಕೊಳ್ಳಬಹುದು. ಬೌದ್ಧ ಮತವು ಸಹ ತನ್ನದೇ ಒಂದು ಯೋಗಶಾಸ್ತ್ರವನ್ನು ಕಂಡು ಹಿಡಿಯಿತು. ಅದು ಕೆಲವು ಸಂದರ್ಭದಲ್ಲಿ ಷಡ್ದರ್ಶನಗಳ ಯೋಗಗಳ ಯೋಗಶಾಸ್ತ್ರಕ್ಕೆ ಅನುಗುಣವಾಗಿದೆ, ಇನ್ನು ಕೆಲವು ವೇಳೆ ಭಿನ್ನವಿದೆ. ಆದ್ದರಿಂದ ಪತಂಜಲಿಯ ಯೋಗ ಶಾಸ್ತ್ರದ ಸಿದ್ಧಾಂತ ಭಾಗಗಳು ಅಷ್ಟು ಪ್ರಾಮುಖ್ಯವಲ್ಲ. ಅದರ ರೀತಿ ಮುಖ್ಯ. ದೇವರಲ್ಲಿ

ನಂಬಿಕೆ ಅದರ ಮುಖ್ಯವಸ್ತುವಲ್ಲ. ಆದರೆ ಅಂತಹ ವ್ಯಕ್ತಿ ಸಹ ದೇವರಲ್ಲಿನ ನಂಬಿಕೆಯಿಂದ ಮತ್ತು ಆತನ ಮೇಲಿನ ಭಕ್ತಿಯಿಂದ ಏಕಾಗ್ರ ಚಿತ್ತತೆಯನ್ನು ಪಡೆಯಲು ಸುಲಭವಾದ್ದರಿಂದ ಉಪಯುಕ್ತ.

ಯೋಗದ ಮುಂದಿನ ಹಂತಗಳಲ್ಲಿ ಯಾವುದೋ ಬಗೆಯ ಅಂತರ್ಜಾತೀಯ ದರ್ಶನವಾಗುತ್ತದೆ ಅಥವ ಭಕ್ತರು ಹೇಳುವ ಯಾವುದೊ ಒಂದು ಅಪೂರ್ವ ಅನುಭವವು ದೊರೆಯುತ್ತದೆ. ಅದು ಹೆಚ್ಚಿನ ಜ್ಞಾನಸಾಧನೆಗೆ ದಾರಿತೋರಿಸುವ ಮನಸ್ಸಿನ ಒಂದು ಉನ್ನತ ಸ್ಥಿತಿಯೋ ಅಥವ ಒಂದು ಬಗೆಯ ಆತ್ಮ ಒಂದು ಬಗೆಯ ಸುಷುಪ್ತಿಯೋ ನಾನರಿಯೆ. ಹೆಚ್ಚಿನ ಜ್ಞಾನ ಸಾಧನೆಗೆ ಮಾರ್ಗವಿದಾದರೂ ಆತ್ಮ ನಿದ್ರೆಯೂ ಖಂಡಿತ ಅನಿವಾರ್ಯ. ಅವ್ಯವಸ್ಥಿತ ಯೋಗಾಭ್ಯಾಸದಿಂದ ಅಭ್ಯಾಸಿಯ ಮನಸ್ಸಿನ ಮೇಲೆ ಅನಿಷ್ಟ ಪರಿಣಾಮಗಳಾಗಿರುವ ನಿದರ್ಶನಗಳು ಅನೇಕ ಇವೆ.

ಆದರೆ ಈ ಧ್ಯಾನ ಮತ್ತು ಚಿಂತನಗಳ ಸ್ಥಿತಿಯನ್ನು ಮುಟ್ಟುವ ಮೊದಲು ದೇಹ ಮತ್ತು ಮನಸ್ಸು ಎರಡನ್ನೂ ನಿಗ್ರಹಿಸಬೇಕು. ದೇಹವು ಯೋಗ್ಯವೂ ಆರೋಗ್ಯ ಪೂರ್ಣವೂ ಇರಬೇಕು, ವಶ್ಯವೂ ಮನೋಹರವೂ ಇರಬೇಕು. ವಜ್ರಕಾಯನಾಗಿ ಬಲಶಾಲಿ ಯಾಗಿರಬೇಕು. ಶರೀರವನ್ನು ಸಂಪೂರ್ಣ ಅಧೀನದಲ್ಲಿ ಇಟ್ಟುಕೊಳ್ಳುವುದಕ್ಕೂ ಸರ್ವೇ ಸಾಧಾರಣ ವಾಗಿ ದೀರ್ಘವೂ ಆಳವೂ ಆದ ಶ್ವಾಸೋಚ್ಛ್ವಾಸಗಳನ್ನು ತೆಗೆದುಕೊಳ್ಳುವುದಕ್ಕೂ ಸುಲಭವಾಗುವಂತೆ ಅನೇಕ ಶರೀರ ಸಾಧನೆಗಳನ್ನೂ ಪ್ರಾಣಾಯಾಮ ವ್ಯಾಯಾಮಗಳನ್ನೂ ವಿಧಿಸಲಾಗಿದೆ. ವ್ಯಾಯಾಮ ಎಂದು ಹೇಳುವುದು ಉಚಿತವಲ್ಲ. ಏಕೆಂದರೆ ಹೆಚ್ಚು ಶರೀರ ಶ್ರಮವು ಬೇಕಾಗಿಲ್ಲ. ಅವೆಲ್ಲ ವಿವಿಧ ಆಸನಗಳು. ಸರಿಯಾಗಿ ಮಾಡಿದರೆ ದೇಹವನ್ನು ಹಗುರಮಾಡಿ, ಒಂದು ಕಾಂತಿಯನ್ನು ಕೊಡುತ್ತವೆ ಮತ್ತು ಆಯಾಸ ಮಾಡುವುದಿಲ್ಲ. ಶರೀರ ಲವಲವಿಕೆಯನ್ನು ಕಾಪಾಡುವ ಈ ಸುಲಭವೂ, ಪೂರ್ಣ ಭಾರತೀಯವೂ ಆದ ಈ ಪದ್ಧತಿಯನ್ನು, ಉಸಿರು ಕಟ್ಟುವಂತೆ ಆಯಾಸ ಮಾಡುವ ನುಗ್ಗಿ ಓಡುವುದು, ಕುಪ್ಪಳಿಸುವುದು, ಅಂಗಾಂಗಗಳನ್ನು ಝಾಡಿಸವುದು, ನೆಗೆಯುವುದು ಮುಂತಾದ ಸರ್ವಸಾಮಾನ್ಯ ವ್ಯಾಯಾಮ ಪದ್ಧತಿಗಳೊಂದಿಗೆ ಹೋಲಿಸುವುದು ಉಚಿತ ವಲ್ಲ. ಈ ವ್ಯಾಯಾಮಪದ್ಧತಿಗಳು, ಈಜುವುದು, ಕುದುರೆಸವಾರಿ, ಕತ್ತಿವರಸೆ, ಬಿಲ್ಲುಗಾರಿಕೆ, ಗದಾಯುದ್ಧ, ಮಲ್ಲಯುದ್ಧ ಮುಂತಾದ ಅನೇಕ ಆಟಪಾಟಗಳು ಸಹ ಭಾರತೀಯರಲ್ಲಿ ಸಾಮಾನ್ಯ ವಿದ್ದವು. ಆದರೆ ಸನಾತನ ಯೋಗಾಸನ ಪದ್ಧತಿಯು ಭಾರತದ ಒಂದು ವೈಶಿಷ್ಟ್ಯ. ಅದು ಭಾರ ತೀಯ ದಾರ್ಶನಿಕ ದೃಷ್ಟಿಗೆ ಅನುಗುಣವಾಗಿದೆ. ಅದರಲ್ಲಿ ಒಂದು ಬಗೆಯ ನಿಲುವಿನ ಸೊಬಗು ಇದೆ. ಶರೀರ ವ್ಯಾಯಾಮ ಮಾಡುವಾಗ ಸಹ ಒಂದು ಬಗೆಯ ಪ್ರಶಾಂತ ಮುದ್ರೆ ಇದೆ. ಶಕ್ತಿವ್ಯಯವಿಲ್ಲದೆ, ಮನಸ್ಸಿನಉದ್ರೇಕವಿಲ್ಲದೆ ಶರೀರಬಲವೂ, ಲವಲವಿಕೆಯೂ ಉಂಟಾಗುತ್ತವೆ. ಈ ಕಾರಣದಿಂದ ಯಾವ ವಯಸ್ಸಿನವರಾದರೂ ಆಸನಗಳನ್ನು ಹಾಕಬಹುದು. ವೃದ್ಧರು ಸಹ ಕೆಲವು ಆಸನಗಳನ್ನು ಹಾಕಬಹುದು.

ಈ ಆಸನಗಳು ಅಸಂಖ್ಯಾತ ಇವೆ. ಈಗ ಅನೇಕ ವರ್ಷಗಳಿಂದ ನನಗೆ ಸಮಯ ದೊರೆತಾಗ ಲ್ಲೆಲ್ಲ ನಾನೂ ಕೆಲವು ಆಸನಗಳನ್ನು ಹಾಕುತ್ತಿದ್ದೇನೆ. ದೈಹಿಕ ಮತ್ತು ಮಾನಸಿಕ ಶಾಂತಿ ಇಲ್ಲದೆ ಇದ್ದರೂ ಈ ಆಸನಗಳಿಂದ ನಾನು ಬಹಳ ಪ್ರಯೋಜನ ಪಡೆದಿದ್ದೇನೆ. ಈ ಕೆಲವು ಆಸನಗಳು ಮತ್ತು ಸ್ವಲ್ಪ ಪ್ರಾಣಾಯಾಮ ಮಾತ್ರ ಯೋಗಶಾಸ್ತ್ರದ ಶರೀರಸಾಧನೆಗಳಲ್ಲಿ ನನಗೆ ಪರಿಚಯವಿರು ವುದು. ಶರೀರ ಶಾಸ್ತ್ರದ ಪ್ರಾಥಮಿಕ ಹೆಜ್ಜೆಗಳನ್ನು ಬಿಟ್ಟು ನಾನು ಮುಂದೆ ಹೋಗಿಲ್ಲ. ನನ್ನ ಮನಸ್ಸು ಅಡ್ಡದಾರಿ ಹಿಡಿಯುತ್ತ ಹತೋಟಿಗೆ ಸಿಕ್ಕದೆ ಇದೆ.

ಶರೀರ ಸಾಧನೆಯಲ್ಲಿ ಯೋಗ್ಯ ಆಹಾರ ಮತ್ತು ಪಾನೀಯಗಳ ಸೇವನೆಯೂ ಸೇರಿದೆ ಮತ್ತು ಅಭಕ್ಷ್ಯಭೋಜನ, ಅಪೇಯ ಪಾನ ನಿಷಿದ್ಧ. ಅಲ್ಲದೆ ಯೋಗಸಾಧನೆಗೆ ನೈತಿಕ ಸಿದ್ಧತೆಯೂ ಅವಶ್ಯಕ. ಅಹಿಂಸೆ, ಸತ್ಯ ಮತ್ತು ಇಂದ್ರಿಯ ನಿಗ್ರಹವೇ ಆ ಮಾರ್ಗಗಳು. ಅಹಿಂಸೆ ಎಂದರೆ ಹಿಂಸೆಯ ತ್ಯಾಜ್ಯ ಮಾತ್ರವಲ್ಲ. ದ್ವೇಷ ಮತ್ತು ಅಸೂಯೆಗಳೂ ಇರಕೂಡದು.

ಇವೆಲ್ಲದರ ಫಲ ಇಂದ್ರಿಯ ನಿಗ್ರಹ; ಅನಂತರ ಧ್ಯಾನ ಮತ್ತು ಚಿಂತನ; ಅಂತ್ಯದಲ್ಲಿ ದೀರ್ಘ ಸಮಾಧಿ. ಸಮಾಧಿಯಿಂದ ವಿವಿಧ ಬಗೆಯ ಆತ್ಮಜ್ಞಾನವು ಲಭಿಸುತ್ತದೆ. ಯೋಗ ಮತ್ತು ವೇದಾಂತ ದರ್ಶನಗಳ ಆಧುನಿಕ ಆಚಾರ್ಯಪುರುಷನಾದ ಸ್ವಾಮಿ ವಿವೇಕಾನಂದರು ಯೋಗಶಾಸ್ತ್ರವು ಪ್ರಾಯೋಗಿಕವಿರಬೇಕೆಂದೂ, ಕಾರಣಬದ್ಧವಿರಬೇಕೆಂದೂ ದೃಢಮಾಡಿಕೊಟ್ಟಿದ್ದಾರೆ. " ಈ ಯೋಗಗಳಲ್ಲಿ ಯಾವುದೂ ಕಾರಣರಹಿತವಿಲ್ಲ. ಪುರೋಹಿತನು ಯಾರೇ ಇರಲಿ ವಿಚಾರಶೂನ್ಯನಾಗಿ ಆತನಿಂದ ಮೋಸಹೋಗು" ಎಂದು ಯಾವ ಯೋಗವೂ ಹೇಳುವುದಿಲ್ಲ. ವಿಚಾರಶಕ್ತಿಯನ್ನು ಎಂದೂ ಬಿಡಬೇಡ, ಅದನ್ನೇ ಗಟ್ಟಿಯಾಗಿ ಹಿಡಿದುಕೊ" ಎಂದು ಪ್ರತಿಯೊಂದು ಯೋಗವೂ ಹೇಳುತ್ತದೆ. ಯೋಗ ಮತ್ತು ವೇದಾಂತದ ದೃಷ್ಟಿಗಳು ವೈಜ್ಞಾನಿಕ ದೃಷ್ಟಿಯನ್ನು ಬಹುಮಟ್ಟಿಗೆ ಹೋಲುತ್ತವೆಯಾದರೂ ಅವುಗಳ ಉಪಕರಣಗಳು ಬೇರೆ. ಆದ್ದರಿಂದ ಮೂಲವ್ಯತ್ಯಾಸಗಳು ಉದ್ಭವಿಸುತ್ತವೆ. ಯೋಗಶಾಸ್ತ್ರದ ಪ್ರಕಾರ " ಆತ್ಮವು ಬುದ್ಧಿಗೆ ಮಾತ್ರ ಪರಿಮಿತವಲ್ಲ. ಮತ್ತು ಭಾವನೆ ಎಂದರೆ ಕ್ರಿಯೆ; ಕ್ರಿಯೆಯಿಂದಲೇ ಭಾವನೆಗೆ ಒಂದು ಮೌಲ್ಯ ಬರುವುದು" ಆತ್ಮ ಸ್ಫೂರ್ತಿ ಮತ್ತು ಆತ್ಮ ಜ್ಞಾನಕ್ಕೆ ಮಾನ್ಯತೆ ಇದೆ. ಆದರೆ ಅವುಗಳಿಂದ ಮೋಸ ಹೋಗಲು ಸಾಧ್ಯವಿಲ್ಲವೆ ? ವಿವೇಕಾನಂದರು ಆತ್ಮ ಸ್ಫೂರ್ತಿಯು ವಿಚಾರಬುದ್ಧಿಗೆ ವಿರೋಧವಿರಬಾರದೆಂದು ಉತ್ತರ ಕೊಟ್ಟಿದಾರೆ.—" ವಿಚಾರ ಶಕ್ತಿಯ ವಿಕಸನವೇ ಆತ್ಮಸ್ಫೂರ್ತಿ. ಆತ್ಮಜ್ಞಾನದ ಮಾರ್ಗವೂ ವಿಚಾರಶಕ್ತಿಯ ಮೂಲಕ . . . . ನಿಜವಾದ ಯಾವ ಸ್ಫೂರ್ತಿಯೂ ವಿಚಾರಶಕ್ತಿಗೆ ವಿರುದ್ಧವಿರಲಾರದು; ವಿರುದ್ಧವಾದರೆ ಅದು ಸ್ಫೂರ್ತಿಯೇ ಅಲ್ಲ." ಮತ್ತು " ಆತ್ಮಸ್ಫೂರ್ತಿಯು ಆತ್ಮಕಲ್ಯಾಣಕ್ಕೆ ಮತ್ತು ವಿಶ್ವಕಲ್ಯಾಣಕ್ಕೆ ಸಹಾಯಕ ವಿರಬೇಕು, ಸ್ವಪ್ರತಿಷ್ಠೆಗೆ ಮತ್ತು ಸ್ವಾರ್ಥಸಾಧನೆಗೆ ಅಲ್ಲ; ಪೂರ್ಣ ನಿಸ್ವಾರ್ಥ ಲೋಕ ಕಲ್ಯಾಣವೇ ಸದಾ ಅದರ ಗುರಿ."

ಅಲ್ಲದೆ " ಜ್ಞಾನದ ಮೂಲವು ಅನುಭವದಲ್ಲಿ. ವಿಜ್ಞಾನಗಳಿಗೆ ಮತ್ತು ಬಾಹ್ಯ ಜ್ಞಾನಕ್ಕೆ ಅನ್ವಯಿಸುವ ಅನ್ವೇಷಣ ಮಾರ್ಗಗಳನ್ನೆ ಧರ್ಮಕ್ಕೂ ಉಪಯೋಗಿಸಬೇಕು. ಅಂತಹ ವಿಚಾರ ವಿಮರ್ಶೆಯಿಂದ ಒಂದು ಧರ್ಮವು ನಾಶವಾಗುವುದಾದರೆ ಆ ಧರ್ಮವು ಅಪ್ರಯೋಜಕ ಮತ್ತು ಒಂದು ಮೂಢ ನಂಬಿಕೆ. ಎಷ್ಟು ಬೇಗ ನಾಶವಾದರೆ ಅಷ್ಟು ಕ್ಷೇಮ." " ವಿಚಾರ ಶಕ್ತಿಯ ದೃಷ್ಟಿಗೆ ಧರ್ಮಗಳು ಬದ್ಧವಲ್ಲ ಎಂದು ಹೇಳುವುದು ಅರ್ಥಶೂನ್ಯ . . . . . . ಯಾರೋ ಹೇಳಿದ್ದಾರೆಂಬ ಆಧಾರದ ಮೇಲೆ ಇಪ್ಪತ್ತು ಕೋಟಿ ದೇವರುಗಳಲ್ಲಿ ಕುರುಡು ನಂಬಿಕೆಯನ್ನು ತೋರಿಸುವ ಬದಲು ಮಾನವಕುಲವು ವಿಚಾರಪೂರ್ಣವಾಗಿ ನಿರೀಶ್ವರವಾದಿಯಾದರೂ ಒಳ್ಳೆಯದು. ಪ್ರಾಯಶಃ ಇಂದ್ರಿಯಾತೀತರಾಗಿ ಪರಲೋಕದ ಕಿರುನೋಟವನ್ನು ಅನುಭವಿಸಿದ ಧರ್ಮಸಂಸ್ಥಾಪಕರು ಕೆಲವರು ಇರಬಹುದು. ಆ ನೋಟ ನಮಗೂ ಗೋಚರವಾದಾಗ ನಾವೂ ಅದನ್ನು ನಂಬೋಣ; ಅಲ್ಲಿಯವರೆಗೆ ಸಾಧ್ಯವಿಲ್ಲ." ವಿಚಾರಶಕ್ತಿ ಇದ್ದರೆ ಮಾತ್ರ ಸಾಲದು. ಅನೇಕ ವೇಳೆ ತಪ್ಪು ದಾರಿ ಹಿಡಿಯುತ್ತದೆ ಎಂದು ಹೇಳುತ್ತಾರೆ. ವಿಚಾರ ಶಕ್ತಿಯು ಅಷ್ಟು ದುರ್ಬಲವಾದರೆ ಪುರೋಹಿತವರ್ಗವು ಒಂದು ಉತ್ತಮ ಮಾರ್ಗ ದರ್ಶಕರ ಪಂಥವೆಂದು ಹೇಗೆ ಭಾವಿಸಬೇಕು ? " ವಿಚಾರವೇ ನನಗೆ ದಿಕ್ಸೂಚಿ; ಏಕೆಂದರೆ ಎಷ್ಟೇ ದುರ್ಬಲವಿದ್ದರೂ ಸತ್ಯದ ಅರಿವು ದೊರೆಯಬೇಕಾದರೆ ವಿಚಾರಶಕ್ತಿಯಿಂದ ಮಾತ್ರ ನನಗೆ ಸಾಧ್ಯ . . . ಆದ್ದರಿಂದ ನಾವು ವಿಚಾರಮಾರ್ಗವನ್ನೇ ಅನುಸರಿಸಬೇಕು. ಮತ್ತು ವಿಚಾರ ಮಾರ್ಗದಲ್ಲಿ ನಡೆದು ಯಾವ ನಂಬಿಕೆಯೂ ಇಲ್ಲದ ಜನರನ್ನು ಕಂಡು ಸಹಾನುಭೂತಿ ತೋರಿಸಬೇಕು." ಎಂದು ವಿವೇಕಾನಂದರು ಹೇಳಿದ್ದಾರೆ. "ಈ ರಾಜಯೋಗದ ಅಭ್ಯಾಸದಲ್ಲಿ ಯಾವ ಶ್ರದ್ಧೆಯೂ, ನಂಬಿಕೆಯೂ ಬೇಕಿಲ್ಲ. ಆತ್ಮಾನುಭವವಿಲ್ಲದೆ ಯಾವುದನ್ನೂ ನಂಬಬೇಡ." ಎಂದಿದಾರೆ.

ವಿವೇಕಾನಂದರು ವಿಚಾರಶಕ್ತಿಗೆ ಮೇಲಿಂದ ಮೇಲೆ ಪ್ರಾಧಾನ್ಯಕೊಟ್ಟಿರುವುದಕ್ಕೆ ಮತ್ತು ಮೂಢ ನಂಬಿಕೆ ಯಾವುದನ್ನೂ ಒಪ್ಪದೆ ಇರುವುದಕ್ಕೆ ಮನಸಿನಸ್ವಾತಂತ್ರ್ಯದಲ್ಲಿ ಅವರಿಗಿದ್ದ ದೃಢವಾದ ಅಪಾರ ವಿಶ್ವಾಸವೂ ಮತ್ತು ತಮ್ಮ ದೇಶದಲ್ಲಿ ಸ್ವತಃ ಕಂಡ ಅಧಿಕಾರದ ದುಷ್ಪರಿಣಾಮಗಳೂ ಕಾರಣ,

—"ನನ್ನ ಮಾತೃಭೂಮಿಯಲ್ಲಿ ಅಧಿಕಾರವು ತನ್ನ ಪರಮಾವಧಿಯನ್ನು ಮೀರಿದೆ" ಎಂದು ಹೇಳಿದ್ದಾರೆ. ಅದೇ ಮಾರ್ಗದಲ್ಲಿ ಅವರು ಯೋಗಶಾಸ್ತ್ರಗಳನ್ನೂ ವೇದಾಂತವನ್ನೂ ವಿವರಿಸಿದರು, ಆ ರೀತಿ ವಿವರಣೆ ಕೊಡಲು ಅವರಿಗೆ ಅಧಿಕಾರವೂ ಇತ್ತು. ಆದರೆ ಅವು ಎಷ್ಟೇ ಅನುಭವ ಮತ್ತು ವಿಚಾರಪೂರ್ಣವಿದ್ದರೂ ಸಾಮಾನ್ಯ ಮಾನವನ ತಿಳಿವಿನ ಮಟ್ಟಕ್ಕೆ ಮೀರಿದ ವಿಷಯಗಳು. ನಮ್ಮ ಸಾಮಾನ್ಯ ಪ್ರಪಂಚದ ನಿತ್ಯ ಅನುಭವ ಮತ್ತು ತಿಳಿವಿಗೆ ತೀರ ಭಿನ್ನವಾದ ಅಧ್ಯಾತ್ಮಿಕ ಮತ್ತು ಮಾನಸಿಕ ಅನುಭವದ ಪ್ರಪಂಚ ಅದು. ಈ ಪ್ರಯತ್ನಗಳು ಮತ್ತು ಅನುಭವಗಳು ಭಾರತದಲ್ಲಿ ಮಾತ್ರ ಇವೆಯೆಂದಲ್ಲ. ಕ್ರೈಸ್ತ ಧರ್ಮಗುರುಗಳು, ಪರ್ಷಿಯದ ಸೂಫಿಗಳು ಮತ್ತು ಇನ್ನು ಅನೇಕರಲ್ಲಿ ಸಹ ಕಂಡು ಬಂದಿದೆ. "ಈ ಎಲ್ಲ ಅನುಭವಗಳ ಸಮೀಪ ಹೋಲಿಕೆ ನೋಡಿದರೆ ಧಾರ್ಮಿಕ ಅನುಭವದ ಮಹದ್ವಿಷಯಗಳು ವಿಶ್ವವ್ಯಾಪಕವೂ ಅನಿರತವೂ ಇವೆ. ದೇಶ ಮತ್ತು ಕಾಲಗಳ ರೂಪ ಭೇದ ಭಿನ್ನತೆಗಳಿದ್ದರೂ ಮಾನವ ಸ್ವಭಾವದಲ್ಲಿ ಒಂದು ಚಿರಸ್ಥಾಯಿಯಾದ ಐಕ್ಯತೆ ಇದೆ, ಅಥವ ಮಾನವ ಸ್ವಭಾವಕ್ಕಿಂತ ಆಳವಾಗಿ ತಾನೇ ಸ್ವತಃ ನೋಡಿದರೆ ಮಾನವತ್ವದ ರಚನೆಗೆ ಕಾರಣಭೂತವಾದ ಎಲ್ಲ ಮೂಲ ವಸ್ತುಗಳೂ ಒಂದೇ ಎಂದು ಸ್ಪಷ್ಟವಾಗುತ್ತದೆ" ಎಂದು ರೋಮರೊಲಾ ಹೇಳುತ್ತಾರೆ.

ಆದ್ದರಿಂದ ಯೋಗವು ವ್ಯಕ್ತಿಯ ಆಧ್ಯಾತ್ಮಿಕ ಹಿನ್ನೆಲೆಯ ಒಳನೋಟದ ಪ್ರಾಯೋಗಿಕ ಪದ್ಧತಿ, ಮತ್ತು ಅದರಿಂದ ಕೆಲವು ಮಾನಸಿಕ ಅನುಭವವನ್ನೂ ಸಂಯಮವನ್ನೂ ಪಡೆಯಬಹುದು. ಆಧುನಿಕ ಮನಶ್ಶಾಸ್ತ್ರಕ್ಕೆ ಇದರಿಂದ ಎಷ್ಟು ಪ್ರಯೋಜನವೋ ನಾನು ಹೇಳಲಾರೆ. ಆದರೆ ಸ್ವಲ್ಪ ಪ್ರಯತ್ನ ಮಾಡಿದರೆ ಪ್ರಯೋಜನವಿದೆ ಎಂದು ತೋರುತ್ತದೆ. ಅರವಿಂದಘೋಷರು ಯೋಗಶಾಸ್ತ್ರವನ್ನು ವಿವರಿಸುತ್ತ "ಎಲ್ಲ ರಾಜಯೋಗವೂ ಗ್ರಹಣಶಕ್ತಿ ಮತ್ತು ಅನುಭವವನ್ನು ಅವಲಂಬಿಸಿದೆ; ನಮ್ಮ ಅಂತರ್ಗತ ಮೂಲವಸ್ತುಗಳನ್ನು, ಸಂಕೀರ್ಣಗಳನ್ನು, ಕಾರ್ಯಗಳನ್ನು, ಶಕ್ತಿಗಳನ್ನು, ಪ್ರತ್ಯೇಕಿಸಿ, ಪೃಥಃಕ್ಕರಣ ಮಾಡಿ, ಪುನರ್ಯೋಜಿಸಿ, ಮೊದಲು ದುಸ್ಸಾಧ್ಯವೆಂದು ತೋರಿದ ಕಾರ್ಯವನ್ನು ಸುಲಭಸಾಧ್ಯವೆಂದು ತೋರಿಸುವ ಒಂದು ಹೊಸ ಅದ್ಭುತ ಶಕ್ತಿಯನ್ನಾಗಿ ಅಣಿಗೊಳಿಸಲು ಅಥವ ನಿರ್ದಿಷ್ಟ ಆಂತರಿಕ ಅಭಿಯೋಗಗಳಿಂದ ಒಂದು ಸಾಮಾನ್ಯ ಸಂಘಟನ ಶಕ್ತಿಯನ್ನಾಗಿ ರೂಪಿಸಲು ಸಾಧ್ಯ" ಎಂದು ಹೇಳಿದ್ದಾರೆ.

ಇನ್ನೊಂದು ದರ್ಶನಮಾರ್ಗವೆಂದರೆ ಮೀಮಾಂಸ. ಇದು ವಿಧಿನಿರ್ಬಂಧವನ್ನು ಅವಲಂಬಿಸಿದೆ ಮತ್ತು ಬಹುದೈವತಾವಾದವನ್ನು ಪ್ರೋತ್ಸಾಹಿಸುತ್ತದೆ. ಲೋಕರೂಢಿಯಲ್ಲಿರುವ ಹಿಂದೂ ಧರ್ಮ ಮತ್ತು ಹಿಂದೂ ಧರ್ಮಶಾಸ್ತ್ರಗಳ ಮೇಲೆ, ಸದಾಚಾರ ಪದ್ಧತಿ ಅಥವ ಧರ್ಮಸೂತ್ರಗಳೆಂಬ ನಿಯಮಗಳ ಮೇಲೆ ಬಹಳ ಪರಿಣಾಮ ಮಾಡಿದೆ. ಹಿಂದೂಗಳ ಬಹುದೇವತಾವಾದವು ವಿಚಿತ್ರ ರೀತಿಯದು. ಏಕೆಂದರೆ, ದೇವರುಗಳು ಎಷ್ಟೇ ಶಕ್ತರಾದರೂ ಸೃಷ್ಟಿನಿಯಮದಲ್ಲಿ ಮನುಷ್ಯನಿಗಿಂತ ಕೆಳಮಟ್ಟದವರು. ಹಿಂದೂಗಳೂ ಬೌದ್ಧರೂ ಇಬ್ಬರೂ ಮಾನವಜನ್ಮ ದೊಡ್ಡದು, ಆ ಜೀವವು ಆತ್ಮಸಾಕ್ಷಾತ್ಕಾರದ ಮಾರ್ಗವನ್ನು ಹಿಡಿದಿದೆ ಎಂದು ಭಾವಿಸುತ್ತಾರೆ. ಈ ಸ್ವಾತಂತ್ರ್ಯವನ್ನು ಮತ್ತು ಆತ್ಮಸಾಕ್ಷಾತ್ಕಾರವನ್ನು ಪಡೆಯಬೇಕಾದರೆ ದೇವರುಗಳು ಸಹ ಮಾನವರಾಗಿ ಜನ್ಮತಾಳಲೇಬೇಕು. ಸಾಮಾನ್ಯವಾಗಿ ಆಚರಣೆಯಲ್ಲಿರುವ ಬಹುದೇವತಾವಾದಕ್ಕೆ ಈ ಭಾವನೆಯು ಬಹುದೂರ. ಶ್ರೇಷ್ಠ ಬುದ್ಧನಾಗಲು ಮಾನವನಿಗೆ ಮಾತ್ರ ಸಾಧ್ಯ ಎಂದು ಬೌದ್ಧರು ಹೇಳುತ್ತಾರೆ.

ಈ ದರ್ಶನಗಳಲ್ಲಿ ಕೊನೆಯದೇ ವೇದಾಂತದರ್ಶನ. ಇದು ಉಪನಿಷತ್ತುಗಳಿಂದ ಉಗಮವಾಗಿ ಅನೇಕ ರೂಪಗಳಲ್ಲಿ, ವಿವಿಧವಾಗಿ ಮುಂದುವರಿದರೂ ವಿಶ್ವದ ಏಕತ್ವವಾದದ ದರ್ಶನದ ತಳಹದಿಯ ಮೇಲೆಯೇ ನಿಂತು ನಡೆದಿದೆ. ಸಾಂಖ್ಯದರ್ಶನದ ಪುರುಷ ಮತ್ತು ಪ್ರಕೃತಿಗಳು ಸ್ವತಂತ್ರ ಭಿನ್ನವಸ್ತುಗಳಲ್ಲ; ಒಂದೇ ವಸ್ತುವಿನ—ಪರಮಾತ್ಮನ—ರೂಪಭೇದಗಳು. ಪೂರ್ವದ ವೇದಾಂತದ ತಳಹದಿಯಮೇಲೆಯೇ ಶಂಕರಾಚಾರ್ಯರು ತಮ್ಮ ಅದ್ವೈತ ವೇದಾಂತ ದರ್ಶನ ಪಂಥವನ್ನು ಕಟ್ಟಿದರು. ಇಂದಿನ ಹಿಂದೂ ಧರ್ಮದಲ್ಲಿ ಪ್ರಧಾನ ದಾರ್ಶನಿಕ ಪಂಥವೆಂದರೆ ಈ ಅದ್ವೈತ.

ಅದರ ಮೂಲವು ಶುದ್ಧ ಏಕತ್ವವಾದ. ತಾತ್ವಿಕ ದೃಷ್ಟಿಯಿಂದ ಅಂತ್ಯದಲ್ಲಿ ನಿತ್ಯವಸ್ತುವೆಂದರೆ ಆತ್ಮನ್ ಅಥವ ಪರಮಾತ್ಮ. ಅದೊಂದೇ ಜೀವನವಸ್ತು, ಉಳಿದುದೆಲ್ಲ ಹೇತು. ಪರಮಾತ್ಮನು ಹೇಗೆ ಸರ್ವಾಂತರ್ಯಾಮಿ, ಅದ್ವೈತ, ಅನೇಕ, ಪರಿಪೂರ್ಣ, ಅಭಿನ್ನ, ಅಬಾಧ್ಯ ಎನ್ನುವುದೆಲ್ಲವನ್ನೂ ತಾರ್ಕಿಕ ವಿಚಾರಮಾರ್ಗದಿಂದ ದೃಷ್ಟಾಂತ ಮಾಡಲು ಸಾಧ್ಯವಿಲ್ಲ. ಏಕೆಂದರೆ ನಮ್ಮ ಮನಸ್ಸಿನ ಮಿತಿ ಈ ವ್ಯಕ್ತಪ್ರಪಂಚಕ್ಕೆ ಮಾತ್ರ. ಉಪನಿಷತ್ತು ಆತ್ಮನನ್ನು ಪೂರ್ಣಮದಃ ಪೂರ್ಣಮಿದಂ, ಪೂರ್ಣಾತ್ಪೂರ್ಣಮುದಚ್ಯುತೆ| ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೆ|| ಎಂದು—ವಿವರಣೆ ಎಂದು ಕರೆಯಬಹುದಾದರೆ, ವಿವರಿಸಿದೆ.

ಶಂಕರರು ಕೆಲವು ಪ್ರಮೇಯಗಳ ಆಧಾರದ ಮೇಲೆ ಹೆಜ್ಜೆ ಹೆಜ್ಜೆಗೂ ತರ್ಕಬದ್ಧ ವಾದವನ್ನು ಹೂಡಿ ಒಂದು ಸಂಪೂರ್ಣ ಅದ್ವೈತ ಸಿದ್ಧಾಂತವನ್ನು ಕಟ್ಟಿ ಅತಿ ಜಟಿಲವೂ ಗೂಢವೂ ಆದ ಜ್ಞಾನ ದರ್ಶನವನ್ನು ನಿರ್ಮಾಣ ಮಾಡಿದ್ದಾರೆ. ಜೀವನು ವೈಯಕ್ತಿಕ ಪ್ರತ್ಯೇಕವಸ್ತುವಲ್ಲ, ಕೆಲವು ಮಿತಿಗಳನ್ನುಳ್ಳ ಪರಮಾತ್ಮನ ಒಂದು ರೂಪ. ಆತ್ಮನನ್ನು ವಿಶ್ವವ್ಯಾಪಕವೆಂದರೆ ಜೀವ ಪಾತ್ರೆಯೊಳಗಿನ ಪ್ರಸರಣದಂತೆ. ನಮ್ಮ ದೃಷ್ಟಿಗೆ ಪ್ರತ್ಯೇಕವೆಂದು ಕಂಡರೂ ನಿಜವಾಗಿ ನೋಡಿದರೆ ಪ್ರತ್ಯೇಕವಲ್ಲ, ಎರಡೂ ಒಂದೇ. ಈ ಏಕತ್ವವನ್ನು, ಜೀವನಿಗೂ ಪರಮಾತ್ಮನಿಗೂ ಇರುವ ಅದ್ವೈತ ಭಾವನೆಯನ್ನು ಅರಿಯುವುದೇ ಸ್ವಾತಂತ್ರ್ಯ.

ನಮ್ಮ ಸುತ್ತಲಿನ ವ್ಯಕ್ತಪ್ರಪಂಚವು ಈ ರೀತಿ ನಿತ್ಯ ವಸ್ತುವಿನ ಒಂದು ಪ್ರತಿಬಿಂಬ ಅಥವ ಅನುಭವಾತ್ಮಕ ತೆರೆಯ ಮೇಲಿನ ನಿತ್ಯ ವಸ್ತುವಿನ ಛಾಯೆ. ಇದನ್ನು ಮಾಯೆ ಎಂದು ಕರೆದಿದ್ದಾರೆ. 'ಮಾಯ' ಎಂದರೆ ಭ್ರಮೆ ಎಂದು ಅನುವಾದ ಮಾಡುವದು ತಪ್ಪು. ಅದು ಶೂನ್ಯತೆಯಲ್ಲ. ನಿತ್ಯತೆಗೂ ಶೂನ್ಯತೆಗೂ ಮಧ್ಯೆ ಇರುವ ಒಂದು ಅವಸ್ಥಾ ವಿಶೇಷ. ಅದೊಂದು ಸಾಪೇಕ್ಷ ಅವಸ್ಥೆ; ಪ್ರಾಯಶಃ ಸಾಪೇಕ್ಷತೆಯ ಭಾವನೆ "ಮಾಯ" ದ ಅರ್ಥಕ್ಕೆ ಬಹು ಸಮೀಪವೆಂದು ತೋರುತ್ತದೆ. ಹಾಗಾದರೆ ಈ ಪ್ರಪಂಚದಲ್ಲಿ ಒಳ್ಳೆಯದು ಕೆಟ್ಟದ್ದು ಎಂದರೇನು? ಅದೆಲ್ಲ ಅಸ್ತಿತ್ವವಿಲ್ಲದ ಬರಿ ಭ್ರಮೆಯೆ? ಕೇವಲ ಪ್ರತಿಬಿಂಬಗಳೇ? ಅಂತ್ಯದಲ್ಲಿ ಏನೇ ಇರಲಿ ಈ ನಮ್ಮ ಅನುಭವ ಪ್ರಪಂಚದಲ್ಲಿ ಈ ನೈತಿಕ ಭಿನ್ನತೆಗೆ ಬೆಲೆಯು ಇದೆ. ಪ್ರಾಮುಖ್ಯತೆಯೂ ಇದೆ. ಎಂದಿನವರೆಗೆ ವ್ಯಕ್ತಿಗೊಂದು ವ್ಯಕ್ತಿತ್ವ ವಿರುವುದೋ ಅಲ್ಲಿಯವರೆಗೆ ಅವುಗಳಿಗೆ ಔಚಿತ್ಯವೂ ಇದೆ, ಬೆಲೆಯೂ ಇದೆ.

ಅನಂತ ವಸ್ತುವಿಗೊಂದು ಮಿತಿಯನ್ನು ಕಲ್ಪಿಸದೆ ಈ ಜೀವಕೋಟಿಗಳಿಗೆ ಅದರ ಕಲ್ಪನೆಯನ್ನು ಸಹ ಮಾಡಲು ಸಾಧ್ಯವಿಲ್ಲ. ಅದಕ್ಕೊಂದು ಪರಿಮಿತ, ವಾಸ್ತವಿಕ ರೂಪವನ್ನು ಮಾತ್ರ ಊಹಿಸಬಲ್ಲರು. ಆದರೆ ಈ ಪರಿಮಿತ ಕಲ್ಪನೆ ಅಥವ ರೂಪಗಳ ಅಂತ್ಯ ನಿಲುವು ಸಹ ಅನಂತದಲ್ಲಿ ಪರಮಾತ್ಮನಲ್ಲ, ಆದ್ದರಿಂದ ಧರ್ಮಭೇದ ಕೇವಲ ಸಾಪೇಕ್ಷ ವಿಷಯ; ಪ್ರತಿಯೊಬ್ಬ ವ್ಯಕ್ತಿಗೂ ತನ್ನ ಮನೋಭಾವನೆಗನುಗುಣವಾದ ಧರ್ಮವನ್ನು ಕಲ್ಪನೆ ಮಾಡಿಕೊಳ್ಳಲು ಸ್ವಾತಂತ್ರ್ಯವಿದೆ.

ವರ್ಣಾಶ್ರಮ ಧರ್ಮವು ಜನಾಂಗದ ಸಮಗ್ರ ಅನುಭವ ಪರಂಪರೆಯ ಮತ್ತು ವಿವೇಕದ ಕುರುಹು ಎಂದು ಮನಗಂಡು ಶಂಕರಾಚಾರ್ಯರು ಸಮಾಜ ವ್ಯವಸ್ಥೆಗೆ ವರ್ಣಾಶ್ರಮ ಧರ್ಮವನ್ನೇ ಒಪ್ಪಿದರು. ಆದರೆ ಯಾವ ಜಾತಿಯವನಾಗಲಿ ಎಲ್ಲರಿಗೂ ಉನ್ನತ ಜ್ಞಾನಸಾಧನೆಗೆ ಅಧಿಕಾರವಿದೆ ಎಂದು ಸಾಧಿಸಿದರು.

ಶಂಕರರ ದರ್ಶನ ಮತ್ತು ಮನೋಭಾವನೆಯಲ್ಲಿ ಪ್ರತಿಯೊಬ್ಬ ಮಾನವನ ಅಂತ್ಯ ಗುರಿಯೂ ಆತ್ಮಸ್ವಾತಂತ್ರ್ಯ. ಆದ್ದರಿಂದ ಆ ಸ್ವಾತಂತ್ರ್ಯಸಾಧನೆಯಲ್ಲಿ ಪ್ರಪಂಚ ವ್ಯವಹಾರದಿಂದ ದೂರವಿರಬೇಕು. ಆದ್ದರಿಂದ ಪ್ರಪಂಚವೆಲ್ಲ ಮಿಥ್ಯ ಎಂಬ ನಿರಸನ ಮನೋಭಾವಕ್ಕೆ ಅವಕಾಶವಿದೆ; ಆತ್ಮತ್ಯಾಗ ಮತ್ತು ಅನಾಸಕ್ತಿಗೆ ಸತತವಾದ ಪ್ರಾಮುಖ್ಯತೆ ಕೊಡಲಾಗಿದೆ.

ಆದರೂ ಅದ್ಭುತ ಕಾರ್ಯಶಕ್ತಿಯಲ್ಲಿ ಮತ್ತು ಕಾರ್ಯವೈಶಾಲ್ಯದಲ್ಲಿ ಶಂಕರಾಚಾರ್ಯರು ಅಸಾಧಾರಣ ವ್ಯಕ್ತಿ. ಅಂಗಾಂಗಗಳನ್ನು ತನ್ನೊಳಗೆ ಮುದುರಿಕೊಳ್ಳುವ ಆಮೆಯಂತೆ ಹೆದರಿ

ಕಾಣುವವರಲ್ಲ; ಉಳಿದವರು ಹಾಳಾದರೂ ತನ್ನ ಆತ್ಮೋನ್ನತಿಯಾದರೆ ಸಾಕೆಂದು ಕಾಡು ಸೇರುವವರಲ್ಲ. ದಕ್ಷಿಣ ಭಾರತದ ಮಲೆಯಾಳದಲ್ಲಿ ಹುಟ್ಟಿದರೂ ಬಿಡುವಿಲ್ಲದೆ ಭಾರತಾದ್ಯಂತ ಸಂಚಾರ ಮಾಡಿ, ಅಸಂಖ್ಯಾತ ಜನರ ಪರಿಚಯ ಮಾಡಿಕೊಂಡು ವಾದಮಾಡಿ, ಚರ್ಚೆಮಾಡಿ, ಕಾರಣ ತೋರಿಸಿ, ಅವರ ಮನಸ್ಸನ್ನು ಒಲಿಸಿಕೊಂಡು ತಮ್ಮ ಆತ್ಮಶ್ರದ್ಧೆ ಮತ್ತು ಅದ್ಭುತ ಕಾರ್ಯಶಕ್ತಿಯನ್ನು ಬೋಧಿಸಿ ತುಂಬಿದನು. ಆತನ ಜೀವನದ ಉದ್ದೇಶ್ಯವು ಸಂಪೂರ್ಣ ತಿಳಿದಿತ್ತು; ಕನ್ಯಾಕುಮಾರಿಯಿಂದ ಹಿಮಾಲಯದವರೆಗೆ ಭರತಖಂಡವೇ ಆತನ ಕಾರ್ಯ ಕ್ಷೇತ್ರವಾಯಿತು; ಹೊರಗೆ ರೂಪಭೇದಗಳು ಅನೇಕವಿದ್ದರೂ ಒಂದೇ ಸಂಸ್ಕೃತಿ ಮತ್ತು ಒಂದೇ ಉತ್ಸಾಹವು ಜನರನ್ನು ಒಂದುಗೂಡಿಸಿದೆ ಎಂದು ತಿಳಿದಿದ್ದರು. ತಮ್ಮ ಕಾಲದಲ್ಲಿ ಭಾರತೀಯರ ಮನಸ್ಸನ್ನು ಕದಡಿದ್ದ ಭಿನ್ನ ಭಿನ್ನ ಭಾವನೆಗಳನ್ನು ಒಂದುಗೂಡಿಸಲು ಪ್ರಯತ್ನಮಾಡಿ ಅನೈಕ್ಯತೆಯಲ್ಲಿ ಐಕ್ಯತೆಯನ್ನು ಸಾಧಿಸಹೊರಟರು. ಕೇವಲ ಮೂವತ್ತೆರಡು ವರುಷಗಳ ಅಲ್ಪ ಜೀವಮಾನದಲ್ಲಿ ಅನೇಕ ದೀರ್ಘ ಜೀವಿಗಳ ಕಾರ್ಯವನ್ನು ಸಾಧಿಸಿದರು. ಆತನ ಅಸಾಧಾರಣ ಬುದ್ಧಿಶಕ್ತಿ ಮತ್ತು ಆತ್ಮಶ್ರೀಯ ಪ್ರಭಾವವು ಇಂದಿಗೂ ಭಾರತದಲ್ಲಿ ಪೂರ್ಣ ಪ್ರತಿಭಾಯುಕ್ತವಿರುವುದನ್ನು ನೋಡಬಹುದು. ಆತನೊಬ್ಬ ಮಹಾ ದಾರ್ಶನಿಕ, ವಿದ್ವಾಂಸ, ಅಜ್ಞೇಯತಾವಾದಿ, ಭಕ್ತಾಗ್ರಣಿ, ಕವಿಶ್ರೇಷ್ಠ, ಸಂತ ಇದೆಲ್ಲದರ ಜೊತೆಗೆ ಅನುಭವಪೂರ್ಣ ಸಮಾಜಸುಧಾರಕ ಮತ್ತು ಅದ್ಭುತಸಂಘಟನಾಕಾರ್ಯಶಕ್ತ, ಭಾರತದ ನಾಲ್ಕುಮೂಲೆಗಳಲ್ಲೂ ನಾಲ್ಕು ಮಠಗಳನ್ನು ಸ್ಥಾಪಿಸಿದನು. ದಕ್ಷಿಣದಲ್ಲಿ ಮೈಸೂರಿನ ಶೃಂಗೇರಿಯಲ್ಲಿ, ಪೂರ್ವತೀರದ ಪೂರಿಯಲ್ಲಿ, ಪಶ್ಚಿಮತೀರದ ಕಾಠೇವಾಡದ ದ್ವಾರಕೆಯಲ್ಲಿ, ಹಿಮಾಲಯದ ಹೃದಯದಂತಿರುವ ಬದರಿಯಲ್ಲಿ, ತಮ್ಮ ಮೂವತ್ತೆರಡನೆಯ ವಯಸ್ಸಿನಲ್ಲಿ ಉಷ್ಣದೇಶವಾದ ದಕ್ಷಿಣ ಭಾರತದ ಈ ಬ್ರಾಹ್ಮಣ ಹಿಮಾಲಯ ಪರ್ವತದ ಹಿಮ ಆಚ್ಛಾದಿತ ಕೇದಾರದಲ್ಲಿ ಅಂತರ್ಧಾನನಾದನು.

ಪ್ರಯಾಣವು ಬಹುಕಷ್ಟವಿದ್ದಾಗ, ಪ್ರಯಾಣ ಸೌಕರ್ಯವು ಬಹು ನಿದಾನವೂ ಕಷ್ಟತಮವೂ ಆಗಿದ್ದ ಕಾಲದಲ್ಲಿ ಶಂಕರರು ವಿಶಾಲ ಭಾರತದ ಅತ್ಯಂತ ದೀರ್ಘ ದೇಶಾಟನ ಕೈಗೊಂಡಿದ್ದರಲ್ಲಿ ಒಂದು ವೈಶಿಷ್ಟ್ಯವಿದೆ. ಈ ದೇಶಾಟನಗಳ ಕಲ್ಪನೆಯೊಂದೇ ಸಾಕು; ಮತ್ತು ಹೋದಕಡೆಯಲ್ಲೆಲ್ಲ ಉನ್ನತ ಭಾವನೆಯ ಜನರನ್ನು ಭೇಟಿಮಾಡಿ, ಭಾರಾತಾದ್ಯಂತ ವಿದ್ವಾಂಸರ ಏಕಮಾತ್ರ ಭಾಷೆಯಾಗಿದ್ದ ಸಂಸ್ಕೃತದಲ್ಲಿ ಮಾತನಾಡಿ ಚರ್ಚಿಸಿರುವುದನ್ನು ನೋಡಿದರೆ ಆದೂರದ ಪ್ರಾಚೀನಕಾಲದಲ್ಲಿ ಸಹ ಭಾರತವು ಅಖಂಡವಾಗಿತ್ತೆಂಬುದಕ್ಕೆ ಬೇರೆ ನಿದರ್ಶನ ಬೇಕಿಲ್ಲ. ಆಗಲೂ ಅದಕ್ಕೆ ಮುಂಚೆಯೂ ಅಂತಹ ಪ್ರಯಾಣಗಳು ವಿರಳವಿರಲಿಲ್ಲ. ರಾಜಕೀಯ ಪ್ರಭೇದಗಳೇನಿದ್ದರೂ ಜನರು ಭಾರತದ ನಾನಾಭಾಗಗಳಿಗೆ ಹೋಗಿ ಬರುತ್ತಿದ್ದರು. ಹೊಸಗ್ರಂಥಗಳ ಪರಿಚಯವಾಗುತ್ತಿತ್ತು; ಪ್ರತಿಯೊಂದು ಹೊಸಭಾವನೆಯೂ, ನೂತನ ಸಿದ್ಧಾಂತವೂ ದೇಶಾದ್ಯಂತವೂ ಹರಡುತ್ತಿತ್ತು; ಜನರು ಕುತೂಹಲಿಗಳಾಗಿ ವಿಚಾರಮಾಡುತ್ತಿದ್ದರು; ಕೆಲವು ವೇಳೆ ವಾಗ್ಯುದ್ಧಗಳೂ ನಡೆಯುತ್ತಿದ್ದವು. ವಿದ್ಯಾವಂತರಲ್ಲಿ ಒಂದೇಬಗೆಯ ಬುದ್ಧಿ ಚಾತುರ್ಯವೂ ಮತ್ತು ಸುಸಂಸ್ಕೃತ ಜೀವನವೂ ನೆಲೆಸಿತ್ತು. ಸಾಮಾನ ಜನರು ಅಸಂಖ್ಯಾತರಾಗಿ ಮಹಾಪುರಾಣ ಕಾಲದಿಂದಲೂ ದೇಶಾದ್ಯಂತ ಅಲ್ಲಲ್ಲಿ ಏರ್ಪಟ್ಟಿರುವ ಪ್ರಸಿದ್ಧ ಯಾತ್ರಾಸ್ಥಳಗಳಿಗೆ ಅವಿಚ್ಛಿನ್ನವಾಗಿ ಯಾತ್ರೆ ಹೋಗುತ್ತಿದ್ದರು. ಈ ಬಗೆಯ ಪ್ರವಾಸಗಳಿಂದ ವಿವಿಧಭಾಗಗಳ ಜನರೊಂದಿನ ವಿಚಾರ ವಿನಿಮಯದಿಂದ ಜನರಲ್ಲಿ ತಮ್ಮ ದೇಶ ಒಂದು, ಸಂಸ್ಕೃತಿ ಒಂದು ಎಂಬ ರಾಷ್ಟ್ರೀಯ ಭಾವನೆ ಬೆಳೆಯಿತು. ಮೇಲ್ತರಗತಿಯ ಜನರು ಮಾತ್ರವೇ ಈ ಪ್ರವಾಸ ಹೋಗುತ್ತಿರಲಿಲ್ಲ. ಎಲ್ಲ ಜಾತಿ ಮತಗಳ ಸ್ತ್ರೀಪುರುಷರೂ ಯಾತ್ರೆ ಮಾಡುತ್ತಿದ್ದರು. ಈ ಯಾತ್ರೆಗಳಿಂದ ಜನರ ಮನಸ್ಸಿನ ಮೇಲೆ ಧಾರ್ಮಿಕಭಾವನೆಯೇನೆ ಆಗಿರಲಿ ಈಗಿನಂತೆ ಆಗಲೂ ಸಹ ವಿಶ್ರಾಂತಿ ಪಡೆದು ವಿನೋದದಿಂದ ದೇಶಗಳನ್ನು ನೋಡಿ ಪ್ರಪಂಚಪರಿಚಯ ಪಡೆಯುತ್ತಿದ್ದರು. ಪ್ರತಿಯೊಂದು ಯಾತ್ರಾ ಸ್ಥಳವೂ ಅಖಂಡ ಭಾರತದ ಅಡ್ಡಕೊಯ್ತದ ಒಂದು ತುಂಡಿನಂತೆ ಇರುತ್ತಿತ್ತು. ವಿವಿಧ ಪದ್ಧತಿಗಳ, ಉಡುಪಿನ ಭಾಷೆಗಳ ಜನರಿದ್ದರೂ ತಮ್ಮೆಲ್ಲರನ್ನೂ ಒಂದುಗೂಡಿಸಿ ಒಂದೇ ಗುರಿಗೆ

ಕರೆದೊಯ್ಯುವ ಯಾವುದೋ ಒಂದು ಸಾಮಾನ್ಯ ಮುಖಭಾವ ಮತ್ತು ಬಾಂಧವ್ಯ ಇದೆ ಎಂದು ಮನಗಂಡಿದ್ದರು. ಈ ಪರಸ್ಪರ ಸಮಾವೇಶನಕ್ಕೆ ಉತ್ತರ ದಕ್ಷಿಣ ದೇಶಗಳ ಭಾಷಾಭಿನ್ನತೆಯೂ ಅಡ್ಡಿಯಾಗಲಿಲ್ಲ. ಆಗಲೂ ಇಂದಿನ ಅನೈಕ್ಯತೆ ಇದ್ದೇ ಇತ್ತು; ಶಂಕರಾಚಾರ್ಯರಿಗೆ ಪೂರ್ಣ ತಿಳಿದೂ ಇತ್ತು. ಆ ಅನೈಕ್ಯತೆಯಲ್ಲಿ ರಾಷ್ಟ್ರೀಯ ಐಕ್ಯತೆ ಮತ್ತು ಭಾವನೆಯನ್ನು ಸಾಧಿಸಲು ಶಂಕರರು ನಿರ್ಧರಿಸಿದಂತೆ ತೋರುತ್ತದೆ. ಆತನ ಕಾರ್ಯವೆಲ್ಲ ಬುದ್ಧಿ, ದರ್ಶನ ಮತ್ತು ಧರ್ಮ ಕ್ಷೇತ್ರಗಳಲ್ಲಿ. ದೇಶಾದ್ಯಂತವೂ ಸಾಮಾನ್ಯ ರಾಷ್ಟ್ರ ಭಾವನೆಯಲ್ಲಿ ಸಹ ಒಂದು ಐಕ್ಯತೆಯನ್ನುಂಟುಮಾಡಲು ಪ್ರಯತ್ನಮಾಡಿದರು. ಅನೇಕ ಸಿದ್ಧಾಂತಗಳನ್ನು ಕಿತ್ತೊಗೆದು ತಮ್ಮ ದಾರ್ಶನಿಕ ಕ್ಷೇತ್ರದಲ್ಲಿ ಪ್ರವೇಶಿಸಲು ಯಾರಿಗೆ ಯೋಗ್ಯತೆ ಇದೆಯೊ ಅವರಿಗೆಲ್ಲ ಪ್ರವೇಶವಿದೆಯೆಂದು ಬಾಗಿಲು ತೆರೆದರು. ಭಾರತದ ನಾಲ್ಕುಮೂಲೆಗಳಲ್ಲಿ ಉತ್ತರ ದಕ್ಷಿಣ ಪೂರ್ವ ಪಶ್ಚಿಮ ದೇಶಗಳಲ್ಲಿ ಬೃಹನ್ಮಠಗಳನ್ನು ಸ್ಥಾಪಿಸಿ ಸಂಸ್ಕೃತಿಯಲ್ಲಿ ಭಾರತವು ಅಖಂಡವೆಂಬ ಭಾವನೆಗೆ ಬೆಂಬಲ ಕೊಡಬೇಕೆಂದಿದ್ದಂತೆ ಕಾಣುತ್ತದೆ. ಈ ನಾಲ್ಕು ಸ್ಥಳಗಳು ಅದಕ್ಕೂ ಮುಂಚೆಯೇ ಯಾತ್ರಾಸ್ಥಳಗಳಾಗಿದ್ದವು. ದೇಶಾದ್ಯಂತದಿಂದ ಯಾತ್ರಿಕರು ಬರುತ್ತಿದ್ದುದರಿಂದ ಈಗ ಅವುಗಳ ಪ್ರಾಶಸ್ತ್ಯವು ಇನ್ನೂ ಹೆಚ್ಚಿತು.

ಪ್ರಾಚೀನ ಭಾರತೀಯರು ತಮ್ಮ ಯಾತ್ರಾ ಸ್ಥಳಗಳನ್ನು ಆರಿಸಿರುವುದರಲ್ಲೂ ಎಷ್ಟು ಉಚಿತವಿದೆ! ಪ್ರತಿಯೊಂದು ಸ್ಥಳವೂ ಮನಮೋಹಕ ಪ್ರಕೃತಿ ಸೌಂದರ್ಯದ ನೆಲೆವೀಡು. ಕಾಶ್ಮೀರದಲ್ಲಿ ಹಿಮಮಂಡಿತ ಅಮರನಾಥನ ಗುಹೆ, ದಕ್ಷಿಣ ಭಾರತದ ಕೊನೆಯಂಚಿನ ರಾಮೇಶ್ವರದಲ್ಲಿ ಕನ್ಯಾಕುಮಾರಿಯ ದೇವಾಲಯ, ಹಿಮಾಲಯ ಪರ್ವತದ ತಪ್ಪಲಲ್ಲಿ ಪರ್ವತಾಗ್ರದಿಂದ ಅಗಾಧ ಗಿರಿಕಂದರಗಳಲ್ಲಿ ನುಸುಳಿ ಚಿಮ್ಮಿ ನೆಗೆದು ಸಿಟ್ಟಿಗೆದ್ದ ಸರ್ಪನಂತೆ ಹರಿದು ಭೋರಿಡುವ ಗಂಗಾತೀರದ ಕಾಶಿ ಹರಿದ್ವಾರಗಳು, ಗಂಗೆ ಯಮುನೆಯರಿಂದ ಸಂಗಮದಲ್ಲಿನ ಪ್ರಯಾಗ, ಯಮುನಾತಟದ ಕೃಷ್ಣಕಥೆಯ ಮಥುರೆ ಮತ್ತು ಬೃಂದಾವನಗಳು, ಗೌತಮನು ಜ್ಞಾನಜ್ಯೋತಿಯನ್ನು ಪಡೆದು ಬುದ್ಧನಾದ ಬುದ್ಧಗಯೆ, ದಕ್ಷಿಣ ಭಾರತದ ಅನೇಕ ಯಾತ್ರಾ ಸ್ಥಳಗಳು. ಅನೇಕ ಪುರಾತನ ದೇವಾಲಯಗಳ ಜಗದ್ವಿಖ್ಯಾತ ಶಿಲ್ಪ ಸೌಂದರ್ಯ ಮತ್ತು ಕಲಾಕೃತಿಗಳು. ಈ ಯಾತ್ರಾಸ್ಥಳಗಳಿಗೆ ಪ್ರವಾಸಹೋಗುವುದೆ ಪ್ರಾಚೀನ ಭಾರತ ಕಲೆಯ ಪರಿಚಯಕ್ಕೆ ಒಂದು ಮಹಾಯಾತ್ರೆ.

ಭಾರತದಲ್ಲಿ ಒಂದು ದೊಡ್ಡ ಮತವಾಗಿದ್ದ ಬೌದ್ಧ ಧರ್ಮದ ನಾಶಕ್ಕೆ ಶಂಕರರೇ ಮುಖ್ಯಕಾರಣರಾದರು. ಅನಂತರ ಬ್ರಾಹ್ಮಣಮತವು ಬೌದ್ಧಮತವನ್ನು ಪ್ರೇಮಾಲಿಂಗನದಿಂದ ತನ್ನ ಅನಂತ ಗರ್ಭದಲ್ಲಿ ಅಡಗಿಸಿಕೊಂಡಿತು. ಆದರೆ ಬೌದ್ಧಮತದ ಪ್ರಾಬಲ್ಯವು ಶಂಕರರ ಕಾಲದ ಹೊತ್ತಿಗೇನೆ ಕ್ಷೀಣಿಸಿತ್ತು. ಬ್ರಾಹ್ಮಣ ವಿರೋಧಿಗಳು ಕೆಲವರು ಶಂಕರರನ್ನು ಪ್ರಚ್ಛನ್ನ ಬೌದ್ಧರೆಂದು ದೂಷಿಸಿದರು. ಆದರೆ ಶಂಕರಾಚಾರ್ಯರ ದರ್ಶನದ ಮೇಲೆ ಬೌದ್ಧ ದರ್ಶನದ ಪ್ರಭಾವ ಬಹಳಮಟ್ಟಿಗೆ ಆಗಿದೆ ಎನ್ನುವುದರಲ್ಲಿ ಅನುಮಾನವಿಲ್ಲ.

### ೧೫ ಭಾರತ ಮತ್ತು ಚೀನಾ

ಚೀನ ಮತ್ತು ಭಾರತ ದೇಶಗಳು ಹತ್ತಿರ ಬಂದು ಪರಸ್ಪರ ಬಾಂಧವ್ಯ ಬೆಳೆಸಿದ್ದು ಬೌದ್ಧಮತದಿಂದ. ಅಶೋಕನ ಕಾಲಕ್ಕಿಂತ ಮುಂಚೆ ಅಂತಹ ಸಂಪರ್ಕ ಇತ್ತೊ ಇಲ್ಲವೊ ನಾನು ಹೇಳಲಾರೆ. ಚೀನಾ ರೇಷ್ಮೆ ಇಂಡಿಯಕ್ಕೆ ಬರುತ್ತಿತ್ತು. ಆದ್ದರಿಂದ ಪ್ರಾಯಶಃ ಸಮುದ್ರದ ಮೇಲೆ ಸ್ವಲ್ಪ ವ್ಯಾಪಾರವು ನಡೆಯುತ್ತ ಇದ್ದಿರಬಹುದು. ಅಲ್ಲದೆ ಕೆಲವು ಭೂಮಾರ್ಗಗಳೂ ಇದ್ದಿರಬಹುದು. ಇಂಡಿಯದ ಪೂರ್ವದ ಗಡಿನಾಡಿನ ಜನರಲ್ಲಿ ಮಂಗೋಲಿಯ ವರ್ಚಸ್ಸು ಕಾಣುತ್ತಿದೆ. ಆದ್ದರಿಂದ ಕೆಲವು ಜನರು ವಲಸೆ ಬಂದಿರಬಹುದು. ನೇಪಾಳದಲ್ಲಿಯೂ ಸ್ಪಷ್ಟವಾಗಿ ಎದ್ದುತೋರುತ್ತದೆ. ಪ್ರಾಚೀನಕಾಲದ 'ಕಾಮರೂಪ' ಎಂದು ಪ್ರಖ್ಯಾತವಾದ ಅಸ್ಸಾಮ್ ಮತ್ತು ಬಂಗಾಳದಲ್ಲೂ ಅಲ್ಲಲ್ಲಿ ಕಾಣುತ್ತದೆ. ಐತಿಹಾಸಿಕ ದೃಷ್ಟಿಯಲ್ಲಿ ಜ್ಞಾನಪ್ರಸಾರದಿಂದ ಈ ಜ್ಯೋತಿರ್ಲತೆಯನ್ನು ಹಬ್ಬಿಸಿ

ದವರು ಅಶೋಕನ ಧರ್ಮಪ್ರಚಾರಕರು, ಚೀನಾದೇಶದಲ್ಲಿ ಬೌದ್ಧಧರ್ಮ ಪ್ರಸಾರವು ಹೆಚ್ಚಿದಂತೆ ಚೀನ ಇಂಡಿಯಗಳ ಮಧ್ಯೆ ಒಂದು ಸಾವಿರವರ್ಷಗಳ ಕಾಲ ಯಾತ್ರಿಕರು ಮತ್ತು ವಿದ್ವಾಂಸರುಗಳು ನಿರಂತರ ಸಂಸ್ಕೃತಿ ವಾಹಿನಿಯನ್ನು ಹರಿಸಿದರು. ಗೋಬಿ ಮರುಭೂಮಿಯಲ್ಲಿ ಮಧ್ಯ ಏಷ್ಯದ ಮೈದಾನಗಳಲ್ಲಿ ಮತ್ತು ಪರ್ವತಶ್ರೇಣಿಗಳಲ್ಲಿ, ಹಿಮಾಲಯ ಪರ್ವತದ ಕಣಿವೆಗಳಲ್ಲಿ ದುರ್ಗಮ್ಯವೂ, ಕಷ್ಟತಮವೂ, ಬಹುದೀರ್ಘವೂ ಆದ ಮಹಾಯಾತ್ರೆಗಳನ್ನು ಕೈಗೊಳ್ಳುತ್ತಿದ್ದರು. ಅನೇಕ ಭಾರತೀಯರೂ, ಚೀನೀಯರೂ ದಾರಿಯಲ್ಲೇ ಪ್ರಾಣಬಿಡುತ್ತಿದ್ದರು. ನೂರಕ್ಕೆ ತೊಂಭತ್ತರಷ್ಟು ಜನ ಯಾತ್ರಿಕರು ಈ ರೀತಿ ಪ್ರಾಣಬಿಡುತ್ತಿದ್ದರೆಂದು ಒಂದು ವರದಿ ಇದೆ. ಅನೇಕರು ತಮ್ಮ ನಿರ್ದೇಶ ಸ್ಥಳವನ್ನು ಮುಟ್ಟಿದ ಮೇಲೆ ಹಿಂದಿರುಗಲಿಲ್ಲ; ಅಲ್ಲಿಯೇ ಮನೆಮಾಡಿಕೊಂಡು ನೆಲಸಿದರು. ಅಷ್ಟು ಸುರಕ್ಷಿತವಲ್ಲದಿದ್ದರೂ ಪ್ರಾಯಶಃ ಸ್ವಲ್ಪ ಹತ್ತಿರವಾದ ಇನ್ನೊಂದು ಮಾರ್ಗವಿತ್ತು. ಇದು ಇಂಡೋಚೀನಾ, ಜಾವಾ, ಸುಮಾತ್ರ, ಮಲಯ ಮತ್ತು ನಿಕೊಬಾರ್ ದ್ವೀಪಗಳ ಮೂಲಕ ಹಾಯ್ದು ಹೋಗುವ ಸಮುದ್ರ ಮಾರ್ಗ. ಈ ಮಾರ್ಗವೂ ತುಂಬ ಬಳಕೆಯಲ್ಲಿತ್ತು. ಅನೇಕವೇಳೆ ಯಾತ್ರಿಕರು ಭೂಮಾರ್ಗದಿಂದ ಹೊರಟು ಸಮುದ್ರ ಮಾರ್ಗದಿಂದ ಹಿಂತಿರುಗುತ್ತಿದ್ದರು. ಬೌದ್ಧಮತ ಮತ್ತು ಭಾರತೀಯ ಸಂಸ್ಕೃತಿಗಳು ಮಧ್ಯ ಏಷ್ಯದಲ್ಲಿ ಪೂರ್ಣವಾಗಿಯೂ ಮತ್ತು ಇಂಡೊಚೀನಾದ ಕೆಲವು ಭಾಗಗಳಲ್ಲೂ ಹರಡಿತ್ತು. ಈ ವಿಶಾಲವಾದ ಭೂಪ್ರದೇಶದಲ್ಲಿ ಅಲ್ಲಲ್ಲಿ ಅನೇಕ ಬೌದ್ಧ ಮಠಗಳೂ, ಜ್ಞಾನಕೇಂದ್ರಗಳೂ ಹರಡಿದ್ದವು. ಈ ಕೇಂದ್ರಗಳಲ್ಲಿ ಇಂಡಿಯ ಮತ್ತು ಚೀಣಾದೇಶಗಳ ಯಾತ್ರಿಕರಿಗೆ ಭೂಮಾರ್ಗದಲ್ಲಿ ಹೋಗಲಿ, ಸಮುದ್ರಮಾರ್ಗದಲ್ಲಿ ಹೋಗಲಿ ಸ್ವಾಗತವೂ, ಆಶ್ರಯವೂ ದೊರೆಯುತ್ತಿದ್ದವು. ಕೆಲವು ವೇಳೆ ಚೀನಾಯಾತ್ರಿಕರು ಇಂಡಿಯಕ್ಕೆ ಬರುವ ಮೊದಲು ಸಂಸ್ಕೃತವನ್ನು ಕಲಿಯಲು ಇಂಡೊನೇಷ್ಯದ ಯಾವುದಾದರೂ ಭಾರತೀಯ ಪಾಳೆಯದಲ್ಲಿ ಒಂದೆರಡು ತಿಂಗಳು ನಿಂತು ಸಂಸ್ಕೃತ ಕಲಿತು ಇಂಡಿಯಕ್ಕೆ ಬರುತ್ತಿದ್ದರು.

ಚೀನ ದೇಶಕ್ಕೆ ಮೊದಲು ಯಾತ್ರೆ ಹೋದ ಭಾರತೀಯ ವಿದ್ವಾಂಸನೆಂದರೆ ಕ್ರಿಸ್ತಶಕ ೬೭ ರಲ್ಲಿ ಮಿಂಗ್‌ತಿ ಚಕ್ರವರ್ತಿಯ ಕಾಲದಲ್ಲಿ ಪ್ರಾಯಶಃ ಆತನ ಆಹ್ವಾನದ ಮೇಲೆ ಹೋದ ಕಶ್ಯಪ ಮಾತಂಗನೆಂದು ಗೊತ್ತಾಗಿದೆ. ಲೋ ನದಿಯ ತೀರದಲ್ಲಿ ಲೋಯಾಂಗ್ ಊರಿನಲ್ಲಿ ಆತನು ಬಿಡಾರ ಮಾಡಿದನು. ಧರ್ಮರಕ್ಷನು ಆತನ ಜೊತೆಯಲ್ಲಿ ಹೋಗಿದ್ದನು. ಆಮೇಲೆ ಹೋದವರಲ್ಲಿ ಮುಖ್ಯ ವಿದ್ವಾಂಸರೆಂದರೆ ಬುದ್ಧಭದ್ರ, ಜಿನಭದ್ರ, ಕುಮಾರಜೀವ, ಪರಮಾರ್ಥ, ಜಿನಗುಪ್ತ ಮತ್ತು ಬೋಧಿಧರ್ಮ. ಇವರಲ್ಲಿ ಪ್ರತಿಯೊಬ್ಬರ ಜೊತೆಗೂ ಸಂನ್ಯಾಸಿಗಳೂ ಶಿಷ್ಯವರ್ಗದವರೂ ಹೋಗುತ್ತಿದ್ದರು. ಸುಮಾರು ಕ್ರಿಸ್ತಶಕ ಆರನೆಯ ಶತಮಾನದಲ್ಲಿ ಲೋಯಾಂಗ್ ಪ್ರಾಂತ್ಯ ಒಂದರಲ್ಲಿ ೩೦೦೦ ಬೌದ್ಧ ಸಂನ್ಯಾಸಿಗಳೂ, ೧೦೦೦೦ ಭಾರತೀಯ ಸಂಸಾರಗಳೂ ಚೀನದಲ್ಲಿದ್ದರೆಂದು ತಿಳಿದು ಬಂದಿದೆ.

ಚೀನ ದೇಶಕ್ಕೆ ಹೋದ ಈ ಭಾರತೀಯ ವಿದ್ವಾಂಸರು ತಮ್ಮೊಂದಿಗೆ ಅನೇಕ ಸಂಸ್ಕೃತ ಗ್ರಂಥಗಳ ಹಸ್ತಪ್ರತಿಗಳನ್ನು ತೆಗೆದುಕೊಂಡು ಹೋದರು. ಅವುಗಳನ್ನು ಚೀನೀಭಾಷೆಗೆ ಅನುವಾದ ಮಾಡಿದರು, ಇನ್ನು ಕೆಲವರು ಚೀನೀಭಾಷೆಯಲ್ಲೇ ಸ್ವತಂತ್ರ ಗ್ರಂಥಗಳನ್ನು ಬರೆದರು. ಚೀನೀ ಭಾಷೆಗಳಲ್ಲಿ ಕಾವ್ಯಗಳನ್ನು ಸಹ ಬರೆದು ಚೀನೀಸಾಹಿತ್ಯವನ್ನು ಬೆಳೆಸಿದರು. ಕ್ರಿಸ್ತಶಕ ೪೦೧ ರಲ್ಲಿ ಚೀನಾ ದೇಶಕ್ಕೆ ಹೋದ ಕುಮಾರಜೀವನು ವಿಪುಲ ಗ್ರಂಥ ರಾಶಿಯನ್ನು ಬರೆದನು. ಈಗಲೂ ಸುಮಾರು ೪ ಗ್ರಂಥಗಳು ದೊರೆಯುತ್ತವೆ. ಆತನ ಭಾಷಾಶೈಲಿಯು ಬಹಳ ಉತ್ತಮವಿದೆಯೆಂದು ಹೇಳಲಾಗಿದೆ. ಭಾರತೀಯ ಮಹಾವಿದ್ವಾಂಸನಾದ ನಾಗಾರ್ಜುನನ ಜೀವನ ಚರಿತ್ರೆಯನ್ನು ಚೀನೀ ಭಾಷೆಗೆ ಈತನೇ ಅನುವಾದ ಮಾಡಿದನು. ಜಿನಗುಪ್ತನು ಕ್ರಿಸ್ತಶಕ ಆರನೇ ಶತಮಾನದ ಕೊನೆಯ ಭಾಗದಲ್ಲಿ ಚೀನ ದೇಶಕ್ಕೆ ಹೋದನು. ಆತನು ೩೭ ಸಂಸ್ಕೃತ ಗ್ರಂಥಗಳನ್ನು ಚೀನೀಭಾಷೆಗೆ ಅನುವಾದ ಮಾಡಿರುತ್ತಾನೆ, ಆತನ ಮಹಾ ವಿದ್ವತ್ಪ್ರತಿಭೆಗೆ ಮುಗ್ಧನಾಗಿ ತಾಂಗ್ ವಂಶದ ಚಕ್ರವರ್ತಿಯು ಆತನ ಶಿಷ್ಯನಾದನು,

ಚೀನ ಇಂಡಿಯ ದೇಶಗಳ ಮಧ್ಯೆ ದ್ವಿಮುಖ ವ್ಯವಹಾರವಿತ್ತು. ಇಲ್ಲಿಂದ ವಿದ್ವಾಂಸರು ಚೀನಾಕ್ಕೆ ಹೋದಂತೆ ಚೀನಾದಿಂದಲೂ ವಿದ್ವಾಂಸರು ಇಲ್ಲಿಗೆ ಬರುತ್ತಿದ್ದರು. ಇಂಡಿಯಾ ದೇಶಕ್ಕೆ ಬಂದು ತಮ್ಮ ಪ್ರವಾಸ ಸಾಹಿತ್ಯವನ್ನು ಬರೆದು ಇಟ್ಟವರಲ್ಲಿ ಪ್ರಮುಖರೆಂದರೆ ಫಾಹಿಯನ್, ಸೂಂಗ್ ಯನ್, ಹುಯನ್‌ತ್ಸಾಂಗ್, ಮತ್ತು ಇತ್ಸಿಂಗ್. ಫಾಹಿಯನ್ ಐದನೆ ಶತಮಾನದಲ್ಲಿ ಬಂದವನು. ಚೀನಾ ದೇಶದಲ್ಲಿ ಕುಮಾರಜೀವನ ಶಿಷ್ಯನಾಗಿದ್ದ. ಗುರುವಿನ ಅಪ್ಪಣೆಯನ್ನು ಪಡೆಯಲು ಹೋದ ಕಾಲದಲ್ಲಿ ಭಾರತಕ್ಕೆ ಹೊರಡುವ ಮುನ್ನ ಶಿಷ್ಯನಿಗೆ ಕುಮಾರಜೀವನು ಕೊಟ್ಟ ಉಪದೇಶವು ಗಮನಾರ್ಹವಾಗಿದೆ. ಕೇವಲ ಧಾರ್ಮಿಕ ಜ್ಞಾನ ಸಂಪಾದನೆಯಲ್ಲಿ ಕಾಲವನ್ನೆಲ್ಲ ಕಳೆಯಬೇಡ, ಇಂಡಿಯಾ ದೇಶದ ಜನರ ಜೀವನ ಮತ್ತು ಪದ್ಧತಿಗಳನ್ನು ವಿಶದವಾಗಿ ತಿಳಿದುಕೊಳ್ಳುವದರಿಂದ ಚೀನ ದೇಶ ಭಾರತೀಯರನ್ನೂ ಭಾರತವನ್ನೂ ಪೂರ್ಣವಾಗಿ ಅರ್ಥಮಾಡಿಕೊಳ್ಳಲು ಸಾಧ್ಯ ಎಂದು ಹೇಳಿದನಂತೆ. ಫಾಹಿಯನ್ ಪಾಟಲಿಪುತ್ರ ವಿಶ್ವವಿದ್ಯಾನಿಲಯದಲ್ಲಿ ಅಭ್ಯಾಸ ಮಾಡಿದನು.

ಇಂಡಿಯಾಕ್ಕೆ ಬಂದ ಚೀನ ಯಾತ್ರಿಕರಲ್ಲಿ ಬಹಳ ಪ್ರಸಿದ್ಧನಾದವನೆಂದರೆ ಹುಯನ್‌ತ್ಸಾಂಗ್. ಏಳನೆಯ ಶತಮಾನದಲ್ಲಿ ಚೀನಾ ದೇಶದಲ್ಲಿ ತಾಂಗ್ ವಂಶವು ಉಚ್ಛ್ರಾಯಸ್ಥಿತಿಯಲ್ಲಿದ್ದಾಗ ಮತ್ತು ಉತ್ತರ ಹಿಂದೂಸ್ಥಾನದಲ್ಲಿ ಹರ್ಷವರ್ಧನನು ಚಕ್ರವರ್ತಿಯಾಗಿ ರಾಜ್ಯಭಾರ ಮಾಡುತ್ತಿದ್ದಾಗ ಇಂಡಿಯ ದೇಶಕ್ಕೆ ಬಂದನು. ಗೋಬಿಮರುಭೂಮಿಯನ್ನೂ ದಾಟಿ, ತುರ್ಫಾನ, ಕೂಚ, ತಾಷ್ಕಂಡ್, ಸಮರಖಂದ್, ಬಾಲ್ಖ್, ಖೋತಾನ್, ಯಾರ್ಖಂಡ್ ಮಾರ್ಗವಾಗಿ, ಹಿಮಾಲಯ ಪರ್ವತವನ್ನು ದಾಟಿ ಭೂಮಾರ್ಗದಲ್ಲಿ ಇಂಡಿಯಾ ದೇಶಕ್ಕೆ ಬಂದನು. ಅನೇಕ ಸಾಹಸ ಕತೆಗಳನ್ನು ಗಂಡಾಂತರಗಳನ್ನು, ಮಧ್ಯ ಏಷ್ಯದಲ್ಲಿ ರಾಜ್ಯವಾಳುತ್ತಿದ್ದ ಬೌದ್ಧ ರಾಜರುಗಳ, ಬೌದ್ಧ ವಿಹಾರಗಳ, ನಿಷ್ಠ ಬೌದ್ಧರಾದ ತುರ್ಕಿ ಜನರ ವಿಚಾರವನ್ನು ತಿಳಿಸುತ್ತಾನೆ. ಭಾರತದ ದೇಶಾದ್ಯಂತ ಪ್ರವಾಸಮಾಡಿದನು. ಎಲ್ಲ ಕಡೆಯಲ್ಲೂ ಆತನಿಗೆ ಗೌರವವೂ ಸನ್ಮಾನವೂ ದೊರೆಯಿತು. ಅವನು ನೋಡಿದ ಜನರ ಮತ್ತು ಸ್ಥಳಗಳ ವಿಷಯವಾಗಿ ತಾನು ಕಂಡು ಕೇಳಿದ ಮನಮೋಹಕ, ಕೌತುಕ ಕಥೆಗಳನ್ನು ಬರೆದಿಟ್ಟಿದ್ದಾನೆ. ಅನೇಕ ವರ್ಷಗಳಕಾಲ ಪಾಟಲಿಪುತ್ರಕ್ಕೆ ಅನತಿದೂರದಲ್ಲಿದ್ದ ನಳಂದ ವಿಶ್ವವಿದ್ಯಾನಿಲಯದಲ್ಲಿ ಆತನು ಶಿಕ್ಷಣಪಡೆದನು. ಬಹುವಿಧ ಜ್ಞಾನಾರ್ಜನೆಗೆ ನಳಂದ ವಿಶ್ವವಿದ್ಯಾನಿಲಯವು ಪ್ರಖ್ಯಾತವಾಗಿತ್ತು. ದೇಶದ ಮೂಲೆ ಮೂಲೆಗಳಿಂದ ವಿದ್ಯಾರ್ಥಿಗಳು ಬಂದು ಸೇರುತ್ತಿದ್ದರು. ೧೦೦೦೦ ವಿದ್ಯಾರ್ಥಿಗಳೂ ಬೌದ್ಧ ಸಂನ್ಯಾಸಿಗಳೂ ಅಲ್ಲಿ ವಾಸಮಾಡುತ್ತ ಇದ್ದರಂತೆ. ಹುಯೆನ್‌ತ್ಸಾಂಗ್ ಅಲ್ಲಿ ನ್ಯಾಯಶಾಸ್ತ್ರ ಪಾರಮ್ಯತೆಯನ್ನು ಪಡೆದು ಕೊನೆಗೆ ಅದೇ ವಿಶ್ವವಿದ್ಯಾನಿಲಯದಲ್ಲಿ ಉಪಸ್ಥಾನಪತಿಯಾದನು.

ಹುಯೆನ್‌ತ್ಸಾಂಗನ ಸಿ-ಯೂ-ಕಿ-ಗ್ರಂಥ ಅಥವ ಪಶ್ಚಿಮದೇಶದ ಇತಿಹಾಸ (ಇಂಡಿಯದ ಇತಿಹಾಸ) ಓದಲು ಬಹಳ ಸುಂದರವಿದೆ. ಆಗ ಚೀನದೇಶದ ನಾಗರಿಕತೆಯು ಅತ್ಯುನ್ನತ ಮಟ್ಟದಲ್ಲಿತ್ತು. ಜೀವನವೂ ಅತಿಕೃತಕವಿತ್ತು. ಆತನ ಊರಾದ ಚೀನಾದೇಶದ ರಾಜಧಾನಿ ಸಿಯಾನ್‌ಫು ಒಂದು ದೊಡ್ಡ ಕಲೆಯ ಮತ್ತು ಜ್ಞಾನಕೇಂದ್ರವಾಗಿತ್ತು. ಅಂತಹ ಸ್ಥಳದಿಂದ ಬಂದು ಹುಯನ್‌ತ್ಸಾಂಗ್‌ನು ಬರೆದ ಭಾರತದ ಅಂದಿನ ಸ್ಥಿತಿಗತಿಗಳ ವರ್ಣನೆ ಮತ್ತು ವಿಮರ್ಶೆಗಳಿಗೆ ಬಹು ಬೆಲೆಯಿದೆ. ಬಹಳ ಚಿಕ್ಕವಯಸ್ಸಿನಲ್ಲಿಯೇ ವಿದ್ಯಾರ್ಜನೆ ಆರಂಭವಾಗುತ್ತಿದ್ದಿತೆಂದೂ, (೧) ವ್ಯಾಕರಣ (೨) ಕಲೆ ಮತ್ತು ವೃತ್ತಿ ವಿಜ್ಞಾನ (೩) ವೈದ್ಯ (೪) ತರ್ಕ (೫) ತತ್ವಶಾಸ್ತ್ರ ಈರೀತಿ ಐದು ಶಾಖೆಗಳಲ್ಲಿ ಶಿಕ್ಷಣ ಕೊಡುತ್ತಿದ್ದರೆಂದೂ ಹೇಳುತ್ತಾನೆ. ಭಾರತೀಯರ ಜ್ಞಾನ ಪಿಪಾಸೆಯನ್ನು ಕಂಡು ಆಶ್ಚರ್ಯಗೊಂಡಿದ್ದಾನೆ. ಎಲ್ಲ ಸಂನ್ಯಾಸಿಗಳೂ, ಪುರೋಹಿತರೂ ಗುರುಗಳಾಗಿರುತ್ತಿದ್ದುದರಿಂದ ಪ್ರಾಥಮಿಕ ಶಿಕ್ಷಣವು ಎಲ್ಲರಿಗೂ ಲಭ್ಯವಿತ್ತು. ಜನರ ವಿಷಯದಲ್ಲಿ " ಸಾಮಾನ್ಯ ಜನರು ಸ್ವಭಾವತಃ ಹಗುರ ಮನಸ್ಸಿನವರಾದರೂ ಪ್ರಾಮಾಣಿಕರು ಮತ್ತು ಗೌರವಸ್ಥರು; ಹಣಕಾಸಿನ ವ್ಯವಹಾರದಲ್ಲಿ ಮೋಸವಿಲ್ಲ; ಧರ್ಮ ನಿರ್ವಹಣೆಯು ದಯೆಯಿಂದ ಕೂಡಿದೆ; ಅವರ ನಡೆನುಡಿಯಲ್ಲಿ ಮೋಸವಿಲ್ಲ, ನಂಬಿಕೆ

ದ್ರೋಹವಿಲ್ಲ; ಅಪ್ರಮಾಣಿಕರಲ್ಲ, ವಚನಭ್ರಷ್ಟರಲ್ಲ. ರಾಜ್ಯಾಡಳಿತ ವಿಧಿಯಲ್ಲಿ ಅದ್ಭುತ ನಿಷ್ಠೆಯಿದೆ. ಅವರ ನಡತೆಯು ಸದಾ ಸುಖಪ್ರದ—ಆಹ್ಲಾದಕರ" ಎಂದಿದ್ದಾನೆ. ತುಂಟರು ದಂಗೆಕೋರರು ಬಹು ವಿರಳ; ಒಂದೊಂದು ವೇಳೆ ಸ್ವಲ್ಪ ತಂಟೆಕೊಡುತ್ತಾರೆ. ರಾಜ್ಯಾಡಳಿತದಲ್ಲಿ ಉದಾರ ನೀತಿ ಇರುವುದರಿಂದ ಅಧಿಕಾರವರ್ಗವು ಸುಲಭವೂ ಸರಳವೂ ಇದೆ. ಜನರಿಗೆ ಒತ್ತಾಯದ ದುಡಿಮೆ ಇಲ್ಲ.......ಜನರ ಮೇಲೆ ತೆರಿಗೆಯ ಹೊರೆ ಹೆಚ್ಚು ಇಲ್ಲ, ವ್ಯಾಪಾರದಲ್ಲಿ ನಿರತರಾದ ವರ್ತಕರು ಸುಲಭವಾಗಿ ತಮ್ಮ ವ್ಯಾಪಾರ ಮುಗಿಸಿ ಹೋಗುತ್ತಾರೆ." ಎಂದು ಮುಂತಾಗಿ ಹೇಳಿದ್ದಾನೆ.

ಹುಯನ್‌ತ್ಸಾಂಗ್ ಬಂದ ಮಾರ್ಗದಲ್ಲಿಯೇ ಮಧ್ಯ ಏಷ್ಯದ ಮಾರ್ಗವಾಗಿ ಸ್ವದೇಶಕ್ಕೆ ಹಿಂದಿರುಗಿದ. ಜೊತೆಯಲ್ಲಿ ಅನೇಕ ಗ್ರಂಥಗಳ ಹಸ್ತಪ್ರತಿಗಳನ್ನು ತೆಗೆದುಕೊಂಡು ಹೋದ. ಆತನ ಗ್ರಂಥಗಳಿಂದ ಬೌದ್ಧ ಧರ್ಮವು ಖೊರಸಾನ್ ಇರಾಕ್, ಮಾಸೂಲ್, ಮತ್ತು ಸಿರಿಯ ಗಡಿಯವರೆಗೆ ಬಹು ವಿಶಾಲವಾದ ಪ್ರದೇಶದಲ್ಲಿ ಹಬ್ಬಿ ಜನತೆಯ ಹೃದಯವನ್ನು ಸೂರೆಗೊಂಡಿತ್ತು ಎನ್ನುವ ಉಜ್ವಲ ಚಿತ್ರವು ಎದ್ದು ಕಾಣುತ್ತದೆ. ಆ ಕಾಲವು ಬೌದ್ಧಧರ್ಮವು ಅವನತಿಗಿಳಿಯುವ ಕಾಲ ಮತ್ತು ಇಸ್ಲಾಂ ಧರ್ಮವು ಅರೇಬಿಯದಲ್ಲಿ ಹುಟ್ಟಿ ಅನತಿ ಕಾಲದಲ್ಲಿ ಹಬ್ಬಿಹರಡುವ ಕಾಲ. ಇರಾಣಿ ಜನರ ವಿಷಯದಲ್ಲಿ ಆತನು ಹೇಳಿರುವ ಮಾತುಗಳು ವಿಸ್ಮಯವನ್ನುಂಟುಮಾಡುತ್ತವೆ "ವಿದ್ವತ್ತಿಗೆ ಹೆಚ್ಚು ಬೆಲೆ ಕೊಡುವುದಿಲ್ಲ. ಆದರೆ ಕಲಾಕೃತಿನಿರ್ಮಾಣದಲ್ಲಿ ನಿರತರಾಗಿದ್ದಾರೆ. ಅವರು ನಿರ್ಮಾಣಮಾಡುವ ವಸ್ತುಗಳಿಗೆ ಸುತ್ತ ಮುತ್ತಲಿನ ದೇಶಗಳಲ್ಲಿ ತುಂಬ ಬೆಲೆ ಇದೆ." ಎಂದು ಹೇಳುತ್ತಾನೆ.

ಇರಾನವು ಆಗಲೂ, ಮೊದಲೂ ಮತ್ತು ಈಚೆಗೆ ಸಹ ಜೀವನದ ಸೌಂದರ್ಯ ಮತ್ತು ಗಾಂಭೀರವನ್ನು ಹೆಚ್ಚಿಸುವುದರಲ್ಲಿ ತನ್ನ ಸರ್ವಶಕ್ತಿಯನ್ನು ವಿನಿಯೋಗಿಸಿತು; ಅದರ ಪ್ರಭಾವವು ಏಷ್ಯದ್ಯ ಇತರ ರಾಷ್ಟ್ರಗಳಿಗೂ ಹರಡಿತು. ಗೋಬಿ ಮರುಭೂಮಿಯ ಅಂಚಿನಲ್ಲಿರುವ ತುರ್ಫಾನ್ ಎಂಬ ಸಣ್ಣ ರಾಜ್ಯದ ವಿಷಯವನ್ನು ಸ್ವಲ್ಪ ಹುಯೆನ್‌ತ್ಸಾಂಗ್ ತಿಳಿಸುತ್ತಾನೆ. ಈಚೆಗೆ 'ಭೂಗರ್ಭ ಸಂಶೋಧಕರ ಪ್ರಯತ್ನದಿಂದ ಈ ದೇಶದ ವಿಷಯವಾಗಿ ಇನ್ನೂ ಕೆಲವು ವಿಷಯುಗಳು ಬೆಳಕಿಗೆ ಬಂದಿವೆ. ಎಷ್ಟು ಸಂಸ್ಕೃತಿಗಳು ಅಲ್ಲಿಗೆ ಬಂದು, ಸಂಗಮವಾಗಿ, ಸಮರಸಗೊಂಡು, ಚೀನ, ಇಂಡಿಯ, ಪರ್ಶಿಯ ಮತ್ತು ಗ್ರೀಕ್ ಮೂಲಗಳಿಂದ ಸ್ಫೂರ್ತಿವೆತ್ತ ಒಂದು ಸರ್ವಾಂಗ ಸುಂದರ ಸಂಸ್ಕೃತಿಯನ್ನು ಸೃಷ್ಟಿಮಾಡಿತು. ಭಾಷೆ ಇಂಡಿಯ ಮತ್ತು ಇರಾನಿನಿಂದ ತೆಗೆದುಕೊಂಡ ಇಂಡೊ ಯುರೊಪಿಯನ್ ಭಾಷೆಯಾಗಿತ್ತು. ಕೆಲವು ಸಂದರ್ಭಗಳಲ್ಲಿ ಯೂರೋಪ್ ಖಂಡದ ಕೆಲ್ಟಿಕ್ ಭಾಷೆಯನ್ನು ಸಹ ಹೋಲುತ್ತಿತ್ತು. ಧರ್ಮ ಭಾರತೀಯ ಧರ್ಮವಾಗಿತ್ತು. ಜೀವನವಿಧಾನ ಚೀನೀಯರದಿತ್ತು. ಅವರ ಕಲಾಕೃತಿಗಳು ಇರಾಣದಿಂದ ಬಂದಿದ್ದವು. ಬುದ್ಧನ ವಿಗ್ರಹಗಳು, ಚಿತ್ರಗಳು, ದೇವರ ಮತ್ತು ದೇವತೆಗಳ ವಿಗ್ರಹಗಳು ಅತಿ ಸುಂದರವಿದ್ದವು. ಇಂಡಿಯ ದೇಶದ ಬಟ್ಟೆಗಳಿಂದ ಗ್ರೀಕರ ಕಿರೀಟಗಳಿಂದ ಅವುಗಳನ್ನು ಅಲಂಕಾರ ಮಾಡುತ್ತಿದ್ದರು. ಗ್ರೋಸೆ ಹೇಳುವಂತೆ ಈ ದೇವತೆಗಳ ವಿಗ್ರಹಗಳಲ್ಲಿ "ಹಿಂದೂಗಳ ಕೋಮಲತೆ, ಗ್ರೀಕರ ವೈಭವ, ಚೀನೀಯರ ಮನಮೋಹಕತೆ ಸಮರಸವಾಗಿ ಸುಂದರವಾಗಿ ಮಿಳಿತವಾಗಿವೆ."

ಹುಯನ್‌ತ್ಸಾಂಗ್ ಸ್ವದೇಶಕ್ಕೆ ಮರಳಿದೊಡನೆ ಅವನ ಚಕ್ರವರ್ತಿಯೂ ಜನರೂ ಆದರದಿಂದ ಬರಮಾಡಿಕೊಂಡರು ಅದ್ಭುತ ಸ್ವಾಗತಕೊಟ್ಟರು. ತಾನು ತೆಗೆದುಕೊಂಡು ಹೋದ ಹಸ್ತಪ್ರತಿಗಳನ್ನು ಅನುವಾದ ಮಾಡುವುದಕ್ಕೂ, ತನ್ನ ಗ್ರಂಥವನ್ನು ಬರೆಯುವದಕ್ಕೂ ಆರಂಭಿಸಿದನು. ಅನೇಕ ವರ್ಷಗಳ ಮುಂಚೆ ಅವನು ತನ್ನ ಯಾತ್ರೆ ಹೊರಡುವ ಕಾಲದಲ್ಲಿ ಚಕ್ರವರ್ತಿ ತಾಂಗ್ ಒಂದು ಪಾನೀಯದಲ್ಲಿ ಹಿಡಿ ಮಣ್ಣನ್ನು ಹಾಕಿ 'ಮಾತೃಭೂಮಿಯ ಹಿಡಿಮಣ್ಣು ಪರದೇಶದ ಹೊನ್ನಿನ ರಾಶಿಗಿಂತಲೂ ಶ್ರೇಷ್ಠ, ಆದ್ದರಿಂದ ಕುಡಿ' ಎಂದು ಹುಯನ್‌ತ್ಸಾಂಗನಿಗೆ ಕೊಟ್ಟನೆಂದು ಒಂದು ಕತೆ ಇದೆ.

ಇಂಡಿಯಕ್ಕೆ ಹುಯನ್‌ತ್ಸಾಂಗನ ಭೇಟಿ, ಚೀನ ಮತ್ತು ಇಂಡಿಯದಲ್ಲಿ ಆತನಿಗೆ ಇದ್ದ ಗೌರವಗಳ ಪರಿಣಾಮವಾಗಿ ಈ ಎರಡು ದೇಶಗಳ ರಾಜರುಗಳಿಗೆ ರಾಜಕೀಯ ಸಂಪರ್ಕ ಉಂಟಾಯಿತು. ಕನೂಜದ ಹರ್ಷವರ್ಧನನೂ, ಟಾಂಗ್ ಚಕ್ರವರ್ತಿಯೂ ಪರಸ್ಪರ ರಾಯಭಾರಿಗಳನ್ನು ಕಳುಹಿಸಿದರು.

ಹುಯನ್‌ತ್ಸಾಂಗನೇ ಇಂಡಿಯದೊಂದಿಗೆ ವ್ಯವಹಾರವನ್ನು ಇಟ್ಟುಕೊಂಡಿದ್ದನು. ಅಲ್ಲಿನ ಸ್ನೇಹಿತರಿಗೆ ಪತ್ರ ಬರೆದು ಹಸ್ತಪ್ರತಿಗಳನ್ನು ತರಿಸಿಕೊಳ್ಳುತ್ತ ಇದ್ದನು. ಭಾರತೀಯ ಬೌದ್ಧ ವಿದ್ವಾಂಸನಾದ ಸ್ಥವಿರಪ್ರಜ್ಞದೇವನು ಕ್ರಿಸ್ತಶಕ ೬೫೪ರಲ್ಲಿ ಹುಯನ್‌ತ್ಸಾಂಗನಿಗೆ ಬರೆದ ಕಾಗದ ಅವುಗಳಲ್ಲೊಂದು. ಪರಸ್ಪರ ಅಭಿನಂದನೆ, ಕ್ಷೇಮಸಮಾಚಾರಗಳಾದ ಮೇಲೆ "ನಿಮ್ಮನ್ನು ಮರೆತಿಲ್ಲ ಎಂಬುದನ್ನು ತೋರಿಸಲು ಒಂದು ಜೊತೆ ಶ್ವೇತವಸ್ತ್ರವನ್ನು ಕಳುಹಿಸಿರುತ್ತೇವೆ. ದಾರಿ ಬಹುದೂರ. ಆದ್ದರಿಂದ ಈ ಕಾಣಿಕೆ ಅಲ್ಪವೆಂದು ಅಲಕ್ಷ್ಯಮಾಡಬೇಡಿ. ಸ್ವೀಕರಿಸುವಿರೆಂದು ನಂಬಿದ್ದೇನೆ. ನಿಮಗೆ ಬೇಕಾದ ಸೂತ್ರಗಳು ಮತ್ತು ಶಾಸ್ತ್ರಗಳಿಗೆ ಒಂದು ಪಟ್ಟಿಯನ್ನು ಕಳುಹಿಸಿ. ಸಂಗ್ರಹಿಸಿ ನಿಮಗೆ ಕಳುಹಿಸುತ್ತೇವೆ." ಎಂದು ಬರೆದಿದೆ. ಹುಯನ್‌ತ್ಸಾಂಗ್ ಉತ್ತರ ಬರೆಯುತ್ತ "ಇತ್ತೀಚೆಗೆ ಇಂಡಿಯದಿಂದ ಬಂದ ರಾಯಭಾರಿಯಿಂದ ಮಹಾಗುರುವಾದ ಶೀಲಭದ್ರ ಗತಿಸಿದರೆಂದು ತಿಳಿಯಿತು. ಈ ವರ್ತಮಾನ ಕೇಳಿ ನನಗಾಗಿರುವ ದುಃಖವು ಮಿತಿಇಲ್ಲದಾಗಿದೆ; ಸಹಿಸುವುದೂ ಕಷ್ಟವಾಗಿದೆ. ನಾನು ನನ್ನ ಜೊತೆಯಲ್ಲಿ ತಂದ ಸೂತ್ರಗಳು ಮತ್ತು ಶಾಸ್ತ್ರಗಳಲ್ಲಿ ಯೋಗಾಚಾರ್ಯನ ಭೂಮಿಶಾಸ್ತ್ರ ಮತ್ತು ಇನ್ನೂ ಇತರ ಒಟ್ಟು ಮೂವತ್ತು ಗ್ರಂಥಗಳನ್ನು ಅನುವಾದ ಮಾಡಿರುತ್ತೇನೆ. ಸಿಂಧು ನದಿಯನ್ನು ದಾಟುವಾಗ ಗ್ರಂಥಗಳ ಒಂದು ಕಟ್ಟು ಕಳೆದು ಹೋಯಿತೆಂದು ವಿನೀತನಾಗಿ ಹೇಳಬೇಕಾಗಿದೆ. ನನಗೆ ಬೇಕಾದ ಗ್ರಂಥಗಳ ಪಟ್ಟಿಯೊಂದನ್ನು ಇದರೊಂದಿಗೆ ಇಟ್ಟಿದ್ದೇನೆ. ಅವಕಾಶ ಸಿಕ್ಕಿದರೆ ಅವುಗಳನ್ನು ಕಳುಹಿಸಿ. ನನ್ನ ಕೆಲವು ಅಲ್ಪ ಕಾಣಿಕೆಗಳನ್ನು ತಮಗೆ ಕಳುಹಿಸಿರುತ್ತೇನೆ. ದಯವಿಟ್ಟು ಅವುಗಳನ್ನು ಸ್ವೀಕರಿಸಿ."

ನಲಂದ ವಿಶ್ವವಿದ್ಯಾನಿಲಯದ ವಿಷಯವಾಗಿ ಹುಯನ್‌ತ್ಸಾಂಗ್ ತುಂಬ ವರ್ಣಿಸಿದ್ದಾನೆ, ಇತರರೂ ವರ್ಣಿಸಿದ್ದಾರೆ. ಆದರೂ ಕೆಲವು ದಿನಗಳ ಹಿಂದೆ ನಾನು ನಲಂದಕ್ಕೆ ಹೋಗಿ ಅದರ ವೈಶಾಲ್ಯ ಮತು ಆ ಅಗಾಧ ಪ್ರಮಾಣದ ಯೋಜನೆಯನ್ನು ನೋಡಿ ಆಶ್ಚರ್ಯ ಚಕಿತನಾದೆ. ಒಂದು ಭಾಗವನ್ನು ಮಾತ್ರ ಭೂಗರ್ಭದಿಂದ ಅಗೆದಿದ್ದಾರೆ. ಉಳಿದ ಪ್ರದೇಶದ ಮೇಲೆ ಜನವಸತಿಗಳಿವೆ. ಆದರೆ ಅಗೆದ ಸ್ವಲ್ಪ ಭಾಗದಲ್ಲಿ ಸಹ ಅದ್ಭುತಾಕಾರದ ಕಟ್ಟಡಗಳೂ, ಅವುಗಳ ಮಧ್ಯೆ ವಿಶಾಲವಾದ ಒಳಾಂಗಣಗಳೂ ಇವೆ.

ಚೀನಾ ದೇಶದಲ್ಲಿ ಹುಯನ್‌ತ್ಸಾಂಗ್ ಮರಣ ಹೊಂದಿದ ಸ್ವಲ್ಪ ದಿನಗಳಲ್ಲಿಯೇ ಇತ್ಸಿಂಗ್ ಎಂಬ ಇನ್ನೊಬ್ಬ ಪ್ರಸಿದ್ಧ ಚೀನೀಯಾತ್ರಿಕನು ಭಾರತಕ್ಕೆ ಪ್ರವಾಸ ಹೊರಟನು. ಕ್ರಿಸ್ತಶಕ ೬೭೧ ರಲ್ಲಿ ಹೊರಟರೂ ಹೂಗ್ಲಿ ನದೀಮುಖದಲ್ಲಿರುವ ತಾಮ್ರ ಲಿಪ್ತಿ ರೇವಿಗೆ ತಲಪುವ ಹೊತ್ತಿಗೆ ಎರಡು ವರ್ಷಗಳಾದವು. ಆತನು ಸಮುದ್ರ ಮಾರ್ಗವಾಗಿ ಬಂದನು ಮತ್ತು ಸಂಸ್ಕೃತ ಕಲಿಯಲು ಶ್ರೀಭೋಗದಲ್ಲಿ (ಈಗಿನ ಸುಮಾತ್ರ ದ್ವೀಪದ ಪಾಲೆಂಬಾಂಗ್) ಅನೇಕ ತಿಂಗಳುಗಳಿದ್ದನು. ಪ್ರಾಯಶಃ ಸಮುದ್ರ ಮಾರ್ಗದ ಈ ಪ್ರವಾಸವು ಸ್ವಲ್ಪ ಅರ್ಥಪೂರ್ಣವಿದೆ. ಆಗ ಮಧ್ಯ ಏಷ್ಯದಲ್ಲಿ ರಾಜಕೀಯ ಪರಿಸ್ಥಿತಿ ಪ್ರಕ್ಷುಬ್ಧವಿತ್ತು, ರಾಜಕೀಯ ವಿಪ್ಲವಗಳಾಗುತ್ತಿದ್ದವು. ದಾರಿಯಲ್ಲಿನ ಅನೇಕ ಬೌದ್ಧ ಮಠಗಳು ನಾಶವಾಗಿರಬಹುದು; ಅಲ್ಲದೆ ಇಂಡೊನೇಷ್ಯದಲ್ಲಿ ಅನೇಕ ಭಾರತೀಯ ಪಾಳೆಯಗಳಿದುದ್ದರಿಂದ ಸಮುದ್ರಮಾರ್ಗವು ಪ್ರಾಯಶಃ ಹೆಚ್ಚು ಅನುಕೂಲವಿದ್ದಿರಬಹುದು. ಮತ್ತು ಭಾರತಕ್ಕೂ ಈದೇಶಗಳಿಗೂ ಸದಾ ಸಮುದ್ರ ವ್ಯಾಪಾರ ಮತ್ತು ಇತರ ವ್ಯವಹಾರಗಳಿದ್ದವು. ಈತನ ಮತ್ತು ಇನ್ನೂ ಅನೇಕ ವರದಿಗಳಿಂದ ಪರ್ಷಿಯ, ಇಂಡಿಯ, ಮಲಯ, ಸುಮಾತ್ರ ಚೀನಗಳ ಮಧ್ಯೆ ಕ್ರಮವಾದ ನಾವೆಗಳು ಓಡಾಡುತ್ತಿದ್ದಂತೆ ತೋರುತ್ತದೆ. ಇತ್ಸಿಂಗ್ ಪರ್ಷಿಯಾ ದೇಶದ ಹಡಗಿನಲ್ಲಿ ಕ್ಯಾಂಟಂಗ್‌ನಿಂದ ಹೊರಟು ಮೊದಲು ಸುಮಾತ್ರಕ್ಕೆ ಹೋದನು.

ಇತ್ಸಿಂಗ್ ಸಹ ಅನೇಕ ವರ್ಷಗಳ ಕಾಲ ನಲಂದ ವಿಶ್ವವಿದ್ಯಾನಿಲಯದಲ್ಲಿ ಅಭ್ಯಾಸಮಾಡಿದನು ಮತ್ತು ಹಿಂದಕ್ಕೆ ಹೊರಟಾಗ ನೂರುಗಟ್ಟಲೆ ಸಂಸ್ಕೃತ ಗ್ರಂಥಗಳನ್ನು ತೆಗೆದುಕೊಂಡು ಹೋದನು. ಬೌದ್ಧ ವಿಧಿ ಸೂತ್ರಗಳ ನಿರ್ಣಯ ವಿಚಾರದಲ್ಲಿ ಆತನಿಗೆ ಬಹಳ ಆಸಕ್ತಿ. ಅವುಗಳ ವಿಷಯವಾಗಿ

ಸವಿಸ್ತಾರವಾಗಿ ಬರೆದಿದ್ದಾನೆ. ಆದರೆ ಜನರ ಪದ್ಧತಿಗಳು, ಆಹಾರ ಉಡುಗೆ ತೊಡಿಗೆಗಳ ವಿಷಯವೂ ಹೇಳಿದ್ದಾನೆ. ಉತ್ತರ ಹಿಂದೂಸ್ಥಾನದಲ್ಲಿ ಈಗಿನಂತೆ ಆಗಲೂ ಗೋಧಿಯೇ ಮುಖ್ಯ ಆಹಾರವಾಗಿತ್ತು. ದಕ್ಷಿಣ ಮತ್ತು ಪೂರ್ವ ಭಾರತದಲ್ಲಿ ಅಕ್ಕಿ. ಕೆಲವು ವೇಳೆ ಅಪರೂಪವಾಗಿ ಮಾಂಸವನ್ನೂ ತಿನ್ನುತ್ತಿದ್ದರು. ಅವನು ಹೇಳುವದರಲ್ಲಿ ಪ್ರಾಯಶಃ ಬುದ್ಧ ಸಂನ್ಯಾಸಿಗಳ ವಿಷಯವೇ ಹೆಚ್ಚು. ತುಪ್ಪ, ಎಣ್ಣೆ, ಹಾಲು, ಕೆನೆ ಎಲ್ಲ ಕಡೆಯಲ್ಲೂ ಸಮೃದ್ಧವಾಗಿ ಸಿಗುತ್ತಿತ್ತು. ಕಡುಬು, ಹಣ್ಣುಗಳು ಹೇರಳವಾಗಿದ್ದು ದೊರೆಯುತ್ತಿದ್ದವು. ಭಾರತೀಯರು ಕೆಲವು ವಿಧಿಕ್ರಮದ ಪಾವಿತ್ರ್ಯತೆಗೆ ಕೊಡುತ್ತಲಿದ್ದ ಪ್ರಾಮುಖ್ಯತೆಯನ್ನು ತಿಳಿದುಕೊಂಡ. "ಇಂಡಿಯದ ಪಂಜಾಬಿಗೂ ಮತ್ತು ಇತರ ದೇಶಗಳಿಗೂ ಇರುವ ಮೊದಲನೆಯ ಪ್ರಮುಖ ವ್ಯತ್ಯಾಸವೆಂದರೆ ಪವಿತ್ರತೆ ಮತ್ತು ಅಪವಿತ್ರತೆಯ ಭಾವನೆ. ಉಚ್ಛಿಷ್ಟವನ್ನು ಉಳಿಸುವ ಚೀನೀ ಪದ್ಧತಿಯು ಭಾರತೀಯ ಭಾವನೆಗೆ ವಿರುದ್ಧ" ಎಂದಿದ್ದಾನೆ.

ಇತ್ಸಿಂಗ್ ಇಂಡಿಯಾ ದೇಶವನ್ನು ಸಾಮಾನ್ಯವಾಗಿ ಪಶ್ಚಿಮ ದೇಶ (ಸಿಫ್ಯಾಂಗ್) ಎಂದು ಕರೆದಿದ್ದಾನೆ; ಆರ್ಯದೇಶ ಎಂದೂ ಕರೆದಿದ್ದಾನೆ. "ಆರ್ಯ ಎಂದರೆ ಉತ್ತಮ. ಉತ್ತಮ ಚರಿತರು ಪರಂಪರಾನುಗತವಾಗಿ ಅಲ್ಲಿ ಜನ್ಮತಾಳಿರುವುದರಿಂದ ಆ ದೇಶಕ್ಕೆ ಈ ಹೆಸರು ಬಂದಿದೆ. ನೂರಾರು ದೇಶಗಳ ಮಧ್ಯೆ ಇರುವುದರಿಂದ ಅದನ್ನು ಮಧ್ಯದೇಶ ಎಂದು ಕರೆದಿರುತ್ತಾರೆ. ಈ ಹೆಸರು ಸಾಮಾನ್ಯವಾಗಿ ಎಲ್ಲ ಜನರಿಗೂ ತಿಳಿದಿದೆ. ಉತ್ತರದ ಜನರು (ಹೂ ಅಥವ ಮಂಗೋಲ್ ಜನರು ಅಥವ ತುರುಕರು) ಈ ಆರ್ಯದೇಶವನ್ನು ಹಿಂದೂ (ಸಿನ್-ತು) ಎಂದು ಕರೆಯುತ್ತಾರೆ. ಆದರೆ ಇದು ಹೆಚ್ಚು ಬಳಕೆಯಲ್ಲಿಲ್ಲ, ಅದು ಒಂದು ದೇಶಭಾಷೆಯ ಹೆಸರು, ಅದಕ್ಕೆ ಯಾವ ವಿಶೇಷ ಅರ್ಥವೂ ಇಲ್ಲ. ಇಂಡಿಯ ದೇಶದ ಜನರಿಗೆ ಈ ಹೆಸರು ಅಪರಿಚಿತ. ಇಂಡಿಯ ದೇಶಕ್ಕೆ "ಉತ್ತಮ ದೇಶ" ಅಥವ ಆರ್ಯದೇಶ ಎಂಬುದೇ ಸರಿಯಾದ ಹೆಸರು.

'ಹಿಂದೂ' ಶಬ್ದಕ್ಕೆ ಇತ್ಸಿಂಗನ ವಿವರಣೆ ಆಶ್ಚರ್ಯಕರವಾಗಿದೆ. "ಇಂದು ಎಂದರೆ ಚಂದ್ರನೆಂದು ಕೆಲವರು ಹೇಳುತ್ತಾರೆ. ಇಂಡಿಯ ದೇಶದ ಚೀನೀ ಹೆಸರು "ಇಂದು" (ಇನ್-ಟು) ಅದರಿಂದಲೇ ಹುಟ್ಟಿದೆ. ಅರ್ಥ ಅದೇ ಇರಬಹುದಾದರೂ ಆ ಹೆಸರು ಸಾಮಾನ್ಯ ಬಳಕೆಯಲ್ಲಿಲ್ಲ. ಇಂಡಿಯಾ ದೇಶದ ಜನರು 'ಚೌ' ಮಹಾರಾಷ್ಟ್ರಕ್ಕೆ ಚೀನಾ ಎಂದು ಒಂದೇ ಹೆಸರಿನಿಂದ ಕರೆಯುತ್ತಾರೆ. ಅದಕ್ಕೆ ವಿಶೇಷ ಅರ್ಥವೂ ಏನೂ ಇಲ್ಲ." ಎಂದು ಹೇಳಿದ್ದಾನೆ. ಕೊರಿಯ ಮತ್ತು ಇತರ ದೇಶಗಳ ಸಂಸ್ಕೃತ ಹೆಸರುಗಳನ್ನೂ ತಿಳಿಸುತ್ತಾನೆ.

ಇಂಡಿಯ ದೇಶವನ್ನೂ, ಅನೇಕ ಭಾರತೀಯ ವಸ್ತುಗಳನ್ನೂ ಇಷ್ಟು ಹೊಗಳಿದರೂ ಸ್ವದೇಶವಾದ ಚೀನಾ ದೇಶಕ್ಕೇನೆ ಆತನು ಮೊದಲನೆಯ ಸ್ಥಾನ ಕೊಡುತ್ತಾನೆ. ಇಂಡಿಯ 'ಆರ್ಯಭೂಮಿ' ಆದರೆ ಚೀನ 'ದೇವಭೂಮಿ.' ಭಾರತದ ಪಂಚದೇಶಗಳ ಜನರು ತಮ್ಮ ಶೀಲ ಮತ್ತು ಉತ್ತಮ ಜೀವನದ ವಿಷಯದಲ್ಲಿ ಹೆಮ್ಮೆ ಪಡುತ್ತಾರೆ, ಆದರೆ ಉನ್ನತ ಸಂಸ್ಕೃತಿ, ಸಾಹಿತ್ಯದ ಸೊಬಗು, ಔಚಿತ್ಯ, ಮರ್ಯಾದೆ, ಸ್ವಾಗತಿಸುವ ಬೀಳ್ಕೊಡುವ ಸಮಾರಂಭ, ಊಟದ ರುಚಿ, ದಾನ ಧರ್ಮಗಳು, ಶ್ರೀಮಂತಿಕೆಯನ್ನು ಕಾಣಬೇಕಾದರೆ ಚೀನಾ ದೇಶಕ್ಕೇ ಹೋಗಬೇಕು. ಬೇರಾವ ದೇಶವೂ ಅದನ್ನು ಮೀರಿಸಲಾರದು ಎಂದಿದ್ದಾನೆ. ವೈದ್ಯದಲ್ಲಿ ಶಸ್ತ್ರ ವಿದ್ಯೆ, ಚುಚುಕೆಹಾಕುವುದು, ನಾಡಿ ನೋಡುವುದರಲ್ಲಿ ಭಾರತೀಯರಲ್ಲಿ ಯಾರೂ ಚೀನಾ ದೇಶವನ್ನು ಮೀರಿಸಿಲ್ಲ. ಆಯುಸ್ಸನ್ನು ವೃದ್ಧಿ ಮಾಡತಕ್ಕ ಔಷಧವು ಚೀನ ದೇಶಕ್ಕೆ ಮಾತ್ರ ತಿಳಿದಿದೆ. ಜನರ ಉದಾತ್ತ ಜೀವನ ಮತ್ತು ವಸ್ತು ಶ್ರೇಷ್ಠತೆಯಿಂದ ಚೀನ ದೇಶವನ್ನು ದೇವಲೋಕವೆಂದು ಕರೆಯಲಾಗಿದೆ. ಇಂಡಿಯದ ಪಂಚ ದೇಶಗಳಲ್ಲಿ ಚೀನಾ ದೇಶವನ್ನು ಹೊಗಳದ ಜನ ಯಾರಾದರೂ ಇದ್ದಾರೆಯೇ"? ಎಂದು ಕೇಳಿದ್ದಾನೆ.

ಚೀನ ದೇಶದ ಚಕ್ರವರ್ತಿಗೆ ಹಳೆಯ ಸಂಸ್ಕೃತ ಗ್ರಂಥಗಳಲ್ಲಿ 'ದೇವಪುತ್ರ' (ಅಂದರೆ ಸ್ವರ್ಗದಲ್ಲಿ ಹುಟ್ಟಿದವನು) ಎಂದು ಕರೆದಿರುತ್ತಾರೆ.

ಸಂಸ್ಕೃತದಲ್ಲಿ ಸ್ವತಃ ಪಂಡಿತನಾದ ಇತ್ಸಿಂಗ್ ಸಂಸ್ಕೃತವನ್ನು ತುಂಬ ಶ್ಲಾಘಿಸಿದ್ದಾನೆ.

ಉತ್ತರದಲ್ಲಿಯೂ ದಕ್ಷಿಣದಲ್ಲಿಯೂ ಅದಕ್ಕೆ ಮನ್ನಣೆ ಇದೆ, ಎಂದು ಹೇಳಿದ್ದಾನೆ. " ದೇವಭೂಮಿ (ಚೀನಾ) ಯ ಜನರೂ, ದೇವಲೋಕದ ಉಗ್ರಾಣವಾದ ಇಂಡಿಯಾದ ಜನರೂ ಭಾಷಾಶಾಸ್ತ್ರವನ್ನು ಇನ್ನೂ ಎಷ್ಟು ಬೋಧಿಸಬೇಕು (?) ಎಂದಿದ್ದಾನೆ. ಚೀನಾ ದೇಶದಲ್ಲಿ ಸಂಸ್ಕೃತ ಪಾಂಡಿತ್ಯವು ವಿಪುಲವಾಗಿ ಬೆಳೆದಿರಬೇಕು. ಚೀನಿಭಾಷೆಯಲ್ಲಿ ಸಂಸ್ಕೃತ ಸ್ವರೋಚ್ಚಾರಣೆಯನ್ನು ತರಲು ಚೀನೀ ವಿದ್ವಾಂಸರು ಪ್ರಯತ್ನ ಮಾಡಿದರು. ಅವರಲ್ಲಿ ಮುಖ್ಯನಾದವನು ಟಾಂಗ್ ವಂಶದ ಅರಸರ ಕಾಲದಲ್ಲಿದ್ದ 'ಷೊವೆನ್' ಎಂಬ ಬೌದ್ಧ ಸಂನ್ಯಾಸಿ ಸಂಸ್ಕೃತದ ಸ್ವರಮಾಲೆಯನ್ನು ಚೀನೀಭಾಷೆಯಲ್ಲಿ ತರಲು ಪ್ರಯತ್ನ ಮಾಡಿದನು.

ಇಂಡಿಯದಲ್ಲಿ ಬೌದ್ಧ ಮತವು ಕ್ಷೀಣಿಸುತ್ತ ಬಂದಂತೆ ಭಾರತದ ಬೌದ್ಧ ಯಾತ್ರಾಸ್ಥಳಗಳನ್ನು ನೋಡಲು ಚೀನದಿಂದ ಯಾತ್ರಿಕರು ಆಗಾಗ ಬಂದರೂ ವಿದ್ವಾಂಸರ ಪ್ರವಾಸವು ನಿಂತುಹೋಯಿತು. ಹನ್ನೊಂದನೆಯ ಶತಮಾನದಿಂದ ಈಚೆಗೆ ನಡೆದ ರಾಜಕೀಯ ವಿಪ್ಲವಗಳ ನಂತರ ಬೌದ್ಧ ಸಂನ್ಯಾಸಿಗಳು ತಂಡೋಪತಂಡವಾಗಿ ಹಸ್ತಪ್ರತಿಗಳ ಹೊರೆಗಳನ್ನು ಹೊತ್ತು ನೇಪಾಳದ ಮೂಲಕ ಹಿಮಾಲಯ ಪರ್ವತವನ್ನು ದಾಟಿ ತಿಬೆಟ್ಟಿಗೆ ಹೋಗಿ ನೆಲಸಿದರು. ಈ ರೀತಿ ಭಾರತೀಯ ಪ್ರಾಚೀನ ಸಾಹಿತ್ಯದ ಬಹುಭಾಗ ತಿಬೆಟ್ಟಿಗೆ ಮತ್ತು ಆ ಮುಂಚೆ ಚೀನಕ್ಕೆ ಹೋಗಿ ಸೇರಿತು. ಈಚೆಗೆ ಮೂಲ ಪ್ರತಿಗಳೂ ಅನುವಾದಗಳೂ ಅನೇಕ ಗ್ರಂಥಗಳೂ ದೊರೆತಿವೆ. ಬೌದ್ಧ ಧರ್ಮಗ್ರಂಥಗಳಲ್ಲದೆ ಬ್ರಾಹ್ಮಣ ಧರ್ಮ, ಖಗೋಳಶಾಸ್ತ್ರ, ಗಣಿತಶಾಸ್ತ್ರ ಮತ್ತು ವೈದ್ಯಶಾಸ್ತ್ರದ ಅನೇಕ ಪ್ರಾಚೀನ ಮಹಾಕಾವ್ಯಗಳು ಚೀಣೀ ಮತ್ತು ತಿಬೆಟ್ ಭಾಷೆಗಳ ಅನುವಾದಗಳಲ್ಲಿ ದೊರೆತಿವೆ. ಚೀನದಲ್ಲಿ 'ಸೂಂಗ್ ಪಾವೊ' ಎಂಬ ಒಂದು ಪುಸ್ತಕಭಂಡಾರದಲ್ಲಿಯೇ ೮೦೦೦ ಗ್ರಂಥಗಳಿವೆ. ತಿಬೆಟ್‌ನಲ್ಲಂತೂ ಎಲ್ಲೆಲ್ಲೂ ತುಂಬಿವೆ. ಭಾರತೀಯ, ಚೀನೀ, ತಿಬೆಟ್ ವಿದ್ವಾಂಸರುಗಳಲ್ಲಿ ಪೂರ್ಣ ಸೌಹಾರ್ದ ಸಹಕಾರವಿತ್ತು. ಬೌದ್ಧ ಪಾರಿಭಾಷಿಕ ಶಬ್ದಕೋಶಗಳಲ್ಲಿ ಸಂಸ್ಕೃತ–ತಿಬೆಟ್–ಚೀನೀ ಭಾಷೆಗಳ ನಿಘಂಟು ಒಂದು ಇರುವುದು ಈ ಸೌಹಾರ್ದಕ್ಕೆ ದೊಡ್ಡ ನಿದರ್ಶನ. ಇದು ಕ್ರಿಸ್ತಶಕ ೯ ಅಥವ ೧೦ ನೆಯ ಶತಮಾನದಲ್ಲಿ ಬರೆದದ್ದು. ಇದನ್ನು " ಮಹಾವ್ಯುತ್ಪತ್ತಿ " ಎಂದು ಕರೆಯುತ್ತಾರೆ.

ಚೀನಾ ದೇಶದಲ್ಲಿ ಅಚ್ಚಾದ ಅತಿ ಪ್ರಾಚೀನ ಗ್ರಂಥಗಳೆಂದರೆ ಕ್ರಿ. ಶ. ಎಂಟನೆಯ ಶತಮಾನದ ಸಂಸ್ಕೃತ ಗ್ರಂಥಗಳು. ಅವೆಲ್ಲ ಮರದ ಹಲಗೆಗಳ ಮೇಲೆ ಬರೆದವುಗಳು. ಹತ್ತನೆಯ ಶತಮಾನದಲ್ಲಿ ಸಾಮ್ರಾಜ್ಯ ಮುದ್ರಣ ಸಮಿತಿಯೊಂದು ನೇಮಕವಾಯಿತು. ಅದರ ಫಲವಾಗಿ ಸೂಂಗ್ ಯುಗದವರೆಗೆ ಮುದ್ರಣ ಕಲೆಯು ಅವಿಚ್ಛಿನ್ನವಾಗಿ ಮುಂದುವರಿಯಿತು. ಚೀನೀ ಮತ್ತು ಭಾರತೀಯ ವಿದ್ವಾಂಸರುಗಳಲ್ಲಿ ಇಷ್ಟು ಬಳಕೆ ಇದ್ದು ನೂರಾರು ವರ್ಷಗಳ ಕಾಲ ಅನೇಕ ಗ್ರಂಥಗಳ ಹಸ್ತಪ್ರತಿಗಳ ವಿನಿಮಯವಾಗುತ್ತಿದ್ದರೂ ಆ ಕಾಲದಲ್ಲಿ ಇಂಡಿಯದಲ್ಲಿ ಗ್ರಂಥಗಳ ಮುದ್ರಣವು ನಡೆಯದಿದ್ದುದು ಆಶ್ಚರ್ಯ. ಅಚ್ಚುಗಳ ಮೂಲಕ ಮುದ್ರಣ ಮಾಡುವ ಕಲೆಯು ಬಹು ಕಾಲಕ್ಕೆ ಮುಂಚೆಯೇ ಚೀನದಿಂದ ತಿಬೆಟ್‌ಗೆ ಹರಡಿತು, ಮತ್ತು ಈಗಲೂ ಅಲ್ಲಿ ನಡೆಯುತ್ತಿದೆ. ೧೨೬೦–೧೩೬೮ ರ ವರೆಗಿದ್ದ ಮಂಗೋಲ್ ಅಥವ ಯುವಾನ್ ರಾಜಮನೆತನದ ಕಾಲದಲ್ಲಿ ಚೀನೀ ಮುದ್ರಣ ಕಲೆಯು ಯೂರೋಪಿಗೆ ಹರಡಿತು.

ಇಂಡೊ ಆಫ್ಘನ್ ಮತ್ತು ಮೊಗಲರ ಕಾಲದಲ್ಲಿ ಸಹ ಇಂಡಿಯ ಮತ್ತು ಚೀನಕ್ಕೆ ಆಗಾಗ್ಗೆ ರಾಜಕೀಯ ಸಂಪರ್ಕವಿರುತ್ತಿತ್ತು. ೧೩೨೫ ರಿಂದ ೫೧ ರ ವರೆಗೆ ದೆಹಲಿಯ ಸುಲ್ತಾನನಾಗಿದ್ದ ಮಹಮದ್‌ಬಿನ್ ತೊಗಲಕ್ಕನು ಅರಬ್ಬಿ ಯಾತ್ರಿಕನಾದ ಇಬನ್ ಬಟೂಟ ಎಂಬಾತನನ್ನು ಚೀಣೀ ಚಕ್ರವರ್ತಿಯ ಆಸ್ಥಾನಕ್ಕೆ ತನ್ನ ರಾಯಭಾರಿಯನ್ನಾಗಿ ಕಳುಹಿಸಿದ್ದನು. ಅಷ್ಟು ಹೊತ್ತಿಗೆ ವಂಗ ದೇಶವು ದೆಹಲಿಯ ಚಕ್ರವರ್ತಿಯ ಅಧೀನತೆಯನ್ನು ಬಿಟ್ಟು ಸ್ವತಂತ್ರ ರಾಷ್ಟ್ರವಾಗಿತ್ತು. ೧೪ ನೆಯ ಶತಮಾನದ ಮಧ್ಯಭಾಗದಲ್ಲಿ ಚೀನೀ ರಾಜಸಭೆಯಿಂದ ಹು-ಷೀನ್, ಫಿನ್-ಷೀನ್ ಎಂಬ ಇಬ್ಬರು ರಾಯಭಾರಿಗಳು ಬಂಗಾಳದ ಸುಲ್ತಾನನಲ್ಲಿಗೆ ಬಂದರು. ಸುಲ್ತಾನ ಘೈಯಾಸುದ್ದೀನನ ಕಾಲದಲ್ಲಿ

ಬಂಗಾಲದಿಂದ ಚೀನಾಕ್ಕೆ ಅನೇಕ ರಾಯಭಾರಿಗಳು ಹೋಗಿದ್ದರು. ಆಗ ಚೀನಾದಲ್ಲಿ ಮಿಂಗ್ ಚಕ್ರವರ್ತಿಗಳ ಕಾಲ. ಸೈಯದ್‌ಉದ್ದೀನನ ಕಾಲದಲ್ಲಿ ೧೪೧೪ ರಲ್ಲಿ ಹೋದ ರಾಯಭಾರಿಗಳು ಒಯ್ದ ಬಹುಮಾನಗಳಲ್ಲಿ ಸಜೀವ ಜಿರಾಫೆಯು ಒಂದು. ಜಿರಾಫೆ ಇಂಡಿಯಕ್ಕೆ ಹೇಗೆ ಬಂದಿತೊ ಅದೇ ಒಂದು ವಿಚಿತ್ರ. ಪ್ರಾಯಶಃ ಆಫ್ರಿಕದ ಒಂದು ಅಪರೂಪ ವಸ್ತುವಾದ್ದರಿಂದ ಮಿಂಗ್ ಚಕ್ರವರ್ತಿಯು ಪ್ರೀತಿಯಿಂದ ಸ್ವೀಕರಿಸಬಹುದೆಂದು ಕಳುಹಿಸಿರಬೇಕು. ಕನ್‌ಫ್ಯೂಷಿಯಸ್‌ನ ಅನುಯಾಯಿಗಳಿಗೆ ಜಿರಾಫೆ ಒಂದು ಶುಭ ವಸ್ತುವಾದ್ದರಿಂದ ಅದಕ್ಕೆ ಬಹಳ ಆದರದ ಸ್ವಾಗತವು ದೊರೆಯಿತು. ಆ ಪ್ರಾಣಿಯು ಜಿರಾಫ್ ಎನ್ನುವದರಲ್ಲಿ ಅನುಮಾನವಿಲ್ಲ. ಏಕೆಂದರೆ ಅದರ ದೀರ್ಘ ವರ್ಣನೆ ಇರುವುದಲ್ಲದೆ, ರೇಷ್ಮೆಯ ಕರವಸ್ತ್ರದ ಮೇಲೆ ಅದರ ಚಿತ್ರವಿದೆ. ಈ ಚಿತ್ರವನ್ನು ಚಿತ್ರಿಸಿದ ರಾಜ ಕಲಾವಿದ. ಅದನ್ನೂ ಅದರಿಂದ ಒದಗುವ ಅದೃಷ್ಟ ಪರಂಪರೆಯನ್ನೂ ವರ್ಣಿಸಿ ದೊಡ್ಡ ಗ್ರಂಥವನ್ನೇ ಬರೆದಿದ್ದಾನೆ. "ಸಚಿವರು ಮತ್ತು ಪ್ರಜೆಗಳು ಅದರ ದರ್ಶನಕ್ಕಾಗಿ ಗುಂಪುಗಟ್ಟಿದ್ದರು. ಅವರ ಆಶ್ಚರ್ಯಕ್ಕೆ ಪಾರವೇ ಇರಲಿಲ್ಲ" ಎಂದಿದ್ದಾನೆ.

ಬೌದ್ಧರ ಕಾಲದಲ್ಲಿ ಇಂಡಿಯ ಚೀನಾಗಳ ಮಧ್ಯೆ ಬೆಳೆದು ಬಂದಿದ್ದ ವ್ಯಾಪಾರವು ಇಂಡೊ ಆಫ್ಘನರ ಮತ್ತು ಮೊಗಲರ ಕಾಲದಲ್ಲೂ ಮುಂದುವರಿಯಿತು. ಅನೇಕ ವಸ್ತುಗಳ ಕೊಡುವಳಿಯೂ ಇತ್ತು. ಇದು ಉತ್ತರದ ಹಿಮಾಲಯದ ಕಣಿವೆಗಳ ಮೂಲಕ ಮತ್ತು ಮಧ್ಯ ಏಷ್ಯದ ಒಂಟಿ ಮಾರ್ಗಗಳ ಮೂಲಕ ನಡೆಯುತ್ತಿತ್ತು. ಆಗ್ನೇಯ ಏಷ್ಯದ ದ್ವೀಪಗಳ ಮೂಲಕವು ಮುಖ್ಯವಾಗಿ ದಕ್ಷಿಣ ಭಾರತದ ಸಮುದ್ರ ತೀರದ ಬಂದರುಗಳಿಗೂ ಸಮುದ್ರ ವ್ಯಾಪಾರವೂ ನಡೆಯುತ್ತಿತ್ತು.

ಈ ಸಹಸ್ರಾರು ವರ್ಷಗಳ ಇಂಡಿಯ ಮತ್ತು ಚೀನ ದೇಶಗಳ ಸಂಪರ್ಕದಿಂದ ದಾರ್ಶನಿಕ ಮತ್ತು ಭಾವನಾ ಪ್ರಪಂಚಗಳಲ್ಲಿ ಮಾತ್ರವಲ್ಲದೆ ಜೀವನ ಕಲೆ ಮತ್ತು ವಿಜ್ಞಾನ ವಿಷಯಗಳಲ್ಲಿ ಸಹ ಅನೇಕ ವಿಷಯಗಳನ್ನು ಒಂದರಿಂದ ಒಂದು ಕಲಿತುಕೊಂಡವು. ಚೀನಾ ದೇಶದ ಪ್ರಭಾವವು ಇಂಡಿಯ ದೇಶದಮೇಲೆ ಬಿದ್ದುದಕ್ಕಿಂತ ಹೆಚ್ಚಾಗಿ ಇಂಡಿಯ ದೇಶದ ಪ್ರಭಾವವು ಚೀನಾ ದೇಶದ ಮೇಲೆ ಹೆಚ್ಚು ಪರಿಣಾಮಕಾರಿಯಾದದ್ದು ಒಂದು ದೊಡ್ಡ ನ್ಯೂನತೆ. ಚೀನಾ ದೇಶದ ಪ್ರಭಾವವು ಇಂಡಿಯಾ ದೇಶದ ಮೇಲೆ ಹೆಚ್ಚು ಪರಿಣಾಮಕಾರಿಯಾಗಿದ್ದಿದ್ದರೆ ಚೀನೀಯರ ವ್ಯವಹಾರ ಜ್ಞಾನದಿಂದ ಭಾರತೀಯರು ವಿಶೇಷ ಲಾಭ ಪಡೆದು ಅದರ ಸಹಾಯದಿಂದ ಅವರ ಭಾವಾವೇಶದ ಜೀವನವನ್ನು ಸ್ವಲ್ಪ ಸ್ತಿಮಿತಗೊಳಿಸಬಹುದಿತ್ತು. ಭಾರತದಿಂದ ಚೀನಾ ಅನೇಕ ವಿಷಯಗಳನ್ನು ಎರವಲು ಪಡೆದರೂ ಅದನ್ನೆಲ್ಲ ತನ್ನದೇ ಆದ ವಿಶಿಷ್ಟ ಮಾರ್ಗದಲ್ಲಿ ತನ್ನ ಜೀವನದ ಹಾಸು ಹೊಕ್ಕಿಗೆ ಅನುಗುಣವಾಗಿ ಉಪಯೋಗಿಸಿಕೊಳುವಷ್ಟು ದಾರ್ಢ್ಯವಿತ್ತು. ಬೌದ್ಧ ಮತದ ಮತ್ತು ಅದರ ಜಟಿಲವಾದ ತತ್ತ್ವಶಾಸ್ತ್ರವು ಸಹ ಕನ್‌ಫ್ಯೂಷಿ ಮತ್ತು ಲೊ-ಷೆ ಪ್ರಭಾವಕ್ಕೆ ಒಳಗಾದವು. ಚೀನೀಯರ ಜೀವನಾಸಕ್ತಿಯನ್ನೂ ಮತ್ತು ಸೌಖ್ಯವನ್ನೂ ನಾಶಮಾಡಲು ಅಥವ ವ್ಯತ್ಯಾಸಗೊಳಿಸಲು ಬೌದ್ಧ ಧರ್ಮದ ನಿರಾಶಾವಾದಿತ್ವದಿಂದ ಸಾಧ್ಯವಾಗಲಿಲ್ಲ. ಚೀನ ದೇಶದಲ್ಲಿ ಒಂದು ಹಳೆಯ ಗಾದೆ ಇದೆ. "ಸರಕಾರದ ಕೈಗೆ ಸಿಕ್ಕಿದರೆ ಛಡಿ ಏಟಿನಿಂದ ಸಾವು, ಬೌದ್ಧರ ಕೈಗೆ ಸಿಕ್ಕಿದರೆ ಉಪವಾಸದಿಂದ ಸಾವು" ಎಂದು.

ಉ-ಚೇನ್-ಎನ್ ಎಂಬಾತನು ೧೬ ನೆಯ ಶತಮಾನದಲ್ಲಿ ಬರೆದ 'ಕೋತಿ' ಎಂಬ ಪ್ರಸಿದ್ಧ ಕಾದಂಬರಿಯೊಂದರಲ್ಲಿ (ಆರ್ಥರ್‌ವೇಲೇ ಇದನ್ನು ಇಂಗ್ಲಿಷಿಗೆ ಅನುವಾದ ಮಾಡಿದ್ದಾನೆ) ಹುಯನ್ ತ್ಸಾಂಗ್ ಇಂಡಿಯಕ್ಕೆ ಹೋಗುವಾಗ ದಾರಿಯಲ್ಲಿ ನಡೆದ ವಿಚಿತ್ರ ಪೌರಾಣಿಕ ಘಟನೆಗಳನ್ನೆಲ್ಲ ವರ್ಣಿಸಿದ್ದಾನೆ. ಆ ಗ್ರಂಥವು ಕೊನೆಯಲ್ಲಿ ಇಂಡಿಯ ದೇಶಕ್ಕೆ ಅರ್ಪಣೆಯಾಗಿದೆ. "ಈ ಗ್ರಂಥವನ್ನು ಬುದ್ಧನ ಪವಿತ್ರ ನಾಡಿಗೆ ಅರ್ಪಿಸುತ್ತೇನೆ. ಆಶ್ರಯದಾತೃವಿನಂತೆ ಗುರುವಿನಂತೆ ಸಹಜ ಕರುಣೆಯನ್ನು ದಯಪಾಲಿಸಲಿ. ತಪ್ಪು ದಾರಿ ಹಿಡಿವವರ ಮತ್ತು ಪತಿತರ ಸಂಕಷ್ಟಗಳನ್ನು ಪರಿಹರಿಸಲಿ . . ." ಎಂದು ಇದೆ.

ಅನೇಕ ಶತಮಾನಗಳ ಕಾಲ ಪರಸ್ಪರ ಸಂಬಂಧ ಕಡಿದು ಹೋದ ಮೇಲೆ ಕ್ರೂರವಿಧಿಯ

ವೈಚಿತ್ರ್ಯದಿಂದ ಇಂಡಿಯ ಚೀನಾಗಳೆರಡೂ ಬ್ರಿಟಿಷ್ ಈಸ್ಟ್ ಇಂಡಿಯ ಕಂಪೆನಿಯ ಅಧೀನಕ್ಕೊಳಗಾದವು. ಇಂಡಿಯ ಬಹುಕಾಲ ಈ ದಾಸ್ಯವನ್ನು ಅನುಭವಿಸಬೇಕಾಗಿ ಬಂದಿತು; ಚೀನ ಅತ್ಯಲ್ಪ ಕಾಲದಲ್ಲಿ–ಆ ಸಂಬಂಧವನ್ನು ಕಳಚಿಕೊಂಡರೂ ಅಫೀಮು ಮತ್ತು ಒಳ ಯುದ್ಧಗಳಿಂದ ಪಾರಾಗಲಿಲ್ಲ.

ಈಗ ಕಾಲಚಕ್ರವು ಪುನಃ ಮೇಲೆ ಹೊರಳಿದೆ. ಚೀನಾ ಮತ್ತು ಇಂಡಿಯ ದೇಶಗಳು ಪರಸ್ಪರ ಪುನರ್ಮಿಲನದಿಂದ ಲಾಭ ಪಡೆದು ತಮ್ಮ ಗತವೈಭವನ್ನು ಸ್ಮರಿಸುತ್ತಿವೆ. ಹೊಸ ಬಗೆಯ ಯಾತ್ರಿಕರು ಮಧ್ಯೆ ಇರುವ ಪರ್ವತಶ್ರೇಣಿಗಳನ್ನು ದಾಟಿ ಶುಭಸಂದೇಶ ಮತ್ತು ಹರ್ಷವನ್ನು ಕೊಂಡೊಯ್ದು ಹೊಸ ಸ್ನೇಹ ತಂತುಗಳನ್ನು ಸೃಜಿಸುತ್ತಿದಾರೆ.

## ೧೬. ಭಾರತೀಯ ಪಾಳೆಯಗಳು ಮತ್ತು ಆಗ್ನೇಯ ಏಷ್ಯ ಸಂಸ್ಕೃತಿ

ಭಾರತವನ್ನು ಅರಿತು ಅರ್ಥ ಮಾಡಿಕೊಳ್ಳಬೇಕಾದರೆ ಇಂದಿನ ಸಂಶಯ ಸಂಕುಚಿತ ಮನೋಭಾವ, ಮತ್ತು ಭಯಂಕರ ಪರಿಸ್ಥಿತಿಯನ್ನು ಸ್ವಲ್ಪ ಮರೆತು ಹಿಂದೆ ಅದು ಯಾವ ಸ್ಥಿತಿಯಲ್ಲಿತ್ತು ಮತ್ತು ಏನನ್ನು ಸಾಧಿಸಿತು ಎಂಬುದನ್ನು ತಿಳಿದುಕೊಳ್ಳಬೇಕು. ಅದರ ಕಿರುನೋಟ ಕಾಣಲು ಪ್ರಸ್ತುತ ಕಾಲ, ದೇಶಗಳಿಂದ ಬಹುಕಾಲ ಹಿಂದೆ ಹೋಗಬೇಕು. ರವೀಂದ್ರನಾಥ ಠಾಕೂರರು "ನನ್ನ ದೇಶವನ್ನರಿಯಲು, ಭಾರತವು ತನ್ನ ಆತ್ಮವನ್ನರಿತು, ತನ್ನ ಪ್ರಾಕೃತಿಕ ಮೇರೆಗಳನ್ನು ಮೀರಿ ಪೂರ್ವ ದಿಗಂತವನ್ನೆಲ್ಲ ತನ್ನ ಜಾಜ್ವಲ್ಯಮಾನವಾದ ದಿವ್ಯಜ್ಯೋತಿಯಿಂದ ಬೆಳಗಿ, ತನ್ನ ವಿರಾಟ್ ವ್ಯಕ್ತಿ ಸ್ವರೂಪ ದರ್ಶನ ತೋರಿ, ಆ ದೂರ ತೀರದ ಜನರಿಗೊಂದು ಅಚ್ಚರಿಯ ನವಜೀವನವನ್ನು ಕೊಟ್ಟು ತಾವೂ ಭಾರತೀಯರೆಂಬ ಭಾವನೆಯನ್ನುಂಟು ಮಾಡಿದ ಯುಗಕ್ಕೆ ಹೋಗಬೇಕು. ಇಂದಿನ ಕೂಪ ಮಂಡೂಕದ ಸಂಕುಚಿತ ಜೀವನದ ಯುಗದಲ್ಲಿ ಅದು ಸಾಧ್ಯವಿಲ್ಲ. ಇಂದಿನ ಬಹಿಷ್ಕಾರ ಮನೋವೃತ್ತಿಯ, ಲೋಭಿತನದ, ದುರಹಂಕಾರದಲ್ಲಿಲ್ಲ. ಕಾರ್ಗತ್ತಲಿನ ಗತಕಾಲದ ಅರ್ಥರಹಿತ ಸ್ಮರಣೆಯಲ್ಲಿ ಮೂಕಮೃಗದಂತೆ ತನ್ನ ಸುತ್ತ ತಾನೇ ತಿರುಗುತ್ತ ಭಾವೀಯಾತ್ರಿಕರಿಗೆ ಯಾವ ಸಂದೇಶವನ್ನೂ ಕೊಡಲಾಗದ ಭಾವನಾಶ್ರೀಯ ದಿವಾಳಿತನದ ಕಾಲದಲ್ಲಿ" ಅಲ್ಲ ಎಂದಿದ್ದಾರೆ.

ಗತಯುಗಕ್ಕೆ ಹೋಗುವದಲ್ಲದೆ, ಪ್ರತ್ಯಕ್ಷ ಪ್ರಯಾಣ ಅಸಾಧ್ಯವಾದರೂ ಮನಸ್ಸಿನ ಕಲ್ಪನೆಯಲ್ಲಾದರೂ, ಇಂಡಿಯ ದೇಶವು ಅನೇಕ ವಿಧವಾಗಿ ಹಬ್ಬಿ ಹರಡಿ ತನ್ನ ಆತ್ಮಚೈತನ್ಯವನ್ನು ಅಪಾರ ಶಕ್ತಿಯನ್ನು, ಸೌಂದರ್ಯ ಪ್ರೇಮದ ಶಾಶ್ವತ ಪ್ರತಿಭೆಯನ್ನು ಬೀರಿದ ಏಷ್ಯದ ನಾನಾ ರಾಷ್ಟ್ರಗಳಿಗೆ ಹೋಗಬೇಕು. ಗತಕಾಲದ ನಮ್ಮ ಈ ಅದ್ಭುತ ಸಾಧನೆಯನ್ನು ಎಷ್ಟು ಜನರು ಅರಿತಿದ್ದೇವೆ. ಇಂಡಿಯ ಭಾವನೆ ಮತ್ತು ದರ್ಶನಗಳಲ್ಲಿ ಮಾತ್ರವಲ್ಲದೆ ಕಾರ್ಯತತ್ಪರತೆಯಲ್ಲಿ ಸಹ ಅತ್ಯುನ್ನತವಿತ್ತು ಎಂದು ಎಷ್ಟು ಜನರು ತಿಳಿದಿದ್ದೇವೆ. ಭಾರತೀಯ ಸ್ತ್ರೀಪುರುಷರು ತಮ್ಮ ತಾಯ್ನಾಡನ್ನು ಬಿಟ್ಟು ಬಹುದೂರದ ದೇಶಗಳಲ್ಲಿ ಸಾಧಿಸಿದ ಕಾರ್ಯದ ಇತಿಹಾಸವನ್ನು ಇನ್ನೂ ಬರೆಯಬೇಕಾಗಿದೆ. ಅನೇಕ ಪಾಶ್ಚಿಮಾತ್ಯರು ಪ್ರಾಚೀನ ಇತಿಹಾಸವೆಲ್ಲ ಭೂಮಧ್ಯ ಸಮುದ್ರ ತೀರದ ದೇಶಗಳಿಗೆ ಸಂಬಂಧಪಟ್ಟದ್ದು, ಮಧ್ಯಯುಗ ಮತ್ತು ಆಧುನಿಕ ಕಾಲದ ಇತಿಹಾಸವೆಲ್ಲ ಚೋಟುದ್ದದ ಜಗಳಗಂಟಿಕ ಯೂರೋಪಿಗೆ ಸಂಬಂಧಿಸಿದ್ದು ಎಂದೇ ಭಾವಿಸಿರುತ್ತಾರೆ. ಯೂರೋಪ್ ಒಂದರಿಂದ ಪ್ರಪಂಚದ ಅಳಿವು ಉಳಿವು ಉಳಿದುದೆಲ್ಲ ಲೆಕ್ಕಕ್ಕೆ ಬಾರದು ಎಂದೇ ಇನ್ನೂ ಗುಣಾಕಾರ ಮಾಡುತ್ತಿದಾರೆ.

ಸರ್ ಚಾರ್ಲ್ಸ್ ಇಲಿಯಟ್ "ಇಂಡಿಯ ದೇಶದ ಮೇಲೆ ದಂಡೆತ್ತಿ ಬಂದವರ ಸಾಹಸಗಳನ್ನು ಮಾತ್ರ ಗಮನಿಸಿ ಭಾರತೀಯರು ನಿರ್ವೀರ್ಯರು. ಹಗಲುಗನಸು ಕಾಣುವವರು, ಒಂದು ಕಡೆ ಪರ್ವತಶ್ರೇಣಿ ಉಳಿದ ಕಡೆ ಸಮುದ್ರದ ಗಡಿಯೊಳಗೆ ಸುರಕ್ಷಿತವಾಗಿ ಮಾನವನ ಪ್ರಪಂಚದಿಂದ ದೂರವಿರುವವರು ಎಂದು ಯೂರೋಪಿಯನರು ಬರೆದ ಚರಿತ್ರೆಗಳು ಪ್ರಪಂಚದಲ್ಲಿ ಭಾರತೀಯರ ಸ್ಥಾನಮಾನಗಳಿಗೆ ತುಂಬ ಅನ್ಯಾಯ ಮಾಡಿವೆ. ಆ ಚಿತ್ರದಲ್ಲಿ ಹಿಂದೂಗಳ ಮಾನಸಿಕ ದಿಗ್ವಿಜಯಗಳಿಗೆ ಯಾವ ಸ್ಥಾನವೂ ಇಲ್ಲ. ಅವರ ರಾಜಕೀಯ ದಿಗ್ವಿಜಯಗಳನ್ನೂ ಉಪೇಕ್ಷೆ ಮಾಡುವಂತಿಲ್ಲ.

ಅವರು ಆಕ್ರಮಿಸಿದ ರಾಜ್ಯಗಳು ಸಣ್ಣವಾದರೂ ವಿಶೇಷ ದೂರದಲ್ಲಿವೆ. ಆದರೆ ಭಾರತೀಯ ದರ್ಶನ ದಿಗ್ವಿಜಯ ಸಣ್ಣವಾದರೂ ವಿಶೇಷ ದೂರದಲ್ಲಿವೆ. ಆದರೆ ಭಾರತೀಯ ದರ್ಶನ ದಿಗ್ವಿಜಯದೊಡನೆ ಆ ಸೈನಿಕ ಮತ್ತು ಔದ್ಯೋಗಿಕ ದಿಗ್ವಿಜಯಗಳನ್ನು ಹೋಲಿಸಲು ಸಾಧ್ಯವಿಲ್ಲ," ಎಂದು ಹೇಳಿದ್ದಾನೆ.

ಈ ರೀತಿ ಇಲಿಯಟ್ ಬರೆದಾಗ ಇಂಡಿಯ ಮತ್ತು ಏಷ್ಯದ ಗತವೈಭವದ ಭಾವನೆಯಲ್ಲಿ ಕ್ರಾಂತಿಯನ್ನುಂಟುಮಾಡಿರುವ ಆಗ್ನೇಯ ಏಷ್ಯದ ಇತ್ತೀಚಿನ ಸಂಶೋಧನೆಗಳು ಆತನಿಗೆ ತಿಳಿದಿರ ಲಿಲ್ಲ. ಆ ಸಂಶೋಧನೆಗಳ ಪರಿಚಯದಿಂದ ಆತನ ವಾದಕ್ಕೆ ಇನ್ನಷ್ಟು ಸಮರ್ಥನೆ ದೊರೆಯು ತ್ತಿತ್ತು ಮತ್ತು ಭಾರತೀಯ ದರ್ಶನ ದಿಗ್ವಿಜಯದಂತೆ ವಿದೇಶಗಳಲ್ಲಿನ ಭಾರತೀಯರ ಅದ್ಭುತ ಕಾರ್ಯತತ್ಪರತೆಯು ಸಹ ಅಲಕ್ಷ್ಯ ಮಾಡುವಂತಿಲ್ಲ ಎಂದು ಸಹ ಗೊತ್ತಾಗುತ್ತಿತ್ತು. ಈಗ ಹದಿನೈದು ವರ್ಷಗಳ ಹಿಂದೆ ನಾನು ಮೊದಲನೆಯ ಬಾರಿ ಆಗ್ನೇಯ ಏಷ್ಯದ ಚರಿತ್ರೆಯನ್ನು ಓದಿ ದಾಗ ನನಗೆ ಉಂಟಾದ ಆಶ್ಚರ್ಯ ಮತ್ತು ಭಾವೋದ್ರೇಕ, ಇನ್ನೂ ನೆನಪಿದೆ. ಹೊಸ ದೃಶ್ಯ ಪರಂಪರೆಗಳು ನನ್ನೆದುರು ಸುಳಿದುವು, ಪ್ರಾಚೀನ ಭಾರತದ ಹೊಸ ಭಾವನೆಗಳುಂಟಾದವು. ಹೊಸ ಇತಿಹಾಸ ದೃಶ್ಯ ಸಮಾಚೀನ ದೃಷ್ಟಿಯೊಂದು ಮೂಡಿತು. ಮತ್ತು ನನ್ನ ಹಿಂದಿನ ಆಲೋಚನೆ ಮತ್ತು ಭಾವನೆಗಳನ್ನೆಲ್ಲ ಈ ಹೊಸ ದೃಷ್ಟಿಗೆ ಅಳವಡಿಸಿಕೊಳ್ಳಬೇಕಾಯಿತು. ಚಂಪ, ಕಾಂಭೋಜ, ಆಂಗ್‌ಕೋರ್, ಶ್ರೀವಿಜಯ ಮತ್ತು ಮಜಪಹಿತ ಒಮ್ಮಿಂದೊಮ್ಮೆ ಎಲ್ಲಿಂದಲೋ ಉದ್ಭವಿಸಿ ಗತ ಕಾಲಕ್ಕೂ ಪ್ರಸ್ತುತ ಕಾಲಕ್ಕೂ ಸ್ವಾಭಾವಿಕ ಸಂಬಂಧ ಕಲ್ಪಿಸುವ ಒಂದು ಚೈತನ್ಯಪೂರ್ಣಭಾವನೆ ಯನ್ನುಂಟುಮಾಡುವ ಜೀವಂತ ರೂಪತಾಳಿ ನನ್ನ ಕಣ್ಮುಂದೆ ನಿಂತವು. ರಣರಂಗದಲ್ಲಿ, ರಾಜ್ಯ ವಿಸ್ತರಣೆಯಲ್ಲಿ, ಮತ್ತು ಇತರ ಮಹತ್ಸಾಧನೆಗಳಲ್ಲಿ ಅಪ್ರತಿಮ ವೀರಾಗ್ರಣಿಯಾದ ಶೈಲೇಂದ್ರನ ವಿಷಯವಾಗಿ ಡಾಕ್ಟರ್ ಹೆಚ್. ಜಿ. ಕ್ವಾರಿಚ್‌ವೇಲ್ಸ್ "ಪಾಶ್ಚಾತ್ಯ ಇತಿಹಾಸದ ಮಹಾಯೋಧರ ದಿಗ್ವಿಜಯಗಳೊಡನೆ ಮಾತ್ರ ಹೋಲಿಸಬಹುದಾದ ಮತ್ತು ಪರ್ಷಿಯದಿಂದ ಚೀನಾವರೆಗೆ ದಿಗಂತ ವಿಶ್ರಾಂತಕೀರ್ತಿಯನ್ನು ಪಡೆದ ಈ ವೀರಾಗ್ರಣಿಯು ಕೇವಲ ಹತ್ತಿಪ್ಪತ್ತು ವರ್ಷಗಳಲ್ಲಿ ಐದು ಶತಮಾನಗಳ ಕಾಲ ಅವಿಚ್ಛಿನ್ನವಾಗಿ ಶಕ್ತಿಯುತವಾಗಿ ಬಾಳಿದ ಒಂದು ನೌಕಾ ಪಡೆಯನ್ನು ಕಟ್ಟಿದ; ಮತ್ತು ಜಾವ ಮತ್ತು ಕಾಂಭೋಜ ದೇಶಗಳಲ್ಲಿ ಭಾರತೀಯ ಕಲೆ ಮತ್ತು ಸಂಸ್ಕೃತಿಯು ಅದ್ಭುತ ವಾಗಿ ವಿಕಾಸವಾಗಲು ಸಹಾಯಕನಾದ. ಆದರೂ ನಮ್ಮ ವಿಶ್ವಕೋಶಗಳಲ್ಲಿ, ಇತಿಹಾಸಗಳಲ್ಲಿ ಈ ವಿಶಾಲ ಚಕ್ರಾಧಿಪತ್ಯದ ಹೆಸರಾಗಲಿ ಅದನ್ನು ಸ್ಥಾಪಿಸಿದ ಮಹಾನುಭಾವನ ಹೆಸರಾಗಲಿ ಅಂಜನ ಹಾಕಿಕೊಂಡು ಹುಡುಕಿದರೂ ದೊರೆಯುವುದಿಲ್ಲ. ಕೆಲವು ಪೌರ್ವಾತ್ಯ ವಿದ್ವಾಂಸರುಗಳನ್ನು ಬಿಟ್ಟರೆ ಅಂತಹ ಒಂದು ಚಕ್ರಾಧಿಪತ್ಯವಿತ್ತೆಂದು ಸಹ ಅನೇಕರಿಗೆ ತಿಳಿದಿಲ್ಲ. ಈ ಪ್ರಾಚೀನ ಭಾರತೀಯ ವಲಸೆಗಾರರ ಸೈನಿಕ ಸಾಹಸಗಳು ಮುಖ್ಯವಾಗಿ ಇದುವರೆಗೆ ಕಂಡು ಕೇಳದ ಭಾರತೀಯರ ಶ್ರೇಷ್ಠ ಗುಣವನ್ನೂ ಅಂತಃ ಶಕ್ತಿಯ ಕೆಲವು ಹೊಸ ನೋಟಗಳನ್ನೂ ಬೆಳಕಿಗೆ ತರುತ್ತವೆ. ಆದರೆ ಎಲ್ಲಕ್ಕೂ ಮಿಗಿಲಾದುದು ಅವರು ಅಲ್ಲಿ ಕಟ್ಟಿದ ವಲಸೆ ರಾಜ್ಯಗಳು ಮತ್ತು ಆ ಪಾಳೆಯಗಳಲ್ಲಿ ಸಾವಿರಾರು ವರ್ಷಗಳು ಬಾಳಿದ ಶ್ರೇಷ್ಠ ಸಂಸ್ಕೃತಿ.

ಕಳೆದ ಇಪ್ಪತ್ತೈದು ವರ್ಷಗಳಲ್ಲಿ ಆಗ್ನೇಯ ಏಷ್ಯದ ಈ ವಿಶಾಲಪ್ರದೇಶದ ಚರಿತ್ರೆಯು ಹೆಚ್ಚು ಬೆಳಕಿಗೆ ಬಂದಿದೆ. ಆ ಪ್ರದೇಶವನ್ನು ವಿಶಾಲಭಾರತವೆಂದು ಸಹ ಕರೆದಿದ್ದಾರೆ. ಮಧ್ಯೆ ಅನೇಕ ತೊಡಕುಗಳಿವೆ, ವಿರೋಧ ಸನ್ನಿವೇಶಗಳಿವೆ, ಚರಿತ್ರಕಾರರು ಒಬ್ಬೊಬ್ಬರು ಒಂದೊಂದು ಸಿದ್ಧಾಂತ ವನ್ನು ಪ್ರತಿಪಾದಿಸುತ್ತಾರೆ. ಆದರೆ ಒಟ್ಟಿನಲ್ಲಿ ಸಾಮಾನ್ಯ ರೇಖಾಚಿತ್ರವು ಸ್ಪಷ್ಟವಿದೆ ಮತ್ತು ಎಷ್ಟೋ ವಿಷಯ ವಿವರಣೆಯ ವಿಪುಲತೆಯೂ ಇದೆ. ಭಾರತೀಯ ಸಾಹಿತ್ಯ ಗ್ರಂಥಗಳ ಉಲ್ಲೇಖನಗಳೂ, ಅರಬ್ಬಿ ಪ್ರವಾಸಿಗಳ ಲೇಖನಗಳೂ, ಚೀನೀ ಇತಿಹಾಸಗ್ರಂಥಗಳೂ ಅನೇಕವಿರುವುದರಿಂದ ವಿಷಯ ಬಾಹುಳ್ಯದ ಕೊರತೆ ಇಲ್ಲ. ಅನೇಕ ಹಳೆಯ ಶಿಲಾಶಾಸನಗಳೂ, ತಾಮ್ರ ಶಾಸನಗಳೂ ಇವೆ. ಜಾವ ಮತ್ತು ಬಲಿದ್ವೀಪಗಳಲ್ಲಿ ಭಾರತೀಯ ಗ್ರಂಥಗಳ ಆಧಾರದಿಂದ ಹುಟ್ಟಿದ ಉತ್ತಮ ಸಾಹಿತ್ಯವಿದೆ.

ಭಾರತೀಯ ಮಹಾಕಾವ್ಯಗಳು ಮತ್ತು ಪುರಾಣಗಳ ಸಂಗ್ರಹಿತ ಗ್ರಂಥಗಳಿವೆ. ಗ್ರೀಕ್ ಮತ್ತು ಲ್ಯಾಟಿನ್ ಗ್ರಂಥಗಳಿಂದ ಸಹ ಕೆಲವು ವಿಷಯನಿರೂಪಣ ದೊರೆತಿವೆ. ಇದೆಲ್ಲಕ್ಕೂ ಮಿಗಿಲಾಗಿ ಪ್ರಾಚೀನ ಸ್ಮಾರಕಗಳ ಅದ್ಭುತ ಅವಶೇಷಗಳು ಮುಖ್ಯವಾಗಿ ಅಂಗ್‌ಕೋರ್ ಬೋರೊಬುದೂರ್ ಬಳಿ ಅನೇಕ ಇವೆ.

ಕ್ರಿಸ್ತಶಕ ಒಂದನೆಯ ಶತಮಾನದಿಂದ ಮೊದಲುಗೊಂಡು ಭಾರತೀಯ ವಲಸೆಗಾರರು ದಕ್ಷಿಣಕ್ಕೆ ಮತ್ತು ಆಂಗ್ನೇಯದೇಶಗಳಾದ ಸಿಂಹಳ, ಬ್ರಹ್ಮದೇಶ, ಮಲಯ, ಜಾವ, ಸುಮಾತ್ರ, ಬೋರ್ನಿಯೋ, ಸೈಯಾಮ್, ಕಾಂಬೋಡಿಯ ಮತ್ತು ಇಂಡೋ ಚೀನದೇಶಗಳಿಗೆ ತಂಡೋಪತಂಡವಾಗಿ ಅಲೆ ಅಲೆಯಾಗಿ ಪಸರಿಸಿದರು. ಕೆಲವರು ಫಾರ್ಮೋಸ, ಫಿಲಿಪೈನ್ಸ್ ಮತ್ತು ಸೆಲಿಬಿಸ್‌ದ್ವೀಪಗಳಿಗೆ ಸಹ ಹೋದರು. ಮಡಗಾಸ್ಕರ್‌ವರೆಗೆ ಬಳಕೆಯಲ್ಲಿರುವ ಭಾಷೆಯು ಸಂಸ್ಕೃತಮಿಶ್ರವಾದ ಇಂಡೊನೇಷ್ಯ ಭಾಷೆ. ಈರೀತಿ ಹರಡಿಹಬ್ಬಲು ಅವರಿಗೆ ಅನೇಕ ಶತಮಾನಗಳುಹಿಡಿದಿರಬೇಕು. ಪ್ರಾಯಶಃ ಈ ಎಲ್ಲ ಕಡೆಗಳಿಗೂ ಭಾರತದಿಂದಲೇ ಹೋಗಿರಲಾರರು, ಯಾವುದೋ ಒಂದು ಮಧ್ಯವರ್ತಿಯಾದ ಪಾಳೆಯದಿಂದ ಹೋಗಿರಬೇಕು. ಕ್ರಿಸ್ತಶಕ ಒಂದನೆಯ ಶತಮಾನದಿಂದ ಒಂಬತ್ತನೆಯ ಶತಮಾನದವರೆಗೆ ಮುಖ್ಯವಾಗಿ ನಾಲ್ಕುಬಾರಿ ಈ ಯಾತ್ರಾವಾಹಿನಿ ಹರಿದಂತೆ ತೋರುತ್ತದೆ. ಈ ಮಧ್ಯೆ ಕೆಲವು ಜನರು ಪೂರ್ವಕ್ಕೂ ಹೋದಂತೆ ತೋರುತ್ತದೆ. ಸಾಹಸಕಾರ್ಯದಲ್ಲಿ ವಿಶೇಷಗಮನಾರ್ಹ ಸಂಗತಿ ಎಂದರೆ ಈ ಯಾತ್ರಿಗಳನ್ನೆಲ್ಲ ರಾಷ್ಟ್ರವೇ ಏರ್ಪಾಡುಮಾಡುತ್ತಿತ್ತು. ಒಂದೇಸಮಯಕ್ಕೆ ದೂರ ದೂರ ಅಲ್ಲಲ್ಲಿ ವಲಸೆ ಪಾಳಯಗಳನ್ನು ಸ್ಥಾಪಿಸುತ್ತಿದ್ದರು. ಈ ಪಾಳಯಗಳನ್ನೆಲ್ಲ ವ್ಯೂಹಕೌಶಲ್ಯದಿಂದ ಪ್ರಮುಖ ಸ್ಥಳಗಳಲ್ಲಿ ಸ್ಥಾಪಿಸುತ್ತಿದ್ದರು. ಅವುಗಳೆಲ್ಲ ಮುಖ್ಯ ವ್ಯಾಪಾರಮಾರ್ಗಗಳಲ್ಲಿ ಇರುತ್ತಿದ್ದುವು. ಈ ಪಾಳಯಗಳಲ್ಲಿ ಪುರಾತನ ಭಾರತೀಯ ಹೆಸರುಗಳನ್ನೇ ಇಡುತ್ತಿದ್ದರು. ಈಗ ಕಾಂಬೋಡಿಯ ಎನ್ನುವುದನ್ನು ಕಾಂಭೋಜ ಎಂದು ಕರೆದರು. ಕಾಂಭೋಜ ಪ್ರಾಚೀನ ಭಾರತದಲ್ಲಿ ಗಾಂಧಾರ ದೇಶದಲ್ಲಿ ಒಂದು ಪ್ರಸಿದ್ಧ ಪಟ್ಟಣವಾಗಿತ್ತು. ಈ ವಲಸೆ ರಾಜ್ಯಗಳ ಸ್ಥಾಪನೆಯ ಕಾಲವು ಹೆಸರಿನಿಂದಲೇ ಸ್ಥೂಲವಾಗಿ ಗೊತ್ತಾಗುತ್ತದೆ; ಏಕೆಂದರೆ ಆಗ ಗಾಂಧಾರ ಆರ್ಯದೇಶದ ಒಂದು ಪ್ರಮುಖ ಭಾಗವಾಗಿತ್ತು.

ಸಮುದ್ರಯಾನದ ಗಂಡಾಂತರಗಳನ್ನೆಲ್ಲ ಎದುರಿಸಿ ದೂರತೀರಗಳ ಆಶ್ಚರ್ಯಕಾರಕ ವಿಜಯಯಾತ್ರೆಗಳಿಗೆ ಕಾರಣವು ಏನು? ಈ ಅದ್ಭುತ ಉತ್ಸಾಹವು ಹುಟ್ಟಿದ್ದು ಹೇಗೆ? ಅನೇಕ ತಲೆಮಾರುಗಳಿಂದ ಅಥವ ಶತಮಾನಗಳಿಂದ ವ್ಯಾಪಾರೋದ್ಯಮಗಳಲ್ಲಿ ಆಸಕ್ತರಾದ ವ್ಯಕ್ತಿಗಳು ಅಧಿಕ ಪಂಗಡಗಳಲ್ಲಲ್ಲದೆ ಈ ಯೋಜನೆಗಳನ್ನು ನಿರೂಪಿಸಲು ಅಥವ ಸಾಧಿಸಲು ಖಂಡಿತ ಸಾಧ್ಯವಿಲ್ಲ. ಅನೇಕ ಪ್ರಾಚೀನ ಸಂಸ್ಕೃತ ಗ್ರಂಥಗಳಲ್ಲಿ ಪೌರ್ವಾತ್ಯ ದೇಶಗಳ ಉಲ್ಲೇಖನವಿದೆ. ಎಲ್ಲ ಸಂದರ್ಭಗಳಲ್ಲೂ ಆ ಹೆಸರುಗಳನ್ನು ಗುರ್ತಿಸುವುದು ಸುಲಭವಲ್ಲ. ಕೆಲವು ಸಂದರ್ಭಗಳಲ್ಲಿ ಕಷ್ಟವೇನೂ ಆಗುವುದಿಲ್ಲ. ಜಾವ ಎಂದರೆ 'ಯವದ್ವೀಪ' ಎನ್ನುವುದು ಸ್ಪಷ್ಟವಿದೆ ಈಗಲೂ ಯವ ಎಂದರೆ ಭಾರತದಲ್ಲಿ ರಾಗಿ ಅಥವ ಜೋಳ. ಪ್ರಾಚೀನ ಗ್ರಂಥಗಳಲ್ಲಿ ಹೇಳಿರುವ ಇತರ ಹೆಸರುಗಳು ಸಹ ಯಾವುದಾದರೂ ಆದಿರು, ಲೋಹ ಅಥವ ಔದ್ಯೋಗಿಕ ಅಥವ ಕೃಷಿಕ ವಸ್ತುವಿನ ಹೆಸರನ್ನೇ ಹೋಲುತ್ತದೆ. ಈ ಹೆಸರನ್ನು ಕೇಳಿದೊಡನೆ ವ್ಯಾಪಾರವು ಎದ್ದುನಿಲ್ಲುತ್ತದೆ. ಡಾಕ್ಟರ್ ಆರ್. ಸಿ. ಮಜುಮದಾರರು "ಸಾಹಿತ್ಯ ಜನ ಜೀವನವನ್ನು ಪ್ರತಿಬಿಂಬಿಸುತ್ತದೆ ಎಂದು ಸಾಮಾನ್ಯವಾಗಿ ಹೇಳಬಹುದಾದರೆ ಕ್ರಿಸ್ತಶಕ ಆರಂಭದ ಮತ್ತು ಹಿಂದಿನ ಕೆಲವು ಶತಮಾನಗಳಲ್ಲಿ ವ್ಯಾಪಾರ ಮತ್ತು ಉದ್ಯಮಗಳು ಭಾರತದಲ್ಲಿ ಒಂದು ಅಂತಿಮ ಆಸಕ್ತಿಯಾಗಿರಬೇಕು." ಎಂದು ಹೇಳುತ್ತಾರೆ. ಇದೆಲ್ಲವೂ ವಿಶಾಲ ಆರ್ಥಿಕ ನೀತಿಯನ್ನೂ, ಮಾರಾಟಕ್ಕೆ ದೂರತೀರದ ಪೇಟೆಗಳನ್ನು ಹುಡುಕುವ ಸಾಧನವನ್ನೂ ಸಾರುತ್ತವೆ.

ಈ ವ್ಯಾಪಾರವು ಕ್ರಿಸ್ತ ಪೂರ್ವ ಮೂರು ಮತ್ತು ಎರಡನೆಯ ಶತಮಾನಗಳಲ್ಲಿ ಹೆಚ್ಚು ಅಭಿವೃದ್ಧಿಯಾಯಿತು. ಈ ಸಾಹಸಿಗ ವಣಿಕ್‌ಶ್ರೇಷ್ಠರ ಮತ್ತು ವರ್ತಕರ ಹಿಂದೆಯೇ ಮತ ಪ್ರಚಾರಕರೂ

ಹೋಗಿರಬೇಕು. ಏಕೆಂದರೆ ಅದು ಅಶೋಕನ ನಂತರದಕಾಲ. ಪುರಾತನ ಸಂಸ್ಕೃತ ಕಥೆಗಳಲ್ಲಿ ಸಮುದ್ರಯಾನದ, ಮತ್ತು ಹಡಗುಗಳು ಮುಳುಗಿದ ಹೃದಯ ವಿದ್ರಾವಕ ಚಿತ್ರಗಳು ಅನೇಕ ಇವೆ. ಕ್ರಿಸ್ತಶಕ ಒಂದನೆಯ ಶತಮಾನದ ಹೊತ್ತಿಗೆ ಇಂಡಿಯ ಮತ್ತು ಪೌರ್ವಾತ್ಯ ದೇಶಗಳ ಮಧ್ಯೆ ನಿರಂತರ ಸಮುದ್ರವ್ಯಾಪಾರವಿತ್ತೆಂದು ಗ್ರೀಕ್ ಮತ್ತು ಅರಬ್ಬಿ ಪ್ರವಾಸ ಸಾಹಿತ್ಯದಿಂದ ಸ್ಪಷ್ಟವಾಗುತ್ತದೆ. ಮಲಯ ಪರ್ಯಾಯದ್ವೀಪ, ಮತ್ತು ಇಂಡೊನೇಷ್ಯ ದ್ವೀಪಗಳು ಚೀನ, ಇಂಡಿಯ, ಪರ್ಷಿಯ, ಅರೇಬಿಯ ಮತ್ತು ಭೂಮಧ್ಯ ಸಮುದ್ರದ ದೇಶಗಳಿಗೆ ನೇರವಾದ ವ್ಯಾಪಾರ ಮಾರ್ಗದಲ್ಲಿದ್ದವು. ಭೂಗೋಲಿಕ ಪ್ರಾಮುಖ್ಯತೆ ಮಾತ್ರವಲ್ಲದೆ ಅಲ್ಲಿ ಅನೇಕ ಬೆಲೆ ಬಾಳುವ ಖನಿಜಗಳೂ, ಲೋಹಗಳೂ, ಮತ್ತು ಚೌಬೀನೆ ಮರಗಳೂ ಹೇರಳವಾಗಿ ದೊರೆಯುತ್ತಿದ್ದುವು. ಈಗಿನಂತೆ ಆಗಲೂ ಮಸಾಲೆ ವಸ್ತುಗಳು ಮಲಯಪರ್ಯಾಯದ್ವೀಪವು ತವರಕ್ಕೆ ತೌರುಮನೆಯಾಗಿತ್ತು. ಪ್ರಾಯಶಃ ಮೊಟ್ಟಮೊದಲು ಸಮುದ್ರಯಾನ ಮಾರ್ಗವು ಭಾರತದ ಪೂರ್ವತೀರದ ಮಾರ್ಗವಾಗಿ ಹೋಗಿರಬೇಕು. ಕಳಿಂಗ (ಒರಿಸ್ಸ), ಬ್ರಹ್ಮದೇಶ, ಅನಂತರ ಮಲಯಪರ್ಯಾಯದ್ವೀಪ, ಆಮೇಲೆ ಪೂರ್ವತೀರದಿಂದ ಮತ್ತು ದಕ್ಷಿಣಭಾರತದಿಂದ ನೇರವಾದ ಸಮುದ್ರ ಮಾರ್ಗ ಏರ್ಪಟ್ಟಿರಬಹುದು. ಈ ಮಾರ್ಗದಿಂದಲೇ ಅನೇಕ ಚೀನೀಯಾತ್ರಿಕರು ಇಂಡಿಯಕ್ಕೆ ಬಂದರು. ಐದನೆಯ ಶತಮಾನದಲ್ಲಿ ಫಾಸೀನ್ ಜಾವ ಮಾರ್ಗವಾಗಿ ಇಂಡಿಯಕ್ಕೆ ಬಂದನು. ಅಲ್ಲಿ ಅನೇಕ ವಿಧರ್ಮಿಗಳು–ಬೌದ್ಧ ಮತಕ್ಕೆ ಸೇರದ ಬ್ರಾಹ್ಮಣ ಮತ ಪಂಥದವರು—ಇದ್ದಾರೆಂದು ಹೇಳುತ್ತಾನೆ.

ಪ್ರಾಚೀನ ಭಾರತದಲ್ಲಿ ಹಡಗು ಕಟ್ಟುವ ಕೈಗಾರಿಕೆಯು ಬಹಳ ಮುಂದುವರಿದು ರಾಷ್ಟ್ರದ ಒಂದು ದೊಡ್ಡ ಉದ್ಯಮವಾಗಿತ್ತು. ಆ ಕಾಲದಲ್ಲಿ ಕಟ್ಟಿದ ಹಡಗುಗಳ ಕೆಲವು ವಿವರಗಳು, ವರ್ಣನೆಗಳು ನಮಗೆ ದೊರೆತಿವೆ. ಅನೇಕ ಭಾರತೀಯ ಬಂದರುಗಳ ಹೆಸರುಗಳಿವೆ. ಕ್ರಿಸ್ತಶಕ ಎರಡು ಮತ್ತು ಮೂರನೆಯ ಶತಮಾನದ ಕೆಲವು ದಕ್ಷಿಣಭಾರತದ (ಆಂಧ್ರರ) ನಾಣ್ಯಗಳಲ್ಲಿ ಎರಡು ಪಟಸ್ತಂಭಗಳ ಹಡಗಿನ ಚಿತ್ರವಿದೆ. ಅಜಂತಗುಹಾಂತರ್ದೇವಾಲಯಗಳ ಚಿತ್ರಗಳಲ್ಲಿ ಸಿಂಹಳ ದ್ವೀಪದ ಮೇಲೆ ದಂಡೆತ್ತಿ ಹೋದ ದಿಗ್ವಿಜಯ ಯಾತ್ರೆಯ ಚಿತ್ರವಿದೆ. ಹಡಗುಗಳಲ್ಲಿ ಆನೆಗಳನ್ನು ತೆಗೆದುಕೊಂಡು ಹೋಗುತ್ತಿರುವುದನ್ನು ಚಿತ್ರಿಸಿದ್ದಾರೆ. ಮೂಲ ಭಾರತೀಯ ವಲಸೆಗಾರರು ಕಟ್ಟಿದ ದೊಡ್ಡ ರಾಜ್ಯಗಳು, ಸಾಮ್ರಾಜ್ಯಗಳು ಮುಖ್ಯವಾಗಿ ತಮ್ಮ ನೌಕಾ ಬಲದ ಶಕ್ತಿಯನ್ನೇ ಅವಲಂಬಿಸಿದ್ದವು; ವ್ಯಾಪಾರೋದ್ಯಮದಲ್ಲಿ ವಿಷೇಶ ಆಸಕ್ತಿ ತೋರಿಸಿದವು ಮತ್ತು ವ್ಯಾಪಾರ ಮಾರ್ಗಗಳನ್ನು ತಮ್ಮ ಆಧೀನದಲ್ಲಿಟ್ಟು ಕೊಂಡಿದ್ದವು. ಸಮುದ್ರದ ಮೇಲೆ ಪರಸ್ಪರ ಘರ್ಷಣೆಗಳಾಗುತ್ತಿದ್ದವು. ಅದರಲ್ಲಿ ಒಬ್ಬನು ದಕ್ಷಿಣ ಭಾರತದ ಚೋಳ ರಾಜನನ್ನು ಯುದ್ಧಕ್ಕೆ ಕರೆದವನು. ಚೋಳರ ನೌಕಾ ಬಲವೂ ಅದ್ಭುತವಿತ್ತು. ನಾವಿಕ ಪಡೆಯನ್ನು ಕಳುಹಿಸಿ ಚೋಳರು ಸ್ವಲ್ಪಕಾಲ ಶೈಲೇಂದ್ರ ಚಕ್ರಾಧಿಪತ್ಯವನ್ನು ಅಡಗಿಸಿದ್ದರು.

ಕ್ರಿಸ್ತಶಕ ೧೦೪೪ರ ತಮಿಳು ಶಿಲಾಲೇಖನ ಒಂದರಲ್ಲಿ " ಹದಿನೈದು ಸಾವಿರ ಸಂಘ " ಎಂದು ಒಂದು ಉಲ್ಲೇಖವಿದೆ. ಆ ವರ್ತಕ ಸಂಘವನ್ನು ವರ್ಣನೆಮಾಡುತ್ತ " ಕೃತಯುಗದ ಕಾಲದಿಂದ ಷಟ್ಖಂಡಗಳಲ್ಲಿ ಭೂಮಾರ್ಗ ಸಮುದ್ರ ಮಾರ್ಗದಿಂದ ಪ್ರಯಾಣ ಮಾಡುತ್ತ ಅಶ್ವ, ಗಜ, ರತ್ನ ಪಡಿ, ಸುಗಂಧದ್ರವ್ಯ, ಔಷದ ವಸ್ತುಗಳ ಚಿಲ್ಲರೆ ವ್ಯಾಪಾರ, ಬಟ್ಟೆ ವ್ಯಾಪಾರವನ್ನು ತಮ್ಮ ಕೈಲಿಟ್ಟುಕೊಂಡಿದ್ದ ಹುಟ್ಟು ಧೈರ್ಯ ಶಾಲಿಗಳು " ಎಂದು ಬರೆದಿದ್ದಾನೆ.

ಭಾರತೀಯರ ವಲಸೆಯತ್ನದ ಆರಂಭದ ಮಹಾಸಾಹಸಗಳಿಗೆ ಇದೇ ಮೂಲಕಾರಣ ಮತ್ತು ಹಿನ್ನೆಲೆ. ವ್ಯಾಪಾರ, ಸಾಹಸ ಮತ್ತು ಸೀಮೋಲ್ಲಂಘನದ ಹಿರಿ ಆಸೆಯು ಭಾರತೀಯರನ್ನು ಪೌರ್ವಾತ್ಯ ದೇಶಗಳಿಗೆ ಕರೆದೊಯ್ಯಿತು. ಪುರಾತನ ಸಂಸ್ಕೃತ ಗ್ರಂಥಗಳಲ್ಲಿ ಈ ದೇಶಗಳನ್ನು ಸ್ವರ್ಗ ಭೂಮಿ ಅಥವ ಸ್ವರ್ಗ ದ್ವೀಪ ಎಂದು ಬಣ್ಣಿಸಿದಾರೆ. ಮೊದಲು ಹೋದವರು ಅಲ್ಲಿಯೇ ಬೀಡು ಬಿಟ್ಟರು. ಅವರ ಹಿಂದೆ ಇನ್ನೂ ಕೆಲವರು ಹಿಂಬಾಲಿಸಿದರು, ಈ ರೀತಿ ಶಾಂತಿರೀತಿಯಿಂದ ರಾಜ್ಯವನ್ನು ಗೆದ್ದರು.

ಅಲ್ಲಿನ ಜನರೊಂದಿಗೆ ಬಾಂಧವ್ಯ ಬೆಳೆಸಿದರು ; ಒಂದು ಮಿಶ್ರ ಸಂಸ್ಕೃತಿಯು ಹೊರಹೊಮ್ಮಿತು. ಪ್ರಚಲಿತವಾಯಿತು. ಪ್ರಾಯಶಃ ಆಮೇಲೆ ಭಾರತದಿಂದ ಹಲವು ರಾಜಕಾರಣಿಗಳೂ ಕ್ಷತ್ರಿಯ ರಾಜಕುಮಾರರೂ ಶ್ರೀಮಂತ ಮನೆತನದ ಯೋಧರೂ ಬೇಟೆಯ ವಿನೋದಕ್ಕಾಗಿ, ರಾಜ್ಯಾಭಿಲಾಷೆಗಾಗಿ ಬಂದಿರಬಹುದು. ಹೆಸರಿನ ಸಾಮರಸ್ಯದಿಂದ ಅಲ್ಲಿಗೆ ಹೋದವರಲ್ಲಿ ಬಹು ಜನರು ಮಾಲವ ದೇಶದವರಿರಬಹುದು. ಆದ್ದರಿಂದ ಇಂಡೊನೇಷ್ಯದ ಇತಿಹಾಸದಲ್ಲಿ ಪ್ರಮುಖಪಾತ್ರ ವಹಿಸಿದ ಜನರಿಗೆ ಮಲಯ ಜನಾಂಗವೆಂಬ ಹೆಸರು ಬಂದಿರಬೇಕೆಂದು ಅನೇಕರ ಅಭಿಪ್ರಾಯ. ವಲಸೆ ಹೋದವರಲ್ಲಿ ಮೊದಲಿಗರೆಂದರೆ ಪೂರ್ವ ತೀರದ ಕಳಿಂಗರು. ಆದರೆ ಒಂದು ವಿಶಿಷ್ಟ ಪ್ರಯತ್ನದಿಂದ ಸುಸಂಘಟಿತವಾಗಿ ವಲಸೆ ಹೋದವರೆಂದರೆ ದಕ್ಷಿಣ ಭಾರತದ ಹಿಂದೂ ರಾಜರಾದ ಪಲ್ಲವರು. ಆಗ್ನೇಯ ಏಷ್ಯದಲ್ಲಿ ಪ್ರಸಿದ್ಧವಾದ ಶೈಲೇಂದ್ರ ಮನೆತನದವರು ಒರಿಸ್ಸದವರೆಂದು ನಂಬಲಾಗಿದೆ. ಆಗಿನ ಕಾಲದಲ್ಲಿ ಒರಿಸ್ಸಾದಲ್ಲಿ ಬೌದ್ಧ ಮತವು ಬಹಳ ಪ್ರಾಬಲ್ಯದಲ್ಲಿತ್ತು. ಆದರೆ ರಾಜಮನೆತನದವರು ಬ್ರಾಹ್ಮಣಮತದವರು.

ಈ ವಲಸೆ ರಾಜ್ಯಗಳೆಲ್ಲ ಇಂಡಿಯ ಮತ್ತು ಚೀನಾ ಈ ಎರಡು ಮಹಾರಾಷ್ಟ್ರಗಳ ಮಧ್ಯೆ, ಎರಡ ಉನ್ನತ ಸಂಸ್ಕೃತಿಗಳ ಮಧ್ಯೆ ನೆಲಸಿದ್ದವು. ಕೆಲವು ರಾಜ್ಯಗಳು ಏಷ್ಯಾ ಖಂಡದ ವಿಸ್ತಾರವಾದ ಭೂಭಾಗದ ಮೇಲೆ ಚೀನಾ ರಾಜ್ಯದ ಗಡಿಯಲ್ಲಿದ್ದವು ; ಇನ್ನುಳಿದವು ಇಂಡಿಯ ಮತ್ತು ಚೀನಾ ದೇಶಗಳ ನೇರವಾದ ವ್ಯಾಪಾರ ಮಾರ್ಗದಲ್ಲಿದ್ದವು. ಈ ರೀತಿ ಅವುಗಳು ಎರಡು ದೇಶಗಳ ಪ್ರಭಾವಕ್ಕೂ ಸಿಕ್ಕಿ ಒಂದು ಮಿಶ್ರ ಇಂಡೊಚೀನಾ ಸಂಸ್ಕೃತಿ ಬೆಳೆಯಿತು. ಆದರೆ ಎರಡೂ ಸಂಸ್ಕೃತಿಗಳ ಸ್ವಭಾವ ಸಹಜ ಸಾತ್ವಿಕ ಗುಣವಾದ್ದರಿಂದ ಪರಸ್ಪರ ಘರ್ಷಣೆಹುಟ್ಟಲಿಲ್ಲ. ಬಗೆ ಬಗೆಯ ಮಿಶ್ರಣವಾಗಿ ಬಗೆ ಬಗೆಯ ಸಂಸ್ಕೃತಿ ಭೇದದ ವಿವಿಧರೂಪಗಳು ಉದ್ಭವಿಸಿದವು. ಏಷ್ಯದ ಬ್ರಹ್ಮದೇಶ, ಸಯಾಂ, ಇಂಡೋಚೀನಾಗಳಲ್ಲಿ ಚೀನಾ ಸಂಸ್ಕೃತಿಯ ಪ್ರಭಾವವು ಹೆಚ್ಚು ಬೀರಿತ್ತು ; ಮಲಯ ಪರ್‍ಯಾಯ ದ್ವೀಪಗಳ ಮೇಲೆ ಭಾರತೀಯ ಸಂಸ್ಕೃತಿ ಪ್ರಭಾವ ಹೆಚ್ಚುಬಿತ್ತು. ಸಾಮಾನ್ಯವಾಗಿ ರಾಜ್ಯಾಡಳಿತ ಪದ್ಧತಿಯೂ ಜೀವನದ ಆದರ್ಶವೂ ಚೀನಾ ದೇಶದ್ದಾಗಿತ್ತು. ಆದರೆ ಧರ್ಮ ಮತ್ತು ಕಲೆಗಳು ಭಾರತೀಯವಾಗಿದ್ದವು. ಏಷ್ಯಾಖಂಡದ ರಾಜ್ಯಗಳ ವ್ಯಾಪಾರವು ಚೀನಾ ದೇಶದೊಂದಿಗೆ ಹೆಚ್ಚು ನಡೆಯುತ್ತಿತ್ತು. ಅನೇಕ ವೇಳೆ ರಾಯಭಾರಿಗಳ ವಿನಿಮಯವೂ ನಡೆಯುತ್ತಿತ್ತು. ಆದರೆ ಕಾಂಬೋಡಿಯ ಮತ್ತು ಆಂಗ್‌ಕೋರ‌ನ ಮಹಾ ಅವಶೇಷಗಳಲ್ಲಿ ಕಾಣಬರುವ ಕಲೆ ಎಲ್ಲ ಪೂರ್ಣ ಭಾರತೀಯ ಕಲೆ. ಭಾರತೀಯ ಕಲೆಯು ಬಹಳ ನಯವೂ ಸುಂದರವು ಇತ್ತು. ಪ್ರತಿ ಒಂದು ದೇಶದಲ್ಲೂ ಅದರ ನವವಿಕಸನವಾಯಿತು, ಮೂಲ ಭಾರತೀಯ ಸ್ವಭಾವವನ್ನು ಬಿಡದೆ ಹೊಸ ಹೊಸ ರೂಪವನ್ನು ತಾಳಿತು. “ ಭಾರತೀಯ ಕಲೆಯ ಜೀವಂತ ಶಕ್ತಿಯು ವಿಸ್ಮಯಕಾರಕವಿದೆ. ಅದರ ಮೃದು ಸ್ವಭಾವ ಅದ್ಭುತವಿದೆ” ಎಂದು ಸರ್ ಜಾನ್ ಮಾರ್ಷಲ್ ಹೊಗಳಿದ್ದಾನೆ ; ಮತ್ತು ಗ್ರೀಕ್ ಮತ್ತು ಭಾರತೀಯ ಕಲೆಗಳ ಸಾಮಾನ್ಯ ಗುಣವೆಂದರೆ “ ಯಾವ ದೇಶದೊಡನೆ ಸಂಪರ್ಕ ಬೆಳೆಸಲಿ ಆ ದೇಶ, ಜನ ಮತ್ತು ಧರ್ಮದೊಂದಿಗೆ ಸಮರಸಹೊಂದಿ, ಅವಶ್ಯಕತೆಗನುಗುಣವಾಗಿ ಮಿಲನವಾಗುತ್ತವೆ ” ಎಂದಿದ್ದಾನೆ.

ಭಾರತೀಯ ಕಲೆಯ ಮೂಲಗುಣವು ಭಾರತದ ಧಾರ್ಮಿಕ ಮತ್ತು ದಾರ್ಶನಿಕ ದೃಷ್ಟಿಯ ಕೆಲವು ಆದರ್ಶಗಳನ್ನವಲಂಬಿಸಿದೆ. ಈ ಪೌರ್ವಾತ್ಯ ದೇಶಗಳ ಜನರು ಭಾರತೀಯ ಧರ್ಮವನ್ನು ಅವಲಂಬಿಸಿದಂತೆ ಅವರ ಕಲೆಯ ಕಲ್ಪನೆಯ ಮೂಲವೂ ಭಾರತೀಯವಾಯಿತು. ಪ್ರಾಯಶಃ ಮೊಟ್ಟ ಮೊದಲನೆಯ ಪಾಳೆಯಗಳೆಲ್ಲ ಬ್ರಾಹ್ಮಣ ಮತದವರಾಗಿರಬೇಕು. ಬೌದ್ಧ ಧರ್ಮವು ಅನಂತರ ಪ್ರವೇಶಮಾಡಿರಬೇಕು. ಎರಡು ಧರ್ಮಗಳೂ ಸ್ನೇಹದಿಂದ ಬೆಳೆದವು. ಎರಡು ಧರ್ಮಗಳ ಪೂಜಾ ವಿಧಿಯೂ ಜನರಲ್ಲಿ ಪ್ರಚಾರವಾಗಿ ಮಿಶ್ರಪೂಜಾ ಪದ್ಧತಿಗಳು ಆಚರಣೆಗೆ ಬಂದವು. ಯಾವ ಸನ್ನಿವೇಶಕ್ಕಾದರೂ ಹೊಂದಿಕೊಳ್ಳುವ ಮಹಾಯಾನ ಪಂಥವು ಅಲ್ಲಿ ಆಚರಣೆಯಲ್ಲಿತ್ತು. ಬ್ರಾಹ್ಮಣ ಮತ ಮತ್ತು ಬೌದ್ಧಮತಗಳೆರಡೂ ಸ್ಥಳೀಯ ಸನ್ನಿವೇಶಗಳ ಪ್ರಭಾವದಿಂದ ತಮ್ಮ ತಮ್ಮ ಮೂಲ ಧರ್ಮಗಳ ಪಾರಿಶುದ್ಧತೆಯನ್ನು ಕಳೆದುಕೊಂಡು ತೀರ ಭಿನ್ನವಾದವು. ಕೊನೆಯ ದಿನಗಳಲ್ಲಿ ಬೌದ್ಧ

ಧರ್ಮದ ರಾಷ್ಟ್ರಕ್ಕೂ ಬ್ರಾಹ್ಮಣ ಧರ್ಮದ ರಾಷ್ಟ್ರಕ್ಕೂ ಘೋರ ಘರ್ಷಣೆಗಳಾದವು; ಆದರೆ ಅವಕ್ಕೆ ಮುಖ್ಯಕಾರಣವು ವ್ಯಾಪಾರ ಮತ್ತು ಸಮುದ್ರ ಮಾರ್ಗಗಳ ಸ್ವಾಮ್ಯಕ್ಕಾಗಿ ಹುಟ್ಟಿದ ರಾಜಕೀಯ ಮತ್ತು ಆರ್ಥಿಕ ಕಾರಣಗಳಾಗಿದ್ದವು.

ಈ ವಲಸೆ ರಾಷ್ಟ್ರಗಳ ಇತಿಹಾಸವೆಂದರೆ ಕ್ರಿಸ್ತಶಕ ಒಂದು ಅಥವ ಎರಡನೆಯ ಶತಮಾನದಿಂದ ಹದಿನೈದನೆಯ ಶತಮಾನದವರೆಗೆ ಸುಮಾರು ಹದಿಮೂರನೂರು ವರ್ಷಗಳ ಇತಿಹಾಸ. ಆರಂಭದ ಶತಮಾನಗಳ ಚರಿತ್ರೆಯು ಹೆಚ್ಚು ತಿಳಿಯದು. ಕೆಲವು ಸಣ್ಣ ರಾಜ್ಯಗಳಿದ್ದವೆಂದು ಮಾತ್ರ ತಿಳಿದಿದೆ ಕ್ರಮೇಣ ಅವುಗಳೆಲ್ಲ ಒಂದುಗೂಡಿ ಐದನೆಯ ಶತಮಾನದ ಹೊತ್ತಿಗೆ ದೊಡ್ಡ ಮಹಾನಗರಗಳು ಹುಟ್ಟಿದವು. ಎಂಟನೆಯ ಶತಮಾನದ ಹೊತ್ತಿಗೆ ಸಮುದ್ರ ವ್ಯಾಪಾರ ಮಾಡುತ್ತಿದ್ದ ಚಕ್ರಾಧಿಪತ್ಯ ಗಳು ಹುಟ್ಟಿದವು. ಸ್ವಲ್ಪಮಟ್ಟಿಗೆ ಒಂದೇ ಕೇಂದ್ರ ಆಡಳಿತಕ್ಕೆ ಅಧೀನವಿದ್ದರೂ, ಬೇರೆ ಕೆಲವು ರಾಜ್ಯಗಳ ಮೇಲೆ ಒಂದು ಬಗೆಯ ಸ್ವಾಮಿತ್ವ ನಡೆಸುತ್ತಿದ್ದವು. ಕೆಲವು ವೇಳೆ ಈ ಅಧೀನ ರಾಜ್ಯಗಳು ಸ್ವತಂತ್ರವಾಗಿ, ಕೇಂದ್ರ ಸರ್ಕಾರದ ಮೇಲೆ ಎದುರು ಬೀಳುತ್ತಿದ್ದವು. ಆದ್ದರಿಂದ ಈ ಕಾಲದ ಇತಿ ಹಾಸವು ಅರ್ಥವಾಗುವುದು ಸ್ವಲ್ಪ ಕಷ್ಟ.

ಇವುಗಳಲ್ಲೆಲ್ಲ ಬಹಳ ಪ್ರಸಿದ್ಧ ರಾಜ್ಯವೆಂದರೆ ಶ್ರೀ ವಿಜಯನ ಶೈಲೇಂದ್ರ ಚಕ್ರಾಧಿಪತ್ಯ. ಎಂಟ ನೆಯ ಶತಮಾನದಲ್ಲಿ ಮಲೇಷ್ಯದಲ್ಲೆಲ್ಲ ಭೂಜಲ ಬಲದಲ್ಲಿ ಅತ್ಯಂತ ಪ್ರಬಲವಾದ ರಾಜ್ಯವಾಯಿತು. ಇದರ ಮೂಲವೂ, ರಾಜಧಾನಿಯೂ ಸುಮಾತ್ರದಲ್ಲಿ ಎಂದು ಮೊನ್ನೆ ಮೊನ್ನೆನವರೆಗೆ ಭಾವಿಸಲಾ ಗಿತ್ತು; ಆದರೆ ಈಚಿನ ಸಂಶೋಧನೆಗಳಿಂದ ಮಲಯ ಪರ್ಯಾಯದ್ವೀಪದಲ್ಲಿಯೇ ಹುಟ್ಟಿದ್ದು, ಅದರ ರಾಜಧಾನಿಯೂ ಅಲ್ಲಿಯೇ ಇತ್ತು ಎಂದು ತಿಳಿದು ಬಂದಿದೆ. ಆದರ ಅತ್ಯುನ್ನತ ಕಾಲದಲ್ಲಿ ಮಲಯ, ಸಿಂಹಳ, ಸುಮಾತ್ರ, ಜಾವಾದ ಒಂದು ಭಾಗ, ಬೋರ್ನಿಯೋ, ಸೆಲಿಬಿಸ್, ಫಿಲಿಪ್ಪೈನ್ಸ್, ಫಾರ್ಮೋಸ ಒಂದು ಭಾಗ, ಆ ರಾಜ್ಯದ ಎಲ್ಲೆಯಲ್ಲಿದ್ದವು. ಪ್ರಾಯಶಃ ಕಾಂಬೋಡಿಯ ಮತ್ತು ಚಂಪಾ (ಅನ್ನಾಮ್) ರಾಜ್ಯಗಳೂ ಅದಕ್ಕೆ ಅಧೀನವಿದ್ದವು.

ಆದರೆ ಶೈಲೇಂದ್ರ ಸಂತತಿಯು ಬಲಗೊಂಡು ಸಾಮ್ರಾಜ್ಯ ಸ್ಥಾಪಿಸುವ ಮುಂಚೆಯೇ ಮಲಯ, ಕಾಂಬೋಡಿಯ ಮತ್ತು ಜಾವಗಳಲ್ಲಿ ಬಲಿಷ್ಠ ರಾಷ್ಟ್ರಗಳು ತಲೆ ಎತ್ತಿದವು. ಸೈಯಾಮ್ ಗಡಿಯ ಸಮಿಾಪದ ಮಲಯ ಪರ್ಯಾಯದ್ವೀಪದ ಉತ್ತರ ಭಾಗದಲ್ಲಿ ವಿಶಾಲವಾಗಿ ಹರಡಿರುವ ಪ್ರಾಚೀನ ಅವಶೇಷಗಳನ್ನೇ ನೋಡಿದರೆ " ಕೆಲವು ಬಲಿಷ್ಠ ರಾಜ್ಯಗಳಿದ್ದವೆಂದೂ, ಅವು ಸಂಪತ್ಸಮೃದ್ಧಿಯಿಂದ, ಸೌಖ್ಯದಿಂದ ಮೆರೆಯುತ್ತಿದ್ದವೆಂದೂ ತೋರುತ್ತದೆ " ಎಂದು ಆರ್. ಜೆ. ವಿಲ್ಕಿನ್ಸನ್ ಹೇಳುತ್ತಾನೆ. ಚಂಪಾ (ಅನ್ನಾಮ್) ದಲ್ಲಿ ಮೂರನೆಯ ಶತಮಾನದಲ್ಲಿ ಪಾಂಡುರಂಗಮ್ ಎಂಬ ಮಹಾನಗರ ವಿತ್ತು; ಐದನೆಯ ಶತಮಾನದಲ್ಲಿ ಕಾಂಭೋಜ ದೊಡ್ಡ ನಗರವಾಯಿತು. ಒಂಭತ್ತನೆಯ ಶತಮಾನ ದಲ್ಲಿ ಜಯವರ್ಮನೆಂಬ ಮಹಾರಾಜನು ಸಣ್ಣ ಸಣ್ಣ ರಾಜ್ಯಗಳನ್ನೆಲ್ಲ ಒಂದುಗೂಡಿಸಿ ಕಾಂಭೋಜ ಚಕ್ರಾಧಿಪತ್ಯವನ್ನು ಕಟ್ಟಿ ಆಂಗ್‌ಕೋರ್‌ದಲ್ಲಿ ರಾಜಧಾನಿಯನ್ನು ಸ್ಥಾಪಿಸಿದನು. ಕಾಂಬೋಡಿಯ ಆಗಾಗ ಶೈಲೇಂದ್ರರ ಅಧೀನಕ್ಕೆ ಒಳಪಟ್ಟಿರಬೇಕು; ಆದರೆ ನೆಪಮಾತ್ರ ಅಧೀನವಿದ್ದು ಕಟ್ಟಕಡೆಗೆ ಒಂಭತ್ತನೆಯ ಶತಮಾನದಲ್ಲಿ ಪುನಃ ಸ್ವತಂತ್ರವಾಯಿತು. ಈ ಕಾಂಭೋಜ ರಾಜ್ಯವು ಸುಪ್ರಸಿದ್ಧ ರಾಜರುಗಳೂ ರಾಷ್ಟ್ರ ನಿರ್ಮಾಪಕರೂ ಆದ ಜಯವರ್ಮ, ಯಶೋವರ್ಮ, ಇಂದ್ರವರ್ಮ, ಸೂರ್ಯ ವರ್ಮ ಮುಂತಾದವರ ರಾಜ್ಯಭಾರದಿಂದ ನಾಲ್ಕುನೂರು ವರ್ಷಗಳವರೆಗೆ ಯಶಸ್ವಿಯಾಗಿ ಬಾಳಿತು. ರಾಜಧಾನಿಯಾದ ಆಂಗ್‌ಕೋರ್ ಏಷ್ಯಖಂಡದಲ್ಲೆಲ್ಲ ಮಹಾವೈಭವಶಾಲಿಯಾದ ನಗರವೆಂದು ಪ್ರಸಿದ್ಧ ವಾಯಿತು. ಹತ್ತು ಲಕ್ಷ ಜನರ ಪ್ರಜಾಸಂಖ್ಯೆಯುಳ್ಳದ್ದಾಗಿ ಸೀಜರ್‌ಗಳ ರೋಮ್ ನಗರಕ್ಕಿಂತ ವಿಶಾಲವೂ ವೈಭವಯುಕ್ತವೂ ಆಗಿ ಮೆರೆಯುತ್ತಿತ್ತು. ಆ ಮಹಾನಗರದ ಸಮಿಾಪದಲ್ಲಿಯೇ ಆಂಗ್ ಕೋರ್‌ವಠ್ ಮಹಾದೇವಾಲಯವಿತ್ತು. ಕಾಂಬೋಡಿಯ ಚಕ್ರಾಧಿಪತ್ಯವು ಹದಿಮೂರನೆಯ ಶತ ಮಾನದ ಅಂತ್ಯದವರೆಗೆ ಉನ್ನತ ಸ್ಥಾನದಲ್ಲಿತ್ತು. ೧೨೯೭ ರಲ್ಲಿ ಅಲ್ಲಿಗೆ ಹೋದ ಚೀನೀ ರಾಯಭಾರಿ

ಯೊಬ್ಬನು ಆ ರಾಜಧಾನಿಯ ಸಂಪದ್ವೈಭವವನ್ನೂ ಸೌಂದರ್ಯವನ್ನೂ ವರ್ಣಿಸಿದ್ದಾನೆ. ಆದರೆ ಇದ್ದಕ್ಕಿದ್ದಂತೆ ಅದು ಕುಸಿದುಬಿತ್ತು. ಕೆಲವು ಅರ್ಧ ಕಟ್ಟಿದ ಕಟ್ಟಡಗಳೂ ಹಾಗೇ ನಿಂತಿವೆ. ಹೊರಗಿನ ಮುತ್ತಿಗೆಯೂ ಒಳಗಿನ ಪಿತೂರಿಯೂ ಕಾರಣವಾಗಿರಬಹುದು. ಎಲ್ಲಕ್ಕೂ ಮುಖ್ಯ ಕಾರಣ ಮೇಕಾಂಗ್ ನದಿಯ ಪಾತ್ರವು ಮುಚ್ಚಿ ಹೋಗಿ ನಗರದ ಸುತ್ತಮುತ್ತಲ ಪ್ರದೇಶವೆಲ್ಲ ಜೌಗುಹಿಡಿದು ವಸತಿಗೆ ಅನುಪಯುಕ್ತವಾಗಿ ಇಡೀ ನಗರವನ್ನೇ ತ್ಯಜಿಸಬೇಕಾಗಿ ಬಂದಿತು.

೯ ನೆಯ ಶತಮಾನದಲ್ಲಿ ಶೈಲೇಂದ್ರ ಚಕ್ರಾಧಿಪತ್ಯದಿಂದ ಜಾವಾ ಸಹ ಸ್ವತಂತ್ರವಾಯಿತು. ಆದಾಗ್ಯೂ ಹನ್ನೊಂದನೆಯ ಶತಮಾನದವರೆಗೆ ಇಂಡೊನೇಷ್ಯದಲ್ಲಿ ಶೈಲೇಂದ್ರರೇ ಅತಿ ಬಲಿಷ್ಠರಾಗಿದ್ದರು. ಆಗ ಅವರಿಗೂ ದಕ್ಷಿಣ ಭಾರತದ ಚೋಳರಿಗೂ ಯುದ್ಧವಾಯಿತು. ಚೋಳರೇ ಜಯಶಾಲಿಗಳಾಗಿ ಸುಮಾರು ಐವತ್ತು ವರ್ಷಗಳ ಕಾಲ ಇಂಡೊನೇಷ್ಯದಲ್ಲಿ ತಮ್ಮ ಅಧಿಕಾರ ನಡಸಿದರು. ಚೋಳರು ಹಿಂದಿರುಗಿದ ಮೇಲೆ ಶೈಲೇಂದ್ರರು ಪುನಃ ಸ್ವತಂತ್ರರಾಗಿ ಇನ್ನು ಮುನ್ನೂರು ವರ್ಷಗಳ್ಳ ರಾಜ್ಯವಾಳಿದರು. ಆದರೆ ಈಗ ಪೌರ್ವಾತ್ಯ ಸಮುದ್ರಗಳ ಮೇಲೆ ಒಂದು ಬಲಿಷ್ಠರಾಜ್ಯವಾಗಿ ಉಳಿಯಲಿಲ್ಲ. ಹದಿಮೂರನೆಯ ಶತಮಾನದಲ್ಲಿ ಆ ಸಾಮ್ರಾಜ್ಯವು ಕ್ಷೀಣದೆಶೆಗೆ ಬರಲಾರಂಭಿಸಿತು. ಅದರ ನಾಶದಿಂದ ಜಾವಾ ಮತ್ತು ತಾಯ್ ದೇಶ (ಸೈಯಾಂ) ಬಲಗೊಂಡವು. ಹದಿನಾಲ್ಕನೆಯ ಶತಮಾನದ ಅಂತ್ಯಕಾಲದಲ್ಲಿ ಶ್ರೀ ವಿಜಯ ಶೈಲೇಂದ್ರ ಚಕ್ರಾಧಿಪತ್ಯವನ್ನು ಜಾವಾ ಸಂಪೂರ್ಣವಾಗಿ ಅಧೀನಮಾಡಿಕೊಂಡಿತು

ಈಗ ಪ್ರಾಮುಖ್ಯತೆಗೆ ಬಂದ ಜಾವ ರಾಷ್ಟ್ರದ ಇತಿಹಾಸವು ಪೂರ್ವ ಪ್ರಸಿದ್ಧವಿದೆ. ಬೌದ್ಧ ಮತವು ಅತ್ಯುನ್ನತ ಸ್ಥಿತಿಯಲ್ಲಿದ್ದಾಗ್ಯೂ ಈ ರಾಜ್ಯವು ಬ್ರಾಹ್ಮಣ ಧರ್ಮವನ್ನೇ ಅವಲಂಬಿಸಿಕೊಂಡು ಬಂದಿತ್ತು. ಜಾವಾದ್ವೀಪದ ಅರ್ಧ ಭಾಗಕ್ಕಿಂತ ಹೆಚ್ಚಾಗಿ ಶ್ರೀ ವಿಜಯನ ಶೈಲೇಂದ್ರ ಚಕ್ರಾಧಿಪತ್ಯಕ್ಕೆ ಸೇರಿದ್ದರೂ ಶೈಲೇಂದ್ರಚಕ್ರಾಧಿಪತ್ಯದ ರಾಜಕೀಯ ಮತ್ತು ಆರ್ಥಿಕ ನೀತಿಗಳ ಅಧೀನಕ್ಕೆ ಒಳಗಾಗದೆ ಎದುರಿಸಿ ನಿಂತಿತ್ತು. ಅದರ ಪ್ರಜೆಗಳು ಸಮುದ್ರಯಾನ ಮತ್ತು ವ್ಯಾಪಾರದಲ್ಲಿ ಮತ್ತು ಭವ್ಯವಾದ ಶಿಲಾ ಸೌಧಗಳನ್ನು ಕಟ್ಟುವುದರಲ್ಲಿ ತುಂಬ ಆಸಕ್ತರೂ ನಿಪುಣರೂ ಇದ್ದರು. ಅದರ ಮೊದಲ ಹೆಸರು ಸಿಂಹಸಾರಿ ರಾಜ್ಯವೆಂದು; ಆದರೆ ೧೨೯೨ ರಲ್ಲಿ ಮಜಪಹಿತ್ ಎಂಬ ಹೊಸ ನಗರವನ್ನು ಕಟ್ಟಿದ್ದರಿಂದ ಮಜಪಹಿತ್ ಚಕ್ರಾಧಿಪತ್ಯವೆಂದು ಹೆಸರು ಪಡೆಯಿತು. ಶ್ರೀವಿಜಯನ ತರುವಾಯ ಆಗ್ನೇಯ ಏಷ್ಯದಲ್ಲಿ ಬಲಿಷ್ಠರಾಜ್ಯವೆಂದರೆ ಇದೇ. ಕುಬ್ಲಾಯ್‌ಖಾನನು ಕಳುಹಿಸಿದ ಕೆಲವು ಚೀನೀರಾಯಭಾರಿಗಳಿಗೆ ಮಜಪಹಿತ್ ಅಗೌರವ ತೋರಿಸಿದ್ದರಿಂದ ಚೀನರು ದಂಡೆತ್ತಿ ಬಂದು ಶಿಕ್ಷೆಮಾಡಿದರು. ಪ್ರಾಯಶಃ ಬಂದೂಕಿನ ಮದ್ದು ಸುಡುವುದನ್ನು ಜಾವಾ ಜನರು ಚೀನೀಯರಿಂದ ಕಲಿತಿರಬೇಕು. ಕೊನೆಯಲ್ಲಿ ಅದರ ಸಹಾಯದಿಂದಲೇ ಶೈಲೇಂದ್ರರನ್ನು ಜೈಸಿದರು.

ಮಜಪಹಿತ್ ರಾಜ್ಯದಲ್ಲಿ ಶಕ್ತಿಯುತವಾದ ಕೇಂದ್ರ ಸರಕಾರವಿತ್ತು ಮತ್ತು ಚಕ್ರಾಧಿಪತ್ಯವು ವಿಶಾಲವಾಗಿ ಹೆಚ್ಚಿತು. ಅದರ ಕಂದಾಯ ಪದ್ಧತಿಯು ಬಹಳ ಸುವ್ಯವಸ್ಥಿತವಿತ್ತಂತೆ. ವ್ಯಾಪಾರಕ್ಕೂ ವಲಸೆ ರಾಜ್ಯಗಳಿಗೂ ಹೆಚ್ಚು ಗಮನಕೊಡುತ್ತಲಿತ್ತು. ಸರಕಾರದ ಆಡಳಿತದಲ್ಲಿ ವ್ಯಾಪಾರ ಶಾಖೆ, ವಲಸೆರಾಜ್ಯಗಳ ಶಾಖೆ, ಸಾರ್ವಜನಿಕ ಆರೋಗ್ಯ ಶಾಖೆ, ಯುದ್ಧ ಶಾಖೆ, ಜನ ಆಡಳಿತದ ಶಾಖೆ ಮುಂತಾದ ವಿಭಾಗಗಳು ಇದ್ದುವು. ಒಂದು ಶ್ರೇಷ್ಠ ನ್ಯಾಯಾಸ್ಥಾನವಿತ್ತು; ಅದರಲ್ಲಿ ಅನೇಕ ನ್ಯಾಯಾಧೀಶರಿರುತ್ತಿದ್ದರು. ಈ ಸಾಮ್ರಾಜ್ಯಾಂತರ್ಗತ ರಾಷ್ಟ್ರದಲ್ಲಿ ಇಷ್ಟು ಸುವ್ಯವಸ್ಥಿತ ಆಡಳಿತ ಪದ್ಧತಿ ಇದ್ದುದು ಒಂದು ಕೌತುಕ. ಅದರ ಮುಖ್ಯ ಉದ್ಯಮವು ಚೀನಾ ಮತ್ತು ಇಂಡಿಯಾ ದೇಶಗಳೊಡನೆ ವ್ಯಾಪಾರ. ಅದರ ಶ್ರೇಷ್ಠ ಆಡಳಿತ ನಡೆಸಿದವರಲ್ಲಿ ಮಹಾರಾಣಿ ಸಹಿತ ಒಬ್ಬಳು.

ವಿಜಯನಿಗೂ ಮಜಪಹಿತರಿಗೂ ನಡೆದ ಯುದ್ಧವು ಅತಿ ಭಯಂಕರವಾಗಿತ್ತು. ಮಜಪಹಿತರೇ ಗೆದ್ದರೂ ಆ ವಿಜಯೋತ್ಸವದಲ್ಲೇ ಹೊಸ ಯುದ್ಧಗಳ ಬೀಜ ಅಡಗಿತ್ತು. ಶೈಲೇಂದ್ರ ಮನೆತನದ ನಾಶದಿಂದ ಸುಮಾತ್ರ ಮತ್ತು ಮಲಕ್ಕಗಳಲ್ಲಿ ಇತರ ರಾಜ್ಯಗಳು ಮುಖ್ಯವಾಗಿ ಅರಬ್ಬೀ ಮತ್ತು ಮುಸ್ಲಿಂ

ರಾಜ್ಯಗಳು ಜನ್ಮತಾಳಿದವು. ಇದುವರೆಗೆ ದಕ್ಷಿಣ ಭಾರತೀಯರ ಕೈಯಲ್ಲಿದ್ದ ಪೌರ್ವಾತ್ಯ ಸಮುದ್ರಗಳ ಒಡೆತನವು ಅರಬ್ಬಿ ಜನರ ಕೈಗೆ ಹೋಯಿತು. ಮಲಕ್ಕ ಒಂದು ಪ್ರಮುಖ ವ್ಯಾಪಾರ ಕೇಂದ್ರವಾಗಿ, ರಾಜಕೀಯ ಶಕ್ತಿಯ ಆಗರವಾಯಿತು. ಇಸ್ಲಾಂಧರ್ಮವು ಮಲಯ ಪರ್ಯಾಯದ್ವೀಪ ಮತ್ತು ಇತರ ದ್ವೀಪಗಳಲ್ಲಿ ಹರಡಿತು. ಈ ಹೊಸ ರಾಜ್ಯವು ಹದಿನೈದನೆಯ ಶತಮಾನದ ಕೊನೆಯಲ್ಲಿ ಮಜಪಹಿತ ವಂಶವನ್ನು ನಾಶಮಾಡಿತು. ಅಲ್ಲಿಂದ ಸ್ವಲ್ಪ ದಿನಗಳಲ್ಲಿ ೧೫೧೧ ರಲ್ಲಿ ಆಲ್ಬುಕರ್ಕ್‌ನ ನೇತೃತ್ವದಲ್ಲಿ ಪೋರ್ಚುಗೀಸರು ಬಂದು ಮಲಕ್ಕ ಆಕ್ರಮಿಸಿದರು ; ಯೂರೋಪು ತನ್ನ ನೂತನ ಸಮುದ್ರಯಾನ ಶಕ್ತಿಯಿಂದ ಪೌರ್ವಾತ್ಯವನ್ನು ಮುಟ್ಟಿತು.

## ೧೭. ಹೊರರಾಜ್ಯಗಳಲ್ಲಿ ಭಾರತೀಯ ಕಲೆಯ ಪ್ರಭಾವ

ಗತ ಚಕ್ರಾಧಿಪತ್ಯಗಳ ಮತ್ತು ರಾಜಮನೆತನಗಳ ಲೇಖನಗಳಲ್ಲಿ ಪ್ರಾಕ್ತನ ವಿಮರ್ಶಕರಿಗೆ ಆಸಕ್ತಿ ಇರಬಹುದು ; ಆದರೆ ನಾಗರಿಕತೆ ಮತ್ತು ಕಲೆಯ ವಿಕಸನದ ಇತಿಹಾಸದ ಬೆಲೆ ಇನ್ನೂ ಅಧಿಕ. ಭಾರತದ ದೃಷ್ಟಿಯಲ್ಲಿ ಇದಕ್ಕೆ ಅತಿ ಮಹತ್ವವಿದೆ; ಏಕೆಂದರೆ ಭಾರತವೇ ಅಲ್ಲಿ ಮೂರ್ತಿಗೊಂಡಿತ್ತು ಮತ್ತು ಅನೇಕ ವಿಧದಲ್ಲಿ ತನ್ನ ಅಂತಸ್ಸತ್ವವನ್ನು ಅದ್ಭುತ ಕಾರ್ಯಶಕ್ತಿಯನ್ನು ವ್ಯಕ್ತಗೊಳಿಸಿತ್ತು. ಈ ಅದ್ಭುತಶಕ್ತಿಯು ಉಕ್ಕಿಬಂದು ವಿಶಾಲವಾದ ಪ್ರದೇಶದಲ್ಲಿ ಹರಿದು ಹಬ್ಬಿದೆ. ಅದು ತನ್ನ ದರ್ಶನದ ಜೊತೆಯಲ್ಲಿ ತನ್ನ ಇತರ ಆದರ್ಶಗಳನ್ನೂ, ಕಲೆ, ವ್ಯಾಪಾರ, ಭಾಷೆ, ಸಾಹಿತ್ಯ ಮತ್ತು ರಾಜ್ಯ ಪದ್ಧತಿಗಳನ್ನೂ ಹರಡಿತು. ಭಾರತವು ಆಗ ನಿಂತು ನಾರುತ್ತಿರಲಿಲ್ಲ ; ಒಂಟಿಯಾಗಿರಬೇಕೆಂಬ ಏಕಾಂತ ಮನೋಭಾವವಿರಲಿಲ್ಲ ; ಪರ್ವತಪಂಕ್ತಿಗಳು, ಸಪ್ತಸಮುದ್ರಗಳು ಯಾವುದೂ ಅದರ ಸೀಮೋಲ್ಲಂಘನಕ್ಕೆ ಅಡ್ಡಿ ಬರಲಿಲ್ಲ. ಭಾರತೀಯರು ಉನ್ನತ ಅಗಮ್ಯ ಪರ್ವತಶ್ರೇಣಿಗಳನ್ನು, ಅಪಾಯಕರವಾದ ಸಮುದ್ರಗಳನ್ನು ದಾಟಿ ರೇನೆಗ್ರೂಸೆ ಹೇಳುವಂತೆ " ವಿಶಾಲಗ್ರೀಸಿನಂತೆ ಸಮರ್ಪಕ ರಾಜಕೀಯ ವ್ಯವಸ್ಥೆ ಇರದಿದ್ದರೂ ಶ್ರೇಷ್ಠ ನೈತಿಕ ವ್ಯವಸ್ಥೆ ಇದ್ದ ವಿಶಾಲಭಾರತವನ್ನು ಕಟ್ಟಿದರು." ನಿಜವಾಗಿ ನೋಡಿದರೆ ಭಾರತದ ಒಂದು ಭಾಗವಾಗಿರದಿದ್ದರೂ ಮಲಯ ರಾಜ್ಯಗಳ ರಾಜಕೀಯ ಸ್ಥಿತಿಯು ಉತ್ತಮ ಮಟ್ಟದ್ದಾಗಿತ್ತು. ಆದರೆ ಗ್ರೂಸೆ ಭಾರತೀಯ ಕಲೆಯು ಹರಡಿದ್ದ ವಿಶಾಲ ಪ್ರದೇಶಗಳ ವಿಷಯ ಬರೆಯುತ್ತ " ಪೂರ್ವ ಇರಾಣದ ಪ್ರಸ್ತಭೂಮಿಯಲ್ಲಿ, ಸೆರಿಂಡಿಯಾ ಮರುಭೂಮಿಯಲ್ಲಿ, ಟಿಬೆಟ್, ಮಂಗೋಲಿಯ ಮತ್ತು ಮಂಚೂರಿಯಗಳ ನಿರ್ಜನ ಬಂಜರು ಭೂಪ್ರದೇಶದಲ್ಲಿ, ಪುರಾತನ ಸಂಸ್ಕೃತಿಯುಳ್ಳ ಚೀನ ಜಪಾನ್ ದೇಶಗಳಲ್ಲಿ, ಇಂಡೋ ಚೀನದ ಅನಾಗರಿಕ ಮಾನ್ಸ್, ಖ್ಮೇರ್ ಮತ್ತು ಇತರ ಜನರ ದೇಶಗಳಲ್ಲಿ ಭಾರತವು ಧರ್ಮ ವಿಷಯದಲ್ಲಿ ಮಾತ್ರವಲ್ಲದೆ ಕಲೆ ಮತ್ತು ಸಾಹಿತ್ಯದಲ್ಲಿ ಸಹ—ಒಂದೇ ಮಾತಿನಲ್ಲಿ ಹೇಳುವುದಾದರೆ ಆತ್ಮೋನ್ನತಿಯ ಎಲ್ಲ ಮಾರ್ಗಗಳಲ್ಲಿ ತನ್ನ ಶ್ರೇಷ್ಠ ನಾಗರಿಕತೆಯ ಶಾಶ್ವತ ಛಾಯೆಯನ್ನು ಬೀರಿದೆ " ಎಂದಿದ್ದಾನೆ.

ಮುಖ್ಯವಾಗಿ ಭಾರತೀಯ ಸಂಸ್ಕೃತಿಯು ಆಗ್ನೇಯ ಏಷ್ಯದ ರಾಜ್ಯಗಳಲ್ಲಿ ಬೇರು ಬಿಟ್ಟಿತು. ಅದರ ಹೆಗ್ಗುರುತುಗಳನ್ನು ಈಗಲೂ ಎಲ್ಲೆಲ್ಲೂ ನೋಡಬಹುದು. ಚಂಪ, ಆಂಗ್‌ಕೋರ್, ಶ್ರೀ ವಿಜಯ ಮತ್ತು ಮಜಪಹಿತ್‌ಗಳಲ್ಲಿ ಉನ್ನತ ಸಂಸ್ಕೃತ ಜ್ಞಾನ ಕೇಂದ್ರಗಳಿದ್ದವು. ಅಲ್ಲಿ ಆಳಿದ ರಾಜ್ಯಗಳ ಮತ್ತು ಅರಸರ ಹೆಸರುಗಳೆಲ್ಲ ಸಂಸ್ಕೃತದಲ್ಲಿದ್ದವು, ಪೂರ್ಣ ಭಾರತೀಯವಿದ್ದವು. ಅಂದರೆ ಅವರೆಲ್ಲ ಭಾರತದವರೆಂದಲ್ಲ ಆದರೆ, ಭಾರತೀಯರಾದವರು. ಅರಸು ಮನೆತನದ ಉತ್ಸವಗಳೆಲ್ಲ ಭಾರತೀಯವಿದ್ದು ಸಂಸ್ಕೃತದಲ್ಲೇ ನಡೆಯುತ್ತಿದ್ದವು. ರಾಜ್ಯದ ಅಧಿಕಾರಿಗಳ ಹೆಸರುಗಳೆಲ್ಲ ಸಂಸ್ಕೃತದಲ್ಲಿದ್ದವು. ತಾಯ್ ದೇಶದಲ್ಲಿ ಮಾತ್ರವಲ್ಲದೆ, ಮಲಯದ ಮುಸ್ಲಿಂ ರಾಜ್ಯಗಳಲ್ಲಿ ಸಹ ಇನ್ನೂ ಅದೇ ಹೆಸರುಗಳಿವೆ. ಈ ದೇಶದ ಪ್ರಾಚೀನ ಸಾಹಿತ್ಯದಲ್ಲಿ ಭಾರತದ ಪುರಾಣ ಕಥೆಗಳು ಹೇರಳವಾಗಿ ತುಂಬಿವೆ. ಜಾವಾ ಮತ್ತು ಬಾಲಿ ನೃತ್ಯಗಳು ಭರತನಾಟ್ಯದಿಂದ ಹುಟ್ಟಿದವು. ಸಣ್ಣದಾದ ಬಾಲಿ ದ್ವೀಪದಲ್ಲಿ ಭಾರತೀಯರ ಸಂಸ್ಕೃತವು ಈಗಲೂ ಜೀವಂತವಿದೆ. ಹಿಂದೂ ಧರ್ಮವು ಸಹ ಅಲ್ಲಿ ಪ್ರಚಾರದಲ್ಲಿದೆ. ಲೇಖನ ಕಲೆ ಫಿಲಿಪ್ಪೈನ್ಸ್‌ಗೆ ಹೋದದ್ದು ಇಂಡಿಯಾದಿಂದ.

ಕಾಂಬೋಡಿಯ ವರ್ಣಮಾಲೆ ದಕ್ಷಿಣ ಭಾರತದಿಂದ ಬಂದದ್ದು. ರೂಪಾಂತರ ಹೊಂದಿದ ಅನೇಕ ಸಂಸ್ಕೃತ ಶಬ್ದಗಳನ್ನೂ ಉಪಯೋಗಿಸಿಕೊಂಡಿದಾರೆ. ಅಲ್ಲಿನ ವ್ಯವಹಾರ ಧರ್ಮ ಮತ್ತು ದಂಡನೀತಿ ಪ್ರಾಚೀನ ಭಾರತದ ಶಾಸನಕರ್ತನಾದ ಮನುವಿನ ಧರ್ಮಶಾಸ್ತ್ರವನ್ನನುಸರಿಸಿದೆ. ಇಂದಿನ ಕಾಂಬೋಡಿಯಾದ ಅದೇ ಧರ್ಮ ಶಾಸನವನ್ನು ಬೌದ್ಧ ಮತದ ಪ್ರಭಾವದಿಂದ, ಅದ ಕೆಲವು ವ್ಯತ್ಯಾಸಗಳೊಂದಿಗೆ ಶಾಸನವನ್ನಾಗಿ ವಿಧಾಯಕ ಮಾಡಲಾಗಿದೆ.

ಆದರೆ ಭಾರತೀಯ ವರ್ಚಸ್ಸು ಎಲ್ಲಕ್ಕಿಂತಲೂ ಹೆಚ್ಚಾಗಿ ಎದ್ದು ಕಾಣುವುದು. ಈ ಭಾರತೀಯ ವಲಸೆ ರಾಷ್ಟ್ರಗಳಲ್ಲಿನ ಭವ್ಯ ಸುಂದರ ಕಲಾಕೃತಿಯಲ್ಲಿ ಮತ್ತು ಶಿಲ್ಪಕಲೆಯಲ್ಲಿ. ಮೂಲ ಕಲಾದೃಷ್ಟಿ ಮಾರ್ಪಾಟಾಗಿ, ತಾದಾತ್ಮ್ಯ ಹೊಂದಿ, ಪ್ರಾದೇಶಿಕ ಸ್ಫೂರ್ತಿಯೊಂದಿಗೆ ಸಾಮರಸ್ಯ ಪಡೆಯಿತು. ಈ ಸಮರಸ ಕಲಾಕಲ್ಪನೆಯಿಂದ ಆಂಗ್‌ಕೋರ್ ಮತ್ತು ಬೋರೋಬುದೂರ್ ಶಿಲಾಸ್ಮಾರಕಗಳು ಮತ್ತು ಭವ್ಯ ದೇವಾಲಯಗಳು ಹುಟ್ಟಿದವು. ಜಾವಾದ ಬೋರೋಬುದೂರಿನಲ್ಲಿ ಬುದ್ಧ ಚರಿತ್ರೆಯನ್ನೆಲ್ಲ ಶಿಲೆಯಲ್ಲಿ ಕೆತ್ತಲಾಗಿದೆ. ಉಳಿದ ಸ್ಥಳಗಳಲ್ಲಿ ವಿಷ್ಣುಪುರಾಣ, ರಾಮಾಯಣ ಮತ್ತು ಕೃಷ್ಣ ಚರಿತೆಯ ಕಥೆಗಳನ್ನು ಕೆತ್ತಲಾಗಿದೆ. ಆಂಗ್‌ಕೋರ್ ವಿಷಯವಾಗಿ ಆಸ್ಬರ್ಟ್ ಸಿಟ್ವೆಲ್ "ಆಂಗ್‌ಕೋರ್ ಈಗಲೂ ಪ್ರಪಂಚದ ಮುಖ್ಯ ವೈಚಿತ್ರ್ಯವಾಗಿದೆ. ಮಾನವನ ಕಲ್ಪನಾಶಕ್ತಿಯು ಶಿಲ್ಪ ಕಲೆಯಲ್ಲಿ ಎಷ್ಟು ಔನ್ನತ್ಯವನ್ನು ಮುಟ್ಟಬಹುದೋ ಅಷ್ಟು ಎತ್ತರವನ್ನೂ ಇಲ್ಲಿ ಮುಟ್ಟಿದೆ; ಚೀನಾ ಕಲೆಗಿಂತ ಅತ್ಯಂತ ಗಂಭೀರವೂ, ಸುಂದರವೂ, ಭಾವೋದ್ದೀಪಕವೂ ಇದೆ" ಎಂದಿದ್ದಾನೆ. "ಸುಮಾರು ಆರು ಶತಮಾನಗಳ ಕಾಲ ಅವಿಚ್ಛಿನ್ನವಾಗಿ ಸ್ವೇಚ್ಛೆಯಿಂದ ವಿಹರಿಸಿ, ಕೊನೆಯಲ್ಲಿ ಹೆಸರು ಕೇಳದಂತೆ ಪೂರ್ಣ ನಿರ್ನಾಮವಾದ ಒಂದು ನಾಗರಿಕತೆಯ ಅವಶೇಷಗಳು" ಎಂದು ಹೇಳಿದ್ದಾನೆ.

ಆಂಗ್‌ಕೋರ್‌ವತ್ ದೇವಸ್ಥಾನದ ಹೊರವಳಯದ ವಿಶಾಲ ಪ್ರದೇಶದಲ್ಲಿ ಕೃತಕ ಮಹಾ ಸರೋವರಗಳೂ ಮತ್ತು ಕೊಳಗಳೂ, ನೀರಿನ ನಾಲೆಗಳೂ, ಅವುಗಳ ಮೇಲೆ ಸೇತುವೆಗಳೂ ಮತ್ತು ಒಂದು ದೊಡ್ಡ ಹೆಬ್ಬಾಗಿಲೂ ಇವೆ. "ಈ ಹೆಬ್ಬಾಗಿಲಿನ ಮೇಲೆ ಒಂದು ಸುಂದರ ಹಸನ್ಮುಖಿಯಾದ ಶಿಲಾ ಶಿರಸ್ಸು ಇದೆ. ಆದರೆ ದೇವತೆಯ ಶಕ್ತಿ ಮತ್ತು ಸೌಂದರ್ಯವನ್ನು ಅದಕ್ಕೆ ಕಲ್ಪಿಸಿದ್ದರೂ ಅದು ಗೂಢ ಭಾವನೆಯ ಕಾಂಬೋಡಿಯದ ಮುಖ". ಅದರ ವಿಚಿತ್ರ ಚಿತ್ತಾಕರ್ಷಕ ಮತ್ತು ಚಿತ್ತವೇಧಕ ನಗು ಆಂಗ್‌ಕೋರ್ ನಗು-ಉಳ್ಳ ಈ ಮುಖವು ಪದೇ ಪದೇ ಎಲ್ಲೆಲ್ಲೂ ಕಾಣುತ್ತದೆ. ಈ ಹೆಬ್ಬಾಗಿಲ ಮೂಲಕ ದೇವಾಲಯಕ್ಕೆ ಹೋಗಬೇಕು." ಪಕ್ಕದ ಬೇಯಾನ್ ದೇವಾಲಯ ಆಂಗ್‌ಕೋರ್‌ವತ್‌ಗಿಂತ ಅತಿ ಸುಂದರವಿದೆ. ಪ್ರಪಂಚದಲ್ಲೆಲ್ಲ ಕಲ್ಪನಾಶಕ್ತಿಯಲ್ಲಿ, ಸೌಂದರ್ಯದಲ್ಲಿ ಇದನ್ನು ಮೀರಿಸುವುದು ಮತ್ತೊಂದಿಲ್ಲ. ಏಕೆಂದರೆ ಮೂಲಕಲ್ಪನೆಯಲ್ಲೇ ಅದು ಬೇರೊಂದು ಪ್ರಪಂಚದ್ದು. ಬೇರೊಂದು ಗ್ರಹದ ನಗರ ದೇವಾಲಯದಂತೆ; ಒಂದು ಮಹಾ ಕಾವ್ಯದ ಶ್ಲೋಕಗಳಲ್ಲಿ ಅಡಗಿರುವ ಅವ್ಯಕ್ತ ಸೌಂದರ್ಯದಿಂದ ಕೂಡಿದೆ."

ಆಂಗ್‌ಕೋರ್ ನಿರ್ಮಾಣಕ್ಕೆ ಸ್ಫೂರ್ತಿಬಂದದ್ದು ಭಾರತದಿಂದ; ಆದರೆ ಅದನ್ನು ಸಾಧಿಸಿದ್ದು ಖ್ಮೇರ್ ಜನರ ಅಂತಃಸ್ಫೂರ್ತಿ ಅಥವ ಎರಡೂ ಒಟ್ಟುಗೂಡಿ ಈ ಅದ್ಭುತ ಕಲಾಕೃತಿಯನ್ನು ಸೃಷ್ಟಿಸಿದವು. ಈ ಭವ್ಯ ದೇವಾಲಯವನ್ನು ಕಟ್ಟಿಸಿದ ಕಾಂಭೋಜರಾಜ ಪೂರ್ಣ ಭಾರತೀಯ ಹೆಸರಿನ ಏಳನೆಯ ಜಯವರ್ಮ. ಡಾ|| ಕ್ವಾರಿಚ್ ವೇಲ್ಸ್ "ಭಾರತೀಯರ ಮಾರ್ಗದರ್ಶಿತ್ವವು ಹೋದ ಮೇಲೆ ಭಾರತ ಸ್ಫೂರ್ತಿಯು ಮರೆತುಹೋಗಲಿಲ್ಲ. ಆ ಸ್ಫೂರ್ತಿಯಿಂದ ಭವ್ಯವೂ ನೂತನವೂ ಆದ ಭಾವನೆಗಳಿಂದ ಅದ್ಭುತ ಜೀವಕಳೆಯುಳ್ಳ ಹೊಸ ಕಲಾಕೃತಿಯನ್ನು ರಚಿಸಲು ಖ್ಮೇರ್ ಜನರ ಆತ್ಮಶಕ್ತಿಗೆ ಒಂದು ಅವಕಾಶ ದೊರೆಯಿತು. ಈ ಹೊಸ ಕೃತಿಯನ್ನು ಕೇವಲ ಭಾರತೀಯ ಸನ್ನಿವೇಶಗಳಿಂದ ರೂಪುಗೊಂಡ ಕೃತಿಗಳಿಗೆ ಹೋಲಿಸಲು ಸಾಧ್ಯವಿರಲಿಲ್ಲ; ಅವುಗಳಿಂದ ತೀರ ಭಿನ್ನವಿತ್ತು. ಖ್ಮೇರ್ ಸಂಸ್ಕೃತಿಗೆ ಭಾರತೀಯ ಸ್ಫೂರ್ತಿಯೇ ಮೂಲ ಎಂಬುದು ನಿಜ. ಅದಿಲ್ಲದೆ ಖ್ಮೇರ್ ಜನರು ಪ್ರಾಯಶಃ ಮಧ್ಯ ಅಮೆರಿಕದ ಮಾಯಾ ಜನರ ಅನಾಗರಿಕ ವೈಭವಕ್ಕಿಂತ ಹೆಚ್ಚು ಏನನ್ನೂ ಸಾಧಿಸುತ್ತಿರಲಿಲ್ಲ. ಆದರೆ ಆ ಸ್ಫೂರ್ತಿಗೆ ವಿಶಾಲ ಭಾರತದ ಇತರ ಕಡೆಗಳಿಗಿಂತ ಇಲ್ಲಿ ಒಳ್ಳೆಯ ಕ್ಷೇತ್ರ ದೊರೆಯಿತು.

ಇದನ್ನು ನೋಡಿದರೆ ಭಾರತದಲ್ಲಿ ಮನಸ್ಸಿನ ಮತ್ತು ಕ್ಷೇತ್ರದ ಅಧಿಕ ಶ್ರಮದ ಆಯಾಸದಿಂದ ಮತ್ತು ಹೊಸ ಭಾವನೆಗಳ ಚಲನ ವಲನಗಳ ಪೌಷ್ಟಿಕ ಆಹಾರದ ಅಭಾವದಿಂದ ಈ ಮೂಲ ಸ್ಫೂರ್ತಿಯು ಶುಷ್ಕವಾಗಿರಬೇಕೆಂದು ತೋರುತ್ತದೆ. ಎಲ್ಲಿಯವರೆಗೆ ಭಾರತದ ಮನಸ್ಸು ಪ್ರಪಂಚಕ್ಕೆ ತೆರೆದಿತ್ತೊ, ತನ್ನ ಜ್ಞಾನ ಸಂಪತ್ತನ್ನು ಇತರರಿಗೆ ಕೊಟ್ಟು, ತನ್ನಲ್ಲಿಲ್ಲದುದನ್ನು ಇತರರಿಂದ ತೆಗೆದುಕೊಳ್ಳಲು ಸಿದ್ಧವಿತ್ತೊ ಅಲ್ಲಿಯವರೆಗೆ ಭಾರತದಲ್ಲಿ ಒಂದು ನವ್ಯತೆ, ಬಲ ಮತ್ತು ಜೀವಶಕ್ತಿ ಇತ್ತು. ಆದರೆ ಆತ್ಮಸಂರಕ್ಷಣೆಗೆಂದು, ಪರಕೀಯರ ಪ್ರಭಾವದಿಂದ ಕಲುಷಿತವಾಗಬಾರದೆಂದು ತನ್ನ ಅಂಗಾಂಗಗಳನ್ನು ತನ್ನೊಳಗೆ ತಾನೆ ಎಳೆದುಕೊಂಡು ಸಂಕುಚಿತವಾಯಿತೊ ಅಂದಿನಿಂದ ಆ ಸ್ಫೂರ್ತಿಯೂ ಹೋಯಿತು, ಅದರ ಜೀವನ ನಿರ್ಜೀವ ಗತವೈಭವವನ್ನು ನೆಚ್ಚಿದ ಶುಷ್ಕ ಅರ್ಥವಿಲ್ಲದ ಶಿಷ್ಟಾಚಾರದ ಜೀವನವಾಯಿತು. ಸೌಂದರ್ಯ ಸೃಷ್ಟಿಯ ಕಲೆಯನ್ನು ಕಳೆದುಕೊಂಡು ಭಾರತೀಯರು ಇದ್ದ ಸೌಂದರ್ಯವನ್ನೂ ಕಾಣಬಾರದ ಕುರುಡರಾದರು.

ಜಾವಾ, ಆಂಗ್‌ಕೋರ್ ಮತ್ತು ವಿಶಾಲ ಭಾರತದ ಇತರ ಕಡೆಗಳಲ್ಲಿ ಭೂಗರ್ಭಶೋಧನೆ ನಡೆಸಿ ಸಂಶೋಧನೆ ಮಾಡಿದವರು ಯೂರೋಪಿಯನ್ ವಿದ್ವಾಂಸರು ಮತ್ತು ಪ್ರಾಕ್ತನ ವಿಮರ್ಶಕರು ಅದರಲ್ಲೂ ಮುಖ್ಯವಾಗಿ ಫ್ರೆಂಚ್ ಮತ್ತು ಡಚ್ ವಿದ್ವಾಂಸರು. ಪ್ರಾಯಶಃ ಇನ್ನೂ ಅನೇಕ ಮಹಾ ನಗರಗಳು, ಸ್ಮಾರಕಗಳು ಸಂಶೋಧನೆಯನ್ನು ಕಾಯುತ್ತ ಭೂಗತವಾಗಿರಬೇಕು. ಈ ಮಧ್ಯೆ ಮಲಯ ಪರ್ಯಾಯ ದ್ವೀಪದಲ್ಲಿ ಪ್ರಾಚೀನ ಅವಶೇಷಗಳಿದ್ದ ಮುಖ್ಯ ಸ್ಥಳಗಳು ಯುದ್ಧದಲ್ಲಿ ರಸ್ತೆಗಳನ್ನು ಮಾಡಲು ಮದ್ದುಗುಂಡಗಳಿಂದ ಹಾಳಾದಂತೆ ವರದಿಯಾಗಿದೆ. ಅದರ ಜೊತೆಗೆ ಯುದ್ಧದಿಂದ ಇನ್ನೂ ಸ್ವಲ್ಪ ನಷ್ಟವಾಗುತ್ತದೆ.

ಕೆಲವು ದಿನಗಳ ಹಿಂದೆ ರವೀಂದ್ರನಾಥ ಠಾಕೂರರ ಶಾಂತಿನಿಕೇತನಕ್ಕೆ ಓದಲು ಬಂದಿದ್ದು ಹಿಂದಿರುಗಲಿದ್ದ ಥಾಯ್‌ದೇಶದ ವಿದ್ಯಾರ್ಥಿಯೊಬ್ಬ ನನಗೆ ಒಂದು ಕಾಗದ ಬರೆದಿದ್ದ. "ಈ ಪ್ರಸಿದ್ಧ ಪ್ರಾಚೀನ ಆರ್ಯಾವರ್ತಕ್ಕೆ ಬರಲು ನನಗೆ ಸಾಧ್ಯವಾದದ್ದು ನನ್ನದೊಂದು ಪುಣ್ಯವಿಶೇಷ. ಯಾವ ಮಹಾ ಮಾತೃಶ್ರೀಯ ಮಡಿಲಲ್ಲಿ ನನ್ನ ತಾಯ್ನಾಡು ಸುಖವಾಗಿ ಹೂವಿನಂತೆ ಅರಳಿ, ಸಂಸ್ಕೃತಿ ಮತ್ತು ಧರ್ಮದ ಔನ್ನತ್ಯವನ್ನು ಸಾಧಿಸಿ ಸೌಂದರ್ಯವನ್ನು ಪ್ರೇಮದಿಂದ ಅನುಭವಿಸಿ, ಆನಂದ ಪಡುವ ಶಕ್ತಿಯನ್ನು ಪಡೆಯಿತೊ ಆ ಮಹಾಮಾತೃಶ್ರೀ ಭಾರತಮಾತೆಯ ಅಡಿದಾವರೆಗಳಲ್ಲಿ ನನ್ನ ಅಲ್ಪ ಕಾಣಿಕೆಯನ್ನು ಅರ್ಪಿಸಲು ಅವಕಾಶ ದೊರೆತದ್ದು ನನ್ನ ಭಾಗ್ಯ ವಿಶೇಷ" ಎಂದು ಬರೆದಿದ್ದಾನೆ. ಎಲ್ಲರಲ್ಲೂ ಇದೇ ಭಾವನೆ ಇದೆ ಎಂದಲ್ಲ. ಆದರೂ ಆಗ್ನೇಯ ಏಷ್ಯ ಜನರಲ್ಲಿ ಇತರ ಅನೇಕ ಪ್ರಭಾವಗಳಿಗೆ ಒಳಗಾಗಿದ್ದರೂ ಅವರಲ್ಲಿ ಭಾರತದ ಮೇಲೆ ಇಂತಹ ಒಂದು ಅಸ್ಪಷ್ಟ ಗೌರವ ಭಾವನೆಯು ಇನ್ನೂ ಇದೆ. ಎಲ್ಲ ಕಡೆಯಲ್ಲೂ ಸಂಕುಚಿತ ರಾಷ್ಟ್ರೀಯ ಭಾವನೆಯು ಉಗ್ರವಾಗಿ ಬೆಳೆದು ಇದೆ. ಆತ್ಮರಕ್ಷಣೋಪಾಯದಲ್ಲಿ ಆಸಕ್ತಿ, ಇತರರಲ್ಲಿ ಸಂದೇಹ, ಸಂಶಯ, ಯುರೋಪಿಯನ್ ರಾಜ್ಯಗಳ ಅಧಿಕಾರದ ಭಯ ಮತ್ತು ವೈರ; ಆದರೆ ಯೂರೋಪ್ ಅಮೆರಿಕಗಳನ್ನು ಅನುಕರಿಸುವ ಆಶೆ; ಭಾರತ ದಾಸ್ಯದಲ್ಲಿರುವುದರಿಂದ ಭಾರತೀಯರೆಂದರೆ ತಾತ್ಸಾರ ಮನೋಭಾವ; ಆದರೂ ಇಷ್ಟೆಲ್ಲ ಪ್ರಬಲ ವಿರೋಧವಿದ್ದರೂ ಭಾರತವೆಂದರೆ ಒಂದು ಗೌರವ ಮತ್ತು ಸ್ನೇಹದ ಮನೋಭಾವವಿದೆ; ಹಳೆಯ ಸ್ಮರಣೆಗಳು ಅಳಿಸಿಲ್ಲ; ತಮ್ಮನ್ನೆಲ್ಲ ಭಾರತವು ತಾಯಿಯೋಪಾದಿಯಲ್ಲಿ ಕಾಪಾಡಿದ ಕಾಲ ಒಂದಿತ್ತು, ಅದರ ಆತ್ಮಶ್ರೀಯಿಂದ ಅಮೃತಧಾರೆಯನ್ನೆರೆದು ತಮ್ಮನ್ನು ಪೋಷಿಸಿ ಪುಷ್ಟರನ್ನಾಗಿ ಬಲಶಾಲಿಗಳನ್ನಾಗಿ ಮಾಡಿದ ಕಾಲ ಒಂದಿತ್ತು ಎಂದು ಮರೆತಿಲ್ಲ. ಗ್ರೀಸ್‌ನಿಂದ ಭೂಮಧ್ಯ ಸಮುದ್ರ ಮತ್ತು ಪಶ್ಚಿಮ ಏಷ್ಯದ ರಾಜ್ಯಗಳಿಗೆ ಹೆಲೆನಿಕ್ ಸಂಸ್ಕೃತಿ ಹರಡಿದಂತೆ ಭಾರತ ಸಂಸ್ಕೃತಿಯ ಪ್ರಭಾವವೂ ಅನೇಕ ದೇಶಗಳಿಗೆ ಹರಡಿ ಶಾಶ್ವತವಾದ ಛಾಯೆಯನ್ನು ಬೀರಿತು.

"ಪರ್ಷಿಯಾದಿಂದ ಚೀನಾ ಸಮುದ್ರದವರೆಗೆ, ಹಿಮ ಆಚ್ಛಾದಿತದ ಸೈಬೀರಿಯಾ ದೇಶದಿಂದ ಜಾವಾ, ಬೋರ್ನಿಯೊ ದ್ವೀಪಗಳಿಗೆ, ಓಷಿಯೇನಿಯದಿಂದ ಸೊಕೋಟ್ರವರೆಗೆ ಭಾರತವು ತನ್ನ

ತತ್ತ್ವಗಳನ್ನು, ಇತಿಹಾಸ ಕಥೆಗಳನ್ನು ಸಂಸ್ಕೃತಿಯನ್ನು ಪಸರಿಸಿದೆ. ಅನೇಕ ಶತಮಾನ ಪರಂಪರೆಗಳ ಕಾಲದಲ್ಲಿ ಮಾನವ ಕುಲದ ಕಾಲುಭಾಗದ ಜನರ ಮೇಲೆ ತನ್ನ ಶಾಶ್ವತ ಮುದ್ರೆಯನ್ನು ಒತ್ತಿದೆ. ಅನೇಕ ಕಾಲ ನಮ್ಮ ಅಜ್ಞಾನದಿಂದ ಪ್ರಪಂಚದ ಇತಿಹಾಸದಲ್ಲಿ ನಾವು ನಿರಾಕರಿಸಿದ ಸ್ಥಾನವನ್ನು ಪುನಃ ಪಡೆಯಲು ಭಾರತಕ್ಕೆ ಸಂಪೂರ್ಣ ಅಧಿಕಾರವಿದೆ. ಮಾನವ ವ್ಯಕ್ತಿತ್ವಕ್ಕೊಂದು ರೂಪು ಕೊಟ್ಟು ಸಮದೃಷ್ಟಿಯನ್ನು ಕೊಟ್ಟ ಮಹಾಜನಾಂಗಗಳಲ್ಲಿ ತನ್ನ ಸ್ಥಾನವನ್ನು ತಾನು ಪಡೆಯಲು ಭಾರತಕ್ಕೆ ಅಧಿಕಾರವಿದೆ" ಎಂದು ಸಿಲ್ವೆನ್‌ಲೆವಿ ಹೇಳಿದ್ದಾನೆ.

## ೧೮. ಪ್ರಾಚೀನ ಭಾರತ ಕಲೆ

ಭಾರತೀಯ ಸಂಸ್ಕೃತಿ ಮತ್ತು ಕಲೆಯು ಹೊರ ದೇಶಗಳಲ್ಲಿ ಅದ್ಭುತವಾಗಿ ಪಸರಿಸಿದ್ದರಿಂದ ಈ ಕಲೆಯ ಕೆಲವು ಅತ್ಯುತ್ತಮ ಕೃತಿಗಳು ಭಾರತದ ಹೊರಗೆ ಇವೆ. ನಮ್ಮ ಅನೇಕ ಪುರಾತನ ಸ್ಮಾರಕಗಳು ಮತ್ತು ಶಿಲ್ಪಕಲಾಕೃತಿಗಳು, ಅದರಲ್ಲೂ ಮುಖ್ಯವಾಗಿ ಉತ್ತರ ಹಿಂದೂಸ್ಥಾನದಲ್ಲಿ ಕಾಲಗತಿಯಿಂದ ನಾಶವಾಗಿ ಹೋಗಿರುವುದು ಒಂದು ದುರದೃಷ್ಟ. "ಭಾರತೀಯ ಕಲೆಯನ್ನು ಭಾರತದಲ್ಲಿ ಮಾತ್ರ ನೋಡಿದರೆ ಅದರ ಅರ್ಥ ಕತೆಯನ್ನು ತಿಳಿದಂತೆ" ಎಂದು ಸರ್ ಜಾನ್ ಮಾರ್ಷಲ್ ಹೇಳುತ್ತಾರೆ. ಅದರ ಪೂರ್ಣ ಚಿತ್ರವನ್ನು ಗ್ರಹಿಸಬೇಕಾದರೆ ಬೌದ್ಧ ಮತದ ಹಿಂದೆಯೇ ಮಧ್ಯ ಏಷ್ಯ, ಚೀನಾ, ಜಪಾನ್ ರಾಜ್ಯಗಳಿಗೆ ಹೋಗಬೇಕು. ಅದು ಟಿಬೆಟ್, ಬ್ರಹ್ಮದೇಶ ಮತ್ತು ಸೈಯಾಮ್‌ಗಳಿಗೆ ಹರಡಿದಾಗ ಹೊಸರೂಪ ತಾಳಿ ಹೊಸ ಸೌಂದರ್ಯದಿಂದ ವಿಕಾಸಗೊಂಡುದನ್ನು ನೋಡಬೇಕು. ಕಾಂಬೋಡಿಯ ಮತ್ತು ಜಾವಾಗಳಲ್ಲಿ ಅದರ ಹೊಸ ಸೃಷ್ಟಿಯ ಅಸದೃಶ ಸೊಬಗನ್ನು ಎವೆಯಿಕ್ಕದೆ ಮುಗ್ಧರಾಗಿ ನೋಡಬೇಕು. ಈ ಪ್ರತಿಯೊಂದು ದೇಶದಲ್ಲೂ ಭಾರತೀಯ ಕಲೆಗೊಂದು ಹೊಸ ಜೀವಕಳೆ ಬಂದಿದೆ, ಹೊಸ ಪ್ರಾದೇಶಿಕ ಸನ್ನಿವೇಶ ದೊರೆತಿದೆ ಮತ್ತು ಅವೆರಡರ ಪ್ರಭಾವಕ್ಕೊಳಗಾಗಿ ತಾನೇ ಬೇರೊಂದು ಉಡುಗೆಯನ್ನು ತೊಟ್ಟಿದೆ.

ಭಾರತೀಯ ಕಲೆಗೂ ಭಾರತೀಯ ಧರ್ಮ ಮತ್ತು ತತ್ತ್ವ ಶಾಸ್ತ್ರಕ್ಕೂ ನಿಕಟ ಬಾಂಧವ್ಯವಿರುವುದರಿಂದ ಭಾರತೀಯ ಮನಸ್ಸನ್ನು ಸೆಳೆದಿದ್ದ ಭಾರತೀಯರ ಆದರ್ಶಗಳ ಪರಿಚಯವಿಲ್ಲದೆ ಭಾರತೀಯ ಕಲೆಯ ಸೊಬಗನ್ನು ಆಸ್ವಾದಿಸುವುದು ಕಷ್ಟ. ಸಂಗೀತದಂತೆ ಕಲೆಯಲ್ಲಿ ಸಹ ಪೌರ್ವಾತ್ಯ ಭಾವನೆಗಳಿಗೂ ಪಾಶ್ಚಿಮಾತ್ಯ ಭಾವನೆಗಳಿಗೂ ಅಜಗಜಾಂತರವಿದೆ. ಪ್ರಾಯಶಃ ಪುನರುಜ್ಜೀವನ ಕಾಲ ಮತ್ತು ಅಲ್ಲಿಂದೀಚಿನ ಕಾಲದಿಂದ ಸ್ಫೂರ್ತಿ ಪಡೆದ ಆಧುನಿಕ ಯೂರೋಪಿಯನ್ ಕಲಾವಿದರಿಗಿಂತ ಯೂರೋಪಿನ ಮಧ್ಯ ಯುಗದ ಕಲಾವಿದರಿಗೆ ಶಿಲ್ಪಶಾಸ್ತ್ರಜ್ಞರಿಗೆ ಈ ಕಲೆಯು ಅರ್ಥವಾಗುತ್ತಿದ್ದಿತೆಂದು ತೋರುತ್ತದೆ. ಯೂರೋಪಿನ ಮಹಾ ಕ್ರೈಸ್ತ ದೇವಾಲಯಗಳನ್ನು ಕಟ್ಟಿದ ಶಿಲ್ಪಕೋವಿದರಿಗೆ ಪ್ರಾಯಶಃ ಸ್ಫೂರ್ತಿಕೊಟ್ಟ ಧಾರ್ಮಿಕ ದೃಷ್ಟಿಯಂತೆ ಭಾರತೀಯ ಕಲೆಯಲ್ಲಿ ಸಹ ಒಂದು ಧಾರ್ಮಿಕ ನಿಷ್ಠೆ, ಪರಲೋಕಸಾಧನೆಯ ದೃಷ್ಟಿ ಇದೆ. ಸೌಂದರ್ಯವು ಬಾಹ್ಯವಸ್ತುಗಳಿಂದ ಬಂದುದಲ್ಲ, ಸ್ವಾನುಭವದಿಂದ ಬಂದುದು. ರೂಪದಲ್ಲಿ, ವಸ್ತುವಿನಲ್ಲಿ ಸುಂದರವಿದ್ದರೂ ಅದು ಆತ್ಮಾನುಭವದಿಂದ ಹೊರ ಹೊಮ್ಮಿದುದು. ಗ್ರೀಕರು ಸೌಂದರ್ಯಕ್ಕಾಗಿ ಸೌಂದರ್ಯೋಪಾಸಕರಾಗಿದ್ದರು. ಅದರಲ್ಲಿ ಆನಂದವನ್ನೂ, ಸತ್ಯವನ್ನೂ ಕಂಡರು. ಪ್ರಾಚೀನ ಭಾರತೀಯರು ಸಹ ಸೌಂದರ್ಯ ಪ್ರೇಮಿಗಳು. ಆದರೆ ಅವರು ಕೃತಿಯಲ್ಲಿ ಒಂದು ಆಳವಾದ ಅರ್ಥವನ್ನೂ ತಾವು ಕಂಡ ಸತ್ಯದ ಒಳನೋಟವನ್ನೂ ಇಡಲು ಪ್ರಯತ್ನಿಸಿದರು. ಅವರ ಗುರಿ ಏನು, ಆ ಭಾವನೆಗಳ ಹಿಂದಿನ ಮನೋಧರ್ಮವೇನು ಎಂದು ಅರ್ಥವಾಗದಿದ್ದರೂ ಅವರ ಉತ್ತಮ ಕಲಾಕೃತಿಗಳು ಯಾರನ್ನಾದರೂ ವಿಸ್ಮಯಗೊಳಿಸುತ್ತವೆ. ಸ್ವಲ್ಪ ಕೆಳಮಟ್ಟದ ಕೃತಿಗಳಲ್ಲಿ ಕಲಾವಿದನ ಮನಸ್ಸಿನ ಮನೋಭಾವವು ಅರ್ಥವಾಗದೆ ಆ ಕೃತಿಯ ಸೊಬಗನ್ನು ತಿಳಿಯುವುದಕ್ಕೂ ಕಷ್ಟವಾಗುತ್ತದೆ. ನಮಗೆ ಅರ್ಥವಾಗದ ವಸ್ತುವನ್ನು ನೋಡಿದರೆ ಒಂದು ವಿಧವಾದ ಅಸಮಾಧಾನವೂ ಕೋಪವೂ ಮೂಡುತ್ತದೆ. ಇದರಿಂದ

ಕಲಾವಿದನು ತನ್ನ ಕೆಲಸದ ಅರಿವಿಲ್ಲದೆ ಹತಾಶನಾಗಿದ್ದಾನೆಂಬ ಭಾವನೆ ಬರುತ್ತದೆ. ಒಂದೊಂದು ವೇಳೆ ಜುಗುಪ್ಸೆಯೇ ಹುಟ್ಟುತ್ತದೆ.

ಪಾಶ್ಚಿಮಾತ್ಯವಾಗಲಿ ಪೌರ್ವಾತ್ಯವಾಗಲಿ ಕಲೆಯ ವಿಷಯ ನನಗೆ ಏನೂ ತಿಳಿಯದು. ಮತ್ತು ಅದರ ವಿಷಯ ಮಾತನಾಡಲು ನನಗೆ ಯಾವ ಅಧಿಕಾರವೂ ಇಲ್ಲ. ಏನೂ ಅರಿಯದ ಸಾಮಾನ್ಯ ಮನುಷ್ಯನಂತೆ ನಾನು ಅದನ್ನು ನೋಡುತ್ತೇನೆ. ಯಾವುದೋ ಒಂದು ಚಿತ್ರವನ್ನು, ಶಿಲ್ಪಕಲೆಯನ್ನು ಅಥವ ಕಟ್ಟಡವನ್ನು ನೋಡಿದರೆ ನನಗೆ ಆನಂದವಾಗಬಹುದು; ಮನಸ್ಸು ಮೋಹಗೊಂಡು ವ್ಯೆರೋಮಾಂಚವಾಗಬಹುದು; ಅಲ್ಪ ಸಂತೋಷವಾಗಬಹುದು; ಏನೂ ಆನಂದವಾಗದಿರಬಹುದು; ಸುಮ್ಮನೆ ನೋಡಿಯೂ ನೋಡದಂತೆ ಮುಂದೆ ಹೋಗಬಹುದು; ಅಥವ ಮನಸ್ಸಿಗೆ ಜಿಗುಪ್ಸೆಯೂ ಹುಟ್ಟಬಹುದು. ಈ ಪರಿಣಾಮಗಳಿಗೆ ಕಾರಣವನ್ನು ನಾನು ತಿಳಿಸಲಾರೆ. ಕಲೆಯ ಯೋಗ್ಯತೆಯ ಅಥವ ಅಯೋಗ್ಯತೆಯ ವಿಷಯದಲ್ಲಿ ಯಾವ ಪ್ರೌಢ ಉಪನ್ಯಾಸವನ್ನೂ ಮಾಡಲಾರೆ. ಸಿಂಹಳ ದ್ವೀಪದಲ್ಲಿ ಅನುರಾಧಾಪುರದ ಬುದ್ಧ ವಿಗ್ರಹ ನೋಡಿ ನನ್ನ ವ್ಯೆರೋಮಾಂಚವಾಯಿತು. ಅದರ ಚಿತ್ರವೊಂದು ಸದಾ ನನ್ನ ಬಳಿ ಅನೇಕ ವರ್ಷಗಳಿಂದ ಇದೆ. ಆದರೆ ದಕ್ಷಿಣ ಭಾರತದ ಕೆಲವು ಮಹಾ ದೇವಾಲಯಗಳು ಕುಸರಿ ಕೆಲಸದ ಸೂಕ್ಷ್ಮವಿವರಗಳ ಭಾರದಿಂದ ಬಾಗಿ ನನ್ನ ಮನಸ್ಸನ್ನು ಕದಡಿ, ಒಂದು ಬಗೆಯ ಅಸಮಾಧಾನವನ್ನುಂಟು ಮಾಡಿವೆ.

ಗ್ರೀಕ್ ಸಂಪ್ರದಾಯದಲ್ಲಿಯೇ ತಜ್ಞರಾದ ಯುರೋಪಿಯನ್‌ರು ಭಾರತೀಯ ಕಲೆಯನ್ನು ಮೊದಲು ಗ್ರೀಕ್ ದೃಷ್ಟಿಯಿಂದ ನೋಡಿದರು. ಗಾಂಧಾರ ಮತ್ತು ಗಡಿನಾಡಿನ ಗ್ರೀಕ್-ಬೌದ್ಧ ಕಲೆಯನ್ನು ಮಾತ್ರ ಕಲೆಯೆಂದು ಪರಿಗಣಿಸಿದರು. ಉಳಿದುದನ್ನೆಲ್ಲ ಅದರ ಅಪಭ್ರಂಶವೆಂದೂ, ಕೀಳ್ಮಟ್ಟದ್ದೆಂದೂ ಭಾವಿಸಿದರು. ಕ್ರಮೇಣ ಒಂದು ಹೊಸ ದೃಷ್ಟಿಯು ಬಂದು ಭಾರತೀಯ ಕಲೆಯೇ ಪ್ರತ್ಯೇಕ, ಆದರಲ್ಲೂ ಜೀವಸತ್ವವಿದೆ, ಗ್ರೀಕ್-ಬುದ್ಧ ಕಲೆಗೂ ಅದಕ್ಕೂ ಯಾವ ಸಂಬಂಧವೂ ಇಲ್ಲ, ಗ್ರೀಕ್ ಬುದ್ಧ ಕಲೆಯೇ ಭಾರತೀಯ ಕಲೆಯ ಹರುಕು ಅನುಕರಣ ಎಂಬ ಅಭಿಪ್ರಾಯ ಬಂದಿತು. ಈ ಹೊಸ ಅಭಿಪ್ರಾಯವು ಇಂಗ್ಲೆಂಡ್‌ಗಿಂತ ಹೆಚ್ಚಾಗಿ ಯುರೋಪ್‌ಖಂಡದ ರಾಷ್ಟ್ರಗಳಿಂದ ಬಂದಿತು. ಭಾರತೀಯ ಕಲೆ ಮತ್ತು ಸಂಸ್ಕೃತ ಸಾಹಿತ್ಯಕ್ಕೆ ಇಂಗ್ಲೆಂಡಿಗಿಂತ ಯೂರೋಪಿನಲ್ಲಿ ಹೆಚ್ಚು ಮನ್ನಣೆ ದೊರೆತಿರುವುದು ಒಂದು ವಿಶೇಷ. ಇಂಗ್ಲೆಂಡ್ ಮತ್ತು ಇಂಡಿಯಗಳಿಗೆ ದುರದೃಷ್ಟವಶಾತ್ ಇರುವ ರಾಜಕೀಯ ಸಂಬಂಧ ಏನಾದರೂ ಈ ಮನೋಭಾವಕ್ಕೆ ಕಾರಣವೇ ಎಂದು ಎಷ್ಟೋ ಬಾರಿ ಯೋಚಿಸಿದ್ದೇನೆ, ಹಾಗೂ ಇರಬಹುದು, ಅಲ್ಲದೆ ಇತರ ಮೂಲ ವ್ಯತ್ಯಾಸಗಳು ಇದ್ದರೂ ಇರಬಹುದು. ಅನೇಕ ಇಂಗ್ಲಿಷ್ ಕಲಾವಿದರು, ವಿದ್ವಾಂಸರು, ಮತ್ತು ಇತರರು ಭಾರತೀಯರ ದೃಷ್ಟಿಯನ್ನೂ ಚೈತನ್ಯವನ್ನೂ ಅರಿತಿದ್ದಾರೆ; ಅದರ ಪ್ರಾಚೀನ ಭಂಡಾರದಿಂದ ಅಮೂಲ್ಯ ರತ್ನಗಳನ್ನು ಶೋಧಿಸಿ ತೆಗೆದು ಪ್ರಪಂಚಕ್ಕೆ ತೋರಿಸಲು ಪ್ರಯತ್ನಪಟ್ಟಿದ್ದಾರೆ. ಅವರಲ್ಲಿ ಅನೇಕರ ಸ್ನೇಹ ಮತ್ತು ಸೇವೆಗಳಿಗಾಗಿ ಇಂಡಿಯ ಚಿರಋಣಿಯಾಗಿದೆ. ಆದರೂ ಇಂಗ್ಲಿಷರಿಗೂ ಭಾರತೀಯರಿಗೂ ಮಧ್ಯೆ ಅಪಾರವಾದ ಅಂತರವಿದೆ. ನಮಗಂತೂ, ಭಾರತೀಯರಿಗೆ ಇದನ್ನು ಅರ್ಥಮಾಡಿಕೊಳ್ಳುವುದು ಸುಲಭ. ಇತ್ತೀಚೆಗೆ ನಡೆದ ಅನೇಕ ಘಟನೆಗಳು ನಮ್ಮ ಕರುಳನ್ನು ಕತ್ತರಿಸಿವೆ. ಪ್ರಾಯಶಃ ಬೇರೆ ಕಾರಣಗಳಿಂದ ಅವರಿಗೂ ಅದೇ ಬಗೆಯ ಅಭಿಪ್ರಾಯ ಹುಟ್ಟಿರಬಹುದು; ಅವರ ಅಭಿಪ್ರಾಯದಲ್ಲಿ, ತಪ್ಪು ತಮ್ಮದಲ್ಲದಿರುವಾಗ ಪ್ರಪಂಚದ ಎದುರಿನಲ್ಲಿ ತಪ್ಪೆಲ್ಲ ತಮ್ಮದೇ ಎಂದು ತೋರಿಸುತ್ತಿರುವುದರಿಂದ ಸಿಟ್ಟಿಗೆದ್ದಿರಬಹುದು. ಆದರೆ ಈ ಭಾವನೆಗೆ ರಾಜಕೀಯಕ್ಕಿಂತಲೂ ಆಳವಾದ ಕಾರಣವಿದೆ; ತನಗೆ ತಾನಾಗಿ ಆ ಭಾವನೆ ಬರುತ್ತದೆ. ಎಲ್ಲಕ್ಕೂ ಮಿಗಿಲಾಗಿ ಇಂಗ್ಲಿಷ್ ವಿದ್ವಾಂಸರಲ್ಲೇ ಅದು ಹೆಚ್ಚು ಇದೆ. ಭಾರತೀಯನೆಂದರೆ ಅವರಿಗೆ ಒಂದು ವಿಶೇಷ ಪಾಪಕೂಪದ ಪ್ರದರ್ಶನ. ಆತನ ಕೃತಿಗಳೆಲ್ಲಕ್ಕೂ ಅದೇ ಬಣ್ಣ. ಇಂಗ್ಲೆಂಡಿನ ಪ್ರಸಿದ್ಧ ಲೇಖಕನೊಬ್ಬನು—ಇಂಗ್ಲಿಷ್ ಸಂಸ್ಕೃತಿ ಅಥವ ವಿದ್ವತ್ತಿನ ಪ್ರತಿನಿಧಿಯಲ್ಲದಿದ್ದರೂ—ಈಚೆಗೆ ಬರೆದ ಗ್ರಂಥ ಒಂದರಲ್ಲಿ ಭಾರತೀಯ ಎನ್ನುವದಕ್ಕೆಲ್ಲ ಕುತ್ಸಿತ ಅಸೂಯೆ ಮತ್ತು ತಾತ್ಸಾರ ತುಂಬಿ

ತುಳುಕುತ್ತಿವೆ. ಸುಪ್ರಸಿದ್ಧನೂ ಇಂಗ್ಲೆಂಡಿನ ಪ್ರತಿನಿಧಿ ಎನ್ನಬಹುದಾದವನೂ ಆದ ಇಂಗ್ಲಿಷ್ ಗ್ರಂಥಕರ್ತ ಆಸ್ಬರ್ಟ್ ಸಿಟ್ವಿಲ್ ಸಹ ತನ್ನ 'ಎಸ್ಕೇಪ್ ವಿತ್ ಮಿ' (Escape With Me) ಎಂಬ ಗ್ರಂಥದಲ್ಲಿ "ಅನೇಕ ಮಹಾ ವೈಚಿತ್ರ್ಯಗಳಿಂದ ತುಂಬಿದ್ದರೂ ಭಾರತವೆಂದರೆ ಒಂದು ತಾತ್ಸಾರ ಭಾವನೆ ಇತ್ತು. ಹಿಂದೂ ಕಲಾಕೃತಿಗಳಲ್ಲಿ ಏನೋ ಒಂದು ಅಸಹ್ಯಕರ ಜಿಗಟುಗುಣವಿದೆ" ಎನ್ನುತ್ತಾನೆ.

ಭಾರತೀಯ ಕಲೆ ಮತ್ತು ಭಾರತದ ವಿಷಯದಲ್ಲಿ ಈ ಅಭಿಪ್ರಾಯ ಕೊಡಲು ಸಿಟ್ವಿಲ್‌ಗೆ ಪೂರ್ಣ ಅಧಿಕಾರವಿದೆ. ಅದು ನ್ಯಾಯವೂ ಇದೆ. ಪ್ರಾಯಶಃ ಅದೇ ಆತನ ಭಾವನೆಯಿರಬಹುದು. ಭಾರತದಲ್ಲಿ ಎಷ್ಟೋ ವಿಷಯಗಳನ್ನು ಕಂಡು ನನಗೂ ಅದೇ ಭಾವನೆ ಬರುತ್ತದೆ. ಆದರೆ ಇಡೀ ಭಾರತವನ್ನು ತೆಗೆದುಕೊಂಡರೆ ಆ ಭಾವನೆ ಬರುವುದಿಲ್ಲ. ಸ್ವಾಭಾವಿಕವಾಗಿ ನಾನು ಭಾರತೀಯ. ಎಷ್ಟೇ ಅಯೋಗ್ಯ ನಿದ್ದರೂ ನನ್ನನ್ನು ನಾನೇ ದ್ವೇಷಿಸುವುದು ಸುಲಭವಲ್ಲ. ಆದರೆ ಇದು ಕೇವಲ ಕಲೆಯ ಮೇಲಿನ ಅಭಿಪ್ರಾಯ ಅಥವ ಕಲಾವಿಮರ್ಶೆಯಲ್ಲ. ಒಂದು ಜನಾಂಗವನ್ನೇ ವ್ಯಕ್ತವಾಗಿಯೋ, ಅವ್ಯಕ್ತವಾಗಿಯೋ ವೈರಿ ಎಂದು ದ್ವೇಷಿಸುವ ವಿರುದ್ಧ ವೈತ್ರೀ ಮನೋಭಾವ. ನಾವು ಯಾರಿಗೆ ಕೆಡುಕು ಮಾಡಿದ್ದೇವೆಯೋ ಅವರನ್ನು ಪ್ರೀತಿಸುವುದಿಲ್ಲ, ದ್ವೇಷಿಸುತ್ತೇವೆ, ಎಂಬುದು ನಿಜವೆ?

ಭಾರತೀಯ ಕಲೆಯನ್ನು ಶ್ಲಾಘಿಸಿ ಹೊಸ ದೃಷ್ಟಿಯಿಂದ ನ್ಯಾಯವಿಮರ್ಶೆ ಮಾಡಿದವರಲ್ಲಿ ಲಾರೆನ್ಸ್ ಬಿನಿಯನ್ ಮತ್ತು ಇ.ಬಿ. ಹೆವೆಲ್ ಮುಖ್ಯರು. ಭಾರತೀಯ ಕಲೆಯ ಆದರ್ಶ ಮತ್ತು ಅದರ ಮೂಲಧ್ಯೇಯದ ವಿಷಯದಲ್ಲಿ ಹೆವೆಲ್ ವಿಶೇಷ ಆಸಕ್ತಿಯನ್ನು ವ್ಯಕ್ತಪಡಿಸಿದ್ದಾನೆ. ಒಂದು ಮಹಾ ರಾಷ್ಟ್ರದ ಕಲೆಯು ಆ ರಾಷ್ಟ್ರದ ಭಾವನೆ ಮತ್ತು ಗುಣವನ್ನು ಚಿತ್ರಿಸುತ್ತದೆ; ಆದರೆ ಅದನ್ನು ಅರ್ಥಮಾಡಿಕೊಳ್ಳುವ ಮೊದಲು, ಆ ಕಲೆಯ ಹಿಂದಿನ ಆದರ್ಶಗಳ ಪರಿಚಯ ಅವಶ್ಯಕ ಎಂದು ಸಾರುತ್ತಾನೆ. ಅಧಿಕಾರ ದರ್ಪದಿಂದ ದಾಸ್ಯದಲ್ಲಿಟ್ಟಿರುವ ಪರರಾಷ್ಟ್ರವು ಈ ಆದರ್ಶಗಳಿಗೆ ಯಾವ ಬೆಲೆಯನ್ನೂ ಕೊಡದೆ ಸದಾ ತೆಗಳಿ ಒಂದು ಮಾನಸಿಕ ದ್ವೇಷಭಾವನೆಯನ್ನು ಬೆಳೆಸುತ್ತದೆ. ಭಾರತೀಯ ಕಲೆಯು ಹುಟ್ಟಿದ್ದು ಅಲ್ಪಸಂಖ್ಯಾತ ಪಂಡಿತ ಮಂಡಲಕ್ಕಲ್ಲ. ಧರ್ಮ ಮತ್ತು ದರ್ಶನದ ಮೂಲ ತತ್ವಗಳನ್ನು ಸಾಮಾನ್ಯ ಜನರಿಗೆ ಬೋಧಿಸುವುದೇ ಅದರ ಘನ ಉದ್ದೇಶ." "ಹಿಂದೂ ಕಲೆಯು ಈ ಮಹಾ ಶಿಕ್ಷಣಧ್ಯೇಯದಲ್ಲಿ ಕೃತ ಕೃತ್ಯವಾಗಿತ್ತು ಎನ್ನುವುದು ಭಾರತೀಯ ಜೀವನದ ನಿಕಟಪರಿಚಯ ಪಡೆದವರಿಗೆಲ್ಲ ತಿಳಿದಿರಬಹುದು. ಭಾರತದ ರೈತನು ಪಾಶ್ಚಿಮಾತ್ಯದ ದೃಷ್ಟಿಯಿಂದ ಅನಕ್ಷರಸ್ಥನಾದರೂ, ಪ್ರಪಂಚದ ಯಾವ ಭಾಗದ ರೈತರಲ್ಲೂ ಇಲ್ಲದ ಶ್ರೇಷ್ಠ ಸಂಸ್ಕೃತಿಯೊಂದು ಅವನಲ್ಲಿದೆ" ಎಂದಿದ್ದಾನೆ.

ಸಂಸ್ಕೃತ ಕಾವ್ಯ ಮತ್ತು ಭಾರತೀಯ ಸಂಗೀತದಂತೆ ಭಾರತೀಯ ಕಲೆಯಲ್ಲಿ ಸಹ ಕಲಾವಿದನು ಪ್ರಕೃತಿಯ ಎಲ್ಲ ಸ್ಥಿತಿಯಲ್ಲೂ ತಾದಾತ್ಮ್ಯಹೊಂದಿ ಮನುಷ್ಯನಿಗೂ ಪ್ರಕೃತಿ ಮತ್ತು ಪ್ರಪಂಚಕ್ಕೂ ಇರುವ ಮೂಲ ಸಾಮರಸ್ಯವನ್ನು ವ್ಯಕ್ತಪಡಿಸಬೇಕೆಂಬ ಧ್ಯೇಯ ಅವನಿಗೆ ಇತ್ತು. ಇಲ್ಲಿ ಏಷ್ಯದ ಕಲೆಯ ಜೀವಾಳವೂ ಇದೇ. ವಿಶೇಷ ವೈವಿಧ್ಯ ಮತ್ತು ರಾಷ್ಟ್ರೀಯ ಭಿನ್ನತೆಗಳು ಸ್ಪಷ್ಟವಿದ್ದರೂ ಏಷ್ಯದ ಕಲೆಯಲ್ಲಿ ಮಾತ್ರ ಒಂದು ಏಕೀಭಾವವಿದೆ. ಅಜಂತ ಗುಹಾಂತರ ದೇವಾಲಯಗಳನ್ನು ಬಿಟ್ಟರೆ ಇಂಡಿಯದಲ್ಲಿ ಪುರಾತನ ಚಿತ್ರಕಲೆಯು ಹೆಚ್ಚು ಇಲ್ಲ. ಪ್ರಾಯಶಃ ಅದರ ಬಹುಭಾಗವು ನಾಶವಾಗಿದೆ. ಚೀನಾ ಮತ್ತು ಜಪಾನ್ ಚಿತ್ರಕಲೆಯಲ್ಲಿ ಪ್ರಾವೀಣ್ಯತೆ ಪಡೆದಂತೆ ಭಾರತವು ಶಿಲ್ಪಕಲೆ ಮತ್ತು ವಾಸ್ತು ಶಿಲ್ಪದಲ್ಲಿ ಮಹೋನ್ನತಿ ಪಡೆಯಿತು.

ಯುರೋಪಿನ ಸಂಗೀತಕ್ಕಿಂತ ತೀರ ಭಿನ್ನವಿರುವ ಭಾರತೀಯ ಸಂಗೀತವು ತನ್ನ ದಾರಿಯಲ್ಲಿ ಬಹಳ ಪ್ರಗತಿ ಪಡೆಯಿತು. ಸಂಗೀತದಲ್ಲಿ ಭಾರತವು ಮುಂದಾಳುತನವಹಿಸಿ ಚೀನ ಮತ್ತು ದೂರ ಪೂರ್ವ ದೇಶಗಳ ಹೊರತು ಇತರ ಏಷ್ಯದ ಎಲ್ಲ ರಾಷ್ಟ್ರಗಳ ಮೇಲೂ ತನ್ನ ಪ್ರತಿಭೆಯನ್ನು ಬೀರಿತು. ಪರ್ಷಿಯ, ಅಫ್ಘಾನಿಸ್ಥಾನ, ಅರೇಬಿಯ, ತುರ್ಕಿಸ್ಥಾನ ಮತ್ತು ಅರಬ್ಬಿ ನಾಗರಿಕತೆಗಳು ಹಬ್ಬಿದ ಇತರ ರಾಷ್ಟ್ರಗಳಲ್ಲಿ ಸಹ—ಉದಾಹರಣೆಗಾಗಿ ಉತ್ತರ ಆಫ್ರಿಕ—ಸಂಗೀತವು ಒಂದು ಸ್ನೇಹಸಾಧನ

ವಾಯಿತು. ಪ್ರಾಯಶಃ ಈ ಎಲ್ಲ ರಾಷ್ಟ್ರಗಳಲ್ಲಿ ಭಾರತದ ಶಾಸ್ತ್ರೀಯ ಸಂಗೀತಕ್ಕೆ ಮನ್ನಣೆ ಇದೆ.

ಭಾರತದಲ್ಲಿ ಕಲೆಯ ಬೆಳೆವಣಿಗೆಗೆ ಮುಖ್ಯ ಪರಿಣಾಮಕಾರಿಯಾಗಿದ್ದುದು ಕಡೆದ ವಿಗ್ರಹಗಳ ಮೇಲಿನ ಧಾರ್ಮಿಕ ವಿರೋಧ. ವೇದಗಳು ವಿಗ್ರಹ ಸೂಚನೆಯನ್ನು ನಿಷೇಧಿಸಿದ್ದವು. ಬೌದ್ಧ ಧರ್ಮ ಪ್ರಚಾರವಾದ ಬಹು ಕಾಲದ ನಂತರ ವಿಗ್ರಹಶಿಲೆಯಲ್ಲಿ ವರ್ಣಚಿತ್ರದಲ್ಲಿ ಬುದ್ಧನು ಬಂದದ್ದು. ಮಥುರೆಯ ಪ್ರದರ್ಶನ ಶಾಲೆಯಲ್ಲಿ ಆಜಾನುಬಾಹುವೂ, ತೇಜಸ್ವಿಯೂ ಆದ ಬೋಧಿಸತ್ವನ ದೊಡ್ಡ ಶಿಲಾವಿಗ್ರಹ ಒಂದಿದೆ. ಇದು ಕ್ರಿಸ್ತಾಬ್ಧಿಯ ಆರಂಭದ ಕುಶಾನರ ಕಾಲದ್ದು.

ಭಾರತೀಯ ಕಲೆಯ ಆರಂಭ ದೆಸೆಯಲ್ಲಿ ಪ್ರಾಯಶಃ ಚೀನೀಯರ ಪ್ರಭಾವದಿಂದ ಪೂರ್ಣ ನೈಸರ್ಗಿಕತೆ ಇದೆ. ಭಾರತೀಯ ಆದರ್ಶ ಭಾವನೆಯು ಚೀನಾ ಜಪಾನ್‌ಗಳಿಗೆ ಹೋಗಿ ಆ ದೇಶಗಳ ಮಹಾಯುಗಗಳಲ್ಲಿ ಅದ್ಭುತ ಪ್ರಭಾವವನ್ನು ಬೀರಿದಂತೆ, ಭಾರತೀಯ ಕಲೆಯ ಇತಿಹಾಸದ ಬೇರೆ ಬೇರೆ ಕಾಲಗಳಲ್ಲಿ ಸಹ ಚೀನಾ ಕಲೆಯ ಪ್ರಭಾವವನ್ನು ಮುಖ್ಯವಾಗಿ ಈ ನೈಸರ್ಗಿಕ ಭಾವನೆಯಲ್ಲಿ ಕಾಣಬಹುದು.

ಭಾರತದ ಸ್ವರ್ಣಯುಗವೆಂದು ಖ್ಯಾತಿ ಹೊಂದಿದ ಕ್ರಿಸ್ತಶಕ ನಾಲ್ಕನೆಯ ಶತಮಾನದಿಂದ ಆರನೆಯ ಶತಮಾನದವರೆಗೆ ಗುಪ್ತರ ಕಾಲದಲ್ಲಿ ಅಜಂತ ಗುಹೆಗಳ ನಿರ್ಮಾಣವಾಗಿ ವರ್ಣಚಿತ್ರಗಳು ಬರೆಯಲ್ಪಟ್ಟವು. ಬಾಗ್ ಮತ್ತು ಬದಾಮಿ ದೇವಾಲಯಗಳು ಅದೇ ಕಾಲದವುಗಳು. ಅಜಂತ ಚಿತ್ರಗಳು ಸುಂದರವಿರುವುವಲ್ಲದೆ ಅವುಗಳ ಸಂಶೋಧನೆಯಿಂದೀಚೆಗೆ ಆಧುನಿಕ ಕಲಾವಿದರ ಮೇಲೆ ವಿಶೇಷ ಪರಿಣಾಮವನ್ನುಂಟುಮಾಡಿದೆ. ಅವರು ಅಜಂತಕಲೆಯನ್ನೇ ಅನುಸರಿಸಿ ಹೋಗಿ ಇಂದಿನ ಜೀವನದಿಂದ ದೂರರಾಗಿ ದುಷ್ಪರಿಣಾಮ ಮಾಡಿದಾರೆ.

ಅಜಂತ ನಮ್ಮನ್ನು ಯಾವುದೋ ಒಂದು ಕನಸಿನ ರಾಜ್ಯಕ್ಕೆ ಕರೆದೊಯ್ಯುತ್ತದೆ. ಆದರೂ ಅದು ಸತ್ಯ ಪ್ರಪಂಚ. ಅದನ್ನು ಚಿತ್ರಿಸಿದವರು ಬುದ್ಧ ಸಂನ್ಯಾಸಿಗಳು. ಸ್ತ್ರೀಯರಿಂದ ದೂರ ಇರು, ಕಣ್ಣೆತ್ತಿ ನೋಡಬೇಡ, ಅದರಿಂದ ಅಪಾಯವಿದೆ ಎಂದು ಅನೇಕ ವರ್ಷಗಳ ಹಿಂದೆ ಅವರ ಗುರುವು ಉಪದೇಶ ಮಾಡಿದ್ದನು. ಆದರೂ ಅಲ್ಲಿ ಅನೇಕ ಸ್ತ್ರೀಯರಿದ್ದಾರೆ—ಸುಂದರಿಯರು, ರಾಜಕುವರಿಯರು, ಗಾಯಕಿಯರು, ನರ್ತಕಿಯರು, ಕುಳಿತವರು, ನಿಂತವರು, ಅಲಂಕರಿಸಿಕೊಳ್ಳುತ್ತಿರುವವರು, ಮೆರವಣಿಗೆ ಹೋಗುತ್ತಿರುವವರು; ಈ ಚಿತ್ರ ಚತುರ ಸಂನ್ಯಾಸಿಗಳು ಪ್ರಪಂಚವನ್ನು, ಜೀವನ ನಾಟಕದ ಚಲನಚಿತ್ರವನ್ನು, ಶಾಂತಮೂರ್ತಿ, ಪರಲೋಕದ ಅಧಿದೇವತೆ ಬೋಧಿಸತ್ವನನ್ನು ಚಿತ್ರಿಸಿದಂತೆ ಎಷ್ಟು ಸುಂದರವಾಗಿ ಚಿತ್ರಿಸಿದ್ದಾರೆ!

ಏಳು ಮತ್ತು ಎಂಟನೆಯ ಶತಮಾನಗಳಲ್ಲಿ ಮಧ್ಯೆ ಕೈಲಾಸ ದೇವಾಲಯ ಉಳ್ಳ ಎಲ್ಲೋರ ಗುಹೆಯ ಮಹಾದೇವಾಲಯಗಳನ್ನು ಒಂದೇ ಬಂಡೆಯಿಂದ ಕಡೆದರು. ಆ ಮಹಾ ವ್ಯಕ್ತಿಗಳು ಇದನ್ನು ಹೇಗೆ ಊಹಿಸಿದರು, ಊಹಿಸಿ ಹೇಗೆ ಅದಕ್ಕೊಂದು ರೂಪಕೊಟ್ಟರು ಎಂದು ಕಲ್ಪನೆ ಮಾಡುವುದು ಸಹ ಕಷ್ಟ. ಅಮೋಘವೂ ಗಹನವೂ ಇರುವ ತ್ರಿಮೂರ್ತಿಯ ಎಲಿಫೆಂಟಾ ಗುಹೆಗಳು ಸಹ ಅದೇ ಕಾಲದವು. ದಕ್ಷಿಣ ಭಾರತದ ಮಾಮಲ್ಲಪುರದ ಸ್ಮಾರಕಗಳ ಕಾಲವೂ ಅದೇ.

ಎಲಿಫೆಂಟ ಗುಹೆಗಳಲ್ಲಿ ತಾಂಡವ ನೃತ್ಯದ ಶಿವನ ವಿಗ್ರಹ ಒಂದಿದೆ. ಭಿನ್ನವಾಗಿದ್ದರೂ ಅದೊಂದು ಅದ್ಭುತ ಕಲ್ಪನೆ. ವಿರಾಟ್‌ಶಕ್ತಿಯ ಮೂರ್ತಿಸ್ವರೂಪ ಎಂದು ಹೆವೆಲ್ ಹೇಳುತ್ತಾನೆ. "ಆ ಮಹಾ ನೃತ್ಯದ ಲಯಬದ್ಧ ತಾನದೊಂದಿಗೆ ಆ ಬಂಡೆಯೇ ಕಂಪಿಸುವಂತೆ ಕಂಡರೂ ಮುಖದಲ್ಲಿ ಮಾತ್ರ ನಿಶ್ಚಲ ಶಾಂತಿ ಮತ್ತು ಸ್ಥಿತಪ್ರಜ್ಞ ದೃಷ್ಟಿ" ಎಂದಿದಾನೆ.

ಬ್ರಿಟಿಷ್ ಪ್ರದರ್ಶನಾಲಯದಲ್ಲಿ ಇನ್ನೊಂದು ನಟರಾಜ ಶಿವನ ವಿಗ್ರಹವಿದೆ. ಅದನ್ನು ನೋಡಿ "ಪ್ರಪಂಚಗಳನ್ನು ಸೃಜಿಸುತ್ತ, ಲಯಮಾಡುತ್ತ ಶಿವನು ನಾಟ್ಯವಾಡುತ್ತಾನೆ. ಆತನ ಮಹಾಲಯದಿಂದ ಯುಗಯುಗಗಳೇಳುತ್ತವೆ. ಆತನ ಗತಿಯಲ್ಲೊಂದು ಕಠೋರವಾದ ಮಂತ್ರಮೋಹಕ ಶಕ್ತಿ ಇದೆ. ಪ್ರೇಮದಲ್ಲಿ ಸಾವನ್ನು ನೋಡುವ ಧ್ಯೇಯಕ್ಕೆ ಬ್ರಿಟಿಷ್ ಪ್ರದರ್ಶನಾಲಯದ ಈ ಅಲ್ಪ ಸಂಗ್ರ

ಹವು ಒಂದು ದೊಡ್ಡ ಅಪಮಾನ. ಮಾನವನ ಭೋಗ ಜೀವನದಲ್ಲಿ ನಾಶದ ಬೀಜವಿದೆ ಎನ್ನುವ ಮಹಾ ಕಲ್ಪನೆಗೆ ಈ ಕೃತಿಯು ಒಂದು ಮೂರ್ತಸ್ವರೂಪ. ಯಾವ ಲಾಕ್ಷಣಿಕ ಆಡಂಬರವೂ ಇಲ್ಲದೆ, ಮುಖ್ಯ ಸಾಧನವನ್ನು ಮಾತ್ರ ದೃಷ್ಟಿಯಲ್ಲಿಟ್ಟು, ಸ್ವಾಭಾವಿಕ ಸುನಮ್ಯತೆಯುಳ್ಳ ಈ ಘನವಾದ ಕೃತಿಗಳೊಂದಿಗೆ ನಮ್ಮ ಯುರೋಪಿಯನ್ ರೂಪಕಗಳು ನಿಸ್ಸಾರ, ಅರ್ಥಶೂನ್ಯ ಕೃತಿಗಳು" ಎಂದು ಎಪ್‌ಸ್ಟೀನ್ ಬರೆದಿರುತ್ತಾನೆ.

ಜಾವಾ ಪರ್ಯಾಯ ದ್ವೀಪದ ಬೋರೊಬುದೂರಿನ ಬೋಧಿಸ್ತ್ವನ ಒಂದು ಶಿರಸ್ಸನ್ನು ಕೋಪನ್ ಹೇಗನ್‌ನ ಗ್ಲಿಪ್ಟೊಟೆಕ್‌ನಲ್ಲಿ ಇಟ್ಟಿರುತ್ತಾರೆ. ಬಾಹ್ಯ ಸೌಂದರ್ಯವನ್ನು ನೋಡಿದರೆ ಸುಂದರವಿದೆ; ಆದರೆ ಹೆವೆಲ್ ಹೇಳುವಂತೆ "ಬೋಧಿಸ್ತ್ವನ ಶುದ್ಧಾತ್ಮವನ್ನು ಪ್ರತಿಬಿಂಬಿಸುವ ಕನ್ನಡಿಯಂತೆ ಒಂದು ಗಾಢವಾದ ಅರ್ಥವು ಅದರಲ್ಲಿದೆ." ಆ ಮುಖದಲ್ಲಿ ಆಳವನ್ನರಿಯದ ಸುನೀಲಸಾಗರನ ಪ್ರಶಾಂತ ಮುದ್ರೆ ಇದೆ, ಶುಭ್ರನಭೋಮಂಡಲದ ನೀಲಿಮತೆಯ ಗಾಂಭೀರ್ಯವಿದೆ, ಮಾನವ ಮನಸ್ಸಿಗೆ ನಿಲುಕದ ದಿವ್ಯಾನಂದವಿದೆ." ಎಂದಿದ್ದಾನೆ.

ಭರತಖಂಡದ ಕಲೆಯಲ್ಲಿ ಕಾಣದ ಒಂದು ವೈಶಿಷ್ಟ್ಯವು ಜಾವಾದ ಭಾರತೀಯ ಕಲೆಯಲ್ಲಿ ಇದೆ. ಎರಡರಲ್ಲೂ ಅಗಾಧ ಗಾಂಭೀರ್ಯ ಮುದ್ರೆ ಇದೆ. ಆದರೆ ಎಲಿಫೆಂಟಾ ಮತ್ತು ಮಾಮಲ್ಲಪುರದ ಹಿಂದೂ ದೇವಾಲಯಗಳಲ್ಲಿನ ವಿರಕ್ತ ಭಾವನೆ ಜಾವಾದ ದೈವಿಕ ಆದರ್ಶದಲ್ಲಿ ಇಲ್ಲ. ಇಂಡೋ–ಜಾವಾ ಕಲೆಯಲ್ಲಿ ಹೆಚ್ಚು ಮಾನವ ಸೌಖ್ಯ ಮತ್ತು ಸಂತೋಷದ ಛಾಯೆ ಇವೆ. ಭರತಖಂಡದಲ್ಲಿ ತಮ್ಮ ಪೂರ್ವಿಕರು ಅನೇಕ ಶತಮಾನಗಳ ಕಾಲ ಕಷ್ಟ ಪರಂಪರೆಗಳನ್ನು ಅನುಭವಿಸಿದನಂತರ ಭಾರತೀಯ ವಲಸೆಗಾರರು ಈ ದ್ವೀಪಗಳಲ್ಲಿ ತಮ್ಮ ಸೌಖ್ಯದ ಬೀಡನ್ನು ಕಟ್ಟಿದರು. ಆ ಸುಖ ಮತ್ತು ಶಾಂತ ಜೀವನಕ್ಕೆ ಈ ಕಲೆಯು ಒಂದು ರೂಪುಕೊಟ್ಟಿದೆ.

## ೧೯. ಇಂಡಿಯದ ವಿದೇಶ ವ್ಯಾಪಾರ

ಕ್ರಿಸ್ತಶಕೆಯ ಮೊದಲನೆ ಹತ್ತು ಶತಮಾನಗಳಲ್ಲಿ ಭಾರತದ ಹೊರವ್ಯಾಪಾರವು ಅಪಾರವಾಗಿತ್ತು. ಭಾರತೀಯ ವರ್ತಕರು ಅನೇಕರು ಅನೇಕದೇಶ ವಿದೇಶಗಳ ವ್ಯಾಪಾರವನ್ನು ತಮ್ಮ ಹಿಡಿತದಲ್ಲಿ ಇಟ್ಟುಕೊಂಡಿದ್ದರು. ಪೂರ್ವತೀರಗಳ ಸಮುದ್ರಗಳಲ್ಲೆಲ್ಲ ವ್ಯಾಪಿಸಿ, ಭೂಮಧ್ಯ ಸಮುದ್ರದವರೆಗೂ ಈ ವ್ಯಾಪಾರ ಹಬ್ಬಿತ್ತು. ಭಾರತೀಯ ಮತ್ತು ಚೀನಾ ನೌಕೆಗಳಲ್ಲಿ ಇಂಡಿಯದಿಂದ ಅಥವ ಇಂಡಿಯದ ಮೂಲಕ ಮೆಣಸು ಮತ್ತು ಇತರ ಸಾಂಬಾರ ವಸ್ತುಗಳು ಪಶ್ಚಿಮದೇಶಗಳಿಗೆ ಹೋಗುತ್ತಿದ್ದವು. ಗಾತ್‌ದೇಶದ ಅಲಾರಿಕ್‌ನು ರೋಮ್ ನಗರದಿಂದ ಮೂರುಸಾವಿರ ಪೌಂಡು ಮೆಣಸನ್ನು ತೆಗೆದುಕೊಂಡು ಹೋದನಂತೆ. ಅನೇಕ ಭೋಗ್ಯವಸ್ತುಗಳಿಗಾಗಿ ರೋಮಿನಿಂದ ಇಂಡಿಯ ಮತ್ತು ಪೂರ್ವದೇಶಗಳಿಗೆ ಹೊನ್ನಿನ ಹೊಳೆ ಹರಿಯುತ್ತಿದೆ ಎಂದು ರೋಮನ್ ಲೇಖಕರು ವ್ಯಸನಪಡುತ್ತಿದ್ದರಂತೆ.

ಇತರ ಕಡೆಗಳಂತೆ ಇಂಡಿಯದಲ್ಲಿ ಸಹ ಆಗಿನಕಾಲದಲ್ಲಿ ಈ ವ್ಯಾಪಾರವು ಸ್ಥಳದಲ್ಲಿ ದೊರಕುವ ಮತ್ತು ತಯಾರಿಸುವ ವಸ್ತುಗಳನ್ನು ಅದಲು ಬದಲು ಮಾಡುವ ವಿನಿಮಯ ಪದ್ಧತಿಯಲ್ಲಿ ನಡೆಯುತ್ತಿತ್ತು. ಭಾರತವು ಬಹು ಫಲವತ್ತಾದ ದೇಶ; ಇತರ ದೇಶದಲ್ಲಿ ದೊರೆಯದ ಎಷ್ಟೋ ವಸ್ತುಗಳು ಇಲ್ಲಿ ದೊರೆಯುತ್ತಿದ್ದವು. ಸಮುದ್ರ ಮಾರ್ಗಗಳೆಲ್ಲ ಭಾರತದ ಅಧೀನವಿದ್ದುದರಿಂದ ಆ ಸಾಮಾನುಗಳೆಲ್ಲ ಭಾರತದಿಂದ ಹೊರದೇಶಗಳಿಗೆ ಹೋಗುತ್ತಿದ್ದವು. ಆ ವಸ್ತುಗಳನ್ನು ಪೂರ್ವ ದ್ವೀಪಗಳಿಂದ ತಂದು ಸಟ್ಟಾ ವ್ಯಾಪಾರಮಾಡಿ ಭಾರತೀಯ ವರ್ತಕರು ಲಾಭ ಪಡೆಯುತ್ತಿದ್ದರು. ಅಲ್ಲದೆ ಇನ್ನೂ ಕೆಲವು ಅನುಕೂಲಗಳಿದ್ದವು. ಇತರ ದೇಶಗಳು ಆರಂಭಿಸುವ ಮುಂಚೆ ಅನೇಕ ಶತಮಾನಗಳ ಹಿಂದಿನಿಂದ ಭಾರತದಲ್ಲಿ ಬಟ್ಟೆಯು ತಯಾರಾಗುತ್ತಿದ್ದಿತು. ಬಟ್ಟೆಕೈಗಾರಿಕೆ ಪ್ರಮುಖ ಉದ್ಯಮವಾಗಿತ್ತು. ಇಂಡಿಯದಿಂದ ಬಟ್ಟೆಯು ಬಹುದೂರದ ದೇಶಗಳಿಗೆ ಹೋಗುತ್ತಿತ್ತು. ಕ್ರಿಸ್ತಪೂರ್ವದ ಶತಮಾನದಿಂದ ಇಂಡಿಯಾದೇಶಕ್ಕೆ ಬರುತ್ತಿದ್ದ ಚೀನಾ ರೇಷ್ಮೆಯುಷ್ಟು ನಯವಿರದಿದ್ದರೂ, ಬಹು

ಹಿಂದಿನಿಂದ ಇಂಡಿಯದಲ್ಲಿ ರೇಷ್ಮೆಯು ಸಹ ತಯಾರಾಗುತ್ತಿತ್ತು. ಭಾರತದ ರೇಷ್ಮೆ ಕೈಗಾರಿಕೆಯು ಆಮೇಲೆ ಅಭಿವೃದ್ಧಿಗೆ ಬಂದರೂ ಬಹಳ ಮುಂದುವರಿದಂತೆ ತೋರುವುದಿಲ್ಲ. ಬಟ್ಟೆಗೆ ಬಣ್ಣ ಹಾಕುವ ಕಲೆಯು ಬಹಳ ಮುಂದುವರಿದಿತ್ತು; ಗಟ್ಟಿ ಬಣ್ಣಗಳನ್ನು ಮಾಡಲು ಹೊಸ ಹೊಸ ವಿಧಾನಗಳನ್ನು ಕಂಡುಹಿಡಿದರು. ಇದರಲ್ಲಿ ನೀಲಿಯು ಒಂದು. 'ಇಂಡಿಗೊ' ಎಂದು ಗ್ರೀಕರು ಹೇಳುವದಕ್ಕೆ ಕಾರಣ ಅದು ಇಂಡಿಯದಿಂದ ಬಂದದ್ದರಿಂದ. ಈ ಬಣ್ಣ ಹಾಕುವ ಕಲೆಯೇ ಪ್ರಾಯಶಃ ಭಾರತದ ವಿದೇಶ ವ್ಯಾಪಾರದ ಅಭ್ಯುದಯಕ್ಕೆ ಮುಖ್ಯ ಕಾರಣವಾಯಿತು.

ಕ್ರಿಸ್ತಶಕೆಯ ಆರಂಭದ ಶತಮಾನಗಳಲ್ಲಿ ಭಾರತದಲ್ಲಿ ರಸಾಯನ ಶಾಸ್ತ್ರವು ಇತರ ಎಲ್ಲ ದೇಶಗಳಿಗಿಂತ ಹೆಚ್ಚು ಮುಂದುವರಿದಿತ್ತು. ಆ ವಿಷಯವು ಹೆಚ್ಚು ನನಗೆ ತಿಳಿಯದು. ಆದರೆ ಭಾರತೀಯ ರಸಾಯನ ಶಾಸ್ತ್ರಜ್ಞರಲ್ಲಿ ಗಣ್ಯರು ಮತ್ತು ಅನೇಕ ವರ್ಷಗಳಿಂದ ಅನೇಕ ಭಾರತೀಯ ವಿಜ್ಞಾನಿಗಳನ್ನು ತಯಾರು ಮಾಡಿದವರೂ ಆದ ಆಚಾರ್ಯ ಸರ್ ಪ್ರಫುಲ್ಲಚಂದ್ರರಾಯ್ ಅವರು ಹಿಂದೂ ರಸಾಯನ ಶಾಸ್ತ್ರದ ಇತಿಹಾಸ ಎಂಬ ಗ್ರಂಥವನ್ನು ಬರೆದಿದ್ದಾರೆ. ಆಗ ರಸಾಯನ ಶಾಸ್ತ್ರವೆಂದರೆ ರಸ ವಿಜ್ಞಾನ ಮತ್ತು ಲೋಹ ವಿಜ್ಞಾನವಾಗಿತ್ತು. ಆಗಿನ ಪ್ರಸಿದ್ಧ ಭಾರತೀಯ ರಾಸಾಯನಿಕ ಮತ್ತು ಲೋಹವಿಜ್ಞಾನಿ ಎಂದರೆ ನಾಗಾರ್ಜುನನ ಹೆಸರು ಒಂದೇ ಇರುವುದರಿಂದ ಕ್ರಿಸ್ತಶಕ ಒಂದನೆಯ ಶತಮಾನದ ತತ್ತ್ವಶಾಸ್ತ್ರಜ್ಞನಾದ ನಾಗಾರ್ಜುನನೇ ಈತನಿರಬೇಕೆಂದು ಕೆಲವರ ಊಹೆ. ಆದರೆ ಅದು ಸರಿ ಎಂದು ತೋರುವುದಿಲ್ಲ.

ಉಕ್ಕಿಗೆ ಕಾವು ಕೊಡುವ ಹದವು ಭಾರತೀಯರಿಗೆ ಬಹು ದಿನಗಳಿಂದ ತಿಳಿದಿತ್ತು. ಭಾರತದ ಉಕ್ಕು ಮತ್ತು ಕಬ್ಬಿಣಕ್ಕೆ, ಅದರಲ್ಲೂ ಮುಖ್ಯವಾಗಿ ಯುದ್ಧ ಶಸ್ತ್ರಾಸ್ತ್ರಗಳ ತಯಾರಿಯಲ್ಲಿ ಬಹಳ ಬೆಲೆಯಿತ್ತು. ಇನ್ನೂ ಅನೇಕ ಲೋಹಗಳ ಪರಿಚಯವು ಅವರಿಗೆ ಇತ್ತು. ವೈದ್ಯ ವಿದ್ಯೆಯಲ್ಲಿ ಅನೇಕ ಲೋಹ ಭಸ್ಮಗಳನ್ನು ಮಾಡುವುದನ್ನು ತಿಳಿದಿದ್ದರು. ಭಟ್ಟಿ ಇಳಿಸುವುದೂ, ಭಸ್ಮ ಮಾಡುವುದೂ ಗೊತ್ತಿತ್ತು. ವೈದ್ಯ ವಿದ್ಯೆಯು ಚೆನ್ನಾಗಿ ಅಭಿವೃದ್ಧಿಯಾಗಿತ್ತು. ಹಳೆಯ ಗ್ರಂಥಗಳ ಆಧಾರದ ಮೇಲೆಯೇ ಆದರೂ ಮಧ್ಯ ಯುಗದವರೆಗೂ ಪ್ರಯೋಗ ವಿಜ್ಞಾನವು ವಿಶೇಷ ಮುಂದುವರಿದಿತ್ತು. ಅವಯವ ವಿಚ್ಛೇದನ ಶಾಸ್ತ್ರವನ್ನೂ ಮತ್ತು ಶರೀರ ಲಕ್ಷಣ ಶಾಸ್ತ್ರವನ್ನೂ ಅಭ್ಯಾಸ ಮಾಡುತ್ತಿದ್ದರು. ಹಾರ್ವೆಗಿಂತ ಮುಂಚೆಯೇ ರಕ್ತಚಲನೆಯು ನಡೆಯುತ್ತದೆ ಎಂದು ಹೇಳಿದ್ದರು.

ಅತಿ ಪ್ರಾಚೀನ ವಿಜ್ಞಾನ ಶಾಸ್ತ್ರವಾದ ಖಗೋಳ ಶಾಸ್ತ್ರವು ವಿಶ್ವವಿದ್ಯಾನಿಲಯದ ಶಿಕ್ಷಣ ಕ್ರಮದಲ್ಲಿ ನಿತ್ಯ ಪಾಠದ ಒಂದು ಅಂಗವಾಗಿತ್ತು. ಅದರ ಜೊತೆಯಲ್ಲೇ ಜ್ಯೋತಿಷ್ಯವನ್ನೂ ಕಲಿಸುತ್ತಿದ್ದರು. ಬಹಳ ನಿಕರವಾಗಿ ಪಂಚಾಂಗವನ್ನು ಬರೆಯುತ್ತಿದ್ದರು. ಅದೇ ಪಂಚಾಂಗ ಪದ್ಧತಿ ಈಗಲೂ ಜನರ ಅನುಷ್ಠಾನದಲ್ಲಿದೆ: ಸೂರ್ಯಸಿದ್ಧಾಂತವಾದರೂ ಚಂದ್ರಮಾನದ ತಿಂಗಳುಗಳು. ಆದ್ದರಿಂದ ಆಗಾಗ ಸರಿತೂಗಿಸಬೇಕಾಗುತ್ತದೆ. ಇತರ ಎಲ್ಲ ಕಡೆಗಳಂತೆ ಪುರೋಹಿತರು ಅಥವ ಬ್ರಾಹ್ಮಣರೇ ಈ ಪಂಚಾಂಗವನ್ನು ಬರೆಯುವವರು. ಕಾಲ ಕಾಲಕ್ಕೆ ಬರುವ ಹಬ್ಬದ ದಿನಗಳನ್ನೂ ಸೂರ್ಯಚಂದ್ರ ಗ್ರಹಣ ದಿನಗಳ್ನೂ ನಿರ್ದಿಷ್ಟ ಮಾಡುತ್ತಿದ್ದರು. ಈ ಗ್ರಹಣದಿನಗಳನ್ನೂ ಹಬ್ಬಗಳಂತೆ ಆಚರಿಸುತ್ತಿದ್ದರು. ಈ ಜ್ಞಾನಬಲದಿಂದ ಜನರಲ್ಲಿ ಮೂಢಭಾವನೆಗಳನ್ನು ಬೆಳೆಸಿ ವ್ರತಗಳನ್ನು ಏರ್ಪಡಿಸಿ ತಮ್ಮ ಪ್ರತಿಷ್ಠೆಯನ್ನು ಹೆಚ್ಚಿಸಿಕೊಂಡರು. ಸಮುದ್ರಯಾನ ಮಾಡುವವರಿಗೆ ಖಗೋಳಶಾಸ್ತ್ರ ಜ್ಞಾನವು ತುಂಬ ಉಪಯುಕ್ತವಿತ್ತು. ಖಗೋಳಜ್ಞಾನದಲ್ಲಿ ತಮಗಿದ್ದ ಪಾಂಡಿತ್ಯ ಪ್ರೌಢಿಮೆ ಕುರಿತು ಭಾರತೀಯರು ಬಹಳ ಹೆಮ್ಮೆ ಪಡುತ್ತಿದ್ದರು. ಬಹುಮಟ್ಟಿಗೆ ಅಲೆಕ್ಸಾಂಡ್ರಿಯ ಖಗೋಳಶಾಸ್ತ್ರವನ್ನವಲಂಬಿಸಿದ್ದು ಅರಬ್ಬಿ ಖಗೋಳಶಾಸ್ತ್ರವು ಸಹ ಭಾರತೀಯರಿಗೆ ಪರಿಚಯವಿತ್ತು.

ಆಗ ಯಂತ್ರ ಸಲಕರಣೆಗಳು ಎಷ್ಟರಮಟ್ಟಿಗೆ ಮುಂದುವರಿದು ಇದ್ದವು ಎಂದು ಹೇಳುವುದು ಬಹುಕಷ್ಟ. ಆದರೆ ಹಡಗುಗಳ ನಿರ್ಮಾಣ ಕಾರ್ಯವು ಪ್ರೌಢವಾಗಿ ಬೆಳೆದು ಒಂದು ದೊಡ್ಡ ಉದ್ಯಮವಾಗಿತ್ತು. ಮುಖ್ಯವಾಗಿ ಯುದ್ಧದಲ್ಲಿ ಉಪಯೋಗಿಸಲು ಅನೇಕ ಬಗೆಯ ಯಂತ್ರಗಳಿದ್ದವೆಂದು

ಹೇಳಿದೆ. ಭಾರತೀಯರಲ್ಲಿ ಕೆಲವು ಉತ್ಸಾಹಿಗಳು, ಎಲ್ಲ ಬಗೆಯ ಜಟಿಲಯಂತ್ರಗಳಿದ್ದವೆಂದು ಊಹಿಸುತ್ತಾರೆ. ಯಂತ್ರೋಪಕರಣಗಳ ನಿರ್ಮಾಣದಲ್ಲಿ ಮತ್ತು ಉಪಯೋಗದಲ್ಲಿ, ರಸಾಯನಶಾಸ್ತ್ರ ಮತ್ತು ಲೋಹ ವಿಜ್ಞಾನಶಾಸ್ತ್ರದಲ್ಲಿ ಆಗಿನ ಕಾಲದ ಯಾವ ದೇಶಕ್ಕೂ ಭಾರತವು ಹಿಂದೆ ಬಿದ್ದಿರಲಿಲ್ಲವೆಂದು ಮಾತ್ರ ಹೇಳಬಹುದು. ವ್ಯಾಪಾರದಲ್ಲಿ ಒಂದು ವಿಶೇಷ ಸೌಲಭ್ಯವನ್ನು ಕಲ್ಪಿಸಿಕೊಟ್ಟು ಅನೇಕ ಶತಮಾನಗಳ ಕಾಲ ವಿದೇಶದ ಪೇಟೆಗಳ ಹತೋಟಿಯನ್ನೆಲ್ಲ ತನ್ನ ಕೈಲಿಟ್ಟುಕೊಳ್ಳಲು ಈ ಜ್ಞಾನವೇ ಮುಖ್ಯ ಕಾರಣ.

ಪ್ರಾಯಶಃ ಇನ್ನೊಂದು ಅನುಕೂಲತೆಯು ಇತ್ತೆಂದು ತೋರುತ್ತದೆ. ಗ್ರೀಕ್ ಮತ್ತು ಇತರ ನಾಗರಿಕತೆಗಳಿಗೆ ಒಂದು ತೊಡಕಾಗಿ ಅವುಗಳ ಅಭಿವೃದ್ಧಿಗೆ ಅಡ್ಡ ಬಂದ ದಾಸ್ಯ ಪದ್ಧತಿಯು ಭಾರತೀಯರಲ್ಲಿ ಇರಲಿಲ್ಲ. ಅನೇಕ ದುಷ್ಟ ಸಂಪ್ರದಾಯಗಳಿದ್ದು ಕ್ರಮೇಣ ಅವು ಹೆಚ್ಚಾಗಿದ್ದರೂ ಜಾತಿ ಪದ್ಧತಿಯಲ್ಲಿನ ಕನಿಷ್ಠ ಜಾತಿಯವನ ಜೀವನವು ಸಹ ಗುಲಾಮ ಜೀವನಕ್ಕಿಂತ ಉತ್ತಮವಿತ್ತು. ಪ್ರತಿಯೊಂದು ಜಾತಿಗೂ ಒಂದು ಉದ್ಯೋಗವಿತ್ತು, ಆ ಜಾತಿಯು ತನ್ನ ಕೆಲಸದಲ್ಲಿ ತಾನು ನಿರತವಿರುತ್ತಿತ್ತು. ಇದರಿಂದ ಅತಿ ಶ್ರೇಷ್ಠ ಕೌಶಲ್ಯ ದೊರೆತು ಉದ್ಯೋಗ ಮತ್ತು ಕೈಗಾರಿಕೆಯಲ್ಲಿ ವಿಶೇಷ ಪ್ರವೀಣತೆ ದೊರೆಯಿತು.

### ೨೦. ಪ್ರಾಚೀನ ಭಾರತದಲ್ಲಿ ಗಣಿತಶಾಸ್ತ್ರ

ಮಹಾಮೇಧಾವಿಗಳೂ, ಭಾವನಾಜೀವಿಗಳೂ ಆಗಿದ್ದ ಭಾರತೀಯರು ಸ್ವಭಾವತಃ ಗಣಿತ ಶಾಸ್ತ್ರದಲ್ಲಿ ಉತ್ತಮ ಜ್ಞಾನವನ್ನು ಪಡೆದರು. ಯೂರೋಪಿಗೆ ಗಣಿತವೂ ಮತ್ತು ಬೀಜ ಗಣಿತವೂ ಬಂದದ್ದು ಅರಬ್ಬೀ ದೇಶದಿಂದ. ಆದರೆ ಅರಬ್ಬಿಯರು ಮೊದಲೇ ಅದನ್ನು ಭಾರತದಿಂದ ಕಲಿತಿದ್ದರು. ಗಣಿತ ಶಾಸ್ತ್ರದಲ್ಲಿ ಭಾರತೀಯರು ಅದ್ಭುತ ಪರಿಶ್ರಮ ಹೊಂದಿದ್ದರೆಂದು ಈಗ ಸರ್ವವೇದ್ಯವಿದೆ. ಆಧುನಿಕ ಗಣಿತ ಮತ್ತು ಬೀಜಗಣಿತದ ತಳಹದಿಯನ್ನು ಮೊದಲು ಹಾಕಿದ್ದು ಭಾರತದಲ್ಲಿ. ಎಣಿಕೆಯ ಚೌಕಟ್ಟು ರೋಮನ್ ಅಂಕಿಗಳು ಮುಂತಾದ ಅಂಕಿಗಳ ಉಪಯೋಗದಿಂದ ಗಣಿತಶಾಸ್ತ್ರದಲ್ಲಿ ಯಾವ ಪ್ರಗತಿಯೂ ಆಗಲು ಅವಕಾಶವಿರಲಿಲ್ಲ. ಆದರೆ ಭಾರತೀಯರು ದಶ ಅಂಕಗಳನ್ನೂ ಸೊನ್ನೆಯನ್ನೂ ಕಂಡುಹಿಡಿದ ಮೇಲೆ ಮಾನವ ಮನಸ್ಸಿನ ಕಟ್ಟುಗಳೆಲ್ಲ ಕಳಚಿ ಒಂದು ನೂತನ ಮನೋ ಸ್ವಾತಂತ್ರ್ಯವು ಲಭಿಸಿತು. ಅಂಕಿಗಳ ಗುಣದ ವಿಷಯದಲ್ಲಿ ಒಂದು ಹೊಸ ಬೆಳಕು ಕಂಡಿತು. ಈ ಅಂಕಿ ಸಂಕೇತಗಳಲ್ಲಿ ಒಂದು ವೈಶಿಷ್ಟ್ಯವಿತ್ತು. ಉಳಿದ ದೇಶಗಳಲ್ಲಿ ಉಪಯೋಗದಲ್ಲಿದ್ದ ಇತರ ಎಲ್ಲ ಸಂಕೇತಗಳಿಗಿಂತ ಇವು ತೀರ ಭಿನ್ನವಿದ್ದವು. ಈಗ ಎಲ್ಲೆಲ್ಲೂ ಅದೇ ಅಂಕಿಗಳು ಉಪಯೋಗದಲ್ಲಿವೆ; ಸರಿ ಎಂದು ಒಪ್ಪಿದ್ದೇವೆ. ಆದರೆ ಅವೇ ಮೊದಲು ಕ್ರಾಂತಿಯ ಕಿಡಿಗಳಾಗಿದ್ದವು. ಇಂಡಿಯಾದಿಂದ ಇವು ಬಾಗ್ದಾದ್ ಮೂಲಕ ಪಾಶ್ಚಾತ್ಯ ದೇಶಗಳಿಗೆ ಹರಡಲು ಅನೇಕ ಶತಮಾನಗಳು ಹಿಡಿದವು.

"ಹತ್ತು ಅಂಕಿಗಳಿಂದ ಎಲ್ಲ ಸಂಖ್ಯೆಗಳನ್ನು ಬರೆಯುವ ಶ್ರೇಷ್ಠ ಮಾರ್ಗವನ್ನು ನಮಗೆ ತೋರಿಸಿ ಕೊಟ್ಟದ್ದು ಇಂಡಿಯ. ಪ್ರತಿಯೊಂದು ಅಂಕಿಗೂ ಅದರದರ ವೈಯಕ್ತಿಕ ಮೌಲ್ಯವಿದೆ ಮತ್ತು ಸ್ಥಾನ ಗೌರವದಿಂದ ಬರುವ ಮೌಲ್ಯವೂ ಇದೆ. ಇದು ಅತಿ ಗಹನವೂ ಮತ್ತು ಮುಖ್ಯವೂ ಆದ ವಿಷಯ; ಈಗ ಅದು ನಮಗೆ ಬಹು ಸುಲಭಕಂಡು, ಅದರ ಗುಣವನ್ನು ಅಲಕ್ಷ್ಯಮಾಡಿದ್ದೇವೆ. ಆದರೆ ಅದರ ಸೌಲಭ್ಯದಿಂದ, ಯಾವ ಸಂಖ್ಯೆಯನ್ನಾದರೂ ಬರೆಯಲು ಇರುವ ಅನುಕೂಲದಿಂದ, ನಮ್ಮ ಗಣಿತ ಶಾಸ್ತ್ರಕ್ಕೆ ಅತ್ಯುತ್ತಮ ಸಂಶೋಧನೆಗಳಲ್ಲಿ ಪ್ರಥಮ ಸ್ಥಾನ ದೊರೆಯಿತು. ಪ್ರಾಚೀನಕಾಲದ ಮಹಾ ಪುರುಷರಾದ ಆರ್ಕಿಮಿಡೀಸ್ ಮತ್ತು ಅಪೊಲೋನಿಯಸ್‌ರಿಗೆ ಸಹ ಇದು ಹೊಳೆಯಲಿಲ್ಲವೆಂದರೆ ಈ ಮಹಾಸಾಧನೆಯ ಬೆಲೆ ನಮಗೆ ಎಷ್ಟೆಂದು ಗೊತ್ತಾಗುತ್ತದೆ" ಎಂದು ೧೫೦ ವರ್ಷಗಳಕೆಳಗೆ ನೆಪೋಲಿಯನ್ ಕಾಲದಲ್ಲಿ ಲಾಪ್ಲೇಸ್ ಬರೆದಿದ್ದಾನೆ.

ಇಂಡಿಯದಲ್ಲಿ ಸರಳಗಣಿತ, ಗಣಿತ, ಬೀಜಗಣಿತಗಳ ಮೂಲವು ಬಹಳ ಹಿಂದಿನಕಾಲಕ್ಕೆ ಹೋಗುತ್ತವೆ. ಪ್ರಾಯಶಃ ಯಜ್ಞಕುಂಡಗಳನ್ನು ಸಿದ್ಧಪಡಿಸಲು ಯಾವುದೋ ಒಂದು ಬಗೆಯ

ಸರಳ ಬೀಜಗಣಿತವಿದ್ದಂತೆ ತೋರುತ್ತದೆ. ಒಂದು ಚತುರ್ಭುಜವನ್ನೂ $ax=c$ ಎಂಬ ಬಾಹು ಉಳ್ಳ ಧೀರ್ಘ ಚತುರಸ್ರವನ್ನೂ ಹೇಗೆ ಮಾಡಬಹುದೆಂಬುದನ್ನು ಅನೇಕ ಪ್ರಾಚೀನ ಗ್ರಂಥಗಳಲ್ಲಿ ತಿಳಿಸಿದ್ದಾರೆ. ಈಗಲೂ ಅನೇಕ ಹಿಂದೂ ಶುಭಕಾರ್ಯಗಳಲ್ಲಿ ರೇಖಾ ಚಿತ್ರಗಳನ್ನು ಉಪಯೋಗಿಸು ವುದು ಸಾಮಾನ್ಯ ಪದ್ಧತಿಯಾಗಿದೆ. ರೇಖಾಗಣಿತವು ಇಂಡಿಯದಲ್ಲಿ ಅಭಿವೃದ್ಧಿಹೊಂದಿ ಗ್ರೀಸ್ ಮತ್ತು ಅಲೆಕ್ಸಾಂಡ್ರಿಯದಲ್ಲಿ ಮುಂದುವರಿಯಿತು. ಇಂಡಿಯ ತನ್ನ ಮುಂದಾಳುತನವನ್ನು ಕಾಪಾಡಿ ಕೊಂಡು ಬಂದದ್ದು ಗಣಿತ ಮತ್ತು ಬೀಜಗಣಿತದಲ್ಲಿ. ದಶಮಾಂಶ ಸ್ಥಾನ ಮೌಲ್ಯ ಮತ್ತು ಸೊನ್ನೆಯ ಚಿಹ್ನೆಯನ್ನು ಕಂಡು ಹಿಡಿದವರ ಹೆಸರುಗಳು ತಿಳಿದಿಲ್ಲ. ಸುಮಾರು ಕ್ರಿಸ್ತಪೂರ್ವ ಎರಡನೆಯ ಶತ ಮಾನದ ಗ್ರಂಥ ಒಂದರಲ್ಲಿ ಸೊನ್ನೆಯನ್ನು ಉಪಯೋಗಿಸಿರುವುದು ಈಗ ನಮಗೆ ಗೊತ್ತಾಗಿದೆ. ಈಗ ತಿಳಿದ ಶಾಸ್ತ್ರೀಯ ಗ್ರಂಥಗಳಲ್ಲಿ ಅದೇ ಮೊಟ್ಟಮೊದಲನೆಯದು. ಸ್ಥಾನ ನಿರ್ದೇಶದಿಂದ ಸಂಖ್ಯೆಯ ಬೆಲೆಯನ್ನು ಕಂಡುಹಿಡಿದದ್ದು ಕ್ರಿಸ್ತಶಕೆಯ ಆರಂಭಕಾಲದಲ್ಲಿ ಎಂದು ಊಹಿಸಲಾಗಿದೆ. ಸೊನ್ನೆ ಅಥವ ಶೂನ್ಯಕ್ಕೆ ಮೊದಲು ಅದನ್ನು ಒಂದು ಚುಕ್ಕೆಯಿಂದ ಗುರ್ತಿಸುತ್ತಿದ್ದರು, ಅನಂತರ ಅದು ಒಂದು ಸಣ್ಣ ವರ್ತುಲವಾಯಿತು. ಇತರ ಸಂಖ್ಯೆಗಳಂತೆ ಅದೂ ಒಂದು ಸಂಖ್ಯೆಯಾಯಿತು. ಈ ಸಂಶೋಧನೆಯ ಮುಖ್ಯ ಫಲಿತಾಂಶವನ್ನು, "ಸೊನ್ನೆಯ ಗುರ್ತನ್ನು, ಕಂಡುಹಿಡಿದುದರ ಪ್ರಾಮುಖ್ಯತೆ ಯನ್ನು ಎಷ್ಟು ಹೊಗಳಿದರೂ ಸಾಲದು. ಒಂದು ಬಯಲು ಶೂನ್ಯಕ್ಕೆ ಒಂದು ಸ್ಥಾನಮಾತ್ರವಲ್ಲದೆ ಹೆಸರು, ರೂಪು, ಸಂಕೇತ ಮತ್ತು ಒಂದು ಶಕ್ತಿಯನ್ನು ಕೊಟ್ಟು ಅದಕ್ಕೆ ಜನ್ಮಕೊಟ್ಟದ್ದು ಹಿಂದೂ ಜನಾಂಗದ ಒಂದು ವೈಶಿಷ್ಟ್ಯ. ನಿರ್ವಾಣದಿಂದ ವಿದ್ಯುತ್ ಯಂತ್ರಗಳನ್ನು ಸೃಜಿಸಿದಂತೆ. ಬುದ್ಧಿ ಚಾತುರ್ಯದ ಮತ್ತು ಮೇಧಾಶಕ್ತಿಯ ಸಾರ್ವತ್ರಿಕ ಬೆಳವಣಿಗೆಗೆ ಈ ಒಂದು ಸಂಶೋಧನದಿಂದ ದೊರೆತ ಪುಷ್ಟಿಯು ಬೇರಾವ ಗಣಿತಶಾಸ್ತ್ರ ಸಂಶೋಧನೆಯಿಂದಲೂ ದೊರೆತಿಲ್ಲ" ಎಂದು ಪ್ರೊಫೆಸರ್ ಹಾಲ್ ಸ್ಟೆಡ್ ಹೇಳಿದ್ದಾನೆ.

ಇನ್ನೊಬ್ಬ ಆಧುನಿಕ ಗಣಿತ ಶಾಸ್ತ್ರಜ್ಞನು ಇದೇ ಐತಿಹಾಸಿಕ ವಿಷಯವನ್ನು ಅದೇರೀತಿ ಮುಕ್ತ ಕಂಠದಿಂದ ಹೊಗಳಿರುತ್ತಾನೆ. ಡ್ಯಾನ್ಜಿಗ್ ತನ್ನ 'ಸಂಖ್ಯೆ' ಎಂಬಗ್ರಂಥದಲ್ಲಿ"ಈ "ಐದು ಸಾವಿರ ವರ್ಷ ಗಳಲ್ಲಿ ಅನೇಕ ನಾಗರಿಕತೆಗಳು ಉದಿಸಿ ಬೆಳಗಿ ಸಾಹಿತ್ಯ, ಕಲೆ, ತತ್ತ್ವಶಾಸ್ತ್ರ ಮತ್ತು ಧರ್ಮಗಳಲ್ಲಿ ತಮ್ಮ ಅಸ್ತಿತ್ವವನ್ನು ಬಿಟ್ಟು ಹೋಗಿವೆ. ಆದರೆ ಮನುಷ್ಯನು ಮೊಟ್ಟಮೊದಲು ಆರಂಭಿಸಿದ ಎಣಿಕೆಯ ಕಲೆಯಲ್ಲಿ ಒಟ್ಟು ಸಾಧಿಸಿ ಇರುವುದೇನು? ಯಾವ ಪ್ರಗತಿಯನ್ನೂ ಸಾಧಿಸಲು ಸಾಧ್ಯವಾಗದ ಒಂದು ಅನಾಗರಿಕ ಅನಮ್ರ ಸಂಖ್ಯಾಕ್ರಮ. ಸುಲಭ ಲೆಕ್ಕಗಳನ್ನು ಮಾಡುವದಕ್ಕೂ ಒಬ್ಬ ಪ್ರಾಜ್ಞನ ಸಹಾ ಯವನ್ನೇ ಪಡೆದಲ್ಲದೆ ಸಾಧ್ಯವಿಲ್ಲದ ಒಂದು ಲೆಕ್ಕ ಮಾಡುವ ಕ್ರಮ. ಈ ಲೆಕ್ಕ ಪದ್ಧತಿಯಲ್ಲಿ ಯಾವ ಒಂದು ಮುಖ್ಯ ವ್ಯತ್ಯಾಸವನ್ನೂ ಮಾಡಲು ಸಾಧ್ಯವಿಲ್ಲದೆ, ಆ ಲಸಕರಣೆಯನ್ನು ಯಾವ ರೀತಿಯಲ್ಲೂ ಉತ್ತಮಪಡಿಸಲಾರದೆ ಸಾವಿರಾರು ವರ್ಷಗಳ ಕಾಲ ಅದನ್ನೇ ಮಾನವನು ಉಪಯೋಗಿಸಿದನು. ಅಂಧಕಾರ ಯುಗದ ನಿಧಾನ ಪ್ರಗತಿಯೊಂದಿಗೆ ಹೋಲಿಸಿದರೂ ಗಣಿತಶಾಸ್ತ್ರದ ಈ ಇತಿಹಾಸವು ಕೊಳೆತು ನಾರುವ ತಿಪ್ಪೆಗುಂಡಿಯಂತಿದೆ. ಈ ದೃಷ್ಟಿಯಿಂದ ನೋಡಿದರೆ ನಮ್ಮ ಕ್ರಿಸ್ತ ಯುಗದ ಆರಂಭದಲ್ಲಿ ಸ್ಥಾನದ ಬೆಲೆಯನ್ನು ಗೊತ್ತುಮಾಡಿದ ಒಬ್ಬ ಹಿಂದೂ ಅನಾಮಧೇಯನ ಸಂಶೋಧ ನೆಯು ಪ್ರಪಂಚದ ಪ್ರಮುಖ ಘಟನೆಗಳಲ್ಲಿ ಅತ್ಯಂತ ಮಹತ್ವದ್ದಿದೆ" ಎಂದಿದ್ದಾನೆ.

ಈ ಸಂಶೋಧನೆಯು ಗ್ರೀಸ್ ಗಣಿತ ಶಾಸ್ತ್ರಜ್ಞರಿಗೆ ಹೇಗೆ ಹೊಳೆಯಲಿಲ್ಲವೆಂದು ಡ್ಯಾನಿಗ್ ಬಹಳ ಆಶ್ಚರ್ಯಪಡುತ್ತಾನೆ. "ತಮ್ಮ ಮಕ್ಕಳ ವಿದ್ಯಾಭ್ಯಾಸವನ್ನು ಸಹ ಗುಲಾಮರಿಗೆ ಬಿಟ್ಟು ಕೊಟ್ಟು ಗ್ರೀಕರು ಪ್ರಾಯೋಗಿಕ ವಿಜ್ಞಾನ ಶಾಸ್ತ್ರವನ್ನು ಅಷ್ಟು ತುಚ್ಛೀಕರಿಸಿ ಇರಬಹುದೆ? ಇಲ್ಲ ವಾದರೆ ರೇಖಾಗಣಿತವನ್ನು ನಮಗೆ ಕೊಟ್ಟು ವಿಜ್ಞಾನ ಶಾಸ್ತ್ರವನ್ನು ಅಷ್ಟು ಅಭಿವೃದ್ಧಿಗೆ ತಂದ ಜನಾಂಗವು ಬೀಜಗಣಿತದ ಓನಾಮವನ್ನು ಸಹ ಕಂಡು ಹಿಡಿಯದಿರಲು ಕಾರಣವೇನು? ಸಂಖ್ಯೆಗೆ ಸ್ಥಾನಗಳನ್ನು ಕಂಡು ಹಿಡಿದ ಸಮಯದಲ್ಲೇ ಆಧುನಿಕ ಗಣಿತ ಶಾಸ್ತ್ರದ ಮೂಲೆಗಲ್ಲಿನಂತಿರುವ ಬೀಜ

ಗಣಿತವು ಸಹ ಇಂಡಿಯದಲ್ಲೇ ಜನ್ಮತಾಳಿದ್ದು ಒಂದು ಆಶ್ಚರ್ಯವಲ್ಲವೆ? ಎಂದಿದ್ದಾನೆ.

ಈ ಪ್ರಶ್ನೆಗಳಿಗೆ ಪ್ರೊಫೆಸರ್ ಹಾಗ್ಬೆನ್ ಉತ್ತರ ಕೊಟ್ಟಿದ್ದಾನೆ. "ಈ ರೀತಿ ಮುಂದೆ ಹೆಜ್ಜೆ ಇಟ್ಟವರು ಹಿಂದೂಗಳೇ ಏಕೆ ಆಗಿರಬೇಕು, ಪ್ರಾಚೀನ ಕಾಲದ ಗಣಿತ ಶಾಸ್ತ್ರಜ್ಞರಿಗೆ ಏಕೆ ಮುಂದುವರಿಯಲು ಸಾಧ್ಯವಾಗಲಿಲ್ಲ, ವ್ಯಾವಹಾರಿಕ ಮನುಷ್ಯನಿಗೆ ಮಾತ್ರ ಮೊದಲು ಹೇಗೆ ಸಾಧ್ಯವಾಯಿತು. ಎಂಬುದರ ಕಾರಣವನ್ನು ಅತ್ಯುನ್ನತ ಸಾಮಾಜಿಕ ಅಂತಃಸ್ಫೂರ್ತಿಗೆ ರೂಪುಕೊಟ್ಟು, ಭಾವನಾ ಪ್ರಚೋದನೆ ಮಾಡಿದ ಸುತ್ತಲಿನ ಸಾಂಪ್ರದಾಯಿಕ ಸಮಾಜ ರಚನೆಯಲ್ಲಿ ನೋಡದೆ ಕೆಲವು ಮಹಾಪುರುಷರ ಬೌದ್ಧಿಕ ಪ್ರಗತಿಯಲ್ಲಿ ಕಾಣಬಯಸಿದರೆ ಕಂಡುಹಿಡಿಯುವುದು ಕಷ್ಟ. ಕ್ರಿಸ್ತಶಕ ೧೦೦ ರಲ್ಲಿ ಭಾರತದಲ್ಲಿ ನಡೆದ ಘಟನೆಯು ಹಿಂದೆಯೂ ನಡೆದಿತ್ತು. ಪ್ರಾಯಶಃ ಈಗ ಸೋವಿಯಟ್ ರಷ್ಯದಲ್ಲಿ ನಡೆಯುತ್ತಿರಬಹುದು. ಯಾವ ಸಂಸ್ಕೃತಿಯಲ್ಲಿಯೇ ಆಗಲಿ ತನ್ನ ಶ್ರೇಷ್ಠ ವ್ಯಕ್ತಿಗಳ ಶಿಕ್ಷಣಕ್ಕೆ ಪ್ರಾಶಸ್ತ್ಯಕೊಟ್ಟಂತೆ ಸಾಮಾನ್ಯ ಜನತೆಯ ಶಿಕ್ಷಣಕ್ಕೂ ಪ್ರಾಶಸ್ತ್ಯ ಕೊಡದೆ ಇದ್ದರೆ ಆ ಸಂಸ್ಕೃತಿಯ ವಿನಾಶದ ಬೀಜವು ಅದರ ಗರ್ಭದಲ್ಲಿಯೇ ಅಡಗಿದೆ ಎಂದು ಒಪ್ಪಿದಂತೆ" ಎಂದಿದ್ದಾನೆ.

ಆದ್ದರಿಂದ ಈ ಬಹು ಪರಿಣಾಮಕಾರಿಯಾದ ಸಂಶೋಧನೆಯು ಕಾಲಸ್ಥಿತಿಯನ್ನು ಮೀರಿ ಯಾವುದೋ ಒಬ್ಬ ಮಹಾವ್ಯಕ್ತಿಯ ಕ್ಷಣಿಕ ಪ್ರತಿಭೆಯಿಂದ ಹೊರಹೊಮ್ಮಿದುದಲ್ಲ. ಆದರೆ ಸಾಮಾಜಿಕ ಪರಿಸ್ಥಿತಿಯ ಅವಶ್ಯಕತೆಯಿಂದ ವಿಕಾಸಗೊಂಡಿತು, ಮತ್ತು ಆ ಕಾಲದ ಅವಶ್ಯ ಬೇಡಿಕೆಯೊಂದನ್ನು ಪೂರೈಸಿತು. ಈ ಸಂಶೋಧನೆಯನ್ನು ಕಂಡುಹಿಡಿದು, ಆವಶ್ಯಕತೆಯನ್ನು ಪೂರ್ಣಗೊಳಿಸಲು ಅತ್ಯಂತ ಪ್ರತಿಭಾವಂತ ವ್ಯಕ್ತಿಯ ಅಗತ್ಯವೇನೋ ಇತ್ತು. ಆದರೆ ಆ ಆವಶ್ಯಕತೆಯೇ ಇಲ್ಲದಿದ್ದರೆ ಅದರ ಪೂರೈಕೆಯ ಮಾರ್ಗವನ್ನು ಕಂಡುಹಿಡಿಯಲು ಪ್ರೋತ್ಸಾಹವೂ ಇರುತ್ತಿರಲಿಲ್ಲ; ಅಥವ ಸಂಶೋಧನೆಯನ್ನು ಮಾಡಿದ್ದರೂ ಮರೆತು ಬಿಡಬಹುದಾಗಿತ್ತು. ಅಥವ ಅದರ ಉಪಯುಕ್ತತೆಯ ಕಾಲ ಒದಗುವವರೆಗೆ ಬದಿಗಿಡಬೇಕಾಗಿತ್ತು. ಗಣಿತಶಾಸ್ತ್ರದ ಮೇಲಣ ಪ್ರಾಚೀನ ಸಂಸ್ಕೃತ ಗ್ರಂಥಗಳನ್ನು ನೋಡಿದರೆ ಆ ಗ್ರಂಥಗಳಲ್ಲಿ ತುಂಬಿರುವ ಅನೇಕ ಕಠಿನ ಲೆಕ್ಕಾಚಾರದ ವ್ಯಾಪಾರ ಮತ್ತು ಸಾಮಾಜಿಕ ವ್ಯವಹಾರದ ಪ್ರಶ್ನೆಗಳನ್ನು ನೋಡಿದರೆ, ಅಂಥ ತೀವ್ರ ಆವಶ್ಯಕತೆ ಇತ್ತೆಂದು ಸ್ಪಷ್ಟವಾಗುತ್ತದೆ. ತೆರಿಗೆ, ಸಾಲ, ಬಡ್ಡಿಯ ಪ್ರಶ್ನೆಗಳಿವೆ. ಪಾಲುಗಾರಿಕೆ, ವಸ್ತುವಿನಿಮಯ, ಮಾರುಪಡಿ ಮತ್ತು ಚಿನ್ನದ ಒರೆಯನ್ನು ಕಂಡುಹಿಡಿಯುವ ಪ್ರಶ್ನೆಗಳಿವೆ. ಸಮಾಜವು ಬಹುಮುಖವಾಗಿ ಬೆಳೆದಿತ್ತು. ಅನೇಕ ಜನರು ಸರ್ಕಾರದ ಉದ್ಯಮಗಳಲ್ಲಿ, ದೊಡ್ಡ ವ್ಯಾಪಾರಗಳಲ್ಲಿ ನಿರತರಾಗಿದ್ದರು. ಲೆಕ್ಕದ ಎಣಿಕೆಯ ಸೌಲಭ್ಯವಿಲ್ಲದೆ ವ್ಯವಹಾರ ನಡೆಸುವುದು ಕಷ್ಟವಾಗಿತ್ತು.

ಸೊನ್ನೆ ಮತ್ತು ದಶಮಾಂಶಗಳ ಸ್ಥಾನ ನಿರ್ದೇಶದ ಪದ್ಧತಿಯಿಂದ ಭಾರತೀಯರ ಮನಸ್ಸಿನ ಬಾಗಿಲು ತೆರೆದು ಗಣಿತ ಮತ್ತು ಬೀಜಗಣಿತದಲ್ಲಿ ಹೆಚ್ಚು ಪ್ರಗತಿಯನ್ನು ಸಾಧಿಸಲು ಅವಕಾಶ ದೊರೆಯಿತು. ಭಿನ್ನರಾಶಿಯಲ್ಲಿ ಗುಣಾಕಾರ ಭಾಗಾಕಾರಗಳು ಬರುತ್ತವೆ. ತ್ರೈರಾಶಿಯನ್ನು ಕಂಡು ಹಿಡಿದು ಪರಿಪಕ್ವಗೊಳಿಸುತ್ತಾರೆ. ವರ್ಗ ಮತ್ತು ವರ್ಗಮೂಲವನ್ನು, ವರ್ಗಮೂಲದ √ ಸಂಕೇತವನ್ನು, ಘನ ಮತ್ತು ಘನಮೂಲ, ವ್ಯವಕಲನ ಚಿಹ್ನೆ, ತ್ರಿಜ್ಯಾಗಳ ಪಟ್ಟಿ, ಇವೆಲ್ಲವನ್ನೂ ಕಂಡು ಹಿಡಿದರು. ಗ ಬೆಲೆ ೩.೧೪೧೬ ಎಂದು ಲೆಕ್ಕಮಾಡಿದ್ದಾರೆ. ಅಪರಿಚಿತ ಸಂಖ್ಯೆಗಳನ್ನು ವರ್ಣಮಾಲೆಯ ಅಕ್ಷರಗಳಿಂದ ಬರೆಯಲಾರಂಭಿಸಿದರು. ಸಾಮಾನ್ಯ ಮತ್ತು ವರ್ಗೀಯ ಸಮೀಕರಣಗಳನ್ನು ಯೋಚಿಸಿದರು. ಸೊನ್ನೆಯ ಗಣಿತಶಾಸ್ತ್ರದಲ್ಲಿ ಸಂಶೋಧನೆ ನಡೆಸಿದರು. ಸೊನ್ನೆ ಎಂದರೆ ಅ—ಅ = ೦ ಎಂದು ವಿವರಕೊಟ್ಟರು. ಅ + ೦ = ಅ; ಅ—೦ = ಅ; ಅ × ೦ = ೦; ಅ ÷ ೦ = ಅನಂತವೆಂದರು. ಕ್ಷಯಸಂಖ್ಯೆಗಳ ಭಾವನೆಯೂ ಅವರಿಗೆ ತಿಳಿದಿತ್ತು. √೪ = ±೨ ಎಂದು ತಿಳಿಸಿರುತ್ತಾರೆ.

ಇವು ಮತ್ತು ಇನ್ನೂ ಅನೇಕ ಗಣಿತಶಾಸ್ತ್ರದ ಸಂಶೋಧನೆಗಳನ್ನು ಕ್ರಿಸ್ತಶಕ ಐದನೆಯ ಶತಮಾನದಿಂದ ಹನ್ನೆರಡನೆಯ ಶತಮಾನದ ವರೆಗೆ ಪ್ರಸಿದ್ಧ ಗಣಿತಶಾಸ್ತ್ರಜ್ಞರು ಮೇಲಿಂದ ಮೇಲೆ ಬರೆದ

ಗ್ರಂಥಗಳಲ್ಲಿ ಕಾಣಬಹುದು. ಅದಕ್ಕೂ ಹಿಂದಿನ ಗ್ರಂಥಗಳೂ ಇವೆ. ಬೋಧಾಯನವು ಕ್ರಿಸ್ತಪೂರ್ವ ಎಂಟನೆಯ ಶತಮಾನದಲ್ಲೂ, ಆಪಸ್ತಂಭ ಮತ್ತು ಕಾತ್ಯಾಯನಗಳು ಕ್ರಿಸ್ತಪೂರ್ವ ಐದನೆಯ ಶತಮಾನದಲ್ಲೂ ಹುಟ್ಟಿದವು. ಎರಡರಲ್ಲೂ ರೇಖಾಗಣಿತದ ಪ್ರಶ್ನೆಗಳು, ಮುಖ್ಯವಾಗಿ ತ್ರಿಕೋಣ, ಸಮಕೋಣ, ಚದುರಗಳ ವಿವರಗಳಿವೆ. ಆದರೆ ಅತಿ ಪ್ರಾಚೀನ ಬೀಜಗಣಿತವೆಂದರೆ ಕ್ರಿಸ್ತಶಕ ೪೭೬ ರಲ್ಲಿ ಹುಟ್ಟಿದ ಪ್ರಸಿದ್ಧ ಖಗೋಳ ಶಾಸ್ತ್ರಜ್ಞನಾದ ಆರ್ಯಭಟನು ಬರೆದ ಬೀಜಗಣಿತ. ಆತನು ತನ್ನ ಇಪ್ಪತ್ತು ಮೂರನೆಯ ವಯಸ್ಸಿನಲ್ಲೇ ಖಗೋಳ ಶಾಸ್ತ್ರವನ್ನೂ, ಗಣಿತಶಾಸ್ತ್ರವನ್ನೂ ಬರೆದನು. ಬೀಜಗಣಿತವನ್ನು ಕಂಡುಹಿಡಿದ ಮೂಲಪುರುಷನೆಂದು ಹೆಸರಾದ ಆರ್ಯಭಟನು ಸ್ವಲ್ಪಮಟ್ಟಿಗಾದರೂ ತನ್ನ ಹಿಂದಿನ ಗಣಿತ ಶಾಸ್ತ್ರಜ್ಞರ ಜ್ಞಾನಭಂಡಾರವನ್ನು ಉಪಯೋಗಿಸಿಕೊಂಡಿರಬೇಕು. ಅನಂತರ ಭಾರತೀಯ ಗಣಿತಶಾಸ್ತ್ರದಲ್ಲಿ ಹೆಸರುವಾಸಿಯಾದವನೆಂದರೆ ಕ್ರಿ.ಶ. ೫೨೨ ರಲ್ಲಿದ್ದ ಭಾಸ್ಕರ. ಅನಂತರ ಕ್ರಿ.ಶ. ೬೨೮ ರಲ್ಲಿ ಪ್ರಸಿದ್ಧ ಖಗೋಳ ಶಾಸ್ತ್ರಜ್ಞನಾದ ಬ್ರಹ್ಮಗುಪ್ತನು ಶೂನ್ಯ ಅಥವ ಸೊನ್ನೆಗೆ ಅನ್ವಯಿಸುವ ಸೂತ್ರಗಳನ್ನು ಕಂಡುಹಿಡಿದು ಇನ್ನೂ ಅನೇಕ ಸಂಶೋಧನೆಗಳನ್ನು ನಡಸಿದನು. ಅನೇಕ ಗಣಿತ ಶಾಸ್ತ್ರಜ್ಞರು ಮೇಲಿಂದಮೇಲೆ ಗಣಿತ ಅಥವ ಬೀಜಗಣಿತ ಗ್ರಂಥಗಳನ್ನು ಬರೆದಿರುತ್ತಾರೆ. ಅದರಲ್ಲಿ ಕ್ರಿಸ್ತಶಕ ೧೧೧೪ ರಲ್ಲಿದ್ದ ಎರಡನೆಯ ಭಾಸ್ಕರನೇ ಪ್ರಸಿದ್ಧನಾದವನು. ಆತನು ಖಗೋಳಶಾಸ್ತ್ರ, ಬೀಜಗಣಿತ, ಗಣಿತಶಾಸ್ತ್ರಗಳ ಮೇಲೆ ಗ್ರಂಥಗಳನ್ನು ರಚಿಸಿದನು. ಆತನು ತನ್ನ ಗಣಿತಶಾಸ್ತ್ರಕ್ಕೆ ಒಬ್ಬ ಹೆಂಗಸಿನ ಹೆಸರನ್ನಿಟ್ಟು ಲೀಲಾವತಿ ಎಂದು ಕರೆದುಇದ್ದಾನೆ. ಆ ಗ್ರಂಥದಲ್ಲಿ 'ಓ ಲೀಲಾವತಿ' ಎಂದು ಒಬ್ಬ ಯುವತಿಯನ್ನು ಸಂಬೋಧಿಸಿ, ಸಮಸ್ಯೆಗಳನ್ನು ಬಿಡಿಸುತ್ತಾನೆ. ಆಕೆಯು ಆತನ ಮಗಳೆಂದು ಪ್ರತೀತಿ ಇದೆ. ಗ್ರಂಥದ ಶೈಲಿಯು ಸುಲಭವೂ, ಸರಳವೂ, ಸ್ಪಷ್ಟವೂ ಇದ್ದು ಎಳೆಯ ವಯಸ್ಸಿನವರಿಗೂ ಅರ್ಥವಾಗುವಂತಿದೆ. ಸುಲಭ ಶೈಲಿಯಲ್ಲಿರುವುದರಿಂದ ಈಗಲೂ ಅದನ್ನು ಸಂಸ್ಕೃತ ಪಾಠಶಾಲೆಗಳಲ್ಲಿ ಪಠ್ಯಪುಸ್ತಕವಾಗಿ ಉಪಯೋಗಿಸುತ್ತಾರೆ.

ಗಣಿತಶಾಸ್ತ್ರದ ಮೇಲೆ ೧೧೫೦ ರಲ್ಲಿ ನಾರಾಯಣ, ೧೫೪೫ ರಲ್ಲಿ ಗಣೇಶ ಸಹ ಗ್ರಂಥಗಳನ್ನು ಬರೆದರು. ಆದರೆ ಅವೆಲ್ಲ ಹಿಂದಿನ ಗ್ರಂಥಗಳ ಅನುಕರಣ. ೧೨ನೆಯ ಶತಮಾನದಿಂದ ಆಧುನಿಕ ಕಾಲದ ವರೆಗೆ ಭಾರತದಲ್ಲಿ ಗಣಿತಶಾಸ್ತ್ರದಲ್ಲಿ ಯಾವ ಸಂಶೋಧನೆಯೂ ನಡೆಯಲಿಲ್ಲ.

ಎಂಟನೆಯ ಶತಮಾನದಲ್ಲಿ ಖಲೀಫ್ ಅಲ್ ಮನ್ಸೂರ್ (೭೫೩-೭೭೪) ಕಾಲದಲ್ಲಿ ಅನೇಕ ಭಾರತೀಯ ವರ್ತಕರು ಬಾಗ್ದಾದ್ ಪಟ್ಟಣಕ್ಕೆ ಹೋದರು. ಜೊತೆಗೆ ಖಗೋಳ ಶಾಸ್ತ್ರ ಮತ್ತು ಗಣಿತ ಶಾಸ್ತ್ರ ಗ್ರಂಥಗಳನ್ನು ತೆಗೆದುಕೊಂಡು ಹೋದರು. ಪ್ರಾಯಶಃ ಇದಕ್ಕೂ ಮುಂಚೆಯೇ ಭಾರತೀಯ ಅಂಕಿಗಳ ಪರಿಚಯವು ಬಾಗ್ದಾದಿನ ಜನರಿಗೆ ತಿಳಿದಿತ್ತು. ಆದರೆ ಇಲ್ಲಿಂದ ಶಾಸ್ತ್ರೋಕ್ತ ಜ್ಞಾನವು ಆರಂಭವಾಯಿತು. ಆರ್ಯಭಟ ಮುಂತಾದ ಗ್ರಂಥಗಳು ಅರಬ್ಬಿ ಭಾಷೆಗೆ ಅನುವಾದವಾದವು. ಅರಬ್ಬಿ ಪ್ರಪಂಚದಲ್ಲಿ ಖಗೋಳ ಶಾಸ್ತ್ರ ಮತ್ತು ಗಣಿತಶಾಸ್ತ್ರದ ಬೆಳವಣಿಗೆಯು ಬಹಳ ಪರಿಣಾಮ ಮಾಡಿದವು. ಭಾರತೀಯ ಸಂಖ್ಯೆಗಳ ಪರಿಚಯವಾಯಿತು. ಆಗಿನ ಕಾಲದಲ್ಲಿ ಬಾಗ್ದಾದ್ ಒಂದು ದೊಡ್ಡ ಸಂಸ್ಕೃತಿ ಕೇಂದ್ರವಾಗಿತ್ತು. ಗ್ರೀಕ್ ಮತ್ತು ಯೆಹೂದಿ ವಿದ್ವಾಂಸರು ಗ್ರೀಕರ ತತ್ವಶಾಸ್ತ್ರ, ರೇಖಾಗಣಿತ ಮತ್ತು ವಿಜ್ಞಾನ ಶಾಸ್ತ್ರವನ್ನು ಪರಿಚಯ ಮಾಡಿಕೊಟ್ಟಿದ್ದರು. ಬಾಗ್ದಾದ್ ಸಂಸ್ಕೃತಿಯ ಪ್ರಭಾವವು ಮಧ್ಯ ಏಷ್ಯದಿಂದ ಮೊದಲುಗೊಂಡು ಸ್ಪೇನ್‌ವರೆಗೆ ಮುಸ್ಲಿಂ ಪ್ರಪಂಚದಲ್ಲೆಲ್ಲ ಹರಡಿತ್ತು. ಅರಬ್ಬೀ ಅನುವಾದದಲ್ಲಿ ಭಾರತೀಯ ಗಣಿತ ಶಾಸ್ತ್ರದ ಜ್ಞಾನವು ಈ ವಿಶಾಲ ಪ್ರಪಂಚದಲ್ಲೆಲ್ಲ ಹರಡಿತು. ಅರಬ್ಬಿ ಜನರು ಸಂಖ್ಯೆಗಳನ್ನು ಹಿಂದ್ ಅಥವ ಇಂಡಿಯದ ಸಂಖ್ಯೆಗಳು ಎಂದು ಕರೆದರು. ಅರಬ್ಬಿ ಭಾಷೆಯಲ್ಲಿ ಅಂಕಕ್ಕೆ 'ಹಿಂದ್‌ಸಾ' (ಎಂದರೆ ಹಿಂದೂದೇಶದಿಂದ) ಎನ್ನುತ್ತಾರೆ.

ಅರಬ್ಬಿ ಪ್ರಪಂಚದಿಂದ ಈ ಹೊಸ ಗಣಿತಶಾಸ್ತ್ರವು ಪ್ರಾಯಶಃ ಮೂರಿಷ್ ವಿಶ್ವವಿದ್ಯಾನಿಲಯಗಳ ಮೂಲಕ ಯೂರೋಪ್ ದೇಶಗಳಿಗೆ ಹರಡಿ ಯೂರೋಪಿನ ಗಣಿತ ಶಾಸ್ತ್ರಕ್ಕೆ ತಳಹದಿಯಾಯಿತು. ಈ ಅಂಕಗಳು ಅಶಾಸ್ತ್ರೀಯವೆಂದು ಅವುಗಳ ಉಪಯೋಗಕ್ಕೆ ಪ್ರಬಲ ವಿರೋಧವೆದ್ದಿತು. ಸಾಮಾನ್ಯರಲ್ಲಿ

ಬಳಕೆಗೆ ಬರಲು ಅನೇಕ ಶತಮಾನಗಳು ಬೇಕಾದವು. ಮೊಟ್ಟಮೊದಲು ಉಪಯೋಗಿಸಿದ್ದು ೧೧೩೪ರ ಸಿಸಿಲಿ ನಾಣ್ಯದಲ್ಲಿ. ಇಂಗ್ಲೆಂಡಿನಲ್ಲಿ ಮೊದಲು ಉಪಯೋಗಕ್ಕೆ ಬಂದದ್ದು ೧೪೯೦ರಲ್ಲಿ.

ರಾಯಭಾರಿಗಳು ಕ್ರಮವಾಗಿ ಗ್ರಂಥಗಳನ್ನು ತೆಗೆದುಕೊಂಡು ಹೋಗಿ ಪ್ರಚಾರ ಮಾಡುವ ಮುಂಚೆಯೇ ಯಾವುದೋ ಒಂದು ರೀತಿಯಲ್ಲಿ ಭಾರತೀಯ ಗಣಿತ ಶಾಸ್ತ್ರವು, ಅದರಲ್ಲೂ ಮುಖ್ಯವಾಗಿ ಸಂಖ್ಯೆಗಳ ಸ್ಥಾನ ನಿರ್ದೇಶ ಜ್ಞಾನವು ಪಶ್ಚಿಮ ಏಷ್ಯಕ್ಕೆ ಹರಡಿತ್ತು ಎನ್ನುವುದು ಸ್ಪಷ್ಟವಿದೆ. ಗ್ರೀಕ್ ವಿದ್ವಾಂಸರು ಸಿರಿಯನ್‌ರನ್ನು ಅವಹೇಳನ ದೃಷ್ಟಿಯಿಂದ ನೋಡುತ್ತಿದ್ದರು. ಗ್ರೀಕ್ ವಿದ್ವಾಂಸರ ಅವಹೇಳನದಿಂದ ನೊಂದ ಸಿರಿಯನ್ ವಿದ್ವಾಂಸ ಯೋಗಿಯೊಬ್ಬನ ದೂರಿನಲ್ಲಿ ಒಂದು ವಿಚಿತ್ರ ಸಂಗತಿ ಇದೆ. ಆತನ ಹೆಸರು ಸವರಸ್ ಸೆಬೊಕ್ಟ್ ಎಂದು. ಯೂಫ್ರಟೀಸ್ ನದಿಯ ದಡದ ಒಂದು ಮಠದಲ್ಲಿ ವಾಸಮಾಡುತ್ತಿದ್ದನು. ಕ್ರಿಸ್ತಶಕ ೬೬೨ ರಲ್ಲಿ ಬರೆದ ಅವನ ಗ್ರಂಥದಲ್ಲಿ ಸಿರಿಯನರು ಗ್ರೀಕರಿಗಿಂತ ಯಾವ ರೀತಿಯಲ್ಲೂ ಕಡಮೆ ಇರಲಿಲ್ಲವೆಂದು ಹೇಳುತ್ತಾನೆ. ಉದಾಹರಣೆಗಾಗಿ ಭಾರತೀಯರ ವಿಷಯ ಪ್ರಸ್ತಾಪಿಸುತ್ತಾನೆ " ಹಿಂದೂಗಳ ವಿಜ್ಞಾನದ ವಿಷಯ ಯಾವ ಚರ್ಚೆಯನ್ನೂ ನಾನು ಮಾಡುವುದಿಲ್ಲ, ಅವರು ಸಿರಿಯನರಲ್ಲ. ಖಗೋಳಶಾಸ್ತ್ರದಲ್ಲಿ ಅದ್ಭುತ ಸಂಶೋಧನೆ ಮಾಡಿದ್ದಾರೆ. ಅವರ ಸಂಶೋಧನೆಗಳು ಗ್ರೀಕರ ಮತ್ತು ಬ್ಯಾಬಿಲೋನಿಯನ್ ಜನರ ಸಂಶೋಧನೆಗಳೆಲ್ಲಕ್ಕಿಂತ ಅತಿ ಸೂಕ್ಷ್ಮ ಇವೆ. ಅವರ ಗಣಿತ ಜ್ಞಾನವನ್ನು ವರ್ಣಿಸಲು ಯಾರಿಂದಲೂ ಸಾಧ್ಯವಿಲ್ಲ. ವಿಜ್ಞಾನ ಶಾಸ್ತ್ರದಲ್ಲಿ ಪಾರಮ್ಯ ಪಡೆದಿರುವೆವೆಂದು ಗ್ರೀಕ್‌ರಲ್ಲಿ ನಂಬಿರುವವರು ಇದನ್ನು ತಿಳಿದುಕೊಂಡರೆ ತಮ್ಮಂತೆ ಇತರರೂ ಬುದ್ಧಿವಂತರಿದಾರೆಂದು ಗೊತ್ತಾಗುತ್ತದೆ" ಎಂದಿದ್ದಾನೆ.

ಭಾರತೀಯ ಗಣಿತ ಶಾಸ್ತ್ರವನ್ನು ಪ್ರಸ್ತಾಪಿಸುತ್ತ ಈಚಿನ ಒಬ್ಬ ಮಹಾವ್ಯಕ್ತಿಯನ್ನು ನೆನಪಿಗೆ ತಂದುಕೊಳ್ಳಬೇಕಾಗುತ್ತದೆ. ಆತನ ಹೆಸರು ಶ್ರೀನಿವಾಸ ರಾಮಾನುಜಂ. ದಕ್ಷಿಣ ಭಾರತದ ಒಂದು ಬಡಬ್ರಾಹ್ಮಣ ಕುಟುಂಬದಲ್ಲಿ ಹುಟ್ಟಿ ಸರಿಯಾದ ವಿದ್ಯಾರ್ಜನೆಗೆ ಅನುಕೂಲವಿಲ್ಲದೆ ಮದ್ರಾಸ್ ಪೋರ್ಟ್ ಟ್ರಸ್ಟ್‌ನಲ್ಲಿ ಗುಮಾಸ್ತನಾದನು. ಆದರೆ ಅದುಮಲಾಗದೆ ಉಕ್ಕಿ ಬರುತ್ತಿರುವ ಯಾವುದೋ ಒಂದು ಅಂತಶ್ಶಕ್ತಿಯ ಪ್ರತಿಭೆಯಿಂದ ತನ್ನ ವಿರಾಮ ಕಾಲದಲ್ಲಿ ಸಂಖ್ಯೆ ಮತ್ತು ಸಮೀಕರಣ ಪ್ರಶ್ನೆಗಳಲ್ಲಿ ನಿರತನಾಗುತ್ತಿದ್ದನು. ಅದೃಷ್ಟವಶಾತ್ ಒಬ್ಬ ಗಣಿತ ಶಾಸ್ತ್ರಜ್ಞನ ಕಣ್ಣಿಗೆ ಬಿದ್ದುದರಿಂದ ಆತನ ಲೇಖನಗಳು ಇಂಗ್ಲೆಂಡಿನಲ್ಲಿ ಕೇಂಬ್ರಿಡ್ಜ್‌ಗೆ ಹೋದವು. ಗುಮಾಸ್ತಗಿರಿಯನ್ನು ಬಿಟ್ಟು ಕೇಂಬ್ರಿಡ್ಜ್ ಸೇರಿ ಅತ್ಯಲ್ಪ ಕಾಲದಲ್ಲಿ ಅಸಾಧಾರಣ ಪಾಂಡಿತ್ಯದ ಅಮೂಲ್ಯ ಸಂಶೋಧನೆಗಳನ್ನು ನಡೆಸಿದನು. ಇಂಗ್ಲೆಂಡಿನ ರಾಯಲ್ ಸೊಸೈಟಿಯವರು ತಮ್ಮ ಸಂಪ್ರದಾಯವನ್ನು ಅತಿಕ್ರಮಿಸಿ ಆತನನ್ನು ಫೆಲೋ ಆಗಿ ಮಾಡಿಕೊಂಡು ಗೌರವಿಸಿದರು. ಆದರೆ ಇದಾದ ಎರಡೇ ವರ್ಷಗಳಲ್ಲಿ ಪ್ರಾಯಶಃ ತನ್ನ ೩೩ನೆಯ ವರ್ಷದಲ್ಲಿ ಆತನು ಕ್ಷಯರೋಗಕ್ಕೆ ಆಹುತಿಯಾದನು. ಜೂಲಿಯನ್ ಹಕ್ಸಲೇ ಎಲ್ಲೋ ಒಂದೆಡೆಯಲ್ಲಿ ಈ ಶತಮಾನದ ಅತಿ ಶ್ರೇಷ್ಠ ಗಣಿತ ಶಾಸ್ತ್ರಜ್ಞನೆಂದರೆ ರಾಮಾನುಜಂ ಎಂದು ಹೇಳಿದ್ದಾನೆ.

ರಾಮಾನುಜಂನ ಅಲ್ಪಕಾಲಿಕ ಜೀವ ಮತ್ತು ಸಾವು ಭಾರತದ ಇಂದಿನ ಪರಿಸ್ಥಿತಿಯ ಸಂಕೇತ. ಕೋಟ್ಯನುಕೋಟಿ ಭಾರತೀಯರಲ್ಲಿ ವಿದ್ಯಾರ್ಜನೆ ಮಾಡುವವರೇ ಅತಿ ವಿರಳ. ಹಸಿವಿನಿಂದ ಸಾಯುವವರೇ ಹೆಚ್ಚು ಜನ. ಸ್ವಲ್ಪ ವಿದ್ಯಾರ್ಜನೆ ಮಾಡಿದವರಿಗೂ ದೊರೆಯುವುದು ಇಂಗ್ಲೆಂಡಿನಲ್ಲಿ ನಿರಾಶ್ರಿತರಿಗೆ ಕೊಡುವ ಭಿಕ್ಷೆಗೂ ಕೀಳಾದ ಯಾವುದೋ ಒಂದು ಕಚೇರಿಯ ಗುಮಾಸ್ತೆ ಕೆಲಸ. ಜೀವನದ ಹೆಬ್ಬಾಗಿಲು ತೆರೆದರೆ, ಹೊಟ್ಟೆತುಂಬ ಆಹಾರ, ಆರೋಗ್ಯಕರವಾದ ಜೀವನ ಸೌಕರ್ಯ, ವಿದ್ಯಾಭ್ಯಾಸ, ಬೆಳವಣಿಗೆಗೆ ಅವಕಾಶ ಇವೆಲ್ಲ ದೊರೆತರೆ ಇವರಲ್ಲನೇಕರು ಪ್ರತಿಭಾವಂತ ವಿಜ್ಞಾನಿ ಶಿಕ್ಷಣ ಶಾಸ್ತ್ರವೇತ್ತರು, ಉದ್ಯೋಗ ಕುಶಲರು, ಕೈಗಾರಿಕಾ ಪ್ರಮುಖರು, ಲೇಖಕರು, ಕಲಾವಿದರುಗಳು, ಆಗಿ ನವಭಾರತದ ಮತ್ತು ನೂತನ ಪ್ರಪಂಚದ ಸೃಷ್ಟಿಗೆ ಸಹಾಯಕರಾಗುತ್ತಾರೆನ್ನುವದರಲ್ಲಿ ಸಂಶಯವಿಲ್ಲ.

## ೨೧. ಉನ್ನತಿ ಮತ್ತು ಅವನತಿ

ಕ್ರಿಸ್ತಶಕೆಯ ಆರಂಭದ ಒಂದು ಸಾವಿರ ವರ್ಷಗಳಲ್ಲಿ ಭಾರತದಲ್ಲಿ ಅನೇಕ ಉಬ್ಬರವಿಳಿತಗಳಾಗಿವೆ. ದಂಡಯಾತ್ರೆ ಬಂದ ಅನೇಕರೊಡನೆ ಘರ್ಷಣೆಗಳೂ ದೇಶದಲ್ಲಿ ಅಂತಃ ಕ್ಷೋಭೆಗಳೂ ಆಗಿವೆ. ಆದರೂ ಅದು ಉತ್ಕಟ ರಾಷ್ಟ್ರೀಯ ಜೀವನದ ಕಾಲ, ರಾಷ್ಟ್ರಶಕ್ತಿಯು ಉಕ್ಕೇರಿ ಹರಿದು ಹಬ್ಬಿದ ಕಾಲ, ಸರ್ವತೋಮುಖ ಪ್ರಗತಿಯ ಕಾಲ. ಸಂಸ್ಕೃತಿಯು ಒಂದು ಸರ್ವಸಂಪದ್ಯುಕ್ತ ನಾಗರಿಕತೆಯಾಗಿ ವಿಕಾಸಗೊಂಡು ತತ್ತ್ವ ಶಾಸ್ತ್ರ, ಸಾಹಿತ್ಯ, ನಾಟಕ, ಕಲೆ, ವಿಜ್ಞಾನ ಮತ್ತು ಗಣಿತ ಶಾಸ್ತ್ರಗಳಲ್ಲಿ ಪ್ರಫುಲ್ಲಿತವಾದ ಕಾಲ. ಭಾರತದ ಆರ್ಥಿಕ ನೀತಿಯು ವಿಶಾಲಗೊಳ್ಳುತ್ತದೆ. ಭಾರತದ ದಿಗಂತವು ಬಹು ದೂರ ಸಾಗಿ ಅನೇಕ ದೇಶಗಳು ಅದರ ದೊಡ್ಡ ಮಡಿಲಲ್ಲಿ ಸೇರುತ್ತವೆ. ಇರಾಣ, ಚೀನ, ಹೆಲನಿಕ್ ಪ್ರಪಂಚ, ಮಧ್ಯ ಏಷ್ಯ ಇವುಗಳೊಂದಿಗೆ ಸಂಪರ್ಕ ಬೆಳೆಯುತ್ತದೆ. ಎಲ್ಲಕ್ಕೂ ಮಿಗಿಲಾಗಿ ಪೂರ್ವ ಸಮುದ್ರಗಳ ಮೇಲಿನ ಮಮತೆಯು ಹೆಚ್ಚಿ ಭಾರತೀಯ ವಲಸೆ ರಾಷ್ಟ್ರಗಳ ಸ್ಥಾಪನೆಗೆ ಕಾರಣವಾಗುತ್ತದೆ; ಭಾರತೀಯ ಸಂಸ್ಕೃತಿಯು ಭಾರತದ ಗಡಿಯಾಚೆ ಬಹುದೂರ ಹರಡುತ್ತದೆ. ಈ ಯುಗದ ಮಧ್ಯಕಾಲದಲ್ಲಿ ನಾಲ್ಕನೆಯ ಶತಮಾನದ ಆದಿಯಿಂದ ೬ನೆಯ ಶತಮಾನದ ವರೆಗೆ ಗುಪ್ತ ಸಾಮ್ರಾಜ್ಯವು ಉಚ್ಛ್ರಾಯ ಸ್ಥಿತಿಗೆ ಬಂದು ಮಾನಸಿಕ ಮತ್ತು ಕಲಾ ವಿಕಾಸಕ್ಕೆ ಪೋಷಕವಾಗುತ್ತದೆ, ಸಂಕೇತವೂ ಆಗುತ್ತದೆ. ಈ ಕಾಲವನ್ನು ಭಾರತದ ಸುವರ್ಣಯುಗ ಅಥವ ಶ್ರೇಷ್ಠ ಯುಗವೆಂದು ಕರೆದಿದ್ದಾರೆ. ಆ ಕಾಲದ ಗ್ರಂಥಗಳು ಸಂಸ್ಕೃತ ಸಾಹಿತ್ಯದ ಮಹಾಕಾವ್ಯಗಳು. ಅವುಗಳಲ್ಲಿ ಒಂದು ಗಂಭೀರ ಶಾಂತಮುದ್ರೆ ಇದೆ. ಆತ್ಮವಿಶ್ವಾಸವಿದೆ. ಆ ನಾಗರಿಕತೆಯ ಬೆಳಸಿನಲ್ಲಿ ಬಾಳುವುದೊಂದು ಗೌರವ, ವೈಶಿಷ್ಟ್ಯ ಎಂಬ ಹೆಮ್ಮೆ ಇದೆ; ಮತ್ತು ಇದರೊಂದಿಗೆ ಅವರ ಅದ್ಭುತ ಬುದ್ಧಿಶಕ್ತಿಯನ್ನೂ ಕಲಾಪ್ರೌಢಿಮೆಯನ್ನೂ ಸಾಧ್ಯವಿರುವಮಟ್ಟಿಗೆ ಉಪಯೋಗಿಸಬೇಕೆಂಬ ಕುತೂಹಲವಿದೆ.

ಆದರೂ ಆ ಸುವರ್ಣಯುಗದ ಸಂಜೆಯಾಗುವುದರ ಒಳಗೆ ದೌರ್ಬಲ್ಯವೂ, ಕ್ಷೀಣದೆಶೆಯೂ ತಲೆ ಎತ್ತುತ್ತವೆ. ವಾಯುವ್ಯದಿಂದ ಶ್ವೇತಹೂಣರು ಮೇಲಿಂದ ಮೇಲೆ ದಂಡೆತ್ತಿ ಬರುತ್ತಾರೆ. ಅವರನ್ನು ಹಿಮ್ಮೆಟ್ಟಲಾಗುತ್ತದೆ. ಆದರೂ ಬಂದೇ ಬರುತ್ತಾರೆ, ಕ್ರಮೇಣ ಉತ್ತರ ಹಿಂದೂಸ್ಥಾನದಲ್ಲಿ ಕಾಲೂರುತ್ತಾರೆ. ಉತ್ತರದಲ್ಲಿ ಸುಮಾರು ಐವತ್ತು ವರ್ಷಗಳಕಾಲ ಆಳಿದ ಒಂದು ರಾಜ್ಯವನ್ನು ಸಹ ಕಟ್ಟುತ್ತಾರೆ. ಆದರೆ ಗುಪ್ತ ಸಂತತಿಯ ಕೊನೆಯ ಚಕ್ರವರ್ತಿಯು ಮಹಾಪ್ರಯತ್ನಮಾಡಿ, ಮಧ್ಯ ಇಂಡಿಯದ ರಾಜನಾದ ಯಶೋವರ್ಮನೊಂದಿಗೆ ಸೇರಿಕೊಂಡು ಹೂಣರನ್ನು ಓಡಿಸುತ್ತಾನೆ. ಈ ಅನೇಕ ಕಾಲದ ಹೋರಾಟದಿಂದ ಭಾರತದ ರಾಜಕೀಯ ಮತ್ತು ಸೈನ್ಯಶಕ್ತಿ ಕುಂದಿತು; ಮತ್ತು ಉತ್ತರ ಹಿಂದೂಸ್ಥಾನದಲ್ಲೆಲ್ಲ ಹೂಣರನೇಕರು ನೆಲಸಿದ್ದರಿಂದ ಜನರಲ್ಲಿ ಒಂದು ಆಂತರಿಕ ಬದಲಾವಣೆಯೂ ಆಯಿತು. ಉಳಿದ ವಿದೇಶೀಯರಂತೆ ಅವರೂ ಭಾರತೀಯರಾದರು. ಆದರೆ ಮೂಲ ಸಿಂಧೂ ಆರ್ಯರ ಪ್ರಾಚೀನ ಆದರ್ಶಗಳು ಸಡಿಲಿದವು. ಹೂಣರ ಪೂರ್ವೇತಿಹಾಸವೆಲ್ಲ ವಿಶೇಷ ಕ್ರೌರ್ಯ ಮತ್ತು ಅಮಾನುಷ ಕೃತ್ಯಗಳಿಂದ ತುಂಬಿವೆ. ಇವು ಭಾರತೀಯ ಯುದ್ಧ ನೀತಿಗೆ ಮತ್ತು ಆಡಳಿತ ನೀತಿಗೆ ತೀರ ವಿರುದ್ಧವಾದವು.

ಏಳನೆಯ ಶತಮಾನದಲ್ಲಿ ಹರ್ಷನ ಕಾಲದಲ್ಲಿ ರಾಜಕೀಯ ಮತ್ತು ಸಾಂಸ್ಕೃತಿಕ ಪುನರುಜ್ಜೀವನವಾಯಿತು. ಗುಪ್ತರ ಕಾಲದ ವೈಭವಪೂರ್ಣ ರಾಜಧಾನಿಯಾದ ಉಜ್ಜಯಿನಿ ನಗರವು ಪುನಃ ಸಂಸ್ಕೃತಿ ಮತ್ತು ಕಲೆಗೆ ಮಾತೃಸ್ಥಾನವಾಗಿ ಪ್ರಬಲ ರಾಜ್ಯದ ಕೇಂದ್ರವಾಯಿತು. ಆದರೆ ಅನಂತರದ ಶತಮಾನಗಳಲ್ಲಿ ಇದೂ ಬಲಗುಂದಿ ಕ್ಷೀಣದೆಶೆಗೆ ಬರುತ್ತದೆ. ಒಂಭತ್ತನೆಯ ಶತಮಾನದಲ್ಲಿ ಗುಜರಾತದ ಮಿಹಿರಭೋಜನು ಕನೂಜ ಪಟ್ಟಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಉತ್ತರ ಭಾರತ ಮತ್ತು ಮಧ್ಯ ಭಾರತವನ್ನು ಒಂದುಗೂಡಿಸಿ ಏಕಛತ್ರಾಧಿಪನಾಗುತ್ತಾನೆ. ಪುನಃ

ಮತ್ತೊಂದು ಸಾಹಿತ್ಯ ಪುನರುಜ್ಜೀವನವಾಗುತ್ತದೆ. ಅದರಲ್ಲಿ ರಾಜಶೇಖರನು ಪ್ರಮುಖ ಪಾತ್ರ ವಹಿಸುತ್ತಾನೆ. ಪುನಃ ಹನ್ನೊಂದನೆಯ ಶತಮಾನದಲ್ಲಿ ಉಜ್ಜಯಿನಿಯಲ್ಲಿ ಇನ್ನೊಬ್ಬ ಭೋಜನು ಬಲಿಷ್ಠನಾಗಿ ಆದರ್ಶಪುರುಷನಾಗುತ್ತಾನೆ. ಈ ಭೋಜನು ಅನೇಕ ರೀತಿಯಲ್ಲಿ ಪ್ರತಿಭಾವಂತನಾದ ಮಹಾಪುರುಷ. ಆತನು ವೈಯಾಕರಣಿ, ಕೋಶ ನಿರ್ಮಾಪಕ, ವೈದ್ಯಶಾಸ್ತ್ರ ಮತ್ತು ಖಗೋಳ ಶಾಸ್ತ್ರಗಳಲ್ಲಿ ನಿಪುಣ. ಕಲೆ ಮತ್ತು ಸಾಹಿತ್ಯದ ಸೃಷ್ಟಿಕರ್ತ ಮತ್ತು ಪೋಷಕ ; ಸ್ವತಃ ಕವಿ. ಅನೇಕ ಗ್ರಂಥಗಳನ್ನು ಆತನೇ ಬರೆದನೆಂದು ಪ್ರತೀತಿ ಇದೆ. ಮಹೋನ್ನತಿ, ಪಾಂಡಿತ್ಯ, ಔದಾರ್ಯ ಇವುಗಳಿಗೆ ಆತನ ಹೆಸರು ಮನೆಮಾತಾಗಿದೆ. ಜನಪದಸಾಹಿತ್ಯದ ಇತಿಹಾಸದಲ್ಲಿ ಆತನ ಹೆಸರು ಒಂದು ಸಂಕೇತವಾಗಿದೆ.

ಇಷ್ಟೆಲ್ಲ ಜಾಜ್ವಲ್ಯತೆಯಿದ್ದರೂ, ಭಾರತವು ಒಂದು ಅಂತರ್ದೌರ್ಬಲ್ಯದಿಂದ ನರಳುತ್ತಿದ್ದಂತೆ ತೋರುತ್ತದೆ. ಅದರ ರಾಜಕೀಯ ಅಂತಸ್ತು ಮತ್ತು ರಚನಾತ್ಮಕ ಕಾರ್ಯಶಕ್ತಿ ಕುಂದುತ್ತದೆ. ಈ ಕ್ಷಯ ರೋಗವು ಎಂದು ಆರಂಭವಾಯಿತೆಂದು ಹೇಳಲು ಸಾಧ್ಯವಿಲ್ಲ. ಇದು ನಿದಾನವಾಗಿ ಒಳಗೇ ಹುಟ್ಟಿ ಹರಿದು ಬಂದ ರೋಗ. ದಕ್ಷಿಣ ಭಾರತಕ್ಕಿಂತ ಮುಂಚೆಯೇ ಉತ್ತರ ಭಾರತವು ಈ ರೋಗಕ್ಕೆ ಆಹುತಿಯಾಯಿತು. ರಾಜಕೀಯ ಮತ್ತು ಸಂಸ್ಕೃತಿಯ ದೃಷ್ಟಿಯಿಂದ ದಕ್ಷಿಣ ಭಾರತವು ಬಹು ಪ್ರಾಮುಖ್ಯತೆ ಪಡೆಯುತ್ತದೆ. ಪ್ರಾಯಶಃ ಮೇಲಿಂದ ಮೇಲೆ ದಂಡೆತ್ತಿ ಬರುತ್ತಿದ್ದ ವಿದೇಶಿಯರ ಆಘಾತಕ್ಕೆ ಸಿಲುಕದಿದ್ದುದೇ ಕಾರಣವಿರಬಹುದು. ಪ್ರಾಯಶಃ ಉತ್ತರದೇಶದ ಅವ್ಯವಸ್ಥಿತ ಜೀವನದಿಂದ ತಪ್ಪಿಸಿಕೊಳ್ಳಲೆತ್ನಿಸಿ ಅನೇಕ ಗ್ರಂಥಕರ್ತರು, ಕಲಾವಿದರು, ಶಿಲ್ಪಕುಶಲಿಗಳು ದಕ್ಷಿಣ ದೇಶಕ್ಕೆ ಹೋಗಿ ನೆಲಸಿರಬಹುದು. ದಕ್ಷಿಣ ಭಾರತದ ಬಲಿಷ್ಠ ರಾಜ್ಯಗಳು ತಮ್ಮ ವೈಭವಯುಕ್ತ ರಾಜಾಸ್ಥಾನಗಳಲ್ಲಿ ಇವರಿಗೆ ಆಶ್ರಯ ಕೊಟ್ಟಿರಬಹುದು. ಬೇರೆಲ್ಲೂ ದೊರೆಯದ ಪ್ರೋತ್ಸಾಹವನ್ನು ಕೊಟ್ಟು ಅವರ ಕಲಾಭಿಜ್ಞತೆಯ ವಿಕಸನಕ್ಕೆ ಅವಕಾಶ ಕಲ್ಪಿಸಿರಬಹುದು.

ಹಿಂದಿನ ಕಾಲದಂತೆ ಉತ್ತರ ಹಿಂದೂಸ್ಥಾನಕ್ಕೆ ಭಾರತದಲ್ಲೆಲ್ಲಾ ಅಧಿಕಾರ ವ್ಯಾಪ್ತಿ ಇಲ್ಲದಿದ್ದರೂ ಮತ್ತು ಸಣ್ಣಸಣ್ಣ ರಾಜ್ಯಗಳಾಗಿ ಅದು ಒಡೆದು ಹೋಗಿದ್ದರೂ ಅಲ್ಲಿ ಇನ್ನೂ ಜೀವನ ಪರಿಪೂರ್ಣತೆಯು ಇತ್ತು. ಅನೇಕ ಸಂಸ್ಕೃತಿ ಮತ್ತು ದರ್ಶನ ಕೇಂದ್ರಗಳಿದ್ದವು. ಎಂದಿನಂತೆ ಕಾಶೀನಗರವು ಭಾರತದ ತಾತ್ವಿಕ ಮತ್ತು ದಾರ್ಶನಿಕ ವಿಚಾರಗಳಿಗೆ ಹೃದಯ ಪ್ರಾಯವಾಗಿತ್ತು. ನೂತನ ಸಿದ್ಧಾಂತದ ಪ್ರತಿಪಾದಕನಾಗಲಿ, ಪ್ರಾಚೀನ ಸಿದ್ಧಾಂತದ ನೂತನ ಟೀಕಾ ಕರ್ತೃವಾಗಲಿ ಕಾಶಿಗೆ ಬಂದೇ ತನ್ನ ಪ್ರತಿಪಾದನೆಗೆ ಸಮರ್ಥನೆ ಮತ್ತು ಮನ್ನಣೆ ಪಡೆಯಬೇಕಾಗಿತ್ತು. ಬಹುಕಾಲದವರೆಗೆ ಕಾಶ್ಮೀರದೇಶವು ಬೌದ್ಧ ಮತ್ತು ಬ್ರಾಹ್ಮಣ ಮತಗಳ ಸಂಸ್ಕೃತಜ್ಞಾನಕ್ಕೆ ಮಹಾಕೇಂದ್ರವಾಗಿತ್ತು. ಅನೇಕ ವಿಶ್ವವಿದ್ಯಾನಿಲಯಗಳಿದ್ದವು. ಅವುಗಳಲ್ಲೆಲ್ಲ ದೊಡ್ಡದಾದ ನಲಂದ ವಿಶ್ವವಿದ್ಯಾನಿಲಯದ ವಿದ್ವತ್ಪರಿಪೂರ್ಣತೆಗೆ ಭಾರತಾದ್ಯಂತವೂ ತುಂಬ ಗೌರವವಿತ್ತು. ನಲಂದದಲ್ಲಿ ಶಿಕ್ಷಣಪಡೆದವನೆಂದರೆ ಸುಸಂಸ್ಕೃತನೆಂಬ ಪ್ರತೀತಿ ಇತ್ತು, ಎಲ್ಲರಿಗೂ ಅಲ್ಲಿ ಪ್ರವೇಶವಿರುತ್ತಿರಲಿಲ್ಲ. ಉಚ್ಚ ಶಿಕ್ಷಣ ಪಡೆದು ಒಂದು ಜ್ಞಾನ ಮಟ್ಟವನ್ನು ಮುಟ್ಟಿದವರಿಗೆ ಮಾತ್ರ ಪ್ರವೇಶವಿತ್ತು. ಪಾಂಡಿತ್ಯ ಪಡೆದನಂತರ ಮಾತ್ರ ಅಲ್ಲಿ ಶಿಕ್ಷಣಕ್ಕೆ ಅವಕಾಶವಿತ್ತು. ಚೀಣ, ಜಪಾನ್, ಟಿಬೆಟ್ ಕೊರಿಯ, ಮಂಗೋಲಿಯಾ ಮತ್ತು ಬೊಖಾರದಿಂದ ಸಹ ವಿದ್ಯಾರ್ಥಿಗಳು ಬರುತ್ತಿದ್ದರು. ಬೌದ್ಧ ಮತ್ತು ಬ್ರಾಹ್ಮಣ ಮತಗಳ ಧಾರ್ಮಿಕ ಮತ್ತು ತಾತ್ವಿಕ ವಿಚಾರಗಳಲ್ಲದೆ ತಾತ್ವಿಕ ವ್ಯಾವಹಾರಿಕ ವಿಷಯಗಳನ್ನೂ ಬೋಧಿಸುತ್ತಿದ್ದರು. ಕಲಾಶಾಲೆಯೂ, ಶಿಲ್ಪಕಲಾ ಶಾಲೆಯೂ ಇದ್ದವು. ವೈದ್ಯವಿದ್ಯೆ, ಕೃಷಿಕವಿದ್ಯೆ, ಗೋರಕ್ಷಣೆಗಳನ್ನು ಬೋಧಿಸಲು ಪ್ರತ್ಯೇಕ ಶಾಖೆಗಳಿದ್ದವು. ವಿಶ್ವವಿದ್ಯಾನಿಲಯದ ಬೌದ್ಧಿಕಜೀವನದ ವಿಷಯವಾಗಿ ಚರ್ಚೆಗಳೂ ವಾದವಿವಾದಗಳೂ ಆಗುತ್ತಿದ್ದವು. ಪರದೇಶಗಳಲ್ಲಿ ಭಾರತದ ಸಂಸ್ಕೃತಿಯ ಪ್ರಚಾರಕ್ಕೆ ನಲಂದ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳೇ ಕಾರಣ ಪುರುಷರಾದರು.

ಬಿಹಾರದ ಇಂದಿನ ಭಾಗಲ್ಪುರದ ಬಳಿ ವಿಕ್ರಮಶಾಲೆ ವಿಶ್ವವಿದ್ಯಾನಿಲಯವೂ ಕಾಥೇವಾಡದಲ್ಲಿ

ವಲ್ಲಭಿ ವಿಶ್ವವಿದ್ಯಾನಿಲಯವೂ ಇದ್ದವು. ಗುಪ್ತರ ಕಾಲದಲ್ಲಿ ಉಜ್ಜಯಿನಿ ವಿಶ್ವವಿದ್ಯಾನಿಲಯವು ಬಹು ಪ್ರಾಮುಖ್ಯತೆಗೆ ಬಂದಿತು. ದಕ್ಷಿಣದಲ್ಲಿ ಅಮರಾವತಿ ವಿಶ್ವವಿದ್ಯಾನಿಲಯವಿತ್ತು.

ಆದರೆ ಈ ಯುಗಕ್ಕೂ ಅಸ್ತಕಾಲವು ಸಮೀಪಿಸಿದ್ದಂತೆ ಇದೆಲ್ಲವೂ ಅನಾಗರಿಕತೆಯ ಅಪರಾಹ್ಣ ದಂತೆ ತೋರುತ್ತದೆ. ಪ್ರಾತಸ್ಸಮಯದ ಹೊಂಗನಸು ಮಾಯವಾಗಿ, ಮಧ್ಯಾಹ್ನದ ತೀಕ್ಷ್ಣತೆಯೂ ಕಳೆದಿತ್ತು. ದಕ್ಷಿಣದಲ್ಲಿ ಅಂತಶ್ಶಕ್ತಿಯೂ, ಕಾರ್ಯಪಟುತ್ವವೂ ಇನ್ನೂ ಉಳಿದಿತ್ತು. ಇದೂ ಕೆಲವು ಶತಮಾನಗಳ ಕಾಲ ಬಾಳಿತು. ಭಾರತೀಯ ವಲಸೆರಾಜ್ಯಗಳಲ್ಲಿನ ಶಕ್ತಿಪೂರ್ಣ ತುಂಬುಜೀವನ ದಿಂದ ಇನ್ನೂ ಐದುನೂರು ವರ್ಷಗಳು ಈ ಸಂಸ್ಕೃತಿ ಜೀವಂತವಿತ್ತು. ಆದರೆ ಹೃದ್ರೋಗವು ಆರಂಭವಾಗಿ ತಾಡನ ನಿದಾನವಾಗಿತ್ತು. ಕ್ರಮೇಣ ಹೃದಯ ಸ್ತಂಭನೆಯಾಗಿ ಅಂಗಾಂಗಗಳೂ ನಿರ್ಜೀವವಾದವು. ಎಂಟನೆಯ ಶತಮಾನದಿಂದೀಚೆಗೆ ಶಂಕರನ ತರುವಾಯ ತತ್ತ್ವ ಶಾಸ್ತ್ರದಲ್ಲಿ ವಿಭೂತಿ ಪುರುಷರು ಯಾರೂ ಬಂದಿಲ್ಲ. ಅನೇಕ ಟೀಕಾಕಾರರು ಮತ್ತು ನೈಯಾಯಿಕರು ಮಾತ್ರ ಬಂದಿದ್ದಾರೆ. ಶಂಕರನೂ ದಕ್ಷಿಣ ಭಾರತದವನು. ಆತನಲ್ಲಿ ಕಂಡ ಅನ್ವೇಷಣಕುತೂಹಲ ಮಾನಸಿಕ ಸಾಹಸದ ಭಾವನೆಗಳಿಗೆ ಬದಲು ಕಠಿಣ, ಆಡಂಬರದ ತರ್ಕ ಮತ್ತು ಟೀಕೆಗಳಿಗೆ ಪ್ರಾಧಾನ್ಯತೆ ದೊರೆಯುತ್ತವೆ. ಬ್ರಾಹ್ಮಣ ಮತ್ತು ಬೌದ್ಧ ಮತಗಳೆರಡೂ ಅವನತಿಗಿಳಿದು ಹೀನ ಪೂಜಾ ಪದ್ಧತಿಗೆ ಎಡೆಕೊಡುತ್ತವೆ. ಅದರಲ್ಲೂ ತಂತ್ರ ಪೂಜೆ ಮತ್ತು ಯೋಗಶಾಸ್ತ್ರದ ದುರುಪಯೋಗ ಹೆಚ್ಚುತ್ತಿದೆ.

ಸಾಹಿತ್ಯದಲ್ಲಿ ಎಂಟನೆಯ ಶತಮಾನದ ಭವಭೂತಿಯೇ ಕೊನೆಯವನು. ಅನೇಕ ಗ್ರಂಥಗಳು ಹುಟ್ಟಿದರೂ ಶೈಲಿಯು ಹೆಚ್ಚು ಜಟಿಲವೂ, ಕಠಿಣವೂ ಆಗುತ್ತದೆ. ವಿಷಯಭಾವನೆಯಲ್ಲಾಗಲಿ, ನಿರೂಪಣೆಯಲ್ಲಾಗಲಿ ಯಾವ ನವೀನತೆಯೂ ಇಲ್ಲ. ಗಣಿತ ಶಾಸ್ತ್ರದಲ್ಲಿ ೧೨ ನೆಯ ಶತಮಾನದಲ್ಲಿದ್ದ ಎರಡನೆಯ ಭಾಸ್ಕರನೆ ಕೊನೆಯವನು. ಕಲೆಯಲ್ಲಿ, ಇ. ಬಿ. ಹ್ಯಾವೆಲ್ ಇನ್ನೂ ಸ್ವಲ್ಪ ಹೆಚ್ಚು ಕಾಲಾವಕಾಶವನ್ನು ಕೊಟ್ಟಿದ್ದಾನೆ. ಆತನ ಅಭಿಪ್ರಾಯದಂತೆ ಏಳು ಮತ್ತು ಎಂಟನೆಯ ಶತಮಾನ ಗಳಲ್ಲಿ ಭಾರತದಲ್ಲಿ ಉನ್ನತ ಶಿಲ್ಪಕಲೆ ಮತ್ತು ಚಿತ್ರಕಲೆ ರೂಪುಗೊಳ್ಳುವವರೆಗೂ ಕಲೆಯು ಭಾವ ವಿನ್ಯಾಸದ ಸಂಪೂರ್ಣತೆ ಪಡೆಯಲಿಲ್ಲ. ಯೂರೋಪಿನಲ್ಲಿ ಏಳು ಅಥವ ಎಂಟನೆಯ ಶತಮಾನದಿಂದ ಹದಿನಾಲ್ಕನೆಯ ಶತಮಾನದವರೆಗೆ ಗಾಥಿಕ್‌ಕಲೆ ಅತ್ಯುನ್ನತ ಮಟ್ಟಕ್ಕೇರಿದಂತೆ ಭಾರತದಲ್ಲಿ ಸಹ ಅದೇ ಕಾಲ ಭಾರತೀಯ ಕಲೆಗೆ ಮಹೋನ್ನತಿಯ ಕಾಲವಾಗಿತ್ತು. ಹದಿನಾರನೆಯ ಶತಮಾನದಿಂದ ಪ್ರಾಚೀನ ಭಾರತೀಯ ಸೃಷ್ಟಿ ಕೌಶಲ್ಯ ಕ್ಷೀಣಿಸುತ್ತ ಬಂದಿತು. ಈ ಅಭಿಪ್ರಾಯ ಎಷ್ಟು ಸಾಧುವೋ ನಾನರಿಯೆ. ಆದರೆ ಕಲಾ ಪ್ರಪಂಚದಲ್ಲಿ ಸಹ ಉತ್ತರ ಭಾರತಕ್ಕಿಂತ ಹೆಚ್ಚು ಕಾಲ ದಕ್ಷಿಣ ಭಾರತ ತನ್ನ ಕಲಾಪ್ರೌಢಿಮೆಯನ್ನೂ ಕಾಯ್ದುಕೊಂಡು ಬಂದಿತು.

ಕೊನೆಯಬಾರಿ ದೊಡ್ಡ ವಲಸೆಗಾರರ ತಂಡ ಸೀಮೋಲ್ಲಂಘನಕ್ಕಾಗಿ ಹೊರಟದ್ದು ದಕ್ಷಿಣ ಇಂಡಿಯದಿಂದ ಒಂಭತ್ತನೆಯ ಶತಮಾನದಲ್ಲಿ. ಆದರೆ ಚೋಳರಾಜರು ಹನ್ನೊಂದನೆಯ ಶತಮಾನ ದಲ್ಲಿ ಶ್ರೀವಿಜಯನನ್ನು ಸೋಲಿಸಿ ಗೆಲ್ಲುವವರೆಗೂ ದೊಡ್ಡ ನೌಕಾ ಬಲವುಳ್ಳ ರಾಜರಾಗಿದ್ದರು.

ಈ ರೀತಿ ಭಾರತ ಬಲಹೀನವಾಗುತ್ತ ತನ್ನ ಸೃಷ್ಟಿಸಾಮರ್ಥ್ಯವನ್ನೂ, ಜೀವ ಸತ್ವವನ್ನೂ ಕಳೆದುಕೊಳ್ಳುತ್ತ ಬಂದಿತು. ಆದರೆ ಈ ಹೃದ್ರೋಗ ಬಹಳ ಹಿಂದೆಯೇ ಮೊದಲು ಉತ್ತರದಲ್ಲಿ ಆರಂಭವಾಗಿ ಕ್ರಮೇಣ ದಕ್ಷಿಣಕ್ಕೂ ಹರಡಿ ಆರಂಭವಾಗಿ ಅನೇಕ ಶತಮಾನಗಳ ಕಾಲ ನರಳಿ ಕೊನೆಗೆ ಕ್ಷೀಣದೆಶೆಗೆ ಬಂದಿತು. ಈ ರಾಜಕೀಯ ಅವನತಿಗೆ, ಸಾಂಸ್ಕೃತಿಕ ಜಡತ್ವಕ್ಕೆ ಕಾರಣ ಗಳೇನು ? ವ್ಯಕ್ತಿಗಳ ವಿನಾಶಕ್ಕೆ ಕಾರಣವಾದಂತೆ ನಾಗರಿಕತೆಗಳ ವಿನಾಶಕ್ಕೂ ಕಾಲಮಹಿಮೆಯೇ ಕಾರಣವೇ ಅಥವ ಅದೊಂದು ಅಲೆಯ ಉಬ್ಬರವಿಳಿತವೇ ? ಅಥವ ಬಾಹ್ಯ ಕಾರಣಗಳ ಮತ್ತು ಪರಧಾಳಿಗಳ ಪರಿಣಾಮವೆ ? ರಾಜಕೀಯ ಸ್ವಾತಂತ್ರ್ಯವು ಹೋದ ಮರುಕ್ಷಣದಲ್ಲಿಯೇ ಭಾರತೀಯ ತತ್ತ್ವಶಾಸ್ತ್ರದ ಪಟುತ್ವವೂ ಕುಂದಿತು ಎಂದು ರಾಧಾಕೃಷ್ಣರ ಅಭಿಪ್ರಾಯವಿದೆ; ಸಿಲ್ವೆ ಲೆವಿಯ ಅಭಿಪ್ರಾಯವೂ ಅದೇ ಇದೆ.

ರಾಜಕೀಯ ಸ್ವಾತಂತ್ರ್ಯವು ಹೋದ ಒಡನೆ ಸಾಂಸ್ಕೃತಿಕ ಅವನತಿಯೂ ನಿಶ್ಚಯವೆಂಬುದೆಲ್ಲ ನಿಜ. ಆದರೆ ರಾಜಕೀಯ ಸ್ವಾತಂತ್ರ್ಯದ ನಾಶಕ್ಕೆ ಮೊದಲು ಯಾವುದೋ ಒಂದು ಕ್ಷಯರೋಗವಿಲ್ಲದೆ ರಾಜಕೀಯ ಸ್ವಾತಂತ್ರ್ಯವು ಏಕೆ ಹೋಗಬೇಕು? ಒಂದು ದೊಡ್ಡ ಬಲಯುತ ರಾಷ್ಟ್ರವು ಸಣ್ಣ ನೆರೆಯ ರಾಜ್ಯವನ್ನು ನುಂಗಬಹುದು. ಆದರೆ ಸರ್ವತೋಮುಖ ಪ್ರಗತಿಯನ್ನು ಪಡೆದು, ಶ್ರೇಷ್ಠ ನಾಗರಿಕತೆಯುಳ್ಳ ವಿಶಾಲ ಭಾರತದಂಥ ದೇಶವು ಅಂತಃಕ್ಷಯ ಅಥವ ಪರಕೀಯರ ವಿಶೇಷ ಯುದ್ಧ ನೈಪುಣ್ಯವಿಲ್ಲದ ಪರದಾಳಿಗೆ ಬಲಿಯಾಗಲು ಕಾರಣವಿಲ್ಲ. ಈ ಒಂದು ಸಾವಿರ ವರ್ಷಗಳ ಅಂತ್ಯದಲ್ಲಿ ಆ ಅಂತಃ ಕ್ಷಯವು ಸ್ಪಷ್ಟವಾಗಿ ಕಾಣಿಸಿಕೊಳ್ಳುತ್ತದೆ.

ಪ್ರತಿಯೊಂದು ನಾಗರಿಕತೆಯ ಜೀವನದಲ್ಲಿಯೂ ಅವನತಿ ಮತ್ತು ಛಿದ್ರತೆಯ ಕಾಲಗಳು ಇದ್ದೇ ಇವೆ. ಭಾರತದ ಇತಿಹಾಸದಲ್ಲಿಯೂ ಮೊದಲು ಕಾಲಗಳಿದ್ದವು. ಆದರೆ ಭಾರತವು ಅವೆಲ್ಲವನ್ನೂ ಗೆದ್ದು ಜೀರ್ಣಿಸಿಕೊಂಡಿತ್ತು. ಪುನರುಜ್ಜೀವನ ಪಡೆದಿತ್ತು; ಕೆಲವು ಕಾಲ ತನ್ನೊಳಗೆ ತಾನೆ ಗುಪ್ತವಾಗಿ ಅಡಗಿದ್ದು ಪುನಃ ಹೊಸಶಕ್ತಿಯಿಂದ ಭೋರ್ಗರೆದು ಹೊರಹೊಮ್ಮುತ್ತಿತ್ತು. ಒಳಗೊಂದು ಅಂತ ಶ್ಯಕ್ತಿಯ ಜ್ವಾಲೆಯಿತ್ತು. ಹೊಸ ಸಂಪರ್ಕದಿಂದ ಕಳೆಗುಂದಿ, ಅಭಿವೃದ್ಧಿಗೊಂಡು, ಹೊಸದಾಗಿ ಕಂಡರೂ ತನ್ನ ಅಂತಸ್ಸತ್ವವನ್ನೂ ಬಿಡದೆ ಪ್ರಜ್ವಲಿಸುವ ಕಾವು ಇತ್ತು. ಭಾರತದ ಅಸ್ತಿತ್ವವನ್ನು ಅಷ್ಟು ದೀರ್ಘಕಾಲ ಕಾಪಾಡಿಕೊಂಡು ಬಂದ ಈ ಮಾನಸಿಕ ನವ್ಯತೆ, ಈ ಸಂಯೋಜಕಶಕ್ತಿಯು ಈಗ ಮಾಯವಾದವೇನು? ಅದರ ನಿರ್ದಿಷ್ಟ ಮತಗಳ ಮತ್ತು ಸಾಮಾಜಿಕ ರಚನೆಯ ಕಟ್ಟುಗಳ ಕಾಠಿಣ್ಯ ಬೆಳೆದು ಮನಸ್ಸನ್ನೂ ಕಠಿಣಮಾಡಿದವೇನು? ಏಕೆಂದರೆ ಜೀವನ ಬೆಳೆಯದೆ ಹೋದರೆ, ವಿಕಾಸವಾಗದೆ ಹೋದರೆ ಭಾವನಾವಿಕಾಸವೂ ಅವಕುಂಠಿತವಾಗುತ್ತದೆ. ಭಾವನೆಯ ಉತ್ಕ್ರಾಂತಿಯೂ, ಸಂಪ್ರದಾಯಶೀಲವೂ ಎರಡೂ ವಿಚಿತ್ರರೀತಿಯಿಂದ ಬಹುಕಾಲದಿಂದ ಭಾರತದಲ್ಲಿ ಸಮಾವೇಶಗೊಂಡಿದ್ದವು. ಭಾವನೆಗಳು ಆಚರಣೆಯ ಮೇಲೆ ಪ್ರಭಾವ ಬೀರುವುದು ಅನಿವಾರ್ಯವಿತ್ತು; ಆದರೂ ಹಿಂದಿನವನ್ನು ನಾಶಮಾಡದೆ ತನ್ನದೇ ಒಂದು ವೈಶಿಷ್ಟ್ಯದಿಂದ ಮಾರ್ಪಾಟು ಮಾಡುತ್ತಿತ್ತು, ಆದರೆ ಭಾವನೆಯಲ್ಲಿ ಕ್ರಾಂತಿಯ ಕಾವು ನಾಶವಾದೊಡನೆ ಅದರ ನಿರ್ಮಾಣ ಶಕ್ತಿ ಕುಂದಿದೊಡನೆ, ಭಾವನೆಯ ಅರ್ಥರಹಿತ ಶುಷ್ಕ ಶಿಷ್ಟಾಚಾರದ ಗಿಳಿಪಾಠದ ಹಿಮ್ಮೇಳವಾಗಿ, ಜೀವನ ಶುಷ್ಕವಾಗಿ, ತನ್ನಿಂದ ತಾನೇ ರಚಿಸಿಕೊಂಡ ಬಲೆಯಲ್ಲಿ ಬಂಧಿತವಾಯಿತು.

ಅನೇಕ ನಾಗರಿಕತೆಗಳು ನಾಶವಾದ ಕತೆಗಳನ್ನು ನಾವು ಕಂಡಿದೇವೆ. ಇವುಗಳಲ್ಲೆಲ್ಲ ಅತಿ ಮುಖ್ಯವಾದುದೆಂದರೆ ರೋಮ್ ಪತನವಾದಂದಿನಿಂದ ನಾಶವಾದ ಯೂರೋಪಿನ ಪ್ರಾಚೀನ ನಾಗರಿಕತೆ ಉತ್ತರದಿಂದ ದಂಡೆತ್ತಿ ಬಂದವರಿಗೆ ರೋಮ್ ಸೋಲುವ ಮುಂಚೆಯೇ ಅಂತರ್ದೌರ್ಬಲ್ಯದಿಂದಲೇ ರೋಮ್ ಕುಸಿದು ಬೀಳುವುದರಲ್ಲಿತ್ತು. ಒಂದಾನೊಂದು ಕಾಲದಲ್ಲಿ ವಿಶಾಲಗೊಳ್ಳುತಿದ್ದ ಅದರ ಆರ್ಥಿಕನೀತಿಯು ಸಂಕುಚಿತವಾಗಿ ಅನೇಕ ತೊಡರುಗಳನ್ನು ತಂದು ಒಡ್ಡಿತು. ನಗರದ ಕೈಗಾರಿಕೆಗಳು ಕ್ಷೀಣಿಸಿದವು. ಮಹಾನಗರಗಳು ಹೀನಸ್ಥಿತಿಗೆ ಬಂದು ಪಾಳುಬಿದ್ದು, ನಾಶವಾದವು. ದೇಶದ ಫಲವತ್ತು ಸಹ ಕ್ಷೀಣಿಸಿತು. ಈ ತೊಂದರೆಗಳ ನಿವಾರಣೆಗೆ ರೋಮನ್ ಚಕ್ರವರ್ತಿಗಳು ಏನೇನೊ ಉಪಾಯಗಳನ್ನು ಹೂಡಿದರು. ವರ್ತಕರು, ಕರ್ಮಕುಶಲರು, ಶ್ರಮಜೀವಿಗಳು ನಿರ್ದಿಷ್ಟ ಕೆಲಸವನ್ನೇ ಮಾಡಬೇಕೆಂಬ ನಿರ್ಬಂಧವಿತ್ತು. ಅನೇಕ ಕೆಲಸಗಾರರಿಗೆ ಅವರ ಗುಂಪಿನಿಂದ ಹೊರಗೆ ಮದುವೆ ಮಾಡಿಕೊಳ್ಳಬಾರದೆಂಬ ನಿರ್ಬಂಧವಿತ್ತು. ಆದ್ದರಿಂದ ಕೆಲವು ಉದ್ಯೋಗದವರಿಗೆ ಅವರದೇ ಒಂದು ಜಾತಿಯಾಯಿತು. ರೈತರು ಜೀತದಾಳುಗಳಾದರು. ಆದರೆ ಅವಸಾನ ಕಾಲವನ್ನು ತಡೆಗಟ್ಟಲು ಮಾಡಿದ ಈ ಎಲ್ಲ ತೇಪೆ ಕೆಲಸಗಳೂ ನಿಷ್ಫಲವಾದವು. ರೋಗವು ಇನ್ನೂ ಪ್ರಬಲಗೊಂಡು ರೋಮನ್ ಚಕ್ರಾಧಿಪತ್ಯವು ನಾಶವಾಯಿತು.

ಭಾರತೀಯ ಸಂಸ್ಕೃತಿಯು ಅಷ್ಟು ನಾಟಕೀಯವಾಗಿ ಯಾವಾಗಲೂ ನಾಶವಾಗಿಯೂ ಇಲ್ಲ, ಆಗುವುದೂ ಇಲ್ಲ; ಏನೇ ಇರಲಿ ಒಂದು ಅದ್ಭುತ ಜೀವನಚೈತನ್ಯವನ್ನು ತೋರಿಸಿದೆ. ಆದರೆ

ನಿದಾನವಾಗಿ ಶಕ್ತಿಗುಂದುತ್ತಿರುವುದು ತೋರುತ್ತಿದೆ. ಕ್ರಿಸ್ತಯುಗದ ಮೊದಲ ಒಂದು ಸಾವಿರ ವರ್ಷ ಗಳಲ್ಲಿ ಭಾರತದಲ್ಲಿ ಸಾಮಾಜಿಕ ಪರಿಸ್ಥಿತಿಯು ಹೇಗಿತ್ತು ಎಂದು ಸ್ಪಷ್ಟವಾಗಿ ವಿವರಿಸುವುದು ಕಷ್ಟ. ಆದರೆ ಆರ್ಥಿಕ ನೀತಿಯ ದೃಷ್ಟಿಯ ವೈಶಾಲ್ಯವು ಮಾಯವಾಗಿ ಸಂಕುಚಿತ ದೃಷ್ಟಿಯು ಬಲಗೊಳ್ಳುತ್ತ ಬಂದಿತೆಂದು ಮಾತ್ರ ಧೈರ್ಯವಾಗಿ ಹೇಳಬಹುದು. ಪ್ರಾಯಶಃ ಭಾರತೀಯ ಸಮಾಜ ರಚನೆಯ ಮತ ಪದ್ಧತಿಗಳ ಕಟ್ಟುಗಳು ಕಠಿಣವಾಗಿ, ಬಹಿಷ್ಕಾರ ಮನೋಭಾವ ಬಲಗೊಂಡು, ಈ ಅಧೋ ಗತಿಯು ಅನಿವಾರ್ಯವಾಯಿತು. ಆಗ್ನೇಯ ಮುಂತಾದ ಪರದೇಶಗಳಲ್ಲಿನ ಭಾರತೀಯರು ಅವರ ಭಾವನೆಯಲ್ಲಾಗಲಿ, ನಡವಳಿಕೆಯಲ್ಲಾಗಲಿ, ಆರ್ಥಿಕ ನೀತಿಯಲ್ಲಾಗಲಿ ಅಷ್ಟು ಸಂಕುಚಿತ ಸ್ವಭಾವ ದವರಾಗಿರಲಿಲ್ಲ. ಆದ್ದರಿಂದ ಅವರು ಅಭಿವೃದ್ಧಿ ಹೊಂದಿದರು, ರಾಜ್ಯವನ್ನೂ ವಿಸ್ತರಿಸಿದರು. ಇನ್ನೂ ನಾನೂರು ಐದುನೂರು ವರ್ಷಗಳ ಕಾಲ ಆ ವಲಸೆ ರಾಷ್ಟ್ರಗಳು ಪ್ರಗತಿಹೊಂದಿ, ತಮ್ಮ ಪ್ರಭಾವವನ್ನು ಬಿತ್ತರಿಸಿ ಅದ್ಭುತಕಾರ್ಯ ಶಕ್ತಿಯನ್ನೂ, ಕಾರ್ಯಪಟುತ್ವವನ್ನೂ ತೋರಿಸಿದರು. ಆದರೆ ಭಾರತದಲ್ಲೇ ಈ ಸಂಕುಚಿತ ಜೀವನವು ಸೃಷ್ಟಿ ಶಕ್ತಿಯನ್ನು ಹೀರಿ, ಸಣ್ಣ ಪಂಗಡಗಳನ್ನಾಗಿ ಮಾಡಿದವು. ಅವರ ದೃಷ್ಟಿಯು ಸಂಕುಚಿತವಾಯಿತು. ಪ್ರತಿಯೊಂದು ವ್ಯಕ್ತಿಗೂ ಅವನ ಕಾರ್ಯವನ್ನು ವಿಧಿಸಲಾಗಿತ್ತು. ಆದ್ದರಿಂದ ಇತರರ ಗೋಜಿಗೆ ಅವರು ಹೋಗುತ್ತಿರಲಿಲ್ಲ. ರಾಜ್ಯ ರಕ್ಷಣೆಗಾಗಿ ಯುದ್ಧ ಮಾಡುವುದು ಕ್ಷತ್ರಿಯನ ಕೆಲಸವಾಗಿತ್ತು. ಆದ್ದರಿಂದ ಬೇರೆಯವರಿಗೆ ಅದರಲ್ಲಿ ಆಸಕ್ತಿಯು ಇರಲಿಲ್ಲ, ಅವಕಾಶವೂ ಇರಲಿಲ್ಲ. ಬ್ರಾಹ್ಮಣ, ಕ್ಷತ್ರಿಯರಿಬ್ಬರೂ ವ್ಯಾಪಾರ ಉದ್ಯಮವೆಂದರೆ ಕಡೆಗಣ್ಣಿನಿಂದ ನೋಡುತ್ತಿದ್ದರು. ವಿದ್ಯಾರ್ಜನೆ ಮತ್ತು ಆತ್ಮೋನ್ನತಿಯ ಮಾರ್ಗವು ಹೀನ ಕುಲದವರಿಗೆ ಬಾಹ್ಯವಿತ್ತು. ಉತ್ತಮ ಜಾತಿಯವರ ಸೇವೆಯೇ ಅವರ ಕಾರ್ಯವೆಂದು ಬೋಧಿಸಲಾಗಿತ್ತು. ನಗರಗಳ ಆರ್ಥಿಕ ನೀತಿ ಮತ್ತು ವ್ಯಾಪಾರವು ಉನ್ನತಮಟ್ಟದಲ್ಲಿದ್ದರೂ ರಾಜ್ಯರಚನೆಯು ಪಾಳೆಯಗಾರಿಕೆಯೇ ಆಗಿತ್ತು. ಪ್ರಾಯಶಃ ಯುದ್ಧ ಕೌಶಲ್ಯದಲ್ಲಿಯೂ ಭಾರತವು ಕ್ಷೀಣದೆಸೆಗೆ ಬಂದಿತ್ತು. ಆ ಸಮಾಜರಚನೆ ಯನ್ನು ಬದಲಾಯಿಸಿ, ಹೊಸ ಶಕ್ತಿಯನ್ನು ಅಣಿಗೊಳಿಸದೆ ಆ ಸ್ಥಿತಿಯಲ್ಲಿ ಯಾವ ಪ್ರಗತಿಯೂ ಸಾಧ್ಯವಿರಲಿಲ್ಲ. ಅಂತಹ ಬದಲಾವಣೆಗೆ ಮತಪದ್ಧತಿಯು ಅಡ್ಡಿಯಾಯಿತು. ಭಾರತೀಯ ಸಮಾಜಕ್ಕೆ ಒಂದು ಭದ್ರತೆಯನ್ನು ಕೊಟ್ಟು, ಅನೇಕ ಸದ್ಗುಣಗಳಿಂದ ತುಂಬಿದ್ದರೂ ಜಾತಿ ಪದ್ಧತಿ ಯಿಂದ ಜೊತೆಯಲ್ಲೇ ನಾಶದ ಅಂಕುರವೂ ಬಿತ್ತಿ ಬಂದಿತು.

ಭಾರತೀಯ ಸಮಾಜ ರಚನೆಯು (ಈ ವಿಷಯವನ್ನು ಮುಂದೆ ವಿಶದವಾಗಿ ಪ್ರಸ್ತಾಪಿಸುತ್ತೇನೆ) ಭಾರತೀಯ ನಾಗರಿಕತೆಗೆ ಒಂದು ಅಸ್ಖಲಿತ ಭದ್ರತೆಯನ್ನು ಕೊಟ್ಟಿತ್ತು. ಪ್ರತಿ ಪಂಗಡಕ್ಕೂ ಒಂದು ಅದ್ಭುತಶಕ್ತಿಯನ್ನೂ, ದೊಡ್ಡ ಸಂಘಟನಾ ಶಕ್ತಿಯನ್ನೂ ಕೊಟ್ಟಿತ್ತು. ಕಲೆ, ಕುಶಲಬುದ್ಧಿ, ವ್ಯಾಪಾರ, ಹಡಗಿನ ವ್ಯಾಪಾರ ಅಭಿವೃದ್ಧಿಯಾದರೂ, ಆ ಪಂಗಡದಲ್ಲಿಯೇ ಆಯಿತು. ಆದ್ದರಿಂದ ಕೆಲವು ಉದ್ಯಮಗಳು ಆನುವಂಶಿಕವಾದವು. ಹೊಸ ಉದ್ಯಮವನ್ನು ಕಲಿಯುವುದು ನೂತನ ಕಾರ್ಯ ಚಟುವಟಿಕೆಯನ್ನು ಆರಂಭಿಸುವುದು ನಿಷಿದ್ಧವಾಯಿತು. ಅಪ್ಪ ಹಾಕಿದ ಆಲದ ಮರವೇ ಶಾಶ್ವತ ವಾಯಿತು. ಸಾಹಸ ಶಕ್ತಿಯು ಕಡಮೆಯಾಗಿ, ನೂತನ ಮಾರ್ಗಾನ್ವೇಷಣೆಯ ದೃಷ್ಟಿಯೇ ಶೂನ್ಯ ವಾಯಿತು. ತನ್ನ ಅಲ್ಪ ಆವರಣದಲ್ಲಿ ಸಂಪೂರ್ಣ ಸ್ವಾತಂತ್ರ್ಯ ದೊರೆತರೂ, ಅದು ವಿಶಾಲ ಸ್ವಾತಂ ತ್ರ್ಯದ ಬೆಳೆವಣಿಗೆಗೆ ಅಡ್ಡಿಯಾಯಿತು. ಅಸಂಖ್ಯಾತ ಜನರನ್ನು ಸಮಾಜದಲ್ಲಿ ಬಹಳ ಕೀಳು ಮಟ್ಟದಲ್ಲಿ ಇಟ್ಟಿದ್ದರಿಂದ ಪ್ರಗತಿಗೆ ಅವಕಾಶವೇ ಇಲ್ಲದಾಯಿತು. ಈ ಸಮಾಜ ರಚನೆಯು ಎಲ್ಲಿಯ ವರೆಗೆ ಬೆಳೆವಣಿಗೆಗೆ ಮತ್ತು ವಿಕಾಸಕ್ಕೆ ಅವಕಾಶ ಕೊಟ್ಟಿತೋ ಅಲ್ಲಿಯವರೆಗೆ ಸಮಾಜವು ಪ್ರಗತಿಪರ ವಿತ್ತು; ಆದರೆ ಆ ವಿಕಾಸದ ಮೇರೆಯನ್ನು ಮುಟ್ಟಿದೊಡನೆ ಮುಂದೆ ಯಾವ ಪ್ರಗತಿಯೂ ಸಾಧ್ಯ ವಿಲ್ಲದೆ ನಿಂತಲ್ಲಿಯೇ ನಿಂತಿತು, ಪ್ರತಿಗಾಮಿಯಾಯಿತು, ಕೊನೆಗೆ ಕ್ಷೀಣಹೊಂದಲಾರಂಭಿಸಿತು.

ಇದೇ ಕಾರಣದಿಂದ ಬೌದ್ಧಿಕ, ದಾರ್ಶನಿಕ, ರಾಜಕೀಯ ಬೆಳವಣಿಗೆಯಲ್ಲಿ, ಯುದ್ಧನೀತಿ ಮತ್ತು ಕೌಶಲ್ಯದಲ್ಲಿ, ಪರದೇಶ ಪರಿಚಯ ಮತ್ತು ಸಂಪರ್ಕದಲ್ಲಿ, ಕ್ಷೀಣದೆಶೆಯು ಆರಂಭವಾಯಿತು.

ಸ್ಥಳೀಯ ಅಭಿಮಾನ ಹೆಚ್ಚಿತು. ವಿಶಾಲ ಭಾರತದ ಭಾವನೆಯು ಮಾಯವಾಗಿ ಪಾಳೆಯಗಾರಿಕೆ, ಸ್ವಾರ್ಥ ಭಾವನೆ ಹೆಚ್ಚಿತು. ಆದಾಗ್ಯೂ ಕೊನೆ ಕೊನೆಗೆ ವ್ಯಕ್ತವಾದಂತೆ ಆ ಜೀರ್ಣವಾದ ರಚನಾ ಚೌಕಟ್ಟಿನಲ್ಲೂ ಜೀವಶಕ್ತಿಯು ಇನ್ನೂ ಅಡಗಿತ್ತು ; ನೂತನ ಸನ್ನಿವೇಶಕ್ಕಣಿಗೊಳ್ಳುವ ಶಕ್ತಿ, ನವ್ಯತೆ, ದಿಟ್ಟತನವೂ ಇತ್ತು. ಆ ಶಕ್ತಿಯಿಂದಲೇ ಜೀವಂತವಾಗಿ ಉಳಿಯಿತು. ಹೊಸ ಸಂಪರ್ಕ, ಭಾವನಾ ತರಂಗಗಳಿಂದ ಲಾಭಗೊಂಡು ಕೆಲವು ಮಾರ್ಗಗಳಲ್ಲಿ ಪ್ರಗತಿಯನ್ನೂ ಪಡೆಯಿತು. ಆದರೆ ಅನೇಕ ಪುರಾತನ ಪದ್ಧತಿಗಳ ಅವಶೇಷಗಳು ಆ ಪ್ರಗತಿಗೆ ಉರುಲು ಆಗಿ ಸದಾ ಅದುಮುತ್ತಿದ್ದವು.

---

## ಅಧ್ಯಾಯ ೬ : ಹೊಸ ಸಮಸ್ಯೆಗಳು

### ೧. ಅರಬರು ಮತ್ತು ಮಂಗೋಲರು

ಉತ್ತರ ಹಿಂದೂಸ್ಥಾನದಲ್ಲಿ ಶ್ರೀಹರ್ಷನು ಒಂದು ಬಲಿಷ್ಠ ರಾಜ್ಯಾಧಿಪನಾಗಿ ಆಳುತ್ತಿದ್ದಾಗ, ಚೀನೀ ಯಾತ್ರಿಕನೂ ಜ್ಞಾನಭಿಕ್ಷುವೂ ಆದ ಹುಯನ್‌ತ್ಸಾಂಗ್ ನಲಂದ ವಿಶ್ವವಿದ್ಯಾಲಯದಲ್ಲಿ ಅಭ್ಯಾಸ ಮಾಡುತ್ತಿದ್ದಾಗ, ಅರೇಬಿಯಾದಲ್ಲಿ ಇಸ್ಲಾಂ ಧರ್ಮವು ರೂಪುಗೊಳ್ಳುತ್ತಿದ್ದಿತು. ಇಸ್ಲಾಂ ಭಾರತಕ್ಕೆ ಒಂದು ಧಾರ್ಮಿಕ ಶಕ್ತಿಯಾಗಿ, ರಾಜಕೀಯ ಶಕ್ತಿಯಾಗಿ ಬಂದು ಹೊಸ ಸಮಸ್ಯೆಗಳನ್ನು ಎಬ್ಬಿಸತಕ್ಕದ್ದಿತ್ತು. ಆದರೆ ಭಾರತೀಯ ರಂಗದಲ್ಲಿ ವಿಶೇಷ ವ್ಯತ್ಯಾಸ ಮಾಡಲು ಬಹಳ ಕಾಲಹಿಡಿಯಿತು. ಭಾರತ ಹೃದಯವನ್ನು ಮುಟ್ಟಲು ಆರುನೂರು ವರ್ಷಗಳು ಬೇಕಾಯಿತು. ರಾಜಕೀಯ ವಿಜಯವನ್ನು ಪಡೆಯುವ ಹೊತ್ತಿಗೆ ಅದರ ಸ್ವರೂಪವೇ ಬಹಳ ಬದಲಾಯಿಸಿತ್ತು. ಅದರ ಮುಂಚೂಣಿ ಜನರೂ ಬೇರೆ ಇದ್ದರು. ಒಂದು ಉನ್ನತ ಉತ್ಸಾಹದ ಉದ್ದೇಶದಿಂದ ಮತ್ತು ಉಜ್ವಲ ಕಾರ್ಯಶಕ್ತಿಯಿಂದ ಸ್ಪೇನ್‌ನಿಂದ ಮಂಗೋಲಿಯದವರೆಗೆ ಹಬ್ಬಿ ಹರಡಿ, ವಿಜಯ ಪತಾಕೆಯನ್ನು ನೆಟ್ಟು, ಜಾಜ್ವಲ್ಯಮಾನವಾದ ಸಂಸ್ಕೃತಿಯನ್ನು ಹರಡಿದ ಅರಬ್ಬೀಜನರು ಇಂಡಿಯ ದೇಶಕ್ಕೆ ಬರಲಿಲ್ಲ. ವಾಯವ್ಯದ ಗಡಿಯ ಅಂಚಿಗೆ ಬಂದು ಅಲ್ಲಿಯೇ ನಿಂತರು. ಅರಬ್ಬೀ ಸಂಸ್ಕೃತಿಯು ಕ್ರಮೇಣ ಹೀನಸ್ಥಿತಿಗೆ ಬಂದು ಅನೇಕ ತುರ್ಕಿ ಪಂಗಡಗಳು ಮಧ್ಯ ಮತ್ತು ಪಶ್ಚಿಮ ಏಷ್ಯಗಳಲ್ಲಿ ಪ್ರಾಮುಖ್ಯತೆಗೆ ಬಂದವು. ಭಾರತದ ಗಡಿ ಪ್ರಾಂತ್ಯಗಳಿಂದ ಇಸ್ಲಾಂ ಧರ್ಮವನ್ನು ಒಂದು ರಾಜಕೀಯ ಶಕ್ತಿಯನ್ನಾಗಿ ಇಂಡಿಯಕ್ಕೆ ತಂದವರೇ ಇವರು.

ಇದನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಕೆಲವು ದಿನಾಂಕಗಳನ್ನು ತಿಳಿದುಕೊಳ್ಳುವುದು ಒಳ್ಳೆಯದು. ಮುಹಮ್ಮದ್ ಪೈಗಂಬರರು ಕ್ರಿಸ್ತಶಕ ೬೨೨ ರಲ್ಲಿ ಮಕ್ಕದಿಂದ ಮದಿನಾಕ್ಕೆ ಹೊರಟು ಹೋದ ಹಿಸರತ್ತಿನಿಂದ ಇಸ್ಲಾಂ ಧರ್ಮವು ಆರಂಭವಾಗುತ್ತದೆ. ಮುಹಮ್ಮದರು ಕಾಲವಾದದ್ದು ಹತ್ತು ವರ್ಷಗಳ ನಂತರ. ಅರೇಬಿಯಾದಲ್ಲಿಯೇ ಒಂದು ರಾಜಕೀಯ ಸ್ಥಿಮಿತಕ್ಕೆ ಬರಲು ಕೆಲವು ಕಾಲ ಹಿಡಿಯಿತು. ಇದಾದ ನಂತರ ಅರಬ್ಬರು ಇಸ್ಲಾಂ ಧ್ವಜವನ್ನೆತ್ತಿಹಿಡಿದು ಪೂರ್ವದಲ್ಲಿ ಮಧ್ಯ ಏಷ್ಯವನ್ನೂ ಪಶ್ಚಿಮದಲ್ಲಿ ಉತ್ತರ ಆಫ್ರಿಕೆಯನ್ನೂ ಆಕ್ರಮಿಸಿ, ಸ್ಪೇನ್ ಮೂಲಕ ಫ್ರಾನ್ಸ್‌ವರೆಗೆ ಹರಡಿ ಅದ್ಭುತ ಕಾರ್ಯಗಳನ್ನು ಸಾಧಿಸಿದರು. ಏಳು ಮತ್ತು ಎಂಟನೆಯ ಶತಮಾನಗಳಲ್ಲಿ ಇರಾಣ ಇರಾಕ್ ಮತ್ತು ಮಧ್ಯ ಏಷ್ಯದಲ್ಲಿ ಹರಡಿದ್ದರು. ಕ್ರಿಸ್ತಶಕ ೭೧೨ ರಲ್ಲಿ ವಾಯವ್ಯ ಇಂಡಿಯದಲ್ಲಿ ಸಿಂಧು ದೇಶವನ್ನು ಆಕ್ರಮಿಸಿ ಅಲ್ಲಿಯೇ ನಿಂತುಬಿಟ್ಟರು. ಅವರಿಗೂ ಭಾರತದ ಫಲವತ್ತಾದ ಮೈದಾನಗಳಿಗೂ ಮಧ್ಯೆ ದೊಡ್ಡ ಮರಳ್ಗಾಡು ಇತ್ತು. ಪಶ್ಚಿಮದಲ್ಲಿ ಅರಬ್ಬೀಜನರು ಯೂರೋಪ್ ಮತ್ತು ಆಫ್ರಿಕ ಖಂಡಗಳ ಮಧ್ಯದ ಜಲಸಂಧಿಯನ್ನು (ಅಲ್ಲಿಂದ ಈಚೆಗೆ ಜಿಬ್ರಾಲ್ಟರ್ ಜಲಸಂಧಿ ಎಂದು ಹೆಸರಾಗಿದೆ) ದಾಟಿ ಕ್ರಿಸ್ತಶಕ ೭೧೧ ರಲ್ಲಿ ಸ್ಪೇನಿಗೆ ಬಂದರು. ಸ್ಪೇನ್ ದೇಶವನ್ನು ಪೂರ್ಣ ಆಕ್ರಮಿಸಿ ಪಿರನೀಸ್ ಬೆಟ್ಟವನ್ನು ದಾಟಿ ಫ್ರಾನ್ಸಿಗೆ ಬಂದರು. ೭೩೨ ರಲ್ಲಿ ಫ್ರಾನ್ಸಿನಲ್ಲಿ ಟೂರ್ಸ್‌ನಲ್ಲಿ ಚಾರ್ಲೆಸ್ ಮಾರ್ಟೆಲ್ ಎಂಬಾತನು ಅವರನ್ನು ಸೋಲಿಸಿ ಹಿಮ್ಮೆಟ್ಟಿಸಿದನು.

ಅದುವರೆಗೆ ಇತಿಹಾಸದಲ್ಲಿ ಯಾವ ಪ್ರಮುಖ ಪಾತ್ರವನ್ನೂ ವಹಿಸದೆ ಅರಬ್ಬಿ ಮರುಭೂಮಿಯಲ್ಲಿ ಮನೆಮಾಡಿಕೊಂಡಿದ್ದ ಅರಬ್ಬಿ ಜನರ ಈ ವಿಜಯ ಪರಂಪರೆಯು ಅತ್ಯಾಶ್ಚರ್ಯಕರವಿದೆ. ಈ ಅಪಾರ ಶಕ್ತಿಯೂ ಅದ್ಭುತ ಕಾರ್ಯ ಪಟುತ್ವವೂ ಕ್ರಾಂತಿಪುರುಷನಾದ ಪೈಗಂಬರರಿಂದ ಮತ್ತು ಆತನ ಮಾನವ ಭ್ರಾತೃತ್ವದ ಸಂದೇಶದಿಂದ ಬಂದಿರಬೇಕು. ಆದರೂ ಅರಬ್ಬಿ ನಾಗರಿಕತೆಯು ಇದ್ದಕ್ಕಿದ್ದಂತೆ ಉದ್ಭವಿಸಿ, ಇಸ್ಲಾಂ ಧರ್ಮದಿಂದಲೇ ರೂಪುಗೊಂಡಿತೆಂದು ಭಾವಿಸುವುದು ತಪ್ಪು. ಇಸ್ಲಾಮ್ ವಿದ್ವಾಂಸರು ಅರಬ್ಬಿ ಜನರ ಇಸ್ಲಾಂ ಪೂರ್ವದ ನಾಗರಿಕತೆಯನ್ನು ಜಹಿಲಿಯಾತ್ ಕಾಲ, ಅಜ್ಞಾನ ಮತ್ತು ಮೂಢ ಭಾವನೆಯ ಕಾರ್ಗತ್ತಲೆಯ ಕಾಲ ಎಂದು ಹಳಿಯುತ್ತಾರೆ. ಇತರ ನಾಗರಿಕತೆಗಳಂತೆ ಅರಬ್ಬಿ ನಾಗರಿಕತೆಗೂ ಬಹು ಪ್ರಾಚೀನತೆಯಿದೆ. ಸೆಮಿಟಿಕ್ ಜನಾಂಗ, ಫಿನೀಷಿಯನರು, ಕ್ರೀಟರು, ಚಾಲ್ಡಿಯನರು, ಹೀಬ್ರೂ ಜನರುಗಳ ನಾಗರಿಕತೆಗಳ ಬೆಳವಣಿಗೆಯೊಂದಿಗೆ ನಿಕಟ ಸಂಬಂಧವಿದೆ. ಇಸ್ರೇಲರು ಇತರರಿಂದ ಸ್ವಲ್ಪ ದೂರ ಸರಿದು ವಿಶಾಲ ಮನೋಭಾವನೆಯ ಚಾಲ್ಡಿಯನರು ಮತ್ತು ಇತರರಿಂದ ಭಿನ್ನವಾದರು. ಅವರಿಗೂ ಸೆಮಿಟಿಕ್ ಜನಾಂಗಗಳಿಗೂ ಘರ್ಷಣೆಗಳಾಗುತ್ತಿದ್ದವು. ಆದಗ್ಯೂ ಸೆಮಿಟಿಕ್ ಪ್ರದೇಶವಲ್ಲೆಲ್ಲ ಪರಸ್ಪರ ಸಂಬಂಧ, ವಿಚಾರ ವಿನಿಮಯವಿದ್ದು ಒಂದು ಸರ್ವ ಸಾಮಾನ್ಯ ಹಿನ್ನೆಲೆ ಇತ್ತು. ಇಸ್ಲಾಂಪೂರ್ವದ ಅರಬ್ಬಿ ನಾಗರಿಕತೆಯು ಮುಖ್ಯವಾಗಿ ಏಮನ್‌ನಲ್ಲಿ ಬೆಳೆಯಿತು. ಪೈಗಂಬರರ ಕಾಲದಲ್ಲೆ ಅರಬ್ಬಿ ಭಾಷೆಯು ಪಾರಸಿ ಮತ್ತು ಭಾರತೀಯ ಭಾಷೆಯಿಂದ ಪುಷ್ಟಿಗೊಂಡು ಶ್ರೇಷ್ಠ ಭಾಷೆಯಾಗಿ ಬೆಳೆದಿತ್ತು. ಫಿನೀಷಿಯನರಂತೆ ವ್ಯಾಪಾರಕ್ಕಾಗಿ ಅರಬ್ಬಿ ಜನರೂ ಪರದೇಶಗಳಿಗೆ ಪ್ರವಾಸಮಾಡುತ್ತಿದ್ದರು. ಕ್ಯಾಂಟನ್ ಬಳಿ ದಕ್ಷಿಣ ಚೀನದಲ್ಲಿ ಇಸ್ಲಾಂ ಧರ್ಮಕ್ಕೆ ಪೂರ್ವದಲ್ಲಿ ಒಂದು ಅರಬ್ಬಿ ಠಾಣ್ಯವಿತ್ತು.

ಆದಾಗ್ಯೂ ಇಸ್ಲಾಂಧರ್ಮ ಸಂಸ್ಥಾಪಕನಾದ ಪೈಗಂಬರ್ ತನ್ನ ಜನರಲ್ಲಿ ಪ್ರಚಂಡ ಶಕ್ತಿಯನ್ನು ಪ್ರಚೋದಿಸಿ ಅಗಾಧ ಆತ್ಮವಿಶ್ವಾಸವನ್ನೂ ಆತ್ಮಶ್ರದ್ಧೆಯನ್ನೂ ತುಂಬಿದನೆಂಬುದು ನಿಶ್ಚಯ. ಹೊಸ ಸಂದೇಶದ ಹರಿಕಾರರೆಂಬ ಭಾವನೆಯು ಕೆಲವುಸಲ ಇಡೀ ಜನಾಂಗವನ್ನೇ ಆವರಿಸಿ, ನೂತನ ಇತಿಹಾಸವನ್ನೇ ಸೃಷ್ಟಿಸುವ ಒಂದು ಅದ್ಭುತ ಕಾರ್ಯಶ್ರದ್ಧೆ ಮತ್ತು ಆತ್ಮವಿಶ್ವಾಸವು ಅವರಲ್ಲಿ ಬೆಳೆಯಿತು. ಪಶ್ಚಿಮ ಮತ್ತು ಮಧ್ಯ ಏಷ್ಯಗಳಲ್ಲೂ ಉತ್ತರ ಆಫ್ರಿಕದಲ್ಲೂ ಅಲ್ಲಿನ ರಾಜ್ಯಗಳು ಹೀನಸ್ಥಿತಿಗೆ ಬಂದುದೂ ಅರಬ್ಬಿಜನರ ಉನ್ನತಿಗೆ ಕಾರಣವಾಯಿತು. ಉತ್ತರ ಆಫ್ರಿಕದಲ್ಲಿ ವಿರೋಧಿ ಕ್ರೈಸ್ತ ಪಂಗಡಗಳಲ್ಲಿ ಪರಸ್ಪರ ವೈಷಮ್ಯವು ಹುಟ್ಟಿ ಘರ್ಷಣೆಗಳಾಗಿ, ಅನೇಕ ಬಾರಿ ಅಧಿಕಾರಕ್ಕಾಗಿ ಯುದ್ಧವಾಗಿ ರಕ್ತಪಾತವೂ ಆಗುತ್ತಿತ್ತು. ಆ ಕಾಲದಲ್ಲಿ ಅಲ್ಲಿ ಆಚರಣೆಯಲ್ಲಿದ್ದ ಕ್ರೈಸ್ತಮತವು ತುಂಬ ಸಂಕುಚಿತವೂ, ಅಸಹನೆಯುಳ್ಳದ್ದೂ ಆಗಿತ್ತು. ಮಾನವ ಭ್ರಾತೃತ್ವವನ್ನು ಸಾರುತ್ತ ಬಂದ ಅರಬ್ಬಿ ಮುಸ್ಲಿಮರ ಸಹನಶೀಲತೆಗೂ ಇದಕ್ಕೂ ಅಜಗಜಾಂತರವಿತ್ತು. ಕ್ರೈಸ್ತರ ಅಂತಃ ಕಲಹಗಳಿಂದ ಬೇಸತ್ತು ಇಡೀ ಜನಾಂಗಗಳೇ ಇಸ್ಲಾಂ ಧರ್ಮವನ್ನು ಒಲಿದು ಸ್ವೀಕರಿಸಿದವು.

ದೂರದ ದೇಶಗಳಿಗೆ ಅರಬ್ಬೀ ಜನರು ಕೊಂಡೊಯ್ಯುತ್ತಿದ್ದ ಸಂಸ್ಕೃತಿಯೇ ಸದಾ ವ್ಯತ್ಯಾಸಗೊಂಡು ಬೆಳೆಯುತ್ತಿತ್ತು. ಇಸ್ಲಾಂಧರ್ಮದ ನೂತನ ಭಾವನೆಗಳ ಬಲವತ್ತಾದ ಪ್ರಭಾವವು ಅದರ ಮೇಲೆ ಬೀರಿದ್ದರೂ ಆ ಸಂಸ್ಕೃತಿಯನ್ನು ಇಸ್ಲಾಂ ಸಂಸ್ಕೃತಿ ಎಂದು ಕರೆಯುವುದು ಒಂದು ಭ್ರಾಂತಿ ಮತ್ತು ಪ್ರಾಯಶಃ ತಪ್ಪು. ಡೆಮಾಸ್ಕಸ್ಸನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಅರಬ್ಬಿ ಜನರು ತಮ್ಮ ಸರಳ ಜೀವನವನ್ನು ತ್ಯಜಿಸಿದರು ಮತ್ತು ಒಂದು ಕೃತಕ ಜೀವನದ ಸಂಸ್ಕೃತಿಯನ್ನು ಬೆಳೆಸಿದರು. ಅದನ್ನು ಅರಬ್ಬಿ-ಸಿರಿಯನ್ ನಾಗರಿಕತೆಯ ಕಾಲ ಎನ್ನಬಹುದು. ಬೈಜಾಂಟೈನ್ ಪ್ರಭಾವವೇನೋ ಬಂದಿತು. ಆದರೆ ಎಲ್ಲಕ್ಕೂ ಹೆಚ್ಚಾಗಿ ಬಾಗ್ದಾದಿಗೆ ಅವರು ಬಂದೊಡನೆ ಇರಾಣದ ಪೂರ್ವ ಸಂಪ್ರದಾಯಗಳಿಗೆ ಅವರು ಶರಣುಹೋದರು. ಒಂದು ಅರಬ್ಬಿ ಪಾರಸಿ ನಾಗರಿಕತೆಯನ್ನು ಬೆಳೆಸಿದರು. ಅವರ ಅಧೀನದ ರಾಜ್ಯಗಳಲ್ಲೆಲ್ಲಾ ಈ ನಾಗರಿಕತೆಯ ಪ್ರಭಾವವೇ ಮುಖ್ಯವಾಗಿ ಹರಡಿತು.

ಅರಬ್ಬಿ ಜನರ ವಿಜಯಯಾತ್ರೆಗಳು ಬಹುವ್ಯಾಪಕವೂ, ಅತಿಸುಲಭವೂ ಆದರೂ, ಆಗಲಾಗಲಿ

ಅನಂತರವಾಗಲಿ ಅವರು ಭಾರತದಲ್ಲಿ ಸಿಂಧೂದೇಶದಿಂದ ಮುಂದೆ ಬರಲಿಲ್ಲ. ದಂಡೆತ್ತಿಬಂದ ಪರಕೀಯರನ್ನು ಹಿಮ್ಮೆಟ್ಟಿಸುವ ಶಕ್ತಿಯು ಇನ್ನೂ ಭಾರತಕ್ಕೆ ಇದ್ದಿತೆಂದು ತೋರುತ್ತದೆ. ಇದ್ದಿರಬೇಕು; ಏಕೆಂದರೆ ನಿಜವಾದ ಮುತ್ತಿಗೆಯಾಗಲು ಅನೇಕ ಶತಮಾನಗಳು ಹಿಡಿದಿದ್ದರಿಂದ ಬೇರೆ ಕಾರಣವನ್ನು ಹೇಳುವುದು ಕಷ್ಟ. ಅರಬ್ಬಿ ಜನರಲ್ಲಿದ್ದ ಅಂತಃ ಕಲಹಗಳೂ ಸ್ವಲ್ಪಮಟ್ಟಿಗೆ ಕಾರಣವಾಗಿರಬಹುದು. ಬಾಗ್ದಾದಿನ ಕೇಂದ್ರ ಆಡಳಿತದಿಂದ ಸಿಂಧುದೇಶವು ಪ್ರತ್ಯೇಕವಾಗಿ ಸ್ವತಂತ್ರ ಮುಸ್ಲಿಂ ರಾಜ್ಯವಾಯಿತು. ಮುತ್ತಿಗೆ ನಡೆಯದಿದ್ದರೂ ಭಾರತಕ್ಕೂ, ಅರಬ್ಬಿ ಜನರಿಗೂ ಪರಸ್ಪರ ಸಂಪರ್ಕ ಬೆಳೆಯಿತು, ಯಾತ್ರಿಕರು ಬಂದು ಹೋಗುತ್ತಿದ್ದರು, ರಾಯಭಾರಿಗಳನ್ನು ಕಳುಹಿಸುತ್ತಿದ್ದರು, ಗಣಿತಶಾಸ್ತ್ರ ಮತ್ತು ಖಗೋಳ ಶಾಸ್ತ್ರದ ಭಾರತೀಯ ಗ್ರಂಥಗಳನ್ನು ಅರಬ್ಬೀ ಭಾಷೆಗೆ ಅನುವಾದ ಮಾಡಿದರು. ಅನೇಕ ಭಾರತೀಯ ವೈದ್ಯರು ಬಾಗ್ದಾದಿಗೆ ಹೋದರು. ಈ ವ್ಯಾಪಾರ ಮತ್ತು ಸಾಂಸ್ಕೃತಿಕ ಸಂಬಂಧವು ಉತ್ತರ ಹಿಂದೂಸ್ಥಾನಕ್ಕೆ ಮಾತ್ರ ಅನ್ವಯಿಸಲಿಲ್ಲ. ದಕ್ಷಿಣ ಭಾರತದ ರಾಜ್ಯಗಳೂ ಭಾಗವಹಿಸಿದ್ದವು. ಪಶ್ಚಿಮತೀರದ ರಾಷ್ಟ್ರಕೂಟರೂ ಅರೇಬಿಯದೊಂದಿಗೆ ವ್ಯಾಪಾರ ನಡೆಸಿದವರಲ್ಲಿ ಅತಿಮುಖ್ಯರು.

ಈ ರೀತಿ ಸತತ ಸಂಪರ್ಕ ಬೆಳೆದಕಾರಣ ಭಾರತೀಯರಿಗೆ ಹೊಸ ಇಸ್ಲಾಂ ಧರ್ಮದ ಪರಿಚಯವಾಯಿತು. ಈ ಧರ್ಮವನ್ನು ಹರಡಲು ಬಂದ ಪ್ರಚಾರಕರಿಗೆ ಸ್ವಾಗತ ದೊರೆಯಿತು. ಮಸೀದಿಗಳನ್ನು ಕಟ್ಟಿದರು. ರಾಜರುಗಳಾಗಲಿ, ಜನರಾಗಲಿ ಯಾವ ಅಡ್ಡಿಯನ್ನೂ ಮಾಡಲಿಲ್ಲ. ಮತೀಯ ಘರ್ಷಣೆಗಳೂ ಹುಟ್ಟಲಿಲ್ಲ. ಸರ್ವ ಧರ್ಮಗಳಿಗೆ, ಪೂಜಾವಿಧಾನಗಳಿಗೆ ಸಹನೆ ತೋರುವುದೇ ಭಾರತ ಸಂಪ್ರದಾಯದ ವೈಶಿಷ್ಟ್ಯ. ರಾಜಕೀಯ ಶಕ್ತಿಯಾಗಿ ಬಂದ ಅನೇಕ ಶತಮಾನಗಳ ಮುಂಚೆಯೇ ಈ ರೀತಿ ಇಸ್ಲಾಂ ಧರ್ಮಕ್ಕೆ ಭಾರತದಲ್ಲಿ ಮನ್ನಣೆ ದೊರೆಯಿತು.

ಉಮ್ಮೇಯ ಖಲೀಫರ (ಉಮ್ಮೆಯಾದೆ ಖಲೀಫ್) ಹೊಸ ಅರಬ್ಬಿ ಚಕ್ರಾಧಿಪತ್ಯಕ್ಕೆ ಡಮಾಸ್ಕಸ್ ರಾಜಧಾನಿಯಾಗಿ ಅದು ಒಂದು ಮಹಾನಗರವಾಗಿ ಬೆಳೆಯಿತು. ಆದರೆ ಸ್ವಲ್ಪಕಾಲದಲ್ಲೆ ಕ್ರಿ. ಶ. ೭೫೦ರಲ್ಲಿ ಅಬ್ಬಾಸಿಯ (ಅಬ್ಬಾಸೀದೆ) ಖಲೀಫರು ರಾಜಧಾನಿಯನ್ನು ಬಾಗ್ದಾದಿಗೆ ವರ್ಗಾಯಿಸಿದರು. ಅಂತಃಕಲಹಗಳು ಹುಟ್ಟಿದವು, ಸ್ಪೇನ್‌ದೇಶವು ಚಕ್ರಾಧಿಪತ್ಯದಿಂದ ಹೊರಬಿದ್ದಿತು. ಆದರೂ ಅನೇಕಕಾಲ ಮುಸ್ಲಿಂರಾಜ್ಯವಾಗಿಯೇ ಉಳಿಯಿತು. ಕ್ರಮೇಣ ಬಾಗ್ದಾದ್ ಚಕ್ರಾಧಿಪತ್ಯವೂ ಶಕ್ತಿಗುಂದಿ, ಒಡೆದು ಚೂರಾಯಿತು. ಮಧ್ಯ ಏಷ್ಯಾದಿಂದ ಸೆಲ್ಜುಕ್ ತುರ್ಕಿ ಜನರು ಬಂದು ಬಾಗ್ದಾದಿನಲ್ಲಿ ತಮ್ಮ ಸ್ವಾಮ್ಯವನ್ನು ಸ್ಥಾಪಿಸಿ ಖಲೀಫನನ್ನು ತಮ್ಮ ಕೈಗೊಂಬೆಯನ್ನಾಗಿ ಮಾಡಿಕೊಂಡರು. ಅಫ್ಘಾನಿಸ್ಥಾನದಲ್ಲಿ ತಲೆಯೆತ್ತಿದ ಮಹಾಯೋಧನೂ, ಪ್ರಸಿದ್ಧ ಸೇನಾನಾಯಕನೂ ಆದ ಘಜ್ನಿ ಸುಲ್ತಾನ್ ಮಹಮ್ಮದನು ಖಲೀಫನನ್ನು ನಿರ್ಲಕ್ಷಿಸಿ ಹಾಸ್ಯಮಾಡುತ್ತಿದ್ದನು. ಆದರೂ ಬಾಗ್ದಾದ್ ಇನ್ನೂ ಇಸ್ಲಾಂ ಸಂಸ್ಕೃತಿಯ ಕೇಂದ್ರವಾಗಿ ಉಳಿಯಿತು. ದೂರದ ಸ್ಪೇನ್ ಸಹ ಬಾಗ್ದಾದಿನಿಂದ ಸ್ಫೂರ್ತಿ ಪಡೆಯುತ್ತಿದ್ದಿತು. ವಿದ್ಯೆ, ವಿಜ್ಞಾನ, ಕಲೆ ಮತ್ತು ಜೀವನ ಸೌಕರ್ಯದಲ್ಲಿ ಆಗ ಯೂರೋಪ್ ಬಹಳ ಹಿಂದೆ ಬಿದ್ದಿತ್ತು. ಯೂರೋಪಿನ ಈ ಅಂಧಕಾರಯುಗದಲ್ಲಿ ಜ್ಞಾನದೀಪವನ್ನು ಬೆಳಗಿಸಿ ಜ್ಞಾನ ಪಿಪಾಸೆಯನ್ನು ಬೆಳೆಸಿಕೊಂಡು ಬಂದದ್ದು ಅರಬ್ಬೀ ಸ್ಪೇನ್. ಅದರಲ್ಲೂ ಮುಖ್ಯವಾಗಿ ಕಾರ್ಡೋಬ ವಿಶ್ವವಿದ್ಯಾನಿಲಯ. ಅದರ ಕೆಲವು ಕಿರಣಗಳು ಯೂರೋಪಿನ ಗಾಢಾಂಧಕಾರದಲ್ಲಿ ತೂರಿದವು.

ಕ್ರಿ. ಶ. ೧೦೯೫ ರಿಂದ ಆರಂಭವಾದ ಕ್ರೈಸ್ತ ಧರ್ಮ ಯುದ್ಧಗಳು ಸುಮಾರು ಒಂದೂವರೆ ಶತಮಾನಗಳಕಾಲ ನಡೆದವು. ಇವು ಕೇವಲ ಶಿಲುಬೆ ಮತ್ತು ಚರಿತ್ರೆ ಅಥವ ಎರಡು ಧರ್ಮಗಳ ಮಧ್ಯದ ಯುದ್ಧಗಳಾಗಿರಲಿಲ್ಲ. ಪ್ರಸಿದ್ಧ ಇತಿಹಾಸಕಾರನಾದ ಪ್ರೊಫೆಸರ್ ಜಿ. ಎಮ್. ಟ್ರೆವೆಲಿನ್ ಈ ಧರ್ಮಯುದ್ಧಗಳು, ಯೂರೋಪಿನ ಪುನರುಜ್ಜೀವನ ಶಕ್ತಿಗಳು, ಪೌರ್ವಾತ್ಯವನ್ನು ತಮ್ಮ ಅಧೀನ ಪಡಿಸಿಕೊಳ್ಳಬೇಕೆಂಬ ಹಂಬಲದ ಸೈನಿಕಸಾಹಸದ ಮತ್ತು ಧರ್ಮಶ್ರದ್ಧೆಯ ಫಲ. ಈ ಧರ್ಮ ಯುದ್ಧಗಳಿಂದ ಯೂರೋಪಿಗೆ ದೊರೆತ ಫಲ ಕ್ರೈಸ್ತನ ಸಮಾಧಿಯ ಬಿಡುಗಡೆ ಅಥವ ಕ್ರೈಸ್ತರಾಷ್ಟ್ರಗಳ ಒಕ್ಕೂಟವಲ್ಲ. ಆ ದೃಷ್ಟಿಯಿಂದ ಈ ಯುದ್ಧಗಳೆಲ್ಲ ನಿಷ್ಫಲ. ಅದಕ್ಕೆ ಪ್ರತಿಯಾಗಿ, ಸಂತಪೀಟ

ರನು ಸೈತಾನಿ ವಿದ್ಯೆ ಎಂದು ಹೇಳಿಯುತ್ತಿದ್ದ ಲಲಿತಕಲೆ, ಕುಶಲವಿದ್ಯೆ, ಸುಖಜೀವನ, ವಿಜ್ಞಾನ, ಬೌದ್ಧಿಕ ವಿಚಾರದೃಷ್ಟಿಗಳು ಬಂದವು.

ಈ ಧರ್ಮಯುದ್ಧಗಳಲ್ಲಿ ಕೊನೆಯದರಲ್ಲಿ ಮುಖಕ್ಕೆ ಮಂಗಳಾರತಿ ಆಗುವುದರ ಒಳಗೆ ಮಧ್ಯ ಏಷ್ಯದಲ್ಲಿ ಒಂದು ಪ್ರಚಂಡ ಪ್ರಳಯವೇ ಆಗಿತ್ತು. ಚಂಗೀಸ್‌ಖಾನನು ತನ್ನ ಪಶ್ಚಿಮದ ವಿಧ್ವಂಸಕ ಯಾತ್ರೆಯನ್ನು ಆರಂಭಿಸಿದನು. ೧೧೫೫ ರಲ್ಲಿ ಮಂಗೋಲಿಯದಲ್ಲಿ ಹುಟ್ಟಿದವನು, ಈ ಪ್ರಳಯಾಗ್ನಿಯನ್ನು ಹೊತ್ತಿಸಿ ೧೨೨೫ ರ ಹೊತ್ತಿಗೆ ಮಧ್ಯ ಏಷ್ಯವನ್ನೆಲ್ಲ ಹೊಗೆಕವಿದ ಶ್ಮಶಾನವನ್ನು ಮಾಡಿದ್ದನು. ಆಗ ಅವನೇನು ಹುಡುಗನಾಗಿರಲಿಲ್ಲ. ಬೊಖಾರ, ಸಾಮರಖಂಡ್, ಹೀರತ್, ಬಾಲ್ಖ್, ಮುಂತಾದ ಹತ್ತು ಲಕ್ಷಕ್ಕಿಂತ ಹೆಚ್ಚು ಪ್ರಜಾ ಸಂಖ್ಯೆಯ ಈ ಎಲ್ಲ ನಗರಗಳೂ ಉರಿದು ಬೂದಿಯಾದವು. ಚಂಗೀಸ್‌ಖಾನ್ ರಷ್ಯದ ಕೀವ್‌ನಗರದ ವರೆಗೆ ಹೋಗಿ ಹಿಂದಿರುಗಿದನು. ಬಾಗ್ದಾದ್ ಅವನ ದಾರಿಯಲ್ಲಿ ಇಲ್ಲದಕಾರಣ ಹೇಗೋ ಉಳಿದುಕೊಂಡಿತು. ಆತನು ತನ್ನ ಎಪ್ಪತ್ತೆರಡನೆಯ ವರ್ಷದಲ್ಲಿ ೧೨೨೭ ರಲ್ಲಿ ಸತ್ತನು. ಆತನ ವಂಶೀಕರು ಯೂರೋಪಿನೊಳಗೆ ಮುನ್ನುಗ್ಗಿದರು. ೧೨೫೮ರಲ್ಲಿ ಹುಲಾಗು ಬಾಗ್ದಾದ್ ನಗರವನ್ನು ಹಿಡಿದು ಸುಮಾರು ಐದುನೂರು ವರ್ಷಗಳಿಂದ ಹೆಚ್ಚಾಗಿ ಪ್ರಪಂಚದ ಎಲ್ಲ ಭಾಗಗಳ ಸಂಪತ್ತು ಬಂದು ಸೇರಿದ್ದ, ಜ್ಞಾನ ಮತ್ತು ಕಲೆಗಳಿಗೆ ಪ್ರಸಿದ್ಧ ಕೇಂದ್ರವಾಗಿದ್ದ ಆ ಮಹಾನಗರವನ್ನು ನಿರ್ನಾಮ ಮಾಡಿದನು. ಅರಬ್ಬಿ–ಪಾರ್ಸಿ ನಾಗರಿಕತೆಯು ಮಂಗೋಲರ ಕೈಕೆಳಗೆ ಬಾಳಿದರೂ ಇದರಿಂದ ಆ ನಾಗರಿಕತೆಗೆ ಏಷ್ಯದಲ್ಲಿ ದೊಡ್ಡ ಧಕ್ಕೆ ತಗಲಿತು. ಮುಖ್ಯವಾಗಿ ಅದು ಉತ್ತರ ಆಫ್ರಿಕದಲ್ಲಿ ಮತ್ತು ಸ್ಪೇನ್‌ನಲ್ಲಿ ಮುಂದುವರಿಯಿತು. ಸಹಸ್ರಾರು ವಿದ್ವಾಂಸರು ತಮ್ಮ ಗ್ರಂಥಗಳನ್ನು ಹೊತ್ತುಕೊಂಡು ಬಾಗ್ದಾದಿನಿಂದ ಕೈರೋ ನಗರಕ್ಕೆ ಮತ್ತು ಸ್ಪೇನಿಗೆ ಪಲಾಯನ ಮಾಡಿದರು. ಅಲ್ಲಿ ಪುನಃ ಕಲೆ ಮತ್ತು ಜ್ಞಾನದ ಪುನರುಜ್ಜೀವನವಾಯಿತು. ಆದರೆ ಸ್ಪೇನ್ ದೇಶವೇ ಅರಬ್ಬಿ ಜನರ ಕೈಯಿಂದ ಕಳಚುತ್ತಿತ್ತು. ಕಾರ್ಡೋಬ ೧೨೩೬ರಲ್ಲಿ ಕೈಬಿಟ್ಟುಹೋಗಿತ್ತು. ಇನ್ನೂ ಎರಡುನೂರು ಐವತ್ತು ವರ್ಷಗಳ ಕಾಲ ಗ್ರ್ಯಾನಡ ಅರಬ್ಬಿ ಸಂಸ್ಕೃತಿಗೆ ಒಂದು ಉಜ್ವಲಕೇಂದ್ರವಾಗಿ ಉಳಿದಿತ್ತು. ೧೪೯೨ರಲ್ಲಿ ಫರ್ಡಿನೆಂಡ್ ಮತ್ತು ಇಸಬೆಲ ಗ್ರ್ಯಾನಡವನ್ನು ಜಯಿಸಿದ್ದರಿಂದ ಸ್ಪೇನಿನಲ್ಲಿ ಅರಬ್ಬಿ ಆಡಳಿತ ಮುಗಿಯಿತು. ಅನಂತರ ಅರಬ್ಬಿ ಸಂಸ್ಕೃತಿಗೆ ಕೈರೋ ಪಟ್ಟಣವು–ತುರ್ಕಿಯ ಅಧೀನವಾದರೂ ಕೇಂದ್ರವಾಯಿತು. ಆಟೊಮನ್ ತುರ್ಕಿ ಜನರು ೧೪೫೩ರಲ್ಲಿ ಕಾನ್‌ಸ್ಟೆಂಟಿನೋಪಲ್ ನಗರವನ್ನು ಹಿಡಿದರು. ಇದರಿಂದ ಯೂರೋಪಿನ ಪುನರುಜ್ಜೀವನಕ್ಕೆ ಕಾರಣಭೂತವಾದ ನೂತನ ಶಕ್ತಿಗಳು ಹೊರಹೊಮ್ಮಿದುವು.

ಏಷ್ಯ ಮತ್ತು ಯೂರೋಪಿನಲ್ಲಿ ಮಂಗೋಲರ ವಿಜಯದಿಂದ ಯುದ್ಧಕಲೆಯಲ್ಲಿ ಒಂದು ಹೊಸ ವಿಧಾನವು ಕಂಡುಬಂದಿತು. "ಪ್ರಮಾಣದಲ್ಲಿ ಮತ್ತು ಗುಣದಲ್ಲಿ, ಆಕಸ್ಮಿಕದಲ್ಲಿ ಮತ್ತು ಚಲನೆಯಲ್ಲಿ, ರಚನಾಕೌಶಲ್ಯದಲ್ಲಿ ಮತ್ತು ಅಪ್ರತ್ಯಕ್ಷವಾಗಿ ಬಂದೊದಗಿದ ಬುದ್ಧಿವಂತಿಕೆಯಲ್ಲಿ ಮಂಗೋಲರ ಈ ದಂಡಯಾತ್ರೆಗಳನ್ನು ಹೋಲತಕ್ಕವು ಇತಿಹಾಸದಲ್ಲಿ ಯಾವುವೂ ಇಲ್ಲ" ಎಂದು ಪ್ರಸಿದ್ಧ ಚರಿತ್ರಕಾರನಾದ ಲಿಡ್ಡೆಲ್ ಹಾರ್ಟ್ ಹೇಳುತ್ತಾನೆ ಪ್ರಪಂಚದಲ್ಲಿ ಜನ್ಮತಾಳಿದ ಮಹಾಸೇನಾನಿಗಳಲ್ಲಿ ಚಂಗೀಸ್‌ಖಾನನು ಅತಿ ಶ್ರೇಷ್ಠನಲ್ಲದಿದ್ದರೂ, ಶ್ರೇಷ್ಠರಲ್ಲಿ ಒಬ್ಬ. ಏಷ್ಯ ಮತ್ತು ಯೂರೋಪುಗಳ ಪೌರಷವೆಲ್ಲ ಆತನ ಮತ್ತು ಆತನ ವಂಶೀಕರ ಎದುರು ಹುಲ್ಲುಕಡ್ಡಿಯಂತೆ ಉರುಬಿಹೋಯಿತು. ಮಧ್ಯ ಮತ್ತು ಪಶ್ಚಿಮ ಯೂರೋಪು ಆತನ ಅಧೀನವಾಗದಿದ್ದುದು ಕೇವಲ ಆಕಸ್ಮಿಕ. ಯೂರೋಪು ತನ್ನ ನೂತನ ಯುದ್ಧಕಲೆ ಮತ್ತು ಕೌಶಲ್ಯವನ್ನು ಈ ಮಂಗೋಲರಿಂದ ಕಲಿಯಿತು. ಬಂದೂಕಿನ ಮಸಿಯ ಉಪಯೋಗವನ್ನು ಚೀನದಿಂದ ತಂದು ಯೂರೋಪಿಗೆ ಕಲಿಸಿದವರೂ ಈ ಮಂಗೋಲರೆ.

ಮಂಗೋಲರು ಇಂಡಿಯಕ್ಕೆ ದಂಡೆತ್ತಿ ಬರಲಿಲ್ಲ. ಸಿಂಧು ನದಿಯ ದಡದಲ್ಲಿಯೇ ನಿಂತು ಅವರ ದಂಡಯಾತ್ರೆಗಳನ್ನು ಬೇರೆ ಕಡೆಗಳಲ್ಲಿ ಮುಂದುವರಿಸಿದರು. ಅವರ ಮಹಾ ಸಾಮ್ರಾಜ್ಯವು ಒಡೆದು ಹೋದಾಗ ಏಷ್ಯದಲ್ಲಿ ಅನೇಕ ಸಣ್ಣ ರಾಜ್ಯಗಳು ಹುಟ್ಟಿದುವು. ೧೩೬೯ರಲ್ಲಿ, ತನ್ನ ತಾಯಿಯಮೂಲಕ

ಚಂಗೀಸ್ ಖಾನನ ವಂಶೀಕನೆಂದು ಹೇಳಿಕೊಳ್ಳುತ್ತಿದ್ದ ತುರ್ಕಿಯ ತೈಮೂರನು ಚಂಗೀಸ್ ಖಾನನ ದಂಡಯಾತ್ರೆಗಳನ್ನು ಅನುಕರಣಮಾಡಲು ಹೊರಟನು. ಅತ್ಯಲ್ಪಕಾಲ ಮೆರೆದರೂ ಆತನ ರಾಜಧಾನಿ ಯಾದ ಸಮರ್‌ಖಂಡ್ ಒಂದು ದೊಡ್ಡ ಸಾಮ್ರಾಜ್ಯದ ಕೇಂದ್ರವಾಯಿತು. ತೈಮೂರ್ ಕಾಲವಾದನಂತರ ಆತನ ವಂಶೀಕರು ದಂಡಯಾತ್ರೆಗಳನ್ನು ಬಿಟ್ಟು ಕಲಾಭಿವೃದ್ಧಿಯಲ್ಲಿ ಆಸಕ್ತರಾಗಿ ಶಾಂತಜೀವನವನ್ನು ನಡೆಸುವುದರಲ್ಲಿ ಉದ್ಯುಕ್ತರಾದರು. ಮಧ್ಯ ಏಷ್ಯದಲ್ಲಿ ತೈಮೂರಿನ ಪುನರುಜ್ಜೀವನವೊಂದು ನಡೆ ಯಿತು. ತೈಮೂರ್ ವಂಶೀಕನಾದ ಬಾಬರ್ ಹುಟ್ಟಿ ಬೆಳೆದದ್ದು ಈ ಸನ್ನಿವೇಶದಲ್ಲಿ. ಭಾರತದಲ್ಲಿ ಮೊಗಲ ಸಂತತಿಯ ಮೂಲಪುರುಷ ಬಾಬರ್. ಆತನೇ ಮಹಾ ಮೊಗಲರಲ್ಲಿ ಮೊದಲಿಗನು. ೧೫೨೬ರಲ್ಲಿ ದೆಹಲಿಯನ್ನು ಆತನು ಹಿಡಿದನು.

ಹೆಸರು ಇಸ್ಲಾಂ ಹೆಸರಿನಂತಿದ್ದರೂ, ಅನೇಕರು ಭಾವಿಸಿರುವಂತೆ ಚಂಗೀಸ್ ಖಾನ್ ಮುಸಲ್ಮಾನ ನಲ್ಲ. ಅಂತರಿಕ್ಷ ಪೂಜೆಯನ್ನು ಮಾಡುವ "ಶಾಮಾಧರ್ಮ" ಅವನ ಮತವಾಗಿತ್ತು. ಅದೇನೆಂಬುದು ನನಗೆ ಗೊತ್ತಿಲ್ಲ. ಆದರೆ ಆ ಪದವನ್ನು ನೋಡಿದರೆ ಅರಬ್ಬಿಗಳು ಬೌದ್ಧರನ್ನು ಕರೆಯುತ್ತಿದ್ದ ಪದವು ಜ್ಞಾಪಕಕ್ಕೆ ಬರುತ್ತದೆ—"ಶಮಣ" ಎಂಬುದು ಸಂಸ್ಕೃತ "ಶ್ರವಣ"ದಿಂದ ಬಂದದ್ದು. ಮಂಗೋಲಿಯ ಸಹ ಸೇರಿ ಏಷ್ಯದ ಅನೇಕ ಭಾಗಗಳಲ್ಲಿ ಬೌದ್ಧ ಮತದ ಅಪಭ್ರಂಶಗಳು ಆಚರಣೆಯಲ್ಲಿ ಇದ್ದುವು. ಪ್ರಾಯಶಃ ಚಂಗೀಸ್ ಖಾನ್ ಅವುಗಳಲ್ಲೊಂದರ ಹಿನ್ನೆಲೆಯಲ್ಲಿ ಬೆಳೆದಿರಬಹುದು. ಚರಿತ್ರೆಯಲ್ಲಿ ಅತಿ ಶ್ರೇಷ್ಠ ದಂಡನಾಯಕನು ಯಾವುದೋ ಬಗೆಯ ಬೌದ್ಧನೆಂಬುದು ಒಂದು ದೊಡ್ಡ ಆಶ್ಚರ್ಯ.

ಮಧ್ಯ ಏಷ್ಯದ ಜನರಲ್ಲಿ ಈಗಲೂ ನಾಲ್ಕು ಜನ ದಂಡನಾಯಕರ ಹೆಸರುಗಳು ಬಳಕೆಯಲ್ಲಿವೆ. ಸಿಕಂದರ್ (ಅಲೆಕ್ಸಾಂಡರ್), ಸುಲ್ತಾನ್ ಮಹಮ್ಮದ್, ಚಂಗೀಸ್ ಖಾ಼ ಮತ್ತು ತೈಮೂರ್. ಈ ನಾಲ್ವರ ಜೊತೆಗೆ ಇನ್ನೊಂದು ರೀತಿಯಲ್ಲಿ ಪ್ರಸಿದ್ಧನಾದ ಐದನೆಯ ಹೆಸರನ್ನು ಸೇರಿಸಬೇಕು. ಆತನು ಯೋಧನಲ್ಲದಿದ್ದರೂ ಇನ್ನೊಂದು ಬಗೆಯಿಂದ ಆತನೂ ಒಬ್ಬ ವಿಜಯಶಾಲಿ; ಆತನ ಹೆಸರನ್ನು ಹೇಳಿದರೆ ಅನೇಕ ಕತೆಗಳನ್ನು ಹೇಳುತ್ತಾರೆ. ಆತನೇ ಲೆನಿನ್.

## ೨. ಅರಬ್ಬಿ ಸಂಸ್ಕೃತಿಯ ವಿಕಾಸ ಮತ್ತು ಭಾರತದ ಸಂಬಂಧ

ಏಷ್ಯ ಆಫ್ರಿಕಗಳಲ್ಲಿ ವಿಶಾಲ ಪ್ರದೇಶವನ್ನೂ ಮತ್ತು ಯೂರೋಪಿನಲ್ಲಿ ಸ್ವಲ್ಪ ಭಾಗವನ್ನೂ ಬಹುಬೇಗ ಅಧೀನಮಾಡಿಕೊಂಡ ಅರಬ್ಬಿ ಜನರು ಇತರ ಮಾರ್ಗಗಳಲ್ಲೂ ಜಯಶಾಲಿಗಳಾಗಲು ಮನಸ್ಸುಮಾಡಿದರು. ತಮ್ಮ ಸಾಮ್ರಾಜ್ಯವನ್ನು ಭದ್ರಗೊಳಿಸಿದರು. ತಮ್ಮ ದೃಷ್ಟಿಗೆ ಪರಿಚಯವಾದ ಅನೇಕ ಜನಾಂಗಗಳಿಂದ ಅವರ ಜೀವನ ಚರ್ಯೆಯನ್ನು ಅರಿತು ಪ್ರಪಂಚವನ್ನು ತಿಳಿದುಕೊಳ್ಳಲು ಉದ್ಯುಕ್ತರಾದರು. ಎಂಟು ಮತ್ತು ಒಂಭತ್ತನೆಯ ಶತಮಾನದ ಅರಬ್ಬಿ ಜನರ ಜ್ಞಾನದಾಹ, ತರ್ಕ ಬದ್ಧ ಮಾನಸಿಕ ಸಾಹಸ, ವಿಜ್ಞಾನವಿಷಯ, ಚರ್ಚಾದೃಷ್ಟಿಗಳು ಅತಿ ವಿಸ್ಮಯವನ್ನುಂಟುಮಾಡು ತ್ತವೆ. ನಿರ್ದಿಷ್ಟ ಅಭಿಪ್ರಾಯಗಳ ಮತ್ತು ನಂಬಿಕೆಗಳ ಆಧಾರದ ಮೇಲೆ ನಿಂತ ಒಂದು ಧರ್ಮದ ಆರಂಭದಿನಗಳಲ್ಲಿ ಶ್ರದ್ಧೆ ಪ್ರಾಧಾನ್ಯ, ಮತ್ತು ಇತರ ಯಾವ ಭಿನ್ನಾಭಿಪ್ರಾಯಕ್ಕೂ ಪ್ರೋತ್ಸಾಹವಾಗಲಿ, ಮನ್ನಣೆಯಾಗಲಿ ದೊರೆಯುವುದಿಲ್ಲ. ಅರಬ್ಬಿ ಜನರು ಅಷ್ಟು ಮುಂದುವರಿಯಲು ಈ ಶ್ರದ್ಧೆಯೇ ಮುಖ್ಯ ಕಾರಣ; ಮತ್ತು ಈ ವಿಜಯ ಪರಂಪರೆಯಿಂದ ಅವರ ಶ್ರದ್ಧೆಯೂ ಗಾಢವಾಯಿತು. ಆದರೂ ಅವರು ತಮ್ಮ ಮತ ಮತ್ತು ಆಚಾರದ ಮೇರೆಯನ್ನು ದಾಟಿ, ನಿರೀಶ್ವರವಾದ ವಿಷಯವನ್ನು ಚರ್ಚೆ ಮಾಡಿದ್ದಾರೆ; ತಮ್ಮ ಶಕ್ತಿ ಮತ್ತು ಉತ್ಸಾಹವನ್ನು ಮನೋಸಾಹಸದೆಡೆಗೆ ತಿರುಗಿಸಿದ್ ದಾರೆ. ಪ್ರವಾಸಿ ಗರಲ್ಲಿ ಮಹಾಸಾಹಸಿಗಳಾದ ಅರಬ್ಬಿ ಯಾತ್ರಿಕರು ದೂರದೇಶಗಳಿಗೆ ಹೋಗಿ ಇತರರು ಏನುಮಾಡುತ್ತಿ ದಾರೆ, ಏನು ಯೋಚಿಸುತ್ತಾರೆ, ಅವರ ತತ್ವಗಳೇನು, ವಿಜ್ಞಾನಗಳಾವುವು, ಅವರ ಜೀವನ ಪದ್ಧತಿ ಏನು ಎಂಬುದನ್ನು ಕಂಡುಹಿಡಿದು ತಮ್ಮ ಜ್ಞಾನ ಶ್ರೀಯನ್ನೂ ಪುಷ್ಟಿಗೊಳಿಸಿದ್ದಾರೆ. ಬಾಗ್ದಾದಿಗೆ ವಿದೇಶ ಗಳಿಂದ ಅನೇಕ ವಿದ್ವಾಂಸರನ್ನೂ, ಗ್ರಂಥಗಳನ್ನೂ ಕರೆಸುತ್ತಿದ್ದರು. ಎಂಟನೆಯ ಶತಮಾನದ ಮಧ್ಯಕಾಲದಲ್ಲಿದ್ದ ಖಲೀಫ್ ಅಲ್ ಮನ್ಸೂರ್‌ನು ಒಂದು ಸಂಶೋಧನಾಲಯವನ್ನೂ, ಭಾಷಾಂತರ

ಸಮಿತಿಯನ್ನೂ ಏರ್ಪಡಿಸಿದನು. ಗ್ರೀಕ್, ಸಿರಿಯಾಕ್, ಜೆ಼ಂದ್, ಲ್ಯಾಟಿನ್ ಮತ್ತು ಸಂಸ್ಕೃತ ಭಾಷೆಗಳಿಂದ ಗ್ರಂಥಗಳನ್ನು ಭಾಷಾಂತರಿಸುತ್ತಿದ್ದರು. ಸಿರಿಯಾ, ಏಷ್ಯಮೈನರ್ ಮತ್ತು ಲೆವಾಂಟಿನ ಹಳೆಯ ಮಠಗಳನ್ನೆಲ್ಲ ಹಸ್ತಪ್ರತಿಗಳಿಗಾಗಿ ಶೋಧನೆಮಾಡಿದರು. ಕ್ರೈಸ್ತ ಗುರುಗಳು ಹಳೆಯ ಅಲೆಕ್ಸಾಂಡ್ರಿಯ ಶಾಲೆಗಳನ್ನು ಮುಚ್ಚಿದ್ದರು. ಅವುಗಳ ಅಧ್ಯಾಪಕರು ಕೆಲಸವಿಲ್ಲದೆ ನಿರಾಶ್ರಿತರಾಗಿದ್ದರು. ಈ ನಿರಾಶ್ರಿತರ ಅನೇಕರು ಪರ್ಷಿಯ ಮತ್ತು ಇತರ ಕಡೆಗಳಿಗೆ ಹೊರಟುಹೋಗಿದ್ದರು. ಅವರಿಗೆಲ್ಲ ಬಾಗ್ದಾದಿನಲ್ಲಿ ಸ್ವಾಗತವೂ ಆಶ್ರಯವೂ ದೊರೆಯಿತು. ಅವರೊಂದಿಗೆ ಗ್ರೀಕರ ತತ್ವಶಾಸ್ತ್ರ, ವಿಜ್ಞಾನ, ಗಣಿತ ಶಾಸ್ತ್ರಗಳು ಬಂದವು.—ಪ್ಲೇಟೊ, ಅರಿಸ್ಟಾಟಿಲ್, ತೋಲೆಮಿ ಮತ್ತು ಯೂಕ್ಲಿಡ್‌ರ ಪರಿಚಯವಾಯಿತು. ನೆಸ್ಟೂರಿಯನ್ ಮತ್ತು ಯಹೂದಿ ವಿದ್ವಾಂಸರಿದ್ದರು. ಭಾರತೀಯ ವೈದ್ಯರು, ದಾರ್ಶನಿಕರು, ಗಣಿತಶಾಸ್ತ್ರಜ್ಞರು ಇದ್ದರು. ಎಂಟು ಮತ್ತು ಒಂಭತ್ತನೆಯ ಶತಮಾನಗಳಲ್ಲಿ ಹರೂನ್ ಅಲ್ ರಷೀದ್, ಅಲ್ ಮಾಮೂನ್ ಖಲೀಫರ ರಾಜ್ಯಭಾರದಲ್ಲಿ ಇವೆಲ್ಲ ಮುಂದುವರಿದವು. ಬಾಗ್ದಾದ್ ನಗರವು ನಾಗರಿಕ ಪ್ರಪಂಚದ ಉನ್ನತ ಸಂಸ್ಕೃತಿಗೆ ಮಹಾಕೇಂದ್ರವಾಯಿತು.

ಈ ಕಾಲದಲ್ಲಿ ಭಾರತದೊಂದಿನ ಸಂಬಂಧಗಳು ಅನೇಕ ಇದ್ದವು. ಅರಬ್ಬಿಜನರು ಭಾರತೀಯ ಗಣಿತಶಾಸ್ತ್ರ, ಖಗೋಳಶಾಸ್ತ್ರ, ವೈದ್ಯಶಾಸ್ತ್ರಗಳಿಂದ ಬಹಳ ಜ್ಞಾನ ಸಂಪಾದನೆಮಾಡಿದರು. ಆದರೂ ಈ ಸಂಬಂಧಗಳಿಗೆಲ್ಲ ಮುಖ್ಯ ಕಾರಣರಾದವರು ಅರಬ್ಬಿ ಜನರು. ಭಾರತದಿಂದ ಅರಬ್ಬಿಜನರು ಬಹಳ ಜ್ಞಾನಲಾಭ ಪಡೆದರೂ ಭಾರತೀಯರು ಮಾತ್ರ ಅರಬ್ಬಿ ಜನರಿಂದ ಯಾವ ಜ್ಞಾನಲಾಭವನ್ನೂ ಪಡೆಯಲಿಲ್ಲ. ಭಾರತೀಯರು ತಮ್ಮ ಅಹಂಕಾರದಿಂದ, ತಮ್ಮೊಳಗೆ ತಾವು ಇದ್ದು ಮಡಿವಂತರಾಗಿಯೇ ಉಳಿದರು. ಇದರಿಂದ ಬಹಳ ಅನರ್ಥವಾಯಿತು. ಭಾರತೀಯ ಜನ ಮನಸ್ಸು ತನ್ನ ಸೃಷ್ಟಿಶಕ್ತಿಯನ್ನು ಬಹಳಮಟ್ಟಿಗೆ ಕಳೆದುಕೊಳ್ಳುತ್ತಿದ್ದಾಗ ಈ ಅರಬ್ಬೀಪುನರುಜ್ಜೀವನವು ಅದಕ್ಕೊಂದು ಹೊಸ ಚೈತನ್ಯವನ್ನು ಕೊಡುತ್ತಿತ್ತು. ಪ್ರಾಚೀನಕಾಲದ ಭಾರತೀಯರಾಗಿದ್ದರೆ ಆ ಜ್ಞಾನ ಕುತೂಹಲ ದೃಷ್ಟಿಯಲ್ಲಿ ತಲ್ಲೀನರಾಗಿ ಲಾಭ ಪಡೆಯುತ್ತಿದ್ದರು.

ಭಾರತೀಯ ವಿದ್ವತ್ತು ಮತ್ತು ವಿಜ್ಞಾನದ ಈ ಅಭ್ಯಾಸಕ್ಕೆ ಹರೂನ್ ಅಲ್ ರಷೀದನ ವಜೀ಼ರ್ ಮನೆತನದ ಬಾರ್ಮಕ್ (ಬಾರ್ಮೆಸೈಡೀಸ್) ವಂಶೀಕರು ಬಹಳ ಪ್ರೋತ್ಸಾಹಕೊಟ್ಟರು. ಪ್ರಾಯಶಃ ಆ ವಂಶೀಕರೆಲ್ಲ ಬೌದ್ಧರಾಗಿರಬೇಕು. ಹರೂನ್ ಅಲ್ ರಷೀದನಿಗೆ ಕಾಹಿಲೆಯಾದಾಗ ಭಾರತದಿಂದ ಮಾನಕ್ ಎಂಬ ವೈದ್ಯನನ್ನು ಕರೆತರಲು ದೂತರನ್ನು ಕಳುಹಿಸಿದ್ದರು. ಮಾನಕ್ ಬಾಗ್ದಾದಿನಲ್ಲಿಯೇ ನಿಂತು ಒಂದು ದೊಡ್ಡ ವೈದ್ಯಶಾಲೆಯ ಮುಖ್ಯ ಅಧಿಕಾರಿಯಾದನು. ಮಾನಕ್ ಅಲ್ಲದೆ ಬೇರೆ ಆರು ಜನ ಭಾರತೀಯ ವೈದ್ಯರಿದ್ದರೆಂದು ಅರಬ್ಬೀ ಗ್ರಂಥಕರ್ತರು ಹೇಳುತ್ತಾರೆ. ಖಗೋಳ ಶಾಸ್ತ್ರದಲ್ಲಿ ಅರಬ್ಬಿಗಳು ಭಾರತೀಯರನ್ನೂ, ಅಲೆಕ್ಸಾಂಡ್ರಿಯನರನ್ನೂ ಮೀರಿಸಿದರು. ಇದರಲ್ಲಿ ಒಂಭತ್ತನೆಯ ಶತಮಾನದ ಗಣಿತ ಮತ್ತು ಖಗೋಳಶಾಸ್ತ್ರಗಳಲ್ಲಿ ಪ್ರವೀಣನಾದ ಅಲ್‌ಖ್ವರಿಸ್ಮಿ ಮತ್ತು ಹನ್ನೆರಡನೆಯ ಶತಮಾನದ ಕವಿಯೂ, ಖಗೋಳ ಶಾಸ್ತ್ರಜ್ಞನೂ ಆದ ಉಮರ್ ಖಯ್ಯಾಮ್ ಪ್ರಮುಖರು. ವೈದ್ಯದಲ್ಲಿ ಅರಬ್ಬಿ ಭಿಷಜರೂ, ಶಸ್ತ್ರವೈದ್ಯರೂ ಏಷ್ಯ ಮತ್ತು ಯೂರೋಪಿನಲ್ಲೆಲ್ಲ ಪ್ರಸಿದ್ಧರಿದ್ದರು. ಅವರಲ್ಲೆಲ್ಲ ಅತಿಪ್ರಾಮುಖ್ಯನೆಂದರೆ ವೈದ್ಯರಾಜನೆಂದು ಹೆಸರಾದ ಜೂಬಾರ ಪಟ್ಟಣದ ಇಬನ್ ಸೈನಾ (ಅವೀಸೆನ್ನ). ೧೦೩೭ ರಲ್ಲಿ ಆತನು ಕಾಲವಾದನು. ಅರಬ್ಬಿ ತತ್ವಶಾಸ್ತ್ರ ಮತ್ತು ದರ್ಶನಗಳಲ್ಲಿ ಅಬು ನಜರ್ ಫರಾಬಿ ಪ್ರಸಿದ್ಧನಾದವನು.

ತತ್ವಶಾಸ್ತ್ರದಲ್ಲಿ ಅರಬ್ಬಿ ಜನರಮೇಲೆ ಭಾರತವು ಹೆಚ್ಚು ಪ್ರಭಾವ ಬೀರಿದಂತೆ ತೋರುವುದಿಲ್ಲ. ತತ್ವಶಾಸ್ತ್ರ ಮತ್ತು ವಿಜ್ಞಾನಗಳೆರಡರಲ್ಲೂ ಅರಬ್ಬಿಜನರು ಗ್ರೀಸ್ ಮತ್ತು ಪ್ರಾಚೀನ ಅಲೆಕ್ಸಾಂಡ್ರಿಯದ ವಿದ್ಯಾಮಂದಿರಗಳಿಂದ ಸ್ಫೂರ್ತಿಪಡೆಯುತ್ತಿದ್ದರು. ಅರಬ್ಬಿ ಜನರ ಮನಸ್ಸಿನ ಮೇಲೆ ಆಗಲೂ ಮತ್ತು ಇಂದಿನವರೆಗೆ ಸಹ ಪ್ಲೇಟೋ ಮತ್ತು ಎಲ್ಲರಿಗೂ ಮುಖ್ಯವಾಗಿ ಅರಿಸ್ಟಾಟಲ್ ಬಹಳ ಪ್ರಭಾವ ಬೀರಿದ್ದಾರೆ. ಮೂಲಗ್ರಂಥಗಳಿಗಿಂತ ಹೆಚ್ಚಾಗಿ ಅರಬ್ಬೀ ಟೀಕಾ ಗ್ರಂಥಗಳ ಮೂಲಕ ಇಸ್ಲಾಂ

ವಿದ್ಯಾಪೀಠಗಳಲ್ಲಿ ಅವರ ತತ್ವಶಾಸ್ತ್ರವು ಪಾಠಕ್ರಮದಲ್ಲಿ ಅವಶ್ಯಭಾಗವಾಗಿದೆ. ಅಲೆಕ್ಸಾಂಡ್ರಿಯದ ನವೀನ ಪ್ಲೇಟೋ ಮತವೂ ಅರಬ್ಬಿ ಮನಸ್ಸಿನಮೇಲೆ ಪರಿಣಾಮ ಮಾಡಿತು. ಗ್ರೀಕ್ ತತ್ವಶಾಸ್ತ್ರದ ಚಾರ್ವಾಕವಾದದ ಪರಿಚಯವಾಗಿ ಹೇತುವಾದವೂ, ಚಾರ್ವಾಕವಾದವೂ ಬೆಳೆಯಲು ಅವಕಾಶ ವಾಯಿತು. ಹೇತುವಾದಿಗಳು ಧಾರ್ಮಿಕ ಬೋಧೆಗಳನ್ನು, ವಿಧಿಗಳನ್ನು ತರ್ಕರೀತಿಯಿಂದ ವಿಚಾರ ಮಾಡತೊಡಗಿದರು. ಚಾರ್ವಾಕವಾದಿಗಳು ಮತವನ್ನೇ ನಿರಾಕರಿಸಿದರು. ಬಾಗ್ದಾದಿನಲ್ಲಿ ಈ ಎಲ್ಲ ವಿರುದ್ಧ ಮತ್ತು ಅನನ್ವಯ ಸಿದ್ಧಾಂತಗಳ ಪ್ರತಿಪಾದನೆಗೆ ಮತ್ತು ಚರ್ಚೆಗೆ ಇದ್ದ ಸ್ವಾತಂತ್ರ್ಯವು ಅತ್ಯಾಶ್ಚರ್ಯವನ್ನುಂಟುಮಾಡುತ್ತದೆ. ಧರ್ಮಶ್ರದ್ಧೆ ಮತ್ತು ವಿಚಾರ ದೃಷ್ಟಿಗಳಿಗೆ ಇದ್ದ ಈ ವಿವಾದ ಮತ್ತು ಘರ್ಷಣೆಗಳು ಬಾಗ್ದಾದಿನಿಂದ ಅರಬ್ಬಿ ಪ್ರಪಂಚದಲ್ಲೆಲ್ಲ ಹರಡಿ ಸ್ಪೇನ್‌ವರೆಗೂ ಮುಟ್ಟಿತು. ದೇವರ ಸ್ವರೂಪವು ಚರ್ಚೆಯಾಗಿ ಸಾಮಾನ್ಯವಾಗಿ ದೇವರಿಗೆ ಆರೋಪಿಸುವ ಗುಣಗಳು ಯಾವುವೂ ಇಲ್ಲವೆಂದೂ, ಆತನು ನಿರ್ಗುಣನೆಂದೂ ಹೇಳಿದರು. ಆ ಗುಣಗಳೆಲ್ಲ ಮಾನವಸ್ವಭಾವ ಗುಣಗಳಿದ್ದವು. ದೇವರು ದಯಾಮಯ, ಸತ್ಯಸಂಕಲ್ಪನೆಂದು ಹೇಳಿದರೆ ದೇವರಿಗೆ ಗಡ್ಡವಿದೆ ಎಂದರೆ ಎಷ್ಟು ಅಸಂಸ್ಕೃತವೋ, ಮೂಢವೋ ಅಷ್ಟೇ ಮೂಢವೆಂದರು.

ಹೇತುವಾದ ನಿರೀಶ್ವರವಾದ ನಾಸ್ತಿಕವಾದ ಎಡೆಗೊಟ್ಟವು. ಕ್ರಮೇಣ ಬಾಗ್ದಾದ್ ಹೀನಸ್ಥಿತಿಗೆ ಬಂದು, ತುರ್ಕಿಯ ಶಕ್ತಿಯು ಬಲಗೊಂಡಮೇಲೆ ಈ ತರ್ಕಬದ್ಧ ವಿಚಾರಬುದ್ಧಿಯು ಕಡಮೆ ಯಾಯಿತು. ಆದರೆ ಅರಬ್ಬಿ ಸ್ಪೇನಿನಲ್ಲಿ ಈ ತರ್ಕ ವಿಚಾರವು ಮುಂದುವರಿದು ಸ್ಪೇನಿನ ಅರಬ್ಬಿ ದಾರ್ಶನಿಕರಲ್ಲಿ ಅತಿ ಶ್ರೇಷ್ಠನಾದ ಹನ್ನೆರಡನೆಯ ಶತಮಾನದ ಇಬನ್ ರಷಿದ್ (ಅವೆರೋಸ್) ನಾಸ್ತಿಕನಾಗಿದ್ದನು. ಆಗ ಪ್ರಚಾರದಲ್ಲಿದ್ದ ಮತಗಳೆಲ್ಲವೂ ಮಕ್ಕಳು ಅಥವ ಹುಚ್ಚರಿಗೆ ಮಾತ್ರ ಯೋಗ್ಯ, ಯಾವುದೂ ಆಚರಣಾರ್ಹವಲ್ಲ ಎಂದು ಹೇಳಿದನಂತೆ. ನಿಶ್ಚಯವಾಗಿ ಆತನು ಆ ರೀತಿ ಹೇಳಿದನೋ ಇಲ್ಲವೋ ತಿಳಿಯದು. ಆದರೂ ಈ ಕಥೆಯಿಂದ ಆತನ ಮನೋಭಾವವು ವ್ಯಕ್ತವಾಗುತ್ತದೆ; ಮತ್ತು ತನ್ನ ಅಭಿಪ್ರಾಯಗಳಿಗಾಗಿ ಆತನು ತೊಂದರೆಗೀಡಾದನು. ಅನೇಕ ವಿಧದಲ್ಲಿ ಆತನು ಕ್ರಾಂತಿ ಪುರುಷನಾಗಿದ್ದನು. ಸಾರ್ವಜನಿಕ ಕೆಲಸಗಳಲ್ಲಿ ಸ್ತ್ರೀಯರಿಗೆ ಪೂರ್ಣ ಅವಕಾಶ ಕೊಡಬೇಕೆಂದೂ, ಯಾವ ಕೆಲಸವನ್ನಾದರೂ ದಕ್ಷತೆಯಿಂದ ನಿರ್ವಹಿಸಬಲ್ಲರೆಂದೂ ಹೇಳಿದನು. ವಾಸಿಮಾಡಲಾಗದ ರೋಗಿಗಳು ಮತ್ತು ನಿಷ್ಪ್ರಯೋಜಕ ವ್ಯಕ್ತಿಗಳು ಸಮಾಜಕ್ಕೆ ಹೊರೆಯಾದ್ದರಿಂದ ಅವರನ್ನೆಲ್ಲ ನಾಶಮಾಡಬೇಕೆಂದು ಹೇಳಿದನು. ಯೂರೋಪಿನ ಇತರ ವಿದ್ಯಾಪೀಠಗಳೆಲ್ಲಕ್ಕಿಂತ ಸ್ಪೇನ್ ಬಹಳ ಮುಂದುವರಿದಿತ್ತು. ಕಾರ್ಡೋಬ ವಿದ್ಯಾಮಂದಿರದ ಅರಬ್ಬಿ ಮತ್ತು ಯಹೂದಿ ವಿದ್ವಾಂಸರಿಗೆ ಪ್ಯಾರಿಸ್ ಮತ್ತು ಇತರ ಕಡೆಗಳಲ್ಲಿ ಬಹಳ ಗೌರವವಿತ್ತು. ಈ ಅರಬ್ಬಿ ವಿದ್ವಾಂಸರಿಗೆ ಇತರ ಯೂರೋಪಿಯನರ ಮೇಲೆ ಯಾವ ಗೌರವಭಾವನೆಯು ಇರಲಿಲ್ಲ. ತೋಲೆದೊವಿನ ಸೈಯದ್ ಎಂಬ ಅರಬ್ಬಿ ಗ್ರಂಥಕರ್ತನು ಪಿರನೀಸ್ ಪರ್ವತಗಳಾಚೆ ಇರುವ ಯೂರೋಪಿಯನರ ವಿಷಯದಲ್ಲಿ "ಅವರು ಶೀತಲ ಸ್ವಭಾವದವರು. ಎಂದಿಗೂ ಪ್ರೌಢರಾಗುವುದೇ ಇಲ್ಲ. ಆಜಾನುಬಾಹುಗಳು. ಬಿಳಿಯ ಬಣ್ಣದವರು. ಆದರೆ ಹಾಸ್ಯ ನೈಪುಣ್ಯವೂ ಇಲ್ಲ ಕುಶಾಗ್ರ ಬುದ್ಧಿಯೂ ಇಲ್ಲ" ಎಂದಿದ್ದಾನೆ.

ಪಶ್ಚಿಮ ಮತ್ತು ಮಧ್ಯ ಏಷ್ಯದಲ್ಲಿ ಅರಬ್ಬಿ ಸಂಸ್ಕೃತಿಯು ವಿಕಾಸವಾಗಲು ಸ್ಫೂರ್ತಿ ಬಂದುದು ಮುಖ್ಯವಾಗಿ ಅರಬ್ಬಿ ಮತ್ತು ಇರಾಣಿ ಮೂಲಗಳೆರಡರಿಂದ. ಎರಡೂ ರಸಪಾಕವಾಗಿ ಅದ್ಭುತ ಭಾವನಾಶಕ್ತಿಯನ್ನು ಕೊಟ್ಟುದಲ್ಲದೆ ಮೇಲ್ಪಟ್ಟದ ಜನರಿಗೆ ಉತ್ತಮ ಜೀವನ ಸೌಕರ್ಯವನ್ನೂ ಒದಗಿಸಿಕೊಟ್ಟಿತು. ಅರಬ್ಬಿ ಜನರಿಂದ ಕಾರ್ಯಶಕ್ತಿಯೂ, ವಿಚಾರಪರತೆಯೂ ಬಂದುವು. ಇರಾಣಿಗಳಿಂದ ಜೀವನಗಾಂಭೀರ್ಯ, ಕಲೆ ಮತ್ತು ಸುಖಜೀವನಗಳು ಬೆಳೆದವು. ತುರ್ಕಿಯ ಪ್ರಾಬಲ್ಯದಿಂದ ಬಾಗ್ದಾದ್‌ನ ಅವನತಿಯಾಗಿ ತರ್ಕಬುದ್ಧಿ ಮತ್ತು ವಿಚಾರಪರತೆಗಳು ನಾಶವಾದವು. ಚಂಗೀಸ್‌ಖಾನ್ ಮತ್ತು ಮಂಗೋಲರು ಅದನ್ನೆಲ್ಲ ಪೂರ್ಣ ನಾಶಮಾಡಿದರು. ಒಂದು ನೂರು ವರ್ಷಗಳ ಮೇಲೆ ಮಧ್ಯ ಏಷ್ಯ ಪುನಃ ಎಚ್ಚತ್ತು ಸಾಮರಖಂಡ್ ಮತ್ತು ಹೀರತ್ ನಗರಗಳು ಚಿತ್ರ ಮತ್ತು

ಶಿಲ್ಪಕಲೆಯ ಕೇಂದ್ರಗಳಾದವು; ಪ್ರಾಚೀನ ಅರಬ್ಬಿ-ಪಾರಸಿ ನಾಗರಿಕತೆಯ ಸಂಪ್ರದಾಯಗಳು ಪುನರುಜ್ಜೀವಿತವಾದುವು. ಆದರೆ ಅರಬ್ಬಿ ರಾಷ್ಟ್ರೀಯ ಭಾವನೆಯಾಗಲಿ ವಿಜ್ಞಾನವಾಗಲಿ ಪುನರುಜ್ಜೀವನಗೊಳ್ಳಲಿಲ್ಲ. ಮನೋರಾಜ್ಯದ ವಿಚಾರಕ್ಕಿಂತ ರಣರಂಗದಲ್ಲಿ ವಿಜಯ ಪಡೆಯಲು ಅನುಕೂಲವಾಗುವಂತೆ ಇಸ್ಲಾಂ ಧರ್ಮವು ತುಂಬ ಕಟ್ಟುನಿಟ್ಟಾಯಿತು. ಏಷ್ಯದಲ್ಲಿ ಅದರ ಮುಖ್ಯ ಪ್ರತಿನಿಧಿಗಳು ಅರಬ್ಬಿ ಜನವಾಗಲಿಲ್ಲ. ತುರ್ಕಿಯವರು, ಮಂಗೋಲಿಯನರು (ಭಾರತದಲ್ಲಿ ಮೊಗಲರು), ಸ್ವಲ್ಪಮಟ್ಟಿಗೆ ಆಫ್ಘನರು ಅದರ ಮುಖ್ಯ ಪ್ರಚಾರಕರಾದರು. ಪಶ್ಚಿಮ ಏಷ್ಯದಲ್ಲಿ ಮಂಗೋಲರು ಮುಸ್ಲಿಮರಾಗಿದ್ದರು. ದೂರ ಪ್ರಾಚ್ಯದಲ್ಲಿ ಮತ್ತು ಮಧ್ಯ ಪ್ರದೇಶಗಳಲ್ಲಿ ಅನೇಕರು ಇನ್ನೂ ಬೌದ್ಧರಾಗಿದ್ದರು.

## ೩. ಘಜ್ನಿಮಹಮ್ಮದ್ ಮತ್ತು ಆಫ್ಘನರು

ಎಂಟನೆಯ ಶತಮಾನದ ಆರಂಭದಲ್ಲಿ ಕ್ರಿ. ಶ. ೭೧೨ ರಲ್ಲಿ ಅರಬ್ಬಿ ಜನರು ಸಿಂಧು ದೇಶದವರೆಗೆ ಬಂದು ಅದನ್ನು ಆಕ್ರಮಿಸಿದರು. ಸುಮಾರು ಅರ್ಧ ಶತಮಾನದ ಒಳಗೆ ಸಿಂಧು ದೇಶವು ಅರಬ್ಬಿ ಸಾಮ್ರಾಜ್ಯದಿಂದ ದೂರವಾಗಿ ಒಂದು ಸಣ್ಣ ಸ್ವತಂತ್ರ ಮುಸ್ಲಿಂ ರಾಷ್ಟ್ರವಾಯಿತು. ಅನಂತರ ಸುಮಾರು ಮೂರುನೂರು ವರ್ಷಗಳವರೆಗೆ ಯಾವ ಮುತ್ತಿಗೆಯೂ ಆಗಲಿಲ್ಲ. ಕ್ರಿ. ಶ. ೧೦೦೦ದ ಸುಮಾರಿನಲ್ಲಿ ಮಧ್ಯ ಏಷ್ಯದಲ್ಲಿ ಪ್ರಾಬಲ್ಯಕ್ಕೆ ಬಂದ ತುರ್ಕಿ ಆಫ್ಘಾನಿಸ್ತಾನದ ಸುಲ್ತಾನ್ ಘಜ್ನಿಮಹಮ್ಮದ್ ಎಂಬ ತುರ್ಕಿಯವನು ಭಾರತದ ಮೇಲೆ ದಂಡಯಾತ್ರೆಗಳನ್ನು ಆರಂಭಿಸಿದನು. ಅನೇಕ ದಂಡಯಾತ್ರೆಗಳನ್ನು ಮಾಡಿದನು. ನಿಷ್ಕರುಣೆಯಿಂದ ರಕ್ತಪಾತಮಾಡಿ ಪ್ರತಿಸಲವೂ ಅಪಾರ ಐಶ್ವರ್ಯವನ್ನು ಕೊಳ್ಳೆಹೊಡೆದುಕೊಂಡು ಹೋದನು. ಆಗಿನ ಕಾಲದ ವಿದ್ವಾಂಸನಾದ ಖೈವ್‌ನಗರದ ಆಲ್ಬೆರುನಿ "ಹಿಂದುಗಳು ಧೂಳಿಕಣದಂತೆ ಚಲ್ಲಾಪಿಲ್ಲಿಯಾಗಿ ದಿಕ್ಕುಪಾಲಾಗಿ ಓಡಿ ಹೋದರು. ಅವರ ಕಥೆಯು ದಂತಕಥೆಯಾಯಿತು. ಚೆದುರಿ ಉಳಿದವರು ಮುಸ್ಲಿಮರನ್ನು ಕಂಡರೆ ವಿಷಕಾರುತ್ತಾರೆ" ಎಂದು ಬರೆದಿದ್ದಾನೆ. ಈ ಕಾವ್ಯಮಯ ವರ್ಣನೆಯಿಂದ ಮಹಮ್ಮದನು ಎಷ್ಟು ಅನರ್ಥಮಾಡಿದನೆಂಬುದು ಗೊತ್ತಾಗುತ್ತದೆ. ಆದರೂ ಮಹಮ್ಮದ್ ತನ್ನ ದಾರಿಯಲ್ಲಿ ದೊರೆತ ಉತ್ತರ ಹಿಂದೂಸ್ಥಾನದ ಅಲ್ಪ ಭಾಗವನ್ನು ಮಾತ್ರ ಕೊಳ್ಳೆಹೊಡೆದು ನಾಶಮಾಡಿದನೆಂಬುದನ್ನು ಮರೆಯಲಾಗದು. ಮಧ್ಯ ಇಂಡಿಯ, ಪೂರ್ವ ಮತ್ತು ದಕ್ಷಿಣ ಇಂಡಿಯದ ಭಾಗಗಳಿಗೆ ಆತನಿಂದ ಯಾವ ಹಾನಿಯೂ ಆಗಲಿಲ್ಲ.

ದಕ್ಷಿಣ ಇಂಡಿಯದಲ್ಲಿ ಆಗಲೂ ಮತ್ತು ಅನೇಕ ದಿನಗಳ ಅನಂತರವೂ ಬಲಯುತವಾದ ಚೋಳ ಚಕ್ರಾಧಿಪತ್ಯದ ಅಧಿಕಾರ ನಡೆಯುತ್ತಲಿತ್ತು. ಅದು ಸಮುದ್ರ ಮಾರ್ಗಗಳನ್ನೆಲ್ಲ ತನ್ನ ಕೈವಶಮಾಡಿಕೊಂಡು ಜಾವ ಮತ್ತು ಸುಮಾತ್ರಾಗಳವರೆಗೂ ಹಬ್ಬಿ ಅಲ್ಲಿನ ದೊರೆಯಾದ ಶ್ರೀವಿಜಯನನ್ನು ತನ್ನ ಅಧೀನಮಾಡಿಕೊಂಡಿತ್ತು. ಆದರೆ ಇದರಿಂದ ಉತ್ತರ ಹಿಂದೂಸ್ಥಾನವು ಮುತ್ತಿಗೆಗೆ ಗುರಿಯಾಗುವುದು ತಪ್ಪಲಿಲ್ಲ.

ಮಹಮ್ಮದನು ಪಂಜಾಬ್ ಮತ್ತು ಸಿಂಧು ದೇಶಗಳನ್ನು ಗೆದ್ದು ತನ್ನ ರಾಜ್ಯದೊಳಗೆ ಸೇರಿಸಿಕೊಂಡು ಪ್ರತಿಯೊಂದು ದಂಡಯಾತ್ರೆಯಾದೊಡನೆ ಘಸ್ನಿಗೆ ಹಿಂದಿರುಗುತ್ತಿದ್ದನು. ಕಾಶ್ಮೀರವನ್ನು ಗೆಲ್ಲಲು ಆತನಿಂದ ಸಾಧ್ಯವಾಗಲಿಲ್ಲ. ಗುಡ್ಡಗಾಡಿನ ದೇಶವಾದ್ದರಿಂದ ಆತನನ್ನು ತಡೆದು ಹಿಮ್ಮೆಟ್ಟಿಸಲು ಸಾಧ್ಯವಾಯಿತು. ಕಾಥೇವಾಡದ ಸೋಮನಾಥದಿಂದ ಹಿಂತಿರುಗುವಾಗ ರಾಜಪುತಾನದಲ್ಲಿ ಆತನಿಗೆ ದೊಡ್ಡ ಸೋಲಾಯಿತು. ಅದೇ ಅವನ ಕೊನೆಯ ದಂಡಯಾತ್ರೆಯಾಗಿ ಪುನಃ ಅವನು ಬರಲಿಲ್ಲ.*

ಮಹಮ್ಮದ್ ಮತ ಪ್ರಚಾರಕನಿಗಿಂತ ಹೆಚ್ಚಾಗಿ ಯೋಧನಾಗಿದ್ದನು. ಇತರ ಎಲ್ಲ ಯೋಧ

* ಪಾರಸಿಭಾಷೆಯ ತರೀಖ್-ಇ-ಸೋರತ್ ಎಂಬ ಪ್ರಾಚೀನ ಗ್ರಂಥದಲ್ಲಿ ಮಹಮ್ಮದನು ದಿಕ್ಕು ಕಾಣದೆ ಓಡಿಹೋಗಿ ತನ್ನ ಪ್ರಾಣವನ್ನು ಉಳಿಸಿಕೊಂಡನು. ಅವನನ್ನು ಹಿಂಬಾಲಿಸಿದ್ದ ಸ್ತ್ರೀಪುರುಷರೆಲ್ಲರೂ ಸೆರೆಬಿದ್ದರು. ತುರ್ಕಿ, ಆಫ್ಘನ್, ಮೊಗಲ್ ಸ್ತ್ರೀಯರಲ್ಲಿ ಕನ್ಯೆಯರಾಗಿದ್ದವರನ್ನು ಭಾರತೀಯ ಸೈನಿಕರು ಮದುವೆಮಾಡಿಕೊಂಡರು.

ರಂತೆ ಆತನು ತನ್ನ ವಿಜಯಯಾತ್ರೆಗಳಿಗೆ ಧರ್ಮದ ಹೆಸರನ್ನು ಕೊಟ್ಟು ದುರುಪಯೋಗಮಾಡಿದನು. ಇಂಡಿಯ ಅವನಿಗೆ, ಕೊಳ್ಳೆಹೊಡೆದ ಲೂಟಿಮಾಡಿದ ಅಪಾರ ಐಶ್ವರ್ಯವನ್ನು ತನ್ನ ದೇಶಕ್ಕೆ ತೆಗೆದು ಕೊಂಡು ಹೋಗಲು ಅನುಕೂಲವಾದ ದೇಶಮಾತ್ರವಾಗಿತ್ತು. ಭಾರತದಲ್ಲಿಯೇ ಒಂದು ಸೈನ್ಯವನ್ನು ಕಟ್ಟಿ ಭಾರತೀಯನನ್ನೆ ಒಬ್ಬನನ್ನು ಅದಕ್ಕೆ ಸೇನಾನಿಯನ್ನಾಗಿ ಮಾಡಿದನು. ಅವನ ಹೆಸರು ತಿಲಕ್. ಅವನು ಭಾರತೀಯನೂ ಹಿಂದುವೂ ಆಗಿದ್ದನು. ಈ ಸೈನ್ಯವನ್ನು ಮಧ್ಯ ಏಷ್ಯದಲ್ಲಿ ತನ್ನ ಸ್ವಧರ್ಮೀಯರ ಮೇಲೂ ಯುದ್ಧಕ್ಕೆ ಬಿಟ್ಟನು. ಅವನ ರಾಜಧಾನಿಯಾದ ಘಜ್ನಿ ನಗರವು ಮಧ್ಯ ಮತ್ತು ಪಶ್ಚಿಮ ಏಷ್ಯದ ಮಹಾನಗರಗಳನ್ನು ಮೀರಿಸಬೇಕೆಂಬುದೇ ಅವನ ಹಿರಿಯಾಸೆಯಾಗಿತ್ತು. ಭಾರತದಿಂದ ಅನೇಕ ಕುಶಲ ಕರ್ಮಿಗಳನ್ನು, ಶಿಲ್ಪಶಾಸ್ತ್ರಜ್ಞರನ್ನು ಅಲ್ಲಿಗೆ ಕರೆದುಕೊಂಡು ಹೋದನು. ಭಾರತೀಯರ ಕಟ್ಟಡಗಳನ್ನು ನೋಡಿ ಬಹಳ ಮೋಹಿತನಾದನು. ದೆಹಲಿಯ ಬಳಿ ಇರುವ ಮಥುರಾ ನಗರವನ್ನು ನೋಡಿ ಮುಗ್ಧನಾದನು. ಅದನ್ನು ನೋಡಿ "ಧರ್ಮಭೀರುಗಳ ಅಚಲವಾದ ಧರ್ಮಶ್ರದ್ಧೆಯಿಂದ ಇಲ್ಲಿ ಸಾವಿರಾರು ಸೌಧಗಳಿವೆ. ಅನೇಕ ಶತಲಕ್ಷ ಹೊನ್ನುಗಳ ವೆಚ್ಚವಿಲ್ಲದೆ ಈ ನಗರವು ಈ ಸ್ಥಿತಿಗೆ ಬರಲು ಸಾಧ್ಯವಿಲ್ಲ. ಇಂಥ ಇನ್ನೊಂದು ನಗರ ನಿರ್ಮಾಣಕ್ಕೆ ಎರಡುನೂರು ವರ್ಷಗಳಾದರೂ ಬೇಕು" ಎಂದು ಬರೆದಿದ್ದಾನೆ.

ತನ್ನ ಯುದ್ಧಗಳ ಮಧ್ಯೆ ತನ್ನ ತಾಯ್ನಾಡಿನಲ್ಲಿ ಸಾಂಸ್ಕೃತಿಕ ಚಟುವಟಿಕೆಗಳಿಗೆ ಪ್ರೋತ್ಸಾಹಿಸಲು ಕಾತರನಾಗಿದ್ದನು. ಅನೇಕ ಮಹಾವ್ಯಕ್ತಿಗಳನ್ನು ಸುತ್ತಲೂ ಸೇರಿಸಿಕೊಂಡನು. 'ಷಹನಾಮ' ಬರೆದ ಫಿರ್ದೌಸಿಯು ಇವರಲ್ಲಿ ಒಬ್ಬ. ಕೊನೆಯಲ್ಲಿ ಇವನು ಮಹಮ್ಮದನೊಂದಿಗೆ ವ್ಯಾಜ್ಯ ಮಾಡಿದನು. ಮಹಾವಿದ್ವಾಂಸನೂ, ಪ್ರಸಿದ್ಧ ಪ್ರವಾಸಿಯೂ ಆದ ಆಲ್ಬೆರುನಿ ಅವನ ಸಮಕಾಲೀನ. ತನ್ನ ಗ್ರಂಥಗಳಲ್ಲಿ ಮಧ್ಯ ಏಷ್ಯದಲ್ಲಿ ಆಗಿನ ಕಾಲದಲ್ಲಿ ಜೀವನ ಹೇಗಿತ್ತು ಎಂಬ ಕಿರುನೋಟವನ್ನು ಕೊಡುತ್ತಾನೆ. ಪಾರಸಿವಂಶೀಕನಾದರೂ, ಖೈವದಲ್ಲಿ ಹುಟ್ಟಿ ಇಂಡಿಯ ದೇಶಕ್ಕೆ ಬಂದು ದೊಡ್ಡ ಪ್ರವಾಸಮಾಡಿದನು. ಚೋಳರಾಜ್ಯಕ್ಕೆ ಬಂದಿದ್ದುದೂ ದಕ್ಷಿಣಭಾರತದಲ್ಲಿ ಪ್ರವಾಸಮಾಡಿದುದೂ ಅನುಮಾನವಾದರೂ ಚೋಳರಾಜ್ಯದಲ್ಲಿ ಒಂದು ದೊಡ್ಡ ಜಲಾಶಯವಿತ್ತೆಂದು ಹೇಳುತ್ತಾನೆ. ಕಾಶ್ಮೀರದಲ್ಲಿ ಸಂಸ್ಕೃತವನ್ನು ಕಲಿತು ಭಾರತೀಯ ಧರ್ಮ, ತತ್ವಶಾಸ್ತ್ರ, ವಿಜ್ಞಾನ ಮತ್ತು ಕಲೆಗಳನ್ನು ಅಭ್ಯಾಸಮಾಡಿದನು. ಗ್ರೀಕ್ ತತ್ವಶಾಸ್ತ್ರವನ್ನು ಕಲಿಯಲು ಮೊದಲೇ ಆತನು ಗ್ರೀಕ್ ಭಾಷೆಯನ್ನು ಕಲಿತಿದ್ದನು. ಆತನ ಗ್ರಂಥಗಳು ಜ್ಞಾನ ಭಂಡಾರ ಮಾತ್ರವಲ್ಲದೆ ಸುತ್ತಲೂ ಯುದ್ಧ, ಸುಲಿಗೆ, ಕೊಲೆಪಾತಗಳಾಗುತ್ತಿದ್ದರೂ ತಾಳ್ಮೆಯಿಂದ ವಿದ್ವತ್ತು ಹೇಗೆ ಮುಂದುವರಿಯಿತು, ಕಾಮಕ್ರೋಧಾದಿಗಳಿಂದ ಪರಸ್ಪರ ಬಾಂಧವ್ಯದಲ್ಲಿ ವೈಷಮ್ಯ ಹುಟ್ಟಿದ್ದರೂ ಒಂದು ದೇಶವು ಇನ್ನೊಂದು ದೇಶವನ್ನು ಅರ್ಥಮಾಡಿಕೊಳ್ಳಲು ಹೇಗೆ ಪ್ರಯತ್ನಮಾಡಿತು ಎಂದು ತಿಳಿಸುತ್ತಾನೆ. ಆ ವ್ಯಾಮೋಹ ಮತ್ತು ಕ್ರೋಧದಿಂದ ಇಬ್ಬರ ದೃಷ್ಟಿಯೂ ಮಂಜಾಗಿರಬಹುದು, ಪ್ರತಿಯೊಂದು ದೇಶವೂ ತನ್ನ ಜನರೇ ಶ್ರೇಷ್ಠರೆಂದು ಭಾವಿಸಿರಬಹುದು. ಭಾರತೀಯರ ವಿಷಯದಲ್ಲಿ " ಗರ್ವಿಗಳು, ಜಂಭದ ಕೋಳಿಗಳು, ಸ್ವಯಂ ಪೂರ್ಣರು, ಜಡಮತಿಗಳು" ಎಂದೂ " ತಮ್ಮ ದೇಶಕ್ಕಿಂತ ಇನ್ನೊಂದಿಲ್ಲ, ತಮ್ಮ ಜನಾಂಗಕ್ಕಿಂತ ಉತ್ತಮವಿಲ್ಲ. ತಮ್ಮ ದೊರೆಗಿಂತ ಶ್ರೇಷ್ಠವಿಲ್ಲ, ತಮ್ಮ ವಿಜ್ಞಾನಕ್ಕಿಂತ ಬೇರೆ ಇಲ್ಲ ಎಂದು

ಉಳಿದವರನ್ನು ವಮನ ವಿರೇಚನಗಳಿಂದ ದೇಹಶುದ್ಧಿಮಾಡಿ ಅದೇ ಅಂತಸ್ತಿನ ಸೈನಿಕರಿಗೆ ಮದುವೆಮಾಡಿಕೊಡುತ್ತಿದ್ದರು. ಕೀಳುಜಾತಿಯ ಸ್ತ್ರೀಯರನ್ನು ಕೀಳುಜಾತಿಯ ಗಂಡಸರಿಗೆ ಮದುವೆಮಾಡುತ್ತಿದ್ದರು. ಉತ್ತಮರಿಗೆ ಅವರ ಗಡ್ಡವನ್ನು ಬೋಳಿಸಿ ರಜಪೂತರ ಷಿಖಾವತ್ ಮತ್ತು ವಾಥೇಲ ಗುಂಪಿಗೆ ಸೇರಿಸುತ್ತಿದ್ದರು. ಕಡಮೆ ದರ್ಜೆಯವರನ್ನು ಖೋಲಿ, ಖಂಟ, ಬಬ್ರಿಯ, ಮೇರ್ ಗುಂಪಿಗೆ ಸೇರಿಸುತ್ತಿದ್ದರು." ತರೀಖ್–ಇ–ಸೋರತ್ ನಾನು ಓದಿಲ್ಲ. ಅದನ್ನು ಎಷ್ಟನ್ನು ನಂಬಬಹುದು ನಾನರಿಯೆ. ಈ ಉಲ್ಲೇಖನವನ್ನು ಕೆ. ಎಂ. ಮುನ್ಷಿಯವರ 'ಗುರ್ಜರ ದೇಶದ ವೈಭವ' ಎಂಬ ಗ್ರಂಥದಿಂದ ಉದಹರಿಸಿರುತ್ತೇನೆ. ಮುಖ್ಯವಾಗಿ ಗಮನಿಸಬೇಕಾದದ್ದು ವಿದೇಶೀಯರು ರಜಪೂತ ಪಂಗಡಗಳಲ್ಲಿ ಸೇರಿ ಹೋಗುತ್ತಿದ್ದ, ಮದುವೆ ಸಹ ಆಗುತ್ತಿದ್ದ ರೀತಿ. ಶುದ್ಧೀಕರಣ ಪದ್ಧತಿಯು ಬಹಳ ವಿಚಿತ್ರವಿದೆ.

ನಂಬಿದ್ದಾರೆ” ಎಂದೂ ಬರೆದಿದ್ದಾನೆ. ಪ್ರಾಯಶಃ ಆಗಿನ ಜನರ ಮನೋಭಾವನೆಯ ನಿಜವಾದ ವರ್ಣನೆಯೇ ಇರಬೇಕು.

ರಾಜಕೀಯ ದೃಷ್ಟಿಯಿಂದ ಇಡೀ ಭಾರತದಲ್ಲಿ ಮಹಮ್ಮದನ ದಂಡಯಾತ್ರೆಗಳಿಂದ ಹೆಚ್ಚು ಹಾನಿಯಾಗದೆ ಭಾರತದ ನಡುಗಡ್ಡೆಯನ್ನು ಸಹ ಮುಟ್ಟಲು ಸಾಧ್ಯವಾಗದಿದ್ದರೂ ಇಂಡಿಯದ ಇತಿಹಾಸದಲ್ಲಿ ಮಹಮ್ಮದನ ದಂಡಯಾತ್ರೆಗಳು ಒಂದು ದೊಡ್ಡ ಘಟನೆ. ಉತ್ತರ ಹಿಂದೂಸ್ಥಾನದ ದೌರ್ಬಲ್ಯ ಮತ್ತು ಹೀನಸ್ಥಿತಿಯನ್ನು ಅದು ವ್ಯಕ್ತಗೊಳಿಸುತ್ತದೆ. ಉತ್ತರ ಮತ್ತು ಪಶ್ಚಿಮ ಭಾರತದ ಆಗಿನ ರಾಜಕೀಯ ಛಿದ್ರತೆಯ ಮೇಲೆ ಅಲ್ಬೆರುನಿಯು ಹೆಚ್ಚು ಬೆಳಕನ್ನು ಬೀರಿದ್ದಾನೆ. ಮೇಲಿಂದ ಮೇಲೆ ವಾಯುವ್ಯದ ಗಡಿಯಿಂದ ಬಂದ ಈ ದಂಡಯಾತ್ರೆಗಳಿಂದ ಇಂಡಿಯದ ಕಾರ್ಪಣ್ಯ ಭಾವನೆ ಮತ್ತು ಆರ್ಥಿಕ ನೀತಿಯಲ್ಲಿ ಹೊಸ ಸಮಸ್ಯೆಗಳು ಉದ್ಭವಿಸಿದವು. ಕ್ರೂರ ಸೈನಿಕ ಧಾಳಿ ಮತ್ತು ವಿಜಯಯಾತ್ರೆಯ ಹಿಂದೆಯೇ ಇಸ್ಲಾಂ ಧರ್ಮದ ಪ್ರಥಮ ಪ್ರವೇಶವಾಯಿತು. ಇದುವರೆಗೆ ಮೂರು ನೂರು ವರ್ಷಗಳಿಂದ ಇಸ್ಲಾಂ ಶಾಂತರೀತಿಯಲ್ಲಿ ಒಂದು ಮತಧರ್ಮವಾಗಿ ಬಂದಿತ್ತು ಮತ್ತು ಇಂಡಿಯದಿಂದ ಅನೇಕ ಧರ್ಮಗಳ ಜೊತೆಯಲ್ಲಿ ಯಾವ ತೊಂದರೆ ಅಥವ ವಿರೋಧಕ್ಕೂ ಎಡೆಗೊಡದೆ ಅದೂ ಒಂದು ಧರ್ಮವಾಗಿತ್ತು. ಆದರೆ ಈ ನೂತನ ಮಾರ್ಗವು ಜನರಲ್ಲಿ ದೊಡ್ಡ ಮಾನಸಿಕ ಪರಿಣಾಮವನ್ನುಂಟುಮಾಡಿ ಜನರಲ್ಲೊಂದು ರಚ್ಚು ತುಂಬಿತ್ತು. ಹೊಸ ಧರ್ಮಕ್ಕೆ ಯಾವ ವಿರೋಧವೂ ಇರಲಿಲ್ಲ. ಆದರೆ ಬಲಾತ್ಕಾರದಿಂದ ಪ್ರವೇಶಮಾಡಿ ಅವರ ಜೀವನರೀತಿಗೆ ಅಡ್ಡ ಬರುವುದನ್ನು ಜನರು ಪ್ರಬಲವಾಗಿ ವಿರೋಧಿಸಿದರು.

ಭಾರತದಲ್ಲಿ ಹಿಂದೂ ಧರ್ಮವು ಅನೇಕ ರೂಪಗಳಲ್ಲಿ ಅನೇಕ ವಿಧವಾಗಿ ಮುಖ್ಯ ಧರ್ಮವಾದರೂ ಇಂಡಿಯದಲ್ಲಿ ಅನೇಕ ಧರ್ಮಗಳಿದ್ದವು. ಬಹುಮಟ್ಟಿಗೆ ಅಳಿಸಿಹೋಗಿದ್ದ ಜೈನ ಧರ್ಮ, ಬೌದ್ಧ ಧರ್ಮಗಳಲ್ಲದೆ ಕ್ರೈಸ್ತ ಮತ್ತು ಹೀಬ್ರೂ ಧರ್ಮಗಳೂ ಆಚರಣೆಯಲ್ಲಿದ್ದವು. ಪ್ರಾಯಶಃ ಇವೆರಡೂ ಕ್ರಿಸ್ತಶಕೆಯ ಒಂದನೆಯ ಶತಮಾನದಲ್ಲಿ ಇಂಡಿಯಕ್ಕೆ ಬಂದು ನೆಲೆಸಿದ್ದವು. ದಕ್ಷಿಣ ಇಂಡಿಯದಲ್ಲಿ ಸಿರಿಯನ್ ಕ್ರಿಶ್ಚಿಯನರೂ, ನೆಸ್ಟೋರಿಯನರೂ ಇದ್ದರು. ಇತರರಂತೆ ಅವರೂ ದೇಶದ ಅಂಗವಾಗಿದ್ದರು. ಇದರಂತೆ ಯಹೂದಿಗಳಿದ್ದರು. ಇರಾಣದಿಂದ ಏಳನೆಯ ಶತಮಾನದಲ್ಲೇ ಬಂದ ಜೋರಾಷ್ಟ್ರಿಯನರೂ ಇದ್ದರು. ಅದೇ ರೀತಿ ಪಶ್ಚಿಮತೀರ ಮತ್ತು ವಾಯುವ್ಯದಲ್ಲಿ ಅನೇಕ ಮುಸ್ಲಿಮರಿದ್ದರು.

ಮಹಮ್ಮದ್ ದೇಶವನ್ನು ಗೆಲ್ಲಲು ಬಂದನು. ಪಂಜಾಬ್ ಅವನ ರಾಜ್ಯದ ಕೊನೆಯ ಗಡಿಯಾಯಿತು. ಅವನು ಅಲ್ಲಿ ರಾಜ್ಯವನ್ನು ಕಟ್ಟಿದ ಮೇಲೆ ಸ್ವಲ್ಪಮಟ್ಟಿಗಾದರೂ ದೇಶದ ಜನರನ್ನು ಒಲಿಸಿಕೊಳ್ಳಬೇಕೆಂಬ ದೃಷ್ಟಿಯಿಂದ ತನ್ನ ಹಿಂದಿನ ಕ್ರೌರ್ಯವನ್ನು ಸ್ವಲ್ಪ ಸೌಮ್ಯಮಾಡಲು ಯತ್ನ ಮಾಡಿದನು. ಹಿಂದೂಗಳ ಆಚಾರ ವ್ಯವಹಾರದಲ್ಲಿ ಪ್ರವೇಶ ಮಾಡುವುದನ್ನು ಕಡಮೆ ಮಾಡಿದನು. ಸೈನ್ಯದಲ್ಲಿ ಮತ್ತು ಆಡಳಿತ ವರ್ಗದಲ್ಲಿ ಹಿಂದೂಗಳಿಗೆ ಉನ್ನತ ಸ್ಥಾನಗಳನ್ನು ಕೊಟ್ಟನು. ಈ ನೀತಿಯು ಮೊದಲು ಆರಂಭವಾದದ್ದು ಮಹಮ್ಮದನ ಕಾಲದಲ್ಲಿ; ಆದರೆ ಬೆಳೆದದ್ದು ಅನೇಕ ದಿನಗಳ ನಂತರ.

೧೦೩೦ ರಲ್ಲಿ ಮಹಮ್ಮದ್ ಕಾಲವಾದನು. ಅನಂತರ ಒಂದುನೂರ ಅರುವತ್ತು ವರ್ಷಗಳವರೆಗೆ ಭಾರತದ ಮೇಲೆ ಯಾವ ಮುತ್ತಿಗೆಯೂ ಆಗಲಿಲ್ಲ. ಪಂಜಾಬನ್ನು ದಾಟಿ ಯಾವ ತುರ್ಕಿಯ ರಾಜನೂ ಬರಲಿಲ್ಲ. ಷಹಬುದ್ದೀನ ಘೋರಿ ಎಂಬ ಆಫ್ಘನನು ಘಜ್ನಿ ನಗರವನ್ನು ಹಿಡಿದು ಘಜ್ನಿ ಸಂತತಿಯನ್ನು ನಾಶಮಾಡಿದನು. ಲಾಹೋರ್ ನಗರವನ್ನು ಆಕ್ರಮಿಸಿ ದೆಹಲಿಗೆ ಬಂದನು. ಆದರೆ ದೆಹಲಿಯ ದೊರೆಯಾದ ಪೃಥ್ವಿರಾಜ ಚೌಹನನು ಅವನನ್ನು ಸಂಪೂರ್ಣವಾಗಿ ಸೋಲಿಸಿದನು. ಷಹಬುದ್ದೀನ್ ಆಫ್ಘಾನಿಸ್ಥಾನಕ್ಕೆ ಹಿಂದಿರುಗಿ, ಒಂದು ವರ್ಷದ ನಂತರ ಪುನಃ ದಂಡೆತ್ತಿ ಬಂದನು. ಈ ಬಾರಿ ಜಯಶಾಲಿಯಾಗಿ ೧೧೯೨ ರಲ್ಲಿ ದೆಹಲಿ ಸಿಂಹಾಸನವನ್ನು ಏರಿದನು.

ಕಾವ್ಯ ಮತ್ತು ಕಥೆಗಳಲ್ಲಿ, ಎಲ್ಲ ಪ್ರೇಮಸಾಹಸಿಗಳಂತೆ, ಪೃಥ್ವಿರಾಜನೂ ಜನಪ್ರಿಯನಾಗಿದ್ದಾನೆ. ತಾನು ಪ್ರೀತಿಸಿದ್ದ ಮತ್ತು ತನಗೆ ಒಲಿದಿದ್ದ ಕನ್ಯೆಯನ್ನು ವರಿಸಲು ಆಕೆಯ ತಂದೆಯಾದ ಜಯಚಂದ್ರನ ಅರಮನೆಯಿಂದ ಎದುರು ಬಂದ ರಾಜಕುಮಾರರನ್ನೆಲ್ಲ ಧಿಕ್ಕರಿಸಿ ಅವರ ಎದುರಿನಲ್ಲೇ ಎತ್ತಿಕೊಂಡು ಹೋಗಿದ್ದನು. ಸ್ವಲ್ಪ ಕಾಲ ತನ್ನ ಪ್ರೇಯಸಿಯ ಪ್ರೇಮವನ್ನೇನೋ ಅನುಭವಿಸಿದನು. ಆದರೆ ಬಲಿಷ್ಠ ರಾಜನೊಡನೆ ವೈರವನ್ನು ಕಟ್ಟಿಕೊಂಡು ಅಂತಃಕಲಹ ಹುಟ್ಟಿ ಎರಡು ಕಡೆಯೂ ದೆಹಲಿ ಮತ್ತು ಮಧ್ಯ ಇಂಡಿಯದ ವೀರಾಗ್ರಣಿಗಳೆಲ್ಲ ಪರಸ್ಪರ ಕಾದಾಡಿ ಪ್ರಾಣ ಬಿಟ್ಟರು. ಈ ರೀತಿ ಒಬ್ಬ ಹೆಂಗಸಿನ ಪ್ರೇಮಕ್ಕಾಗಿ ಪೃಥ್ವಿರಾಜನು ತನ್ನ ಪ್ರಾಣವನ್ನೂ, ಸಿಂಹಾಸನವನ್ನೂ ಕಳೆದುಕೊಂಡನು. ಭಾರತೀಯ ಸಾಮ್ರಾಜ್ಯಗಳ ರಾಜಧಾನಿಯಾದ ದೆಹಲಿ ನಗರವು ಪರಕೀಯ ದಂಡನಾಯಕನ ಕೈಸೇರಿತು. ಈ ಪ್ರೇಮಕಥೆಯು ಕಾವ್ಯರೂಪದಲ್ಲಿ ಇನ್ನೂ ಕೇಳಬರುತ್ತಿದೆ. ಪೃಥ್ವಿರಾಜನೊಬ್ಬ ವೀರನಾಗಿದ್ದಾನೆ. ಜಯಚಂದ್ರನು ದ್ರೋಹಿಯಾಗಿದ್ದಾನೆ.

ದೆಹಲಿ ಪರಾಧೀನವಾದ್ದರಿಂದ ಭಾರತವೆಲ್ಲ ಪರಾಧೀನವಾಗಲಿಲ್ಲ. ದಕ್ಷಿಣದಲ್ಲಿ ಚೋಳರು ಸ್ವತಂತ್ರರಾಗಿದ್ದರು. ಇನ್ನೂ ಕೆಲವು ಸ್ವತಂತ್ರ ರಾಷ್ಟ್ರಗಳಿದ್ದವು. ಆಫ್ಘನರು ದಕ್ಷಿಣಾಪಥವನ್ನು ಆಕ್ರಮಿಸಲು ಇನ್ನೂ ಒಂದುನೂರುಐವತ್ತು ವರ್ಷಗಳು ಬೇಕಾಯಿತು.

## ೪. ಇಂಡೊ – ಆಫ್ಘನರು : ದಕ್ಷಿಣ ಇಂಡಿಯ : ವಿಜಯನಗರ : ಬಾಬರ್ : ಸಮುದ್ರ ಬಲ

ಇಂಡಿಯದ ಇತಿಹಾಸವನ್ನು ಇಂಗ್ಲಿಷ್ ಮತ್ತು ಕೆಲವು ಭಾರತೀಯ ಚರಿತ್ರಕಾರರು ಸಹ ಪ್ರಾಚೀನ ಅಥವ ಹಿಂದೂ, ಮುಸ್ಲಿಂ, ಮತ್ತು ಬ್ರಿಟಿಷ್ ಕಾಲವೆಂದು ಮೂರು ಭಾಗ ವಿಂಗಡಮಾಡಿದ್ದಾರೆ. ಇದು ಅರ್ಥವತ್ತಾಗಿಯೂ ಇಲ್ಲ. ಸರಿಯೂ ಅಲ್ಲ. ಆದರಿಂದ ಬಹಳ ಮೋಸವಾಗುತ್ತದೆ; ಮತ್ತು ಒಂದು ತಪ್ಪು ಭಾವನೆಯೂ ಹುಟ್ಟುತ್ತದೆ. ಆದರಲ್ಲಿ ಮೇಲಿನ ರಾಜಕೀಯ ಬದಲಾವಣೆಗಳಿಗೆ ಪ್ರಾಶಸ್ತ್ಯ, ಕೊಡಲಾಗಿದೆಯೇ ಹೊರತು, ಭಾರತೀಯರ ರಾಜಕೀಯ, ಆರ್ಥಿಕ ಮತ್ತು ಸಾಂಸ್ಕೃತಿಕ ಬೆಳವಣಿಗೆಯ ಪ್ರಮುಖ ಮಾರ್ಪಾಟುಗಳಿಗೆ ಯಾವ ಗಮನವನ್ನೂ ಕೊಟ್ಟಿಲ್ಲ. ಪ್ರಾಚೀನ ಎನ್ನುವ ಕಾಲವು ಬಹು ದೀರ್ಘವಿದೆ; ಪರಿವರ್ತನೆ, ಬೆಳವಣಿಗೆ, ಕ್ಷೀಣದೆಸೆ, ಪುನಃ ಬೆಳವಣಿಗೆಗಳಿಂದ ತುಂಬಿದೆ. ಮುಸ್ಲಿಂ ಅಥವ ಮಧ್ಯಯುಗದಲ್ಲಿ ಇನ್ನೊಂದು ಬಗೆಯ ಬದಲಾವಣೆಯಾಯಿತು. ಅದು ಬಹು ಮುಖ್ಯವಾದರೂ ಮೇಲಿನ ಉತ್ತಮ ವರ್ಗದ ಜನರಲ್ಲಿ ಆಯಿತೇ ಹೊರತು ಮುಖ್ಯವಾಗಿ ಭಾರತೀಯ ಜೀವನದ ನಿತ್ಯತೆಗೆ ಅಡ್ಡಿ ಬರಲಿಲ್ಲ. ವಾಯವ್ಯದಿಂದ ಇಂಡಿಯಕ್ಕೆ ದಂಡೆತ್ತಿಬಂದ ಮುತ್ತಿಗೆಕಾರರು ಪೂರ್ವದಲ್ಲಿ ಅವರಿಗಿಂತ ಮುಂಚೆ ದಂಡೆತ್ತಿಬಂದವರಂತೆ ಭಾರತದ ಜನಜೀವನದಲ್ಲಿ ಸೇರಿಕೊಂಡು ಐಕ್ಯವಾಗಿಹೋದರು. ಅವರ ವಂಶೀಕರು ಭಾರತೀಯ ವಂಶೀಕರಾದರು. ಪರಸ್ಪರ ವಿವಾಹದಿಂದ ತುಂಬ ವರ್ಣಸಂಕರವೂ ಆಯಿತು. ಅಲ್ಲಲ್ಲಿ ಕೆಲವರನ್ನು ಬಿಟ್ಟರೆ ಜನರ ಜೀವನಪದ್ಧತಿ ಮತ್ತು ಆಚಾರವ್ಯವಹಾರಗಳಿಗೆ ಯಾವ ಅಡ್ಡಿಯೂ ಆಗಲಿಲ್ಲ. ಅವರಿಗೂ ಭಾರತವೇ ಮಾತೃಭೂಮಿಯಾಯಿತು; ಬೇರೆ ಯಾವ ವ್ಯಾಮೋಹವೂ ಇರಲಿಲ್ಲ. ಆದ್ದರಿಂದ ಇಂಡಿಯ ಸ್ವತಂತ್ರವಾಗಿಯೇ ಉಳಿಯಿತು.

ಬ್ರಿಟಿಷರ ಆಗಮನದಿಂದ ಮಾತ್ರ ಬಹು ಮುಖ್ಯ ಬದಲಾವಣೆಗಳಾದವು. ಅನೇಕ ಬಗೆಯಿಂದ ಹಳೆಯ ಜೀವನಪದ್ಧತಿಯು ಬುಡಮೇಲಾಯಿತು. ಇಂಗ್ಲೆಂಡಿನಲ್ಲಾದ ಪುನರುಜ್ಜೀವನ, ಸುಧಾರಣೆ ಮತ್ತು ರಾಜಕೀಯ ಆಂದೋಲನಕಾಲದಿಂದ ಕ್ರಮೇಣ ಯೂರೋಪಿನ ಜನರು ಬಲಗೊಂಡು, ಯಂತ್ರಯುಗದ ಆರಂಭದಿಂದ ರೂಪುಗೊಳ್ಳುತ್ತಿದ್ದ ಒಂದು ಹೊಸ ಪ್ರಚೋದನ ಶಕ್ತಿಯನ್ನು ತಂದರು. ಅಮೆರಿಕನ್ ಮತ್ತು ಫ್ರೆಂಚ್ ಕ್ರಾಂತಿಗಳು ಈ ಶಕ್ತಿಯನ್ನು ಇನ್ನೂ ಪುಷ್ಟಿಗೊಳಿಸಿದವು. ಇಂಡಿಯದಲ್ಲಿ ಬ್ರಿಟಿಷರು ಹೊರಗಿನವರಾಗಿ, ಪರಕೀಯರಾಗಿಯೇ ಉಳಿದು, ದೇಶದೊಂದಿಗೆ ಹೊಂದಿಕೊಳ್ಳದೆ ಬೇರೆ ನಿಂತರು. ಹೊಂದಿಕೊಳ್ಳುವ ಯತ್ನವನ್ನೂ ಮಾಡಲಿಲ್ಲ, ಎಲ್ಲಕ್ಕೂ ಹೆಚ್ಚಾಗಿ ದೇಶದ ರಾಜ

ಕೀಯ ಆಡಳಿತವೂ ಆರ್ಥಿಕ ನೀತಿಯೂ ದೇಶದ ಹೊರಗೆ ಬಹುದೂರದಿಂದ ನಿರ್ಧರವಾಗಲು ಆರಂಭ ವಾದದ್ದು ದೇಶದ ಇತಿಹಾಸದಲ್ಲಿ ಇದೇ ಮೊದಲು. ಭಾರತವು ಆಧುನಿಕ ಕಾಲದ ಒಂದು ಅಧೀನ ರಾಷ್ಟ್ರವಾಯಿತು. ತನ್ನ ದೊಡ್ಡ ಇತಿಹಾಸಪರಂಪರೆಯಲ್ಲಿ ಮೊಟ್ಟಮೊದಲು ಅದು ಪರದಾಸ್ಯಕ್ಕೆ ಸಿಕ್ಕಿತು.

ಇಂಡಿಯ ದೇಶದ ಮೇಲಿನ ಘಜ್ನಿ ಮಹಮ್ಮದನ ದಂಡಯಾತ್ರೆಯು ಪರಕೀಯ ತುರ್ಕಿ ದಂಡ ಯಾತ್ರೆಯು ನಿಜ. ಸ್ವಲ್ಪಕಾಲ ಪಂಜಾಬ್ ಇಂಡಿಯದಿಂದ ಪ್ರತ್ಯೇಕವೂ ಆಯಿತು. ಹನ್ನೆರಡನೆಯ ಶತಮಾನದ ಕೊನೆಯಲ್ಲಿ ಬಂದ ಆಫ್ಘನರ ವಿಷಯವು ಬೇರೆ ಇತ್ತು. ಭಾರತೀಯರಂತೆ ಅವರೂ ಇಂಡೋ-ಆರ್ಯರ ಜನಾಂಗದ ಬುಡಕಟ್ಟಿಗೆ ಸೇರಿದವರು. ನಿಜವಾಗಿ ನೋಡಿದರೆ ಆಫ್ಘಾನಿಸ್ಥಾನ ಇಂಡಿಯದೇಶದ ಒಂದು ಭಾಗವಾಗಿತ್ತು. ಅವರ ಭಾಷೆಯಾದ ಪಷ್ಟೋ ಸಂಸ್ಕೃತ ಮೂಲದಿಂದ ಜನಿಸಿದ್ದು. ಭಾರತೀಯ ಸಂಸ್ಕೃತಿಯ ಸ್ಮಾರಕಗಳು ಮತ್ತು ಅವಶೇಷಗಳು—ಅದರಲ್ಲೂ ಮುಖ್ಯ ವಾಗಿ ಬೌದ್ಧಕಾಲದವು—ಆಫ್ಘಾನಿಸ್ಥಾನದಲ್ಲಿರುವಷ್ಟು ಇಂಡಿಯದಲ್ಲಾಗಲಿ ಇಂಡಿಯದ ಹೊರಗೆ ಆಗಲಿ ಬೇರೆಲ್ಲಿಯೂ ಇಲ್ಲ. ಅಫ್ಘನರನ್ನು ಇಂಡೋ—ಅಫ್ಘನರೆಂದು ಕರೆಯಬೇಕಾದ್ದೇ ಸಹಜ. ಕಾಶ್ಮೀರದ ಪರ್ವತಕಣಿವೆಗಳ ಜನರು ಉಷ್ಣ ಪ್ರದೇಶದ ಮೈದಾನಗಳ ಜನರಿಗಿಂತ ಭಿನ್ನರಿರುವಂತೆ ಆಫ್ಘನರಿಗೂ ಇಂಡಿಯದ ಮೈದಾನ ಪ್ರದೇಶದ ಜನರಿಗೂ ಭಿನ್ನತೆ ಇದೆ. ಈ ವ್ಯತ್ಯಾಸವಿದ್ದರೂ ಭಾರತೀಯ ವಿದ್ವತ್ತು ಮತ್ತು ಸಂಸ್ಕೃತಿಗೆ ಕಾಶ್ಮೀರವು ಒಂದು ಮುಖ್ಯ ಕೇಂದ್ರವಾಗಿದೆ. ತುಂಬ ಸುಸಂಸ್ಕೃತರೂ, ಕೃತಕ ಆಡಂಬರದ ಜೀವಿಗಳೂ ಆದ ಅರಬ್ಬಿ ಮತ್ತು ಪಾರಸಿ ಜನರಿಗೂ ಆಫ್ಘನ ರಿಗೂ ಸಹ ವ್ಯತ್ಯಾಸವಿತ್ತು. ತಮ್ಮ ಪರ್ವತವೇಗದಂತೆ ಕಠಿಣರೂ ಕ್ರೂರಿಗಳೂ ಇದ್ದರು. ಅಚಲ ಧರ್ಮಶ್ರದ್ಧೆಯು ಇತ್ತು, ಬೌದ್ಧಿಕ ಪ್ರಯತ್ನದಲ್ಲಿ, ಮಾನಸಿಕ ಸಾಹಸಗಳಲ್ಲಿ ಆಸಕ್ತಿ ಇಲ್ಲದ ಯೋಧರಾ ಗಿದ್ದರು. ದಂಗೆ ಎದ್ದ ಜನರನ್ನು ಹತ್ತಿಕ್ಕುವದರಲ್ಲಿ ವಿಜಯೋನ್ಮತ್ತರಂತೆ ಆರಂಭದಲ್ಲಿ ಕ್ರೂರಿಗಳೂ ಕಠಿಣಹೃದಯರೂ ಆಗಿದ್ದರು.

ಆದರೆ ಸ್ವಲ್ಪಕಾಲದಲ್ಲಿ ಅವರೂ ಸೌಮ್ಯಸ್ವಭಾವ ತಾಳಿದರು. ಇಂಡಿಯ ಅವರ ನೆಲೆವೀಡಾ ಯಿತು. ಮಹಮ್ಮದನ ಕಾಲದ ದೂರದ ಘಜ್ನಿಯ ಬದಲು ದೆಹಲಿ ಅವರ ರಾಜಧಾನಿಯಾಯಿತು. ಅವರ ಪೂರ್ವದ ನಾಡಾದ ಆಫ್ಘಾನಿಸ್ಥಾನವು ಅವರ ರಾಜ್ಯದ ಎಲ್ಲೆಯಲ್ಲಿಯೇ ಇತ್ತು. ಅವರೂ ಬಹು ಬೇಗ ಭಾರತೀಯರಾಗಿ ಇಲ್ಲಿಯೇ ಅನೇಕರನ್ನು ಮದುವೆಯಾದರು ಅವರಲ್ಲಿ ಪ್ರಸಿದ್ಧ ರಾಜನಾದ ಅಲ್ಲಾಉದ್ದೀನ್ ಖಿಲ್ಜಿ ಒಬ್ಬ ಹಿಂದುಮಹಿಳೆಯನ್ನು ಮದುವೆಯಾದನು. ಆತನ ಮಗನೂ ಅದೇ ರೀತಿ ಮಾಡಿದನು. ಅನಂತರ ಕೆಲವು ಅರಸರು ಕುತುಬುದಿನ್ ಐಬಕ್, ರಜಿಯಾ ಬೇಗಂ ಮತ್ತು ಅಲ್ತಮಿಷ್ ತುರ್ಕಿಯವರಾಗಿದ್ದರು. ಆದರೆ ಅಧಿಕಾರಿಗಳು, ಸೈನಿಕರು, ಎಲ್ಲರೂ ಮುಖ್ಯವಾಗಿ ಅಫ್ಘನರೇ ಇದ್ದರು. ದೆಹಲಿನಗರವು ಸಾಮ್ರಾಜ್ಯದ ರಾಜಧಾನಿಯಾಗಿ ಅಭಿವೃದ್ಧಿಗೆ ಬಂದಿತು. ಮೊರಾಕೊದಿಂದ ಹೊರಟು ಕೈರೊ, ಕಾನ್‌ಸ್ಟಾಂಟಿನೋಪಲ್, ಚೀನಾವರೆಗೆ ಪ್ರವಾಸಮಾಡಿ ಅನೇಕ ಮಹಾನಗರಗಳನ್ನು ನೋಡಿದ ಇಬನ್ ಬಟೂಟ ಹದಿನಾಲ್ಕನೆಯ ಶತಮಾನದಲ್ಲಿ ದೆಹಲಿಯನ್ನು ವರ್ಣಿಸುತ್ತ " ಪ್ರಪಂಚದ ಮಹಾನಗರಗಳಲ್ಲಿ ಒಂದು " ಎಂದು ಉತ್ಪ್ರೇಕ್ಷೆಮಾಡಿದ್ದಾನೆ.

ದೆಹಲಿಯ ಸುಲ್ತಾನರು ದಕ್ಷಿಣದಕಡೆ ವಿಸ್ತರಿಸಿದರು. ಚೋಳರಾಜ್ಯವು ಹೀನಸ್ಥಿತಿಗೆ ಬಂದಿತ್ತು. ಅದರ ಸ್ಥಾನದಲ್ಲಿ ವಿಶೇಷ ಸಮುದ್ರಬಲವುಳ್ಳ ಪಾಂಡ್ಯರು ಮಧುರೆಯನ್ನು ತಮ್ಮ ರಾಜಧಾನಿಯ ನ್ನಾಗಿ ಮಾಡಿಕೊಂಡು ಪೂರ್ವತೀರದ ಕಾಯಾಲದಲ್ಲಿ ದೊಡ್ಡ ಬಂದರನ್ನು ಕಟ್ಟಿಕೊಂಡು ಉನ್ನತ ಸ್ಥಿತಿಯಲ್ಲಿದ್ದರು. ರಾಜ್ಯ ಸಣ್ಣದಾದರೂ ದೊಡ್ಡ ವ್ಯಾಪಾರಕೇಂದ್ರವಾಗಿತ್ತು. ಮಾರ್ಕೊಪೋಲೊ ಚೀನಾದಿಂದ ಹಿಂದಿರುಗುವಾಗ ಎರಡುಬಾರಿ ೧೨೮೮ರಲ್ಲಿ ಮತ್ತು ೧೨೯೩ರಲ್ಲಿ ಭೇಟಿಕೊಟ್ಟು " ಮಹಾ ಗಂಭೀರನಗರ" ಎಂದೂ, ಅರೇಬಿಯಾ, ಚೀನಾ ದೇಶಗಳ ಅನೇಕ ಹಡಗುಗಳಿಂದ ಬಂದರು ತುಂಬಿರು ತ್ತೆಂದೂ ವರ್ಣಿಸಿದ್ದಾನೆ. ಪೂರ್ವತೀರದಲ್ಲಿ ತಯಾರುಮಾಡುತ್ತಿದ್ದ ನಯವಾದ ಹತ್ತಿಯ ಬಟ್ಟೆಯು

ಜೇಡನ ಪೊರೆಯಂತೆ ಇರುತ್ತಿದ್ದಿತೆಂದೂ ಬಣ್ಣಿಸಿದ್ದಾನೆ. ಮಾರ್ಕೊಪೋಲೊ ಇನ್ನೂ ಒಂದು ಆಶ್ಚರ್ಯದ ವಿಷಯವನ್ನು ತಿಳಿಸುತ್ತಾನೆ. ಅರೇಬಿಯಾ ಮತ್ತು ಪರ್ಷಿಯದಿಂದ ದಕ್ಷಿಣ ಭಾರತಕ್ಕೆ ಕುದುರೆಗಳನ್ನು ವಿಶೇಷ ಸಂಖ್ಯೆಯಲ್ಲಿ ಆಮದು ಮಾಡುತ್ತಿದ್ದರು. ದಕ್ಷಿಣ ಇಂಡಿಯದ ಹವಾಮಾನವು ಕುದುರೆ ಸಾಕಲು ಉತ್ತಮವಿರಲಿಲ್ಲ. ಕುದುರೆಗಳ ಉಪಯೋಗ ಸೈನ್ಯದಲ್ಲಿ ಹೆಚ್ಚಾಗಿ ಇತ್ತು. ಕುದುರೆ ಸಾಕುವ ಉತ್ತಮಕೇಂದ್ರಗಳು ಮಧ್ಯ ಮತ್ತು ಪಶ್ಚಿಮ ಏಷ್ಯದಲ್ಲಿದ್ದವು. ಪ್ರಾಯಶಃ ಮಧ್ಯ ಏಷ್ಯ ಜನಾಂಗಗಳ ಉತ್ತಮ ಯುದ್ಧ ನೈಪುಣ್ಯತೆಗೆ ಇದೂ ಕಾರಣವಿರಬಹುದು. ಚೆಂಗಿಸ್ ಖಾನನ ಮೊಗಲರು ಉತ್ತಮ ಅಶ್ವಾರೋಹಿಗಳಾಗಿದ್ದರು. ಕುದುರೆಗಳೆಂದರೆ ಅವರಿಗೆ ಪ್ರಾಣ. ತುರ್ಕಿಯವರೂ ಒಳ್ಳೆಯ ಕುದುರೆಸವಾರರು. ಅರಬ್ಬಿ ಜನರ ಕುದುರೆಗಳ ಮಮತೆಯು ಲೋಕವಿಖ್ಯಾತವಿದೆ. ದಕ್ಷಿಣ ಮತ್ತು ಪಶ್ಚಿಮ ಭಾರತದಲ್ಲಿ, ಮುಖ್ಯವಾಗಿ ಕಾಥೇವಾಡದಲ್ಲಿ, ಕೆಲವು ಒಳ್ಳೆಯ ಕುದುರೆಸಾಕುವ ಸ್ಥಾನಗಳಿವೆ. ರಜಪೂತರಿಗೆ ತಮ್ಮ ಕುದುರೆಗಳೆಂದರೆ ಜೀವ. ಒಳ್ಳೆಯ ಕುದುರೆಗಾಗಿಯೇ ಅನೇಕ ಸಣ್ಣ ಯುದ್ಧಗಳಾಗಿವೆ. ದೆಹಲಿ ಸುಲ್ತಾನನೊಬ್ಬ ರಜಪೂತ ಸೇನಾನಿಯೊಬ್ಬನ ಕುದುರೆಯನ್ನು ನೋಡಿ ಮೆಚ್ಚಿ ಕುದುರೆಯನ್ನು ಕೇಳಿದನಂತೆ. ಆದರಾ ಸೇನಾನಿಯು ಲೂದಿರಾಜನಿಗೆ "ರಜಪೂತನಿಂದ ಮೂರುವಸ್ತುಗಳನ್ನು ನೀನು ಕೇಳಬಾರದು: ಅವನ ಕುದುರೆ, ಅವನ ಹೆಂಡತಿ ಮತ್ತು ಅವನ ಕತ್ತಿ." ಎಂದು ಹೇಳಿ ಕುದುರೆಯನ್ನು ಓಡಿಸಿಕೊಂಡುಹೋದನಂತೆ. ಆ ಮೇಲೆ ಒಂದು ಯುದ್ಧವೇ ಆಯಿತು.

ಹದಿನಾಲ್ಕನೆಯ ಶತಮಾನದ ಕೊನೆಯಲ್ಲಿ ತುರ್ಕಿಯ ಅಥವ ತುರ್ಕಿ ಮಂಗೋಲರ ತೈಮೂರನು ಉತ್ತರದಿಂದ ದಂಡೆತ್ತಿ ಬಂದು ದೆಹಲಿಯ ಸುಲ್ತಾನರನ್ನು ಸದೆಬಡಿದನು. ಆತನು ಇಂಡಿಯದಲ್ಲಿ ಕೆಲವು ತಿಂಗಳು ಮಾತ್ರ ಇದ್ದನು. ದೆಹಲಿಗೆ ಬಂದವನೇ ಹಿಂದಿರುಗಿದನು. ಆದರೆ ತನ್ನ ದಾರಿಯುದ್ದಕ್ಕೂ ಕೊಂದ ಜನರ ತಲೆಬುರುಡೆಗಳ ರಾಶಿಯನ್ನು ಒಟ್ಟಿ ಭಯೋತ್ಪಾದನೆ ಮಾಡಿದನು. ದೆಹಲಿನಗರವೇ ಒಂದು ಶ್ಮಶಾನವಾಯಿತು. ಅದೃಷ್ಟವಶಾತ್ ಅವನು ಮುಂದುವರಿಯಲಿಲ್ಲ. ಪಂಜಾಬಿನ ಕೆಲವು ಭಾಗವೂ ದೆಹಲಿಯ ಅವನ ಈ ಕ್ರೂರಧಾಳಿಗೆ ಸಿಕ್ಕಿದವು.

ಈ ಶ್ಮಶಾನ ನಿದ್ರೆಯಿಂದ ಎಚ್ಚರಗೊಳ್ಳಲು ದೆಹಲಿಗೆ ಬಹಳ ಕಾಲ ಬೇಕಾಯಿತು. ಎಚ್ಚತ್ತಾಗಲೂ ಸಾಮ್ರಾಜ್ಯದ ರಾಜಧಾನಿಯಾಗಿ ಉಳಿಯಲಿಲ್ಲ. ತೈಮೂರನ ದಂಡಯಾತ್ರೆಯಿಂದ ಆ ಸಾಮ್ರಾಜ್ಯವು ಪುಡಿಪುಡಿಯಾಗಿತ್ತು; ದಕ್ಷಿಣದಲ್ಲಿ ಕೆಲವು ಸ್ವತಂತ್ರ ರಾಜ್ಯಗಳಿದ್ದವು. ಇದಕ್ಕೂ ಮುಂಚೆಯೇ ಹದಿನಾಲ್ಕನೆಯ ಶತಮಾನದ ಆದಿಯಲ್ಲಿ ಎರಡು ದೊಡ್ಡ ರಾಜ್ಯಗಳು ಹುಟ್ಟಿದ್ದವು. ಗುಲ್ಬರ್ಗದ ಬಹಮನಿ ರಾಜ್ಯ, ವಿಜಯನಗರದ ಹಿಂದೂ ರಾಜ್ಯ. ಗುಲ್ಬರ್ಗ ಪುನಃ ಐದುರಾಜ್ಯಗಳಾಗಿ ಒಡೆಯಿತು. ಅಹಮದ್‌ನಗರ ಅದರಲ್ಲಿ ಒಂದು. ೧೪೯೦ರಲ್ಲಿ ಅಹಮದ್‌ನಗರ ರಾಜ್ಯವನ್ನು ಕಟ್ಟಿದ ಅಹಮ್ಮದ್ ನಿಜಾಮ ಷಾ ಬಹಮನಿದೊರೆಗಳ ಮಂತ್ರಿಗಳಲ್ಲೊಬ್ಬನಾದ ನಿಜಾಮ್ ಉಲ್‌ಮುಲ್ಕ್ ಭೈರಿಯ ಮಗ. ಈ ರೀತಿ ಅಹಮ್ಮದ್‌ನಗರ ಸಂತತಿಯು ದೇಶೀಯ ಸಂತತಿ. ಅಹಮ್ಮದ್‌ನಗರದ ನಾಯಕಿಯಾದ ಚಾಂದ್‌ಬೀಬಿಯು ಮಿಶ್ರ ರಕ್ತದವಳು. ದಕ್ಷಿಣದ ಎಲ್ಲ ಮುಸ್ಲಿಂ ರಾಜ್ಯಗಳೂ ದೇಶೀ ರಾಜ್ಯಗಳು, ಭಾರತೀಯ ರಾಜ್ಯಗಳು.

ತೈಮೂರನು ದೆಹಲಿಯನ್ನು ಲೂಟಿಮಾಡಿದಮೇಲೆ ಉತ್ತರ ಹಿಂದೂಸ್ಥಾನವು ಬಲಹೀನವಾಗಿ ಒಡೆದು ಹೋಗಿತ್ತು. ದಕ್ಷಿಣ ಇಂಡಿಯ ಸ್ವಲ್ಪ ಶಕ್ತಿಯುತವಿತ್ತು. ಇವುಗಳಲ್ಲೆಲ್ಲ ಬಲಿಷ್ಠವಾದುದು ವಿಜಯನಗರ ಸಾಮ್ರಾಜ್ಯ. ಈ ರಾಜ್ಯಕ್ಕೆ ಮತ್ತು ಅದರ ರಾಜಧಾನಿಗೆ ಉತ್ತರದಿಂದ ಅನೇಕ ಹಿಂದೂ ನಿರಾಶ್ರಿತರು ಬಂದರು. ಆಗ ಬರೆದ ಗ್ರಂಥಗಳಿಂದ ಆ ನಗರವು ಬಹಳ ಸಂಪದ್ಯುಕ್ತವೂ ಸುಂದರವೂ ಇತ್ತೆಂದು ತಿಳಿಯುತ್ತದೆ. "ಪ್ರಪಂಚದಲ್ಲೆಲ್ಲ ಇದರಂತೆ ಇನ್ನೊಂದು ನಗರವನ್ನು ಕೇಳಲೂ ಸಾಧ್ಯವಿಲ್ಲ ನೋಡಲೂ ಸಾಧ್ಯವಿಲ್ಲ." ಎಂದು ಮಧ್ಯ ಏಷ್ಯದ ಅಬ್ದುಲ್‌ರಜಾಕ್ ಹೇಳುತ್ತಾನೆ. ಪೇಟೆಗಳಿಗಾಗಿ ಸುಂದರವಾದ ಮಂಟಪಗಳೂ, ಅಂಗಡಿಸಾಲುಗಳೂ ಇದ್ದವು. ಅವುಗಳೆಲ್ಲಕ್ಕೂ ಎತ್ತರದಲ್ಲಿ ರಾಜನ ಅರಮನೆಯು ಇತ್ತು. "ಅರಮನೆಯ ಸುತ್ತಲೂ ಕಡೆದಕಲ್ಲಿನಿಂದ ಥಳಥಳಿಸುವ ಅನೇಕ ನಾಲೆಗಳಲ್ಲಿ

ಹರಿಯುವ ನೀರಿನ ಕಾಲುವೆಗಳೂ ನದಿಗಳೂ ಇದ್ದವು." ನಗರದ ತುಂಬ ಉದ್ಯಾನವನಗಳಿದ್ದವು. ೧೪೨೦ರಲ್ಲಿ ಬಂದ ಇಟಲಿ ಪ್ರವಾಸಿಕನಾದ ನಿಕೊಲೊಕಾಂಟಿಯು ನಗರದ ಸುತ್ತಳತೆ ಅರುವತ್ತು ಮೈಲಿಗಳಿತ್ತು ಎಂದಿದ್ದಾನೆ. ಅವನಿಗೂ ನಂತರ ೧೫೨೨ರಲ್ಲಿ ಪುನರುಜ್ಜೀವಿತ ಇಟಲಿಯ ಅನೇಕ ನಗರಗಳನ್ನು ನೋಡಿದ್ದ ಪೈಸ್ ಎಂಬ ಪೋರ್ಚುಗೀಸ್ ಪ್ರವಾಸಿಕನು ವಿಜಯನಗರವನ್ನು ನೋಡಿ ರೋಮ್ ನಗರದಷ್ಟು ದೊಡ್ಡದಿದೆ, ನೋಡಲು ಬಹಳ ರಮಣೀಯವಿದೆ. ಅಸಂಖ್ಯಾತ ಸರೋವರಗಳು, ನಾಲೆಗಳು ಮತ್ತು ಹಣ್ಣಿನ ತೋಟಗಳಿಂದ ನಯನಮನೋಹರವೂ ವಿಸ್ಮಯಕಾರಕವೂ ಇದೆ. ಪ್ರಪಂಚದ ಯಾವ ನಗರದಲ್ಲೂ ಇಲ್ಲದ ಉತ್ತಮ ವಸ್ತುಸಾಮಗ್ರಿ ಇದೆ. ಎಲ್ಲದರಲ್ಲೂ ಸಮೃದ್ಧಿ ಇದೆ. ಅರಮನೆಯ ಕೋಣೆಗಳನ್ನು ದಂತದಿಂದ ಕೆತ್ತಲಾಗಿದೆ. ಮೇಲೆ ದಂತದಲ್ಲಿಯೇ ಗುಲಾಬಿ ಮತ್ತು ಕಮಲದ ಹೂಗಳನ್ನು ಬಿಡಿಸಿದ್ದಾರೆ. ಇಷ್ಟು ಐಶ್ವರ್ಯವನ್ನೂ, ಸೌಂದರ್ಯವನ್ನೂ ಬೇರೆ ಎಲ್ಲೂ ಕಾಣಲು ಸಾಧ್ಯವಿಲ್ಲ. ರಾಜನಾದ ಕೃಷ್ಣದೇವರಾಯನ ವಿಷಯವಾಗಿ "ಎಲ್ಲರೂ ಭಯಭಕ್ತಿಯಿಂದ ಆತನನ್ನು ಗೌರವಿಸುತ್ತಾರೆ. ಆದರ್ಶ ರಾಜನಾಗಿದ್ದಾನೆ. ಸದಾ ಹಸನ್ಮುಖಿಯೂ, ಸಂತೋಷಭರಿತನೂ ಆಗಿದ್ದಾನೆ. ವಿದೇಶೀಯರನ್ನು ಕಂಡರೆ ಗೌರವಿಸುತ್ತಾನೆ. ದಯೆಯಿಂದ ಕಂಡು ಅವರು ಹೇಳುವುದನ್ನು ಸಾವಧಾನವಾಗಿ ಕೇಳುತ್ತಾನೆ" ಎಂದು ಬಣ್ಣಿಸಿದ್ದಾನೆ.

ದಕ್ಷಿಣದಲ್ಲಿ ವಿಜಯನಗರ ಸಾಮ್ರಾಜ್ಯವು ಉನ್ನತಸ್ಥಿತಿಯಲ್ಲಿದ್ದಾಗ ದೆಹಲಿಯ ಸುಲ್ತಾನನು ಇನ್ನೊಬ್ಬ ಹೊಸ ಶತ್ರುವನ್ನು ಎದುರಿಸಬೇಕಾಯಿತು. ಉತ್ತರದ ಪರ್ವತಗಳಿಂದ ಇನ್ನೊಬ್ಬ ದಂಡಯಾತ್ರಿಕನು ಬಂದು ದೆಹಲಿಯ ಬಳಿ ಅನೇಕಸಲ ಭಾರತದ ಅದೃಷ್ಟವನ್ನು ನಿಶ್ಚಯಿಸಿದ ಪಾಣಿಪತ್ತ ಯುದ್ಧರಂಗದಲ್ಲಿ ಯುದ್ಧಮಾಡಿ ಗೆದ್ದು ೧೫೨೬ರಲ್ಲಿ ದೆಹಲಿಯ ಸಿಂಹಾಸನವನ್ನು ಏರಿದನು. ತುರ್ಕೋಮಂಗೋಲನೂ, ಮಧ್ಯ ಏಷ್ಯದ ತೈಮೂರ್ ವಂಶಜನಾದ ರಾಜಕುಮಾರನೂ ಆದ ಬಾಬರನೇ ಇವನು. ಭಾರತದಲ್ಲಿ ಮೊಗಲ್ ಸಾಮ್ರಾಜ್ಯವು ಇವನಿಂದಲೇ ಆರಂಭವಾಯಿತು.

ಬಾಬರನ ವಿಜಯಕ್ಕೆ ಕಾರಣ ದೆಹಲಿಯ ಸುಲ್ತಾನರ ದೌರ್ಬಲ್ಯಮಾತ್ರವಲ್ಲ; ಅದುವರೆಗೂ ಇಂಡಿಯದಲ್ಲಿ ಬಳಕೆಯಲ್ಲಿಲ್ಲದ ಒಂದು ಹೊಸ ಉತ್ತಮ ರೀತಿಯ ಬಂದೂಕುಪಡೆಯು ಮುಖ್ಯ ಕಾರಣ. ಈ ಕಾಲದಿಂದ ಯುದ್ಧವಿಜ್ಞಾನದ ಬೆಳೆವಣಿಗೆಯಲ್ಲಿ ಇಂಡಿಯ ಹಿಂದೆ ಬೀಳಲಾರಂಭಿಸಿತು. ಈ ವಿಜ್ಞಾನದಲ್ಲಿ ಇಡಿ ಯೂರೋಪುಖಂಡವೇ ಮುಂದುವರಿಯುತ್ತಿರುವಾಗ, ಏಷ್ಯ ಖಂಡವು ಸಂಪೂರ್ಣ ಹಿಂದುಳಿಯಿತು. ಮೊಗಲ್ ಚಕ್ರಾಧಿಪತ್ಯವು ಇಂಡಿಯದಲ್ಲಿ ಎರಡುನೂರು ವರ್ಷಗಳ ಕಾಲ ಬಲಯುತವಾಗಿದ್ದರೂ ಹದಿನೇಳನೆಯ ಶತಮಾನದ ನಂತರ ಯೂರೋಪಿಯನ್ ಸೈನ್ಯಗಳೊಡನೆ ಸರಿಸಮನಾಗಿ ನಿಂತು ಕಾದಾಡುವಷ್ಟು ಶಕ್ತಿಯುತವಿರಲಿಲ್ಲ. ಆದರೆ ಸಮುದ್ರಮಾರ್ಗಗಳ ಸ್ವಾಮ್ಯವಿಲ್ಲದೆ ಯಾವ ಯೂರೋಪಿಯನ್ ಸೈನ್ಯವೂ ಇಂಡಿಯಾಕ್ಕೆ ಬರುವಂತಿರಲಿಲ್ಲ. ಈ ಶತಮಾನಗಳಲ್ಲಿ ಅಭಿವೃದ್ಧಿ ಹೊಂದುತ್ತಿದ್ದ ಮುಖ್ಯ ಶಕ್ತಿ ಎಂದರೆ ಯೂರೋಪಿಯನರ ಸಮುದ್ರಬಲ. ಹದಿಮೂರನೆಯ ಶತಮಾನದಲ್ಲಿ ಚೋಳರಾಜ್ಯವು ನಾಶವಾದೊಡನೆ ಇಂಡಿಯದ ಸಮುದ್ರಶಕ್ತಿಯೂ ಕುಂದಿತು. ಚಿಕ್ಕದಾದ ಪಾಂಡ್ಯರಾಜ್ಯಕ್ಕೆ ಸಮುದ್ರಬಲವಿದ್ದರೂ ಸಾಕಷ್ಟು ಶಕ್ತಿ ಇರಲಿಲ್ಲ. ಭಾರತೀಯ ವಲಸೆ ರಾಜ್ಯಗಳು ಮಾತ್ರ ಹದಿನೈದನೆಯ ಶತಮಾನದಲ್ಲಿ ಅರಬ್ಬಿ ಜನರು ಬಂದು ಸೋಲಿಸುವವರೆಗೂ ಬಲಿಷ್ಠವಾಗಿದ್ದವು. ಅರಬ್ಬಿಗಳ ಹಿಂದೆಯೇ ಪೋರ್ಚುಗೀಸರು ಬಂದರು.

### ೫. ಸಂಯೋಜನೆ ಮತ್ತು ಮಿಶ್ರ ಸಂಸ್ಕೃತಿಯ ಬೆಳೆವಣಿಗೆ: ಪರ್ದಾ: ಕಬೀರ್: ಗುರು ನಾನಕ್: ಅಮೀರ್ ಖುಸ್ರೊ

ಬ್ರಿಟಿಷರು ಇಂಡಿಯಕ್ಕೆ ಬಂದುದನ್ನು ಕ್ರೈಸ್ತರ ಮುತ್ತಿಗೆ ಎಂದೂ, ಬ್ರಿಟಿಷರ ಕಾಲವನ್ನು ಕ್ರೈಸ್ತರ ಕಾಲ ಎಂದೂ ಕರೆದರೆ ಎಷ್ಟು ಅಸಮಂಜಸವೊ ಅದೇ ರೀತಿ ಭಾರತದ ಮುಸ್ಲಿಂರ ದಂಡಯಾತ್ರೆಯನ್ನು ಮುಸ್ಲಿಮರ ಕಾಲ ಎನ್ನುವುದೂ ಅಷ್ಟೇ ತಪ್ಪು ಮತ್ತು ಅಸಮಂಜಸ. ಇಸ್ಲಾಂ ಧರ್ಮವು

ಇಂಡಿಯಕ್ಕೆ ಎಂದೂ ಮುತ್ತಿಗೆ ಹಾಕಲಿಲ್ಲ. ಇಂಡಿಯಕ್ಕೆ ಅನೇಕ ಶತಮಾನಗಳ ಹಿಂದೆಯೇ ಬಂದಿತ್ತು. ತುರ್ಕಿಯ ಮಹಮ್ಮದನ ಮುತ್ತಿಗೆಯಾಯಿತು, ಅಫ್ಘನರ ಮುತ್ತಿಗೆಯಾಯಿತು; ಆಮೇಲೆ ತುರ್ಕಿ ಮಂಗೋಲ್ ಅಥವ ಮೊಗಲರ ಮುತ್ತಿಗೆಯಾಯಿತು. ಇವುಗಳಲ್ಲಿ ಕೊನೆಯ ಎರಡೇ ಮುಖ್ಯ ವಾದವು. ಆಫ್ಘನರು ಇಂಡಿಯದ ನೆರೆ ನಾಡಿನವರು, ಪರಿಚಿತರು. ಅವರ ರಾಜಕೀಯ ಉನ್ನತಿಯ ಕಾಲವನ್ನು ಇಂಡೊ-ಆಫ್ಘನ್ ಕಾಲ ಎಂದು ಕರೆಯಬೇಕು. ಮೊಗಲರು ಹೊರಗಿನವರು ಮತ್ತು ಇಂಡಿಯಕ್ಕೆ ಅಪರಿಚಿತರು. ಆದರೂ ಬಹಳ ಜಾಗ್ರತೆಯಾಗಿ ಭಾರತೀಯ ರಚನೆಯ ಚೌಕಟ್ಟಿನಲ್ಲಿ ಹೊಂದಿಕೊಂಡರು. ಇಂಡೊ-ಮೊಗಲ್ ಕಾಲ ಆರಂಭವಾಯಿತು.

ಇಚ್ಛೆಪಟ್ಟೋ, ಆಕಸ್ಮಿಕವಾಗಿಯೊ ಅಥವ ಎರಡೂ ಕಾರಣದಿಂದಲೊ ಆಫ್ಘನ್ ರಾಜರೂ ಅವರ ಜೊತೆಗೆ ಬಂದವರೂ ಇಂಡಿಯದಲ್ಲಿ ಬೆರೆತುಹೋದರು. ಅವರ ಸಂತತಿಯವರು ಪೂರ್ಣ ಭಾರತೀಯರಾಗಿ ಇಲ್ಲಿ ನೆಲೆಸಿ ಭಾರತವನ್ನು ತಮ್ಮ ತಾಯ್ನಾಡಾಗಿ ಮಾಡಿಕೊಂಡರು; ಮತ್ತು ಉಳಿದ ಪ್ರಪಂಚವೆಲ್ಲ ಅವರಿಗೆ ಪರದೇಶವಾಯಿತು. ರಾಜಕೀಯ ಘರ್ಷಣೆಗಳಿದ್ದರೂ ಅವರನ್ನು ಭಾರತೀಯರೆಂದೇ ಪರಿಗಣಿಸಲಾಗುತ್ತಿತ್ತು. ಅನೇಕ ರಾಜಪುತ್ರ ರಾಜರು ಸಹ ಅವರ ಸ್ವಾಮ್ಯವನ್ನು ಒಪ್ಪಿಕೊಂಡರು. ಇನ್ನು ಕೆಲವು ರಾಜಪುತ್ರ ರಾಜರು ಅವರ ಅಧೀನರಾಗಲು ಒಪ್ಪಲಿಲ್ಲ. ಘೋರ ಯುದ್ಧಗಳು ಆದವು. ದೆಹಲಿಯ ಸುಲ್ತಾನರಲ್ಲಿ ಪ್ರಸಿದ್ಧನಾದ ಫಿರೋಜ್‌ಷಹಾನ ತಾಯಿಯೂ ಘಿಯಾಸುದ್ದೀನನ ತಾಯಿಯೂ ಹಿಂದುಗಳಾಗಿದ್ದರು. ಈ ರೀತಿ ಆಫ್ಘನ್, ತುರ್ಕಿ ಮತ್ತು ಹಿಂದೂ ಶ್ರೀಮಂತರಲ್ಲಿ ವಿವಾಹಗಳು ಸಾಮಾನ್ಯವಲ್ಲದಿದ್ದರೂ, ನಡೆಯುತ್ತಿದ್ದವು. ದಕ್ಷಿಣದಲ್ಲಿ ಗುಲ್ಬರ್ಗದ ಮುಸ್ಲಿಂ ರಾಜ ವಿಜಯನಗರದ ಹಿಂದೂ ರಾಜಕುಮಾರಿಯನ್ನು ಬಹಳ ವೈಭವದಿಂದ ಮದುವೆಯಾದನು.

ಮಧ್ಯ ಮತ್ತು ಪೂರ್ವ ಏಷ್ಯಾದ ಮುಸ್ಲಿಂ ರಾಜ್ಯಗಳಲ್ಲಿ ಭಾರತೀಯರಿಗೆ ಒಳ್ಳೆಯ ಮರ್ಯಾದೆ ಇತ್ತು. ಆಫ್ಘನರ ವಿಜಯಯಾತ್ರೆಗೂ ಮುಂಚೆ ಹನ್ನೊಂದನೆಯ ಶತಮಾನದಲ್ಲಿ ಮುಸ್ಲಿಂ ಭೂಗೋಳ ಶಾಸ್ತ್ರಜ್ಞನಾದ ಇದ್ರೀಸಿಯು "ಭಾರತೀಯರು ಸ್ವಭಾವತಃ ನ್ಯಾಯಪರರು, ಎಂದಿಗೂ ನ್ಯಾಯ ವಿರುದ್ಧ ಆಚರಿಸುವುದಿಲ್ಲ. ಅವರ ಒಳ್ಳೆಯ ಭರವಸೆ, ಪ್ರಾಮಾಣಿಕತೆ, ಕೊಟ್ಟ ಮಾತಿನಂತೆ ನಡೆಯುವ ಗುಣಗಳು ಜಗತ್ಪ್ರಸಿದ್ಧ. ಈ ಗುಣಗಳಲ್ಲಿ ಎಷ್ಟು ವಿಖ್ಯಾತರೆಂದರೆ ಪ್ರಪಂಚದ ಎಲ್ಲ ಕಡೆಯಿಂದ ಜನರು ಅವರ ದೇಶಕ್ಕೆ ಹೋಗುತ್ತಾರೆ" ಎಂದು ಬರೆದಿದ್ದಾನೆ.

ಒಂದು ದಕ್ಷಪೂರ್ಣವಾದ ಆಡಳಿತ ಪದ್ಧತಿಯು ಬೆಳೆಯಿತು. ಮುಖ್ಯವಾಗಿ ಸೈನ್ಯದ ಉಪಯೋಗಕ್ಕಾಗಿ ಒಳ್ಳೆಯ ರಾಜಮಾರ್ಗಗಳೇರ್ಪಟ್ಟವು. ಸ್ಥಳೀಯ ಪದ್ಧತಿಗಳಲ್ಲಿ ಯಾವ ರೀತಿಯಿಂದಲೂ ಕೈಹಾಕದಿದ್ದರೂ ಸರ್ಕಾರದ ಆಡಳಿತವು ಕೇಂದ್ರೀಕೃತವಾಯಿತು. ಮೊಗಲರ ಕಾಲದ ಆರಂಭದಲ್ಲಿದ್ದ ಷೇರ್‌ಷಹ ಆಫ್ಘನ್ ರಾಜರಲ್ಲೆಲ್ಲ ಬಹಳ ದಕ್ಷನು. ಆತನು ಹಾಕಿದ ಕಂದಾಯ ಪದ್ಧತಿಯ ತಳಹದಿಯ ಮೇಲೆಯೇ ಅಕ್ಬರನು ಉತ್ತಮ ಪದ್ಧತಿಯನ್ನು ರೂಪಿಸಿದನು. ಅಕ್ಬರನ ಪ್ರಸಿದ್ಧ ಹಣಕಾಸಿನ ಮಂತ್ರಿಯಾದ ರಾಜ ತೋದರಮಲ್‌ನನ್ನು ಮೊದಲು ಷೇರ್‌ಷಹನೇ ನೇಮಿಸಿದ್ದನು. ಆಫ್ಘನ್‌ರಾಜರು ಹಿಂದೂಗಳ ಬುದ್ಧಿ ಶಕ್ತಿಯಿಂದ ಬಹಳ ಉಪಯೋಗ ಪಡೆದರು.

ಆಫ್ಘನರು ದೇಶವನ್ನು ಅಧೀನಪಡಿಸಿಕೊಂಡಿದ್ದರಿಂದ ಇಂಡಿಯ ಮತ್ತು ಹಿಂದೂ ಧರ್ಮದ ಮೇಲೆ ಎರಡು ಪರಸ್ಪರ ವಿರುದ್ಧ ಪರಿಣಾಮಗಳಾದವು. ಮೊದಲನೆಯದಾಗಿ ಜನರು ಆಫ್ಘನ್ ರಾಜರಿಂದ ದೂರವಾಗಿ ದಕ್ಷಿಣ ಭಾರತಕ್ಕೆ ನೆಲಸಲು ಹೋದರು. ಅವರು ಬಹಳ ಆಚಾರಶೀಲರೂ, ಮಡಿವಂತರೂ ಆಗಿ ಸಂಕುಚಿತ ಸ್ವಭಾವದವರಾದರು. ಜಾತಿಯ ಕಟ್ಟುಗಳನ್ನು ಬಿಗಿಮಾಡಿ ಪರದೇಶದ ಪದ್ಧತಿಗಳ ಪ್ರಭಾವದಿಂದ ತಪ್ಪಿಸಿಕೊಳ್ಳಲು ಯತ್ನಮಾಡಿದರು. ಎರಡನೆಯದಾಗಿ ಕ್ರಮೇಣ, ಕಂಡೂ ಕಾಣದಂತೆ ಆ ಪರಕೀಯರ ಜೀವನ ಮತ್ತು ಭಾವನೆಗಳ ಕಡೆಗೆ ಒಲುಮೆ ತೋರುತ್ತ ಬಂದರು. ತಾನಾಗಿಯೇ ಒಂದು ಸಂಕೀರ್ಣ ಮಾರ್ಗವು ಹುಟ್ಟಿತು. ಶಿಲ್ಪಕಲೆಯಲ್ಲಿ ಹೊಸಮಾದರಿಯು

ಹುಟ್ಟಿತು. ಆಹಾರ ಉಡಿಗೆತೊಡಿಗೆಗಳು ವ್ಯತ್ಯಾಸಗೊಂಡವು. ಜೀವನದಲ್ಲಿ ಅನೇಕ ರೀತಿಯ ಬದಲಾವಣೆಗಳಾದವು. ಈ ಸಂಕೀರ್ಣ ಪದ್ಧತಿಯು ಸಂಗೀತದಲ್ಲಿ ಸ್ಪಷ್ಟ ಎದ್ದು ಕಾಣುತ್ತಿತ್ತು. ಪ್ರಾಚೀನ ಸಾಂಪ್ರದಾಯಿಕ ಪದ್ಧತಿಯೇ ಅನೇಕ ಮಾರ್ಗಗಳಲ್ಲಿ ಮುಂದುವರಿಯಿತು. ಪಾರ್ಸಿ ಭಾಷೆಯು ರಾಜಭಾಷೆಯಾಯಿತು. ಅನೇಕ ಪಾರಸಿ ಶಬ್ದಗಳು ಲೋಕರೂಢಿಯಾದವು. ಇದರ ಜೊತೆಗೆ ದೇಶೀ ಭಾಷೆಗಳೂ ಉನ್ನತಿಗೊಂಡವು.

ಆದರೆ ಇಂಡಿಯದಲ್ಲಿ ಹುಟ್ಟಿದ ಒಂದು ದುಷ್ಪರಿಣಾಮವೆಂದರೆ ಸ್ತ್ರೀಯರನ್ನು ಪ್ರತ್ಯೇಕಿಸುವ ಪರ್ದಾ ಪದ್ಧತಿ; ಏಕೆ ಇದು ಬಂದಿತು ಎನ್ನುವುದು ಅರ್ಥವಾಗುವುದಿಲ್ಲ. ಹೊಸದು ಹಳತರ ಪರಸ್ಪರ ಘರ್ಷಣೆಯಲ್ಲಿ ಹೇಗೋ ಇದು ಆಚರಣೆಗೆ ಬಂದಿತು. ಇತರ ದೇಶಗಳಲ್ಲಿ ಅದರಲ್ಲೂ ಮುಖ್ಯವಾಗಿ ಗ್ರೀಸಿನಲ್ಲಿದ್ದಂತೆ ಇಂಡಿಯದಲ್ಲಿ ಸಹ ಶ್ರೀಮಂತ ಮನೆತನಗಳಲ್ಲಿ ಸ್ತ್ರೀಯರು ಪ್ರತ್ಯೇಕವಿರುವ ಪದ್ಧತಿಯು ಪೂರ್ವದಿಂದಲೂ ಆಚರಣೆಯಲ್ಲಿತ್ತು. ಇದು ಪುರಾತನ ಇರಾಣಿಗಳಲ್ಲಿ, ಪಶ್ಚಿಮ ಏಷ್ಯದಲ್ಲೆಲ್ಲ ಆಚರಣೆಯಲ್ಲಿತ್ತು. ಆದರೆ ಎಲ್ಲಿಯೂ ಸ್ತ್ರೀಯರು ಸಂಪೂರ್ಣವಾಗಿ ಘೋಷಾದಲ್ಲಿ ಇರುತ್ತಿರಲಿಲ್ಲ. ಬೈಜಾಂಟೈನ್ ಅರಮನೆಗಳಲ್ಲಿ ರಾಣೀವಾಸಗಳನ್ನು ಕಾಯಲು ನಪುಂಸಕರನ್ನು ನೇಮಿಸುತ್ತಿದ್ದರು. ಪ್ರಾಯಶಃ ಈ ಪದ್ಧತಿಯು ಅಲ್ಲಿಂದ ಆರಂಭವಾಗಿರಬೇಕು. ಬೈಜಾಂಟೈನ್ ಪದ್ಧತಿಯ ಪ್ರಭಾವವು ರಷ್ಯಕ್ಕೆ ಹರಡಿತು. ಮಹಾ ಪೀಟರನ ಕಾಲದವರೆಗೂ ಸ್ತ್ರೀಯರು ಪ್ರತ್ಯೇಕ ನಿವಾಸಗಳಲ್ಲಿ ವಾಸಮಾಡಬೇಕೆಂಬ, ಕಠಿಣ ನಿಯಮವಿತ್ತು. ಆದರೆ ಚಾರ್ಟರುಗಳಲ್ಲಿ ಈ ಪದ್ಧತಿಯು ಇರಲಿಲ್ಲ. ಅವರು ತಮ್ಮ ಸ್ತ್ರೀಯರಿಗೆ ಪ್ರತ್ಯೇಕ ವಾಸಸ್ಥಾನಗಳನ್ನು ಏರ್ಪಡಿಸುತ್ತಿರಲಿಲ್ಲ. ಮಿಶ್ರ ಅರಬ್ಬಿ ಪಾರಸಿ ನಾಗರಿಕತೆಯಲ್ಲಿ ಬೈಜಾಂಟೈನ್ ಪದ್ಧತಿಗಳು ಅನೇಕ ಬಂದವು. ಶ್ರೀಮಂತ ಮನೆತನಗಳ ವಿದ್ಯಾಪದ್ಧತಿಯೂ ಪ್ರಾಯಶಃ ಸ್ವಲ್ಪ ಬೆಳೆದು ಬಂದಿರಬೇಕು. ಆದರೂ ಅರೇಬಿಯಾದಲ್ಲಿ ಮತ್ತು ಪಶ್ಚಿಮ ಮತ್ತು ಮಧ್ಯ ಏಷ್ಯದಲ್ಲಿ ಸ್ತ್ರೀಯರನ್ನು ಪ್ರತ್ಯೇಕಿಸಿರಲಿಲ್ಲ. ದೆಹಲಿಯನ್ನು ಹಿಡಿದಾಗಲೂ ಉತ್ತರ ಹಿಂದೂಸ್ಥಾನಕ್ಕೆ ಅಧಿಕ ಸಂಖ್ಯೆಯಲ್ಲಿ ಬಂದ ಅಫ್ಘನರಲ್ಲಿ ಈ ಪರದ ಪದ್ಧತಿಯೂ ಇರಲಿಲ್ಲ. ತುರ್ಕಿ ಮತ್ತು ಅಫ್ಘನ್ ರಾಜಕುಮಾರಿಯರು ಮತ್ತು ರಾಣಿವಾಸದ ಸ್ತ್ರೀಯರು ಕುದುರೆಸವಾರಿಗೆ, ಬೇಟೆಗೆ ಹೋಗುತ್ತಿದ್ದರು, ಮತ್ತು ಹೊರಗೆ ಹೋಗಿ ಭೇಟಿಕೊಡುತ್ತಿದ್ದರು. ಮಕ್ಕಾಕ್ಕೆ ಹಾಜ್ ಯಾತ್ರೆಗೆ ಹೋಗುವಾಗ ಸ್ತ್ರೀಯರು ಪರದ ತೆಗೆದು ಮುಖ ತೋರಿಸಬೇಕೆಂಬುದು ಈಗಲೂ ಆಚರಣೆಯಲ್ಲಿರುವ ಇಸ್ಲಾಂ ಪದ್ಧತಿ. ಮೊಗಲರ ಕಾಲದಲ್ಲಿ ಈ ಪರ್ದಾ ಪದ್ಧತಿಯ ಆಚರಣೆಯು ಹೆಚ್ಚಿದಂತಿದೆ. ಹಿಂದೂಗಳಲ್ಲೂ ಮುಸ್ಲಿಮರಲ್ಲೂ ಅದೊಂದು ಅಂತಸ್ತಿನ ಮತ್ತು ಗೌರವದ ಚಿಹ್ನೆಯಾಯಿತು. ಸ್ತ್ರೀಯರನ್ನು ಪ್ರತ್ಯೇಕಿಸುವ ಈ ಪದ್ಧತಿಯ ಮುಸ್ಲಿಂಪ್ರಭಾವವು ಹೆಚ್ಚಾಗಿದ್ದ ಪ್ರದೇಶಗಳಲ್ಲಿ ಮುಖ್ಯವಾಗಿ ದೆಹಲಿ, ಸಂಯುಕ್ತ ಪ್ರಾಂತ್ಯಗಳು, ರಾಜಪುತಾನ, ಬೀಹಾರ್ ಮತ್ತು ಬಂಗಾಳ ದೇಶಗಳಲ್ಲಿ ಮಧ್ಯ ಮತ್ತು ಪೂರ್ವ ಭಾಗಗಳ ಶ್ರೀಮಂತ ಮನೆತನಗಳಲ್ಲಿ ಬಹಳವಾಗಿ ಹರಡಿತು. ಆದರೂ ಬಹುಸಂಖ್ಯಾತ ಮುಸ್ಲಿಂ ಪ್ರಾಂತ್ಯಗಳಾದ ಪಂಜಾಬ್ ಮತ್ತು ಗಡಿನಾಡಿನ ಪ್ರಾಂತ್ಯಗಳಲ್ಲಿ ಕಟ್ಟುನಿಟ್ಟಾದ ಪರದ ಪದ್ಧತಿ ಇಲ್ಲದಿರುವುದು ಆಶ್ಚರ್ಯ. ದಕ್ಷಿಣ ಮತ್ತು ಪಶ್ಚಿಮ ಇಂಡಿಯದಲ್ಲಿ ಮುಸ್ಲಿಮರಲ್ಲಿ ಸ್ವಲ್ಪ ಬಿಟ್ಟರೆ ಬೇರೆ ಯಾರಲ್ಲೂ ಪರದ ಪದ್ಧತಿಯು ಆಚರಣೆಯಲ್ಲಿ ಇಲ್ಲ.

ಭಾರತದ ಇತ್ತೀಚಿನ ಶತಮಾನಗಳ ಅವನತಿಗೆ ಸ್ತ್ರೀಯರನ್ನು ಪ್ರತ್ಯೇಕಿಸುವ ಈ ಪರದ ಪದ್ಧತಿಯು ಒಂದು ಮುಖ್ಯ ಕಾರಣ. ಇಂಡಿಯದ ಸಮಾಜ ಜೀವನದ ಪ್ರಗತಿಯಾಗಬೇಕಾದರೆ ಈ ಪಾಶವೀ ಪದ್ಧತಿಯು ನಿರ್ಮೂಲವಾಗದ ಹೊರತು ಗತ್ಯಂತರವಿಲ್ಲ. ಸ್ತ್ರೀಯರಿಗೆ ಕೇಡನ್ನುಂಟುಮಾಡುತ್ತದೆ ಎನ್ನುವುದರಲ್ಲಿ ಅನುಮಾನವೇ ಇಲ್ಲ. ಆದರೆ ತನ್ನ ತಾಯಿಯ ಬಳಿ ಪರದದಲ್ಲಿ ಕಾಲ ಕಳೆಯಬೇಕಾದ ಮಗುವಿಗೆ, ಮನುಷ್ಯನಿಗೆ, ಸಮಾಜ ಜೀವನಕ್ಕೆ ಆಗುವ ಹಾನಿಯು ಅಪಾರ. ಹಿಂದೂಗಳಲ್ಲಿ ಅತಿ ಜಾಗ್ರತೆಯಾಗಿಯೂ ಮುಸ್ಲಿಮರಲ್ಲಿ ನಿಧಾನವಾಗಿಯೂ ಈ ದುಷ್ಟಪದ್ಧತಿಯು ಹೋಗುತ್ತಿರುವುದು ಸಂತೋಷದ ಸಂಗತಿ. ಈ ಪರ್ದಾ ಪದ್ಧತಿಯನ್ನು ನಿರ್ಮೂಲಮಾಡಲು ಮುಖ್ಯ

ಕಾರಣ ಸಹಸ್ರಗಟ್ಟಲೆ ಮಧ್ಯಮ ವರ್ಗದ ಮಹಿಳೆಯರನ್ನು ಒಂದಲ್ಲ ಒಂದು ಸಾರ್ವಜನಿಕ ಕೆಲಸಕ್ಕೆ ಎಳೆದಿರುವ ಕಾಂಗ್ರೆಸ್ಸಿನ ರಾಜಕೀಯ ಮತ್ತು ಸಾಮಾಜಿಕ ಚಳವಳಿಗಳು. ಗಾಂಧೀಜಿಯು ಈ ಪರದ ಪದ್ಧತಿಯ ಪ್ರಚಂಡ ವಿರೋಧಿ. ಮಹಿಳೆಯರನ್ನು ಹಿಂದಕ್ಕೆ ತಳ್ಳಿ ಅಪ್ರಬದ್ಧರನ್ನಾಗಿಟ್ಟಿರುವ "ದುಷ್ಟ ಪಾಶವೀ ಪದ್ಧತಿ" ಎಂದು ಕರೆದಿದ್ದಾರೆ. "ಆಚರಣೆಗೆ ತಂದಾಗ ಏನೇ ಪ್ರಯೋಜನವಿದ್ದಿರಲಿ, ಈಗ ಪೂರ್ಣ ನಿರುಪಯೋಗವಾಗಿ, ದೇಶಕ್ಕೆ ಅಪಾರ ಹಾನಿಯನ್ನುಂಟುಮಾಡುವ ಈ ದುಷ್ಟ ಪದ್ಧತಿಗೆ ಅಂಟಿಕೊಂಡು ಗಂಡಸರು ಭಾರತದ ಮಹಿಳೆಯರಿಗೆ ಮಾಡುತ್ತಿರುವ ಅನ್ಯಾಯವನ್ನು ಗಮನಿಸಿದ್ದೇವೆ" ಎಂದಿದ್ದಾರೆ. "ಮನುಷ್ಯನಿಗಿರುವಷ್ಟೇ ಸ್ವಾತಂತ್ರ್ಯ ಮತ್ತು ಆತ್ಮವಿಕಾಸದ ಅವಕಾಶ ಮಹಿಳೆಯರಿಗು ಇರಬೇಕೆಂದು ಗಾಂಧಿಯವರ ಮತ. ಸ್ತ್ರೀಪುರುಷರ ಸಂಬಂಧ ಸದ್ಭಾವನೆಯಿಂದ ಕೂಡಿರಬೇಕು. ಇಬ್ಬರ ಮಧ್ಯೆ ಯಾವ ಅಡ್ಡಗೋಡೆಯನ್ನೂ ಹಾಕಬಾರದು. ಪರಸ್ಪರ ನಡತೆ ಸ್ವಾಭಾವಿಕವೂ, ಸ್ವಯಂಪ್ರೇರಿತವೂ ಇರಬೇಕು" ಎಂದಿದ್ದಾರೆ. ಸ್ತ್ರೀಯರ ಸಮಾನತೆ ಮತ್ತು ಸ್ವಾತಂತ್ರ್ಯದ ಪರವಾಗಿ ಗಾಂಧೀಜಿ ಬಹಳ ಕಟುವಾಗಿಯೇ ಬರೆದಿದ್ದಾರೆ ಮತ್ತು ಮಾತನಾಡಿದ್ದಾರೆ. ಅವರು ಮನೆಯ ದಾಸ್ಯತ್ವವನ್ನು ಉಗ್ರವಾಗಿ ಖಂಡಿಸಿದ್ದಾರೆ.

ಅಡ್ಡದಾರಿ ಹಿಡಿದು ಆಧುನಿಕ ಕಾಲಕ್ಕೆ ಹಾರಿ ಬಂದಿದ್ದೇನೆ. ಅಫ್ಘನರು ದೆಹಲಿಯಲ್ಲಿ ನೆಲಸಿದ ಮೇಲೆ ಪುರಾತನ ಮತ್ತು ನವೀನ ಪದ್ಧತಿಗಳ ಸಂಘಟನೆಯ ಮಧ್ಯಯುಗಕ್ಕೆ ಹಿಂದಿರುಗಬೇಕು. ಈ ವ್ಯತ್ಯಾಸಗಳೆಲ್ಲ, ಮೇಲ್ತರಗತಿಯ ಶ್ರೀಮಂತರು ಮತ್ತು ಉತ್ತಮ ವರ್ಣದ ಜನರಲ್ಲಿ ಮಾತ್ರ ಆಯಿತು. ಸಾಮಾನ್ಯ ಜನರಲ್ಲಿ, ಅದರಲ್ಲೂ ಮುಖ್ಯವಾಗಿ ಹಳ್ಳಿಗಾಡಿನ ಜನರಲ್ಲಿ ಯಾವ ವ್ಯತ್ಯಾಸವೂ ಆಗಲಿಲ್ಲ. ಅರಮನೆಗಳ ಆವರಣದಲ್ಲಿ ಆರಂಭವಾಗಿ ನಗರ ಮತ್ತು ಪಟ್ಟಣಗಳಿಗೆ ಹರಡಿದವು. ಈ ರೀತಿ ಉತ್ತರ ಹಿಂದೂಸ್ಥಾನದಲ್ಲಿ ಒಂದು ಮಿಶ್ರ ಸಂಸ್ಕೃತಿಯು ಆರಂಭವಾಗಿ ಅನೇಕ ಶತಮಾನಗಳ ಕಾಲ ನಡೆಯಿತು. ದೆಹಲಿ ಮತ್ತು ಈಗಿನ ಸಂಯುಕ್ತ ಪ್ರಾಂತ್ಯಗಳು ಪುರಾತನ ಆರ್ಯ ಸಂಸ್ಕೃತಿಗೆ ಕೇಂದ್ರವಾಗಿದ್ದಂತೆ, ಈ ಸಂಸ್ಕೃತಿಗೂ ಕೇಂದ್ರವಾಯಿತು. ಆದರೆ ಆರ್ಯ ಸಂಸ್ಕೃತಿಯ ಬಹುಭಾಗವು ದಕ್ಷಿಣ ಇಂಡಿಯಕ್ಕೆ ಹೋಯಿತು ದಕ್ಷಿಣ ಭಾರತವು ಶಿಷ್ಟಾಚಾರದ ಹಿಂದೂ ಧರ್ಮಕ್ಕೆ ಭದ್ರವಾದ ಕೋಟೆಯಾಯಿತು.

ತೈಮೂರನ ಮುತ್ತಿಗೆಯಿಂದ ದೆಹಲಿಯ ಸುಲ್ತಾನರು ಬಲಗುಂದಿದ ಮೇಲೆ ಸಂಯುಕ್ತ ಪ್ರಾಂತ್ಯಗಳಲ್ಲಿ ಜಾನಪುರದಲ್ಲಿ ಒಂದು ಸಣ್ಣ ಮುಸ್ಲಿಂರಾಜ್ಯವು ತಲೆ ಎತ್ತಿತು. ಹದಿನೈದನೆಯ ಶತಮಾನದಲ್ಲಿ ಕಲೆ ಮತ್ತು ಸಂಸ್ಕೃತಿಗೆ, ಧರ್ಮ ಸಹಿಷ್ಣುತೆಗೆ ಇದು ಒಂದು ಕೇಂದ್ರವಾಯಿತು. ಜನಪ್ರಿಯವಾಗಿ ಪ್ರಬುದ್ಧಮಾನಕ್ಕೆ ಬರುತ್ತಿದ್ದ ಹಿಂದಿ ಭಾಷೆಗೆ ಪ್ರೋತ್ಸಾಹ ದೊರೆಯಿತು. ಹಿಂದು ಮತ್ತು ಮುಸ್ಲಿಂ ಧರ್ಮಗಳನ್ನು ಒಂದುಗೂಡಿಸುವ ಪ್ರಯತ್ನವೂ ನಡೆಯಿತು. ಇದೇ ಸಮಯದಲ್ಲಿ ಉತ್ತರದಲ್ಲಿ ದೂರದ ಕಾಶ್ಮೀರದಲ್ಲಿ ಒಬ್ಬ ಸ್ವತಂತ್ರ ಮುಸ್ಲಿಂ ರಾಜನಾದ ಜೈನುಲಾದ್ದೀನ ತನ್ನ ಪರಮತ ಸಹಿಷ್ಣುತೆಗೆ ಪ್ರಸಿದ್ಧನಾದನು, ಸಂಸ್ಕೃತ ಪಾಂಡಿತ್ಯಕ್ಕೂ ಮತ್ತು ಪುರಾತನ ಸಂಸ್ಕೃತಿಗೂ ಬಹಳ ಪ್ರೋತ್ಸಾಹ ಕೊಟ್ಟನು.

ಭಾರತದಾದ್ಯಂತ ಈ ಹೊಸ ಕ್ರಾಂತಿಯಾಗುತ್ತಿತ್ತು. ಹೊಸಭಾವನೆಗಳು ಜನರ ಮನಸ್ಸನ್ನು ಕಲಕಿದ್ದವು. ಹಿಂದಿನಂತೆಯೇ ಈಗಲೂ ಭಾರತವು, ಅವ್ಯಕ್ತವಾಗಿ ಪರಕೀಯವಾದುದನ್ನು ಜೀರ್ಣಿಸಿಕೊಳ್ಳುತ್ತಿತ್ತು ; ಈ ಕಾರ್ಯದಲ್ಲಿ ತಾನೂ ಸ್ವಲ್ಪ ವ್ಯತ್ಯಾಸಹೊಂದುತ್ತಿತ್ತು. ಈ ಕ್ರಾಂತಿಸಮಯದಲ್ಲಿ ಉದ್ದೇಶಪೂರ್ವಕವಾಗಿ ಸಂಘಟನೆಯನ್ನು ಪ್ರಚಾರಮಾಡಿದ ಹೊಸ ಸುಧಾರಕರು ಹುಟ್ಟಿದರು. ಅವರೆಲ್ಲ ಮತಪದ್ಧತಿಯನ್ನು ಖಂಡಿಸಿ ಅಥವ ನಿರ್ಲಕ್ಷಿಸಿ ತಮ್ಮ ಪ್ರಚಾರ ನಡೆಸಿದರು. ಹದಿನೈದನೆಯ ಶತಮಾನದಲ್ಲಿ ದಕ್ಷಿಣದಲ್ಲಿ ಹಿಂದೂ ರಮಾನಂದನಿದ್ದನು. ಆತನ ಶಿಷ್ಯನಾದ ಕಾಶಿಯ ಮುಸ್ಲಿಂ ನೇಕಾರ ಕಬೀರ್ ಇನ್ನೂ ಪ್ರಾಮುಖ್ಯತೆಗೆ ಬಂದನು. ಕಬೀರನ ಕವನಗಳು ಮತ್ತು ಗೀತೆಗಳು ಬಹಳ ಲೋಕಪ್ರಿಯವಾದವು. ಈಗಲೂ ಜನಜನಿತವಿವೆ. ಉತ್ತರದಲ್ಲಿ ಸಿಕ್‌ಮತಸ್ಥಾಪಕನಾದ

ಗುರು ನಾನಕ್ ಜನ್ಮತಾಳಿದನು. ಈ ಸುಧಾರಕರ ಪ್ರತಿಭೆಯು ಅವರ ನಂತರ ಹುಟ್ಟಿದ ಅವರ ಮತಗಳ ಪ್ರಭಾವವನ್ನೂ ಮೀರಿತ್ತು. ಈ ಹೊಸ ಭಾವನೆಗಳ ಸಂಘರ್ಷಣೆಯಿಂದ ಹಿಂದೂಮತದ ಮೇಲೆ ವಿಶೇಷ ಪರಿಣಾಮವಾಯಿತು. ಇಂಡಿಯದಲ್ಲಿ ಇಸ್ಲಾಂ ಧರ್ಮವು ಸಹ ಇತರ ದೇಶಗಳ ಇಸ್ಲಾಂ ಧರ್ಮಕ್ಕಿಂತ ಭಿನ್ನವಾಯಿತು. ಇಸ್ಲಾಂ ಧರ್ಮದ ಏಕದೇವತ್ವವಾದವು ಹಿಂದೂ ಧರ್ಮದ ಮೇಲೆ ಬಹಳ ಪರಿಣಾಮಮಾಡಿತು. ಹಿಂದೂಗಳ ಅಸ್ಪಷ್ಟ ಬಹುದೇವತ್ವವಾದವೂ ಭಾರತೀಯ ಮುಸ್ಲಿಮರ ಮೇಲೆ ಪರಿಣಾಮಮಾಡಿತು. ಈ ಭಾರತೀಯ ಮುಸ್ಲಿಮರು ಅನೇಕರು ಸನಾತನ ಸಂಪ್ರದಾಯದಲ್ಲಿ ಹುಟ್ಟಿ ಬೆಳೆದು ಮತಾಂತರವಾದವರು. ಅವರಲ್ಲಿ ಬಹಳ ಸ್ವಲ್ಪ ಜನರು ಹೊರಗಿನಿಂದ ಬಂದವರು. ನೂತನ ಪ್ಲೇಟೋ ಮತದಿಂದ ಆರಂಭವಾದ ಮುಸ್ಲಿಂ ಭಕ್ತಿಪಂಥವೂ ಮತ್ತು ಸೂಫಿ ಧರ್ಮಗಳೂ ಭಾರತದಲ್ಲಿ ಬೆಳೆದವು.

ಪರ್ಷಿಯನ್ ಭಾಷೆಯೇ ರಾಜಭಾಷೆಯಾಗಿ ಉಳಿದರೂ ವಿದೇಶೀಯರು ಜನಸಾಮಾನ್ಯದ ದೇಶೀಯ ಭಾಷೆಯನ್ನು ಬೆಳೆಸುತ್ತ ಬಂದು ಕ್ರಮೇಣ ಭಾರತೀಯರಾಗಿ ದೇಶೀಯರಲ್ಲಿ ಐಕ್ಯವಾದರು. ಪ್ರಾಚೀನ ಮುಸ್ಲಿಮರು ಹಿಂದಿಯಲ್ಲಿ ಅನೇಕ ಉತ್ಕೃಷ್ಟ ಗ್ರಂಥಗಳನ್ನು ಬರೆದಿದ್ದಾರೆ. ಹದಿನಾಲ್ಕನೆಯ ಶತಮಾನದಲ್ಲಿ ಆಫ್ಘನ್ ಸುಲ್ತಾನರುಗಳ ಕಾಲದಲ್ಲಿ ಸಂಯುಕ್ತಪ್ರಾಂತ್ಯಕ್ಕೆ ಬಂದು, ಎರಡು ಮೂರು ತಲೆಮಾರುಗಳ ಕಾಲ ನೆಲಸಿದ ತುರ್ಕಿ ವಂಶಸ್ಥನಾದ ಅಮೀರ್ ಖುಸ್ರು ಅವರಲ್ಲಿ ಅತಿಮುಖ್ಯನಾದವನು. ಪಾರಸಿ ಭಾಷೆಯಲ್ಲಿ ಆತನೊಬ್ಬ ವರಕವಿ, ಸಂಸ್ಕೃತದ ಪರಿಚಯವೂ ಆತನಿಗಿತ್ತು. ಸಂಗೀತದಲ್ಲಿ ಆತನ ಪಾಂಡಿತ್ಯವು ಅನುಪಮವಿತ್ತು. ಭಾರತೀಯ ಸಂಗೀತದಲ್ಲಿ ಅನೇಕ ಹೊಸ ಮಾರ್ಪಾಟುಗಳನ್ನು ಮಾಡಿದನು. ಭಾರತೀಯರಲ್ಲಿ ಬಹಳ ಪ್ರಿಯವಾದ ಸಿತಾರ್ ಆತನೇ ಕಂಡುಹಿಡಿದಿದ್ದಂತೆ ಅವನು ಅನೇಕ ವಿಷಯಗಳ ಮೇಲೆ ಗ್ರಂಥರಚನೆ ಮಾಡಿದನು. ಭಾರತದ ಮತ್ತು ಭಾರತೀಯ ವಸ್ತುಗಳ ಶ್ರೇಷ್ಠತೆಯನ್ನೂ ಮುಖ್ಯವಾಗಿ ಭಾರತೀಯ ಧರ್ಮ, ತತ್ವಶಾಸ್ತ್ರ, ತರ್ಕಶಾಸ್ತ್ರ, ಭಾಷೆ, ವ್ಯಾಕರಣ, ಸಂಗೀತ, ಗಣಿತ ಮತ್ತು ಮಾವಿನಹಣ್ಣುಗಳನ್ನು ವರ್ಣಿಸುವುದರಲ್ಲಿ ಆತನು ಅದ್ವಿತೀಯನು.

ಆದರೆ ಈಗಲೂ ಅವನ ಹೆಸರು ಭಾರತದಲ್ಲಿ ಮನೆಮಾತಾಗಿರುವುದಕ್ಕೆ ಅವನು ಜನಸಾಮಾನ್ಯರ ಭಾಷೆಯಾದ ಹಿಂದಿಯಲ್ಲಿ ರಚಿಸಿರುವ ಗೀತೆಗಳೇ ಕಾರಣ. ಹಲಕೆಲವು ವಿದ್ವಾಂಸರಿಗೆ ಮಾತ್ರ ತಿಳಿಯಬಹುದಾದ ಗ್ರಂಥಸ್ಥ ಭಾಷೆಯನ್ನು ಉಪಯೋಗಿಸದೆ ಹಿಂದಿಯನ್ನೆ ಉಪಯೋಗಿಸಿದ್ದು ಆತನದೊಂದು ವೈಶಿಷ್ಟ್ಯ. ಜನತಾಭಾಷೆಯಲ್ಲಿ ಬರೆದುದು ಮಾತ್ರವಲ್ಲದೆ, ಹಳ್ಳಿಗಾಡಿನ ಜನಜೀವನ, ಜನರ ಆಚಾರವ್ಯವಹಾರಗಳನ್ನೇ ತನ್ನ ಕಾವ್ಯವಸ್ತುವನ್ನಾಗಿ ಮಾಡಿಕೊಂಡನು. ಋತುಗಳ ವರ್ಣನೆಯನ್ನು ಮಾಡಿದನು. ಪ್ರಾಚೀನ ಸಂಪ್ರದಾಯ ಶೈಲಿಗನುಗುಣವಾಗಿ ಪ್ರತಿಯೊಂದು ಋತುವಿಗೂ ಸಮಂಜಸವಾದ ಪದವಿನ್ಯಾಸವನ್ನೂ ರಾಗಜೋಡಣೆಯನ್ನೂ ಮಾಡಿದನು. ನವವಧುವಿನ ಸಮಾಗಮ, ವಿರಹವ್ಯಥೆ, ಬಾಯಾರಿ ಬೆಂಡಾದ ಭೂಮಿಗೊಂದು ನವಚೈತನ್ಯತುಂಬುವ ವರ್ಷಾಕಾರಿ ಮುಂತಾಗಿ ಜೀವನದ ವಿವಿಧ ರೂಪುರೇಖೆಗಳನ್ನು ಚಿತ್ರಿಸಿದನು. ಉತ್ತರ ಮತ್ತು ಮಧ್ಯಭಾರತದ ಗ್ರಾಮಾಂತರಗಳಲ್ಲಿ ಈ ಗೀತೆಗಳು ಇನ್ನೂ ಜನಜನಿತವಿವೆ. ಮಳೆಗಾಲ ಆರಂಭವಾದೊಡನೆ ಪ್ರತಿ ಹಳ್ಳಿಯ ಹುಡುಗಹುಡುಗಿಯರು ಅರಳಿಮರ ಮಾವಿನಮರಗಳಿಗೆ ಉಯ್ಯಾಲೆಗಳನ್ನು ಕಟ್ಟಿ ಹಾಡುಗಳನ್ನು ಹಾಡುತ್ತ ವರ್ಷಾಗಮವನ್ನು ಸಂಭ್ರಮದಿಂದ ಸ್ವಾಗತಿಸಿ ಆಚರಿಸುತ್ತಾರೆ.

ಹುಡುಗರೂ ದೊಡ್ಡವರೂ ಆದಿಯಾಗಿ ಎಲ್ಲರ ಬಾಯಲ್ಲೂ ಇರುವ ಅಸಂಖ್ಯಾತ ಒಗಟುಗಳನ್ನು ರಚಿಸಿದವನೂ ಅಮೀರ್ ಖುಸ್ರೊನೇ. ಅವನ ಗೀತೆಗಳು ಮತ್ತು ಒಗಟುಗಳಿಂದ ಆತನು ಜೀವಂತನಿರುವಾಗಲೇ ಅವನ ಖ್ಯಾತಿಯು ಹಬ್ಬಿತ್ತು. ಆ ಖ್ಯಾತಿಯು ಇನ್ನೂ ಉಳಿದು ಬೆಳೆದಿದೆ. ಈರೀತಿ ಆರುನೂರು ವರ್ಷಗಳಾದಾಗ್ಯೂ, ಒಂದು ಅಕ್ಷರವನ್ನೂ ಬದಲಿಸದೆ, ಲೋಕಪ್ರಿಯವಾಗಿ ಜನತೆಯ ಹೃದಯವನ್ನು ಸೂರೆಗೊಂಡ ಗೀತೆಗಳು ಇನ್ನೆಲ್ಲಾದರೂ ಇವೆಯೋ ಇಲ್ಲವೋ ನಾನರಿಯೆ.

## ೬. ಭಾರತೀಯ ಸಮಾಜರಚನೆ—ಜಾತಿಯ ಪ್ರಾಮುಖ್ಯತೆ.

ಭಾರತದ ವಿಷಯ ಬಲ್ಲವರಿಗೆಲ್ಲ ಜಾತಿಪದ್ಧತಿಯ ವಿಷಯ ತಿಳಿದಿದೆ. ಪ್ರತಿಯೊಬ್ಬ ವಿದೇಶೀಯನೂ ಮತ್ತು ಅನೇಕ ಭಾರತೀಯರೂ ಅದನ್ನು ಅಲ್ಲಗಳೆದು ಖಂಡಿಸಿದ್ದಾರೆ. ಅನೇಕರು ಅದರ ಮೂಲತತ್ವವನ್ನು ಒಪ್ಪಿ, ಬಹುಜನ ಹಿಂದೂಗಳು ಈಗಲೂ ಅದಕ್ಕೆ ಅಂಟಿಕೊಂಡಿದ್ದರೂ ಇಂದಿನ ಅಸಂಖ್ಯಾತ ಜಾತೀಯ ಜಟಿಲತೆಯನ್ನು ಯಾವ ಭಾರತೀಯನೂ ಅನುಮೋದಿಸುವುದಿಲ್ಲ. 'ಜಾತಿ' ಶಬ್ದಕ್ಕೆ ಅನೇಕರು ಅನೇಕ ಅರ್ಥಗಳನ್ನು ಕೊಡುವುದರಿಂದ ಆ ಶಬ್ದದ ಉಪಯೋಗದಲ್ಲೇ ಸ್ವಲ್ಪ ಗೊಂದಲವೆದ್ದಿದೆ. ಸಾಮಾನ್ಯ ಯೂರೋಪಿಯನ್ ಅಥವ ಅದೇ ಭಾವನೆಯ ಭಾರತೀಯನಿಗೆ ಜಾತಿ ಎಂದರೆ ಜನತೆಯನ್ನು ವಿಂಗಡಿಸುವ ಯತ್ನ, ಕೆಲವು ಪಂಗಡಗಳ ಶ್ರೇಷ್ಠತೆಯನ್ನು ಕಾಪಾಡಿಕೊಳ್ಳುವ ಕುತಂತ್ರ, ಉಚ್ಚನೀಚಭಾವನೆಯನ್ನು ಶಾಶ್ವತಗೊಳಿಸುವ ಯತ್ನ ಎನ್ನುವ ಭಾವನೆ ಇದೆ. ಇದರಲ್ಲಿ ಸತ್ಯವಿದೆ; ಪ್ರಾಯಶಃ ಆರ್ಯರು ಭಾರತವನ್ನು ಆಕ್ರಮಿಸಿದಾಗ ಮೂಲನಿವಾಸಿಗಳಿಂದ ಆರ್ಯರು ಪ್ರತ್ಯೇಕವಿರಬೇಕೆಂದು ಆರಂಭದಲ್ಲಿ ಮಾಡಿದ ಏರ್ಪಾಟು ಇದ್ದರೂ ಇರಬಹುದು. ಮೊದಲು ಸ್ವಲ್ಪ ಹಿಗ್ಗಿಸಲು ಸಾಧ್ಯವಿದ್ದರೂ ಕ್ರಮೇಣ ಬೆಳೆಯುತ್ತ, ಬೆಳೆಯುತ್ತ ಬಹಳ ಕಠಿನವಾಗಿದೆ. ಆದರೂ ಅದು ಸತ್ಯದ ಒಂದು ಮುಖಮಾತ್ರ. ಅದರ ಶಕ್ತಿ, ಸಂಘಟನೆ ಮತ್ತು ಇಷ್ಟುಕಾಲ ಬಾಳಿ ಬಂದುದಕ್ಕೆ ಕಾರಣ ಅದರಿಂದ ತಿಳಿಯುವುದಿಲ್ಲ. ಬೌದ್ಧಮತದ ಧಾಳಿಯನ್ನು ಎದುರಿಸಿತು, ಅಫ್ಘನರ ಮೊಗಲರ ಆಳ್ವಿಕೆಗಳನ್ನೂ ಮತ್ತು ಇಸ್ಲಾಂ ಧರ್ಮದ ಧಾಳಿಯನ್ನೂ ಎದುರಿಸಿತು. ಅಲ್ಲದೆ ಹಿಂದೂಧರ್ಮದಲ್ಲೇ ಅನೇಕ ಸಮಾಜಸುಧಾರಕರ ವಿರೋಧವನ್ನೂ ಎದುರಿಸಿ ಉಳಿಯಿತು. ಅದರ ಮೂಲಕ್ಕೆ ಪೆಟ್ಟುಬಿದ್ದು ಅಸ್ತಿಭಾರ ಸಡಿಲವಿರುವುದು ಈಗಮಾತ್ರ. ಅದಕ್ಕೆ ಕಾರಣವು ಹಿಂದೂಧರ್ಮದಲ್ಲೇ ಹುಟ್ಟಿರುವ ಸಮಾಜಸುಧಾರಣೆಯ ಮನೋಭಾವವಲ್ಲ, ಪಾಶ್ಚಿಮಾತ್ಯ ಸಂಸ್ಕೃತಿಯ ಸಂಪರ್ಕವೂ ಅಲ್ಲ. ಇವೆರಡೂ ತಕ್ಕಮಟ್ಟಿಗೆ ತಮ್ಮ ಪ್ರಭಾವ ಬೀರಿದ್ದರೂ ಮುಖ್ಯಕಾರಣವು ನಮ್ಮ ಕಣ್ಣೆದುರಿಗೇನೆ ಭಾರತೀಯ ಸಮಾಜವನ್ನೇ ಬುಡಮೇಲುಮಾಡುತ್ತಿರುವ ಆರ್ಥಿಕ ಆಂದೋಲನ. ಅತಿವೇಗದಿಂದ ವ್ಯತ್ಯಸ್ತವಾಗುತ್ತಿರುವ ಜೀವನರೀತಿ ಮತ್ತು ಭಾವನಾರೀತಿಯನ್ನು ನೋಡಿದರೆ ಪ್ರಾಯಶಃ ಜಾತಿ ಪದ್ಧತಿಯು ಉಳಿಯುವುದು ಕಷ್ಟವೆಂದು ತೋರುತ್ತದೆ. ಅದಕ್ಕೆ ಬದಲು ಏನು ಬರುತ್ತದೆ ಎಂದು ಹೇಳುವುದು ಕಷ್ಟ. ಏಕೆಂದರೆ ಅದಕ್ಕೆ ಸಿಕ್ಕಿರುವ ಈಡು ಜಾತಿಪದ್ಧತಿಗೂ ಹಿರಿದು. ಒಂದಕ್ಕೊಂದು ವಿರುದ್ಧವಾದ ಎರಡು ಸಮಾಜರಚನಾ ದೃಷ್ಟಿಕೋನಗಳಿಗೆ ಈಗ ತುಮುಲಯುದ್ಧ ನಡೆಯುತ್ತಿದೆ—ಸಮಾಜರಚನೆಗೆ ಪಂಗಡವೇ ಮೂಲವೆಂಬ ಹಿಂದೂಭಾವನೆಗೆ ಮತ್ತು ಪಂಗಡಕ್ಕಿಂತ ವ್ಯಕ್ತಿಯೇ ಶ್ರೇಷ್ಠವೆಂಬ ಪಾಶ್ಚಿಮಾತ್ಯಭಾವನೆಗೆ.

ಈ ಘರ್ಷಣೆ ನಡೆಯುತ್ತಿರುವುದು ಭಾರತದಲ್ಲಿ ಮಾತ್ರವಲ್ಲ. ಬೇರೆ ಬೇರೆ ಕಡೆಗಳಲ್ಲಿ ಬೇರೆ ಬೇರೆ ರೂಪದಲ್ಲಿದ್ದರೂ ಪಾಶ್ಚಿಮಾತ್ಯರಲ್ಲಿಯೂ, ಇಡೀ ಪ್ರಪಂಚದಲ್ಲಿ ಎಲ್ಲ ಕಡೆಗಳಲ್ಲಿಯೂ ನಡೆಯುತ್ತಿದೆ. ಪ್ರಜಾಸತ್ತಾತ್ಮಕ ಉದಾರ ನೀತಿ, ಅದನ್ನವಲಂಬಿಸಿದ ಆರ್ಥಿಕ ಮತ್ತು ಸಾಮಾಜಿಕ ನೀತಿಯಮೇಲೆ ಮುಂದುವರಿದ ೧೯ನೆಯ ಶತಮಾನದ ಯೂರೋಪಿಯನ್ ನಾಗರಿಕತೆಯಲ್ಲಿ ವ್ಯಕ್ತಿವಾದದ ಪರಮಾವಧಿಯನ್ನು ಕಾಣುತ್ತೇವೆ. ಹತ್ತೊಂಭತ್ತನೆಯ ಶತಮಾನದ ಸಾಮಾಜಿಕ ರಾಜಕೀಯ ನೀತಿಯು ಇಪ್ಪತ್ತನೆಯ ಶತಮಾನಕ್ಕೂ ಬೆಳೆದುಬಂದಿತು ಆದರೆ ಯುದ್ಧ ಮತ್ತು ಇತರ ಕಠಿಣ ಸಮಸ್ಯೆಗಳ ಎದುರಿನಲ್ಲಿ ಆ ನಾಗರಿಕತೆಯು ಶಿಥಿಲವಾಗಿ ನುಚ್ಚುನೂರಾಗುವಂತೆ ಕಾಣುತ್ತದೆ. ಪಂಗಡಕ್ಕೆ ಮತ್ತು ಸಮಾಜಕ್ಕೆ ಹೆಚ್ಚು ಪ್ರಾಮುಖ್ಯತೆ ದೊರೆಯುತ್ತಿದೆ. ವ್ಯಕ್ತಿ ಮತ್ತು ಸಮಾಜದ ಪರಸ್ಪರ ಹಕ್ಕು ಬಾಧ್ಯತೆಗಳನ್ನು ಸಮನ್ವಯಗೊಳಿಸುವುದೇ ಸಮಸ್ಯೆಯಾಗಿದೆ. ಈ ಪರಿಹಾರಮಾರ್ಗವು ಬೇರೆ ಬೇರೆ ದೇಶಗಳಲ್ಲಿ ಬೇರೆ ಬೇರೆ ರೂಪ ತಾಳಬಹುದು. ಆದರೆ ಎಲ್ಲರಿಗೂ ಅನ್ವಯಿಸುವ ಒಂದು ಮೂಲತತ್ವವನ್ನು ಕಂಡುಹಿಡಿಯುವ ಪ್ರಯತ್ನವು ನಡೆಯಲೇಬೇಕಾಗುತ್ತದೆ.

ಜಾತಿಪದ್ಧತಿಯಲ್ಲೇ ಒಂದು ವೈಶಿಷ್ಟ್ಯವಿಲ್ಲ. ಅದು ದೊಡ್ಡದೊಂದು ಸಮಾಜರಚನೆಯಲ್ಲಿ ಒಂದು ಅಂಗ ಮಾತ್ರ. ಆದರೆ ಒಂದು ಮುಖ್ಯವಾದ ಅಂಗ. ಅದರ ಕೆಲವು ದುಷ್ಕಲಂಕಗಳನ್ನು ಕಿತ್ತೊಗೆದು, ಅದರ ಕಠಿಣತೆಯನ್ನು ಕಡಮೆಮಾಡಿ ಉಳಿಸಿಕೊಳ್ಳುವುದು ಸಾಧ್ಯ. ಆದರೆ ಇಂದಿನ ಸಾಮಾಜಿಕ ಆರ್ಥಿಕ ಘರ್ಷಣೆಯಲ್ಲಿ ಜಾತಿಪದ್ಧತಿಯ ಬಾಹ್ಯರಚನೆಗೆ ಸ್ಥಾನವೇ ಇಲ್ಲ. ಮೂಲಕ್ಕೇ ಪೆಟ್ಟುಹಾಕಿ ಅಗಾಧ ಸ್ಥಂಭಗಳನ್ನೇ ಉರುಳಿಸುತ್ತಿವೆ. ಮೂಲ ಅಸ್ತಿತ್ವವು ಬಹುಮಟ್ಟಿಗೆ ನಾಶವಾಗಿದೆ ಅಥವ ನಾಶಹೊಂದುತ್ತಲಿದೆ. ಜಾತಿಪದ್ಧತಿಯೇ ಇಕ್ಕಟ್ಟಿನಲ್ಲಿದೆ. ನಮಗೆ ಇಷ್ಟವೇ ಅನಿಷ್ಟವೇ ಎಂಬ ಪ್ರಶ್ನೆಯೇ ಇಲ್ಲ. ನಮ್ಮ ಇಷ್ಟಾನಿಷ್ಟಗಳೇನೇ ಇರಲಿ, ಪರಿವರ್ತನೆಗಳಾಗುತ್ತಲಿವೆ. ಆದರೆ ಭಾರತೀಯರು ಕಟ್ಟಿದ ಸಮಾಜದಲ್ಲಿ ಎದ್ದು ಕಾಣುವ ಸಂಘಟನ ಶಕ್ತಿ ಮತ್ತು ನಿತ್ಯತೆ ಭಾರತೀಯರ ಸಹಜ ಅಂತಃಶಕ್ತಿ ಮತ್ತು ಶೀಲಗಳ ಫಲ. ಈ ಅಂತಃಶಕ್ತಿ ಮತ್ತು ಶೀಲದ ಸಹಾಯದಿಂದ ಆ ಪರಿವರ್ತನೆಗಳನ್ನು ಸರಿಯಾದ ಮಾರ್ಗದಲ್ಲಿ ತಿರುಗಿಸಿ ರೂಪಗೊಳಿಸಿ ಪೂರ್ಣಪ್ರಯೋಜನ ಪಡೆಯುವುದು ನಮ್ಮ ಕೈಯಲ್ಲಿದೆ.

“ಎಂದಿನವರೆಗೆ ಹಿಂದೂಗಳು ಜಾತಿಪದ್ಧತಿಯನ್ನು ತ್ಯಜಿಸುವುದಿಲ್ಲವೊ ಅಂದಿನವರೆಗೆ ಭಾರತವು ಭಾರತವಾಗಿ ಉಳಿಯುತ್ತದೆ. ಜಾತಿಪದ್ಧತಿಯು ನಾಶವಾದೊಡನೆ ಭಾರತವು ಭಾರತವಾಗಿ ಉಳಿಯುವುದಿಲ್ಲ. ಆ ಪ್ರತಿಭಾಯುಕ್ತ ಪರ್ಯಾಯದ್ವೀಪವು ಅಂದೇ ಆಂಗ್ಲೋಸ್ಯಾಕ್ಸನ್ ಚಕ್ರಾಧಿಪತ್ಯದ ಹೊಲಗೇರಿಯಾಗುತ್ತದೆ” ಎಂದು ಸರ್ ಜಾರ್ಜ್ ಬರ್ಡ್‌ವುಡ್ ಒಂದೆಡೆ ಎಲ್ಲೋ ಹೇಳಿದ್ದಾನೆ. ಜಾತಿಪದ್ಧತಿ ಇರಲಿ ಇಲ್ಲದಿರಲಿ ಈಗಾಗಲೇ ನಾವು ಬ್ರಿಟಿಷ್ ಚಕ್ರಾಧಿಪತ್ಯದಲ್ಲಿ ಆ ಅಂತಸ್ತಿಗೆ ಇಳಿದಿದ್ದೇವೆ. ಮುಂದೆ ನಮ್ಮ ಸ್ಥಾನವೇನೆ ಇರಲಿ ಬ್ರಿಟಿಷ್ ಚಕ್ರಾಧಿಪತ್ಯದಲ್ಲಿರುವುದಂತೂ ಸಾಧ್ಯವಿಲ್ಲ. ಆ ದೃಷ್ಟಿಯಿಂದ ಸರ್ ಜಾರ್ಜ್ ಬರ್ಡ್‌ವುಡ್ ನೋಡದಿದ್ದರೂ, ಆತನು ಹೇಳಿರುವುದರಲ್ಲಿ ಸ್ವಲ್ಪ ಸತ್ಯವಿದೆ. ಕಾಲಧರ್ಮ ಮತ್ತು ಜನತೆಯ ಸಹಜ ಮನೋಧರ್ಮಕ್ಕನುಗುಣವಾದ ಬೇರೊಂದು ಸಮಾಜರಚನೆಯು ರೂಪುಗೊಳ್ಳದೆಹೋದರೆ, ಅನಾದಿಕಾಲದಿಂದ ಅವ್ಯಾಹತವಾಗಿ ನಡೆದುಬಂದ ಒಂದು ದೊಡ್ಡ ಸಮಾಜವನ್ನು ಛಿದ್ರಗೊಳಿಸಿದರೆ, ಸಾಮಾಜಿಕ ಜೀವನ ಪೂರ್ಣನಾಶವಾಗಿ ಅನೈಕ್ಯತೆ, ಜನಕ್ಷೋಭೆ, ವ್ಯಕ್ತಿಚರ್ಯೆಯ ವೈಪರೀತ್ಯ ಬಹು ದೊಡ್ಡ ಪ್ರಮಾಣದಲ್ಲಿ ತಲೆದೋರಿ ದೇಶದಲ್ಲಿ ಅನಾಹುತವಾಗಬಹುದು. ಪ್ರಾಯಶಃ ಪರ್ವಕಾಲದಲ್ಲಿ ಈ ಅನಾಹುತಗಳು ಅನಿವಾರ್ಯವೋ ಏನೋ? ಇಂದಿನ ಪ್ರಪಂಚದಲ್ಲಿ ಎಲ್ಲಿ ನೋಡಿದರೂ ಅನಾಹುತಗಳೇ. ಪ್ರಾಯಶಃ ಅನಾಹುತದ ಹಿಂದೆ ಜನತೆಯು ಅನುಭವಿಸಬೇಕಾದ ಸಂಕಟ ಮತ್ತು ನೋವಿನಿಂದಲೇ ಪಾಠಕಲಿತು,ಬೆಳೆದುಬಂದು, ನೂತನ ಪರಿಸ್ಥಿತಿಗನುಗುಣವಾಗಿ ಹೊಸಜೀವನವನ್ನು ಆರಂಭಿಸಬೇಕಾಗುತ್ತದೆ.

ಆದರೂ ನಮ್ಮ ಕಲ್ಪನೆ ಎಷ್ಟೇ ಮಬ್ಬಿರಲಿ, ನಮ್ಮ ಭವಿಷ್ಯದ ಗುರಿ ಏನು, ಏತಕ್ಕಾಗಿ ಶ್ರಮಿಸುತ್ತಿದ್ದೇವೆ ಎಂಬ ಕಲ್ಪನೆ ಇಲ್ಲದೆ, ಇದ್ದುದನ್ನು ಒಡೆದು, ಇಲ್ಲದುದನ್ನು ಬೇಡಲು ಸಾಧ್ಯವಿಲ್ಲ. ಶೂನ್ಯತೆಯನ್ನು ಸೃಜಿಸಲು ಸಾಧ್ಯವಿಲ್ಲ; ಏಕೆಂದರೆ ಆ ಶೂನ್ಯತೆಯೇ ನಮಗೆ ಅನಿಷ್ಟವಾದುದನ್ನು ನಿರ್ಮಿಸಿಕೊಳ್ಳಬಹುದು. ನಾವು ರೂಪುಗೊಳಿಸುವ ರಚನಾತ್ಮಕ ಯೋಜನೆಗಳಲ್ಲಿ ನಮಗೆ ಇರುವ ಜನ ಸಂಪತ್ತಿನ ಯೋಗ್ಯತೆ, ಅದರ ಭಾವನೆ ಮತ್ತು ಆಕಾಂಕ್ಷೆಗಳ ಹಿನ್ನೆಲೆ ಮತ್ತು ನಮ್ಮ ಕಾರ್ಯಕ್ಷೇತ್ರದ ಸನ್ನಿವೇಶಗಳು ಇವನ್ನೆಲ್ಲ ಗಮನಿಸಬೇಕಾಗುತ್ತದೆ. ಇದನ್ನೆಲ್ಲ ಅಲಕ್ಷ್ಯಮಾಡಿ ಗಾಳಿಗೋಪುರ ಕಟ್ಟಬಯಸಿದರೆ, ಅಥವ ಇತರರನ್ನು ಅನುಕರಿಸಹೋದರೆ ಅದಕ್ಕಿಂತ ಮೂರ್ಖತನ ಮತ್ತೊಂದಿಲ್ಲ. ಆದ್ದರಿಂದ ನಮ್ಮ ಜನಜೀವನದ ಮೇಲೆ ಅತ್ಯಂತ ಪರಿಣಾಮಕಾರಿಯಾದ ಭಾರತೀಯ ಸಮಾಜದ ರಚನೆಯನ್ನು ಅರ್ಥಮಾಡಿಕೊಂಡು ವಿಚಾರಮಾಡುವುದು ಅತ್ಯಾವಶ್ಯಕ.

ಈ ಸಮಾಜರಚನೆಯ ಆಧಾರಸ್ಥಂಭಗಳು ಮೂರು. ಗ್ರಾಮ ಜೀವನ, ಜಾತಿಪದ್ಧತಿ, ಮತ್ತು ಒಟ್ಟುಕುಟುಂಬ. ಇವೆಲ್ಲಕ್ಕೂ ಗ್ರಾಮಜೀವನವೆ ಮುಖ್ಯ. ವ್ಯಕ್ತಿಗೆ ಎರಡನೆಯ ಸ್ಥಾನ. ಒಂದೊಂದನ್ನೇ ವಿಚಾರಮಾಡಿದರೆ ಇದರಲ್ಲಿ ವೈಶಿಷ್ಟ್ಯವೇನೂ ಇಲ್ಲ. ಇತರ ದೇಶಗಳಲ್ಲಿ ಅದರಲ್ಲೂ ಮಧ್ಯಯುಗದಲ್ಲಿ

ಒಂದೊಂದನ್ನು ಅಲ್ಲಲ್ಲಿ ಕಾಣಬಹುದು. ಪುರಾತನ ಭಾರತೀಯ ಪ್ರಜಾಧಿಪತ್ಯಗಳಂತೆ ಇತರ ದೇಶಗಳಲ್ಲೂ ಪ್ರಾಚೀನ ಪ್ರಜಾಪ್ರಭುತ್ವಗಳನ್ನು ನೋಡಬಹುದು. ರಷ್ಯಾದೇಶದ ಪ್ರಾಚೀನ 'ಮೀರ್' ಭಾರತೀಯ ಗ್ರಾಮಪಂಚಾಯಿತಿಯನ್ನು ಹೋಲುತ್ತದೆ. ಕಸಬನ್ನವಲಂಬಿಸಿ ಜಾತಿಪದ್ಧತಿಯು ಏರ್ಪಾಟಾಯಿತು. ಮಧ್ಯಯುಗದ ಯೂರೋಪಿನಲ್ಲೂ ಅಂತಹ ವಣಿಕ್‌ಸಂಘಗಳಿದ್ದವು. ಚೀನಾ ದೇಶದ ಕುಟುಂಬ ಜೀವನವು ಹಿಂದೂ ಕುಟುಂಬ ಜೀವನದಂತೆಯೇ ಇದೆ. ಇವುಗಳನ್ನೆಲ್ಲ ಹೋಲಿಸಿ ತುಲನಮಾಡಿ ಚರ್ಚಿಸಲು ನನಗೆ ಸಾಮರ್ಥ್ಯವೂ ಇಲ್ಲ; ಆವಶ್ಯಕತೆಯೂ ಇಲ್ಲ. ಒಟ್ಟಿನಲ್ಲಿ ಭಾರತೀಯ ಸಮಾಜ ರಚನೆಯಲ್ಲಿ ಒಂದು ವೈಶಿಷ್ಟ್ಯವಿತ್ತು; ಅದು ಬೆಳೆದಂತೆ ಆ ವೈಶಿಷ್ಟ್ಯವೂ ಬೆಳೆಯಿತು.

## ೭. ಗ್ರಾಮಾಡಳಿತ ಸ್ವಾತಂತ್ರ್ಯ: ಶುಕ್ರನೀತಿಸಾರ

ತುರ್ಕಿ ಜನರ ಮತ್ತು ಅಫ್ಘನರ ದಂಡಯಾತ್ರೆಗೆ ಮುಂಚೆ ಭಾರತೀಯರ ರಾಜನೀತಿ ಏನಿತ್ತು ಎಂಬುದನ್ನು ತಿಳಿಸಲು ಹತ್ತನೆಯ ಶತಮಾನದ ಪುರಾತನ ಗ್ರಂಥ ಒಂದಿದೆ, ಶುಕ್ರಾಚಾರ್ಯನ ರಾಜನೀತಿಗ್ರಂಥವಾದ ನೀತಿಸಾರ. ಕೇಂದ್ರಾಡಳಿತ, ನಗರಾಡಳಿತ, ಗ್ರಾಮಾಡಳಿತ ರಾಜನ ಮಂತ್ರಾಲೋಚನಾಸಭೆ, ಸರಕಾರದ ವಿವಿಧ ಅಂಗಗಳ ವಿಷಯವನ್ನು ತಿಳಿಸುತ್ತದೆ. ಗ್ರಾಮಪಂಚಾಯಿತಿಯ ಚುನಾಯಿತ ಮಂಡಲಿಗೆ ವಿಶೇಷ ಆಡಳಿತ ಅಧಿಕಾರವೂ, ದಂಡನಾಧಿಕಾರವೂ ಇತ್ತು. ರಾಜನ ಕಡೆಯ ಅಧಿಕಾರಿಗಳು ಅವರಿಗೆ ತುಂಬಾ ಗೌರವತೋರಿಸುತ್ತಿದ್ದರು. ಜಮೀನು ಹಂಚಿಕೆ, ಬೆಳೆದ ಬೆಳೆಯಿಂದ ತೆರಿಗೆಯನ್ನು ಶೇಖರಿಸುವುದು, ಗ್ರಾಮದ ಪರವಾಗಿ ಸರಕಾರಕ್ಕೆ ಕೊಡಬೇಕಾದ ಭಾಗವನ್ನು ಕೊಡುವುದು ಪಂಚಾಯಿತಿಯ ಕೆಲಸವಾಗಿತ್ತು. ಇಂತಹ ಅನೇಕ ಗ್ರಾಮಪಂಚಾಯಿತಿಗಳ ಮೇಲೆ ಆಡಳಿತ ವ್ಯವಸ್ಥೆಗೆ ಮತ್ತು ಅವಶ್ಯ ತೋರಿದರೆ ಮಧ್ಯೆ ಪ್ರವೇಶಮಾಡಿ ಸರಿಪಡಿಸಲು ದೊಡ್ಡ ಪಂಚಾಯಿತಿಗಳು ಇರುತ್ತಿದ್ದವು.

ಕೆಲವು ಪ್ರಾಚೀನ ಶಿಲಾಶಾಸನಗಳಿಂದ ಪಂಚಾಯಿತರನ್ನು ಹೇಗೆ ಆರಿಸುತ್ತ ಇದ್ದರು. ಅವರ ಅರ್ಹತೆಗಳೇನು, ಅನರ್ಹತೆಗಳೇನು ಎಂಬುದು ಗೊತ್ತಾಗುತ್ತದೆ. ಪ್ರತಿವರ್ಷವೂ ಅನೇಕ ಸಮಿತಿಗಳನ್ನು ಚುನಾಯಿಸಿ ನೇಮಿಸುತ್ತಿದ್ದರು. ಸ್ತ್ರೀಯರಿಗೂ ಅವುಗಳಲ್ಲಿ ಸ್ಥಾನವಿತ್ತು. ದುರ್ನಡತೆಗಾಗಿ ಸದಸ್ಯರನ್ನು ತೆಗೆದುಹಾಕಬಹುದಾಗಿತ್ತು. ಸಾರ್ವಜನಿಕ ಹಣಕ್ಕೆ ಲೆಕ್ಕಕೊಡದಿದ್ದ ಸದಸ್ಯನು ತನ್ನ ಅರ್ಹತೆಯನ್ನು ಕಳೆದುಕೊಳ್ಳುತ್ತಿದ್ದನು. ಬೇಕಾದವರಿಗೆ ಮಾತ್ರ ಕೆಲಸಕೊಡದಂತಿರಲೆಂದು ಸದಸ್ಯರು ತಮ್ಮ ಸಂಬಂಧೀಕರನ್ನು ಕೆಲಸಕ್ಕೆ ನೇಮಿಸಿಕೊಳ್ಳಬಾರದೆಂಬ ನಿಯಮವಿತ್ತು.

ಈ ಪಂಚಾಯಿತಿಗಳು ತಮ್ಮ ಹಕ್ಕು ಬಾಧ್ಯತೆಗಳ ರಕ್ಷಣೆಯಲ್ಲಿ ಬಹಳ ಜಾಗರೂಕರಿದ್ದರು. ರಾಜನ ಅಪ್ಪಣೆಯಿಲ್ಲದೆ ಯಾವ ಸೈನಿಕನೂ ಗ್ರಾಮದೊಳಗೆ ಪ್ರವೇಶಮಾಡಬಾರದೆಂಬ ನಿಯಮವಿತ್ತು. ಅಧಿಕಾರಿಯೊಬ್ಬನ ಮೇಲೆ ಜನರು ದೂರು ತಂದರೆ "ರಾಜನು ಅಧಿಕಾರಿಯ ಪರ ವಹಿಸಬಾರದು, ತನ್ನ ಪ್ರಜೆಗಳ ಪರ ವಹಿಸಬೇಕು" ಎಂದು ನೀತಿಸಾರ ಹೇಳುತ್ತದೆ. ಅನೇಕರಿಂದ ದೂರು ಬಂದರೆ ಆ ಅಧಿಕಾರಿಯನ್ನು ಕೆಲಸದಿಂದ ನಿವೃತ್ತಿಮಾಡಬೇಕು. "ಅಧಿಕಾರ ಮದದಿಂದ ಉನ್ಮತ್ತನಾಗದವನು ಯಾರು"? ತನ್ನ ಪ್ರಜೆಗಳ ಬಹುಮತದ ಇಷ್ಟಕ್ಕನುಗುಣವಾಗಿ ದೊರೆಯು ನಡೆಯಬೇಕು. "ಅನೇಕ ಎಳೆಗಳ ಹಗ್ಗವು ಸಿಂಹವನ್ನಾದರೂ ಎಳೆದು ಕಟ್ಟುವಂತೆ ಸಾರ್ವಜನಿಕ ಅಭಿಪ್ರಾಯವು ರಾಜನಿಗಿಂತ ದೊಡ್ಡದು." "ಕೆಲಸಕ್ಕೆ ನೇಮಿಸುವುದರಲ್ಲಿ ಕಾರ್ಯದಕ್ಷತೆ, ನಡತೆ ಮತ್ತು ಬುದ್ಧಿಶಕ್ತಿಗೆ ಪ್ರಾಧಾನ್ಯ ಕೊಡಬೇಕು—ಜಾತಿ ಅಥವ ಮನೆತನಕ್ಕಲ್ಲ." "ಬಣ್ಣದಿಂದಲಾಗಲಿ, ವಂಶೀಕರಿಂದಲಾಗಲಿ ಬ್ರಾಹ್ಮಣನ ಗುಣ ಹುಟ್ಟುತ್ತೆಂಬುದು ಸುಳ್ಳು."

ದೊಡ್ಡ ದೊಡ್ಡ ನಗರಗಳಲ್ಲಿ ಕುಶಲಕರ್ಮಿಗಳು, ವರ್ತಕರು ಇರುತ್ತಿದ್ದರು. ಉದ್ಯೋಗ ಸಂಘಗಳು, ವಣಿಕ್‌ಸಂಘಗಳು, ಧನಕೋಠಿಗಳು ಇರುತ್ತಿದ್ದವು. ಈ ಸಂಘಗಳಿಗೆ ಸಂಪೂರ್ಣ ಆಡಳಿತ ಸ್ವಾತಂತ್ರ್ಯವಿತ್ತು.

ಈ ವಿಷಯವೆಲ್ಲ ಅಲ್ಲಲ್ಲಿ ಸ್ವಲ್ಪ ದೊರೆಯುತ್ತದೆ. ಆದರೆ ನೀತಿಸಾರ ಮತ್ತು ಇತರ ಆಧಾರಗಳಿಂದ ದೊರೆಯುವ ವಿಷಯಗಳಿಂದ ಆಗಿನ ಕಾಲದಲ್ಲಿ ಗ್ರಾಮಗಳಿಗೆ ಮತ್ತು ನಗರಗಳಿಗೆ ಪೂರ್ಣ ಆಡಳಿತ ಸ್ವಾತಂತ್ರ್ಯವಿತ್ತು; ಎಂದಿನವರೆಗೆ ತೆರಿಗೆಯು ಸರಿಯಾಗಿ ಸಲ್ಲುತ್ತಲಿತ್ತು ಅಲ್ಲಿನವರೆಗೆ ಕೇಂದ್ರ ಆಡಳಿತವು ಸ್ವಲ್ಪವೂ ಪ್ರವೇಶ ಮಾಡುತ್ತಿರಲಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಸನಾತನ ಧರ್ಮವು ಆಚರಣೆಯಲ್ಲಿತ್ತು. ಸಾಂಪ್ರದಾಯಿಕ ಹಕ್ಕುಬಾಧ್ಯತೆಗಳಿಗೆ ರಾಜಕೀಯ ಅಥವ ಸೈನಿಕ ಶಕ್ತಿ ಯಾವುದೂ ಅಡ್ಡ ಬರುತ್ತಿರಲಿಲ್ಲ. ಆರಂಭದಲ್ಲಿ ವ್ಯವಸಾಯವು ಸಹಕಾರ ಪದ್ಧತಿಯ ಮೇಲೆ ಅಥವ ಇಡೀ ಗ್ರಾಮದ ಒಟ್ಟನಿಂದ ನಡೆಯುತ್ತಿತ್ತು. ವ್ಯಕ್ತಿಗಳಿಗೆ, ಕುಟುಂಬಗಳಿಗೆ ಹಕ್ಕುಬಾಧ್ಯತೆಗಳೂ ಇದ್ದವು. ಕರ್ತವ್ಯಕರ್ಮವೂ ಇತ್ತು. ಇವೆರಡರ ನಿರ್ಧಾರವೂ ಮತ್ತು ರಕ್ಷಣೆ ಸಂಪ್ರದಾಯ ಬದ್ಧವಿದ್ದವು.

ಮತ ಪ್ರಾಧಾನ್ಯ ರಾಜತ್ವವು ಭಾರತದಲ್ಲಿ ಯಾವಾಗಲೂ ಇರಲಿಲ್ಲ. ರಾಜನು ನ್ಯಾಯಬಾಹಿರನಾದರೆ ಅಥವ ಕ್ರೂರಿಯಾದರೆ ದಂಗೆ ಏಳಲು ಪ್ರಜೆಗಳಿಗೆ ಅಧಿಕಾರವಿತ್ತು. ಚೀನೀ ದಾರ್ಶನಿಕ ಮೆನ್‌ಷಿಯಸ್ ಎರಡು ಸಾವಿರ ವರ್ಷಗಳ ಹಿಂದೆ ಹೇಳಿದ “ ರಾಜನು ಪ್ರಜೆಗಳನ್ನು ಕಡ್ಡಿ ಕಸದಂತೆ ಕಂಡರೆ ಪ್ರಜೆಗಳು ರಾಜನನ್ನು ದರೋಡೆಕಾರನೆಂದೂ ಶತ್ರುವೆಂದೂ ಕಾಣಬೇಕು ” ಎಂಬ ಮಾತು ಭಾರತಕ್ಕೆ ಅನ್ವಯಿಸುತ್ತದೆ. ಈ ಬಗೆಯ ರಾಜನ ಅಧಿಕಾರಕ್ಕೂಯೂರೋಪಿಯನ್ ಶ್ರೀಮಂತಿಕೆಯ ರಾಜತ್ವದ ಅಧಿಕಾರಭಾವನೆಗೂ ಬಹಳ ಅಂತರವಿದೆ. ಯೂರೋಪಿಯನರ ಭಾವನೆಯಲ್ಲಿ ರಾಜನಿಗೆ ತನ್ನ ರಾಜ್ಯದ ಎಲ್ಲ ವ್ಯಕ್ತಿಗಳ ಮತ್ತು ವಸ್ತುಗಳ ಮೇಲೆ ಪೂರ್ಣ ಸ್ವಾಮ್ಯವಿದ್ದು ಈ ಅಧಿಕಾರವನ್ನು ತನ್ನ ಮಾಂಡಲಿಕ ಶ್ರೀಮಂತರಿಗೆ, ಪಾಳೆಯಗಾರರಿಗೆ ವಹಿಸಿಕೊಡಲು ಅಧಿಕಾರವಿತ್ತು. ಈ ರೀತಿಯ ಒಂದು ಅಧಿಕಾರವರ್ಗವು ಬೆಳೆಯಿತು; ಆ ಪಾಳೆಯಪಟ್ಟಿಗೆ ಸೇರಿದ ಜನರು ಮತ್ತು ಆಸ್ತಿ ಎಲ್ಲವೂ ಆ ಶ್ರೀಮಂತ ಅಥವ ಪಾಳೆಯಗಾರನದಾಗಿತ್ತು, ಅವನ ಮೂಲಕ ದೊರೆಯದು. ಈ ಅಧಿಕಾರ ಭಾವನೆಯು ರೋಮನರಿಂದ ಬೆಳೆದು ಬಂದದ್ದು. ಭಾರತದ ರಾಜಾಧಿಕಾರಭಾವನೆಯೇ ಬೇರೆ. ದೊರೆಗೆ ಕೆಲವು ಭೂಕಂದಾಯ ತೆಗೆದುಕೊಳ್ಳುವ ಅಧಿಕಾರವು ಮಾತ್ರವಿತ್ತು. ಅಷ್ಟು ಅಧಿಕಾರವನ್ನು ಮಾತ್ರ ಆತನು ಬೇರೆಯವರಿಗೆ ವಹಿಸಬಹುದಾಗಿತ್ತು. ಭಾರತದ ರೈತನು ರಾಜನ ಗುಲಾಮನಾಗಿರಲಿಲ್ಲ. ಬೇಕಾದಷ್ಟು ಭೂಮಿ ಇತ್ತು. ರೈತನಿಂದ ಭೂಮಿಯನ್ನು ಕಿತ್ತುಕೊಳ್ಳುವುದರಿಂದ ಯಾವ ಉಪಯೋಗವೂ ಇರಲಿಲ್ಲ. ಆದ್ದರಿಂದ ಪಾಶ್ಚಿಮಾತ್ಯ ದೇಶಗಳಂತೆ ಭಾರತದಲ್ಲಿ ಜಮೀನುದಾರಿ ಪದ್ಧತಿಯೂ ಇರಲಿಲ್ಲ; ರೈತನಿಗೆ ಭೂಮಿಯ ಸ್ವಾಮ್ಯವೂ ಇರಲಿಲ್ಲ. ಬ್ರಿಟಿಷರ ಆಳ್ವಿಕೆಯಿಂದ ಬಂದ ಈ ಎರಡೂ ಭಾವನೆಗಳು ಭಾರತದಲ್ಲಿ ಅಪಾರ ಕೆಡುಕನ್ನು ಮಾಡಿದವು.

ಪರಕೀಯರ ಧಾಳಿಯಿಂದ ಯುದ್ಧ ಮತ್ತು ವಿನಾಶ ಕೃತ್ಯಗಳಾದವು, ದಂಗೆಗಳಾದವು. ಕ್ರೂರ ದಬ್ಬಾಳಿಕೆಗಳಾದವು. ಸೈನ್ಯ ಶಕ್ತಿಯನ್ನವಲಂಬಿಸಿದ ಹೊಸ ರಾಜಮನೆತನಗಳು ಹುಟ್ಟಿದವು. ದೇಶದಲ್ಲಿ ಆಚರಣೆಯಲ್ಲಿದ್ದ ಸಂಪ್ರದಾಯ ಶಾಸನವನ್ನು ಈ ರಾಜಮನೆತನಗಳು ಅಲಕ್ಷೆಮಾಡಿದರು. ಇದರಿಂದ ಅನೇಕ ಪರಿವರ್ತನೆಗಳಾಗಿ, ಪ್ರಜಾಸ್ವಾತಂತ್ರ್ಯಕ್ಕೆ ಧಕ್ಕೆ ಬಂದಿತು. ಕಟ್ಟಕಡೆಗೆ ಭೂಕಂದಾಯ ಪದ್ಧತಿಯಲ್ಲೂ ಕೆಲವು ಬದಲಾವಣೆಗಳಾದವು. ಆದರೂ ಆಫ್ಘನ್ ಮತ್ತು ಮೊಗಲ ರಾಜರುಗಳು ಪ್ರಾಚೀನಸಂಪ್ರದಾಯಗಳಿಗೆ ಮತ್ತು ಪದ್ಧತಿಗಳಿಗೆ ಅಡ್ಡ ಬರಲಿಲ್ಲ. ಯಾವ ಮುಖ್ಯ ವ್ಯತ್ಯಾಸವನ್ನೂ ಮಾಡಲಿಲ್ಲ. ಭಾರತೀಯ ಜನಜೀವನದ ಸಾಮಾನ್ಯ ಮತ್ತು ಆರ್ಥಿಕರಚನೆಯು ಅಚ್ಚಳಿಯದೆ ಉಳಿಯಿತು. ಸನಾತನ ಧರ್ಮವನ್ನು ಕಾಪಾಡಿಕೊಂಡು ಬರಬೇಕೆಂದೂ, ರಾಜಕಾರ್ಯವನ್ನು ಧರ್ಮದಿಂದ ದೂರವಿಡಬೇಕೆಂದೂ, ಧರ್ಮವು ವೃತ್ತಿಗೆ ಸಂಬಂಧಿಸಿದ್ದೆಂದೂ ಘಿಯಾಸುದ್ದೀನ್ ತಗ್ಲಖ್ ತನ್ನ ಅಧಿಕಾರಿಗಳಿಗೆ ನಿರೂಪಕೊಟ್ಟನು. ಆದರೆ ಕಾಲಪರಿವರ್ತನೆ, ಸಂಘರ್ಷಣೆಗಳು ಮತ್ತು ಕೇಂದ್ರ ಅಧಿಕಾರವ್ಯಾಪ್ತಿಯ ಹೆಚ್ಚಳದಿಂದ ಸಂಪ್ರದಾಯನಿಯಮಕ್ಕೆ ಮನ್ನಣೆಯು ಕಡಮೆಯಾಯಿತು. ಗ್ರಾಮಾಡಳಿತದ ಸ್ವಾತಂತ್ರ್ಯವು ಮಾತ್ರ ಉಳಿಯಿತು. ಬ್ರಿಟಿಷರ ಆಳ್ವಿಕೆಯಲ್ಲಿ ಅದಕ್ಕೂ ಸಂಚಕಾರವು ಬಂದಿತು.

## ೮. ಜಾತಿಯ ಧರ್ಮ ಮತ್ತು ಆಚರಣೆ: ಒಟ್ಟು ಕುಟುಂಬ

" ಭಾರತೀಯರಲ್ಲಿ ಧರ್ಮವು ಕೇವಲ ಒಂದು ತತ್ತ್ವವಲ್ಲ. ವಿವಿಧ ಜೀವನ ಮಟ್ಟಕ್ಕೆ ವಿವಿಧ ಧಾರ್ಮಿಕ ಮನೋಭಾವನೆಗೆ ಅನುಗುಣವಾಗಿ ರಚಿಸಿದ ಜನಜೀವನದ ರೀತಿಯ ಒಂದು ಮಾರ್ಗ ಸೂಚಿ " ಎಂದು ಹ್ಯಾವೆಲ್ ಹೇಳುತ್ತಾನೆ. ಅತಿ ಪ್ರಾಚೀನ ಕಾಲದಲ್ಲಿ ಹಿಂದೂ ಆರ್ಯ ಸಂಸ್ಕೃತಿಯು ರೂಪುಗೊಂಡಾಗ ನಾಗರಿಕತೆಯಲ್ಲಿ ಬುದ್ಧಿವಿಕಸನದಲ್ಲಿ ಧಾರ್ಮಿಕ ಉನ್ನತಿಯಲ್ಲಿ ಎಷ್ಟು ಭಿನ್ನತೆಯನ್ನು ಊಹಿಸಬಹುದೊ ಅಷ್ಟೂ ಭಿನ್ನವಿದ್ದ ಜನರ ಅವಶ್ಯಕತೆಗೆ ಒಂದು ಧರ್ಮವನ್ನು ರಚಿಸಬೇಕಾಗಿತ್ತು. ಕಾಡು ಜನರಿದ್ದರು, ವಸ್ತುಪೂಜಕರಿದ್ದರು, ಕುಲದೇವತೆಯ ಆರಾಧಕರಿದ್ದರು ; ಎಲ್ಲ ಬಗೆಯ ಮೂಢ ನಂಬಿಕೆಯ ಜನರೂ ಇದ್ದರು ; ಆತ್ಮಜ್ಞಾನದಲ್ಲಿ ಅತ್ಯುನ್ನತ ಮಟ್ಟವನ್ನೇರಿದ ಮಹಾನುಭಾವಿಗಳೂ ಇದ್ದರು. ಈ ಅಂತರದ ಮಧ್ಯೆ ಎಲ್ಲ ಬಗೆಯ ಮತಾಚಾರಗಳೂ ಇದ್ದವು. ಕೆಲವರು ಶ್ರೇಷ್ಠಜ್ಞಾನ ಜಿಜ್ಞಾಸುಗಳಾಗಿದ್ದರೂ ಅನೇಕರಿಗೆ ಅದು ಸಾಧ್ಯವಿರಲಿಲ್ಲ. ಸಮಾಜ ಜೀವನವು ಬೆಳೆದಂತೆ ಮತಾಚರಣೆಯಲ್ಲಿ ಒಂದು ಬಗೆಯ ಸ್ತಿಮಿತ ಸ್ಥಿತಿಯು ಬಂದಿತಾದರೂ ಸಾಂಸ್ಕೃತಿಕ ಮಾನಸಿಕ ವ್ಯತ್ಯಾಸಗಳು ಅನೇಕ ಉಳಿದವು. ಯಾವ ಮತವನ್ನೂ ಬಲಾತ್ಕಾರದಿಂದ ತುಳಿಯಬಾರದು, ನಾಶಮಾಡಬಾರದು, ಎಂಬುದು ಹಿಂದೂ ಆರ್ಯ ಧರ್ಮದ ನೀತಿ. ಪ್ರತಿಯೊಂದು ಪಂಗಡಕ್ಕೂ, ತನ್ನ ಮಾನಸಿಕ ಬೆಳವಣಿಗೆ ಮತ್ತು ಶಕ್ತಿಯ ಮಟ್ಟಕ್ಕನುಗುಣವಾಗಿ ತನ್ನ ಆದರ್ಶವನ್ನು ಸಾಧಿಸಿಕೊಳ್ಳಲು ಪೂರ್ಣ ಸ್ವಾತಂತ್ರ್ಯವಿತ್ತು. ಸಮನ್ವಯದ ಪ್ರಯತ್ನ ಎಷ್ಟೋ ನಡೆದರೂ ತಿರಸ್ಕಾರ ಬುದ್ಧಿಯಾಗಲಿ, ತುಳಿಯುವ ಬುದ್ಧಿಯಾಗಲಿ ಇರಲಿಲ್ಲ.

ಸಮಾಜರಚನೆಯಲ್ಲೂ ಇದೇ ಬಗೆಯ ಇನ್ನೂ ಕಠಿಣ ಸಮಸ್ಯೆಯು ಎದ್ದಿತು. ಪ್ರತಿಯೊಂದು ಪಂಗಡಕ್ಕೂ ತನ್ನ ಜೀವನವನ್ನು ಉಳಿಸಿಕೊಂಡು ಬೆಳೆಸಿಕೊಂಡು ಬರಲು ಸ್ವಾತಂತ್ರ್ಯ ಕೊಟ್ಟರೂ ಪ್ರತಿಯೊಂದು ಪಂಗಡವೂ ಇತರ ಎಲ್ಲ ಪಂಗಡಗಳೊಂದಿಗೆ ಒಂದು ಸಂಸ್ಪೃಷ್ಟ ಜೀವನ ನಡೆಸುವಂತೆ ಈ ಭಿನ್ನ ಭಿನ್ನ ಪಂಗಡಗಳನ್ನು ಒಂದು ಸಮಾಜವಾಗಿ ಹೆಣೆಯುವುದು ಹೇಗೆಂಬುದು ಮುಖ್ಯ ಸಮಸ್ಯೆಯಾಯಿತು. ಅಷ್ಟು ಸಮಂಜಸವಲ್ಲದಿದ್ದರೂ ಅನೇಕ ದೇಶಗಳಲ್ಲಿ ಈಗ ತಲೆದೋರಿರುವ ಅಲ್ಪಸಂಖ್ಯಾತರ ಪ್ರಶ್ನೆಗೆ ಈ ಸಮಸ್ಯೆಯನ್ನು ಹೋಲಿಸಬಹುದು. ಪ್ರತಿಯೊಬ್ಬ ರಾಷ್ಟ್ರಕನನ್ನೂ ಹದಿನಾರಾಣೆ 'ಅಮೆರಿಕನ್' ಮಾಡುವ ಮೂಲಕ ಅಮೆರಿಕ ತನ್ನ ಸಮಸ್ಯೆ ಬಗೆಹರಿಸಲು ಯತ್ನಮಾಡಿದೆ. ಎಲ್ಲರಿಗೂ ಒಂದು ಮಾದರಿಯನ್ನು ತೋರಿಸಿದ್ದಾರೆ. ಪ್ರಾಚೀನವೂ ಜಟಿಲವೂ ಆದ ಇತಿಹಾಸ ಪರಂಪರೆಯುಳ್ಳ ಇತರ ದೇಶಗಳಿಗೆ ಈ ಸಮಸ್ಯಾಪರಿಹಾರವು ಅಷ್ಟು ಸುಲಭವಲ್ಲ. ಕೆನಡದಲ್ಲಿ ಸಹ ತಮ್ಮ ಧರ್ಮ ಮತ್ತು ಭಾಷೆಯ ರಕ್ಷಣೆಯಲ್ಲಿ ಉಜ್ವಲ ಅಭಿಮಾನಿಗಳಾದ ಫ್ರೆಂಚರು ಇದಾರೆ. ಯೂರೋಪಿನಲ್ಲಿ ಈ ಅಂತರದ ಮಟ್ಟವು ಉನ್ನತವೂ ಇದೆ, ಆಳವೂ ಇದೆ. ಆದರೂ ಅದೆಲ್ಲ ಒಂದೇ ಸಂಸ್ಕೃತಿ, ಮತ್ತು ಒಂದೇ ಹಿನ್ನೆಲೆಯುಳ್ಳ ಯೂರೋಪಿಯನರಲ್ಲಿ ಮಾತ್ರ. ಯೂರೋಪಿಯನರಲ್ಲದವರು ಬಂದೊಡನೆ ಅವರಿಗೆ ಈ ಯೂರೋಪಿನ ಆಯಕಟ್ಟಿನಲ್ಲಿ ಸ್ಥಾನವಿಲ್ಲ. ಅಮೆರಿಕೆಯ ಸಂಯುಕ್ತ ಸಂಸ್ಥಾನಗಳಲ್ಲಿ ನೀಗ್ರೋಗಳು ಹದಿನಾರಾಣೆ ಅಮೆರಿಕನರಾದರೂ ಅವರ ಜನವೇ ಬೇರೆ. ಇತರರಿಗೆ ಸಾಮಾನ್ಯವಾಗಿ ದೊರಕುವ ಅನೇಕ ಸೌಲಭ್ಯಗಳೂ ಅವಕಾಶಗಳೂ ಅವರಿಗೆ ನಿಷೇಧ. ಇತರ ಕಡೆಗಳ ಉದಾಹರಣೆ ಇನ್ನೂ ಹೊಲಸು. ಸೋವಿಯಟ್ ರಷ್ಯ ಮಾತ್ರ ಬಹು ಜನಾಂಗ ರಾಜ್ಯವನ್ನು ಕಟ್ಟಿ ತನ್ನ ಅಲ್ಪ ಸಂಖ್ಯಾತರ ಮತ್ತು ಜನಾಂಗಗಳ ಪ್ರಶ್ನೆಯನ್ನು ಬಿಡಿಸಿರುವಂತೆ ತೋರುತ್ತದೆ.

ಇಷ್ಟು ಅನುಭವ, ಪ್ರಗತಿ ನಮಗಿದ್ದರೂ ಈ ಸಮಸ್ಯೆಗಳು ಈಗಲೂ ನಮ್ಮ ತಲೆಕೆಡಿಸುತ್ತಿರುವಾಗ ಭಿನ್ನ ಬಗೆಯ ಭಿನ್ನ ಜೀವನದ ಅನೇಕ ಪಂಗಡಗಳ ಜನರನ್ನು ಒಂದು ನಾಗರಿಕತೆಯ, ಒಂದು ಸಮಾಜದ ಎಲ್ಲೆಕಟ್ಟಿನೊಳಗೆ ತರುವ ಪ್ರಯತ್ನದಲ್ಲಿ ಪ್ರಾಚೀನ ಕಾಲದ ಹಿಂದೂ ಆರ್ಯರಿಗೆ ಆಗ ಎಷ್ಟು ಕಷ್ಟವಾಗಿರಬೇಕು ? ಸಾಮಾನ್ಯವಾಗಿ ಇಂತಹ ಸಮಸ್ಯೆಗಳನ್ನು ಬಿಡಿಸುವ ಬಗೆ ಎಂದರೆ ಆಗ ಮತ್ತು

ಈಗಲೂ ಸಹ ಗೆದ್ದ ಜನರನ್ನು ನಿರ್ನಾಮ ಮಾಡುವುದು ಅಥವ ಗುಲಾಮಗಿರಿಗೆ ತಳ್ಳುವುದು. ಆರ್ಯರು ಈ ಮಾರ್ಗವನ್ನು ಅನುಸರಿಸಲಿಲ್ಲ; ಆದರೆ ಉಚ್ಚವರ್ಗದ ಉನ್ನತ ಮಟ್ಟವನ್ನು ಕಾಪಾಡಿಕೊಂಡು ಬರಲು ಎಲ್ಲ ಬಗೆಯ ಎಚ್ಚರಿಕೆಯನ್ನೂ ತೆಗೆದುಕೊಂಡು, ಅಷ್ಟು ಹೆಚ್ಚಳವನ್ನು ಮಾತ್ರ ಕಾಪಾಡಿಕೊಂಡು, ಸಾಮಾನ್ಯ ನಿಯಮಗಳ ಅನುಸಾರವಾಗಿ ಒಂದು ಆಯಕಟ್ಟಿನ ಒಳಗೆ ಪ್ರತಿಯೊಂದು ಪಂಗಡವೂ ತನ್ನ ಉದ್ಯಮವನ್ನು ಸಾಗಿಸುತ್ತ, ತನ್ನ ಅಭಿಲಾಷೆ ಮತ್ತು ಪದ್ಧತಿಗಳಿಗನುಸಾರವಾಗಿ ಜೀವನ ನಡೆಸಲು ಅನುಕೂಲವಾಗುವಂತೆ ಬಹು ಪಂಗಡದ ಸಮಾಜ ಒಂದನ್ನು ನಿರ್ಮಿಸಲಾಯಿತು. ಇನ್ನೊಂದು ಪಂಗಡವನ್ನು ದ್ವೇಷಿಸಬಾರದು. ಅದರ ಆಡಳಿತದೊಳಗೆ ಪ್ರವೇಶ ಮಾಡಬಾರದು ಎಂಬುದೊಂದೇ ನಿಜವಾದ ನಿಷೇಧವಿತ್ತು. ಹೊಸಬರು ತಮ್ಮದೇ ಪಂಗಡಗಳನ್ನು ಕಟ್ಟುವದಕ್ಕೂ, ಹಳೆಯ ಪಂಗಡಗಳಲ್ಲಿ ಅಸಮಾಧಾನಗೊಂಡವರು ತಮ್ಮದೇ ಒಂದು ಪಂಗಡವನ್ನು ನಿರ್ಮಿಸಿಕೊಳ್ಳುವದಕ್ಕೂ ಸ್ವಾತಂತ್ರ್ಯವಿತ್ತು. ಪ್ರತಿಯೊಂದು ಗುಂಪಿನಲ್ಲೂ ವೈಯಕ್ತಿಕ ಸ್ವಾತಂತ್ರ್ಯ ಮತ್ತು ಪ್ರಜಾಸತ್ತೆ ಇತ್ತು. ಗುಂಪಿನ ಯಾಜಮಾನ್ಯವು ಚುನಾವಣೆಯಿಂದ ದೊರೆಯುತ್ತಿತ್ತು. ಮುಖ್ಯ ವಿಷಯಗಳಲ್ಲಿ ಯಜಮಾನರು ಇಡೀ ಗುಂಪಿನ ಅಭಿಪ್ರಾಯ ಪಡೆದು ತೀರ್ಮಾನಕ್ಕೆ ಬರುತ್ತಿದ್ದರು.

ಈ ಪಂಗಡಗಳೆಲ್ಲವೂ ಯಾವುದಾದರೊಂದು ವ್ಯಾಪಾರ ಅಥವ ಉದ್ಯಮವನ್ನು ಅವಲಂಬಿಸಿ ನಿರ್ಮಿಸಿದ ಪಂಗಡಗಳು. ಒಂದು ಬಗೆಯ ವಣಿಕಸಂಘ ಅಥವ ಉದ್ಯೋಗ ಸಂಘಗಳು. ಪ್ರತಿಯೊಂದು ಸಂಘದಲ್ಲೂ ಒಗ್ಗಟ್ಟು ಇದ್ದುದಲ್ಲದೆ ತನ್ನ ಸದಸ್ಯರಲ್ಲಿ ಯಾರಾದರೂ ಕಷ್ಟಕ್ಕೀಡಾದರೆ ಆತನಿಗೆ ರಕ್ಷಣೆ ಕೊಟ್ಟು ಸಹಾಯ ಮಾಡುತ್ತಿದ್ದವು. ಒಂದೊಂದು ಪಂಗಡಕ್ಕೂ ಇತರ ಪಂಗಡಗಳ ನಿಕಟಬಾಂಧವ್ಯವಿತ್ತು. ಪ್ರತಿಯೊಂದು ಪಂಗಡವೂ ತನ್ನ ಆಯಕಟ್ಟಿನೊಳಗೆ ಅಭಿವೃದ್ಧಿಯಾದರೆ ಇಡೀ ಸಮಾಜವೇ ಸಂತುಷ್ಟಿಯಿಂದ ಸಮಗ್ರವಾಗಿ ಮುಂದುವರಿಯುವುದೆಂದೇ ಮೂಲತತ್ವವಾಗಿತ್ತು. ಇದಲ್ಲದೆ ಈ ಎಲ್ಲ ಗುಂಪುಗಳಲ್ಲಿ ಒಂದು ದೃಢವಾದ ಐಕಮತ್ಯವನ್ನುಂಟುಮಾಡಲು ಒಂದೇ ಸಂಸ್ಕೃತಿ, ಒಂದೇ ಬಗೆಯ ಸಂಪ್ರದಾಯಗಳು; ಅದೇ ರಾಷ್ಟ್ರಪುರುಷರು ಮತ್ತು ಆಚಾರ್ಯಪುರುಷರು. ನಾಲ್ಕು ದಿಕ್ಕುಗಳಲ್ಲೂ ಯಾತ್ರಾಸ್ಥಳಗಳು. ಈ ರೀತಿ ರಾಷ್ಟ್ರೀಯ ಸಂಸ್ಥೆಗಳನ್ನು ಏರ್ಪಡಿಸಿ ಒಂದೇ ದೇಶದವರೆಂಬ ರಾಷ್ಟ್ರಭಾವನೆಯನ್ನು ಬೆಳೆಸಿದರು. ಈ ರಾಷ್ಟ್ರಭಾವನೆಗೂ ಇಂದಿನ ರಾಷ್ಟ್ರೀಯಭಾವನೆಗೂ ಬಹಳ ಅಂತರವಿದೆ. ರಾಜಕೀಯದೃಷ್ಟಿಯಿಂದ ದುರ್ಬಲವಿದ್ದರೂ ಸಾಮಾಜಿಕ ದೃಷ್ಟಿಯಿಂದ, ಸಂಸ್ಕೃತಿಯ ದೃಷ್ಟಿಯಿಂದ ಅದು ಬಹಳ ಬಲವಾಗಿತ್ತು. ಅದರ ರಾಜಕೀಯ ದೌರ್ಬಲ್ಯದಿಂದ ದೇಶವು ತನ್ನ ಸ್ವಾತಂತ್ರ್ಯವನ್ನು ಕಳೆದುಕೊಂಡಿತು. ಸಾಮಾಜಿಕಶಕ್ತಿಯಿಂದ ಪರಕೀಯರನ್ನೂ ಜೀರ್ಣಮಾಡಿಕೊಂಡು ಸುಲಭವಾಗಿ ಪುನರುಜ್ಜೀವನಗೊಂಡಿತು; ಅನಂತಮುಖಿಯಾದ್ದರಿಂದ ಪರದಾಸ್ಯವನ್ನೂ ಸಂಕಟವನ್ನೂ ನುಂಗಿಕೊಂಡು ಅಮರವಾಗಿ ಉಳಿಯಿತು.

ಈ ರೀತಿ ಜಾತಿಯು ಕರ್ತವ್ಯಕರ್ಮ ಮತ್ತು ಉದ್ಯೋಗವನ್ನವಲಂಬಿಸಿ ಹುಟ್ಟಿದುದು. ಯಾವ ಒಂದು ಬಂಧನವೂ ಇಲ್ಲದೆ, ಎಲ್ಲ ಪಂಗಡಗಳಿಗೂ ಪೂರ್ಣವಿಕಾಸ ಸ್ವಾತಂತ್ರ್ಯವನ್ನು ಕೊಟ್ಟು ಎಲ್ಲವನ್ನೂ ಒಳಗೊಂಡ ಒಂದು ಸಮಷ್ಟಿಸಮಾಜವಾಗಿತ್ತು. ಅದರಲ್ಲಿ ಏಕಪತ್ನೀತ್ವ, ಬಹುಪತ್ನೀತ್ವ ಮತ್ತು ಬ್ರಹ್ಮಚರ್ಯ ಎಲ್ಲವೂ ಇದ್ದವು. ಇತರ ಸಂಪ್ರದಾಯ, ಆಚಾರ ಮತ್ತು ವ್ಯವಹಾರಗಳಿಗೆ ಮನ್ನಣೆಕೊಟ್ಟಂತೆ ಅವುಗಳಿಗೂ ಅವಕಾಶ ದೊರೆತಿತ್ತು. ಯಾವ ಅಲ್ಪಸಂಖ್ಯಾಕ ಪಂಗಡವೂ ಬಹುಸಂಖ್ಯಾಕರ ಅಡಿಯಾಳುತನಮಾಡಬೇಕಾದ್ದಿರಲಿಲ್ಲ. ತನ್ನದೇ ಒಂದು ಗುಂಪನ್ನು ಮಾಡಿಕೊಳ್ಳುವಷ್ಟು ಸಂಖ್ಯೆಯಿದ್ದರೆ ತನ್ನದೇ ಪ್ರತ್ಯೇಕ ವೈಶಿಷ್ಟ್ಯಜೀವನವನ್ನು ನಡೆಸಲು ಅವಕಾಶವಿತ್ತು. ಒಂದೊಂದು ಪಂಗಡಕ್ಕೂ ಮಧ್ಯೆ ಜನಾಂಗ, ಧರ್ಮ, ವರ್ಣ, ಸಂಸ್ಕೃತಿ ಮತ್ತು ಬೌದ್ಧಿಕ ವ್ಯತ್ಯಾಸಗಳು ಎಷ್ಟು ಬೇಕಾದರೂ ಇರಲು ಅವಕಾಶವಿತ್ತು.

ಪ್ರತಿಯೊಬ್ಬ ವ್ಯಕ್ತಿಗೂ ಒಂದು ಪಂಗಡವಿತ್ತು. ಆ ಪಂಗಡದ ಕೆಲಸ ಕಾರ್ಯಗಳಿಗೆ ಅಡ್ಡಿಯಾಗದಂತೆ ತಾನು ಏನುಬೇಕಾದರೂ ಮಾಡಲು ಸ್ವಾತಂತ್ರ್ಯವಿತ್ತು. ಆದರೆ ಆ ಗುಂಪನ್ನು ಒಡೆ

ಯಲು ಆತನಿಗೆ ಅಧಿಕಾರವಿರಲಿಲ್ಲ; ತಕ್ಕಷ್ಟು ಹಿಂಬಾಲಕರಿದ್ದರೆ ತನ್ನದೇ ಒಂದು ಪ್ರತ್ಯೇಕ ಪಂಗಡ ಕಟ್ಟಿ ಜೀವಿಸಲು ಅವಕಾಶವಿತ್ತು. ಆದರೆ ಯಾವ ಗುಂಪಿನೊಳಗೂ ಹೊಂದಿಕೊಳ್ಳದಿದ್ದರೆ ಪ್ರಾಪಂಚಿಕ ವ್ಯವಹಾರದಿಂದ ದೂರನಾಗುತ್ತಿದ್ದನು. ಆಗ ಜಾತಿ, ಪಂಗಡ ಮತ್ತು ಪ್ರಪಂಚದಿಂದ ದೂರನಾಗಿ 'ಸಂನ್ಯಾಸಿ' ಯಾಗಿ ದೇಶಾಟನೆಮಾಡಿ ಹೇಗಾದರೂ ಜೀವಿಸಬಹುದಿತ್ತು.

ಭಾರತೀಯ ಸಮಾಜದೃಷ್ಟಿಯಲ್ಲಿ ವ್ಯಕ್ತಿಯು ಪಂಗಡದ ಅಥವ ಸಮಾಜದ ಅಧೀನನಾದರೂ ಧರ್ಮಾನ್ವೇಷಣೆಯಲ್ಲಿ, ಆತ್ಮಜ್ಞಾನದಲ್ಲಿ, ವ್ಯಕ್ತಿಗೇ ಪ್ರಾಧಾನ್ಯವಿತ್ತೆಂಬುದನ್ನು ಮರೆಯಲಾಗದು. ಉಚ್ಚನಿರಲಿ, ನೀಚನಿರಲಿ ಯಾವ ಜಾತಿಯವನೇ ಇರಲಿ, ಪ್ರತಿಯೊಬ್ಬ ವ್ಯಕ್ತಿಗೂ ಮುಕ್ತಿ ಮತ್ತು ಸತ್ಯಾನ್ವೇಷಣೆಯಲ್ಲಿ ಸಮಾನ ಅವಕಾಶವಿತ್ತು. ಮುಕ್ತಿ ಮತ್ತು ಆತ್ಮಾನ್ವೇಷಣೆ ಯಾವ ಒಂದು ಪಂಗಡದ ಸ್ವತ್ತೂ ಆಗಿರಲಿಲ್ಲ; ಅದು ಕೇವಲ ವೈಯಕ್ತಿಕವಿತ್ತು. ಈ ಅನ್ವೇಷಣೆಯು ಮಾರ್ಗ ದಲ್ಲಿಯೂ ಯಾವ ನಿಯತಮಾರ್ಗವೂ ಇರಲಿಲ್ಲ. ಎಲ್ಲ ಮಾರ್ಗಗಳೂ ಒಂದೇ ಗುರಿಯ ಸಾಧನೆಗೆ ಎಂಬ ಭಾವನೆ ಇತ್ತು.

ಸಮಾಜರಚನೆಯಲ್ಲಿ ಪಂಗಡದ ಪ್ರಾಮುಖ್ಯತೆ ಇದ್ದು ಜಾತಿ ಮತಗಳಿಗೆ ಅವಕಾಶಕೊಟ್ಟರೂ ಭಾರತದಲ್ಲಿ ವ್ಯಕ್ತಿಪ್ರಾಧಾನ್ಯತೆ ಯಾವಾಗಲೂ ಇದೆ. ಎರಡು ಮಾರ್ಗಗಳ ಘರ್ಷಣೆಯನ್ನು ಅನೇಕ ಸಂದರ್ಭಗಳಲ್ಲಿ ನೋಡಬಹುದು. ವ್ಯಕ್ತಿಪ್ರಾಧಾನ್ಯತೆಗೆ ಅವಕಾಶಕೊಟ್ಟ ಧಾರ್ಮಿಕ ತತ್ವವೇ ಆ ವ್ಯಕ್ತಿವಾದಕ್ಕೆ ಬಹುಮಟ್ಟಿಗೆ ಕಾರಣವಾಯಿತು. ಜಾತಿಪದ್ಧತಿಯನ್ನು ಖಂಡಿಸಿ ದೂಷಿಸಿದ ಸಮಾಜ ಸುಧಾರಕರೆಲ್ಲ ಸಾಮಾನ್ಯವಾಗಿ ಧರ್ಮಸುಧಾರಕರು. ಧರ್ಮವು ಸಾರುವ ಆತ್ಮೋನ್ನತಿ ಮತ್ತು ವ್ಯಕ್ತಿ ವಿಕಾಸಕ್ಕೆ ಜಾತಿಪದ್ಧತಿಗಳು ಅಡ್ಡಬರುತ್ತವೆ ಎಂದೇ ಅವರ ವಾದ. ಜಾತಿಪದ್ಧತಿಯನ್ನು ನಿರ್ಮೂಲ ಮಾಡಿ ಒಂದು ಬಗೆಯ ವ್ಯಕ್ತಿವಿಕಾಸ ಮತ್ತು ವಿಶ್ವಧರ್ಮವನ್ನು ಬೋಧಿಸಲೆಂದೇ ಬೌದ್ಧಧರ್ಮವು ಹುಟ್ಟಿತು. ಆದರೆ ಈ ವ್ಯಕ್ತಿವಾದವು ಸಾಮಾನ್ಯ ಸಾಮಾಜಿಕ ವ್ಯವಹಾರದಿಂದ ದೂರವಾಯಿತು. ಜಾತಿಪದ್ಧತಿಗೆ ಪ್ರತಿಯಾಗಿ ಬೇರೊಂದು ಸಮಾಜರಚನೆಯನ್ನು ತೋರಿಸಲಿಲ್ಲ. ಆದ್ದರಿಂದ ಆಗಲೂ ಅನಂತರವೂ ಜಾತಿಪದ್ಧತಿಯು ಅಳಿಯದೆ ಉಳಿಯಿತು.

ಮುಖ್ಯ ಜಾತಿಗಳು ಯಾವುವು? ಜಾತಿಬಾಹಿರರಾದ ಅಸ್ಪೃಶ್ಯರನ್ನು ಬಿಟ್ಟರೆ ಆಚಾರ್ಯರೂ ಗುರುಗಳೂ ಜ್ಞಾನಿಗಳೂ ಆದವರು ಬ್ರಾಹ್ಮಣರು, ಅರಸರು ಯೋಧರು ಆದವರು ಕ್ಷತ್ರಿಯರು, ವಣಿಕರು, ವ್ಯಾಪಾರಿಗಳು, ಧನಿಕರು ಆದವರು ವೈಶ್ಯರು, ವ್ಯವಸಾಯಗಾರರು ಮತ್ತು ಇತರ ಕಸಬಿ ನವರು ಶೂದ್ರರು. ಪರಸಂಪರ್ಕವಿಲ್ಲದೆ ಶಿಷ್ಟಾಚಾರಬದ್ಧರಾದವರೆಂದರೆ ಬ್ರಾಹ್ಮಣರು ಮಾತ್ರ. ಕ್ಷತ್ರಿಯರು ವಿದೇಶದಿಂದ ಬಂದು ನೆಲಸುವವರನ್ನೂ, ಸ್ವಸಾಮರ್ಥ್ಯದಿಂದ ಅಧಿಕಾರಕ್ಕೆ ಬಂದವರನ್ನೂ ತಮ್ಮ ಗುಂಪಿಗೆ ಸೇರಿಸಿಕೊಳ್ಳುತ್ತಿದ್ದರು. ವೈಶ್ಯರು ವ್ಯಾಪಾರ, ಧನಕೋಶಿಗಳ ವ್ಯವಹಾರ ಮತ್ತು ಇನ್ನೂ ಇತರ ವೃತ್ತಿಗಳನ್ನು ಕೈಗೊಳ್ಳುತ್ತಿದ್ದರು. ಶೂದ್ರರ ಮುಖ್ಯ ಕಸಬು ವ್ಯವಸಾಯ ಮತ್ತು ಮನೆಯಾಳುತನ. ಹೊಸವೃತ್ತಿಗಳು ಬೆಳೆದಂತೆ ಹೊಸ ಜಾತಿಗಳೂ ಬೆಳೆದವು. ಹಳೆಯ ಜಾತಿಗಳು ಹೊಸ ಜಾತಿಗಳಿಗಿಂತ ಶ್ರೇಷ್ಠತೆ ಪಡೆದವು. ಈ ಪರಂಪರೆ ಈಗಲೂ ನಡೆದುಬರುತ್ತಿದೆ. ಜನಿವಾರ ವನ್ನು ಹಾಕಿಕೊಂಡರೆ ಉತ್ತಮರಾಗುತ್ತೇವೆಂದು ಕೆಳಗಿನ ಜಾತಿಗಳವರು ಕೆಲವರು ಜನಿವಾರ ಹಾಕಲು ಆರಂಭಿಸಿದ್ದಾರೆ. ಆದರೆ ಪ್ರತಿಯೊಂದು ಜಾತಿಯೂ ತನ್ನ ಆಯಕಟ್ಟಿನಲ್ಲಿ ತನ್ನ ಕಸಬನ್ನು ನಿರ್ವಹಿಸುತ್ತ ಬಂದುದರಿಂದ ಇದಾವುದೂ ಹೆಚ್ಚು ಪರಿಣಾಮಕಾರಿಯಾಗಲಿಲ್ಲ. ಆತ್ಮಗೌರವದ ಪ್ರಶ್ನೆಮಾತ್ರವಾಯಿತು. ಕೆಲವು ವೇಳೆ ಕೆಳಜಾತಿಯವರು ಕೇವಲ ತಮ್ಮ ಸ್ವಸಾಮರ್ಥ್ಯದಿಂದ ರಾಜ್ಯದ ಉನ್ನತಪದವಿಗೇರಿ ಅಧಿಕಾರ ನಡೆಸುತ್ತಿದ್ದರು. ಆದರೆ ಆ ಸಂಧರ್ಭಗಳು ಬಹಳ ವಿರಳ.

ಸಮಾಜರಚನೆಯಲ್ಲಿ ಸಾಮಾನ್ಯವಾಗಿ ಪೈಪೋಟಿ ಮತ್ತು ಸಂಪಾದನೆ ಇಲ್ಲದೆ ಇದ್ದುದರಿಂದ ಈ ಜಾತಿಭೇದಗಳಿಂದ ಹೆಚ್ಚು ಕೆಡುಕಾಗಲಿಲ್ಲ. ತನ್ನ ಜ್ಞಾನಸಂಪತ್ತು ಮತ್ತು ಬುದ್ಧಿಶಕ್ತಿಗಾಗಿ ಹೆಮ್ಮೆಪಡುತ್ತಿದ್ದ ಉತ್ತಮಜಾತಿಯ ಬ್ರಾಹ್ಮಣನಿಗೆ ಸಮಾಜದಲ್ಲಿ ಗೌರವವಿದ್ದರೂ ಆತನಿಗೆ ಯಾವ

ಆಸ್ತಿಯೂ ಇರಲಿಲ್ಲ. ಆದರೆ ವರ್ತಕನು ಧನಿಕನೂ ಶ್ರೀಮಂತನೂ ಇದ್ದರೂ ಆತನಿಗೆ ಸಮಾಜದಲ್ಲಿ ವಿಶೇಷ ಗೌರವವೂ ಇರಲಿಲ್ಲ.

ಜನತೆಯಲ್ಲಿ ಬಹುಸಂಖ್ಯಾಕರು ವ್ಯವಸಾಯಗಾರರಾಗಿದ್ದರು. ಜಮೀನುದಾರಿಯೂ ಇರಲಿಲ್ಲ. ರೈತನು ಹೊಲದ ಮಾಲಿಕನೂ ಆಗಿರಲಿಲ್ಲ. ಶಾಸನವಿಧಿಯಂತೆ ಭೂಮಿಯ ಒಡೆತನ ಯಾರದೆಂದು ಹೇಳುವುದು ಕಷ್ಟ. ಈಗಿನ ಭೂಮಿಯ ಒಡೆತನದ ಭಾವನೆ ಆಗ ಇರಲಿಲ್ಲ. ವ್ಯವಸಾಯಗಾರನಿಗೆ ತನ್ನ ಭೂಮಿಯಲ್ಲಿ ಬೆಳೆ ತೆಗೆಯಲು ಅಧಿಕಾರವಿತ್ತು. ಬೆಳೆಯನ್ನು ಹೇಗೆ ಹಂಚಬೇಕೆಂಬುದೇ ಮುಖ್ಯಪ್ರಶ್ನೆಯಾಗಿತ್ತು. ಬಹುಭಾಗ ರೈತನದಾಗಿತ್ತು. ದೊರೆಗೆ ಅಥವ ರಾಜ್ಯಕ್ಕೆ $\frac{1}{6}$ನೆ ಭಾಗ ಸೇರುತ್ತಿತ್ತು. ಗ್ರಾಮದ ಸೇವೆ ಮಾಡುತ್ತಿದ್ದ ಪ್ರತಿಯೊಂದು ಪಂಗಡಕ್ಕೂ ಒಂದೊಂದು ಪಾಲು ಇತ್ತು. ವಿದ್ಯೆಕಲಿಸಿ ಧರ್ಮೋಪದೇಶಮಾಡುತ್ತಿದ್ದ ಬ್ರಾಹ್ಮಣ, ವರ್ತಕ, ಕಮ್ಮಾರ, ಬಡಗಿ, ಚಮ್ಮಾರ, ಕುಂಬಾರ, ಮನೆಕಟ್ಟುವವ, ನಾಯಿಂದ, ಭಂಗಿ ಎಲ್ಲರಿಗೂ ಒಂದೊಂದು ಪಾಲು. ಈ ರೀತಿ ರಾಜನಿಂದ ಭಂಗಿಯವರೆಗೂ ಬೆಳೆಯಲ್ಲಿ ಪಾಲುಗಾರರು.

ಹಾಗಾದರೆ ದಳಿತರೂ, ಅಸ್ಪೃಶ್ಯರೂ ಯಾರು? ದಳಿತರು ಎನ್ನುವ ಶಬ್ದವು ಈಗ ಸಮಾಜದ ಕೆಳ ಮಟ್ಟದಲ್ಲಿರುವ ಅನೇಕ ಪಂಗಡಗಳಿಗೆ ಅನ್ವಯಿಸುವ ಹೊಸ ಪ್ರಯೋಗ. ಹೀಗೇ ಎಂದು ಒಂದು ಗೆರೆ ಎಳೆಯಲು ಸಾಧ್ಯವಿಲ್ಲ. ಅಸ್ಪೃಶ್ಯರೆಂದರೆ ಹೆಚ್ಚು ಸ್ಪಷ್ಟವಿದೆ. ಉತ್ತರ ಹಿಂದೂಸ್ಥಾನದಲ್ಲಿ ಭಂಗಿ ಕೆಲಸಮಾಡುವ ಕೆಲವು ಜನರನ್ನು ಮಾತ್ರ ಅಸ್ಪೃಶ್ಯರೆನ್ನುತ್ತಾರೆ. ತಾನು ಭಾರತಕ್ಕೆ ಬಂದಾಗ ಭಂಗಿ ಗಳು ಮಾತ್ರ ಅಸ್ಪೃಶ್ಯರಾಗಿದ್ದರು ಎಂದು ಫಾಹಿಯಾನ್ ಹೇಳುತ್ತಾನೆ. ದಕ್ಷಿಣ ಭಾರತದಲ್ಲಿ ಇವರ ಸಂಖ್ಯೆಯು ಹೆಚ್ಚು. ಅವರು ಹೇಗೆ ಅಸ್ಪೃಶ್ಯರಾದರು, ಅವರ ಸಂಖ್ಯೆ ಹೇಗೆ ಬೆಳೆಯಿತು ಎಂದು ಹೇಳುವುದು ಕಷ್ಟ. ಪ್ರಾಯಶಃ ಶ್ವಪಚಕೆಲಸದಲ್ಲಿ ತೊಡಗಿದವರನ್ನು ಆ ರೀತಿ ಕಂಡಿರಬಹುದು. ಆಮೇಲೆ ಭೂಮಿ ಕಾಣಿ ಇಲ್ಲದ ಕೂಲಿಯವರೂ ಅವರ ಸಂಖ್ಯೆಗೆ ಸೇರಿರಬಹುದು.

ನಿತ್ಯವಿಧಿಗಳನ್ನು ಮಾಡುವಾಗ ಶುದ್ಧರಿರಬೇಕೆಂಬ ನಿಯಮವು ಹಿಂದೂಗಳಲ್ಲಿ ಬಹಳ ಕಠಿನ ವಿದೆ. ಇದರಿಂದ ಒಳ್ಳೆಯ ಪರಿಣಾಮವೂ ಆಗಿದೆ ಕೆಟ್ಟದೂ ಆಗಿದೆ. ದೇಹ ನೈರ್ಮಲ್ಯವು ಒಂದು ಒಳ್ಳೆಯ ಪರಿಣಾಮ. ಅನೇಕ ನಿಮ್ನಜಾತಿಯವರೂ ಸೇರಿ ಹಿಂದೂಗಳಿಗೆಲ್ಲ ಸ್ನಾನವು ಒಂದು ನಿತ್ಯ ವಿಧಿ. ಈ ಅಭ್ಯಾಸ ಇಂಗ್ಲೆಂಡ್ ಮತ್ತು ಇತರ ದೇಶಗಳಿಗೆ ಹರಡಿದ್ದು ಹಿಂದೂಸ್ಥಾನದಿಂದ. ಎಷ್ಟೇ ಬಡವನಾದ ರೈತನಿರಲಿ ಸಾಮಾನ್ಯ ಹಿಂದೂವಿಗೆ ತನ್ನ ಅಡಿಗೆ ಊಟದ ಪಾತ್ರೆಗಳು ಶುಭ್ರವಾಗಿ ಹೊಳೆಯುತ್ತಿರಬೇಕು. ಈ ಶುಭ್ರಭಾವನೆಯು ವಿಜ್ಞಾನದಿಂದ ಬಂದುದಲ್ಲ. ದಿನಕ್ಕೆ ಎರಡು ಬಾರಿ ಸ್ನಾನಮಾಡುವವನೂ ಕ್ರಿಮಿಪೂರಿತ ಕೊಳಚೆ ನೀರನ್ನು ಯಾವ ಸಂಕೋಚವೂ ಇಲ್ಲದೆ ಕುಡಿದುಬಿಡು ತ್ತಾನೆ. ಈ ಭಾವನೆಯು ಈಗಂತೂ ಸಾಮೂಹಿಕವೂ ಇಲ್ಲ. ತನ್ನ ಮನೆಯನ್ನು ಬಹಳ ಶುಭ್ರವಿಟ್ಟು ಕೊಂಡರೂ ಮನೆಯ ಕೊಳಕನ್ನೆಲ್ಲ ನೆರೆಮನೆಯ ಮುಂದೆ ಬೀದಿಗೆಸೆಯುತ್ತಾನೆ. ಗ್ರಾಮಗಳಂತೂ ತಿಪ್ಪೆಗುಂಡಿಯಿಂದ ಕೊಳೆತು ನಾರುತ್ತವೆ. ಅದೂ ಅಲ್ಲದೆ ಈ ನೈರ್ಮಲ್ಯವು ನೈರ್ಮಲ್ಯದ ದೃಷ್ಟಿ ಯಿಂದಲೇ ಅಲ್ಲ, ಧರ್ಮದ ದೃಷ್ಟಿಯಿಂದ. ಆ ಧರ್ಮದೃಷ್ಟಿಯು ಮಾಯವಾದರೆ ನೈರ್ಮಲ್ಯ ದೃಷ್ಟಿಯೂ ಮಾಯವಾಗುತ್ತದೆ.

ಈ ಆಚಾರಶೀಲದ ನೈರ್ಮಲ್ಯದಿಂದ ಒಂದು ಬಗೆಯ ಪ್ರತ್ಯೇಕ ಮನೋಭಾವ, ಮುಟ್ಟಬಾರದೆಂಬ ಮಡಿವಂತಿಕೆ, ಇತರ ಜಾತಿಯವರೊಂದಿಗೆ ಆಹಾರ ಪಾನೀಯಗಳನ್ನು ತೆಗೆದುಕೊಳ್ಳಬಾರದೆಂಬ ದುಷ್ಟ ಸಂಪ್ರದಾಯವೂ ಬೆಳೆಯಿತು. ಇತರ ಯಾವ ದೇಶಗಳಲ್ಲೂ ಕಾಣದಷ್ಟರಮಟ್ಟಿಗೆ ಈ ಕೆಟ್ಟ ಪದ್ಧತಿಯು ಬೇರು ಬಿಟ್ಟಿತು. ಕೆಲವು ಜನರು ಅತ್ಯುಪಯುಕ್ತ ಕೆಲಸಮಾಡಿದರೂ ಆ ಕೆಲಸ ಕೊಳ ಕೆಂಬ ನೆಪದಿಂದ ಅಸ್ಪೃಶ್ಯರಾಗಬೇಕಾಯಿತು. ತನ್ನ ಜಾತಿಯವರೊಂದಿಗೆ ಮಾತ್ರ ಊಟಮಾಡ ಬೇಕೆಂಬ ಭಾವನೆಯು ಎಲ್ಲ ಜಾತಿಯವರಲ್ಲೂ ಸಾಮಾನ್ಯವಾಯಿತು. ಸಮಾಜದ ಅಂತಸ್ತಿಗೊಂದು ಹೆಗ್ಗುರುತಾಯಿತು. ಕೆಲವು ಉತ್ತಮ ಜಾತಿಯವರಿಗಿಂತ ಕೆಳಜಾತಿಯವರಲ್ಲೇ ಈ ಭಾವನೆ ಹೆಚ್ಚು

ಬೇರೂರಿತು. ಉನ್ನತ ಜಾತಿಯವರಲ್ಲಿ ಈ ಭಾವನೆ ಈಗ ಕಡಮೆಯಾಗುತ್ತಿದೆ. ಆದರೆ ನಿಮ್ನ ವರ್ಗದವರು ಮತ್ತು ಇತರ ಕೆಳಜಾತಿಯವರಲ್ಲಿ ಇನ್ನೂ ಕಡಿಮೆಯಾಗಿಲ್ಲ.

ಊಟ ಉಪಚಾರವೇ ಇಲ್ಲದ ಮೇಲೆ ಅಂತರ್ಜಾತೀಯ ವಿವಾಹವಂತೂ ಸಾಧ್ಯವೇ ಇಲ್ಲ. ಕೆಲವು ಅಂತರ್ಜಾತೀಯ ವಿವಾಹಗಳೇನೊ ಆದವು. ಆದರೂ ಪ್ರತಿಯೊಂದು ಜಾತಿಯೂ ತನ್ನ ಜಾತಿಯಲ್ಲೆ ವಿವಾಹ ಬೆಳೆಸಿ ಜಾತಿಯನ್ನು ಬೆಳೆಸಿಕೊಂಡು ಬಂದಿತು. ಯುಗಾಂತರಗಳಲ್ಲಿ ಜನಾಂಗ ಪಾರಿಶುದ್ಧತೆ ಎಂಬುದೊಂದು ಕನಸು. ಆದರೂ ಜಾತಿಪದ್ಧತಿಯಿಂದ ಭಾರತದಲ್ಲಿ, ಅದರಲ್ಲೂ ಉತ್ತಮ ಜಾತಿಯವರಲ್ಲಿ ಕುಲಶುದ್ಧತೆ ಉಳಿದು ಬಂದಿದೆ.

ಕೆಳಮಟ್ಟದ ಕೆಲವು ಜನರನ್ನು ಜಾತಿಬಾಹಿರರೆಂದು ಕರೆಯುತ್ತಾರೆ. ಆದರೆ ಅಸ್ಪೃಶ್ಯರು ಸಹ ಜಾತಿಬಾಹಿರರಲ್ಲ. ಅಂತಿಮರಲ್ಲಿ ಅಸ್ಪೃಶ್ಯರಲ್ಲಿ ಅವರದೇ ಪ್ರತ್ಯೇಕ ಜಾತಿಗಳಿವೆ. ಅವರವರ ವ್ಯಾಜ್ಯಗಳನ್ನು ಪರಿಹರಿಸಿಕೊಳ್ಳಲು ತಮ್ಮ ಪಂಚಾಯಿತಿಗಳನ್ನು ಮಾಡಿಕೊಂಡಿದಾರೆ. ಆದರೆ ಗ್ರಾಮಗಳ ಸಾಮಾನ್ಯ ಜೀವನದಿಂದ ಅವರನ್ನು ದೂರವಿಟ್ಟು ಅವರಿಗೆ ಬಹಳ ಅನ್ಯಾಯ ಮಾಡಲಾಗಿದೆ.

ಈರೀತಿ ಸ್ವತಂತ್ರ ಗ್ರಾಮಜೀವನ ಮತ್ತು ಜಾತಿಪದ್ಧತಿಯು ಭಾರತೀಯ ಸಮಾಜ ರಚನೆಯ ಎರಡು ವೈಶಿಷ್ಟ್ಯಗಳು. ಮೂರನೆಯದು ಕುಟುಂಬ ಜೀವನ. ಕುಟುಂಬದ ಆಸ್ತಿಯಲ್ಲಿ ಎಲ್ಲರಿಗೂ ಪಾಲು. ಕುಟುಂಬದ ಯಜಮಾನನು ತೀರಿಕೊಂಡರೆ ಆಗ ಉಳಿದ ವಾರಸುದಾರರೆಲ್ಲ ಹಕ್ಕುದಾರರು. ತಂದೆಯೋ ಅಣ್ಣನೋ ಯಜಮಾನನಾದರೂ ಅವನಿಗೆ ಇದ್ದುದು ಆಡಳಿತ ಸ್ವಾತಂತ್ರ್ಯ ಮಾತ್ರ; ಪ್ರಾಚೀನ ರೋಮನ್ ಯಜಮಾನನಂತೆ ಸರ್ವಾಧಿಕಾರಿಯಲ್ಲ. ಕೆಲವು ಸಂದರ್ಭಗಳಲ್ಲಿ ಮಾತ್ರ. ಅಥವ ಕುಟುಂಬಕ್ಕೆ ಸಂಬಂಧ ಪಟ್ಟವರೆಲ್ಲ ಒಪ್ಪಿದರೆ ಆಸ್ತಿಯನ್ನು ವಿಭಾಗಮಾಡಿಕೊಳ್ಳಬಹುದಾಗಿತ್ತು. ಒಟ್ಟು ಕುಟುಂಬದ ಆಸ್ತಿಯಿಂದ ಕೆಲಸ ಮಾಡಲಿ, ಮಾಡದಿರಲಿ ಕುಟುಂಬದ ಎಲ್ಲ ಜನರ ಜೀವನದ ಅವಶ್ಯಕತೆಯೂ ನಡೆಯಬೇಕು. ಇದರಿಂದ ಎಲ್ಲರಿಗೂ ಕನಿಷ್ಠ ಪ್ರಮಾಣದ ಸೌಲಭ್ಯ ಮಾತ್ರ ದೊರೆಯುತ್ತಿತ್ತು. ಯಾರೂ ವಿಶೇಷ ಲಾಭಪಡೆಯುವಂತೆ ಇರಲಿಲ್ಲ. ದೇಹಶಕ್ತಿಯಲ್ಲಿ, ಬುದ್ಧಿಶಕ್ತಿಯಲ್ಲಿ ಕಡಮೆಯಿದ್ದು, ಸ್ವಲ್ಪ ಊನನಿದ್ದರೂ ಎಲ್ಲರಿಗೂ ಒಂದು ಬಗೆಯ ಸಮಾಜರಕ್ಷಣೆ ಇತ್ತು. ಈ ರೀತಿ ಒಂದು ಬಗೆಯ ಸಮಾಜರಕ್ಷಣೆಯಿದ್ದರೂ ವ್ಯಕ್ತಿ ಜೀವನದ ಮಟ್ಟವು ಕಡಮೆಯಾಯಿತು, ಶ್ರಮಕ್ಕೆ ತಕ್ಕ ಫಲವೂ ಕಡಮೆಯಾಯಿತು. ವೈಯಕ್ತಿಕ ಆಶೆ ಅಥವ ಅವಶ್ಯಕತೆಗೆ ಪ್ರಾಮುಖ್ಯತೆಕೊಡದೆ ಕುಟುಂಬಕ್ಕೆ ಹೆಚ್ಚು ಪ್ರಾಧಾನ್ಯದೊರೆಯಿತು. ದೊಡ್ಡ ಕುಟುಂಬದಲ್ಲಿ ಬೆಳೆಯುತ್ತ, ಬೆಳೆದು ಜೀವಿಸುತ್ತ ಬಂದುದರಿಂದ ಮಕ್ಕಳಲ್ಲಿ ಸ್ವಾರ್ಥಭಾವನೆ ಬೆಳೆಯಲು ಹೆಚ್ಚು ಅವಕಾಶವಾಗದೆ ಸಾಮಾಜಿಕ ಜೀವನವೇ ಮೇಲೆಂಬ ಭಾವನೆಯು ಬೆಳೆಯಿತು.

ವಿಶೇಷ ವ್ಯಕ್ತಿಪ್ರಾಧಾನ್ಯತೆಯ ಪಾಶ್ಚಿಮಾತ್ಯ ನಾಗರೀಕತೆಯಲ್ಲಿ ಕಂಡುಬರುವ ಆಚರಣೆಗೆ ಇದೆಲ್ಲ ತೀರ ನವೀನವಾದುದು. ಅದರಲ್ಲೂ ವೈಯಕ್ತಿಕ ಆಶೆಗೆ ಪ್ರೋತ್ಸಾಹವೀಯುವ, ಸ್ವಂತ ಲಾಭವೇ ಎಲ್ಲರ ಗುರಿಯಾಗಿರುವ, ನುಗ್ಗಿ ನಡೆಯುವವನಿಗೆ ಗೌರವತೋರುವ, ಅಂಜುಬುರುಕರಿಗೆ ಅವಕಾಶವೇ ಕೊಡದ ಅಮೆರಿಕೆಗಂತೂ ಇದು ಅರ್ಥವೇ ಆಗುವುದಿಲ್ಲ. ಭಾರತದಲ್ಲಿ ಒಟ್ಟುಕುಟುಂಬ ಜೀವನವು ಈಗ ಸಡಿಲುತ್ತಿದೆ; ವ್ಯಕ್ತಿಜೀವನ ಬೆಳೆಯುತ್ತಿದೆ. ಇದರಿಂದ ಜನಜೀವನದ ಆರ್ಥಿಕ ಹಿನ್ನೆಲೆ ವಿಶೇಷಮಾರ್ಪಾಟಾಗಿ ಹೊಸ ಸಂಪ್ರದಾಯದ ಸಮಸ್ಯೆಗಳೂ ಏಳುತ್ತಿವೆ.

ಭಾರತೀಯ ಸಮಾಜಜೀವನದ ಮೂರು ಆಧಾರಸ್ಥಂಬಗಳೂ ಸಮಷ್ಟಿಯಲ್ಲಿ, ವ್ಯಕ್ತಿಯಲ್ಲಿಲ್ಲ. ಸಮಾಜರಕ್ಷಣೆ, ಭದ್ರತೆ, ಸಮಷ್ಟಿಜೀವನದ ನಿತ್ಯತೆಯೇ ಗುರಿಯಾಗಿದ್ದವು. ಪ್ರಗತಿಯು ಗುರಿಯಾಗಿರಲಿಲ್ಲದ ಕಾರಣ ಪ್ರಗತಿಯ ಕೊಲೆಯಾಯಿತು. ಗ್ರಾಮಜೀವನದಲ್ಲಾಗಲಿ, ಜಾತಿಯಲ್ಲಾಗಲಿ ದೊಡ್ಡ ಅವಿಭಕ್ತಕುಟುಂಬದಲ್ಲಾಗಲಿ ತಮ್ಮ ತಮ್ಮೊಳಗೆ ಸಮಷ್ಟಿಜೀವನವೂ, ಸಮಾನಭಾವನೆಯೂ ಪ್ರಜಾಪ್ರಭುತ್ವನೀತಿಯೂ ಇದ್ದವು. ಈಗಲೂ ಜಾತಿಯ ಪಂಚಾಯಿತಿಗಳಲ್ಲಿ ಈ ಪ್ರಜಾಪ್ರತಿನಿಧಿ ಪ್ರಭುತ್ವ ನೀತಿಯು ಆಚರಣೆಯಲ್ಲಿದೆ. ನಿರಕ್ಷರಕುಕ್ಷಿಗಳಾದರೂ ರಾಜಕೀಯ ಅಥವ ಇತರ ಕಾರಣ

ಗಳಿಗಾಗಿ ಪಂಚಾಯತಿಗಳಲ್ಲಿ ಕೆಲಸಮಾಡಲು ಗ್ರಾಮಸ್ಥರಿಗಿರುವ ಉತ್ಸಾಹವನ್ನು ಕಂಡು ಬೆರಗಾಗಿದ್ದೇನೆ. ಅತ್ಯಲ್ಪಕಾಲದಲ್ಲಿ ಅರ್ಥಮಾಡಿಕೊಂಡು, ತಮ್ಮ ಜೀವನಕ್ಕೆ ಸಂಬಂಧಪಟ್ಟ ವಿಷಯಗಳಲ್ಲಿ ಸಹಾಯಕರಾಗುತ್ತಾರೆ. ಅವರ ಬಾಯಿ ಕಟ್ಟುವುದು ಅಷ್ಟು ಸುಲಭವಲ್ಲ. ಆದರೆ ಸಣ್ಣ ಪಂಗಡಗಳಾಗಿ ಒಡೆದು ಪರಸ್ಪರ ಕಾದಾಡಲು ಇದರಿಂದ ಅವಕಾಶವಾಯಿತು.

ಪ್ರಜಾಡಳಿತಪದ್ಧತಿಯು ಎಲ್ಲರಿಗೂ ತಿಳಿದಿದ್ದಿತಲ್ಲದೆ, ಸಮಾಜಜೀವನದಲ್ಲಿ, ಸ್ಥಳೀಯ ಸಂಸ್ಥೆಗಳಲ್ಲಿ, ವ್ಯಾಪಾರಸಂಘಗಳಲ್ಲಿ, ಧರ್ಮಸಭೆಗಳಲ್ಲಿ ಸಾಮಾನ್ಯ ಆಚರಣೆಯಲ್ಲಿತ್ತು. ಕಾರ್ಯವಿಧಾನ, ಚುನಾವಣೆ ಮತ್ತು ಚರ್ಚೆಗಳಿಗೆ ವಿಶದವಾದ ನಿಯಮಗಳಿದ್ದವು. ಬೌದ್ಧಸಭೆಗಳ ವಿಷಯವಾಗಿ ಬರೆಯುತ್ತ ಮಾರ್ಕ್ವಿಸ್ ಆಫ್ ಜ಼ೆಟ್ಲೆಂಡ್ "ಎರಡುಸಾವಿರ ವರ್ಷಗಳ ಅಥವ ಅದಕ್ಕೂ ಹಿಂದಿನ ಈ ಬುದ್ಧಸಭೆಗಳಲ್ಲಿ ನಮ್ಮ ಇಂದಿನ ಪಾರ್ಲಿಮೆಂಟರಿ ಪದ್ಧತಿಯ ಮೂಲವಿದೆ ಎಂದು ಕೇಳಿ ಅನೇಕರಿಗೆ ಆಶ್ಚರ್ಯವಾಗಬಹುದು. ಸಭೆಯ ಗೌರವ ಕಾಯಲು ಒಬ್ಬ ವಿಶೇಷ ಅಧಿಕಾರಿಯನ್ನು ನೇಮಿಸುತ್ತಿದ್ದರು. ಆತನೇ ಇಂದಿನ "ಹೌಸ್ ಆಫ್ ಕಾಮನ್ಸ್"ನ ಸ್ಪೀಕರ್‌ನ ಮೂಲ. ಸಭೆಯಲ್ಲಿ ತಕ್ಕಷ್ಟು ಸದಸ್ಯರಿರುವಂತೆ ನೋಡಿಕೊಳ್ಳಲು ಇನ್ನೊಬ್ಬ ಅಧಿಕಾರಿಯನ್ನು ನೇಮಿಸುತ್ತಿದ್ದರು. ಆತನನ್ನು ಈಗಿನ ಪಾರ್ಲಿಮೆಂಟರಿ ಪದ್ಧತಿಯ (ಚೀಫ್ ವ್ಹಿಪ್) ಪ್ರಮುಖ ಸಂಚಾಲಕ ಎನ್ನಬಹುದು. ಸದಸ್ಯರು ಯಾವುದಾದರೂ ವಿಷಯವನ್ನು ಸಭೆಯ ಗಮನಕ್ಕೆ ತರಬೇಕಾದರೆ ನಿರ್ಣಯರೂಪದಲ್ಲಿಟ್ಟು ಅನಂತರ ಚರ್ಚೆಯಾಗುತ್ತಿತ್ತು. ಕೆಲವು ಬಾರಿ ಇದು ಒಂದೇ ಸಲವೂ, ಇನ್ನು ಕೆಲವು ವೇಳೆ ಮೂರು ಬಾರಿಯೂ ನಡೆಯುತ್ತಿತ್ತು. ಅಂದರೆ ಈಗ ಮಸೂದೆಗಳ ಪಠನದಲ್ಲಿರುವ ಪಾರ್ಲಿಮೆಂಟರಿ ಪದ್ಧತಿಯು ಆಗಲೇ ಅವರ ಅನುಷ್ಠಾನದಲ್ಲಿತ್ತು. ಅಭಿಮತ ವ್ಯತ್ಯಾಸವಿದ್ದರೆ ಮತಗಣನೆಯಿಂದ ಬಹುಮತ ಅಭಿಪ್ರಾಯದಂತೆ ತೀರ್ಮಾನಮಾಡುತ್ತಿದ್ದರು. ಮತಗಣನೆಯು ಚೀಟಿಗಳ ಮೂಲಕ ನಡೆಯುತ್ತಿತ್ತು" ಎಂದು ಹೇಳಿದ್ದಾನೆ.

ಸನಾತನ ಭಾರತೀಯ ಸಮಾಜರಚನೆಯಲ್ಲಿ ಈರೀತಿ ಕೆಲವು ಒಳ್ಳೆಯ ಪದ್ಧತಿಗಳಿದ್ದವು. ಇಲ್ಲದಿದ್ದರೆ ಅಷ್ಟು ದೀರ್ಘಕಾಲ ಬದುಕಿಬಾಳಲು ಸಾಧ್ಯವೇ ಇರಲಿಲ್ಲ. ಅವುಗಳ ಹಿನ್ನೆಲೆಯಾಗಿ ಭಾರತೀಯ ಸಂಸ್ಕೃತಿಯ ದಾರ್ಶನಿಕ ಆದರ್ಶವಿತ್ತು—ಐಶ್ವರ್ಯಕ್ಕಿಂತ ಮಾನವಜೀವನದ ಪರಿಪೂರ್ಣತೆ, ಸದ್ಗುಣಗಳು, ಸತ್ಯ ಮತ್ತು ಸೌಂದರ್ಯಗಳಿಗೆ ಪ್ರಾಧಾನ್ಯ ಇತ್ತು. ಗೌರವ, ಪ್ರತಿಷ್ಠೆ ಮತ್ತು ಐಶ್ವರ್ಯಗಳು ಒಂದೇಕಡೆಯಲ್ಲಿ ಕೇಂದ್ರೀಕೃತವಾಗದಂತೆ ಎಚ್ಚರ ತೆಗೆದುಕೊಳ್ಳಲಾಗಿತ್ತು. ಸಮಾಜದ ಮತ್ತು ವ್ಯಕ್ತಿಯ ಅಧಿಕಾರಕ್ಕಿಂತ ಕರ್ತವ್ಯಕ್ಕೆ ವಿಶೇಷ ಬೆಲೆಕೊಡಲಾಗಿತ್ತು. ಸ್ಮೃತಿಗಳಲ್ಲಿ ಬೇರೆ ಬೇರೆ ಜಾತಿಗಳ "ಧರ್ಮಗಳ"–ಕೆಲಸಕಾರ್ಯಗಳ–ಪಟ್ಟಿ ಇದೆ; ಅಧಿಕಾರಗಳಪಟ್ಟಿಯು ಎಲ್ಲೂ ಇಲ್ಲ. ಪ್ರತಿಯೊಂದು ಪಂಗಡವೂ, ಮುಖ್ಯವಾಗಿ ಗ್ರಾಮವೂ ಮತ್ತೊಂದು ರೀತಿಯಲ್ಲಿ ಜಾತಿಯೂ ಸ್ವಸಂಪೂರ್ಣ ಇರಬೇಕಾಗಿತ್ತು. ಹೊರಗಣ ಚೌಕಟ್ಟಿನಲ್ಲಿ ಸ್ವಲ್ಪ ಹೊಂದಾಣಿಕೆ, ವ್ಯತ್ಯಾಸ ಮತ್ತು ಸ್ವಾತಂತ್ರ್ಯಕ್ಕೆ ಅವಕಾಶವಿದ್ದರೂ ಒಳಗೆ ಬಹಳ ಬಿಗಿಯು ಇತ್ತು. ಕ್ರಮೇಣ ಅದರ ಪ್ರಸರಣಶಕ್ತಿಯೂ ಬುದ್ಧಿವಿಕಾಸಶಕ್ತಿಯೂ ಕುಂದಿತು. ಪ್ರತಿಷ್ಠಿತರು ಅಧಿಕಾರಬಲದಿಂದ ಯಾವ ಪ್ರಗತಿಗೂ ಅವಕಾಶಕೊಡದೆ ವಿದ್ಯೆಯು ಜನಸಾಮಾನ್ಯರಲ್ಲಿ ಹರಡದಂತೆ ಅಡ್ಡಿಬಂದರು. ಉತ್ತಮವರ್ಗದವರನೇಕರಿಗೆ ಮೂಢನಂಬಿಕೆಗಳೆಂದು ಗೊತ್ತಿದ್ದರೂ ಜನರಲ್ಲಿ ಅವುಗಳನ್ನು ಪ್ರೋತ್ಸಾಹಿಸಿದುದಲ್ಲದೆ ಹೊಸ ಮೂಢಭಾವನೆಗಳನ್ನೂ ಬೆಳೆಸಿದರು. ರಾಷ್ಟ್ರದ ಆರ್ಥಿಕ ಸ್ಥಿತಿ ಮಾತ್ರ ಅಲ್ಲದೆ ಭಾವನೆಗಳು ಸಹ ನಿಂತಲ್ಲೆ ನಿಂತು ಪಾಚಿಗಟ್ಟಿ ಸಂಕುಚಿತವೂ, ಪ್ರತಿಗಾಮಿಯೂ, ಸಾಂಪ್ರದಾಯಿಕವೂ, ಕಠಿನವೂ ಆದವು.

ಜಾತಿಯ ಕಲ್ಪನೆ ಮತ್ತು ಆಚರಣೆಯಲ್ಲೇ ಅಧಿಕಾರದರ್ಪದ ಭಾವನೆ ಇದ್ದು ಪ್ರಜಾಡಳಿತ ನೀತಿಗೆ ಅದು ವಿರುದ್ಧವಿದೆ. ಎಲ್ಲಿಯವರೆಗೆ ಜನರು ತಮ್ಮ ವಂಶಪಾರಂಪರ್ಯವಾದ ಕೆಲಸಗಳಲ್ಲಿ ನಿರತರಾಗಿ ಸಮಾಜವ್ಯವಸ್ಥೆಗೆ ವಿರುದ್ಧವಾಗಿ ಎದುರುಬೀಳಲಿಲ್ಲವೊ ಅಲ್ಲಿಯವರೆಗೆ ಜಾತಿಪದ್ಧತಿಯಲ್ಲಿ

ಅಧಿಕಾರವೂ ಇತ್ತು, ಕರ್ತವ್ಯಪಾಲನೆಯೂ ಇತ್ತು. ಭಾರತದ ಕೆಲವು ಸಾಧನೆಗಳೆಲ್ಲ ಉತ್ತಮ ವರ್ಣದವರದು. ಕೀಳುವರ್ಣದವರಿಗೆ ಇದ್ದ ಅವಕಾಶವೂ, ಸನ್ನಿವೇಶಗಳೂ ಅತ್ಯಲ್ಪ. ಉತ್ತಮ ವರ್ಣದವರು ಅತ್ಯಲ್ಪಸಂಖ್ಯೆಯಲ್ಲಿರಲಿಲ್ಲ. ಬಹುಸಂಖ್ಯಾತರಿದ್ದು ಅವರಲ್ಲಿ ಶಕ್ತಿಯೂ, ಅಧಿಕಾರವೂ, ವ್ಯಾಪ್ತಿಯೂ ಕೇಂದ್ರೀಕೃತವಾಗಿದ್ದವು. ಆದ್ದರಿಂದ ಬಹುಕಾಲ ಅಧಿಕಾರ ನಡೆಸಿದರು. ಆದರೆ ಅಸಂಖ್ಯಾತ ಜನರನ್ನು ಕೀಳುಮಟ್ಟದಲ್ಲಿಟ್ಟು ಅವರ ವಿದ್ಯೆ, ಸಂಸ್ಕೃತಿ, ಆರ್ಥಿಕ ಉನ್ನತಿಗೆ ಯಾವ ಅವಕಾಶವನ್ನು ಕೊಡದೆ ಅಂಧಕಾರದಲ್ಲಿ ತಳ್ಳಿದುದೇ ಜಾತಿಪದ್ಧತಿಯ ಭಾರತೀಯ ಸಮಾಜರಚನೆಯ ದೊಡ್ಡ ನ್ಯೂನತೆಯಾಯಿತು. ಈ ಅವನತಿಯಿಂದ ಎಲ್ಲ ಕಡೆಯೂ ಕ್ಷೀಣದೆಶೆಯು ಪ್ರಾಪ್ತವಾಗಿ ಕೊನೆಗೆ ಉತ್ತಮವರ್ಣದವರೂ ಅದಕ್ಕೆ ತುತ್ತಾದರು. ಭಾರತದ ಆರ್ಥಿಕ ಮತ್ತು ಸಾಮಾಜಿಕ ಜೀವನದಲ್ಲಿ ಒಂದು ಬಗೆಯ ಶಿಲಾಸ್ಪರ್ಶವುಂಟಾಯಿತು. ಈ ಸಮಾಜರಚನೆಗೂ, ಹಿಂದೆ ಇತರ ದೇಶಗಳಲ್ಲಿದ್ದ ಸಮಾಜರಚನೆಗೂ ಬಹಳ ವ್ಯತ್ಯಾಸವಿಲ್ಲ. ಆದರೆ ಕಳೆದ ಕೆಲವು ತಲೆಮಾರುಗಳಲ್ಲಿ ಇತರ ದೇಶಗಳಲ್ಲಿ ಆಗಿರುವ ಪರಿವರ್ತನೆಯು ಅತ್ಯದ್ಭುತ ಇದೆ. ಸಮಾಜದ ಇಂದಿನ ಪರಿಸ್ಥಿತಿಯಲ್ಲಿ ಜಾತಿಪದ್ಧತಿಯೂ ಅದರ ವೈಶಿಷ್ಟ್ಯಗಳೂ ಅಸಂಬದ್ಧವೂ, ಸಂಕುಚಿತವೂ, ಪ್ರತಿಗಾಮಿಯೂ ಆಗಿ ಪ್ರಗತಿವಿರುದ್ಧವಿವೆ. ಅದರ ಚೌಕಟ್ಟಿನೊಳಗೆ ಸಮಾನಸ್ಥಾನವಾಗಲಿ ಅವಕಾಶವಾಗಲಿ ದೊರೆಯು ವಂತೆ ಇಲ್ಲ, ರಾಜಕೀಯದಲ್ಲಾಗಲಿ, ಆರ್ಥಿಕನೀತಿಯಲ್ಲಾಗಲಿ ಪ್ರಜಾಸತ್ತೆಯು ದೊರೆಯುವಂತೆ ಇಲ್ಲ. ಈ ಎರಡು ಭಾವನೆಗಳು ಪರಸ್ಪರ ವಿರುದ್ಧವಿರುವುದರಿಂದ ಘರ್ಷಣೆಯು ಅನಿವಾರ್ಯ ಮತ್ತು ಅದರಲ್ಲಿ ಒಂದು ಸೋಲಲೇಬೇಕು.

## ೯. ಬಾಬರ್ ಮತ್ತು ಅಕ್ಬರ್: ಸ್ವದೇಶೀಕರಣ

ಆಫ್ಘನರೂ ಇಂಡಿಯದಲ್ಲಿ ನೆಲಸಿ ಭಾರತೀಯರೇ ಆದರು. ಮೊದಲು ಜನರ ವಿರೋಧಭಾವನೆ ಯನ್ನು ಕಡಮೆಮಾಡಿ ಅವರನ್ನು ಒಲಿಸಿಕೊಳ್ಳುವದು ಆಫ್ಘನ್ ರಾಜರುಗಳ ಮೊದಲನೆಯ ಸಮಸ್ಯೆ ಯಾಯಿತು. ಆದ್ದರಿಂದ ಉದ್ದೇಶಪಟ್ಟು ತಮ್ಮ ಮೊದಲಿನ ಕ್ರೌರ್ಯವನ್ನು ಕಡಮೆಮಾಡಿ, ಸಹನೆ ಯನ್ನು ತೋರಿ, ಸಹಕಾರ ಬಯಸಿ ಹುಟ್ಟುಭಾರತೀಯರಂತೆ ನಡೆದುಕೊಳ್ಳಲಾರಂಭಿಸಿದರು. ಮೊದಲು ರಾಜಕೀಯವಾಗಿ ಆರಂಭವಾದರೂ ಕ್ರಮೇಣ ಈ ವಾಯುವ್ಯಗಡಿನಾಡಿನ ಆಫ್ಘನರು ಭಾರ ತೀಯ ಸನ್ನಿವೇಶದ ಪ್ರಭಾವಕ್ಕೊಳಗಾಗಿ ಭಾರತೀಯರೇ ಆಗಿ ಸ್ವಭಾವ ಸಹಜವಾಯಿತು. ರಾಜರು ಗಳಲ್ಲಿ ಈ ಪರಿವರ್ತನೆಯಾಗುತ್ತಿದ್ದಾಗ ಜನರ ಜೀವನದಲ್ಲಿ, ಭಾವನೆಗಳಲ್ಲಿ ಒಂದು ಪ್ರಬಲವಾದ ಸಂಯೋಜಕಶಕ್ತಿಯು ತಾನಾಗಿಯೇ ಉದ್ಭವಿಸಿತು. ಹೀಗೆ ಆರಂಭವಾದ ಮಿಶ್ರಸಂಸ್ಕೃತಿಯ ತಳಹದಿಯ ಮೇಲೆ ಅಕ್ಬರ್ ತನ್ನ ಕೃತಿಯನ್ನು ನಿರ್ಮಿಸಿದನು.

ಮೊಗಲಸಂತತಿಯಲ್ಲಿ ಅಕ್ಬರ್ ಮೂರನೆಯವನಾದರೂ ಸಾಮ್ರಾಜ್ಯವು ಭದ್ರವಾದದ್ದು ಆತನ ಕಾಲದಲ್ಲಿ. ಆತನ ತಾತನಾದ ಬಾಬರ್ ೧೫೨೬ರಲ್ಲಿ ದೆಹಲಿಯ ಸಿಂಹಾಸನವನ್ನು ಏರಿದ್ದರೂ ಭಾರತಕ್ಕೆ ಆತನು ಪರಕೀಯನಾಗಿದ್ದನು. ಕೊನೆಯವರೆಗೂ ತಾನು ಪರಕೀಯನೆಂಬ ಭಾವನೆಯೇ ಆತನಲ್ಲಿ ಉಳಿಯಿತು. ಉತ್ತರದಲ್ಲಿ ಮಧ್ಯಏಷ್ಯದ ಆತನ ತಾಯ್ನಾಡಿನಲ್ಲಿ ತೈಮೂರಿ ಪುನರುಜ್ಜೀವನವು ಉಚ್ಛ್ರಾಯಸ್ಥಿತಿಯಲ್ಲಿತ್ತು; ಆದ್ದರಿಂದ ಇರಾನೀಸಂಸ್ಕೃತಿಯ ಪ್ರಭಾವವು ಆತನಮೇಲೆ ಬಹಳವಿತ್ತು. ಬಾಗ್ದಾದಿನಿಂದ ಇರಾಣದವರೆಗೆ ಹರಡಿ ತನಗೆ ಪರಿಚಿತವಾದ ಸ್ನೇಹಮಯ ಸಮಾಜಜೀವನ, ಸಂಭಾಷಣೆಯ ಸವಿ, ಜೀವನಸೌಕರ್ಯ ಮತ್ತು ಸೌಂದರ್ಯ ಭಾರತದಲ್ಲಿ ದೊರೆಯದಾದವು. ಉತ್ತರದ ಪರ್ವತ ಪ್ರಾಂತ್ಯದ ಹಿಮ ಮತ್ತು ಮಂಜಿಗಾಗಿಯೂ, ಫರ್ಗ್ಹಾಣದ ಒಳ್ಳೆಯ ಮಾಂಸ, ಹಣ್ಣು, ಹೂಗಳಿ ಗಾಗಿಯೂ ಆತನ ಮನಸ್ಸು ಹಾತೊರೆಯುತ್ತಿತ್ತು. ಇಷ್ಟೆಲ್ಲ ನಿರುತ್ಸಾಹವಾದರೂ, ಆತನು ಹಿಂದೂ ಸ್ಥಾನವನ್ನು ಅತ್ಯಂತ ಸುಂದರನಾಡು ಎಂದಿದ್ದಾನೆ. ಭಾರತಕ್ಕೆ ಬಂದ ನಾಲ್ಕು ವರ್ಷಗಳಲ್ಲೆ ಬಾಬರನು ಮರಣಹೊಂದಿದನು. ಅವನ ಕಾಲವೆಲ್ಲ ಯುದ್ಧಮಾಡುವುದರಲ್ಲೂ ಕಾನ್‌ಸ್ಟೆಂಟ

ನೋಪಲ್‌ನಿಂದ ಕರೆಸಿದ ವಾಸ್ತುಶಿಲ್ಪನಿಪುಣನ ಸಹಾಯದಿಂದ ಆಗ್ರಪಟ್ಟಣವನ್ನು ನಿರ್ಮಾಣ ಮಾಡುವುದರಲ್ಲಿಯೂ ಕಳೆಯಿತು. ಕಾನ್ ಸ್ಟೆಂಟಿನೋಪಲ್‌ನಲ್ಲಿ ಆಗ ಮಹಾವೈಭವಶಾಲಿಯಾದ ಸುಲೇಮಾನನ ಕಾಲ; ಮಹಾಸೌಧಗಳು ನಿರ್ಮಾಣವಾಗುತ್ತಿದ್ದ ಕಾಲ.

ಬಾಬರನ ಸುತ್ತಲೂ ಶತ್ರುಗಳೇ ಇದ್ದುದರಿಂದ, ಭಾರತವನ್ನು ಹೆಚ್ಚು ನೋಡಲು ಸಾಧ್ಯವಾಗಲಿಲ್ಲ. ಆದರೂ ಆಗಿನ ಉತ್ತರ ಭಾರತದ ಸಾಂಸ್ಕೃತಿಕ ಬಡತನವನ್ನು ಪ್ರಸ್ತಾಪಿಸಿದ್ದಾನೆ. ತೈಮೂರನ ವಿನಾಶಕೃತ್ಯಗಳೂ, ಅನೇಕ ವಿದ್ವಾಂಸರೂ ಕಲಾವಿದರೂ ಕುಶಲಕರ್ಮಿಗಳೂ ದಕ್ಷಿಣ ಭಾರತಕ್ಕೆ ನೆಲಸಹೋದುದೂ ಈ ಬಡತನಕ್ಕೆ ಕಾರಣವಾಗಿರಬಹುದು. ಆದರೆ ಭಾರತೀಯನಿರ್ಮಾಣ ದೃಷ್ಟಿಯೂ ಕುಂದಿಹೋದುದು ಒಂದು ಕಾರಣವಾಗಿರಬೇಕು. ಕುಶಲಕರ್ಮಿಗಳಿಗೂ, ಉದ್ಯೋಗಿಗಳಿಗೂ ಕೊರತೆ ಇರಲಿಲ್ಲ. ಆದರೆ ಯಂತ್ರರಚನೆಯಲ್ಲಿ ಯಾವ ನವೀನತೆಯೂ ಕೌಶಲ್ಯವೂ ಇರಲಿಲ್ಲವೆಂದು ಬಾಬರ್ ಹೇಳಿದ್ದಾನೆ ಮತ್ತು ಜೀವನದ ಸೌಕರ್ಯದಲ್ಲಿ ಮತ್ತು ಭೋಗಸಾಮಗ್ರಿಗಳಲ್ಲಿ ಭಾರತವು ಇರಾನ್‌ಗಿಂತ ಬಹಳ ಹಿಂದೆ ಇತ್ತು ಎನ್ನುತ್ತಾನೆ. ಭಾರತೀಯ ಮನಸ್ಸು ಜೀವನಸೌಖ್ಯದ ಕಡೆ ಹೆಚ್ಚು ಆಸಕ್ತಿ ತೋರಿಸದಿದ್ದುದು ಇದಕ್ಕೆ ಕಾರಣವೋ ಅಥವ ಬೇರೆ ಕಾರಣದಿಂದಲೋ ನಾನರಿಯೆ. ಪ್ರಾಯಶಃ ಇರಾಣಿಗಳಂತೆ ಆಗಿನಕಾಲದ ಭಾರತೀಯರಿಗೆ ಈ ಸುಖಜೀವನ ಅಥವ ಭೋಗಸಾಮಗ್ರಿಗಳ ವ್ಯಾಮೋಹ ಅಷ್ಟಿರಲಿಲ್ಲ. ಭಾರತಕ್ಕೂ ಇರಾಣಕ್ಕೂ ಹೆಚ್ಚು ಸಂಪರ್ಕವಿದ್ದುದರಿಂದ ಆಸಕ್ತಿಇದ್ದರೆ ಸುಲಭವಾಗಿ ಇರಾಣದಿಂದ ಅವೆಲ್ಲವನ್ನೂ ಪಡೆಯಬಹುದಾಗಿತ್ತು. ಪ್ರಾಯಶಃ ಈಚೆಗೆ ಉಂಟಾದ ಸಾಂಸ್ಕೃತಿಕ ಜಡತ್ವವೂ, ಭಾರತದ ಅವನತಿಯೂ ಅದಕ್ಕೆ ಕಾರಣವಾಗಿರಬಹುದು. ಪ್ರಾಚೀನಸಾಹಿತ್ಯ ಮತ್ತು ಚಿತ್ರಕಲೆಯನ್ನು ನೋಡಿದರೆ ಪ್ರಾಚೀನಕಾಲದಲ್ಲಿ ತಕ್ಕಷ್ಟು ಭೋಗಜೀವನವಿತ್ತು; ಜೀವನಮಟ್ಟವು ಉನ್ನತವೂ ಸುಂದರವೂ ಇತ್ತು. ಉತ್ತರ ಇಂಡಿಯಕ್ಕೆ ಬಾಬರ್ ಬಂದ ಕಾಲದಲ್ಲೂ ದಕ್ಷಿಣದಲ್ಲಿ ವಿಜಯನಗರದಲ್ಲಿ ಕಲೆ, ಸಂಸ್ಕೃತಿ ಜೀವನದ ನಯ ಮತ್ತು ಭೋಗಸಾಮಗ್ರಿಗಳಲ್ಲಿ ಉನ್ನತಮಟ್ಟವಿತ್ತೆಂದು ಪ್ರವಾಸಸಾಹಿತ್ಯದಿಂದ ತಿಳಿಯುತ್ತದೆ.

ಆದರೆ ಉತ್ತರ ಹಿಂದೂಸ್ಥಾನದಲ್ಲಿ ಸಾಂಸ್ಕೃತಿಕ ಅವನತಿಯು ಸ್ಪಷ್ಟಕಾಣುತ್ತದೆ. ನಿರ್ದಿಷ್ಟ ನಂಬಿಕೆಗಳೂ, ಕಟ್ಟುನಿಟ್ಟಾದ ಸಮಾಜರಚನೆಯೂ ಸಾಮಾಜಿಕ ವ್ಯವಹಾರ ಮತ್ತು ಪ್ರಗತಿಗೆ ಅಡ್ಡ ಬಂದವು. ಇಸ್ಲಾಂಧರ್ಮದ ಮತ್ತು ಭಿನ್ನಭಾವನೆಗಳ ಭಿನ್ನಜೀವನರೀತಿಯ ಅನೇಕ ಪರಕೀಯರ ಆಗಮನದಿಂದ ಉತ್ತರ ಹಿಂದೂಸ್ಥಾನದ ಸಮಾಜರಚನೆಯ ಮೇಲೂ ಜನರ ನಂಬಿಕೆಗಳ ಮೇಲೂ ಬಹಳ ಪರಿಣಾಮವಾಯಿತು. ದುಷ್ಪರಿಣಾಮ ಬಹಳವಾದರೂ ಪರಕೀಯರ ದಂಡಯಾತ್ರೆಯಿಂದ ಒಂದು ಅನುಕೂಲವಿದೆ. ಕೂಪಮಂಡೂಕಭಾವನೆಯನ್ನು ನಾಶಮಾಡಿ ಜನರ ಮಾನಸಿಕ ದಿಗಂತವನ್ನು ವಿಶಾಲಗೊಳಿಸುತ್ತದೆ. ತಮ್ಮ ಕಲ್ಪನೆಗಿಂತ ಪ್ರಪಂಚವು ಬಹಳ ದೊಡ್ಡದು ಮತ್ತು ವಿಶ್ವಮುಖವುಳ್ಳದ್ದು ಎಂಬ ಅರಿವು ಉಂಟಾಗುತ್ತದೆ. ಇದೇ ರೀತಿ ಆಫ್ಘನರ ದಂಡಯಾತ್ರೆಯಿಂದಲೂ ಭಾರತದ ಮೇಲೆ ಪರಿಣಾಮವಾಗಿ ಅನೇಕ ಬದಲಾವಣೆಗಳಾದವು. ಆಫ್ಘನರಿಗಿಂತ ಮೊಗಲರು ಇನ್ನೂ ಸುಸಂಸ್ಕೃತರೂ ಮತ್ತು ಸುಖಜೀವಿಗಳೂ ಆದ್ದರಿಂದ ಇನ್ನೂ ಹೆಚ್ಚು ಪರಿಣಾಮಮಾಡಿದರು. ಇರಾಣದ ಪ್ರಸಿದ್ಧ ಕಲಾಪೂರ್ಣ ಜೀವನವು ಆಚರಣೆಗೆ ಬಂದು ರಾಜಸಭಾ ಮರ್ಯಾದೆಯು ತುಂಬ ಕೃತಕವೂ, ನಿಯಮಬದ್ಧವೂ ಆಗಿ ಶ್ರೀಮಂತರ ಜೀವನದಲ್ಲಿ ಅಸಾಧ್ಯ ಬದಲಾವಣೆಗಳಾದವು. ದಕ್ಷಿಣ ಭಾರತದ ಬಹಮನಿ ರಾಜ್ಯಕ್ಕೂ ಇರಾಣಕ್ಕೂ ಕಲ್ಲಿಕೋಟೆಯ ಮೂಲಕ ನೇರ ಸಂಬಂಧವಿತ್ತು.

ಈ ಹೊಸ ಭಾವನೆಗಳಿಂದ ಭಾರತದಲ್ಲಿ ಕಲೆ ಮತ್ತು ವಾಸ್ತುಶಿಲ್ಪಕ್ಕೆ ನವ್ಯತೆಯೂ ಹೊಸ ಜೀವಕಳೆಯೂ ಬಂದವು; ಸಂಸ್ಕೃತಿಯ ಬೇರೆ ರೂಪಗಳೂ ಬಂದವು. ಈ ಬದಲಾವಣೆಯೆಲ್ಲ ಎರಡು ಸನಾತನ ಸಂಸ್ಕೃತಿಗಳ ಸಂಪರ್ಕದಿಂದ ಉದ್ಭವಿಸಿದವು. ಆದರೆ ಈ ಎರಡು ಸಂಸ್ಕೃತಿಗಳೂ ತಮ್ಮ ಆರಂಭದ ಕಾರ್ಯಪಟುತ್ವವನ್ನೂ ಸೃಷ್ಟಿ ಶಕ್ತಿಯನ್ನೂ ಕಳೆದುಕೊಂಡು ಸಂಕುಚಿತ ಚೌಕಟ್ಟಿನೊಳಗೆ ಅಡಗಿದ್ದವು. ಭಾರತೀಯ ಸಂಸ್ಕೃತಿಯು ತೀರ ಹಳೆಯದಾಗಿ ಆಯಾಸಗೊಂಡಿತ್ತು; ಅರಬ್ಬಿ-ಪಾರಸಿ

ಸಂಸ್ಕೃತಿಯು ತನ್ನ ಉನ್ನತಿಯನ್ನು ಮುಟ್ಟಿ ಮೊದಲಿನ ಕುತೂಹಲ ಸೃಷ್ಟಿಯನ್ನೂ ಸಾಹಸ ಮನೋಭಾವನೆಯನ್ನೂ ಕಳೆದುಕೊಂಡಿದ್ದಿತು.

ಬಾಬರನಿಗೆ ಕಲೆ, ಸಾಹಿತ್ಯ, ಉತ್ಕೃಷ್ಟ ಜೀವನದಲ್ಲಿ ಆಸಕ್ತಿಯಿತ್ತು; ಧೈರ್ಯಶಾಲಿಯೂ, ಸಾಹಸಿಗನೂ ಆಗಿ, ಪುನರುಜ್ಜೀವನ ಕಾಲದ ಪ್ರತಿನಿಧಿಯಾಗಿ, ಮನಮೋಹಕ ರೂಪಿನ ರಾಜನಾಗಿದ್ದನು. ಆತನ ಮೊಮ್ಮಗ ಅಕ್ಬರ್ ಅವನಿಗಿಂತ ಸುಂದರನೂ, ಸದ್ಗುಣಿಯೂ ಆಗಿದ್ದನು. ಪ್ರಾಣದ ಹಂಗಿಲ್ಲದೆ ಕಾದಾಡುವ ಧೈರ್ಯಶಾಲಿಯೂ, ದಕ್ಷಸೇನಾಪತಿಯೂ ಆದರೂ, ಮೃದು ಸ್ವಭಾವದವನೂ, ಕರುಣಿಯೂ, ಆದರ್ಶ ಜೀವಿಯೂ, ಮಹಾಕನಸು ಕಾಣುವವನೂ ಆಗಿದ್ದನು. ಅಲ್ಲದೆ ಶ್ರೇಷ್ಠ ಕಾರ್ಯಸಾಧಕನಾಗಿದ್ದನು ಮತ್ತು ತನ್ನ ಅನುಯಾಯಿಗಳಲ್ಲಿ ಅಚಲವಾದ ಸ್ವಾಮಿಭಕ್ತಿಯನ್ನು ಪ್ರೇರೇಪಿಸಿದ ಜನನಾಯಕನಾಗಿದ್ದನು. ಯೋಧನಾಗಿ ಭಾರತದ ಅನೇಕ ಭಾಗಗಳನ್ನು ಗೆದ್ದನು, ಆದರೆ ಆತನ ದೃಷ್ಟಿಯು ಇನ್ನೂ ಶಾಶ್ವತವಾದ ಜಯವನ್ನು ಮತ್ತು ಹೃದಯದ ಒಲವನ್ನು—ಗೆಲ್ಲುವುದರ ಮೇಲೆ ನೆಟ್ಟಿತ್ತು. ಆತನ ಆಸ್ಥಾನದ ಪೋರ್ತುಗೀಸ್ ಯೇಸುಪಂಥದವರು (Jesuits) ಹೇಳಿರುವಂತೆ ಆತನ ಕಣ್ಣುಗಳು "ಸೂರ್ಯ ರಶ್ಮಿಯು ಬಿದ್ದ ಸಮುದ್ರದ ಕಾಂತಿಯಂತೆ ಜಾಜ್ವಲ್ಯಮಾನವಾಗಿ" ಮನಸ್ಸನ್ನು ಸೂರೆಗೊಳ್ಳುತ್ತಿದ್ದವು. ಅಖಂಡ ಭಾರತದ ಪ್ರಾಚೀನ ಸವಿಗನಸು—ರಾಜಕೀಯವಾಗಿ ಮಾತ್ರವಲ್ಲದೆ ಒಂದು ಜನಾಂಗವೆಂಬ ಸವಿಗನಸು—ಪುನಃ ಆತನ ಮನಸ್ಸಿನಲ್ಲಿ ಮೂಡಿತು. ೧೫೫೬ ರಿಂದ ಆರಂಭವಾದ ಅವನ ಐವತ್ತು ವರ್ಷಗಳ ದೀರ್ಘ ರಾಜ್ಯಭಾರ ಕಾಲವನ್ನೆಲ್ಲ ಅವನು ಈ ಉದ್ದೇಶಸಾಧನೆಗಾಗಿಯೆ ಮೀಸಲಿಟ್ಟನು. ಬೇರೆ ಯಾರಿಗೂ ಅಧೀನರಾಗದ ಅನೇಕ ರಾಜಪುತ್ರ ರಾಜರನ್ನು ತನ್ನ ಕಡೆ ಒಲಿಸಿಕೊಂಡನು. ಒಬ್ಬ ರಾಜಪುತ್ರ ರಾಜಕುಮಾರಿಯನ್ನು ಮದುವೆಯಾದನು. ಆತನ ಮಗ ಜಹಾಂಗೀರ್ ಆಕೆಯ ಮಗ. ಜಹಾಂಗೀರನ ಮಗನಾದ ಷಹಜಹಾನನ ತಾಯಿಯು ಸಹ ರಾಜಪುತ್ರ ರಾಜಮನೆತನದವಳು. ಈ ರೀತಿ ಈ ತುರ್ಕಿ ಮೊಗಲ ರಾಜಮನೆತನವು ಕ್ರಮೇಣ ಹೆಚ್ಚು ಭಾರತೀಯವಾಯಿತು. ರಾಜಪುತ್ರರೆಂದರೆ ಅಕ್ಬರನಿಗೆ ಬಹಳ ಗೌರವವಿತ್ತು. ತನ್ನ ವಿವಾಹ ಸಂಬಂಧಗಳಿಂದ ಮತ್ತು ಇತರ ಕಾರ್ಯನೀತಿಯಿಂದ ರಾಜಪುತ್ರ ರಾಜಮನೆತನಗಳ ವಿಶ್ವಾಸವನ್ನು ಗಳಿಸಿ ತನ್ನ ಚಕ್ರಾಧಿಪತ್ಯವನ್ನು ಭದ್ರಪಡಿಸಿದನು. ಮುಂದಿನ ಆಳ್ವಿಕೆಯಲ್ಲೂ ಮುಂದುವರಿದ ಈ ಮೊಗಲ್-ರಾಜಪುತ್ರ ಸಹಕಾರದಿಂದ ಸರಕಾರ ಪದ್ಧತಿ ಆಡಳಿತ ಕ್ರಮ ಮತ್ತು ಸೈನ್ಯದಲ್ಲಿ ಮಾತ್ರವಲ್ಲದೆ ಕಲೆ, ಸಂಸ್ಕೃತಿ ಮತ್ತು ಜೀವನ ವಿಧಾನದಲ್ಲಿ ಸಹ ವಿಶೇಷ ಪರಿಣಾಮಗಳಾದವು. ಮೊಗಲ್ ಶ್ರೀಮಂತರು ಕ್ರಮೇಣ ಭಾರತೀಯರಾದರು; ರಾಜಪುತ್ರರೂ ಮತ್ತು ಇತರರೂ ಪಾರಸಿ ಸಂಸ್ಕೃತಿಗೆ ಮಾರುಹೋದರು.

ಅಕ್ಬರ್ ಅನೇಕರನ್ನು ವಶಪಡಿಸಿಕೊಂಡನು. ಆದರೆ ರಾಜಪುತಾನದ ಮೇವಾಡದ ದೊರೆಯಾದ ರಾಣಾಪ್ರತಾಪನು ಮಾತ್ರ ಕೊನೆಗೂ ಜಗ್ಗಲಿಲ್ಲ. ಪರದೇಶದ ಆಕ್ರಮಣಕಾರನಿಗೆ ಎಂದೂ ತಲೆ ಬಾಗುವುದಿಲ್ಲವೆಂದು ಕಾಡುಮೇಡುಗಳಲ್ಲಿ ಅಲೆದರೂ ಸರಿಯೆಂದು ದಿಟ್ಟತನದ ಆತ್ಮಗೌರವದಿಂದ ಕಷ್ಟಪರಂಪರೆಯನ್ನನುಭವಿಸಿದನು.

ಅಕ್ಬರನ ಸುತ್ತಲೂ ಆತನಲ್ಲಿ ಮತ್ತು ಆತನ ಆದರ್ಶಗಳಲ್ಲಿ ವಿಶ್ವಾಸವನ್ನಿಟ್ಟಿದ್ದ ಅನೇಕ ಮಹಾಮೇಧಾವಿಗಳು ಸೇರಿದರು ಫೈಜಿ, ಅಬುಲ್‌ಫಜಲ್ ಸೋದರರು, ಬೀರ್ಬಲ್, ರಾಜಮಾನ್‌ಸಿಂಗ್, ಅಬ್ದುಲ್ ರಹೀಂಖಾನ್‌ಖಾನಾ ಅವರಲ್ಲಿ ಮುಖ್ಯರು. ಆತನ ಆಸ್ಥಾನದಲ್ಲಿ ಎಲ್ಲ ಧರ್ಮಗಳ ಜನರೂ, ಹೊಸಭಾವನೆಗಳು, ಸಂಶೋಧನೆಗಳನ್ನು ಕಂಡುಹಿಡಿದವರೂ ಬಂದು ಸೇರುತ್ತಿದ್ದರು. ಆತನ ಧರ್ಮ ಸಹಿಷ್ಣುತೆ, ಅನ್ಯ ಧರ್ಮಗಳ ಮತ್ತು ಭಾವನೆಗಳ ಪ್ರೋತ್ಸಾಹದಿಂದ ಧರ್ಮನಿಷ್ಠ ಮುಸ್ಲಿಮರನೇಕರಿಗೆ ಕೋಪವುಂಟಾಯಿತು. ಎಲ್ಲರಿಗೂ ಮಾನ್ಯವಾದ ನೂತನ ಧರ್ಮ ಒಂದನ್ನು ಸ್ಥಾಪಿಸಲು ಪ್ರಯತ್ನಪಟ್ಟನು. ಉತ್ತರ ಹಿಂದೂಸ್ಥಾನದಲ್ಲಿ ಹಿಂದೂ-ಮುಸ್ಲಿಂ ಸಂಸ್ಕೃತಿಗಳ ಸಂಕೀರ್ಣವಾಗಿ ಮುಂದುವರಿದದ್ದು ಈತನ ಕಾಲದಲ್ಲಿ. ಅಕ್ಬರ್ ಹಿಂದೂ-ಮುಸ್ಲಿಂ ಇಬ್ಬರ ಪ್ರೇಮ ವಿಶ್ವಾಸಗಳನ್ನೂ ಗಳಿಸಿದ್ದನು. ಮೊಗಲ್ ಸಂತತಿಯು ಪೂರ್ಣ ಭಾರತೀಯವಾಗಿ ಬೇರುಬಿಟ್ಟಿತು.

## ೧೦. ಯಾಂತ್ರಿಕ ಪ್ರಗತಿ ಮತ್ತು ಸೃಷ್ಟಿಶಕ್ತಿಯಲ್ಲಿ ಏಷ್ಯ ಮತ್ತು ಯೂರೋಪುಗಳಲ್ಲಿ ವ್ಯತ್ಯಾಸ.

ಅಕ್ಬರನಿಗೆ ಅಧ್ಯಾತ್ಮಿಕ ಮತ್ತು ಪ್ರಾಪಂಚಿಕ ವಿಷಯವಾಗಿ ಹೊಸ ಹೊಸ ವಿಷಯಗಳನ್ನು ತಿಳಿದುಕೊಳ್ಳಬೇಕೆಂಬ ಜ್ಞಾನಕುತೂಹಲವು ಅಧಿಕವಾಗಿತ್ತು. ಯಂತ್ರೋಪಕರಣಗಳ ಉಪಯೋಗ ವನ್ನೂ, ಯುದ್ಧ ವಿಜ್ಞಾನವನ್ನೂ ತಿಳಿದುಕೊಳ್ಳಲು ತುಂಬ ಆಸಕ್ತನಾಗಿದ್ದನು. ಯುದ್ಧದ ಆನೆಗಳಿಗೆ ಬಹಳ ಬೆಲೆಕೊಟ್ಟಿದ್ದನು ಮತ್ತು ಹಸ್ತಿಪಡೆಯು ಅವನ ಸೇನೆಯ ಮುಖ್ಯ ಅಂಗವಾಗಿತ್ತು. ಆತನ ಆಸ್ಥಾನದ ಪೋರ್ತುಗೀಸ್ ಯೇಸುಪಂಥದ ಲೇಖಕರು ಅವನಿಗೆ "ಅನೇಕ ವಿಷಯಗಳಲ್ಲಿ ಆಸಕ್ತಿ ಇತ್ತು, ಅನೇಕ ವಿಷಯಗಳನ್ನು ತಿಳಿದುಕೊಳ್ಳಬೇಕೆಂಬ ಕುತೂಹಲವು ಇತ್ತು. ಯುದ್ಧ ಮತ್ತು ರಾಜಕೀಯ ವಿಚಾರಗಳಲ್ಲಿ ಮಾತ್ರವಲ್ಲದೆ ಯಾಂತ್ರಿಕ ಕಲೆಗಳಲ್ಲಿ ಸಹ ವಿಶೇಷ ಜ್ಞಾನವಿತ್ತು. ಹಸಿದ ಮನುಷ್ಯನು ಒಂದೇ ತುತ್ತಿಗೆ ಎಲ್ಲವನ್ನೂ ಕವಳಿಸಲು ಪ್ರಯತ್ನಪಡುವಂತೆ ತನ್ನ ಜ್ಞಾನ ಪಿಪಾಸೆ ಯಲ್ಲಿ ಎಲ್ಲವನ್ನೂ ಒಂದೇ ಬಾರಿ ತಿಳಿದುಕೊಳ್ಳಲು ಪ್ರಯತ್ನಪಡುತ್ತಿದ್ದನು" ಎಂದಿದ್ದಾರೆ.

ಆದರೂ ಆತನ ಕುತೂಹಲವು ಒಂದು ಮಟ್ಟದಿಂದ ಹೇಗೆ ಮೇಲೆ ಏರಲಿಲ್ಲವೆಂಬುದೇ ಆಶ್ಚರ್ಯ, ತನ್ನ ಮುಂದೆ ಸ್ಪಷ್ಟದಾರಿಗಳಿದ್ದರೂ ಮುಂದುವರಿಯಲಿಲ್ಲ. "ಮಹಾಮೊಗಲ"ನೆಂದು ಹೆಸರುವಾಸಿಪಡೆದು, ಭೂಬಲದಿಂದ ಅಜೇಯನಾದರೂ, ನಾವಿಕಾಬಲದಲ್ಲಿ ಅಶಕ್ತನಾದನು. ಕೇಪ್ ಭೂಶಿರದ ಮಾರ್ಗವಾಗಿ ವಾಸ್ಕೋಡಿಗಾಮನು 1498 ರಲ್ಲಿ ಕಲ್ಲೀಕೋಟೆಗೆ ಬಂದಿದ್ದನು. ಆಲ್ಬು ಕರ್ಕ್ 1511 ರಲ್ಲಿ ಮಲಕ್ಕಾದ್ವೀಪವನ್ನು ಹಿಡಿದು ಹಿಂದೂ ಸಾಗರದಲ್ಲಿ ಪೋರ್ತುಗೀಸರ ಸ್ವಾಸ್ಥ್ಯ ವನ್ನು ಕಟ್ಟಿದನು. ಇದರಿಂದ ಪೋರ್ತುಗೀಸರಿಗೂ ಅಕ್ಬರನಿಗೂ ಘರ್ಷಣೆಯಾಗದೆ ಇದ್ದರೂ, ಅನೇಕ ಬಾರಿ ಪೋರ್ತುಗೀಸರು ಮಕ್ಕಾಯಾತ್ರಿಕರನ್ನು—ಅವರಲ್ಲಿ ರಾಜಮನೆತನದವರೂ ಇರುತ್ತಿದ್ದರು—ಲಂಚಕೊಡದೆ ಮುಂದೆ ಬಿಡುವುದಿಲ್ಲವೆಂದು ಸಮುದ್ರಮಧ್ಯೆ ತಡೆಹಾಕುತ್ತಿದ್ದರು. ಭೂಮಿಯ ಮೇಲೆ ಅಕ್ಬರ್ ಎಷ್ಟೇ ಬಲಶಾಲಿಯಾಗಿದ್ದರೂ ಸಮುದ್ರದಲ್ಲಿ ಪೋರ್ತುಗೀಸರೇ ಪ್ರಬಲರಾಗಿದ್ದರೆಂದು ಇದ ರಿಂದಲೇ ವ್ಯಕ್ತವಾಗುತ್ತದೆ. ಪ್ರಾಚೀನ ಭಾರತದ ಕೀರ್ತಿ ಪ್ರತಿಷ್ಠೆಗಳು ಅದರ ಸಮುದ್ರಮಾರ್ಗಗಳ ಮೇಲಿನ ಸ್ವಾಮ್ಯದಿಂದ ಲಭಿಸಿದ್ದರೂ, ವಿಶಾಲ ಭಾರತದ ಚಕ್ರವರ್ತಿಯಾದ ಅಕ್ಬರ್ ನಾವಿಕಾಬಲಕ್ಕೆ ಏಕೆ ಪ್ರಾಶಸ್ತ್ಯಕೊಡಲಿಲ್ಲ ಎಂಬುದು ಅರ್ಥವಾಗುವುದಿಲ್ಲ. ಅಕ್ಬರನು ದೊಡ್ಡದೊಂದು ದೇಶವನ್ನು ಅಧೀನಮಾಡಿಕೊಳ್ಳಬೇಕಾಗಿತ್ತು. ಆಗಾಗ್ಗೆ ಸ್ವಲ್ಪ ಕಿರುಕುಳ ಕೊಟ್ಟರೂ ಪ್ರಾಯಶಃ ಪೋರ್ತು ಗೀಸರ ವಿಷಯ ಯೋಚಿಸಲು ಅವನಿಗೆ ಬಿಡುವೇ ದೊರೆಯದೆ ಅಲಕ್ಷಿಸಿರಬೇಕು. ಹಡಗುಗಳನ್ನು ಕಟ್ಟುವ ಯೋಚನೆ ಒಂದು ಬಾರಿಯೂ ಹೊಳೆಯಲಿಲ್ಲ. ಪ್ರಾಯಶಃ ನಾವಿಕಾಬಲವು ಒಂದು ಅವಶ್ಯ ಕತೆ ಎನ್ನುವುದರ ಬದಲು ಒಂದು ಆಡಂಬರ ಎಂದು ತಿಳಿದಿರಬೇಕು.

ಅಲ್ಲದೆ ಮೊಗಲ್ ಸೈನ್ಯವೂ, ಇತರ ಸಂಸ್ಥಾನಗಳ ಸೈನ್ಯವೂ ತಮಗೆ ಬೇಕಾದ ಫಿರಂಗಿಗಳಿಗೆ ಪರಕೀಯರಾದ ಆಟೋಮನ್ ತುರ್ಕಿ ಜನರನ್ನು ಅವಲಂಬಿಸಿದ್ದರು. ಫಿರಂಗಿದಳದ ಸೇನಾಧಿಪತಿಯ ಹೆಸರು ರೂಮಿಖಾನ್ ಎಂದು ಇತ್ತು. 'ರುಮ್' ಎಂದರೆ ಪೂರ್ವರೋಮ್ ಅಥವ ಕಾನ್‌ಸ್ಟೆಂಟಿನೋ ಪಲ್. ಈ ವಿದೇಶೀ ನಿಪುಣರು ಸ್ಥಳದ ಸೈನಿಕರಿಗೆ ಶಿಕ್ಷಣಕೊಡುತ್ತಿದ್ದರು. ಅಕ್ಬರ್ ಆಗಲಿ ಇತರ ರಾಗಲಿ ಶಿಕ್ಷಣಪಡೆಯಲು ತಮ್ಮ ಜನರನ್ನು ಪರದೇಶಗಳಿಗೆ ಏಕೆ ಕಳುಹಿಸಲಿಲ್ಲ? ಅಥವ ಉತ್ತಮ ಶಿಕ್ಷಣ ವಿಧಾನವನ್ನು ಕಂಡುಹಿಡಿಯಲು ಸಂಶೋಧನೆಗೆ ಏಕೆ ಪ್ರೋತ್ಸಾಹ ಕೊಡಲಿಲ್ಲ. ?

ಯೇಸು ಪಂಥದವರು ಅಕ್ಬರನಿಗೆ ಬೈಬಲ್ ಮತ್ತು ಇನ್ನೂ ಎರಡು ಮೂರು ಮುದ್ರಿತ ಗ್ರಂಥ ಗಳನ್ನು ಬಹುಮಾನ ಕೊಟ್ಟರು. ತನ್ನ ರಾಜ್ಯಾಡಳಿತ ಸೌಕರ್ಯಕ್ಕೂ ಇತರ ದೊಡ್ಡ ಕೆಲಸಗಳಿಗೂ ವಿಶೇಷ ಉಪಯೋಗವಾಗುತ್ತಿದ್ದ ಮುದ್ರಣ ವಿಷಯದಲ್ಲಿ ಆತನು ಏಕೆ ಆಸಕ್ತಿ ತೋರಿಸಲಿಲ್ಲ. ?

ಮೊಗಲ್ ಶ್ರೀಮಂತರು ಗಡಿಯಾರಗಳನ್ನು ಬಹಳವಾಗಿ ಉಪಯೋಗಿಸುತ್ತಿದ್ದರು. ಮೊದಲು

ಪೋರ್ಚುಗೀಸರು ಅನಂತರ ಆಂಗ್ಲರು ಅವನ್ನು ಯೂರೋಪಿನಿಂದ ತಂದರು. ಅದು ಶ್ರೀಮಂತರ ಭೋಗ ಸಾಮಗ್ರಿ ಎಂಬ ಭಾವನೆ ಇತ್ತು. ಸಾಮಾನ್ಯಜನರು ಸೂರ್ಯಬಿಂಬದ ಸಹಾಯದಿಂದಲೋ, ಮರಳು ಮತ್ತು ನೀರಿನ 'ಘಟಿಕೆ' ಗಳಿಂದಲೋ ಕಾಲವನ್ನು ನಿರ್ಣಯಿಸುತ್ತಿದ್ದರು. ಈ ಗಡಿಯಾರ ಗಳ ತಯಾರಿಯನ್ನು ಅರಿತುಕೊಳ್ಳುವ ಪ್ರಯತ್ನ ಏಕೆ ಮಾಡಲಿಲ್ಲ? ಇಲ್ಲಿಯೇ ತಯಾರಿಸುವ ಯೋಜನೆಯನ್ನೂ ಕೈಗೊಳ್ಳಲಿಲ್ಲ. ಭಾರತದಲ್ಲಿ ಅನೇಕ ಕುಶಲ ಕರ್ಮಿಗಳೂ, ಉದ್ಯೋಗ ನಿಪುಣರೂ ಇದ್ದರೂ ಯಂತ್ರಗಳಲ್ಲಿನ ಈ ಆಸಕ್ತಿ ಶೂನ್ಯತೆಯನ್ನು ಕಂಡು ಆಶ್ಚರ್ಯ ಪಡಬೇಕಾಗುತ್ತದೆ.

ಈ ಕಾಲದಲ್ಲಿ ಈರೀತಿ ನಿರ್ಮಾಣ ಶಕ್ತಿಯ ಮತ್ತು ಸಂಶೋಧನ ಮನೋಪ್ರವೃತ್ತಿಯ ಅಭಾವ ವನ್ನು ಕಾಣುವುದು ಭಾರತದಲ್ಲಿ ಮಾತ್ರವಲ್ಲ. ಪಶ್ಚಿಮ ಮತ್ತು ಮಧ್ಯ ಏಷ್ಯದಲ್ಲೆಲ್ಲ ಈ ಮಾನಸಿಕ ಕ್ಷಯರೋಗವು ಉಲ್ಬಣಿಸಿತ್ತು. ಚೀನಾ ವಿಷಯ ನನಗೆ ತಿಳಿಯದು. ಪ್ರಾಯಶಃ ಅಲ್ಲಿಯೂ ಈ ಬಗೆಯ ಒಂದು ಸ್ಥಂಭನರೋಗ ಹರಡಿರಬೇಕು. ಭಾರತ ಮತ್ತು ಚೀನಾದೇಶಗಳೆರಡರಲ್ಲೂ ಆರಂಭದ ಯುಗಗಳಲ್ಲಿ ವಿಜ್ಞಾನವು ಅನೇಖ ಶಾಖೆಗಳಲ್ಲಿ ಬಹಳ ಮುಂದುವರಿದಿತ್ತು. ಹಡಗು ನಿರ್ಮಾಣ ಮತ್ತು ವಿಶಾಲ ಪ್ರಪಂಚದ ವ್ಯಾಪಾರ ಇವುಗಳ ಅವಶ್ಯಕತೆಗಳಿಂದ ಯಂತ್ರೋಪಕರಣಗಳನ್ನು ಉತ್ತಮಗೊಳಿಸುವುದಕ್ಕೂ ಪ್ರೋತ್ಸಾಹದೊರೆಯುತ್ತಿತ್ತು. ಈದೇಶಗಳಲ್ಲಾಗಲಿ, ಇತರ ದೇಶಗಳ ಲ್ಲಾಗಲಿ ಆಗಿನ ಕಾಲದಲ್ಲಿ ಯಾವದೊಡ್ಡ ಯಂತ್ರನಿರ್ಮಾಣವೂ ಆಗಲಿಲ್ಲ. ಈ ದೃಷ್ಟಿಯಿಂದ ಹದಿ ನೈದನೆಯ ಶತಮಾನದ ಪ್ರಪಂಚಕ್ಕೂ, ಅದಕ್ಕೆ ಸಾವಿರ ಅಥವ ಎರಡುಸಾವಿರ ವರ್ಷಗಳ ಹಿಂದಿನ ಪ್ರಪಂಚಕ್ಕೂ ಯಾವ ವ್ಯತ್ಯಾಸವೂ ಇಲ್ಲ.

ಯೂರೋಪಿನ ಮಧ್ಯಕಾಲದ ಅಂಧಕಾರ ಯುಗದಲ್ಲಿ ಪ್ರಯೋಗ ವಿಜ್ಞಾನದಲ್ಲಿ ಬಹಳ ಮುಂದುವರಿದು ವಿಶೇಷ ಜ್ಞಾನವನ್ನು ಸಂಪಾದಿಸಿದ್ದ ಅರಬ್ಬಿ ಜನರು ತಮ್ಮ ಪ್ರಾಮುಖ್ಯತೆಯನ್ನು ಕಳೆದುಕೊಂಡು ಹಿಂದೆ ಬಿದ್ದಿದ್ದರು. ಮೊಟ್ಟಮೊದಲು ಏಳನೆಯ ಶತಮಾನದಲ್ಲಿ ಗಡಿಯಾರಗಳನ್ನು ಅರಬ್ಬಿ ಜನರೇ ತಯಾರಿಸಿದರು. ಡಮಾಸ್ಕಸ್ ಗಡಿಯಾರವು ಪ್ರಸಿದ್ಧಿಯಾಗಿತ್ತು. ಹರೂನ್-ಅಲ್-ರಷೀದ್ ಕಾಲದಲ್ಲಿ ಬಾಗ್ದಾದಿನ ಗಡಿಯಾರವೂ ಪ್ರಸಿದ್ಧಿಯಾಗಿತ್ತು. ಅರಬ್ಬಿ ಜನರ ಅವನತಿಯೊಂದಿಗೆ ಗಡಿಯಾರ ತಯಾರಿಸುವ ಕಲೆಯೂ ಆ ದೇಶದಿಂದ ಮಾಯವಾಯಿತು. ಯೂರೋಪಿನ ಕೆಲವು ದೇಶ ಗಳಲ್ಲಿ ಮಾತ್ರ ಉಳಿದು ಅಲ್ಲಲ್ಲಿ ಗಡಿಯಾರಗಳು ದೊರೆಯುತ್ತಿದ್ದವು.

ಕ್ಯಾಕ್ಸ್‌ಟನ್‌ಗಿಂತ ಮೊದಲು ಸ್ಪೇನಿನ ಮೂರ್—ಅರಬ್ಬಿಜನರು ಮರದ ಅಚ್ಚುಗಳಿಂದ ಮುದ್ರಣಮಾಡುತ್ತಿದ್ದರು. ಸರಕಾರದ ಆಜ್ಞೆಗಳ ಪ್ರತಿಮಾಡಲು ಅದನ್ನು ಉಪಯೋಗಿಸುತ್ತಿದ್ದರು. ಈ ಅಚ್ಚುಗಳಿಂದಲ್ಲದೆ ಮುದ್ರಣಕಲೆಯು ಮುಂದುವರಿದಂತೆ ಕಾಣುವುದಿಲ್ಲ, ಅನಂತರ ಅದೂ ಮಾಯ ವಾಯಿತು. ಯೂರೋಪ್ ಮತ್ತು ಪಶ್ಚಿಮ ಏಷ್ಯದಲ್ಲಿ ಪ್ರಬಲ ಸಾಮ್ರಾಜ್ಯ ಶಕ್ತಿಯಾಗಿದ್ದ ಆಟೋಮನ್ ತುರ್ಕಿಯವರು, ತಮ್ಮ ಬಾಗಿಲ ಎದುರಿನಲ್ಲೇ ಯೂರೋಪಿನಲ್ಲಿ ಅನೇಕ ಗ್ರಂಥಗಳು ಮುದ್ರಣವಾಗುತ್ತಿದ್ದರೂ, ಅನೇಕ ಶತಮಾನಗಳವರೆಗೆ ಮುದ್ರಣಕಲೆಯನ್ನು ಅಲಕ್ಷ್ಯಮಾಡಿದರು. ಪ್ರಾಯಶಃ ಈ ವಿಷಯ ತಿಳಿದಿರಲೇ ಬೇಕು, ಆದರೂ ಆ ಸಂಶೋಧನೆಯ ಉಪಯೋಗಪಡೆಯುವ ಆಸಕ್ತಿ ಇರಲಿಲ್ಲ. ತಮ್ಮ ಪವಿತ್ರಗ್ರಂಥವಾದ ಖುರಾನನ್ನು ಮುದ್ರಣಮಾಡುವುದು ಒಂದು ಮಹಾ ಪಾಪವೆಂದು ಭಾವಿಸಿದ್ದರಿಂದ ಮುದ್ರಣವು ಧರ್ಮ ಬಾಹಿರವೆಂಬ ಭಾವನೆಯೂ ಇತ್ತು. ಮುದ್ರಣ ವಾದ ಹಾಳೆಗಳನ್ನು ದುರುಪಯೋಗಪಡಿಸಬಹುದು, ತುಳಿಯಬಹುದು, ಕಸದಕುಪ್ಪೆಗೆ ಎಸೆಯ ಬಹುದು. ಈಜಿಪ್ಟಿನಲ್ಲಿ ಮುದ್ರಣಮಂದಿರವನ್ನು ಮೊದಲು ಸ್ಥಾಪಿಸಿದವನು ನೆಪೋಲಿಯನ್. ಅಲ್ಲಿಂದ ಕ್ರಮೇಣ ನಿದಾನವಾಗಿ ಅದು ಅರಬ್ಬಿದೇಶಗಳಿಗೆ ಹರಡಿತು.

ತನ್ನ ಹಿಂದಿನ ಪ್ರಯತ್ನಗಳಿಂದ ಏಷ್ಯ ಆಯಾಸಗೊಂಡು ಕ್ರಿಯಾಶೂನ್ಯವಾಗಿದ್ದಾಗ ಯೂರೋಪು ಅನೇಕ ರೀತಿಯಲ್ಲಿ ಒಂದು ನವಯುಗದ ಮುಂಬೆಳಗಿನಲ್ಲಿ ನಿಂತಿತ್ತು. ಒಂದು ಹೊಸ ಸ್ಫೂರ್ತಿ, ಹೊಸಬಾಳಿನ ತಳಮಳವು ಎದ್ದು ಅನೇಕ ಸಾಹಸಿಗರನ್ನು ಸಮುದ್ರಗಳಾಚೆ ಕರೆದೊ ಯ್ದಿತು. ಯೂರೋಪಿನ ಭಾವಜೀವಿಗಳ ಮನಸ್ಸು ಹೊಸ ದಾರಿಗಳಲ್ಲಿ ಪ್ರವೇಶಮಾಡಿತು.

ಪುನರುಜ್ಜೀವನ ಯುಗದಲ್ಲಿ ವಿಜ್ಞಾನದ ಪ್ರಗತಿಗೆ ಯಾವ ಪ್ರೋತ್ಸಾಹವೂ ದೊರೆತಿರಲಿಲ್ಲ. ಒಂದು ರೀತಿಯಲ್ಲಿ ಜನರು ವಿಜ್ಞಾನದಿಂದ ವಿಮುಖರಾಗಿದ್ದರು. ವಿಶ್ವವಿದ್ಯಾನಿಲಯಗಳಲ್ಲಿ ಏರ್ಪಡಿಸಿದ ಪುರಾತನ ಸಾಹಿತ್ಯ ಸಂಸ್ಕೃತಿಗಳ ಸಾಂಪ್ರದಾಯಿಕ ಅಭ್ಯಾಸ ಕ್ರಮವು ವಿಜ್ಞಾನದ ಅಭ್ಯಾಸಕ್ಕೆ ಅಡ್ಡಿಯಾಗಿ ಅದರ ಮುಖ್ಯಜ್ಞಾನವೂ ತಿಳಿಯದಾಯಿತು. ಕೋಪರ್ನಿಕಸ್, ಗೆಲಿಲಿಯೊ, ನ್ಯೂಟನ್‌ರ ಸಂಶೋಧನೆಗಳಾಗಿ, ಒಳ್ಳೆಯದೂರದರ್ಶಕ ಯಂತ್ರಗಳನ್ನು ಕಂಡು ಹಿಡಿದಿದ್ದರೂ ಹದಿನೆಂಟನೆಯ ಶತಮಾನದ ಮಧ್ಯಭಾಗದವರೆಗೆ ಇಂಗ್ಲೆಂಡಿನ ಅನೇಕ ವಿದ್ಯಾವಂತರು ಭೂಮಿ ತನ್ನ ಸುತ್ತ ತಿರುಗುತ್ತದೆ, ಸೂರ್ಯನ ಸುತ್ತಲೂ ತಿರುಗುತ್ತದೆ ಎಂದರೆ ನಂಬುತ್ತಿರಲಿಲ್ಲ. ಗ್ರೀಕ್ ಮತ್ತು ಲ್ಯಾಟಿನ್ ಗ್ರಂಥಗಳನ್ನು ಓದಿ ಎಲ್ಲವೂ ಭೂಮಿಯ ಸುತ್ತ ಎಂಬ ಟಾಲೆಮಿಯ ಅಭಿಪ್ರಾಯಕ್ಕೇ ಅಂಟಿಕೊಂಡಿದ್ದರು. ಹತ್ತೊಂಭತ್ತನೆಯ ಶತಮಾನದ ಇಂಗ್ಲೆಂಡಿನ ಪ್ರಸಿದ್ಧ ರಾಜಕಾರಣಿಯಾದ ಗ್ಲಾಡ್‌ಸ್ಟನ್ ತುಂಬ ಪ್ರತಿಭಾಶಾಲಿಯಾದರೂ ವಿಜ್ಞಾನದ ಗಂಧವೂ ಅವನಿಗೆ ಇರಲಿಲ್ಲ, ಅದರ ಮೇಲೆ ಆತನಿಗೆ ವಿಶ್ವಾಸವೂ ಇರಲಿಲ್ಲ.

ಪ್ರಪಂಚದ ಇಂದಿನ ಜೀವನವೇ ವಿಜ್ಞಾನದ ಉಪಯೋಗದಿಂದ ನಡೆಯುತ್ತಿದೆ ಎಂದು ತಿಳಿದಿದ್ದರೂ, ಅದರ ಉಪಯೋಗದಿಂದ ತಾವೇ ಸ್ವತಃ ಸಾಮೂಹಿಕ ಕೊಲೆ ಮತ್ತು ವಿನಾಶಕೃತ್ಯಗಳಲ್ಲಿ ಉದ್ಯುಕ್ತರಾಗಿದ್ದರೂ ಇಂಡಿಯದಲ್ಲಿ ಮಾತ್ರವಲ್ಲದೆ ಎಲ್ಲ ದೇಶಗಳ ರಾಜಕಾರಣಿಗಳು ಮತ್ತು ಸಾರ್ವಜನಿಕ ನಾಯಕರನೇಕರಿಗೆ ವಿಜ್ಞಾನದ ಅರಿವೂ ಇಲ್ಲ; ವಿಜ್ಞಾನ ಪದ್ಧತಿಯೂ ತಿಳಿಯದು.

ಏನೆ ಆಗಲಿ ಪುನರುಜ್ಜೀವನ ಯುಗದಿಂದ ಯೂರೋಪಿನ ಮನಸ್ಸು ತನ್ನ ಹಳೆಯ ಬಂಧನಗಳನ್ನು ಕಳಚಿಕೊಂಡಿತ್ತು; ಅದರ ಅನೇಕ ಪೂರ್ವದ ಆರಾಧ್ಯ ವಸ್ತುಗಳನ್ನು ತ್ಯಜಿಸಿತ್ತು. ಪುನರುಜ್ಜೀವನಕಾಲದ ಪ್ರಭಾವದಿಂದಲೋ ಬೇರೆ ಇತರ ಕಾರಣದಿಂದಲೋ ವಿಚಾರಪರ ದೃಷ್ಟಿಯು ಬಂದಿತ್ತು; ಕಾಲ್ಪನಿಕ ಅಸ್ಪಷ್ಟ ಭಾವನೆಗಳ ಮೇಲೂ, ಅರ್ಥಶೂನ್ಯ ಅಧಿಕಾರ ದರ್ಪಕ್ಕೂ ವಿರೋಧವೆದ್ದಿತ್ತು. "ಮಾನವನ ಶಕ್ತಿಮಾರ್ಗವೂ, ಜ್ಞಾನಮಾರ್ಗವೂ ಸಮೀಪ ಇವೆ. ಒಂದರಂತೆ ಇನ್ನೊಂದು ಆದರೆ ಭಾವನಾಪ್ರಪಂಚವನ್ನೇ ನಂಬುವ ದುರಭ್ಯಾಸದ ಬದಲು ವಿಜ್ಞಾನವನ್ನು ಪ್ರಯೋಗದ ತಳಹದಿಯ ಮೇಲೆ ಆರಂಭಿಸಿ ಕಟ್ಟುವುದೂ ಪ್ರಾಯೋಗಿಕ ಜ್ಞಾನದ ಆಧಾರದ ಮೇಲೆಯೇ ವಿಜ್ಞಾನ ಭಾವನೆಯನ್ನು ರೂಪಿಸಿ ನಿರ್ಧರಿಸುವುದೂ ಕ್ಷೇಮ" ಎಂದು ಫ್ರಾನ್ಸಿಸ್ ಬೇಕನ್ ಹೇಳಿದ್ದಾನೆ. ಪುನಃ ಏಳನೆಯ ಶತಮಾನದಲ್ಲಿ "ಅಧಿಕಾರ ಪೂಜೆಯೂ ಹಳೆಯ ಕಾಲದ ಅಭಿಪ್ರಾಯವನ್ನೇ ವೇದವಾಕ್ಯವನ್ನಾಗಿ ನಂಬಿ ಆಲೋಚನೆಗಳನ್ನು ರೂಪಿಸುವ ಅಭ್ಯಾಸವೂ ಸತ್ಯದ ಕೊಲೆಯನ್ನು ಮಾಡಿ ಜ್ಞಾನದ ಪರಮ ಶತ್ರುಗಳಾಗಿವೆ. ಏಕೆಂದರೆ ಈಗಲೂ ಇಂದಿನ ಅನೇಕರಲ್ಲಿ ಯಾವ ಮಟ್ಟದವರೇ ಇರಲಿ ಇಂದಿನ ಕಾರಣಬದ್ಧ ಯೋಚನೆಗಿಂತ ಹಿಂದಿನವರ ತೀರ್ಮಾನಕ್ಕೆ ಹೆಚ್ಚು ಬೆಲೆಕೊಡುವ ಮೂಢ ನಂಬಿಕೆಯು ಬೆಳೆದು ಬಿಟ್ಟಿದೆ. ಅವರ ಕಾಲವು ನಮಗಿಂತ ಬಹುದೂರದ್ದು; ಅವರ ಗ್ರಂಥಗಳ ಮೇಲೆ ಸಮಕಾಲೀನರದಾಗಲಿ, ಉತ್ತರಾಧಿಕಾರಿಗಳದಾಗಲಿ ಯಾವ ಬಗೆಯ ಹತೋಟಿಯೂ ಇಲ್ಲದೆ ಯಾರ ಕಣ್ಣೂ ಬೀಳದಷ್ಟು ದೂರವಾಗಿವೆ. ಹಳೆತಾದಷ್ಟೂ ಸತ್ಯಕ್ಕೆ ಸಮಾನ ಎಂಬ ಭಾವನೆ ಬಲಿಯುತ್ತಿದೆ. ಈರೀತಿ ನಾವು ಸತ್ಯಾನ್ವೇಷಣೆಯ ಮಾರ್ಗದಿಂದ ದೂರರಾಗಿ ಆತ್ಮವಂಚನೆ ಮಾಡಿಕೊಳ್ಳುತ್ತಿದ್ದೇವೆ." ಎಂದು ಸರ್ ಥಾಮಸ್ ಬ್ರಾನ್ ಹೇಳಿದ್ದಾನೆ.

ಅಕ್ಬರನ ಕಾಲವಾದ ಹದಿನಾರನೆಯ ಶತಮಾನದಲ್ಲಿ ಮಾನವ ಜೀವನದಲ್ಲಿ ಒಂದು ಕ್ರಾಂತಿಯನ್ನು ಉಂಟುಮಾಡಿದ ಬಲಕ್ರಿಯಾಶಾಸ್ತ್ರವು (dynamics) ಯೂರೋಪಿನಲ್ಲಿ ಹುಟ್ಟಿತು. ಈ ಸಂಶೋಧನೆಯಿಂದ ಯೂರೋಪ್ ಮೊದಲು ನಿಧಾನವಾದರೂ ಕ್ರಮೇಣ ಅತಿವೇಗದಿಂದ ಮುಂದುವರಿದು ಹತ್ತೊಂಭತ್ತನೆಯ ಶತಮಾನದಲ್ಲಿ ಎಲ್ಲರಿಗೂ ಮುಂದೆ ಬಂದು ಒಂದು ಹೊಸ ಪ್ರಪಂಚವನ್ನೇ ಸೃಷ್ಟಿಸಿತು. ಪ್ರಕೃತಿ ಶಕ್ತಿಯನ್ನು ಅಧೀನಮಾಡಿಕೊಂಡು ಈ ರೀತಿ ಯುರೋಪ್ ಮುಂದುವರಿಯುತ್ತಿದ್ದಾಗ ಏಷ್ಯ ಇನ್ನೂ ನಿಸ್ತೇಜನಾದ ಹೆಳವನಂತೆ ಮಾನವನ ದುಡಿತ ಮತ್ತು ಶ್ರಮದಿಂದ ಹಳೆಯ ಜಾಡಿನಲ್ಲೇ ತೆವಳುತ್ತಿತ್ತು.

ಹೀಗಾಗಲು ಕಾರಣವೇನು? ಒಂದೇಕೂಗು ಕೇಳಬೇಕೆಂದರೆ ಏಷ್ಯ ಬಹು ವಿಶಾಲವಾದುದು ಮತ್ತು ಬಹು ವಿಧವಾದುದು. ಪ್ರತಿಯೊಂದು ದೇಶವನ್ನೂ, ಅದರಲ್ಲೂ ಚೀನಾ, ಇಂಡಿಯಗಳಂಥ ದೇಶಗಳನ್ನು ಪ್ರತ್ಯೇಕವಾಗಿಯೇ ವಿಚಾರಮಾಡಬೇಕು. ಚೀನಾ ಆಗಲೂ ಮತ್ತು ಅನಂತರವೂ ಸುಸಂಸ್ಕೃತವಿತ್ತು. ಅಲ್ಲಿನ ಜನರು ಯುರೋಪಿಯನರ ಜೀವನಕ್ಕಿಂತ ಹೆಚ್ಚು ಸುಸಂಸ್ಕೃತ ಜೀವನ ನಡೆಸುತ್ತಿದ್ದರು. ಹೊರಗೆ ನೋಡಿದರೆ ಭಾರತದಲ್ಲಿ ಸಹ ಝಗ ಝಗಿಸುವ ರಾಜಾಸ್ಥಾನವಿತ್ತು. ವ್ಯಾಪಾರ ವಿನಿಮಯ, ಕೈಗಾರಿಕೆ, ಕುಶಲವಿದ್ಯೆಗಳು ಅಭಿವೃದ್ಧಿಗೊಂಡಿದ್ದವು. ಭಾರತೀಯನು ಯಾರಾದರೂ ಆಗ ಯೂರೋಪಿಗೆ ಹೋಗಿದ್ದರೆ ಯುರೋಪಿನ ಜೀವನವನ್ನು ಕಂಡು ಶುದ್ಧ ಒರಟು ಜೀವನವೆಂದು ಹೇಳುತ್ತಿದ್ದನು. ಆದರೂ ಯೂರೋಪಿನಲ್ಲಿ ಕಾಣಬರುತ್ತಿದ್ದ ಚಲನ ಶಕ್ತಿಯು ಭಾರತದಲ್ಲಿ ಪೂರ್ಣವಾಗಿ ಅಡಗಿಹೋಗಿತ್ತು.

ಹೊರಗಿನ ದಾಳಿಗಿಂತ ಒಳಗಿನ ನ್ಯೂನತೆಯೇ ನಾಗರಿಕತೆಯ ನಾಶಕ್ಕೆ ಮುಖ್ಯ ಕಾರಣ. ತನ್ನ ಕಾರ್ಯವನ್ನು ತಾನು ಸಾಧಿಸಿ ಮುಂದುವರಿಯುವ ಪ್ರಪಂಚಕ್ಕೆ ಯಾವ ಹೊಸ ಕಾಣಿಕೆಯನ್ನೂ ಕೊಡಲು ಶಕ್ತಿ ಇಲ್ಲದೆ ನಾಶವಾಗಬಹುದು; ಅಥವ ಅನಾಗರಿಕತೆಯ ಜನರು ಸತ್ವಹೀನರಾಗಿ ಜವಾಬ್ದಾರಿಯ ಹೊರೆಯನ್ನು ನಿರ್ವಹಿಸಲು ಅಶಕ್ತರಾಗಿ ಅವರ ನಾಗರಿಕತೆಯು ನಾಶಹೊಂದಬಹುದು; ಅಥವ ಒಂದು ಹಂತದವರೆಗೆ ಪ್ರಗತಿದಾಯಕವಾಗಿದ್ದ ಸಮಾಜ ಸಂಸ್ಕೃತಿಯು ಮುಂದಿನ ಪ್ರಗತಿಗೆ ಆತಂಕವಾಗಬಹುದು. ಆ ಆತಂಕವನ್ನು ನಿರ್ಮೂಲಮಾಡದೆ ಅಥವ ಆ ಸಂಸ್ಕೃತಿಯ ಮೂಲಗುಣದಲ್ಲಿ ವ್ಯತ್ಯಾಸವಾಗದೆ ಪ್ರಗತಿಯು ಸಾಧ್ಯವಾಗುವುದಿಲ್ಲ. ಭಾರತೀಯ ನಾಗರೀಕತೆಯ ಅವನತಿಯು ತುರ್ಕಿ ಮತ್ತು ಅಫ್ಘನ್ ದಂಡಯಾತ್ರೆಗಳಿಗೆ ಮೊದಲೇ ಆರಂಭವಾಯಿತು. ದಂಡೆತ್ತಿ ಬಂದ ಈ ಹೊಸ ಜನರೊಂದಿನ ಘರ್ಷಣೆಯಿಂದ, ಅವರ ಹೊಸ ಭಾವನೆಗಳಿಂದ ಪ್ರಾಚೀನ ಭಾರತದ ಮೇಲೆ ಹೊಸ ಸಾಮಾಜಿಕ ಪರಿವರ್ತನೆ ಏನಾದರೂ ಆಯಿತೆ; ಮಾನಸಿಕ ಶೃಂಖಲೆಗಳನ್ನು ಕಿತ್ತೊಗೆದು, ನವಚೈತನ್ಯವನ್ನೇನಾದರೂ ಹೊರಸೂಸಿತೆ?

ಸ್ವಲ್ಪಮಟ್ಟಿನ ಪರಿವರ್ತನೆ ಏನೋ ಆಯಿತು. ಕಲೆ, ವಾಸ್ತು ಶಿಲ್ಪ, ಚಿತ್ರಕಲೆ, ಸಂಗೀತ ಮತ್ತು ಜೀವನರೀತಿಯಲ್ಲಿ ಬದಲಾವಣೆಗಳಾದವು. ಆದರೆ ಆಳವಾದ ಪರಿವರ್ತನೆ ಯಾವುದೂ ಆಗಲಿಲ್ಲ. ಮೇಲೆ ಮೇಲೆ ಮಾತ್ರ ಸ್ವಲ್ಪ ವ್ಯತ್ಯಾಸವಾಗಿ ಸಮಾಜರಚನೆಯು ಮಾತ್ರ ಮೊದಲಿನಂತೆಯೆ ಉಳಿಯಿತು. ಕೆಲವು ಸಂದರ್ಭಗಳಲ್ಲಿ ಇನ್ನೂ ಕಠಿಣವಾಯಿತು. ಆಫ್ಘನರಲ್ಲಿ ಹೊಸ ಸುಧಾರಣೆಯ ನೀತಿ ಯಾವುದೂ ಇರಲಿಲ್ಲ. ಅವರದು ಪಾಳೆಗಾರಿಕೆಯ ಶ್ರೀಮಂತಿಕೆ. ಭಾರತದಲ್ಲಿ ಯೂರೋಪಿನ ಶ್ರೀಮಂತರಂತೆ ಶ್ರೀಮಂತಿಕೆ ಇರಲಿಲ್ಲ. ಆದರೆ ಭಾರತದ ರಕ್ಷಣೆಗೆ ಬೆನ್ನುಮೂಳೆಯಂತೆ ಇದ್ದ ರಾಜಪುತ್ರ ಮನೆತನಗಳವರು ಒಂದು ರೀತಿಯ ಶ್ರೀಮಂತಿಕೆಯವರು. ಮೊಗಲರು ಒಂದು ತರಹ ಶ್ರೀಮಂತಿಕೆಯವರಾದರೂ ಕೇಂದ್ರದಲ್ಲಿ ಪ್ರಬಲನಾದ ರಾಜನಿದ್ದನು. ರಾಜಪುತಾನದ ಶ್ರೀಮಂತಿಕೆಯು ಈ ಪ್ರಭುತ್ವದ ವಶವಾಯಿತು.

ಅಕ್ಬರನು ಪ್ರಪಂಚದ ಇತರ ಭಾಗಗಳಲ್ಲಿ ಏನು ನಡೆಯುತ್ತಿದೆ ಎಂದು ತನ್ನ ಸೂಕ್ಷ್ಮದೃಷ್ಟಿಯನ್ನು ಆಕಡೆ ತಿರುಗಿಸಿದ್ದರೆ ಸಮಾಜ ಸುಧಾರಣೆಗೆ ಒಳ್ಳೆಯ ತಳಪಾಯವನ್ನು ಹಾಕಬಹುದಾಗಿತ್ತು. ಆದರೆ ಆತನು ತನ್ನ ಚಕ್ರಾಧಿಪತ್ಯವನ್ನು ಬಲಪಡಿಸುವುದರಲ್ಲೇ ನಿರತನಾದನು. ಮತಾಂತರಗೊಳಿಸಲು ಹಾತೊರೆಯುತ್ತಿದ್ದ ಇಸ್ಲಾಂ ಧರ್ಮವನ್ನು, ಜನರ ರಾಷ್ಟ್ರೀಯ ಧರ್ಮ ಮತ್ತು ಸಂಪ್ರದಾಯಗಳನ್ನು ಸಮನ್ವಯಗೊಳಿಸಿ ರಾಷ್ಟ್ರದ ಐಕ್ಯತೆಯನ್ನು ಹೇಗೆ ಸಾಧಿಸಬೇಕೆಂಬುದೇ ಅವನ ಸಮಸ್ಯೆಯಾಯಿತು. ಧರ್ಮಕ್ಕೆ ಕಾರಣಬದ್ಧ ವಿವರಣೆಯನ್ನು ಕೊಡುತ್ತಿದ್ದನು. ಭಾರತೀಯ ರಂಗದಲ್ಲಿ ಸ್ವಲ್ಪ ಮಾರ್ಪಾಡನ್ನೂ ಮಾಡುವಂತೆ ಕಂಡಿತು. ಇತರ ಎಲ್ಲ ಕಡೆಗಳಂತೆ ಈ ನೇರವಾದ ಮಾರ್ಗದಲ್ಲಿ ಅವನು ಕೃತಕೃತ್ಯನಾಗಲಿಲ್ಲ.

ಆದ್ದರಿಂದ ಭಾರತದ ಸಮಾಜ ರಚನೆಯನ್ನು ಸಡಲಿಸಲು ಅಕ್ಬರನಿಗೂ ಸಾಧ್ಯವಾಗಲಿಲ್ಲ. ಆತನ

ತರುವಾಯ ಆತನ ಕಾಲದ ಹೊಸ ವಾತಾವರಣವೂ, ಮಾನಸಿಕ ಆಸಕ್ತಿಯೂ ಮಾಯವಾಗಿ ಭಾರತವು ಪುನಃ ನಿಶ್ಚಲ ನಿದ್ರಾವಸ್ಥೆಯನ್ನು ತಾಳಿತು.*

### ಸಮನ್ವಯ ಸಂಸ್ಕೃತಿಯ ಬೆಳವಣಿಗೆ

ಅಕ್ಬರನು ಭದ್ರವಾದ ತಳಹದಿಯ ಮೇಲೆ ರಾಜ್ಯವನ್ನು ಕಟ್ಟಿದ್ದರಿಂದ ಆತನ ವಂಶೀಕರು ಅಷ್ಟು ದಕ್ಷರಲ್ಲದಿದ್ದರೂ ಆ ರಾಜ್ಯವು ಒಂದುನೂರು ವರ್ಷಗಳವರೆಗೆ ಬಾಳಿತು. ಪ್ರತಿಯೊಬ್ಬ ಚಕ್ರವರ್ತಿಯ ಮರಣಾನಂತರವೂ ಸಿಂಹಾಸನಕ್ಕಾಗಿ ಮಕ್ಕಳಲ್ಲಿ ಯುದ್ಧವಾಗಿ ಕೇಂದ್ರದ ಶಕ್ತಿಯು ಕುಂದುತ್ತಬಂದಿತು. ಆದರೂ ರಾಜಸಭೆಯು ಮಾತ್ರ ವೈಭವಪೂರ್ಣವಿತ್ತು. ಮೊಗಲರ ಕೀರ್ತಿಯು ಏಷ್ಯಾ ಮತ್ತು ಯೂರೋಪಿನಲ್ಲೆಲ್ಲ ಪ್ರಸಿದ್ಧವಿತ್ತು. ಪ್ರಾಚೀನ ಭಾರತದ ವಸ್ತುಶಿಲ್ಪಕಲೆಯೊಡನೆ ಹೊಸಕಲೆಯ ಸರಳತೆಯೂ ಗಾಂಭೀರ್ಯವೂ ಬೆರೆತು ದೆಹಲಿ ಮತ್ತು ಆಗ್ರ ನಗರಗಳಲ್ಲಿ ಸುಂದರ ಭವನಗಳ ನಿರ್ಮಾಣವಾಯಿತು. ಉತ್ತರ ಮತ್ತು ದಕ್ಷಿಣ ಭಾರತದ ವಿಶೇಷ ಆಡಂಬರದ ದೇವಸ್ಥಾನಗಳ ಶಿಥಿಲ ಕಲೆಗಿಂತ ಇಂಡೊ ಮೊಗಲ್ ಕಲೆಯ ಈ ಕಟ್ಟಡಗಳ ಸೌಂದರ್ಯವು ಭವ್ಯವಿತ್ತು. ಉತ್ಸಾಹಪೂರ್ಣವಾದ ಶಿಲ್ಪಿಗಳು ತಮ್ಮ ಪ್ರೇಮಪೂರಿತ ಕೈಗಳಿಂದ ಆಗ್ರ ನಗರದಲ್ಲಿ "ತಾಜಮಹಲ್"ನ್ನು ಕಟ್ಟಿದರು.

ಮೊಗಲ್ ಬಾದಶಹರಲ್ಲಿ ಕೊನೆಯವನಾದ ಅವರಂಗ್‌ಜೇಬ್ ಕಾಲಚಕ್ರವನ್ನು ಹಿಂದಕ್ಕೆ ತಿರುಗಿಸಲು ಪ್ರಯತ್ನಮಾಡಿ ಪ್ರಗತಿಯನ್ನು ತಡೆದು ಕಡೆಗೆ ನುಚ್ಚುನೂರುಮಾಡಿದನು. ಜನತೆಯ ಸ್ವಭಾವಕ್ಕನುಗುಣವಾಗಿ ಮೊಗಲ್ ಚಕ್ರವರ್ತಿಗಳು ಎಂದಿನವರೆಗೆ ನಡೆದು ದೇಶದ ವಿವಿಧ ಪಂಗಡಗಳಲ್ಲಿ ಐಕ್ಯಮತ್ಯವನ್ನುಂಟುಮಾಡಿ ಸರ್ವಸಮಾನ ರಾಷ್ಟ್ರೀಯ ಭಾವನೆಯನ್ನುಂಟು ಮಾಡಲು ಪ್ರಯತ್ನಪಟ್ಟರೋ ಅಂದಿನವರೆಗೂ ಅವರು ಬಲಿಷ್ಠರಾಗಿದ್ದರು. ಅವರಂಗಜೇಬನು ಎಂದು ಈ ಪ್ರಯತ್ನಕ್ಕೆ ಅಡ್ಡಬಂದು ಭಾರತೀಯನಲ್ಲದೆ ಮುಸ್ಲಿಂ ಚಕ್ರವರ್ತಿಯಾಗಲು ಪ್ರಯತ್ನ ಪಟ್ಟನೋ ಅಂದಿನಿಂದ ಮೊಗಲ್ ಚಕ್ರಾಧಿಪತ್ಯವು ಸಡಿಲಿ ಕುಸಿಯಲು ಆರಂಭವಾಯಿತು. ಅಕ್ಬರನೂ ಅವನ ವಂಶೀಕರೂ ಮಾಡಿದ ಕೆಲಸವೆಲ್ಲ ನಿರರ್ಥಕವಾಯಿತು. ಅಕ್ಬರನು ತನ್ನ ರಾಜನೀತಿಯಿಂದ ಒಟ್ಟುಗೂಡಿಸಿದ್ದ ಭಿನ್ನ ಶಕ್ತಿಗಳೆಲ್ಲ ಬೇರೆಯಾಗಿ ಚಕ್ರಾಧಿಪತ್ಯದ ಮೇಲೆ ತಿರುಗಿಬಿದ್ದವು. ಸಂಕುಚಿತ ಭಾವನೆಯಿಂದ ಕೂಡಿದ್ದರೂ ಪುನರುಜ್ಜೀವಿತ ರಾಷ್ಟ್ರೀಯ ಭಾವನೆಯ ಹೊಸ ಚಳುವಳಿಗಳೆದ್ದವು. ಶಾಶ್ವತ ನಿಲ್ಲಲು ಶಕ್ತಿಸಾಲದೆ ಇದ್ದರೂ ಮತ್ತು ಸನ್ನಿವೇಶವು ವಿರೋಧವಿದ್ದರೂ, ಮೊಗಲ ಚಕ್ರಾಧಿಪತ್ಯವನ್ನು ಮಾತ್ರ ಅವು ನಾಶಮಾಡಿದವು.

---

* ಕೊಲಂಬಸ್ ಅಮೆರಿಕ ಕಂಡುಹಿಡಿದ ವಿಷಯವು ಅಕ್ಬರನಿಗೆ ತಿಳಿದಿತ್ತೆಂದು ಅಬುಲ್ ಫಸಲ್ ಹೇಳುತ್ತಾನೆ. ಜಹಾಂಗೀರನ ಕಾಲದಲ್ಲಿ ಯೂರೋಪಿನ ಮೂಲಕ ಅಮೆರಿಕದ ತಂಬಾಕು ಇಂಡಿಯಾಕ್ಕೆ ಬಂದಿತು. ಜಹಾಂಗೀರನು ಅದರ ಅಭ್ಯಾಸವನ್ನು ತಡೆಗಟ್ಟಲು ಎಷ್ಟೋ ಪ್ರಯತ್ನಪಟ್ಟರೂ ಬಹಳಬೇಗ ಜನರಲ್ಲಿ ಹರಡಿತು.

ಮೊಗಲರ ಕಾಲದಲ್ಲಿ ಮಧ್ಯ ಏಷ್ಯಾಕ್ಕೂ ಭಾರತಕ್ಕೂ ನಿಕಟ ಸಂಬಂಧವಿತ್ತು. ರಷ್ಯದವರೆಗೂ ಈ ಸಂಬಂಧವು ಹಬ್ಬಿ ಅಲ್ಲಿ ಭಾರತೀಯ ರಾಯಭಾರಿಗಳೂ ವ್ಯಾಪಾರಸ್ಥರೂ ಇದ್ದರೆಂದು ತಿಳಿದುಬಂದಿದೆ. ರಷ್ಯದ ಚರಿತ್ರೆಗಳಲ್ಲಿ ಆ ರೀತಿ ಉಲ್ಲೇಖವಿರುವುದನ್ನು ರಷ್ಯನ್ ಸ್ನೇಹಿತನೊಬ್ಬನು ನನಗೆ ತಿಳಿಸಿದ್ದಾನೆ. ೧೫೩೨ರಲ್ಲಿ ಬಾಬರನ ಪ್ರತಿನಿಧಿಯಾದ ಖೋಜಾಹುಸೇ ಎಂಬಾತನು ಒಂದು ಸ್ನೇಹದ ಒಪ್ಪಂದವನ್ನು ಮಾಡಿಕೊಳ್ಳಲು ಬಂದನು. ೧೬೧೩-೧೬೪೫ರವರೆಗೆ ಆಳಿದ ಜ್ಹಾರ್ ಮೈಕೆಲ್ ಪೆಡೊರಾಫನ ಕಾಲದಲ್ಲಿ ವೋಲ್ಗಾ ನದಿಯ ದಡದಲ್ಲಿ ಭಾರತೀಯ ವರ್ತಕರಿದ್ದರೆಂದು ತಿಳಿದುಬಂದಿದೆ. ೧೬೨೫ರಲ್ಲಿ ಸೈನ್ಯಾಧಿಕಾರಿಯ ಆಜ್ಞೆಯಿಂದ ಆಸ್ಟ್ರಖಾನ್‌ನಲ್ಲಿ ಒಂದು ಭಾರತೀಯ ಪಾಳೆಯವನ್ನು ಕಟ್ಟಿದರು. ಭಾರತೀಯ ಕುಶಲಕರ್ಮಿಗಳನ್ನು ಮುಖ್ಯವಾಗಿ ನೇಕಾರರನ್ನು ಮಾಸ್ಕೋವಿಗೆ ಕರೆಸಿಕೊಂಡರು. ೧೬೯೫ರಲ್ಲಿ ಸೆಮೀ ಮೆಲೆಂಕಿ ಎಂಬ ರಷ್ಯದ ವ್ಯಾಪಾರಿಯು ದೆಹಲಿಗೆ ಬಂದು ಅವರಂಗಜೇಬ್‌ನಿಂದ ಸ್ವಾಗತಪಡೆದನು. ೧೭೨೨ರಲ್ಲಿ ಮಹಾಪೀಟರನು ಆಸ್ಟ್ರಖಾನ್‌ಗೆ ಬಂದಾಗ ಭಾರತೀಯ ವರ್ತಕರಿಗೆ ಭೇಟಿಕೊಟ್ಟನು. ೧೭೪೫ರಲ್ಲಿ ಸಾಧುಗಳ ತಂಡವೊಂದು ಆಸ್ಟ್ರಖಾನ್‌ಗೆ ಹೋಗಿದ್ದರು. ಅವರಲ್ಲಿಬ್ಬರು ರಷ್ಯದಲ್ಲಿಯೇ ನೆಲಸಿ ರಷ್ಯಾಪ್ರಜೆಗಳಾದರು.

ವಾಯವ್ಯಮೂಲೆಯಿಂದ ಬಂದ ದಂಡಯಾತ್ರಿಕರ ಸಂಪರ್ಕ ಮತ್ತು ಇಸ್ಲಾಂ ಧರ್ಮದ ಪ್ರಭಾವವು ಭಾರತದ ಮೇಲೆ ವಿಶೇಷ ಪರಿಣಾಮ ಮಾಡಿತು. ಹಿಂದೂ ಸಮಾಜದಲ್ಲಿ ಒದಗಿದ್ದ ಮೂಢ ಸಂಪ್ರದಾಯಗಳನ್ನು ಎತ್ತಿತೋರಿಸಿ ಬೈಲಿಗೆಳೆದಿತು. ಜಾತಿಯ ಕಾಠಿಣ್ಯತೆ, ಅಸ್ಪೃಶ್ಯತೆ, ಮಡಿವಂತಿಕೆ ಅಸಹನೀಯವಾಗಿತ್ತು. ಹಿಂದೂಧರ್ಮದಲ್ಲಿ ಸಮಾನ ಅವಕಾಶದ ಕನಸು ಸಹ ಕಾಣದ ಅನೇಕರಿಗೆ ಇಸ್ಲಾಂಧರ್ಮದ ಭ್ರಾತೃತ್ವ ಮತ್ತು ಸರ್ವಸಮಾನತೆಯ ಆದರ್ಶವು ಮುಕ್ತದ್ವಾರವಾಯಿತು. ಈ ಆದರ್ಶಗಳ ಘರ್ಷಣೆಯಿಂದ ಧಾರ್ಮಿಕ ಐಕ್ಯತೆಯ ಹೊಸ ಧರ್ಮವಿಕಸನಗಳಾದವು. ಅನೇಕರು ಮತಾಂತರವನ್ನೂ ಹೊಂದಿದರು. ಈ ಮತಾಂತರಗಳು ಮುಖ್ಯವಾಗಿ ಬಂಗಾಳದ ಕನಿಷ್ಠ ಜಾತಿಯವರಲ್ಲೇ ಹೆಚ್ಚು. ಉತ್ತಮ ಜಾತಿಯವರಲ್ಲಿ ಸಹ ಕೆಲವರು ನಿಜವಾದ ಧರ್ಮವಿಶ್ವಾಸದಿಂದಲೋ ಅಥವ ರಾಜಕೀಯ ಆರ್ಥಿಕ ಕಾರಣಗಳಿಂದಲೋ ಮತಾಂತರ ಹೊಂದಿದರು. ಆಳುವ ರಾಜರ ಧರ್ಮಾವಲಂಬನೆಯಿಂದ ಕೆಲವು ಅನುಕೂಲಗಳಿದ್ದವು.

ಇಷ್ಟೆಲ್ಲ ಮತಾಂತರಗಳಾದರೂ ಶಾಖೋಪಶಾಖೆಯ ಹಿಂದೂ ಧರ್ಮವು ಭದ್ರವಾಗಿ, ಆತ್ಮವಿಶ್ವಾಸವುಳ್ಳದಾಗಿ ರಾಷ್ಟ್ರದ ಪ್ರಧಾನ ಧರ್ಮವಾಗಿಯೇ ಉಳಿಯಿತು. ಉತ್ತಮ ಜಾತಿಯವರಿಗೆ ತಮ್ಮ ಆದರ್ಶ ಮತ್ತು ಭಾವನೆಗಳ ಸರ್ವಶ್ರೇಷ್ಠತೆಯಲ್ಲಿ ಪೂರ್ಣವಿಶ್ವಾಸವಿತ್ತು; ಮತ್ತು ದರ್ಶನ ಮತ್ತು ತತ್ವ-ಶಾಸ್ತ್ರಗಳ ಸಮಸ್ಯೆಗಳ ದೃಷ್ಟಿಯಿಂದ ಇಸ್ಲಾಂ ಧರ್ಮದ ಭಾವನೆಯು ಅಪಕ್ವಭಾವನೆಯೆಂದು ತಿಳಿದಿದ್ದರು. ಇಸ್ಲಾಂ ಧರ್ಮದ ಏಕದೇವತಾ ಭಾವನೆಯು ಹಿಂದೂ ಧರ್ಮದಲ್ಲಿಯೇ ಇದ್ದು ಏಕತ್ವವಾದದ ಆಧಾರದ ಮೇಲೆಯೇ ಪ್ರಮುಖ ಹಿಂದೂದರ್ಶನವನ್ನು ಕಟ್ಟಲಾಗಿತ್ತು. ಸುಲಭವೂ, ಲೋಕಪ್ರಿಯವೂ ಆದ ಯಾವ ಪೂಜಾ ಪದ್ಧತಿಯನ್ನಾಗಲಿ ಅನುಸರಿಸಲು ಎಲ್ಲರಿಗೂ ಅವಕಾಶವಿತ್ತು. ವೈಷ್ಣವ ಧರ್ಮವನ್ನವಲಂಬಿಸಿ ತನ್ನ ಆರಾಧ್ಯಮೂರ್ತಿಯ ಚರಣಾರವಿಂದಗಳಲ್ಲಿ ತನ್ನ ಭಕ್ತಿಯ ಕಾಣಿಕೆಯನ್ನು ಸುರಿದು ಆತ್ಮತೃಪ್ತಿ ಪಡೆಯಬಹುದಿತ್ತು. ಅಥವ ತಾತ್ವಿಕ ದೃಷ್ಟಿಯವನಾದರೆ ಜಟಿಲ ತತ್ವಶಾಸ್ತ್ರ ಮತ್ತು ದರ್ಶನಗಳ ಉನ್ನತ ಪ್ರಪಂಚದಲ್ಲಿ ವಿಹರಿಸಬಹುದಾಗಿತ್ತು. ಹಿಂದೂಗಳ ಸಮಾಜರಚನೆಯಲ್ಲಿ ಸಮಷ್ಟಿ ಜೀವನಕ್ಕೆ ಪ್ರಾಮುಖ್ಯತೆ ಇದ್ದರೂ ಧಾರ್ಮಿಕ ಭಾವನೆ ಎಲ್ಲವೂ ವೈಯಕ್ತಿಕವಾಗಿತ್ತು, ತಾವು ಮತಾಂತರವನ್ನೂ ಮಾಡುತ್ತಿರಲಿಲ್ಲ; ತಮ್ಮಲ್ಲಿ ಕೆಲವರು ಮತಾಂತರ ಹೊಂದಿದರೂ ಲಕ್ಷ್ಯಮಾಡುತ್ತಿರಲಿಲ್ಲ. ತಮ್ಮ ಸಮಾಜರಚನೆ ಅಥವ ಜೀವನದ ವಿಷಯದಲ್ಲಿ ಯಾರಾದರೂ ಪ್ರವೇಶಿಸಿದರೆ ಸಹಿಸುತ್ತಿರಲಿಲ್ಲ. ಬೇರೊಂದು ಪಂಗಡಕ್ಕೆ ಇಷ್ಟ ಬಂದ ರೀತಿಯಲ್ಲಿ ಜೀವನ ನಡೆಸಲು ಎಲ್ಲರಿಗೂ ಪೂರ್ಣ ಸ್ವಾತಂತ್ರ್ಯವಿತ್ತು. ಸಾಮಾನ್ಯವಾಗಿ ಇಸ್ಲಾಂ ಧರ್ಮವನ್ನು ಅವಲಂಬಿಸಿದವರೆಲ್ಲರೂ ಒಟ್ಟೊಟ್ಟಿಗೆ ಕುಲಕ್ಕೆ ಕುಲವೇ ಸೇರುತ್ತಿದ್ದರು. ಜಾತಿಯ ಕಟ್ಟು ಅಷ್ಟು ಬಲವಾಗಿತ್ತು. ಉತ್ತಮ ಜಾತಿಯವರಲ್ಲಿ ಒಬ್ಬೊಬ್ಬರೇ ಸೇರುತ್ತಿದ್ದರು. ಆದರೆ ಕನಿಷ್ಠ ಜಾತಿಯವರು ಸೇರಿದಾಗ ಕುಲಕ್ಕೆ ಕುಲವೇ ಅಥವ ಗ್ರಾಮಕ್ಕೆ ಗ್ರಾಮವೇ ಸೇರುತ್ತಿತ್ತು. ಇದರಿಂದ ಪೂಜಾ ಪದ್ಧತಿಯಲ್ಲಿ ಸ್ವಲ್ಪ ವ್ಯತ್ಯಾಸವಾದರೂ ಕುಲಪದ್ಧತಿಗಳೂ, ಜೀವನವೂ ನಾಶವಾಗಲಿಲ್ಲ. ಕೆಲವು ಕಸಬುಗಳಲ್ಲಿ ಕೆಲಸಗಳಲ್ಲಿ ಮುಸ್ಲಿಮರೇ ಹೆಚ್ಚಾಗಿರುವುದಕ್ಕೆ ಇದೇ ಮುಖ್ಯಕಾರಣ. ಕೆಲವು ಕಡೆ ನೇಕಾರರು ಸಂಪೂರ್ಣವಾಗಿ ಮುಸ್ಲಿಮರು. ಜೋಡುವ್ಯಾಪಾರಿಗಳೂ, ಕಸಾಯಿ ಅಂಗಡಿಯವರೂ ಮುಸ್ಲಿಮರು. ದರ್ಜಿ ಕೆಲಸದಲ್ಲಿ ಇನ್ನೂ ಅನೇಕ ಉದ್ಯೋಗಗಳಲ್ಲಿ ಕುಶಲಕರ್ಮಗಳಲ್ಲಿ ಮುಸ್ಲಿಂರೇ ಹೆಚ್ಚು ಇದ್ದಾರೆ. ಕುಲಪದ್ಧತಿಯು ನಾಶವಾದ್ದರಿಂದ ಅನೇಕರು ಇತರ ಉದ್ಯಮಗಳಲ್ಲೂ ತೊಡಗಿ ಕುಲವೃತ್ತಿಯ ವ್ಯತ್ಯಾಸಗಳನ್ನು ಕಡಮೆ ಮಾಡಿದ್ದಾರೆ. ಬ್ರಿಟಿಷರ ಆಳ್ವಿಕೆಯಲ್ಲಿ ಆರಂಭದಲ್ಲಿ ಉದ್ದೇಶಪೂರ್ವಕವಾಗಿಯೂ, ಅನಂತರ ಸಾಮ್ರಾಜ್ಯದ ಆರ್ಥಿಕ ನೀತಿಯ ದೃಷ್ಟಿಯಿಂದಲೂ ಭಾರತದ ಗ್ರಾಮ ಕೈಗಾರಿಕೆ ಮತ್ತು ಉದ್ಯೋಗಗಳನ್ನು ನಾಶಮಾಡಿದ್ದರ ಫಲವಾಗಿ ಅನೇಕ ಕಾರೇಗಾರರು, ಕುಶಲ ಕರ್ಮಿಗಳು ಮುಖ್ಯವಾಗಿ ಬಹುಜನ ನೇಕಾರರು ತಮ್ಮ ಜೀವನೋಪಾಯವನ್ನು ಕಳೆದುಕೊಂಡರು. ಈ ಪೆಟ್ಟನ್ನು ಸಹಿಸಿಕೊಂಡು ಉಳಿದವರು ವ್ಯವಸಾಯಗಾರರಾದರು; ಭೂಮಿಯಿಲ್ಲದ ಕೂಲಿಗಳಾಗಿಯೋ ತಮ್ಮ ಬಂಧುಗಳ ಗೇಣುದ್ದದ ಭೂಮಿಯನ್ನು ಉಳುಮೆ ಮಾಡಿಯೋ ಜೀವಿಸಬೇಕಾಯಿತು.

ಬಲಾತ್ಕಾರವಾಗಿ ಮತಾಂತರಗೊಳಿಸಿದಾಗ ಮಾತ್ರವಲ್ಲದೆ, ವ್ಯಕ್ತಿಗಳಾಗಲಿ, ಜಾತಿಗಳಾಗಲಿ, ಮತಾಂತರವಾದಾಗ ಯಾವ ಗಲಭೆಯೂ ಆಗುತ್ತಿರಲಿಲ್ಲ. ಬಂಧುಗಳೋ, ಸ್ನೇಹಿತರೋ, ನೆರೆಯವರೊ ಅಸಮಾಧಾನಪಟ್ಟಿರಬಹುದು. ಆದರೆ ಹಿಂದೂ ಸಮಾಜವು ಅದಕ್ಕೆ ಯಾವ ಪ್ರಾಮುಖ್ಯತೆಯನ್ನೂ ಕೊಡಲಿಲ್ಲ. ಈ ಅಲಕ್ಷ್ಯಮನೋಭಾವಕ್ಕೆ ಪ್ರತಿಯಾಗಿ ಈಗ ಇಸ್ಲಾಂಧರ್ಮಕ್ಕಾಗಲಿ, ಕ್ರೈಸ್ತಮತಕ್ಕೆ ಆಗಲಿ ಯಾರಾದರೂ ಮತಾಂತರ ಹೊಂದಿದರೆ ಜನರು ಉದ್ವೇಗಗೊಂಡು ದಂಗೆ ಏಳುತ್ತಾರೆ, ಕೋಮುವಾರು ಚುನಾವಣಾಪದ್ಧತಿಯೂ, ರಾಜಕೀಯ ವಿಷಯಗಳೂ ಅದಕ್ಕೆ ಕಾರಣ. ಪ್ರತಿಯೊಂದು ಮತಾಂತರವೂ ಆ ಕೋಮಿನ ಸಂಖ್ಯೆಯನ್ನು ಹೆಚ್ಚಿಸಿ, ದಾಮಾಷ ಪ್ರತಿನಿಧಿತ್ವವನ್ನೂ, ರಾಜಕೀಯ ಪ್ರಭಾವವನ್ನೂ ಹೆಚ್ಚಿಸುತ್ತದೆಂಬ ಭಾವನೆ ಇದೆ. ಜನಗಣತಿಯಲ್ಲಿ ಸುಳ್ಳು ಸಂಖ್ಯೆಗಳನ್ನು ಸೇರಿಸಲು ಸಹ ಪ್ರಯತ್ನ ನಡೆದಿದೆ. ಈ ರಾಜಕೀಯ ಕಾರಣಗಳಲ್ಲದೆ ಹಿಂದೂಗಳಲ್ಲದವರನ್ನು ಹಿಂದೂ ಧರ್ಮಕ್ಕೆ ಸೇರಿಸಿಕೊಳ್ಳುವ ಯತ್ನವೂ ಈಗ ಹಿಂದೂ ಧರ್ಮದಲ್ಲಿ ನಡೆದಿದೆ. ಇದು ಹಿಂದೂ ಧರ್ಮದ ಮೇಲೆ ಇಸ್ಲಾಂ ಧರ್ಮವು ಮಾಡಿರುವ ಮುಖ್ಯ ಪ್ರಭಾವ. ಈ ಪ್ರಭಾವದ ಫಲವಾಗಿ ಹಿಂದೂ ಮುಸ್ಲಿಮರಲ್ಲಿ ಘರ್ಷಣೆಗಳೂ ಆಗಿವೆ. ಸನಾತನಿಹಿಂದೂಗಳು ಈ ಮತಾಂತರವನ್ನು ಒಪ್ಪುವುದಿಲ್ಲ.

ಅನೇಕ ಕಾಲ ಈ ರೀತಿ ಮತಾಂತರವಾದ್ದರಿಂದ ಕಾಶ್ಮೀರದಲ್ಲಿ ಸೇಕಡ ೯೫ ರಷ್ಟು ಜನ ಹಿಂದೂಗಳು ಮುಸ್ಲಿಮರಾದರು, ಆದರೂ ಅವರು ತಮ್ಮ ಹಳೆಯ ಹಿಂದೂ ಸಂಪ್ರದಾಯಗಳನ್ನು ಇಟ್ಟುಕೊಂಡರು. ೧೯ ನೆಯ ಶತಮಾನದ ಮಧ್ಯಭಾಗದಲ್ಲಿ ಈರೀತಿ ಮತಾಂತರ ಹೊಂದಿದವರನೇಕರು ಪುನಃ ಹಿಂದೂ ಧರ್ಮವನ್ನು ಅವಲಂಬಿಸಲು ಸಿದ್ಧರಿದಾರೆಂದು ಅಲ್ಲಿನ ಹಿಂದೂ ರಾಜನಿಗೆ ತಿಳಿಯಿತು. ಆರೀತಿಮಾಡಲು ಸಾಧ್ಯವೇ ಎಂದುತಿಳಿಯಲು ಕಾಶಿಯ ಪಂಡಿತರಲ್ಲಿಗೆ ಒಂದು ನಿಯೋಗ ಗೋಷ್ಠಿಯನ್ನು ಕಳುಹಿಸಿದನು. ಪಂಡಿತರುಗಳು ಈ ಮತಾಂತರಕ್ಕೆ ಒಪ್ಪದ ಕಾರಣ ಅದು ಅಲ್ಲಿಗೇನೆ ಮುಕ್ತಾಯವಾಯಿತು.

ಹೊರಗಿನಿಂದ ಭಾರತಕ್ಕೆ ಬಂದ ಮುಸಲ್ಮಾನರು ಯಾವ ಹೊಸ ಕಾರ್ಯ ಕುಶಲತೆಯನ್ನೂ, ರಾಜಕೀಯ ಆರ್ಥಿಕ ರಚನೆಯನ್ನೂ ತರಲಿಲ್ಲ. ಮುಸಲ್ಮಾನರೆಲ್ಲ ಸಹೋದರರೆಂಬ ಧಾರ್ಮಿಕ ಮನೋಭಾವವಿದ್ದರೂ ವರ್ಗೀಕರಣವೂ ನವಾಬಗಿರಿಯೂ ಅವರಲ್ಲಿ ಬಹಳ ಇತ್ತು. ಕಾರ್ಯ ನೀತಿಯಲ್ಲಿ ವಸ್ತುನಿರ್ಮಾಣ ಕಾರ್ಯದಲ್ಲಿ ಕೈಗಾರಿಕೋದ್ಯಮಗಳನ್ನು ಏರ್ಪಡಿಸುವುದರಲ್ಲಿ ಭಾರತಕ್ಕಿಂತ ಬಹಳ ಹಿಂದೆ ಇದ್ದರು. ಆದ್ದರಿಂದ ಭಾರತದ ಆರ್ಥಿಕ ಜೀವನದಮೇಲೂ ಸಮಾಜ ಜೀವನವದಮೇಲೂ ಯಾವ ಮಹತ್ಪರಿಣಾಮವೂ ಆಗಲಿಲ್ಲ. ಹಿಂದಿನಂತೆ ಜೀವನವು ಮುಂದುವರಿಯಿತು, ಹಿಂದುಗಳು ಮುಸ್ಲಿಮರು ಇಬ್ಬರೂ ಅದರಲ್ಲಿ ಹೊಂದಿಕೊಂಡರು.

ಸ್ತ್ರೀಯರ ಸ್ಥಿತಿಯು ಬಹಳ ಅವನತಿಗಿಳಿಯಿತು. ಹತ್ತೊಂಭತ್ತನೆಯ ಶತಮಾನದ ಇಂಗ್ಲೀಷ್ ಶಾಸನಕ್ಕಿಂತ ಉತ್ತಮವಿದ್ದರೂ ಹಿಂದೂಶಾಸನ ಪದ್ಧತಿಯಂತೆ ಸಹ ಆಸ್ತಿಯ ವಿಭಾಗದಲ್ಲಿ ಕುಟುಂಬ ಜೀವನದಲ್ಲಿ ಹಿಂದೂ ಮಹಿಳೆಯರಿಗೆ ನ್ಯಾಯವು ದೊರೆತಿರಲಿಲ್ಲ. ಈ ಆಸ್ತಿ ಹಂಚಿಕೆಯ ಶಾಸನವೆಲ್ಲ ಆಸ್ತಿಯು ಕುಟುಂಬದಿಂದ ಹೊರಗೆ ಹೋಗಬಾರದೆಂದು ಕುಟುಂಬರಕ್ಷಣೆಗಾಗಿ ಗಂಡಸರು ಮಾಡಿದ ಶಾಸನಗಳು. ಮದುವೆಯಾದೊಡನೆ ಸ್ತ್ರೀಯ ಮನೆತನವೇ ಬೇರೆಯಾಗುತ್ತಿತ್ತು. ಆರ್ಥಿಕ ದೃಷ್ಟಿಯಲ್ಲಿ ಸ್ತ್ರೀಯು ತಂದೆ, ಗಂಡ ಅಥವ ಮಗನ ಅಧೀನಳಾದರೂ ತನ್ನ ಸ್ವಂತ ಹಕ್ಕಿನ ಮೇಲೆ ಆಸ್ತಿ ಪಡೆಯುವ ಅಧಿಕಾರವಿತ್ತು. ಅನೇಕ ವಿಧದಲ್ಲಿ ಆಕೆಗೆ ಮರ್ಯಾದೆಯೂ, ಗೌರವವೂ ಇತ್ತು; ಸಾಮಾಜಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಭಾಗವಹಿಸುವ ಸ್ವಾತಂತ್ರ್ಯವೂ ಇತ್ತು. ಭಾರತೀಯ ಇತಿಹಾಸದಲ್ಲಿ ಮಹಾ ಮೇಧಾವಿಗಳೂ, ದಾರ್ಶನಿಕರೂ, ರಾಜ್ಯಾಡಳಿತನಡೆಸಿದವರೂ, ಯೋಧರೂ ಆದ ಅನೇಕ ಮಹಿಳೆಯರ ಹೆಸರುಗಳು ಪ್ರಸಿದ್ಧ ಇವೆ. ಕ್ರಮೇಣ ಈ ಸ್ವಾತಂತ್ರ್ಯವು ಕಡಮೆಯಾಯಿತು. ಇಸ್ಲಾಂ ಧರ್ಮದ ಪ್ರಕಾರ ಹೆಂಗಸಿಗೆ ಆಸ್ತಿಯ ಮೇಲೆ ಹೆಚ್ಚು ಅಧಿಕಾರವಿದ್ದರೂ ಆದರಿಂದ ಹಿಂದೂ ಮಹಿಳೆಯರ ಸ್ಥಿತಿಯು ಉತ್ತಮಗೊಳ್ಳಲಿಲ್ಲ. ಹಿಂದೂ ಮುಸ್ಲಿಂ ಮಹಿಳೆಯರಿಬ್ಬರ ಮೇಲೂ ಅದರಲ್ಲೂ

ಹೆಚ್ಚಾಗಿ ಮುಸ್ಲಿಂ ಮಹಿಳೆಯರಲ್ಲಿ ಆದ ಅನಿಷ್ಟ ಪರಿಣಾಮವೆಂದರೆ ಸ್ತ್ರೀಯರನ್ನು ಪ್ರತ್ಯೇಕಿಸುವ ಪರ್ದಾ ಪದ್ಧತಿಯ ಕಾಠಿಣ್ಯತೆ. ಉತ್ತರ ಹಿಂದೂಸ್ಥಾನದ ಮತ್ತು ಬಂಗಾಳದ ಶ್ರೀಮಂತರಲ್ಲಿ ಇದು ಬಹಳ ಹರಡಿತು. ಆದರೆ ಪಶ್ಚಿಮ ಮತ್ತು ದಕ್ಷಿಣ ಭಾರತಗಳು ಈ ದುಷ್ಪರಿಣಾಮಕ್ಕೆ ಬಲಿ ಬೀಳ ಲಿಲ್ಲ. ಉತ್ತರದಲ್ಲಿ ಸಹ ಇದು ಜನಸಾಮಾನ್ಯರಲ್ಲಿ ಆಚರಣೆಗೆ ಬರದೆ ಶ್ರೀಮಂತರಲ್ಲಿ ಮಾತ್ರ ಆಚರಣೆಯಲ್ಲಿತ್ತು. ಸ್ತ್ರೀಯರಿಗೆ ಈಗ ವಿದ್ಯಾಭ್ಯಾಸದ ಸೌಕರ್ಯವೇ ಇಲ್ಲವಾಗಿ ಮನೆಯೇ ಅವರ ಸೆರೆಯಾಗಿ ಕಾರ್ಯರಂಗವಾಯಿತು.* ಆತ್ಮ ವಿಕಾಸಕ್ಕೆ ಬೇರೆ ಅವಕಾಶವಿಲ್ಲದೆ ಸಂಕುಚಿತ ಬಂಧನದ ಜೀವನವು ಅವರ ಪಾಲಿಗೆ ಬಂದಿತು. ಪಾತಿವ್ರತ್ಯವೇ ಪರಮಧರ್ಮ ಅದಿಲ್ಲದಿರುವುದು ಮಹಾ ಪಾಪ ಎಂದು ಬೋಧಿಸಲಾಯಿತು. ಇದು ಮಾನವಕಲ್ಪಿತ ಶಾಸನವಾದರೂ, ತನಗೆ ಮಾತ್ರ ಮನುಷ್ಯ ಇದನ್ನು ಅನ್ವಯಮಾಡಿಕೊಳ್ಳಲಿಲ್ಲ. ಜಹಾಂಗೀರನ ಕಾಲದಲ್ಲಿ ತುಲಸೀದಾಸನು ಬರೆದ ಪ್ರಸಿದ್ಧ ಕಾವ್ಯವಾದ ಹಿಂದಿ ರಾಮಾಯಣದಲ್ಲಿ ಆತನು ಕೊಟ್ಟಿರುವ 'ಸ್ತ್ರೀ' ಚಿತ್ರವು ಬಹಳ ಅನ್ಯಾಯದ ವಿರೋಧ ಭಾವನೆಯ ಚಿತ್ರ.

ಭಾರತದ ಮುಸ್ಲಿಂಮರೆಲ್ಲರೂ ಹಿಂದೂ ಧರ್ಮದಿಂದ ಮತಾಂತರ ಹೊಂದಿದವರೆಂಬ ಕಾರಣ ದಿಂದಲೋ, ಪರಸ್ಪರ ಸಂಪರ್ಕದಿಂದಲೋ ಹಿಂದೂಗಳಲ್ಲೂ ಮುಸ್ಲಿಂರಲ್ಲೂ ಒಂದೇ ಬಗೆಯ ನಡತೆ, ಅಭ್ಯಾಸಗಳು, ಜೀವನ ರೀತಿ ಕಲಾಭಿರುಚಿಗಳು, ಅದರಲ್ಲೂ ಉತ್ತರಹಿಂದೂ ಸ್ಥಾನದಲ್ಲಿ ಸಂಗೀತ, ಚಿತ್ರಕಲೆ, ವಾಸ್ತು ಶಿಲ್ಪ, ಆಹಾರ, ಉಡುವು ಮತ್ತು ಸಾಮಾನ್ಯ ಆಚರಣೆಗಳಲ್ಲಿ ಒಂದೇ ಬಗೆಯ ಅಭಿ ರುಚಿಗಳು ಬೆಳೆದವು. ಒಂದೇ ಜನಾಂಗದವರಂತೆ, ಪರಸ್ಪರ ಹಬ್ಬಗಳಲ್ಲಿ, ಉತ್ಸವಗಳಲ್ಲಿ ಭಾಗ ವಹಿಸುತ್ತ ಒಂದೇ ಭಾಷೆಯನ್ನು ಮಾತನಾಡುತ್ತ ಒಂದೇ ರೀತಿಯಲ್ಲಿ ಜೀವನ ನಡೆಸುತ್ತ, ಒಂದೇ ಬಗೆಯ ಆರ್ಥಿಕ ಸಮಸ್ಯೆಗಳನ್ನು ಎದುರಿಸುತ್ತ ಶಾಂತರೀತಿಯಿಂದ ಒಟ್ಟಿಗೆ ಜೀವನ ನಡೆಸಿದರು. ಶ್ರೀಮಂತರು ಮತ್ತು ಜಮೀನುದಾರರು ಅವರ ಇತರ ಅನುಯಾಯಿಗಳು ರಾಜಸಭೆಯಿಂದ ಪ್ರೇರೇ ಪಣೆ ಪಡೆಯುತ್ತಿದ್ದರು. (ಅವರಿಗೆ ಭೂಮಿಯ ಒಡೆತನ ಯಾವುದೂ ಇರಲಿಲ್ಲ. ಗುತ್ತಿಗೆಯನ್ನೂ ವಸೂಲು ಮಾಡುತ್ತಲಿರಲಿಲ್ಲ. ಕೆಲವು ಭಾಗದ ಮೇಲೆ ರಾಜನಿಗೆ ಬರಬೇಕಾದ ಕಂದಾಯವನ್ನು ವಸೂಲು ಮಾಡಿಕೊಂಡು ಉಪಯೋಗಿಸುವ ಹಕ್ಕು ಮಾತ್ರ ಅವರದಾಗಿತ್ತು. ಈ ಹಕ್ಕು ಆಜೀವ ಪರ್ಯಂತ ಮಾತ್ರ ಇರುತ್ತಿತ್ತು.) ಅವರ ಜೀವನವು ಬಹಳ ಕೃತಕ ಆಡಂಬರದ ಜೀವನವಾಗಿತ್ತು. ಒಂದೇ ರೀತಿಯ ಆಹಾರ, ಉಡುವು, ಕಲಾಭಿರುಚಿ. ಸೈನ್ಯ ಶಿಕ್ಷಣ, ಬೇಟೆ, ಶೌರ್ಯ, ಆಟವಿನೋದ ಗಳನ್ನು ಅವರೆಲ್ಲರಲ್ಲೂ ನೋಡಬಹುದಾಗಿತ್ತು. ಪೋಲೋ ಆಟವು ಬಹಳ ಮೆಚ್ಚುಗೆಯ ಆಟವಾ ಗಿತ್ತು. ಆನೆಯ ಯುದ್ಧಗಳು ಲೋಕ ರಂಜಕವಾದವು.

ಜಾತಿ ಪದ್ಧತಿಯು ಸಮಷ್ಟಿ ಜೀವನಕ್ಕೆ ವಿರೋಧವಿದ್ದರೂ ಈ ಎಲ್ಲ ಸಂಪರ್ಕಗಳಿಂದ ಸಮಷ್ಟಿ ಜೀವನವೂ ಬೆಳೆಯಿತು, ಬಹಳ ಅಪರೂಪವಾಗಿ ವಿನಾ ಪರಸ್ಪರ ವಿವಾಹಗಳು ಆಗುತ್ತಿರಲಿಲ್ಲ. ಆಗಲೂ ಪರಸ್ಪರ ಸಂಬಂಧ ಏರ್ಪಡದೆ ಹಿಂದೂ ಸ್ತ್ರೀಯರು ಮುಸ್ಲಿಮರಾಗುತ್ತಿದ್ದರು. ಪರಸ್ಪರ ಊಟ ಉಪಚಾರಗಳು ಇರುತ್ತಿರಲಿಲ್ಲ. ಇದರಲ್ಲಿ ಅಷ್ಟು ಕಟ್ಟುನಿಟ್ಟು ಇರುತ್ತಿರಲಿಲ್ಲ. ಸ್ತ್ರೀಯರು ಪ್ರತ್ಯೇಕಿಸಲ್ಪಟ್ಟಿದ್ದ ಕಾರಣ ಸಾಮಾಜಿಕ ಜೀವನವು ಬೆಳೆಯಲಿಲ್ಲ. ಮುಸ್ಲಿಮರಲ್ಲಿ ಪರ್ದಾ ಬಹಳ ಕಠಿನವಿದ್ದುದರಿಂದ ಈ ತೊಂದರೆ ಅವರಲ್ಲಿ ಇನ್ನೂ ಹೆಚ್ಚು ಇತ್ತು. ಹಿಂದೂ ಮತ್ತು ಮುಸಲ್ಮಾನ್ ಪುರುಷರು ಪರಸ್ಪರ ಸೇರುತ್ತಿದ್ದರೂ, ಹಿಂದೂ ಮುಸ್ಲಿಂ ಸ್ತ್ರೀಯರಿಬ್ಬರಿಗೂ ಆ ಅವಕಾಶವಿರಲಿಲ್ಲ. ಶ್ರೀಮಂತ ಮನೆತನಗಳ ಮತ್ತು ಉತ್ತಮ ಜಾತಿಯ ಹಿಂದೂ ಮುಸ್ಲಿಂ ಸ್ತ್ರೀಯರಿಗೆ ಪರಸ್ಪರ ಪರಿ ಚಯವಿಲ್ಲದೆ ದೂರವಿದ್ದು ಪ್ರತ್ಯೇಕ ಭಾವನೆಯಲ್ಲೇ ಬೆಳೆದರು.

---

* ಆದಾಗ್ಯೂ ಈ ಕಾಲದಲ್ಲೂ ವಿದ್ವನ್ಮಣಿಗಳೂ ಶ್ರೇಷ್ಠ ಆಡಳಿತಗಾರರೂ ಆದ ಅನೇಕ ಮಹಿಳೆಯರ ಹೆಸರುಗಳಿವೆ. ಹದಿನೆಂಟನೆಯ ಶತಮಾನದಲ್ಲಿ ಲಕ್ಷ್ಮೀದೇವಿಯು "ಮಿತಾಕ್ಷರ" ಹಿಂದೂ ಧರ್ಮಶಾಸ್ತ್ರದ ಮೇಲೆ ಒಂದು ಉತ್ಕೃಷ್ಟ ಟೀಕಾ ಗ್ರಂಥವನ್ನು ಬರೆದಿದ್ದಾಳೆ.

ದೇಶದ ಜನಸಂಖ್ಯೆಯಲ್ಲಿ ಬಹು ಭಾಗದ ಜನರು ವಾಸಮಾಡುತ್ತಿದ್ದ ಗ್ರಾಮಾಂತರಗಳಲ್ಲಿ ಜೀವನದಲ್ಲಿ ಹೆಚ್ಚು ಸೌಹಾರ್ದವೂ, ಸಹಕಾರವೂ ಇತ್ತು. ಹಿಂದೂ ಮುಸ್ಲಿಮರಲ್ಲಿ ಪರಸ್ಪರ ಸ್ನೇಹ ಭಾವವಿತ್ತು. ಜಾತಿ ಪದ್ಧತಿಯು ಅಡ್ಡಬಾರದೆ ಮುಸ್ಲಿಮರದೂ ಒಂದು ಜಾತಿಯಾಗಿ ಹೋಯಿತು. ಅನೇಕ ಮುಸ್ಲಿಮರು ಮತಾಂತರ ಹೊಂದಿದವರಾದ್ದರಿಂದ ಹಳೆಯ ಸಂಪ್ರದಾಯಗಳು ಇನ್ನೂ ಅವರಲ್ಲಿ ಆಚರಣೆಯಲ್ಲಿದ್ದವು. ಹಿಂದೂಗಳ ಮನೋಭಾವದ ಹಿನ್ನೆಲೆ, ಪುರಾಣಗಳು, ಪುರಾಣ ಕಥೆಗಳು ಅವರಿಗೆ ಪರಿಚಿತವಿದ್ದವು. ಒಂದೇ ಕೆಲಸವನ್ನು ಮಾಡಿ, ಒಂದೇ ಬಗೆಯ ಜೀವನ ನಡೆಸುತ್ತ, ಒಂದೇ ಬಗೆಯ ಉಡುಪು ಧರಿಸಿ, ಒಂದೇ ಭಾಷೆಯನ್ನು ಮಾತನಾಡುತ್ತಿದ್ದರು. ಪರಸ್ಪರ ಹಬ್ಬಗಳನ್ನು ಆಚರಿಸುತ್ತಿದ್ದರು. ಕೆಲವು ಹಬ್ಬಗಳು ಇಬ್ಬರಿಗೂ ಒಂದೇ ಇರುತ್ತಿದ್ದವು. ಅವರ ನಾಡ ಹಾಡುಗಳೂ ಒಂದೇ ಇದ್ದವು. ಇವರೆಲ್ಲರೂ ಸಾಮಾನ್ಯವಾಗಿ ಹಳ್ಳಿಯ ರೈತರು, ಗ್ರಾಮೋದ್ಯೋಗಿಗಳು, ಕುಶಲಕರ್ಮಿಗಳು.

ಶ್ರೀಮಂತರಿಗೂ, ಹಳ್ಳಿಯರೈತರಿಗೂ ಮಧ್ಯೆ ವರ್ತಕರು ಮತ್ತು ವ್ಯಾಪಾರಿಗಳ ಒಂದು ದೊಡ್ಡ ಪಂಗಡವಿತ್ತು. ಇವರೆಲ್ಲ ಹಿಂದೂಗಳಾಗಿದ್ದರು. ರಾಜಕೀಯ ಅಧಿಕಾರ ಅವರ ಕೈಯಲ್ಲಿ ಯಾವುದೂ ಇಲ್ಲದಿದ್ದರೂ ದೇಶದ ಆರ್ಥಿಕ ರಚನೆ ಅವರ ಅಧೀನವಿತ್ತು. ಮುಸ್ಲಿಂರೊಂದಿಗೆ ಇವರ ಸಂಬಂಧವು ಶ್ರೀಮಂತರ ಮತ್ತು ರೈತರ ಸಂಬಂಧಕ್ಕಿಂತಲೂ ಕಡಮೆ ಇತ್ತು. ಹೊರಗಿನಿಂದ ಬಂದ ಮುಸಲ್ಮಾನರಲ್ಲಿ ಶ್ರೀಮಂತಿಕೆಯ ಲಕ್ಷಣ ಹೆಚ್ಚು ಇದ್ದಕಾರಣ ವರ್ತಕರೆಂದರೆ ಅವರಿಗೆ ತಾತ್ಸಾರವಿತ್ತು. ಬಡ್ಡಿಯನ್ನು ತೆಗೆದುಕೊಳ್ಳಬಾರದೆಂಬ ಇಸ್ಲಾಂಧರ್ಮದ ನಿಯಮವೂ ವ್ಯಾಪಾರಾಭಿವೃದ್ಧಿಗೆ ತಡೆಯಾಯಿತು. ತಾವು ಆಡಳಿತಗಾರರು, ಶ್ರೀಮಂತರು, ಸರಕಾರ ನಡೆಸುವ ಅಧಿಕಾರಿಗಳು, ಜಮೀನುದಾರರು, ಸೈನ್ಯಾಧಿಕಾರಿಗಳು ಎಂಬ ಅಹಂಕಾರವಿತ್ತು. ರಾಜ ಸಭೆಗಳಲ್ಲಿ ಧರ್ಮಶಾಸ್ತ್ರದಲ್ಲಿ ಮತ್ತು ಇತರ ವಿದ್ಯೆಗಳಲ್ಲಿ ನಿಷ್ಣಾತರಾದ ಪಂಡಿತರಿದ್ದರು.

ಮೊಗಲರ ಕಾಲದಲ್ಲಿ ಅನೇಕ ಹಿಂದುಗಳು ರಾಜಭಾಷೆಯಾದ ಪಾರಸಿ ಭಾಷೆಯಲ್ಲಿ ಅನೇಕ ಗ್ರಂಥಗಳನ್ನು ಬರೆದರು. ಇವುಗಳಲ್ಲಿ ಕೆಲವು ಮಹಾ ಕಾವ್ಯಗಳಾಗಿವೆ. ಅದೇ ರೀತಿಯಾಗಿ ಮುಸ್ಲಿಂ ವಿದ್ವಾಂಸರು ಸಂಸ್ಕೃತ ಗ್ರಂಥಗಳನ್ನು ಪಾರಸಿಭಾಷೆಗೆ ಅನುವಾದ ಮಾಡಿದರು ಮತ್ತು ಹಿಂದಿಯಲ್ಲಿ ಗ್ರಂಥಗಳನ್ನು ರಚಿಸಿದರು. ಆ ರೀತಿ ಪ್ರಖ್ಯಾತರಾದ ಹಿಂದಿ ಕವಿಗಳೆಂದರೆ "ಪದ್ಮಾವತ" ಗ್ರಂಥವನ್ನು ಬರೆದ ಮಾಲಿಕ್ ಮಹಮ್ಮದ್ ಜೈಸಿ ಮತ್ತು ಅಕ್ಬರನ ಆಸ್ಥಾನದ ಪ್ರಮುಖ ಸರದಾರನೂ, ಅಕ್ಬರನ ಪೋಷಕನ ಮಗನೂ ಆದ ಅಬ್ದುಲ್ ರಹೀಂ ಖಾನ್‌ಖಾನಾ. ಖಾನ್‌ಖಾನಾ ಅರಬ್ಬಿ, ಪಾರಸಿ, ಸಂಸ್ಕೃತ ಭಾಷೆಗಳಲ್ಲಿ ಉದ್ದಾಮ ಪಂಡಿತನಾಗಿದ್ದನಲ್ಲದೆ ಆತನ ಹಿಂದಿಕಾವ್ಯವು ಶ್ರೇಷ್ಠ ಶೈಲಿಯಲ್ಲಿದೆ. ಕೆಲವು ಕಾಲ ಆತನು ಸಾಮ್ರಾಜ್ಯಸೇನೆಯ ಅಧಿಪತಿಯಾಗಿದ್ದನು. ಆದರೂ ಅಕ್ಬರನೊಂದಿಗೆ ಸದಾ ಯುದ್ಧಮಾಡುತ್ತ ಶರಣಾಗತನಾಗದ ಮೇವಾಡದ ಅಧಿಪತಿ ರಾಣಾ ಪ್ರತಾಪನನ್ನು ಹೊಗಳಿ ಕೊಂಡಾಡಿದ್ದಾನೆ. ಯುದ್ಧರಂಗದಲ್ಲಿ ತನ್ನ ಶತ್ರುವು ತೋರಿಸಿದ ಧೈರ್ಯ, ಉನ್ನತ ಮನೋಭಾವ, ದೇಶಾಭಿಮಾನಗಳನ್ನು ಖಾನ್‌ಖಾನಾ ಮುಕ್ತಕಂಠದಿಂದ ಹೊಗಳಿದ್ದಾನೆ.

ಅಕ್ಬರನು ತನ್ನ ರಾಜನೀತಿಯನ್ನು ರೂಪುಗೊಳಿಸಿದ್ದು ಈ ಉದಾರ ದೃಷ್ಟಿ ಮತ್ತು ಸ್ನೇಹ ಭಾವದಿಂದ. ಅದನ್ನೇ ಆತನ ಸರದಾರರೂ ಮಂತ್ರಿಗಳೂ ಅನುಕರಣಮಾಡಿದರು. ತನಗೂ ರಾಜಪುತ್ರರಿಗೂ ಸಮಾನವಾಗಿದ್ದ—ಹುಚ್ಚು ಧೈರ್ಯ, ಗೌರವಯುತವೂ ಉದಾರವೂ ಆದ ನೀತಿ, ಕೊಟ್ಟಮಾತನ್ನು ತಪ್ಪದಿರುವುದು—ಈ ಗುಣಗಳನ್ನು ಮೆಚ್ಚಿ ರಾಜಪುತ್ರರೆಂದರೆ ಅಕ್ಬರನಿಗೆ ತುಂಬ ಪ್ರಾಣ. ಈ ಎಲ್ಲ ಗುಣಗಳಿದ್ದರೂ ರಾಜಪುತ್ರ ಸಮಾಜದ ಕಂದಾಚಾರದ ಪದ್ಧತಿಗಳು ಹೊಸ ಶಕ್ತಿಗಳ ಸನ್ನಿವೇಶಗಳಿಗೆ ಹೊಂದಿಕೊಳ್ಳಲಿಲ್ಲ. ಅಕ್ಬರನೇ ತನ್ನ ಸಾಮಾಜಿಕ ಪರಂಪರೆಯ ಬಂದಿಯಾಗಿದ್ದುದರಿಂದ ಈ ಹೊಸ ಶಕ್ತಿಗಳ ಅರಿವೂ ಅವನಿಗೆ ಆಗಲಿಲ್ಲ.

ಉತ್ತರ ಮಧ್ಯ ಭಾರತದಲ್ಲಿ ಅನೈಕ್ಯತೆಯಲ್ಲಿ ಐಕ್ಯತೆಯನ್ನು ಸಾಧಿಸಿದ ಅಕ್ಬರನ ಸಾಹಸವು

ಅತ್ಯದ್ಭುತವಾದುದು. ಪರದೇಶೀಯರಾದ ಆಡಳಿತವರ್ಗದವರ ತೊಂದರೆ ಇತ್ತು; ಜಾತಿ ಮತಗಳ ತೊಂದರೆ ಇತ್ತು; ಒಂದು ಮತಾಂತರವನ್ನು ಒಪ್ಪಿ ಮತಾಂತರ ಮಾಡುತ್ತಿದ್ದ ಧರ್ಮ, ಇನ್ನೊಂದು ಮತಾಂತರವನ್ನು ಒಪ್ಪದ ಕಟ್ಟುನಿಟ್ಟಾದ ಧರ್ಮ, ಈ ಅಡಚಣೆಗಳ್ಯಾವುವೂ ಹೋಗದೆ ಇದ್ದರೂ ಒಂದು ಏಕೀಭಾವನೆಯು ಉತ್ಪನ್ನವಾಯಿತು. ಅದು ಕೇವಲ ಆತನ ವ್ಯಕ್ತಿ ಪ್ರೇಮದಿಂದ ಹುಟ್ಟಿದುದಲ್ಲ; ಆತನು ನಿರ್ಮಾಣಮಾಡಿದ ಸುಂದರ ಭಾವನಾ ಸೌಧದ ಮೇಲಿನ ವಿಶ್ವಾಸದಿಂದ. ಆತನ ಮಗ, ಮೊಮ್ಮಗ, ಜಹಾಂಗೀರ್ ಮತ್ತು ಷಹಜಹಾನ್ ಇಬ್ಬರೂ ಆ ಸೌಧವನ್ನು ಒಪ್ಪಿ ಅದರ ಚೌಕಟ್ಟಿನ ಒಳಗೇ ಕೆಲಸಮಾಡಿದರು. ಅವರಲ್ಲಿ ವಿಶೇಷಗುಣಗಳೇನೂ ಇಲ್ಲದಿದ್ದರೂ ಅಕ್ಬರನು ಹಾಕಿದ ದಾರಿಯಲ್ಲೇ ನಡೆದದ್ದರಿಂದ ಅವರ ರಾಜ್ಯಭಾರವೂ ಯಶಸ್ವಿಯಾಯಿತು. ಮುಂದೆ ಬಂದ ಅವರಂಗಜೇಬ್ ಬಹಳ ಗಟ್ಟಿಗನಾದರೂ ಬೇರೆ ಭಾವನೆಯಿಂದ ಅಕ್ಬರನ ಮಾರ್ಗದಿಂದ ಹೊರಬಿದ್ದು ಅಕ್ಬರನು ಕಟ್ಟಿದ ಸೌಧವನ್ನು ಒಡೆದುಹಾಕಿದನು. ಆದರೂ ಪೂರ್ತಿಯಾಗಿ ನಾಶವಾಗಲಿಲ್ಲ. ಅವರಂಗಜೇಬನೂ ಮತ್ತು ಅವನ ನಂತರ ದುರ್ಬಲ ಮೊಗಲ್ ಚಕ್ರವರ್ತಿಗಳೂ ಬಂದರೂ ಅಕ್ಬರನ ಮೇಲಿನ ಗೌರವವು ನಾಶವಾಗಲಿಲ್ಲ. ಉತ್ತರ ಮತ್ತು ಮಧ್ಯ ಭಾರತದಲ್ಲಿ ಮಾತ್ರ ಈ ಗೌರವವಿತ್ತು. ದಕ್ಷಿಣ ಮತ್ತು ಪಶ್ಚಿಮ ಭಾರತಕ್ಕೆ ಅದು ಹರಡಲಿಲ್ಲ, ವಿರೋಧ ಚಳವಳಿಯೂ ಪಶ್ಚಿಮ ಭಾರತದಿಂದಲೇ ಬಂದಿತು.

## ೧೨. ಅವರಂಗಜೇಬನ ಪ್ರತಿಗಾಮಿ ಮನೋಭಾವ: ಹಿಂದೂ ರಾಷ್ಟ್ರೀಯ ಭಾವನೆಯ ಬೆಳೆವಣಿಗೆ: ಶಿವಾಜಿ

ಷಹಜಹಾನನೂ, ಫ್ರಾನ್ಸಿನ 'ಮಹಾಪ್ರಭು' ಎಂದು ವಿಖ್ಯಾತನಾಗಿದ್ದ ೧೪ ನೆಯ ಲೂಯಿಯೂ ಸಮಕಾಲೀನರು. ಆಗ ಮಧ್ಯ ಯೂರೋಪಿನಲ್ಲಿ 'ಮೂವತ್ತು ವರ್ಷಗಳ ಯುದ್ಧ' ನಡೆಯುತ್ತಇತ್ತು. ವರ್ಸೇಲ್ಸ್ ನಗರವು ರೂಪುಗೊಂಡಂತೆ ಆಗ್ರ ನಗರದ ತಾಜಮಹಲ್ ಮೋತಿ ಮಸೀದಿ, ದೆಹಲಿಯ ಜುಮ್ಮಾ ಮಸೀದಿ, ಸಾಮ್ರಾಟನ ಅರಮನೆಯ "ದಿವಾನಿ ಆಮ್" ಮತ್ತು "ದಿವಾನಿ-ಖಾಸ್" ರೂಪುಗೊಳ್ಳುತ್ತಿದ್ದವು. ಈ ಸುಂದರ ಸೌಧಗಳು ತಮ್ಮ ತಮ್ಮ ಸ್ವರ್ಗೀಯ ಸೌಂದರ್ಯದಿಂದ ಮೊಗಲ ವೈಭವದ ಉನ್ನತಿಯ ಪ್ರತಿನಿಧಿಗಳಂತಿವೆ. ಮಯೂರ ಸಿಂಹಾಸನದಿಂದ ಅಲಂಕೃತವಾದ ದೆಹಲಿಯ ರಾಜ ಸಭೆಯು ವರ್ಸೇಲ್ಸ್ ರಾಜಸಭೆಗಿಂತ ವೈಭವಯುಕ್ತವೂ, ಜಾಜ್ವಲ್ಯವೂ ಇತ್ತು; ಆದರೆ ವರ್ಸೇಲ್‌ನಂತೆ ಇದೂ ಬಡವರ ರಕ್ತವನ್ನು ಹೀರಿ ಬೆಳದದ್ದು. ಗುಜರಾತ್ ಮತ್ತು ದಕ್ಷಿಣ ಭಾರತದಲ್ಲಿ ಭಯಂಕರ ಕ್ಷಾಮ ಒದಗಿತ್ತು.

ಈ ಮಧ್ಯೆ ಇಂಗ್ಲೆಂಡಿನ ನಾವಿಕಾಬಲವು ಬಲಗೊಂಡು ವಿಶಾಲಗೊಳ್ಳುತ್ತಲಿತ್ತು. ಅಕ್ಬರ್‌ನಿಗೆ ಪೋರ್ತುಗೀಸರ ಪರಿಚಯ ಮಾತ್ರ ತಿಳಿದಿತ್ತು. ಜಹಾಂಗೀರನ ಕಾಲದಲ್ಲಿ ಬ್ರಿಟಿಷ್ ನಾವಿಕಾಬಲವು ಹಿಂದೂ ಸಾಗರದಲ್ಲಿ ಪೋರ್ತುಗೀಸರನ್ನು ಸೋಲಿಸಿತು. ಇಂಗ್ಲೆಂಡಿನ ರಾಜನಾದ ಮೊದಲನೆಯ ಜೇಮ್ಸ್‌ನ ರಾಯಭಾರಿಯಾಗಿ ಸರ್ ಥಾಮಸ್ ರೋ ೧೬೧೫ ರಲ್ಲಿ ಜಹಾಂಗೀರನ ಆಸ್ಥಾನಕ್ಕೆ ಬಂದನು. ವ್ಯಾಪಾರದ ಗಡಂಗುಗಳನ್ನು ಆರಂಭಿಸಲು ಅಪ್ಪಣೆ ಪಡೆಯುವದರಲ್ಲಿ ಕೃತಕೃತ್ಯನಾದನು. ಸೂರತ್‌ನಲ್ಲಿ ಗಡಂಗು ಆಯಿತು. ಮದರಾಸಿನಲ್ಲಿ ೧೬೩೯ರಲ್ಲಿ ಆರಂಭವಾಯಿತು. ಸುಮಾರು ಒಂದು ನೂರು ವರ್ಷಗಳವರೆಗೆ ಭಾರತದಲ್ಲಿ ಬ್ರಿಟಿಷರಿಗೆ ಯಾರೂ ಯಾವ ಪ್ರಾಮುಖ್ಯತೆಯನ್ನೂ ಕೊಡಲಿಲ್ಲ. ಸಮುದ್ರ ಮಾರ್ಗಗಳೆಲ್ಲ ಬ್ರಿಟಿಷರ ಅಧೀನವಿದ್ದುದೂ, ಬ್ರಿಟಿಷರು ಪೋರ್ತುಗೀಸರನ್ನು ಹೊಡೆದೋಡಿಸಿದುದೂ ಮೊಗಲ್ ಚಕ್ರವರ್ತಿಗಳ ಮೇಲಾಗಲಿ, ಅವರ ಮಂತ್ರಾಲೋಚಕರ ಮೇಲಾಗಲಿ ಯಾವ ಪರಿಣಾಮವನ್ನೂ ಮಾಡಲಿಲ್ಲ. ಅವರಂಗಜೇಬನಕಾಲದಲ್ಲಿ ಮೊಗಲ್ ಚಕ್ರಾಧಿಪತ್ಯವು ಸಡಿಲುತ್ತಿದ್ದಾಗ ಭಾರತದಲ್ಲಿ ಬ್ರಿಟಿಷರು ಯುದ್ಧಮಾಡಿ ೧೬೮೬ ರಲ್ಲಿ ತಮ್ಮ ಸ್ವಾಸ್ಥ್ಯಗಳನ್ನು ಹೆಚ್ಚಿಸಿಕೊಳ್ಳಲು ಪ್ರಯತ್ನಪಟ್ಟರು. ಅವರಂಗಜೇಬನು ಬಲಹೀನನಾಗಿದ್ದರೂ ಆತನಿಗೆ ಅನೇಕ ಶತ್ರುಗಳಿದ್ದರೂ ಬ್ರಿಟಿಷರನ್ನು ಸೋಲಿಸಿದನು. ಇದಕ್ಕೂ ಮುಂಚೆ ಫ್ರೆಂಚರು ಬಂದು ಕೆಲವು ಬೀಡುಗಳನ್ನು ಕಟ್ಟಿದ್ದರು

ಭಾರತದ ರಾಜಕೀಯ ಮತ್ತು ಆರ್ಥಿಕ ಬಲವು ಬಹುವೇಗದಿಂದ ಕ್ಷೀಣಿಸುತ್ತಿದ್ದಾಗ ಯಾರೋಪಿನ ಶಕ್ತಿಯ ಉಬ್ಬರವು ಭಾರತಕ್ಕೂ ಮತ್ತು ಪೌರ್ವಾತ್ಯಕ್ಕೂ ಹರಡುತ್ತಲಿತ್ತು.

ಫ್ರಾನ್ಸಿನಲ್ಲಿ ಹದಿನಾಲ್ಕನೆ ಲೂಯಿ ಕ್ರಾಂತಿಯ ಬೀಜಗಳನ್ನು ಹರಡುತ್ತಾ ತನ್ನ ದೀರ್ಘಕಾಲದ ಆಳ್ವಿಕೆಯನ್ನು ನಡೆಸುತ್ತಿದ್ದನು. ಇಂಗ್ಲೆಂಡಿನಲ್ಲಿ ಮಧ್ಯಮವರ್ಗದ ದಂಗೆಕಾರರು ತಮ್ಮ ದೊರೆಯ ತಲೆಯನ್ನು ಕತ್ತರಿಸಿಹಾಕಿದ್ದರು. ಕ್ರಾಮ್‌ವೆಲ್‌ನ ಅಲ್ಪಾಯುಸ್ಸಿನ ಪ್ರಜಾಧಿಪತ್ಯವು ಯಶಸ್ವಿಯಾಗಿತ್ತು. ಚಾರ್ಲ್ಸನ ಆಗಮನವಾಗಿ ನಿರ್ಗಮನವೂ ಆಗಿತ್ತು. ಎರಡನೆಯ ಜೇಮ್ಸ್ ಕಾಲಿಗೆ ಬುದ್ಧಿ ಹೇಳಿದ್ದನು. ಬಹುಮಟ್ಟಿಗೆ ವರ್ತಕರ ಪ್ರತಿನಿಧಿಯಾದ ಪಾರ್ಲಿಮೆಂಟ್ ರಾಜನ ಅಧಿಕಾರವನ್ನು ಮೊಟಕು ಮಾಡಿ ತನ್ನ ಪರಮಾಧಿಕಾರವನ್ನು ಸ್ಥಾಪಿಸಿತ್ತು.

ಅವರಂಗಜೇಬನು ತನ್ನ ತಂದೆಯಾದ ಷಹಜಾನನನ್ನು ಬಂಧಿಸಿ ಎದ್ದ ದಂಗೆಯನ್ನು ಅಡಗಿಸಿ ಮೊಗಲ್ ಸಿಂಹಾಸನವನ್ನು ಏರಿದ್ದು ಇದೇ ಕಾಲದಲ್ಲಿ. ಪರಿಸ್ಥಿತಿಯನ್ನು ಅರಿತುಕೊಂಡು ಉದ್ಭೂತವಾದ ಹೊಸ ಶಕ್ತಿಗಳನ್ನು ಅಡಗಿಸಲು ಅಕ್ಬರನಂಥವನಿಗೆ ಮಾತ್ರ ಸಾಧ್ಯವಿತ್ತು. ಅವನ ಜ್ಞಾನ ಕುತೂಹಲ ಮತ್ತು ದಾಹದಿಂದ ಅಂದು ಸನ್ನಿಹಿತವಾಗಿದ್ದ ಹೊಸ ಮಾರ್ಗಗಳ ಪ್ರಾಮುಖ್ಯತೆಯನ್ನೂ ಆರ್ಥಿಕ ಸ್ಥಿತಿಯಲ್ಲಿ ಆಗುತ್ತಿದ್ದ ಬದಲಾವಣೆಯನ್ನೂ ಅರಿತುಕೊಳ್ಳಲು ಸಮರ್ಥನಾಗಿದ್ದರೆ ಪ್ರಾಯಶಃ ಅವನಿಗೂ ತನ್ನ ಚಕ್ರಾಧಿಪತ್ಯದ ನಾಶವನ್ನು ಸ್ವಲ್ಪ ಮುಂದೆ ಮಾತ್ರ ತಳ್ಳಬಹುದಾಗಿತ್ತು. ಅಂದಿನ ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳುವುದು ಹಾಗಿರಲಿ, ತನ್ನ ಪೂರ್ವಿಕರ ಕಾರ್ಯನೀತಿಯನ್ನೂ ಅರಿಯದಾದನು. ಅವನೊಬ್ಬ ಪ್ರತಿಗಾಮಿ. ಎಷ್ಟೇ ಶಕ್ತನೂ ಆಸಕ್ತನೂ ಇದ್ದರೂ ತನ್ನ ಪೂರ್ವಿಕರು ಸಾಧಿಸಿದುದನ್ನೆಲ್ಲ ನಾಶಮಾಡಲುದ್ಯುಕ್ತನಾದನು. ಮತಾಂಧನು ನಿಷ್ಠ ಜೀವಿಯೂ ಆದ್ದರಿಂದ ಕಲೆ ಅಥವ ಸಾಹಿತ್ಯದ ಮೇಲೆ ಮಮತೆ ಇರಲಿಲ್ಲ. ಹಿಂದೂಗಳ ಮೇಲೆ ಅಸಹನೀಯವಾದ ತಲೆಗಂದಾಯವನ್ನು ಹಾಕಿ, ಅವರ ದೇವಸ್ಥಾನಗಳನ್ನು ನಾಶಮಾಡಿ ಅವರ ದ್ವೇಷವನ್ನು ಕಟ್ಟಿಕೊಂಡನು. ಮೊಗಲ್ ಚಕ್ರಾಧಿಪತ್ಯದ ಆಧಾರ ಸ್ತಂಭಗಳಂತಿದ್ದ ವೀರರಾಜಪುತ್ರರನ್ನು ಕೆಣಕಿ ಅವರ ವೈರವನ್ನು ಕಟ್ಟಿಕೊಂಡನು. ಹಿಂದೂ ಮುಸಲ್ಮಾನ್ ಭಾವನೆಗಳಲ್ಲಿ ಒಂದು ಐಕ್ಯತೆಯನ್ನು ತಂದ ಶಾಂತ ಜೀವಿಗಳಾದ ಸಿಕ್ಕರನ್ನು ತುಳಿಯಹೋಗಿ ಅವರು ಸೈನ್ಯವನ್ನೇ ಕಟ್ಟುವಂತೆ ಪ್ರೇರೇಪಿಸಿದನು. ಒಬ್ಬ ಶ್ರೇಷ್ಠ ಸೇನಾನಿಯನ್ನು ಪಡೆದಿದ್ದ ರಾಷ್ಟ್ರಕೂಟವಂಶಜರೂ ಉತ್ತಮ ಯೋಧರೂ ಆದ ಮಹಾರಾಷ್ಟ್ರರನ್ನು ಪಶ್ಚಿಮದಲ್ಲಿ ರೊಚ್ಚಿಗೆಬ್ಬಿಸಿದನು.

ವಿಶಾಲವಾಗಿ ಹರಡಿದ್ದ ಮೊಗಲ್ ಚಕ್ರಾಧಿಪತ್ಯದಲ್ಲೆಲ್ಲ ಈ ರೀತಿ ಒಂದು ತಳಮಳವೆದ್ದು ಧರ್ಮ ಶ್ರದ್ಧೆ ಮತ್ತು ರಾಷ್ಟ್ರೀಯ ಭಾವನೆಗಳ ಪರಿಣಾಮವಾಗಿ ಒಂದು ಪುನರುಜ್ಜೀವನ ಭಾವನೆ ಬೆಳೆಯಿತು. ರಾಷ್ಟ್ರೀಯ ಭಾವನೆಯು ಈಗಿನಂತೆ ಮತರಹಿತವಾಗಿ ಇರಲಿಲ್ಲ. ಅದರ ವ್ಯಾಪ್ತಿಯೂ ದೇಶಾದ್ಯಂತವಿರಲಿಲ್ಲ. ಅದರಲ್ಲಿ ಶ್ರೀಮಂತರ ಕೈವಾಡವಿತ್ತು. ಸ್ಥಳೀಯ ಭಾವನೆ ಇತ್ತು ಮತ ಶ್ರದ್ಧೆ ಇತ್ತು. ಎಲ್ಲರಿಗಿಂತ ಹೆಚ್ಚು ಅಧಿಕಾರ ಲಾಲಸೆ ಇದ್ದ ರಾಜಪುತ್ರರು ತಮ್ಮ ವಂಶದ ಪ್ರಾಶಸ್ತ್ಯಕ್ಕೆ ಮಹತ್ವ ಕೊಟ್ಟರು; ಪಂಜಾಬಿನ ಒಂದು ಪಂಗಡವಾದ ಸಿಕ್ಕರಿಗೆ ತಮ್ಮ ರಕ್ಷಣೆಯನ್ನು ತಾವು ನೋಡಿಕೊಳ್ಳುವುದರ ವಿನಾ ಪಂಜಾಬಿನ ಹೊರಗೆ ಅವರ ದೃಷ್ಟಿಯು ಹೋಗಲಿಲ್ಲ. ಆದರೂ ಆ ಧರ್ಮದಲ್ಲೆ ಒಂದು ಬಲವಾದ ರಾಷ್ಟ್ರೀಯ ಹಿನ್ನೆಲೆ ಇತ್ತು, ಅದರ ಸಂಪ್ರದಾಯವೆಲ್ಲ ಭಾರತೀಯವಾಗಿತ್ತು. "ಇಂಡೋಯೂರೊಪಿಯನ್ ಸಮುದಾಯದಲ್ಲಿ ಒಂದು ರಾಷ್ಟ್ರೀಯ ಮತವಾದ ಬ್ರಾಹ್ಮಣ ಮತವನ್ನು, ಒಂದು ದೊಡ್ಡ ವಿಶ್ವಧರ್ಮವಾದ ಬುದ್ಧಮತವನ್ನು ಸೃಷ್ಟಿಸಿದವರು ಭಾರತೀಯರು ಮಾತ್ರ, ಉಳಿದವರೆಲ್ಲ ನವೀನತೆಯನ್ನು ವ್ಯಕ್ತಗೊಳಿಸುವ ಬದಲು ಪರಕೀಯ ಧರ್ಮವನ್ನು ಅವಲಂಬಿಸಿದವರು" ಎಂದು ಪ್ರೊಫೆಸರ್ ಮ್ಯಾಕ್ಡೊನಲ್ ಹೇಳುತ್ತಾನೆ. ಧರ್ಮ ಮತ್ತು ರಾಷ್ಟ್ರೀಯ ಭಾವನೆಯ ಸಂಯೋಜನೆಯು ಎರಡರಿಂದಲೂ ಪರಸ್ಪರ ಶಕ್ತಿಯನ್ನೂ ಸಮನ್ವಯವನ್ನೂ ಪಡೆದವು. ಆದರೂ ಅದರ ದೌರ್ಬಲ್ಯವೂ, ಅಪೂರ್ಣತೆಯೂ ಅದರಲ್ಲಿಯೇ ಅಡಗಿದ್ದವು. ಏಕೆಂದರೆ ಧರ್ಮದ ಎಲ್ಲೆ ಕಟ್ಟಿನ

ಹೊರಗಿದ್ದ ಅನೇಕರು ಅದರಲ್ಲಿ ಸೇರಲು ಅವಕಾಶವಿಲ್ಲದೆ ಅದೊಂದು ಅಪೂರ್ಣ ಸಂಕುಚಿತ ರಾಷ್ಟ್ರೀಯ ಭಾವನೆಯಾಯಿತು. ಈ ಹಿಂದೂ ರಾಷ್ಟ್ರೀಯ ಭಾವನೆಯು ಭಾರತೀಯ ಭೂಗುಣದ ಸಹಜಫಲವಾದರೂ ಜಾತಿಧರ್ಮಗಳಿಗಿಂತ ಮಿಗಿಲಾದ ಉನ್ನತ ರಾಷ್ಟ್ರೀಯ ಭಾವನೆಗೆ ಅದು ವಿರುದ್ಧವಾಗಿತ್ತು.

ದೊಡ್ಡ ಚಕ್ರಾಧಿಪತ್ಯವು ಒಡೆದು ಪುಡಿಪುಡಿಯಾಗುತ್ತಿದ್ದಾಗ, ಭಾರತೀಯ ಮತ್ತು ವಿದೇಶಿ ಸಾಹಸಿಗರು ಅಲ್ಲಲ್ಲಿ ಪಾಳೆಯಗಳನ್ನು ಕಟ್ಟುತ್ತಿದ್ದ ಈ ಕಾಲದಲ್ಲಿ ನಿಜವಾದ ರಾಷ್ಟ್ರೀಯ ಮನೋಭಾವವು ಎಲ್ಲಿಯೂ ತಲೆ ಎತ್ತಲಿಲ್ಲವೆಂಬುದು ದಿಟ. ಪ್ರತಿಯೊಬ್ಬ ಸಾಹಸವ್ಯಕ್ತಿಯೂ ತನ್ನ ವೈಯಕ್ತಿಕ ಶಕ್ತಿಯನ್ನು ಹೆಚ್ಚಿಸಿಕೊಳ್ಳಲು ಪ್ರಯತ್ನಪಟ್ಟು, ಸ್ವರಕ್ಷಣೆಯಲ್ಲಿ ಉದ್ಯುಕ್ತನಾದನು. ನಮಗೆ ದೊರಿತಿರುವ ಇತಿಹಾಸವೆಲ್ಲ ಈ ಸಾಹಸವ್ಯಕ್ತಿಗಳ ಚರಿತ್ರೆ. ಅದರಲ್ಲಿರುವುದೆಲ್ಲ ಒಳಗಿನ ಮೂಲಕಾರಣಗಳಿಗಿಂತ ಮೇಲಿನ ಘಟನೆಗಳಿಗೇ ಪ್ರಾಧಾನ್ಯ. ಆದರೂ ಒಳಹೊಕ್ಕು ನೋಡಿದರೆ ಆಗ ಸಾಹಸಿಗರು ಅನೇಕರಿದ್ದರೂ ಕೇವಲ ಸಾಹಸವೇ ಆ ಘಟನೆಗಳಿಗೆ ಕಾರಣವಲ್ಲ ಎಂದು ಗೊತ್ತಾಗುತ್ತದೆ. ಮರಾಠರಿಗೆ ಒಂದು ಘನವಾದ ವಿಶಾಲಭಾವನೆ ಇತ್ತು, ಅವರ ಶಕ್ತಿಯು ಹೆಚ್ಚಿದಂತೆಲ್ಲ ಈ ಭಾವನೆಯೂ ಬಲಗೊಂಡಿತು. "ಹಿಂದೂಸ್ಥಾನ ಮತ್ತು ದಖ್ಖನ್ನಿನ ಜನರಲ್ಲಿ ಮರಾಠರಿಗೆ ಮಾತ್ರ ಪ್ರಬಲವಾದ ರಾಷ್ಟ್ರೀಯ ಭಾವನೆ ಇದೆ. ರಾಷ್ಟ್ರದ ಪ್ರತಿಯೊಬ್ಬ ವ್ಯಕ್ತಿಯ ಮನಸ್ಸಿನ ಮೇಲೂ ಅದು ಪರಿಣಾಮ ಮಾಡಿದೆ. ದೇಶಕ್ಕೆ ಏನಾದರೂ ದೊಡ್ಡ ವಿಪತ್ತು ಒದಗಿದರೆ ಮರಾಠ ಪ್ರಮುಖರೆಲ್ಲ ಏಕೀಭವಿಸಿ ಒಂದುಗೂಡುತ್ತಾರೆ" ಎಂದು ೧೭೮೪ರಲ್ಲಿ ವಾರನ್ ಹೇಸ್ಟಿಂಗ್ಸ್ ಹೇಳಿದ್ದಾನೆ. ಪ್ರಾಯಶಃ ಈ ಅವರ ರಾಷ್ಟ್ರೀಯ ಭಾವನೆಯು ಮರಾಠಿ ಮಾತನಾಡುವ ಜನರಲ್ಲಿ ಮಾತ್ರವಿತ್ತು. ಆದರೂ ಮರಾಠರ ರಾಜಕೀಯ ಮತ್ತು ಸೈನಿಕ ಪದ್ಧತಿಯಲ್ಲಿ, ನಡೆನುಡಿಯಲ್ಲಿ ವಿಶಾಲ ಮನೋಭಾವನೆಯಿತ್ತು; ಅಂತರ್ಯದಲ್ಲಿ ಪ್ರಜಾಪ್ರಭುತ್ವ ಭಾವನೆಯು ಇತ್ತು. ಇದರಿಂದ ಅಂತಃಶಕ್ತಿ ವೃದ್ಧಿಗೊಂಡಿತು. ಶಿವಾಜಿಯು ಅವರಂಗಜೇಬನ ಮೇಲೆ ಯುದ್ಧಮಾಡಿದರೂ, ಅವನ ಸೈನ್ಯದಲ್ಲಿ ಅನೇಕ ಮುಸ್ಲಿಮರಿದ್ದರು.

ಮೊಗಲ ಚಕ್ರಾಧಿಪತ್ಯವು ಒಡೆದು ಹೋಗಲು ಇನ್ನೊಂದು ಕಾರಣ ಆರ್ಥಿಕ ರಚನೆಯು ಕುಸಿದು ಬಿದ್ದದ್ದು. ಕೆಲವು ಕಡೆ ದೊಡ್ಡದಾಗಿ ಇನ್ನೂ ಇತರ ಕಡೆಗಳಲ್ಲಿ ಸಣ್ಣದಾಗಿ ಅನೇಕ ಕಡೆಗಳಲ್ಲಿ ರೈತರು ದಂಗೆ ಎದ್ದರು. ೧೬೬೯ ರಿಂದ ಮೊದಲುಗೊಂಡು, ದೆಹಲಿಗೆ ಬಹಳ ಸಮೀಪದಲ್ಲಿಯೇ ಇದ್ದ "ಜಾಠ"ರು ಮೇಲಿಂದ ಮೇಲೆ ದಂಗೆ ಎದ್ದರು. ಬಡಬಗ್ಗರ ಇನ್ನೊಂದು ದಂಗೆ "ಸಾತಾಮಿ" ದಂಗೆ. ಅವರನ್ನು ವರ್ಣಿಸುತ್ತ "ರಕ್ತದಾಹದ ಅಕ್ಕಸಾಲಿಗರು, ಬಡಗಿಯರು, ಭಂಗಿಗಳು, ಚರ್ಮಹದಮಾಡುವವರು ಮುಂತಾದ ನೀಚವೃತ್ತಿಯ ಜೀವಶವಗಳ ದಂಗೆಕೋರರ ಗುಂಪು" ಎಂದು ಒಬ್ಬ ಮೊಗಲಸರದಾರ ಹೇಳಿದ್ದಾನೆ. ಇನ್ನೊಂದು ಗುಂಪು ಅವರನ್ನು ಅನುಗೊಳಿಸಿ ಹೊಸ ಪ್ರಯೋಗ ನಡೆಸುತ್ತ ಇತ್ತು.

ಈ ರೀತಿ ಸಾಮ್ರಾಜ್ಯವು ದಂಗೆ ಮತ್ತು ಅಂತಃಕಲಹಗಳಿಂದ ಒಡೆದು ಹೋಗುತ್ತಿದ್ದಾಗ ಪಶ್ಚಿಮ ಭಾರತದಲ್ಲಿ ಮರಾಠರ ಅಭ್ಯುದಯದ ನವೋದಯವಾಗಿ ಅವರ ಶಕ್ತಿಯು ಬಲಗೊಳ್ಳುತ್ತಿತ್ತು. ೧೬೨೭ ರಲ್ಲಿ ಶಿವಾಜಿಯು ಜನಿಸಿದನು. ಕಷ್ಟಸಹಿಷ್ಣುಗಳಾದ ಬೆಟ್ಟಜೀವಿಗಳ ಆದರ್ಶನಾಯಕನಾಗಿ ಕುದುರೆಗಳ ಮೇಲೆಯೇ ದೂರದೇಶಗಳಿಗೆ ಸಾರಿ ಸೂರತನಗರದ ಇಂಗ್ಲಿಷರ ಗಡಂಗನ್ನು ಕೊಳ್ಳೆಹೊಡೆದನು; ಮೊಗಲರಾಜ್ಯದ ದೂರದ ಪ್ರಾಂತ್ಯಗಳಲ್ಲಿ ಸಹ ಚೌಥಾಯಿ ತೆರಿಗೆಯನ್ನು ವಸೂಲುಮಾಡುತ್ತಿದ್ದನು. ಪ್ರಾಚೀನ ಪುರಾಣೇತಿಹಾಸಗಳಿಂದ ಸ್ಫೂರ್ತಿಪಡೆದು ಆದರ್ಶನಾಯಕನಿಗೆ ಅವಶ್ಯವಾದ ಎಲ್ಲ ಸದ್ಗುಣಗಳನ್ನೂ ಹೊಂದಿ; ಧೈರ್ಯಶಾಲಿಯಾಗಿ ಶಿವಾಜಿಯು ಪುನರುಜ್ಜೀವಿತ ಹಿಂದೂ ರಾಷ್ಟ್ರೀಯ ಭಾವನೆಯ ಮೂರ್ತಸ್ವರೂಪನಾದನು. ಮರಾಠರಿಗೊಂದು ರಾಷ್ಟ್ರೀಯ ಭಾವನೆಯ ಹಿನ್ನೆಲೆಯನ್ನು ಕೊಟ್ಟು ಐಕಮತ್ಯವನ್ನುಂಟುಮಾಡಿ ಅವರನ್ನು ಸುವ್ಯವಸ್ಥಿತಯೋಧಪಡೆಯನ್ನಾಗಿ ಮಾಡಿ ಮೊಗಲ್ ಚಕ್ರಾಧಿಪತ್ಯವನ್ನು ನುಚ್ಚುನೂರು ಮಾಡಿದ ಪ್ರಬಲ ಶಕ್ತಿಯನ್ನಾಗಿ ಮಾಡಿದನು. ಆತನು ೧೬೮೦ ರಲ್ಲಿ ಮಡಿದರೂ ಮರಾಠರ ಶಕ್ತಿಯು ಭಾರತವನ್ನೆಲ್ಲ ಆಕ್ರಮಿಸುವವರೆಗೂ ಬೆಳೆಯಿತು.

೧೩. ಮರಾಠರೂ ಮತ್ತು ಸ್ವಾಮ್ಯಕ್ಕಾಗಿ ಬ್ರಿಟಿಷರ ಹೋರಾಟವೂ : ಬ್ರಿಟಿಷರ ವಿಜಯ

೧೭೦೭ ರಲ್ಲಿ ಅವರಂಗಜೇಬನ ಮರಣದನಂತರ ನೂರುವರ್ಷಗಳ ಕಾಲ ಭಾರತದಲ್ಲಿ ನಾಡಿನ ಸ್ವಾಮ್ಯಕ್ಕಾಗಿ ಜಟಿಲವೂ, ಬಹುಮುಖವೂ ಆದ ಹೋರಾಟಗಳು ನಡೆದವು. ಮೊಗಲ್ ಚಕ್ರಾಧಿಪತ್ಯವು ಬೇಗ ನುಚ್ಚುನೂರಾಯಿತು, ಸಾಮ್ರಾಜ್ಯದ ರಾಜ ಪ್ರತಿನಿಧಿಗಳೂ, ಗವರ್ನರುಗಳೂ ಬಹುಮಟ್ಟಿಗೆ ಸ್ವತಂತ್ರರಾದರು. ಮೊಗಲ್ ಸಂತತಿಯ ದೆಹಲಿಯ ರಾಜರುಗಳು ದುರ್ಬಲರೂ, ಇತರರ ಕೈಗೊಂಬೆಗಳೂ ಆಗಿದ್ದರೂ ಮೊಗಲ್ ಚಕ್ರವರ್ತಿಗಳ ವಂಶೀಕರ ಗೌರವ ಇನ್ನೂ ಸ್ವಲ್ಪ ಉಳಿದಿದ್ದ ಕಾರಣ ನಾಮ ಮಾತ್ರ ಪರಮಾಧಿಕಾರವು ಅವರಲ್ಲಿಯೇ ಉಳಿದಿತ್ತು. ಈ ಅಧೀನ ರಾಜ್ಯಗಳಿಗೂ ನಿಜವಾದ ಶಕ್ತಿ ಇರಲಿಲ್ಲ. ಆದರೆ ಪರಮಾಧಿಕಾರ ಸ್ಥಾಪನೆಯಲ್ಲಿ ಉದ್ಯುಕ್ತರಾದವರಿಗೆ ಕೆಲವರು ಸಹಾಯಕರಾದರು ಇನ್ನು ಕೆಲವರು ಅಡ್ಡಿಬಂದರು. ದಕ್ಷಿಣದಲ್ಲಿ ಸ್ಥಾನ ಪ್ರಾಮುಖ್ಯತೆ ದೊರೆಯಿತು. ಕೊನೆಕೊನೆಗೆ ಇದರಲ್ಲೂ ಹುರುಳಿಲ್ಲದೆ ಆತನೂ ಸಹ ಬಾಹ್ಯಶಕ್ತಿಗಳ ಕೈಗೊಂಬೆಯಾದನು. ಯಾವ ಕಷ್ಟಕ್ಕೂ, ಅಪಾಯಕ್ಕೂ ಸಿಕ್ಕದೆ ಪರರ ಸಂಕಟಸಮಯವನ್ನು ದುರುಪಯೋಗಪಡಿಸಿ ಲಾಭಪಡೆಯುವ ಕುಯುಕ್ತಿಯು ಆ ಸಂಸ್ಥಾನದ ನೀತಿಯಾಯಿತು." ಮೇಲೇಳಲಾಗದಷ್ಟು ಅನೀತಿ, ನಿಶ್ಶಕ್ತಿ. . . . . ಆದ್ದರಿಂದ ಅಧೀನತೆಯಲ್ಲಿ ಮುಳುಗುವ ಅನಿವಾರ್ಯ" ಎಂದು ಸರ್ ಜಾನ್‌ಷೋರ್ ಹೈದರಾಬಾದ್ ವಿಷಯವಾಗಿ ಹೇಳಿದ್ದಾನೆ. ಮರಾಠರು ನೈಜಾಮನನ್ನು ತಮಗೆ ಕಪ್ಪಕೊಡುವ ಅಧೀನ ಪಾಳೆಯಗಾರನೆಂದು ಭಾವಿಸಿದ್ದರು. ಇದರಿಂದ ತಪ್ಪಿಸಿಕೊಂಡು ಸ್ವತಂತ್ರನಾಗಲು ಯತ್ನಿಸಿದಾಗ ಕೂಡಲೆ ಸದೆಬಡೆದು ಆತನ ದುರ್ಬಲ ಪುಕ್ಕಲು ಸೇನೆಯನ್ನು ಓಡಿಸಿದರು. ಆಗತಾನೆ ಪ್ರಾಬಲ್ಯಕ್ಕೆ ಬರುತ್ತಿದ್ದ ಬ್ರಿಟಿಷ್ ಈಸ್ಟ್ ಇಂಡಿಯ ಕಂಪೆನಿಯನ್ನು ನೈಜಾಮನು ಮರೆಹೊಕ್ಕನು. ಅವರ ನೆರಳಿನಲ್ಲಿ ಒಬ್ಬ ಸಂಸ್ಥಾನಾಧೀಶನಾದನು. ಮೈಸೂರಿನ ಟಿಪ್ಪೂಸುಲ್ತಾನನನ್ನು ಬ್ರಿಟಿಷರು ಸೋಲಿಸಿದಾಗ ಮೈ ಅಲುಗಾಡಿಸದೆ ಹೈದರಾಬಾದು ತನ್ನ ರಾಜ್ಯವನ್ನು ವಿಸ್ತರಿಸಿ ಕೊಂಡಿತು.

೧೭೮೪ರಲ್ಲಿ ವಾರನ್ ಹೇಸ್ಟಿಂಗ್ಸ್ ನೈಜಾಮನ ವಿಷಯ ಬರೆಯುತ್ತ "ಆತನ ರಾಜ್ಯ ಸಣ್ಣದು, ಉತ್ಪತ್ತಿಯೇ ಇಲ್ಲ; ಆತನ ಸೈನ್ಯಬಲವು ತೃಣಪ್ರಾಯವಿದೆ, ತನ್ನ ಜೀವನದಲ್ಲಿ ಯಾವಾಗಲೂ ಧೈರ್ಯವನ್ನು ತೋರಿಸಿದವನಲ್ಲ, ಸಾಹಸದ ಮನೋಭಾವವೇ ಆತನಲ್ಲಿಲ್ಲ. ತನ್ನ ನೆರೆಹೊರೆಯವರಲ್ಲಿ ಯುದ್ಧವನ್ನು ಎಬ್ಬಿಸಿ, ತಾನು ಯಾರಕಡೆಯೂ ಯಾವ ಯುದ್ಧದಲ್ಲೂ ಭಾಗವಹಿಸದೆ ಅವರ ದೌರ್ಬಲ್ಯವನ್ನೂ ಕಷ್ಟ ಸಮಯವನ್ನೂ ಉಪಯೋಗಿಸಿಕೊಂಡು ಲಾಭಪಡೆಯುವುದೇ ಸದಾ ಆತನ ಮುಖ್ಯ ನೀತಿಯಾಗಿದೆ. ಯುದ್ಧ ಅನಿವಾರ್ಯವೆಂದ ಸಮಯದಲ್ಲಿ ತಪ್ಪಿಸಿಕೊಳ್ಳಲು ಯಾವ ಕೆಲಸ ಮಾಡುವುದಕ್ಕೂ ಹೇಸುವುದಿಲ್ಲ" ಎಂದು ಹೇಳಿದ್ದಾನೆ.*

ಹದಿನೆಂಟನೆಯ ಶತಮಾನದಲ್ಲಿ ಭಾರತದಲ್ಲಿ ರಾಜ್ಯಾಧಿಕಾರ ಪಡೆಯಲು ನಿಜವಾಗಿ ಪ್ರಯತ್ನ ಮಾಡಿದ ಶಕ್ತಿಗಳೆಂದರೆ ನಾಲ್ಕು; ಎರಡು ಭಾರತೀಯ ಎರಡು ವಿದೇಶೀ. ಭಾರತೀಯರಲ್ಲಿ ದಕ್ಷಿಣದಲ್ಲಿ ಹೈದರಾಲಿ ಮತ್ತು ಆತನ ಮಗ ಟಿಪ್ಪೂಸುಲ್ತಾನ್ ಮತ್ತು ಮರಾಠರು, ವಿದೇಶೀಯರಲ್ಲಿ ಫ್ರೆಂಚರು ಮತ್ತು ಬ್ರಿಟಿಷರು. ಇವರಲ್ಲಿ ಮೊದಲನೆಯ ಅರ್ಧಶತಮಾನದಲ್ಲಿ ಮರಾಠರು ಹಿಂದೂಸ್ಥಾನದಲ್ಲೆಲ್ಲ ದಿಗ್ವಿಜಯಹೊಂದಿ ಪ್ರಾಬಲ್ಯ ಪಡೆದು ಮೊಗಲ್ ಚಕ್ರಾಧಿಪತ್ಯಕ್ಕೆ ಉತ್ತರಾಧಿಕಾರಿಗಳಾಗುವುದು ಅನಿವಾರ್ಯವೆಂದು ತೋರಿತು. ೧೭೩೭ ರಲ್ಲೇ ಅವರ ಸೈನ್ಯಗಳು ದೆಹಲಿಯ ಹೆಬ್ಬಾಗಿಲಿಗೆ ಬಂದವು. ಅವರನ್ನು ಎದುರಿಸುವವರೇ ಇರಲಿಲ್ಲ.

ಆಗತಾನೇ ೧೭೩೯ ರಲ್ಲಿ ವಾಯವ್ಯ ಪ್ರಾಂತ್ಯದ ಒಬ್ಬದಂಗೆಕೋರನು ದೆಹಲಿಯ ಮೇಲೆ ಬಿದ್ದು ಜನರನ್ನು ಕೊಂದು ಕೊಳ್ಳೆಹೊಡೆದು ಮಯೂರ ಸಿಂಹಾಸನವನ್ನೂ ಅಪಾರ ಐಶ್ವರ್ಯವನ್ನೂ ದೋಚಿಕೊಂಡು ಹೋದನು. ದೆಹಲಿಯ ಸಿಂಹಾಸನಾಧೀಶರು, ಯುದ್ಧದ ಅನುಭವವಿಲ್ಲದ ಹೇಡಿಗಳೂ,

* ಥಾಮ್ಸನ್‌ರ "The making of the Indian Princes" (1943) ಎಂಬ ಗ್ರಂಥದಿಂದ.

ಸತ್ವಹೀನರೂ ಆಗಿದ್ದುದರಿಂದ ಕೊಳ್ಳೆ ಹೊಡೆಯುವುದು ಬಹಳ ಸುಲಭವಾಯಿತು. ನಾದಿರ್‌ಷಹ ಮರಾಠರನ್ನು ಎದುರಿಸಲೇ ಇಲ್ಲ, ಅವನ ಸುಲಿಗೆಯಿಂದ ಮರಾಠರಿಗೆ ಸಹಾಯವಾಯಿತು. ಕ್ರಮೇಣ ಅವರು ಪಂಜಾಬಿಗೂ ಹರಡಿದರು. ಮರಾಠರ ಅಭ್ಯುದಯವು ಮೂರ್ತಿವೆತ್ತಿತು.

ನಾದಿರಷಾನ ಕೊಳ್ಳೆಯಿಂದ ಎರಡು ಪರಿಣಾಮಗಳಾದವು. ಮೊಗಲ ರಾಜರ ಅಧಿಕಾರಬಲ ಮತ್ತು ಶಕ್ತಿಯ ಹುರುಳನ್ನು ಬೈಲಿಗೆಳೆದನು. ಅಲ್ಲಿಂದ ಮುಂದೆ ಅವರು, ಯಾರು ಬಲಿಷ್ಠರಾಗಿ ಅಧಿಕಾರ ನಡೆಸಲು ಸಮರ್ಥರಿದ್ದರೋ ಅವರ ಕೈಗೊಂಬೆಗಳಾಗಿ ರಾಜಶವಗಳಾದರು. ನಾದಿರ್‌ಷಾ ಬರುವಹೊತ್ತಿಗೇನೆ ದುರ್ಬಲರಾಗಿದ್ದರು. ಅವನು ಬಂದು ಅವರನ್ನು ಪೂರೈಸಿದನು. ಆದರೂ ಸಂಪ್ರದಾಯ ಬಲದಿಂದ ಪ್ಲಾಸಿ ಕದನದವರೆಗೂ ಬ್ರಿಟಿಷ್ ಈಸ್ಟ್ ಇಂಡಿಯ ಕಂಪೆನಿಯವರು ಮತ್ತು ಇನ್ನೂ ಅನೇಕರು ಅವರ ಗೌರವಾರ್ಥವಾಗಿ ಇನ್ನೂ ಕಾಣಿಕೆಗಳನ್ನು ಕಳುಹಿಸುತ್ತಿದ್ದರು. ಅನಂತರವೂ ಬಹಳ ಕಾಲದವರೆಗೂ ಈಸ್ಟ್ ಇಂಡಿಯ ಕಂಪೆನಿಯು ದೆಹಲಿ ಚಕ್ರವರ್ತಿಯ ಪ್ರತಿನಿಧಿ ಎಂದೇ ಕೆಲಸಮಾಡಿತು. ೧೮೩೫ರವರೆಗೆ ಆತನ ಹೆಸರಿನಲ್ಲಿಯೇ ನಾಣ್ಯಗಳನ್ನು ಅಚ್ಚುಹಾಕಿಸುತ್ತಿತ್ತು.

ಎರಡನೆಯ ಪರಿಣಾಮವೆಂದರೆ ಆಫ್ಘಾನಿಸ್ಥಾನವು ಇಂಡಿಯದಿಂದ ಪ್ರತ್ಯೇಕವಾದುದು. ಸಹಸ್ರಾರು ವರ್ಷಗಳಿಂದ ಭಾರತದ ಒಂದು ಭಾಗವಾಗಿದ್ದ ಆಫ್ಘಾನಿಸ್ಥಾನವು ಈಗ ಪ್ರತ್ಯೇಕವಾಗಿ ನಾದಿರ್‌ಷಾನ ರಾಜ್ಯದ ಒಂದು ಭಾಗವಾಯಿತು. ಕೆಲವು ದಿನಗಳ ತರುವಾಯ ನಾದಿರ್‌ಷಾನ ಅಧಿಕಾರಿಗಳೇ ಆತನನ್ನು ಕೊಲೆಮಾಡಿದರು. ಆಫ್ಘಾನಿಸ್ಥಾನವು ಸ್ವತಂತ್ರ ರಾಷ್ಟ್ರವಾಯಿತು.

ನಾದಿರ್‌ಷಾನ ಮುತ್ತಿಗೆಯಿಂದ ಮರಾಠರ ಶಕ್ತಿಯು ಸ್ವಲ್ಪವೂ ಕುಗ್ಗಲಿಲ್ಲ; ಪಂಜಾಬಿನಲ್ಲಿ ಮುಂದುವರಿಯುತ್ತಲೇ ಇದ್ದರು. ಆದರೆ ೧೭೬೧ರಲ್ಲಿ ಪಾನಿಪತ್ತದಲ್ಲಿ ಆಫ್ಘಾನಿಸ್ಥಾನದ ದೊರೆಯಾದ ಅಹಮದ್‌ಷಾ ದುರಾನಿಯ ಕೈಯಲ್ಲಿ ಮರಾಠರಿಗೆ ದೊಡ್ಡ ಸೋಲಾಯಿತು. ಮರಾಠ ಸೈನ್ಯದ ಉತ್ತಮ ಯೋಧರೆಲ್ಲರೂ ಈ ಯುದ್ಧದಲ್ಲಿ ಮಡಿದರು; ಮರಾಠರ ಚಕ್ರಾಧಿಪತ್ಯದ ಕನಸೂ ಒಡೆದು ನುಚ್ಚುನೂರಾಯಿತು, ಕ್ರಮೇಣ ಚೇತರಿಸಿಕೊಂಡು ಪುಣೆಯ ಪೇಶ್ವೆಯ ನೇತೃತ್ವದಲ್ಲಿ ಒಂದು ಬಗೆಯ ಸಂಯುಕ್ತ ಪದ್ಧತಿಗೆ ಒಳಪಟ್ಟ ಕೆಲವು ಸ್ವತಂತ್ರರಾಜ್ಯಗಳನ್ನು ಕಟ್ಟಿದರು. ಅದರಲ್ಲಿ ಗ್ವಾಲಿಯರ್‌ನ ಸಿಂಧ್ಯ, ಇಂದೂರಿನ ಹೋಳ್ಕರ್, ಬರೋಡೆಯ ಗಾಯಕವಾಡರು ಮುಖ್ಯರು. ಪಶ್ಚಿಮ ಮತ್ತು ಮಧ್ಯಭಾರತದ ಬಹು ಭಾಗವು ಸಂಯುಕ್ತರಾಜ್ಯಾಡಳಿತಕ್ಕೆ ಅಧೀನವಾಗಿತ್ತು. ಆದರೆ ಭಾರತದಲ್ಲಿ ಇಂಗ್ಲಿಷ್ ಕಂಪೆನಿಯು ಒಂದು ಪ್ರಬಲ ರಾಜ್ಯಶಕ್ತಿಯಾಗುತ್ತಿದ್ದಾಗ ಪಾನಿಪತ್ತದಲ್ಲಿ ಅಹಮ್ಮದ್‌ಷಾನ ಕೈಯಲ್ಲಾದ ಸೋಲಿನಿಂದ ಮರಾಠರ ಶಕ್ತಿಯು ಬಹಳ ಕುಂದಿತು.

ಬಂಗಾಲದಲ್ಲಿ ಕ್ಲೈವನು ರಾಜದ್ರೋಹ ಮತ್ತು ಸೃಷ್ಟನೆ ಪತ್ರಗಳಿಂದಲೂ, ಅತ್ಯಲ್ಪ ಯುದ್ಧದಿಂದಲೂ ೧೭೫೭ರಲ್ಲಿ ಪ್ಲಾಸಿ ಕದನವನ್ನು ಗೆದ್ದನು. ಭಾರತದಲ್ಲಿ ಬ್ರಿಟಿಷ್ ಸಾಮ್ರಾಜ್ಯದ ಆರಂಭದ ದಿನವೆಂದು ಆ ದಿನವು ಪ್ರಸಿದ್ಧಿಯಾಯಿತು. ಆ ಆರಂಭದ ಕಹಿ ನೆನಪು ಇನ್ನೂ ಹೋಗಿಲ್ಲ. ಸ್ವಲ್ಪ ಕಾಲದಲ್ಲಿ ಇಂಗ್ಲಿಷರು ಬಂಗಾಲ ಮತ್ತು ಬೀಹಾರ್ ಎಲ್ಲವನ್ನೂ ಆಕ್ರಮಿಸಿದರು. ಈ ಆಕ್ರಮಣದ ಮೊದಲನೆಯ ಫಲವೆಂದರೆ ಈ ಎರಡು ಪ್ರಾಂತ್ಯಗಳಲ್ಲಿನ ೧೭೭೦ರ ಘೋರ ಕ್ಷಾಮ. ವಿಶೇಷ ಜನಬಾಹುಳ್ಯವುಳ್ಳ ವಿಶಾಲವಾದ ಫಲವತ್ತಾದ ಈ ಎರಡು ಪ್ರಾಂತ್ಯಗಳಲ್ಲಿ ಮೂರನೆಯ ಒಂದು ಭಾಗದಷ್ಟು ಜನರು ಮರಣಹೊಂದಿದರು.

ಪ್ರಪಂಚದ ಪ್ರಾಬಲ್ಯಕ್ಕಾಗಿ ಪರಸ್ಪರ ನಡೆದ ಯುದ್ಧದ ಒಂದು ಭಾಗವಾಗಿ ಫ್ರೆಂಚರಿಗೂ ಬ್ರಿಟಿಷರಿಗೂ ದಕ್ಷಿಣ ಭಾರತದಲ್ಲಿ ನಡೆದ ಯುದ್ಧದಲ್ಲಿ ಇಂಗ್ಲಿಷರು ಜಯಶಾಲಿಗಳಾಗಿ ಫ್ರೆಂಚರನ್ನು ಭಾರತದಿಂದ ಹೊರನೂಕಿದರು.

ಭಾರತದಿಂದ ಫ್ರೆಂಚರು ಹೊರಟು ಹೋದಮೇಲೆ ರಾಜ್ಯಾಧಿಕಾರಕ್ಕಾಗಿ ಪೈಪೋಟಿ ನಡೆಸುವವರು ಮೂರು ಜನರು ಉಳಿದರು. ಸಂಯುಕ್ತ ಮಹರಾಷ್ಟ್ರ, ದಕ್ಷಿಣದಲ್ಲಿ ಹೈದರಾಲಿ ಮತ್ತು ಬ್ರಿಟಿಷರು. ಪ್ಲಾಸಿಕದನವನ್ನು ಗೆದ್ದು ಬಂಗಾಲ ಮತ್ತು ಬಿಹಾರದಲ್ಲಿ ಬೇರೂರಿ ಹರಡಿದ್ದರೂ ಭಾರತದಲ್ಲಿ ಬ್ರಿಟಿಷರು

ಪ್ರಬಲ ಆಡಳಿತ ಶಕ್ತಿಯಾಗುತ್ತದೆ ಎಂದೂ, ಅಖಂಡ ಭಾರತದ ಮೇಲೆ ರಾಜ್ಯಭಾರ ನಡೆಸುತ್ತಾರೆಂದೂ ಆಗಲೂ ಯಾರೂ ಊಹಿಸಲು ಸಾಧ್ಯವಿರಲಿಲ್ಲ. ಯಾರಾದರೂ ನೋಡಿದವರು ಪಶ್ಚಿಮ ಮತ್ತು ಮಧ್ಯ ಭಾರತದಲ್ಲೆಲ್ಲ ದೆಹಲಿಯವರೆಗೆ ಹಬ್ಬಿ ಹರಡಿದ್ದ ಧೈರ್ಯಶಾಲಿಗಳೂ ವೀರಾಗ್ರಣಿಗಳೂ ಎಂದು ಪ್ರಸಿದ್ಧ ರಾದ ಮರಾಠರಿಗೆ ಮೊದಲನೆಯ ಸ್ಥಾನವನ್ನು ಕೊಡುತ್ತಿದ್ದರು. ಹೈದರಾಲಿ ಮತ್ತು ಟಿಪ್ಪುಸುಲ್ತಾನ್ ಇಬ್ಬರೂ ಪ್ರಬಲ ಶತ್ರುಗಳಾಗಿ ಬ್ರಿಟಿಷರಿಗೆ ದೊಡ್ಡ ಸೋಲನ್ನುಂಟುಮಾಡಿ ಈಸ್ಟ್ ಇಂಡಿಯ ಕಂಪೆನಿ ಯನ್ನು ಧ್ವಂಸಮಾಡುವಷ್ಟರಲ್ಲಿದ್ದರು. ಆದರೆ ಅವರ ವ್ಯಾಪ್ತಿ ಎಲ್ಲವೂ ದಕ್ಷಿಣದಲ್ಲಿ, ಆದ್ದರಿಂದ ಒಟ್ಟಿನಲ್ಲಿ ಭಾರತದ ಮೇಲೆ ಹೆಚ್ಚು ಪರಿಣಾಮಮಾಡಲಿಲ್ಲ. ಹೈದರಾಲಿಯು ಒಬ್ಬ ಅಸಾಧ್ಯ ವ್ಯಕ್ತಿ, ಭಾರತೀಯ ಇತಿಹಾಸದಲ್ಲಿ ಒಬ್ಬ ಪ್ರಸಿದ್ಧ ಪುರುಷ. ಆತನಿಗೆ ಒಂದು ಬಗೆಯ ರಾಷ್ಟ್ರೀಯ ಭಾವನೆ ಇತ್ತು. ಆತನು ದೂರದೃಷ್ಟಿಯುಳ್ಳ ಒಬ್ಬ ಮಹಾನಾಯಕ. ಪ್ರಬಲವಾದ ರೋಗದಿಂದ ನರಳುತ್ತಿದ್ದರೂ, ಆತನ ಆತ್ಮ ಸಂಯಮ ಕಷ್ಟಸಹಿಷ್ಣುತೆ ಮತ್ತು ಕಾರ್ಯಶಕ್ತಿ ಅತ್ಯಾಶ್ಚರ್ಯಕರವಿದ್ದವು. ಆತನು ನಾವಿಕ ಬಲದ ಪ್ರಾಮುಖ್ಯತೆಯನ್ನೂ ನಾವಿಕಾ ಶಕ್ತಿಯನ್ನವಲಂಬಿಸಿದ್ದ ಬ್ರಿಟಿಷರಿಂದ ಒದಗಬಹುದಾದ ಅಪಾಯ ವನ್ನೂ ಎಲ್ಲರಿಗೂ ಮೊದಲು ಅರಿತುಕೊಂಡನು. ಅವರನ್ನು ಭಾರತದಿಂದ ಓಡಿಸಲು ಎಲ್ಲರನ್ನೂ ಒಟ್ಟುಗೂಡಿಸುವ ಪ್ರಯತ್ನಮಾಡಿದನು. ಮರಾಠರಲ್ಲಿಗೆ, ನೈಜಾಮನಲ್ಲಿಗೆ, ಅಯೋಧ್ಯೆಯ ಷೂಜಾವು ದ್ದಾಲನಲ್ಲಿಗೆ ರಾಯಭಾರಿಗಳನ್ನು ಕಳುಹಿಸಿದನು. ತನ್ನದೇ ನಾವಿಕಾಪಡೆಯನ್ನು ಕಟ್ಟಿ ಮಾಲ್ಡಿವ್ ದ್ವೀಪಗಳನ್ನು ಹಿಡಿದನು. ತನ್ನ ನಾವೆಗಳನ್ನು ಕಟ್ಟಿ ನೌಕಾಪಡೆಯನ್ನು ಹೆಚ್ಚಿಸಲು ಅದನ್ನೇ ತನ್ನ ವಾಸಸ್ಥಾನವನ್ನಾಗಿಮಾಡಿಕೊಂಡನು. ತನ್ನ ಸೈನ್ಯದೊಂದಿಗೆ ಬರುತ್ತಿರುವಾಗ ದಾರಿಯಲ್ಲಿ ಪ್ರಾಣ ಬಿಟ್ಟನು. ಆತನ ಮಗನಾದ ಟಿಪ್ಪೂ ನಾವಿಕಾಬಲವನ್ನು ಅಭಿವೃದ್ಧಿಗೊಳಿಸುತ್ತಾ ಬಂದನು. ಟಿಪ್ಪೂ ನೆಪೋಲಿಯನ್ನನಿಗೂ ಕಾನ್‌ಸ್ಟೆಂಟಿನೋಪಲ್‌ನ ಸುಲ್ತಾನನಿಗೂ ಸಂದೇಶಗಳನ್ನು ಕಳುಹಿಸಿದನು.

ಉತ್ತರದಲ್ಲಿ ಪಂಜಾಬಿನಲ್ಲಿ ರಣಜಿತ್ ಸಿಂಗನ ನಾಯಕತ್ವದಲ್ಲಿ ಸಿಕ್‌ರಾಜ್ಯ ಸ್ಥಾಪನೆಯಾಗಿ ಅದು ಕಾಶ್ಮೀರ ಮತ್ತು ವಾಯವ್ಯ ಪ್ರಾಂತ್ಯದವರೆಗೆ ಹಬ್ಬಿತ್ತು. ಆದರೆ ಅದೂ ಒಂದು ಕೊನೆಯಲ್ಲಿ ಹುಟ್ಟಿದ ರಾಜ್ಯ. ಭಾರತದಲ್ಲಿ ಪರಮಾಧಿಕಾರದ ಹೋರಾಟದಲ್ಲಿ ನಿಜವಾದ ಪರಿಣಾಮ ಮಾಡಲಿಲ್ಲ. ಆ ಹೋರಾಟವು ಹದಿನೆಂಟನೆಯ ಶತಮಾನದ ಅಂತ್ಯದ ಹೊತ್ತಿಗೆ ಮರಾಠರು ಮತ್ತು ಇಂಗ್ಲೀಷರು ಇಬ್ಬರ ಮಧ್ಯೆ ಉಳಿಯಿತು. ಉಳಿದ ಎಲ್ಲ ರಾಜ್ಯಗಳು, ಆಡಳಿತಗಳು ಇವರಿಬ್ಬರ ಅಧೀನವಾದವು.

ಬ್ರಿಟಿಷರು ೧೭೯೯ರಲ್ಲಿ ಮೈಸೂರಿನ ಟಿಪ್ಪೂವನ್ನು ಸೋಲಿಸಿದರು. ಅಂತ್ಯ ಹೋರಾಟವು ಇದ ರಿಂದ ಮರಾಠರಿಗೂ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಗೂ ಮಧ್ಯೆ ನಿಂತಿತು. ಆಗಿನ ಬ್ರಿಟಿಷ್ ಅಧಿಕಾರಿಗಳಲ್ಲಿ ಚಾರ್ಲ್ಸ್ ಮೆಟ್ಕಾಫ್ ಬಹಳ ದಕ್ಷನಾಗಿದ್ದನು. ಆತನು ೧೮೦೬ರಲ್ಲಿ "ಭಾರತದಲ್ಲಿ ಮರಾಠರು ಮತ್ತು ಬ್ರಿಟಿಷರು ಈ ಇಬ್ಬರನ್ನು ಬಿಟ್ಟರೆ ಬೇರೆ ಯಾವ ಶಕ್ತಿಯೂ ಇಲ್ಲ. ಉಳಿದೆಲ್ಲ ರಾಜರೂ ಇವರಲ್ಲಿ ಯಾರಾದರೊಬ್ಬರ ಸ್ವಾಮ್ಯವನ್ನು ಒಪ್ಪುತ್ತಾರೆ. ನಾವು ಒಂದು ಅಂಗುಲ ಹಿಂದೆ ಸರಿದರೂ ಅವರು ಅದನ್ನು ಆಕ್ರಮಿಸಿಕೊಳ್ಳುತ್ತಾರೆ" ಎಂದು ಬರೆದಿದ್ದಾನೆ. ಆದರೆ ಮರಾಠ ನಾಯ ಕರಲ್ಲೆ ಪರಸ್ಪರ ಜಗಳಗಳಾಗಿ ಅಂತರ್ಯುದ್ಧಗಳಾದವು. ಬ್ರಿಟಿಷರು ಅವರನ್ನು ಒಬ್ಬೊಬ್ಬರನ್ನಾಗಿ ಸೋಲಿಸಿದರು. ಅವರೂ ಕೆಲವು ಯುದ್ಧಗಳನ್ನು ಗೆದ್ದರು. ೧೮೦೪ರಲ್ಲಿ ಆಗ್ರ ಬಳಿ ಮರಾಠರು ಬ್ರಿಟಿಷರನ್ನು ಬಲವಾಗಿ ಸೋಲಿಸಿದರು. ಆದರೆ ೧೮೧೮ರ ಹೊತ್ತಿಗೆ ಮರಾಠರು ಪೂರ್ಣ ಪರಾಜಯ ಹೊಂದಿದರು. ಮಧ್ಯ ಭಾರತದ ಮರಾಠ ರಾಜರು ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಗೆ ಶರಣಾಗತ ರಾಗಿ ಅವರ ಪರಮಾಧಿಕಾರವನ್ನು ಒಪ್ಪಿದರು. ಬ್ರಿಟಿಷರು ಆಗ ಭಾರತದ ಬಹು ಭಾಗದಲ್ಲಿ ನೇರ ವಾಗಿಯೋ, ತಮ್ಮ ಅಧೀನರಾದ ರಾಜರುಗಳ ಮೂಲಕವೊ ಅಧಿಕಾರ ಮಾಡುತ್ತ ಎದುರಿಲ್ಲದ ಪರಮಾ ಧಿಕಾರ ಪಡೆದರು. ಪಂಜಾಬ್ ಮತ್ತು ಗಡಿನಾಡಿನ ಕೆಲವು ಭಾಗಗಳು ಅವರ ಅಧೀನವಾಗಿರಲಿಲ್ಲ. ಆದರೆ ಭಾರತದಲ್ಲಿ ಬ್ರಿಟಿಷ್ ಚಕ್ರಾಧಿಪತ್ಯದ ಸ್ಥಾಪನೆಯಾಯಿತು. ಸಿಕ್ಕರು, ಗೂರ್ಖಾಗಳು ಮತ್ತು ಬರ್ಮೀಯರೊಡನೆ ಆದ ಯುದ್ಧಗಳೆಲ್ಲ ಆ ಸಾಮ್ರಾಜ್ಯದ ಗಡಿಯನ್ನು ವಿಸ್ತರಿಸಲು ಮಾಡಿದ ಯುದ್ಧಗಳು.

## ೧೪. ರಾಜ್ಯಸಂಘಟನೆ ಮತ್ತು ನೀತಿಯಲ್ಲಿ ಇಂಗ್ಲಿಷರ ಹೆಚ್ಚಳ ಮತ್ತು ಭಾರತದ ಹೀನಸ್ಥಿತಿ.

ಈ ಕಾಲದ ಇತಿಹಾಸವನ್ನು ಸ್ವಲ್ಪ ಯೋಚಿಸಿನೋಡಿದರೆ ಮೇಲಿಂದ ಮೇಲೆ ಒದಗಿದ ಸನ್ನಿವೇಶಗಳ ಅನುಕೂಲತೆ, ಮತ್ತು ಅದೃಷ್ಟವಶದಿಂದ ಬ್ರಿಟಿಷರು ಭಾರತದಲ್ಲಿ ಪರಮಾಧಿಕಾರವನ್ನು ಪಡೆದಂತೆ ಕಾಣುತ್ತದೆ. ದೊರೆತ ಪ್ರತಿಫಲವನ್ನು ನೋಡಿದರೆ ಅತ್ಯಲ್ಪ ಪ್ರಯತ್ನದಿಂದ ಒಂದು ದೊಡ್ಡ ಸಾಮ್ರಾಜ್ಯವನ್ನು ಗೆದ್ದರು. ಪ್ರಪಂಚದಲ್ಲೆ ಮುಖ್ಯ ರಾಷ್ಟ್ರವಾಗುವಷ್ಟು ಸಹಾಯಮಾಡಿದ ಅತುಲೈಶ್ವರ್ಯವು ಸಿಕ್ಕಿತು. ಒಂದು ಸಣ್ಣ ಘಟನೆಯಲ್ಲಿ ವ್ಯತ್ಯಾಸವಾಗಿದ್ದರೆ ಅವರ ಆಶೆಗಳೆಲ್ಲ ಪುಡಿಪುಡಿಯಾಗುತ್ತಿದ್ದವು; ಅವರ ಬಯಕೆಗಳೆಲ್ಲ ಮಣ್ಣುಗೂಡುತ್ತಿದ್ದವು. ಹೈದರ್, ಟೀಪು, ಮರಾಠರು, ಸಿಕ್ಕರು, ಗೂರ್ಖಾಗಳು ಎಲ್ಲರೂ ಅವರನ್ನು ಸೋಲಿಸಿದ್ದರು. ಅದೃಷ್ಟ ಸ್ವಲ್ಪ ಕಡಿಮೆಯಾಗಿದ್ದರೆ ಭಾರತದಲ್ಲಿ ಅವರಿಗೆ ಒಂದು ಗೇಣು ಭೂಮಿಯೂ ದೊರೆಯುತ್ತಿರಲಿಲ್ಲ; ದೊರೆತರೂ ತೀರಪ್ರದೇಶಗಳಲ್ಲಿ ಎಲ್ಲೋ ಇರುತ್ತಿದ್ದರು.

ಆದರೂ ಒಳಹೊಕ್ಕು ನೋಡಿದರೆ ಆಗಿನ ಪರಿಸ್ಥಿತಿಯಲ್ಲಿ ಆ ರೀತಿ ಆಗಬೇಕಾಗಿದ್ದುದು ಅನಿವಾರ್ಯವೆಂದು ತೋರುತ್ತದೆ. ಅದೃಷ್ಟವೇನೋ ಇತ್ತು. ಆದರೆ ಆ ಅದೃಷ್ಟವನ್ನು ಸದುಪಯೋಗ ಮಾಡಿಕೊಳ್ಳಲು ಶಕ್ತಿಯೂ ಬೇಕು. ಮೊಗಲ್ ಸಾಮ್ರಾಜ್ಯವು ಒಡೆದು ಹೋದಮೇಲೆ ಭಾರತದಲ್ಲಿ ಸ್ತಿಮಿತ ಪರಿಸ್ಥಿತಿ ಇರಲಿಲ್ಲ. ಅನೇಕ ಶತಮಾನಗಳಿಂದ ದೇಶವು ಯಾವಾಗಲೂ ಅಷ್ಟು ದುರ್ಬಲವೂ ನಿಸ್ಸಹಾಯಕವೂ ಇರಲಿಲ್ಲ. ವ್ಯವಸ್ಥಿತ ಅಧಿಕಾರವು ನಾಶವಾದಮೇಲೆ ಸಾಹಸಿಗಳಿಗೆ, ಹೊಸ ಅಧಿಕಾರ ಶಕ್ತಿಗಳಿಗೆ ಭಾರತವು ಬೇಟೆಯ ಬೀಡಾಯಿತು. ಅವರಲ್ಲಿ ಯಶಸ್ವಿಗಳಾಗಲು ಬೇಕಾದ ಅನೇಕ ಅವಶ್ಯ ಗುಣಗಳು ಬ್ರಿಟಿಷರಲ್ಲಿ ಮಾತ್ರ ಇದ್ದವು ಅವರಿಗಿದ್ದ ಒಂದೇ ಒಂದು ಅನಾನುಕೂಲವೆಂದರೆ ಬಹುದೂರದಿಂದ ಬಂದ ಪರದೇಶದವರೆಂಬುದು ಮಾತ್ರ. ಆದರೆ ಈ ಅನಾನುಕೂಲವೇ ಅವರಿಗೆ ಒಂದು ಅನುಕೂಲವೂ ಆಯಿತು. ಏಕೆಂದರೆ ಮೊದಲು ಯಾರೂ ಅವರನ್ನು ಗಮನಿಸಲೂ ಇಲ್ಲ ಮತ್ತು ಭಾರತದಲ್ಲಿ ಪರಮಾಧಿಕಾರ ಸ್ಥಾಪಿಸಲು ಪೈಪೋಟಿ ನಡೆಸುವವರಲ್ಲಿ ಇವರೂ ಒಬ್ಬರು ಎಂದು ಭಾವಿಸಲೂ ಇಲ್ಲ. ಪ್ಲಾಸಿ ಕದನವಾದ ಅನೇಕದಿನಗಳ ಮೇಲೂ ಈ ಭ್ರಮೆ ಹೇಗೆ ಇತ್ತೆಂಬುದೇ ಒಂದು ಆಶ್ಚರ್ಯ. ಪ್ರಾಯಶಃ ಮೇಲೆ ತೋರುಗಾಣಿಕೆಗೆ ದೆಹಲಿ ಸುಲ್ತಾನನ ಪ್ರತಿನಿಧಿಗಳೆಂದು ಹೇಳುತ್ತಿದ್ದುದು ಈ ತಪ್ಪು ಭಾವನೆಗೆ ಅವಕಾಶ ಕೊಟ್ಟಿರಬಹುದು. ಬಂಗಾಳದಿಂದ ಅವರು ದೋಚಿಕೊಂಡು ಹೋದ ಐಶ್ವರ್ಯ, ಅವರ ವಿಚಿತ್ರ ವ್ಯಾಪಾರ ಪದ್ಧತಿಗಳನ್ನು ನೋಡಿ ಇವರು ಕೇವಲ ಹಣ ಮತ್ತು ಐಶ್ವರ್ಯಕ್ಕಾಗಿ ಬಂದಿರಬೇಕು, ರಾಜ್ಯಸ್ಥಾಪನೆಗಲ್ಲ ಎಂಬ ಭಾವನೆ ಹುಟ್ಟಿರಬೇಕು. ತೈಮೂರ್, ನಾದಿರ್‌ಷಾ ಬಂದು ಕೊಳ್ಳೆಹೊಡೆದು ತಮ್ಮ ದೇಶಕ್ಕೆ ಹೋದಂತೆ ಇವರನ್ನೂ ಕೆಲವು ಕಾಲ ಅನುಭವಿಸಬೇಕಾದ ಪೀಡೆ ಎಂದು ಭಾವಿಸಿರಬಹುದು.

ಈಸ್ಟ್ ಇಂಡಿಯಾ ಕಂಪೆನಿಯು ಬಂದು ನೆಲೆಸಿದುದು ವ್ಯಾಪಾರಕ್ಕಾಗಿ; ಅವರ ಸೈನ್ಯ ಬಲವು ಅದರ ವ್ಯಾಪಾರರಕ್ಷಣೆಗಾಗಿ, ಕ್ರಮೇಣ, ಯಾರ ಕಣ್ಣಿಗೂ ಬೀಳದಂತೆ ಸ್ಥಳೀಯ ವ್ಯಾಜ್ಯಗಳಲ್ಲಿ ಪಕ್ಷ ವಹಿಸುತ್ತ, ಒಬ್ಬರಮೇಲೊಬ್ಬರನ್ನು ಎತ್ತಿಕಟ್ಟಿ, ತಮ್ಮ ರಾಜ್ಯವನ್ನು ವಿಸ್ತರಿಸಿತು. ಕಂಪೆನಿಯ ಸೈನಿಕರಿಗೆ ಉತ್ತಮ ಸೈನ್ಯ ಶಿಕ್ಷಣವಿತ್ತು, ಯಾರಿಗೇ ಆಗಲಿ ಒಳ್ಳೆಯ ಸಹಾಯವಾಗುತ್ತಿತ್ತು; ಈ ಸಹಾಯಕ್ಕಾಗಿ ಕಂಪೆನಿಗೆ ಅಪಾರ ಹಣವನ್ನು ಕೊಡಬೇಕಾಗಿತ್ತು. ಈ ರೀತಿ ಕಂಪೆನಿಯ ಐಶ್ವರ್ಯವೂ ಶಕ್ತಿಯೂ, ಸೈನ್ಯವೂ ಅಭಿವೃದ್ಧಿಗೊಂಡಿತು. ದುಡ್ಡುಕೊಟ್ಟು ಸೈನ್ಯಸಹಾಯವನ್ನು ಕೊಂಡುಕೊಳ್ಳಬಹುದೆಂಬ ಅಭಿಪ್ರಾಯವು ಜನರಲ್ಲಿ ಬಂದಿತು. ಆದರೆ ಬ್ರಿಟಿಷರು ಯಾರ ಹಿತಕ್ಕೂ ಕೆಲಸ ಮಾಡುತ್ತಿಲ್ಲ, ತಮ್ಮ ಸ್ವಾರ್ಥಕ್ಕಾಗಿ, ಭಾರತದಲ್ಲಿ ಪರಮಾಧಿಕಾರ ಪಡೆದು ರಾಜ್ಯಸ್ಥಾಪನೆಗಾಗಿ ಎಂಬ ಅರಿವು ಉಂಟಾಗುವ ಹೊತ್ತಿಗೆ ಬ್ರಿಟಿಷರು ಭಾರತದಲ್ಲಿ ಆಳವಾಗಿ ಬೇರೂರಿದ್ದರು.

ವಿದೇಶೀಯರ ವಿರುದ್ಧಭಾವನೆಯು ಖಂಡಿತ ಇತ್ತು, ಆದರೂ ಬೆಳೆಯಲು ಇನ್ನೂ ಕೆಲವು ಕಾಲ

ಬೇಕಾಯಿತು. ಆದರೆ ಇದು ದೇಶಾದ್ಯಂತ ಬಹುಸಂಖ್ಯಾತರ ಮನಸ್ಸಿನಲ್ಲಿ ಸಾಮಾನ್ಯವಾಗಿ ಮೂಡಿದ್ದ ರಾಷ್ಟ್ರೀಯ ಭಾವನೆಯಾಗಿರಲಿಲ್ಲ. ಇನ್ನೂ ಪಾಳೆಯಗಾರಿಕೆಯ ಹಿನ್ನೆಲೆಯು ಇತ್ತು. ಸ್ಥಳದ ನಾಯಕನ ಸುತ್ತಲೂ ಜನರು ನೆರೆಯುತ್ತಿದ್ದರು. ಸೇನಾಪತಿಗಳ ಒಳಯುದ್ಧದ ಕಾಲದಲ್ಲಿ ಚೀನಾದಲ್ಲಿದ್ದಂತೆ ಇಲ್ಲಿಯೂ ದೇಶದಲ್ಲಿ ಕ್ಷೋಭೆಯುಂಟಾದ ಕಾರಣ ಯಾರು ಸರಿಯಾಗಿ ಸಂಬಳ ಕೊಡುತ್ತಿದ್ದರೋ ಅಥವ ಕೊಳ್ಳೆಹೊಡೆಯಲು ಹೆಚ್ಚು ಅವಕಾಶಕೊಡುತ್ತಿದ್ದರೋ ಆ ಸೇನಾಪತಿಯ ಕೆಳಗೆ ಜನರು ಕೆಲಸಕ್ಕೆ ಸೇರಬೇಕಾಗಿ ಬಂದಿತು. ಈಸ್ಟ್ ಇಂಡಿಯ ಕಂಪೆನಿಯ ಸೈನ್ಯದಲ್ಲಿ ಭಾರತೀಯ ಸೈನಿಕರೇ ಹೆಚ್ಚು ಜನರು ಇದ್ದರು. ಮರಾಠರಲ್ಲಿ ಮಾತ್ರ ಸೇನಾಪತಿಯ ವ್ಯಕ್ತಿತ್ವದ ಸ್ವಾಮಿನಿಷ್ಠೆಗಿಂತ ಹೆಚ್ಚಾದ ಒಂದು ರಾಷ್ಟ್ರೀಯ ಭಾವನೆಯು ಇತ್ತು. ಆದರೆ ಅದೂ ಸಂಕುಚಿತವಿತ್ತು ಮತ್ತು ಅದಕ್ಕೂ ಒಂದು ಮಿತಿ ಇತ್ತು. ಅವರು ಶೂರರಾದ ರಾಜಪುತ್ರರಿಗೆ ಕಿರುಕುಳ ಕೊಟ್ಟು ವೃಥಾ ಅವರನ್ನು ರೇಗಿಸಿದರು. ಅವರನ್ನು ಒಲಿಸಿಕೊಂಡು ಮಿತ್ರರನ್ನಾಗಿ ಮಾಡಿಕೊಳ್ಳದೆ ಶತ್ರುಗಳನ್ನಾಗಿ ಅಥವ ಅಸಮಾಧಾನ ಮತ್ತು ಅತೃಪ್ತಿಗೊಂಡ ಅಧೀನರನ್ನಾಗಿ ಮಾಡಿ ಅವರೊಡನೆ ಹೋರಾಡಬೇಕಾಯಿತು. ಮರಾಠ ಸೇನಾಪತಿಗಳಲ್ಲೆ ಪರಸ್ಪರ ಸ್ವಾರ್ಥಬೆಳೆಯಿತು : ಹೆಸರಿಗೆ ಪೇಷ್ವೆಯ ನಾಯಕತ್ವವಿದ್ದರೂ ಆಗಾಗ್ಗೆ ಅಂತರ್ಯುದ್ಧಗಳಾಗುತ್ತಿದ್ದವು. ಸಂದಿಗ್ಧ ಸಮಯಗಳಲ್ಲಿ ಪರಸ್ಪರ ಸಹಾಯವಾಗದೆ ಕೊನೆಯಲ್ಲಿ ಒಬ್ಬೊಬ್ಬರಾಗಿ ಸೋತುಹೋದರು.

ಆದರೂ ಮರಾಠರಲ್ಲಿ ಕೆಲವು ಮಹಾವ್ಯಕ್ತಿಗಳು, ರಾಜಕಾರಣ ಪಟುಗಳು, ಮಹಾಸೇನಾನಿಗಳು ಹುಟ್ಟಿದರು. ನಾನಾಫಡ್ನವೀಸ್, ಮೊದಲನೆಯ ಬಾಜಿರಾವ್ ಪೇಷ್ವೆ, ಗ್ವಾಲಿಯರ್‌ನ ಮಹಾರಾಜ ಸಿಂಧ್ಯ, ಇಂದೂರಿನ ಯಶವಂತರಾವ್ ಹೋಳ್ಕರ್ ಮತ್ತು ಇಂದೂರಿನ ಅದ್ಭುತ ವ್ಯಕ್ತಿಯಾದ ಅಹಲ್ಯಾಬಾಯಿ ಅವರಲ್ಲಿ ಪ್ರಮುಖರು. ಅವರ ಸೈನಿಕರ ಶಿಸ್ತೂ, ಕಾರ್ಯನಿಷ್ಠೆಯೂ ಅದ್ಭುತವಿತ್ತು. ಪ್ರಾಣಕೊಡಬೇಕಾಗಿ ಬಂದರೂ ತಮ್ಮ ಸ್ಥಳದಿಂದ ಕದಲುತ್ತಿರಲಿಲ್ಲ. ಆದರೂ ಈ ಎಲ್ಲ ಧೈರ್ಯದ ಹಿಂದೆ ಯುದ್ಧ ಸಮಯದಲ್ಲಾಗಲಿ, ಶಾಂತಿ ಸಮಯದಲ್ಲಾಗಲಿ ಒಂದು ಬಗೆಯ ಅಲಕ್ಷ್ಯವೂ, ಅಪಕ್ವವೂ ಆದ ಮನೋಭಾವವಿದ್ದುದು ಆಶ್ಚರ್ಯಕರವಿದೆ. ಅವರ ಪ್ರಪಂಚಜ್ಞಾನವು ಅತ್ಯಲ್ಪವಿತ್ತು; ಅವರ ಭಾರತದ ಭೌಗೋಲಿಕ ಜ್ಞಾನಕ್ಕೂ ಮಿತಿ ಇತ್ತು. ಬೇರೆಕಡೆ ಏನೇನು ಆಗುತ್ತಿದೆ, ತಮ್ಮ ಶತ್ರುಗಳು ಏನು ಮಾಡುತ್ತಿದ್ದಾರೆ ಎಂಬ ಆಸಕ್ತಿಯೇ ಇಲ್ಲದಿದ್ದುದು ಒಂದು ದೊಡ್ಡ ಕೊರತೆಯಾಯಿತು. ಈ ಸಂಕುಚಿತ ಪರಿಮಿತಿಯಲ್ಲಿ ದೂರದೃಷ್ಟಿಯ ರಾಜಕಾರಣ ನೈಪುಣ್ಯವಾಗಲಿ, ಯುದ್ಧ ನೈಪುಣ್ಯವಾಗಲಿ ಸಾಧ್ಯವಿರಲಿಲ್ಲ. ಅವರ ಸೈನ್ಯದ ಚಲನ ಶಕ್ತಿ ಮತ್ತು ವೇಗವು ಶತ್ರುಗಳನ್ನು ಸ್ತಂಭಿತರನ್ನಾಗಿ ಮಾಡಿ ನಿಶ್ಚೇತನರನ್ನಾಗಿ ಮಾಡುತ್ತಿದ್ದವು. ಆದರೆ ಯುದ್ಧವೆಂದರೆ ಈ ರೀತಿ ಕೆಲವು ಬಾರಿ ಧೈರ್ಯದಿಂದ ಮುನ್ನುಗ್ಗುವುದು ಮಾತ್ರ ಎಂದು ಭಾವಿಸಿದ್ದರು. ಅವರು ಉತ್ತಮ ಗೆರಿಲ್ಲ ಯೋಧರಾಗಿದ್ದರು. ಕೊನೆಕೊನೆಗೆ ಸಂಪ್ರದಾಯ ರೀತಿಯಲ್ಲಿ ತಮ್ಮ ಸೈನ್ಯವನ್ನು ಕಟ್ಟಿದರು, ಆದರೆ ಆಯುಧ ಶಕ್ತಿ ಹೆಚ್ಚಿದಂತೆ ಚಲನ ವೇಗವೂ ಚಾಕಚಕ್ಯತೆಯೂ ಕಡಮೆಯಾದವು; ಹೊಸ ಸನ್ನಿವೇಶಗಳಿಗೆ ಹೊಂದಿಕೊಳ್ಳಲು ಸಾಧ್ಯವಾಗಲಿಲ್ಲ. ತಾವು ಬಹಳ ಬುದ್ಧಿವಂತರೆಂಬ ಹೆಮ್ಮೆಯ ಭಾವನೆ ಇತ್ತು. ಬುದ್ಧಿವಂತರೇನೋ ನಿಜ. ಆದರೆ ಯುದ್ಧದಲ್ಲಾಗಲಿ, ಶಾಂತಿ ಸಮಯದಲ್ಲಾಗಲಿ ಅವರನ್ನು ಮೀರಿಸುವುದು ಕಷ್ಟವಿರಲಿಲ್ಲ. ಏಕೆಂದರೆ ಅವರ ಮನೋಭಾವನೆಯು ಒಂದು ಹಳೆಯ ಜೀರ್ಣವಾದ ಚೌಕಟ್ಟಿನೊಳಗೆ ಸಂಕುಚಿತವಾಗಿತ್ತು; ಅದನ್ನು ಮೀರಿಬರಲು ಅವರಿಗೆ ಸಾಧ್ಯವಾಗಲಿಲ್ಲ.

ವಿದೇಶೀಯರಿಂದ ಶಿಕ್ಷಣಪಡೆದ ಸೈನ್ಯದ ಶಿಸ್ತು ಮತ್ತು ಯುದ್ಧ ನೈಪುಣ್ಯತೆಯ ಶ್ರೇಷ್ಠತೆಯನ್ನು ಭಾರತೀಯ ರಾಜರುಗಳು ಬಹಳಮುಂಚೆಯೇ ತಿಳಿದುಕೊಂಡರು. ಸೈನ್ಯದ ಶಿಕ್ಷಣಕ್ಕಾಗಿ ಫ್ರೆಂಚ್ ಮತ್ತು ಇಂಗ್ಲಿಷ್ ಅಧಿಕಾರಿಗಳನ್ನು ನೇಮಿಸಿದರು; ಅವರಲ್ಲಿನ ಪರಸ್ಪರ ವೈಷಮ್ಯದಿಂದ ಭಾರತದ ಸೈನ್ಯಬಲವು ಬೆಳೆಯಿತು. ಹೈದರಾಲಿ ಮತ್ತು ಟೀಪೂ ಇಬ್ಬರಿಗೂ ನಾವಿಕಾಬಲದ ಪ್ರಾಮುಖ್ಯತೆಯು ತಿಳಿದಿತ್ತು. ಇಂಗ್ಲೀಷರನ್ನು ಸಮುದ್ರದಲ್ಲಿ ಎದುರಿಸಲು ಅವರಿಬ್ಬರೂ ನಾವೆಯನ್ನು ಕಟ್ಟಬೇಕೆಂದು

ಸ್ವಲ್ಪಕಾಲ ಮೀರಿ ಪ್ರಯತ್ನಪಟ್ಟು ವಿಫಲರಾದರು. ಭಾರತದಲ್ಲಿ ಆಗ ಹಡಗುಕಟ್ಟುವ ಕೈಗಾರಿಕೆ ಇನ್ನೂ ಅಭಿವೃದ್ಧಿಯಲ್ಲಿತ್ತು. ಆದರೆ ಸದಾ ಯುದ್ಧವಾಡುತ್ತಾ, ಅಲ್ಪಕಾಲದಲ್ಲಿ ನಾವೆಯನ್ನು ಕಟ್ಟುವುದು ಸುಲಭಸಾಧ್ಯವಿರಲಿಲ್ಲ. ಫ್ರೆಂಚರು ಸೋತುಹೋದಮೇಲೆ ಭಾರತ ಸೈನ್ಯದಲ್ಲಿದ್ದ ಫ್ರೆಂಚ್ ಅಧಿಕಾರಿಗಳು ಅನೇಕರು ಹೊರಟುಹೋಗಬೇಕಾಯಿತು. ಇನ್ನುಳಿದ ವಿದೇಶೀ ಅಧಿಕಾರಿಗಳು—ಮುಖ್ಯವಾಗಿ ಬ್ರಿಟಿಷರು-ಒಳ್ಳೆಯ ಸಂಕಟ ಸಮಯದಲ್ಲಿ ತಮ್ಮನ್ನು ನೇಮಿಸಿದ್ದ ರಾಜರುಗಳ ಸೈನ್ಯದಿಂದ ಕೆಲಸಬಿಟ್ಟು ಹೋಗುತ್ತಿದ್ದರು. ಕೆಲವುಬಾರಿ ದ್ರೋಹಮಾಡಿ, ಸೈನ್ಯವನ್ನೂ ಅಪಾರ ಐಶ್ವರ್ಯವನ್ನೂ ಶತ್ರುಗಳಾದ ಬ್ರಿಟಿಷರಿಗೆ ಒಪ್ಪಿಸಿ ಶರಣಾಗತರಾಗುತ್ತಿದ್ದರು. ಭಾರತದ ರಾಜ್ಯಗಳು ತಮ್ಮ ಸೈನ್ಯವನ್ನು ರಚಿಸಿ ಅಣಿಗೊಳಿಸಲು ವಿದೇಶೀಯರನ್ನು ಅವಲಂಬಿಸಿರಬೇಕಾಗಿದ್ದುದು ಭಾರತೀಯ ಸೈನ್ಯದ ದುಃಸ್ಥಿತಿಯನ್ನು ತೋರಿಸುತ್ತದೆ, ಅಲ್ಲದೆ ವಿದೇಶೀಯರ ಪ್ರಾಮಾಣಿಕತೆಯನ್ನು ನಂಬುವುದು ಕಷ್ಟವಾಗಿದ್ದುದರಿಂದ ಸದಾ ಅವರಲ್ಲಿ ಅಪಾಯವಿತ್ತು. ಭಾರತೀಯ ರಾಜರ ಆಡಳಿತವರ್ಗದಲ್ಲಿ ಮತ್ತು ಸೈನ್ಯದಲ್ಲಿ ಬ್ರಿಟಿಷರ ಶಕ್ತರಾದ ಪಂಚಮ ದಳದವರಿರುತ್ತಿದ್ದರು.

ಒಗ್ಗಟ್ಟು ಮತ್ತು ದೇಶಾಭಿಮಾನದಿಂದ ತುಂಬಿದ ಮರಾಠರ ಆಡಳಿತ ಮತ್ತು ಸೈನ್ಯ ಶಕ್ತಿಯೇ ದುರ್ಬಲವಿದ್ದಾಗ ಇತರ ರಾಜರ ಶಕ್ತಿಯು ಇನ್ನೂ ದುರ್ಬಲವಿತ್ತು. ರಾಜಪುತ್ರರಲ್ಲಿ ಧೈರ್ಯ ಸಾಹಸವಿದ್ದರೂ ಪಾಳೆಯಗಾರಿಕೆಯ ಮನೋಭಾವವೇ ಇತ್ತು, ಸಾಹಸ ಪುರುಷರಾದರೂ ಕಾರ್ಯದಕ್ಷತೆ ಸ್ವಲ್ಪವೂ ಇರಲಿಲ್ಲ; ಮತ್ತು ರಾಜಮನೆತನಗಳ ವಂಶಪಾರಂಪರ್ಯವಾದ ಪರಸ್ಪರ ವೈಷಮ್ಯವಿತ್ತು. ಅವರಲ್ಲಿ ಅನೇಕರು ತಮ್ಮ ಚಕ್ರವರ್ತಿ ಎಂಬ ಸ್ವಾಮಿನಿಷ್ಠೆಯಿಂದ ಮತ್ತು ಅಕ್ಬರನ ನೀತಿಯ ಪ್ರಭಾವದಿಂದ ಬಲಹೀನವಾದ ದಿಹಲಿಯ ಸಿಂಹಾಸನದ ಪಕ್ಷವನ್ನೇ ಇನ್ನೂ ವಹಿಸಿದರು. ಆದರೆ ಅದರ ಪ್ರಯೋಜನ ಪಡೆಯಲು ಸಹ ದಿಹಲಿಯ ಅರಸರಿಗೆ ಶಕ್ತಿ ಇರಲಿಲ್ಲ. ಕೊನೆಗೆ ರಾಜಪುತ್ರರು ನಿಸ್ಸತ್ವರಾಗಿ, ಇತರರ ಕೈಗೊಂಬೆಗಳಾಗಿ ಮರಾಠ ಸಿಂಧ್ಯನ ಅಧೀನರಾದರು. ಅವರಲ್ಲಿ ಕೆಲವರು ತಮ್ಮ ಸ್ವರಕ್ಷಣೆಗೆಂದು ಎರಡು ಕಡೆಯೂ ಬೇಕಾದವರಂತೆ ನಟನೆಮಾಡಿ ಲಾಭಪಡೆಯುತ್ತಿದ್ದರು. ಉತ್ತರ ಮಧ್ಯಭಾರತದ ಅನೇಕ ಮುಸ್ಲಿಂ ರಾಜರುಗಳು, ನವಾಬರುಗಳು ಸಹ ರಾಜಪುತ್ರರಂತೆಯೇ ಪ್ರಗತಿ ವಿರುದ್ಧ ಪಾಳಯಗಾರರಾಗಿದ್ದರು. ಜನಸಾಮಾನ್ಯರ ಕಳವಳ ಮತ್ತು ಸಂಕಟವನ್ನು ಹೆಚ್ಚಿಸುವುದಲ್ಲದೆ ಬೇರೆ ಯಾದ ಉಪಯೋಗವೂ ಅವರಿಂದ ಆಗಲಿಲ್ಲ. ಕೆಲವರು ಮರಾಠರ ಪರಮಾಧಿಕಾರವನ್ನು ಒಪ್ಪಿದರು.

ನೇಪಾಳದ ಗೂರ್ಖರು ಅತ್ಯುತ್ತಮ ಯೋಧರಾಗಿದ್ದರು, ಅದ್ಭುತಶಿಸ್ತು ಅವರಲ್ಲಿತ್ತು. ಈಸ್ಟ್ ಇಂಡಿಯ ಕಂಪೆನಿಯ ಯಾವ ಸೈನ್ಯಕ್ಕೂ ಕಡಮೆ ಇಲ್ಲದವರೂ ಆಗಿದ್ದರು. ಅವರ ರಾಜ್ಯ ಪದ್ಧತಿ ಎಲ್ಲವೂ ಪಾಳೆಯಗಾರಿಕೆಯದಾದರೂ ಅವರ ಸ್ವದೇಶಪ್ರೇಮ ಅಪ್ರತಿಮವಾಗಿತ್ತು. ತಮ್ಮ ದೇಶರಕ್ಷಣೆಗಾಗಿ ವೀರಾವೇಶದಿಂದ ಕಾದಾಡುವ ಅಜೇಯ ಸೈನಿಕರಾದರು. ಇಂಗ್ಲಿಷರನ್ನು ಅವರು ಹೆದರಿಸಿಕೊಂಡಿದ್ದರೂ ಭಾರತದ ಮುಖ್ಯ ಹೋರಾಟದಲ್ಲಿ ಅವರು ಯಾವ ಪರಿಣಾಮವನ್ನೂ ಮಾಡಲಿಲ್ಲ.

ಮರಾಠರು ಹಬ್ಬಿ ಹರಡಿದ ವಿಸ್ತಾರವಾದ ಉತ್ತರ ಮತ್ತು ಮಧ್ಯಭಾರತಗಳಲ್ಲಿ ತಮ್ಮ ಶಕ್ತಿಯನ್ನು ಭದ್ರಪಡಿಸಿಕೊಳ್ಳಲಿಲ್ಲ. ಎಲ್ಲಿಯೂ ಕಾಲೂರಿ ನಿಲ್ಲದೆ ಹೊರಟು ಹೋಗುತ್ತಿದ್ದರು. ಪ್ರಾಯಶಃ ಯುದ್ಧರಂಗದ ಅದೃಷ್ಟಪರೀಕ್ಷೆಯಲ್ಲಿ ಜಯಶ್ರೀ ತೊನೆದಾಡುತ್ತಿದ್ದುದರಿಂದ ಯಾರಿಗೂ ಬೇರೂರಲು ಸಾಧ್ಯವಿರಲಿಲ್ಲ; ಬ್ರಿಟಿಷರ ಆಡಳಿತದಲ್ಲಿ ಅಥವ ರಾಜರ ಆಡಳಿತದಲ್ಲಿ ಅನೇಕ ಕಡೆಗಳಲ್ಲಿ ಪರಿಸ್ಥಿತಿಯು ಇನ್ನೂ ಹದಗೆಟ್ಟಿತ್ತು. ಬ್ರಿಟಿಷರಾಗಲಿ, ಅವರ ರಾಜ್ಯಭಾರವಾಗಲಿ ನೆಲೆ ನಿಂತಿರಲಿಲ್ಲ.

ಮರಾಠರು—ಇನ್ನೂ ಅನೇಕ ಕಡೆಗಳಲ್ಲಿ ಇತರರಂತೆ—ತಮ್ಮ ಕಾರ್ಯನೀತಿಯಲ್ಲಿ ಅಪಕ್ವರೂ, ಅಲಕ್ಷ್ಯ ಸ್ವಭಾವದವರಾದರೆ ಭಾರತದಲ್ಲಿ ಬ್ರಿಟಿಷರು ನಿರ್ದಾಕ್ಷಿಣ್ಯ ಸ್ವಭಾವದವರಾಗಿದ್ದರು. ಬ್ರಿಟಿಷ್ ಮುಖಂಡರು ಅನೇಕರು ಸಾಹಸಿಗರಿದ್ದರು. ಆದರೆ ತಾನು ಯಾವುದೇ ಕೆಲಸದಲ್ಲೇ ಇರಲಿ ಕಂಪೆನಿಯ ವಿಷಯದಲ್ಲಿ ಎಲ್ಲರ ನೀತಿಯೂ ಒಂದೇ ಇತ್ತು. " ಈಸ್ಟ್ ಇಂಡಿಯ ಕಂಪೆನಿಯ ಅಧಿಕಾರ ವರ್ಗದಲ್ಲಿ ಬ್ರಿಟಿಷ್ ಚಕ್ರಾಧಿಪತ್ಯದಲ್ಲಿ ಸಹ ಒಟ್ಟಿಗೆ ಒಂದೇ ಕಾಲದಲ್ಲಿ ಯಾವಾಗಲೂ ಇರದ ಅತಿ

ದಕ್ಷರೂ, ಮೇಧಾವಿಗಳೂ ಆದ ಅಧಿಕಾರಿಗಳು ಇದ್ದು ಭಾರತದ ರಾಜಸಭೆಗಳಲ್ಲಿ ಅವರು ಕಾರ್ಯಭಾರ ನಡೆಸುತ್ತಿದ್ದರು" ಎಂದು ಎಡ್ವರ್ಡ್ ಥಾಮ್‌ಸನ್ ಹೇಳುತ್ತಾನೆ. ರಾಜನ ಮಂತ್ರಿಗಳಿಗೆ ಮತ್ತು ಇತರ ಉನ್ನತ ಅಧಿಕಾರಿಗಳಿಗೆ ಲಂಚಕೊಟ್ಟು ಅವರಲ್ಲಿ ದ್ರೋಹಬುದ್ಧಿಯನ್ನುಂಟುಮಾಡುವುದು ಬ್ರಿಟಿಷ್ ರೆಸಿಡೆಂಟರುಗಳ ಮುಖ್ಯ ಕೆಲಸವಾಗಿತ್ತು. "ಗುಪ್ತಚಾರ ಪದ್ಧತಿಯು ಸಂಪೂರ್ಣ ದಕ್ಷತೆಯಿಂದ ಕೆಲಸಮಾಡುತ್ತಿತ್ತು" ಎಂದು ಒಬ್ಬ ಚರಿತ್ರೆಕಾರನು ಹೇಳುತ್ತಾನೆ. ರಾಜಸಭೆಯ ವಿಷಯಗಳು, ತಮ್ಮ ಶತ್ರುಗಳ ಸೈನ್ಯಬಲ ಸಂಪೂರ್ಣವಾಗಿ ಬ್ರಿಟಿಷರಿಗೆ ತಿಳಿದಿತ್ತು. ಆದರೆ ಬ್ರಿಟಿಷರು ಮಾಡುತ್ತಿದ್ದ ಅಥವ ಮುಂದೆ ಮಾಡಲು ಯೋಚಿಸುತ್ತಿದ್ದ ಕೆಲಸ ಅವರ ಶತ್ರುಗಳಿಗೆ ಸ್ವಲ್ಪವೂ ಗೊತ್ತಾಗುತ್ತಿರಲಿಲ್ಲ. ಬ್ರಿಟಿಷರ ಈ ಪಂಚಮದಳವು ಬಹಳ ದಕ್ಷತೆಯಿಂದ ಕೆಲಸಮಾಡಿತು. ವಿಷಮ ಸನ್ನಿವೇಶಗಳಲ್ಲಿ ಮತ್ತು ಯುದ್ಧದ ಕಾಲದಲ್ಲಿ ಭಾರತ ಸೈನ್ಯದ ಅಧಿಕಾರಿಗಳು ಈಸ್ಟ್ ಇಂಡಿಯ ಕಂಪೆನಿಯ ಪರವಾಗಿ ಕೈಬಿಟ್ಟುಬಿಡುತ್ತಿದ್ದ ಕಾರಣ ಯುದ್ಧಪರಿಸ್ಥಿತಿಯೇ ತುಂಬ ವ್ಯತ್ಯಾಸವಾಗುತ್ತಿತ್ತು. ನಿಜವಾದ ಯುದ್ಧದ ಆರಂಭದ ಮೊದಲೇ ಯುದ್ಧಗಳನ್ನು ಗೆಲ್ಲುತ್ತಿದ್ದರು. ಪ್ಲಾಸಿಯಲ್ಲಿ ಹಾಗೆಯೇ ಆಯಿತು, ಸಿಕ್ ಕದನಗಳವರೆಗೂ ಅದೇ ನೀತಿಯನ್ನು ಅನುಸರಿಸಿದರು. ಉದಾಹರಣೆ ಬೇಕೆಂದರೆ ಗ್ವಾಲಿಯರ್‌ದ ಸಿಂಧ್ಯನ ಸೇನೆಯಲ್ಲಿದ್ದ ಒಬ್ಬ ಉನ್ನತ ಅಧಿಕಾರಿಯು ಮೊದಲೇ ಬ್ರಿಟಿಷರ ಒಡನೆ ಗುಪ್ತವಾಗಿ ಒಪ್ಪಂದ ಮಾಡಿಕೊಂಡು ಯುದ್ಧ ಹೂಡಬೇಕೆನ್ನುವಾಗ ದ್ರೋಹಮಾಡಿ ತನ್ನ ಪೂರ್ವ ಸೈನ್ಯದೊಡನೆ ಬ್ರಿಟಿಷರನ್ನು ಸೇರಿಕೊಂಡನು. ಈ ದ್ರೋಹಕ್ಕೆ ಬಲಿಯಾದ ಸಿಂಧ್ಯನ ರಾಜ್ಯದಿಂದಲೇ ಒಂದು ಭಾಗವನ್ನು ಪ್ರತ್ಯೇಕಿಸಿ ಬೇರೆ ಸಂಸ್ಥಾನವನ್ನು ಸ್ಥಾಪಿಸಿ ಬ್ರಿಟಿಷರು ಆತನನ್ನು ರಾಜನನ್ನಾಗಿ ಮಾಡಿ ಬಹುಮಾನಿಸಿದರು. ಆ ಸಂಸ್ಥಾನವು ಈಗಲೂ ಇದೆ. ಆದರೆ ಆತನ ಹೆಸರು ಮಾತ್ರ ದ್ರೋಹ ಮತ್ತು ಮೋಸಕ್ಕೆ ಇಂದಿನ ಯುದ್ಧಗಳ "ಕ್ವಿಸ್ಲಿಂಗ್" ನಂತೆ ಮನೆಮಾತಾಗಿದೆ.

ಈ ರೀತಿ ಬ್ರಿಟಿಷರಲ್ಲಿ ದಕ್ಷರಾದ ನಾಯಕರಿದ್ದರು. ಐಕಮತ್ಯವಿತ್ತು. ಅದರಿಂದ ಅವರಲ್ಲಿ ಶ್ರೇಷ್ಠ ರಾಜನೈಪುಣ್ಯತೆಯು, ಸೈನ್ಯ ಶಕ್ತಿಯು ಇತ್ತು. ಅವರ ಶತ್ರುಗಳಿಂದ ಹೆಚ್ಚು ವಿಷಯವು ಬ್ರಿಟಿಷರಿಗೇ ತಿಳಿದಿತ್ತು. ಭಾರತದ ರಾಜರುಗಳಲ್ಲಿನ ಅನೈಕ್ಯತೆ ಮತ್ತು ಪರಸ್ಪರ ವೈಷಮ್ಯವನ್ನು ಪೂರ್ಣ ಉಪಯೋಗ ಮಾಡಿಕೊಂಡರು. ಸಮುದ್ರಮಾರ್ಗಗಳ ಸ್ವಾಮ್ಯದಿಂದ ಉತ್ತಮ ಬಂದರುಗಳನ್ನು ಸ್ಥಾಪಿಸಿ ಆ ಮೂಲಕ ತಮ್ಮ ಮೂಲಸಾಮಗ್ರಿಗಳನ್ನು ಬಲಪಡಿಸಿಕೊಂಡರು. ತಾತ್ಕಾಲಿಕ ಸೋಲು ಆದರೂ ಸ್ವಲ್ಪಕಾಲ ಸುಮ್ಮನೆ ಕಾದು ಚೇತರಿಸಿಕೊಂಡು ಪುನಃ ಮೇಲೆ ಬೀಳುತ್ತಿದ್ದರು. ಪ್ಲಾಸಿಕದನದ ನಂತರ ಮರಾಠರು ಮತ್ತು ಇತರರೊಡನೆ ಯುದ್ಧಮಾಡಲು ಬಂಗಾಲದಲ್ಲಿ ಅಪಾರ ಐಶ್ವರ್ಯವೂ ಯುದ್ಧ ಸಾಮಗ್ರಿಗಳೂ ದೊರೆತವು. ಪ್ರತಿಯೊಂದು ಗೆಲವಿನಿಂದಲೂ ಅವರ ಶಕ್ತಿ ಸಾಮಗ್ರಿಯನ್ನು ಬಲಪಡಿಸಿಕೊಳ್ಳುತ್ತಿದ್ದರು. ಭಾರತೀಯ ರಾಜರಿಗಾದರೋ ಪ್ರತಿಯೊಂದು ಸೋಲೂ ಒಂದು ಚೇತರಿಸಿಕೊಳ್ಳಲಾಗದ ದುರಂತವಾಗುತ್ತಿತ್ತು.

ಈ ಯುದ್ಧ ದಂಡಯಾತ್ರೆ ಮತ್ತು ಲೂಟಿಗಳಿಂದ ಮಧ್ಯ ಭಾರತ ರಾಜಪುತಾನ ದಕ್ಷಿಣ ಮತ್ತು ಪಶ್ಚಿಮ ಭಾರತದ ಕೆಲವು ಭಾಗಗಳು ದಾತರಿಲ್ಲದ ಹಿಂಸೆ ದುಃಖ ಸಂಕಟಗಳ ಗೋಳಿನ ಶ್ಮಶಾನಗಳಾದವು. ಮೇಲಿಂದ ಮೇಲೆ ಸೈನ್ಯಗಳ ಓಡಾಟ, ಹಿಂದೆಯೇ ದರೋಡೆಕಾರರ ಗುಂಪು. ಜನರನ್ನು ಸುಲಿಗೆ ಮಾಡಿ ಅವರಲ್ಲಿದ್ದ ಹಣಕಾಸನ್ನು ದೋಚಿಕೊಳ್ಳುವುದರ ಹೊರತು ಆ ದುರದೃಷ್ಟ ಜೀವಿಗಳ ಗೋಳನ್ನು ಕೇಳುವವರೇ ಇರಲಿಲ್ಲ. ಭಾರತದ ಕೆಲವು ಭಾಗಗಳು ಮೂವತ್ತು ವರ್ಷಗಳ ಯುದ್ಧ ಕಾಲದ ಮಧ್ಯ ಯೂರೋಪಿನಂತೆ ಅನಾಯಕ ರಾಜ್ಯಗಳಾದವು. ಎಲ್ಲ ಕಡೆಯು ಪರಿಸ್ಥಿತಿಯು ಹದಗೆಟ್ಟಿತ್ತು; ಬ್ರಿಟಿಷರ ಆಡಳಿತದಲ್ಲಿ ಅಥವ ಅಧೀನ ರಾಜ್ಯಗಳ ಪರಿಸ್ಥಿತಿಯು ಇನ್ನೂ ಹೊಲಸಾಗಿತ್ತು. "ಮದ್ರಾಸು, ಅಥವ ಅಧೀನ ರಾಜ್ಯಗಳಾದ ಅಯೋಧ್ಯೆ ಅಥವ ಹೈದರಾಬಾದಿನ ಗೋಳಿನ ತಳಮಳದ ಬಾಳನ್ನು ನೆನಸಿಕೊಂಡರೆ ವ್ಯೈನವಿರುತ್ತದೆ. ಇದಕ್ಕೆ ಪ್ರತಿಯಾಗಿ ಮರಾಠರ ದಂಡನಾಯಕನಾದ ನಾನಾಪಢ್ನವೀಸನ ರಾಜ್ಯದ ಜನರ ನೆಮ್ಮದಿಯ ಬಾಳು ಕನಸಿನಂತೆ ಇತ್ತು" ಎಂದು ಎಡ್ವರ್ಡ್ ಥಾಮ್‌ಸನ್ ಹೇಳುತ್ತಾನೆ.

ಇದಕ್ಕೆ ಮುಂಚೆಯೇ ಮೊಗಲ್ ಚಕ್ರಾಧಿಪತ್ಯವು ಒಡೆದು ಹೋಗಿದ್ದರೂ ಭಾರತದ ಬಹು ಭಾಗದಲ್ಲಿ ಅನಾಯಕತ್ವವು ಇರಲಿಲ್ಲ. ಬಂಗಾಲದಲ್ಲಿ ಮೊಗಲ್ ರಾಜಪ್ರತಿನಿಧಿಯಿಂದ ಅಲ್ಲಾವರ್ದಿಯ ಕಾಲದಲ್ಲಿ ಶಾಂತಿ ಇತ್ತು, ಕ್ರಮವಾದ ಆಡಳಿತ ಪದ್ಧತಿ ಇತ್ತು, ವ್ಯಾಪಾರೋದ್ಯಮಗಳು ಅಭಿವೃದ್ಧಿಯಾಗಿ ದೇಶದ ಸಂಪತ್ತು ಹೆಚ್ಚಿತ್ತು. ಅಲ್ಲಾವರ್ದಿಯ ಮರಣದ ನಂತರ ಸ್ವಲ್ಪ ದಿನಗಳಲ್ಲೇ ಪ್ಲಾಸಿ ಕದನವು ನಡೆಯಿತು. ತಮಗೆ ಇಷ್ಟಬಂದಂತೆ ನಡೆಯಲು ಪೂರ್ಣಸ್ವತಂತ್ರರಿದ್ದರೂ ಬ್ರಿಟಿಷರು ದೆಹಲಿಯ ಚಕ್ರವರ್ತಿಯ ಪ್ರತಿನಿಧಿಗಳಾದರು. ಅನಂತರ ಕಂಪನಿಯೂ ಅದರ ಅಧಿಕಾರಿಗಳೂ, ಗಡಂಗುಗಳ ಅಧಿಕಾರಿಗಳೂ ಬಂಗಾಳವನ್ನು ಕೊಳ್ಳೆ ಹೊಡೆಯಲು ಆರಂಭಿಸಿದರು. ಪ್ಲಾಸಿಕದನವಾದ ಸ್ವಲ್ಪ ವರ್ಷಗಳಲ್ಲೆ ಮಧ್ಯ ಭಾರತದಲ್ಲಿ ಇಂದೂರಿನ ಅಹಲ್ಯಾಬಾಯಿಯ ರಾಜ್ಯಭಾರವು ಉಪಕ್ರಮವಾಗಿ ೧೭೬೫ ರಿಂದ ೧೭೯೫ರವರೆಗೆ ಮೂವತ್ತು ವರ್ಷಗಳು ನಡೆಯಿತು. ಆ ಕಾಲದಲ್ಲಿ ಸಂಪೂರ್ಣ ನೆಮ್ಮದಿಯಿಂದ ಸುವ್ಯವಸ್ಥಿತ ರಾಜ್ಯಾಡಳಿತ ಪದ್ಧತಿಯಲ್ಲಿ ಜನರು ಸುಖದಿಂದ ಮುಂದುವರಿದುದು ಒಂದು ಐತಿಹಾಸಿಕ ಘಟನೆಯೇಸರಿ. ಆಕೆಯ ದಕ್ಷತೆ ಮತ್ತು ಸಂಘಟನ ಶಕ್ತಿಗಳು ಅದ್ಭುತವಾಗಿದ್ದವು. ಜನರು ಆಕೆಯನ್ನು ಗೌರವದಿಂದ ಕಾಣುತ್ತಿದ್ದರು; ಸತ್ತನಂತರವೂ ಜನರು ಕೃತಜ್ಞತೆಯಿಂದ ದೇವಾಂಶ ಸಂಭೂತಳೆಂದು ಪೂಜಿಸಿದರು. ಈ ರೀತಿ ಈಸ್ಟ್ ಇಂಡಿಯ ಕಂಪೆನಿಯ ಆಡಳಿತದಲ್ಲಿ ಬಂಗಾಲ ಬಿಹಾರದಲ್ಲಿ ಪರಿಸ್ಥಿತಿಯು ಹದಗೆಟ್ಟು, ವ್ಯವಸ್ಥಿತ ದರೋಡೆಗಳಿಂದ ರಾಜಕೀಯ ಆರ್ಥಿಕ ಅನಾಯಕತ್ವವೂ, ಭಯಂಕರ ಕ್ಷಾಮವೂ ಒದಗಿದ್ದಾಗ ಮಧ್ಯ ಭಾರತ ಮತ್ತು ದೇಶದ ಇನ್ನೂ ಅನೇಕ ಭಾಗಗಳು ಅಭಿವೃದ್ಧಿ ಸ್ಥಿತಿಯಲ್ಲಿದ್ದವು.

ಬ್ರಿಟಿಷರಿಗೆ ಶಕ್ತಿಯೂ ಇತ್ತು, ಐಶ್ವರ್ಯವೂ ಇತ್ತು. ಆದರೆ ಒಳ್ಳೆಯ ಆಡಳಿತ ಅಥವಾ ಯಾವ ಆಡಳಿತದ ಜವಾಬ್ದಾರಿಯನ್ನೂ ಅವರು ವಹಿಸಿಕೊಳ್ಳಲಿಲ್ಲ. ಈಸ್ಟ್ ಇಂಡಿಯ ಕಂಪೆನಿಯ ವರ್ತಕರ ದೃಷ್ಟಿ ಎಲ್ಲ ಲಾಭ ಮತ್ತು ಐಶ್ವರ್ಯದ ಮೇಲಿತ್ತು; ತಮ್ಮ ಅಧೀನದಲ್ಲಿದ್ದ ಜನರ ಸೌಖ್ಯದಕಡೆ ಇರಲಿಲ್ಲ. ಮುಖ್ಯವಾಗಿ ಅಧೀನ ಪ್ರಾಂತ್ಯಗಳಲ್ಲಿ ರಾಜ್ಯದ ಅಧಿಕಾರಕ್ಕೂ ಜವಾಬ್ದಾರಿಗೂ ಇದ್ದ ಸಂಬಂಧವು ಪೂರ್ಣ ಕಡಿದು ಹೋಗಿತ್ತು.

ಬ್ರಿಟಿಷರು ಮರಾಠರನ್ನು ಸೋಲಿಸಿ ಪೂರ್ಣ ಜಯವನ್ನು ಗಳಿಸಿದ ಮೇಲೆ ರಾಜ್ಯಾಡಳಿತದ ಕಡೆ ಗಮನಕೊಟ್ಟು ಒಂದು ಬಗೆಯ ವ್ಯವಸ್ಥೆಯನ್ನು ತಂದರು. ಅಧೀನ ಸಂಸ್ಥಾನಗಳಲ್ಲಿ ರಾಜನಿಗೂ, ರಾಜ್ಯದ ಆಡಳಿತ ಜವಾಬ್ದಾರಿಗೂ ಯಾವ ಸಂಬಂಧವೂ ಇಲ್ಲದ್ದರಿಂದ ಅಲ್ಲಿನ ವ್ಯವಸ್ಥೆಯು ರೂಪುಗೊಳ್ಳಲು ಬಹುಕಾಲ ಬೇಕಾಯಿತು.

ನಾವೆಲ್ಲಾದರೂ ಮರೆತೇವೆಂದು ಬ್ರಿಟಿಷರು ಭಾರತವನ್ನು ಕ್ಷೋಭೆಯಿಂದ ಅನಾಯಕತ್ವದಿಂದ ತಾವು ರಕ್ಷಿಸಿದೆವೆಂದು ಪದೇ ಪದೇ ಹೇಳುತ್ತಿದಾರೆ. ಈ ಕಾಲದ ನಂತರ ವ್ಯವಸ್ಥಿತ ರಾಜ್ಯಾಡಳಿತ ಪದ್ಧತಿಯನ್ನು ಏರ್ಪಡಿಸಿದರು, ನಿಜ. ಆದರೆ ಮರಾಠರು ಈ ಕಾಲವನ್ನು "ರಕ್ತಪಾತದ ಕಾಲ" ಎಂದು ಕರೆದಿದ್ದಾರೆ. ಈಸ್ಟ್ ಇಂಡಿಯ ಕಂಪೆನಿ ಮತ್ತು ಭಾರತದಲ್ಲಿ ಅದರ ಪ್ರತಿನಿಧಿಗಳ ನೀತಿಯೇ ಈ ಕ್ಷೋಭೆ ಮತ್ತು ಅನಾಯಕತ್ವಕ್ಕೆ ಮುಖ್ಯ ಕಾರಣವಾಯಿತು. ಸಹಾಯ ಮಾಡುತ್ತೇವೆಂದು ಮುಂದೆ ಬಂದು ದ್ರೋಹ ಮಾಡದಿದ್ದರೆ ಪ್ರಾಯಶಃ ಪರಮಾಧಿಕಾರಕ್ಕಾಗಿ ನಡೆದ ಹೋರಾಟಗಳು ನಿಂತಮೇಲೆ ಶಾಂತಿಯೂ, ಆಡಳಿತ ವ್ಯವಸ್ಥೆಯೂ ತಾನಾಗಿಯೇ ನೆಲೆಗೊಳ್ಳುತಿತ್ತು. ಭಾರತದ ಐದು ಸಾವಿರ ವರ್ಷಗಳ ಇತಿಹಾಸದಲ್ಲಿ—ಇತರ ದೇಶಗಳಲ್ಲಿ ಕಂಡುಬರುವಂತೆ—ಅಂತಹ ಸನ್ನಿವೇಶಗಳು ಎಷ್ಟೋ ಇವೆ.

### ೧೫. ರಣಜಿತಸಿಂಗ್ ಮತ್ತು ಜಯಸಿಂಗ್.

ತನ್ನ ಜನರ ದೌರ್ಬಲ್ಯದಿಂದ ಮತ್ತು ಬ್ರಿಟಿಷರು ಉತ್ತಮವೂ, ಪ್ರಗತಿಪರವೂ ಆದ ಒಂದು ಸಮಾಜರಚನೆಯ ಪ್ರತಿನಿಧಿಗಳಾದ್ದರಿಂದ ಭಾರತವು ಪರಾಧೀನಕ್ಕೆ ಬಲಿಯಾಯಿತೆಂಬುದು ನಿರ್ವಿವಾದ.

ಎರಡೂ ಕಡೆಯ ನಾಯಕರನ್ನು ಹೋಲಿಸಿ ನೋಡಿದರೆ ವ್ಯತ್ಯಾಸವು ಎದ್ದು ಕಾಣುತ್ತದೆ; ಭಾರತೀಯರು ಎಷ್ಟೇ ಶಕ್ತರಿದ್ದರೂ ಅವರ ಭಾವನೆಯ ಮತ್ತು ಕಾರ್ಯಗಳ ಪ್ರಪಂಚವು ಸಂಕುಚಿತವಿತ್ತು; ಪ್ರಪಂಚದ ಇತರ ಭಾಗಗಳಲ್ಲಿ ಆಗುತ್ತಿರುವ ಪ್ರಗತಿಯ ಪರಿಜ್ಞಾನವಿರಲಿಲ್ಲ; ಮತ್ತು ಆ ವ್ಯತ್ಯಸ್ಥ ಸನ್ನಿವೇಶಗಳಿಗೆ ತಾವು ಹೊಂದಿಕೊಳ್ಳಲಿಲ್ಲ ಕೆಲವು ವ್ಯಕ್ತಿಗಳಲ್ಲಿ ಆ ಮನೋಕೌತುಕ ಉಂಟಾದರೂ ತಮ್ಮನ್ನು ಬಂಧಿಸಿದ್ದ ಕಠಿಣ ಬಂಧನವನ್ನು ಒಡೆದು ಹೊರಬಿದ್ದ ಪ್ರಗತಿಯನ್ನು ಸಾಧಿಸಲು ಶಕ್ತರಿರಲಿಲ್ಲ ಇಂಗ್ಲಿಷರಿಗೆ ಪ್ರಪಂಚದ ಅನುಭವಜ್ಞಾನ ತುಂಬ ಇತ್ತು; ತಮ್ಮ ದೇಶದಲ್ಲಿ ಅಲ್ಲದೆ ಫ್ರಾನ್ಸ್ ಮತ್ತು ಅಮೆರಿಕೆಗಳಲ್ಲಿ ಆದ ಘಟನೆಗಳು ಅವರನ್ನು ಬುಡಮೇಲುಮಾಡಿ ಯೋಚಿಸುವಂತೆಯೂ ಮಾಡಿದ್ದವು. ಎರಡು ಮಹಾ ವಿಪ್ಲವಗಳಾಗಿದ್ದವು. ಫ್ರಾನ್ಸಿನ ಕ್ರಾಂತಿಕಾರರ ಪಡೆಗಳ ಮತ್ತು ನೆಪೋಲಿಯನ್ ಸೈನ್ಯಗಳ ದಂಡಯಾತ್ರೆಗಳಿಂದ ಯುದ್ಧ ವಿಜ್ಞಾನವು ಪೂರ್ಣ ವ್ಯತ್ಯಾಸವಾಗಿತ್ತು. ಭಾರತಕ್ಕೆ ಬರುವ ಹೊತ್ತಿಗೆ ಎಷ್ಟೇ ಶುಂಠನಾದರೂ ಇಂಗ್ಲಿಷ್‌ನವನು ಪ್ರಯಾಣ ಮಾರ್ಗದಲ್ಲೇ ಪ್ರಪಂಚದ ನಾನಾ ಭಾಗಗಳ ಪರಿಚಯ ಪಡೆಯುತ್ತಿದ್ದನು. ಇಂಗ್ಲೆಂಡ್‌ನಲ್ಲಿ ಕ್ರಾಂತಿಕಾರಕ ಸಂಶೋಧನೆಗಳಾಗಿ ಔದ್ಯೋಗಿಕ ವಿಪ್ಲವವು ಆರಂಭವಾಗಿತ್ತು. ಪ್ರಾಯಶಃ ಅದರಿಂದ ಮುಂದೆ ಆಗತಕ್ಕ ಪರಿಣಾಮವನ್ನು ಊಹಿಸಿದವರು ಬಹಳ ವಿರಳರಿರಬೇಕು. ಆದರೂ ಪರಿವರ್ತನೆಯ ಪ್ರಭಾವವು ಪ್ರಬಲವಾದ ಪರಿಣಾಮಮಾಡುತ್ತ ಜನಜೀವನವನ್ನು ಮಾರ್ಪಡಿಸುತ್ತಿತ್ತು. ಇದೆಲ್ಲದರ ಹಿಂದೆ ದೂರದ ತೀರಗಳಿಗೆ ಬ್ರಿಟಿಷರನ್ನು ಕಳುಹಿಸಿದ ಅವರ ಉಕ್ಕಿ ಹರಿಯುವ ಅದ್ಭುತ ಕಾರ್ಯಶಕ್ತಿ ಇತ್ತು.

ಭಾರತದ ಇತಿಹಾಸವನ್ನು ಬರೆದವರೆಲ್ಲ ಆಗಿನ ಯುದ್ಧಗಳು, ವಿಪ್ಲವಗಳು, ರಾಜಕೀಯ ಮತ್ತು ಯುದ್ಧರಂಗದ ನಾಯಕರುಗಳ ವಿಷಯ ಬರೆದಿದ್ದಾರೆಯೇ ವಿನಾ ಭಾರತದ ಮನಸ್ಸಿನ ಆಗಿನ ಕಾಲದ ಭಾವನೆಗಳೇನು ? ಆಗ ಯಾವ ಸಾಮಾಜಿಕ ಆರ್ಥಿಕ ಶಕ್ತಿಗಳು ಜನರ ಮನಸ್ಸನ್ನು ಆಕರ್ಷಿಸಿದ್ದವು ಎಂದು ಯಾರೂ ಹೇಳುವುದಿಲ್ಲ. ಈ ಬೇಸರದ ಚರಿತ್ರೆಯಲ್ಲಿ ಎಲ್ಲೋ ಅಪ್ಪಿತಪ್ಪಿ ಅಲ್ಲೊಂದು ಇಲ್ಲೊಂದು ಒಳನೋಟ ದೊರೆಯುತ್ತದೆ. ಈ ಭೀಕರಕಾಲದಲ್ಲಿ ಜನರು ನಿಶ್ಚೇತನರಾಗಿ ಭೂಗತರಾದಂತೆ ತೋರುತ್ತದೆ. ಭ್ರಮೆಗೊಂಡು, ಯಾವ ಉತ್ಸಾಹವೂ ಇಲ್ಲದೆ ವಿಧಿ ಇಟ್ಟದಾಗಲೆಂದು ಬಂದುದನ್ನೆಲ್ಲ ಅನುಭವಿಸಿದಂತೆ ತೋರುತ್ತದೆ. ಉತ್ಸುಕರಾದವರೂ ಅನೇಕ ವ್ಯಕ್ತಿಗಳು ಇದ್ದಿರಬೇಕು. ತಮ್ಮೆದುರು ತಾಂಡವವಾಡುವ ಹೊಸ ಶಕ್ತಿಗಳನ್ನು ಅರಿಯಲು ಪ್ರಯತ್ನಪಟ್ಟಿರಬೇಕು. ಆದರೆ ಕಾಲವಿದ್ಯಮಾನಗಳ ಮೇಲೆ ಪ್ರಭಾವ ಬೀರಲು ಅವರು ಅಸಮರ್ಥರಾಗಿ ತಾವೇ ಅವುಗಳಿಗೆ ಬಲಿಯಾದರು.

ಅಂತಹ ಉತ್ಸಾಹಪೂರ್ಣ ವ್ಯಕ್ತಿಗಳಲ್ಲಿ ಮಹಾರಾಜ ರಣಜಿತ್‌ಸಿಂಗ್ ಒಬ್ಬನು. ಜಾತ್ ಸಿಕ್ಕನಾಗಿ, ಪಂಜಾಬಿನಲ್ಲಿ ರಾಜ್ಯವನ್ನು ಕಟ್ಟಿ ಕಾಶ್ಮೀರ ಮತ್ತು ವಾಯುವ್ಯ ಪ್ರಾಂತದವರೆಗೆ ಪಸರಿಸಿದನು. ಆತನಲ್ಲಿ ಕೆಲವು ದೌರ್ಬಲ್ಯ ದುರ್ಗುಣಗಳಿದ್ದರೂ ಆತನೊಬ್ಬ ಮಹಾವ್ಯಕ್ತಿ. ಫ್ರಾನ್ಸಿನ ಜಾಕೆಮೊ ಆತನನ್ನು "ಮಹಾವೀರ, ನಾನು ನೋಡಿರುವ ಭಾರತೀಯರಲ್ಲಿ ಕುತೂಹಲ ಮನೋಭಾವವುಳ್ಳವರಲ್ಲಿ ಈತನೇ ಮೊದಲಿಗನು. ಆದರೆ ಇಡೀ ರಾಷ್ಟ್ರವೇ ಉತ್ಸಾಹ ಶೂನ್ಯವಿರುವಾಗ ಈತನ ಕುತೂಹಲದಿಂದೇನು ಪ್ರಯೋಜನ? ಆತನೊಡನೆ ಸಂಭಾಷಣೆ ಒಂದು ಮಹಾ ಒಗಟು" ಎಂದಿದ್ದಾನೆ. ಸಾಮಾನ್ಯವಾಗಿ ಭಾರತೀಯರು ಸಂಕೋಚಸ್ವಭಾವದವರು ; ಅವರಲ್ಲಿ ವಿದ್ಯಾವಂತರಂತೂ ಇನ್ನೂ ಸಂಕೋಚ ಸ್ವಭಾವದವರು. ಬ್ರಿಟಿಷರ ಕಾರ್ಯನೀತಿಯನ್ನು ಕಂಡು ಭಯಭ್ರಾಂತರಾಗಿದ್ದ ಇವರಲ್ಲನೇಕರು ಭಾರತದಲ್ಲಿ ಬ್ರಿಟಿಷ ಸೈನ್ಯಾಧಿಕಾರಿಗಳೊಂದಿಗೆ ದುಷ್ಟಸಾಹಸಿಗರೊಂದಿಗೆ ಸಂಪರ್ಕ ಬೆಳೆಸಲು ಯಾರೂ ಒಪ್ಪುತ್ತ ಇರಲಿಲ್ಲ. ಆದ್ದರಿಂದ ಈ ವಿದ್ಯಾವಂತರು ಪರದೇಶೀ ಜನರಿಂದ ಆದಷ್ಟು ದೂರವಿದ್ದು ತಮ್ಮ ಗೌರವವನ್ನು ಉಳಿಸಿಕೊಳ್ಳಲು ಪ್ರಯತ್ನ ಪಟ್ಟರು. ನಿರ್ವಾಹವಿಲ್ಲದೆ ಇದ್ದಾಗ ನೆಪಮಾತ್ರಕ್ಕೆ ಅವರ ಭೇಟಿಮಾಡುತ್ತಿದ್ದರು. ಇಂಗ್ಲಿಷರ ಮತ್ತು ಇತರ ವಿದೇಶೀಯರ ಬಳಿ ಹೋಗುತ್ತಿದ್ದ ಭಾರತೀಯರೆಲ್ಲರೂ ಲಾಭದ ದುರಾಸೆಗೋ ಅಥವ ಕೆಲಸಕ್ಕಾಗಿಯೋ ಅವರನ್ನು

ಆಶ್ರಯಿಸಿದ ದಾಸ್ಯವೃತ್ತಿಯ ಜನರು ಅಥವ ಭಾರತದ ರಾಜಾಸ್ಥಾನಗಳ ಲಂಚಬಡಕರೂ ದ್ರೋಹಿಗಳೂ ಆದ ಮಂತ್ರಿಗಳು.

ರಣಜಿತ್‌ಸಿಂಗ್ ಸೂಕ್ಷ್ಮ ಬುದ್ಧಿಯವನೂ ವಿಚಾರಪರನೂ ಮಾತ್ರವಲ್ಲದೆ ಇಂಡಿಯದಲ್ಲಿ, ಪ್ರಪಂಚದಲ್ಲಿ, ಮಾನವ ಜೀವನಕ್ಕೆ ಬೆಲೆ ಇಲ್ಲದ ಪಾಶವೀ ವೃತ್ತಿಯ ಕಾಲದಲ್ಲಿ ಆತನ ಮಾನವೀಯತೆಯು ಅದ್ಭುತವಾಗಿತ್ತು. ರಾಜ್ಯವನ್ನು ಕಟ್ಟಿ, ದೊಡ್ಡ ಸೇನೆಯನ್ನು ಶೇಖರಿಸಿದರೂ ಆತನಿಗೆ ರಕ್ತಪಾತವೆಂದರೆ ಆಗುತ್ತಿರಲಿಲ್ಲ. " ಅತ್ಯಲ್ಪದೋಷದಿಂದ ಒಬ್ಬ ವ್ಯಕ್ತಿಯು ಅಷ್ಟು ದೊಡ್ಡ ಸಾಮ್ರಾಜ್ಯವನ್ನು ಕಟ್ಟಿದ ನಿದರ್ಶನವು ಇದೇ ಮೊದಲನೆಯದು " ಎಂದು ಪ್ರಿನ್ಸೆಪ್ ಹೇಳುತ್ತಾನೆ. ಇಂಗ್ಲೆಂಡಿನಲ್ಲಿ ಸಣ್ಣ ಕಳುವುಮಾಡಿದವರಿಗೂ ಮರಣದಂಡನೆಯನ್ನು ವಿಧಿಸುತ್ತಿದ್ದಾಗ ತಪ್ಪು ಎಷ್ಟೇ ದೊಡ್ಡದಿದ್ದರೂ ಯಾವ ಅಪರಾಧಕ್ಕೂ ಮರಣ ದಂಡನೆಯು ಇರಕೂಡದೆಂದು ರಣಜಿತ್‌ಸಿಂಗ್ ವಿಧಿಸಿದನು. "ಆತನ ಪ್ರಾಣಹರಣಕ್ಕಾಗಿ ಅನೇಕ ಪ್ರಯತ್ನಗಳು ನಡೆದರೂ ಯುದ್ಧರಂಗದಲ್ಲಿ ಹೊರತು ಯಾವಾಗಲೂ ಯಾರ ಪ್ರಾಣವನ್ನೂ ಅವನು ತೆಗೆದುಕೊಂಡವನಲ್ಲ; ನಾಗರಿಕರೆಂದು ಹೇಳಿಕೊಳ್ಳುವ ಅನೇಕ ರಾಜರುಗಳ ಆಳ್ವಿಕೆಯಲ್ಲಿ ಕಂಡು ಬರುವ ಕ್ರೌರ್ಯ ಮತ್ತು ದಬ್ಬಾಳಿಕೆ ಯಾವುದೂ ಆತನ ಆಳ್ವಿಕೆಯಲ್ಲಿ ಕಾಣುವುದಿಲ್ಲ " ಎಂದು ಆತನನ್ನು ನೋಡಿದ ಆಸ್ಬಾರ್ನ್ ಬರೆಯುತ್ತಾನೆ.

ರಾಜಪುತಾನದ ಜಯಪುರದ ಸವಾಯಿ ಜಯಸಿಂಗ್ ಇನ್ನೊಂದು ಬಗೆಯ ರಾಜಕಾರಣಿಯಾಗಿದ್ದನು. ಆತನು ಇನ್ನೂ ಸ್ವಲ್ಪ ಮುಂಚಿನವನು; ತೀರಿದ್ದು ೧೭೪೩ ರಲ್ಲಿ. ಅವರಂಗಜೇಬನ ಮರಣಾನಂತರ ಮೊಗಲ್ ರಾಜ್ಯವು ಒಡೆಯುತ್ತಿದ್ದ ಕಾಲದಲ್ಲಿ ಇದ್ದವನು. ಮೇಲಿಂದ ಮೇಲೆ ಒದಗಿದ ಆಘಾತಗಳು ಮತ್ತು ಪರಿವರ್ತನೆಗಳನ್ನೆಲ್ಲ ಎದುರಿಸಿ ಉಳಿಯುವಷ್ಟು ಬುದ್ಧಿಶಾಲಿಯೂ, ಸಮಯಸಾಧಕನೂ ಆಗಿದ್ದನು. ದೆಹಲಿ ಚಕ್ರವರ್ತಿಯ ಸಾರ್ವಭೌಮತ್ವವನ್ನು ಒಪ್ಪಿಕೊಂಡಿದ್ದನು. ಮುನ್ನುಗ್ಗುತ್ತಿದ್ದ ಮರಾಠರನ್ನು ತಡೆಯುವುದು ಸಾಧ್ಯವಿಲ್ಲವೆಂದು ಕಂಡಾಗ ದೆಹಲಿಯ ಚಕ್ರವರ್ತಿಯ ಪರವಾಗಿ ಆತನೊಡನೆ ಒಪ್ಪಂದಕ್ಕೆ ಬಂದನು. ಆದರೆ ನಾನು ಆತನಲ್ಲಿ ನೋಡುವುದು ಆತನ ರಾಜಕೀಯ ಅಥವ ಯುದ್ಧ ನೈಪುಣ್ಯವಲ್ಲ. ಆತನು ಪರಾಕ್ರಮಶಾಲಿಯಾದ ಯೋಧನೂ ರಾಜಕಾರಣಪಟುವೂ ಆಗಿದ್ದುದಕ್ಕಿಂತ ಹೆಚ್ಚಾಗಿ ಗಣಿತಶಾಸ್ತ್ರ, ಖಗೋಳ ಶಾಸ್ತ್ರ, ವಿಜ್ಞಾನ ಮತ್ತು ನಗರ ನಿರ್ಮಾಣ ಯೋಜನೆಯಲ್ಲಿ ಮಹಾ ಜ್ಞಾನಿಯಾಗಿದ್ದನು. ಇತಿಹಾಸದ ಅಭ್ಯಾಸದಲ್ಲೂ ಆಸಕ್ತನಿದ್ದನು.

ಜಯಸಿಂಗನು ಜಯಪುರ, ದೆಹಲಿ, ಉಜ್ಜಯಿನಿ, ಕಾಶಿ ಮತ್ತು ಮಥುರಾ ನಗರಗಳಲ್ಲಿ ದೊಡ್ಡ ಸಮೀಕ್ಷಾಮಂದಿರಗಳನ್ನು ಕಟ್ಟಿಸಿದನು. ಪೋರ್ತುಗಲ್‌ನಲ್ಲಿ ಖಗೋಳ ಶಾಸ್ತ್ರದ ಬೆಳವಣಿಗೆಯನ್ನು ಪೋರ್ತುಗೀಸ್ ಮತಪ್ರಚಾರಕರಿಂದ ತಿಳಿದು ಪೋರ್ತುಗೀಸ್ ದೊರೆಯಾದ ಇಮ್ಯಾನ್ಯುಯಲ್ ರಾಜನ ಬಳಿಗೆ ತನ್ನ ರಾಯಭಾರಿಯೊಬ್ಬನನ್ನು ಪಾದ್ರಿಗಳೊಂದಿಗೆ ಕಳುಹಿಸಿದನು. ಇಮ್ಯಾನ್ಯುಯಲ್ ತನ್ನ ರಾಯಭಾರಿಯಾದ ಝೇವಿಯರ್ ಡಿ ಸಿಲ್ವಾನನ್ನು ಡಿಲಾಹೈರ್‌ನ ಕೋಷ್ಟಕಗಳೊಂದಿಗೆ ಜಯಸಿಂಗನಲ್ಲಿಗೆ ಕಳುಹಿಸಿದನು. ತನ್ನ ಕೋಷ್ಟಕಗಳೊಂದಿಗೆ ಹೋಲಿಸಿನೋಡಿದಾಗ ಪೋರ್ತುಗೀಸರ ಕೋಷ್ಟಕಗಳು ನಿಖರ ಇಲ್ಲವೆಂದೂ, ಅನೇಕ ತಪ್ಪುಗಳಿವೆ ಎಂದೂ ಗೊತ್ತಾಯಿತು. ಅವರು ಉಪಯೋಗಿಸಿದ ಉಪಕರಣಗಳ ವ್ಯಾಸಗಳ ದೋಷದಿಂದ ಆ ತಪ್ಪಾಗಿದೆ ಎಂದು ಕಂಡುಹಿಡಿದನು.

ಜಯಸಿಂಗ್ ಭಾರತೀಯ ಗಣಿತಶಾಸ್ತ್ರದಲ್ಲಿ ನಿಪುಣನಿದ್ದನು. ಗ್ರೀಕರ ಖಗೋಳ ಗ್ರಂಥಗಳನ್ನೂ ಅಭ್ಯಾಸಮಾಡಿದ್ದನು. ಯೂರೋಪಿನಲ್ಲಿ ಗಣಿತಶಾಸ್ತ್ರದಲ್ಲಾದ ಪ್ರಗತಿಯನ್ನೂ ತಿಳಿದುಕೊಂಡಿದ್ದನು. ಸಮಕ್ಷೇತ್ರ ಮತ್ತು ಗೋಲ ತ್ರಿಕೋಣ ಮಿತಿಯ ಮೇಲೂ, ಲಘು ಗಣಕದ (ಲಾಗರಿತಮ್) ರಚನೆ ಮತ್ತು ಉಪಯೋಗದ ಮೇಲೂ ಇದ್ದ ಗ್ರೀಕ್ ಮತ್ತು ಯುರೋಪಿಯನ್ ಗ್ರಂಥಗಳನ್ನು ಸಂಸ್ಕೃತ ಭಾಷೆಗೆ ಭಾಷಾಂತರ ಮಾಡಿಸಿದ್ದನು. ಖಗೋಳಶಾಸ್ತ್ರದ ಮೇಲಣ ಅರಬ್ಬಿ ಗ್ರಂಥಗಳನ್ನೂ ಭಾಷಾಂತರಮಾಡಿಸಿದ್ದನು.

ಜಯಪುರವನ್ನು ಆತನೇ ಕಟ್ಟಿದನು. ನಗರ ನಿರ್ಮಾಣದಲ್ಲಿ ಆಸಕ್ತಿವಹಿಸಿ ಆಗಿನ ಯುರೋಪಿನ ಅನೇಕನಗರಗಳ ನಕ್ಷೆಗಳನ್ನು ತರಿಸಿ ಜಯಪುರ ನಗರ ನಿರ್ಮಾಣಕ್ಕೆ ತನ್ನದೇ ಒಂದು ನಕ್ಷೆಯನ್ನು ಸಿದ್ಧಗೊಳಿಸಿದನು. ಹಳೆಯ ಯುರೋಪಿಯನ್ ನಗರಗಳ ಆ ನಕ್ಷೆಗಳು ಈಗಲೂ ಜಯಪುರದ ಪ್ರದರ್ಶನಾಲಯದಲ್ಲಿ ಇವೆ. ಜಯಪುರದ ನಗರ ನಿರ್ಮಾಣವು ಈಗಲೂ ಒಂದು ಮಾದರಿ ಎಂದು ಪ್ರಸಿದ್ಧವಿದೆ. ಆ ನಗರವನ್ನು ಅಷ್ಟು ಚೆನ್ನಾಗಿಯೂ ಕೌಶಲ್ಯದಿಂದಲೂ ಕಟ್ಟಲಾಗಿದೆ.

ತನ್ನ ಅಲ್ಪ ಆಯುಸ್ಸಿನಲ್ಲಿ, ಸದಾ ನಡೆಯುತ್ತಿದ್ದ ಯುದ್ಧಗಳ ಮಧ್ಯೆ, ತನ್ನನ್ನೇ ಆವರಿಸಿದ್ದ ರಾಜಾಸ್ಥಾನದ ಪಿತೂರಿಗಳ ಮಧ್ಯೆ ಜಯಸಿಂಗನು ಇದೆಲ್ಲವನ್ನೂ, ಇನ್ನೂ ಅನೇಕ ವಿಷಯಗಳನ್ನು ಸಾಧಿಸಿದನು. ಜಯಸಿಂಗನ ಮರಣಕ್ಕೆ ನಾಲ್ಕು ವರ್ಷಗಳ ಮುಂಚೆ ನಾದಿರ್‌ಷಾನ ದಂಡಯಾತ್ರೆಯಾಗಿತ್ತು. ಯಾವ ದೇಶದಲ್ಲಾಗಲಿ ಕಾಲದಲ್ಲಾಗಲಿ ಜಯಸಿಂಗ್ ಪ್ರಸಿದ್ಧ ಪುರುಷನೇ ಆಗುತ್ತಿದ್ದನು. ಭಾರತದ ಕಗ್ಗತ್ತಲಿನ ಇತಿಹಾಸದ ದಿನಗಳಲ್ಲಿ, ಪಾಳೆಯಗಾರಿಕೆಯ ರಾಜಪುತಾನದಲ್ಲಿ, ಅನೈಕ್ಯತೆ ಯುದ್ಧಗಳು, ದಂಗೆಗಳು, ನಿತ್ಯ ಸಮಸ್ಯೆಯಾಗಿದ್ದ ಕಾಲದಲ್ಲಿ, ಒಬ್ಬ ದೊಡ್ಡ ವಿಜ್ಞಾನಿಯಾಗಿ ಕಾರ್ಯಸಾಧನೆಮಾಡಿದ್ದು ಬಹಳ ಮಹತ್ವದವಿಷಯ. ಭಾರತದಲ್ಲಿ ವಿಜ್ಞಾನ ಸಂಶೋಧನೆಯ ದೃಷ್ಟಿಯು ಇನ್ನೂ ನಾಶವಾಗಿ ಇರಲಿಲ್ಲವೆಂದುದಕ್ಕೆ ಇದೇ ಸಾಕ್ಷಿ. ಪೂರ್ಣವಿಕಾಸಕ್ಕೆ ಅವಕಾಶ ಕೊಟ್ಟಿದ್ದರೆ ಉತ್ತಮ ಫಲಕೊಡುವ ಮಾನಸಿಕ ಉದ್ವೇಗವು ಇತ್ತೆಂದು ವ್ಯಕ್ತವಾಗುತ್ತದೆ. ಜಯಸಿಂಗ್ ಒಬ್ಬ ಅಸಂಗತ ವ್ಯಕ್ತಿಯಲ್ಲ. ಅಜ್ಞಾನದ ವಿರೋಧ ಸನ್ನಿವೇಶದ ಏಕಮಾತ್ರ ತತ್ವಜ್ಞಾನಿಯೂ ಅಲ್ಲ. ತನ್ನ ಯುಗದ ಫಲ. ಅವನು ತನ್ನ ಸುತ್ತಲೂ ಅನೇಕ ವಿಜ್ಞಾನಿಗಳನ್ನು ತನ್ನ ಸಹಾಯಕ್ಕೆ ಸೇರಿಸಿಕೊಂಡು ಕೆಲಸಮಾಡಿದವನು. ಅವರಲ್ಲಿ ಕೆಲವರನ್ನು ಪೊರ್ತುಗಲ್‌ಗೆ ರಾಯಭಾರಿಗಳ ಜೊತೆಗೆ ಕಳುಹಿಸಿದನು. ಸಮಾಜ ಪದ್ಧತಿಯಾಗಲಿ, ಬಹಿಷ್ಕಾರವಾಗಲಿ ಅಡ್ಡಬರಲಿಲ್ಲ. ಒಳ್ಳೆಯ ಪ್ರೋತ್ಸಾಹವೂ ಅವಕಾಶವೂ ಸಿಕ್ಕಿದ್ದರೆ ಈ ದೇಶದಲ್ಲೇ ಇದ್ದ ಗ್ರಂಥಸ್ಥವೂ, ಪ್ರಾಯೋಗಿಕವೂ ಆದ ಅನೇಕ ಒಳ್ಳೆಯ ಜ್ಞಾನ ಸಾಮಗ್ರಿಯನ್ನು ಉಪಯೋಗಿಸಿ ವಿಜ್ಞಾನ ಸಂಶೋಧನೆಯನ್ನು ನಡೆಸಬಹುದಾಗಿತ್ತು. ಬಹುಕಾಲದವರೆಗೆ ಆ ಅವಕಾಶ ದೊರೆಯಲೇ ಇಲ್ಲ. ಅರಾಜಕತೆಯೂ, ಅಶಾಂತಿಯೂ ಮುಗಿದ ಮೇಲೆ ಸಹ ಅಧಿಕಾರದಲ್ಲಿ ಬ್ರಿಟಿಷರು ವಿಜ್ಞಾನ ಸಂಶೋಧನೆಗೆ ಯಾವ ಪ್ರೋತ್ಸಾಹವನ್ನೂ ಕೊಡಲಿಲ್ಲ.

### ೧೬. ಭಾರತದ ಆರ್ಥಿಕ ಹಿನ್ನೆಲೆ; ಎರಡು ಇಂಗ್ಲೆಂಡ್‌ಗಳು.

ಈ ಮಹಾ ಪರಿಣಾಮಕಾರಕ ರಾಜಕೀಯ ಮತ್ತು ಆರ್ಥಿಕ ಪರಿವರ್ತನೆಗಳಾಗುತ್ತಿರುವಾಗ ಇಂಡಿಯದ ಆರ್ಥಿಕ ಹಿನ್ನೆಲೆಯು ಏನು ಇತ್ತು? "ಇಂಡಿಯದೇಶದ ವಸ್ತು ನಿರ್ಮಾಣ ಶಕ್ತಿ, ಔದ್ಯೋಗಿಕ ಮತ್ತು ವಾಣಿಜ್ಯ ಸಂಸ್ಥೆಗಳು ೧೮ನೆಯ ಶತಮಾನದ ವರೆಗೆ ಪ್ರಪಂಚದ ಇತರ ಯಾವದೇಶದ ಸಂಸ್ಥೆಗಳ ಜೊತೆಗಾದರೂ ಸರಿಸಮಾನತೆಯಿಂದ ನಿಲ್ಲಬಹುದು" ಎಂದು ವಿ. ಆನ್‌ಸ್ಟೇ ಹೇಳಿದ್ದಾನೆ. ಭಾರತದಲ್ಲಿ ನಯಮಾಲುಗಳ ಉತ್ಪತ್ತಿಯು ಬಹು ದೊಡ್ಡ ಪ್ರಮಾಣದಲ್ಲಿ ಆಗುತ್ತಿತ್ತು, ಅವುಗಳನ್ನು ಯೂರೋಪ್ ಮತ್ತು ಇತರ ದೇಶಗಳಿಗೆ ರಫ್ತು ಮಾಡುತ್ತಿದ್ದರು. ಅದರ ಧನಕೋಠಿ (Bank)ಗಳ ವ್ಯವಸ್ಥೆಯು ದೇಶಾದ್ಯಂತವೂ ಹರಡಿ ಬಹಳ ದಕ್ಷತೆಯಿಂದ ಕೆಲಸಮಾಡುತ್ತ ಇತ್ತು. ದೊಡ್ಡ ದೊಡ್ಡ ವರ್ತಕರು ಮತ್ತು ಧನಕೋಠಿಗಳು ಕೊಡುತ್ತಿದ್ದ ಹುಂಡಿಗಳನ್ನು (Bills of Exchange) ಭಾರತದ ದೇಶಾದ್ಯಂತ ಮಾತ್ರವಲ್ಲದೆ ಇರಾಣ, ಕಾಬೂಲ್, ಹೀರತ್, ಟಾಷ್ಕಂಡ್ ಮುಂತಾದ ಮಧ್ಯ ಏಷ್ಯದ ನಗರಗಳಲ್ಲೂ ಮಾನ್ಯಮಾಡುತ್ತಿದ್ದರು. ವರ್ತಕಸಲುವಳಿಯು ತುಂಬ ಮುಂದುವರಿದು ಬೆಳೆದಿತ್ತು. ಪ್ರತಿನಿಧಿಗಳ, ದಲ್ಲಾಳಿಗಳ, ಹುಂಡೀಕಾರಿಗಳ, ಗುಮಾಸ್ತರುಗಳ ಒಂದು ದೊಡ್ಡ ತಂಡವೇ ಇತ್ತು. ಹಡಗುಗಳ ನಿರ್ಮಾಣ ಕಲೆಯು ಬಹಳ ಮುಂದುವರಿದಿತ್ತು. ನೆಪೋಲಿಯನ್‌ನೊಡನೆ ನಡೆದ ಯುದ್ಧಗಳಲ್ಲಿ ಇಂಗ್ಲಿಷ್ ನಾವಿಕ ಪಡೆಯ ನಾಯಕನೊಬ್ಬನ ಧ್ವಜನಾವೆಯನ್ನು ಭಾರತೀಯ ವ್ಯಾಪಾರಿಯೊಬ್ಬನು ಕಟ್ಟಿಕೊಟ್ಟಿದ್ದನು.

ಔದ್ಯೋಗಿಕ ಕ್ರಾಂತಿಗೆ ಮುಂಚೆ ಭಾರತವು ಕೈಗಾರಿಕೆ, ವ್ಯಾಪಾರ, ಐಶ್ವರ್ಯದಲ್ಲಿ ಪ್ರಪಂಚದ ಇತರ ಯಾವ ದೇಶಕ್ಕೂ ಕಡಮೆ ಇರಲಿಲ್ಲ. ಬಹುಕಾಲದಿಂದ ಭದ್ರವೂ, ಶಾಂತಿಯುತವೂ ಆದ ರಾಜ್ಯಾಡಳಿತವೂ ಮತ್ತು ವ್ಯಾಪಾರ ಮತ್ತು ಪ್ರಯಾಣಗಳಿಗೆ ಸುರಕ್ಷಿತವಾದ ಮಾರ್ಗಾನುಕೂಲವೂ ಇರದಿದ್ದರೆ ಈ ಬಗೆಯ ಪ್ರಗತಿಯು ಎಂದಿಗೂ ಸಾಧ್ಯವಿರುತ್ತಿರಲಿಲ್ಲ.

ಭಾರತವು ತಯಾರಿಸುತ್ತಿದ್ದ ನಯವಸ್ತುಗಳ ಶ್ರೇಷ್ಠತೆಯಿಂದ ಅವುಗಳಿಗೆ ಯೂರೋಪಿನಲ್ಲಿ ಒಳ್ಳೆಯ ಗಿರಾಕಿ ಇತ್ತು. ಆದುದರಿಂದ ವಿದೇಶೀವರ್ತಕರು ಭಾರತಕ್ಕೆ ವ್ಯಾಪಾರಕ್ಕಾಗಿ ಬರುವ ಸಾಹಸಮಾಡಿದರು. ಬ್ರಿಟಿಷ್ ಈಸ್ಟ್ ಇಂಡಿಯ ಕಂಪನಿಯ ಆರಂಭದ ದಿನಗಳಲ್ಲಿ ಯೂರೋಪಿಗೆ ಭಾರತೀಯ ವಸ್ತುಗಳನ್ನೊಯ್ದು ಮಾರುವುದೇ ಅವರ ಮುಖ್ಯ ಕೆಲಸವಾಗಿತ್ತು. ವ್ಯಾಪಾರವೂ ತುಂಬ ಲಾಭದಾಯಕವಿತ್ತು. ಭಾರತದಲ್ಲಿ ವಸ್ತು ನಿರ್ಮಾಣ ವ್ಯವಸ್ಥೆಯು ಬಹಳ ದಕ್ಷತೆಯಿಂದಲೂ ಉತ್ತಮ ರೀತಿಯಲ್ಲೂ ಕೆಲಸಮಾಡುತ್ತಿತ್ತು. ಭಾರತೀಯ ಕುಶಲಕರ್ಮಿಗಳ ಮತ್ತು ಉದ್ಯಮಿಗಳ ನೈಪುಣ್ಯವು ಇಂಗ್ಲೆಂಡಿನಲ್ಲಿ ಸ್ಥಾಪನೆಯಾಗುತ್ತಿದ್ದ ಯಂತ್ರೋಪಕರಣಗಳ ಉತ್ತಮ ವಸ್ತು ನಿರ್ಮಾಣ ಶಕ್ತಿಯೊಡನೆ ಯಶಸ್ವಿಯಾಗಿ ಪೈಪೋಟಿನಡೆಸುವಷ್ಟು ಉನ್ನತವಿತ್ತು. ಇಂಗ್ಲೆಂಡಿನಲ್ಲಿ ಮಹಾಯಂತ್ರ ಯುಗವು ಆರಂಭವಾಗಿದ್ದರೂ ಭಾರತೀಯ ವಸ್ತುಗಳು ರಾಶಿರಾಶಿಯಾಗಿ ಬಂದು ಬೀಳುತ್ತಿದ್ದವು. ವಿಶೇಷ ತೆರಿಗೆಯನ್ನು ಹಾಕಿ, ಇವ್ನು ಕೆಲವುವೇಳೆ ದೇಶದೊಳಗೆ ಪ್ರವೇಶಿಸದಂತೆ ನಿಷೇಧಮಾಡಿ ತಡೆಗಟ್ಟಬೇಕಾಯಿತು.

ಪ್ಲಾಸಿಕದನವಾದ ೧೭೫೭ರಲ್ಲಿ ಕ್ಲೈವನು ಬಂಗಾಳದ ಮುರ್ಷಿದಾಬಾದ್ ನಗರವನ್ನು "ಲಂಡನ್ ನಗರದಷ್ಟೆ ವಿಶಾಲವೂ, ಜನಸಾಂದ್ರತೆಯುಳ್ಳದ್ದೂ, ಸಂಪದ್ಯುಕ್ತವೂ ಆದ ನಗರ. ಆದರೆ ಒಂದು ವ್ಯತ್ಯಾಸವೆಂದರೆ ಮುರ್ಷಿದಾಬಾದಿನಲ್ಲಿ ಲಂಡನ್ ನಗರದಲ್ಲಿರುವುದಕ್ಕಿಂತ ಅತುಲೈಶ್ವರ್ಯ ಉಳ್ಳ ವ್ಯಕ್ತಿಗಳನೇಕರಿದ್ದಾರೆ." ಎಂದು ಹೇಳಿದ್ದಾನೆ, ಪೂರ್ವ ಬಂಗಾಲದ ಢಾಕಾ ನಯವಾದ ಹತ್ತಿ ಬಟ್ಟೆಗೆ ಪ್ರಸಿದ್ಧವಾಗಿತ್ತು. ಈ ಎರಡು ನಗರಗಳೂ ಮುಖ್ಯ ನಗರಗಳಾದರೂ ಹಿಂದೂಸ್ಥಾನದ ಹೊರ ಅಂಚಿನಲ್ಲಿದ್ದವು. ವಿಶಾಲ ಭಾರತದ ಒಳಗಡೆ ಮಹಾನಗರಗಳೂ, ದೊಡ್ಡ ಕೈಗಾರಿಕಾ ಕೇಂದ್ರಗಳೂ, ವ್ಯಾಪಾರಸ್ಥಳಗಳೂ ಅನೇಕ ಇದ್ದುವು. ಪೇಟೆಯ ಧಾರಣೆಗಳ ವರ್ತಮಾನವನ್ನೂ ಬೇಗ ಕಳುಹಿಸಲು ಒಂದು ಆಶ್ಚರ್ಯಕರವಾದ ವಾರ್ತಾಪದ್ಧತಿ ಏರ್ಪಟ್ಟಿತ್ತು. ಈಸ್ಟ್ ಇಂಡಿಯ ಕಂಪೆನಿಯ ಅಧಿಕಾರಿಗಳಿಗೆ ಗೊತ್ತಾಗುವ ಮುಂಚೆಯೇ ಆಗ ನಡೆಯುತ್ತಿದ್ದ ಯುದ್ಧ ವರ್ತಮಾನವು ವಾಣಿಜ್ಯ ಸಂಸ್ಥೆಗಳಿಗೆ ದೊಡ್ಡ ದೊಡ್ಡ ವರ್ತಕರಿಗೆ ತಿಳಿಯುತ್ತಿತ್ತು. ಈ ರೀತಿ ಭಾರತದ ಆರ್ಥಿಕ ಉನ್ನತಿಯು ಔದ್ಯೋಗಿಕ ಕ್ರಾಂತಿಯ ಮೊದಲು ಎಷ್ಟರಮಟ್ಟಿಗೆ ಮುಂದುವರಿಯಬಹುದಾಗಿತ್ತೋ ಅಷ್ಟೂ ಮುಂದುವರಿದಿತ್ತು. ಅದರಲ್ಲಿ ಮುಂದಿನ ಪ್ರಗತಿಯ ಬೀಜವು ಇತ್ತೋ, ಅಥವ ಸುತ್ತಲಿನ ಸಮಾಜರಚನೆಯ ಬಂಧನದಲ್ಲಿಯೇ ಸಿಲುಕಿತ್ತೋ ಹೇಳುವುದು ಕಷ್ಟ. ಆದರೆ ಸಾಮಾನ್ಯ ಪರಿಸ್ಥಿತಿಯಲ್ಲಿ ವ್ಯತ್ಯಾಸ ಹೊಂದಿ ನೂತನ ಔದ್ಯೋಗಿಕ ಸನ್ನಿವೇಶಗಳಿಗೆ ಹೊಂದಿಕೊಳ್ಳುವ ಶಕ್ತಿಯು ಮಾತ್ರ ಇತ್ತೆಂದು ಧೈರ್ಯವಾಗಿ ಹೇಳಬಹುದು. ವ್ಯತ್ಯಾಸ ಹೊಂದಲು ಜೀರ್ಣವಾಗಿ ಸಿದ್ಧವಿದ್ದರೂ ಆ ವ್ಯತ್ಯಾಸವಾಗಲು ತನ್ನೊಳಗೇ ಒಂದು ಕ್ರಾಂತಿಯೇ ಆಗುವುದು ಅವಶ್ಯವಿತ್ತು. ಪ್ರಾಯಶಃ ಆ ವ್ಯತ್ಯಾಸವನ್ನುಂಟುಮಾಡಲು ಯಾವುದಾದರೊಂದು ಪ್ರಚೋದಕ ವಸ್ತು ಬೇಕಾಗಿತ್ತೋ ಏನೋ. ಔದ್ಯೋಗಿಕ ಕ್ರಾಂತಿಯುಗದ ಮುಂಚೆ ಭಾರತದ ಆರ್ಥಿಕ ಉನ್ನತಿಯು ಎಷ್ಟೇ ಉತ್ತಮ ವ್ಯವಸ್ಥೆಯಿಂದ ಮುಂದುವರಿದಿದ್ದರೂ ಯಂತ್ರೀಕರಣವಾದ ದೇಶಗಳ ವಸ್ತು ನಿರ್ಮಾಣ ಶಕ್ತಿಯೊಡನೆ ಬಹುಕಾಲ ಪೈಪೋಟಿ ನಡೆಸುವುದು ಸಾಧ್ಯವಿರಲಿಲ್ಲ. ತಾನೇ ಯಂತ್ರೀಕರಣವಾಗಬೇಕಾಗಿತ್ತು ; ಅಥವ ವಿದೇಶೀಯರ ಆರ್ಥಿಕ ಬಂಧನದೊಳಗೆ ಸಿಕ್ಕು ರಾಜಕೀಯ ಪ್ರವೇಶಕ್ಕೆ ಅವಕಾಶವಾಗಬೇಕಾಗಿತ್ತು. ಆದರೆ ವಿದೇಶೀಯರ ರಾಜಕೀಯ ಪ್ರವೇಶವೇ ಮೊದಲು ಬಂದಿತು. ಇದರಿಂದ ಭಾರತದ ಆರ್ಥಿಕ ರಚನೆಯು ಕುಸಿದು ಬಿತ್ತು, ಅದರ ಸ್ಥಾನದಲ್ಲಿ ಯಾವ ದೃಢವಾದ ರಚನಾತ್ಮಕ ವ್ಯವಸ್ಥೆಯೂ ಬರಲಿಲ್ಲ. ಈಸ್ಟ್

ಇಂಡಿಯಾ ಕಂಪೆನಿಯು ಬ್ರಿಟಿಷರ ರಾಜಕೀಯ ಶಕ್ತಿ, ಬಂಡವಾಳಗಾರಿಕೆ ಮತ್ತು ಆರ್ಥಿಕ ಶಕ್ತಿಯ ಪ್ರತಿನಿಧಿಯಾಗಿತ್ತು. ಅದರ ಅಧಿಕಾರಕ್ಕೆ ಮಿತಿಯೇ ಇರಲಿಲ್ಲ; ವರ್ತಕರ ಸಂಸ್ಥೆಯಾದ್ದರಿಂದ ಲಾಭ ಸಂಪಾದನೆಯೇ ಅದರ ಮುಖ್ಯಗುರಿಯಾಗಿತ್ತು. ಅತಿಶೀಘ್ರವಾಗಿ ಅಪಾರ ಹಣವನ್ನು ಸಂಪಾದನೆ ಮಾಡುತ್ತಿದ್ದಾಗ ೧೭೭೬ ರಲ್ಲಿ "ರಾಷ್ಟ್ರಗಳ ಸಂಪತ್ತು" (The Wealth of Nations) ಎಂಬ ಗ್ರಂಥದಲ್ಲಿ ಆಡಮ್ ಸ್ಮಿತ್‌ನು "ವರ್ತಕ ಸಂಘವೊಂದು ರಾಜ್ಯಾಡಳಿತವನ್ನೂ ನಡೆಸುವುದು ಯಾವ ದೇಶಕ್ಕಾದರೂ ಅಪಾಯಕರ" ಎಂದು ಹೇಳಿದ್ದಾನೆ.

ಭಾರತೀಯ ವರ್ತಕರು, ಕೈಗಾರಿಕೋದ್ಯಮಿಗಳು ತುಂಬ ಐಶ್ವರ್ಯವಂತರಾಗಿ ದೇಶಾದ್ಯಂತ ಹರಡಿ ದೇಶದ ಆರ್ಥಿಕರಚನೆಯನ್ನು ತಮ್ಮ ಹತೋಟಿಯಲ್ಲಿ ಇಟ್ಟುಕೊಂಡಿದ್ದರೂ ಅವರಿಗೆ ಯಾವ ರಾಜಕೀಯ ಅಧಿಕಾರವೂ ಇರಲಿಲ್ಲ. ಸರಕಾರವು ಪಾಳೆಯಗಾರಿಕೆಯ ಪದ್ಧತಿಯದಾಗಿ ನಿರಂಕುಶಾಧಿಕಾರ ನಡೆಸುತ್ತಿತ್ತು, ಪ್ರಾಯಶಃ ಭಾರತೀಯ ಇತಿಹಾಸದಲ್ಲಿ ಹಿಂದೆ ಯಾವಾಗಲೂ ಇಲ್ಲದಷ್ಟು ಪಾಳೆಯಗಾರಿಕೆಯು ಈಗ ಇತ್ತು. ಪಾಶ್ಚಿಮಾತ್ಯ ದೇಶಗಳಲ್ಲಿದ್ದಂತೆ ತಮಗೂ ಅಧಿಕಾರಬೇಕೆಂದು ಯೋಚಿಸುವ ಪ್ರಬಲರಾದ ಮಧ್ಯಮವರ್ಗದ ಜನರೇ ಇರಲಿಲ್ಲ. ಸಾಮಾನ್ಯ ಜನರಲ್ಲಿ ತಾತ್ಸಾರ ಮತ್ತು ದಾಸ್ಯ ಮನೋಭಾವವು ಬೇರೂರಿತ್ತು. ಆದ್ದರಿಂದ ಯಾವ ಕ್ರಾಂತಿಕಾರಕ ವ್ಯತ್ಯಾಸವು ಆಗ ಬೇಕಾದರೂ ಮಧ್ಯದ ಅಂತರವು ಹೋಗಬೇಕಾಗಿತ್ತು. ಪ್ರಾಯಶಃ ಪರಿವರ್ತನೆಯಾಗುತ್ತಿರುವ ಪ್ರಪಂಚದಲ್ಲಿ ಪರಿವರ್ತನೆಗೊಳ್ಳಲು ನಿರಾಕರಿಸಿ ಸ್ತಂಭಿತವಾಗಿ ನಿಂತ ಭಾರತದ ಸಮಾಜರಚನೆಯೇ ಈ ಅಂತರಕ್ಕೆ ಕಾರಣವಾಗಿರಬಹುದು. ಪರಿವರ್ತನೆಯನ್ನು ಎದುರಿಸುವ ಎಲ್ಲ ನಾಗರಿಕತೆಯೂ ನಾಶವಾಗಲೇಬೇಕು. ಆ ಸಮಾಜ ವ್ಯವಸ್ಥೆಯಿಂದ ರಚನಾತ್ಮಕ ಪ್ರಗತಿ ಯಾವುದೂ ಸಾಧನೆಯಾಗುವಂತೆ ಇರಲಿಲ್ಲ.

ಆ ಕಾಲದಲ್ಲಿ ಬ್ರಿಟಿಷರು ರಾಜಕೀಯದಲ್ಲಿ ಬಹಳ ಪ್ರಗತಿಹೊಂದಿದ್ದರು. ಬ್ರಿಟನ್‌ನಲ್ಲಿ ರಾಜಕೀಯ ಕ್ರಾಂತಿಯನ್ನುಂಟುಮಾಡಿ ತಮ್ಮ ದೊರೆಯ ಮೇಲೆ ಪಾರ್ಲಿಮೆಂಟಿನ ಪರಮಾಧಿಕಾರವನ್ನು ಸ್ಥಾಪಿಸಿದರು. ಅಲ್ಲಿನ ಮಧ್ಯಮ ವರ್ಗದವರಿಗೆ ತಮ್ಮ ನೂತನ ಶಕ್ತಿಯ ಅರಿವು ಉಂಟಾಗಿ ಹಿಗ್ಗಿದ ಮನೋಭಾವದಲ್ಲಿದ್ದರು. ಬೆಳೆಯುತ್ತಿರುವ ಪ್ರಗತಿಪರ ಸಮಾಜದ ಸಾಕ್ಷೀಭೂತವಾಗಿ ಇಂಗ್ಲೆಂಡಿನ ಜನಜೀವನದಲ್ಲಿ ಕಾರ್ಯಪಟುತ್ವವನ್ನೂ ಕಾರ್ಯಶಕ್ತಿಯನ್ನೂ ಅನೇಕ ರೀತಿಯಲ್ಲಿ ನೋಡಬಹುದು. ಔದ್ಯೋಗಿಕ ಕ್ರಾಂತಿಯ ಕಾಲದ ಸಂಶೋಧನೆಗಳಲ್ಲಿ ಮತ್ತು ನೂತನ ಯಂತ್ರ ಸಾಧನೆಗಳಲ್ಲಿ ಮುಖ್ಯವಾಗಿ ಇವು ಎದ್ದು ಕಾಣುತ್ತವೆ.

ಆದರೂ ಬ್ರಿಟಿಷರ ಆಡಳಿತಾಧಿಕಾರ ಯಾರ ಕೈಯಲ್ಲಿ? ಅಮೆರಿಕಾ ದೇಶದ ಪ್ರಸಿದ್ಧ ಇತಿಹಾಸಕಾರರಾದ ಚಾರ್ಲ್ಸ್ ಮತ್ತು ಮೇರಿ ಬಿಯರ್ಡ್‌ರು ಅಮೆರಿಕೆಯ ಕ್ರಾಂತಿಯು ಯಶಸ್ವಿಯಾದೊಡನೆ ಅಮೆರಿಕದ ಸಾಮ್ರಾಜ್ಯದ ಪ್ರಾಂತ್ಯಗಳಿಂದ ಬ್ರಿಟಿಷ್ ಆಡಳಿತಗಾರರು ಏಕಾಏಕಿ ನಿರ್ನಾಮವಾದುದನ್ನು ಬರೆಯುತ್ತ "ಕ್ರೂರ ದುಷ್ಕೃತ್ಯಗಳನ್ನು ಮಾಡುವವರು, ಸಹನೆಯಿಲ್ಲದ ಸಂಕುಚಿತ ವಿಶ್ವವಿದ್ಯಾನಿಲಯದ ಶಿಕ್ಷಣ ಪಡೆದವರು, ಸರಕಾರವೆಲ್ಲ ತಮ್ಮ ಅಧಿಕಾರ ಲಾಲಸೆ ಮತ್ತು ಸ್ವಪ್ರತಿಷ್ಠೆಗೆ ಎಂದು ಭಾವಿಸಿದವರು, ಹೊಲ ಗದ್ದೆಗಳ ಅಂಗಡಿ ಪೇಟೆಗಳ ದುಡಿಮೆಗಾರರನ್ನು ನಿಕೃಷ್ಟರೆಂದು ನೋಡುವವರು, ಜನರನ್ನು ಅವಿದ್ಯೆಯಲ್ಲಿ ಮುಳುಗಿಸಿ ಅಧಿಕಾರ ನಡೆಸುವವರು, ಕ್ಯಾಥೋಲಿಕ್ಕರ ಮೇಲೂ, ಭಿನ್ನಾಭಿಪ್ರಾಯದ ಜನರ ಮೇಲೂ ತಮ್ಮ ಮತವನ್ನು ಹೇರುವವರು, ಒಳನಾಡಿನಲ್ಲಿ ಹಳ್ಳಿಗಳಲ್ಲಿ ಶ್ರೀಮಂತರಿಗೂ, ಮಠಾಧಿಪತಿಗಳಿಗೂ ಪ್ರಾಶಸ್ತ್ಯ ಕೊಡುವವರು, ಸೈನ್ಯದಲ್ಲಿ ಮತ್ತು ನಾವೆಯಲ್ಲಿ ನಿಷ್ಕರುಣ ಪಾಶವೀವೃತ್ತಿಯವರು, ಜಮೀನುದಾರರನ್ನು ಪ್ರೋತ್ಸಾಹಿಸಲು ಹಿರಿಯ ಮಗನಿಗೇ ಆಸ್ತಿಯ ಒಡೆತನವೆನ್ನುವವರು, ಅಧಿಕಾರಸ್ಥಾನಗಳಿಗೆ, ಬಿಟ್ಟಿ ಲಾಭ ಮತ್ತು ವಿರಾಮ ವೇತನಗಳಿಗಾಗಿ ಹೊಗಳು ಭಟ್ಟರಾಗಿ ರಾಜನಸುತ್ತಲೂ ಮುತ್ತಿರುವ ಹಸಿದ ಹೆಬ್ಬುಲಿಯಂತಿರುವ ಮನುಷ್ಯರು ಮತ್ತು ಈ ಪ್ರತಿಷ್ಠೆ ಮತ್ತು ಸುಲಿಗೆಯನ್ನೆಲ್ಲ ಬಡಜನರ ಮೇಲೆ ಹೇರಲು ಅನುಕೂಲವಾದ ರಾಜ್ಯ

ಮತ್ತು ಮಠಗಳ ಆಡಳಿತ ವ್ಯವಸ್ಥೆಯುಳ್ಳವರು–ಈ ಹಣಭಾರದಿಂದ ಅಮೆರಿಕೆಯ ಕ್ರಾಂತಿಕಾರರು ಬ್ರಿಟಿಷ್ ರಾಜರ ಅಧೀನ ರಾಷ್ಟ್ರಗಳ ಪ್ರಜೆಗಳನ್ನು ಬಿಡುಗಡೆಮಾಡಿದರು. ಬಿಡುಗಡೆಯನಂತರ ಶಾಸನ ಮತ್ತು ರಾಜ್ಯನೀತಿಯಲ್ಲಿ ಹತ್ತಿಪ್ಪತ್ತು ವರ್ಷಗಳಲ್ಲಿ ಅಮೆರಿಕನರು ಸಾಧಿಸಿದ ಸುಧಾರಣೆಗಳನ್ನು ಇಂಗ್ಲೆಂಡಿನಲ್ಲಿ ನೂರಾರು ವರ್ಷಗಳು ಸತತವಾಗಿ ಹೋರಾಡಿ ಸಾಧಿಸಬೇಕಾಯಿತು. ಕ್ರಾಂತಿಯನ್ನೆಬ್ಬಿಸಿದ ಈ ರಾಜಕಾರಣಿಗಳು ಆ ಸುಧಾರಣೆಗಳಿಂದ ಇಂಗ್ಲಿಷ್ ಚರಿತ್ರೆಯಲ್ಲಿ ಅಮರರಾದರು" ಎಂದಿದ್ದಾರೆ.

ಸ್ವಾತಂತ್ರ್ಯದ ಇತಿಹಾಸದಲ್ಲಿ ೧೭೭೬ರಲ್ಲಿ ಸಹಿಯಾದ ಅಮೆರಿಕೆಯ ಸಾತಂತ್ರ್ಯ ಘೋಷಣೆಯು ಒಂದು ಪ್ರಧಾನ ಘಟ್ಟ. ಆರು ವರ್ಷಗಳನಂತರ ವಸಾಹತು ರಾಜ್ಯಗಳು ಇಂಗ್ಲೆಂಡಿನಿಂದ ಪ್ರತ್ಯೇಕವಾದವು. ತಮ್ಮ ನಿಜವಾದ ಮಾನಸಿಕ, ಆರ್ಥಿಕ, ಸಾಮಾಜಿಕ ಕ್ರಾಂತಿಯನ್ನು ಆರಂಭಿಸಿದವು. ಬ್ರಿಟಿಷರ ಪ್ರೇರಣೆಯಿಂದ ಇಂಗ್ಲೆಂಡಿನ ಪದ್ಧತಿಯಂತೆ ಏರ್ಪಟ್ಟ ಭೂಮಿಯ ಒಡೆತನ ಪದ್ಧತಿಯನ್ನು ಪೂರ್ಣನಿರ್ಮೂಲ ಮಾಡಲಾಯಿತು. ಅನೇಕ ವಿಶೇಷಾಧಿಕಾರಗಳನ್ನು ಕಿತ್ತುಕೊಳ್ಳಲಾಯಿತು. ದೊಡ್ಡ ದೊಡ್ಡ ಜಮೀನುದಾರಿಗಳನ್ನು ಸರಕಾರವು ವಹಿಸಿಕೊಂಡು ಸಣ್ಣ ಸಣ್ಣ ಹಿಡುವಳಿಗಳನ್ನಾಗಿ ವಿಂಗಡಿಸಿತು. ಜನರಲ್ಲಿ ಒಂದು ಹೊಸ ಸ್ಫೂರ್ತಿಯು ಉಕ್ಕಿಬಂದು ವಿಶೇಷ ಮಾನಸಿಕ ಮತ್ತು ಆರ್ಥಿಕ ಕಾರ್ಯ ಚಟುವಟಿಕೆಯು ಹುಟ್ಟಿತು. ಪಾಳೆಯಗಾರಿಕೆಯ ಪದ್ಧತಿ ಮತ್ತು ವಿದೇಶೀಯರ ದಾಸ್ಯಗಳಿಂದ ಬಿಡುಗಡೆಹೊಂದಿದ ಅಮೆರಿಕೆಯು ಭೂಮ ಪಾದಗಳಿಂದ ಪ್ರಗತಿ ಶಿಖರವನ್ನೇರಿತು.

ಫ್ರಾನ್ಸಿನ ಮಹಾಕ್ರಾಂತಿಯಲ್ಲಿ ಪುರಾತನ ಸಂಪ್ರದಾಯದ ಸಂಕೇತವಾದ ಬ್ಯಾಸ್ಟಿಲ್ ಸೆರೆಮನೆಯು ಧ್ವಂಸವಾಯಿತು ; ದೊರೆಯನ್ನೂ, ಶ್ರೀಮಂತಿಕೆಯನ್ನೂ ನಾಶಮಾಡಿ ಮಾನವ ಸ್ವಾತಂತ್ರ್ಯವನ್ನು ಪ್ರಪಂಚಕ್ಕೆ ಸಾರಿತು.

ಇಂಗ್ಲೆಂಡಿನಲ್ಲಿ ? ಅಮೆರಿಕ ಮತ್ತು ಫ್ರಾನ್ಸಿನಲ್ಲಿ ಆದ ಈ ವಿಪ್ಲವಕಾರಕ ಪರಿವರ್ತನೆಗಳನ್ನು ಕಂಡು ಹೆದರಿ ಇಂಗ್ಲೆಂಡ್ ಇನ್ನೂ ಪ್ರತಿಗಾಮಿಯಾಯಿತು. ಕ್ರೂರವೂ ಕಠಿನವೂ ಆದ ಅದರ ದಂಡ ಶಾಸನವು ಇನ್ನೂ ಕ್ರೂರವಾಯಿತು. ೧೭೬೦ರಲ್ಲಿ ಮೂರನೆಯ ಜಾರ್ಜ್ ಸಿಂಹಾಸನವನ್ನು ಏರಿದಾಗ ಗಂಡಸರು, ಹೆಂಗಸರು ಮಕ್ಕಳು ಸುಮಾರು ೧೬೦ ಅಪರಾಧಗಳು ಮರಣದಂಡನೆಗೆ ತುತ್ತಾದರು. ೧೮೨೦ರಲ್ಲಿ ಆತನ ಆಳ್ವಿಕೆಯು ಮುಗಿಯುವ ಹೊತ್ತಿಗೆ ಮರಣದಂಡನೆ ಶಿಕ್ಷೆಯುಳ್ಳ ಇನ್ನು ನೂರು ಅಪರಾಧಗಳನ್ನು ಆ ಕ್ರೂರ ಶಾಸನ ಕಡತಕ್ಕೆ ಸೇರಿಸಲಾಯಿತು. ಬ್ರಿಟಿಷ್ ಸೈನ್ಯದ ಸಾಮಾನ್ಯ ಸೈನಿಕನನ್ನು ಮೃಗಕ್ಕಿಂತ ಕಡೆಯಾಗಿ ಕ್ರೌರ್ಯದಿಂದ ಅಮಾನುಷರೀತಿಯಲ್ಲಿ ನೋಡುತ್ತಿದ್ದರು. ಮರಣ ದಂಡನೆಯು ಸಾಮಾನ್ಯವಾಗಿತ್ತು. ಸಾರ್ವಜನಿಕ ಸ್ಥಳಗಳಲ್ಲಿ ಛಡಿಹೊಡೆಯುವುದು ಇನ್ನೂ ಸಾಮಾನ್ಯವಿತ್ತು. ನೂರು ಏಟುಗಳವರೆಗೆ ಹೊಡೆಯುತ್ತಿದ್ದರು. ಅನೇಕವೇಳೆ ಸಾವಿನಲ್ಲೇ ಮುಕ್ತಾಯವಾಗುತ್ತಿತ್ತು. ಅಥವ ಬದುಕಿದರೂ ಅವನ ವಿಕಾರ ರೂಪು ಸಾಯುವವರೆಗೂ ಅವನ ಕಥೆಯನ್ನು ಸ್ಮರಣೆಗೆ ತರುತ್ತಿತ್ತು.

ಮಾನವೀಯತೆಯಲ್ಲಿ ವ್ಯಕ್ತಿ ಅಥವ ಪಂಗಡದ ಗೌರವದಲ್ಲಿ ಭಾರತವು ಇತರರಿಗಿಂತ ಬಹಳ ಮುಂದೆ ಇತ್ತು. ಅದರ ನಾಗರಿಕತೆಯು ಉನ್ನತಮಟ್ಟದ್ದಿತ್ತು. ವಿದ್ಯಾಭ್ಯಾಸವು ಕೇವಲ ಸಾಂಪ್ರದಾಯಕವಿದ್ದರೂ ಇಂಗ್ಲೆಂಡ್ ಅಥವ ಯೂರೋಪಿನ ರಾಷ್ಟ್ರಗಳಿಗಿಂತ ಭಾರತದಲ್ಲಿ ಹೆಚ್ಚು ಜನ ವಿದ್ಯಾವಂತರಿದ್ದರು. ಪ್ರಾಯಶಃ ನಾಗರಿಕ ಸೌಲಭ್ಯಗಳೂ ಹೆಚ್ಚು ಇದ್ದವು. ಯೂರೋಪಿನಲ್ಲಿ ಸಾಮಾನ್ಯ ಜನರ ಪರಿಸ್ಥಿತಿಯು ಬಹು ಹೀನಸ್ಥಿತಿಯಲ್ಲಿತ್ತು ; ಭಾರತದ ಪರಿಸ್ಥಿತಿಯೊಂದಿಗೆ ಹೋಲಿಸಿದರೆ ಬಹಳ ಕರುಣಾಜನಕವಿತ್ತು. ಆದರೆ ಒಂದು ಮುಖ್ಯ ವ್ಯತ್ಯಾಸವಿತ್ತು. ಪಶ್ಚಿಮ ಯೂರೋಪಿನಲ್ಲಿ ಹೊಸ ಶಕ್ತಿಗಳು, ಜೀವನವಾಹಿನಿಗಳು ಉದ್ಭವಿಸಿ ಅಗಾಧ ಪರಿವರ್ತನೆ ಮಾಡುತ್ತಿದ್ದವು ; ಭಾರತದ ಪರಿಸ್ಥಿತಿಯು ಹೆಚ್ಚು ಸ್ಥಾಯಿಸ್ವಭಾವದ್ದಾಗಿತ್ತು.

ಇಂಗ್ಲೆಂಡ್ ಭಾರತಕ್ಕೆ ಬಂದಿತು. ೧೬೦೦ ರಲ್ಲಿ ಎಲಿಜಬೆತ್ ರಾಣಿಯು ಈಸ್ಟ್ ಇಂಡಿಯ ಕಂಪ

ನಿಗೆ ಅನುಜ್ಞೆಕೊಟ್ಟಾಗ ಷೇಕ್ಸ್‌ಪಿಯರ್ ಜೀವಂತನಿದ್ದು ನಾಟಕರಚನೆ ಮಾಡುತ್ತಿದ್ದನು. ೧೬೧೧ ರಲ್ಲಿ 'ಬೈಬಲ್'ನ ಇಂಗ್ಲಿಷ್ ಅಧಿಕೃತ ಪ್ರತಿಯು ಹೊರಬಿದ್ದಿತು. ೧೬೦೮ ರಲ್ಲಿ ಮಿಲ್ಟನ್ ಹುಟ್ಟಿದನು. ಅನಂತರ ಹ್ಯಾಂಪ್‌ಡನ್, ಕ್ರಾಂವೆಲ್ ಮತ್ತು ರಾಜಕೀಯಕ್ರಾಂತಿ. ೧೬೬೦ ರಲ್ಲಿ ವಿಜ್ಞಾನದ ಬೆಳವಣಿಗೆಗೆ ಪ್ರೋತ್ಸಾಹಕೊಟ್ಟ ಇಂಗ್ಲೆಂಡಿನ "ರಾಯಲ್ ಸೊಸೈಟಿ"ಯು ಹುಟ್ಟಿತು. ಒಂದುನೂರು ವರ್ಷಗಳನಂತರ ೧೬೬೦ ರಲ್ಲಿ ಹಾರುವಲಾಳಿಯನ್ನು ಕಂಡುಹಿಡಿದರು. ಆಮೇಲೆ ನೂಲಿನೆಳೆಗಳ ಯಂತ್ರ (Spinning jenny) ಆವಿಯಯಂತ್ರ (steam engine) ಮತ್ತು ಯಂತ್ರದ ಮಗ್ಗಗಳನ್ನು ಒಂದರಮೇಲೊಂದನ್ನು ಕಂಡುಹಿಡಿದರು.

ಇವುಗಳಲ್ಲಿ ಇಂಡಿಯಕ್ಕೆ ಬಂದ ಇಂಗ್ಲೆಂಡ್ ಯಾವುದು? ಷೇಕ್ಸ್‌ಪಿಯರ್ ಮಿಲ್ಟನ್ನಿನ, ಉನ್ನತ ಭಾವನೆ, ಬರವಣಿಗೆ ಮತ್ತು ಭಾಷಣದ, ವಿಜ್ಞಾನ ಮತ್ತು ಔದ್ಯೋಗಿಕ ಪ್ರಗತಿಯ, ರಾಜಕೀಯ ವಿಪ್ಲವ ಮತ್ತು ಸ್ವಾತಂತ್ರ್ಯ ಸಮರದ ಇಂಗ್ಲೆಂಡೇ ಅಥವ ಕ್ರೂರ ದಂಡನೆಯ, ಪಾಶವೀಮನೋಭಾವದ ಪಾಳೆಯಗಾರಿಕೆಯ ಮತ್ತು ಪ್ರಗತಿ ವಿರುದ್ಧ ಇಂಗ್ಲೆಂಡೇ? ಏಕೆಂದರೆ ಪ್ರತಿಯೊಂದು ದೇಶದ ರಾಷ್ಟ್ರೀಯ ಗುಣ ಮತ್ತು ನಾಗರಿಕತೆಗೆ ಎರಡು ಮುಖಗಳಿರುವಂತೆ ಇಂಗ್ಲೆಂಡಿನಲ್ಲೂ ಎರಡು ಮುಖಗಳಿದ್ದವು. "ಇಂಗ್ಲೆಂಡಿನಲ್ಲಿ ಆದರ್ಶವ್ಯಕ್ತಿಗೂ ಸಾಮಾನ್ಯವ್ಯಕ್ತಿಗೂ ಇದ್ದ ನಾಗರಿಕತೆಯ ಅಂತರವು ಅಪಾರವಾಗಿತ್ತು. ಬೇರೆ ಯಾವುದಾದರೂ ದೇಶದಲ್ಲಿ ಹುಡುಕಿದರೂ ಈ ಅಂತರವನ್ನು ಕಾಣುತ್ತೇವೆಯೆ ಎಂಬ ಅನುಮಾನವಾಗುತ್ತದೆ. ಅಂತರ ಕಡಮೆಯಾದರೂ ಸ್ವಲ್ಪವೂ ತಿಳಿಯಲಾಗದಂತೆ ನಿಧಾನವಾಗಿ ಕಡಮೆಯಾಗುತ್ತಿದೆ." ಎಂದು ಎಡ್ವರ್ಡ್ ಥಾಮ್ಸನ್ ಹೇಳುತ್ತಾನೆ.

ಎರಡು ಇಂಗ್ಲೆಂಡ್‌ಗಳೂ ಒಂದರ ಮೇಲೊಂದು ಪ್ರಭಾವವನ್ನು ಬೀರುತ್ತ ಒಂದರ ಜೊತೆಯಲ್ಲೊಂದು ಬೆಳೆದವು. ಅವುಗಳನ್ನು ಪ್ರತ್ಯೇಕಿಸಲು ಸಾಧ್ಯವಿಲ್ಲ; ಒಂದನ್ನು ಸಂಪೂರ್ಣವಾಗಿ ಹಿಂದೆಬಿಟ್ಟು ಇನ್ನೊಂದು ಮಾತ್ರ ಇಂಡಿಯಾಕ್ಕೆ ಬರಲು ಸಾಧ್ಯವೂ ಇರಲಿಲ್ಲ. ಆದರೂ ಯಾವ ದೊಡ್ಡ ಕಾರ್ಯವನ್ನು ತೆಗೆದುಕೊಂಡರೂ ಇನ್ನೊಂದನ್ನು ಬದಿಗೊತ್ತಿ ಒಂದು ಇಂಗ್ಲೆಂಡೇ ಪ್ರಧಾನಪಾತ್ರವನ್ನು ವಹಿಸುತ್ತದೆ. ಇಂಡಿಯದಲ್ಲಿ ಅಡ್ಡದಾರಿಯ ಇಂಗ್ಲೆಂಡ್ ಆ ಪಾತ್ರವನ್ನು ವಹಿಸಬೇಕಾದ್ದೂ, ಕೀಳುಹುಟ್ಟಿದ ಭಾರತೀಯರ ಸಂಪರ್ಕ ಬೆಳೆಸಿ ಅವರನ್ನೇ ಪ್ರೋತ್ಸಾಹಿಸಿದ್ದೂ ಅನಿವಾರ್ಯವಾಯಿತು.

ಅಮೆರಿಕಾ ಸ್ವಾತಂತ್ರ್ಯವನ್ನು ಸಂಪಾದಿಸಿದ್ದೂ, ಇಂಡಿಯ ಸ್ವಾತಂತ್ರ್ಯವನ್ನು ಕಳೆದುಕೊಂಡದ್ದೂ ಒಂದೇ ಕಾಲದಲ್ಲಿ. ಕಳೆದ ಒಂದೂವರೆ ಶತಮಾನ ಕಾಲದಲ್ಲಿ ಅಮೆರಿಕೆಯ ಸಂಯುಕ್ತ ಸಂಸ್ಥಾನದಲ್ಲಿ ಸಾಧಿಸಿರುವ ಪ್ರಗತಿಯನ್ನು ಭಾರತದಲ್ಲಿ ಸಾಧಿಸಿರುವ ಮತ್ತು ಸಾಧಿಸಲಾಗದಿರುವ ಕಾರ್ಯದೊಂದಿಗೆ ಹೋಲಿಸಿ ಸ್ವಲ್ಪ ಯೋಚಿಸಲಾಗುತ್ತದೆ. ಅಮೇರಿಕ ದೇಶಕ್ಕೆ ಅನೇಕ ಅನುಕೂಲತೆಗಳಿದ್ದವೆನ್ನುವುದೂ, ನಮಗೆ ಅನೇಕ ನ್ಯೂನತೆಗಳಿದ್ದವೆನ್ನುವುದೂ ನಿಜ. ಅಮೆರಿಕ ಯಾವ ಬಂಧನವೂ ಇಲ್ಲದ ರಾಷ್ಟ್ರವಾಗಿತ್ತು. ಅಲ್ಲಿನ ಜನರು ಸಂಪೂರ್ಣ ಸರ್ವತಂತ್ರ ಸ್ವತಂತ್ರರಿದ್ದರು. ಹಿಂದಿನ ಕಹಿನೆನಪುಗಳೂ, ಸನಾತನ ಸಂಪ್ರದಾಯಗಳೂ ನಮ್ಮನ್ನು ಕಟ್ಟಿ ಬಿಗಿದಿದ್ದವು. ಆದರೂ ಬ್ರಿಟನ್ನು ಭಾರತದಲ್ಲಿ ಈ ದೊಡ್ಡ ಹೊರೆಯನ್ನು ಹೊರದಿದ್ದರೆ ಮತ್ತು ಅದು ಹೇಳುತ್ತಿರುವಂತೆ ನಮಗೆ ಅನುಭವವಿಲ್ಲದ ಪ್ರಜಾಪ್ರತಿನಿಧಿ ಪ್ರಭುತ್ವ ಪದ್ಧತಿಯನ್ನು ಕಲಿಸಲು ಇಷ್ಟು ದೀರ್ಘಕಾಲ ಶ್ರಮಪಡದಿದ್ದರೆ ಪ್ರಾಯಶಃ ಇಂಡಿಯ ಸ್ವತಂತ್ರವಾಗಿ ಇನ್ನೂ ಅಭಿವೃದ್ಧಿ ಸ್ಥಿತಿಯಲ್ಲಿ ಇರುತ್ತಿತ್ತು ಅಲ್ಲದೆ ವಿಜ್ಞಾನ, ಕಲೆ ಮತ್ತು ಜೀವನ ಸೌಖ್ಯದಲ್ಲಿ ಇನ್ನೂ ಬಹಳ ಮುಂದೆ ಇರುತ್ತಿತ್ತು.

---

# ಅಧ್ಯಾಯ—೭ : ಕೊನೆಯ ಅಂಕ

## ಬ್ರಿಟಿಷರ ಅಧಿಕಾರ ಪ್ರಾಬಲ್ಯ ಮತ್ತು ರಾಷ್ಟ್ರೀಯ ಚಳವಳಿಯ ಆರಂಭ

### ೧. ಸಾಮ್ರಾಜ್ಯ ಭಾವನೆ—ಹೊಸ ಜಾತಿ

ಭಾರತ ಮತ್ತು ಅದರ ಇತಿಹಾಸವನ್ನು ಅರಿತ ಆಂಗ್ಲೇಯನೊಬ್ಬ "ನಮ್ಮ ಇತರ ಎಲ್ಲ ಕೆಲಸಗಳಿಗಿಂತ ನಾವು ಬರೆದ ಭಾರತದ ಇತಿಹಾಸ ಭಾರತೀಯರಿಗೆ ತುಂಬ ಅಸಹನೀಯ" ಎಂದಿದಾನೆ. ಬ್ರಿಟಿಷರ ಆಳ್ವಿಕೆಯಲ್ಲಿ ಭಾರತೀಯರಿಗೆ ತುಂಬ ಅಸಹನೀಯ ಯಾವುದು ಎಂದು ಹೇಳಲು ಅಸಾಧ್ಯ. ಪಟ್ಟಿಯ ಉದ್ದವೂ ಹೆಚ್ಚು ವೈವಿಧ್ಯವೂ ಹೆಚ್ಚು. ಆದರೆ ಬ್ರಿಟಿಷರು ಬರೆದಿರುವ ಭಾರತದ ಇತಿಹಾಸವನ್ನು ಅದರಲ್ಲೂ ಮುಖ್ಯವಾಗಿ ಬ್ರಿಟಿಷರ ಕಾಲದ ಇತಿಹಾಸವನ್ನು ಕಂಡರೆ ಆಗುವುದಿಲ್ಲ. ಸಾಮಾನ್ಯವಾಗಿ ಚರಿತ್ರೆಯನ್ನು ಬರೆಯುವವರೆಲ್ಲ ಗೆದ್ದವರು ಮತ್ತು ವಿಜಯಶಾಲಿಗಳು; ತಮ್ಮ ದೃಷ್ಟಿಯನ್ನೇ ಅದರಲ್ಲಿ ಚಿತ್ರಿಸುತ್ತಾರೆ. ಸಾಮಾನ್ಯವಾಗಿ ಅವರ ಅಭಿಪ್ರಾಯಗಳಿಗೇ ಪ್ರಾಮುಖ್ಯತೆ ಮತ್ತು ಮನ್ನಣೆ. ಪ್ರಾಯಶಃ ಇದೇ ರೀತಿ ಭಾರತದ ಆರ್ಯರ ಪ್ರಾಚೀನ ಗ್ರಂಥಗಳೆಲ್ಲ, ಆರ್ಯರ ಪುರಾಣಗಳು ಇತಿಹಾಸಗಳೆಲ್ಲ—ಆರ್ಯರನ್ನೇ ಹೊಗಳಿ ಗೆದ್ದ ನಾಡಿನ ಜನರಿಗೆ ಅನ್ಯಾಯ ಮಾಡಿವೆ. ತನ್ನ ಜನಾಂಗ ದೃಷ್ಟಿಯನ್ನು ಮತ್ತು ಸಾಂಸ್ಕೃತಿಕ ಮಿತಿಯನ್ನು ಮೀರಲು ಯಾವ ವ್ಯಕ್ತಿಗೂ ಸಾಧ್ಯವಿಲ್ಲ; ಜನಾಂಗಗಳಿಗೆ ಮತ್ತು ರಾಷ್ಟ್ರಗಳಿಗೆ ಹೋರಾಟ ನಡೆದಾಗ ಸಮದೃಷ್ಟಿಯನ್ನು ತೋರಲೆತ್ನಿಸುವುದೂ ರಾಷ್ಟ್ರದ್ರೋಹವೆನಿಸಬಹುದು. ಈ ಹೋರಾಟದ ಅಂತಿಮ ಘಟ್ಟವಾದ ಯುದ್ಧಸಮಯದಲ್ಲಿ ಶತ್ರುವಿನ ವಿಷಯದಲ್ಲಿ ಎಲ್ಲ ನ್ಯಾಯಪರತೆ ಮತ್ತು ಸಮತಾದೃಷ್ಟಿಯೂ ಮಾಯವಾಗುತ್ತವೆ. ಶತ್ರುವಿನ ಮುಖಕ್ಕೆ ಕಪ್ಪು ಬಳಿದು ಆತನನ್ನು ಪರಮ ಪಾತಕಿಯನ್ನಾಗಿ ಮಾಡಿ ತನ್ನ ನೀತಿಯನ್ನು ಸಮರ್ಥನೆ ಮಾಡುವ ಮಾರ್ಗ ಒಂದನ್ನು ಬಿಟ್ಟು ಉಳಿದೆಲ್ಲ ಮಾರ್ಗಗಳೂ ಕಾಣದಾಗುತ್ತವೆ. ಸತ್ಯವು ಎಲ್ಲೋ ಅಂತರಾಳದಲ್ಲಿ ಅಡಗುತ್ತದೆ; ಅಸತ್ಯವು ಲಜ್ಜಾರಹಿತ ನಗ್ನತೆಯಿಂದ ಸ್ವೇಚ್ಛೆಯಾಗಿ ತಾಂಡವವಾಡುತ್ತದೆ.

ಪ್ರತ್ಯಕ್ಷವಾಗಿ ಯುದ್ಧ ನಡೆಯದಿದ್ದರೂ ರಾಷ್ಟ್ರ ರಾಷ್ಟ್ರಗಳಿಗೆ ಅಪ್ರತ್ಯಕ್ಷ ಘರ್ಷಣೆಗಳೂ, ಯುದ್ಧವೂ ಆಗುತ್ತಲೇ ಇರುತ್ತವೆ. ಪರಕೀಯರ ದಾಸ್ಯದಲ್ಲಿ ತೊಳಲುತ್ತಿರುವ ದೇಶದಲ್ಲಿ ಈ ಘರ್ಷಣೆಯು ನಿರಂತರವೂ, ಆತ್ಮಗತವೂ ಆಗಿ ಜನರ ಭಾವನೆ ಮತ್ತು ಕಾರ್ಯಗಳನ್ನು ಮಾರ್ಪಡಿಸಿ ವಿಕೃತಿಗೊಳಿಸುತ್ತದೆ. ಯುದ್ಧ ಭಾವನೆಯು ಹೋಗುವುದೇ ಇಲ್ಲ. ಹಿಂದಿನ ಕಾಲದಲ್ಲಿ ಯುದ್ಧದ ಪರಿಣಾಮವಾಗಿ ಪಾಶವೀ ವೃತ್ತಿ, ಜಯ ಮತ್ತು ಅದರ ಹಿಂದೆಯೇ ದಾಸ್ಯ ಇವು ಅನಿವಾರ್ಯವೆಂಬ ಭಾವನೆ ಇದ್ದಾಗ ಬೇರೊಂದು ದೃಷ್ಟಿಯಿಂದ ಅವುಗಳನ್ನು ಮರೆಮಾಚುವುದಕ್ಕಾಗಲಿ ಸರಿ ಎಂದು ಸಾಧಿಸುವುದಕ್ಕಾಲಿ ಆವಶ್ಯಕತೆಯೇ ಇರುತ್ತಿರಲಿಲ್ಲ. ಮಾನವನ ಜೀವನಮಟ್ಟವು ಹೆಚ್ಚಿದಂತೆಲ್ಲ ಆ ಪರಿಣಾಮವೇ ಸರಿ ಎಂದು ಸಾಧಿಸುವುದು ಅವಶ್ಯವೆನಿಸಿದೆ. ಇದರಿಂದ ಅನೇಕವೇಳೆ ಉದ್ದಿಶ್ಯಪೂರ್ವಕವಾಗಿ, ಇನ್ನು ಕೆಲವು ವೇಳೆ ಉದ್ದಿಶ್ಯವಿಲ್ಲದೆ ಸತ್ಯದ ಕೊಲೆಯಾಗುತ್ತದೆ. ಈ ರೀತಿ ಠಕ್ಕುತನಕ್ಕೊಂದು ಕಪಟ ಸಂನ್ಯಾಸತ್ವ ದೊರೆಯುತ್ತದೆ. ಕೃತಕವೂ, ಅಸಹ್ಯವೂ ಆದ ವೈರಾಗ್ಯಕ್ಕೆ ದುರುಳುತನದ ಸಖ್ಯ ದೊರೆಯುತ್ತದೆ.

ಯಾವ ದೇಶದಲ್ಲಿಯೇ ಆಗಲಿ, ಅದರಲ್ಲೂ ಜಟಿಲ ಇತಿಹಾಸ ಮತ್ತು ಮಿಶ್ರ ಸಂಸ್ಕೃತಿಯ ಭಾರತದಂತಹ ದೊಡ್ಡ ದೇಶದಲ್ಲಿ ಯಾವುದೋ ಒಂದು ವಿಶಿಷ್ಟ ಭಾವನೆಗೆ ಪುಷ್ಟಿದೊರೆಯುವ ಅಂಶಗಳು, ಮತ್ತು ಜಾಡುಗಳು ದೊರೆಯುವುದು ಅತಿಸುಲಭ. ಅನಂತರ ಆ ಭಾವನೆಯೇ ಒಂದು ಹೊಸ ವಾದಮೂಲವಾಗುತ್ತದೆ. ಅಮೆರಿಕದಲ್ಲಿ ಉನ್ನತಿ ಮಟ್ಟವೂ ಮತ್ತು ಸಮತೆಯೂ ವಿಶೇಷ

ವಿದ್ದರೂ ಅದನ್ನು ವಿರೋಧಾಭಾಸಗಳ ದೇಶ ಎಂದಿದಾರೆ. ಭಾರತದಲ್ಲಿ ಇನ್ನೆಷ್ಟು ವಿರೋಧಾಭಾಸಗಳು, ವೈಪರೀತ್ಯಗಳು ಇರಬೇಕು! ನಮ್ಮ ದೃಷ್ಟಿಯ ನೇರಕ್ಕೆ ಏನು ಬೇಕಾದರೂ ದೊರೆಯುತ್ತದೆ; ಆ ದೃಷ್ಟಿಯ ಬಣ್ಣದ ಪೂರ್ವ ಸಿದ್ಧಾಂತದ ಆಧಾರದ ಮೇಲೆ ನಮ್ಮ ಅಭಿಪ್ರಾಯಗಳನ್ನು, ನಂಬಿಕೆಗಳನ್ನು ರೂಪುಗೊಳಿಸುತ್ತೇವೆ. ಆದರೂ ಅದೆಲ್ಲ ಮರಳಿನ ಮನೆ; ಆ ಚಿತ್ರವೇ ಸತ್ಯವೆಂದು ಮೋಸಹೋಗುತ್ತೇವೆ.

ಭಾರತದ ಈಚೆಗಿನ ಇತಿಹಾಸ ಅಂದರೆ ಬ್ರಿಟಿಷರ ಆಳ್ವಿಕೆಯ ಇತಿಹಾಸವು ಇಂದಿನ ಘಟನೆಗಳಿಗೆ ತೀರ ಸಮೀಪವಿದೆ. ಇಂದಿನ ಆವೇಶಗಳು ಮನೋವೈಕಲ್ಯಗಳು ಚಿತ್ರದ ನೈಜರೂಪಕ್ಕೆ ಬಣ್ಣಕೊಡುತ್ತವೆ. ಬ್ರಿಟಿಷರ ಮತ್ತು ಭಾರತೀಯರ ಮಾರ್ಗ ಬೇರೆಯಾದರೂ ಇಬ್ಬರೂ ತಪ್ಪು ಮಾಡುವುದು ಸಹಜ. ಇತಿಹಾಸಕ್ಕೆ ಒಂದು ರೂಪುಕೊಡುವ ದಾಖಲೆಗಳು, ಕಾಗದಪತ್ರಗಳ ಬಹು ಭಾಗವು ದೊರಕುವುದು ಬ್ರಿಟಿಷರಿಂದ. ಆದ್ದರಿಂದ ಅವು ಬ್ರಿಟಿಷರ ದೃಷ್ಟಿಯನ್ನೇ ಪ್ರತಿಬಿಂಬಿಸುವುದು ಅನಿವಾರ್ಯ. ದೇಶಕ್ಕೆ ಒದಗಿದ ಅಪಜಯ ಮತ್ತು ಕ್ಷೋಭೆಯಿಂದ ಭಾರತೀಯ ಇತಿಹಾಸ ಮೂಲಗಳು ಯಾವುವೂ ಹುಟ್ಟಲಿಲ್ಲ; ಇದ್ದ ಕೆಲವು ದಾಖಲೆಗಳೂ ೧೮೫೭ರ ಕ್ರಾಂತಿಯಲ್ಲಿ ನಾಶವಾದವು. ಉಳಿದ ಕೆಲವು ದಾಖಲೆಗಳು ಮುಂದೆ ಒದಗುವ ಶಿಕ್ಷೆಯ ಭಯದಲ್ಲಿ ಕತ್ತಲು ಕೋಣೆಗಳನ್ನು ಸೇರಿದವು; ಯಾರಿಗೂ ದೊರೆಯದೆ, ತಿಳಿಯದೆ, ಕರಡಿನ ರೂಪದಲ್ಲಿಯೇ ಹುಳುಹುಪ್ಪಡಿಗಳಿಗೆ ಆಹುತಿಯಾದವು. ಹಾಗೂ ಕಳೆದುಳಿದ ಕೆಲವು ಕಾಗದ ಪತ್ರಗಳು ಆಮೇಲೆ ದೊರಿತಾಗ ಅನೇಕ ಐತಿಹಾಸಿಕ ಘಟನೆಗಳ ಮೇಲೆ ಹೊಸಬೆಳಕನ್ನು ಬೀರಿದವು. ಬ್ರಿಟಿಷರು ಬರೆದ ಭಾರತದ ಇತಿಹಾಸವನ್ನು ತಿದ್ದಬೇಕಾಯಿತು. ಬೇರೊಂದು ದೃಷ್ಟಿಯ ಭಾರತೀಯ ಇತಿಹಾಸವು ಜನ್ಮತಾಳಿತು. ಈ ದೃಷ್ಟಿಯ ಹಿಂದೆ ಸಹ ಹಿಂದಿನ ನೆನಪು ಮತ್ತು ಅನುಭವಗಳ ಕಹಿ—ತೀರ ಹಿಂದಿನದಲ್ಲ—ನಮ್ಮ ತಾತಂದಿರು ಮತ್ತು ಮುತ್ತಾತಂದಿರು ಸ್ವತಃ ಭಾಗವಹಿಸಿ ಬಲಿಯಾದ ಘಟನೆಗಳ ಕಹಿಯು ಅದರ ಹಿಂದೆ ಇತ್ತು. ಇತಿಹಾಸ ದೃಷ್ಟಿಯಿಂದ ಈ ನೆನಪು ಮತ್ತು ಅನುಭವಕ್ಕೆ ಏನೂ ಬೆಲೆ ಇಲ್ಲದಿರಬಹುದು. ಆದರೆ ಭಾರತೀಯರ ಇಂದಿನ ಮನೋಭಾವನೆಯನ್ನು ಅರಿಯಲು ಅದು ತುಂಬ ಸಹಾಯಕವಾಗಿದೆ. ಭಾರತದಲ್ಲಿ ಬ್ರಿಟಿಷರ ಪರಮಶತ್ರು ಭಾರತೀಯರ ಜನನಾಯಕ; ಬ್ರಿಟಿಷರ ಬಿರುದು ಬಾವಲಿಗಳಿಂದ ಪುನೀತರಾದ ಭಾರತೀಯರು ಜನತೆಯ ದ್ರೋಹಿಗಳು. ಈ ಕಲಂಕವು ಅವರ ಸಂತತಿಗೂ ಅಂಟಿಕೊಂಡಿದೆ.

ಅಮೆರಿಕದ ಕ್ರಾಂತಿಯ ಇತಿಹಾಸವನ್ನು ಬೇರೆಬೇರೆ ದೃಷ್ಟಿಯಿಂದ ಆಂಗ್ಲರೂ ಬರೆದಿದ್ದಾರೆ ಅಮೆರಿಕನರೂ ಬರೆದಿದ್ದಾರೆ. ದ್ವೇಷಾಸೂಯೆಗಳು ಅಳಿದು ಮೈತ್ರಿಯು ಬೆಳೆದಿದ್ದರೂ ಅವರ ಬರಿವಣಿಗೆಯು ಇವರಿಗೆ ಕಹಿ ಇವರದು ಅವರಿಗೆ ಕಹಿ. ನಮ್ಮ ಕಾಲದಲ್ಲಿಯೇ ಉನ್ನತ ಆಂಗ್ಲ ರಾಜಕಾರಣಿಗಳನೇಕರಿಗೆ ಲೆನಿನ್ ಒಬ್ಬ ಮಹಾಪಾತಕಿ, ದರೋಡೆಕೋರ; ಆದರೆ ಕೋಟ್ಯನುಕೋಟಿ ಜನರಿಗೆ ಆತನೊಬ್ಬ ಯುಗಪುರುಷ, ಜಗದ ಉದ್ಧಾರಕ. ಇದರಿಂದ ಭಾರತದ ಪೂರ್ವೇತಿಹಾಸವನ್ನೆಲ್ಲ ಹಳಿದು, ಧೈರ್ಯೋತ್ಸಾಹದ ನೆನಪುಗಳಿಗೆಲ್ಲ ಮಸಿಬಳಿದು ಬ್ರಿಟಿಷರ ಆಳ್ವಿಕೆಯಿಂದಲೇ ಭಾರತದ ಮುಕ್ತಿ ಎಂದು ಹೊಗಳಿ ಅಟ್ಟಕ್ಕೇರಿಸಿ ಬ್ರಿಟಿಷರು ಬರೆದ ಚರಿತ್ರೆಗಳನ್ನು ಶಾಲೆ ಕಾಲೇಜುಗಳಲ್ಲಿ ಕಡ್ಡಾಯವಾಗಿ ಕಲಿಸುವುದನ್ನು ಭಾರತೀಯರು ಏಕೆ ವಿರೋಧಿಸುತ್ತಾರೆ ಎಂಬುದು ಅರ್ಥವಾಗುತ್ತದೆ.

ಭಾರತ ಮತ್ತು ಬ್ರಿಟಿಷರ ಸಂಪರ್ಕವು ಬಿಡಿಸಲಾಗದೊಂದು ದೈವಸಂಕಲ್ಪವೆಂದು ಗೋಪಾಲ ಕೃಷ್ಣಗೋಖಲೆ ತಮ್ಮದೇ ಆದ ಒಂದು ವ್ಯಂಗ್ಯರೀತಿಯಲ್ಲಿ ಮೃದುವಾಗಿ ಹಾಸ್ಯಮಾಡಿದ್ದರು. ದೈವ ಸಂಕಲ್ಪವೋ, ಐತಿಹಾಸಿಕ ಅದೃಷ್ಟದ ಒಂದು ರೀತಿಯೊ, ಅಥವ ಕೇವಲ ಒಂದು ಆಕಸ್ಮಿಕವೋ ಅಂತೂ ಬ್ರಿಟಿಷರ ಬರುವಿಕೆಯಿಂದ ಎರಡು ಭಿನ್ನ ಜನಾಂಗಗಳ ಸಂಪರ್ಕವಾಯಿತು. ಆದರೆ ಈ ಸಂಪರ್ಕವು ಪರಸ್ಪರ ನೇರವಾಗಿ ಬೆಳೆಯುವ ಬದಲು ಅಪ್ರತ್ಯಕ್ಷವಾಗಿ ಬೆಳೆದು ನಿಜವಾದ ಸಂಪರ್ಕವು

ದೂರ ಉಳಿಯಿತು. ಆಂಗ್ಲ ಸಾಹಿತ್ಯ ಮತ್ತು ಆಂಗ್ಲರ ರಾಜಕೀಯ ಭಾವನೆಗಳು ಇಂಗ್ಲಿಷ್ ಬಲ್ಲ ಕೆಲವರ ಮೇಲೆ ಮಾತ್ರ ಪರಿಣಾಮ ಮಾಡಿದವು. ಈ ರಾಜಕೀಯ ಭಾವನೆಗಳು ತಮ್ಮತಮ್ಮ ಸನ್ನಿವೇಶದಲ್ಲಿ ಮಹತ್ವಪೂರ್ಣವಿದ್ದರೂ ಅಂದಿನ ಭಾರತದಲ್ಲಿ ಕನಸಾಗಿದ್ದವು. ಭಾರತಕ್ಕೆ ಬಂದ ಬ್ರಿಟಿಷರು ರಾಜಕೀಯ ಅಥವ ಸಾಮಾಜಿಕ ಕ್ರಾಂತಿಪುರುಷರಾಗಿರಲಿಲ್ಲ. ಇಂಗ್ಲೆಂಡಿನ ಸಂಪ್ರದಾಯ ಶರಣ ಪಂಗಡದ ಪ್ರತಿನಿಧಿಗಳಾಗಿದ್ದರು. ಯೂರೋಪಿನ ಇತರ ಎಲ್ಲ ದೇಶಗಳಿಗಿಂತ ಇಂಗ್ಲೆಂಡ್ ಹೆಚ್ಚು ಸಂಪ್ರದಾಯ ಶಿಷ್ಟವಿತ್ತು.

ಭಾರತದ ಮೇಲಣ ಪಾಶ್ಚಾತ್ಯಸಂಸ್ಕೃತಿಯ ಧಾಳಿಯಿಂದ, ಮುಂದುವರಿದ ಪ್ರತಿಷ್ಠಿತ ಆಧುನಿಕ ಭಾವನೆಯ ಚೇತನಪೂರ್ಣ ಸಮಾಜವೊಂದು ಆಂತರಿಕ ಪರಿಮಿತಿಯಿಂದ ಮುಂದುವರಿಯಲಾರದೆ ಮಧ್ಯ ಯುಗದ ಭಾವನಾಲಹರಿಯಲ್ಲೇ ಮುಳುಗಿದ ಇನ್ನೊಂದು ಪ್ರಗತಿಶೂನ್ಯ ಸಮಾಜದ ಮೇಲೆ ದಾಳಿ ಇಟ್ಟಂತೆ ಆಯಿತು. ಆದರೂ ಈ ಐತಿಹಾಸಿಕ ಘಟನೆಯ ಪ್ರತಿನಿಧಿಗಳಾಗಿ ಬಂದವರಿಗೆ ಭಾರತದಲ್ಲಿ ತಮ್ಮ ಪಾತ್ರ ಏನೆಂಬುದರ ಅರಿವೇ ಇರಲಿಲ್ಲ ಮತ್ತು ಅವರು ಈ ಘಟನೆಯಲ್ಲಿ ನಿಜವಾದ ಯಾವ ಪಾತ್ರವನ್ನೂ ವಹಿಸಲಿಲ್ಲ. ಇಂಗ್ಲೆಂಡಿನಲ್ಲಿ ಅವರ ಪಕ್ಷವು ಆ ಐತಿಹಾಸಿಕ ಘಟನೆಯನ್ನು ತಡೆಗಟ್ಟಲು ಹೋರಾಡಿತು. ಆದರೆ ಎದುರುಪಕ್ಷದ ಪ್ರಬಲ ಶಕ್ತಿಯನ್ನು ವಿರೋಧಿಸಲಾಗಲಿಲ್ಲ. ಭಾರತದಲ್ಲಿ ಅವರನ್ನು ಎದುರಿಸುವ ಶಕ್ತಿಯೇ ಇರಲಿಲ್ಲ; ಆದ್ದರಿಂದ ಪ್ರಗತಿ ಅಥವ ಪರಿವರ್ತನೆಯ ಪ್ರತಿನಿಧಿಗಳಾಗಿ ಇಲ್ಲಿಗೆ ಬಂದವರೇ ಆ ಪ್ರಗತಿ ಅಥವ ಪರಿವರ್ತನೆಯನ್ನು ಅಡ್ಡಗಟ್ಟಿ ತಡೆದರು. ಭಾರತದಲ್ಲಿ ಸಮಾಜದಲ್ಲಿನ ಪ್ರತಿಗಾಮಿ ಪಂಗಡಗಳಿಗೆ ಪ್ರೋತ್ಸಾಹ ಕೊಟ್ಟು ಬಲಪಡಿಸಿದರು; ರಾಜಕೀಯ ಮತ್ತು ಸಾಮಾಜಿಕ ಪ್ರಗತಿಗಾಗಿ ದುಡಿಯುವವರನ್ನು ವಿರೋಧಿಸಿದರು. ಏನಾದರೂ ಪ್ರಗತಿಸಾಧನೆಯಾಗಿದ್ದರೆ ಎಲ್ಲ ಅವರ ಈ ವಿರೋಧ ಮೀರಿ ಆಗಿದೆ ಅಥವ ಅವರ ಇತರ ಚಟುವಟಿಕೆಗಳ ಅನಿರೀಕ್ಷಿತ ಪರಿಣಾಮವಾಗಿ ಆಗಿದೆ. ಮಧ್ಯಯುಗದ ಸಮಾಜದಲ್ಲಿ ರೈಲುಗಾಡಿ ಮತ್ತು ಆವಿಯ ಯಂತ್ರವನ್ನು ತಂದುದರ ಪರಿಣಾಮವೇನೋ ಮಹತ್ತರವಾದುದು; ಆದರೆ ಅದರ ಉದ್ದೇಶವು ತಮ್ಮ ಅಧಿಕಾರವನ್ನು ಬಲಪಡಿಸಿಕೊಳ್ಳುವುದಕ್ಕೆ ಮತ್ತು ತಮ್ಮ ಸ್ವಾರ್ಥಕ್ಕಾಗಿ ದೇಶದ ಸಂಪತ್ತನ್ನು ಸೂರೆಗೊಳ್ಳುವುದಕ್ಕೆ. ಆದ್ದರಿಂದ ಬ್ರಿಟಿಷ್ ಅಧಿಕಾರಿಗಳ ಉದ್ದೇಶಪೂರ್ವಕ ನೀತಿಗೂ ಮತ್ತು ಅದರ ಅನಪೇಕ್ಷಿತ ಪರಿಣಾಮಗಳಿಗೂ ಇರುವ ವಿರೋಧದಿಂದ ಸ್ವಲ್ಪ ಭ್ರಮೆಯಾಗುತ್ತದೆ ಮತ್ತು ನೀತಿಗೊಂದು ಬಣ್ಣದ ಮೆರುಗು ದೊರೆಯುತ್ತದೆ. ಪಾಶ್ಚಿಮಾತ್ಯ ಸಂಪರ್ಕದಿಂದ ಭಾರತದಲ್ಲಿ ಕ್ರಾಂತಿಯೇನೋ ಆಯಿತು; ಆದರೆ ಅದು ಭಾರತದಲ್ಲಿ ಬ್ರಿಟಿಷರ ವಿರೋಧವನ್ನು ಮೀರಿ ಆದುದು. ಆ ಕ್ರಾಂತಿಯ ವೇಗವನ್ನು ಅವರು ತಡೆಗಟ್ಟಿದ ಕಾರಣ ಈಗಲೂ ಪೂರ್ಣ ಸುಧಾರಣೆಯಾಗಿಲ್ಲ.

ಭಾರತವನ್ನು ಆಳಲು ಬಂದ ಇಂಗ್ಲೆಂಡಿನ ಶ್ರೀಮಂತರು ಮತ್ತು ಅವರ ಸ್ನೇಹಿತರಿಗೆ ಪ್ರಪಂಚದ ಮೇಲೆ ಶ್ರೀಮಂತಿಕೆಯ ದೃಷ್ಟಿಯೇ ಇತ್ತು. ಅವರಿಗೆ ಇಡೀ ಭಾರತವೇ ಈಸ್ಟ್ ಇಂಡಿಯಾ ಕಂಪೆನಿಯ ಒಂದು ಜಮೀನುದಾರಿಯಾಯಿತು. ಆ ಆಸ್ತಿಗೆ ಮತ್ತು ಅದರ ಗೇಣಿದಾರರಿಗೆ ಜಮೀನುದಾರನೇ ಮಾಲಿಕನಾದನು. ಭಾರತದ ಬೊಕ್ಕಸದಿಂದಲೇ ಸಮೃದ್ಧಿಯಾಗಿ ಪರಿಹಾರ ಕೊಟ್ಟು ಭಾರತವನ್ನು ಬ್ರಿಟಿಷ್ ರಾಜನು ವಹಿಸಿಕೊಂಡ ಮೇಲೂ ಇದೇ ಭಾವನೆಯೇ ಉಳಿಯಿತು. ಭಾರತದ ಸಾಲದ ಮೂಲ ಇಲ್ಲಿಂದ. ಭಾರತವನ್ನು ಕೊಂಡುಕೊಳ್ಳಲು ಭಾರತವು ಕೊಟ್ಟ ಪ್ರತಿಫಲ. ಭಾರತದಲ್ಲಿ ಬ್ರಿಟಿಷ್ ಸರ್ಕಾರಕ್ಕೆ ಮಾಲಿಕ ಹಕ್ಕು ಬಂದಿತು, ಅಥವ ಅದು ಮಾಲಿಕನ ಪ್ರತಿನಿಧಿಯಾಯಿತು. ಇಂಗ್ಲೆಂಡಿನ ಶ್ರೀಮಂತರು ಡೆವನ್‌ಷೈರಿನ ಡ್ಯೂಕನನ್ನು ಡೆವನ್‌ಷೈರ್ ಎನ್ನುವಂತೆ ಇಲ್ಲಿಯೂ ಸಾಮಾನ್ಯವಾಗಿ ಎಲ್ಲ ವಿಷಯಗಳಲ್ಲೂ ತಾವೇ 'ಇಂಡಿಯ' ಎಂದು ತಿಳಿದುಕೊಂಡರು. ಭಾರತದ ಕೋಟ್ಯಂತರ ಜನರು ಈ ಜಮೀನುದಾರಿ ಪದ್ಧತಿಗೆ ಸಹಜವಾದ ಗೇಣಿಗುತ್ತಿಗೆ ಕೊಟ್ಟು ತಮ್ಮ ಸ್ಥಾನವನ್ನು ಉಳಿಸಿಕೊಳ್ಳುವ ಜೀತದ ಆಳುಗಳಾದರು. ಅವರ ದೃಷ್ಟಿಯಲ್ಲಿ ಈ ಪದ್ಧತಿಯನ್ನು

ವಿರೋಧಿಸಿದವರೆಲ್ಲರೂ ದೈವನಿಯಾಮಕವನ್ನು ನಿರಾಕರಿಸಿ ವಿಶ್ವದ ನೈತಿಕ ತಳಹದಿಯನ್ನೇ ನಾಶ ಮಾಡುವ ಪರಮ ಪಾತಕಿಗಳಾದರು.

ಬ್ರಿಟಿಷರ ಆಳ್ವಿಕೆಯ ಈ ತಾತ್ವಿಕಭಾವನೆಯು ಮೂಲತಃ ಇನ್ನೂ ವ್ಯತ್ಯಾಸಗೊಂಡಿಲ್ಲ. ಅದಕ್ಕೇ ಬೇರೊಂದು ಬಣ್ಣ ಕೊಟ್ಟಿದ್ದಾರೆ. ಮೊದಲಿನ ಗುತ್ತಿಗೆಯ ಸುಲಿಗೆಯು ಬೇರೊಂದು ಸೋಗಿನಲ್ಲಿ ವಸೂಲಾಗುತ್ತಿದೆ. ಜಮೀನುದಾರನಿಗೆ ರೈತನ ಮೇಲೆ ಕರುಣೆ ಇರಬೇಕೆಂದೂ ಆತನ ಹಿತರಕ್ಷಣೆ ಮಾಡಬೇಕೆಂದೂ ಒಪ್ಪಿದ್ದಾನೆ. ಪರಮಭಕ್ತರು ಮತ್ತು ನಂಬಿಕಸ್ಥರೂ ಆದ ಕೆಲವರಿಗೆ ಮಾತ್ರ ಈ ಜಮೀನುದಾರಿ ಆಡಳಿತ ಕಚೇರಿಯಲ್ಲಿ, ನಿರ್ವಹಣೆಯಲ್ಲಿ ಸ್ವಲ್ಪ ಅವಕಾಶ. ಆದರೆ ತಮ್ಮ ಜಮೀನುದಾರಿ ಪದ್ಧತಿಯನ್ನು ಮಾತ್ರ ಯಾರೂ ವಿರೋಧಿಸಬಾರದು. ಕೈಬದಲಾಯಿಸಿದರೂ ಜಮೀನುದಾರಿಯಾಗಿಯೇ ಉಳಿಯಬೇಕು. ಕೆಲವು ಬದಲಾವಣೆಗಳು ಅನಿವಾರ್ಯವಾದಾಗ ಈ ಆಡಳಿತ ವರ್ಗದ ನಂಬಿಕಸ್ಥ ನೌಕರರು ಯಾರಿಗೂ ತೊಂದರೆಯಾಗದೆ ಮುಂದೆಯೂ ಅವರು ಇರಬೇಕು, ಅವರ ಹೊಸ ಮತ್ತು ಹಳೆಯ ಸ್ನೇಹಿತರು, ಆಡಳಿತಗಾರರ ಅನುಯಾಯಿಗಳು, ಅವಲಂಬಿಗಳೆಲ್ಲರಿಗೂ ಜೀವನಕ್ಕೆ ಅನುಕೂಲಮಾಡಿಕೊಡಬೇಕು, ನಿವೃತ್ತರಿಗೆ ವಿರಾಮ ವೇತನ ಕಡಮೆಯಾಗಬಾರದು. ಹಳೆಯ ಆಡಳಿತಗಾರನೇ ಆಸ್ತಿಯ ಪೋಷಕನಾಗಿ, ಸಲಹೆಗಾರನಾಗಿ ಉಳಿಯಬೇಕು ಎಂಬ ಅಷ್ಟದಿಗ್ಬಂಧನಗಳಾದವು; ಏವಂಚ ತಮ್ಮ ಸ್ವಾಮ್ಯಕ್ಕೆ ಕೊಂಚವೂ ಊನ ಬರಬಾರದು. ಯಾವ ಮುಖ್ಯ ವ್ಯತ್ಯಾಸವೂ ಆಗಬಾರದು.

ಉನ್ನತ ಆಡಳಿತವರ್ಗದ ಭಾವನೆಯು ಬ್ರಿಟಿಷರೇ ಇದ್ದ ಭಾರತವು ತಮ್ಮ ಸ್ವತ್ತೆಂದು ಇತ್ತು. ಕೊನೆಕೊನೆಗೆ ಈ ಭಾವನೆಯು ಭದ್ರವೂ ಸುವ್ಯವಸ್ಥಿತವೂ ಆದ ಇಂಡಿಯನ್ ಸಿವಿಲ್ ಸರ್ವಿಸ್ ಸಂಘದಲ್ಲಿ ಸಹ ಬೇರೂರಿತು. ಒಬ್ಬ ಇಂಗ್ಲಿಷ್ ಲೇಖಕ 'ಇಂಡಿಯನ್ ಸಿವಿಲ್ ಸರ್ವಿಸ್'ನ್ನು "ಪ್ರಪಂಚದಲ್ಲೆಲ್ಲ ಅತಿ ಕಟ್ಟುನಿಟ್ಟಾದ ವರ್ತಕ ಸಂಘ" ಎಂದಿದ್ದಾನೆ. ಭಾರತವನ್ನು ಆಳಿದವರು, ತಾವೇ ಭಾರತ ಎಂದು ಭಾವಿಸಿದರು; ತಮ್ಮ ಹಿತಕ್ಕೆ ವಿರೋಧವಾದುದೆಲ್ಲ ಭಾರತಕ್ಕೂ ವಿರೋಧವಿರಲೇ ಬೇಕೆಂದರು. ತಾವೇ ಬರೆದ ಇತಿಹಾಸ, ಈಚಿನ ಘಟನೆಗಳ ದಾಖಲೆಗಳು ಮತ್ತು ಸಿವಿಲ್ ಸರ್ವಿಸ್ ಅಧಿಕಾರಿಗಳು ಇವುಗಳ ಪ್ರಚಾರದಿಂದ ಬ್ರಿಟಿಷ್ ಜನಾಂಗದ ವಿವಿಧ ಪಂಗಡಗಳಲ್ಲಿ ಸಹ ವಿವಿಧ ರೀತಿಯಾಗಿ ಇದೇ ಭಾವನೆಯೇ ಹರಡಿತು. ಆಡಳಿತವರ್ಗದ ಭಾವನೆಯಂತೂ ಸಂಪೂರ್ಣ ಇದೇ ಆಗಿತ್ತು. ತನ್ನ ದೇಶದಲ್ಲಿ ಹೀನಸ್ಥಿತಿಯಲ್ಲಿದ್ದರೂ ಇಂಗ್ಲೆಂಡಿನ ಪ್ರತಿಯೊಬ್ಬ ಶ್ರಮಜೀವಿಯೂ ರೈತನೂ ತನಗೂ ಒಂದು ಸಾಮ್ರಾಜ್ಯವಿದೆ ಎಂದು ಹೆಮ್ಮೆಪಡುವಂತಾದನು. ಅದೇ ಕೂಲಿಗಾರ ಅಥವ ರೈತನು ಭಾರತಕ್ಕೆ ಬಂದೊಡನೆ ಇಲ್ಲಿನ ಅಧಿಕಾರಿವರ್ಗಕ್ಕೆ ಸೇರಿಬಿಡುತ್ತಿದ್ದನು. ಭಾರತೀಯ ಸಂಸ್ಕೃತಿ ಅಥವ ಇತಿಹಾಸದ ಅರಿವು ಅವನಿಗೆ ಲೇಶವೂ ಇರುತ್ತಿರಲಿಲ್ಲ. ಅವನ ನಿರ್ಧಾರ ಅಥವ ಪ್ರಯೋಗಕ್ಕೆ ಬೇರೆ ಯಾವ ಅಳತೆಗೋಲೂ ಇಲ್ಲದೆ ಇಲ್ಲಿನ ಬ್ರಿಟಿಷ್ ಅಧಿಕಾರಿವರ್ಗದ ಅಭಿಪ್ರಾಯವೇ ಆತನ ಅಳತೆಗೋಲಾಯಿತು, ಹೆಚ್ಚೆಂದರೆ ಸ್ವಲ್ಪ ಉದಾರಭಾವನೆ ತೋರುತ್ತಿದ್ದ. ಆದರೆ ಅದೂ ಈ ಚೌಕಟ್ಟಿನ ಪರಿಮಿತಿಯಲ್ಲಿ ಮಾತ್ರ. ಸುಮಾರು ಒಂದುನೂರು ವರ್ಷಗಳ ಕಾಲ ಎಲ್ಲ ಬ್ರಿಟಿಷರ ಮನೋಭಾವನೆಯೂ ಇದೇ ಆಗಿ ಭಾರತದ ಮೇಲಿನ ಅವರ ದೃಷ್ಟಿಕೋಣದ ನಿರ್ಧಾರ ಮಾತ್ರವಲ್ಲದೆ, ತಮ್ಮ ಒಳಾಡಳಿತ ದೃಷ್ಟಿಯನ್ನೂ ಮಾರ್ಪಡಿಸಿದ ಒಂದು ನಿಶ್ಚಲ ನಿರ್ದಿಷ್ಟ ಭಾವನೆಯಾಗಿ ಬ್ರಿಟಿಷ್ ಜನಾಂಗದ ವೈಶಿಷ್ಟ್ಯವಾಯಿತು. ಯಾವ ಒಂದು ಖಚಿತ ಅಭಿಪ್ರಾಯ, ನಿರ್ದಿಷ್ಟ ನೀತಿ ಅಥವ ಹೆಚ್ಚಿನ ಪ್ರಪಂಚ ಪರಿಚಯ ಇಲ್ಲದ ಬ್ರಿಟಿಷ್ ಕೂಲಿಗಾರ ಪಕ್ಷದ ನಾಯಕರು ಸಹ ಭಾರತದಲ್ಲಿನ ಬ್ರಿಟಿಷ್ ನೀತಿಯನ್ನು ಸಮರ್ಥನೆ ಮಾಡುವುದನ್ನು ನಾವೇ ಕಣ್ಣಾರ ನೋಡುತ್ತಿದೇವೆ. ಒಂದೊಂದು ಬಾರಿ ತಮ್ಮ ಒಳಾಡಳಿತ ನೀತಿಗೂ ತಮ್ಮ ಸಾಮ್ರಾಜ್ಯ ನೀತಿಗೂ, ಮತ್ತು ತಾವು ಬೋಧೆಮಾಡುವ ತತ್ವಕ್ಕೂ ತಮ್ಮ ಕಾರ್ಯನೀತಿಗೂ ಇರುವ ಅಂತರವನ್ನು ನೋಡಿ ಅವರಿಗೇ ಮನಸ್ಸು ಅಳುಕುತ್ತದೆ. ಆದರೆ ವ್ಯವಹಾರ ದೃಷ್ಟಿಯ ಬುದ್ಧಿವಂತಿಕೆಯ ಲಕ್ಷಣವೆಂದು

ತಮ್ಮ ಮನಸ್ಸಿನ ಎದೆಗುದಿಯನ್ನೆಲ್ಲ ನಿರ್ದಾಕ್ಷಿಣ್ಯವಾಗಿ ಆದುಮಿದ್ದಾರೆ. ವ್ಯವಹಾರ ಕುಶಲರು ಇಂದಿನ ಪರಿಸ್ಥಿತಿ ಹಿಂದಿನ ಅನುಭವಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಅರಿತು ನುರಿತ ಜಾಡಿನಲ್ಲಿ ಹೋಗಬೇಕೇ ಹೊರತು, ಕೇವಲ ತಾತ್ವಿಕ ದೃಷ್ಟಿಯಿಂದ ಕಣ್ಣು ಕಟ್ಟಿಕೊಂಡು ಬಾವಿ ಹಾರುವುದು ಯುಕ್ತವಲ್ಲವೆಂದು ಅವರ ಅಭಿಪ್ರಾಯ.

ಭಾರತಕ್ಕೆ ಇಂಗ್ಲೆಂಡಿನಿಂದ ನೇರವಾಗಿ ಬಂದ ವೈಸರಾಯರಲ್ಲಿ ಇಂಡಿಯನ್ ಸಿವಿಲ್ ಸರ್ವಿಸ್ ಚೌಕಟ್ಟಿನೊಳಗೆ ಹೊಂದಿಕೊಂಡು ಅದನ್ನು ನಂಬಿ ನಡೆಯಬೇಕು. ಅವರೆಲ್ಲರೂ ಇಂಗ್ಲೆಂಡಿನ ಹೊಟ್ಟೆತುಂಬಿದ ಶ್ರೀಮಂತ ವರ್ಗದವರಾದ್ದರಿಂದ ಐ.ಸಿ.ಎಸ್. ದೃಷ್ಟಿಗೆ ಹೊಂದಿಕೊಳ್ಳುವದು ಅವರಿಗೆ ಕಷ್ಟವಾಗುತ್ತಿರಲಿಲ್ಲ; ಮತ್ತು ಇಲ್ಲಿ ಅವರಿಗೆ ಇನ್ನೆಲ್ಲೂ ದೊರೆಯದ ಸರ್ವಾಧಿಕಾರದ ಅಲಭ್ಯ ಲಾಭ ದೊರೆಯುತ್ತಿದ್ದ ಕಾರಣ ಅವರ ನಡೆನುಡಿಗಳೆಲ್ಲ ವಿಚಿತ್ರವಾಗಿ ಮಾರ್ಪಾಟಾಗು ತ್ತಿದ್ದಿತು ಅಧಿಕಾರದ ಹಿಂದೆಯೇ ಅನೀತಿ ತಲೆಯೆತ್ತುತ್ತದೆ, ನಿರಂಕುಶಾಧಿಕಾರವಾದರಂತೂ ಅದರ ಹಿಂದಿರುವ ಅನೀತಿಗೆ ಮೇರೆಯೇ ಇಲ್ಲವಾಗುತ್ತದೆ. ಭಾರತದ ಕೋಟ್ಯಂತರ ಜನರ ಮೇಲೆ ಭಾರತದಲ್ಲಿ ಬ್ರಿಟಿಷ್ ವೈಸರಾಯ್ ನಡೆಸುತ್ತಿರುವ ನಿರಂಕುಶ ಅಧಿಕಾರವು ಪ್ರಪಂಚದಲ್ಲಿ ಬೇರೆ ಎಲ್ಲಿಯೂ ಯಾವ ಅಧಿಕಾರಿಗೂ ಇರುವುದಿಲ್ಲ. ವೈಸರಾಯ್ ಮಾತನಾಡುವ ರೀತಿಯಲ್ಲಿ ಇಂಗ್ಲೆಂಡಿನ ಮುಖ್ಯಮಂತ್ರಿಯಾಗಲಿ, ಅಮೆರಿಕದ ಸಂಯುಕ್ತ ಸಂಸ್ಥಾನಗಳ ಅಧ್ಯಕ್ಷನಾಗಲಿ ಎಂದೂ ಮಾತನಾಡಲಾರ. ಇರುವ ಒಂದೇ ಸಾಮ್ಯವೆಂದರೆ ಹಿಟ್ಲರ್ ಮಾತ್ರ. ಈ ದರ್ಪ ತೋರಿಸುವವನು ವೈಸ್‌ರಾಯ್ ಮಾತ್ರವಲ್ಲ, ಆತನ ಮಂತ್ರಾಲೋಚನಾ ಸಭೆಯ ಸದಸ್ಯರು, ಗವರ್ನರುಗಳು, ಇಲಾಖೆಗಳ ಕಾರ್ಯದರ್ಶಿಗಳು ನ್ಯಾಯಾಧೀಶರು ಮುಂತಾದ ಪುಡಿಗಣಗಳು ಸಹ ತೋರಿಸು ತ್ತಾರೆ. ಇತರ ಕಳಪೆ ಜನರ ಭಾವನೆಗಳು ಏನೇ ಇರಲಿ, ಅಧಿಕಾರ ಮತ್ತು ಕೀರ್ತಿ ತಮ್ಮದಾದ್ದ ರಿಂದ ತಾವು ಹೇಳುವುದೆಲ್ಲ ವೇದವಾಕ್ಯ, ಅದೇ ಸರಿ, ಎಲ್ಲರೂ ಒಪ್ಪಲೇ ಬೇಕು ಎಂಬ ಮದಾಂಧತೆ ಯಿಂದ ಶ್ರೀಮದ್ಗಾಂಭೀರ್ಯದಿಂದ, ಔದ್ಧತ್ಯದಿಂದ ಮಾತನಾಡುತ್ತಾರೆ.

ವೈಸರಾಯನ ಮಂತ್ರಾಲೋಚನಾ ಸಭೆಯ ಕೆಲವು ಸದಸ್ಯರು ನೇರವಾಗಿ ಇಂಗ್ಲೆಂಡಿನಿಂದ ಬಂದವರು; ಇನ್ನು ಕೆಲವರು, ಇಂಡಿಯನ್ ಸಿವಿಲ್ ಸರ್ವಿಸ್‌ಗೆ ಸೇರಿದವರು. ಇವರ ರೀತಿನೀತಿಗೂ ಮಾತಿಗೂ, ಸಿವಿಲ್ ಸರ್ವಿಸ್ ಅಧಿಕಾರಿಗಳ ನಡೆನುಡಿಗೂ ಎಷ್ಟೋ ವ್ಯತ್ಯಾಸವಿದೆ. ಅದೇ ಚೌಕಟ್ಟಿ ನೊಳಗೇ ಕೆಲಸಮಾಡಿದರೂ ಆ ಅಧಿಕಾರದರ್ಪ, ಸ್ವಪ್ರತಿಷ್ಠೆ, ಅಹಂಕಾರ ಅಷ್ಟು ಸುಲಭವಾಗಿ ಬರುವುದಿಲ್ಲ. ಇದೇ ರೀತಿ ಅವರ ಸಂಖ್ಯೆಯೂ ಮತ್ತು ಬುದ್ಧಿ ಶಕ್ತಿಯೂ ಎಷ್ಟೇ ಕಡಮೆ ಇರಲಿ ಈಚೆಗೆ ಮಂತ್ರಿ ಮಂಡಲವನ್ನು ಸೇರಿರುವ ಭಾರತೀಯ ಸದಸ್ಯರಲ್ಲಿ ಸಹ ಈ ಭಾವನೆ ಹುಟ್ಟುವುದು ಸುಲಭವಲ್ಲ. ಅಧಿಕಾರದ ಏಣಿಯಲ್ಲಿ ಭಾರತೀಯರ ಸ್ಥಾನ ಏನೆ ಇರಲಿ ಸಿವಿಲ್ ಸರ್ವಿಸಿನ ಭಾರತೀಯರ ಈ ಒಳಗುಂಪಿನಲ್ಲಿ ಸ್ಥಾನವಿಲ್ಲ. ಕೆಲವರೇನೋ ತಮ್ಮ ಬ್ರಿಟಿಷ್ ಸಹೋದ್ಯೋಗಿ ಗಳನ್ನು ಮಂಗಗಳಂತೆ ಅನುಕರಿಸಲು ಪ್ರಯತ್ನಪಡುತ್ತ ನೋಡುವವರಿಗೆ ಅಸಹ್ಯವಾಗಿ ಕಾಣು ತ್ತಾರೆ, ಹಾಸ್ಯಾಸ್ಪದರಾಗಿದ್ದಾರೆ

ಇಂಡಿಯನ್ ಸಿವಿಲ್ ಸರ್ವಿಸಿಗೆ ಈಚೆಗೆ ಬಂದ ಬ್ರಿಟಿಷ್ ಅಧಿಕಾರಿಗಳು ತಮ್ಮ ಭಾವನೆಯಲ್ಲಿ, ನಡೆನುಡಿಯಲ್ಲಿ ಹಿಂದಿನವರಿಗಿಂತ ಸ್ವಲ್ಪ ಭಿನ್ನರಿದ್ದಾರೆ. ಆ ಹಳೆಯ ಚೌಕಟ್ಟಿನಲ್ಲಿ ಹೊಂದಿಕೊಳ್ಳು ವದು ಅವರಿಗೆ ಕಷ್ಟ, ಆದರೂ ಅಧಿಕಾರ ಮತ್ತು ಆಡಳಿತ ನೀತಿ ಎಲ್ಲವೂ ಹಿರಿಯ ಅಧಿಕಾರವರ್ಗದ ಕೈಲಿರುವುದರಿಂದ ಏನೂ ವ್ಯತ್ಯಾಸ ತೋರುವುದಿಲ್ಲ. ಮಠಾಧಿಕಾರವನ್ನು ಒಪ್ಪಬೇಕು, ಇಲ್ಲವಾದರೆ ಎಷ್ಟೋ ಬಾರಿ ನಡೆದಿರುವಂತೆ ರಾಜಿನಾಮೆ ಕೊಟ್ಟು ಮನೆಗೆ ಹೋಗಬೇಕು.

ನಾನು ಹುಡುಗನಾಗಿದ್ದಾಗ, ಬ್ರಿಟಿಷರೇ ನಡೆಸುತ್ತಿದ್ದ ಭಾರತದ ಪತ್ರಿಕೆಗಳಲ್ಲೆಲ್ಲ ಅಧಿಕಾರಿ ವರ್ಗದ ಸುದ್ದಿ, ಅವರ ಬಾಯಿಂದ ಹೊರಬಿದ್ದ ಮುಕ್ತಾಫಲಗಳು, ಆಡಳಿತವರ್ಗದ ವರ್ತಮಾನ, ವರ್ಗಾವರ್ಗಿ, ಬಡ್ತಿ, ಆಂಗ್ಲಸಮಾಜದ ಘಟನೆಗಳು, ಪೋಲೋ, ಕುದುರೆ ಜೂಜು, ನೃತ್ಯ,

ನಾಟಕಾಭಿನಯ ಇವುಗಳೇ ತುಂಬಿರುತ್ತಿದ್ದವು. ಭಾರತದ ಜನರು, ಅವರ ರಾಜಕೀಯ, ಸಂಸ್ಕೃತಿ, ಸಾಮಾಜಿಕ ಅಥವ ಆರ್ಥಿಕ ಜೀವನದ ವಿಷಯ ಒಂದು ಮಾತೂ ಇರುತ್ತಿರಲಿಲ್ಲ. ಆ ವೃತ್ತಪತ್ರಿಕೆಗಳನ್ನು ಓದಿದರೆ ಭಾರತದಲ್ಲಿ ಭಾರತೀಯರೂ ಇದ್ದಾರೆ ಎಂಬ ಭಾವನೆಯು ಹುಟ್ಟುವುದೂ ಸಹ ಕಷ್ಟವಾಗಿತ್ತು.

ಮುಂಬೈಯಲ್ಲಿ ಹಿಂದೂಗಳು, ಮುಸ್ಲಿಮರು, ಪಾರ್ಸಿಗಳು, ಯೂರೋಪಿಯನರು ಈ ರೀತಿ ನಾಲ್ಕು ಪಂಗಡಗಳ ಮಧ್ಯೆ ಕ್ರಿಕೆಟ್ ಪಂದ್ಯ ನಡೆಯುತ್ತಿತ್ತು. ಯುರೋಪಿಯನ್ ಹನ್ನೊಂದು ಜನರೇ "ಮುಂಬೈ ಪ್ರಾಂತ್ಯ". ಇತರರು ಬರೀ ಹಿಂದೂಗಳು, ಮುಸ್ಲಿಮರು, ಪಾರ್ಸಿಗಳು. ಯಾರಾದರೂ ನೋಡಿದರೆ ಇತರರೇ ಪರಕೀಯರು, ಉದ್ದೇಶಪಟ್ಟು ಆ ರೀತಿ ಕರೆಸಿಕೊಳ್ಳುತ್ತಿದಾರೇನೊ ಎಂದು ಭಾಸವಾಗುತ್ತಿತ್ತು. ಈಗಲೂ ಈ ಚೌಪಂದ್ಯಗಳು ನಡೆಯುತ್ತಿವೆ. "ಮುಂಬೈ ಪ್ರಾಂತ್ಯ"ವು ಈಗ "ಯುರೋಪಿಯನ್" ಆಗಿದೆ.

ಭಾರತದಲ್ಲಿನ ಇಂಗ್ಲಿಷ್ "ಕ್ಲಬ್"ಗಳಿಗೆಲ್ಲ ಪ್ರಾದೇಶಿಕ ಹೆಸರುಗಳು. ಬಂಗಾಳ ಕ್ಲಬ್, ಇಲಾಹಾಬಾದ್ ಕ್ಲಬ್ ಇತ್ಯಾದಿ. ಅವುಗಳ ಸದಸ್ಯರೆಲ್ಲ ಬ್ರಿಟಿಷರು ಅಥವ ಯೂರೋಪಿಯನರು. ಪ್ರಾದೇಶಿಕ ಹೆಸರುಗಳನ್ನು ಇಡುವುದಕ್ಕಾಗಲಿ, ಅಥವ ಕೆಲವೇ ಜನರು ತಮ್ಮದೇ ಒಂದು "ಕ್ಲಬ್" ಮಾಡಿಕೊಂಡು ಪರಕೀಯರು ಯಾರೂ ಸೇರಲು ಅವಕಾಶವಿಲ್ಲವೆಂದು ಕಟ್ಟು ವಿಧಿಸಿಕೊಳ್ಳುವುದಕ್ಕಾಗಲಿ ಯಾವ ಆಕ್ಷೇಪಣೆಯೂ ಇಲ್ಲ. ಆದರೆ ಈ ರೀತಿ ಹೆಸರನ್ನು ಇಟ್ಟುಕೊಳ್ಳುವ ಪದ್ಧತಿಯು ತಾವೇ ನಿಜವಾದ ಭಾರತ, ಬಂಗಾಳ, ಇಲಾಹಾಬಾದ್ ಎಂಬ ಭಾವನೆಯಿಂದ ಹುಟ್ಟಿದ್ದು, ತಮ್ಮ ಸ್ಥಾನ ತಾವು ಅರಿತು ನಡೆದರೆ ಉಳಿದವುಗಳಿದ್ದರೂ ಇರಬಹುದು ಇಲ್ಲವಾದರೆ ಅವುಗಳಿಗೆ ಬಂತು ಹೊತ್ತು. ಯುರೋಪಿಯರನೇಕರ ಬಹಿಷ್ಕಾರಕ್ಕೆ ಒಂದೇ ಮುಟ್ಟದ ಸುಸಂಸ್ಕೃತ ಜನರ ವಿರಾಮ ಕಾಲದ ಆಟ ಮತ್ತು ವಿನೋದಗಳಲ್ಲಿ ಇತರರ ತೊಂದರೆ ಇರಬಾರದೆನ್ನುವುದಕ್ಕಿಂತ ಹೆಚ್ಚಾಗಿ ಜನಾಂಗ ದ್ವೇಷವೇ ಹಿನ್ನೆಲೆಯಾಗಿತ್ತು ಆಂಗ್ಲರು ಅಥವ ಯುರೋಪಿಯನರೇ ತಮ್ಮ ತಮ್ಮ "ಕ್ಲಬ್"ಗಳನ್ನು ಮಾಡಿಕೊಳ್ಳಲು ನನ್ನ ಅಡ್ಡಿಯಿಲ್ಲ; ಭಾರತೀಯರೂ ಹೆಚ್ಚು ಜನರು ಅಲ್ಲಿಗೆ ಹೋಗುವುದಿಲ್ಲ. ಆದರೆ ತಾವು ಅಧಿಕಾರ ವರ್ಗದವರು, ತಮಗೆ ಸಮಾನರಿಲ್ಲ, ತಮ್ಮ ಸಮೀಪ ಬರುವವರಿಲ್ಲ ಎಂಬ ದುರಭಿಮಾನದಿಂದ ಸಮಾಜದಿಂದ ದೂರವಿದ್ದರೆ ಆ ವಿಷಯವೇ ಬೇರೆಯಾಗುತ್ತದೆ. ಮಹಾರಾಜನಿರಲಿ ಉನ್ನತ ಕೈಗಾರಿಕೋದ್ಯಮಿ ಇರಲಿ ಭಾರತೀಯನಾದರೆ ಮೆಟ್ಟಲು ಸಹ ಹತ್ತಿಸದ ಕ್ಲಬ್ ಒಂದು ಮುಂಬೈಯಲ್ಲಿ ಇದೆ.

ಭಾರತದಲ್ಲಿ ಈ ಜನಾಂಗದ್ವೇಷವು ಕೇವಲ ಇಂಗ್ಲಿಷರಿಗೆ ಮತ್ತು ಭಾರತೀಯರಿಗೆ ಮಾತ್ರವಲ್ಲ, ಅದು ಯುರೋಪಿಯರ್, ಮತ್ತು ಏಷ್ಯನರಿಗೆ ಸಂಬಂಧಿಸಿದ್ದು. ಭಾರತದಲ್ಲಿ ಯುರೋಪಿಯನ್ ಜರ್ಮನ್ ಆಗಲಿ, ಪೋಲ್ ಆಗಲಿ, ರುಮೇನಿಯದವನಾಗಲಿ, ಯಾರೇ ಆಗಲಿ ಆಳರಸನಾಗುತ್ತಾನೆ. ರೈಲುಗಾಡಿಗಳಲ್ಲಿ, ನಿಲ್ದಾಣಗಳಲ್ಲಿ, ಉದ್ಯಾನವನಗಳಲ್ಲಿ "ಯುರೋಪಿಯನ್ನರಿಗೆ ಮಾತ್ರ" ಎಂಬ ಮೀಸಲು ಸ್ಥಾನಗಳು. ದಕ್ಷಿಣ ಆಫ್ರಿಕದಲ್ಲೋ ಅಥವ ಬೇರೆ ಎಲ್ಲಿಯೋ ಆದರೇನೆ ಸಹಿಸುವುದು ಕಷ್ಟ; ಆದರೆ ನಮ್ಮ ದೇಶದಲ್ಲೇ ಇದನ್ನು ಅನುಭವಿಸಬೇಕಾದ್ದು ನಮ್ಮ ಗುಲಾಮಗಿರಿಯನ್ನು ಕೆಣಕಿ ತೋರಿಸುವ ಚಿಹ್ನೆ.

ಈ ಜನಾಂಗ ಶ್ರೇಷ್ಠತೆ ಮತ್ತು ಸಾಮ್ರಾಜ್ಯ ಮದವು ಹೊರಗಡೆ ಸ್ವಲ್ಪ ಕಡಿಮೆಯಾಗುತ್ತಿದೆ ನಿಜ. ಆದರೆ ಪದೇ ಪದೇ ಏಳುತ್ತಿರುವ ನಿದರ್ಶನಗಳಿಂದ ಈ ಬದಲಾವಣೆಯು ಮೇಲೆಮೇಲೆ ಮಾತ್ರ ಮತ್ತು ಬಹು ನಿಧಾನ ಎನ್ನುವುದು ಕಾಣುತ್ತದೆ. ರಾಜಕೀಯದ ಒತ್ತಡ ಮತ್ತು ಕೊಚ್ಚಿ ನುಗ್ಗುವ ರಾಷ್ಟ್ರೀಯ ಭಾವನೆಯಿಂದ ಮೊದಲಿನ ಜನಾಂಗ ವೈರವೂ, ದಬ್ಬಾಳಿಕೆಯೂ ಬೇಗ ಕಡಮೆಯಾಗುತ್ತಿದೆ ನಿಜ. ಆದರೆ ಉಗ್ರರೂಪವನ್ನು ತಾಳಿದ ಆ ರಾಜಕೀಯ ಚಳವಳಿಯನ್ನು ಹತ್ತಿಕ್ಕಲು

ಪ್ರಯತ್ನಿಸಿದಾಗ ಹಳೆಯ ಸಾಮ್ರಾಜ್ಯ ವೈರ, ಜನಾಂಗ ವೈರ ಮತ್ತೊಮ್ಮೆ ಉಗ್ರರೂಪವನ್ನು ತಾಳುತ್ತವೆ.

ಆಂಗ್ಲರು ಸೂಕ್ಷ್ಮಸ್ವಭಾವದವರಾದಾಗ್ಯೂ ಪರದೇಶಗಳಿಗೆ ಹೋದಾಗ ಎಚ್ಚರ ತಪ್ಪುತ್ತಾರೆ. ಭಾರತದಲ್ಲಿ ಆಳರಸರೇ ಬೇರೆ ಪ್ರಜೆಗಳೇ ಬೇರೆ ಎಂಬ ಅಂತರವಿದ್ದು ಪರಸ್ಪರ ಸಂಪರ್ಕವು ಕಷ್ಟ ವಿರುವಾಗ ಈ ಪ್ರಜ್ಞಾವಿಹೀನತೆಯು ಇನ್ನೂ ಎದ್ದು ತೋರುತ್ತದೆ. ತಮಗೆ ಬೇಕಾದುದನ್ನು ಮಾತ್ರ ಕಂಡು ಉಳಿದುದಕ್ಕೆಲ್ಲ ಕುರುಡರಾಗಿರುವುದು ಉದ್ದೇಶಪೂರ್ವಕವೇನೋ ಎನಿಸುತ್ತದೆ. ಆದರೆ ಅಲಕ್ಷ್ಯಮಾಡಿ ಸತ್ಯವನ್ನು ಮರೆಮಾಚಲು ಸಾಧ್ಯವಿಲ್ಲ; ಸತ್ಯದ ಎದುರು ನಿಲ್ಲಬೇಕಾದ್ದು ಅನಿ ವಾರ್ಯವಾದಾಗ ಮನಸ್ಸಿನಲ್ಲೊಂದು ತಳಮಳ; ಏನೋ ಒಂದು ಮೋಸ ನಡೆದು ಆಗಬಾರದ್ದು ಆದುದಕ್ಕೆ ವ್ಯಸನ.

ಜಾತಿಗಳ ಜಟಿಲತೆಯ ಈ ದೇಶದಲ್ಲಿ ಬ್ರಿಟಿಷರು, ಅದರಲ್ಲೂ ಇಂಡಿಯನ್ ಸಿವಿಲ್ ಸರ್ವಿಸಿನ ವರು, ಈರೀತಿ ತಮ್ಮದೇ ಒಂದು ಕಠಿಣವೂ ಪ್ರತ್ಯೇಕವೂ ಆದ ಜಾತಿಯನ್ನು ನಿರ್ಮಿಸಿಕೊಂಡಿದ್ದಾರೆ. ಅದೇ ಆಯಕಟ್ಟಿನೊಳಗೆ ಅದೇ ವೇಷಭೂಷಣವಿದ್ದರೂ ಆ ತಂಡದ ಭಾರತೀಯರಿಗೆ ಆ ಜಾತಿಯಲ್ಲಿ ಸ್ಥಾನವಿಲ್ಲ. ಸ್ವಪ್ರತಿಷ್ಠೆಯೇ ಅವರಿಗೊಂದು ಧರ್ಮವಾಗಿದೆ. ಆ ಧರ್ಮದ ಹಿಂದೆ ಒಂದುಬಗೆಯ ಇತಿಹಾಸವೂ ಬೆಳೆದು ಬಂದು ಅದಕ್ಕೆ ಒಂದು ಅಸ್ತಿತ್ವವನ್ನು ಕೊಟ್ಟಿದೆ. ಈ ಧಾರ್ಮಿಕ ಮನೋ ವೃತ್ತಿಯೂ ಕೇಂದ್ರೀಕೃತ ಅಧಿಕಾರವೂ ಎರಡೂ ಅದರ ಸುತ್ತ ಭದ್ರವಾದ ಕೋಟೆಯನ್ನು ಕಟ್ಟಿವೆ. ಅದನ್ನು ಎದುರಿಸುವುದೆಂದರೆ ಕೊಳ್ಳಿಯಿಂದ ತಲೆ ತುರಿಸಿಕೊಂಡಂತೆ.

### ೨. ಬಂಗಾಳದ ಲೂಟಿಯಿಂದ ಇಂಗ್ಲೆಂಡಿನ ಕೈಗಾರಿಕೋದ್ಯಮ ಪ್ರಗತಿ.

೧೭ ನೆಯ ಶತಮಾನದ ಆರಂಭದಲ್ಲಿ ಸೂರತ್ ನಗರದಲ್ಲಿ ಒಂದು ಕಾರ್ಖಾನೆ ನಡೆಸಬಹು ದೆಂದು ಮೊಗಲ ಚಕ್ರವರ್ತಿಯಿಂದ ಈಸ್ಟ್ ಇಂಡಿಯ ಕಂಪೆನಿಗೆ ಅನುಮತಿ ದೊರೆಯಿತು. ಕೆಲವು ವರ್ಷಗಳ ನಂತರ ದಕ್ಷಿಣದಲ್ಲಿ ಸ್ವಲ್ಪ ಭೂಮಿಯನ್ನು ಕೊಂಡು ಕಂಪೆನಿಯವರು ಮದರಾಸಿನಲ್ಲಿ ಬೇರು ಬಿಟ್ಟರು. ೧೬೬೨ರಲ್ಲಿ ಮುಂಬೈ ದ್ವೀಪವು ಇಂಗ್ಲೆಂಡಿನ ಎರಡನೆಯ ಚಾರ್ಲ್ಸ್‌ಗೆ ಬಳುವಳಿಯಾಗಿ ಬಂದು ಅದನ್ನು ಆತನು ಕಂಪೆನಿಗೆ ಕೊಟ್ಟನು. ೧೬೯೦ರಲ್ಲಿ ಕಲ್ಕತ್ತ ನಗರವನ್ನು ಸ್ಥಾಪಿಸಿದರು. ಈ ರೀತಿ ೧೭ನೆಯ ಶತಮಾನ ಮುಗಿಯುವುದರ ಒಳಗೆ ಬ್ರಿಟಿಷರು ಅಲ್ಲಲ್ಲಿ ಕಾಲೂರಿ ಭಾರತದ ಸಮುದ್ರ ತೀರದಲ್ಲಿ ಕೆಲವು ಕೋಟೆಗಳನ್ನು ಕಟ್ಟಿಕೊಂಡರು. ಕ್ರಮೇಣ ನಿಧಾನವಾಗಿ ದೇಶದ ಒಳಗೆ ಹರಡಿದರು. ೧೭೫೭ರಲ್ಲಿ ನಡೆದ ಪ್ಲಾಸಿಕದನದಿಂದ ಒಂದು ದೊಡ್ಡ ಭೂಪ್ರದೇಶವು ಅವರ ಅಧೀನ ವಾಯಿತು. ಇನ್ನು ಕೆಲವು ವರ್ಷಗಳಲ್ಲಿ ವಂಗದೇಶ, ಬಿಹಾರ, ಒರಿಸ್ಸ ಮತ್ತು ಪೂರ್ವದ ತೀರ ಪ್ರದೇಶಗಳು ಅವರ ಅಧೀನವಾದವು. ಮುಂದಿನ ದೊಡ್ಡ ಹೆಜ್ಜೆ ಎಂದರೆ ನಲವತ್ತು ವರ್ಷಗಳ ನಂತರ ೧೯ನೆಯ ಶತಮಾನದ ಆದಿಭಾಗದಲ್ಲಿ ದೆಹಲಿಯ ಹೆಬ್ಬಾಗಿಲಿಗೆ ಬಂದಾಗ; ೧೮೧೮ ರಲ್ಲಿ ಮರಾಠರು ಕೊನೆಯಬಾರಿ ಸೋತಾಗ ಮೂರನೆಯ ಹೆಜ್ಜೆ; ಸಿಕ್‌ಯುದ್ಧಗಳಾದ ನಂತರ ೧೮೪೯ರಲ್ಲಿ ನಾಲ್ಕನೆಯ ಹೆಜ್ಜೆ; ಈರೀತಿ ಎಲ್ಲವೂ ಅವರ ಅಧೀನವಾಯಿತು.

ಈರೀತಿ ಬ್ರಿಟಿಷರು ಮದರಾಸ್ ನಗರದಲ್ಲಿರುತ್ತ ಮೂರು ನೂರು ವರ್ಷಗಳಾದವು; ವಂಗದೇಶ ಬಿಹಾರಗಳನ್ನು ಆಳುತ್ತ ೧೮೭ ವರ್ಷಗಳಾದವು; ದಕ್ಷಿಣ ಭಾರತದ ಮೇಲೆ ಸ್ವಾಮ್ಯಪಡೆದು ೧೪೫ ವರ್ಷಗಳಾದವು; ಸಂಯುಕ್ತಪ್ರಾಂತ್ಯ, ಮಧ್ಯಪ್ರಾಂತ್ಯ, ಮತ್ತು ಪಶ್ಚಿಮ ಭಾರತವನ್ನು ಆಕ್ರಮಿಸಿ ೧೨೫ ವರ್ಷಗಳಾದವು; ಪಂಜಾಬಿಗೆ ಹೋಗಿ ೯೫ ವರ್ಷಗಳಾದವು (ಇದನ್ನು ಬರೆಯು ತ್ತಿರುವುದು ೧೯೪೪ರಲ್ಲಿ). ಸಣ್ಣ ಪ್ರದೇಶವಾದ ಮದರಾಸನ್ನು ಬಿಟ್ಟರೆ ಬಂಗಾಳಾದ ಆಕ್ರಮಣಕ್ಕೂ ಪಂಜಾಬಿನ ಆಕ್ರಮಣಕ್ಕೂ ಮಧ್ಯೆ ಸುಮಾರು ಒಂದು ನೂರು ವರ್ಷಗಳು ಮಾತ್ರ. ಈ ಮಧ್ಯೆ ಬ್ರಿಟಿಷರ ನೀತಿಯಲ್ಲೂ, ಆಡಳಿತರೀತಿಯಲ್ಲೂ ಅನೇಕ ಬದಲಾವಣೆಗಳಾದವು. ಇಂಗ್ಲೆಂಡಿನ

ತಭಿನ ಪರಿಸ್ಥಿತಿ ಮತ್ತು ಭಾರತದಲ್ಲಿ ಬ್ರಿಟಿಷರ ಶಕ್ತಿ ಸಂಘಟನೆಯೇ ಇದಕ್ಕೆ ಕಾರಣ. ಈ ವ್ಯತ್ಯಾಸಕ್ಕನುಗುಣವಾಗಿ ಮತ್ತು ಬ್ರಿಟಿಷರು ಅಧೀನಪಡಿಸಿಕೊಂಡ ರಾಜ ಮನೆತನಗಳ ನಡತೆಗನು ಗುಣವಾಗಿ ಬ್ರಿಟಿಷರು ಗೆದ್ದ ಪ್ರತಿಯೊಂದು ಭಾಗದ ಆಡಳಿತ ನೀತಿಯಲ್ಲಿ ವ್ಯತ್ಯಾಸವಿತ್ತು. ಬಹು ಸುಲಭವಾಗಿ ಗೆದ್ದ ಬಂಗಾಳದಲ್ಲಿ ಮುಸ್ಲಿಂ ಜಮೀನುದಾರರೇ ರಾಜಮನೆತನದವರಾದರು. ಅವರ ಶಕ್ತಿಯನ್ನು ಅಡಗಿಸುವುದೇ ಅಲ್ಲಿನ ನೀತಿಯಾಯಿತು. ಪಂಜಾಬಿನಲ್ಲಿ ಸಿಕ್ಕರಿಂದ ರಾಜ್ಯವನ್ನು ಕಸಿದುಕೊಂಡ ಕಾರಣ ಬ್ರಿಟಿಷರಿಗೂ ಮುಸ್ಲಿಮರಿಗೂ ಯಾವ ವೈಷಮ್ಯಕ್ಕೂ ಕಾರಣವಿರಲಿಲ್ಲ. ಭಾರತದಲ್ಲಿ ಬಹು ಭಾಗದಲ್ಲಿ ಮರಾಠರೇ ಬ್ರಿಟಿಷರ ಶತ್ರುಗಳಾಗಿದ್ದರು.

ಬ್ರಿಟಿಷರ ಆಡಳಿತದಲ್ಲಿ ಯಾವ ಯಾವ ಭಾಗಗಳು ಬಹುಕಾಲ ಇದ್ದವೊ ಅವೇ ಇಂದು ತೀರ ಬಡತನದಲ್ಲಿರುವ ಪ್ರಾಂತ್ಯಗಳು. ಬ್ರಿಟಿಷರ ಆಳ್ವಿಕೆಯ ಕಾಲಾವಧಿ ಹೆಚ್ಚಿದಂತೆ ಬಡತನವೂ ಹೇಗೆ ಹೆಚ್ಚಿದೆ ಎಂಬ ಪ್ರಮಾಣವನ್ನು ತೋರಿಸುವ ಒಂದು ನಕ್ಷೆಯನ್ನೇ ಸಿದ್ಧಮಾಡಬಹುದು. ಕೆಲವು ದೊಡ್ಡ ನಗರಗಳು ಅಥವ ಕೈಗಾರಿಕಾಕೇಂದ್ರಗಳು ಆ ಚಿತ್ರದಲ್ಲಿ ಯಾವ ವ್ಯತ್ಯಾಸವನ್ನೂ ಮಾಡ ಲಾರವು. ಒಟ್ಟಿನಲ್ಲಿ ಮುಖ್ಯ ಗಮನಿಸಬೇಕಾದ್ದು ಜನಸಾಮಾನ್ಯದ ಜೀವನ ಮಟ್ಟ. ಭಾರತದಲ್ಲಿ ಬಂಗಾಳ, ಬಿಹಾರ, ಒರಿಸ್ಸ ಮತ್ತು ಮದರಾಸಿನ ಕೆಲವು ಭಾಗಗಳು ಕಡುಬಡತನದಲ್ಲಿವೆ ಎಂಬುದು ನಿರ್ವಿವಾದ. ಜನತೆಯ ಜೀವನ ಮಟ್ಟ ಉತ್ತಮವಿರುವುದು ಪಂಜಾಬಿನಲ್ಲಿ. ಬ್ರಿಟಿಷರು ಬರುವ ಮೊದಲು ಬಂಗಾಳವು ಸಂಪತ್ಸಮೃದ್ಧಿಯಿಂದ ಅತ್ಯುನ್ನತ ಸ್ಥಿತಿಯಲ್ಲಿತ್ತು. ಈ ವ್ಯತ್ಯಾಸಕ್ಕೆ ಅನೇಕ ಕಾರಣಗಳಿರಬಹುದು. ಆದರೆ ಪರಿಸ್ಥಿತಿಯನ್ನು ಉತ್ತಮಗೊಳಿಸುವುದಕ್ಕೂ ಜನರಿಗೆ ಪ್ರಜಾಡಳಿತ ಪದ್ಧತಿಯನ್ನು ಕಲಿಸುವುದಕ್ಕೂ ವಿಶೇಷ ಶ್ರಮಪಡಲಾಯಿತೆಂದು ಬಡಾಯಿಕೊಚ್ಚುವ ಬ್ರಿಟಿಷರ ಬಂಗಾಳದಲ್ಲಿ ೧೮೭ ವರ್ಷಗಳ ಹಿಂದೆ ಐಶ್ವರ್ಯದಿಂದ ತುಂಬಿತುಳುಕುತ್ತಿದ್ದ ಸಂಪತ್ಸಮೃದ್ಧ ಬಂಗಾಳ ಇಂದು ಬಡತನದಲ್ಲಿ ಮುಳುಗಿ ಹಸಿವಿನಿಂದ ಸಾಯುವ ಜೀವಶವಗಳ ದೇಶವಾಗಿದೆ ಎನ್ನುವುದನ್ನು ಮರೆಯುವುದು ಕಷ್ಟ.

ಬ್ರಿಟಿಷರ ಆಳ್ವಿಕೆಯ ಪೂರ್ಣ ಅನುಭವ ಮೊದಲು ಅನುಭವಿಸಿದ್ದು ಬಂಗಾಳ. ಲೂಟಿಯಿಂದಲೇ ಆರಂಭವಾಯಿತು. ಜೀವಂತ ಬೇಸಾಯಗಾರನಿಂದ ಮಾತ್ರವಲ್ಲದೆ ಸತ್ತವರಿಂದ ಸಹ ಸುಲಿಗೆಮಾಡುವ ಜಮೀನು ಕಂದಾಯ ಪದ್ಧತಿಯು ಆಚರಣೆಗೆ ಬಂದಿತು. "ಕಾರ್ಟೆಜ್‌ನ ಸ್ಪ್ಯಾನಿಯರ್ಡ್ಸರ ಕಾಲ ದಲ್ಲಿ ಮತ್ತು ಪಿಜಾರೊ ಕಾಲದಲ್ಲಿ ಹಿಡಿದಿದ್ದ ಹೊನ್ನಿನ ಹುಚ್ಚನ್ನು ಸಹ ಮೀರಿಸಿದ ಹಣದ ಆಸೆ ಇಂಗ್ಲಿಷರನ್ನು ಆವರಿಸಿತು. ರಕ್ತ ಹೀರಿ ಹಣವಾಗುವವರೆಗೆ ಶಾಂತಿ ಎಂಬುದು ಬಂಗಾಳಕ್ಕೆ ದೊರೆಯಲಿಲ್ಲ. ಭಾರತದಲ್ಲಿ ಅನೇಕ ಕಾಲ ಇಂಗ್ಲಿಷರ ಈ ಹಣದ ಸುಲಿಗೆಯ ರಾಕ್ಷಸೀ ಕೃತ್ಯಕ್ಕೆ ಕ್ಲೈವ್ ಮುಖ್ಯಕಾರಣ" ಎಂದು ಇಂಗ್ಲಿಷ್ ಚರಿತ್ರೆಕಾರರಾದ ಎಡ್ವರ್ಡ್ ಥಾಮ್ಸನ್ ಮತ್ತು ಜಿ. ಟಿ. ಗ್ಯಾರಟ್ (Rise and Fulfilment of British Rule in India) ಹೇಳಿದ್ದಾರೆ. ಲಂಡನ್‌ನಲ್ಲಿ ಭಾರತ ಕಚೇರಿಯ ಎದುರು ಇರುವ ಶಿಲಾಪ್ರತಿಮೆ ಇದೇ ಸಾಮ್ರಾಜ್ಯ ನಿರ್ಮಾಣ ಕರ್ತೃವಾದ ಕ್ಲೈವನದು. ಅವನದು ಹಗಲು ದರೋಡೆಯಾಗಿತ್ತು. ಬಂಗಾಳ ದೇಶ ಕ್ಷಾಮಕ್ಕೆ ತುತ್ತಾ ಗುವ ವರೆಗೆ ಆ "ಚಿನ್ನದ ಗಿಡ" ಅಲುಗಿಸಿ ಸುಲಿಗೆ ಮಾಡಲಾಯಿತು. ಕೆಲವು ಕಾಲದ ನಂತರ ಇದನ್ನೇ 'ವ್ಯಾಪಾರ' ಎಂದು ಕರೆದರೂ ಕಾರ್ಯನೀತಿ ಮಾತ್ರ ಸುಲಿಗೆ. ಸರಕಾರವೇ ಈ 'ವ್ಯಾಪಾರ' ವಾಗಿತ್ತು; ವ್ಯಾಪಾರವೆಂದರೆ ಸುಲಿಗೆ. ಪ್ರಪಂಚದ ಇತಿಹಾಸ ಪರಂಪರೆಯಲ್ಲಿ ಇಂತಹ ದೃಶ್ಯಗಳು ಅತಿ ವಿರಳ. ಅನೇಕ ರೂಪಗಳಿಂದ, ಅನೇಕ ಹೆಸರಿನಿಂದ ಸುಲಿಗೆಯಾಯಿತು. ಇದು ನಡೆದದ್ದು ಕೆಲವು ವರ್ಷಗಳು ಮಾತ್ರವಲ್ಲ, ಅನೇಕ ತಲೆಮಾರುಗಳ ವರೆಗೆ ನಡೆಯಿತು. ಸುಲಿಗೆಯಿಂದ ಆರಂಭ ವಾದ ಕಾರ್ಯನೀತಿಗೆ ಆಮೇಲೆ ಒಂದು ನ್ಯಾಯದ ಸೋಗನ್ನು ತೊಡಿಸಿದರು. ಆರಂಭದ ಭಾರತದ ಬ್ರಿಟಿಷ್ ಆಡಳಿತಗಾರರಲ್ಲಿದ್ದ ಲಂಚ, ದುರಾಸೆ, ಪಕ್ಷಪಾತ, ಹಿಂಸೆ ಮತ್ತು ಹಣದ ಆಶೆಯನ್ನು ಅರ್ಥಮಾಡಿಕೊಳ್ಳುವುದು ಕಷ್ಟವಾಗುತ್ತದೆ. "ಇಂಗ್ಲಿಷ್ ಭಾಷೆಯ 'ಲೂಟ್' ಎಂಬ ಶಬ್ದ ಇಂಗ್ಲಿಷಿಗೆ

ಬಂದುದು ಹಿಂದೂಸ್ತಾನಿಯಿಂದ. ಇದು ಬಂಗಾಳಕ್ಕೆ ಮಾತ್ರ ಅನ್ವಯಿಸುವುದಿಲ್ಲ. ಬ್ರಿಟಿಷ್ ಭಾರತದ ಪೂರ್ವೇತಿಹಾಸವನ್ನು ಜ್ಞಾಪಿಸಿಕೊಂಡರೆ ಈ ರೀತಿಯ ಸುಲಿಗೆಯನ್ನು ಪ್ರಪಂಚದಲ್ಲಿ ಇನ್ನೆಲ್ಲೂ ಕಾಣಲಾರೆವು" ಎಂದು ಎಡ್ವರ್ಡ್ ಥಾಮ್ಸನ್ ಹೇಳುತ್ತಾನೆ.

ಇದರ ಮೊದಲ ಪರಿಣಾಮವೆಂದರೆ ೧೭೭೦ರಲ್ಲಿ ಕ್ಷಾಮ. ಬಂಗಾಳ ಮತ್ತು ಬಿಹಾರದಲ್ಲಿ ಮೂರರಲ್ಲಿ ಒಂದು ಭಾಗ ಜನ ಹಸಿವಿನಿಂದ ಮಡಿದರು ಆದರೆ ಇವೆಲ್ಲ ಪ್ರಗತಿಗಾಗಿ ! ಇಂಗ್ಲೆಂಡಿನ ಔದ್ಯೋಗಿಕ ಕ್ರಾಂತಿಗೆ ತಾನೇ ಕಾರಣವೆಂದು ಬಂಗಾಳ ಹೆಮ್ಮೆ ಪಡಬಹುದು "ಭಾರತದಿಂದ ಬಂದ ಐಶ್ವರ್ಯವು ರಾಷ್ಟ್ರದ ನಗದು ಹಣವನ್ನು ಹೆಚ್ಚಿಸಿ ಅದರ ಶಕ್ತಿಯನ್ನು ವೃದ್ಧಿಗೊಳಿಸಿದುದು ಮಾತ್ರ ವಲ್ಲ; ಹಣದ ಚಲಾವಣೆಯ ವೇಗವನ್ನೂ, ಸೌಲಭ್ಯವನ್ನೂ ಹೆಚ್ಚಿಸಿತು. ಪ್ಲಾಸಿ ಕದನವಾದ ಸ್ವಲ್ಪ ದಿನಗಳಲ್ಲಿಯೇ ಬಂಗಾಳದ ಲೂಟಿ ಲಂಡನ್‌ಗೆ ಬರಲಾರಂಭಿಸಿತು. ೧೭೭೦ ರಿಂದ ಔದ್ಯೋಗಿಕ ಕ್ರಾಂತಿಯು ಆರಂಭವಾಯಿತೆಂದು ಎಲ್ಲರೂ ಒಪ್ಪುವುದರಿಂದ, ತತ್‌ಕ್ಷಣವೇ ಅದರಿಂದ ಮಹತ್ವದ ಪರಿಣಾಮವಾಯಿತು. ಪ್ಲಾಸಿ ಯುದ್ಧವಾದುದು ೧೭೫೭ ರಲ್ಲಿ. ಅದರ ಪರಿಣಾಮದಂತೆ ಬೇರೆಲ್ಲಿಯೂ ಅಷ್ಟು ಬೇಗ ಪರಿಣಾಮವಾಗಿಲ್ಲ. ೧೭೬೦ ರಲ್ಲಿ 'ಹಾರುವಲಾಳಿ' (Flying Shuttle) ಯನ್ನು ಕಂಡು ಹಿಡಿದರು. ಲೋಹವನ್ನು ಕರಗಿಸಲು ಕಟ್ಟಿಗೆಯ ಬದಲು ಕಲ್ಲಿದ್ದಲು ಉಪಯೋಗಕ್ಕೆ ಬಂದಿತು. ೧೭೬೪ ರಲ್ಲಿ ಹಾರ್‌ಗ್ರೀವ್ಸ್ "ಸ್ಪಿನ್ನಿಂಗ್ ಜನ್ನಿ" ಯನ್ನು, ೧೭೭೯ ರಲ್ಲಿ ಕ್ರಾಮ್‌ಟನ್ "ಮ್ಯೂಲ್" ಎಂಬ ಯಂತ್ರವನ್ನೂ, ೧೭೮೫ ರಲ್ಲಿ ಕಾರ್ಟ್‌ರೈಟ್ "ಪವರ್‌ಲೂಮ್‌ನ್ನೂ ಮತ್ತು ೧೭೬೮ ರಲ್ಲಿ ವ್ಯಾಟ್ ಆವಿಯ ಯಂತ್ರವನ್ನೂ ಕಂಡು ಹಿಡಿದರು. ಈ ಯಂತ್ರಗಳೆಲ್ಲ ಕಾಲವ್ಯವ ಧಾನವನ್ನು ತಡೆಗಟ್ಟಲು ಸಹಾಯಕವಾದರೂ ನಿಜವಾಗಿ ವೇಗ ಇನ್ನೂ ಬಂದಿರಲಿಲ್ಲ. ಸಂಶೋಧನೆಗಳು ಸ್ವತಃ ಚಲನಾತ್ಮಕವಲ್ಲ. ಬೇರೊಂದು ಕೇಂದ್ರೀಕೃತ ಶಕ್ತಿಯು ಅದನ್ನು ಕಾರ್ಯ ಶಕ್ತ ಮಾಡಬೇಕು. ಈ ಶಕ್ತಿ ಇರುವುದು ಹಣಕ್ಕೆ ಮಾತ್ರ. ಭೂಗತವಾದ ನಿಧಿಯಲ್ಲಿ ಅಲ್ಲ ಆದರೆ ಚಲನಪೂರ್ಣ ಹಣದಲ್ಲಿ ಭಾರತದ ಐಶ್ವರ್ಯವು ಬಂದು, ಇಂಗ್ಲೆಂಡಿನ ಬಂಡವಾಳವನ್ನು ಹೆಚ್ಚಿ ಸುವವರೆಗೆ ಯಂತ್ರೋಪಕರಣಗಳನ್ನು ಉಪಯೋಗಿಸಿಕೊಳ್ಳುವ ಸಾಮರ್ಥ್ಯ ಇಂಗ್ಲೆಂಡ್‌ನಲ್ಲಿ ಇರ ಲಿಲ್ಲ. ಭಾರತದ ಲೂಟಿಯ ಹಣದಿಂದ ಬಂದಷ್ಟು ಲಾಭವು ಪ್ರಪಂಚದಲ್ಲಿ ಬೇರೆಲ್ಲೂ ಯಾವ ಬಂಡವಾಳಕ್ಕೂ ಬಂದಿಲ್ಲ. ಏಕೆಂದರೆ ಐವತ್ತು ವರ್ಷಗಳವರೆಗೆ ಇಂಗ್ಲೆಂಡಿನ ಜೊತೆಗೆ ಪೈಪೋಟಿ ನಡೆಸುವವರೇ ಇರಲಿಲ್ಲ" ಎಂದು ಅಮೆರಿಕೆಯ ಲೇಖಕ ಬ್ರುಕ್ ಆಡಮ್ಸ್ ಹೇಳುತ್ತಾನೆ.

### ೩. ಭಾರತದ ಕೈಗಾರಿಕೆಯ ನಾಶ ಮತ್ತು ವ್ಯವಸಾಯದ ಕ್ಷೀಣದಶೆ

ಭಾರತದ ಕೈಗಾರಿಕಾ ವಸ್ತುಗಳು, ಬಟ್ಟೆ, ಸಾಂಬಾರ ಮುಂತಾದ ಪದಾರ್ಥಗಳಿಗೆ ಯೂರೋಪಿ ನಲ್ಲಿ ಒಳ್ಳೆಯ ಗಿರಾಕಿಇದ್ದುದರಿಂದ ಪೂರ್ವ ದೇಶಗಳಿಂದ ಪಶ್ಚಿಮ ಯೂರೋಪಿಗೆ ಅವುಗಳನ್ನು ತರ ಲೆಂದೇ ಈಸ್ಟ್ ಇಂಡಿಯಾ ಕಂಪೆನಿ ಆರಂಭವಾದದ್ದು; ಮತ್ತು ಅದರ ಮುಖ್ಯ ವ್ಯಾಪಾರವೂ ಅದೇ ಆಗಿತ್ತು. ಇಂಗ್ಲೆಂಡಿನಲ್ಲಿ ಕೈಗಾರಿಕಾ ಕುಶಲತೆಯಲ್ಲಿ ನೂತನ ಪರಿವರ್ತನೆಗಳಾದೊಡನೆ ಹೊಸಬಗೆಯ ಕೈಗಾರಿಕಾ ಬಂಡವಾಳಗಾರರು ಹುಟ್ಟಿ ಈ ವ್ಯಾಪಾರ ನೀತಿಯನ್ನು ಬದಲಾಯಿಸಿದರು. ಬ್ರಿಟಿಷ್ ಪೇಟೆಗಳಲ್ಲಿ ಭಾರತದ ವಸ್ತುಗಳಿಗೆ ಕವಾಟಬಂಧನವಾಯಿತು. ಬ್ರಿಟಿಷ್ ಕೈಗಾರಿಕಾ ವಸ್ತುಗಳನ್ನು ಭಾರತದ ಪೇಟೆಗಳೊಳಗೆ ತುಂಬಲು ಉದ್ಯುಕ್ತರಾದರು. ಈ ಬಂಡವಾಳಗಾರರ ಪ್ರಾಬಲ್ಯದಿಂದ ಬ್ರಿಟಿಷ್ ಪಾರ್ಲಿಮೆಂಟ್ ಸಭೆಯು ಭಾರತದ ವಿಷಯದಲ್ಲೂ, ಈಸ್ಟ್ ಇಂಡಿಯ ಕಂಪೆನಿಯ ವಿಷಯದಲ್ಲೂ ಹೆಚ್ಚು ಆಸಕ್ತಿ ವಹಿಸಲಾರಂಭಿಸಿತು. ಆರಂಭದಲ್ಲಿ ಶಾಸನ ಬಲದಿಂದ ಭಾರತದ ಮಾಲುಗಳು ಬ್ರಿಟನ್ನಿನೊಳಗೆ ಬರದಂತೆ ತಡೆದರು. ಭಾರತದ ರಫ್ತು ವ್ಯಾಪಾರವೆಲ್ಲ ಈಸ್ಟ್

ಇಂಡಿಯ ಕಂಪೆನಿಯ ಕೈಯಲ್ಲೇ ಇದ್ದುದರಿಂದ ಈ ಬಹಿಷ್ಕಾರ ಶಾಸನದಿಂದ ಇಂಗ್ಲೆಂಡಿನ ಇತರ ವಿದೇಶ ವ್ಯಾಪಾರದ ಮೇಲೂ ಪರಿಣಾಮವಾಯಿತು. ಇದಲ್ಲದೆ ಭಾರತೀಯರ ಕೈಗಾರಿಕೆಗಳ ಮೇಲೆ ಅನೇಕ ನಿರ್ಬಂಧಗಳನ್ನು ಹಾಕಿ ಅವುಗಳನ್ನು ನಾಶಮಾಡಲು ಸರ್ವ ಪ್ರಯತ್ನವೂ ನಡೆಯಿತು. ಬ್ರಿಟಿಷ್ ಸಾಮಾನುಗಳು ಯಾವ ಸುಂಕವೂ ಇಲ್ಲದೆ ದೇಶದೊಳಗೆ ಪ್ರವೇಶಿಸಲು ಅವಕಾಶವಿದ್ದರೂ ಭಾರತದಲ್ಲೇ ತಯಾರಾದ ಸಾಮಾನುಗಳು ಒಂದು ಊರಿನಿಂದ ಇನ್ನೊಂದು ಊರಿಗೆ ಹೋಗಲು ಸುಂಕ ಕೊಡಬೇಕಾಯಿತು. ಭಾರತದ ಬಟ್ಟೆ ಕೈಗಾರಿಕೆಯು ನಾಶವಾಗಿ ಅಸಂಖ್ಯಾತ ನೇಕಾರರಿಗೆ, ಕುಶಲ ಕರ್ಮಿಗಳಿಗೆ ಕೆಲಸವಿಲ್ಲದಂತಾಯಿತು. ಬಂಗಾಳ ಮತ್ತು ಬಿಹಾರದಲ್ಲಿ ಬಹು ಬೇಗ ಕೈಗಾರಿಕೆ ಹಾಳಾಯಿತು; ಕ್ರಮೇಣ ಬ್ರಿಟಿಷರು ಪ್ರಚಲಿತರಾಗಿ ಪಸರಿಸಿದಂತೆ, ರೈಲುದಾರಿ ಮುಂದುವರಿದಂತೆ ಇತರ ಕಡೆಯೂ ಇದೇ ಅವರ ನೀತಿಯಾಯಿತು. ಹತ್ತೊಂಭತ್ತನೆಯ ಶತಮಾನದಲ್ಲೆಲ್ಲ ಈ ವಿನಾಶಕಾರ್ಯವು ನಡೆದು, ಕ್ರಮೇಣ ಹಡಗು ನಿರ್ಮಾಣ, ಲೋಹಗಳ ಕೈಗಾರಿಕೆ, ಗಾಜು, ಮತ್ತು ಕಾಗದ ನಿರ್ಮಾಣ ಮುಂತಾದ ಅನೇಕ ಕುಶಲ ಕರ್ಮಗಳು ನಾಶವಾದವು.

ಹೊಸ ಕೈಗಾರಿಕೋದ್ಯಮದ ರೀತಿಗೂ ಹಳೆಯ ರೀತಿಗೂ ಬಹಳ ವ್ಯತ್ಯಾಸವಿದ್ದುದರಿಂದ ಇದು ಅನಿವಾರ್ಯವೂ ಇತ್ತು. ಆದರೆ ರಾಜಕೀಯ ಮತ್ತು ಆರ್ಥಿಕ ಕಾರಣಗಳ ಬಲಾತ್ಕಾರವು ಈ ವಿನಾಶಕ್ಕೆ ಪುಟಕೊಟ್ಟಿತು. ಹೊಸ ಕೈಗಾರಿಕಾ ವಿಧಾನವನ್ನು ಆಚರಣೆಗೆ ತರಲು ಇಲ್ಲಿ ಯಾವ ಪ್ರಯತ್ನವೂ ನಡೆಯಲಿಲ್ಲ. ಹೊಸ ಪದ್ಧತಿಯು ಭಾರತದ ಒಳಗೆ ಬರದಂತೆ ಎಲ್ಲ ಪ್ರಯತ್ನವನ್ನೂ ಮಾಡಿ ಭಾರತದಲ್ಲಿ ಹೊಸ ಕೈಗಾರಿಕೆಗಳು ಬೆಳೆಯದಂತೆ ಮಾಡಿ ಭಾರತದ ಆರ್ಥಿಕ ಪ್ರಗತಿಯನ್ನು ತಡೆಗಟ್ಟಿದರು. ಯಾವ ಯಂತ್ರೋಪಕರಣವನ್ನೂ ಭಾರತದ ಒಳಗೆ ತರುವಂತೆ ಇರಲಿಲ್ಲ. ದೇಶದಲ್ಲಿ ಒಂದು ಆರ್ಥಿಕ ಶೂನ್ಯತೆಯುಂಟಾಗಿ ಬ್ರಿಟಿಷ್ ತಯಾರಿಕೆಯ ವಸ್ತುಗಳಿಗೆ ಒಳ್ಳೆಯ ಪೇಟೆ ದೊರೆಯಿತು ಇದರಿಂದ ದೇಶದಲ್ಲಿ ನಿರುದ್ಯೋಗವೂ ಬಡತನವೂ ಬೇರೂರಿತು. ಕೈಗಾರಿಕೋದ್ಯಮದ ಇಂಗ್ಲೆಂಡಿಗೆ ಭಾರತವು ಒಂದು ವ್ಯವಸಾಯದ ವಲಸೆದೇಶವಾಯಿತು ಇತಿಹಾಸ ಪ್ರಸಿದ್ಧವಾದ ಆಧುನಿಕ ಬ್ರಿಟಿಷ್ ಸಾಮ್ರಾಜ್ಯದ ಆರ್ಥಿಕ ನೀತಿಯು ತಳಹದಿಯು ಭಾರತವು ಇಂಗ್ಲೆಂಡಿಗೆ ಕಚ್ಚಾ ಪದಾರ್ಥಗಳನ್ನು ಒದಗಿಸಿ ಇಂಗ್ಲೆಂಡಿನ ಕೈಗಾರಿಕೆಗಳ ನಯ ಮಾಲುಗಳನ್ನು ಕೊಳ್ಳುವ ಪೇಟೆಯಾಗಿರಲೆಂದೇ ಇತ್ತು.

ಕುಶಲಕರ್ಮಿಗಳ ಜೀವನೋಪಾಯ ನಾಶವಾಗಿ ಲಕ್ಷಾಂತರ ಜನರು ನಿರುದ್ಯೋಗಿಗಳಾದರು. ಕೈಗಾರಿಕೆ ಮತ್ತು ವಸ್ತು ನಿರ್ಮಾಣ ಕಾರ್ಯದಲ್ಲಿ ತೊಡಗಿದ್ದ ಈ ಕೋಟ್ಯಂತರ ಜನರ ಪಾಡೇನು? ಎಲ್ಲಿಗೆ ಹೋಗಬೇಕು. ತಲೆತಲಾಂತರದಿಂದ ಬಂದ ಕಸಬು ಹಾಳಾಯಿತು. ಹೊಸ ಕಸಬು ಯಾವುದೂ ಕಾಣದಾಯಿತು. ಸಾಯುವುದು ಒಂದು ಮಾರ್ಗವಿತ್ತು. ದಿಕ್ಕು ತೋರದಾಗ ಅಸಹನೀಯ ಪರಿಸ್ಥಿತಿಯಿಂದ ಪಾರಾಗಲು ಈ ಒಂದು ಮಾರ್ಗ ಇದ್ದೇ ಇದೆ. ಕೋಟ್ಯಂತರ ಜನರು ಸಾವನ್ನೂ ಅಪ್ಪಿದರು. "ವ್ಯಾಪಾರದ ಇತಿಹಾಸದಲ್ಲಿ ಇಂತಹ ದುರ್ದೆಶೆಯನ್ನು ನಾನು ಎಲ್ಲಿಯೂ ಕಂಡಿಲ್ಲ. ನೇಕಾರರ ಎಲುಬುಗಳು ಭಾರತದ ಮೈದಾನಗಳನ್ನು ತುಂಬಿ ಸುಡುತ್ತಿವೆ" ಎಂದು ೧೮೩೪ರಲ್ಲಿ ಗೌರ್ನರ್ ಜನರಲ್ ಆಗಿದ್ದ ಆಂಗ್ಲೇಯ ಲಾರ್ಡ್ ಬೆಂಟಿಂಕ್ ಹೇಳುತ್ತಾನೆ.

ಆದರೂ ಎಷ್ಟೋ ಜನರು ಬದುಕಿಕೊಂಡರು. ವರ್ಷೇ ವರ್ಷೇ ಬ್ರಿಟಿಷ್ ನೀತಿಯು ದೇಶದ ಒಳಗೆ ಹರಡಿದಂತೆ ದೇಶದಲ್ಲಿ ನಿರುದ್ಯೋಗವೂ ಹೆಚ್ಚಿತು. ಈ ಕೋಟ್ಯಂತರ ಕುಶಲ ಕರ್ಮಿಗಳಿಗೆ ಕಸಬುದಾರರಿಗೆ ಕೆಲಸವಿಲ್ಲದೆ, ಕಸಬು ಇಲ್ಲದೆ, ತಮ್ಮ ಕುಲಕಸಬನ್ನು ಕಳೆದುಕೊಂಡು ಭೂಮಿಯೇ ಗತಿಯಾಯಿತು. ಆದರೆ ವ್ಯವಸಾಯಗಾರರ ಸಂಖ್ಯೆಯು ಆಗಲೇ ಮಿತಿಮೀರಿ ಬೆಳೆದಿತ್ತು; ಹೆಚ್ಚು ಜನರನ್ನು ಒಳಕೊಳ್ಳುವಂತೆ ಇರಲಿಲ್ಲ. ಆದ್ದರಿಂದ ಭೂಮಿಯ ಮೇಲಿನ ಹೊರೆ ಹೆಚ್ಚಾಗಿ, ಬಡತನವು ಹೆಚ್ಚಿ ಜನತೆಯ ಜೀವನಮಟ್ಟವು ಬಹಳ ತಗ್ಗಿತು ಈ ರೀತಿ ಕೋಟ್ಯಂತರ ಜನರು ಬಲಾತ್ಕಾರದಿಂದ ವ್ಯವಸಾಯವನ್ನು ಅವಲಂಬಿಸಿದ್ದರಿಂದ ವ್ಯವಸಾಯಕ್ಕೂ ಕೈಗಾರಿಕೆಗೂ ಇದ್ದ ಅಂತ

ರವು ವಿಪರೀತವಾಯಿತು. ಇತರ ಕೈಗಾರಿಕೆಗಳೂ, ಸಂಪದಭಿವೃದ್ಧಿಕಾರ್ಯಗಳೂ ಜನರಿಗೆ ದೊರೆಯದೆ ವ್ಯವಸಾಯವೇ ದೇಶದ ಮುಖ್ಯ ಕಸಬು ಆಯಿತು.

ಭಾರತವು ಹಳ್ಳಿಗಳ ನಾಡಾಯಿತು. ಕಳೆದ ಶತಮಾನದಲ್ಲಿ ಪ್ರತಿಯೊಂದು ಪ್ರಗತಿಪರ ದೇಶದಲ್ಲೂ ಜನರು ವ್ಯವಸಾಯ ಬಿಟ್ಟು ಕೈಗಾರಿಕೆಯನ್ನು ಅವಲಂಬಿಸಿದಾರೆ; ಹಳ್ಳಿಗಳಿಂದ ಪಟ್ಟಣಕ್ಕೆ ಹೋಗಿದ್ದಾರೆ. ಬ್ರಿಟಿಷರ ಕಾರ್ಯನೀತಿಯಿಂದ ಭಾರತದಲ್ಲ ತಿರುಗುಮುರುಗು ವ್ಯಾಪಾರವಾಯಿತು. ಅಂಕಿಅಂಶಗಳು ಕೈಗನ್ನಡಿಯಂತಿವೆ. ೧೯ನೆಯ ಶತಮಾನದ ಮಧ್ಯಭಾಗದಲ್ಲಿ ಶೇಕಡ ಐವತ್ತೈದರಷ್ಟು ಜನರು ವ್ಯವಸಾಯವನ್ನು ಅವಲಂಬಿಸಿದ್ದರು. ಈಚೆಗೆ ಯುದ್ಧಕ್ಕೆ ಮುಂಚೆ ಇದು ಶೇಕಡ ಎಪ್ಪತ್ತನಾಲ್ಕರಷ್ಟು ಇತ್ತು. ಯುದ್ಧಕಾಲದಲ್ಲಿ ಕೈಗಾರಿಕೆಗಳು ಹೆಚ್ಚಿದ್ದರೂ, ಜನಸಂಖ್ಯೆಯೂ ಹೆಚ್ಚಿರುವುದರಿಂದ ೧೯೪೧ರ ಜನಗಣತಿಯಂತೆ ವ್ಯವಸಾಯಗಾರರ ಸಂಖ್ಯೆ ಹೆಚ್ಚಿದೆ. ಸಣ್ಣಪಟ್ಟಣಗಳು ಕ್ಷೀಣಿಸಿ ಕೆಲವು ದೊಡ್ಡ ನಗರಗಳು ಬೆಳೆದಿವೆ. ಆದ್ದರಿಂದ ಭಾರತದ ಆರ್ಥಿಕಸ್ಥಿತಿ ಉತ್ತಮಗೊಂಡಿದೆ ಎಂದು ಯಾರೂ ಮೋಸ ಹೋಗಬಾರದು.

ಭಾರತದ ಜನಕೋಟಿಯ ಅವರ್ಣನೀಯ ಕಡುಬಡತನಕ್ಕೆ ಇದೇ ನಿಜವಾದ ಕಾರಣ, ಮುಖ್ಯ ಕಾರಣ; ಮತ್ತು ಅದು ಇತ್ತೀಚಿನದು. ರೋಗ, ನಿರಕ್ಷರತೆ ಮುಂತಾದ ಇತರ ಕಾರಣಗಳು ಈ ಬಡತನ, ಊಟಕ್ಕಿಲ್ಲದ ಉಪವಾಸ ಮತ್ತು ಅನಾರೋಗ್ಯದ ಪರಿಣಾಮಗಳು. ನಮ್ಮ ಜನಸಂಖ್ಯೆ ಮಿತಿಮೀರಿ ಏರುತ್ತಿರುವುದು ಒಂದು ದೌರ್ಭಾಗ್ಯ, ಸಾಧ್ಯವಾದೆಡೆಗಳಲ್ಲೆಲ್ಲ ಅದನ್ನು ತಡೆಗಟ್ಟಬೇಕು. ಆದರೂ ಇತರ ಅನೇಕ ಕೈಗಾರಿಕೋದ್ಯಮಿ ರಾಷ್ಟ್ರಗಳಿಗಿಂತ ಹೆಚ್ಚೇನೂ ಇಲ್ಲ. ವ್ಯವಸಾಯವೇ ಮುಖ್ಯ ಕಸಬಾಗಿ ಉಳ್ಳ ರಾಷ್ಟ್ರಕ್ಕೆ ಮಾತ್ರ ಹೆಚ್ಚು. ಸರಿಯಾದ ಆರ್ಥಿಕ ನೀತಿಯನ್ನು ಮುಂದಿಟ್ಟುಕೊಂಡು ದೇಶದ ಜನತೆ ದುಡಿದರೆ ದೇಶದ ಉತ್ಪತ್ತಿಯೂ ಸಂಪತ್ತೂ ಹೆಚ್ಚುವಂತೆ ಮಾಡಬಹುದು. ಈ ರೀತಿ ಜನಸಂಖ್ಯೆಯ ಒತ್ತಡವಿರುವುದು ಬಂಗಾಳಾ ಮತ್ತು ಗಂಗಾನದಿಯ ಮೈದಾನಗಳಲ್ಲಿ ಮಾತ್ರ; ಇತರ ಕಡೆ ಜನ ನಿಬಿಡವಾಗಿದೆ. ಭಾರತಕ್ಕಿಂತ ಬ್ರಿಟನ್‌ನಲ್ಲಿ ಜನಸಂಖ್ಯೆಯಒತ್ತಡವು ಎರಡರಷ್ಟು ಇದೆ.

ಕೈಗಾರಿಕೆಗೆ ಬಂದ ವಿಪತ್ತು ಕ್ರಮೇಣ ಭೂಮಿಯ ಹಿಡುವಳಿಗೂ ಆವರಿಸಿ ವ್ಯವಸಾಯಕ್ಕೂ ಶಾಶ್ವತ ಹಾನಿಯಾಯಿತು. ಹಿಡುವಳಿಗಳು ವಿಭಾಗವಾಗಿ ಆಗಿ ಊಹಿಸಲಾರದಷ್ಟು ಸಣ್ಣದಾಗುತ್ತ ಬಂದವು. ವ್ಯವಸಾಯಗಾರನ ಸಾಲವು ಹೆಚ್ಚಿ ಭೂಮಿಯೆಲ್ಲ ಸಾಲಗಾರನ ಪಾಲಾಯಿತು. ಭೂಮಿ ಇಲ್ಲದ ಕೂಲಿಗಳ ಸಂಖ್ಯೆಯು ಕೋಟಿಗಟ್ಟಲೆಗೇರಿತು. ಭಾರತದ ರಾಜ್ಯಭಾರವು ಕೈಗಾರಿಕೋದ್ಯಮಿ ಬಂಡವಾಳಗಾರರ ಕೈಯಲ್ಲಿ, ಅದರ ಆರ್ಥಿಕ ನೀತಿ ಬಂಡವಾಳ ಶಾಹಿಗಳ ಹಳೆಯ ನೀತಿ; ಅದು ಸಂಪದಭಿವೃದ್ಧಿಗೆ ಅನುಕೂಲವಿಲ್ಲದ ಉದ್ಯೋಗರಹಿತ ಹಳೆಯ ನೀತಿ. ಈ ರೀತಿ ಭಾರತವು ಆಧುನಿಕ ಕೈಗಾರಿಕೋದ್ಯಮಿ ಬಂಡವಾಳ ಶಾಹಿಯ ಕೈಗೊಂಬೆಯಾಯಿತು; ಆ ಬಂಡವಾಳ ಶಾಹಿ ಪದ್ಧತಿಯ ಅನುಕೂಲಗಳು ಯಾವುದೂ ಇಲ್ಲದೆ ಪ್ರತಿಕೂಲಗಳೆಲ್ಲಕ್ಕೂ ತುತ್ತಾಗಬೇಕಾಯಿತು.

ಕೈಗಾರಿಕಾ ಕ್ರಾಂತಿ ಪೂರ್ವದ ಆರ್ಥಿಕ ನೀತಿಯಿಂದ ಕೈಗಾರಿಕೋದ್ಯಮಿ ಬಂಡವಾಳ ಶಾಹಿ ಆರ್ಥಿಕ ನೀತಿಗೆ ಹೊಂದಿಕೊಳ್ಳಬೇಕಾದಾಗ ಜನತೆಯು ಹೆಚ್ಚು ಪ್ರಮಾಣದಲ್ಲಿ ಸಾವು ನೋವಿನ ಸಂಕಟಕ್ಕೀಡಾಗುತ್ತದೆ. ಈ ಬದಲಾವಣೆಯಿಂದ ಒದಗುವ ದುಷ್ಪರಿಣಾಮಗಳನ್ನು ಕಡಮೆ ಮಾಡಲು ಯಾವ ಪ್ರಯತ್ನವೂ ಯೋಜನೆಯೂ ಇಲ್ಲದೆ ಎಲ್ಲ ವೈಯಕ್ತಿಕ ಇಚ್ಛೆಯಿಂದ ನಡೆಯುವ ಆರಂಭದ ದಿನಗಳಲ್ಲಿ ಈ ಕಷ್ಟನಷ್ಟಗಳು ಇನ್ನೂ ಹೆಚ್ಚು. ಇಂಗ್ಲೆಂಡಿನಲ್ಲೂ ಈ ಕಷ್ಟ ಒದಗಿತು. ಆದರೆ ಪರಿವರ್ತನೆಯ ಕಾಲಾಂತರವು ಅತ್ಯಲ್ಪವಿದ್ದುದರಿಂದ ನಿರುದ್ಯೋಗಿಗಳಿಗೆ ಬೇಗ ಹೊಸ ಕೈಗಾರಿಕೆಗಳಲ್ಲಿ ಕೆಲಸ ದೊರೆಯಿತು. ಆದರೆ ಜನತೆಯ ಗೋಳು ಮತ್ತು ಸಂಕಟ ಕಡಮೆಯಾಯಿತೆಂದಲ್ಲ. ಅದಕ್ಕೆ ಪೂರ್ಣಾಹುತಿಯಾದವರೇ ಬೇರೆ. ಮುಖ್ಯವಾಗಿ ಭಾರತದ ಜನರು ಕ್ಷಾಮಡಾಮರ, ಸಾವುನೋವುಗಳಿಗೆ ಬಲಿಯಾಗಿ ಉಳಿದವರು ನಿರುದ್ಯೋಗಿಗಳಾದರು. ಪಶ್ಚಿಮ

ಯೂರೋಪಿನಲ್ಲಾದ ಯಂತ್ರೀಕರಣದ ಹೊರೆಯನ್ನೆಲ್ಲ ಹೊತ್ತು ಬಲಿಯಾದವರು ಯುರೋಪಿಯನ್ ರಾಷ್ಟ್ರಗಳ ಆಡಳಿತ ದಾಸ್ಯದಲ್ಲಿ ಸಿಕ್ಕಿ ಬಿದ್ದಿದ್ದ ಭಾರತ, ಚೀನ ಮತ್ತು ಇತರ ಪಾಶ್ಚಾತ್ಯ ದೇಶಗಳವರು.

ಇಷ್ಟೆಲ್ಲ ಭಾರತದ ಹಣವನ್ನು ನೂರಾರು ವರ್ಷಗಳಕಾಲ ದೋಚಿ ಲೂಟಿಮಾಡಿದರೂ, ಭಾರತದ ಕೈಗಾರಿಕೋನ್ನತಿಗೆ ಜನಬಲ, ಧನಬಲ, ಕಾರ್ಯಕೌಶಲ ಮತ್ತು ದಕ್ಷರಾದ ಆಡಳಿತವರ್ಗ ಬೇಕಾದ ಇವುಗಳ ಆವಶ್ಯಕತೆ ಇನ್ನೂ ಬೇಕಾದಷ್ಟು ಇದೆ. ೧೮೪೦ರಲ್ಲಿ ಬ್ರಿಟಿಷ್ ಪಾರ್ಲಿಮೆಂಟಿನ ಒಂದು ವಿಚಾರಣಾಸಮಿತಿಯ ಮುಂದೆ ಸಾಕ್ಷ್ಯಕೊಡುತ್ತ ಮಾಂಟ್ಗೊಮರಿ ಮಾರ್ಟಿನ್ ಎಂಬ ಇತಿಹಾಸ ಕಾರನು "ಇಂಡಿಯದಲ್ಲಿ ವ್ಯವಸಾಯವು ಎಷ್ಟು ಪ್ರಗತಿ ಪಡೆದಿದೆಯೋ ಕೈಗಾರಿಕೆಯೂ ಅಷ್ಟೇಪ್ರಗತಿ ಪಡೆದಿದೆ. ಅದನ್ನು ಕೇವಲ ವ್ಯವಸಾಯಾವಲಂಬಿಯಾಗಿ ಮಾಡಹೋದವನು ಅದರ ನಾಗರಿಕತೆಯ ಮಟ್ಟವನ್ನು ಕೆಳಗಿಳಿಸುತ್ತಾನೆ" ಎಂದಿದಾನೆ. ಬ್ರಿಟಿಷರು ಭಾರತದಲ್ಲಿ ನಿರಂತರ ಮನಃಪೂರ್ವಕ ವಾಗಿ ಮಾಡಿದ ಕೆಲಸವೆಂದರೆ ಇದೇನೆ. ಒಂದೂವರೆ ಶತಮಾನಗಳ ಕಾಲ ಭಾರತವನ್ನು ಆಳಿ ಪಡೆದ ಆನೀತಿಯ ಸಾರ್ಥಕತೆಯ ಫಲವೆಂದರೆ ಇಂದಿನ ಭಾರತದ ದುರ್ದೆಶೆ. ಭಾರತದಲ್ಲಿ ಆಧುನಿಕ ಕೈಗಾರಿಕಾಭಿವೃದ್ಧಿ ಆಗಬೇಕೆಂಬ ಕೂಗು ಎದ್ದಾಗ (ಈ ಕೂಗು ಕೊನೆಯಪಕ್ಷ ಒಂದುನೂರು ವರ್ಷ ವಾದರೂ ಹಿಂದಿನದು—ಭಾರತದ ಮುಖ್ಯ ಕಸಬು ವ್ಯವಸಾಯ, ವ್ಯವಸಾಯವನ್ನು ನಂಬಿಕೊಳು ವುದೇ ಕ್ಷೇಮ, ಕೈಗಾರಿಕೆಯು ಅಭಿವೃದ್ಧಿಯಾದರೆ ವ್ಯವಸಾಯ ಹಾಳಾಗುತ್ತದೆ ಎಂದು ವಾದಿಸು ತ್ತಾರೆ. ಬ್ರಿಟಿಷ್ ಕೈಗಾರಿಕೋದ್ಯಮಿಗಳು, ಅರ್ಥಶಾಸ್ತ್ರ ನೀತಿಜ್ಞರು ಭಾರತದ ರೈತನ ಮೇಲೆ ತೋರಿಸುವ ಈ ದಯೆ ನೋಡಿ ಆಶ್ಚರ್ಯವೆನಿಸುತ್ತದೆ. ಈ ದಯಾದೃಷ್ಟಿ ಮತ್ತು ಭಾರತದಲ್ಲಿನ ಬ್ರಿಟಿಷ್ ಸರಕಾರವು ರೈತನ ಹಿತಕ್ಕೆಂದು ತೋರುವ ಕರುಣೆಯನ್ನು ನೋಡಿದರೆ ಯಾವುದೋ ಒಂದು ಪ್ರಬಲ ಕ್ರೂರವಿಧಿ ಅವರ ಈ ನೀತಿಗೆ ಪ್ರತಿಕೂಲವಿದ್ದು ಭಾರತದ ರೈತನನ್ನು ಪ್ರಪಂಚದ ರೈತರಲ್ಲಿ ಕಡುಬಡವನನ್ನಾಗಿಮಾಡಿ ಅಧೋಗತಿಗೆ ತಳ್ಳಿರಬೇಕು ಎನಿಸುತ್ತದೆ.

ಈಗ ಭಾರತದಲ್ಲಿ ಕೈಗಾರಿಕಾ ಪ್ರಗತಿಯನ್ನು ವಿರೋಧಿಸುವವರು ಯಾರೂ ಇಲ್ಲ. ಕೈಗಾರಿ ಕೆಯ ಅಭಿವೃದ್ಧಿಗೆ ದೊಡ್ಡ ಪ್ರಮಾಣದ ಯೋಜನೆಯೊಂದನ್ನು ಸಿದ್ಧಗೊಳಿಸಿರುವಾಗ ಈಗಲೂ ನಮ್ಮ ಬ್ರಿಟಿಷ್ ಸ್ನೇಹಿತರು-ವ್ಯವಸಾಯ ಅಲಕ್ಷ್ಯಮಾಡಿದರೆ ಕೇಡು, ಪ್ರಥಮ ಸ್ಥಾನ ವ್ಯವಸಾಯಕ್ಕೆ ಕೊಡಬೇಕು ಎಂದು ಬುದ್ಧಿ ಹೇಳುತ್ತಿದ್ದಾರೆ. ಸ್ವಲ್ಪ ಬುದ್ಧಿ ಇರುವ ಯಾವ ಭಾರತೀಯನೂ ವ್ಯವಸಾಯವನ್ನಾಗಲಿ ಅದನ್ನೇ ನಂಬಿರುವ ಭಾರತದ ರೈತನನ್ನಾಗಲಿ ಮರೆಯುವಂತೆ ಇಲ್ಲ, ಅಲಕ್ಷ್ಯ ಮಾಡುವಂತೆ ಇಲ್ಲ. ಎಲ್ಲರಿಗಿಂತ ಹೆಚ್ಚಾಗಿ ಭಾರತವೆಂದರೆ ಭಾರತದ ರೈತ. ಆತನ ಪ್ರಗತಿ ಮತ್ತು ಉನ್ನತಿಯೇ ಭಾರತದ ಪ್ರಗತಿ. ಆದರೆ ವ್ಯವಸಾಯದಲ್ಲಿನ ನಮ್ಮ ಬಹುಕಷ್ಟತಮ ತೊಂದರೆಗಳಿಗೆಲ್ಲ ಕೈಗಾರಿಕೆಯಲ್ಲಿನ ನಮ್ಮ ಅವನತಿಯೇ ಕಾರಣ. ಎರಡನ್ನೂ ಬೇರೆಮಾಡಿ ಪರಿಹಾ ರೋಪಾಯ ಹುಡುಕಲು ಸಾಧ್ಯವಿಲ್ಲ. ಎರಡರ ಮಧ್ಯೆ ಇರುವ ಅಂತರವು ಕಡಮೆಯಾಗಬೇಕು.

ಕೈಗಾರಿಕಾ ಪ್ರಗತಿಸಾಧನೆಗೆ ಅವಕಾಶ ದೊರೆತಾಗಲೆಲ್ಲ ಭಾರತವು ಯಶಸ್ವಿಯಾಗಿ ಆಧುನಿಕ ಕೈಗಾರಿಕೆಗಳನ್ನು ಅಭಿವೃದ್ಧಿಗೊಳಿಸಿ ತನ್ನ ಸಾಮರ್ಥ್ಯ ತೋರಿಸಿದೆ. ಭಾರತದ ಬ್ರಿಟಿಷ್ ಸರಕಾ ರವೂ, ಬ್ರಿಟನ್ನಿನ ಬಂಡವಾಳಗಾರರೂ ಈ ಪ್ರಗತಿಯನ್ನು ಎಷ್ಟೇ ವಿರೋಧಿಸಿದರೂ ಅದನ್ನೆಲ್ಲ ಎದುರಿಸಿ ಪ್ರಗತಿಯನ್ನು ಸಾಧಿಸಿದೆ. ಭಾರತಕ್ಕೆ ಮೊದಲು ಅವಕಾಶ ದೊರೆತದ್ದು ೧೯೧೪-೧೮ರ ಮೊದಲನೆಯ ಪ್ರಪಂಚ ಯುದ್ಧದಲ್ಲಿ ಬ್ರಿಟಿಷ್ ಸಾಮಾನುಗಳು ಭಾರತಕ್ಕೆ ಬರಲು ದಾರಿ ಇಲ್ಲದಾಗ ಬ್ರಿಟಿಷರ ಕಾರ್ಯನೀತಿಯು ಬಹಳ ಸಹಾಯಕವಿಲ್ಲದಿದ್ದರೂ ಸ್ವಲ್ಪ ಲಾಭ ದೊರೆಯಿತು. ಅಲ್ಲಿಂದ ಈಚೆಗೆ ಕೈಗಾರಿಕೋದ್ಯಮದ ಪ್ರಗತಿಗೆ ವಿರೋಧವಿರುವ ಎಲ್ಲ ಅಡಚಣೆಗಳನ್ನೂ ತೆಗೆದುಹಾಕ ಬೇಕೆಂದೂ, ಪರದೇಶಗಳವರಿಗೆ ಕೊಟ್ಟಿರುವ ವಿಶೇಷ ಸೌಲಭ್ಯಗಳನ್ನು ನಿಲ್ಲಿಸಬೇಕೆಂದೂ ಸರಕಾರದ ಮೇಲೆ ಒತ್ತಾಯ ಮಾಡಲಾಗುತ್ತಿದೆ. ಸರಕಾರವು ಈ ತತ್ವವನ್ನು ಒಪ್ಪಿಕೊಂಡರೂ ಎಲ್ಲ ನಿಜವಾದ ಪ್ರಗತಿಗೆ ಅದರಲ್ಲೂ ಮೂಲ ಕೈಗಾರಿಕೆಗಳ ಪ್ರಗತಿಗೆ ಅಡ್ಡ ಬಂದಿದೆ. ೧೯೩೫ನೇ ರಾಜ್ಯಾಂಗ

ಶಾಸನದಲ್ಲಿ ಸಹ ಭಾರತದಲ್ಲಿನ ಬ್ರಿಟಿಷ್ ಕೈಗಾರಿಕೆಗಳಿಗೆ ಇರುವ ಹಕ್ಕುಬಾಧ್ಯತೆಗಳಿಗೆ ಭಾರತದ ಶಾಸನ ಸಭೆಗಳು ಅಡ್ಡಿ ಬರಲಾಗದೆಂದು ವಿಧಿಸಲಾಗಿದೆ. ಯುದ್ಧಪೂರ್ವದ ವರ್ಷಗಳಲ್ಲಿ ಮೂಲ ದೊಡ್ಡ ಕೈಗಾರಿಕೆಗಳನ್ನು ಆರಂಭಿಸಲು ಎಷ್ಟೇ ಪ್ರಯತ್ನಮಾಡಿದರೂ ಸರಕಾರದ ನೀತಿಯೂ ಅದಕ್ಕೆ ಅಡ್ಡ ಬಂದಿತು. ಆದರೆ ಯುದ್ಧದ ಆವಶ್ಯಕತೆಯಿಂದ ವಸ್ತುನಿರ್ಮಾಣಕಾರ್ಯವು ಅತ್ಯಗತ್ಯವಾದರೂ ಈ ಯುದ್ಧಕಾಲದಲ್ಲಿ ಸಹ ಸರಕಾರವು ಕೈಗಾರಿಕಾಪ್ರಗತಿಗೆ ಪುನಃ ಅಡ್ಡಿಬಂದುದು ಅತ್ಯಾಶ್ಚರ್ಯ. ಭಾರತದ ಕೈಗಾರಿಕಾಭಿವೃದ್ಧಿಯಲ್ಲಿ ಬ್ರಿಟಿಷರಿಗೆ ಇರುವ ವಿರೋಧವನ್ನು ಯುದ್ಧದ ಆವಶ್ಯಕತೆಯೂ ತಡೆಗಟ್ಟಲಾಗಲಿಲ್ಲ. ಕೈಗಾರಿಕೆಯು ಭಾರತದಲ್ಲಿ ಏನಾದರೂ ಸ್ವಲ್ಪ ಪ್ರಗತಿ ಹೊಂದಿದ್ದರೆ ಅದು ಕಾಲಸ್ಥಿತಿಯ ಆವಶ್ಯಕತೆಯಿಂದ. ಆದರೆ ಎಷ್ಟು ಆಗಬಹುದಾಗಿತ್ತೊ ಆ ದೃಷ್ಟಿಯಿಂದಲೂ, ಮತ್ತು ಇತರ ದೇಶಗಳಲ್ಲಿ ಆಗಿರುವ ಪ್ರಗತಿಯ ದೃಷ್ಟಿಯಿಂದಲೂ ನೋಡಿದರೆ ಇದು ಅತ್ಯಲ್ಪ.

ಬ್ರಿಟಿಷರ ಅನುಕೂಲತೆಗೆ ನೇರವಾಗಿ ಕೊಡುವ ಪೊಗದಿಗೆ ಪ್ರತಿಯಾಗಿ ಆಮದು ರಫ್ತಿನ ಮೇಲೆ ತೆರಿಗೆ, ಕೈಗಾರಿಕೋತ್ಪತ್ತಿಯ ಮೇಲೆ ಒಳ ತೆರಿಗೆ, ಹಣಕಾಸಿನ ಮತ್ತು ನಾಣ್ಯ ಚಲಾವಣೆಯ ನೀತಿಗಳು ಇರುವಂತೆ ಭಾರತದ ಕೈಗಾರಿಕಾ ಪ್ರಗತಿಗೆ ಆರಂಭದಲ್ಲಿನ ನೇರವಾದ ವಿರೋಧದ ಬದಲು ಇತ್ತೀಚಿನ ಅಪ್ರತ್ಯಕ್ಷ ವಿರೋಧವೂ ಬ್ರಿಟನ್ನಿಗೆ ಅಷ್ಟೇ ಫಲಕಾರಿಯಾಗಿವೆ.

ದೀರ್ಘಕಾಲದ ದಾಸ್ಯ ಮತ್ತು ಸ್ವಾತಂತ್ರ್ಯದ ಅಭಾವದಿಂದ ರಾಷ್ಟ್ರಕ್ಕೆ ಹಾನಿಯಾಗುತ್ತದೆ. ಅದರಲ್ಲಿ ತೀರ ಅನಿಷ್ಟ ಪರಿಣಾಮವೆಂದರೆ ನೈತಿಕ ಪತನ–ಜನತೆಯಲ್ಲಿ ಬೇರೂರುವ ಅನೀತಿ ಮತ್ತು ನಿರಾಶಾಭಾವನೆ. ಎದ್ದು ಕಂಡರೂ ಅದನ್ನು ಅಳೆಯುವುದು ಬಹು ಕಷ್ಟ. ಒಂದು ರಾಷ್ಟ್ರದ ಆರ್ಥಿಕ ಅವನತಿಯನ್ನು ಅಳೆಯುವುದು ಸುಲಭ. ಭಾರತದಲ್ಲಿನ ಬ್ರಿಟಿಷರ ಆರ್ಥಿಕ ನೀತಿಯನ್ನು ಗಮನಿಸಿದರೆ ಭಾರತದ ಇಂದಿನ ಬಡತನವು ಆ ನೀತಿಯ ಪರಿಣಾಮ ಎಂದು ಹೇಳಲು ಅನುಮಾನವಿಲ್ಲ. ಈ ಬಡತನ ಬಂದುದು ಯಾವ ಶಾಪದಿಂದಲೂ ಅಲ್ಲ. ಅದರ ಕಾರಣಗಳು ಸ್ಪಷ್ಟ ಇವೆ; ಇಂದಿನ ಅವನತಿ ಹೇಗೆ ಒದಗಿತೆಂಬುದೂ ಸ್ಪಷ್ಟವಿದೆ.

### ೪. ಪರರಾಷ್ಟ್ರದ ರಾಜಕೀಯ ಮತ್ತು ಆರ್ಥಿಕ ನೀತಿಗೆ ಭಾರತದ ಪ್ರಥಮ ದಾಸ್ಯ

ಭಾರತದಲ್ಲಿ ಬ್ರಿಟಿಷರ ಆಡಳಿತ ಸ್ಥಾಪನೆಯಿಂದ ಒಂದು ಸಂಪೂರ್ಣ ನೂತನ ಅನುಭವವಾಯಿತು. ಹಿಂದಿನ ಯಾವ ದಂಡೆಯಾತ್ರೆ ರಾಜಕೀಯ ಆರ್ಥಿಕ ವಿಪ್ಲವಗಳಿಗೂ ಇದನ್ನು ಹೋಲಿಸುವಂತೆ ಇಲ್ಲ. "ಭಾರತವನ್ನು ಹಿಂದೆ ಎಷ್ಟೋ ಜನರು ಜಯಿಸಿದ್ದರು. ಆದರೆ ದಂಡೆಯಾತ್ರೆ ಬಂದವರೆಲ್ಲ ಭಾರತದ ಗಡಿಯೊಳಗೇ ನೆಲಸಿ ಅದರ ಜನಜೀವನದ ಚೌಕಟ್ಟಿನಲ್ಲಿ ಹೊಂದಿಕೊಂಡರು (ಇಂಗ್ಲೆಂಡಿನಲ್ಲಿ ನಾರ್ಮನರಂತೆ ಅಥವ ಚೀನಾದಲ್ಲಿ ಮಂಚೂಗಳಂತೆ) ದೇಶದ ಸ್ವಾತಂತ್ರ್ಯವು ನಾಶವಾಗಲಿಲ್ಲ. ದೇಶದಾಸ್ಯವನ್ನು ಎಂದೂ ಅನುಭವಿಸಲಿಲ್ಲ. ಅಂದರೆ ಭಾರತದಿಂದಾಚೆ ಕೇಂದ್ರೀಕೃತವಾದ ಯಾವ ಆರ್ಥಿಕ ರಾಜಕೀಯ ಪದ್ಧತಿಯ ಬಂಧನಕ್ಕೂ ಸಿಕ್ಕಿರಲಿಲ್ಲ. ಮೂಲತಃ ಪರಕೀಯವಾದರೂ, ನಡತೆಯಲ್ಲೂ ಶಾಶ್ವತ ಪರಕೀಯವಾದ ಯಾವ ಆಡಳಿತ ವರ್ಗವೂ ಅಧಿಕಾರ ಮಾಡಿರಲಿಲ್ಲ."* ಹೊರಗಿನಿಂದ ಬಂದವರೂ ಇಲ್ಲಿಯವರೂ ಎಲ್ಲರೂ ಭಾರತದ ಸಾಮಾಜಿಕ ಮತ್ತು ಆರ್ಥಿಕ ಜೀವನದ ಐಕ್ಯತೆಯನ್ನು ಒಪ್ಪಿ ಚೌಕಟ್ಟಿನಲ್ಲಿ ತಾವೇ ಹೊಂದಿಕೊಳ್ಳಲು ಪ್ರಯತ್ನಪಟ್ಟರು. ಭಾರತದ ಭೂಗುಣಕ್ಕೆ ಪೂರ್ಣ ಹೊಂದಿಕೊಂಡು ಬೇರು ಬಿಟ್ಟು ತಾವೇ ಭಾರತೀಯರಾದರು. ಹೊಸ ಆಳರಸರ ಪರಿಯೇ ಬೇರೆ ಇತ್ತು. ಅವರ ನೆಲೆ ಬೇರೊಂದೆಡೆ. ಸಾಮಾನ್ಯ ಭಾರತೀಯರಿಗೂ ಅವರಿಗೂ ಕೂಡಿಸಲಾಗದ

* ಕೆ.ಎಸ್. ಷೆಲ್ವಂಕರ್, "ಇಂಡಿಯದ ಸಮಸ್ಯೆಗಳು" (ಪೆಂಗ್ವಿನ್ ಸ್ಪೆಷಲ್, ೧೯೪೩.)

ಅಪಾರ ಅಂತರ—ಸಂಸ್ಕೃತಿ, ದೃಷ್ಟಿ, ಆದಾಯ, ಜೀವನ ರೀತಿ ಎಲ್ಲದರಲ್ಲೂ ಅಜಗಜಾಂತರ. ಇಂಗ್ಲೆಂಡಿನಿಂದ ಆರಂಭದಲ್ಲಿ ಭಾರತಕ್ಕೆ ಬಂದ ಬ್ರಿಟಿಷರು ಇಂಗ್ಲೆಂಡಿನ ಸಂಪರ್ಕ ಬಿಟ್ಟು ಭಾರತದ ಜೀವನ ರೀತಿಯನ್ನೇ ಅವಲಂಬಿಸಿದರು. ಆದರೆ ಇದು ಕೇವಲ ತಾತ್ಕಾಲಿಕ. ಇಂಗ್ಲೆಂಡಿಗೂ, ಭಾರತಕ್ಕೂ ವಾಹನ ಸೌಕರ್ಯ ಅನುಕೂಲವಾದಂತೆ ಉದ್ದೇಶಪಟ್ಟು ಆ ಸಂಪರ್ಕವನ್ನೂ ನಾಶಮಾಡಿದರು. ಭಾರತೀಯರಿಂದ ಪ್ರತ್ಯೇಕವಾಗಿ ತನ್ನದೇ ಒಂದು ಉತ್ತಮ ಪ್ರಪಂಚದಲ್ಲಿ ಪ್ರತ್ಯೇಕವಿದ್ದು ಬ್ರಿಟಿಷ್ ಆಳರಸರ ಗೌರವ ಮತ್ತು ಪ್ರತಿಷ್ಠೆಯನ್ನು ಕಾಪಾಡಿಕೊಳ್ಳುವುದು ಅವಶ್ಯವೆಂದು ಪರಿಗಣಿಸಿದರು. ಎರಡು ಪ್ರಪಂಚಗಳಾದವು ಬ್ರಿಟಿಷ್ ಅಧಿಕಾರಿ ವರ್ಗದ ಪ್ರಪಂಚ, ಮತ್ತು ಭಾರತ ಜನಕೋಟಿಯ ಪ್ರಪಂಚ; ಪರಸ್ಪರ ತಾತ್ಪಾರ ಒಂದರ ವಿನಾ ಈ ಎರಡು ಪ್ರಪಂಚಕ್ಕೂ ಸಾಮಾನ್ಯವಾದುದು. ಏನೂ ಇರಲಿಲ್ಲ, ಪೂರ್ವದಲ್ಲಿ ವಿವಿಧ ಜನಾಂಗಗಳ ರಕ್ತ ಸಂಬಂಧ ಬೆಳೆದಿತ್ತು; ಒಂದೇ ಸ್ವತಂತ್ರ ರಾಷ್ಟ್ರಜೀವನದ ಚೌಕಟ್ಟಿನ ಒಳಗೆ ಅಡಕವಾಗಿದ್ದರು. ಈಗ ಜನಾಂಗಭೇದವು ಒಂದು ನೀತಿಯಾಯಿತು. ಬಲಿಷ್ಠ ಜನಾಂಗದ ಕೈಯೊಳಗಿನ ನಿರಂಕುಶ ರಾಜಕೀಯ ಮತ್ತು ಆರ್ಥಿಕ ಶಕ್ತಿಯಿಂದ ಈ ಜನಾಂಗ ವೈರ ಇನ್ನೂ ಹೆಚ್ಚಾಯಿತು.

ನೂತನ ಬಂಡವಾಳಶಾಹಿ ಪದ್ಧತಿಗೆ ಇಡೀ ಪ್ರಪಂಚವೇ ಮಾರು ಕಟ್ಟೆಯಾದ್ದರಿಂದ ಹೇಗೂ ಭಾರತದ ಆರ್ಥಿಕ ರಚನೆಯ ಮೇಲೆ ಅದರ ಪರಿಣಾಮ ಆಗಬೇಕಾಗಿತ್ತು. ಕಸಬಿನ ವಿಂಗಡ ಪದ್ಧತಿಯಮೇಲೆ ರಚಿತವಾಗಿದ್ದ ಸ್ವಯಂಪೂರ್ಣ ಗ್ರಾಮ ಜೀವನವು ಇದ್ದಂತೆಯೇ ಮುಂದುವರಿಯಲು ಸಾಧ್ಯವಿರಲಿಲ್ಲ. ಆದರೆ ಈ ಬದಲಾವಣೆಯು ಕ್ರಮಾನುಗತವಾಗಿ ಬರಲಿಲ್ಲ. ಏಕಾ ಏಕಿ ಒದಗಿ ಭಾರತೀಯ ಸಾಮಾಜಿಕ ಜೀವನದ ಆರ್ಥಿಕ ರಚನೆಯ ಮೂಲವನ್ನೇ ನಾಶಮಾಡಿತು. ಸಮಾಜದ ಅನುಮತಿ ಮತ್ತು ಆಡಳಿತಕ್ಕೆ ಒಳಪಟ್ಟು, ಜನತೆಯ ಸಾಂಸ್ಕೃತಿಕ ಸಂಪತ್ತಾಗಿ ಬಾಳಿ ಬಂದ ಆರ್ಥಿಕ ರಚನೆಯ ಮೇಲೆ ಎಲ್ಲಿಂದಲೋ ಬಂದ ಪರಾಡಳಿತದ ಬೇರೊಂದು ಪದ್ಧತಿಯು ಅತಿಕ್ರಮಣ ಮಾಡಿತು. ಪ್ರಪಂಚದ ಮಾರು ಕಟ್ಟೆಯಲ್ಲಿ ಭಾರತವು ಒಂದು ಭಾಗವಾಗಲಿಲ್ಲ; ಆದರೆ ಬ್ರಿಟಿಷ್ ಆರ್ಥಿಕ ನೀತಿಗೆ ಅಧೀನವಾದ ಒಂದು ಕೃಷಿಕ ದೇಶವಾಯಿತು.

ಭಾರತದ ಆರ್ಥಿಕ ನೀತಿಯ ತಳಹದಿಯಾದ ಗ್ರಾಮ ಜೀವನವು ನಾಶವಾಗಿ ಅದರ ಆರ್ಥಿಕ ಮತ್ತು ಆಡಳಿತ ಅಧಿಕಾರಕ್ಕೆ ಚ್ಯುತಿಬಂದಿತು. ಬ್ರಿಟಿಷ್ ಅಧಿಕಾರವರ್ಗದಲ್ಲಿ ಅತಿ ಶ್ರೇಷ್ಠನಾದ ಸರ್ ಚಾರ್ಲ್ಸ್ ಮೆಟ್ಕಾಫ್ ೧೮೩೦ ರಲ್ಲಿ ಈ ಗ್ರಾಮಾಡಳಿತ ಕ್ರಮವನ್ನು ವಿವರಿಸುತ್ತ "ಗ್ರಾಮಾಡಳಿತವು ಸ್ವಯಂಪೂರ್ಣ ಪ್ರಜಾಸತ್ತಾತ್ಮಕವಿದೆ. ತನಗೆ ಬೇಕಾದುದನ್ನೆಲ್ಲ ತಾನೇ ಒದಗಿಸಿಕೊಳ್ಳುತ್ತದೆ. ವಿದೇಶಾಂಗ ವ್ಯವಹಾರ ಅದಕ್ಕೆ ಸಂಬಂಧವಿಲ್ಲ. ಉಳಿದುದೆಲ್ಲ ನಶ್ವರವಿದ್ದರೂ ಇವು ಮಾತ್ರ ಶಾಶ್ವತ ಇವೆ. ಈ ಗ್ರಾಮ ಪಂಚಾಯತಿಗಳ ಸಮೂಹ ಒಂದೊಂದೂ ಒಂದೊಂದು ಪ್ರತ್ಯೇಕ ರಾಜ್ಯದಂತೆ ಇದ್ದು ಉತ್ತಮ ರೀತಿಯಲ್ಲಿ ಜನರ ಹಿತರಕ್ಷಣೆ ಮಾಡುತ್ತಿವೆ. ಜನರಿಗೆ ಬಹುಮಟ್ಟಿನ ವ್ಯಕ್ತಿ ಸ್ವಾತಂತ್ರ್ಯವೂ, ಆಡಳಿತ ಸ್ವಾತಂತ್ರ್ಯವೂ ಇದೆ." ಎಂದು ಹೇಳಿದ್ದಾನೆ.

ಗ್ರಾಮ ಕೈಗಾರಿಕೆಗಳ ನಾಶದಿಂದ ಈ ಗ್ರಾಮಾಡಳಿತ ಸಂಸ್ಥೆಗಳಿಗೆ ತುಂಬ ಪೆಟ್ಟು ಬಿತ್ತು. ವ್ಯವಸಾಯಕ್ಕೂ ಕೈಗಾರಿಕೆಗೂ ಇದ್ದ ಸಮತೂಕ ನಾಶವಾಯಿತು. ಕುಶಲ ಕರ್ಮಗಳ ವ್ಯವಸ್ಥೆಯೂ ಕುಸಿದುಬಿತ್ತು; ನಿರುದ್ಯೋಗಿಗಳಾದ ಅಸಂಖ್ಯಾತ ಜನರಿಗೆ ಜೀವನ ಮಾರ್ಗವನ್ನು ಕಲ್ಪಿಸುವುದು ಅಸಾಧ್ಯವಾಯಿತು. ಜಮಿನುದಾರಿ ಪದ್ಧತಿಯನ್ನು ಆಚರಣೆಗೆ ತಂದುದರಿಂದ ಭೂಮಿಯ ಒಡೆತನದ ಕಲ್ಪನೆಯೇ ಬೇರೆಯಾಗಿ ಆರ್ಥಿಕ ವ್ಯವಸ್ಥೆಗೆ ಇನ್ನೊಂದು ಬಲವಾದ ಪೆಟ್ಟು ಬಿತ್ತು. ಗ್ರಾಮದ ಭೂಮಿ ಎಲ್ಲವೂ ಗ್ರಾಮದ್ದಾಗಿತ್ತು, ಬೆಳೆದ ಬೆಳೆ ಮಾತ್ರ ರೈತನದಾಗಿತ್ತು. ಪ್ರಾಯಶಃ ಪೂರ್ಣ ಅರ್ಥವನ್ನು ಗ್ರಹಿಸದೆಯೊ, ಅಥವ ಬೇರೆ ಉದ್ದೇಶದಿಂದಲೋ ಇಂಗ್ಲಿಷ್ ಜಮಿನುದಾರ

ಪಂಗಡದ ಪ್ರತಿನಿಧಿಗಳಾದ ಬ್ರಿಟಿಷ್ ಗವರ್ನರುಗಳು ಇಂಗ್ಲೆಂಡಿನ ಜಮಿಾನುದಾರಿಯಂತೆ ಇಲ್ಲಿಯೂ ಅದೇ ಬಗೆಯ ಹಿಡುವಳಿ ಪದ್ಧತಿಯನ್ನು ಜಾರಿಗೆ ತಂದರು. ಮೊದಲು ಮೊದಲು ಕೆಲವು ವರ್ಷ ಕಂದಾಯ ವಸೂಲುಮಾಡಿ ಜವಾಬ್ದಾರಿ ಮಾತ್ರ ಇದ್ದ ಜಮಿಾನುದಾರರನ್ನು ನೇಮಕಮಾಡಿದರು. ಇದರಿಂದ ಗ್ರಾಮಸ್ಥರಿಗೆ ಭೂಮಿಯ ಮೇಲೆ ಮತ್ತು ಅದರಿಂದ ಬಂದ ಬೆಳೆಯ ಮೇಲೆ ಇದ್ದ ಅಧಿಕಾರವು ತಪ್ಪಿತು. ಗ್ರಾಮ ಜೀವನದ ಮುಖ್ಯ ಕೆಲಸ ಮತ್ತು ಆಸಕ್ತಿಯಾಗಿದ್ದ ಭೂವ್ಯವಸ್ಥೆಯು ಹೊಸದಾಗಿ ನೇಮಕವಾದ ಜಮಿಾನುದಾರನ ಸ್ವಂತ ಆಸ್ತಿಯಾಯಿತು. ಇದರಿಂದ ಗ್ರಾಮಜೀವನದಲ್ಲಿದ್ದ ಒಗ್ಗಟ್ಟು, ಸಮಷ್ಟಿ ಜೀವನ, ಗ್ರಾಮೋದ್ಯೋಗಗಳಲ್ಲಿ, ಗ್ರಾಮಸೇವೆಯಲ್ಲಿ ಇದ್ದ ಸಹಕಾರ ಎಲ್ಲಕ್ಕೂ ಸಂಚಕಾರ ಬಂದಿತು.

ಈ ಹೊಸಬಗೆಯ ಭೂಮಿಯ ಸ್ವಾಮ್ಯದ ಭಾವನೆಯಿಂದ ಒಂದು ದೊಡ್ಡ ಆರ್ಥಿಕ ವಿಪ್ಲವವೇ ಆಯಿತು; ಸಮಾಜದಲ್ಲಿದ್ದ ಸಹಕಾರ ಮತ್ತು ಸಮಷ್ಟಿ ಜೀವನದ ಭಾರತೀಯ ಕಲ್ಪನೆಯ ಬುಡಕ್ಕೆ ಬಲವಾದ ಪೆಟ್ಟು ಬಿತ್ತು ಬ್ರಿಟಿಷರಿಂದ ನಿರ್ಮಿತವಾಗಿ ಬಹಳ ಮಟ್ಟಿಗೆ ಬ್ರಿಟಿಷರ ಕೈಗೊಂಬೆಗಳಾದ ಜಮೀನುದಾರರ ಒಂದು ಹೊಸ ಜಾತಿಯು ಸೃಷ್ಟಿಯಾಯಿತು. ಹಳೆಯ ವ್ಯವಸ್ಥೆಯ ನಾಶದಿಂದ ಹೊಸ ಸಮಸ್ಯೆಗಳು ಎದ್ದವು. ಪ್ರಾಯಶಃ ಹಿಂದೂ ಮುಸಲ್ಮಾನರ ಹೊಸ ಸಮಸ್ಯೆ ಇಲ್ಲಿಂದ ಆರಂಭವಾಗುತ್ತದೆ. ಕಾಯಂ ಹಿಡುವಳಿ ಎಂಬ ಹೆಸರಿನಿಂದ ಬೀಹಾರ ಮತ್ತು ಬಂಗಾಳದಲ್ಲಿ ದೊಡ್ಡ ದೊಡ್ಡ ಜಮೀನುದಾರರುಗಳನ್ನು ಸೃಷ್ಟಿಮಾಡಿ ಜಮೀನುದಾರಿ ಪದ್ಧತಿಯನ್ನು ಆಚರಣೆಗೆ ತಂದರು. ಈ ಪದ್ಧತಿಯಲ್ಲಿ ಭೂಕಂದಾಯ ಮೊದಲೇ ನಿಗದಿಯಾದ್ದರಿಂದ ಹೆಚ್ಚಿಸಲು ಅವಕಾಶವಿಲ್ಲದೆ ಸರಕಾರಕ್ಕೆ ಇದು ಉಪಯುಕ್ತವಲ್ಲವೆಂದು ಕಂಡಿತು. ಆದ್ದರಿಂದ ಭಾರತದ ಇತರ ಕಡೆಗಳಲ್ಲಿ ಹಿಡುವಳಿಗಳನ್ನು ತಾತ್ಕಾಲಿಕವಾಗಿ ಮಾತ್ರ ಕೊಟ್ಟು ಮೇಲಿಂದ ಮೇಲೆ ಕಂದಾಯ ಏರಿಸುತ್ತ ಬಂದರು. ಕೆಲವು ಕಡೆಗಳಲ್ಲಿ ವ್ಯವಸಾಯಗಾರನೇ ಭೂಮಿಯ ಒಡೆಯನೂ ಆದನು. ಈ ಕಂದಾಯ ವಸೂಲಿಯ ಕಠಿಣತೆಯಿಂದ ಬಂಗಾಲದ ಭೂಮಿಯ ಮೂಲ ಮಾಲಿಕರೆಲ್ಲರೂ ಭಿಕಾರಿಗಳಾದರು; ಅವರ ಸ್ಥಾನದಲ್ಲಿ ಹಣವಂತರ ಹೊಸ ಪಂಗಡ ಒಂದು ನಿರ್ಮಾಣವಾಯಿತು. ಬಂಗಾಲದ ಜಮೀನುದಾರರಲ್ಲಿ ಬಹು ಸಂಖ್ಯಾತರು ಹಿಂದೂಗಳಾದರು; ರೈತರಲ್ಲಿ ಹಿಂದೂಗಳೂ ಇದ್ದರೂ ಮುಸ್ಲಿಮರೇ ಹೆಚ್ಚಾದರು.

ಬಹು ಸಂಖ್ಯೆಯ ರೈತರನ್ನು ಆಳುವುದಕ್ಕಿಂತ ಕೆಲವೇ ಜಮೀನುದಾರರನ್ನು ಆಳುವುದು ಸುಲಭವಾದ್ದರಿಂದ ತಮ್ಮ ದೇಶದ ಪದ್ಧತಿಯಂತೆ ಇಲ್ಲಿಯೂ ಜಮೀನುದಾರರನ್ನು ಸೃಷ್ಟಿಸಿದರು. ಆದಷ್ಟು ಬೇಗ ಆದಷ್ಟು ಹೆಚ್ಚು ತೆರಿಗೆಯನ್ನು ವಸೂಲು ಮಾಡುವುದೇ ಮುಖ್ಯ ಉದ್ದೇಶ. ಯಾವ ಜಮೀನುದಾರನಾಗಲಿ ಕಾಲಕ್ಕೆ ಸರಿಯಾಗಿ ತೆರಿಗೆ ಕೊಡದಿದ್ದರೆ ಅವನನ್ನು ತಳ್ಳಿಹಾಕಿ ಅವನ ಸ್ಥಾನದಲ್ಲಿ ಮತ್ತೊಬ್ಬನನ್ನು ಸೃಷ್ಟಿಸುತ್ತಿದ್ದರು. ಬ್ರಿಟಿಷರ ಹಿತರಕ್ಷಣೆಗೆ ಸಹಾಯಕವಾದ ಒಂದು ಪಂಗಡವನ್ನು ಕಟ್ಟಬೇಕಾಗಿತ್ತು. ತಮ್ಮ ಮೇಲೆ ಜನರು ಎಲ್ಲಿ ದಂಗೆ ಏಳುತ್ತಾರೋ ಎಂಬ ಭಯವು ಭಾರತದಲ್ಲಿನ ಬ್ರಿಟಿಷ್ ಅಧಿಕಾರಿಗಳಿಗೆ ಬಹಳವಿತ್ತು. ತಮ್ಮ ಕಾಗದ ಪತ್ರಗಳಲ್ಲಿ ಪದೇ ಪದೇ ಆ ವಿಷಯ ಬರೆದಿದ್ದಾರೆ. "ಜನರು ದಂಗೆ ಏಳದಂತೆ ಬಲವಾದ ರಕ್ಷಣೆ ಇಲ್ಲದಿದ್ದರೂ ಜಮೀನುದಾರಿ ಪದ್ಧತಿಯಿಂದ ಬ್ರಿಟಿಷ್ ಆಳ್ವಿಕೆಯು ಶಾಶ್ವತವಿರಲೆಂದು ಆಸಕ್ತಿಯುಳ್ಳ ಜಮೀನುದಾರರ ಪಂಗಡವು ನಿರ್ಮಾಣವಾಗಿದೆ; ಜನರು ಸಂಪೂರ್ಣವಾಗಿ ಅವರ ಹಿಡಿತದಲ್ಲಿದ್ದಾರೆ." ಎಂದು ಗವರ್ನರ್ ಜನರಲ್ ಲಾರ್ಡ್ ವಿಲಿಯಮ್ ಬೆಂಟಿಂಕ್ ೧೮೨೯ ರಲ್ಲಿ ಹೇಳಿದ್ದಾನೆ.

ಈ ರೀತಿ ಬ್ರಿಟಿಷ್ ಅಧಿಕಾರದೊಂದಿಗೆ ನಿಕಟಬಾಂಧವ್ಯವನ್ನಿಟ್ಟುಕೊಂಡು ಬ್ರಿಟಿಷರ ಅಧಿಕಾರವನ್ನೇ ಅವಲಂಬಿಸಿ ಹಕ್ಕುದಾರಿ ಪಡೆದ ಒಂದು ಹೊಸ ಪಂಗಡವನ್ನು ಸೃಷ್ಟಿಸಿಕೊಂಡು ಬ್ರಿಟಿಷರು ತಮ್ಮ ಆಳ್ವಿಕೆಯನ್ನು ಭದ್ರಪಡಿಸಿಕೊಂಡರು. ಗ್ರಾಮದ ಪಟೇಲ ಶಾನುಭೋಗರಿಂದ ಮೊದಲುಗೊಂಡು ಜಮಿಾನುದಾರರು ಮತ್ತು ರಾಜರುಗಳವರೆಗೆ ಒಂದು ಅಧಿಕಾರವರ್ಗವನ್ನೇ ಕಟ್ಟಿದರು.

ಈ ಆಡಳಿತವ್ಯವಸ್ಥೆಯ ಎರಡು ಮುಖ್ಯ ಅಂಗಗಳೆಂದರೆ ಭೂಕಂದಾಯ ಪದ್ಧತಿ ಮತ್ತು ಪೋಲೀಸ್ ಪಡೆ. ಪ್ರತಿಯೊಂದು ಜಿಲ್ಲೆಯಲ್ಲೂ ಕಲೆಕ್ಟರ್ ಅಥವಾ ಜಿಲ್ಲೆಯ ನ್ಯಾಯಾಧೀಶನೇ ಆಡಳಿತ ವರ್ಗದ ಸೂತ್ರಧಾರನಾದನು. ಆಡಳಿತಸೂತ್ರ, ನ್ಯಾಯವಿಮರ್ಶೆ, ಕಂದಾಯ ವಸೂಲಿ, ಮತ್ತು ರಕ್ಷಣೆ ಎಲ್ಲವೂ ಅವನಲ್ಲಿಯೇ ಕೇಂದ್ರೀಕೃತವಾಗಿ ಜಿಲ್ಲೆಯ ಸರ್ವಾಧಿಕಾರಿಯಾದನು. ಅಕ್ಕಪಕ್ಕದಲ್ಲಿ ಯಾವುದಾದರೂ ದೇಶೀಯ ಸಂಸ್ಥಾನಗಳಿದ್ದರೆ ಅವುಗಳಿಗೆ ಬ್ರಿಟಿಷರ ಪ್ರತಿನಿಧಿಯೂ ಅವನೇ.

ಇದರ ಮೇಲೆ ಭಾರತೀಯ ಸೈನ್ಯ; ಸೈನ್ಯದಲ್ಲಿ ಬ್ರಿಟಿಷರೂ ಭಾರತೀಯರೂ ಇದ್ದರೂ ಅಧಿಕಾರವೆಲ್ಲ ಬ್ರಿಟಿಷ್ ಅಧಿಕಾರಿಗಳ ಕೈಯಲ್ಲಿ. ೧೮೫೭ನೆ ದಂಗೆಯ ನಂತರ ಅನೇಕ ಬಾರಿ ಸೈನ್ಯವನ್ನು ಪುನರ್ವ್ಯವಸ್ಥೆಮಾಡಿ ಕೊನೆಗೆ ಅದು ಬ್ರಿಟಿಷ್ ಸೈನ್ಯದ ಒಂದು ಅಂಗವಾಯಿತು. ವಿವಿಧ ಪಂಗಡಗಳನ್ನು ತೃಪ್ತಿಗೊಳಿಸುವ ನೆಪದಲ್ಲಿ ಪ್ರಮುಖ ಸ್ಥಾನಗಳಲ್ಲಿ ಬ್ರಿಟಿಷ್ ಸೈನ್ಯವನ್ನೇ ಇಡಲಾಯಿತು. "ತಕ್ಕಷ್ಟು ಯೂರೋಪಿಯನ್ ಸೈನ್ಯವನ್ನೂ ಇಡುವುದರ ಜೊತೆಗೆ, ದೇಶೀಯ ಸೈನಿಕರಲ್ಲೆ ಒಬ್ಬರ ಮೇಲೊಬ್ಬರನ್ನು ಎತ್ತಿ ಕಟ್ಟಲಾಗಿದೆ" ಎಂದು ೧೮೫೯ರ ಅಧಿಕೃತವರದಿಯಿಂದ ಗೊತ್ತಾಗುತ್ತದೆ. ಈ ಸೈನ್ಯದ ಮುಖ್ಯ ಕೆಲಸ ದೇಶದ ಆಕ್ರಮಣ. "ಒಳರಕ್ಷಣೆ ಸೈನ್ಯ" ಎಂದು ಹೆಸರು; ಆದರೆ ಅವರಲ್ಲಿ ಬಹು ಸಂಖ್ಯಾತರು ಬ್ರಿಟಿಷರು. ಭಾರತದ ವೆಚ್ಚದಿಂದ ಗಡಿನಾಡು ಪ್ರಾಂತ್ಯವು ಬ್ರಿಟಿಷ್ ಅಧಿಕಾರಿಗಳಿಗೆ ಶಿಕ್ಷಣ ಕೇಂದ್ರವಾಯಿತು. ಭಾರತೀಯರೇ ಹೆಚ್ಚಾಗಿದ್ದ ಯೋಧಪಡೆಯನ್ನು ಬ್ರಿಟಿಷ್ ಸಾಮ್ರಾಜ್ಯದ ವಿಸ್ತರಣಕ್ಕಾಗಿ ಯುದ್ಧಮಾಡಲು ಹೊರಗೆ ಕಳುಹಿಸಿ, ಆ ವೆಚ್ಚವನ್ನೆಲ್ಲ ಭಾರತದ ಮೇಲೆ ಹೇರುತ್ತಿದ್ದರು. ಭಾರತೀಯ ಸೈನ್ಯವನ್ನು ಜನತೆಯೊಂದಿಗೆ ಬೆರೆಯದಂತೆ ಅದನ್ನು ಜನಸಾಮಾನ್ಯರಿಂದ ದೂರವಿಡುತ್ತಿದ್ದರು.

ಈ ರೀತಿ ಭಾರತವು ತನ್ನ ಆಕ್ರಮಣದ ಬ್ರಿಟಿಷರ ವೆಚ್ಚ, ಈಸ್ಟ್ ಇಂಡಿಯ ಕಂಪೆನಿ ತನ್ನನ್ನು ಬ್ರಿಟಿಷ್ ಸರಕಾರಕ್ಕೆ ಮಾರಿದ ವೆಚ್ಚ, ಬ್ರಿಟಿಷ್ ಸಾಮ್ರಾಜ್ಯವನ್ನು ಬರ್ಮ ಮುಂತಾದ ಕಡೆಗಳಲ್ಲಿ ವಿಸ್ತರಿಸಿದ ವೆಚ್ಚ, ಬ್ರಿಟಿಷ್ ಸೈನ್ಯವು ಆಫ್ರಿಕ, ಪರ್ಷಿಯ ಮುಂತಾದ ಕಡೆಗಳಲ್ಲಿ ಪ್ರವಾಸಮಾಡಿದ ವೆಚ್ಚ ಮತ್ತು ಭಾರತೀಯ ವಿರುದ್ಧ ರಕ್ಷಣೆಯ ವೆಚ್ಚ, ಈ ಎಲ್ಲವನ್ನೂ ತೆರಬೇಕಾಗಿ ಬಂದಿತು. ಬ್ರಿಟಿಷ್ ಬೊಕ್ಕಸಕ್ಕೆ ಬಿಡಿಕಾಸಿನ ವೆಚ್ಚವಿಲ್ಲದೆ ಸಾಮ್ರಾಜ್ಯ ಕಾರಣಗಳಿಗಾಗಿ ಸೈನ್ಯ ಮೂಲವಾಯಿತಲ್ಲದೆ, ಇಂಗ್ಲೆಂಡಿನಲ್ಲಿನ ಬ್ರಿಟಿಷ್ ಸೈನ್ಯದ ಶಿಕ್ಷಣದ ಒಂದು ಭಾಗದ ವೆಚ್ಚವನ್ನೂ ಹೊರಬೇಕಾಯಿತು; ಚೀನಾ, ಪರ್ಷಿಯದ ಬ್ರಿಟಿಷ್ ರಾಯಭಾರಿ ಕಛೇರಿಯ ವೆಚ್ಚ, ಇಂಗ್ಲೆಂಡಿನಿಂದ ಭಾರತಕ್ಕೆ ತಂತಿ ಹಾಕಿದ ವೆಚ್ಚ, ಮೆಡಿಟರೇನಿಯನ್ ಸಮುದ್ರದಲ್ಲಿನ ಬ್ರಿಟಿಷ್ ನಾವಿಕಾ ಪಡೆಯ ವೆಚ್ಚದ ಒಂದು ಭಾಗ, ಮತ್ತು ಲಂಡನ್‌ನಲ್ಲಿ ಟರ್ಕಿಯ ಸುಲ್ತಾನನಿಗೆ ಕೊಟ್ಟ ಔತಣದ ವೆಚ್ಚ ಸಹ ಭಾರತದ ಪಾಲಿಗೆ ಬಂದವು.

ರೈಲುಹಾಕುವದು ಎಷ್ಟೇ ಅವಶ್ಯವಿದ್ದರೂ, ಅದಕ್ಕಾಗಿ ಮಿತಿಮೀರಿ ಹಣವನ್ನು ವ್ಯಯಮಾಡಲಾಯಿತು. ಹಾಕಿದ ಬಂಡವಾಳದ ಮೇಲೆಲ್ಲ ಶೇಕಡ ೫ರಂತೆ ಬಡ್ಡಿಕೊಡಲು ಸರಕಾರವು ಭರವಸೆ ಕೊಟ್ಟಿತು. ಅಂದಾಜನ್ನಾಗಲಿ, ವೆಚ್ಚವನ್ನಾಗಲಿ ತನಿಖೆ ಮಾಡುವ ಪ್ರಮೇಯವಿರಲಿಲ್ಲ. ಎಲ್ಲ ಸಾಮಾನುಗಳನ್ನು ಕೊಳ್ಳುತ್ತಿದ್ದುದೂ ಇಂಗ್ಲೆಂಡಿನಲ್ಲೇ.

ಸರಕಾರದ ಆಡಳಿತ ವೆಚ್ಚದ ದುಂದುಗಾರಿಕೆಗೆ ಮಿತಿಯೇ ಇರಲಿಲ್ಲ. ಉನ್ನತ ಸ್ಥಾನಗಳೆಲ್ಲವೂ ಯುರೋಪಿಯನರಿಗೆ ಮೀಸಲು. ಆಡಳಿತ ವರ್ಗದಲ್ಲಿ ಭಾರತೀಯರಿಗೆ ಸ್ಥಾನದೊರೆಯಲು ಬಹು ಕಾಲ ಬೇಕಾಯಿತು; ಸ್ವಲ್ಪ ಸ್ಥಾನ ದೊರೆತದ್ದೆಂದರೆ ಇಪ್ಪತ್ತನೆಯ ಶತಮಾನದಲ್ಲಿ. ಇದರಿಂದ ಭಾರತೀಯರ ಕೈಗೆ ಅಧಿಕಾರ ಬರುವುದಕ್ಕೆ ಪ್ರತಿಯಾಗಿ ಬ್ರಿಟಿಷರ ಅಧಿಕಾರಕ್ಕೆ ಇನ್ನೂ ಬಲ ದೊರಕಿತು. ಮುಖ್ಯ ಸ್ಥಾನಗಳೆಲ್ಲ ಬ್ರಿಟಿಷರ ಕೈಯಲ್ಲೇ ಉಳಿದು ಭಾರತೀಯರು ಬ್ರಿಟಿಷ್ ಆಡಳಿತದ ಕೈಗೊಂಬೆಗಳಾದರು.

ಇದೆಲ್ಲದರ ಜೊತೆಗೆ ಭಾರತೀಯರಲ್ಲೇ ಒಂದು ಪಂಗಡವನ್ನು ಇನ್ನೊಂದು ಪಂಗಡದ ಮೇಲೆ

ಎತ್ತಿಕಟ್ಟಿ ಪರಸ್ಪರ ವೈಷಮ್ಯ ತರುವುದು ಬ್ರಿಟಿಷರ ಒಂದು ನಿರ್ದಿಷ್ಟ ಶಾಶ್ವತ ನೀತಿಯಾಯಿತು. ಮೊದಲು ಮೊದಲು ಈ ನೀತಿಯನ್ನು ತಾವೇ ಒಪ್ಪಿಕೊಂಡರು ಮತ್ತು ಸ್ರಾಮ್ರಾಜ್ಯ ಆಡಳಿತಕ್ಕೆ ಅದು ಸಹಜವೂ ಆಗಿತ್ತು. ರಾಷ್ಟ್ರೀಯ ಚಳವಳಿಯು ಬಲಗೊಂಡಂತೆ ಈ ನೀತಿಯು ಬಹು ನಯ ವಾಗಿ ಇನ್ನೂ ಉಗ್ರವಾಯಿತು, ಮತ್ತು ಮೇಲೆ ಈ ನೀತಿಯನ್ನು ನಿರಾಕರಿಸಿದರೂ ಒಳಗೊಳಗೇ ಅತಿಕ್ರೋಧದಿಂದ ಅದು ತುಂಬ ಹಾನಿಮಾಡಿತು.

ಇಂದಿನ ನಮ್ಮ ಸಮಸ್ಯೆಗಳೆಲ್ಲ ಬ್ರಿಟಿಷರ ಆಳ್ವಿಕೆಯ ಮತ್ತು ಕುಟಿಲ ನೀತಿಯ ಪ್ರತ್ಯಕ್ಷ ಪರಿಣಾಮಗಳು : ರಾಜರುಗಳು, ಅಲ್ಪ ಸಂಖ್ಯಾತರ ಪ್ರಶ್ನೆ, ವಿದೇಶಿ ಮತ್ತು ಭಾರತೀಯರ ಅನೇಕ ಬಂಡವಾಳಶಾಹಿ ಹಕ್ಕುಗಳು, ಕೈಗಾರಿಕೋದ್ಯಮದ ಕೊಲೆ, ವ್ಯವಸಾಯದ ಅಲಕ್ಷ್ಯ, ಸಮಾಜ ರಕ್ಷಣಾ ಶಾಖೆಗಳ ದುಃಸ್ಥಿತಿ, ಮತ್ತು ಇದೆಲ್ಲದರ ಮೇಲೆ ಜನರ ಕರುಣಾಜನಕ ಬಡತನ–ಎಲ್ಲವೂ ಆ ನೀತಿಯ ಫಲಗಳು. ಅವರ ವಿದ್ಯಾಭ್ಯಾಸ ನೀತಿ ಇನ್ನೂ ಅತ್ಯಾಶ್ಚರ್ಯಕರವಿದೆ. ಕೇ ಎಂಬಾ ತನು ಬರೆದಿರುವ "ಮೆಟ್ಕಾಫ್‌ನ ಜೀವನ ಚರಿತ್ರೆ" ಎಂಬ ಗ್ರಂಥದಲ್ಲಿ "ಭಾರತೀಯರಲ್ಲಿ ನಿರಾತಂಕ ಜ್ಞಾನ ಪ್ರಚಾರದ ಭಯವು ಆಳರಸರಿಗೆ ಒಂದು ದೊಡ್ಡ ಭೂತವಾಯಿತು. ಮುದ್ರಣ ಮಂದಿರ ಮತ್ತು ಬೈಬಲ್‌ಗಳನ್ನು ಕಂಡು ಮೈನಡುಗಿದ್ದರು. ಆ ಭಯದಿಂದ ಅವರ ಮೈನವಿರೇಳುತ್ತಿತ್ತು. ಭಾರತದ ಜನರು ಜ್ಞಾನಾಂಧಕಾರದಲ್ಲಿ ಮುಳುಗಿ ಕ್ರೂರ ಮೃಗಗಳಂತೆ ಜೀವಿಸಬೇಕೆಂದೇ ನಮ್ಮ ಆಗಿನ ನೀತಿಯಾಗಿತ್ತು. ನಮ್ಮ ಸರಕಾರಗಳಾಗಲಿ, ಸ್ವತಂತ್ರ ಸರಕಾರಗಳಾಗಲಿ ಎಲ್ಲಾದರೂ ಸ್ವಲ್ಪ ಜ್ಞಾನಪ್ರಚಾರ ಮಾಡಹೊರಟರೆ ಕೂಡಲೆ ಅದನ್ನು ಪ್ರಬಲವಾಗಿ ವಿರೋಧಿಸಿ ತಡೆಗಟ್ಟಲಾಗು ತ್ತಿತ್ತು" ಎಂದು ಹೇಳಿದ್ದಾನೆ.

ಸಾಮ್ರಾಜ್ಯತ್ವ ನಡೆಯಬೇಕಾದ್ದೇ ಹೀಗೆ, ಇಲ್ಲದೆ ಹೋದರೆ ಅದು ಸಾಮ್ರಾಜ್ಯವಾಗಿ ಉಳಿ ಯುವುದಿಲ್ಲ. ಆಧುನಿಕ ಕಾಲದ ಹಣಕಾಸಿನ ಸಾಮ್ರಾಜ್ಯತ್ವ ಹಿಂದಿನ ಕಾಲದ ಸಾಮ್ರಾಜ್ಯವಾದಿ ಗಳಿಗೆ ತಿಳಿಯದ ಹೊಸಬಗೆಯ ಆರ್ಥಿಕ ಸುಲಿಗೆಯನ್ನು ಕಲಿಸಿದೆ. ಭಾರತದಲ್ಲಿನ ಹತ್ತೊಂಭತ್ತ ನೆಯ ಶತಮಾನದ ಬ್ರಿಟಿಷರ ಆಡಳಿತ ನೀತಿಯಿಂದ ಯಾವ ಭಾರತೀಯನಾದರೂ ನೊಂದು ರೊಚ್ಚಿಗೇಳಬೇಕು ; ಆದರೂ ಅನೇಕ ವಿಷಯಗಳಲ್ಲಿ ಬ್ರಿಟಿಷರಿಗಿದ್ದ ಅದ್ಭುತ ಶಕ್ತಿಗೆ ಅದೊಂದು ನಿದರ್ಶನ; ಅದರಲ್ಲೂ ನಮ್ಮ ಅನೈಕ್ಯತೆ ಮತ್ತು ದೌರ್ಬಲ್ಯವನ್ನು ಉಪಯೋಗಿಸಿಕೊಂಡು ಲಾಭ ಪಡೆಯುವ ಶಕ್ತಿಗೆ. ದುರ್ಬಲರು, ಕಾಲಧರ್ಮಕ್ಕನುಗುಣವಾಗಿ ಮುಂದುವರಿಯಲು ಶಕ್ತಿ ಇಲ್ಲದವರು ತೊಂದರೆಗೀಡಾಗುವುದು ಖಂಡಿತ, ಮತ್ತು ತಮ್ಮನ್ನಲ್ಲದೆ ಪರರು ಯಾರನ್ನೂ ನಿಂದಿಸು ವಂತಿಲ್ಲ. ಅಂದಿನ ಪರಿಸ್ಥಿತಿಯಲ್ಲಿ ಬ್ರಿಟಿಷ್ ಸಾಮ್ರಾಜ್ಯತ್ವವೂ ಮತ್ತು ಅದರ ಎಲ್ಲ ಪರಿಣಾಮಗಳೂ ಅನಿವಾರ್ಯವಾದರೆ ಅದಕ್ಕೆ ಪ್ರಬಲವಾದ ವಿರೋಧ ಶಕ್ತಿ ಬೆಳೆಯುವುದೂ ಮತ್ತು ಈ ಎರಡು ಶಕ್ತಿಗಳಿಗೆ ಅಂತ್ಯ ಘರ್ಷಣೆಯಾಗುವುದೂ ಅನಿವಾರ್ಯವಾಯಿತು.

### ೫. ದೇಶೀಯ ಸಂಸ್ಥಾನಗಳ ಬೆಳವಣಿಗೆ

ರಾಜರುಗಳ ಅಥವಾ ದೇಶೀಯ ಸಂಸ್ಥಾನಗಳ ಸಮಸ್ಯೆಯು ಇಂದಿನ ನಮ್ಮ ಪ್ರಮುಖ ಸಮಸ್ಯೆಗಳಲ್ಲಿ ಒಂದು. ಈ ಬಗೆಯ ಸಂಸ್ಥಾನಗಳು ಪ್ರಪಂಚದಲ್ಲಿ ಇನ್ನೆಲ್ಲಿಯೂ ಇಲ್ಲ. ವಿಸ್ತಾರ ದಲ್ಲಿ, ರಾಜಕೀಯ ಮತ್ತು ಸಾಮಾಜಿಕ ಸ್ಥಿತಿಯಲ್ಲಿ ಒಂದೊಂದಕ್ಕೂ ವ್ಯತ್ಯಾಸ. ಅವುಗಳ ಸಂಖ್ಯೆ ೬೦೧. ಇವುಗಳಲ್ಲಿ ಹೈದರಾಬಾದ್, ಕಾಶ್ಮೀರ, ಮೈಸೂರು, ಬರೋಡ, ತಿರುವಾಂಕೂರು, ಗ್ವಾಲೀರ, ಇಂದೂರು, ಕೊಚ್ಚೀನ್, ಜಯಪುರ, ಜೋಧಪುರ, ಬಿಕನೀರ್, ಭೋಪಾಲ್, ಪತಿಯಾಲ ಇವು ಹದಿನೈದು ದೊಡ್ಡ ಸಂಸ್ಥಾನಗಳೆಂದು ಹೇಳಬಹುದು. ಆಮೇಲೆ ಕೆಲವು ಮಧ್ಯಮವರ್ಗದವು, ಇನ್ನು ಳಿದ ನೂರಾರು ಸಂಸ್ಥಾನಗಳು ತೀರಾ ಸಣ್ಣವು. ಭೂಪಟದಲ್ಲಿ ಗುಂಡು ಸೂಜಿಯ ಮೊನೆಯಷ್ಟೂ

ಕೆಲವಕ್ಕೆ ಸ್ಥಾನವಿಲ್ಲ. ಅವು ಇರುವುದೆಲ್ಲ ಕಾಥೇವಾಡ, ಪಶ್ಚಿಮ ಇಂಡಿಯ ಮತ್ತು ಪಂಜಾಬಿನಲ್ಲಿ.

ಈ ಸಂಸ್ಥಾನಗಳಲ್ಲಿ ಫ್ರಾನ್ಸಿನಷ್ಟು ದೊಡ್ಡದರಿಂದ ಹಿಡಿದು ಸಣ್ಣ ರೈತನ ಹಿಡುವಳಿ ವರೆಗೂ ವಿಸ್ತಾರ ವ್ಯತ್ಯಾಸ ಇದೆಯಲ್ಲದೆ ಇತರ ವ್ಯತ್ಯಾಸಗಳೂ ಇವೆ. ಮೈಸೂರು ಕೈಗಾರಿಕೆಯಲ್ಲಿ ಬಹಳ ಪ್ರಗತಿ ಪಡೆದಿದೆ. ಮೈಸೂರು, ತಿರುವಾಂಕೂರು ಮತ್ತು ಕೊಚ್ಚಿನ್ ವಿದ್ಯೆಯಲ್ಲಿ ಬ್ರಿಟಿಷ್ ಭಾರತಕ್ಕಿಂತ ಮುಂದೆ ಇವೆ.* ಆದರೆ ಅನೇಕ ಸಂಸ್ಥಾನಗಳು ಬಹಳ ಹಿಂದುಳಿದಿವೆ, ಕೆಲವಂತೂ ಕೇವಲ ಪಾಳೆಯಗಾರಿಕೆ. ಎಲ್ಲ ಕಡೆಯೂ ನಿರಂಕುಶಾಧಿಕಾರ. ಕೆಲವು ಕಡೆ ಚುನಾಯಿತ ಶಾಸನಸಭೆಗಳಿದ್ದರೂ ಅವುಗಳ ಅಧಿಕಾರ ಅಲ್ಪ. ಪ್ರಮುಖ ಸಂಸ್ಥಾನವಾದ ಹೈದರಾಬಾದಿನಲ್ಲಿ ಪ್ರಜೆಗಳಿಗೆ ಯಾವ ಮೂಲಭೂತ ಹಕ್ಕುಗಳೂ ಇಲ್ಲದೆ ನಿರಂಕುಶ ಪಾಳೆಯಗಾರಿಕೆ ತಾಂಡವವಾಡುತ್ತಿದೆ. ರಾಜಪುತಾನ ಮತ್ತು ಪಂಜಾಬಿನ ಸಂಸ್ಥಾನಗಳಲ್ಲೂ ಇದೇ ರೀತಿ. ಮೂಲಭೂತ ಹಕ್ಕುಗಳ ಅಭಾವವು ಎಲ್ಲ ಸಂಸ್ಥಾನಗಳಲ್ಲೂ ಸಾಮಾನ್ಯ ಪರಿಸ್ಥಿತಿ. ಸಂಸ್ಥಾನಗಳೆಲ್ಲವೂ ಒಂದು ಕಡೆಯಲ್ಲಿ ಇಲ್ಲ, ಭಾರತದ ದೇಶಾದ್ಯಂತವೂ ಹರಡಿ, ಸಂಸ್ಥಾನೇತರ ಭಾರತದಿಂದ ಸುತ್ತುವರಿಯಲ್ಪಟ್ಟ ದ್ವೀಪಗಳಂತಿವೆ. ಅನೇಕ ಸಂಸ್ಥಾನಗಳು ಅರೆಬರೆಯ ಆರ್ಥಿಕ ಸ್ವಾತಂತ್ರ್ಯದಿಂದ ಸಹ ಇರಲಾರವು. ಉಳಿದ ದೊಡ್ಡ ಸಂಸ್ಥಾನಗಳು ಸಹ ಸುತ್ತಲಿನ ಪ್ರಾಂತ್ಯಗಳ ಸಹಕಾರವಿಲ್ಲದೆ ಯಾವ ಆರ್ಥಿಕ ಸ್ವಾತಂತ್ರ್ಯವನ್ನೂ ಅನುಭವಿಸಲಾರವು. ಸಂಸ್ಥಾನಕ್ಕೂ, ಸಂಸ್ಥಾನೇತರ ಭಾರತಕ್ಕೂ ಆರ್ಥಿಕ ಘರ್ಷಣೆ ಉಂಟಾದರೆ ವ್ಯಾಪಾರವನ್ನು ಕಟ್ಟುಮಾಡಿ, ಕೇವಲ ಆರ್ಥಿಕ ದಿಗ್ಬಂಧನದಿಂದಲೇ ಆ ಸಂಸ್ಥಾನವನ್ನು ದಾರಿಗೆ ತರಬಹುದು. ಅತಿ ದೊಡ್ಡ ಸಂಸ್ಥಾನವನ್ನು ಸಹ ಪ್ರತ್ಯೇಕಿಸಿ ಒಂದು ಸ್ವತಂತ್ರ ರಾಜ್ಯವೆಂದು ನೋಡಲು ಸಾಧ್ಯವಿಲ್ಲ, ಸ್ವತಂತ್ರವಾಗಿ ಬಾಳಲು ಅವಕ್ಕೆ ಶಕ್ತಿಯಿಲ್ಲ, ಮತ್ತು ಅದರಿಂದ ಉಳಿದ ಭಾರತಕ್ಕೂ ಅಪಾರ ಹಾನಿ. ಭಾರತಾದ್ಯಂತ ಶತ್ರುಗಳ ಪಾಳೆಯಗಳಾಗುತ್ತವೆ; ತಮ್ಮ ರಕ್ಷಣೆಗೆಂದು ಹೊರಗಿನ ಯಾವ ಶಕ್ತಿಯನ್ನು ಅವಲಂಬಿಸಿದರೂ ಸ್ವತಂತ್ರ ಭಾರತಕ್ಕೆ ಅದು ಸದಾ ಮಹಾ ವಿಪತ್ತು. ಸಂಸ್ಥಾನಗಳನ್ನೂ ಒಳಗೊಂಡ ಅಖಂಡ ಭಾರತದ ರಾಜಕೀಯ ಮತ್ತು ಆರ್ಥಿಕ ನೀತಿಯ ಒಂದು ಪರಮಾಧಿಕಾರದ ಅಧೀನದಲ್ಲಿ ಇಲ್ಲದೆ ಇದ್ದರೆ, ಈ ಸಂಸ್ಥಾನಗಳು ಇದು ವರೆಗೆ ಉಳಿಯುತ್ತಲೂ ಇರಲಿಲ್ಲ. ಸಂಸ್ಥಾನಗಳ ಮತ್ತು ಸಂಸ್ಥಾನೇತರ ಭಾರತದ ಮಧ್ಯೆ ಏಳುವ ಘರ್ಷಣೆಗಳಲ್ಲದೆ ಸಂಸ್ಥಾನಗಳ ಪ್ರಜೆಗಳೇ ಈಗ ತಮ್ಮ ನಿರಂಕುಶ ರಾಜರುಗಳಿಂದ ಸ್ವಾತಂತ್ರ್ಯವನ್ನು ಕೇಳುತ್ತಿದಾರೆ. ಬ್ರಿಟಿಷರ ಸಹಾಯದಿಂದ ಈ ಪ್ರಯತ್ನವನ್ನು ತಡೆಗಟ್ಟಲಾಗುತ್ತಿದೆ.

ಹತ್ತೊಂಭತ್ತನೆಯ ಶತಮಾನದಲ್ಲಿ ಅಂದಿನ ಪರಿಸ್ಥಿತಿಯಲ್ಲಿ ಸಹ ಈ ಸಂಸ್ಥಾನಗಳಿಗೆ ಎಡೆ ಇರಲಿಲ್ಲ. ಇಂದಿನ ಆಧುನಿಕ ಕಾಲದಲ್ಲಿ ಭಾರತವನ್ನು ಬೇರೆ ಬೇರೆ ಸ್ವತಂತ್ರ ರಾಜ್ಯಗಳನ್ನಾಗಿ ಛಿದ್ರಮಾಡುವ ಯತ್ನವನ್ನು ಊಹಿಸಲು ಸಹ ಸಾಧ್ಯವಿಲ್ಲ. ಸದಾ ಪರಸ್ಪರ ಘರ್ಷಣೆಗೆ ಎಡೆಗೊಟ್ಟಂತಾಗುವುದಲ್ಲದೆ ಯಾವ ಆರ್ಥಿಕ ಯೋಜನೆಯೂ, ಸಾಂಸ್ಕೃತಿಕ ಪ್ರಗತಿಯೂ ಸಾಧ್ಯವಾಗುವುದಿಲ್ಲ. ಹತ್ತೊಂಭತ್ತನೆಯ ಶತಮಾನದ ಆದಿಭಾಗದಲ್ಲಿ ಈಸ್ಟ್ ಇಂಡಿಯಾ ಕಂಪೆನಿಯೊಂದಿಗೆ ಒಪ್ಪಂದಮಾಡಿಕೊಂಡು ಈ ಸಂಸ್ಥಾನಗಳು ಜನ್ಮತಾಳಿದಾಗ ಯೂರೋಪ್ ಖಂಡದಲ್ಲೆಲ್ಲ ಸಣ್ಣ ಸಣ್ಣ ಪಾಳೆಯ ಪಟ್ಟುಗಳಿದ್ದವೆಂಬುದನ್ನು ಮರೆಯಲಾಗದು. ಅನೇಕ ಯುದ್ಧಗಳು ಮತ್ತು ರಾಜಕೀಯ ವಿಪ್ಲವಗಳು ಯೂರೋಪಿನ ರೂಪವನ್ನೇ ವ್ಯತ್ಯಾಸಗೊಳಿಸಿವೆ. ಆದರೆ ಪರದಾಸ್ಯದ ಹೊರೆ

---

* ಜನತಾ ವಿದ್ಯಾಭ್ಯಾಸ ತಿರುವಾಂಕೂರಿನಲ್ಲಿ ೧೮೦೧ ರಲ್ಲೇ ಆರಂಭವಾಯಿತು. ಇಂಗ್ಲೆಂಡಿನಲ್ಲಿ ಆರಂಭವಾದದ್ದು ೧೮೭೦ರಲ್ಲಿ. ತಿರುವಾಂಕೂರಿನಲ್ಲಿ ಗಂಡಸರಲ್ಲಿ ಸೇಕಡ ೫೮ ಜನರೂ, ಹೆಂಗಸರಲ್ಲಿ ೪೧ ಜನರೂ ವಿದ್ಯಾವಂತರು, ಬ್ರಿಟಿಷ್ ಇಂಡಿಯದ ಸಂಖ್ಯೆಗಿಂತ ನಾಲ್ಕರಷ್ಟು ಹೆಚ್ಚು. ತಿರುವಾಂಕೂರಿನಲ್ಲಿ ಸಾರ್ವಜನಿಕ ಆರೋಗ್ಯವೂ ಉತ್ತಮವಿದೆ. ಮಹಿಳೆಯರು ಸಾರ್ವಜನಿಕ ಕ್ಷೇತ್ರಗಳಲ್ಲಿ ಮತ್ತು ಚಟುವಟಿಕೆಗಳಲ್ಲಿ ಪ್ರಮುಖಪಾತ್ರ ವಹಿಸುತ್ತಾರೆ.

ಯಿಂದ ಭಾರತವು ಬಂಧನದಲ್ಲಿ ಸಿಲುಕಿ ಯಾವ ರೂಪ ವ್ಯತ್ಯಾಸಕ್ಕೂ ಅವಕಾಶವಾಗಲಿಲ್ಲ. ನೂರ ನಲವತ್ತು ವರ್ಷಗಳ ಕೆಳಗೆ ಯುದ್ಧ ಭೂಮಿಯಲ್ಲೋ ಅಥವಾ ಯುದ್ಧಾನಂತರದ ಕೆಲವು ದಿನಗಳಲ್ಲೋ ಇಬ್ಬರು ಸೇನಾನಿಗಳ ಮಧ್ಯೆ ಆದ ಒಪ್ಪಂದವನ್ನು ಶಾಶ್ವತವಾಗಿ ಪಾಲಿಸ ಬೇಕೆಂದು ಹೇಳುವುದು ಮೂರ್ಖತನ. ಆ ಒಪ್ಪಂದದಲ್ಲಿ ಸಂಸ್ಥಾನದ ಪ್ರಜೆಗಳಂತೂ ಯಾವ ಭಾಗವನ್ನೂ ವಹಿಸಿರಲಿಲ್ಲ; ಇನ್ನೊಂದು ಪಕ್ಷವಂತು ಲಾಭದ ಆಸೆಗಾಗಿ ಬಂದಿದ ವ್ಯಾಪಾರ ಸಂಸ್ಥೆ. ವ್ಯಾಪಾರ ಸಂಸ್ಥೆಯಾದ ಈ ಈಸ್ಟ್ ಇಂಡಿಯ ಕಂಪೆನಿಯು ಬ್ರಿಟಿಷ್ ಪಾರ್ಲಿಮೆಂಟಿನ ಅಥವ ಬ್ರಿಟಿಷ್ ರಾಜನ ಪ್ರತಿನಿಧಿಯಾಗಿ ಇಲ್ಲಿ ನಡೆದುಕೊಳ್ಳಲಿಲ್ಲ; ದೆಹಲಿಯ ಸಾಮ್ರಾಟನಿಗೆ ಯಾವ ಅಧಿಕಾರವಿಲ್ಲದಿದ್ದರೂ, ಎಲ್ಲ ಅಧಿಕಾರ ಮತ್ತು ಶಕ್ತಿಯನ್ನು ಪಡೆದದ್ದು ಅವನಿಂದ. ಅವನ ಪ್ರತಿನಿಧಿಗಳಾಗಿ ಕೆಲಸ ಮಾಡಿದರು. ಬ್ರಿಟಿಷ್ ಸರ್ಕಾರಕ್ಕೆ ಬ್ರಿಟಿಷ್ ಪಾರ್ಲಿಮೆಂಟಿಗೆ ಈ ಒಪ್ಪಂದಗಳಿಗೆ ಯಾವ ಸಂಬಂಧವೂ ಇರಲಿಲ್ಲ. ಈಸ್ಟ್ ಇಂಡಿಯ ಕಂಪೆನಿಗೆ ಕೊಟ್ಟಿದ್ದ ರಾಜಾಜ್ಞೆಯು ಪಾರ್ಲಿಮೆಂಟಿನಲ್ಲಿ ಆಗಿಂದಾಗ ಚರ್ಚೆಗೆ ಬಂದಾಗ ಮಾತ್ರ ಪಾರ್ಲಿ ಮೆಂಟ್ ಭಾರತದ ವಿಷಯಗಳನ್ನು ಚರ್ಚಿಸುತ್ತ ಇತ್ತು. ಮೊಗಲ್ ಚಕ್ರವರ್ತಿಯ ಅನುಜ್ಞೆ ಯಿಂದ ಈಸ್ಟ್ ಇಂಡಿಯ ಕಂಪೆನಿಯು ಭಾರತದಲ್ಲಿ ವ್ಯವಹಾರ ನಡೆಸುತ್ತಲಿದ್ದುದರಿಂದ ಬ್ರಿಟಿಷ್ ದೊರೆಯ ಅಥವ ಪಾರ್ಲಿಮೆಂಟಿನ ಅಧಿಕಾರದಿಂದ ಸ್ವತಂತ್ರವಿತ್ತು. ರಾಜಾಜ್ಞೆಯ ಅವಧಿಯು ಚರ್ಚೆಗೆ ಬಂದಾಗ ಅದನ್ನು ರದ್ದುಮಾಡಲು ಅಥವ ಹೊಸ ಷರತ್ತುಗಳನ್ನು ಹಾಕಲು ಪಾರ್ಲಿಮೆಂಟಿಗೆ ಪರೋಕ್ಷ ಅಧಿಕಾರ ಮಾತ್ರವಿತ್ತು. ಇಂಗ್ಲಿಷ್ ದೊರೆಯಾಗಲಿ, ಬ್ರಿಟಿಷ್ ಪಾರ್ಲಿಮೆಂಟ್ ಆಗಲಿ ದೆಹಲಿ ಚಕ್ರವರ್ತಿಯ ಪ್ರತಿನಿಧಿಯಾಗಲಿ ಕೆಲಸ ಮಾಡಬೇಕೆನ್ನುವುದು ಬ್ರಿಟಿಷರಿಗೆ ಸರಿಬೀಳದ ಕಾರಣ ಅವರು ಈಸ್ಟ್ ಇಂಡಿಯ ಕಂಪೆನಿಯ ವ್ಯವಹಾರದಿಂದ ದೂರವೇ ಇದ್ದರು. ಭಾರತದಲ್ಲಿನ ಯುದ್ಧಗಳಿಗೆ ವ್ಯಯಮಾಡಿದ ಹಣವೆಲ್ಲ ಈಸ್ಟ್ ಇಂಡಿಯ ಕಂಪೆನಿಯು ಭಾರತದಲ್ಲೇ ಸಂಗ್ರಹಿಸಿ ತಮಗೆ ಮನಬಂದಂತೆ ವೆಚ್ಚಮಾಡಿದ ಭಾರತದ ಹಣ.

ಕ್ರಮೇಣ ಈಸ್ಟ್ ಇಂಡಿಯ ಕಂಪನಿಯು ರಾಜ್ಯವನ್ನು ವಿಸ್ತಾರಗೊಳಿಸಿ ತಮ್ಮ ಆಡಳಿತವನ್ನು ಭದ್ರಪಡಿಸಿಕೊಂಡಮೇಲೆ, ಭಾರತದ ವಿಷಯದಲ್ಲಿ ಬ್ರಿಟಿಷ್ ಪಾರ್ಲಿಮೆಂಟ್ ಹೆಚ್ಚು ಆಸಕ್ತಿಯನು ವಹಿಸತೊಡಗಿತು. ೧೮೫೮ರ ದಂಗೆಯ ನಂತರ ಈಸ್ಟ್ ಇಂಡಿಯ ಕಂಪೆನಿಯು ಭಾರತದ ಬೊಕ್ಕಸ ದಿಂದಲೇ ವಿಕ್ರಯದ ಪ್ರತಿಫಲ ಪಡೆದು ಭಾರತವನ್ನು ಬ್ರಿಟಿಷ್ ರಾಜರಿಗೆ ವಿಕ್ರಯಿಸಿತು. ಈ ವಿಕ್ರಯದಲ್ಲಿ ಉಳಿದ ಭಾರತವನ್ನು ಬಿಟ್ಟು ಸಂಸ್ಥಾನಗಳಿಗೆ ಒಂದು ಪ್ರತ್ಯೇಕ ವ್ಯವಹಾರ ನಡೆಯ ಲಿಲ್ಲ. ಇಡೀ ಭಾರತವೇ ಒಂದು ರಾಜ್ಯವಾಗಿ ಭಾರತ ಸರ್ಕಾರದ ಮೂಲಕ ಬ್ರಿಟಿಷ್ ಪಾರ್ಲಿ ಮೆಂಟ್ ತನ್ನ ಅಧಿಕಾರ ನಡೆಸಲು ಆರಂಭಿಸಿತು. ಈ ಅಧಿಕಾರವ್ಯಾಪ್ತಿಗೆ ದೇಶೀಯ ಸಂಸ್ಥಾನ ಗಳೂ ಒಳಪಟ್ಟವು. ಬ್ರಿಟಿಷ್ ದೊರೆಯೊಂದಿಗೆ ಆಗಲಿ, ಪಾರ್ಲಿಮೆಂಟ್ ಜೊತೆಗೆ ಆಗಲಿ ಈ ಸಂಸ್ಥಾನಗಳ ಪ್ರತ್ಯೇಕ ವ್ಯವಹಾರ ಯಾವುದೂ ಇರಲಿಲ್ಲ. ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಭಾರತ ಸರಕಾರವು ಪ್ರತಿನಿಧಿಸಿದ ಸರಕಾರ ಪದ್ಧತಿಯ ಒಂದು ಅಂಗವಾದವು. ಈ ಸರಕಾರವು ಕ್ರಮೇಣ ಹಳೆಯ ಕರಾರುಗಳನ್ನು ತಮಗೆ ಮನಬಂದಾಗ, ಮನಬಂದಂತೆ ಬದಿಗೊತ್ತಿ ಸಂಸ್ಥಾನಗಳ ಮೇಲೆ ಬಲವಾದ ತಮ್ಮ ಪರಮಾಧಿಕಾರವನ್ನು ಸ್ಥಾಪಿಸಿತು.

ಈ ರೀತಿ ದೇಶೀಯ ಸಂಸ್ಥಾನಗಳ ವಿಷಯದಲ್ಲಿ ಬ್ರಿಟಿಷ್ ದೊರೆಗೆ ಯಾವ ಸ್ಥಾನವೂ ಇರ ಲಿಲ್ಲ. ಈಚೆಗೆ ಈ ಸಂಸ್ಥಾನಗಳಿಗೂ ಸ್ವಲ್ಪ ಸ್ವಾತಂತ್ರ್ಯ ಇದೆ ಎಂದೂ, ಇಂಡಿಯಾ ಸರಕಾರವಲ್ಲದೆ ಬ್ರಿಟಿಷ್ ದೊರೆಯೊಂದಿಗೆ ವಿಶೇಷ ಸಂಪರ್ಕವಿದೆ ಎಂದೂ ಸಂಸ್ಥಾನಾಧೀಶರುಗಳ ಪರವಾಗಿ ಒಂದು ಹೊಸ ಕೂಗು ಎದ್ದಿದೆ. ಈ ಕೌಲುಕರಾರುಗಳಿರುವುದೂ ಕೆಲವು ಸಂಸ್ಥಾನಗಳೊಂದಿಗೆ ಮಾತ್ರ. ನಲವತ್ತು ಸಂಸ್ಥಾನಗಳಿಗೆ ಮಾತ್ರ ಕೌಲುಗಳಿವೆ. ಉಳಿದುವೆಲ್ಲ ಸಣ್ಣದಿನ ಸಂಸ್ಥಾನಗಳು. ಈ

ನಲವತ್ತು ಸಂಸ್ಥಾನಗಳಲ್ಲೇ ಸಂಸ್ಥಾನ ಪ್ರಜೆಗಳ ಮುಕ್ಕಾಲುಪಾಲು ಪ್ರಜಾಸಂಖ್ಯೆ ಇದೆ; ಆರು ಸಂಸ್ಥಾನಗಳಲ್ಲೇ ಮೂರನೆ ಎರಡರಷ್ಟು ಜನರಿದಾರೆ.*

೧೯೩೫ರ ಭಾರತ ಸರಕಾರ ಶಾಸನದಲ್ಲಿ ದೇಶೀಯ ಸಂಸ್ಥಾನಗಳಿಗೂ, ಉಳಿದ ಭಾರತಕ್ಕೂ ಬ್ರಿಟಿಷ್ ಪಾರ್ಲಿಮೆಂಟಿನೊಂದಿಗೆ ಇರಬೇಕಾದ ವ್ಯವಹಾರದಲ್ಲಿ ಮೊಟ್ಟ ಮೊದಲನೆಯ ಬಾರಿ ವ್ಯತ್ಯಾಸಮಾಡಲಾಗಿದೆ. ಭಾರತ ಸರಕಾರದ ಮೇಲ್ವಿಚಾರಣಾಧಿಕಾರದಿಂದ ಸಂಸ್ಥಾನಗಳನ್ನು ಬೇರೆಮಾಡಿ ಬ್ರಿಟಿಷ್ ದೊರೆಯ ಪ್ರತಿನಿಧಿ ಎಂದು ವೈಸರಾಯ್ ಅಧಿಕಾರಕ್ಕೆ ಒಳಪಡಿಸಲಾಯಿತು. ಅದೇ ವೈಸ್‌ರಾಯ್ ಭಾರತ ಸರಕಾರದ ಮುಖ್ಯ ಅಧಿಕಾರಿಯೂ ಆಗಿ ಉಳಿದನು. ಸಂಸ್ಥಾನಗಳೊಂದಿಗೆ ವ್ಯವಹಾರ ನಡೆಸುತ್ತಿದ್ದ ರಾಜಕೀಯ ಶಾಖೆಯು ವೈಸರಾಯನ ಮಂತ್ರಾಲೋಚನಾ ಸಭೆಯ ಆಡಳಿತದೊಳಗೆ ಬಾರದೆ ನೇರವಾಗಿ ವೈಸರಾಯನ ಆಡಳಿತದೊಳಗೆ ಬಂದಿತು.

ಈ ಸಂಸ್ಥಾನಗಳು ಹುಟ್ಟಿದ ಬಗೆ ಹೇಗೆ? ಕೆಲವು ಬ್ರಿಟಿಷರೇ ನಿರ್ಮಾಣಮಾಡಿದ ತೀರ ಹೊಸ ಸಂಸ್ಥಾನಗಳು. ಮೊಗಲರ ಪ್ರತಿನಿಧಿಗಳಾಗಿ ಬಂದವರಿಂದ ಆರಂಭವಾಗಿ ಬ್ರಿಟಿಷರಮನ್ನಣೆ ಪಡೆದವು ಕೆಲವು. ಮರಾಠ ಮುಖಂಡರನ್ನು ಸೋಲಿಸಿ ಅಧೀನಮಾಡಿಕೊಂಡ ರಾಜರುಗಳ ಸಂಸ್ಥಾನಗಳು ಕೆಲವು. ಇವೆಲ್ಲ ಬ್ರಿಟಿಷರ ಆಳ್ವಿಕೆಯ ಆರಂಭದಲ್ಲಿ ಹುಟ್ಟಿದವು. ಅದಕ್ಕೂ ಮೊದಲಿನ ಇತಿಹಾಸ ಯಾವುದಕ್ಕೂ ಇಲ್ಲ. ಯಾವುದೂ ಸ್ವತಂತ್ರ ಇರಲಿಲ್ಲ; ಅಥವ ಕೆಲವು ವರ್ಷ ಸ್ವತಂತ್ರವಿದ್ದರೂ ಅದು ಯುದ್ಧದಲ್ಲಿ ಸೋತು, ಅಥವ ಯುದ್ಧ ಭಯದಿಂದ ಕಳೆದುಕೊಂಡ ಅಲ್ಪಾಯುಸ್ಸಿನ ಸ್ವಾತಂತ್ರ್ಯ. ಮೊಗಲರ ಕಾಲಕ್ಕಿಂತ ಹಿಂದಿನವೆಂದರೆ ರಾಜಪುತಾನದ ಕೆಲವು ಸಂಸ್ಥಾನಗಳು ಮಾತ್ರ. ತಿರುವಾಂಕೂರಿಗೆ ಒಂದು ಸಾವಿರ ವರ್ಷಗಳ ಇತಿಹಾಸವಿದೆ. ಕೆಲವು ರಾಜಪುತ್ರ ಮನೆತನದವರು ತಮ್ಮ ವಂಶಪರಂಪರೆಯನ್ನು ಪುರಾಣಕಾಲಗಳಿಂದ ಎಣಿಸುತ್ತಾರೆ. ಉದಯಪುರದ ಮಹಾರಾಣ ಸೂರ್ಯವಂಶದವರಂತೆ. ಅವರ ವಂಶವೃಕ್ಷವು ಜಪಾನಿನ ಮಿಕಡೋ ವಂಶವೃಕ್ಷವನ್ನು ಹೋಲುತ್ತದೆ. ಆದರೆ ಈ ರಾಜಪುತ್ರ ಮನೆತನದವರು ಮೊಗಲರ ಅಧೀನರಾಗಿ, ಅನಂತರ ಮರಾಠರ ಅಧೀನರಾಗಿ, ಕೊನೆಗೆ ಬ್ರಿಟಿಷರ ಅಧೀನರಾದರು. ಎಡ್ವರ್ಡ್ ಥಾಮ್ಸನ್ "ಈಸ್ಟ್ ಇಂಡಿಯಾ ಕಂಪೆನಿಯ ಪ್ರತಿನಿಧಿಗಳು ದಿವಾಳಿತನದ ಪ್ರವಾಹದಲ್ಲಿ ಕೊಚ್ಚಿ ಹೋಗುತ್ತಿದ್ದ ರಾಜರುಗಳನ್ನು ಮೇಲಕ್ಕೆ ಎತ್ತಿ ಅವರವರ ಸ್ಥಾನದಲ್ಲಿ ಇರಿಸಿದರು. ಈ ರೀತಿ ದಡಕ್ಕೆ ಸೇರಿಸಿ ಜೀವದಾನ ಮಾಡಿದಾಗ ಪ್ರಪಂಚದ ಆರಂಭದಿಂದ ಕಂಡುಬರುವ ಎಲ್ಲ ದಿವಾಳಿ ರಾಜರುಗಳಂತೆ ಇವರುಗಳಿಗೂ ಉಸಿರಾಡಲು ಸಹ ಶಕ್ತಿ ಇರಲಿಲ್ಲ. ಬ್ರಿಟಿಷರು ಅವರನ್ನು ಉಳಿಸದಿದ್ದರೆ ರಾಜಪುತ್ರ ಸಂಸ್ಥಾನಗಳಿಗೂ ಮರಾಠ ರಾಜ್ಯಗಳಿಗೂ ಇದ್ದ ದಾರಿ ಎಂದರೆ ದಿವಾಳಿಯೊಂದೇ. ಅಯೋಧ್ಯೆ ಮತ್ತು ನಿಜಾಮನ ರಾಜ್ಯಗಳಿಗೆ ಅಸ್ತಿತ್ವವೇ ಇರಲಿಲ್ಲ. ಕುಟುಕು ಜೀವಮಾತ್ರ ಇತ್ತು. ಬ್ರಿಟಿಷರ ಊದಿದ ಜೀವದುಸಿರಿನಿಂದ ಬದುಕಿಕೊಂಡವು"—ಎಂದಿದ್ದಾನೆ.

ಈಗ ಅತ್ಯಂತ ದೊಡ್ಡ ಸಂಸ್ಥಾನವಾದ ಹೈದರಾಬಾದ್ ಆರಂಭದಲ್ಲಿ ಬಹಳ ಸಣ್ಣದು ಬ್ರಿಟಿಷರು ಟಿಪ್ಪುವನ್ನು ಸೋಲಿಸಿದಾಗ ಮತ್ತು ಮರಾಠೆ ಯುದ್ಧಗಳಾದಾಗ ಎರಡು ಬಾರಿ ಅದು ವಿಸ್ತಾರವಾಯಿತು. ನೈಜಾಮನು ತಮ್ಮ ಅಧೀನ ಇರಬೇಕೆಂಬ ಷರತ್ತಿನಿಂದ ಈ ವಿಸ್ತರಣೆ ಮಾಡಿದವರೂ ಬ್ರಿಟಿಷರೇ. ಟಿಪ್ಪು ಸೋತನಂತರ ಆ ರಾಜ್ಯವನ್ನು ಮೊದಲು ಒಪ್ಪಿಸಿದ್ದು ಪೇಷ್ವೆಗೆ; ಆದರೆ ಪೇಷ್ವೆಯು ಅಧೀನ ರಾಜನಾಗಿರಲು ಒಪ್ಪದ ಕಾರಣ ಅದು ನೈಜಾಮನಿಗೆ ಸೇರಿತು.

* ಹೈದರಾಬಾದಿನಲ್ಲಿ ೧೬೦-೧೭೦ ಲಕ್ಷ; ಮೈಸೂರಿನಲ್ಲಿ ೭೫ ಲಕ್ಷ, ತಿರುವಾಂಕೂರಿನಲ್ಲಿ ೬೦.೫ ಲಕ್ಷ, ಬರೋಡೆ ೨೮ ಲಕ್ಷ, ಕಾಶ್ಮೀರ ೪೦ ಲಕ್ಷ, ಗ್ವಾಲೇರದಲ್ಲಿ ೪೦ ಲಕ್ಷ, ಒಟ್ಟು ೪೬೦ ಲಕ್ಷ; ಒಟ್ಟು ಸಂಸ್ಥಾನಗಳ ಪ್ರಜಾಸಂಖ್ಯೆ ೯೦೦ ಲಕ್ಷ.

ಎರಡನೆಯದಾದ ಕಾಶ್ಮೀರವನ್ನು ಸೀಖ ಕದನಗಳ ನಂತರ ಬ್ರಿಟಿಷರು ಇಂದಿನ ಮಹಾರಾಜನ ಅಜ್ಜನಿಗೆ ಮಾರಿದರು. ಆಡಳಿತ ಸರಿಯಾಗಿ ನಡೆಸಲಿಲ್ಲವೆಂದು ಅನಂತರ ಬ್ರಿಟಿಷರು ಅದನ್ನು ತಾವೇ ವಹಿಸಿಕೊಂಡರು. ಪುನಃ ಅದನ್ನು ರಾಜನಿಗೆ ಕೊಟ್ಟರು. ಇಂದಿನ ಮೈಸೂರು ನಿರ್ಮಾಣವಾದದ್ದೂ ಟಿಪ್ಪೂನ ಯುದ್ಧಗಳ ನಂತರ ಬ್ರಿಟಿಷರಿಂದ; ಅದು ಸಹ ಬಹುಕಾಲ ಬ್ರಿಟಿಷರ ಆಡಳಿತದಲ್ಲಿತ್ತು.

ಭಾರತದಲ್ಲಿ ನಿಜವಾದ ಸ್ವತಂತ್ರ ರಾಜ್ಯವೆಂದರೆ ಈಶಾನ್ಯ ಮೂಲೆಯಲ್ಲಿ ಇರುವ ನೇಪಾಳ. ಸ್ವಲ್ಪ ಒಂಟಿಯಾಗಿದ್ದರೂ ಆಫ್ಘಾನಿಸ್ಥಾನವನ್ನು ಹೋಲುತ್ತದೆ. ಇನ್ನುಳಿದ ರಾಜ್ಯಗಳೆಲ್ಲ ಬ್ರಿಟಿಷ್ ರೆಸಿಡೆಂಟ್ ಅಥವ ಪ್ರತಿನಿಧಿಯ ಮೂಲಕ ಬ್ರಿಟಿಷ್ ಸರಕಾರದ ಅಧೀನಕ್ಕೆ ಒಳಗಾಗಿ ಆಶ್ರಿತ ಸಂಸ್ಥಾನಗಳಾದವು. ಅನೇಕ ವೇಳೆ ರಾಜನ ಮಂತ್ರಿಗಳ ಸ್ಥಾನಕ್ಕೆ ಸಹ ಬ್ರಿಟಿಷ್ ಅಧಿಕಾರಿಗಳನ್ನು ಒತ್ತಾಯದಿಂದ ನೇಮಿಸುತ್ತಿದ್ದರು. ಆದರೆ ಆಡಳಿತ ಜವಾಬ್ದಾರಿ ಎಲ್ಲವೂ ರಾಜನದು. ಎಷ್ಟೇ ಒಳ್ಳೆಯ ಭಾವನೆ ಇದ್ದರೂ-ಅನೇಕ ವೇಳೆ ಆ ಭಾವನೆಗೂ ಮತ್ತು ದಕ್ಷತೆಗೂ ಅಭಾವವೇ ಹೆಚ್ಚು-ಆ ವಾತಾವರಣದಲ್ಲಿ ಏನು ಮಾಡುವುದಕ್ಕೂ ಸಾಧ್ಯವಿರುತ್ತಿರಲಿಲ್ಲ. ಹೆನ್ರಿ ಲಾರೆನ್ಸ್ "ದೇಶೀಯ ರಾಜನೂ, ಆತನ ಮಂತ್ರಿಯೂ ವಿದೇಶೀ ಸೈನ್ಯ ಸಹಾಯವನ್ನು ನಂಬಿಕೊಂಡು ಬ್ರಿಟಿಷ್ ರೆಸಿಡೆಂಟ್ ಹೇಳಿದಂತೆ ಕುಣಿದರೆ ಅರಾಜಕತೆ ಎಷ್ಟು ದಿನವಾದರೂ ನಡೆಯಬಹುದು. ಇವರೆಲ್ಲರೂ ದಕ್ಷರೂ, ಪ್ರಾಮಾಣಿಕರೂ, ದಯಾಪರರೂ ಆದರೂ ಸರಕಾರದ ಚಕ್ರಗಳು ಸುಲಭವಾಗಿ ನಡೆಯುವುದು ಬಹು ಕಷ್ಟ. ಯುರೋಪಿಯನ್ ಆಗಲಿ, ಭಾರತೀಯನಾಗಲಿ ನ್ಯಾಯ ನಿಷ್ಠನಾದ ಅಧಿಕಾರಿ ಒಬ್ಬ ದೊರೆಯುವುದೇ ಕಷ್ಟವಿರುವಾಗ ಮೂರು ಜನರನ್ನು ಹುಡುಕುವುದಾದರೂ ಹೇಗೆ ಮತ್ತು ಅವರು ಒಮ್ಮತದಿಂದ ಕೆಲಸ ಮಾಡುವುದಾದರೂ ಹೇಗೆ? ಮೂರು ಜನರೂ ಸೇರಿ ಅಪಾರಹಾನಿ ಮಾಡಬಹುದು. ಆದರೆ ಉಳಿದವರು ವಿರೋಧಿಸುವಾಗ ಒಳ್ಳೆಯದನ್ನು ಮಾಡಲು ಯಾರಿಂದಲೂ ಸಾಧ್ಯವಿಲ್ಲ" ಎಂದು ೧೮೪೬ರಲ್ಲಿ ದೇಶೀಯ ಸಂಸ್ಥಾನಗಳ ವಿಷಯ ಬರೆದಿದ್ದಾನೆ.

ಅದಕ್ಕೂ ಮೊದಲು ೧೮೧೭ ರಲ್ಲಿ ಸರ್‌ಥಾಮಸ್ ಮನ್ರೊ ಗೌರ್ನರ್ ಜನರಲ್‌ಗೆ ಬರೆಯುತ್ತ "ಎರವಲು ಸೈನ್ಯವನ್ನು ನೇಮಿಸಬಾರದು ಎನ್ನಲು ಬಲವತ್ತರ ಕಾರಣಗಳಿವೆ ಯಾವ ಸರಕಾರವು ಆ ಸೈನ್ಯ ಸಹಾಯವನ್ನು ಪಡೆಯುತ್ತದೆಯೋ ಆ ದೇಶವು ದುರ್ಬಲಗೊಳ್ಳುತ್ತದೆ; ದೇಶದಲ್ಲಿ ದಬ್ಬಾಳಿಕೆ ಹೆಚ್ಚುತ್ತದೆ, ಸಮಾಜದ ಉನ್ನತವರ್ಗದ ಜನರಲ್ಲಿನ ಸದ್ಗುಣಗಳೆಲ್ಲ ನಾಶವಾಗುತ್ತವೆ; ಮತ್ತು ಇಡೀ ಜನತೆಯೇ ಅಧೋಗತಿಗೆ ಇಳಿದು ಬಡತನದಲ್ಲಿ ಮುಳುಗಬೇಕಾಗುತ್ತದೆ. ಅರಾಜಕತೆಯನ್ನು ತಪ್ಪಿಸಲು ಭಾರತದಲ್ಲಿ ಇರುವ ಮಾರ್ಗಗಳೆಂದರೆ ಒಳಗೆ ಅರಮನೆಗಳಲ್ಲಿ ಶಾಂತಿಯುತ ಕ್ರಾಂತಿ, ಹೊರಗೆ ಘೋರ ವಿಪ್ಲವ ಅಥವ ಪರಧಾಳಿ. ಆದರೆ ಬ್ರಿಟಿಷ್ ಸೈನ್ಯವು ಈ ಮೂರು ಮಾರ್ಗಗಳಿಗೂ ಅಡ್ಡ ಬಂದು ಒಳಗಿನ ಮತ್ತು ಹೊರಗಿನ ವಿರೋಧಿಗಳಿಂದ ರಕ್ಷಣೆ ಕೊಟ್ಟು ರಾಜ ಸಿಂಹಾಸನಗಳನ್ನು ಕಾಪಾಡಲು ಬೆಂಬಲ ನಿಂತಿದೆ. ತನ್ನ ರಕ್ಷಣೆಗೆ ಬೇರೊಬ್ಬನಿರುವನೆಂದು ರಾಜನು ಸೋಮಾರಿಯಾಗುತ್ತಾನೆ; ಪ್ರಜೆಗಳ ವಿರೋಧ ತನಗೆ ಏನೂ ಮಾಡಲಾರದೆಂದು ಕ್ರೂರಿಯೂ, ದುರಾಶೆಯುಳ್ಳವನೂ ಆಗುತ್ತಾನೆ. ಆಳುವ ರಾಜನು ದಕ್ಷನಿಲ್ಲದೆ ಹೋದರೆ ಈ ಸಹಾಯಕ ಸೈನ್ಯವಿರುವ ಕಡೆಯಲ್ಲೆಲ್ಲ ಗ್ರಾಮ ಜೀವನವು ಹಾಳಾಗಿ ಜನ ಸಂಖ್ಯೆಯು ಕಡಮೆಯಾಗುತ್ತ ಬರುತ್ತದೆ. ರಾಜನು ಬ್ರಿಟಿಷರ ಸ್ನೇಹವನ್ನು ಕಾಪಾಡಿಕೊಂಡು ಬರಬೇಕೆಂಬ ಇಚ್ಛೆಯುಳ್ಳವನಾಗಿದ್ದರೂ, ಅದನ್ನು ಮುರಿಯಬೇಕೆಂದು ಅವನ ಮುಖ್ಯ ಅಧಿಕಾರಿಗಳಲ್ಲಿ ಯಾರಾದರೂ ಪ್ರೇರೇಪಿಸುತ್ತಲೇ ಇರುತ್ತಾರೆ. ಪರದಾಸ್ಯದಿಂದ ಪಾರಾಗಬೇಕೆಂಬ ಉನ್ನತ ಸ್ವಾತಂತ್ರ್ಯಾಭಿಲಾಷೆ ದೇಶದಲ್ಲಿ ಇರುವವರೆಗೂ ಅಂತಹ ಮಂತ್ರಾಲೋಚಕರು ಇದ್ದೇ ಇರುತ್ತಾರೆ. ಭಾರತೀಯರ ಈ ಸ್ವಾತಂತ್ರ್ಯಾಭಿಲಾಷೆಯನ್ನು ಎಂದಿಗೂ ಪೂರ್ಣ ನಾಶಮಾಡಲಾಗುವುದಿಲ್ಲ. ಭಾರತೀಯರ ವಿಷಯದಲ್ಲಿ ನನಗೆ ತುಂಬ ಗೌರವವಿದೆ. ಆದ್ದರಿಂದ ಈ ಸಹಾಯಕ ಸೈನ್ಯ ಎಲ್ಲ ಕಡೆಯಲ್ಲೂ ತನ್ನ

ಕಾರ್ಯವನ್ನು ಸಾಧಿಸಬೇಕು ಮತ್ತು ಯಾವ ಸರಕಾರವನ್ನು ರಕ್ಷಿಸಲು ಹೋಗಿದೆಯೋ ಆ ಸರಕಾರವನ್ನು ನಾಶಮಾಡಬೇಕು." ಎಂದು ಹೇಳಿದ್ದಾನೆ.

ಇಷ್ಟೆಲ್ಲ ವಿರೋಧವಿದ್ದರೂ ಆಶ್ರಿತ ಸಂಸ್ಥಾನಗಳ ಪದ್ಧತಿಯು ಬೆಳೆಯಿತು. ಮತ್ತು ಲಂಚಗುಳಿತನ ಮತ್ತು ಕ್ರೂರ ದಬ್ಬಾಳಿಕೆಯೂ ಅನಿವಾರ್ಯವಾಯಿತು. ಈ ಸಂಸ್ಥಾನಗಳ ಸರಕಾರಗಳು ಬಹಳ ಕೆಟ್ಟದ್ದವು, ಎಲ್ಲವೂ ಸತ್ವಶೂನ್ಯವಿದ್ದವು. ಈ ಸಂಸ್ಥಾನಗಳ ರೆಸಿಡೆಂಟರಲ್ಲಿ ಮೆಟ್ಕಾಫನಂತಹ ಕೆಲವರು ಪ್ರಾಮಾಣಿಕರೂ, ಆತ್ಮಸಾಕ್ಷಿಯಿಂದ ಕೆಲಸಮಾಡುವವರೂ ಇದ್ದರು. ಆದರೆ ಅನೇಕರಲ್ಲಿ ಎರಡು ಗುಣಗಳೂ ಇರಲಿಲ್ಲ. ಯಾವ ಜವಾಬ್ದಾರಿಯೂ ಇಲ್ಲದೆ ಅಧಿಕಾರ ಮಾತ್ರ ನಡೆಸುವ ಸೂಳೆಯರಂತೆ ದರ್ಪದಿಂದ ಮೆರೆಯುತ್ತಿದ್ದರು. ಬಿಳಿಯರೆಂಬ ಭಾವನೆಯಿಂದ ಮತ್ತು ಅಧಿಕಾರ ವರ್ಗದ ಬೆಂಬಲ ತಮಗೆ ಇದೆ ಎಂದು ಖಾಸಗಿ ಇಂಗ್ಲಿಷ್ ಸಾಹಸಿಗಳು ಸಂಸ್ಥಾನಗಳ ಬೊಕ್ಕಸವನ್ನು ಸೂರೆ ಹೊಡೆಯುತ್ತಿದ್ದರು. ೧೯ನೆಯ ಶತಮಾನದ ಆರಂಭಕಾಲದಲ್ಲಿ ಅಯೋಧ್ಯೆ ಮತ್ತು ಹೈದರಾಬಾದಿನಲ್ಲಿ ಆದ ಅನಾಹುತಗಳನ್ನು ನಂಬಲು ಸಹ ಆಗುವುದಿಲ್ಲ. ೧೮೫೭ರ ದಂಗೆಗೆ ಕೆಲವು ದಿನಗಳ ಮುಂಚೆ ಅಯೋಧ್ಯೆಯನ್ನು ಬ್ರಿಟಿಷ್ ಭಾರತಕ್ಕೆ ಸೇರಿಸಿಕೊಳ್ಳಲಾಯಿತು.

ಸಂಸ್ಥಾನಗಳನ್ನು ಸೇರಿಸಿಕೊಂಡು ರಾಜ್ಯವನ್ನು ವಿಸ್ತರಿಸುವುದೇ ಆಗಿನ ಬ್ರಿಟಿಷ್ ನೀತಿಯಾಗಿತ್ತು. ಸ್ವಲ್ಪ ಅವಕಾಶ ದೊರೆತರೆ ಬ್ರಿಟಿಷ್ ಅಧಿಕಾರಕ್ಕೆ ಸಂಸ್ಥಾನ ಆಹುತಿಯಾಗುತ್ತಿತ್ತು. ಆದರೆ ದಂಗೆಯಿಂದ, ೧೮೫೭ರ ಕ್ರಾಂತಿಯಿಂದ, ಆಶ್ರಿತ ಸಂಸ್ಥಾನಗಳ ಉಪಯುಕ್ತತೆಯು ಬ್ರಿಟಿಷರಿಗೆ ಸ್ಪಷ್ಟವಾಯಿತು; ಅತ್ಯಲ್ಪ ಜನರ ವಿನಾ ದೇಶೀಯ ರಾಜರುಗಳು ಯಾರೂ ದಂಗೆಯಲ್ಲಿ ಯಾವ ಪಾತ್ರವನ್ನೂ ವಹಿಸಲಿಲ್ಲ. ಅಷ್ಟೇ ಅಲ್ಲದೆ ಕೆಲವರು ದಂಗೆಯನ್ನು ಅಡಗಿಸಲು ಬ್ರಿಟಿಷರಿಗೆ ಪ್ರತ್ಯಕ್ಷ ಸಹಾಯಮಾಡಿದರು. ಇದರಿಂದ ಬ್ರಿಟಿಷರ ನೀತಿಯಮೇಲೆ ಮಹತ್ಪರಿಣಾಮವಾಗಿ, ರಾಜರುಗಳು ಉಳಿಯಬೇಕೆಂದೂ, ಅವರನ್ನು ಇನ್ನೂ ಬಲಗೊಳಿಸಬೇಕೆಂದೂ ತಿರ್ಮಾನಿಸಿದರು.

ಬ್ರಿಟಿಷರ ಪರಮಾಧಿಕಾರದ ಘೋಷಣೆಯಾಯಿತು. ದೇಶೀಯ ಸಂಸ್ಥಾನಗಳಮೇಲೆ ರಾಜಕೀಯ ಇಲಾಖೆಯ ಮತ್ತು ಭಾರತ ಸರಕಾರದ ಅಧಿಕಾರವು ಕಾರ್ಯತಃ ಪೂರ್ಣ ಇದೆ ಮತ್ತು ಸದಾ ಕಾಲವೂ ಇದೆ. ರಾಜರುಗಳ ಪದಚ್ಯುತಿಯೂ ಆಗಿದೆ, ಅಧಿಕಾರಚ್ಯುತಿಯೂ ಆಗಿದೆ; ಬ್ರಿಟಿಷ್ ಅಧಿಕಾರಿಗಳನ್ನು ದೇಶೀಯ ಸಂಸ್ಥಾನಗಳ ಮಂತ್ರಿಗಳನ್ನಾಗಿ ಬಲಾತ್ಕಾರದಿಂದ ನೇಮಿಸಲಾಗಿದೆ. ಈಗ ಸಂಸ್ಥಾನಗಳಲ್ಲಿ ಅಂತಹ ಮಂತ್ರಿಗಳು ಅನೇಕರಿದ್ದಾರೆ. ಅವರೆಲ್ಲರೂ ಹೆಚ್ಚಾಗಿ ಬ್ರಿಟಿಷ್ ಅಧಿಕಾರಿವರ್ಗಕ್ಕೇ ಜವಾಬ್ದಾರರು

ರಾಜರುಗಳಲ್ಲಿ ಉತ್ತಮರೂ ಇದಾರೆ, ದುಷ್ಟರೂ ಇದಾರೆ. ಅವಕಾಶ ದೊರೆತಾಗಲೆಲ್ಲ ಉತ್ತಮರಿಗೂ ಕಿರುಕುಳ ತಪ್ಪಿಲ್ಲ. ಒಟ್ಟಿನಲ್ಲಿ ಅವರೆಲ್ಲ ಪ್ರತಿಗಾಮಿ ಮನೋಭಾವದವರು, ಪಾಳೆಯಗಾರಿಕೆಯ ದೃಷ್ಟಿಯವರು, ನಿರಂಕುಶ ನೀತಿಯವರು. ಬ್ರಿಟಿಷರೊಂದಿನ ವ್ಯವಹಾರದಲ್ಲಿ ಮಾತ್ರ ಅತಿ ವಿನಯವನ್ನು ತೋರಿಸುತ್ತಾರೆ. ಪೆಲ್ಪಾಂಕರ್ ದೇಶೀಯ ಸಂಸ್ಥಾನಗಳನ್ನು ಭಾರತದಲ್ಲಿನ ಬ್ರಿಟಿಷರ ಪಂಚಮದಳ ಎಂದು ಕರೆದಿರುವುದು ಅಕ್ಷರಶಃ ನಿಜ.

### ೬. ಭಾರತದಲ್ಲಿ ಬ್ರಿಟಿಷ್ ಆಡಳಿತದ ವಿರೋಧಾಭಾಸಗಳು: ರಾಜಾ ರಾಮ ಮೋಹನರಾಯ್: ವೃತ್ತಪತ್ರಿಕೆ: ಸರ್ ವಿಲಿಯಮ್ ಜೋನ್ಸ್: ವಂಗದೇಶದಲ್ಲಿ ಇಂಗ್ಲಿಷ್ ವಿದ್ಯೆ.

ಭಾರತದ ಬ್ರಿಟಿಷ್ ಆಳ್ವಿಕೆ ಚರ್ಚಿಸುವಾಗ ಹೆಜ್ಜೆಹೆಜ್ಜೆಗೂ ವಿರೋಧಾಭಾಸಗಳು ಎದ್ದು ತೋರುತ್ತವೆ. ಬ್ರಿಟಿಷರು ದೊಡ್ಡ ಯಂತ್ರೋದ್ಯಮದ ಹರಿಕಾರರಾದ್ದರಿಂದ ಭಾರತದಲ್ಲಿ ಅಜೇಯರಾಗಿ ಪ್ರಪಂಚದ ಒಂದು ಪ್ರಬಲ ಶಕ್ತಿಯಾದರು. ಪ್ರಪಂಚದಲ್ಲಿಯೇ ಒಂದು ಕ್ರಾಂತಿಯನ್ನೆಬ್ಬಿಸುವ ಒಂದು ಹೊಸ ಐತಿಹಾಸಿಕಶಕ್ತಿಯ ಪ್ರತಿನಿಧಿಗಳಾದರು. ಈ ರೀತಿ ತಾವೇನ್ತೆ ಅರಿಯದಂತೆ

ಪ್ರಗತಿ ಮತ್ತು ಕ್ರಾಂತಿಯ ಮುಂದಾಳುಗಳೂ ಪ್ರತಿನಿಧಿಗಳೂ ಆದರು. ಆದರೂ ತಮ್ಮ ಬುಡ ಭದ್ರ ಮಾಡಿಕೊಳ್ಳುವ ಮಟ್ಟಿಗೆ, ದೇಶವನ್ನೂ ಜನರನ್ನೂ ಸುಲಿಗೆಮಾಡಲು ಸಹಾಯವಾಗುವ ಮಟ್ಟಿಗೆ ಮಾತ್ರ ಬಿಟ್ಟು ಭಾರತದಲ್ಲಿ ಉಳಿದ ಎಲ್ಲ ಪ್ರಗತಿಯನ್ನೂ ಉದ್ದೇಶ್ಯಪೂರ್ವಕ ವಿರೋಧಿಸಿದರು. ಅವರ ದೃಷ್ಟಿ ಮತ್ತು ನೀತಿ ಎಲ್ಲವೂ ಪ್ರತಿಗಾಮಿಯಾಗಿತ್ತು. ಇಲ್ಲಿನ ಇಂಗ್ಲಿಷ್ ಆಡಳಿತಗಾರರ ಸಾಮಾಜಿಕ ಅಂತಸ್ತಿನ ಹಿನ್ನೆಲೆಯೂ ಒಂದು ಕಾರಣವಾಗಿತ್ತು. ಆದರೆ ಭಾರತೀಯರು ಪ್ರಗತಿ ಮಾರ್ಗದಲ್ಲಿ ಮುಂದುವರಿದರೆ ಎಲ್ಲಿ ಬಲಗೊಂಡು ಭಾರತದ ಮೇಲಣ ಬ್ರಿಟಿಷರ ಹಿಡಿತವನ್ನೆ ಸಡಿಲಿಸುತ್ತಾರೋ ಎಂಬ ಭಯವು ಇನ್ನೂ ಪ್ರಬಲಕಾರಣವಾಗಿತ್ತು. ಅವರ ಎಲ್ಲ ಭಾವನೆಯಲ್ಲಿ ಮತ್ತು ನೀತಿಯಲ್ಲಿ ಭಾರತ ಜನತೆ ಎಂದರೆ ಭಯ. ಏಕೆಂದರೆ ಅವರೊಡನೆ ಸೇರಲು ಇಷ್ಟಪಡಲಿಲ್ಲ; ಸೇರಲು ಸಾಧ್ಯವೂ ಇರಲಿಲ್ಲ. ಸಾಮಾನ್ಯ ಜನತೆಯಿಂದ ತೀರ ಭಿನ್ನರಾಗಿ, ದೂರವಾಗಿ ಅವರ ಮಧ್ಯೆ ಒಂದು ವಿರೋಧ ಪರಕೀಯ ಆಡಳಿತಗಾರ ಸಂಗಡವಾಗಿಯೇ ಉಳಿಯಬೇಕಾಯಿತು. ಬದಲಾವಣೆಗಳಾದವು; ಕೆಲವು ಪ್ರಗತಿಪರ ಬದಲಾವಣೆಗಳೂ ಆದವು. ಅದು ಬ್ರಿಟಿಷರ ಆಡಳಿತ ನೀತಿಯಿಂದಲ್ಲ; ಆದರೆ ಬ್ರಿಟಿಷರ ಮೂಲಕ ನವಚೈತನ್ಯದ ಪಾಶ್ಚಿಮಾತ್ಯದೊಡನೆ ದೊರೆತ ಸಂಪರ್ಕವೇ ಆ ಪ್ರಗತಿಗೆ ಕಾರಣ.'

ಆಂಗ್ಲರಲ್ಲಿ ಕೆಲವು ಮಹಾನುಭಾವರು, ಶಿಕ್ಷಣ ಶಾಸ್ತ್ರಜ್ಞರು, ಪೌರ್ವಾತ್ಯ ಜ್ಞಾನಾಸಕ್ತರು, ಪತ್ರಿಕೋದ್ಯಮಿಗಳು, ಮತಪ್ರಚಾರಕರು ಮತ್ತು ಇತರರು ಪಾಶ್ಚಿಮಾತ್ಯ ಸಂಸ್ಕೃತಿಯನ್ನು ಭಾರತಕ್ಕೆ ತರುವುದರಲ್ಲಿ ಪ್ರಮುಖ ಪಾತ್ರವಹಿಸಿದರು. ಆ ಪ್ರಯತ್ನದಲ್ಲಿ ತಮ್ಮ ಅಧಿಕಾರಿಗಳನ್ನೇ ಅವರು ಎದುರಿಸಬೇಕಾಯಿತು. ಆಧುನಿಕ ವಿದ್ಯಾಭ್ಯಾಸ ಪದ್ಧತಿಯನ್ನು ದೇಶದಲ್ಲಿ ಹರಡಲು ಹೆದರಿ ಆದಷ್ಟು ಅಡ್ಡಿಮಾಡಿದರು. ಆದರೂ ಕೆಲವು ದಕ್ಷರೂ ಪ್ರಾಮಾಣಿಕರೂ ಆದ ಆಂಗ್ಲೆಯರು ಮುಂದೆಬಂದು, ಉತ್ಸಾಹಶಾಲಿಗಳಾದ ಭಾರತೀಯ ವಿದ್ಯಾರ್ಥಿಗಳನ್ನು ಸುತ್ತ ಸೇರಿಸಿಕೊಂಡು ಆಂಗ್ಲ ಸಾಹಿತ್ಯ, ಭಾವನೆ ಮತ್ತು ರಾಜಕೀಯ ಸಂಪ್ರದಾಯವನ್ನು ಭಾರತಕ್ಕೆ ಪರಿಚಯಮಾಡಿಕೊಟ್ಟರು. ಆಂಗ್ಲರೆಂದರೆ ಗ್ರೇಟಬ್ರಿಟನ್ನಿನ ಎಲ್ಲರನ್ನೂ, ಐರಿಷ್ ಜನರನ್ನೂ ಅದರಲ್ಲಿ ಸೇರಿಸುತ್ತೇನೆ. ಅದು ತಪ್ಪಾದರೂ ಬ್ರಿಟಿಷ್ ಎಂಬ ಪದ ನನಗೆ ಸರಿಬೀಳುವುದಿಲ್ಲ ಮತ್ತು ಪ್ರಾಯಶಃ ಅದರಲ್ಲಿ ಐರಿಷ್ ಜನರು ಸೇರುವುದೂ ಇಲ್ಲ. ಅದಕ್ಕಾಗಿ ಐರಿಷ್, ವೆಲ್ಷ್ ಮತ್ತು ಸ್ಕಾಟ್‌ಲೆಂಡ್ ಜನರ ಕ್ಷಮೆಬೇಡುತ್ತೇನೆ. ಭಾರತದಲ್ಲಿ ಅವರೆಲ್ಲರೂ ಯಾವ ವ್ಯತ್ಯಾಸವೂ ಇಲ್ಲದೆ ಒಂದು ಅವಿಭಕ್ತ ಸಂಗಡದಂತೆ ನಡೆದುಕೊಂಡಿದ್ದಾರೆ. ಬ್ರಿಟಿಷ್ ಸರಕಾರವು ಸಹ ವಿದ್ಯಾಭ್ಯಾಸದ ಪ್ರಗತಿಗೆ ಎಷ್ಟೇ ವಿರುದ್ಧವಿದ್ದರೂ ದೊಡ್ಡದಾಗಿ ಬೆಳೆಯುತ್ತಿದ್ದ ತಮ್ಮ ಕಛೇರಿಗೆ ಗುಮಾಸ್ತರುಗಳನ್ನು ತಯಾರು ಮಾಡಲು ಶಿಕ್ಷಣ ಕೊಡಬೇಕಾದ್ದು ಅನಿವಾರ್ಯವಾಯಿತು. ಈ ಸಣ್ಣ ನೌಕರರನ್ನು ದೊಡ್ಡ ಸಂಖ್ಯೆಯಲ್ಲಿ ಇಂಗ್ಲೆಂಡಿನಿಂದ ತರುವುದು ಅಸಾಧ್ಯವಾಗಿತ್ತು. ಆದ್ದರಿಂದ ನಿಧಾನವಾಗಿ ವಿದ್ಯಾಭ್ಯಾಸವು ಮುಂದುವರಿಯಿತು. ಅದು ಎಷ್ಟೇ ಸಂಕುಚಿತವೂ, ಅಯೋಗ್ಯವೂ ಆಗಿದ್ದಾಗ್ಯೂ ಭಾರತೀಯ ಮನಸ್ಸಿನ ಕಿಟಕಿ ಬಾಗಿಲುಗಳನ್ನು ತೆರೆದು ನೂತನ ಯೋಚನೆಗಳಿಗೆ, ಪ್ರಗತಿಪರ ಭಾವನೆಗಳಿಗೆ ದಾರಿ ಮಾಡಿಕೊಟ್ಟಿತು.

ಮುದ್ರಣಮಂದಿರ ಮತ್ತು ಯಂತ್ರೋಪಕರಣಗಳ ಪರಿಚಯವಾದರೆ ಭಾರತೀಯ ಮನಸ್ಸಿನ ಮೇಲೆ ಕ್ರಾಂತಿಕಾರಕವೂ, ಭಯಂಕರವೂ ಆದ ಪರಿಣಾಮ ಮಾಡಬಹುದೆಂದೂ, ಆದ್ದರಿಂದ ರಾಜದ್ರೋಹ ಬೆಳೆಯದಂತೆ ಮತ್ತು ಕೈಗಾರಿಕಾ ಪ್ರಗತಿಯಾಗದಂತೆ ಯಾವ ಪ್ರೋತ್ಸಾಹವನ್ನೂ ಕೊಡಬಾರದೆಂದೂ ತೀರ್ಮಾನಿಸಿದರು. ಒಂದು ಬಾರಿ ನೈಜಾಮನು ಯೂರೋಪಿನ ಯಂತ್ರೋಪಕರಣಗಳನ್ನು ನೋಡಬೇಕೆಂದು ಅಪೇಕ್ಷೆಪಟ್ಟನಂತೆ. ಅಲ್ಲಿನ ಬ್ರಿಟಿಷ್ ರೆಸಿಡೆಂಟ್ ಒಂದು ಗಾಳಿಯ ಪಂಪನ್ನೂ ಒಂದು ಮುದ್ರಣ ಯಂತ್ರವನ್ನೂ ತಂದು ತೋರಿಸಿದನಂತೆ. ನೈಜಾಮನ ಮಾನಸಿಕ

ಕುತೂಹಲ ತೃಪ್ತಿಗೊಂಡ ಮೇಲೆ ಇತರ ಬಹುಮಾನ ನಜರುಗಳಂತೆ ಅವನ್ನೂ ಉಗ್ರಾಣಕ್ಕೆ ಸೇರಿಸ ಲಾಯಿತಂತೆ. ಆದರೆ ಇದು ಕಲ್ಕತ್ತೆಯಲ್ಲಿನ ಸರಕಾರಕ್ಕೆ ತಿಳಿದು ಬಂದ ಒಡನೆ ರೆಸಿಡೆಂಟನ ಅಜಾಗ ರೂಕತೆಗೆ ಅಸಮಾಧಾನ ವ್ಯಕ್ತಪಡಿಸಿ ದೇಶೀಯ ಸಂಸ್ಥಾನದಲ್ಲಿ ಮುದ್ರಣಯಂತ್ರ ತರಿಸಿದ್ದಕ್ಕೆ ಕಟುವಾಗಿ ಟೀಕೆ ಮಾಡಿದರಂತೆ! ಸರಕಾರ ಇಷ್ಟಪಟ್ಟರೆ ಕೂಡಲೆ ಆ ಮುದ್ರಣ ಯಂತ್ರವನ್ನು ಗುಪ್ತವಾಗಿ, ಚೂರು ಚೂರು ಮಾಡಿಸುತ್ತೇನೆ ಎಂದು ರೆಸಿಡೆಂಟ್ ತಿಳಿಸಿದನೆಂದು ಒಂದು ಕತೆ ಇದೆ.

ಖಾಸಗಿ ಮುದ್ರಣ ಮಂದಿರಗಳನ್ನು ಸ್ಥಾಪಿಸಲು ಯಾವ ಪ್ರೋತ್ಸಾಹವು ದೊರೆಯದಿದ್ದರೂ, ಮುದ್ರಣ ಮಂದಿರವಿಲ್ಲದೆ ಸರಕಾರಕ್ಕೆ ಕೆಲಸ ನಡೆಸುವುದು ಅಸಾಧ್ಯವಾಯಿತು. ಆದ್ದರಿಂದ ಕಲ್ಕತ್ತ ಮದ್ರಾಸ್ ಮುಂತಾದ ಕಡೆಗಳಲ್ಲಿ ಸರಕಾರಿ ಮುದ್ರಣ ಮಂದಿರಗಳಾದವು. ಮೊದಲನೆಯ ಖಾಸಗಿ ಮುದ್ರಣ ಮಂದಿರವನ್ನು ಸ್ಥಾಪಿಸಿದವರು ಶ್ರೀರಾಮಪುರದ ಬ್ಯಾಪ್ಟಿಸ್ಟ್ ಮತಪ್ರಚಾರಕರು. ಮೊದ ಲನೆಯ ವೃತ್ತಪತ್ರಿಕೆ ಹೊರಟದ್ದು ೧೭೮೦ರಲ್ಲಿ ಒಬ್ಬ ಆಂಗ್ಲೇಯನಿಂದ.

ಈ ಎಲ್ಲ ಪರಿವರ್ತನೆಗಳಿಂದ ಭಾರತೀಯ ಮನಸ್ಸಿನಮೇಲೆ ಕ್ರಮೇಣ ಮಹತ್ಪರಿಣಾಮವಾಗಿ ನವಚೈತನ್ಯ ಮೂಡಿತು. ಈ ಯೂರೋಪಿನ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾದವರು ಒಂದು ಸಣ್ಣ ಪಂಗಡ ಮಾತ್ರ. ಭಾರತದ ಜನತೆಯು ಯೂರೋಪಿಯನ್ ಸಂಸ್ಕೃತಿಗಿಂತ ಭಾರತೀಯ ದಾರ್ಶ ನಿಕ ಹಿನ್ನೆಲೆಯೇ ಶ್ರೇಷ್ಠವೆಂದು ನಂಬಿ ಆ ಹಿನ್ನೆಲೆಯ ಆಶ್ರಯದಲ್ಲಿಯೇ ನಡೆಯಿತು. ಪಾಶ್ಚಿ ಮಾತ್ಯದ ನಿಜವಾದ ಪ್ರೌಢಿಮೆ ಮತ್ತು ಪ್ರಭಾವ ನಿತ್ಯಜೀವನದ ಪ್ರಾಯೋಗಿಕ ಪದ್ಧತಿಯಲ್ಲ. ಪೌರ್ವಾತ್ಯ ಜೀವನಕ್ಕಿಂತ ಅದು ನಿಜವಾಗಿಯೂ ಪ್ರಗತಿಪರವಿತ್ತು. ರೈಲುಗಾಡಿ, ಮುದ್ರಣಯಂತ್ರ ಇತರ ಯಂತ್ರೋಪಕರಣಗಳು, ಹೆಚ್ಚು ವಿನಾಶಕಾರಕವಾದ ಯುದ್ಧಪದ್ಧತಿ–ಮುಂತಾದ ಹೊಸ ಕೌಶಲವನ್ನು ಅಲ್ಲಗಳೆಯುವಂತಿರಲಿಲ್ಲ. ತಿಳಿದೂ ತಿಳಿಯದಂತೆ ಅಪ್ರತ್ಯಕ್ಷವಾಗಿ ಇವೆಲ್ಲವೂ ಹಿಂದಿನ ಭಾರತೀಯ ಪದ್ಧತಿಗೆ ಎದುರು ನಿಂತು ಜನರ ಮನಸ್ಸಿನಲ್ಲಿ ಒಂದು ವಿರೋಧ ಭಾವನೆಯನ್ನುಂಟು ಮಾಡಿದವು. ಎಲ್ಲಕ್ಕೂ ಹೆಚ್ಚಾಗಿ ಹಿಂದಿನ ಭೂಸ್ವಾಮ್ಯದ ಪದ್ಧತಿಯು ಹಾಳಾಯಿತು. ಸ್ವಂತ ಆಸ್ತಿ ಮತ್ತು ಜಮೀನುದಾರಿ ಪದ್ಧತಿಗಳು ಬಂದವು. ಹಣಕಾಸಿನ ಆರ್ಥಿಕ ನೀತಿಯಿಂದ ಭೂಮಿ ಯನ್ನು ಮಾರಲು ಅವಕಾಶ ದೊರೆಯಿತು. ದುಡ್ಡಿನ ಪ್ರಭಾವದಿಂದ ಸಹಸ್ರಾರು ವರ್ಷಗಳಿಂದ ನಡೆದು ಬಂದ ಸಂಪ್ರದಾಯ ನುಚ್ಚುನೂರಾಯಿತು.

ಬ್ರಿಟಿಷರ ಆಳ್ವಿಕೆಯು ಇತರ ಪ್ರಾಂತ್ಯಗಳಿಗೆ ಹರಡುವ ಮುಂಚೆ, ಐವತ್ತು ವರ್ಷಗಳ ಮೊದಲೇ ಬಂಗಾಳ ಬ್ರಿಟಿಷರ ಆಡಳಿತಕ್ಕೆ ಒಳಪಟ್ಟಿದ್ದರಿಂದ ಭೂಸ್ವಾಮ್ಯ, ಉದ್ಯೋಗ, ವಿದ್ಯಾಭ್ಯಾಸ ಮತ್ತು ಮಾನಸಿಕ ಪದ್ಧತಿಗಳ ಪರಿವರ್ತನೆಯನ್ನು ಕಂಡು, ಅನುಭವಿಸಿದ್ದು ಬಂಗಾಲದಲ್ಲೇ ಎಲ್ಲಕ್ಕಿಂತ ಮೊದಲು. ಆದ್ದರಿಂದ ಬ್ರಿಟಿಷ್-ಭಾರತೀಯ ಜೀವನ ಸಂಪರ್ಕದಲ್ಲಿ ಹದಿನೆಂಟನೆಯ ಶತಮಾನದ ಕೊನೆ ಮತ್ತು ಹತ್ತೊಂಭತ್ತನೆಯ ಶತಮಾನದ ಆರಂಭದಲ್ಲಿ ಬಂಗಾಲ ಬಹಳ ಪ್ರಮುಖ ಪಾತ್ರ ವಹಿಸಿತು. ಬಂಗಾಲ ಬ್ರಿಟಿಷ್ ಅಧಿಕಾರದ ಕೇಂದ್ರ ಮತ್ತು ಹೃದಯ ಮಾತ್ರ ಆಗಿತ್ತಲ್ಲದೆ ಬ್ರಿಟಿಷ್ ಅಧಿಕಾರ ಚಕ್ರದ ನೆರಳಿನಲ್ಲಿ ಭಾರತದ ಇತರ ಪ್ರಾಂತ್ಯಗಳಿಗೆ ಹರಡಿದ ಇಂಗ್ಲಿಷ್ ವಿದ್ಯಾವಂತ ಭಾರತೀಯ ಅಧಿಕಾರಿವರ್ಗದ ಮೊದಲ ಪಡೆಗಳನ್ನು ತಯಾರುಮಾಡಿತು. ಹತ್ತೊಂಭತ್ತನೆಯ ಶತಮಾನದಲ್ಲಿ ಬಂಗಾಲದಲ್ಲಿ ಅನೇಕ ಮಹಾವ್ಯಕ್ತಿಗಳು ಜನ್ಮತಾಳಿದರು. ಉಳಿದ ಭಾರತಕ್ಕೆ ಅವರು ಸಂಸ್ಕೃತಿ ಮತ್ತು ರಾಜಕೀಯ ವಿಚಾರಗಳಲ್ಲಿ ಮಾರ್ಗದರ್ಶಕರಾದುದೂ ಮಾತ್ರವಲ್ಲದೆ ಅವರ ಪ್ರಯತ್ನದಿಂದ ಹೊಸ ರಾಷ್ಟ್ರೀಯ ಆಂದೋಲನವು ಕ್ರಮೇಣ ರೂಪುಗೊಂಡಿತು. ಬಂಗಾಲ ಬ್ರಿಟಿಷ್ ಆಳ್ವಿಕೆಯ ಬಹುಕಾಲದ ಅನುಭವ ಪಡೆದಿತ್ತು; ಮಾತ್ರವಲ್ಲದೆ ಅದರ ಆರಂಭದ ಕಾಠಿಣ್ಯ, ವೈಪರೀತ್ಯ, ಸಡಿಲು ಸ್ವಭಾವದ ಅನುಭವವನ್ನೂ ಪಡೆದಿತ್ತು. ಉತ್ತರ ಮತ್ತು ಮಧ್ಯಭಾರತ

ಪ್ರದೇಶಗಳು ಬ್ರಿಟಿಷರ ಅಧೀನವಾಗುವ ಮುಂಚೆಯೇ ಅವರ ಅಧಿಕಾರವನ್ನು ಒಪ್ಪಿ ಅದಕ್ಕೆ ಶರಣು ಹೋಗಿತ್ತು. ೧೮೫೭ರ ದಂಗೆಯ ಮೊದಲ ಕಿಡಿಯು ಕಲ್ಕತ್ತೆಯ ಬಳಿ ಡಮ್‌ಡಮ್‌ನಲ್ಲಿ ಆಕಸ್ಮಿಕವಾಗಿ ಹಾರಿದರೂ ಆ ಮಹಾಕ್ರಾಂತಿಯಿಂದ ಬಂಗಾಲದ ಮೇಲೆ ಯಾವ ಪರಿಣಾಮವೂ ಆಗಲಿಲ್ಲ.

ಬ್ರಿಟಿಷರ ಆಳ್ವಿಕೆಗೆ ಮೊದಲು ಬಂಗಾಲ ಮೊಗಲ್ ಚಕ್ರಾಧಿಪತ್ಯದ ಒಂದು ಮುಖ್ಯ ಪ್ರಾಂತ್ಯವಾಗಿದ್ದರೂ ಕೇಂದ್ರದಿಂದ ದೂರದ ಒಂದು ಗಡಿ ಪ್ರಾಂತ್ಯವಾಗಿತ್ತು. ಮಧ್ಯಯುಗದ ಆರಂಭದಲ್ಲಿ ಅನೇಕ ಅನಾಗರಿಕ ಪೂಜಾಪದ್ಧತಿಗಳೂ, ತಾಂತ್ರಿಕ ದರ್ಶನ ಮತ್ತು ಆಚರಣೆಗಳೂ ಹಿಂದೂಗಳಲ್ಲಿ ಬೇರೂರಿದ್ದವು. ಕ್ರಮೇಣ ಅನೇಕ ಹಿಂದೂ ಸಮಾಜ ಸುಧಾರಣಾ ಚಳವಳಿಗಳು ಹುಟ್ಟಿ ಸಮಾಜ ಪದ್ಧತಿ, ಧರ್ಮಶಾಸ್ತ್ರ ಮತ್ತು ಉತ್ತರಾಧಿಕಾರದ ಹಕ್ಕು ಇವುಗಳ ಮೇಲೆ ವಿಶೇಷ ಪರಿಣಾಮಮಾಡಿ ವ್ಯತ್ಯಾಸಗೊಳಿಸಿದವು. ಮಹಾಜ್ಞಾನಿಯೂ, ಭಕ್ತನೂ, ಭಾವನಾಜೀವಿಯೂ ಆದ ಚೈತನ್ಯನು ಭಕ್ತಿ ಪಂಥದ ವೈಷ್ಣವ ಮತವನ್ನು ಸ್ಥಾಪಿಸಿ ಬಂಗಾಳದ ಜನತೆಯ ಮೇಲೆ ವಿಶೇಷ ಪರಿಣಾಮ ಮಾಡಿದನು. ಬಂಗಾಳಿಗಳು ಉನ್ನತ ಬೌದ್ಧಿಕ ಪ್ರಗತಿಯನ್ನು ಪಡೆದುದಲ್ಲದೆ ಅತ್ಯಂತ ಭಾವನಾಜೀವಿಗಳೂ ಆದರು. ಈ ಶ್ರದ್ಧಾಭಕ್ತಿ ಮತ್ತು ಮಾನವಸೇವಾಸಂಪ್ರದಾಯದ ಪ್ರತಿನಿಧಿಯಾಗಿ ಹತ್ತೊಂಭತ್ತನೆಯ ಶತಮಾನದ ಅಂತ್ಯಭಾಗದಲ್ಲಿ ಇನ್ನೊಬ್ಬ ಮಹಾವ್ಯಕ್ತಿಯ-ರಾಮಕೃಷ್ಣಪರಮಹಂಸರ-ಅವತಾರವಾಯಿತು. ಸಮಾಜಸೇವೆ ಮತ್ತು ಮಾನವ ಸೇವೆಯಲ್ಲಿ ಹಿಂದೆ ಯಾರಿಂದಲೂ ಸಾಧ್ಯವಾಗದ ಪ್ರಮಾಣದಲ್ಲಿ ಕಾರ್ಯ ಸಾಧಿಸಿರುವ ಸೇವಾಪಂಥವೊಂದು ಆತನ ಹೆಸರಿನಲ್ಲಿ ಸ್ಥಾಪನೆಯಾಗಿ ಕೆಲಸಮಾಡುತ್ತಿದೆ ಪುರಾತನ ಫ್ರಾನ್ಸಿಸ್ಕನರಂತೆ ತಾಳ್ಮೆ ಮತ್ತು ಪ್ರೇಮದಿಂದ ಉನ್ನತ ಸೇವಾಧ್ಯೇಯದಿಂದ ಮತ್ತು ಕ್ವೇಕರ್‌ಗಳಂತೆ ಸದ್ದಿಲ್ಲದ, ನಿರಾಡಂಬರದ ಕಾರ್ಯದಕ್ಷತೆಳಿಂದ ರಾಮಕೃಷ್ಣಮಠದ ಸಂನ್ಯಾಸಿಗಳು ಭಾರತ ಅಥವ ಹೊರಗಡೆ ಎಲ್ಲಿ ಆಪತ್ತು ಒದಗಿದರೂ ಅಲ್ಲಿ ತಮ್ಮ ಆಸ್ಪತ್ರೆಗಳು, ಶಾಲೆಗಳು, ಮುಂತಾದ ಸೇವಾಕೇಂದ್ರಗಳನ್ನು ಸ್ಥಾಪಿಸಿ ಸಹಾಯ ನೀಡಿದ್ದಾರೆ.

ರಾಮಕೃಷ್ಣನು ಸನಾತನ ಭಾರತೀಯ ಸೇವಾದೃಷ್ಟಿಯ ಪ್ರತಿನಿಧಿ. ಆತನಿಗೆ ಮೊದಲು ಹದಿನೆಂಟನೆಯ ಶತಮಾನದಲ್ಲಿ ಬಂಗಾಳದಲ್ಲಿ ಇನ್ನೊಬ್ಬ ಮಹಾವ್ಯಕ್ತಿಯು ಅವತಾರಮಾಡಿದ್ದನು. ಆತನೇ ಸನಾತನ ಮತ್ತು ನೂತನ ಪಾಂಡಿತ್ಯಗಳೆರಡರಲ್ಲೂ ನಿಷ್ಣಾತನಾದ ರಾಜಾರಾಮಮೋಹನ ರಾಯ್. ಭಾರತೀಯ ಭಾವನೆ ಮತ್ತು ದರ್ಶನಗಳಲ್ಲಿ ಆಳವಾದ ಪರಿಚಯ ಪಡೆದು ಸಂಸ್ಕೃತ ಪಾರಸಿ ಮತ್ತು ಅರಬ್ಬಿ ಭಾಷೆಗಳಲ್ಲಿ ಅಸಾಧಾರಣ ಪಂಡಿತನಾಗಿದ್ದನು. ಮತ್ತು ಭಾರತದ ಸುಸಂಸ್ಕೃತ ಜನರಲ್ಲಿ ಆಗ ಬಳಕೆಯಲ್ಲಿದ್ದ ಹಿಂದು ಮತ್ತು ಮುಸ್ಲಿಂ ಮಿಶ್ರ ಸಂಸ್ಕೃತಿಯ ಫಲವಾಗಿದ್ದನು. ಭಾರತಕ್ಕೆ ಬ್ರಿಟಿಷರ ಆಗಮನ ಮತ್ತು ಅವರ ಅನೇಕ ಉತ್ತಮ ಶಕ್ತಿಸಾಮರ್ಥ್ಯಗಳನ್ನು ಕಂಡು ಬೆರಗಾಗಿ ಅವರ ಸಂಸ್ಕೃತಿ ಮೂಲವನ್ನು ಹುಡುಕಬೇಕೆಂಬ ಕುತೂಹಲವು ಆತನ ಮನಸ್ಸಿನಲ್ಲಿ ಮೂಡಿತ್ತು. ಇಂಗ್ಲಿಷ್ ಕಲಿತ ಮೇಲೆ ಅಷ್ಟೇ ಸಾಲದೆಂದು ಅರಿತನು. ಪಾಶ್ಚಾತ್ಯರ ಧರ್ಮ, ಮತ್ತು ಸಂಸ್ಕೃತಿಯ ಮೂಲ ಕಂಡುಹಿಡಿಯಲು ಗ್ರೀಕ್, ಲ್ಯಾಟಿನ್ ಮತ್ತು ಹೀಬ್ರೂ ಭಾಷೆಗಳನ್ನು ಕಲಿತನು. ಆಗಿನ ಕಾಲದಲ್ಲಿ ಈಗಿನಷ್ಟು ಯಾಂತ್ರಿಕ ಪ್ರಗತಿ ಇಲ್ಲದಿದ್ದರೂ ಪಾಶ್ಚಾತ್ಯ ನಾಗರಿಕತೆಯ ವಿಜ್ಞಾನ ಮತ್ತು ಯಾಂತ್ರಿಕ ಪ್ರಗತಿಯನ್ನು ಕಂಡು ಮನಸೋತನು. ಮಹಾಜ್ಞಾನಿಯೂ ದಾರ್ಶನಿಕನೂ ಆದ್ದರಿಂದ ಆತನ ಒಲವು ಪ್ರಾಚೀನ ಸಾಹಿತ್ಯದ ಕಡೆ ಹೋಯಿತು. ಪೌರ್ವಾತ್ಯ ಪಂಡಿತನಾದ ಮೋನಿಯರ್ ವಿಲಿಯಮ್ಸ್ ಆತನನ್ನು ಕುರಿತು "ಸರ್ವಧರ್ಮಗಳ ತುಲನಾತ್ಮಕ ವಿಜ್ಞಾನದಲ್ಲಿ ಇದುವರೆಗೆ ಪ್ರಪಂಚದ ಶ್ರದ್ಧಾತ್ಮಕ ಸಂಶೋಧಕರಲ್ಲಿ ಈತನೇ ಹಿರಿಯ" ಎಂದಿದ್ದಾನೆ. ಆದರೂ ಆಧುನಿಕ ರೀತಿಯಲ್ಲಿ ವಿದ್ಯಾಭ್ಯಾಸಪದ್ಧತಿಯನ್ನು ಮಾರ್ಪಾಟುಮಾಡಿ ಹಳೆಯ ಪಾಂಡಿತ್ಯ ಬಂಧನದಿಂದ ಬಿಡಿಸಬೇಕೆಂಬುದೇ ಆತನ ಆಶೆಯಾಗಿತ್ತು. ಆ ಕಾಲದಲ್ಲಿ ಸಹ ವಿಜ್ಞಾನರೀತಿಗೆ ಆತನು ಬೆಂಬಲ ಕೊಟ್ಟನು. ಗಣಿತಶಾಸ್ತ್ರ, ಪ್ರಕೃತಿವಿಜ್ಞಾನ, ರಸಾಯನಶಾಸ್ತ್ರ, ಶರೀರಶಾಸ್ತ್ರ ಮುಂತಾದ ಉಪ

ಯುಕ್ತ ವಿಜ್ಞಾನವಿಷಯಗಳನ್ನು ವಿದ್ಯಾಭ್ಯಾಸಕ್ರಮದಲ್ಲಿ ಸೇರಿಸಬೇಕೆಂದು ಒತ್ತಾಯಮಾಡಿ ಗೌರ್ನರ್ ಜನರಲ್‌ಗೆ ಪತ್ರ ಬರೆದನು.

ಆತನು ಮಹಾವಿದ್ವಾಂಸನೂ, ಸಂಶೋಧಕನೂ ಮಾತ್ರವಲ್ಲದೆ ಉನ್ನತ ಸಮಾಜ ಸುಧಾರಕನಾಗಿದ್ದನು. ಬಾಲ್ಯದಲ್ಲಿ ಇಸ್ಲಾಂ ಧರ್ಮವೂ, ಅನಂತರ ಕ್ರೈಸ್ತಮತವೂ ಆತನಮೇಲೆ ವಿಶೇಷ ಪರಿಣಾಮ ಮಾಡಿದ್ದರೂ ತನ್ನ ಮೂಲಧರ್ಮವನ್ನು ಬಿಡಲಿಲ್ಲ. ಆದರೆ ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ದುರ್ವ್ಯಾಪಾರಗಳನ್ನೂ, ದುರುಪಯೋಗವನ್ನೂ ವಿರೋಧಿಸಿ ಹಿಂದೂಧರ್ಮವನ್ನು ಸುಧಾರಿಸಲು ಪ್ರಯತ್ನಪಟ್ಟನು. 'ಸತಿ' ಪದ್ಧತಿಯನ್ನು ಬ್ರಿಟಿಷ್ ಸರಕಾರವು ನಿಲ್ಲಿಸಲು ಆತನ ಹೋರಾಟವೇ ಕಾರಣ. ಸತಿ ಅಥವ ಸಹಗಮನ ಪದ್ಧತಿಯು ಎಲ್ಲ ಕಡೆಯಲ್ಲೂ ಆಚರಣೆಯಲ್ಲಿರಲಿಲ್ಲ. ಉನ್ನತವರ್ಗದ ಸ್ವಲ್ಪ ಜನರಲ್ಲಿ ಮಾತ್ರ ಆಚರಣೆಯಲ್ಲಿತ್ತು. ಯಜಮಾನನು ಸತ್ತಾಗ ಆತನನ್ನೇ ಅವಲಂಬಿಸಿದ್ದ ಪರಿವಾರದವರು ಮತ್ತು ಸೇವಕರು ಆತನೊಂದಿಗೆ ಸಾಯುವ ಪದ್ಧತಿಯು ಸಿಥಿಯನ್ ಟಾರ್ಟರರಲ್ಲಿ ಅನುಷ್ಠಾನದಲ್ಲಿತ್ತು. ಪ್ರಾಯಶಃ ಅವರಿಂದಲೇ ಭಾರತಕ್ಕೂ ಬಂದು 'ಸತಿ' ಪದ್ಧತಿಯು ಆರಂಭವಾಗಿರಬೇಕು. ಪ್ರಾಚೀನ ಸಂಸ್ಕೃತ ಸಾಹಿತ್ಯದಲ್ಲಿ 'ಸತಿ'ಯನ್ನು ನಿಷೇಧಿಸಲಾಗಿದೆ. ಅದನ್ನು ನಿಲ್ಲಿಸಬೇಕೆಂದು ಅಕ್ಬರ್ ಬಹಳ ಪ್ರಯತ್ನಪಟ್ಟನು. ಮರಾಠರು ಸಹ ಅದನ್ನು ವಿರೋಧಿಸಿದರು.

ಭಾರತೀಯ ವೃತ್ತಪತ್ರಿಕೆಯನ್ನು ಸ್ಥಾಪಿಸಿದ ಮೊದಲಿಗರಲ್ಲಿ ರಾಮಮೋಹನರಾಯನೂ ಒಬ್ಬ. ೧೭೮೦ರಿಂದ ಈಚೆಗೆ ಆಂಗ್ಲರು ಭಾರತದಲ್ಲಿ ಅನೇಕ ವೃತ್ತಪತ್ರಿಕೆಗಳನ್ನು ಪ್ರಕಟಿಸಿದರು. ಸರಕಾರವನ್ನು ಕಟುವಾಗಿ ಟೀಕೆ ಮಾಡುತ್ತಿದ್ದದ್ದರಿಂದ ಸರಕಾರದ ವಿರೋಧವನ್ನು ಕಟ್ಟಿಕೊಂಡು ಪ್ರಬಲ ಸರಕಾರದ ಹತೋಟಿಗೆ ಅವರು ಗುರಿಯಾಗಬೇಕಾಯಿತು. ಭಾರತದಲ್ಲಿ ವೃತ್ತಪತ್ರಿಕಾ ಸ್ವಾತಂತ್ರ್ಯಕ್ಕಾಗಿ ಮೊದಲು ಹೋರಾಡಿದವರು ಆಂಗ್ಲರು. ಅವರಲ್ಲಿ ಜೇಮ್ಸ್ ಸಿಲ್ಕ್ ಬಕಿಂಘ್ಯಾಮ್ ಎಂಬಾತನನ್ನು ಗಡೀಪಾರು ಮಾಡಿದರು. ಭಾರತೀಯರು ಸ್ವಂತ ಸಂಪಾದಕರಾಗಿ ಮುದ್ರಣಮಾಡಿದ ಮೊದಲ ವೃತ್ತಪತ್ರಿಕೆ ಹೊರಟಿದ್ದು ೧೮೧೮ರಲ್ಲಿ. ಅದೇ ವರ್ಷ ಶ್ರೀರಾಮಪುರದ ಬ್ಯಾಪ್ಟಿಸ್ಟ್ ಮತಪ್ರಚಾರಕರು ಬಂಗಾಳಿಯಲ್ಲಿ ಹೊರಡಿಸಿದ ಮಾಸಪತ್ರಿಕೆ ಮತ್ತು ವಾರಪತ್ರಿಕೆಗಳೇ ಭಾರತೀಯ ಭಾಷೆಯೊಂದರಲ್ಲಿ ಹೊರಟ ಮೊದಲನೆಯ ವೃತ್ತಪತ್ರಿಕೆಗಳು. ಅನಂತರ ಕಲ್ಕತ್ತ, ಮದ್ರಾಸ್, ಮತ್ತು ಮುಂಬೈ ನಗರಗಳಲ್ಲಿ ವೃತ್ತಪತ್ರಿಕೆಗಳೂ ವಾರ ಮತ್ತು ಮಾಸಿಕ ಪತ್ರಿಕೆಗಳೂ ಮೇಲಿಂದ ಮೇಲೆ ಹೊರಬಿದ್ದವು.

ಈ ಹೊತ್ತಿಗೆ, ಅನೇಕ ಏರಿಳಿತಗಳಿಂದ ಇಂದಿನವರೆಗೂ ಸತತವಾಗಿ ನಡೆದು ಬಂದಿರುವ ವೃತ್ತಪತ್ರಿಕಾ ಸ್ವಾತಂತ್ರ್ಯದ ಹೋರಾಟವು ಆರಂಭವಾಯಿತು. ವಿಚಾರಣೆಯಿಲ್ಲದೆ ಸೆರೆಮನೆಯಲ್ಲಿಡಬಹುದಾದ ಕ್ರೂರಶಾಸನವು ಕಡತಕ್ಕೇರಿದ್ದು ೧೮೧೮ರಲ್ಲಿ. ಈ ಶಾಸನ ಇನ್ನೂ ಆಚರಣೆಯಲ್ಲಿದೆ. ೧೫೬ ವರ್ಷಗಳಾದಾಗ್ಯೂ ಅದರ ಅಧಿಕಾರ ವ್ಯಾಪ್ತಿಯಲ್ಲಿ ಇನ್ನೂ ಅನೇಕರು ಸೆರೆಮನೆಯಲ್ಲಿ ಕೊಳೆಯುತ್ತಿದ್ದಾರೆ.

ರಾಮಮೋಹನರಾಯ್ ಅನೇಕ ವೃತ್ತಪತ್ರಿಕೆಗಳ ಸಂಬಂಧ ಇಟ್ಟುಕೊಂಡಿದ್ದ. ಬಂಗಾಲಿ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಒಂದು ದ್ವಿಭಾಷಾಪತ್ರಿಕೆಯನ್ನೂ, ದೇಶಾದ್ಯಂತ ಪ್ರಚಾರವಾಗಲೆಂದು ಆಗ ಭಾರತದ ಉನ್ನತ ವರ್ಗದ ಭಾಷೆಯಾಗಿದ್ದ ಪಾರಸಿಯಲ್ಲಿ ಒಂದು ವಾರಪತ್ರಿಕೆಯನ್ನೂ ಹೊರಡಿಸಿದನು. ೧೮೨೩ರಲ್ಲಿ ವೃತ್ತಪತ್ರಿಕೆಗಳ ಹತೋಟಿ ಶಾಸನಕ್ಕೆ ಬಲಿಯಾಗಿ ಆ ಪತ್ರಿಕೆ ನಿಂತುಹೋಯಿತು. ರಾಮಮೋಹನನೂ, ಇತರರೂ ಆ ಶಾಸನವನ್ನು ತೀವ್ರ ವಿರೋಧಿಸಿ ಇಂಗ್ಲೆಂಡಿನ ದೊರೆಗೆ ಒಂದು ದೂರು ಸಹ ಕಳುಹಿಸಿದರು.

ರಾಮಮೋಹನರಾಯನ ವೃತ್ತಪತ್ರಿಕೋದ್ಯಮಕ್ಕೂ ಆತನ ಸಮಾಜ ಸುಧಾರಣಾಕಾರ್ಯಕ್ಕೂ ನಿಕಟಸಂಬಂಧವಿತ್ತು. ಆತನ ಸಂಯೋಜಕದೃಷ್ಟಿಯೂ ಮತ್ತು ಸರ್ವ ಸಮ್ಯಗ್ದೃಷ್ಟಿಯೂ ಸನಾತನ ಸಂಪ್ರದಾಯ ಶರಣರಿಗೆ ಸರಿಬೀಳದೆ ಆತನ ಸುಧಾರಣಾ ಕಾರ್ಯಕ್ಕೆ ಅವರು ಉಗ್ರವಾಗಿ ಪ್ರತಿಭಟಿಸಿದರು. ಆದರೆ ಆತನಿಗೂ ಪ್ರಬಲ ಪ್ರೋತ್ಸಾಹಕರಿದ್ದರು. ಬಂಗಾಳದ ಸುಧಾರಣಾ ಪ್ರಗತಿಯಲ್ಲಿ ಪ್ರಮುಖ ಪಾತ್ರ ವಹಿಸಿದವರಲ್ಲಿ ಠಾಕೂರ ವಂಶದವರೇ ಮುಖ್ಯರು. ದೆಹಲಿಯ ಚಕ್ರವರ್ತಿಯ ಪರವಾಗಿ ರಾಮಮೋಹನನು ಇಂಗ್ಲೆಂಡಿಗೆ ಹೋಗಿ ೧೮೩೦ ರ ಸುಮಾರಿನಲ್ಲಿ ಬ್ರಿಸ್ಟಲ್‌ನಲ್ಲಿ ಕಾಲವಾದನು.

ರಾಮಮೋಹನರಾಯ್, ಠಾಕೂರರು, ಮತ್ತು ಇತರರು ಸ್ವಪ್ರಯತ್ನದಿಂದ ಕಲಿತವರು. ಆಗ ಇಂಗ್ಲಿಷ್ ಶಾಲೆಗಳಾಗಲಿ, ಕಾಲೇಜುಗಳಾಗಲಿ ಇರಲಿಲ್ಲ; ಭಾರತೀಯರಿಗೆ ಇಂಗ್ಲಿಷ್ ಕಲಿಸಬಾರದೆಂಬುದೇ ಸರ್ಕಾರದ ನೀತಿಯಾಗಿತ್ತು. ೧೭೮೧ ರಲ್ಲಿ ಸಂಸ್ಕೃತ ಅಭ್ಯಾಸಕ್ಕಾಗಿ ಹಿಂದೂ ಕಾಲೇಜನ್ನೂ, ಅರಬ್ಬಿ ಭಾಷೆಯನ್ನು ಕಲಿಸಲು ಕಲ್ಕತ್ತ ಮದ್ರಸವನ್ನೂ ಸರ್ಕಾರವು ಕಲ್ಕತ್ತೆಯಲ್ಲಿ ಆರಂಭಿಸಿತು. ೧೭೯೧ ರಲ್ಲಿ ಕಾಶಿಯಲ್ಲಿ ಸಂಸ್ಕೃತ ಕಾಲೇಜ್ ಆರಂಭವಾಯಿತು. ಪ್ರಾಯಶಃ ೧೮೨೦ ರ ಸುಮಾರಿನಲ್ಲಿ ಕೆಲವು ಕ್ರೈಸ್ತ ಪ್ರಚಾರಕ ಶಾಲೆಗಳಲ್ಲಿ ಇಂಗ್ಲಿಷ್ ಕಲಿಸಲಾರಂಭಿಸಿದರು. ೧೮೨೦ ರ ಸುಮಾರಿನಲ್ಲಿ ಇಂಗ್ಲಿಷ್ ಕಲಿಸಬೇಕೆಂದು ಸರಕಾರದ ಕೆಲವು ಅಧಿಕಾರಿಗಳು ಅಭಿಪ್ರಾಯಪಟ್ಟರೂ ಅದನ್ನು ವಿರೋಧಿಸಿದರು. ಆದರೆ ಪ್ರಾಯೋಗಿಕವಾಗಿ ದೆಹಲಿಯ ಅರಬ್ಬಿ ಶಾಲೆಯಲ್ಲಿ ಮತ್ತು ಕಲ್ಕತ್ತೆಯ ಕೆಲವು ಶಾಲೆಗಳಲ್ಲಿ ಇಂಗ್ಲಿಷ್ ತರಗತಿಗಳನ್ನು ಆರಂಭಿಸಿದರು. ಕಟ್ಟಕಡೆಗೆ ೧೮೩೫ ರಲ್ಲಿ ಮೆಕಾಲೆಯ ಅಭಿಪ್ರಾಯದಂತೆ ಶಿಕ್ಷಣ ಕ್ರಮದಲ್ಲಿ ಇಂಗ್ಲಿಷ್ ವಿದ್ಯಾಭ್ಯಾಸಕ್ಕೆ ಬೆಂಬಲ ದೊರೆತು ಕಲ್ಕತ್ತೆಯಲ್ಲಿ ಪ್ರೆಸಿಡೆನ್ಸಿ ಕಾಲೇಜ್ ಆರಂಭವಾಯಿತು. ೧೮೫೭ ರಲ್ಲಿ ಕಲ್ಕತ್ತ, ಮುಂಬಯಿ ಮದರಾಸ್ ವಿಶ್ವವಿದ್ಯಾನಿಲಯಗಳು ಜನ್ಮತಾಳಿದವು. ಭಾರತೀಯರಿಗೆ ಇಂಗ್ಲಿಷ್ ಕಲಿಸಬಾರದೆಂಬ ಬ್ರಿಟಿಷ್ ಸರಕಾರದ ಅಭಿಪ್ರಾಯದಂತೆ ಬೇರೆ ಕಾರಣಗಳಿಗಾಗಿ ಆಂಗ್ಲರಿಗೆ ಸಂಸ್ಕೃತ ಕಲಿಸಬಾರದೆಂದು ಬ್ರಾಹ್ಮಣ ವಿದ್ವಾಂಸರ ಅಭಿಪ್ರಾಯವಿತ್ತು. ಬಹುಭಾಷಾ ಪಂಡಿತನೂ, ವಿದ್ವಾಂಸನೂ ಆದ ಸರ್ ವಿಲಿಯಮ್ ಜೋನ್ಸ್ ಸುಪ್ರೀಮ್ ಕೋರ್ಟಿನ ನ್ಯಾಯಾಧೀಶನಾಗಿ ಭಾರತಕ್ಕೆ ಬಂದೊಡನೆ ಸಂಸ್ಕೃತ ಕಲಿಯಬೇಕೆಂದು ಆಸೆಪಟ್ಟನು. ವಿಶೇಷ ಬಹುಮಾನ ಕೊಡುತ್ತೇವೆಂದರೂ ಬೇಕಿಲ್ಲದ ಪರಕೀಯರಿಗೆ ತಮ್ಮ ಪವಿತ್ರ ಭಾಷೆಯನ್ನು ಕಲಿಸಲು ಬ್ರಾಹ್ಮಣರು ಯಾರೂ ಮುಂದೆ ಬರಲಿಲ್ಲ. ಕೊನೆಗೆ ಜೋನ್ಸ್ ಒಬ್ಬ ಬ್ರಾಹ್ಮಣೇತರ ವೈದ್ಯನೊಬ್ಬನ ಸಹಾಯದಿಂದ ಅವನು ಹೇಳಿದ ವಿಚಿತ್ರ ಕಠಿಣ ನಿರ್ಬಂಧಗಳಿಗೆ ಒಪ್ಪಿ ಸಂಸ್ಕೃತ ಕಲಿತನು. ಭಾರತದ ಪ್ರಾಚೀನ ಭಾಷೆಯನ್ನು ಕಲಿಯಲು ಅವನ ಜ್ಞಾನದಾಹ ಅಷ್ಟು ತೀವ್ರವಿದ್ದುದರಿಂದ ಎಲ್ಲ ನಿರ್ಬಂಧಗಳಿಗೂ ಒಪ್ಪಿದನು. ಸಂಸ್ಕೃತ ಸಾಹಿತ್ಯದಿಂದ ಅದರಲ್ಲೂ ಪ್ರಾಚೀನ ಭಾರತೀಯ ನಾಟಕಗಳ ಪರಿಚಯದಿಂದ ಮುಗ್ಧನಾದನು. ಸಂಸ್ಕೃತ ಸಾಹಿತ್ಯಸಂಪತ್ತು ಯೂರೋಪಿಗೆ ಪ್ರಥಮ ಪರಿಚಯವಾದದ್ದು ಲೇಖನ ಮತ್ತು ಅನುವಾದಗಳಿಂದ. ೧೭೮೪ ರಲ್ಲಿ ಜೋನ್ಸ್ ಬಂಗಾಳದ ಏಷಿಯಾಟಿಕ್ ಸೊಸೈಟಿಯನ್ನು ಸ್ಥಾಪಿಸಿದನು. ಅದೇ ಮುಂದೆ ರಾಯಲ್ ಏಷಿಯಾಟಿಕ್ ಸೊಸೈಟಿಯಾಯಿತು. ಭಾರತವು ತನ್ನ ಪ್ರಾಚೀನ ಸಾಹಿತ್ಯದ ಪುನರ್ದರ್ಶನಕ್ಕಾಗಿ ಜೋನ್ಸ್ ಮತ್ತು ಇತರ ಯೂರೋಪಿಯನ್ ವಿದ್ವಾಂಸರಿಗೆ ಅಪಾರ ಋಣಿಯಾಗಿದೆ. ಅನಾದಿಯಿಂದ ಅದರ ಪರಿಚಯವಿತ್ತೆಂಬುದು ನಿಜ; ಆದರೆ ಆ ಪರಿಚಯ ಕೆಲವು ವಿದ್ವನ್ಮಂಡಲಿಗಳಲ್ಲಿ ಮಾತ್ರವಿತ್ತು; ಮತ್ತು ಪಾರಸಿ ಭಾಷೆಯ ಪ್ರಾಬಲ್ಯದಿಂದ ಜನರ ಮನಸ್ಸು ಸಂಸ್ಕೃತ ಸಾಹಿತ್ಯದಿಂದ ದೂರವಾಗಿತ್ತು. ಹಳೆಯ ಕರಡು ಪ್ರತಿಗಳನ್ನು ಹುಡುಕುವುದರಲ್ಲಿ ಅನೇಕ ಅಪರಿಚಿತ ಗ್ರಂಥಗಳು ಹೊರಗೆ ಬಂದವು; ಆಧುನಿಕ ವಿಮರ್ಶನಾ ಪದ್ಧತಿಯ ವಿದ್ವತ್ತಿನಿಂದ ಈ ರೀತಿ ಹೊರಬಿದ್ದ ಅಪಾರ ಸಾಹಿತ್ಯಕ್ಕೆ ಒಂದು ನೂತನ ಹಿನ್ನೆಲೆಯು ದೊರೆಯಿತು.

ಮುದ್ರಣ ಮಂದಿರಗಳ ಸ್ಥಾಪನೆ ಮತ್ತು ಉಪಯೋಗದಿಂದ ಜನಸಾಮಾನ್ಯರಲ್ಲಿ ಪ್ರಚಾರದಲ್ಲಿದ್ದ ಭಾರತೀಯ ಭಾಷೆಗಳ ಪ್ರಗತಿಗೆ ತುಂಬ ಪ್ರೋತ್ಸಾಹ ದೊರೆಯಿತು. ಹಿಂದಿ, ಬಂಗಾಳಿ, ಗುಜರಾತಿ, ಮರಾಠಿ, ಉರ್ದು, ತಮಿಳು, ತೆಲುಗು ಭಾಷೆಗಳು ಬಹಳ ಕಾಲದಿಂದ ಬಳಕೆಯಲ್ಲಿದ್ದುವಲ್ಲದೆ ಉತ್ತಮ ಸಾಹಿತ್ಯವನ್ನೂ ಪಡೆದಿದ್ದವು. ಆ ಭಾಷೆಗಳು ಗ್ರಂಥಗಳ ಮೂಲಕ ಜನಸಾಮಾನ್ಯರಲ್ಲಿ ಬಹಳ ಪ್ರಚಾರದಲ್ಲಿದ್ದವು. ಈ ಗ್ರಂಥಗಳೆಲ್ಲ ಬಾಯಿಪಾಠ ಮಾಡಲು ಅನುಕೂಲವಾಗುವಂತೆ ಪದ್ಯ ಅಥವ ಗೀತಗಳ ರೂಪದಲ್ಲಿನ ಪುರಾಣಗಳಾಗಿರುತ್ತಿದ್ದವು. ಆಗಿನ ಕಾಲದಲ್ಲಿ ಗದ್ಯಸಾಹಿತ್ಯವೇ ಇರಲಿಲ್ಲ. ಉತ್ಕೃಷ್ಟ ಬರವಣಿಗೆ ಎಲ್ಲವೂ ಸಂಸ್ಕೃತ ಅಥವಾ ಪಾರಸಿ ಭಾಷೆಯಲ್ಲಿ ಮಾತ್ರ ಇದ್ದು ಸುಸಂಸ್ಕೃತರಿಗೆ ಮಾತ್ರ ತಿಳಿಯುತ್ತಿತ್ತು. ಈ ಎರಡು ಪ್ರಾಚೀನ ಭಾಷೆಗಳಿಗೆ ಮಾತ್ರ ಪ್ರಾಮುಖ್ಯತೆ ದೊರೆತು ಜನತೆಯಲ್ಲಿ ರೂಢಿಯಲ್ಲಿದ್ದ ಪ್ರಾಂತ್ಯ ಭಾಷೆಗಳು ಬೆಳೆಯಲು ಅವಕಾಶವಾಗಲಿಲ್ಲ. ಗ್ರಂಥ ಪ್ರಕಟನೆ ಮತ್ತು ವೃತ್ತಪತ್ರಿಕೆಗಳ ಪ್ರಚಾರದಿಂದ ಈ ಪ್ರಾಚೀನ ಭಾಷೆಗಳ ಪ್ರಾಬಲ್ಯ ಕಡಮೆಯಾಗಿ ಪ್ರಾಂತ್ಯಭಾಷೆಗಳು ಮುಂದುವರಿಯಲು ಸಹಾಯವಾಯಿತು. ಮೊದಲು ಬಂದ ಕ್ರೈಸ್ತಪಾದ್ರಿಗಳು ಮುಖ್ಯವಾಗಿ ಶ್ರೀರಾಮಪುರದ ಬ್ಯಾಪ್ಟಿಸ್ಟ್ ಮತಪ್ರಚಾರಕರು ಇದರಲ್ಲಿ ತುಂಬ ಸಹಾಯಕರಾದರು. ಖಾಸಗಿ ಮುದ್ರಣ ಮಂದಿರಗಳನ್ನು ಆರಂಭಿಸಿದವರೇ ಅವರು. ಪ್ರಾಂತ್ಯಭಾಷೆಗಳಲ್ಲಿ ಗದ್ಯದಲ್ಲಿ ಬೈಬಲನ್ನೂ ಅನುವಾದಮಾಡಬೇಕೆಂಬ ಅವರ ಪ್ರಯತ್ನವು ತಕ್ಕಮಟ್ಟಿಗೆ ಫಲಕಾರಿಯಾಯಿತು.

ತುಂಬ ಪರಿಚಿತವೂ, ಪ್ರಚುರವೂ ಇದ್ದ ಭಾಷೆಗಳ ವಿಷಯದಲ್ಲಿ ಯಾವ ಕಷ್ಟವೂ ಆಗಲಿಲ್ಲ; ಆದರೆ ಈ ಮತಪ್ರಚಾರಕರು ಕೆಲವು ಅಪ್ರಬುದ್ಧ ಭಾಷೆಗಳನ್ನೂ ಕಲಿಯಲು ಪ್ರಯತ್ನಪಟ್ಟು ಅವುಗಳಿಗೆ ಒಂದು ರೂಪು ಮತ್ತು ಆಕೃತಿಯನ್ನು ಕೊಟ್ಟು ಅವುಗಳ ವ್ಯಾಕರಣ ಮತ್ತು ಶಬ್ದಕೋಶಗಳನ್ನು ಬರೆದರು. ಕಾಡು ಮತ್ತು ಗುಡ್ಡಗಾಡಿನ ಜನರ ಭಾಷೆಗಳನ್ನು ಸಹ ಕಲಿತು ಅವುಗಳನ್ನು ಬರೆಹ ರೂಪದಲ್ಲಿ ತರಲು ಪ್ರಯತ್ನಪಟ್ಟರು. ಭಾರತದಲ್ಲಿ ಕ್ರೈಸ್ತಮತಪ್ರಚಾರಕರ ಕೆಲಸವೆಲ್ಲವೂ ಮೆಚ್ಚುವಂತೆಯೂ ಇಲ್ಲ, ಸ್ತುತ್ಯಾರ್ಹವೂ ಅಲ್ಲ, ಆದರೆ ಭಾಷೆಗಳಿಗಿತ್ತ ಈ ಪ್ರೋತ್ಸಾಹ ಮತ್ತು ಜನಪದ ಸಾಹಿತ್ಯವನ್ನು ಸಂಗ್ರಹಿಸುವುದರಲ್ಲಿ ಅವರು ಮಾಡಿರುವ ಅಪಾರ ಸೇವೆಯು ನಿಜವಾಗಿಯೂ ಚಿರಸ್ಮರಣೀಯವಾದುದು.

ಭಾರತದಲ್ಲಿ ವಿದ್ಯಾ ಪ್ರಚಾರವಾಗಬಾರದೆಂಬ ಈಸ್ಟ್ ಇಂಡಿಯಾ ಕಂಪೆನಿಯ ಅಭಿಪ್ರಾಯಕ್ಕೆ ಕಾರಣವಿತ್ತು. ೧೮೩೦ ರಲ್ಲಿಯೇ ಕಲ್ಕತ್ತ ಹಿಂದೂ ಕಾಲೇಜಿನ ಕೆಲವು ವಿದ್ಯಾರ್ಥಿಗಳು—ಇಂಗ್ಲಿಷ್ ಗಂಧವಿಲ್ಲದೆ ಸಂಸ್ಕೃತ ಮಾತ್ರ ಕಲಿತವರು–ಕೆಲವು ಸುಧಾರಣೆಗಳನ್ನು ಕೇಳಿದ್ದರು. ಕಂಪೆನಿಯ ರಾಜಕೀಯ ಅಧಿಕಾರಕ್ಕೆ ಮಿತಿ ಇರಬೇಕೆಂದೂ ಶಿಕ್ಷಣ ನೀತಿಯಲ್ಲಿ ಶುಲ್ಕವಿಲ್ಲದೆ ಎಲ್ಲರಿಗೂ ಬಲಾತ್ಕಾರ ವಿದ್ಯಾಭ್ಯಾಸವಿರಬೇಕೆಂದೂ ಕೇಳಿದ್ದರು. ಅತಿ ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ವಿದ್ಯೆಗೆ ಸುಂಕವಿರಲಿಲ್ಲ. ಆ ವಿದ್ಯೆ ಸನಾತನ ಸಂಪ್ರದಾಯದ್ದು; ಯಾವ ಲಾಭ ಅಥವ ಉಪಯೋಗವಿಲ್ಲದಿದ್ದರೂ ಗುರುವಿನ ಸೇವೆಯೊಂದರ ಹೊರತು ಯಾವ ಶುಲ್ಕವೂ ಇಲ್ಲದೆ ಕಡುಬಡವನಿಗೆ ಸಹ ಆ ವಿದ್ಯೆ ದೊರೆಯಲು ಅವಕಾಶವಿತ್ತು. ಈ ಒಂದು ವಿಷಯದಲ್ಲಿ ಹಿಂದೂ ಮತ್ತು ಮುಸ್ಲಿಂ ಸಂಪ್ರದಾಯಗಳು ಎರಡೂ ಒಂದೇ.

ಬಂಗಾಳದಲ್ಲಿ ಹೊಸ ವಿದ್ಯೆಗೆ ಹರಡಲು ಅವಕಾಶ ದೊರೆಯಲಿಲ್ಲ. ಆದರೆ, ಹಳೆಯ ವಿದ್ಯಾಭ್ಯಾಸ ಪದ್ಧತಿಯು ಪೂರ್ಣ ನಾಶವಾಯಿತು. ಬ್ರಿಟಿಷರು ಬಂಗಾಲದಲ್ಲಿ ಬೇರೂರಿದಾಗ ಹಿಂದಿನ ಆಡಳಿತ ವರ್ಗದವರು ವಿದ್ಯಾಸಂಸ್ಥೆಗಳಿಗಾಗಿ ಅನೇಕ ಭೂ-ಆಸ್ತಿಯನ್ನು ದಾನವಾಗಿ ಕೊಟ್ಟಿದ್ದರು. ಅವುಗಳ ಉತ್ಪನ್ನದಿಂದ ಅನೇಕ ಪ್ರಾಥಮಿಕ ವಿದ್ಯಾಸಂಸ್ಥೆಗಳೂ, ಕೆಲವು ಪ್ರೌಢ ಪಾರಸಿ ವಿದ್ಯಾಶಾಲೆಗಳೂ ಪ್ರಾಚೀನ ಪದ್ಧತಿಯಂತೆ ನಡೆಯುತ್ತಿದ್ದವು. ಇಂಗ್ಲೆಂಡಿನ ಷೇರು ಹೋಲ್ಡರುಗಳಿಗೆ ಬಡ್ಡಿಯನ್ನು ಹಂಚಲು ಆದಷ್ಟು ಬೇಗ ಹಣ ಸಂಪಾದಿಸಬೇಕೆಂಬುದೇ ಈಸ್ಟ್ ಇಂಡಿಯ ಕಂಪೆ

ನಿಯ ಉದ್ದೇಶವಾಗಿತ್ತು. ಅಲ್ಲಿನ ಡೈರೆಕ್ಟರುಗಳೂ ಪದೇ ಪದೇ ಅದೇ ಒತ್ತಾಯ ಮಾಡುತ್ತಿದ್ದರು. ವಿದ್ಯಾಸಂಸ್ಥೆಗಳ ಈ ಮಾಫಿ ಭೂಮಿಯನ್ನೆಲ್ಲ ತಮ್ಮ ವಶಪಡಿಸಿಕೊಂಡು ಎತ್ತಿಹಾಕುವ ಮಾರ್ಗ ಹಿಡಿದರು. ಮೂಲದಾನಪತ್ರ ತೋರಿಸಿ ರುಜು ಸಾಕ್ಷ್ಯಕೊಡಬೇಕೆಂದರು. ದಾನಪತ್ರಗಳು ಗೆದ್ದಲು ತಿಂದೋ, ಕಳೆದೋ ಹೋಗಿದ್ದವು. ಈ ರೀತಿ ಮಾಫಿ ಭೂಮಿಯನ್ನೆಲ್ಲ ದೋಚಿಕೊಂಡು, ಮಾಲಿಕರನ್ನೆಲ್ಲ ಓಡಿಸಿ, ಕಾಲೇಜುಗಳಿಗಿದ್ದ ಉತ್ಪತ್ತಿ ಎಲ್ಲವೂ ನಾಶವಾಯಿತು. ಅಪಾರ ಭೂ-ಆಸ್ತಿಯನ್ನು ಕಳೆದುಕೊಂಡು ಅನೇಕ ಸಂಸಾರಗಳು ಹಾಳಾದವು. ಈ ಆಸ್ತಿಯ ಉತ್ಪತ್ತಿಯಿಂದಲೇ ನಡೆಯುತ್ತಿದ್ದ ಅನೇಕ ವಿದ್ಯಾಶಾಲೆಗಳು ಮುಚ್ಚಿಹೋಗಿ ಸಹಸ್ರಾರು ಜನ ಉಪಾಧ್ಯಾಯರೂ ಇತರರೂ ನಿರುದ್ಯೋಗಿಗಳಾದರು.

ಈ ನೀತಿಯಿಂದ ಬಂಗಾಳದ ಹಿಂದೂ ಮತ್ತು ಮುಸ್ಲಿಂ ಶ್ರೀಮಂತವರ್ಗವೂ ಅವರ ಅವಲಂಬಿಗಳೂ ನಿರ್ಗತಿಕರಾದರು. ಮಾಫಿ ಜಮೀನುಗಳು ಮುಸ್ಲಿಮರದೇ ಹೆಚ್ಚು ಇದ್ದು ಮುಸ್ಲಿಂ ಶ್ರೀಮಂತರೇ ಹೆಚ್ಚು ಜನರಿದ್ದ ಕಾರಣ ಮುಸ್ಲಿಮರಿಗೆ ಇದರಿಂದ ಹೆಚ್ಚು ಪೆಟ್ಟು ಬಿತ್ತು. ಹಿಂದೂಗಳಲ್ಲಿ ಅನೇಕರು ವ್ಯಾಪಾರ, ಸಾರಿಗೆ ಮತ್ತು ಇತರ ಕಸಬುಗಳನ್ನು ಅವಲಂಬಿಸಿದ ಮಧ್ಯಮವರ್ಗದ ಜನರೇ ಹೆಚ್ಚು ಇದ್ದರು. ಜೀವನ ಮಾರ್ಗವನ್ನು ಬದಲಾಯಿಸಿ ಇಂಗ್ಲಿಷ್ ಅಭ್ಯಾಸ ಮಾಡುವುದು ಇವರಿಗೆ ಸುಲಭವಾಯಿತು. ಕೆಳದರ್ಜೆಯ ನೌಕರಿಗಳಲ್ಲಿ ಬ್ರಿಟಿಷರಿಗೆ ಉಪಯೋಗವಾದರು. ಮುಸ್ಲಿಮರು ಇಂಗ್ಲಿಷ್ ವಿದ್ಯಾಭ್ಯಾಸವನ್ನು ಬಹಿಷ್ಕರಿಸಿದ್ದರು. ಹಿಂದಿನ ಆಳರಸರ ಪಂಗಡದವರಾದ್ದರಿಂದ ತೊಂದರೆಕೊಟ್ಟಾರೆಂದು ಹೆದರಿ ಬ್ರಿಟಿಷರು ಬಂಗಾಲದ ಮುಸ್ಲಿಮರನ್ನು ಸಂಶಯದಿಂದ ಕಂಡರು. ಈ ರೀತಿ ಸರ್ಕಾರದ ಕೆಳದರ್ಜೆಯ ನೌಕರಿಗಳಲ್ಲಿ ಆರಂಭದಲ್ಲಿ ಬಂಗಾಳಿ ಹಿಂದೂಗಳಿಗೆ ವಿಶೇಷ ಪ್ರಾಶಸ್ತ್ಯ ದೊರೆತು, ಅವರು ಉತ್ತರ ಹಿಂದೂಸ್ಥಾನದ ಇತರ ಪ್ರಾಂತ್ಯಗಳಿಗೂ ಹೋದರು. ಕೊನೆಕೊನೆಗೆ ಪುರಾತನ ಮನೆತನಗಳ ಕೆಲವು ಮುಸ್ಲಿಮರಿಗೂ ನೌಕರಿ ದೊರೆಯಿತು.

ಇಂಗ್ಲಿಷ್ ವಿದ್ಯಾಭ್ಯಾಸದಿಂದ ಭಾರತೀಯರ ದೃಷ್ಟಿ ವಿಶಾಲಗೊಂಡಿತು. ಇಂಗ್ಲಿಷ್ ಸಾಹಿತ್ಯ ಮತ್ತು ಸಂಸ್ಥೆಗಳ ಮೇಲೆ ಗೌರವಹೆಚ್ಚಿತು. ಭಾರತೀಯ ಜೀವನದ ಕೆಲವು ಆಚಾರ ವ್ಯವಹಾರಗಳ ಮೇಲೆ ಜುಗುಪ್ಸೆ ಹುಟ್ಟಿತು ಮತ್ತು ರಾಜಕೀಯ ಸುಧಾರಣೆಯ ಬೇಡಿಕೆಯ ಒತ್ತಡವು ಹೆಚ್ಚಿತು. ಹೊಸ ವಿದ್ಯಾವಂತರ ಪಂಗಡವು ಈ ರಾಜಕೀಯ ಚಳವಳಿಯಲ್ಲಿ ಪ್ರಮುಖ ಪಾತ್ರ ವಹಿಸಿತು; ಸರ್ಕಾರಕ್ಕೆ ಅರಿಕೆಗಳನ್ನು ಕಳುಹಿಸುವುದೇ ಆ ಚಳವಳಿಯ ಮುಖ್ಯ ನೀತಿಯಾಯಿತು. ಇಂಗ್ಲಿಷ್‌ವಿದ್ಯಾವಂತ ಕಸಬುದಾರರು ಮತ್ತು ಸರ್ಕಾರಿನೌಕರರು ಇವರುಗಳದೇ ಒಂದು ಪಂಗಡವು ಭಾರತಾದ್ಯಂತ ಹರಡಿತು. ಪಾಶ್ಚಿಮಾತ್ಯರ ನಡೆನುಡಿಗಳ ಅನುಕರಣ ಮತ್ತು ಭಾವನೆಗಳಿಂದ ಪ್ರೇರಿತರಾಗಿ ಜನತೆಯಿಂದ ದೂರವಾದರು. ೧೮೫೧ರಲ್ಲಿ ಕಲ್ಕತ್ತದಲ್ಲಿ ಬ್ರಿಟಿಷ್ ಇಂಡಿಯನ್ ಅಸೋಸಿಯೇಷನ್ ಆರಂಭವಾಯಿತು. ಅಖಿಲಭಾರತ ಕಾಂಗ್ರೆಸ್ಸಿನ ಮೂಲ ಇವರಲ್ಲ; ಆದರೆ ೧೮೮೫ರಲ್ಲಿ ಕಾಂಗ್ರೆಸ್ ಹುಟ್ಟಲು ಒಂದು ತಲೆಮಾರು ಕಳೆಯ ಬೇಕಾಯಿತು. ಈ ಅಂತರದಲ್ಲಿ ೧೮೫೭-೫೮ ರ ದಂಗೆ, ಅದರ ಉಪಶಮನ ಮತ್ತು ಪರಿಣಾಮಗಳಾದವು. ಈ ಶತಮಾನದ ಮಧ್ಯಕಾಲದಲ್ಲಿ ಬಂಗಾಳಕ್ಕೂ, ಉತ್ತರ ಮತ್ತು ಮಧ್ಯ ಭಾರತದ ಪ್ರದೇಶಗಳಿಗೂ ಎದ್ದು ಕಾಣುವ ಮುಖ್ಯ ವ್ಯತ್ಯಾಸವೆಂದರೆ ಇಂಗ್ಲಿಷ್ ಸಾಹಿತ್ಯ ಮತ್ತು ಭಾವನೆಗಳ ಪ್ರಭಾವಕ್ಕೆ ಒಳಗಾದ ಬಂಗಾಲದ ಹಿಂದೂ ವಿದ್ಯಾವಂತರು ರಾಜಕೀಯ ಸುಧಾರಣೆಗಳಿಗೆ ಇಂಗ್ಲೆಂಡ್ ಕಡೆ ನೋಡುತ್ತಿದ್ದರು; ಆದರೆ ಇತರ ಭಾಗಗಳಲ್ಲಿ ದಂಗೆಯ ಮನೋಭಾವ ಉಕ್ಕಿಬಂದಿತ್ತು.

ಇತರ ಎಲ್ಲ ಕಡೆಗಳಿಗಿಂತ ಹೆಚ್ಚಾಗಿ ಬಂಗಾಳದಲ್ಲಿ ಬ್ರಿಟಿಷ್ ಆಳ್ವಿಕೆಯ ಮತ್ತು ಪಾಶ್ಚಿಮಾತ್ಯ ಸಂಸ್ಕೃತಿಯ ಪ್ರಭಾವ ಹೆಚ್ಚು ಸ್ಪಷ್ಟ ಕಾಣುತ್ತದೆ. ಜಮೀನುದಾರಿ ಪದ್ಧತಿಯು ಒಡೆದು ಹೋಗಿ

ಶ್ರೀಮಂತ ಮನೆತನಗಳು ದಿವಾಳಿಯಾಗಿದ್ದವು. ಅವರ ಸ್ಥಾನದಲ್ಲಿ ಹೊಸ ಜಮೀನುದಾರರು ಬಂದರು. ಇವರಿಗೆ ಹಿಂದಿನವರಂತೆ ಭೂಮಿಯೊಂದಿನ ಹಳೆಯ ಬಾಂಧವ್ಯವಾಗಲಿ ಸಂಪರ್ಕವಾಗಲಿ ಇರಲಿಲ್ಲ. ಹಿಂದಿನವರ ಸದ್ಗುಣಗಳು ಯಾವುವೂ ಇಲ್ಲದೆ ದುರ್ಗುಣಗಳೆಲ್ಲ ಇದ್ದವು. ಅನೇಕ ರೀತಿಯಿಂದ ರೈತರು ಕ್ಷಾಮಡಾಮರಗಳಿಗೆ ಈಡಾಗಿ ಬಡತನದ ಬೇಗೆಗೆ ಬಲಿಯಾದರು. ಕಸಬುದಾರರೆಲ್ಲ ಸಂಪೂರ್ಣ ನಾಶವಾದರು. ಶ್ಮಶಾನ ರಣ ಹದ್ದುಗಳಂತೆ ಬ್ರಿಟಿಷ್ ಆಡಳಿತದ ಶಿಶುಗಳಾಗಿ, ಅವರಿಂದ ಅನೇಕ ರೀತಿ ಪ್ರೋತ್ಸಾಹ ಪಡೆದ ಹೊಸ ಪಂಗಡಗಳು, ಗುಂಪುಗಳು ನಿರ್ಮಾಣವಾದವು. ಬ್ರಿಟಿಷ್ ವ್ಯಾಪಾರ ಮತ್ತು ಕೈಗಾರಿಕೆಗಳ ಮಧ್ಯಸ್ಥಗಾರರಾಗಿ ಆ ಕೈಗಾರಿಕೆಯ ಎಂಜಲಿನಿಂದ ಲಾಭಪಡೆದ ವರ್ತಕರಿದ್ದರು. ಬ್ರಿಟಿಷರ ಅನುಗ್ರಹವೇ ತಮ್ಮ ಏಳಿಗೆ ಎಂದು ನಂಬಿ ಅನೇಕ ವಿಧದಲ್ಲಿ ಪಾಶ್ಚಾತ್ಯರನ್ನು ಅನುಕರಿಸುತ್ತಿದ್ದ ಇಂಗ್ಲಿಷ್ ವಿದ್ಯಾವಂತರು ನೌಕರಿ ಮತ್ತು ಇತರ ಕಸಬುಗಳಲ್ಲಿ ತುಂಬಿದರು. ಈ ಜನರಲ್ಲಿ ಹಿಂದೂ ಸಮಾಜದ ಸಾಂಪ್ರದಾಯಿಕ ಆಚಾರ ವ್ಯವಹಾರಗಳಿಗೆ ಮತ್ತು ಕಟ್ಟುನಿಟ್ಟುಗಳಿಗೆ ವಿರೋಧ ಹುಟ್ಟಿತು. ಇಂಗ್ಲಿಷರ ಮನೋವೈಶಾಲ್ಯದಿಂದ ಮತ್ತು ಸಂಸ್ಥೆಗಳಿಂದ ಸ್ಫೂರ್ತಿಪಡೆಯಲೆತ್ನಿಸಿದರು.

ಇದೆಲ್ಲ ಬಂಗಾಳದ ಉನ್ನತ ಹಿಂದೂವರ್ಗದಲ್ಲಿ ಮಾತ್ರ. ಸಾಮಾನ್ಯ ಹಿಂದೂ ಜನತೆಯ ಮೇಲೆ ಇದರಿಂದ ಯಾವ ಪರಿಣಾಮವೂ ಆಗಲಿಲ್ಲ. ಹಿಂದೂ ಪ್ರಮುಖರು ಜನಕೋಟಿಯ ಕಡೆ ಗಮನವನ್ನೂ ಕೊಡಲಿಲ್ಲ. ಬಹಳ ಸ್ವಲ್ಪ ಜನರನ್ನು ಬಿಟ್ಟರೆ ಮುಸ್ಲಿಮರ ಮೇಲೂ ಯಾವ ಪರಿಣಾಮ ಆಗಲಿಲ್ಲ. ಅವರು ಉದ್ದೇಶಪಟ್ಟು ನೂತನ ಶಿಕ್ಷಣ ಪದ್ಧತಿಯಿಂದ ದೂರ ನಿಂತರು. ಮೊದಲೇ ಅವರ ಆರ್ಥಿಕ ಸ್ಥಿತಿಯು ಬಹಳ ಹೀನವಿತ್ತು. ಅದು ಈಗ ಇನ್ನೂ ಹದಗೆಟ್ಟಿತು. ೧೯ನೆಯ ಶತಮಾನದಲ್ಲಿ ಬಂಗಾಳದಲ್ಲಿ ಹಿಂದೂಗಳಲ್ಲಿ ಕೆಲವು ಅತ್ಯಂತ ಪ್ರತಿಭಾವಂತರು ಜನ್ಮ ತಾಳಿದರೂ ಮುಸ್ಲಿಮರಲ್ಲಿ ಒಬ್ಬ ಪ್ರಮುಖ ವ್ಯಕ್ತಿಯೂ ಹುಟ್ಟಲಿಲ್ಲ. ಹಿಂದೂ ಮುಸ್ಲಿಂ ಇಬ್ಬರಲ್ಲೂ ಸಾಮಾನ್ಯ ಜನರಲ್ಲಿ ಯಾವ ವ್ಯತ್ಯಾಸವೂ ಆಗಲಿಲ್ಲ. ಅವರ ಆಚಾರವ್ಯವಹಾರ, ಜೀವನರೀತಿ, ಭಾಷೆ, ಬಡತನದ ಬೇಗೆ ಮತ್ತು ಸಂಕಟ ಇಬ್ಬರಿಗೂ ಸಮಾನವಿತ್ತು. ಬಂಗಾಳದ ಹಿಂದೂ ಮುಸ್ಲಿಮರ ಎಲ್ಲ ಮಟ್ಟದ ಜನರಲ್ಲಿ ಧಾರ್ಮಿಕ ಮತ್ತು ಇತರ ಭೇದ ಪ್ರಭೇದಗಳು ಕಂಡಂತೆ ಭಾರತದಲ್ಲಿ ಬೇರೆಲ್ಲೂ ನಾವು ಕಾಣಲಾರೆವು. ಪ್ರಾಯಶಃ ಮುಸ್ಲಿಮರಲ್ಲಿ ನೂರಕ್ಕೆ ೯೮ರಷ್ಟು ಜನರು ಕೆಳಮಟ್ಟದ ಹಿಂದೂ ಸಮಾಜದಿಂದ ಮತಾಂತರ ಹೊಂದಿದವರು. ಜನಸಂಖ್ಯೆಯಲ್ಲಿ ಮುಸ್ಲಿಮರು ಸ್ವಲ್ಪ ಹೆಚ್ಚು ಇರಬಹುದು. (ಈಗ ಬಂಗಾಳದಲ್ಲಿ ೫೩% ಮುಸ್ಲಿಮರೂ ೪೬% ಹಿಂದುಗಳೂ, ೧% ಇತರರೂ ಇದಾರೆ).

ಬ್ರಿಟಿಷರ ಸಂಪರ್ಕದಿಂದ ಒದಗಿದ ಈ ಎಲ್ಲ ಆರಂಭದ ಪರಿಣಾಮಗಳು ಮತ್ತು ಅವುಗಳಿಂದ ಬಂಗಾಳದಲ್ಲಿ ಆದ ಎಲ್ಲ ಆರ್ಥಿಕ, ಸಾಮಾಜಿಕ, ಬೌದ್ಧಿಕ ಮತ್ತು ರಾಜಕೀಯ ಚಳವಳಿಗಳು ಭಾರತದ ಇತರ ಕಡೆಗಳಲ್ಲೂ ಉದ್ಭವಿಸಿವೆ. ಹಿಂದಿನ ಶ್ರೀಮಂತ ವರ್ಗವೂ, ಆರ್ಥಿಕ ಪದ್ಧತಿಯೂ ಇತರ ಕಡೆಗಳಲ್ಲಿ ಪೂರ್ಣ ನಾಶವಾಗಲಿಲ್ಲ, ಕ್ರಮೇಣ ಹೀನಸ್ಥಿತಿಗೆ ಬಂದಿತು. ನಿಜವಾಗಿ ನೋಡಿದರೆ ದಂಗೆಗೆ ಅವರೇ ಕಾರಣರು ಮತ್ತು ಸೋತರೂ ಸ್ವಲ್ಪಮಟ್ಟಿಗೆ ಜೀವಂತ ಉಳಿದರು. ಉತ್ತರ ಹಿಂದೂಸ್ಥಾನದ ಮುಸಲ್ಮಾನರ ಸಂಸ್ಕೃತಿ ಮತ್ತು ಆರ್ಥಿಕ ಸ್ಥಿತಿಯು ಬಂಗಾಳದ ಅವರ ಸೋದರರಿಗಿಂತ ಉತ್ತಮವಿತ್ತು. ಆದರೆ ಅವರೂ ಇಂಗ್ಲಿಷ್ ವಿದ್ಯಾಭ್ಯಾಸದಿಂದ ದೂರ ಸರಿದರು. ಹಿಂದೂಗಳು ಸುಲಭವಾಗಿ ಈ ವಿದ್ಯೆ ಕಲಿತು ಪಾಶ್ಚಾತ್ಯರ ಪ್ರಭಾವಕ್ಕೊಳಗಾದರು. ಸರ್ಕಾರದ ಕೆಳ ನೌಕರಿಗಳಲ್ಲಿ ಮತ್ತು ಇತರ ವೃತ್ತಿಗಳಲ್ಲಿ ಮುಸ್ಲಿಮರಿಗಿಂತ ಹಿಂದೂಗಳೇ ಹೆಚ್ಚು ಜನ ಸೇರಿದರು. ಪಂಜಾಬಿನಲ್ಲಿ ಮಾತ್ರ ಅಷ್ಟು ವ್ಯತ್ಯಾಸ ಆಗಲಿಲ್ಲ.

೧೮೫೭–೫೮ರ ದಂಗೆ ಎದ್ದುದೂ ಆಯಿತು, ಅಡಗಿಸಿದುದೂ ಆಯಿತು. ಆದರೆ ಬಂಗಾಳಕ್ಕೆ ಅದರ ಬಿಸಿ ಸ್ವಲ್ಪವೂ ತಗಲಲಿಲ್ಲ. ಇಂಗ್ಲಿಷ್ ವಿದ್ಯಾಭ್ಯಾಸ ಪಡೆದ ಬಹು ಸಂಖ್ಯಾಕ ಹಿಂದೂ

ವಿದ್ಯಾವಂತರು ಇಂಗ್ಲೆಂಡಿನ ಮೇಲೆ ಮಮತೆ ತೋರುತ್ತ ಇಂಗ್ಲೆಂಡಿನ ಸಹಾಯ ಮತ್ತು ಸಹಕಾರದಿಂದ ಪ್ರಗತಿ ಪಡೆಯಲು ಆಶಿಸಿದ್ದರು. ಹತ್ತೊಂಭತ್ತನೆಯ ಶತಮಾನದಲ್ಲೆಲ್ಲ ಇದೇ ಭಾವನೆ ಇತ್ತು. ದೊಡ್ಡ ಸಾಂಸ್ಕೃತಿಕ ಪ್ರಗತಿಯಾಗಿ ಬಂಗಾಳಿ ಸಾಹಿತ್ಯವು ಬಹುಮುಖ ಬೆಳೆಯಿತು. ಬಂಗಾಳದ ನಾಯಕರು ಭಾರತದ ರಾಜಕೀಯ ಮುಂದಾಳುಗಳಾದರು.

೧೯೪೧ನೆಯ ಮೇ ತಿಂಗಳಲ್ಲಿ ಸಾಯುವ ಕೆಲವು ದಿನಗಳ ಮುಂಚೆ ತಮ್ಮ ೮೦ನೆಯ ಹುಟ್ಟುಹಬ್ಬದ ದಿನ ರವೀಂದ್ರನಾಥ ಠಾಕೂರರು ಕೊಟ್ಟ ಸಂದೇಶದಲ್ಲಿ, ಆಗಿನ ಬಂಗಾಳಿಗಳ ಮನಸ್ಸಿನಲ್ಲಿ ಇಂಗ್ಲೆಂಡಿನ ಮೇಲೆ ಇದ್ದ ವಿಶ್ವಾಸ ಮತ್ತು ಸಮಾಜದ ಮೂಢ ಸಂಪ್ರದಾಯಗಳ ಮೇಲೆ ಇದ್ದ ತಿರಸ್ಕಾರ ಇವುಗಳ ಕಿರುನೋಟವನ್ನು ಕಾಣಬಹುದು. "ನನ್ನ ಬಾಲ್ಯಾವಸ್ಥೆ ಮತ್ತು ನನ್ನ ಜೀವನದ ಅನೇಕ ವರ್ಷಗಳ ಇತಿಹಾಸವನ್ನು ನ್ಯಾಯ ದೃಷ್ಟಿಯಿಂದ ನೋಡಿದರೆ ನನ್ನ ಭಾವನೆಗಳಲ್ಲಿ ಆಗಿರುವ ವ್ಯತ್ಯಾಸ, ನನ್ನ ದೇಶಬಾಂದವರ ಮಾನಸಿಕ ಪರಿವರ್ತನೆಗಳನ್ನು ನೋಡಿದರೆ ನನಗೇ ಅತ್ಯಾಶ್ಚರ್ಯ ಆಗುತ್ತದೆ. ಆ ಪರಿವರ್ತನೆಯಲ್ಲಿ ಒಂದು ಮಹಾದುರಂತ ನಾಟಕವು ಅಡಗಿದೆ.

ವಿಶಾಲ ಪ್ರಪಂಚದ ಮಹಾವ್ಯಕ್ತಿಗಳ ನಮ್ಮ ಪರಿಚಯವೆಲ್ಲ ನಮ್ಮ ಜೀವನಾರಂಭದ ದಿನಗಳಲ್ಲಿ ನಮಗೆ ಪರಿಚಯವಾದ ಇಂಗ್ಲಿಷ್ ಜನರ ಸಮಕಾಲೀನ ಇತಿಹಾಸದೊಂದಿಗೆ ಬೆರೆತುಹೋಗಿದೆ. ಭಾರತದ ಕರಾವಳಿಯಲ್ಲಿ ಬಂದು ಕಾಲಿಟ್ಟ ವಿದೇಶೀಯರ ಮೇಲಿನ ನಮ್ಮ ಭಾವನೆಗಳಿಗೆ ಮುಖ್ಯವಾಗಿ ಅವರ ಶ್ರೇಷ್ಠ ಸಾಹಿತ್ಯ ಪರಿಚಯವೇ ಕಾರಣ. ಅಂದಿನ ನಮ್ಮ ವಿದ್ಯಾಭ್ಯಾಸ ಪದ್ಧತಿಯಲ್ಲಿ ವಿಷಯ ಬಾಹುಳ್ಯವಾಗಲಿ, ವೈವಿಧ್ಯತೆಯಾಗಲಿ ಇರಲಿಲ್ಲ; ವಿಜ್ಞಾನ ದೃಷ್ಟಿಯ ಸುಳಿವಂತೂ ಇರಲೇ ಇಲ್ಲ. ಆದ್ದರಿಂದ ವಿದ್ಯಾವಂತರ ಗಮನವೆಲ್ಲ ಇಂಗ್ಲಿಷ್ ಭಾಷೆ ಮತ್ತು ಸಾಹಿತ್ಯದ ಕಡೆಗೆ ತಿರುಗಿತು. ಬರ್ಕ್‌ನ ಅಲಂಕಾರಪೂರಿತ ಭಾಷಣ ವೈಖರಿ, ಮೆಕಾಲೆಯ ಉದ್ದುದ್ದನೆಯ ವಾಕ್ಯಸರಣಿ, ಷೇಕ್ಸ್‌ಪಿಯರನ ನಾಟಕಗಳು, ಬೈರನ್‌ನ ಕಾವ್ಯ, ಎಲ್ಲಕ್ಕೂ ಮಿಗಿಲಾಗಿ ಹತ್ತೊಂಭತ್ತನೆಯ ಶತಮಾನದ ಇಂಗ್ಲಿಷ್ ಲಿಬರಲ್ ಪಕ್ಷದ ಉದಾರ ರಾಜಕೀಯ ನೀತಿಯ ಚರ್ಚೆಯಲ್ಲಿ ಹಗಲು ರಾತ್ರಿ ಎನ್ನದೆ ಅವರು ಕಾಲಕಳೆಯುತ್ತಿದ್ದರು.''

ನಮ್ಮ ರಾಜಕೀಯ ಸ್ವಾತಂತ್ರ್ಯವನ್ನು ಪುನಃ ಪಡೆಯಲು ತಾತ್ಕಾಲಿಕ ಪ್ರಯತ್ನಗಳು ನಡೆಯುತ್ತಿದ್ದರೂ ಇಂಗ್ಲಿಷ್ ಜನರ ಔದಾರ್ಯದಲ್ಲಿ ಇನ್ನೂ ನಂಬಿಕೆ ಹೋಗಿರಲಿಲ್ಲ. ರಾಜ್ಯವನ್ನು ಗೆದ್ದ ಇಂಗ್ಲಿಷರೇ ನಮ್ಮ ಸ್ವಾತಂತ್ರ್ಯ ಸಾಧನೆಗೆ ಮಾರ್ಗಾನುಕೂಲ ಮಾಡಿಕೊಡುತ್ತಾರೆಂಬ ದೃಢವಿಶ್ವಾಸ ನಮ್ಮ ನಾಯಕರಲ್ಲಿ ನೆಲೆಸಿತ್ತು. ರಾಜಕೀಯ ಕಾರಣಗಳಿಗಾಗಿ ಗಡೀಪಾರಾದ ನಿರಾಶ್ರಿತರಿಗೆಲ್ಲ ಇಂಗ್ಲೆಂಡಿನಲ್ಲಿ ಆಶ್ರಯ ದೊರೆಯುತ್ತಿದ್ದುದು ಈ ನಂಬಿಕೆಗೆ ಒಂದು ಮುಖ್ಯ ಕಾರಣವಾಯಿತು. ತಮ್ಮ ಜನರ ಪ್ರತಿಷ್ಠೆಗಾಗಿ ನೊಂದ ರಾಜಕೀಯ ಬಂದಿಗಳಿಗೆಲ್ಲ ಇಂಗ್ಲೆಂಡಿನಲ್ಲಿ ಸ್ವಾಗತ ದೊರೆಯಿತು. ಇಂಗ್ಲಿಷ್ ಜನರ ಈ ಉದಾರ ಮಾನವೀಯ ನೀತಿಯು ನನ್ನ ಮನಸ್ಸಿನ ಮೇಲೆ ಮಹತ್ಪರಿಣಾಮ ಮಾಡಿತು; ಅವರ ಮೇಲೆ ನನಗೆ ಅತ್ಯಂತ ಗೌರವವುಂಟಾಯಿತು. ಈ ಉದಾರ ರಾಷ್ಟ್ರನೀತಿಯು ಸಾಮ್ರಾಜ್ಯ ಮದದಿಂದ ಇನ್ನೂ ಮಾಸಿ ಇರಲಿಲ್ಲ. ಅದೇ ಸಮಯದಲ್ಲಿ ನಾನು ಹುಡುಗನಾಗಿದ್ದಾಗ ಪಾರ್ಲಿಮೆಂಟಿನಲ್ಲೂ ಮತ್ತು ಹೊರಗೂ ಜಾನ್ ಬ್ರೈಟನ ಭಾಷಣಗಳನ್ನು ಕೇಳುವ ಸದವಕಾಶ ನನಗೆ ದೊರಕಿತು. ಆ ಭಾಷಣಗಳಲ್ಲಿ ಕಂಡುಬಂದ ಹೃದಯ ವೈಶಾಲ್ಯ ಸಂಕುಚಿತ ರಾಷ್ಟ್ರೀಯ ದೃಷ್ಟಿ ಇಲ್ಲದ ಉನ್ನತ ಭಾವನೆಗಳು ನನ್ನ ಮನಸ್ಸಿನ ಮೇಲೆ ದೀರ್ಘ ಪರಿಣಾಮ ಮಾಡಿದವು; ಇಂದಿನ ನಿರಾಶೆಯ ನಗ್ನತೆಯಲ್ಲಿ ಸಹ ಅದರ ಮಸಕು ಚಿತ್ರ ಇನ್ನೂ ಪೂರ್ಣ ಅಳಿಸಿಲ್ಲ.

ಆಳರಸರ ಔದಾರ್ಯವನ್ನೇ ನಂಬಿದ್ದ ಆ ಕೀಳು ಅವಲಂಬನೆಯ ಮನೋಭಾವ ನಿಜವಾಗಿಯೂ ಹೆಮ್ಮೆಯ ವಿಷಯವಲ್ಲ. ಈ ಉನ್ನತ ಮಾನವೀಯತೆ ಕಂಡುಬಂದುದು ಪರಕೀಯನಲ್ಲಿ; ಆದರೂ ಅದರಲ್ಲಿ ಪೂರ್ಣ ವಿಶ್ವಾಸವಿಟ್ಟು ಅದಕ್ಕೆ ಮನ್ನಣೆ ಕೊಟ್ಟುದೇ ಒಂದು ಆಶ್ಚರ್ಯ. ಮಾನವೀಯತೆ

ಉನ್ನತ ಗುಣಗಳು ಯಾವ ಒಂದು ಜನಾಂಗ ಅಥವಾ ರಾಷ್ಟ್ರದ ಮೀಸಲು ಅಲ್ಲ. ಅವುಗಳ ವೈಶಾಲ್ಯತೆಗೆ ಮಿತಿಯೂ ಇಲ್ಲ. ಮತ್ತು ನೆಲದೊಳಗೆ ಹೂತಿಟ್ಟ ನಿಧಿಯನ್ನು ನೋಡುವ ಜಿಪುಣನಂತೆ ಅದನ್ನು ನೋಡಬೇಕಾದ್ದೂ ಇಲ್ಲ. ಹಿಂದೆ ನಮ್ಮ ಮನಸ್ಸಿಗೊಂದು ಚೈತನ್ಯ ಕೊಟ್ಟ ಇಂಗ್ಲಿಷ್ ಸಾಹಿತ್ಯ ಇಂದಿಗೂ ನಮ್ಮ ಹೃದಯಾಂತರಾಳದಲ್ಲಿ ಧ್ವನಿಗೈಯುತ್ತಿರುವುದಕ್ಕೆ ಅದೇ ಮುಖ್ಯ ಕಾರಣ ಎಂದು ಹೇಳಿದ್ದಾರೆ.

ನಮ್ಮ ಜನತೆಯ ಸಂಪ್ರದಾಯಕ್ಕನುಗುಣವಾಗಿ ನಮ್ಮ ನಡತೆಯ ಆದರ್ಶ ಏನಿತ್ತೆಂಬುದಕ್ಕೆ ಅವರ ಅಭಿಪ್ರಾಯ ಈ ರೀತಿ ಇದೆ "ಸಂಕೋಚ ಸ್ವಭಾವವಿದ್ದರೂ ಪರಂಪರಾನುಗತವಾಗಿ ಬಂದ ಈ ಸಮಾಜ ಸಂಪ್ರದಾಯಗಳು ಸರಸ್ವತಿ ಮತ್ತು ದೃಶದ್ವತಿ ನದಿಗಳ ಮಧ್ಯೆ ಇದ್ದ ಬ್ರಹ್ಮಾವರ್ತ ಎಂಬ ಸಣ್ಣ ಪ್ರದೇಶದಲ್ಲಿ ಮೊದಲು ಹುಟ್ಟಿದವು ಮತ್ತು ಆ ಸಣ್ಣ ಪರಿಮಿತಿಯ ಭೂಪ್ರದೇಶಕ್ಕೆ ಅನುಕೂಲವಾಗಿಯೂ ಇದ್ದುವು. ಬ್ರಹ್ಮಾವರ್ತದಲ್ಲಿ ಮನುವು ಕಂಡ ಧರ್ಮಾಚರಣೆಯ ಭಾವನೆಯು ಕ್ರಮೇಣ ಸಮಾಜಕಂಟಕವಾಯಿತು. ಅಂಧಾನುಕರಣೆಯು ಕ್ರಮೇಣ ಭಾವನಾ ಸ್ವಾತಂತ್ರ್ಯವನ್ನೇ ತುಳಿದುಬಿಟ್ಟತು".

ನನ್ನ ಬಾಲ್ಯಾವಸ್ಥೆಯಲ್ಲಿ ಇಂಗ್ಲಿಷ್ ವಿದ್ಯಾಭ್ಯಾಸ ಮಾಡಿದ ಸುಸಂಸ್ಕೃತ ವಿದ್ಯಾವಂತರು ಸಮಾಜದ ಈ ಕಟು ನಿಯಮಗಳ ಮೇಲೆ ದಂಗೆ ಎದ್ದರು ಅಂಧಾಚರಣೆಗೆ ಪ್ರತಿಯಾಗಿ ಇಂಗ್ಲಿಷ್ ಭಾಷೆಯ "ನಾಗರಿಕತೆ"ಯ ಆದರ್ಶವನ್ನು ಒಪ್ಪಿದೆವು.

ನ್ಯಾಯಸಮ್ಮತವೂ, ನೀತಿಯುತವೂ ಆದ ಈ ಹೊಸ ಭಾವನೆಗೆ ನಮ್ಮ ಮನೆಯಲ್ಲೇ ಪೂರ್ಣ ಸ್ವಾಗತ ದೊರೆಯಿತು. ನಮ್ಮ ಜೀವನದ ಎಲ್ಲ ಅಂಗಗಳಲ್ಲೂ ಅದು ತನ್ನ ಪ್ರಭಾವ ಬೀರಿತು. ಈ ವಾತಾವರಣದಲ್ಲಿ ಹುಟ್ಟಿದವನಾಗಿ ವ್ಯಕ್ತಿಶಃ ಸಾಹಿತ್ಯದ ಮೇಲೆ ಮಮತೆ ಇದ್ದುದರಿಂದ ಇಂಗ್ಲಿಷ್ ಭಾಷೆಗೆ ನನ್ನ ಹೃದಯಲ್ಲಿ ಪಟ್ಟಗಟ್ಟಿದೆನು. ನನ್ನ ಜೀವನದ ಮೊದಲ ಅಧ್ಯಾಯಗಳು ಕಳೆದದ್ದು ಈ ರೀತಿಯಲ್ಲಿ. ಆದರೆ ರಾಷ್ಟ್ರದ ಸ್ವಾರ್ಥ ಪ್ರಶ್ನೆಗಳು ಎದುರು ನಿಂತಾಗ ನಾಗರಿಕ ಜೀವನದ ಉನ್ನತ ಸತ್ಯಗಳನ್ನು ಒಪ್ಪಿದವರೇ ಅವುಗಳಿಗೆ ತಿಲಾಂಜಲಿ ಕೊಡಲು ಹಿಂಜರಿಯುವುದಿಲ್ಲವೆಂದು ಹೆಚ್ಚುಹೆಚ್ಚಾಗಿ ನನಗೆ ಮನದಟ್ಟಾದಂತೆ ನನ್ನ ನಂಬಿಕೆಗಳೆಲ್ಲ ಭ್ರಮೆ ಎಂದು ಬಹು ವ್ಯಸನದಿಂದ ಅರಿತುಕೊಂಡೆ ಹಿಂದೆಯೇ ಜೀವನದ ದಾರಿಯೂ ಬೇರೆಯಾಯಿತು.

## ೭: ೧೮೫೭ರ ಮಹಾಕ್ರಾಂತಿ—ಜನಾಂಗ ವೈರ

ಒಂದು ಶತಮಾನ ಕಾಲ ಬ್ರಿಟಿಷ್ ಆಡಳಿತಕ್ಕೆ ಒಳಗಾಗಿ ಬಂಗಾಲವು ಅದಕ್ಕೆ ಹೊಂದಿಕೊಂಡಿತ್ತು. ಕ್ಷಾಮಡಾಮರಗಳಿಗೆ ತುತ್ತಾಗಿ ಹೊಸ ತೆರಿಗೆಗಳ ಹೊರೆಯಿಂದ ಕುಗ್ಗಿ ಕೃಷಿಕವರ್ಗ ಕುಸಿದು ಬಿದ್ದಿತ್ತು. ವಿದ್ಯಾವಂತರೆಲ್ಲ ಪಾಶ್ಚಿಮಾತ್ಯದ ಕಡೆಗೆ ನೋಡುತ್ತ ಇಂಗ್ಲಿಷರ ಉದಾರ ನೀತಿಯಿಂದಲೇ ಪ್ರಗತಿ ಎಂದು ನಂಬಿದ್ದರು. ದಕ್ಷಿಣ ಮತ್ತು ಪಶ್ಚಿಮ ಭಾರತದಲ್ಲಿ ಮದರಾಸ್ ಮತ್ತು ಮುಂಬೈಗಳಲ್ಲಿ ಇದೇ ಭಾವನೆ ಮೂಡಿತ್ತು. ಆದರೆ ಉತ್ತರ ಭಾರತದ ಪ್ರಾಂತ್ಯಗಳಲ್ಲಿ ಈ ದಾಸ್ಯ ಮನೋಭಾವನೆಯಾಗಲಿ, ಬ್ರಿಟಿಷ್‌ರ ಅಧಿಕಾರ ಒಪ್ಪುವ ಮನೋವೃತ್ತಿಯಾಗಲಿ ಇರಲಿಲ್ಲ. ಮುಖ್ಯವಾಗಿ ಪಾಳೆಯಗಾರರು ಮತ್ತು ಅವರ ಅನುಯಾಯಿಗಳಲ್ಲಿ ದಂಗೆಯ ಮನೋಭಾವ ಬೆಳೆಯುತ್ತಿತ್ತು. ಜನಸಾಮಾನ್ಯರಲ್ಲಿ ಸಹ ಅಸಮಾಧಾನವೂ, ಬ್ರಿಟಿಷರ ಮೇಲೆ ವಿರೋಧಭಾವನೆಯೂ ವಿಶೇಷ ಹರಡಿತ್ತು. ವಿದೇಶೀಯರ ಅಹಂಕಾರ ಮತ್ತು ತಿರಸ್ಕಾರ ದೃಷ್ಟಿಯಿಂದ ಉತ್ತಮವರ್ಗದ ಜನರು ತುಂಬ ಅಸಮಾಧಾನಗೊಂಡಿದ್ದರು. ಜನರ ಅಭಿಲಾಷೆಗೆ ಯಾವ ಮನ್ನಣೆಯನ್ನೂ ಕೊಡದೆ ಪರಂಪರಾನುಗತವಾಗಿ ಬಂದ ಜನರ ಶಿಷ್ಟಾಚಾರಗಳನ್ನು ಕಡೆಗಣ್ಣಿನಿಂದ ನೋಡುತ್ತಿದ್ದ ಈಸ್ಟ್ ಇಂಡಿಯ ಕಂಪೆನಿಯ ಅಧಿಕಾರ ವರ್ಗದ ತಿಳಿಗೇಡಿತನ ಮತ್ತು ದುರಾಸೆಯಿಂದ ಜನರು ಬಹಳ

ಕಂಗೆಟ್ಟಿದ್ದರು. ಭಾರತದ ಅಸಂಖ್ಯಾತ ಜನರ ಮೇಲೆ ಅವರಿಗೆ ದೊರೆತ ಅಧಿಕಾರದಿಂದ ಅವರು ಉನ್ಮತ್ತರಾಗಿದ್ದರು. ಅವರ ನಿರಂಕುಶ ಪ್ರವರ್ತನೆಗೆ ಯಾವ ಅಡ್ಡಿ ಅತಂಕವೂ ಇರಲಿಲ್ಲ. ಹೊಸ ದಾಗಿ ಏರ್ಪಡಿಸಿದ ಅವರ ನ್ಯಾಯಪದ್ಧತಿಯು ಸಹ ಜನರಲ್ಲಿ ಭಯೋತ್ಪಾದನೆಯುನ್ನುಂಟು ಮಾಡಿತು. ಅದರ ಜಟಿಲ ವಿಧಿ ನಿಯಮಗಳೂ, ದೇಶಭಾಷೆ ಮತ್ತು ಸಂಪ್ರದಾಯಗಳಲ್ಲಿನ ನ್ಯಾಯಾಧೀಶರ ಅಜ್ಞಾನವೂ ಆ ಭಯೋತ್ಪಾದನೆಗೆ ಮುಖ್ಯ ಕಾರಣಗಳಾದವು.

೧೮೧೭ರಲ್ಲಿ ಸರ್ ಥಾಮಸ್ ಮನ್ರೋ ಬ್ರಿಟಿಷ್ ಆಡಳಿತದ ಪ್ರಯೋಜನಗಳನ್ನು ಗವರ್ನರ್ ಜನರಲ್ ಲಾರ್ಡ್ ಹೇಸ್ಟಿಂಗ್ಸ್‌ನಿಗೆ ತಿಳಿಸುತ್ತ "ಆದರೆ ಈ ಪ್ರಯೋಜನ ಸುಲಭ ಬೆಲೆಯಿಂದ ದೊರೆತಿಲ್ಲ. ಜನರ ಸ್ವಾತಂತ್ರ್ಯ, ರಾಷ್ಟ್ರನೀತಿ ಮತ್ತು ಜನಾಂಗದ ಗೌರವ ಪ್ರತಿಷ್ಠೆಗಳಿಗೆ ಉಗಮ ಸ್ಥಾನವಾದ ಸದ್ಗುಣಗಳ ನಾಶದಿಂದ ದೊರೆತಿದೆ. ಆದ್ದರಿಂದ ಬ್ರಿಟಿಷರ ಬಂದೂಕುಗಳ ದಿಗ್ವಿಜಯ ದಿಂದ ಭಾರತದ ಜನತೆಯು ಉನ್ನತಿ ಪಡೆಯುವ ಬದಲು ಅವನತಿಗಿಳಿಯುತ್ತದೆ. ದೇಶದ ಆಡಳಿತ ದಲ್ಲಿ ಲೇಶಮಾತ್ರವೂ ದೇಶದ ಜನರಿಗೆ ಅವಕಾಶ ದೊರೆಯದಂತೆ ಬ್ರಿಟಿಷರ ಆಳ್ವಿಕೆಯಲ್ಲಿ ಆದಂತೆ ಬೇರೆ ಯಾವ ಆಡಳಿತದಲ್ಲೂ ಆಗಿರಲಿಲ್ಲ" ಎಂದು ಬರೆದಿರುತ್ತಾನೆ.

ಭಾರತೀಯರನ್ನು ಆಡಳಿತವರ್ಗದಲ್ಲಿ ಸೇರಿಸಿರೆಂದು ಮನ್ರೋ ಒತ್ತಾಯ ಮಾಡುತ್ತಲೇ ಇದ್ದನು. ಒಂದು ವರ್ಷದನಂತರ "ವಿದೇಶೀಯರು ಹಿಂದೆ ಭಾರತೀಯರನ್ನು ಹಿಂಸೆಮಾಡಿದ್ದಾರೆ, ಬಹಳ ದೌರ್ಜನ್ಯದಿಂದ ಪೀಡಿಸಿದ್ದಾರೆ, ಆದರೂ ಯಾರೂ ನಮ್ಮಂತೆ ಅವರನ್ನು ನಿಕೃಷ್ಟರನ್ನಾಗಿ ಕಂಡಿಲ್ಲ. ಇಡೀ ಜನಾಂಗವನ್ನೇ ನಂಬಿಕೆಗೆ ಅನರ್ಹರು, ಅಪ್ರಮಾಣಿಕರು ಎಂದು ನಮ್ಮಂತೆ ಯಾರೂ ಇದುವರೆಗೆ ಹಳಿದಿಲ್ಲ. ಸಹಾಯ ಅನಿವಾರ್ಯವಾದಾಗ ಮಾತ್ರ ಅವರನ್ನು ಕೆಲಸಕ್ಕೆ ಸೇರಿಸಿಕೊಳ್ಳ ಬೇಕೆಂದು ನಮ್ಮಂತೆ ಯಾರೂ ಭಾವಿಸಿರಲಿಲ್ಲ. ನಮ್ಮ ಆಡಳಿತದಲ್ಲಿ ಸಿಕ್ಕಿಬಿದ್ದಿರುವ ಜನರ ಶೀಲ ವನ್ನು ಈ ರೀತಿ ಅವಹೇಳನಮಾಡುವುದು ಔದಾರ್ಯಶೂನ್ಯ ಮಾತ್ರವಲ್ಲದೆ ರಾಜಕೀಯ ನೈಪುಣ್ಯ ಶೂನ್ಯವೂ ಆದ ನೀತಿ" ಎಂದು ಹೇಳಿದ್ದಾನೆ.

ಸೀಖರ ಮೇಲೆ ಎರಡು ಯುದ್ಧಗಳಾಗಿ ೧೮೪೯ರ ಹೊತ್ತಿಗೆ ಬ್ರಿಟಿಷರ ಅಧಿಕಾರ ಪಂಜಾಬಿಗೂ ವ್ಯಾಪಿಸಿತು. ಪಂಜಾಬಿನಲ್ಲಿ ಸೀಖರ ರಾಜ್ಯಸ್ಥಾಪನೆ ಮಾಡಿ ವಿಸ್ತರಿಸಿದ್ದ ರಣಜಿತಸಿಂಗ್ ೧೮೩೯ರಲ್ಲಿ ದೈವಾಧೀನನಾಗಿದ್ದನು. ೧೮೫೬ರಲ್ಲಿ ಅಯೋಧ್ಯೆಯು ಬ್ರಿಟಿಷರ ವಶವಾಯಿತು. ಅಯೋಧ್ಯೆಯು ಐವತ್ತು ವರ್ಷಗಳ ಮುಂಚೆಯೇ ಬ್ರಿಟಿಷರ ಆಡಳಿತ ಪ್ರಭಾವಕ್ಕೆ ಸಿಕ್ಕಿ ಬಿದ್ದಿತ್ತು. ರಾಜನು ದುರ್ಬಲನೂ, ಅಶಕ್ತನೂ ಆಗಿ ಬ್ರಿಟಿಷ್ ರೆಸಿಡೆಂಟನ ಕೈ ಗೊಂಬೆಯಾಗಿದ್ದನು. ಆಶ್ರಿತ ಸಂಸ್ಥಾನಗಳಿಗೆ ಸ್ವಾಭಾವಿಕವಾದ ಎಲ್ಲ ಸಂಕಟಗಳಿಗೂ ತುತ್ತಾಗಿ ಅಧೋಗತಿಗಿಳಿದಿತ್ತು.

೧೮೫೭ನೆ ಮೇ ತಿಂಗಳು ಮೀರತ್ತಿನಲ್ಲಿ ಭಾರತೀಯ ಸಿಪಾಯಿ ದಂಗೆ ಆರಂಭವಾಯಿತು. ಬಹಳ ಮುನ್ನೆಚ್ಚರದಿಂದ, ದಕ್ಷತೆಯಿಂದ ದಂಗೆಯ ಸಿದ್ಧತೆಯಾಗಿತ್ತು. ಆದರೆ ನಿಯತ ಕಾಲಕ್ಕೆ ಮುಂಚೆಯೇ ದಂಗೆಯು ಆರಂಭವಾಗಿ ದಂಗೆಯ ನಾಯಕರ ಯೋಜನೆಗಳೆಲ್ಲ ತಲೆಕೆಳಗಾದವು. ಅದು ಕೇವಲ ಸಿಪಾಯಿ ದಂಗೆಯಾಗಿರಲಿಲ್ಲ. ಬಹುಬೇಗ ಜನತಾಕ್ರಾಂತಿಯಾಗಿ ಜನಸಾಮಾನ್ಯ ರಲ್ಲಿ ಹರಡಿ ಭಾರತದ ಸ್ವಾತಂತ್ರ್ಯ ಸಮರವಾಯಿತು. ಈರೀತಿ ಜನರು ದಂಗೆ ಎದ್ದುದು ದೆಹಲಿ, ಈಗಿನ ಸಂಯುಕ್ತಪ್ರಾಂತ, ಮಧ್ಯಭಾರತ ಮತ್ತು ಬಿಹಾರದಲ್ಲಿ ಮಾತ್ರ. ಮುಖ್ಯ ಅದು ಪಾಳೆಯ ಗಾರರ ದಂಗೆಯಾಗಿ ಪಾಳೆಯಗಾರರೂ ಅವರ ಅನುಯಾಯಿಗಳೂ ಅದರ ನಾಯಕತ್ವ ವಹಿಸಿದರು. ದೇಶಾದ್ಯಂತ ಹರಡಿದ್ದ ವಿದೇಶೀಯರ ಮೇಲಿನ ದ್ವೇಷ ಈ ದಂಗೆಗೆ ಸಹಾಯಕವಾಯಿತು. ದೆಹಲಿಯ ಅರಮನೆಯಲ್ಲಿ ಕುಳಿತಿದ್ದ ಅಶಕ್ತ ಜೀರ್ಣ ದುರ್ಬಲ ಮೊಗಲ ಸಂತತಿಯಕಡೆಗೆ ಅದರ ದೃಷ್ಟಿ ಹೊರಳಿತು. ಈ ದಂಗೆಯಲ್ಲಿ ಹಿಂದುಗಳೂ ಮುಸ್ಲಿಮರೂ ಪೂರ್ಣ ಭಾಗವಹಿಸಿದರು.

ಈ ದಂಗೆಯಿಂದ ಬ್ರಿಟಿಷರ ಅಧಿಕಾರ ತತ್ತರಿಸಿತು; ಕೊನೆಗೆ ಭಾರತೀಯರ ಸಹಾಯ ದಿಂದಲೇ ದಂಗೆಯು ಅಡಗಿತು. ವಿದೇಶೀಯರನ್ನು ದೇಶದಿಂದ ಓಡಿಸಲು ಹಳೆಯ ಆಡಳಿತವರ್ಗವು

ಸರ್ವಪ್ರಯತ್ನ ಮಾಡಿದರೂ ಆದರ ಅಂತರ್ಗತ ನ್ಯೂನತೆಗಳೆಲ್ಲ ಮೇಲೆ ಬಂದವು. ಭಾರತದ ಬಹು ಭಾಗದ ಜನತೆಯ ಸಹಾನುಭೂತಿಯು ಈ ಪಾಳೆಯಗಾರರಿಗೆ ದೊರಕಿತು. ಆದರೆ ಇವರು ಅಸಮರ್ಥರೂ ಅಸಂಘಟಿತರೂ ಇದ್ದರು ; ಮತ್ತು ಅವರಲ್ಲಿ ಯಾವ ರಚನಾತ್ಮಕ ಆದರ್ಶವಾಗಲಿ, ಒಮ್ಮತಧ್ಯೇಯವಾಗಲಿ ಇರಲಿಲ್ಲ. ಇತಿಹಾಸದಲ್ಲಿ ಅವರ ಪಾತ್ರ ಮುಗಿದಿತ್ತು ಅಲ್ಲದೆ ಭವಿಷ್ಯದಲ್ಲಿ ಅವರಿಗೆ ಯಾವ ಸ್ಥಾನವೂ ಇರಲಿಲ್ಲ. ಅವರಲ್ಲಿ ಅನೇಕರಿಗೆ ದಂಗೆಕಾರರ ಮೇಲೆ ಸಹಾನುಭೂತಿ ಯಿದ್ದರೂ, ಹುಚ್ಚು ಧೈರ್ಯಕ್ಕಿಂತ ವಿವೇಕ ಒಳ್ಳೆಯದೆಂದು ಜಯಲಕ್ಷ್ಮಿ ಯಾವ ಕಡೆ ಒಲಿಯು ವಳೋ ನೋಡೋಣವೆಂದು ತಟಸ್ಥರಾಗಿ ಕಾದು ಕುಳಿತರು. ಅನೇಕರು ದ್ರೋಹ ಮಾಡಿದರು. ದೇಶೀಯ ರಾಜರೆಲ್ಲರೂ ತಟಸ್ಥರಾದರು ಅಥವ ಇರುವುದನ್ನು ಕಳೆದುಕೊಳ್ಳದೆ ಹೇಗಾದರೂ ಉಳಿಸಿ ಕೊಳ್ಳಲೆಂದು ಬ್ರಿಟಿಷರಿಗೆ ಸಹಾಯ ಮಾಡಿದರು. ನಾಯಕರಲ್ಲಿ ಉನ್ನತರಾಷ್ಟ್ರೀಯ ಭಾವನೆಯಾಗಲಿ ಒಗ್ಗಟ್ಟಿನ ಮನೋಭಾವನೆಯಾಗಲಿ ಇರಲಿಲ್ಲ; ಅದಕ್ಕೆ ಪ್ರತಿಯಾಗಿ ವಿದೇಶೀಯರ ಮೇಲಿನ ದ್ವೇಷ ಮತ್ತು ತಮ್ಮ ಪಾಳೆಯಗಾರಿಕೆಯ ರಕ್ಷಣೆ ಮಾತ್ರ ಅವರ ಧ್ಯೇಯಗಳಾದವು. ಅವು ಹೆಚ್ಚು ಉಪಯೋಗವಾಗಲಿಲ್ಲ.

ಬ್ರಿಟಿಷರಿಗೆ ಗೂರ್ಖರ ಬೆಂಬಲದೊರೆಯಿತು. ಇನ್ನೂ ಹೆಚ್ಚಿನ ಆಶ್ಚರ್ಯವೆಂದರೆ ಕೆಲವೇ ವರ್ಷಗಳ ಕೆಳಗೆ ಬ್ರಿಟಿಷರ ಕೈಲಿ ಸೋಲುತಿಂದ ಸೀಖರೂ ಅವರ ಸಹಾಯಕರಾದರು. ಈ ರೀತಿ ಸೀಖರ ಸಹಾಯು ದೊರೆಯುವಂತೆ ಅವರನ್ನು ಒಲಿಸಿಕೊಂಡುದು ಬ್ರಿಟಿಷರ ರಾಜನೈಪುಣ್ಯತೆಯನ್ನು ತೋರಿಸುತ್ತದೆ. ಈ ರೀತಿ ಸೀಖರು ಬ್ರಿಟಿಷರ ಸಹಾಯಕ್ಕೆ ನಿಂತುದು ಸರಿಯೇ ತಪ್ಪೇ ಎಂಬುದು ಅವರವರ ದೃಷ್ಟಿಕೋಣವನ್ನು ಅವಲಂಬಿಸಿದೆ. ಆದರೆ ಭಾರತೀಯರಲ್ಲಿ ಐಕಮತ್ಯವನ್ನುಂಟುಮಾಡುವ ರಾಷ್ಟ್ರೀಯ ಭಾವನೆ ಇರಲಿಲ್ಲವೆಂಬುದು ಇದರಿಂದ ಸ್ಪಷ್ಟ. ಇಂದಿನ ರಾಷ್ಟ್ರೀಯ ಭಾವನೆ ಆಗ ಇನ್ನೂ ಮೂಡಿರಲಿಲ್ಲ. ನಿಜವಾದ ಸ್ವಾತಂತ್ರ್ಯದ ಪಾಠಕಲಿಯಲು ಭಾರತ ಇನ್ನೂ ಅನೇಕ ದುಃಖ ಮತ್ತು ಸಂಕಟ ಅನುಭವಿಸುವುದಿತ್ತು. ನಿರ್ಜೀವ ಪಾಳೆಯಗಾರಿಕೆಗಾಗಿ ಹೋರಾಡಿ ಸ್ವಾತಂತ್ರ್ಯ ಪಡೆಯು ವಂತಿರಲಿಲ್ಲ.

ಈ ಕ್ರಾಂತಿಯಲ್ಲಿ ತೆರೆಮರೆಯ ಅನೇಕ ಯೋಧರು ಕೀರ್ತಿಗೆ ಬಂದರು. ದೆಹಲಿಯ ಬಹದ್ದೂರ್‌ಷಾನ ಸಂಬಂಧಿ ಫಿರೋಜ್‌ಷಾ ಅವರಲ್ಲಿ ಒಬ್ಬ. ಆದರೆ ಸೋಲು ಸನ್ನಿಹಿತವೆಂದು ಕಂಡಾಗ ಸಹ ಅನೇಕ ತಿಂಗಳು ಬ್ರಿಟಿಷರಿಗೆ ಮಣ್ಣು ಮುಕ್ಕಿಸಿದ ಧೀರನೆಂದರೆ ತಾತ್ಯಾತೋಪಿ. ತನಗೆ ಸಹಾಯ ಮತ್ತು ಸ್ವಾಗತ ದೊರೆಯುತ್ತದೆಂದು ತಿಳಿದು ನರ್ಮದಾನದಿಯನ್ನು ದಾಟಿ ಮರಾಠ ದೇಶದಲ್ಲಿ ಕೊನೆಯಲ್ಲಿ ಕಾಲಿಟ್ಟ ಒಡನೆ ಸ್ವಾಗತಕ್ಕೆ ಬದಲು ದ್ರೋಹಕ್ಕೆ ಬಲಿಯಾದನು. ಕಾದಾಡು ತ್ತಲೇ ಮರಣವನ್ನಪ್ಪಿದ ಇಪ್ಪತ್ತುವರ್ಷದ ವೀರಯುವತಿ ಝೂನ್ಸಿರಾಣಿ ಲಕ್ಷ್ಮೀಬಾಯಿ ಅವರೆಲ್ಲರಿಗೂ ಉನ್ನತವ್ಯಕ್ತಿ. ಆಕೆಯ ಹೆಸರು ಜನಜನಿತವಾಗಿದೆ. ಆಕೆಯೊಂದಿಗೆ ಯುದ್ಧಮಾಡಿದ ಇಂಗ್ಲಿಷ್ ಸೇನಾನಿ " ದಂಗೆಕಾರರಲ್ಲಿ ಅತ್ಯುತ್ತಮಳು ಮತ್ತು ಅತಿ ಧೈರ್ಯಶಾಲಿ " ಎಂದಿದ್ದಾನೆ.

ಕಾನ್ಪುರ ಮತ್ತು ಇತರ ಕಡೆಗಳಲ್ಲಿ ದಂಗೆಯಲ್ಲಿ ಮಡಿದ ಬ್ರಿಟಿಷರಿಗೆ ಅನೇಕ ಸ್ಮಾರಕಗಳಿವೆ. ಆದರೆ ಆ ದಂಗೆಯಲ್ಲಿ ಪ್ರಾಣಾರ್ಪಣಮಾಡಿದ ಭಾರತೀಯರಿಗೆ ಯಾವ ಸ್ಮಾರಕವೂ ಇಲ್ಲ. ಭಾರ ತೀಯ ದಂಗೆಕಾರರು ಅನೇಕ ಕ್ರೂರ ದುಷ್ಕೃತ್ಯಗಳನ್ನು ಮಾಡಿದರು. ಅವರಲ್ಲಿ ಒಗ್ಗಟ್ಟಿರಲಿಲ್ಲ; ಬ್ರಿಟಿಷರಿಂದ ಆಗ್ರಹಕ್ಕೆ ಬಲಿಯಾದರು ; ಬ್ರಿಟಿಷರ ದೌರ್ಜನ್ಯಗಳನ್ನು ಕೇಳಿ ರೊಚ್ಚಿಗೆದ್ದರು. ಆದರೆ ಭಾರತದ ಜನಮನದ ಮೇಲೆ ಮಹತ್ಪರಿಣಾಮಮಾಡಿದ ಈ ಚಿತ್ರದ ಇನ್ನೊಂದು ಮುಖವಿದೆ. ನನ್ನ ಪ್ರಾಂತ್ಯದ ಪ್ರತಿ ಹಳ್ಳಿಯಲ್ಲಿ ನಗರದಲ್ಲಿ ಅದರ ನೆನಪು ಇನ್ನೂ ಮಾಸಿಲ್ಲ. ನಾಜಿ ತತ್ವದ ಇಂದಿನ ಆಧುನಿಕ ಯುದ್ಧದ ಪಾಶವೀ ವೃತ್ತಿಯ ಅಳತೆಗೋಲಿನಿಂದ ನೋಡಿದರೆ ಸಹ ಮನಸ್ಸಿಗೆ ಜುಗುಪ್ಸೆ ಹುಟ್ಟಿಸುವ, ಮಾನವನ ಅಧಃಪತನ ತೋರಿಸುವ ಆ ಘೋರ ಅಸಹ್ಯಚಿತ್ರವನ್ನು ಮರೆಯೋಣ ವೆಂದು ಒಮ್ಮೊಮ್ಮೆ ಅನಿಸುತ್ತದೆ. ಆದರೆ ಇಂದಿನ ಜೀವನಕ್ಕೆ ಯಾವ ಸಂಬಂಧ ಇಲ್ಲದ, ನಿಜವಾಗಿ

ಹಿಂದಿನ ಕಥೆಯಾದಾಗ ಮಾತ್ರ ಅದು ಸಾಧ್ಯ. ಎಂದಿನವರೆಗೆ ಇಂದಿನ ಜೀವನಕ್ಕೆ ಆ ಚಿತ್ರದ ಸಂಬಂಧ ಉಳಿದು ಅದು ಸದಾ ನಮ್ಮ ಸ್ಮೃತಿಪಥಕ್ಕೆ ಬರುತ್ತದೆಯೋ ಮತ್ತು ಆ ಘಟನೆಗಳ ಹಿನ್ನೆಲೆಯು ಇನ್ನೂ ಜೀವಂತ ಇದ್ದು ಪದೇಪದೇ ತನ್ನ ಹೆಡೆಯನ್ನು ಎತ್ತುತ್ತದೆಯೋ ಅಲ್ಲಿಯವರೆಗೆ ಆ ಚಿತ್ರ ಅಳಿಸುವುದೂ ಇಲ್ಲ, ಜನತೆಯ ಮೇಲಿನ ಅದರ ಪರಿಣಾಮ ಮಾಸುವುದೂ ಇಲ್ಲ. ಆ ಚಿತ್ರವನ್ನು ಅಳಿಸಲು ಮಾಡುವ ಪ್ರಯತ್ನಗಳಿಂದ ನಾಶವಾಗುವ ಬದಲು ಮನಸ್ಸಿನ ಅಂತರಾಳದಲ್ಲಿ ಅದು ಇನ್ನೂ ಬೇರು ಬಿಡುತ್ತದೆ. ಸ್ವಾಭಾವಿಕವಾಗಿ ಕಾಲಕ್ರಮೇಣ ಅದರ ಪರಿಣಾಮ ಸ್ವಲ್ಪ ಕಡಮೆಯಾಗಬಹುದು.

ಈ ದಂಗೆ ಮತ್ತು ಅದನ್ನು ಅಡಗಿಸಿದ ರೀತಿಯ ವಿಷಯದಲ್ಲಿ ಅನೇಕ ಸುಳ್ಳು ಮತ್ತು ವಿಕೃತ ಇತಿಹಾಸಗಳು ಹುಟ್ಟಿವೆ. ಭಾರತೀಯರ ಕಲ್ಪನೆ ಏನಿತ್ತೆಂಬುದು ಮುದ್ರಣವಾಗುವಂತಿಲ್ಲ. ಈಗ ಮೂವತ್ತು ವರ್ಷಗಳ ಕೆಳಗೆ ಸಾವರ್‌ಕರ್ "ಭಾರತದ ಸ್ವಾತಂತ್ರ್ಯ ಸಮರದ ಇತಿಹಾಸ" ಎಂಬ ಗ್ರಂಥವನ್ನು ಬರೆದರು. ಮರುಕ್ಷಣದಲ್ಲೇ ಅದನ್ನು ಮುಟ್ಟುಗೋಲು ಹಾಕಲಾಯಿತು; ಈಗಲೂ ಬಹಿಷ್ಕೃತವೇ ಇದೆ. ಕೆಲವು ಸತ್ಯನಿಷ್ಠ ಪ್ರಾಮಾಣಿಕ ಇಂಗ್ಲಿಷ್ ಚರಿತ್ರಕಾರರು ಆಗ ಬೃಹದಾಕಾರವಾಗಿ ಹರಡಿದ್ದ ಜನಾಂಗ ದ್ವೇಷ ಮತ್ತು ರಕ್ತದಾಹವನ್ನು ಸ್ವಲ್ಪ ಚಿತ್ರಿಸಲು ಒಮ್ಮೊಮ್ಮೆ ಪ್ರಯತ್ನಪಟ್ಟಿದ್ದಾರೆ. ಕೇ ಮತ್ತು ಮಾಲೆಸನ್‌ರ "ದಂಗೆಯ ಇತಿಹಾಸ" ಥಾಮುಸನ್ ಮತ್ತು ಗ್ಯಾರೆಟ್ಟರ "ಭಾರತದಲ್ಲಿ ಬ್ರಿಟಿಷರ ಉನ್ನತಿ ಮತ್ತು ಅವನತಿ" ಎಂಬ ಗ್ರಂಥಗಳಲ್ಲಿನ ವಿವರಗಳನ್ನು ಓದಿದರೆ ಅಸಹ್ಯವೆನಿಸುತ್ತದೆ. "ಬ್ರಿಟಿಷ್ ಪರ ಯುದ್ಧ ಮಾಡದ ಪ್ರತಿಯೊಬ್ಬ ಭಾರತೀಯನೂ ಹೆಂಗಸರು ಮತ್ತು ಮಕ್ಕಳನ್ನು ಕೊಲೆ ಮಾಡುವ ಪಾತಕಿಯಾದ ...ಅನೇಕರು ನಮ್ಮ ಹಿತೈಷಿಗಳಿದ್ದರೂ ದೆಹಲಿಯ ನಿವಾಸಿಗಳನ್ನೆಲ್ಲ ಸಾಮೂಹಿಕ ಕೊಲ್ಲಬೇಕೆಂದು ಆಜ್ಞೆಯಾಯಿತು" ಎಂದಿದ್ದಾರೆ. ತೈಮೂರ್ ಮತ್ತು ನಾದಿರ್‌ಷಾನ ದಿನಗಳನ್ನು ಜ್ಞಾಪಕಕ್ಕೆ ತಂದವು. ಆದರೆ ಕಾಲ ಮತ್ತು ಸಂಖ್ಯಾಬಾಹುಳ್ಯದಲ್ಲಿ ಬ್ರಿಟಿಷರ ದೌರ್ಜನ್ಯ ಅವರೆಲ್ಲರನ್ನೂ ಮೀರಿಸಿತು. ಲೂಟಿಮಾಡಲು ಒಂದು ವಾರ ಕಾಲಾವಕಾಶ ದೊರೆತರೆ ಅದು ಒಂದು ತಿಂಗಳ ಕಾಲ ನಡೆದು ಜೊತೆಗೆ ಸಾಮೂಹಿಕ ಕೊಲೆಯೂ ನಡೆಯಿತು.

ನನ್ನ ಸ್ವಂತ ನಗರವಾದ ಇಲಹಾಬಾದ್ ನಗರದಲ್ಲಿ, ಇಲಾಹಾಬಾದ್ ಜಿಲ್ಲೆಯಲ್ಲಿ ಮತ್ತು ಸುತ್ತಲಿನ ಪ್ರದೇಶದಲ್ಲಿ ಜನರಲ್ ನೀಲ್ ತೀರ್ಪು ಕೊಟ್ಟು ತನ್ನ ರಕ್ತ ಪಿಪಾಸೆಯನ್ನು ಪೂರೈಸಿಕೊಂಡನು. ಸೈನಿಕರೂ ಮತ್ತು ಅಧಿಕಾರಿಗಳೂ ಮರಣ ದಂಡನೆ ವಿಧಿಸುತ್ತ ವಯಸ್ಕ ಹೆಂಗಸು ಮಕ್ಕಳು ಎಂದು ಏನನ್ನೂ ನೋಡದೆ ಭಾರತೀಯರನ್ನು ಕೊಲೆ ಮಾಡುತ್ತಿದ್ದರು. "ದಂಗೆ ಎದ್ದವರ ಜೊತೆಯಲ್ಲಿ ಮುದುಕರೂ, ಹೆಂಗಸರೂ, ಮಕ್ಕಳೂ ಬಲಿಯಾಗುತ್ತಿದ್ದಾರೆ" ಎಂದು ಗೌರ್ನರ್ ಬರೆದ ಪತ್ರಗಳು ಬ್ರಿಟಿಷ್ ಪಾರ್ಲಿಮೆಂಟಿನ ದಫ್ತರಗಳಲ್ಲಿ ಇನ್ನೂ ದೊರೆಯುತ್ತವೆ. ಉದ್ದೇಶಪಟ್ಟು ಅವರನ್ನು ಗಲ್ಲಿಗೇರಿಸುತ್ತ ಇರಲಿಲ್ಲ. ಊರಿಗೆ ಊರನ್ನೆ ಸುಟ್ಟುಬಿಡುತ್ತಿದ್ದರು; ಒಮ್ಮೊಮ್ಮೆ ಗುಂಡಿಟ್ಟು ಕೊಲ್ಲುತ್ತಿದ್ದರು. ಜನರ ಕೊಲೆಗೆಂದು ಸ್ವಯಂಸೇವಕರ ತಂಡಗಳು ಜಿಲ್ಲೆಯೊಳಗೆ ನುಗ್ಗಿದವು. ಅನುಭವವಿಲ್ಲದಿದ್ದರೂ ಕಟುಕರ ಕೆಲಸಕ್ಕೆ ಜನರ ಅಭಾವವಿರಲಿಲ್ಲ. ಒಬ್ಬ ಧನ್ಯಾತ್ಮನು "ಮಾವಿನ ಮರದಿಂದ ಶೂಲಕ್ಕೆ ಹಾಕಿದೆ. ಆನೆಯ ಮೇಲಿಂದ ತಳ್ಳಿ, ಕೊಂದು ಹಾಕಿದೆ. ಹಗ್ಗಕ್ಕೆ ಕಟ್ಟಿ ನೇಣು ಹಾಕಿದೆ. 8 ರ ಆಕಾರದಲ್ಲಿ ಹೆಣಗಳನ್ನು ಜೋಡಿಸಿ ಕಲಾಸೃಷ್ಟಿ ಮಾಡಿದೆ ಎಂದು ಹೆಮ್ಮೆ ಪಡುತ್ತಿದ್ದನಂತೆ. ಕಾನ್ಪುರ, ಲಖನೌ ಮತ್ತು ಎಲ್ಲ ಕಡೆಯಲ್ಲೂ ಇದೇ ಭೀಕರ ಚಿತ್ರ. ಬ್ರಿಟಿಷರು ಕೃತಜ್ಞತೆಯಿಂದ ತಮ್ಮ ಜನರಲ್ ನೀಲ್‌ಗೆ ಭಾರತದ ವೆಚ್ಚದಿಂದ ಕಟ್ಟಿದ ಸ್ಮಾರಕ ಪ್ರತಿಮೆ ಅಂದಿನಿಂದ ಇಂದಿನವರೆಗೆ ಒಂದೇರೀತಿ ನಡೆದುಬರುತ್ತಿರುವ ಬ್ರಿಟಿಷ್ ಆಡಳಿತ ನೀತಿಯ ನಿಜವಾದ ಚಿಹ್ನೆಯಾಗಿ ಈಗಲೂ ನಮ್ಮನ್ನು ಮೂದಲಿಸುತ್ತಿದೆ. ಸೆಳೆದ ಕತ್ತಿಯ ನಿಕಲ್ಸನ್ ಪ್ರತಿಮೆ ಇನ್ನೂ ಹಳೆಯ ದೆಹಲಿಯಲ್ಲಿ ಭಯೋತ್ಪಾದನೆ ಮಾಡುತ್ತಿದೆ.

ಈ ಹಳೆಯ ದುರಂತವನ್ನೆಲ್ಲ ಜ್ಞಾಪಿಸಿಕೊಳ್ಳಲು ಅಸಹ್ಯವೆನಿಸುವುದು ನಿಜ. ಆದರೆ ಆ ದುರಂತ ಕಥೆಯ ಹಿಂದಿನ ಮನೋಭಾವನೆ ಆ ಕಥೆಯೊಂದಿಗೇ ಮುಗಿಯಲಿಲ್ಲ. ಜೀವಂತವಾಗಿಯೇ ಉಳಿಯಿತು. ಸಂಕಟ ಸಮಯ ಬಂದಾಗ ಅಥವ ಜ್ಞಾನ ತಪ್ಪಿ ಬುದ್ಧಿ ಭ್ರಮಿಸಿದಾಗ ಪುನಃ ಪುನಃ ಹೆಡೆ ಎತ್ತಿದೆ. ಅಮೃತಸರ ಮತ್ತು ಜಲಿಯನವಾಲಾಬಾಗ್ ಕಥೆ ಪ್ರಪಂಚಕ್ಕೇ ಗೊತ್ತಿದೆ; ಆದರೆ ಸಿಪಾಯಿ ದಂಗೆಯಿಂದ ಈಚೆಗೆ ನಡೆದ ಅನೇಕ ವಿಷಯಗಳು ಬೆಳಕಿಗೆ ಬಂದಿಲ್ಲ. ನಮ್ಮ ಕಾಲದ ಈಚಿನ ದಿನಗಳ ಅನೇಕ ವಿಷಯಗಳೂ ಮತ್ತು ಜನರ ಮನಸ್ಸಿನ ಮೇಲೆ ಅವುಗಳ ಪರಿಣಾಮವೂ ಪ್ರಪಂಚಕ್ಕೆ ತಿಳಿದಿಲ್ಲ. ಸಾಮ್ರಾಜ್ಯತ್ವವೂ, ಒಂದು ಜನಾಂಗದ ಮೇಲೆ ಇನ್ನೊಂದು ಜನಾಂಗದ ಅಧಿಕಾರವೂ ಬಹಳ ಹಾನಿಕರ. ಅದರಂತೆ ಜನಾಂಗ ದ್ವೇಷವೂ ಬಹಳ ವಿನಾಶಕಾರಕ, ಆದರೆ ಸಾಮ್ರಾಜ್ಯತ್ವ ಮತ್ತು ಜನಾಂಗ ದ್ವೇಷ ಎರಡೂ ಸೇರಿದರೆ ಭಯಂಕರ ಪರಿಣಾಮ ಖಂಡಿತ; ಕೊನೆಗೆ ಸಂಬಂಧಪಟ್ಟವರೆಲ್ಲರ ಅಧಃಪತನವೂ ನಿಶ್ಚಯ. ತನ್ನ ಅತ್ಯುನ್ನತ ಪ್ರತಿಷ್ಠೆಯ ಪದವಿಯಿಂದ ಪತನ ಹೊಂದಲು ಇಂಗ್ಲೆಂಡಿನ ಸಾಮ್ರಾಜ್ಯದಾಹವೂ ಜನಾಂಗ ವೈರವೂ ಎಷ್ಟರಮಟ್ಟಿಗೆ ಕಾರಣ ಎಂಬುದನ್ನೂ ಮತ್ತು ಇಂಗ್ಲೆಂಡಿನ ಸಾರ್ವಜನಿಕ ಜೀವನವು ಮಲಿನಗೊಂಡು ಇತಿಹಾಸ ಮತ್ತು ಸಾಹಿತ್ಯದ ನೀತಿಯನ್ನು ಹೇಗೆ ಮರೆಯಿತು ಎಂಬುದನ್ನು ನಿರ್ಧರಿಸುವ ಕೆಲಸವು ಮುಂದಿನ ಇತಿಹಾಸಕಾರನಿಗೆ ಸೇರಿದ್ದು.

ಕಂಡು ಕೇಳದ ಅನಾಮಧೇಯ ಹಿಟ್ಲರ್ ಜರ್ಮನಿಯ "ಫುಹರರ್" ಆದಂದಿನಿಂದ ನಾಜಿಗಳ ಕುಲಶ್ರೇಷ್ಠತೆಯ ತತ್ವದ ವಿಷಯ ಮತ್ತು ಅವರ ಜನಾಂಗದ್ವೇಷದ ವಿಷಯ ಬಹಳ ಕೇಳಿದ್ದೇವೆ. ಈ ತತ್ವವನ್ನು ಎಲ್ಲರೂ ಖಂಡಿಸಿದ್ದಾರೆ. ಮಿತ್ರರಾಷ್ಟ್ರಗಳ ನಾಯಕರು ಈಗಲೂ ಖಂಡಿಸುತ್ತಿದ್ದಾರೆ. ಜೀವಶಾಸ್ತ್ರಜ್ಞರು ಕುಲಶ್ರೇಷ್ಠತೆ ಎನ್ನುವುದು ಒಂದು ಭ್ರಮೆ. ಶ್ರೇಷ್ಠಕುಲ ಎನ್ನುವುದು ಯಾವುದೂ ಇಲ್ಲ, ಎಂದು ಸಾರಿದ್ದಾರೆ. ನಾಜಿಗಳ ಆಡಳಿತ ಆದರ್ಶವೆಲ್ಲ ಕುಲಶ್ರೇಷ್ಠತೆಯನ್ನು ಅವಲಂಬಿಸಿದೆ. ಅವರ ಆಡಳಿತರಚನೆಯೂ ಆ ತತ್ವದಮೇಲೆ ಬೆಳೆಯಿತು. ಸಾಮ್ರಾಜ್ಯ ತತ್ವಕ್ಕೂ ಈ ಕುಲಶ್ರೇಷ್ಠತೆಯ ಭಾವನೆಯೇ ಮೂಲ. ಅಧಿಕಾರದಲ್ಲಿರುವವರು ಮುಚ್ಚುಮರೆ ಇಲ್ಲದೆ ಈ ತತ್ವವನ್ನು ಸಾರುತ್ತ ಬಂದರು. ಮಾತಿಗಿಂತ ಆಚರಣೆಯಲ್ಲಿ ಅವಕ್ಕೆ ಇನ್ನೂ ಹೆಚ್ಚು ಪ್ರಾಶಸ್ತ್ಯ ದೊರೆಯಿತು. ಪೀಳಿಗೆಯಿಂದ ಪೀಳಿಗೆಗೆ ವರ್ಷಗಳಮೇಲೆ ವರ್ಷಗಳು ಕಳೆದರೂ ಭಾರತವನ್ನೂ, ಭಾರತೀಯರ ವ್ಯಕ್ತಿತ್ವವನ್ನೂ ಅವಹೇಳನಮಾಡಿ, ಅವಮಾನಪಡಿಸಿ ತುಚ್ಛವಾಗಿ ಕಂಡರು. ಇಂಗ್ಲಿಷರು ಸಾಮ್ರಾಟ ಜನಾಂಗದವರು, ನಮ್ಮನ್ನು ದಾಸ್ಯದಲ್ಲಿಟ್ಟು ಆಳಲು ದೇವದತ್ತ ಅಧಿಕಾರ ಅವರಿಗಿದೆ ಎಂದು ನಮಗೆ ಬುದ್ಧಿಹೇಳುತ್ತಿದ್ದರು. ನಾವೇನಾದರೂ ಉಸಿರೆತ್ತಿದರೆ "ಸಾಮ್ರಾಜ್ಯ ಜನಾಂಗದ ವ್ಯಾಘ್ರನಖಗಳನ್ನು" ತೋರಿಸುತ್ತಿದ್ದರು. ಭಾರತೀಯನಾಗಿ ಇದನ್ನೆಲ್ಲ ಬರೆಯಲು ನನಗೇ ನಾಚಿಕೆಯಾಗುತ್ತದೆ. ಅವನ್ನೆಲ್ಲ ನೆನಸಿಕೊಂಡರೆ ಮನಸ್ಸು ನೋಯುತ್ತದೆ; ಇಷ್ಟು ದಿನಗಳು ಈ ಅಧೋಗತಿಯನ್ನು ಸಹಿಸಿಕೊಂಡಿದ್ದೆವಲ್ಲ ಎಂದು ಇನ್ನೂ ಹೆಚ್ಚು ನೋವಾಗುತ್ತದೆ. ಪರಿಣಾಮ ಏನೆ ಆಗಲಿ ನಮ್ಮ ಜನ ಅದನ್ನು ಅನುಭವಿಸಿದ್ದಕ್ಕಿಂತ ಯಾವುದಾದರೂ ಬಗೆಯಲ್ಲಿ ಪ್ರತಿಭಟಿಸಿದ್ದರೆ ಚೆನ್ನಾಗಿತ್ತು ಎಂದು ಅನಿಸುತ್ತದೆ. ಆದರೂ ಭಾರತೀಯರೂ, ಆಂಗ್ಲೇಯರೂ ಇಬ್ಬರೂ ಇಂಗ್ಲೆಂಡ್ ಮತ್ತು ಇಂಡಿಯಗಳ ಮಧ್ಯೆ ಇರುವ ಈ ಮಾನಸಿಕ ಹಿನ್ನೆಲೆಯನ್ನು ಅರಿತುಕೊಳ್ಳುವುದು ಉತ್ತಮ. ಮಾನಸಿಕ ಧರ್ಮವೇ ಮುಖ್ಯವಾದುದು. ಜನತೆಯ ಸ್ಮರಣಶಕ್ತಿಯೂ ದೀರ್ಘಕಾಲವಿರುತ್ತದೆ.

ಭಾರತದಲ್ಲಿ ಇಂಗ್ಲಿಷರ ಭಾವನೆ ಏನಿತ್ತು, ಯಾವ ರೀತಿ ನಡೆದುಕೊಂಡರು ಎನ್ನುವುದನ್ನರಿಯಲು ಇನ್ನೊಂದು ಮಾದರಿಯ ಉದಾಹರಣೆ ಸಾಕು. ೧೮೮೩ ರಲ್ಲಿ ಇಲ್ಬರ್ಟ್ ಮಸೂದೆಯ ವಿರೋಧ ಚಳುವಳಿಯ ಕಾಲದಲ್ಲಿ ಅಂದಿನ ಇಂಡಿಯ ಸರಕಾರದ ವಿದೇಶಾಂಗ ಕಾರ್ಯದರ್ಶಿಯಾಗಿದ್ದ ಸೆಟನ್‌ಕೆರ್ "ಉನ್ನತಪದವಿಯಲ್ಲಿರಲಿ, ಕೆಳಮಟ್ಟದವನಿರಲಿ, ಸಣ್ಣ ಬಂಗಲೆಯೊಳಗಿನ ತೋಟದ ಮಾಲೀಕನ ಸಹಾಯಕ ಅಧಿಕಾರಿ ಇರಲಿ, ಮುಖ್ಯನಗರಗಳ ದೊಡ್ಡ ವೃತ್ತಪತ್ರಿಕಾ

ಸಂಪಾದಕನಿರಲಿ, ಪ್ರಾಂತ್ಯದ ಪ್ರಮುಖ ಅಧಿಕಾರಿ ಇರಲಿ, ಸಿಂಹಾಸನದಮೇಲಿನ ವೈಸರಾಯ್ ಇರಲಿ, ರಾಜ್ಯಗಳನ್ನು ಗೆದ್ದು ಆಳಲು ದೇವರು ನಮ್ಮನ್ನು ಸೃಷ್ಟಿಸಿದ್ದಾನೆ. ತಾವು ಆಳರಸರ ಕುಲದವರು ಎಂದು ಭಾರತದಲ್ಲಿರುವ ಪ್ರತಿಯೊಬ್ಬ ಆಂಗ್ಲೇಯನ ದೃಢನಂಬಿಕೆಗೆ ಈ ಮಸೂದೆಯು ದ್ರೋಹಮಾಡುತ್ತದೆ" ಎಂದು ಹೇಳಿದ್ದಾನೆ.

### ೮. ಬ್ರಿಟಿಷ್ ಆಡಳಿತದ ಕೌಶಲ್ಯ—ಏರುಪೇರುಗಳ ಸಮತೋಲನ

೧೮೫೭-೫೮ರ ಕ್ರಾಂತಿಯಲ್ಲಿ ರಾಷ್ಟ್ರೀಯ ಭಾವನೆಯ ಜನ ಕೆಲವರಿದ್ದರೂ ಮುಖ್ಯ ಅದು ಪಾಳೆಯಗಾರರ ದಂಗೆಯಾಗಿತ್ತು. ಆದರೂ ದೇಶೀಯ ರಾಜರುಗಳೂ, ಇತರ ಪಾಳೇಗಾರರೂ ತಾಟಸ್ಥ್ಯ ಉಳಿದುದರಿಂದ ಮತ್ತು ಕೆಲವರು ಪ್ರತ್ಯಕ್ಷ ಇಂಗ್ಲಿಷರಿಗೆ ಸಹಾಯ ಮಾಡಿದ್ದರಿಂದ ಆ ದಂಗೆಯನ್ನು ಅಡಗಿಸಲು ಬ್ರಿಟಿಷರಿಗೆ ಸಾಧ್ಯವಾಯಿತು. ದಂಗೆ ಸೇರಿದವರೆಲ್ಲ ಬ್ರಿಟಿಷರ ನೀತಿಯಿಂದ ತಮ್ಮ ರಾಜ್ಯವನ್ನೂ ಅಧಿಕಾರವನ್ನೂ ಕಳೆದುಕೊಂಡವರು ಮತ್ತು ಕಳೆದುಕೊಳ್ಳುವುದು ಅನಿವಾರ್ಯ ಎಂದು ಭಾವಿಸಿದ್ದವರು. ಬ್ರಿಟಿಷರು ಮೊದಲು ಸ್ವಲ್ಪ ಅನುಮಾನಿಸಿ ಕೊನೆಗೆ ಕ್ರಮೇಣ ದೇಶೀಯ ರಾಜರನ್ನೆಲ್ಲ ನಿರ್ನಾಮಮಾಡಿ ನೇರವಾದ ಬ್ರಿಟಿಷ್ ಆಡಳಿತವನ್ನೇ ಸ್ಥಾಪಿಸಬೇಕೆಂದು ತೀರ್ಮಾನ ಮಾಡಿದ್ದರು. ದಂಗೆಯ ಪರಿಣಾಮವಾಗಿ ಈ ಕಾರ್ಯ ನೀತಿ ವ್ಯತ್ಯಾಸವಾಗಿ ದೇಶೀಯ ರಾಜರುಗಳಲ್ಲದೆ ತಾಲೂಕುದಾರರಿಗೂ, ದೊಡ್ಡ ಜಮೀನುದಾರರಿಗೂ ಪ್ರೋತ್ಸಾಹ ದೊರೆಯಿತು. ಈ ಪಾಳೆಗಾರರು ಮತ್ತು ರಾಜರುಗಳ ಸಹಾಯದಿಂದ ಜನರನ್ನು ಹತೋಟಿಯಲ್ಲಿಟ್ಟುಕೊಳ್ಳುವುದು ಸುಲಭವೆಂದು ಭಾವಿಸಿದರು. ಅಯೋಧ್ಯೆಯ ಈ ತಾಲೂಕುದಾರರುಗಳು ಮೊಗಲ್ ಚಕ್ರಾಧಿಪತ್ಯದ ತೆರಿಗೆ ವಸೂಲುದಾರರಾಗಿದ್ದರು. ಮೊಗಲ್ ಚಕ್ರವರ್ತಿಗಳು ದುರ್ಬಲರಾದಮೇಲೆ ಇವರೇ ಅಲ್ಲಿನ ಜಮೀನುದಾರರಾದರು. ಕೆಲವರು ನುಸುಳಿಕೊಳ್ಳಲು ಅನುಕೂಲವಾಗುವಂತೆ ವರ್ತಿಸಿದರೂ ಇವರೆಲ್ಲರೂ ದಂಗೆಯಲ್ಲಿ ಭಾಗವಹಿಸಿದರು. ಅವರೆಲ್ಲ ದಂಗೆಕೋರರಾದರೂ "ರಾಜಭಕ್ತಿಯನ್ನು ತೋರಿಸಿ ತಮ್ಮ ಸೇವೆ ಮಾಡುವುದಾದರೆ" ಪುನಃ ಜಮೀನುದಾರಿಯನ್ನು ಉಳಿಸಿಕೊಟ್ಟು ಸಹಾಯ ಮಾಡುವುದಾಗಿ ಬ್ರಿಟಿಷ್ ಅಧಿಕಾರವರ್ಗವು ಮುಂದೆ ಬಂದಿತು. ಈ ರೀತಿ ಅಯೋಧ್ಯೆಯ ಒಡೆಯರು ಎಂದು ಹೆಮ್ಮೆ ಪಡುತ್ತಿದ್ದ ತಾಲೂಕುದಾರರು ಬ್ರಿಟಿಷ್ ಆಡಳಿತದ ಆಧಾರ ಸ್ತಂಭಗಳಾದರು.

ಈ ದಂಗೆಯು ಭಾರತದ ಕೆಲವು ಪ್ರದೇಶಗಳನ್ನು ಮಾತ್ರ ಹರಡಿದ್ದರೂ ಇಡೀ ಭಾರತವನ್ನೇ ಕಲಕಿತ್ತು. ಬ್ರಿಟಿಷ್ ಆಡಳಿತ ವರ್ಗದ ಬೇರನ್ನು ಸಡಿಲಿಸಿತ್ತು. ತಮ್ಮ ಆಡಳಿತ ವರ್ಗವನ್ನೆಲ್ಲ ಪುನಃ ಭದ್ರಗೊಳಿಸಲು ಆರಂಭಿಸಿದರು. ಭಾರತದ ಆಡಳಿತವು ಈಸ್ಟ್ ಇಂಡಿಯ ಕಂಪೆನಿಯಿಂದ ಬ್ರಿಟಿಷ್‌ದೊರೆಯ ಅಂದರೆ ಪಾರ್ಲಿಮೆಂಟಿನ ವಶಕ್ಕೆ ಬಂದಿತು. ದಂಗೆ ಎದ್ದ ಭಾರತದ ಸೈನ್ಯವನ್ನು ಹೊಸರೀತಿಯಲ್ಲಿ ಪುನರ್ರಚಿಸಲಾಯಿತು. ಆಗಲೇ ಭದ್ರವಾಗಿ ಬೇರೂರಿದ ಬ್ರಿಟಿಷ್ ಆಡಳಿತ ನೀತಿಯನ್ನು ಇನ್ನೂ ಸ್ಪಷ್ಟಪಡಿಸಿ, ದೃಢಪಡಿಸಿ ಉದ್ದೇಶಪೂರ್ವಕವಾಗಿ ಕಾರ್ಯರೂಪಕ್ಕೆ ತಂದರು. ಬ್ರಿಟಿಷರ ಆಳರಸರ ನೆರವನ್ನೇ ನಂಬಿದ ಪದವೀಧರರ ಸೃಷ್ಟನೆ ಮತ್ತು ಪೋಷಣೆ, ವಿವಿಧ ಪಂಗಡಗಳನ್ನು ಒಂದರಮೇಲೊಂದನ್ನು ಎತ್ತಿಗಟ್ಟಿ ಸಮತೂಕಮಾಡುವುದು, ಅವರಲ್ಲಿ ಪರಸ್ಪರ ಅನೈಕ್ಯತೆಯನ್ನೂ ವಿರೋಧವನ್ನೂ ಬೆಳೆಸುವುದು ಇವೇ ಆ ನೀತಿಯ ಮುಖ್ಯ ಸೂತ್ರಗಳು.

ಈ ರೀತಿ ಸೃಷ್ಟಿಸಿ ಪ್ರೋತ್ಸಾಹಿಸಿದ ಪದವೀಧರರಲ್ಲಿ ರಾಜರು ಮತ್ತು ದೊಡ್ಡ ಜಮೀನುದಾರರುಗಳು ತಳಹದಿಯಾದರು. ಬ್ರಿಟಿಷ್ ಆಡಳಿತಗಾರರನ್ನೇ ಇನ್ನೂ ಹೆಚ್ಚು ಅವಲಂಬಿಸಿದ ಇನ್ನೊಂದು ಹೊಸಪಂಗಡ ಪ್ರಾಮುಖ್ಯತೆ ಪಡೆಯಿತು:— ಸರ್ಕಾರದ ಆಡಳಿತದ ಕೆಳದರ್ಜೆಯ ಅಧಿಕಾರಗಳಲ್ಲಿದ್ದ ಭಾರತೀಯ ನೌಕರರು. ಭಾರತೀಯರನ್ನು ಆಡಳಿತವರ್ಗದಲ್ಲಿ ತೆಗೆದುಕೊಳ್ಳಬೇಕೆಂದು ಮನ್ರೊ ಬಹಳ ಹೋರಾಡಿದನು. ಮೊದಲು ಅನಿವಾರ್ಯಪಕ್ಷದಲ್ಲಿ ಮಾತ್ರ ಸೇರಿಸಿಕೊಳ್ಳುತ್ತಿದ್ದರು. ಆದರೆ ನೌಕರಿಯಲ್ಲಿದ್ದ ಭಾರತೀಯರು ಬ್ರಿಟಿಷರ ಆಡಳಿತವನ್ನೇ ಪೂರ್ಣ ಅವ

ಲಂಬಿಸಿ ಬ್ರಿಟಿಷ್ ಆಡಳಿತ ಅಂಗಗಳಾಗುವುದರಿಂದ ಅವರನ್ನು ನಂಬಬಹುದು ಎಂದು ಅನುಭವ ದಿಂದ ತಿಳಿದಿತ್ತು. ದಂಗೆಯ ಮೊದಲು ಕೆಳದರ್ಜೆಯ ನೌಕರರೆಲ್ಲರೂ ಬಂಗಾಲಿಗಳಾಗಿದ್ದರು. ಆಡ ಳಿತ ಮತ್ತು ಸೈನ್ಯ ಇಲಾಖೆಗಳಲ್ಲಿ ಗುಮಾಸ್ತರಾಗಿ ಅಥವಾ ಇತರ ಕೆಲಸಗಳಿಗಾಗಿ ಬ್ರಿಟಿಷ್ ಅಧಿಕಾರಿ ವರ್ಗಕ್ಕೆ ಸೇರಿ ಉತ್ತರ ಹಿಂದೂಸ್ಥಾನದಲ್ಲೆಲ್ಲ ಹರಡಿದ್ದರು. ಆದ್ದರಿಂದ ಸಂಯುಕ್ತಪ್ರಾಂತ್ಯ ದೆಹಲಿ ಮತ್ತು ಪಂಜಾಬಿನ ಆಡಳಿತ ಮತ್ತು ಸೈನ್ಯ ಇಲಾಖೆಯ ಕೇಂದ್ರಗಳಲ್ಲಿ ಬಂಗಾಲಿಗಳ ಅಗ್ರಹಾರ ಗಳು ಬೆಳೆದವು. ಈ ಬಂಗಾಲಿಗಳು ಬ್ರಿಟಿಷ್ ಸೈನ್ಯ ಹೋದ ಕಡೆಯಲ್ಲೆಲ್ಲ ಹಿಂಬಾಲಿಸಿ ಅವರ ನಂಬಿಕೆಯ ಸೇವಕರಾದರು. ದಂಗೆಕಾರರು ಇವರನ್ನು ಬ್ರಿಟಿಷ್ ಆಡಳಿತದ ಅಂಗವೆಂದು ಭಾವಿಸಿ ದ್ವೇಷಿಸಲಾರಂಭಿಸಿದರು ಮತ್ತು ಕುಚೋದ್ಯ ಮಾಡಿದರು.

ನಿಜವಾದ ಅಧಿಕಾರ, ಕಾರ್ಯನಿರೂಪಣ ನೀತಿ ಎಲ್ಲ ಇಂಗ್ಲಿಷರ ಕೈಯಲ್ಲೇ ಕೇಂದ್ರೀಕೃತವಾಗಿ ಆಡಳಿತಯಂತ್ರದ ಕೆಳಮಟ್ಟದಲ್ಲಿ ಮಾತ್ರ ಭಾರತೀಯರನ್ನು ನೇಮಿಸುತ್ತ ಬಂದರು. ಭಾರತದ ಆಡಳಿತವರ್ಗದ ಭಾರತೀಕರಣವು ಆರಂಭವಾದುದು ಈ ರೀತಿ. ಇಂಗ್ಲಿಷ್ ವಿದ್ಯಾಭ್ಯಾಸವು ಹರಡಿ ದಂತೆ ಆಡಳಿತವರ್ಗದ ಅಧಿಕಾರ ಸ್ಥಾನಗಳು ಬಂಗಾಲಿಗಳ ಮೀಸಲು ಸ್ವತ್ತಾಗಿ ಉಳಿಯದೆ ಆಡಳಿತ ವರ್ಗದ ನ್ಯಾಯಾಂಗ ಮುಂತಾದ ಸ್ಥಾನಗಳಿಗೆ ಇತರ ಭಾರತೀಯರೂ ಕಾಲಿಟ್ಟರು. ಬ್ರಿಟಿಷರ ಆಡಳಿತ ಭದ್ರತೆಗೆ ಈ ಭಾರತೀಕರಣ ಬಹಳ ಸಹಾಯವಾಯಿತು. ಪ್ರತಿಯೊಂದು ಕಡೆಯೂ ಆಡ ಳಿತ ವರ್ಗದ ಒಂದು ಪಡೆಯೂ ಪಾಳೆಯವೂ ಸಿದ್ಧವಾಯಿತು. ಯುದ್ಧ ಮಾಡುವ ಸೈನ್ಯಕ್ಕಿಂತ ಈ ಅಧಿಕಾರಿಗಳ ತಂಡ ಹೆಚ್ಚು ಪ್ರಯೋಜನಕಾರಿಯಾಯಿತು. ಈ ಅಧಿಕಾರಿವರ್ಗದಲ್ಲಿ ಸಹ ಅನೇಕರು ದಕ್ಷರೂ, ದೇಶಾಭಿಮಾನವುಳ್ಳವರೂ, ರಾಷ್ಟ್ರೀಯ ಭಾವನೆಯವರೂ ಇದ್ದರು. ಅಂದರೆ ವೈಯಕ್ತಿಕ ವಾಗಿ ದೇಶಾಭಿಮಾನವಿದ್ದರೂ ಸೈನಿಕನಂತೆ ಅವರಿಗೂ ಒಂದು ಆಡಳಿತದ ನಿಯಮವಿತ್ತು, ಬಿಗಿ ಇತ್ತು. ಅವಿಧೇಯತೆ, ದ್ರೋಹ, ಅಥವ ದಂಗೆ ಎದ್ದರೆ ಕ್ರೂರ ಶಿಕ್ಷೆಯು ಕಾದಿತ್ತು. ಈ ರೀತಿ ಒಂದು ಆಡಳಿತ ವರ್ಗದ ಸೃಷ್ಟಿಯಾಯಿತಲ್ಲದೆ ಅದರಲ್ಲಿನ ಅಧಿಕಾರದ ಆಸೆಯಿಂದ ಇತರರಲ್ಲಿ ಸಹ ಹೆಚ್ಚು ಹೆಚ್ಚಾಗಿ ಅನೀತಿ ಬೆಳೆಯಿತು. ಅಧಿಕಾರದಲ್ಲಿ ಒಂದು ಗೌರವ ಮತ್ತು ಭದ್ರತೆ ಇದ್ದವು. ಕೊನೆಯಲ್ಲಿ ಜೀವನಾಂಶ ದೊರೆಯುತ್ತಿತ್ತು. ತನ್ನ ಮೇಲಣ ಅಧಿಕಾರಿಯ ಕೃಪೆಯೊಂದು ಇದ್ದರೆ ಉಳಿದ ಲೋಪಗಳೇನಿದ್ದರೂ ಗಮನಕ್ಕೆ ಬರುತ್ತಿರಲಿಲ್ಲ. ಈ ಆಡಳಿತ ವರ್ಗವು ಬ್ರಿಟಿಷ್ ಅಧಿಕಾರಿ ಗಳಿಗೂ ಜನರಿಗೂ ಮಧ್ಯಸ್ಥಗಾರರಾದರು, ಅವರೂ ತಮ್ಮ ಅಧಿಕಾರ ದರ್ಪದಿಂದ ತಮ್ಮ ಕೆಳ ಅಧಿಕಾರಿಗಳ ಮತ್ತು ಜನರ ವಿಧೇಯತೆಯನ್ನು ಅಪೇಕ್ಷಿಸಬಹುದಿತ್ತು.

ಇತರ ಉದ್ಯಮಗಳ ಅವಕಾಶವಿಲ್ಲದೆ, ಜೀವನಕ್ಕೆ ಮಾರ್ಗವಿಲ್ಲದೆ ಸರಕಾರಿ ನೌಕರಿಗೆ ಒಂದು ವಿಶೇಷ ಪ್ರಾಮುಖ್ಯತೆ ದೊರೆಯಿತು. ನ್ಯಾಯವಾದಿಗಳೂ, ವೈದ್ಯರೂ ಆಗಲು ಕೆಲವರಿಗೆ ಅವಕಾಶ ವಿದ್ದರೂ ಹೆಚ್ಚು ಸಂಪಾದನೆಯ ಭರವಸೆ ಇರಲಿಲ್ಲ. ಕೈಗಾರಿಕೆಗಳು ಇರಲೇ ಇಲ್ಲ. ವ್ಯಾಪಾರವೆಲ್ಲ ತಲೆತಲಾಂತರದಿಂದ ಒಂದೇ ವರ್ಗದ ಕೈಯಲ್ಲಿತ್ತು. ಅವರಿಗೆ ಅದರಲ್ಲಿ ವಿಶೇಷ ಪರಿಶ್ರಮವೂ ಇತ್ತು; ತಮ್ಮಲ್ಲಿ ಪರಸ್ಪರ ಸಹಾಯವನ್ನೂ ಮಾಡುತ್ತಿದ್ದರು. ಹೊಸ ವಿದ್ಯಾಭ್ಯಾಸದಿಂದ ವ್ಯಾಪಾರ ಅಥವ ಕೈಗಾರಿಕೆಗೆ ಯೋಗ್ಯತೆ ದೊರೆಯಲಿಲ್ಲ; ಆದರ ಮುಖ್ಯ ಉದ್ದೇಶವೇ ಸರಕಾರಿ ನೌಕರಿ. ವಿದ್ಯಾ ಭ್ಯಾಸ ಪದ್ಧತಿಯೇ ಸಂಕುಚಿತವಿದ್ದುದರಿಂದ ಉದ್ಯೋಗಶಿಕ್ಷಣ ಪಡೆಯಲು ಅವಕಾಶವೂ ಬಹಳ ಕಡಮೆ ಇತ್ತು. ಸಾಮಾಜಿಕ ಸೇವಾಕ್ಷೇತ್ರ ಯಾವುದೂ ಇರಲಿಲ್ಲ. ಉಳಿದುದು ಸರಕಾರಿ ನೌಕರಿ ಒಂದೇ.. ಕಾಲೇಜುಗಳ ಪದವೀಧರರು ತಂಡೋಪತಂಡವಾಗಿ ಬರಲಾರಂಭಿಸಿದುದರಿಂದ ಸರಕಾರದ ಆಡಳಿತಶಾಖೆ ಬೆಳೆಯುತ್ತಿದ್ದರೂ ಅವರೆಲ್ಲರಿಗೂ ಸ್ಥಾನಕಲ್ಪಿಸಲು ಸಾಧ್ಯವಾಗದೆ ಪ್ರಚಂಡ ಪೈಪೋಟಿಗೆ ಆರಂಭವಾಯಿತು. ಸರಕಾರವು ತಮಗೆ ಬೇಕಾದವರನ್ನು ಆರಿಸುವಂತೆ ನಿರುದ್ಯೋಗ ಪದವೀಧರರೂ ಇತರರೂ ಒಂದು ಸಂಘವನ್ನು ಏರ್ಪಡಿಸಿಕೊಂಡರು. ಇದರಿಂದ ಅಧಿಕಾರದಲ್ಲಿರು ವವರ ಭದ್ರತೆಗೂ ಸಂಚಕಾರ ಬಂದಿತು. ಈ ರೀತಿ ಬ್ರಿಟಿಷ್ ಸರಕಾರ ಭಾರತದಲ್ಲಿ ಒಂದು ದೊಡ್ಡ

ನೌಕರಿಕೊಡುವ ಸಂಸ್ಥೆಯಾಯಿತು. ಅಲ್ಲದೆ ರೈಲ್ವೆ ಇಲಾಖೆಯನ್ನೂ ಸೇರಿಸಿದರೆ ಏಕಮಾತ್ರ ದೊಡ್ಡ ಸಂಸ್ಥೆಯಾಯಿತು. ಈ ಅಧಿಕಾರವರ್ಗ ಒಂದು ದೊಡ್ಡಯಂತ್ರವಾಯಿತು. ಯಂತ್ರದ ಸೂತ್ರಗಳೆಲ್ಲ ಮೇಲಧಿಕಾರಿಗಳ ಕೈಯಲ್ಲಿದ್ದು ಬಿಗಿಯಿಂದ ನಡೆಸಲ್ಪಡುತ್ತಿತ್ತು. ಅಧಿಕಾರ ಹಂಚಲು ಇದ್ದ ದೊಡ್ಡ ಅವಕಾಶವನ್ನು ದೇಶದಲ್ಲಿ ಬ್ರಿಟಿಷರ ಅಧಿಕಾರವನ್ನು ಭದ್ರಗೊಳಿಸುವುದಕ್ಕೂ, ಅಸಮಾಧಾನ ಗೊಂಡ ವಿರೋಧಿಗಳನ್ನು ತುಳಿಯುವುದಕ್ಕೂ, ಸರಕಾರದ ನೌಕರಿಯಲ್ಲಿ ಸೇರಿಕೊಳ್ಳಲು ಕಾತುರ ರಾಗಿದ್ದ ಬೇರೆ ಬೇರೆ ಪಂಗಡಗಳಲ್ಲಿ ಪೈಪೋಟಿಯನ್ನೂ, ವೈಷಮ್ಯವನ್ನೂ ಹೆಚ್ಚಿಸುವುದಕ್ಕೂ ದುರುಪಯೋಗಮಾಡಿದರು. ಅನೀತಿಯೂ ಪರಸ್ಪರ ವಿರೋಧವೂ ಹುಟ್ಟಿತು. ಇದರಿಂದ ಒಂದು ಪಂಗಡವನ್ನು ಇನ್ನೊಂದು ಪಂಗಡದಮೇಲೆ ಎತ್ತಿಕಟ್ಟಲು ಸರಕಾರಕ್ಕೆ ಅವಕಾಶ ದೊರೆಯಿತು.

ಈ ಪರಸ್ಪರ ವಿರೋಧವನ್ನು ಸಮತೂಕದಲ್ಲಿಡುವ ನೀತಿಯನ್ನು ಉದ್ದೇಶಪಟ್ಟು ಭಾರತೀಯ ಸೈನ್ಯದಲ್ಲಿ ಆಚರಣೆಗೆ ತಂದರು. ರಾಷ್ಟ್ರೀಯ ಐಕಮತ್ಯದ ಭಾವನೆಯು ಅವರಲ್ಲಿ ಬೆಳೆಯದಂತೆ ಬೇರೆ ಬೇರೆ ಪಂಗಡಗಳನ್ನೇ ಪ್ರತ್ಯೇಕ ಪ್ರತ್ಯೇಕ ಇಟ್ಟರು. ಪಂಗಡ ಮತ್ತು ಜಾತಿಯ ಅಭಿಮಾನಕ್ಕೆ ಪ್ರೋತ್ಸಾಹ ದೊರೆಯಿತು. ಸಾಮಾನ್ಯ ಜನರೊಡನೆ ಯಾವ ಸಂಪರ್ಕವೂ ಇರದಂತೆ ಸೈನಿಕರನ್ನು ದೂರವಿಟ್ಟರು. ಭಾರತೀಯ ಸೈನಿಕರಿಗೆ ಯಾವ ವರ್ತಮಾನ ಪತ್ರವನ್ನೂ ಕೊಡುತ್ತಿರಲಿಲ್ಲ. ಮುಖ್ಯ ಅಧಿಕಾರ ಸ್ಥಾನಗಳೆಲ್ಲ ಇಂಗ್ಲಿಷರಿಗೆ ಮೀಸಲು. ಯಾವ ಭಾರತೀಯನೂ ಬ್ರಿಟಿಷ್ ದೊರೆಯಿಂದ ಸೈನ್ಯಾಧಿಕಾರ ಪಡೆಯುವಂತೆ ಇರಲಿಲ್ಲ. ಭಾರತೀಯ ನಾನ್-ಕಮಿಷನ್ ಅಥವ ವೈಸರಾಯ್ ಕಮಿಷನ್ ಪಡೆದ ಅಧಿಕಾರಿ ಎಷ್ಟೇ ವಯಸ್ಸಾಗಿ ಅನುಭವ ಪಡೆದಿದ್ದರೂ ಅವನಿಗಿಂತ ಒಬ್ಬ ಮೀಸೆಬಾರದ ಇಂಗ್ಲಿಷ್ ಸಬಾಲ್ಟರ್ನ್‌ಗೆ ಉನ್ನತ ಸ್ಥಾನ. ಲೆಖ್ಖತನಿಖೆ ಇಲಾಖೆಯಲ್ಲಿ ಗುಮಾಸ್ತರಾಗಿ ವಿನಾ ಭಾರತೀಯನಾರೂ ಸೈನ್ಯ ಇಲಾಖೆಯ ಕೇಂದ್ರ ಕಚೇರಿಯಲ್ಲಿ ಅಧಿಕಾರ ಪಡೆಯುವಂತಿರಲಿಲ್ಲ. ವಿಶೇಷ ರಕ್ಷಣೆಯ ಉತ್ತಮ ಯುದ್ಧ ಶಸ್ತ್ರಾಸ್ತ್ರಗಳನ್ನು ಉಪಯೋಗಿಸಲು ಭಾರತೀಯರಿಗೆ ಅವಕಾಶವಿರಲಿಲ್ಲ. ಅದೆಲ್ಲ ಭಾರತದಲ್ಲಿ ಬ್ರಿಟಿಷ್ ಸೈನಿಕರಿಗೇ ಮೀಸಲು. ಭಾರತದ ಮುಖ್ಯ ಮುಖ್ಯ ಕೇಂದ್ರಗಳಲ್ಲಿ ಗಲಭೆ ಅಡಗಿಸಿ ಜನರನ್ನು ಹೆದರಿಕೆಯಲ್ಲಿಟ್ಟಿರಲು ಒಳಾಡಳಿತ ಭದ್ರತೆಗೆಂದು ಭಾರತೀಯ ಸೈನಿಕರ ಜೊತೆಯಲ್ಲೇ ಬ್ರಿಟಿಷ್ ಸೈನಿಕ ಪಡೆಗಳನ್ನು ಇಡುತ್ತಿದ್ದರು. ಬ್ರಿಟಿಷ್ ಅಧಿಕಾರಿಗಳೇ ಹೆಚ್ಚು ಇದ್ದ ಈ ಒಳಾಡಳಿತ ಸುರಕ್ಷತೆಯ ಸೈನ್ಯವು ಭಾರತದ ಆಕ್ರಮಣ ಸೈನ್ಯವಾಯಿತು. ಭಾರತೀಯರೇ ಹೆಚ್ಚು ಇದ್ದ ಸೈನ್ಯದ ಬಹುಭಾಗವು ದೇಶದ ಹೊರಗೆ ಯುದ್ಧಮಾಡುವ ಸೈನ್ಯವಾಯಿತು. ಭಾರತೀಯರನ್ನು ಸೈನ್ಯಕ್ಕೆ ಸೇರಿಸಿಕೊಳ್ಳುವಾಗ ಉತ್ತರಹಿಂದೂಸ್ಥಾನದ ಯೋಧ ಜಾತಿ ಎಂಬ ಕೆಲವು ಪಂಗಡದವರಿಂದ ಮಾತ್ರ ಆರಿಸುತ್ತಿದ್ದರು.

ಭಾರತದಲ್ಲಿ ಬ್ರಿಟಿಷರ ಆಡಳಿತದಲ್ಲಿ ಇನ್ನೊಂದು ವಿರೋಧಾಭಾಸ ಎದ್ದು ಕಾಣುತ್ತದೆ. ದೇಶದಲ್ಲಿ ರಾಜಕೀಯ ಐಕಮತ್ಯವನ್ನು ತಂದು ಆ ಐಕಮತ್ಯದ ದೃಷ್ಟಿಯಿಂದ ಯೋಚಿಸಿ ದೇಶದ ಸ್ವಾತಂತ್ರ್ಯವನ್ನೇ ಗುರಿಯಾಗುಳ್ಳ ನವಚೈತನ್ಯ ಶಕ್ತಿಗಳ ಬೆಳವಣಿಗೆಗೆ ಅವಕಾಶಕೊಟ್ಟ ಬ್ರಿಟಿಷ್ ಸರಕಾರವೇ ಆ ಐಕಮತ್ಯವನ್ನು ಛಿದ್ರಗೊಳಿಸಲು ಯತ್ನಮಾಡಿತು. ರಾಜಕೀಯ ದೃಷ್ಟಿಯಿಂದ ಭಾರತವನ್ನು ವಿಭಾಗಮಾಡಬೇಕೆಂದು ಈ ಭೇದನೀತಿಯು ರೂಪುಗೊಳ್ಳಲಿಲ್ಲ. ಅದರ ಮುಖ್ಯ ಉದ್ದೇಶವು ರಾಷ್ಟ್ರೀಯ ಶಕ್ತಿಗಳನ್ನು ನಿಶ್ಚೇತನಗೊಳಿಸಿ ದೇಶಾದ್ಯಂತ ಬ್ರಿಟಿಷ್ ಆಡಳಿತವನ್ನು ಶಾಶ್ವತಗೊಳಿಸಬೇಕೆಂದೇ ಆಗಿತ್ತು. ಆದರೂ ಮೊದಲಿಗಿಂತ ದೇಶಿಯ ಸಂಸ್ಥಾನಗಳಿಗೆ ಹೆಚ್ಚು ಪ್ರಾಮುಖ್ಯತೆ ಕೊಟ್ಟಿದ್ದು, ಪ್ರಗತಿ ವಿರೋಧಿಗಳಿಗೆ ಪ್ರೋತ್ಸಾಹಕೊಟ್ಟು ಅವರ ಬೆಂಬಲ ಬಯಸಿದ್ದು, ಪಂಗಡ ಪಂಗಡಗಳಾಗಿ ವಿಭಾಗಮಾಡಿ ಪರಸ್ಪರ ವೈಷಮ್ಯ ಬೆಳೆಯಲು ಪ್ರೋತ್ಸಾಹಿಸಿದ್ದು, ಜಾತಿ ಮತ್ತು ಪ್ರಾಂತ್ಯಗಳ ಹೆಸರಿನಲ್ಲಿ ಜನತೆಯಲ್ಲಿ ಒಡಕು ಎಬ್ಬಿಸಿ ಉತ್ತೇಜನ ಕೊಟ್ಟಿದ್ದು, ಎಲ್ಲಿ ಏನು ಬದಲಾವಣೆಯಾದರೆ ತಮ್ಮ ಅಸ್ತಿತ್ವಕ್ಕೆ ಹಾನಿಯಾಗುತ್ತದೋ ಎನ್ನುವ ಹಿಂಬಾಲಕರ ಗುಂಪುಗಳನ್ನು ಕಟ್ಟಿ ಪ್ರೋತ್ಸಾಹಿಸಿದ್ದು ದೇಶದ ವಿಚ್ಛೇದನ ಪ್ರಯತ್ನಗಳೇ ಆದವು ಭಾರತೀಯರ

ರಾಷ್ಟ್ರೀಯ ಭಾವನೆಯ ದೃಷ್ಟಿಯಿಂದ ಇದೆಲ್ಲ ಅನಿಷ್ಟ ಕಾರಕಗಳಾದರೂ ವಿದೇಶೀ ಸಾಮ್ರಾಜ್ಯ ಶಕ್ತಿಯೊಂದು ತನ್ನ ಸ್ವರಕ್ಷಣೆಗೆ ಈ ನೀತಿ ಅನುಸರಿಸಿದ್ದು ಸಹಜವೂ ಇದೆ ಅರ್ಥವತ್ತಾಗಿಯೂ ಇದೆ; ಆಶ್ಚರ್ಯ ಏನೂ ಇಲ್ಲ. ಆದರೆ ಮುಂದೆ ಘಟನೆಗಳನ್ನು ಅರ್ಥಮಾಡಿಕೊಳ್ಳುವಾಗ ಈ ವಾಸ್ತುಚಿತ್ರ ವನ್ನು ನಾವು ಮರೆಯುವಂತಿಲ್ಲ. ಇಂದು ಪದೇಪದೇ ನಮ್ಮ ಸ್ಮೃತಿಪಥಕ್ಕೆ ಬರುತ್ತಿರುವ ಭಾರತದ ರಾಷ್ಟ್ರೀಯ ಜೀವನದ ಪ್ರಮುಖ ಶಕ್ತಿಗಳು ಜನ್ಮತಾಳಿದ್ದು ಈ ನೀತಿಯ ಫಲವಾಗಿ. ಅವುಗಳ ಹುಟ್ಟಿಗೆ, ಅವುಗಳ ಪರಸ್ಪರ ಭಿನ್ನಾಭಿಪ್ರಾಯ ಮತ್ತು ಒಡಕುಗಳ ಪ್ರೋತ್ಸಾಹಕ್ಕೆ, ಈಗ ಪುನಃ ಅವರೆಲ್ಲರಿಗೆ ಒಂದಾಗಿ ಬನ್ನಿ ಎಂದು ಹೇಳುವುದಕ್ಕೆ ಕಾರಣರೂ ಅವರೇ.

ಭಾರತದಲ್ಲಿ ಈ ರೀತಿ ಪ್ರಗತಿ ವಿರೋಧಿಗಳಿಗೂ ಬ್ರಿಟಿಷರಿಗೂ ಒಂದು ಸಹಜ ಸ್ನೇಹ ಬೆಳೆದು ಬಂದು ಇತರ ಸಂದರ್ಭಗಳಲ್ಲಿ ತಾವೇ ಖಂಡಿಸಿದ ಅನೇಕ ಕುಸಂಪ್ರದಾಯ ಮತ್ತು ಪದ್ಧತಿಗಳಿಗೆ ಬೆಂಗಾವಲಾಗಿ ಪ್ರೋತ್ಸಾಹಕರಾದರು. ಬ್ರಿಟಿಷರು ಭಾರತಕ್ಕೆ ಕಾಲಿಟ್ಟಾಗ ದೇಶವು ಅನೇಕ ದುಷ್ಟ ಸಂಪ್ರದಾಯಗಳ ದವಡೆಯಲ್ಲಿ ಸಿಕ್ಕು ನರಳುತ್ತಿತ್ತು. ಈ ಪುರಾತನ ಪದ್ಧತಿಗಳ ಕ್ರೌರ್ಯವು ಭಯಂಕರ ವಿದೆ. ಆದರೂ ಈ ಸಂಪ್ರದಾಯಗಳೂ ವ್ಯತ್ಯಾಸಗೊಳ್ಳುತ್ತಿವೆ; ಪರಿವರ್ತನೆಯಾಗುತ್ತಿರುವ ಸನ್ನಿವೇಶ ಗಳಿಗೆ ಸ್ವಲ್ಪಮಟ್ಟಿಗೆ ಹೊಂದಿಕೊಳ್ಳಬೇಕಾದ್ದು ಅನಿವಾರ್ಯವಾಗುತ್ತದೆ. ಹಿಂದೂಧರ್ಮಶಾಸ್ತ್ರದ ಬಹು ಭಾಗ ಈ ಸಂಪ್ರದಾಯವನ್ನು ಅನುಸರಿಸಿ ರೂಪುಗೊಂಡದ್ದು. ಸಂಪ್ರದಾಯಗಳು ಬೇರೆಯಾದಂತೆ ಧರ್ಮಶಾಸ್ತ್ರವೂ ಮಾರ್ಪಾಟಾಯಿತು. ನಿಜವಾಗಿ ನೋಡಿದರೆ ಸಂಪ್ರದಾಯಕ್ಕನುಸರಿಸಿ ವ್ಯತ್ಯಾಸ ವಾಗದ ವಿಧಿಯಾವುದೂ ಹಿಂದೂ ಧರ್ಮಶಾಸ್ತ್ರದಲ್ಲಿ ಇಲ್ಲ. ಈ ರೀತಿ ಸಂಪ್ರದಾಯ ವ್ಯತ್ಯಾಸವಾದಂತೆ ಹಿಗ್ಗಲು ಅವಕಾಶವಿದ್ದ ಸಾಂಪ್ರದಾಯಕ ಹಿಂದೂ ಧರ್ಮವನ್ನು ಬ್ರಿಟಿಷರು ಪ್ರಾಚೀನ ಗ್ರಂಥಗಳ ಆಧಾರದಮೇಲೆ ಕೊಟ್ಟ ನ್ಯಾಯತೀರ್ಮಾನಗಳಿಂದ ಇನ್ನೂ ಕಠಿನಮಾಡಿದರು. ಈ ತೀರ್ಪುಗಳು ಗೆರೆಕೊರೆದಂತೆ ಅನುಸರಿಸಬೇಕಾದ ನಿಯಮಗಳಾದವು. ತಾತ್ವಿಕದೃಷ್ಟಿಯಿಂದ ಒಂದು ಬಗೆಯ ಸಮತೆ ಮತ್ತು ನಿರ್ದುಷ್ಟತೆ ಆದುದೇನೋ ಒಂದು ಅನುಕೂಲವಾದರೂ, ಇದನ್ನು ಸಾಧಿಸಿದ ರೀತಿ ಯಲ್ಲಿ ನೂತನ ಸಂಪ್ರದಾಯಗಳಿಂದ ಪರಿವರ್ತಿತವಾಗದ ಹಳೆಯ ಶಾಸನವು ಪಟ್ಟಕ್ಕೇರಿತು. ಅನೇಕ ಕಡೆಗಳಲ್ಲಿ ಅನೇಕ ರೀತಿ ಮಾರ್ಪಾಟಾಗಿದ್ದ ಮತ್ತು ಹೊಸಯುಗಕ್ಕೆ ಹೊಂದಿಕೊಳ್ಳಲು ಅಸಮರ್ಥ ವಾಗಿದ್ದ ಹಳೆಯ ಶಾಸನವು ಇನ್ನೂ ಕಠಿನವಾಯಿತು. ಸಾಂಪ್ರದಾಯಕ ರೀತಿ ಮಾರ್ಪಾಟು ಮಾಡಲು ನಡೆದ ಎಲ್ಲ ಪ್ರಯತ್ನಗಳನ್ನೂ ವಿರೋಧಿಸಿದರು. ಶಾಸನ ವಿರುದ್ಧ ಸಂಪ್ರದಾಯವನ್ನು ದೃಷ್ಟಾಂತಮಾಡಿಕೊಡಲು ಆಯಾ ಪಂಗಡಗಳಿಗೆ ಅವಕಾಶವೇನೋ ಇತ್ತು. ಆದರೆ ನ್ಯಾಯಾಸ್ಥಾನ ಗಳಲ್ಲಿ ಆಧಾರಪೂರ್ವಕವಾಗಿ ಸಿದ್ಧಾಂತಮಾಡುವುದು ಬಹು ಕಷ್ಟವಾಯಿತು ಪರಿವರ್ತನೆಯು ಸ್ಪಷ್ಟಶಾಸನ ನಿರ್ಮಾಣದಿಂದ ಮಾತ್ರ ಸುಲಭ. ಆದರೆ ಶಾಸನಾಧಿಕಾರವನ್ನೆಲ್ಲ ತಮ್ಮ ಕೈಯಲ್ಲಿಟ್ಟು ಕೊಂಡಿದ್ದ ಬ್ರಿಟಿಷ್ ಸರಕಾರಕ್ಕೆ ತಮ್ಮ ಬೆಂಬಲಿಗರಾದ ಸಂಪ್ರದಾಯಶರಣಪಂಗಡಗಳ ವಿರೋಧ ಕಟ್ಟಿಕೊಳ್ಳಲು ಇಷ್ಟವಿರಲಿಲ್ಲ. ಕ್ರಮೇಣ ಕೆಲವು ಚುನಾಯಿತ ಸದಸ್ಯರಿದ್ದ ಶಾಸನಸಭೆಗಳಿಗೆ ಶಾಸನಾಧಿಕಾರ ದೊರೆತಾಗ ಸಮಾಜ ಸುಧಾರಣೆಯ ಶಾಸನನಿರ್ಮಾಣಕ್ಕಾಗಿ ಮಾಡಿದ ಎಲ್ಲ ಪ್ರಯತ್ನಗಳನ್ನೂ ಬ್ರಿಟಿಷರು ಪ್ರಬಲವಾಗಿ ವಿರೋಧಿಸಿ ನಿರ್ದಾಕ್ಷಿಣ್ಯದಿಂದ ತಡೆಗಟ್ಟಿದರು.

### ೯. ಕೈಗಾರಿಕೋದ್ಯಮದ ಬೆಳೆವಣಿಗೆ—ಪ್ರಾಂತೀಯ ಭಿನ್ನಭಾವನೆ

೧೮೫೭-೫೮ ರ ದಂಗೆಯ ಪರಿಣಾಮಗಳಿಂದ ಭಾರತವು ನಿಧಾನವಾಗಿ ಚೇತರಿಸಿಕೊಂಡಿತು. ಬ್ರಿಟಿಷರ ನೀತಿಯು ಪ್ರತಿಗಾಮಿಯಾಗಿದ್ದರೂ ಪ್ರಬಲಶಕ್ತಿಗಳು ಭಾರತದಮೇಲೆ ಪರಿಣಾಮಮಾಡಿ ಪರಿವರ್ತನೆಮಾಡುತ್ತಿದ್ದವು. ಹೊಸದೊಂದು ಸಾಮಾಜಿಕ ಮನೋಧರ್ಮ ಮೂಡುತ್ತಿತ್ತು. ಭಾರತದ ರಾಜಕೀಯ ಐಕಮತ್ಯ, ಪಾಶ್ಚಿಮಾತ್ಯದ ಸಂಪರ್ಕ, ಔದ್ಯೋಗಿಕ ಪ್ರಗತಿ, ದೇಶಾದ್ಯಂತ ಹರಡಿದ ಜನತೆಯ ದುರದೃಷ್ಟದಾಸ್ಯ, ಎಲ್ಲವೂ ಒಟ್ಟಿನಲ್ಲಿ ಹೊಸ ಭಾವನೆಗಳಿಗೆ ಎಡೆಕೊಟ್ಟವು,

ಕ್ರಮೇಣ ನಿಧಾನವಾಗಿ ಕೈಗಾರಿಕಾ ಪ್ರಗತಿಯು ಆರಂಭವಾಯಿತು. ರಾಷ್ಟ್ರದ ಸ್ವಾತಂತ್ರ್ಯಕ್ಕಾಗಿ ಹೊಸ ಚಳವಳಿಯು ಜನ್ಮತಾಳಿತು. ಭಾರತದಲ್ಲಿ ಈ ಪುನರುಜ್ಜೀವನವು ಎರಡು ಬಗೆಯಲ್ಲಿ ಆಯಿತು: ಪಾಶ್ಚಾತ್ಯದ ಕಡೆಗೆ ನೋಡಿದುದು ಮಾತ್ರವಲ್ಲದೆ ತನ್ನ ನಿಜಸ್ಥಿತಿ ಮತ್ತು ಹಿಂದಿನ ಇತಿಹಾಸದ ಕಡೆಗೂ ದೃಷ್ಟಿ ಬೀರಿತು.

ಭಾರತದಲ್ಲಿ ರೈಲುಮಾರ್ಗ ಏರ್ಪಟ್ಟಂದಿನಿಂದ ಕೈಗಾರಿಕಾಯುಗವು ನಿಶ್ಚಿತವಾಯಿತು. ಅದು ವರೆಗೆ ಎಲ್ಲಿ ನೋಡಿದರೂ ಬ್ರಿಟನ್ನಿಂದ ಬಂದ ನಯಮಾಲುಗಳೇ ಕಾಣುತ್ತಿದ್ದವು. ಭಾರತದ ಕೈಗಾರಿಕಾ ಪ್ರಗತಿಯನ್ನ ತಡೆಗಟ್ಟಲು ಯಂತ್ರಗಳ ಆಮದಿನ ಮೇಲೆ ಹೇರಿದ್ದ ಸುಂಕವನ್ನು ೧೮೭೦ರಲ್ಲಿ ತೆಗೆಯಲಾಯಿತು. ಬ್ರಿಟಿಷರ ಬಂಡವಾಳದಿಂದ ದೊಡ್ಡ ಕೈಗಾರಿಕೆಗಳು ಬೆಳೆಯಲು ಆರಂಭವಾಯಿತು. ಮೊದಲು ಆರಂಭವಾದುದು ಬಂಗಾಲದ ಸೆಣಬಿನ ಕೈಗಾರಿಕೆ. ಅದರ ಕೇಂದ್ರ ಸ್ಕಾಟ್ಲೆಂಡಿನ ದಂಡಿ ನಗರದಲ್ಲಿ. ಅನೇಕ ವರ್ಷಗಳನಂತರ ಭಾರತೀಯರ ಬಂಡವಾಳ ಮತ್ತು ಮಾಲಿಕತನಗಳಿಂದ ಮುಂಬೈ ಮತ್ತು ಅಹಮದಾಬಾದ್ ನಗರಗಳಲ್ಲಿ ಹತ್ತಿ ಬಟ್ಟೆಯ ಗಿರಣಿಗಳು ಆರಂಭವಾದವು. ಗಣಿಗಳ ಕೈಗಾರಿಕೆ ಆರಂಭವಾದುದು ಎಲ್ಲಕ್ಕೂ ಕೊನೆಗೆ. ಭಾರತದಲ್ಲಿ ಬ್ರಿಟಿಷ್ ಸರಕಾರದ ಕಿರುಕುಳಗಳು ತಪ್ಪಲಿಲ್ಲ. ಭಾರತದಲ್ಲಿ ತಯಾರಾದ ಹತ್ತಿಬಟ್ಟೆ ಲಾಂಕಶೈರ್ ಬಟ್ಟೆಗಳ ಮೇಲೆ ಭಾರತದಲ್ಲಿ ಪೈಪೋಟಿ ಮಾಡಬಾರದೆಂದು ಸುಂಕ ಹೇರಿದರು. ಇಪ್ಪತ್ತನೆಯ ಶತಮಾನದ ವರೆಗೆ ಭಾರತ ಸರಕಾರದಲ್ಲಿ ಕೃಷಿ, ವಾಣಿಜ್ಯ ಮತ್ತು ಕೈಗಾರಿಕೆಯ ಇಲಾಖೆಗಳೇ ಇರಲಿಲ್ಲವೆಂದ ಮೇಲೆ ಬ್ರಿಟಿಷ್ ಸರಕಾರವು ನಡೆಸಿದ್ದು ಪೊಲೀಸ್ ರಾಜ್ಯವೆನ್ನಲು ಬೇರೆ ಸಾಕ್ಷ್ಯ ಬೇಕಿಲ್ಲ. ಭಾರತದಲ್ಲಿನ ವ್ಯವಸಾಯ ಅಭಿವೃದ್ಧಿಗೆಂದು ಅಮೆರಿಕನ್ ಪ್ರವಾಸಿಯೊಬ್ಬ ಹಣವನ್ನು ದಾನಮಾಡಿದ್ದರಿಂದ ಕೇಂದ್ರಸರಕಾರವು ಒಂದು ವ್ಯವಸಾಯ ಶಾಖೆ ಆರಂಭಿಸಬೇಕಾಯಿತು. ಅನಂತರ ಕೆಲವು ದಿನಗಳಮೇಲೆ ೧೯೦೫ರಲ್ಲಿ ಕೈಗಾರಿಕೆ ಮತ್ತು ವಾಣಿಜ್ಯಶಾಖೆಗಳು ಆರಂಭವಾದವು. ಆದರೂ ಈ ಇಲಾಖೆಗಳು ಮಾಡಿದ ಕೆಲಸ ಅತ್ಯಲ್ಪವಿತ್ತು. ಕೈಗಾರಿಕೆಯು ಅಭಿವೃದ್ಧಿಯಾಗದಂತೆ ಎಲ್ಲ ಕೃತಕ ತೊಂದರೆಗಳನ್ನೂ ತಂದೊಡ್ಡಿ ದೇಶದ ಆರ್ಥಿಕ ಅಭಿವೃದ್ಧಿಗೆ ತಡೆಮಾಡಿದರು.

ದೇಶದ ಅಸಂಖ್ಯಾತ ಜನರು ಕಡು ಬಡತನದಲ್ಲಿ ಸಿಲುಕಿ ಇನ್ನೂ ಕೃಶರಾಗುತ್ತಿದ್ದರೂ ಮೇಲೆ ಕೆಲವರು ಮಾತ್ರ ನೂತನ ಸನ್ನಿವೇಶಗಳನ್ನು ಉಪಯೋಗಿಸಿಕೊಂಡು ಅಪಾರ ಹಣ ಗಳಿಸಿದರು. ರಾಜಕೀಯ ಸುಧಾರಣೆಯನ್ನು ಕೇಳಿದರೂ, ತಮ್ಮ ಬಂಡವಾಳದ ಉಪಯೋಗಕ್ಕೆ ಅವಕಾಶ ಕೇಳಿದವರೂ ಈ ಅಲ್ಪಸಂಖ್ಯೆಯ ಜನರೇ. ರಾಜಕೀಯರಂಗದಲ್ಲಿ ೧೮೮೫ರಲ್ಲಿ ಅಖಿಲಭಾರತ ರಾಷ್ಟ್ರೀಯ ಮಹಾಸಭೆ ಜನ್ಮತಾಳಿತು. ವಾಣಿಜ್ಯ ಮತ್ತು ಕೈಗಾರಿಕೆ ಬೆಳೆದುದು ಬಹು ನಿಧಾನವಾಗಿ. ಶತಮಾನಗಳಿಂದ ವಂಶಪಾರಂಪರ್ಯವಾಗಿ ವಾಣಿಜ್ಯ ಮತ್ತು ವ್ಯಾಪಾರ ನಡೆಸುತ್ತಿದ್ದವರೇ ಕೈಗಾರಿಕೆಯಲ್ಲಿ ಪ್ರವೇಶಿಸಿದ್ದು ಒಂದು ವಿಶೇಷ. ಹತ್ತಿಬಟ್ಟೆಯ ಕೈಗಾರಿಕಾ ಕೇಂದ್ರವಾದ ಅಹಮದಾಬಾದ್ ಮೊಗಲರ ಕಾಲದಲ್ಲಿ ಮತ್ತು ಅದಕ್ಕೂ ಮುಂಚೆ ಒಂದು ದೊಡ್ಡ ವ್ಯಾಪಾರ ಮತ್ತು ಕೈಗಾರಿಕಾ ಕೇಂದ್ರವಾಗಿತ್ತು, ಅಲ್ಲಿನ ವರ್ತಕರು ವಿದೇಶಗಳಿಗೆ ನಯಮಾಲುಗಳನ್ನು ರಫ್ತು ಮಾಡುತ್ತಿದ್ದರು. ಆಫ್ರಿಕ ಮತ್ತು ಪರ್ಷಿಯಕೊಲ್ಲಿಯ ಸಮುದ್ರವ್ಯಾಪಾರಕ್ಕೆ ಅಹಮದಾಬಾದ್ ವರ್ತಕರು ತಮ್ಮ ಸ್ವಂತ ಹಡಗುಗಳನ್ನೇ ಉಪಯೋಗಿಸುತ್ತ ಇದ್ದರು. ಹತ್ತಿರವೇ ಇದ್ದ ಭಡೋಚ ಬಂದರು ಗ್ರೀಕ್ ರೋಮನರ ಕಾಲದಿಂದಲೂ ಪ್ರಸಿದ್ಧವಿದೆ.

ಗುಜರಾತ, ಕಾಥೇವಾಡ ಮತ್ತು ಕಚ್ ಜನರು ಪ್ರಾಚೀನಕಾಲದಿಂದಲೂ ವ್ಯಾಪಾರ, ಕೈಗಾರಿಕೆ ವಾಣಿಜ್ಯ ಮತ್ತು ಸಮುದ್ರವ್ಯಾಪಾರದಲ್ಲಿ ಪ್ರಸಿದ್ಧಿ ಪಡೆದಿದ್ದರು. ಭಾರತದಲ್ಲಿ ಅನೇಕ ಬದಲಾವಣೆಗಳಾದವು; ಆದರೆ ಇವರು ಹೊಸ ಸನ್ನಿವೇಶಗಳಿಗೆ ಅಳವಡಿಸಿಕೊಂಡು ತಮ್ಮ ಹಳೆಯ ವ್ಯಾಪಾರ ಮುಂದುವರಿಸಿದರು. ಕೈಗಾರಿಕೆ ಮತ್ತು ವಾಣಿಜ್ಯದ ಪ್ರಮುಖ ವ್ಯಕ್ತಿಗಳಲ್ಲಿ ಕೆಲವರು

ಗುಜರಾತಿಗಳು. ಮತ ಅಥವ ಮತಾಂತರ ಇದಕ್ಕೆ ಅಡ್ಡಿ ಬರಲಿಲ್ಲ. ಹದಿಮೂರು ಶತಮಾನಗಳ ಹಿಂದೆ ಗುಜರಾತಿಗೆ ಬಂದು ನೆಲೆಸಿದ ಪಾರಸಿ ಜನರು ಈಗ ಗುಜರಾತರೇ. ಅವರು ಆಡುವ ಭಾಷೆ ಗುಜರಾತಿ. ಮುಸಲ್ಮಾನರಲ್ಲಿ ಕೈಗಾರಿಕೆ ಮತ್ತು ವಾಣಿಜ್ಯದಲ್ಲಿ ಮುಂದುವರಿದವರೆಂದರೆ ಖೋಜಾ ಗಳು, ಮೆಮನ್ ಮತ್ತು ಬೊಹರಾಗಳು. ಇವರೆಲ್ಲ ಹಿಂದೂ ಧರ್ಮದಿಂದ ಮತಾಂತರ ಹೊಂದಿ ದವರು. ಆದರೆ ಎಲ್ಲರೂ ಕಾಥೇವಾಡ, ಕಚ್ ಅಥವ ಗುಜರಾತದಿಂದ ಬಂದವರು. ಈ ಗುಜರಾತಿ ಗಳು ಕೈಗಾರಿಕೆ ಮತ್ತು ವಾಣಿಜ್ಯದಲ್ಲಿ ಮುಂದಾಳುತನ ವಹಿಸಿರುವುದು ಭಾರತದಲ್ಲಿ ಮಾತ್ರವಲ್ಲ. ಅವರು ಬರ್ಮ, ಸಿಂಹಳ ದ್ವೀಪ, ಪೂರ್ವ ಆಫ್ರಿಕ, ದಕ್ಷಿಣ ಆಫ್ರಿಕ ಮತ್ತು ಇತರ ದೇಶ ವಿದೇಶ ಗಳಿಗೂ ಹರಡಿದ್ದಾರೆ.

ರಾಜಪುತಾನದ ಮಾರ್ವಾಡಿಗಳು ಒಳನಾಡಿನ ವ್ಯಾಪಾರ ಮತ್ತು ಹಣಕಾಸಿನ ಆಡಳಿತವನ್ನು ತಮ್ಮ ಕೈಯಲ್ಲಿಟ್ಟುಕೊಂಡು ಭಾರತದ ಎಲ್ಲ ಮುಖ್ಯ ನಗರಗಳಲ್ಲೂ ಹರಡಿದ್ದರು. ದೊಡ್ಡ ಬಂಡ ವಾಳಗಾರರೂ ಆಗಿದ್ದರು; ಹಳ್ಳಿಗಳಲ್ಲಿ ಸಣ್ಣ ಸರಾಫಿ ಕೆಲಸ ನಡೆಸುತ್ತಿದ್ದರು. ಪ್ರಸಿದ್ಧ ಮಾರ್ವಾಡಿ ಬಂಡವಾಲಗಾರನೊಬ್ಬ ಒಂದು ಹುಂಡಿ ಕೊಟ್ಟರೆ ಭಾರತದಲ್ಲಿ ಮಾತ್ರವಲ್ಲದೆ ಹೊರದೇಶಗಳಲ್ಲಿ ಅದಕ್ಕೆ ಮನ್ನಣೆ ಇತ್ತು. ಮಾರ್ವಾಡಿಗಳು ಈಗಲೂ ಭಾರತದ ಮುಖ್ಯ ಬಂಡವಾಳಗಾರರಾಗಿ ಈಚೆಗೆ ಕೈಗಾರಿಕೆಯಲ್ಲೂ ಪ್ರಮುಖ ಪಾತ್ರವಹಿಸಿದಾರೆ.

ವಾಯವ್ಯದಲ್ಲಿ ಸಿಂಧಿಗಳು ಬಹುಕಾಲದಿಂದ ವ್ಯಾಪಾರದಲ್ಲಿ ತೊಡಗಿದಾರೆ. ಷಿಕಾರಿಪುರ ಅಥವ ಹೈದರಾಬಾದ್ ನಗರಗಳನ್ನು ತಮ್ಮ ಕೇಂದ್ರ ಮಾಡಿಕೊಂಡು ಮಧ್ಯ ಮತ್ತು ಪಶ್ಚಿಮ ಏಷ್ಯ ಮತ್ತು ಇತರ ಕಡೆ ಹರಡಿ ತಮ್ಮ ವ್ಯಾಪಾರವನ್ನು ಅಭಿವೃದ್ಧಿಗೊಳಿಸಿದರು. ಈಗ (ಅಂದರೆ ಯುದ್ಧಕ್ಕೆ ಮುಂಚೆ) ಒಬ್ಬಿಬ್ಬರು ಸಿಂಧಿ ವರ್ತಕರಿಲ್ಲದ ಬಂದರು ಯಾವುದೂ ಪ್ರಪಂಚದಲ್ಲಿ ಇಲ್ಲ. ಕೆಲವು ಪಂಜಾಬಿಗಳು ಸಹ ವಂಶಪಾರಂಪರ್ಯ ವ್ಯಾಪಾರಿಗಳಾಗಿದಾರೆ.

ಮದರಾಸಿನ ಚೆಟ್ಟಿಯಾರರು ಬಹು ಪುರಾತನ ಕಾಲದಿಂದ ವರ್ತಕಶ್ರೇಷ್ಠರೂ, ಧನಕೋಠಿ ಗಳೂ ಆಗಿದಾರೆ. ಸಂಸ್ಕೃತದ "ಶ್ರೇಷ್ಠಿ" ಎಂಬ ಶಬ್ದ "ಚೆಟ್ಟಿ" ಎಂದಾಗಿದೆ. ಶ್ರೇಷ್ಠಿ ಎಂದರೆ ವಣಿಕ ಸಂಘದ ಪ್ರಮುಖ ಎಂದು. ಮದರಾಸಿನ "ಚೆಟ್ಟಿಯಾರ್"ರು ದಕ್ಷಿಣ ಭಾರತದಲ್ಲಿ ಮಾತ್ರ ವಲ್ಲದೆ ಬರ್ಮದೇಶದ ಮೂಲೆಮೂಲೆಯ ಹಳ್ಳಿಗಳಲ್ಲಿ ಸಹ ಹರಡಿ ವ್ಯಾಪಾರದಲ್ಲಿ ಮುಖ್ಯ ಪಾತ್ರ ವಹಿಸಿದಾರೆ.

ಪ್ರತಿಯೊಂದು ಪ್ರಾಂತ್ಯದಲ್ಲೂ ವ್ಯಾಪಾರ ಮತ್ತು ವಾಣಿಜ್ಯವು ಬಹುಮಟ್ಟಿಗೆ ವಂಶ ಪಾರಂಪರ್ಯ ವ್ಯಾಪಾರಿಗಳಾಗಿದ್ದ ವೈಶ್ಯರ ಕೈಯಲ್ಲಿತ್ತು. ಚಿಲ್ಲರೆ ವ್ಯಾಪಾರ, ಸಗಟು ವ್ಯಾಪಾರ ಮತ್ತು ಲೇವಾದೇವಿ ಎಲ್ಲವೂ ಅವರ ಕೈಯಲ್ಲಿತ್ತು. ಪ್ರತಿಯೊಂದು ಹಳ್ಳಿಯಲ್ಲೂ ಒಂದು ವೈಶ್ಯರ ಅಂಗಡಿ ಇದ್ದು ಹಳ್ಳಿಗಾಡಿನ ಜನರ ಜೀವನದ ಆವಶ್ಯಕತೆಗೆ ಬೇಕಾದ ಸಾಮಾನುಗಳನ್ನೆಲ್ಲ ಒದಗಿ ಸುತ್ತ ಲೇವಾದೇವಿ ನಡೆಸುತ್ತ ಲಾಭದಾಯಕ ಜೀವನ ನಡೆಸುತ್ತಿದ್ದರು. ಗ್ರಾಮಾಂತರದ ಲೇವಾದೇವಿ ಎಲ್ಲವೂ ಈ ವೈಶ್ಯ ಅಥವ ಬನಿಯಗಳ ಕೈಯಲ್ಲಿತ್ತು. ಈ 'ಬನಿಯ'ಗಳು ವಾಯವ್ಯ ಪ್ರಾಂತ್ಯದ ಗುಡ್ಡಗಾಡಿನ ಜನರ ಮಧ್ಯೆಯೂ ಮತ್ತು ಇತರ ಸ್ವತಂತ್ರ ದೇಶಗಳಿಗೂ ಹರಡಿ ಅಲ್ಲಿ ಅವರಿಗೆ ಬೇಕಾದುದನ್ನೆಲ್ಲ ಒದಗಿಸುತ್ತಿದ್ದರು. ಬಡತನ ಹೆಚ್ಚಿದಂತೆ ವ್ಯವಸಾಯಗಾರರ ಸಾಲದ ಹೊರೆಯೂ ಹೆಚ್ಚಿತ್ತು. ಭೂಮಿ ಎಲ್ಲವೂ ಬಂಡವಲಗಾರರಿಗೆ ಪರಾಧೀನವಾಗಿ, ಅವರ ಕೈಸೇರಿ ಕೊನೆಗೆ ಅವರೇ ಭೂಮಿಯ ಮಾಲಿಕರೂ ಆದರು.

ಅನೇಕ ಹೊಸಬರು ಬೇರೆ ಬೇರೆ ವ್ಯಾಪಾರೋದ್ಯಮಗಳಲ್ಲಿ ಪ್ರವೇಶಮಾಡಿದಂತೆ ವ್ಯಾಪಾರ, ವಾಣಿಜ್ಯ ಮತ್ತು ಲೇವಾದೇವಿಗಳನ್ನು ನಡೆಸುತ್ತಿದ್ದ ಪಂಗಡಗಳಿಗೂ ಇತರರಿಗೂ ಮೊದಲು ಇದ್ದ ವ್ಯತ್ಯಾಸ ಮಾಯುವಾಗುತ್ತ ಬಂದಿತು. ಆದರೆ ಹಳಬರೂ ತಮ್ಮ ವ್ಯವಹಾರ ಬಿಡದೆ ಈಗಲೂ

ಪ್ರಮುಖಪಾತ್ರ ವಹಿಸಿದ್ದಾರೆ. ಇದು ಜಾತಿಪದ್ಧತಿಯ ಪರಿಣಾಮವೊ, ಹುಟ್ಟು ಕಸಬಿನ ರಕ್ತಗತ ಗುಣವೊ, ಸಂಪ್ರದಾಯದ ಹಿಡಿತವೊ ಅಥವ ಅವೆಲ್ಲದರ ಪ್ರಭಾವವೊ ನಿರ್ಧರಿಸುವುದು ಕಷ್ಟ. ಬ್ರಾಹ್ಮಣರು ಮತ್ತು ಕ್ಷತ್ರಿಯರು ವ್ಯಾಪಾರಕ್ಕೆ ಹೆಚ್ಚು ಬೆಲೆಕೊಡಲಿಲ್ಲ. ಶ್ರೀಮಂತಿಕೆ ಅಪೇಕ್ಷಣೀಯ ವಾದರೂ, ಹಣವೇ ತಕ್ಕ ಪ್ರತಿಫಲ ಎಂದು ಭಾವಿಸಲಿಲ್ಲ. ಭೂಮಿಯ ಒಡೆತನಕ್ಕೆ ಸಮಾಜದಲ್ಲಿ ಗೌರವವಿತ್ತು; ಆಸ್ತಿವಂತನಿರಲಿ ಇಲ್ಲದಿರಲಿ ವಿದ್ವತ್ತು ಮತ್ತು ಜ್ಞಾನಕ್ಕೆ ತುಂಬ ಗೌರವವಿತ್ತು. ಬ್ರಿಟಿಷರ ಆಡಳಿತದಲ್ಲಿ ಸರಕಾರದ ನೌಕರಿಗೆ ಹೆಚ್ಚು ಗೌರವ, ಭದ್ರತೆ ಮತ್ತು ಪ್ರತಿಷ್ಠೆ ದೊರೆಯಿತು. ಕ್ರಮೇಣ ಇಂಡಿಯನ್ ಸಿವಿಲ್‌ಸರ್ವಿಸ್‌ಗೆ ಭಾರತೀಯರನ್ನು ಸೇರಿಸಿಕೊಳ್ಳಲು ಆರಂಭಿಸಿದೊಡನೆ ಅದೊಂದು ಇಂದ್ರಪದವಿಯಾಗಿ ಪ್ರತಿಯೊಬ್ಬ ಇಂಗ್ಲಿಷ್ ವಿದ್ಯಾವಂತನಿಗೆ ಸ್ವರ್ಗಸಮಾನವಾಯಿತು. ಆ ಇಂದ್ರಲೋಕ ಲಂಡನ್ ನಗರದ 'ವೈಟ್‌ಹಾಲ್'ನ ಒಂದು ಛಾಯೆ. ಉದ್ಯಮಗಳಲ್ಲಿ ಕೆಲವು ನ್ಯಾಯವಾದಿಗಳಿಗೆ ಅಪಾರ ಹಣಗಳಿಸಲು ಅವಕಾಶದೊರೆತುದರಿಂದ ನ್ಯಾಯವಾದಿಗಳಿಗೂ ಒಳ್ಳೆಯ ಗೌರವಪ್ರತಿಷ್ಠೆಗಳು ದೊರೆತು ಯುವಕರು ಆ ಕಡೆ ಒಲಿದರು. ರಾಜಕೀಯ ಮತ್ತು ಸಾಮಾಜಿಕ ಸುಧಾರಣೆಗಳಲ್ಲಿ ಈ ಯುವಕರು ಮುಖ್ಯಪಾತ್ರವಹಿಸುವುದು ಅನಿವಾರ್ಯವಾಯಿತು.

ನ್ಯಾಯವಾದಿಗಳಲ್ಲಿ ಬಂಗಾಲಿಗಳೇ ಮೊದಲಿಗರು. ಕೆಲವರು ತುಂಬ ಪ್ರತಿಭಾಶಾಲಿಗಳಾಗಿ ಖ್ಯಾತಿಗಳಿಸಿ ಆ ಉದ್ಯಮಕ್ಕೊಂದು ಪ್ರತಿಷ್ಠೆ ತಂದರು. ರಾಜಕೀಯ ಮುಖಂಡತ್ವವೂ ಅವರದೇ ಆಯಿತು. ಅಭಿರುಚಿ ಇಲ್ಲದೆಯೋ ಅಥವ ಬೇರೆ ಕಾರಣಗಳಿಂದಲೋ ಕೈಗಾರಿಕಾ ಪ್ರಗತಿಯ ಕಡೆ ಅವರ ದೃಷ್ಟಿ ಬೀಳಲಿಲ್ಲ. ಇದರ ಪರಿಣಾಮವಾಗಿ ದೇಶದ ಜೀವನದಲ್ಲಿ ಕೈಗಾರಿಕೋದ್ಯಮ ಮುಂದುವರಿದು ಪ್ರಮುಖಪಾತ್ರ ವಹಿಸಿ ತನ್ನ ಪ್ರಭಾವವನ್ನು ರಾಜಕೀಯದ ಮೇಲೆ ಬೀರಿದಾಗ ಬಂಗಾಲ ರಾಜಕೀಯ ಕ್ಷೇತ್ರದ ತನ್ನ ನಾಯಕತ್ವ ಕಳೆದುಕೊಂಡಿತು. ಸರಕಾರದ ನೌಕರರಾಗಿ ಅಥವ ಬೇರೆ ಕೆಲಸಗಳಿಗಾಗಿ ಪರ ಪ್ರಾಂತ್ಯಗಳಿಗೆ ಹರಡುತ್ತಿದ್ದ ಬಂಗಾಲಿಗಳ ಮೊದಲಿನ ಪ್ರವಾಹವು ನಿಂತು ಪರಪ್ರಾಂತ್ಯಗಳಿಂದ ಬಂಗಾಲಕ್ಕೆ, ಮುಖ್ಯ ಕಲ್ಕತ್ತ ನಗರಕ್ಕೆ ಜನರು ಬಂದು ಅಲ್ಲಿನ ವ್ಯಾಪಾರ ಮತ್ತು ಕೈಗಾರಿಕೋದ್ಯಮಗಳಲ್ಲಿ ಪ್ರವೇಶಮಾಡುವ ಹೊಸ ಪ್ರವಾಹ ಆರಂಭವಾಯಿತು. ಬ್ರಿಟಿಷ್ ಬಂಡವಾಳ ಮತ್ತು ಕೈಗಾರಿಕೆಗೆ ಕಲ್ಕತ್ತ ಮೊದಲಿನಿಂದಲೂ ಕೇಂದ್ರವಾಗಿತ್ತು. ಈಗಲೂ ಇಂಗ್ಲಿಷ್ ಮತ್ತು ಸ್ಕಾಚ್ ಜನರು ಅಲ್ಲಿನ ವ್ಯಾಪಾರದಲ್ಲಿ ಪ್ರಬಲರಾಗಿದ್ದಾರೆ. ಆದರೆ ಈಚೆಗೆ ಮಾರ್ವಾಡಿಗಳು ಗುಜರಾತಿಗಳು ಅವರನ್ನು ಮೀರಿಸುತ್ತಿದ್ದಾರೆ. ಕಲ್ಕತ್ತೆಯ ಚಿಲ್ಲರೆ ವ್ಯಾಪಾರ ಸಹ ಬಂಗಾಲಿಗಳಲ್ಲದವರ ಕೈಲಿದೆ. ಕಲ್ಕತ್ತನಗರದ ಸಹಸ್ರಗಟ್ಟಲೆ ಟ್ಯಾಕ್ಸಿ ಡ್ರೈವರುಗಳೆಲ್ಲರೂ ಸೀಖರು ಮತ್ತು ಪಂಜಾಬಿಗಳು.

ಭಾರತೀಯ ಕೈಗಾರಿಕೆ, ವಾಣಿಜ್ಯ, ಲೇವಾದೇವಿ ಮತ್ತು ವಿಮಾ ಉದ್ಯಮಗಳಿಗೆ ಮುಂಬೈ ನಗರವು ಮುಖ್ಯ ಕೇಂದ್ರಸ್ಥಾನವಾಯಿತು. ಈ ಎಲ್ಲ ಚಟುವಟಿಕೆಗಳಲ್ಲಿ ಪಾರಸಿಗಳು, ಮಾರ್ವಾಡಿಗಳು, ಗುಜರಾತಿಗಳು ಮುಂದಾಳುಗಳಾದರು. ಮಹಾರಾಷ್ಟ್ರದವರು ಅಥವ ಮರಾಠರು ಈ ಕಾರ್ಯ ಚಟುವಟಿಕೆಯಲ್ಲಿ ಭಾಗವಹಿಸಿರುವುದು ಅತ್ಯಲ್ಪ. ಮುಂಬೈ ನಗರ ಪ್ರಪಂಚಕ್ಕೆಲ್ಲ ಸೇರಿದ ಒಂದು ದೊಡ್ಡ ನಗರ. ಮರಾಠಿಗಳ ಮತ್ತು ಗುಜರಾತಿಗಳ ಜನಸಂಖ್ಯೆಯೇ ಹೆಚ್ಚು. ಮಹಾರಾಷ್ಟ್ರರು ವಿದ್ವತ್ತಿನಲ್ಲಿ ಕುಶಲ ವಿದ್ಯೆಗಳಲ್ಲಿ ಮುಂದುವರಿದಿದ್ದಾರೆ. ಅವರು ಒಳ್ಳೆಯ ಸೈನಿಕರು; ಅನೇಕರು ಹತ್ತಿಯ ಗಿರಣಿಗಳಲ್ಲಿ ಕೆಲಸಮಾಡುವವರು. ಕಷ್ಟಸಹಿಷ್ಣುಗಳು ಮತ್ತು ಗಟ್ಟಿಗರು. ಆದರೆ ಮಹಾರಾಷ್ಟ್ರದಲ್ಲಿ ಬಡತನ ಹೆಚ್ಚು. ಶಿವಾಜಿಯ ಸಾಹಸಗಳಲ್ಲಿ ಮತ್ತು ಅವರ ಪೂರ್ವಿಕರ ಶೌರ್ಯ ಸಾಧನೆಗಳಲ್ಲಿ ಬಹು ಹೆಮ್ಮೆಯುಳ್ಳವರು. ಗುಜರಾತಿಗಳು ಮೃದುಶರೀರಿಗಳು, ನಯಶೀಲರು, ಧನವಂತರು; ವ್ಯಾಪಾರ ವಾಣಿಜ್ಯ ವಿಷಯಗಳಲ್ಲಿ ಪಳಗಿದವರು. ಈ ವ್ಯತ್ಯಾಸಗಳಿಗೆ ಪ್ರಾಯಶಃ ಭೌಗೋಲಿಕ ಕಾರಣಗಳಿರಬಹುದು; ಏಕೆಂದರೆ ಮಹಾರಾಷ್ಟ್ರದೇಶ ಬೋಳಾದ, ಪರುಷವಾದ, ಬೆಟ್ಟಗುಡ್ಡಗಳಿಂದಾವೃತವಾದ ಪ್ರಾಂತ, ಗುಜರಾತಾದರೋ ಸಂಪತ್ಸಮೃದ್ಧವಾದ ಫಲವತ್ತಾದ ದೇಶ.

ಇಂಡಿಯಾದೇಶದ ನಾನಾ ಭಾಗಗಳಲ್ಲಿ ಕಂಡುಬರುವ ಈ ಬಗೆಯ ಮತ್ತು ಇತರ ವಿಧದ ವ್ಯತ್ಯಾಸಗಳನ್ನು ಗಮನಿಸುವುದರಲ್ಲಿ ಸ್ವಾರಸ್ಯವಿದೆ. ಈ ಬಗೆಯ ವ್ಯತ್ಯಾಸಗಳು ಇಂದಿಗೂ ಉಳಿದು ಬರುತ್ತಿವೆಯಾದರೂ ಈಗೀಗ ಕಡಮೆಯಾಗುತ್ತಿವೆ. ಮದರಾಸು ವಿಶೇಷ ಜ್ಞಾನವಂತರಿಗೆ ಹೆಸರಾದದ್ದು. ಹಿಂದಿನಂತೆ ಈಗಲೂ ಹೆಸರಾಂತ ತತ್ತ್ವಜ್ಞಾನಿಗಳೂ, ಗಣಿತಶಾಸ್ತ್ರಜ್ಞರೂ ವಿಜ್ಞಾನಿಗಳೂ ಅಲ್ಲಿ ಉದ್ಭವಿಸುತ್ತಿದ್ದಾರೆ. ಬೊಂಬಾಯಿ ಈಗ ಮುಖ್ಯವಾಗಿ ವ್ಯಾಪಾರದಲ್ಲಿ ತೊಡಗಿದೆ. ವ್ಯಾಪಾರೋದ್ಯಮದಿಂದ ಹುಟ್ಟುವ ಅನುಕೂಲ ಅನನುಕೂಲಗಳು ಈ ಪ್ರಾಂತಕ್ಕೆ ಸ್ವಾಭಾವಿಕ. ಬಂಗಾಳ, ವ್ಯಾಪಾರ ಕೈಗಾರಿಕೋದ್ಯಮಗಳಲ್ಲಿ ಸ್ವಲ್ಪಮಟ್ಟಿಗೆ ಹಿಂದುಳಿದ್ದರೂ, ಕೆಲವು ಮಂದಿ ಉತ್ತಮ ವಿಜ್ಞಾನಿಗಳಿಗೆ ಜನ್ಮಕೊಟ್ಟಿದೆಯಲ್ಲದೆ, ಸಾಹಿತ್ಯಕಲೆಗಳಲ್ಲಿ ವಿಶೇಷವಾಗಿ ಹೆಸರು ಹೊಂದಿದೆ. ಪಂಜಾಬು ಪ್ರಮುಖವ್ಯಕ್ತಿಗಳ ಹುಟ್ಟು ಭೂಮಿಯಲ್ಲದಿದ್ದರೂ ಅನೇಕ ಕ್ಷೇತ್ರಗಳಲ್ಲಿ ಮುನ್ನುಗ್ಗುತ್ತಿರುವ ಪ್ರಾಂತವಾಗಿದೆ. ಅಲ್ಲಿನ ಜನರು ಕಾರ್ಯಪರರು, ಯಂತ್ರಕರ್ಮದಲ್ಲಿ ಆಸಕ್ತಿಯುಳ್ಳವರು; ಸಣ್ಣಪುಟ್ಟ ವ್ಯಾಪಾರ ಕೈಗಾರಿಕೋದ್ಯಮಗಳಲ್ಲಿ ಜಯಶೀಲರು. ಸಂಯುಕ್ತ ಪ್ರಾಂತವು (ದೆಹಲಿಯೂ ಸೇರಿ) ಒಂದು ವಿಚಿತ್ರವಾದ ಕಲಸು; ಹಲವು ಬಗೆಯಲ್ಲಿ ಇಂಡಿಯದ ಒಂದು ಪ್ರತಿಬಿಂಬ. ಈ ಪ್ರಾಂತಗಳು ಪುರಾತನ ಹಿಂದೂ ಸಂಸ್ಕೃತಿಯ, ಹಾಗೆಯೆ ಆಫ್ಘನ್ ಮತ್ತು ಮೊಗಲ ಕಾಲಗಳಲ್ಲಿ ಈ ದೇಶಕೆ ಬಂದ ಪಾರಸೀ ಸಂಸ್ಕೃತಿಯ ಪೀಠ. ಆದ್ದರಿಂದ ಈ ಎರಡು ಸಂಸ್ಕೃತಿಗಳ ಮಿಲನ—ಇತ್ತೀಚಿನ ಪಾಶ್ಚಾತ್ಯ ಸಂಸ್ಕೃತಿಯ ಸಂಪರ್ಕವೂ ಸಹ-ಇಲ್ಲಿ ಸ್ಪಷ್ಟವಾಗಿ ಕಂಡು ಬರುತ್ತಿದೆ. ಇಂಡಿಯದ ಇತರ ಭಾಗಗಳಲ್ಲಿ ಕಂಡು ಬರುವಷ್ಟು ಪ್ರಾದೇಶಿಕ ಮನೋಭಾವ ಈ ಪ್ರಾಂತಗಳಲ್ಲಿ ಇಲ್ಲ. ಬಹುಕಾಲದಿಂದ ಅಲ್ಲಿನ ಜನ-ತಾವು ಭಾರತದ ನಿಜವಾದ ಪ್ರತಿನಿಧಿಗಳೆಂಬಂತೆ ತಿಳಿದುಕೊಂಡಿದ್ದಾರೆ. ಇತರರೂ ಸಹ ಅವರನ್ನು ಹಾಗೆಯೇ ಪರಿಗಣಿಸಿದ್ದಾರೆ. ವಾಸ್ತವವಾಗಿ ಈ ಪ್ರಾಂತಗಳು ಜನಬಳಕೆಯಲ್ಲಿ ಹಿಂದುಸ್ಥಾನವೆಂದು ಹೆಸರಾಗಿವೆ.

ಈ ವ್ಯತ್ಯಾಸಗಳು ಕೇವಲ ಭೌಗೋಲಿಕ. ಇವಕ್ಕೆ ಮತದ ಸಂಬಂಧವಿಲ್ಲ. ಬಂಗಾಳದ ಮುಸ್ಲಿಮನಿಗೂ ಬಂಗಾಳದ ಹಿಂದುವಿಗೂ ಇರುವ ಸ್ವಾಭಾವಿಕವಾದ ಹತ್ತಿರದ ಸಂಬಂಧ ಆತನಿಗೂ ಪಂಜಾಬಿ ಮುಸ್ಲಿಮನಿಗೂ ಇಲ್ಲ. ಇಂಡಿಯದ ಇತರ ಪ್ರಾಂತಗಳ ಜನರ ವಿಷಯವೂ ಇದೇ ರೀತಿಯಾದದ್ದು. ಹಲವು ಮಂದಿ ಬಂಗಾಳೀ ಹಿಂದು ಮತ್ತು ಮುಸ್ಲಿಮಜನರು ಎಲ್ಲಿಯಾದರೂ ಒಂದೆಡೆ ಇಂಡಿಯದಲ್ಲಾಗಲಿ ಬೇರೆಯೆಡೆಯಲ್ಲಾಗಲಿ-ಸಂಧಿಸಿದರೆ, ಅವರು ಒಡನೆ ಒಟ್ಟುಸೇರಿ ಒಬ್ಬರಲ್ಲೊಬ್ಬರು ನಿಸ್ಸಂಕೋಚವಾಗಿ ನಡೆದುಕೊಳ್ಳುತ್ತಾರೆ. ಎಲ್ಲಾದರೂ ಸೇರಿದರೆ ಒಡನೆ ಒಟ್ಟುಗೂಡಿ ಒಂದು ಮನೆಯವರಂತೆ ನಡೆದುಕೊಳ್ಳುತ್ತಾರೆ. ಮುಸ್ಲಿಂ ಇರಲಿ, ಸೀಖ ಇರಲಿ, ಹಿಂದೂ ಇರಲಿ ಪಂಜಾಬಿಗಳು ಸಹ ಅದೇ ರೀತಿ ನಡೆದುಕೊಳ್ಳುತ್ತಾರೆ. ಮುಂಬೈ ಪ್ರಾಂತ್ಯದ ಮುಸ್ಲಿಮರಲ್ಲಿ (ಖೋಜಾಗಳು, ಮೆಮನರು, ಬೋರಾಗಳು) ಅನೇಕ ಹಿಂದೂಪದ್ಧತಿಗಳು ಆಚರಣೆಯಲ್ಲಿ ಇವೆ. ಉತ್ತರ ಹಿಂದುಸ್ಥಾನದ ಮುಸ್ಲಿಮರು ಆಗಾ ಖಾನನ ಅನುಯಾಯಿಗಳಾದ ಖೋಜಾ ಮತ್ತು ಬೋರಾ ಜನರನ್ನು ಜಾತೀಯ ಮುಸ್ಲಿಮರೆಂದು ಭಾವಿಸುವುದಿಲ್ಲ.

ಬಂಗಾಲ ಮತ್ತು ಉತ್ತರದೇಶದ ಮುಸ್ಲಿಮರೆಲ್ಲರೂ ಅನೇಕ ವರ್ಷ ಇಂಗ್ಲಿಷ್ ವಿದ್ಯಾಭ್ಯಾಸದಿಂದ ದೂರವಿದ್ದರು. ಕೈಗಾರಿಕೆಯ ಪ್ರಗತಿಯಲ್ಲೂ ಯಾವ ಪಾತ್ರವನ್ನೂ ವಹಿಸಲಿಲ್ಲ. ಅದಕ್ಕೆ ಶ್ರೀಮಂತಿಕೆಯ ಭಾವನೆ ಒಂದುಕಾರಣ. ರೋಮನ್ ಕ್ಯಾಥೊಲಿಕ್ಕರಂತೆ ಸಾಲಗಾರರಿಂದ ಬಡ್ಡಿ ತೆಗೆದುಕೊಳ್ಳಬಾರದು ಮತ್ತು ಹಣದ ಆಸೆ ಇರಬಾರದೆಂಬ ಭಾವನೆ ಇನ್ನೊಂದು ಕಾರಣ. ಆದರೆ ಲೇವಾದೇವಿ ನಡೆಸುವವರಲ್ಲಿ ಮುಸ್ಲಿಮರೇ ಆದ ವಾಯವ್ಯ ಪ್ರಾಂತ್ಯದ ಪಠಾನರು ತುಂಬ ಕಠಿನ ಹೃದಯರಿರುವುದು ಆಶ್ಚರ್ಯ. ಈ ರೀತಿ ಮುಸಲ್ಮಾನರು ಹತ್ತೊಂಭತ್ತನೆಯ ಶತಮಾನದ ಅಂತ್ಯದವರೆಗೆ ಇಂಗ್ಲಿಷ್ ವಿದ್ಯಾಭ್ಯಾಸದ ಪಾಶ್ಚಾತ್ಯಸಂಪರ್ಕಗಳಲ್ಲಿ, ಆದ್ದರಿಂದ ಸರ್ಕಾರಿ ಉದ್ಯೋಗ ಮತ್ತು ಕೈಗಾರಿಕೋದ್ಯಮಗಳಲ್ಲಿ ಹಿಂದುಳಿದರು.

ಭಾರತದಲ್ಲಿ ಕೈಗಾರಿಕೆಯ ಬೆಳವಣಿಗೆಯು ನಿಧಾನವಾಗಿ ತೆವಳಿ ಮುಂದುವರಿದರೂ ಕೈಗಾರಿಕೋದ್ಯಮವು ಪ್ರಗತಿಪರವೆಂಬ ಭಾವನೆಕೊಟ್ಟುದರಿಂದ ಕೆಲವರ ದೃಷ್ಟಿ ಸೆಳೆಯಿತು. ಆದರೂ ಭೂಮಿಯಮೇಲಿನ ಒತ್ತಡವನ್ನಾಗಲಿ ಭಾರತದ ಪ್ರಜಾಕೋಟಿಯ ದಾರಿದ್ರ್ಯವನ್ನಾಗಲಿ ದೂರ ಮಾಡಲು ಸಾಧ್ಯವಾಗಲಿಲ್ಲ. ಕೋಟ್ಯನುಕೋಟಿ ನಿರುದ್ಯೋಗಿಗಳಲ್ಲಿ, ಅಥವ ಅರ್ಧಮರ್ಧ ಉದ್ಯೋಗವಿದ್ದವರಲ್ಲಿ ಕೆಲವು ಸಹಸ್ರ ಜನರಿಗೆ ಮಾತ್ರ ಕೈಗಾರಿಕೆಯಲ್ಲಿ ಉದ್ಯೋಗ ದೊರೆಯಿತು. ಈ ಅಲ್ಪವ್ಯತ್ಯಾಸದಿಂದ ದೇಶದ ಹಳ್ಳಿಗಾಡಿನ ಜೀವನದಲ್ಲಿ ಯಾವ ವ್ಯತ್ಯಾಸವೂ ಆಗಲಿಲ್ಲ. ದೇಶಾದ್ಯಂತ ಹರಡಿದ್ದ ನಿರುದ್ಯೋಗ ಮತ್ತು ಭೂಮಿಯಮೇಲಿನ ಒತ್ತಡವನ್ನು ಸಹಿಸಲಾರದೆ ಅನೇಕ ಶ್ರಮಜೀವಿಗಳು ಅವಮಾನಕರವಾದ ನಿಯಮಗಳಿಗೆ ಒಪ್ಪಿ ಬಹು ದೊಡ್ಡ ಪ್ರಮಾಣದಲ್ಲಿ ದೂರ ದೇಶಗಳಿಗೆ ವಲಸೆ ಹೋದರು. ದಕ್ಷಿಣ ಆಫ್ರಿಕ, ಫಿಜಿ, ಟ್ರಿನಿದಾದ್, ಜಮೈಕಾ, ಗಯಾನ, ಮಾರಿಷಸ್, ಸಿಂಹಳ, ಮಲಯ ಮತ್ತು ಬರ್ಮದೇಶಗಳಿಗೆ ವಲಸೆಹೋದರು. ವಿದೇಶೀಯರ ಆಡಳಿತದಲ್ಲಿ ತಮ್ಮ ಅಭಿವೃದ್ಧಿ ಮತ್ತು ಉನ್ನತಿಗೆ ಅವಕಾಶಪಡೆದ ಸಣ್ಣಪಂಗಡಗಳೂ, ವ್ಯಕ್ತಿಗಳೂ ದಿನ ದಿನಕ್ಕೂ ಕ್ಷೀಣಿಸುತ್ತಿದ್ದ ಜನಕೋಟಿಯಿಂದ ದೂರವಾದರು. ಆ ಪಂಗಡಗಳ ಕೈಯಲ್ಲಿ ಸ್ವಲ್ಪ ಬಂಡವಾಳ ಬೆಳೆದು ಅದನ್ನು ಇನ್ನೂ ಅಭಿವೃದ್ಧಿಗೊಳಿಸಲು ಅವರು ಮಾರ್ಗಕಲ್ಪಿಸಿಕೊಂಡರು. ಆದರೆ ದೇಶದ ಬಡತನ ಮತ್ತು ನಿರುದ್ಯೋಗದ ಮೂಲಪ್ರಶ್ನೆಯು ಮಾತ್ರ ಹಾಗೇ ಉಳಿಯಿತು.

### ೧೧. ಹಿಂದೂ ಮುಸ್ಲಿಮರಲ್ಲಿ ಸುಧಾರಣೆ ಮತ್ತು ಇತರ ಚಳವಳಿಗಳು.

ನಿಜವಾದ ಪಾಶ್ಚಾತ್ಯದ ಪ್ರಭಾವ ಭಾರತದಮೇಲೆ ಆದುದು ಹತ್ತೊಂಭತ್ತನೆಯ ಶತಮಾನದಲ್ಲಿ ಆದ ಔದ್ಯೋಗಿಕ ಪರಿವರ್ತನೆಗಳು ಮತ್ತು ಅವುಗಳ ಪ್ರಗತಿಪರ ಪರಿಣಾಮಗಳಿಂದ. ಬಹು ಕಾಲದಿಂದ ಸಂಕುಚಿತ ಆವರಣದ ಬಂಧನದಲ್ಲಿದ್ದ ಭಾವನಾದೃಷ್ಟಿಯು ವಿಶಾಲಗೊಂಡು ಭಾವನಾ ಪ್ರಪಂಚದಲ್ಲಿಯೂ ನವಚೈತನ್ಯ ತಲೆದೋರಿ ವ್ಯತ್ಯಾಸಗಳಾದವು. ಈ ಪರಿವರ್ತನೆ ಆರಂಭದಲ್ಲಿ ಸಣ್ಣ ಇಂಗ್ಲಿಷ್ ವಿದ್ಯಾವಂತರ ಗುಂಪಿನಲ್ಲಿ ಮಾತ್ರ ಕಾಣಿಸಿಕೊಂಡಿತು. ಪಾಶ್ಚಾತ್ಯವಾದುದೆಲ್ಲ ಗೌರವಾರ್ಹವೂ, ಸ್ವೀಕೃತಾರ್ಹವೂ ಆಯಿತು. ಸಾಮಾಜಿಕ ಸಂಪ್ರದಾಯ ಮತ್ತು ಪದ್ಧತಿಗಳ ಮೇಲೆ ತಿರಸ್ಕಾರ ಭಾವನೆ ಹುಟ್ಟಿ ಅನೇಕ ಹಿಂದೂಗಳು ಕ್ರೈಸ್ತಧರ್ಮದಿಂದ ಆಕರ್ಷಿತರಾದರು. ಆದ್ದರಿಂದ ರಾಜಾರಾಮಮೋಹನರಾಯನು ಹಿಂದೂ ಧರ್ಮವನ್ನು ಈ ನೂತನ ಸನ್ನಿವೇಶಕ್ಕೆ ಅಳವಡಿಸಲು ಪ್ರಯತ್ನಮಾಡಿದನು. ಸಮಾಜಸುಧಾರಣಾದೃಷ್ಟಿಯಿಂದ ಆ ಧರ್ಮ ಅರ್ಥಪೂರ್ಣವಿರುವಂತೆ ಬ್ರಹ್ಮಸಮಾಜವನ್ನು ಸ್ಥಾಪಿಸಿದನು. ಆತನ ತರುವಾಯ ಕೇಶವಚಂದ್ರಸೇನ್ ಅದಕ್ಕೆ ಇನ್ನೂ ಹೆಚ್ಚು ಕ್ರೈಸ್ತಧರ್ಮದ ದೃಷ್ಟಿ ಕೊಟ್ಟನು. ಮಧ್ಯಮವರ್ಗದ ಬಂಗಾಲಿಗಳ ಮೇಲೆ ಬ್ರಹ್ಮ ಸಮಾಜವು ಮಹತ್ಪರಿಣಾಮ ಮಾಡಿತು. ಆದರೆ ಅದನ್ನು ಅವಲಂಬಿಸಿದವರು ಬಹಳ ಸ್ವಲ್ಪಜನ ಆದರೂ ಅವರಲ್ಲಿ ಕೆಲವರು ಪ್ರಸಿದ್ಧ ವ್ಯಕ್ತಿಗಳೂ, ವಂಶೀಕರೂ ಇದ್ದರು. ಈ ಮನೆತನಗಳವರು ಧರ್ಮ ಮತ್ತು ಸಮಾಜ ಸುಧಾರಣೆಗಳಲ್ಲಿ ತೀವ್ರ ಆಸಕ್ತರಾಗಿದ್ದರೂ ಪ್ರಾಚೀನ ಭಾರತದ ವೇದಾಂತ ದರ್ಶನದ ಆದರ್ಶಗಳಿಗೇ ಹಿಂದಿರುಗಲು ಪ್ರಯತ್ನಿಸಿದರು.

ಭಾರತದ ಇತರಕಡೆಗಳಲ್ಲಿ ಸಹ ಇದೇ ದೃಷ್ಟಿ ತಲೆದೋರಿ ಆಚರಣೆಯಲ್ಲಿದ್ದ ಹಿಂದೂ ಧರ್ಮದ ಸಮಾಜ ನಿರ್ಬಂಧಗಳು ಮತ್ತು ಕುರುಡು ಪದ್ಧತಿಗಳನ್ನು ಕಿತ್ತೊಗೆಯಲು ಪ್ರಯತ್ನ ನಡೆಯಿತು. ಹತ್ತೊಂಭತ್ತನೆಯ ಶತಮಾನದ ಕೊನೆಯಲ್ಲಿ ಗುಜರಾತಿನ ದಯಾನಂದ ಸರಸ್ವತಿಯು ಹಿಂದೂಗಳಲ್ಲಿ ಒಂದು ದೊಡ್ಡ ಸಮಾಜ ಸುಧಾರಣಾ ಚಳವಳಿಯನ್ನು ಆರಂಭಿಸಿದನು. ಆದರೆ ಅದು ಬಲಗೊಂಡುದು ಪಂಜಾಬಿನ ಹಿಂದೂಗಳಲ್ಲಿ. ಇದೇ ಆರ್ಯಸಮಾಜದ ಮೂಲ. "ವೇದಗಳಿಗೆ ಹಿಂದಿರುಗಿ" ಎಂಬುದೇ ಅದರ ಸಂದೇಶ. ಆರ್ಯಧರ್ಮದಲ್ಲಿ ವೇದಕಾಲದ ನಂತರ ಈಚೆಗೆ ಆಗಿರುವ ಪರಿವರ್ತನೆಗಳೆಲ್ಲ ತ್ಯಾಜ್ಯವೆಂದು ಅವರ ಮತ. ಆದ್ದರಿಂದ ಅನಂತರದ ವೇದಾಂತ ದರ್ಶನ, ಏಕತ್ವವಾದ,

ಬಹು ದೇವತಾವಾದ, ಮತ್ತು ಜನರ ಬಳಕೆಯಲ್ಲಿನ ಪೂಜಾಪದ್ಧತಿ ಎಲ್ಲವೂ ನಿಂದಾರ್ಹವಾದವು. ವೇದಗಳಿಗೂ ತಮ್ಮದೇ ಒಂದು ಅರ್ಥಕೊಟ್ಟರು. ಇಸ್ಲಾಂಮತ್ತು ಕ್ರೈಸ್ತಮತಗಳ, ಮುಖ್ಯವಾಗಿ ಇಸ್ಲಾಂ ಧರ್ಮದ ಪ್ರಾಬಲ್ಯ ತಡೆಗಟ್ಟುವುದೇ ಅದರ ಮುಖ್ಯ ಉದ್ದೇಶವಿತ್ತು. ಒಳಗಿನ ದೋಷ ಗಳ ನಿವಾರಣೆ ಮಾಡಬೇಕೆಂಬ ಸುಧಾರಣಾ ದೃಷ್ಟಿಯೂ ಇತ್ತು. ಪರಧರ್ಮಗಳಿಗೆ ಜನರು ಬಲಿ ಬೀಳಬಾರದೆಂಬ ಸ್ವಧರ್ಮರಕ್ಷಣೆಯ ದೃಷ್ಟಿಯೂ ಇತ್ತು. ಹಿಂದೂ ಧರ್ಮಕ್ಕೆ ಮತಾಂತರ ಮಾಡಿ ಕೊಳ್ಳುವ ಪದ್ಧತಿಯನ್ನು ಆಚರಣೆಗೆ ತಂದರು. ಇದರಿಂದ ಮತಾಂತರ ಮಾಡಿಕೊಳ್ಳುತ್ತಿದ್ದ ವಿಧರ್ಮಿಗಳಿಗೂ ಇವರಿಗೂ ಘರ್ಷಣೆ ಆರಂಭವಾಯಿತು. ಇಸ್ಲಾಂ ಧರ್ಮದಂತೆಯೇ ಆರ್ಯಸಮಾ ಜದ ಧರ್ಮವನ್ನೂ ರಚಿಸಿದ್ದರೂ ಅನ್ಯಧರ್ಮೀಯರು ಹಿಂದೂ ಧರ್ಮದ ಮೇಲೆ ಮಾಡುತ್ತಿದ್ದ ದಾಳಿಯನ್ನು ತಡೆಗಟ್ಟಲು ಹಿಂದೂ ಎನ್ನುವುದನ್ನೆ ರಕ್ಷಣೆ ಮಾಡುವುದು ಅದರ ಕಾರ್ಯವಾಯಿತು. ಇದು ಮುಖ್ಯವಾಗಿ ಪಂಜಾಬ್ ಮತ್ತು ಸಂಯುಕ್ತಪ್ರಾಂತ್ಯದ ಮಧ್ಯಮವರ್ಗದ ಹಿಂದೂಗಳಲ್ಲಿ ಹೆಚ್ಚುಹರಡಿತು. ಒಂದು ಕಾಲದಲ್ಲಿ ಸರ್ಕಾರವು ಅದನ್ನು ರಾಜಕೀಯ ಕ್ರಾಂತಿಯ ಚಳವಳಿ ಎಂದು ಭಾವಿಸಿತ್ತು, ಆದರೆ ಅನೇಕ ಸರಕಾರದ ಅಧಿಕಾರಿಗಳು ಅದರ ಅವಲಂಬಿಗಳಾದ ಕಾರಣ ಅದ ಕ್ಕೊಂದು ಗೌರವ ದೊರೆಯಿತು. ಬಾಲಕ ಬಾಲಕಿಯರಲ್ಲಿ ವಿದ್ಯಾಪ್ರಚಾರ, ಮಹಿಳೆಯರ ಸ್ಥಿತಿ, ಸುಧಾರಣೆ, ದಲಿತವರ್ಗದ ಸ್ಥಾನಮಾನಗಳ ಉನ್ನತಿಗಾಗಿ ಉತ್ತಮಸೇವೆ ಮಾಡಿದೆ.

ಸ್ವಾಮಿ ದಯಾನಂದನ ಸಮಕಾಲೀನನಾಗಿ ಬಂಗಾಲದಲ್ಲಿ ಇನ್ನೊಂದು ಬೇರೆ ರೀತಿಯ ಮಹಾವ್ಯಕ್ತಿ ಅವತಾರಮಾಡಿ ತನ್ನ ಜೀವನ ರೀತಿಯಿಂದ ಅನೇಕ ಇಂಗ್ಲಿಷ್ ವಿದ್ಯಾವಂತರಮೇಲೆ ಅತ್ಯಂತ ಪರಿಣಾಮಮಾಡಿದನು. ಆ ವ್ಯಕ್ತಿಯೇ ಶ್ರೀರಾಮಕೃಷ್ಣ ಪರಮಹಂಸ. ಪಂಡಿತನಲ್ಲ ದಿದ್ದರೂ ಸರಳ, ಶ್ರದ್ಧಾಜೀವಿಯಾಗಿದ್ದನು. ಸಮಾಜ ಸುಧಾರಣೆಯೇ ಆತನ ಗುರಿಯಾಗಿರಲಿಲ್ಲ. ಚೈತನ್ಯ ಮತ್ತು ಇತರ ಭಕ್ತಿಪಂಥದವರ ಮಾರ್ಗಾನುವರ್ತಿಯಾಗಿದ್ದನು. ಅವನ ದೃಷ್ಟಿ ಮುಖ್ಯ ವಾಗಿ ಧಾರ್ಮಿಕವಿತ್ತು. ಆದರೆ ಉದಾರಭಾವನೆಯಿಂದ, ಆತ್ಮಸಾಕ್ಷಾತ್ಕಾರ ಪಡೆಯಲು ಮುಸ್ಲಿಂ ಮತ್ತು ಕ್ರೈಸ್ತ ಸಾಧುಗಳ ಬಳಿ ಹೋಗಿ ಅವರಸಂಗಡ ಕೆಲವು ವರ್ಷ ವಾಸಮಾಡಿ, ಅವರ ಆಚರಣೆ ಯಂತೆ ನಡೆದನು. ಕೊನೆಗೆ ಕಲ್ಕತ್ತ ಬಳಿ ದಕ್ಷಿಣೇಶ್ವರದಲ್ಲಿ ನೆಲಸಿ ತನ್ನ ವ್ಯಕ್ತಿತ್ವ ಮತ್ತು ಆದರ್ಶ ಗಳಿಂದ ಅನೇಕರನ್ನು ಆಕರ್ಷಿಸಿದನು. ಆತನನ್ನು ನೋಡಹೋದವರು, ಮತ್ತು ಹಾಸ್ಯಮಾಡು ತ್ತಿದ್ದವರೇ ಆತನ ಪ್ರಭಾವಕ್ಕೆ ಒಳಗಾದರು. ಪಾಶ್ಚಾತ್ಯ ಪದ್ಧತಿಗೆ ಮನಸೋತವರೆಲ್ಲ ಈತನನ್ನು ನೋಡಿ ತಾವು ಅದುವರೆಗೆ ಕಾಣದ ಯಾವುದೋ ಶಕ್ತಿಯನ್ನು ಆತನಲ್ಲಿ ಕಂಡರು. ಧರ್ಮಶ್ರದ್ಧೆಯ ಮುಖ್ಯಅಂಶಗಳಿಗೆ ಪ್ರಾಧಾನ್ಯತೆ ಕೊಟ್ಟು, ಹಿಂದೂಧರ್ಮ ಮತ್ತು ವಿವಿಧದರ್ಶನ ಶಾಖೆಗಳ ಮೂಲ ತತ್ವಗಳ ಸಂಬಂಧ ತೋರಿಸಿ, ಎಲ್ಲವನ್ನೂ ತಾನೇ ಆಚರಿಸಿ ತೋರಿಸಿದನು. ಇತರ ಮತಗಳನ್ನೂ ತಾನು ಆಚರಿಸಿದನು. ಎಲ್ಲ ಜಾತಿಯನ್ನೂ ವಿರೋಧಿಸಿ ಸತ್ಯವೇ ಎಲ್ಲ ಮಾರ್ಗಗಳ ಗುರಿ ಎಂದು ತೋರಿಸಿದನು. ಏಷ್ಯ ಮತ್ತು ಯೂರೋಪ್ ಇತಿಹಾಸದ ಪ್ರಾಚೀನಕಾಲದ ಋಷಿಗಳಂತೆ ಇದ್ದನು. ಇಂದಿನ ಆಧುನಿಕ ಯುಗಕ್ಕೆ ಅರ್ಥವಾಗುವುದು ಕಷ್ಟವಾದರೂ ಭಾರತದ ಚಿತ್ರವಿನ್ಯಾಸ ವೈವಿಧ್ಯಕ್ಕೆ ಹೊಂದಿಕೊಂಡು, ಭಾರತೀಯರನೇಕರಿಗೆ ಆತನಲ್ಲಿ ಒಂದು ಭಗವದಂಶದ ಜ್ಯೋತಿ ಇದೆ ಎಂಬ ನಂಬಿಕೆ ಕೊಟ್ಟಿದ್ದಾನೆ. ಆತನನ್ನು ಕಂಡವರೆಲ್ಲರೂ ಆತನ ಪ್ರಭಾವಕ್ಕೆ ಒಳಗಾದರು ಆತನನ್ನು ಕಾಣದವರನೇಕರು ಆತನ ಜೀವನ ಕಥೆಯನ್ನು ಓದಿಕೇಳಿಯೇ ಆತನ ಪ್ರಭಾವಕ್ಕೆ ಒಳಗಾಗಿದ್ದಾರೆ. ಶ್ರೀರಾಮಕೃಷ್ಣನ ಮತ್ತು ಆತನ ಶಿಷ್ಯ ವಿವೇಕಾನಂದನ ಜೀವನ ಚರಿತ್ರೆಯನ್ನು ಬರೆದಿರುವ ರೋಮಾರೋಲ ಅಂಥವರಲ್ಲಿ ಒಬ್ಬ.

ವಿವೇಕಾನಂದನು ತನ್ನ ಶಿಷ್ಯ ಸೋದರರೊಂದಿಗೆ ಸೇವೆಯನ್ನೇ ಗುರಿಯಾಗಿಟ್ಟುಕೊಂಡ. ಜಾತಿ ರಹಿತವಾದ ರಾಮಕೃಷ್ಣ ಮಠವನ್ನು ಸ್ಥಾಪಿಸಿದ. ಸನಾತನ ಧರ್ಮಾಭಿಮಾನಿಯಾಗಿ, ಭಾರತೀಯ

ಸಂಸ್ಕೃತಿಯ ಮೇಲೆ ವಿಶೇಷ ಹೆಮ್ಮೆ ಇದ್ದರೂ ಜೀವನದ ಕಟು ಸಮಸ್ಯೆಗಳ ನಿವಾರಣೆಗೆ ಆತನು ತೋರಿಸಿದ ದಾರಿ ಅತಿ ನವೀನವಾದದ್ದು. ಆತನು ಸನಾತನ ಮತ್ತು ಆಧುನಿಕ ದೃಷ್ಟಿಗಳೆರಡರ ಸಮನ್ವಯಾಚಾರ್ಯನಾದನು. ಬಂಗಾಲಿ ಮತ್ತು ಇಂಗ್ಲಿಷ್ ಭಾಷೆಗಳೆರಡರಲ್ಲೂ ಆತನು ಉತ್ತಮ ಭಾಷಣಕಾರನೂ, ಬಂಗಾಲಿ ಗದ್ಯ ಮತ್ತು ಪದ್ಯ ರಚನೆಯಲ್ಲಿ ಶ್ರೇಷ್ಠ ಬರಹಗಾರನೂ ಆಗಿದ್ದನು. ಆತನು ಉನ್ನತನೂ, ಆಜಾನುಬಾಹುವೂ, ಪ್ರತಿಭಾವಂತ ಗೌರವಾನ್ವಿತ ದೃಢ ವ್ಯಕ್ತಿಯೂ ತನ್ನ ಕಾರ್ಯದಲ್ಲಿ ಮತ್ತು ವ್ಯಕ್ತಿತ್ವದಲ್ಲಿ ತುಂಬ ಆತ್ಮ ವಿಶ್ವಾಸವುಳ್ಳವನೂ ಆಗಿದ್ದನು. ಆತನಲ್ಲಿ ಭಾರತವು ಎಲ್ಲ ದೇಶಗಳಿಗೂ ಮುಂದೆ ಇರಬೇಕೆಂಬ ಮಹತ್ವಾಕಾಂಕ್ಷೆಯೂ, ಉಜ್ವಲ ಕಾರ್ಯ ತತ್ಪರತೆಯೂ, ಭಾವಾವೇಶವೂ, ಕಾರ್ಯಪಟುತ್ವವೂ ಇತ್ತು. ಅನೀತಿಯಿಂದ ಅಧೋಗತಿಗಿಳಿದಿದ್ದ ಹಿಂದೂ ಮನೋಪ್ರಪಂಚಕ್ಕೆ ಆತನು ಒಂದು ಮಹಾಕಾಯಕಲ್ಪವಾಗಿ ಅದಕ್ಕೊಂದು ಆತ್ಮಶ್ರದ್ಧೆಯನ್ನು ಕೊಟ್ಟು ಪುನರುಜ್ಜೀವನಗೊಳಿಸಿದನು. ೧೮೯೩ರಲ್ಲಿ ಚಿಕಾಗೊ ನಗರದಲ್ಲಿ ನಡೆದ ಸರ್ವಧರ್ಮ ಸಮ್ಮೇಳನದ ಸಭೆಗೆ ಹೋದನು; ಸಂಯುಕ್ತ ಸಂಸ್ಥಾನಗಳಲ್ಲಿ ಒಂದು ವರ್ಷ ಪ್ರವಾಸಮಾಡಿದನು; ಯೂರೋಪ್ ಖಂಡದಲ್ಲಿ ಸಂಚಾರಮಾಡಿ ಅಥೆನ್ಸ್ ಮತ್ತು ಕಾನ್‌ಸ್ಟಂಟಿನೋಪಲ್‌ವರೆಗೂ ಹೋಗಿ, ಈಜಿಪ್ಟ್, ಚೀನಾ ಮತ್ತು ಜಪಾನ್ ದೇಶಗಳಿಗೆ ಭೇಟಿಕೊಟ್ಟನು. ಎಲ್ಲಿಗೆ ಹೋದರೂ ತನ್ನ ವ್ಯಕ್ತಿತ್ವದಿಂದ, ಆಡಿದ ಮಾತು ಮತ್ತು ರೀತಿಗಳಿಂದ ಒಂದು ಸಣ್ಣ ಕ್ರಾಂತಿಯನ್ನೇ ಎಬ್ಬಿಸಿದನು. ಒಂದು ಬಾರಿ ಈ ಹಿಂದೂ ಸಂನ್ಯಾಸಿಯನ್ನು ನೋಡಿದವರು ಆತನ ವ್ಯಕ್ತಿತ್ವವನ್ನಾಗಲಿ, ಸಂದೇಶವನ್ನಾಗಲಿ ಮರೆಯುವುದು ಅಸಾಧ್ಯವಾಯಿತು. ಅಮೆರಿಕಾದಲ್ಲಿ "ಸುಂಟರಗಾಳಿಯ ಹಿಂದೂ" ಎಂದು ಹೆಸರಾದನು. ಪಾಶ್ಚಾತ್ಯ ಪ್ರವಾಸದಿಂದ ಆತನಲ್ಲೂ ಮಹತ್ಪರಿಣಾಮಗಳಾದವು. ಪಟ್ಟು ಹಿಡಿದು ಸಾಧಿಸುವ ಬ್ರಿಟಿಷರ ಶಕ್ತಿಯನ್ನೂ, ಅಮೆರಿಕೆಯ ಜನರ ಕಾರ್ಯಶಕ್ತಿ ಮತ್ತು ಸಮಾನದೃಷ್ಟಿಯನ್ನೂ ಮೆಚ್ಚಿದನು. "ಯಾವ ಭಾವನೆಯ ಪ್ರಚಾರಕ್ಕಾದರೂ ಪ್ರಪಂಚದಲ್ಲಿ ಇತರ ಕಡೆಗಿಂತ ಅಮೆರಿಕದಲ್ಲಿ ಉತ್ತಮ ಅವಕಾಶವಿದೆ" ಎಂದು ಭಾರತದಲ್ಲಿನ ತನ್ನ ಸ್ನೇಹಿತನೊಬ್ಬನಿಗೆ ಪತ್ರ ಬರೆದಿದ್ದಾನೆ. ಆದರೆ ಪಾಶ್ಚಾತ್ಯರ ಧಾರ್ಮಿಕ ಸ್ವರೂಪಗಳು ಆತನಮೇಲೆ ಯಾವ ಪರಿಣಾಮವನ್ನೂ ಮಾಡಲಿಲ್ಲ; ಅದಕ್ಕೆ ಪ್ರತಿಯಾಗಿ ಭಾರತೀಯ ದಾರ್ಶನಿಕ ಮತ್ತು ಧಾರ್ಮಿಕ ಹಿನ್ನೆಲೆಯಲ್ಲಿ ಆತನಿಗಿದ್ದ ವಿಶ್ವಾಸವು ಇನ್ನೂ ದೃಢವಾಯಿತು. ಎಷ್ಟೇ ಅವನತಿಗಿಳಿದಿದ್ದರೂ ಭಾರತವೇ ಆತನ ಜೀವನಜ್ಯೋತಿಯಾಯಿತು.

ವೇದಾಂತದ ಅದ್ವೈತ ದರ್ಶನದ ಏಕತ್ವ ವಾದವನ್ನು ಆತನು ಬೋಧಿಸಿದನು. ವಿಚಾರಪರ ಮಾನವಕುಲದ ಧರ್ಮ ಮುಂದೆ ಅದೊಂದೇ ಎಂದು ಪೂರ್ಣ ನಂಬಿದ್ದನು. ಏಕೆಂದರೆ ವೇದಾಂತವು ಧಾರ್ಮಿಕ ಮಾತ್ರವಲ್ಲದೆ ತರ್ಕಪೂರ್ಣವಿತ್ತು. ಬಾಹ್ಯಪ್ರಕೃತಿಯ ವೈಜ್ಞಾನಿಕ ಸಂಶೋಧನೆಗಳಿಗೆ ಅನುಗುಣವಿತ್ತು. "ಈ ವಿಶ್ವವು ವಿಶ್ವಾತೀತನಾದ ದೇವರೊಬ್ಬನಿಂದ ಸೃಷ್ಟಿಯಾದುದಲ್ಲ; ಬೇರೊಂದು ಬಾಹ್ಯ ವಿಭೂತಿಯ ಕಾರ್ಯವೂ ಅಲ್ಲ. ಅದು ಸ್ವಯಂಸೃಜಿತ, ಸ್ವಯಂ ವಿನಾಶಿತ, ಸ್ವಯಂ ಪ್ರಕಾಶಿತ. ಏಕೈಕ ಅನಂತ ಶಾಶ್ವತ ಬ್ರಹ್ಮ ಎಂದು ಹೇಳಿದ್ದಾನೆ. ವೇದಾಂತದ ಆದರ್ಶವು ಮಾನವನ ಅಸ್ತಿತ್ವ ಮತ್ತು ಆತನ ಅಂತರ್ಜನಿತ ದೈವೀ ಸ್ವಭಾವ; ಮಾನವನಲ್ಲಿ ದೈವತ್ವವನ್ನು ಕಾಣುವುದೇ ನಿಜವಾದ ದೈವಿಕ ಸಾಕ್ಷಾತ್ಕಾರ. ಸರ್ವಜೀವಿಗಳಲ್ಲಿ ಮಾನವನೇ ಶ್ರೇಷ್ಠ. ಆದರೆ ಆದರ್ಶ ವೇದಾಂತವು ನಿತ್ಯ ಜೀವನದಲ್ಲಿ ಜೀವನದ ಉಸಿರಾಗಿ, ಕಾವ್ಯಮಯವಾಗಬೇಕು. ಅತ್ಯಂತ ಜಟಿಲವಾದ ಪೌರಾಣಿಕ ಕಥೆಗಳಿಂದ ಸಾಪೇಕ್ಷ್ಯ ನೀತಿಗಳು ರೂಪುಗೊಳ್ಳಬೇಕು; ಮತ್ತು ಕಷ್ಟತಮಯೋಗ ಸಾಧನೆಯಿಂದ ಶುದ್ಧ ವೈಜ್ಞಾನಿಕ ಮತ್ತು ಪ್ರಾಯೋಗಿಕ ಮನಶ್ಶಾಸ್ತ್ರವು ಬೆಳೆಯಬೇಕು" ಎಂದಿದ್ದಾನೆ. ಭಾರತವು ತನ್ನ ಸಂಕುಚಿತ ಭಾವನೆಯಿಂದ ಅಧೋಗತಿಗಿಳಿದು, ಚಿಪ್ಪುಗಟ್ಟಿಕೊಂಡು, ಇತರ ಜನಾಂಗಗಳ ಸಂಪರ್ಕದಿಂದ ದೂರವಾಯಿತು. ಮತ್ತು ಅದರ ನಾಗರಿಕತೆಯೂ ಕ್ಷೀಣಿಸಿ, ನಿರ್ಜೀವವಾಗಿ ನಿರ್ದಿಷ್ಟವಾಯಿತು.

ಆಶಂಭದಲ್ಲಿ ವ್ಯಕ್ತಿತ್ವ ಮತ್ತು ಸ್ವಾತಂತ್ರ್ಯದ ವಿಕಾಸಕ್ಕೆ ಅವಶ್ಯಕವೂ, ಯೋಗ್ಯವೂ ಆದ ಜಾತಿ ಪದ್ಧತಿಯು ತನ್ನ ಉದ್ದೇಶಕ್ಕೆ ಪ್ರತಿಯಾಗಿ ಅವನತಿಗೊಂಡು ದೊಡ್ಡ ಪೆಡಂಭೂತವಾಗಿ ಜನತೆಯನ್ನು ತುಳಿಯಲಾರಂಭಿಸಿತು. ಜಾತಿಯು ಒಂದು ಸಾಮಾಜಿಕ ವ್ಯವಸ್ಥೆಯಾಗಿತ್ತು. ಧರ್ಮಕ್ಕೂ ಜಾತಿಗೂ ಯಾವ ಸಂಬಂಧವೂ ಇರಲಿಲ್ಲ, ಇರಬೇಕಾದ್ದೂ ಇಲ್ಲ. ಕಾಲಪರಿವರ್ತನೆಗೊಂಡಂತೆ ಸಮಾಜ ವ್ಯವಸ್ಥೆಯೂ ವ್ಯತ್ಯಾಸಗೊಳ್ಳಬೇಕು. ವಿವೇಕಾನಂದನು ತನ್ನ ಸರ್ವಶಕ್ತಿಯನ್ನೂ ಉಪಯೋಗಿಸಿ ಕರ್ಮಾಚರಣೆಯ ಬಗ್ಗೆ ನಡೆಯುತ್ತಿದ್ದ ತಾತ್ವಿಕ ಚರ್ಚೆ ಮತ್ತು ವಾದ ವಿವಾದವನ್ನೂ ಮತ್ತು ಉತ್ತಮ ಜಾತಿಯವರ ಮುಟ್ಟದರೆ—ಮೈಲಿಗೆ ಸ್ವಭಾವವನ್ನೂ, "ನಮ್ಮ ಧರ್ಮವೆಲ್ಲ ಅಡಿಗೆಯ ಮನೆಯಲ್ಲಿ; ನಮ್ಮ ದೇವರು ಇರುವದು ಅನ್ನದ ಪಾತ್ರೆಯಲ್ಲಿ; ನಮ್ಮ ಧರ್ಮ ನಾನು ಮಡಿ, ನನ್ನನ್ನು ಮುಟ್ಟಬೇಡ'' ಎನ್ನುವ ಮಡಿವಂತಿಕೆಯನ್ನೂ ಉಗ್ರವಾಗಿ ಖಂಡಿಸಿದನು.

ಆತನು ರಾಜಕೀಯದಿಂದ ದೂರನಿಂತನು. ತನ್ನ ಸಮಕಾಲೀನ ರಾಜಕೀಯ ಮುಖಂಡರನ್ನು ಆತ ಒಪ್ಪಲಿಲ್ಲ. ಆದರೂ ಜನತೆಯ ಮಟ್ಟ ಮೇಲಕ್ಕೆ ಬರಬೇಕು, ಸ್ವಾತಂತ್ರ್ಯ ಮತ್ತು ಸರ್ವ ಸಮಾನತೆ ಅತ್ಯವಶ್ಯಕವೆಂದು ಪದೇ ಪದೇ ಒತ್ತಾಯ ಮಾಡುತ್ತ ಬಂದನು. "ಜೀವನದ ಇರವು, ಬೆಳವಣಿಗೆ ಮತ್ತು ಉನ್ನತಿಗೆ ಭಾವನಾಸ್ವಾತಂತ್ರ್ಯ ಮತ್ತು ಕ್ರಿಯಾಸ್ವಾತಂತ್ರ್ಯ ಅತ್ಯವಶ್ಯ. ಅವಿಲ್ಲದಿದ್ದರೆ ಮನುಷ್ಯ ಕುಲದ ಮತ್ತು ರಾಷ್ಟ್ರದ ವಿನಾಶ ಖಂಡಿತ." ಭಾರತದ ಜನತೆಯೇ ಭಾರತವನ್ನು ರಕ್ಷಿಸಬೇಕು. ಉತ್ತಮ ಜಾತಿಯವರು ದೇಹಬಲದಲ್ಲಿ, ನೈತಿಕಬಲದಲ್ಲಿ ಜೀವಶವಗಳು. ಪಾಶ್ಚಾತ್ಯ ಪ್ರಗತಿಯನ್ನು ಭಾರತದ ಧಾರ್ಮಿಕ ಉನ್ನತಿಯ ಹಿನ್ನೆಲೆಯೊಂದಿಗೆ ಸಮನ್ವಯಗೊಳಿಸುವುದು ಆತನ ಆಶಯವಾಗಿತ್ತು. "ಭಾರತದ ಧರ್ಮದೃಷ್ಟಿಯುಳ್ಳ ಯೂರೋಪಿಯ್ನ ಸಮಾಜವನ್ನು ಕಟ್ಟಿರಿ." "ಸಮತಾಭಾವ, ಸ್ವಾತಂತ್ರ್ಯ, ಕಾರ್ಯತತ್ಪರತೆ ಮತ್ತು ಕಾರ್ಯಶಕ್ತಿಯಲ್ಲಿ ಪಾಶ್ಚಾತ್ಯರನ್ನೂ ಮೀರಿಸಿರಿ. ಆದರೆ ಧಾರ್ಮಿಕ ಸಂಸ್ಕೃತಿ ಮತ್ತು ಭಾವನೆಯಲ್ಲಿ ಹದಿನಾರಾಣೆಯ ಹಿಂದೂಗಳಾಗಿರಿ" ಎಂದನು. ಕ್ರಮೇಣ ವಿವೇಕಾನಂದನ ದೃಷ್ಟಿಯು ಅಂತರ ರಾಷ್ಟ್ರೀಯವಾಯಿತು. "ಇಪ್ಪತ್ತು ವರ್ಷಗಳ ಹಿಂದೆ ಕೇವಲ ರಾಷ್ಟ್ರೀಯವಾಗಿದ್ದ ರಾಜಕೀಯ ಮತ್ತು ಸಾಮಾಜಿಕ ಸಮಸ್ಯೆಗಳನ್ನು ಈಗ ಕೇವಲ ರಾಷ್ಟ್ರೀಯ ದೃಷ್ಟಿಯಿಂದ ಬಿಡಿಸಲು ಸಾಧ್ಯವಿಲ್ಲ. ಅವು ಬೃಹದಾಕಾರತಾಳಿ ಪೆಡಂಭೂತಗಳಾಗಿವೆ. ಅಂದರೆ ರಾಷ್ಟ್ರೀಯ ಹಿನ್ನೆಲೆಯಲ್ಲಿ ವಿಶಾಲ ದೃಷ್ಟಿಯಿಂದ ಪ್ರಯತ್ನ ಮಾಡಿದರೆ ಸಾಧ್ಯ. ಅಂತರ ರಾಷ್ಟ್ರೀಯ ಒಕ್ಕೂಟಗಳು, ಅಂತರ ರಾಷ್ಟ್ರೀಯ ಶಾಸನ ವಿಧಿಗಳು ಬೇಕೆಂಬುದೇ ಇಂದಿನ ಕೂಗು. ಇದರಿಂದ ಇಡೀ ಪ್ರಪಂಚವೇ ಒಂದು ಎನ್ನುವುದು ಎದ್ದು ತೋರುತ್ತದೆ. ಭೌತಿಕ ವಿಜ್ಞಾನದಲ್ಲಿ ಸಹ ಇದೇ ವಿಶಾಲ ದೃಷ್ಟಿಯು ಕಾಣುತ್ತದೆ." ಎಂದು ಹೇಳಿದ್ದಾನೆ. "ಇಡೀ ಪ್ರಪಂಚವೆಲ್ಲ ಹಿಂಬಾಲಿಸಿದ ಹೊರತು ಯಾವ ಪ್ರಗತಿಯೂ ಸಾಧ್ಯವಿಲ್ಲ. ಯಾವ ಸಮಸ್ಯೆಯನ್ನೂ ಸಂಕುಚಿತ ಕುಲ ಅಥವಾ ರಾಷ್ಟ್ರೀಯ ದೃಷ್ಟಿಯಿಂದ ಬಿಡಿಸಲು ಸಾಧ್ಯವಿಲ್ಲ. ಎಲ್ಲ ಭಾವನೆಯೂ ಪ್ರಪಂಚಕ್ಕೆಲ್ಲ ಅನ್ವಯಿಸುವಷ್ಟು ವಿಶಾಲವುಳ್ಳದಾಗಿರಬೇಕು, ಎಲ್ಲ ಆಶೆಗಳೂ ಇಡೀ ಮಾನವ ಕುಲವನ್ನೇ ಆವರಿಸುವಷ್ಟು ವಿಶಾಲವುಳ್ಳದಾಗಿರಬೇಕು, ಎಲ್ಲ ಜೀವನವನ್ನು ತನ್ನೊಳಗೆ ತೆಗೆದುಕೊಳ್ಳಬೇಕು." ಎಂದಿದ್ದಾನೆ. ವಿವೇಕಾನಂದನ ವೇದಾಂತ ದರ್ಶನದೃಷ್ಟಿಯಲ್ಲಿ ಇವೆಲ್ಲಕ್ಕೂ ಸ್ಥಾನವಿತ್ತು. ಭಾರತಾದ್ಯಂತ ಮೂಲೆಯಿಂದ ಮೂಲೆಗೆ ಈ ಸಂದೇಶ ಸಾರಿದನು. "ಯಾವ ವ್ಯಕ್ತಿಯೇ ಆಗಲಿ ಜನಾಂಗವೇ ಆಗಲಿ ಪರರ ಸಂಪರ್ಕವಿಲ್ಲದೆ ದೂರವಿದ್ದು ಬಾಳಲು ಸಾಧ್ಯವಿಲ್ಲ. ಯಾವ ಜನಾಂಗವೇ ಆಗಲಿ ತನ್ನ ಔನ್ನತ್ಯ, ಕಾರ್ಯ ನೀತಿ, ಅಥವ ಪವಿತ್ರತೆಗೆ ಸಮಾನವಿಲ್ಲವೆಂದು ದುರಭಿಮಾನದಿಂದ ಏಕಾಂಗಿಯಾಗಿ ಬಾಳಲು ಪ್ರಯತ್ನಪಟ್ಟದ್ದರೆ ಆ ಜನಾಂಗದ ವಿನಾಶವು ಶತಸ್ಸಿದ್ಧ". ಪ್ರಪಂಚದ ಇತರ ಜನಾಂಗಗಳಿಂದ ವಿಮುಖರಾದುದೇ ನಮ್ಮ ಅವನತಿಗೆ ಕಾರಣ. ಇತರರೊಂದಿಗೆ ಪ್ರಪಂಚದ ಸುಳಿಯಲ್ಲಿ ನುಗ್ಗಿ ಈಜುವುದೇ ಅದಕ್ಕೆ ಪರಮೌಷಧ. ಚಲನಶಕ್ತಿಯೇ ಜೀವನದ ಹೆಗ್ಗುರುತು" ಎಂದಿದ್ದಾನೆ.

"ನಾನೊಬ್ಬ ಸಮಾಜವಾದಿ. ಸಮಾಜವಾದವು ಸರ್ವಪರಿಪೂರ್ಣವೆಂದಲ್ಲ; ಆದರೆ ಕೂಳಿಲ್ಲದೆ ಸಾಯುವುದಕ್ಕಿಂತ ಅರಹೊಟ್ಟೆಲೇಸು ಇತರ ವಾದಗಳಲ್ಲಿ ಯಾವ ಹುರುಳೂ ಇಲ್ಲ. ಇದನ್ನಾದರೂ ನೋಡಿ ಪ್ರಯತ್ನಮಾಡೋಣ. ಏನು ಸಾಧನೆಯಾಗದಿದ್ದರೂ ಒಂದು ಹೊಸ ದಾರಿಯನ್ನಾದರೂ ನೋಡಿದಂತಾಗುತ್ತದೆ" ಎಂದಿದ್ದಾನೆ.

ವಿವೇಕಾನಂದನು ಅನೇಕ ವಿಷಯಗಳ ಮೇಲೆ ಮಾತನಾಡಿದ. ಆದರೆ 'ಅಭಯನಾಗಿರು, ನಿರ್ಭೀತನೂ ಬಲಶಾಲಿಯೂ ಆಗು' ಎನ್ನುವುದೇ ಆತನ ಎಲ್ಲ ಸಂದೇಶಗಳ ಸಾರವಾಗಿತ್ತು. ಮಾನವನು ಆತನಿಗೆ ಒಬ್ಬ ಕರುಣಾ ಜನಕ ಪಾಪಿಯಾಗಲಿಲ್ಲ; ದೇವಾಂಶಸಂಭೂತನಾಗಿದ್ದ. ಅವನು ಯಾವದಕ್ಕೆ ತಾನೇ ಏಕೆ ಹೆದರಬೇಕು? "ಪ್ರಪಂಚದಲ್ಲಿ ಪಾಪ ಎಂಬುದಿದ್ದರೆ ದೌರ್ಬಲ್ಯವೇ ಪಾಪ. ದೌರ್ಬಲ್ಯವನ್ನು ದೂರಮಾಡು. ದೌರ್ಬಲ್ಯವೇ ಪಾಪ, ದೌರ್ಬಲ್ಯವೇ ಮೃತ್ಯು," ಎಂದಿದ್ದಾನೆ. ಉಪನಿಷತ್ತುಗಳ ಮಹಾವಾಣಿಯೂ ಅದೇ ಇತ್ತು. ಭೀತಿಯಿಂದಲೇ ಎಲ್ಲ ಗೋಳು, ನೋವು, ಸಾವು. ಅದನ್ನು ಸಾಕಷ್ಟು ಅನುಭವಿಸಿ, ಮೆತ್ತಗಾಗಿದ್ದೇವೆ. "ನಮ್ಮ ದೇಶಕ್ಕೆ ಬೇಕಾದುದು ಕಬ್ಬಿಣದ ಮಾಂಸಖಂಡಗಳು, ಉಕ್ಕಿನ ನರಗಳು, ಯಾವುದಕ್ಕೂ ಮಣಿಯದ ದೃಢಮನಸ್ಸು; ಪ್ರಪಂಚದ ರಹಸ್ಯಗಳನ್ನು, ಗುಟ್ಟುಗಳನ್ನು ರಟ್ಟುಮಾಡುವ ತೀಕ್ಷ್ಣ ಮನಸ್ಸು; ಸಮುದ್ರ ತಳವನ್ನಾದರೂ ಭೇದಿಸಿ ಸಾವನ್ನಾದರೂ ಎದುರಿಸುವ ಕಠಿನ ಮನಸ್ಸು" ಎಂದಿದಾನೆ. ಯಂತ್ರ ತಂತ್ರಗಳನ್ನು ಪ್ರಬಲವಾಗಿ ಖಂಡಿಸಿದನು. "ಅವುಗಳಲ್ಲಿ ಮಹಾ ಸತ್ಯವು ಅಡಗಿರಬಹುದು. ಆದರೆ ಅವುಗಳ ಭಯ ನಮ್ಮನ್ನು ಸಂಪೂರ್ಣನಾಶಮಾಡಿದೆ. ದೈಹಿಕ, ಬೌದ್ಧಿಕ, ಧಾರ್ಮಿಕ, ದೌರ್ಬಲ್ಯ ಉಂಟುಮಾಡುವುದೆಲ್ಲ ವಿಷ; ನಿರ್ಜೀವ ವಸ್ತು; ಸತ್ಯಬಾಹಿರವಾದುದು. ಸತ್ಯವು ಪುಷ್ಟಿದಾಯಕ, ಸತ್ಯವೇ ನೈರ್ಮಲ್ಯ, ಸತ್ಯವೇ ಸರ್ವಜ್ಞ. ಸ್ವಲ್ಪ ತಥ್ಯವಿದ್ದರೂ ಯಂತ್ರತಂತ್ರಗಳೆಲ್ಲ ದೌರ್ಬಲ್ಯವನ್ನುಂಟುಮಾಡುವುವು. ಜಾಜ್ವಲ್ಯವೂ, ಶಕ್ತಿದಾಯಕವೂ, ಪ್ರತಿಭಾವಂತವೂ ಆದ ನಿಮ್ಮ ಉಪನಿಷತ್ತುಗಳಿಗೆ ಹಿಂದಿರುಗಿ ಜೀವಸತ್ವವನ್ನು ಹೀರುವ ಈ ಯಂತ್ರತಂತ್ರಗಳನ್ನೆಲ್ಲ ಕಿತ್ತೊಗೆಯಿರಿ. ಈ ಉಪನಿಷದ್ದರ್ಶನವನ್ನು ಅವಲಂಬಿಸಿರಿ. ಜೀವನ ಎಷ್ಟು ಸುಲಭವೋ, ಹಾಗೆಯೇ ಮಹಾ ಸತ್ಯವೂ ಪ್ರಪಂಚದ ಅತ್ಯಂತ ಸುಲಭವಸ್ತುಗಳಲ್ಲಿ ಒಂದು." "ಮೂಢನಂಬಿಕೆಗೆ ಬಲಿಯಾಗಬೇಡಿ. ಮೂಢ ನಂಬಿಕೆಯಿಂದ ತಲೆಕೆಡಿಸಿಕೊಳ್ಳುವುದಕ್ಕಿಂತ ನೀವೆಲ್ಲ ನಿರೀಶ್ವರವಾದಿಗಳಾದರೂ ನನಗೆ ಸಂತೋಷ. ಏಕೆಂದರೆ ನಿರೀಶ್ವರವಾದಿ ಜೀವಂತನಿರುತ್ತಾನೆ. ಆತನಿಂದ ಏನಾದರೂ ಪ್ರಯೋಜನ ಪಡೆಯಬಹುದು; ಆದರೆ ಮೂಢನಂಬಿಕೆಯಿಂದ ತಲೆಕೆಟ್ಟು ಮೆದುಳು ಮಿದುವಾಗಿ, ಜೀವನದ ಅವನತಿಗೆ ಆರಂಭವಾಗುತ್ತದೆ. ಮಂತ್ರವಾದಿಯ ವಿದ್ಯೆ, ಮೂಢ ನಂಬಿಕೆ ಎರಡೂ ದೌರ್ಬಲ್ಯದ ಕುರುಹು" ಎಂದಿದಾನೆ.*

---

* ಈ ಉಲ್ಲೇಖಗಳನ್ನೆಲ್ಲ ಸ್ವಾಮಿ ವಿವೇಕಾನಂದರ "ಕೊಲಂಬೋದಿಂದ ಅಲ್ಮೋರವರೆಗಿನ ಉಪನ್ಯಾಸಗಳು" (೧೯೩೩) ಎಂಬ ಗ್ರಂಥದಿಂದಲೂ, ಸ್ವಾಮಿ ವಿವೇಕಾನಂದರ ಪತ್ರಗಳು (೧೯೪೨) ಎಂಬ ಗ್ರಂಥದಿಂದಲೂ ತೆಗೆದುಕೊಳ್ಳಲಾಗಿದೆ. ಇವೆರಡನ್ನೂ ಹಿಮಾಲಯಪರ್ವತದಲ್ಲಿ ಅಲ್ಮೋರದಲ್ಲಿನ ಮಾಯಾವತಿಯ ಅದ್ವೈತ ಆಶ್ರಮದವರು ಪ್ರಕಟಿಸಿದ್ದಾರೆ. "ವಿವೇಕಾನಂದರ ಪತ್ರಗಳು" ಎಂಬ ಗ್ರಂಥದ ೩೯೦ ನೆಯ ಪುಟದಲ್ಲಿ ವಿವೇಕಾನಂದರು ತಮ್ಮ ಮುಸ್ಲಿಂ ಸ್ನೇಹಿತನೊಬ್ಬನಿಗೆ ಬರೆದಿರುವ ಪತ್ರವು ಅತ್ಯದ್ಭುತವಿದೆ. ಅದು ಈ ರೀತಿ ಇದೆ "ವೇದಾಂತವೆನ್ನಲಿ ಅಥವ ಬೇರೆಯಾವ ಅಂತವೆನ್ನಲಿ, ದರ್ಶನ ವಿಕಾಸದಲ್ಲಿ ಭಾವನೆಯಲ್ಲಿ ಅದ್ವೈತ ದರ್ಶನವೇ ಅತ್ಯಂತ ಶ್ರೇಷ್ಠವೆಂಬುದು ಸತ್ಯ.

ಎಲ್ಲ ಮತಗಳಲ್ಲಿ ಮತ್ತು ಧರ್ಮಗಳಲ್ಲಿ ಪ್ರೇಮ ಹುಟ್ಟಬೇಕಾದರೆ ಆ ಒಂದು ನಿಲುವಿನಿಂದ ಮಾತ್ರ ಸಾಧ್ಯ. ಮುಂದಿನ ಸುಸಂಸ್ಕೃತ ಮಾನವಕುಲವೆ ಧರ್ಮವಾಗಲು ಅದೊಂದರಿಂದ ಮಾತ್ರ ಸಾಧ್ಯ. ಹೀಬ್ರು ಮತ್ತು ಅರಬ್ಬಿ ಜನರಿಗಿಂತ ಪುರಾತನರಾದುದರಿಂದ ಇತರರಿಗಿಂತ ತಾವೇ ಮೊದಲು ಅದನ್ನು ಕಂಡುಹಿಡಿದವರೆಂದು ಹಿಂದೂಗಳಿಗೆ ಮನ್ನಣೆ ದೊರೆಯಬಹುದು. ಆದರೆ ಪ್ರತಿಯೊಬ್ಬ ಮಾನವನೂ ತನ್ನ ಆತ್ಮದಂತೆ ಎಂದು ನೋಡಿ ನಡೆಯುವ ಅದ್ವೈತ

ದಕ್ಷಿಣದಲ್ಲಿ ಕನ್ಯಾಕುಮಾರಿಯಿಂದ ಹಿಮಾಲಯದವರೆಗೆ ಈ ರೀತಿ ವಿವೇಕಾನಂದನ ಸಿಂಹ ಗರ್ಜನೆಯಾಯಿತು. ಈ ಪ್ರವಾಸದಲ್ಲಿಯೇ ಆಯಾಸಗೊಂಡು ತನ್ನ ೩೯ನೆಯ ವಯಸ್ಸಿನಲ್ಲಿಯೇ ೧೯೦೨ ರಲ್ಲಿ ಸ್ವಾಮಿ ವಿವೇಕಾನಂದ ಅಸ್ತಂಗತನಾದನು.

ರವೀಂದ್ರನಾಥ ಠಾಕೂರ್ ಸ್ವಾಮಿ ವಿವೇಕಾನಂದನ ಸಮಕಾಲೀನರಾದರೂ ಒಂದು ಪೀಳಿಗೆ ಮುಂದಿನವರು. ೧೯ನೆಯ ಶತಮಾನದಲ್ಲಿ ಬಂಗಾಲದ ಸಮಾಜ ಸುಧಾರಣಾ ಚಳುವಳಿಗಳಲ್ಲಿ ಠಾಕೂರ ಮನೆತನವು ಪ್ರಮುಖಪಾತ್ರ ವಹಿಸಿತ್ತು. ಶ್ರೇಷ್ಠತತ್ವ ಜ್ಞಾನಿಗಳೂ, ಲೇಖಕರೂ, ಕಲಾವಿದರೂ ಅದರಲ್ಲಿ ಇದ್ದರು. ಆದರೆ ರವೀಂದ್ರನಾಥ ಠಾಕೂರರು ಅವರೆಲ್ಲರನ್ನೂ ಮೀರಿಸಿದರು. ಅಲ್ಲದೆ ಭಾರತದಲ್ಲೆಲ್ಲ ಕ್ರಮೇಣ ಅವರು ಅದ್ವಿತೀಯ ಉನ್ನತಸ್ಥಾನ ಪಡೆದರು ಎರಡು ದಶಕಗಳ ಕಾಲ ಅವರು ಅಸಾಧಾರಣ ಕಾವ್ಯಸೃಷ್ಟಿ ಮಾಡಿ ನಮ್ಮಂತೆಯೇ ಅತ್ಯಾಧುನಿಕರಾದರು. ಅವರು ರಾಜಕೀಯದಲ್ಲಿ ಪ್ರವೇಶಿಸಲಿಲ್ಲ. ಆದರೆ ಕೇವಲ ತಮ್ಮ ಕಾವ್ಯ ಮತ್ತು ಗಾನಗಳ ಕನಸಿನ ಪ್ರಪಂಚದಲ್ಲಿಯೇ ಉಳಿಯದೆ ಭಾರತದ ಸ್ವಾತಂತ್ರ್ಯಾಭಿಲಾಷೆಯಲ್ಲಿಯೂ ತೀವ್ರ ಆಸಕ್ತರಿದ್ದು ಸಹಾನುಭೂತಿ ತೋರಿಸಿದರು. ಪದೇ ಪದೇ ತಮ್ಮ ಕಾವ್ಯ ಪ್ರಪಂಚದಿಂದ ಹೊರಬಿದ್ದು ಯಾವುದಾದರೂ ಸಮಸ್ಯೆ ಅಸಹನೀಯವಾದಾಗ ಬ್ರಿಟಿಷರನ್ನಾಗಲಿ, ತಮ್ಮ ಜನರನ್ನೇ ಆಗಲಿ ತಮ್ಮ ಅಧಿಕಾರವಾಣಿಯಿಂದ ಎಚ್ಚರಿಸಲು ಹಿಂಜರಿಯುತ್ತಿರಲಿಲ್ಲ. ಇಪ್ಪತ್ತನೆಯ ಶತಮಾನದ ಮೊದಲ ದಶಕದಲ್ಲಿ ಬಂಗಾಲದಲ್ಲಿ ವ್ಯಾಪಿಸಿದ ಸ್ವದೇಶಿ ಚಳವಳಿಯಲ್ಲಿ ಅವರು ಪ್ರಮುಖ ಪಾತ್ರ ವಹಿಸಿದರು. ಅಲ್ಲದೆ ಅಮೃತಸರದ ಕೊಲೆಯನ್ನು ವಿರೋಧಿಸಿ ತಮ್ಮ 'ನೈಟ್ ಹುಡ್' ಪದವಿಯನ್ನು ಕಿತ್ತೊಗೆದರು. ಶಿಕ್ಷಣ ಕ್ರಮದಲ್ಲಿ ಆಡಂಬರವಿಲ್ಲದೆ ಆರಂಭಿಸಿದ ರಚನಾತ್ಮಕ ಕಾರ್ಯದ ಫಲವಾಗಿ ಅವರು ಸ್ಥಾಪಿಸಿದ ಶಾಂತಿನಿಕೇತನ ಇಂದು ಭಾರತೀಯ ಸಂಸ್ಕೃತಿಗೆ ಒಂದು ಕೇಂದ್ರಸ್ಥಾನವಾಗಿದೆ. ಭಾರತದ ಜನಮನದ ಮೇಲೆ ಮುಖ್ಯವಾಗಿ ಯುವಕರಮೇಲೆ ಅವರ ಪ್ರಭಾವವು ಅದ್ಭುತವಾಯಿತು. ಅವರು ಸ್ವತಃ ಬರೆದ ಬಂಗಾಲಿಯಲ್ಲದೆ ಭಾರತದ ಇತರ ಎಲ್ಲ ಭಾಷೆಗಳ ಮೇಲೂ ಅವರ ಕೃತಿಗಳು ನವಚೈತನ್ಯವನ್ನುಂಟುಮಾಡಿವೆ. ಪೌರ್ವಾತ್ಯ ಮತ್ತು ಪಾಶ್ಚಿಮಾತ್ಯ ಆದರ್ಶಗಳನ್ನು ಸಮನ್ವಯಗೊಳಿಸಿ ಭಾರತೀಯರ ರಾಷ್ಟ್ರೀಯ ಭಾವನೆಯ ತಳಹದಿಯನ್ನು ವಿಶಾಲಗೊಳಿಸುವುದರಲ್ಲಿ ಬೇರಾವ ಭಾರತೀಯನಿಗೂ ಅವರಷ್ಟು ಸಾಧ್ಯವಾಗಲಿಲ್ಲ. ಅಂತರ ರಾಷ್ಟ್ರೀಯ ಸಹಕಾರದಲ್ಲಿ ಭರವಸೆಯಿಟ್ಟು ದುಡಿದು, ಇತರ ದೇಶಗಳಿಗೆ ಭಾರತದ ಸಂದೇಶ ಸಾರಿ, ಇತರ ದೇಶಗಳ ಸಂದೇಶವನ್ನು ತನ್ನ ಜನರಿಗೆ ತಂದು ಭಾರತದ ಶ್ರೇಷ್ಠ ಅಂತರರಾಷ್ಟ್ರೀಯ ರಾಯಭಾರಿಯಾದರು. ಇಷ್ಟೆಲ್ಲ ಅಂತರರಾಷ್ಟ್ರೀಯ ದೃಷ್ಟಿಇದ್ದರೂ ಆತನ ನಿಲುವುಮಾತ್ರ ಭಾರತದಲ್ಲಿ ಭದ್ರವಾಗಿ ನೆಲೆಸಿತ್ತು. ಆತನ ಮನಸ್ಸು ಉಪನಿಷತ್ತುಗಳ ಅಮೃತವಾಣಿಯಿಂದ ತುಂಬಿತ್ತು. ಸಾಮಾನ್ಯವಾಗಿ ವಯಸ್ಸಾಗುತ್ತ ಬಂದಂತೆ ಎಲ್ಲರೂ ಮಂದಗಾಮಿಗಳಾದರೆ ರವೀಂದ್ರರು ವಯಸ್ಸಾಗುತ್ತ ಬಂದಂತೆ ತಮ್ಮ ದೃಷ್ಟಿಯಲ್ಲಿ, ಭಾವನೆಗಳಲ್ಲಿ ಹೆಚ್ಚು ಹೆಚ್ಚು ಪ್ರಗತಿ ಪರರಾದರು. ವ್ಯಕ್ತಿಪ್ರಾಧಾನ್ಯತೆಗೆ ವಿಶೇಷ ಬೆಲೆಕೊಟ್ಟರೂ, ರಷ್ಯದ ಕ್ರಾಂತಿಯ ಮಹ

---

ಭಾವನೆಯ ಆಚರಣೆಯೂ ಹಿಂದುಗಳೆಲ್ಲರಲ್ಲೂ ಇನ್ನೂ ಬೆಳೆಯಬೇಕಾಗಿದೆ. ಆದರೆ ಅನುಭವದಿಂದ ನೋಡುವುದಾದರೆ ದೈನಂದಿನ ಸಾಮಾನ್ಯ ದಿನಚರಿಯಲ್ಲಿ ಹೆಚ್ಚು. ಸಮಾನದೃಷ್ಟಿಯನ್ನು ತೋರುವ ಜನರೆಂದರೆ ಇಸ್ಲಾಂ ಧರ್ಮೀಯರು. ಆ ನಡತೆಯ ಮೂಲತತ್ವ ಅಥವ ಒಳಗುಟ್ಟು ಸಾಮಾನ್ಯವಾಗಿ ಅವರಿಗೆ ತಿಳಿಯದೆ ಇರಬಹುದು. ಹಿಂದೂಗಳು ಅದನ್ನು ಸಾಮಾನ್ಯವಾಗಿ ಗ್ರಹಿಸಲೂ ಬಹುದು; ಆದರೆ ಆ ಉದಾರ ಆಚರಣೆಯನ್ನು ಕಾಣುವುದು ಇಸ್ಲಾಂ ಧರ್ಮದಲ್ಲಿ ಮಾತ್ರ. ನಮ್ಮ ತಾಯಿನಾಡಿಗೆ ಈ ಎರಡು ದರ್ಶನಗಳ ಸಮನ್ವಯವೇ ಇಸ್ಲಾಂ ದೇಹದಲ್ಲಿ ವೇದಾಂತದ ಜ್ಞಾನ–ಮುಕ್ತಿಮಾರ್ಗ. ಈ ಕ್ಷೋಭೆ, ಮತ್ತು ಅಂತಃಕಲಹದಿಂದ ಇಸ್ಲಾಂ ದೇಹದಲ್ಲಿ ವೇದಾಂತ ಮನಸ್ಸಿನ ತೇಜಃಪುಂಜ ಅಜೇಯ ಭಾರತವು ಉದಯವಾಗುತ್ತಿರುವ ದೃಶ್ಯವು ನನ್ನ ಕಣ್ಣಿನೆದುರು ಸುಳಿಯುತ್ತಿದೆ." ಎಂದು ಬರೆದಿದ್ದಾರೆ. ಈ ಪತ್ರ ಬರೆದುದು ೧೮೯೮ ನೇ ಜೂನ್ ೧೦ ರಲ್ಲಿ.

ಸ್ವಾಧನೆಗಳಿಗೆ ಮುಖ್ಯವಾಗಿ ವಿದ್ಯೆ, ಸಂಸ್ಕೃತಿ, ಸಾರ್ವಜನಿಕ ಆರೋಗ್ಯ ಮತ್ತು ಸರ್ವಸಮಾನತೆಗಳಲ್ಲಿ ಅವರ ಸಾಧನೆಗಳನ್ನು ಕಂಡು ಮುಗ್ಧರಾದರು. ರಾಷ್ಟ್ರೀಯ ಭಾವನೆಯು ಒಂದು ಸಂಕುಚಿತ ಭಾವನೆ. ಆದರೆ ರಾಷ್ಟ್ರೀಯ ಭಾವನೆಗೂ ಸರ್ವವ್ಯಾಪಕ ಸಾಮ್ರಾಜ್ಯ ಭಾವನೆಗೂ ಘರ್ಷಣೆಯಾದರೆ ಎಲ್ಲ ಬಗೆಯ ನಿರಾಶೆಗಳಿಗೆ ಮನೋವಿಕಲತೆಗೆ ಅವಕಾಶವಾಗುತ್ತದೆ. ಬೇರೊಂದು ಮಟ್ಟದಲ್ಲಿ ಗಾಂಧೀಜಿ ಪ್ರಯತ್ನಪಟ್ಟಂತೆ ಠಾಕೂರರು ಸಹ ತಮ್ಮ ಜನ ಸಂಕುಚಿತ ಭಾವನೆಯ ಕೀಳುದಾರಿ ಬಿಟ್ಟು ದೊಡ್ಡ ಮಾನವೀಯ ವಿಷಯಗಳ ಕಡೆ ಗಮನಕೊಡುವಂತೆ ಮಾಡಿ ಭಾರತಕ್ಕೆ ಮಹದುಪಕಾರಮಾಡಿದರು. ಠಾಕೂರರು ಭಾರತದ ಒಬ್ಬ ಮಹಾ ಮಾನವ ಪ್ರೇಮಿಗಳು.

ಇಪ್ಪತ್ತನೆಯ ಶತಮಾನದ ಮೊದಲ ಅರ್ಧದಲ್ಲಿ ಠಾಕೂರ್ ಮತ್ತು ಗಾಂಧಿ ಇಬ್ಬರೂ ಭಾರತದ ಅತ್ಯುನ್ನತ ಪ್ರಭಾವಶಾಲಿ ವ್ಯಕ್ತಿಗಳು. ಅವರಿಬ್ಬರನ್ನೂ ಪರಸ್ಪರ ಹೋಲಿಸಿ ಅವರ ಪರಸ್ಪರ ವ್ಯತ್ಯಾಸ ಅರಿತುಕೊಳ್ಳುವುದರಲ್ಲಿ ಲಾಭವಿದೆ. ವ್ಯಕ್ತಿತ್ವದಲ್ಲಿ ಮತ್ತು ಸ್ವಭಾವದಲ್ಲಿ ಇಬ್ಬರ ಮಧ್ಯೆ ಇದ್ದ ವ್ಯತ್ಯಾಸವನ್ನು ಬೇರೆ ಯಾರಲ್ಲೂ ಕಾಣಲಾರೆವು. ಶ್ರೀಮಂತ ಕಲಾವಿದನಾದರೂ, ಜನ ಸಾಮಾನ್ಯರಲ್ಲಿ ಸಹಾನುಭೂತಿ ಇಟ್ಟು ಪ್ರಜಾಪ್ರಭುತ್ವವಾದಿ ಠಾಕೂರರು ತುಂಬು ಜೀವನವನ್ನು ಒಪ್ಪಿ, ಗೀತ ನೃತ್ಯಗಳಿಂದ ಅದನ್ನು ಅನುಭವಿಸಬೇಕೆಂದು ಭಾರತೀಯ ಜೀವನಾಸಕ್ತ ಸಂಸ್ಕೃತಿ ಸಂಪ್ರದಾಯದ ಮುಖ್ಯ ಪ್ರತಿನಿಧಿಗಳಾಗಿದ್ದರು. ಭಾರತ ಜನಕೋಟಿಯಲ್ಲಿ ಜನ್ಮತಾಳಿ, ಭಾರತದ ಬಡರೈತನ ಪ್ರತಿನಿಧಿಯಾಗಿ ಗಾಂಧಿಜಿ ತ್ಯಾಗ ಮತ್ತು ಯೋಗ ಜೀವನದ ಭಾರತೀಯರ ಇನ್ನೊಂದು ಸನಾತನ ಸಂಪ್ರದಾಯದ ಪ್ರತಿನಿಧಿಗಳಾದರು. ಮಾರ್ಗ ಬೇರೆಯಾದರೂ ಇಬ್ಬರದೂ ವಿಶಾಲ ವಿಶ್ವದೃಷ್ಟಿ ಮತ್ತು ಇಬ್ಬರೂ ಪೂರ್ಣ ಭಾರತೀಯರಿದ್ದರು. ಭಾರತದ ಈ ಇಬ್ಬರು ಮಹಾ ವ್ಯಕ್ತಿಗಳ ಸಮನ್ವಯ ಮತ್ತು ಸಹ ಪೋಷಕದೃಷ್ಟಿ ಬೇರೆಯಾದರೂ ಅವರು ಈ ಎರಡು ಪ್ರತ್ಯೇಕ ದೃಷ್ಟಿಗಳ ಪ್ರತಿನಿಧಿಗಳಾದರು.

ಠಾಕೂರ್ ಮತ್ತು ಗಾಂಧಿ ನಮ್ಮನ್ನು ಆಧುನಿಕ ಯುಗಕ್ಕೆ ಕರೆತರುತ್ತಾರೆ. ನಾವು ಯೋಚಿಸುತ್ತಾ ಇದ್ದುದು ಅದಕ್ಕೂ ಮೊದಲಿನ ಕಾಲ ವಿವೇಕಾನಂದ ಮತ್ತು ಇತರರು ಭಾರತದ ಶ್ರೇಷ್ಠ ಸನಾತನ ಸಂಸ್ಕೃತಿಯ ಔನ್ನತ್ಯವನ್ನು ತೋರಿಸಿಕೊಟ್ಟು, ಅದರಲ್ಲಿ ಒಂದು ವಿಶೇಷ ಅಭಿಮಾನ ಹುಟ್ಟಿಸಿದ್ದರಿಂದ ಭಾರತದ ಜನಮನದ ಮೇಲೆ ಮುಖ್ಯವಾಗಿ ಹಿಂದುಗಳಮೇಲೆ ಯಾವ ಪರಿಣಾಮವಾಯಿತೆನ್ನುವುದನ್ನು ಯೋಚಿಸುತ್ತ ಇದ್ದೆವು. ವಿವೇಕಾನಂದನೇ ಹಿಂದಿನದನ್ನೇ ನಂಬಿ ಕುಳಿತುಕೊಳ್ಳಬೇಡಿ ಮುಂದಿನ ಭವಿಷ್ಯದ ಕಡೆ ಗಮನಿಸಿ ಎಂದು ಎಚ್ಚರಿಸುತ್ತಿದ್ದನು. "ಅಯ್ಯೋ, ದೇವರೇ ಸದಾ ಹಿಂದಿನದನ್ನೇ ನಂಬುವ ನಮ್ಮ ಜನರ ಸ್ವಭಾವದಿಂದ ಬಿಡುಗಡೆ ಎಂದು?" ಎಂದು ಒಂದು ಪತ್ರದಲ್ಲಿ ಬರೆದಿದ್ದಾನೆ. ಆದರೆ ಹಿಂದಿನ ವೈಶಿಷ್ಟ್ಯ ತೋರಿಸಿದವರೂ ಆತ ಮತ್ತು ಆತನ ಸಮಕಾಲೀನರೇ. ಅದರಲ್ಲಿ ಒಂದು ಉಜ್ವಲ ಭಾವನೆ ಇತ್ತು; ತಪ್ಪಿಸಿಕೊಳ್ಳುವುದೂ ಸುಲಭವಿರಲಿಲ್ಲ.

ಈ ರೀತಿ ಪ್ರಾಚೀನತೆಯ ಕಡೆ ನೋಡಿ ಅದರಲ್ಲಿ ಒಂದು ಸಮಾಧಾನ ಪಡೆದು ಸಂತೃಪ್ತಿಗೊಳ್ಳಲು ಪ್ರಾಚೀನ ಸಾಹಿತ್ಯ ಮತ್ತು ಇತಿಹಾಸಗಳಲ್ಲಿ ನಡೆದ ಸಂಶೋಧನೆಗಳೂ, ಪೌರ್ವಾತ್ಯ ಸಮುದ್ರಗಳಲ್ಲಿನ ಭಾರತೀಯ ವಲಸೆ ರಾಜ್ಯಗಳ ಕಥೆಗಳ ಪರಿಚಯವೂ ತುಂಬ ಸಹಾಯಕವಾಯಿತು. ಹಿಂದೂ ಮಧ್ಯಮ ವರ್ಗದವರ ಧಾರ್ಮಿಕ ಮತ್ತು ರಾಷ್ಟ್ರೀಯ ಸಂಪತ್ತನ್ನು ತೋರಿಸಿಕೊಟ್ಟು ಅವರಲ್ಲಿ ಒಂದು ಆತ್ಮವಿಶ್ವಾಸ ಹುಟ್ಟಿಸುವುದರಲ್ಲಿ ಶ್ರೀಮತಿ ಆನಿ ಬೆಸೆಂಟ್ ಉತ್ತಮ ಪ್ರಭಾವ ಬೀರಿದಳು. ಇದೆಲ್ಲದರಲ್ಲಿ ಒಂದು ತಾತ್ವಿಕ ಮತ್ತು ಧಾರ್ಮಿಕ ಭಾವನೆ ಇದ್ದರೂ ಅದರ ಹಿನ್ನೆಲೆಯು ರಾಜಕೀಯವಿತ್ತು. ಪ್ರಗತಿಪರ ಮಧ್ಯಮವರ್ಗದವರಿಗೆ ಧಾರ್ಮಿಕ ಭಾವನೆಗಿಂತ ಹೆಚ್ಚಾಗಿ ರಾಜಕೀಯ ಆಕಾಂಕ್ಷೆಯು ಬಲವಾಗಿತ್ತು; ಆದರೆ ಅವರಿಗೆ ಬೇಕಾಗಿದ್ದುದು ಒಂದು ಭದ್ರವಾದ ಬುಡ. ತಮ್ಮ ಕಾರ್ಯಶಕ್ತಿಯಲ್ಲಿ ಒಂದು ಆತ್ಮವಿಶ್ವಾಸ. ಪರದಾಸ್ಯದಿಂದ ಉಂಟಾದ ಅಪಮಾನ ಮತ್ತು ನಿರಾಶಾಭಾವನೆಯನ್ನು ನಾಶಮಾಡುವ ಒಂದು ನವ ಚೈತನ್ಯ. ರಾಷ್ಟ್ರೀಯ ಭಾವನೆಯು

ರೂಪುಗೊಳ್ಳುತ್ತಿರುವ ಪ್ರತಿಯೊಂದು ದೇಶದಲ್ಲೂ ಧಾರ್ಮಿಕ ಜಾಗ್ರತೆಯಲ್ಲದೆ ಪ್ರಾಚೀನ ಪರಾಕಾಷ್ಠೆಯ ಕಡೆ ತಿರುಗುವುದನ್ನೂ ಕಾಣುತ್ತೇವೆ. ಇರಾಣದ ಜನರು ತಮ್ಮ ಧರ್ಮಶ್ರದ್ಧೆಯಲ್ಲಿ ಸ್ವಲ್ಪವೂ ಹಿಂದೆಗೆಯದೆ ಇಸ್ಲಾಂ ಧರ್ಮಕ್ಕೆ ಮುಂಚಿನ ತಮ್ಮ ಔನ್ನತ್ಯದ ಕಡೆಗೆ ತಿರುಗಿ ಅದರ ಸ್ಮರಣೆಯಿಂದ ತಮ್ಮ ಇಂದಿನ ರಾಷ್ಟ್ರೀಯ ಭಾವನೆಯನ್ನು ಪುಷ್ಟೀಕರಿಸಿಕೊಂಡಿದ್ದಾರೆ. ಇತರ ದೇಶಗಳಲ್ಲೂ ಇದೇ ರೀತಿ ನಡೆದಿದೆ. ಪ್ರಾಚೀನ ಭಾರತದಲ್ಲಿ ಅದರ ಸಂಸ್ಕೃತಿ ಬಹುಮುಖವಿತ್ತು ಮತ್ತು ಅತ್ಯುನ್ನತವಿತ್ತು. ಹಿಂದೂಗಳು, ಮುಸ್ಲಿಮರು, ಕ್ರಿಶ್ಚಿಯನರು ಮತ್ತು ಇತರರು ತಲೆತಲಾಂತರದಿಂದ ಸಾರ್ವತ್ರಿಕವಾದ ಒಂದು ಸಮನ್ವಯ ಸಂಸ್ಕೃತಿ ಕಟ್ಟಿದರು. ಗ್ರೀಕರು ಕ್ರೈಸ್ತರಾದ ಮಾತ್ರದಿಂದ ತಮ್ಮ ಹಿರಿಯರ ಮಹೋನ್ನತ ಪ್ರಾಚೀನ ಸಂಸ್ಕೃತಿಯ ಅಭಿಮಾನ ಕಳೆದುಕೊಳ್ಳದಂತೆ, ಇಟಾಲಿಯನರು ಕ್ರೈಸ್ತರಾದ ಮಾತ್ರದಿಂದ ರೋಮನ್ ಗಣರಾಜ್ಯದ ಮತ್ತು ಅದಕ್ಕೂ ಮುಂಚಿನ ರೋಮನ್ ಚಕ್ರಾಧಿಪತ್ಯದ ಸಾಧನೆಗಳ ಪ್ರೇಮ ಕಳೆದುಕೊಳ್ಳದಂತೆ, ಭಾರತೀಯರು ಸಹ ಅನೇಕರು ಪರಮತಾವಲಂಬಿಗಳಾದರೂ ತಮ್ಮ ಹಿರಿಯರ ಈ ಸಂಸ್ಕೃತಿಯಿಂದ ದೂರರಾಗಲಿಲ್ಲ. ಭಾರತೀಯರೆಲ್ಲರೂ ಮುಸಲ್ಮಾನರೋ, ಕ್ರೈಸ್ತರೊ ಆಗಿದ್ದರೂ ಸಹ ಜನಜೀವನದ ಸಮಸ್ಯೆಗಳ ಪರಿಹಾರಕ್ಕಾಗಿ ನಡೆದ ನಾಗರಿಕ ಜೀವನದ ಮಾನಸಿಕ ಹೋರಾಟಗಳ ಬಹುಕಾಲದ ಇತಿಹಾಸದಿಂದ ದೊರೆಯುವ ಒಂದು ನಿಲವು ಮತ್ತು ಗಾಂಭೀರ್ಯ ಕೊಡಲು ಮತ್ತು ಜನತೆಯಲ್ಲಿ ಒಂದು ಉತ್ಸಾಹವನ್ನು ಪ್ರಚೋದಿಸಲು ಆ ಸಂಸ್ಕೃತಿಯು ಇದ್ದೇ ಇರುತ್ತಿತ್ತು.

ನಾವು ಒಂದು ಸ್ವತಂತ್ರರಾಷ್ಟ್ರವಾಗಿದ್ದಿದ್ದರೆ ಇಂದು ಸಹ ಎಲ್ಲರ ಭವಿಷ್ಯ ಸುಖಕ್ಕಾಗಿ ಎಲ್ಲರೂ ಒಟ್ಟಿನಲ್ಲಿ ದುಡಿದು ನಮ್ಮೆಲ್ಲರ ಪೂರ್ವೇತಿಹಾಸವನ್ನು ಸಮಾನ ಗೌರವದಿಂದ ಕಾಣುತ್ತಿದ್ದೆವು. ಮೊಗಲರ ಕಾಲದಲ್ಲಿ ಮೊಗಲ್ ಚಕ್ರವರ್ತಿಗಳು ಮತ್ತು ಅವರ ಸಹೋದ್ಯೋಗಿಗಳು ಪರಕೀಯರಾಗಿದ್ದರೂ, ಈ ಪ್ರಾಚೀನ ಸಂಸ್ಕೃತಿಯಲ್ಲಿ ಏಕೀಭವಿಸಿ ಇತರರೊಂದಿಗೆ ತಾವೂ ಭಾಗಿಗಳಾಗಲ ಬಯಸಿದರು. ಆದರೆ ಐತಿಹಾಸಿಕ ಆಕಸ್ಮಿಕಗಳು ಮತ್ತು ವಿಧಾನಗಳು ಮಾನವ ನೀತಿ ಮತ್ತು ದೌರ್ಬಲ್ಯಗಳಿಂದ ಪುಷ್ಟಿಗೊಂಡು ಬೇರೊಂದು ಪರಿಣಾಮ ಮಾಡಿದವು. ಆ ವ್ಯತ್ಯಾಸಗಳಿಂದ ಸಾಮಾನ್ಯ ಬೆಳವಣಿಗೆ ಕುಂಠಿತವಾಯಿತು. ಪಾಶ್ಚಿಮಾತ್ಯದ ಪ್ರಭಾವ, ಔದ್ಯೋಗಿಕ ಮತ್ತು ಆರ್ಥಿಕ ಪರಿವರ್ತನೆಗಳ ಪ್ರಭಾವದಿಂದ ರೂಪುಗೊಂಡ ಹೊಸ ಮಧ್ಯಮ ವರ್ಗದ ಹಿಂದೂ ಮುಸ್ಲಿಮರಿಬ್ಬರಲ್ಲೂ ಒಂದು ಸಾಮಾನ್ಯ ಹಿನ್ನೆಲೆ ದೊರೆಯಬಹುದಾಗಿತ್ತು. ಸ್ವಲ್ಪಮಟ್ಟಿಗೆ ಅದು ಸಾಧ್ಯವೂ ಆಯಿತು. ಆದರೆ ಅದುವರೆಗೆ ಕಾಣದ ಅಂತರವೂ ಹೆಚ್ಚಾಯಿತು. ಶ್ರೀಮಂತರು ಮತ್ತು ಅರೆ ಶ್ರೀಮಂತರಿಗೂ ಜನಸಾಮಾನ್ಯಕ್ಕೂ ಬಹುಮಟ್ಟಿಗೆ ಕಡಮೆ ಇದ್ದ ಅಂತರ ಇನ್ನೂ ಆಳವಾಯಿತು. ಜನಸಾಮಾನ್ಯರಲ್ಲಿ ಹಿಂದೂ ಮುಸ್ಲಿಮರಲ್ಲಿ ಯಾವ ವಿಶೇಷ ವ್ಯತ್ಯಾಸವೂ ಇರಲಿಲ್ಲ. ಹಿಂದಿನ ಆಳರಸರು ಒಂದು ಸಾಮಾನ್ಯ ಜೀವನರೀತಿಯನ್ನೂ ಮಟ್ಟವನ್ನೂ ಏರ್ಪಡಿಸಿದ್ದರು. ಆದರೂ ಒಂದೇ ಸಂಸ್ಕೃತಿ, ಒಂದೇ ಬಗೆಯ ಆಚಾರವ್ಯವಹಾರಗಳು, ಹಬ್ಬ ಹುಣ್ಣಿಮೆಗಳು ಸರ್ವಸಾಮಾನ್ಯವಿದ್ದವು. ಹೊಸ ಮಧ್ಯಮ ವರ್ಗದ ಮಾನಸಿಕ ಭಾವನೆಯು ಮಾತ್ರ ಬೇರೆಯಾಯಿತು; ಕ್ರಮೇಣ ಇನ್ನೂ ಅನೇಕ ವಿಧದಲ್ಲಿ ಅವರ ಮಾರ್ಗಗಳು ಬೇರೆಯಾದವು.

ಆರಂಭದಲ್ಲಿ ಮುಸ್ಲಿಮರಲ್ಲಿ ಈ ಮಧ್ಯಮ ವರ್ಗವೇ ಇರಲಿಲ್ಲ. ಮುಸ್ಲಿಮರು ಪಾಶ್ಚಿಮಾತ್ಯ ವಿದ್ಯಾಭ್ಯಾಸದಿಂದ ದೂರನಿಂತುದೂ ವ್ಯಾಪಾರ ಮತ್ತು ಕೈಗಾರಿಕೆಯಲ್ಲಿ ಹಿಂದುಳಿದುದೂ, ಹಳೆಯ ನವಾಬಗಿರಿ ಪದ್ಧತಿಯನ್ನೇ ಅವಲಂಬಿಸಿದುದೂ, ಮುಂತಾದ ಕಾರಣಗಳಿಂದ ಹಿಂದೂಗಳು ಮುಂದುವರಿಯಲು ಒಂದು ಅವಕಾಶದೊರೆತು, ಅದರಿಂದ ಹಿಂದುಗಳಿಗೆ ಲಾಭ ಪಡೆಯುವದಕ್ಕೂ, ಆ ಲಾಭವನ್ನು ಭದ್ರಪಡಿಸಿಕೊಳ್ಳುವುದಕ್ಕೂ ಅವಕಾಶ ದೊರೆಯಿತು. ಮುಸ್ಲಿಮರು ಇತರ ಕಡೆಗಳಿಗಿಂತ ಪಂಜಾಬಿನಲ್ಲಿ ಹೆಚ್ಚಾಗಿ ಪಾಶ್ಚಾತ್ಯ ವಿದ್ಯಾಭ್ಯಾಸದ ಕಡೆ ಗಮನ ಕೊಟ್ಟುದರಿಂದ ಪಂಜಾಬ್ ಒಂದು ಬಿಟ್ಟು ಉಳಿದೆಲ್ಲ ಕಡೆ ಬ್ರಿಟಿಷರ ನೀತಿಯು ಹಿಂದೂಗಳ ಪರವಾಗಿತ್ತು ಮತ್ತು ಮುಸ್ಲಿಮ

ರಿಗೆ ವಿರೋಧವಾಗಿತ್ತು. ಆದರೆ ಬ್ರಿಟಿಷರು ಪಂಜಾಬನ್ನು ಆಕ್ರಮಣ ಮಾಡುವ ಮೊದಲೇ ಹಿಂದೂಗಳು ಇತರ ಕಡೆಗಳಲ್ಲಿ ಪ್ರಬಲರಾಗಿದ್ದರು. ಪಂಜಾಬಿನಲ್ಲಿ ಹಿಂದೂಗಳಿಗೂ ಮುಸ್ಲಿಮರಿಗೂ ಸಮಾನ ಅವಕಾಶವಿದ್ದರೂ ಹಿಂದೂಗಳ ಆರ್ಥಿಕ ಸ್ಥಿತಿ ಉತ್ತಮವಿತ್ತು. ಹಿಂದೂಗಳಲ್ಲಿ, ಮುಸ್ಲಿಮರ ಶ್ರೀಮಂತರಲ್ಲಿ ಮತ್ತು ಜನಸಾಮಾನ್ಯರಲ್ಲಿ ಎಲ್ಲರಲ್ಲೂ ವಿದೇಶೀಯರ ಮೇಲೆ ವಿರೋಧಭಾವನೆಯು ಸಾಮಾನ್ಯವಾಗಿತ್ತು. ೧೮೫೭ ನೆಯ ದಂಗೆಯಲ್ಲಿ ಎಲ್ಲರೂ ಭಾಗಿಗಳಾದರೂ ಬ್ರಿಟಿಷರು ಅದನ್ನು ಅಡಗಿಸಿದಾಗ ಹಿಂದೂಗಳಿಗಿಂತ ತಾವೇ ಹೆಚ್ಚು ಕಷ್ಟಕ್ಕೊಳಗಾದವರೆಂಬ ಭಾವನೆ ಮುಸ್ಲಿಮರಲ್ಲಿ ಹುಟ್ಟಿತು. ಅದಕ್ಕೆ ಸ್ವಲ್ಪ ನ್ಯಾಯವಾದ ಕಾರಣವೂ ಇತ್ತು. ದೆಹಲಿಯ ಚಕ್ರಾಧಿಪತ್ಯವನ್ನು ಪುನಃ ಸ್ಥಾಪಿಸುವ ಎಲ್ಲ ಕಲ್ಪನೆ ಅಥವ ಕನಸುಗಳು ಈ ದಂಗೆಯಿಂದ ಮಾಯವಾದವು. ಬ್ರಿಟಿಷರು ಭಾರತದಲ್ಲಿ ಕಾಲಿಡುವ ಮೊದಲೇ ಅನೇಕ ವರ್ಷಗಳ ಮುಂಚೆ ಆ ಚಕ್ರಾಧಿಪತ್ಯವು ನಾಶವಾಗಿತ್ತು. ಮರಾಠರು ಅದನ್ನು ನುಚ್ಚುನೂರು ಮಾಡಿ ದೆಹಲಿಯ ಹತೋಟಿಯನ್ನು ತಮ್ಮ ಕೈಲಿಟ್ಟಿದ್ದರು. ರಣಜಿತಸಿಂಗ್ ಪಂಜಾಬದಲ್ಲಿ ಆಳುತ್ತಿದ್ದನು. ಬ್ರಿಟಿಷರ ಯಾವ ಮಧ್ಯಸ್ಥಿಕೆಯೂ ಇಲ್ಲದೆ ಉತ್ತರದಲ್ಲಿ ಮೊಗಲರ ಆಡಳಿತ ಮುಗಿದಿತ್ತು. ದಕ್ಷಿಣದಲ್ಲೂ ಅದು ಒಡೆದಿತ್ತು. ಆದರೂ ದೆಹಲಿಯ ಅರಮನೆಯಲ್ಲಿ ಮಾತ್ರ ಆಟದ ಬೊಂಬೆಯಾಗಿ ಒಬ್ಬ ಚಕ್ರವರ್ತಿ ಇದ್ದನು. ಮೊದಲು ಮರಾಠರ ಅನಂತರ ಬ್ರಿಟಿಷರ ಅಧೀನನಾಗಿ ಅವರಿಂದ ಮಾಸಾಶನ ಪಡೆಯುತ್ತಿದ್ದರೂ ಒಂದು ದೊಡ್ಡ ರಾಜವಂಶದ ಸಂಕೇತವಾಗಿದ್ದನು. ಆತನ ಅಸಹಾಯಕತೆ ಅಥವ ಇಷ್ಟ ಯಾವುದನ್ನೂ ಲೆಕ್ಕಿಸದೆ ದಂಗೆಕಾರರು ಆತನ ಹೆಸರನ್ನು ಉಪಯೋಗಿಸಿಕೊಂಡರು. ದಂಗೆ ಅಡಗುವುದೆಂದರೆ ಈ ಸಂಕೇತವೂ ನಾಶವಾದಂತೆ.

ಈ ದಂಗೆಯ ಘೋರದಿನಗಳಿಂದ ಜನರು ನಿಧಾನವಾಗಿ ಚೇತರಿಸಿಕೊಂಡಾಗ ಅವರ ಮನಸ್ಸು ಶೂನ್ಯವಾಗಿತ್ತು. ಆ ಶೂನ್ಯತೆಯನ್ನು ಹೇಗಾದರೂ ಸರಿತುಂಬೋಣವೆಂದು ಮನಸ್ಸು ಹಾತೊರೆಯುತ್ತಿತ್ತು. ಬ್ರಿಟಿಷರ ಆಳ್ವಿಕೆಯು ಅನಿವಾರ್ಯವಾಯಿತು. ಆದರೆ ಹಿಂದಿನ ಸಂಪರ್ಕ ಪೂರ್ಣ ಕಡಿದು ಹೊಸ ಆಡಳಿತ ಬಂದುದು ಮಾತ್ರವಲ್ಲದೆ ಸಂಶಯ, ಮನೋವಿಕಾರ, ಮತ್ತು ಆತ್ಮ ವಿಶ್ವಾಸದ ಪೂರ್ಣನಾಶ ಪ್ರಾಪ್ತವಾದವು. ದಂಗೆಗೆ ಮುಂಚೆ ಅನೇಕ ವರ್ಷಗಳ ಮೊದಲೇ ಈ ಸಂಪರ್ಕ ಕಡಿದು ಹೋಗಿ ಬಂಗಾಲ ಮತ್ತು ಇತರಕಡೆಗಳಲ್ಲಿ ಈ ಮೊದಲೇ ತಿಳಿಸಿರುವಂತೆ ಅನೇಕ ಮಾನಸಿಕ ಕ್ರಾಂತಿ ಎದ್ದಿದ್ದವು. ಆದರೆ ಮುಸ್ಲಿಮರು ಹಿಂದೂಗಳಿಗಿಂತ ಹೆಚ್ಚು ಸಂಕುಚಿತ ಮನೋಭಾವದವರಾಗಿ ಪಾಶ್ಚಾತ್ಯ ವಿದ್ಯೆಯಿಂದ ದೂರಸರಿದು ಇನ್ನೂ ತಮ್ಮ ನವಾಬಗಿರಿ ಸ್ಥಾಪಿಸುವ ಕನಸಿನ ಪ್ರಪಂಚದಲ್ಲಿ ಇದ್ದರು. ಈಗ ಆ ಕನಸಿನ ಕನ್ನಡಿ ಒಡೆದು ಹೋಯಿತು. ಆದರೂ ಏನಾದರೂ ಒಂದು ಆಸರೆ ಅವಶ್ಯವಿತ್ತು. ನೂತನ ವಿದ್ಯಾಭ್ಯಾಸದಿಂದ ದೂರನಿಂತರು. ಕ್ರಮೇಣ ಸರ್ ಸೈಯದ್ ಅಹಮದ್‌ಖಾ಼ ದೀರ್ಘ ಚರ್ಚೆಮಾಡಿ, ಬಹುಕಷ್ಟದಿಂದ ಅವರನ್ನು ಇಂಗ್ಲೀಷ್ ವಿದ್ಯಾಭ್ಯಾಸದ ಕಡೆ ತಿರುಗಿಸಿ ಅಲಿಘಡದ ಕಾಲೇಜನ್ನು ಆರಂಭಿಸಿದನು. ಸರಕಾರಿ ನೌಕರಿಗೆ ಸೇರಲು ಅದೊಂದೇ ಮಾರ್ಗವಾಯಿತು. ಪ್ರಬಲ ಅಧಿಕಾರದ ಆಸೆಯಿಂದ ಹಿಂದಿನ ಕಹಿನೆನಪು ಮತ್ತು ವಿರೋಧ ಮರೆತವು. ಹಿಂದೂಗಳು ವಿದ್ಯಾಭ್ಯಾಸದಲ್ಲಿ ಬಹಳ ಮುಂದುವರಿದಿದ್ದುದೂ ಮತ್ತು ಸರಕಾರಿ ನೌಕರಿಯನ್ನು ಹೀಯಾಳಿಸುತ್ತಿದ್ದುದೂ ಹಿಂದುಗಳಂತೆ ತಾವೂ ಮುಂದುವರಿಯಬೇಕೆಂಬ ಬಲವತ್ತರ ಆಸೆಗೆ ಕಾರಣವಾಯಿತು. ಪಾರಸಿಗಳೂ ಹಿಂದೂಗಳೂ ಕೈಗಾರಿಕೆಯಲ್ಲಿ ತುಂಬ ಪ್ರಾಮುಖ್ಯತೆ ಗಳಿಸಿದರು. ಆದರೆ ಮುಸ್ಲಿಮರ ದೃಷ್ಟಿ ಎಲ್ಲ ಸರಕಾರದ ಅಧಿಕಾರದ ಕಡೆ ತಿರುಗಿತು. ಆದರೆ ಬಹಳ ಸ್ವಲ್ಪ ಜನರಲ್ಲಿದ್ದ ಈ ಹೊಸ ದೃಷ್ಟಿಯಿಂದ ಸಹ ಅವರ ಸಂಶಯ ನಿವಾರಣೆಯಾಗಿ ಮನಸ್ಸು ತಿಳಿಗಟ್ಟಲಿಲ್ಲ. ಹಿಂದೂಗಳು ಅಂಥ ಸಂದಿಗ್ಧ ಸನ್ನಿವೇಶಗಳಲ್ಲಿ ತಮ್ಮ ಪ್ರಾಚೀನ ಸಂಸ್ಕೃತಿಯ ಕಡೆಗೆ ತಿರುಗಿ ಅದರಿಂದ ಸಂಘಟಿತರಾದರು. ಸನಾತನ ದರ್ಶನ, ಸಾಹಿತ್ಯ, ಕಲೆ ಮತ್ತು ಇತಿಹಾಸಗಳಿಂದ ಸಮಾಧಾನ ಪಡೆದರು. ರಾಮಮೋಹನರಾಯ್, ದಯಾ

ನಂದ, ವಿವೇಕಾನಂದ ಮತ್ತು ಇತರರನೇಕರು ಹೊಸ ವಿಚಾರ ಮಂಥನವನ್ನು ಆರಂಭಿಸಿದ್ದರು. ಇಂಗ್ಲಿಷ್ ಸಾಹಿತ್ಯಲಹರಿಯಿಂದ ಅಮೃತಪಾನಮಾಡಿ ಪುಷ್ಟಿಗೊಂಡಿದ್ದರೂ ಪ್ರಾಚೀನ ಭಾರತದ ಋಷಿಗಳ ಮತ್ತು ಮಹಾಪುರುಷರ ಆದರ್ಶ ಸಾಧನೆಗಳು, ಉನ್ನತ ಭಾವನೆಗಳು, ಬಾಲ್ಯದಿಂದ ಕಿವಿಗೆ ಬಿದ್ದು ಸ್ಫೂರ್ತಿಗೊಳಿಸಿದ ಅವರ ಇತಿಹಾಸ ಮತ್ತು ಸಂಪ್ರದಾಯಗಳು ಅವರ ಮನಸ್ಸನ್ನು ತುಂಬಿದ್ದವು.

ಈ ಸಂಪ್ರದಾಯಗಳು ಮುಸ್ಲಿಂ ಜನತೆಗೂ ಚಿರಪರಿಚಿತವಿದ್ದುದರಿಂದ ಅವರಿಗೂ ಸಾಮಾನ್ಯ ವಿದ್ದವು. ಆದರೆ ಈ ಸಂಪ್ರದಾಯಗಳಿಗೂ ಹಿಂದೂಧರ್ಮಕ್ಕೂ ಸಂಬಂಧವಿದ್ದ ಕಾರಣ ಅವುಗಳ ಸಂಪರ್ಕ ಮತ್ತು ಪ್ರೋತ್ಸಾಹ ಇಸ್ಲಾಂ ಧರ್ಮಕ್ಕೆ ವಿರುದ್ಧವೆಂಬ ಭಾವನೆ ಮುಸ್ಲಿಂ ಉನ್ನತವರ್ಗ ದವರಲ್ಲಿ ಬೆಳೆಯಲಾರಂಭಿಸಿತು. ತಮ್ಮ ರಾಷ್ಟ್ರೀಯ ಮೂಲವನ್ನು ಹೊರಗಡೆ ಹುಡುಕಲಾರಂಭಿಸಿ ದರು. ಭಾರತದಲ್ಲಿ ಅಫ್ಘನ್ ಮತ್ತು ಮೊಗಲರ ಕಾಲದಕಡೆ ನೋಡತೊಡಗಿದರು. ಆದರೆ ಇದರಿಂದ ಅವರ ಮನಸ್ಸಿನ ದಾಹ ತೃಪ್ತಿಗೊಳ್ಳಲಿಲ್ಲ. ಆ ಕಾಲಗಳೆರಡೂ ಹಿಂದೂ ಮುಸ್ಲಿಮರಿಬ್ಬರಿಗೂ ಸಾಮಾನ್ಯವಿದ್ದವು. ಅದು ಪರಕೀಯರ ಧಾಳಿ ಎಂಬ ಭಾವನೆಯೇ ಹಿಂದೂಗಳ ಮನಸ್ಸಿನಲ್ಲಿರಲಿಲ್ಲ. ಮೊಗಲ ರಾಜರುಗಳನ್ನು ಭಾರತದ ರಾಷ್ಟ್ರೀಯ ರಾಜರುಗಳೆಂದೇ ಭಾವಿಸಿದ್ದರು. ಅವರಂಗಜೇಬ ನೊಬ್ಬ ಮಾತ್ರ ಈ ಭಾವನೆಗೆ ಹೊರತಾದನು. ಹಿಂದೂಗಳು ಬಹಳ ಮೆಚ್ಚಿದ ಅಕ್ಬರನನ್ನು ಈಚೆಗೆ ಮುಸ್ಲಿಮರು ಅಲ್ಲಗಳೆಯುತ್ತಿದ್ದಾರೆ. ಕಳೆದವರ್ಷ ಅಕ್ಬರನ ಹುಟ್ಟುಹಬ್ಬದ ನಾಲ್ಕನೆಯ ಶತ ಮಾನೋತ್ಸವವನ್ನು ಅನೇಕ ಮುಸ್ಲಿಮರು ಸಹ ಸೇರಿ ಎಲ್ಲರೂ ಆಚರಿಸಿದರೂ ಭಾರತದ ಐಕ್ಯತೆಯ ಲಾಂಛನನೆಂಬ ಕಾರಣದಿಂದ ಮುಸ್ಲಿಂಲೀಗ್ ಆ ಉತ್ಸವದಲ್ಲಿ ಭಾಗವಹಿಸಲಿಲ್ಲ.

ಭಾರತೀಯ ಮುಸ್ಲಿಂ ಮಧ್ಯಮವರ್ಗದ ಕೆಲವರು ಈ ರೀತಿ ತಮ್ಮ ಸಂಸ್ಕೃತಿಮೂಲವನ್ನು ಬೇರೆಕಡೆ ಹುಡುಕಲಾರಂಭಿಸಿ ಇಸ್ಲಾಂ ಧರ್ಮವು ಬಾಗದಾದ್, ಸ್ಪೇನ್, ಕಾನ್‌ಸ್ಟಾಂಟನೋಪಲ್, ಮಧ್ಯ ಏಷ್ಯ ಮತ್ತು ಇತರ ಭಾಗಗಳನ್ನು ಜಯಿಸಿ ಹಿಂದು ಸಂಘಟಿತ ಶಕ್ತಿಯಾಗಿದ್ದ ಕಾಲದ ಇತಿ ಹಾಸದ ಕಡೆ ತಿರುಗಿದರು. ಇತಿಹಾಸದಲ್ಲಿ ಆಸಕ್ತಿ ಸದಾ ಇದ್ದೇ ಇತ್ತು; ಮತ್ತು ನೆರೆಯ ಮುಸ್ಲಿಂ ದೇಶಗಳೊಡನೆ ಸಂಪರ್ಕವೂ ಇತ್ತು. ಮಕ್ಕಾಕ್ಕೆ ಹಾಜ್‌ಯಾತ್ರಿಕರು ಅನೇಕರು ಹೋಗಿ ಬರುತ್ತಿದ್ದುದರಿಂದ ಅನೇಕ ದೇಶಗಳ ಮುಸ್ಲಿಮರು ಅಲ್ಲಿ ಕಲೆಯುತ್ತಿದ್ದರು. ಆದರೆ ಈ ಎಲ್ಲ ಸಂಪರ್ಕವೂ ತಾತ್ಕಾಲಿಕವೂ, ಅತ್ಯಲ್ಪವೂ ಇದ್ದುದರಿಂದ ಭಾರತೀಯ ಮುಸ್ಲಿಮರ ಸಾಮಾನ್ಯ ದೃಷ್ಟಿಯು ವ್ಯತ್ಯಾಸವಾಗದೆ ಭಾರತದ ಒಳಗೇ ಇತ್ತು. ದೆಹಲಿಯ ಅಫ್ಘನ್ ದೊರೆಗಳು ಅದರಲ್ಲೂ ಮುಖ್ಯವಾಗಿ ಮಹಮ್ಮದ್ ತಗಲಖ್ ಕೈರೊಪಟ್ಟಣದ ಖಲೀಫನನ್ನು ಒಪ್ಪಿದ್ದನು. ಕಾನ್‌ಸ್ಟಾಂಟಿ ನೋಪಲಿನ ಆಟೊಮನ್ ಚಕ್ರವರ್ತಿಗಳು ಅನಂತರ ಖಲೀಫರಾದರೂ ಭಾರತದ ಮುಸ್ಲಿಮರು ಅವರನ್ನು ಒಪ್ಪಿರಲಿಲ್ಲ. ಭಾರತದ ಮೊಗಲ್ ಚಕ್ರವರ್ತಿಗಳು ಭಾರತದ ಹೊರಗೆ ಯಾವ ಖಲೀಫ ನನ್ನಾಗಲಿ, ಧರ್ಮಗುರುವನ್ನಾಗಲಿ ಒಪ್ಪಲಿಲ್ಲ. ಮೊಗಲ್ ಚಕ್ರಾಧಿಪತ್ಯವು ಸಂಪೂರ್ಣ ಕುಸಿದು ಬಿದ್ದಮೇಲೆ ಮಾತ್ರ ಹತ್ತೊಂಭತ್ತನೆಯ ಆದಿಭಾಗದಲ್ಲಿ ಭಾರತದ ಮಸೀದಿಗಳಲ್ಲಿ ತುರ್ಕಿಯ ಸುಲ್ತಾನನ ಹೆಸರು ಕೇಳಿ ಬರಲಾರಂಭಿಸಿತು. ಸಿಪಾಯಿದಂಗೆಯ ನಂತರ ಇದಕ್ಕೆ ಹೆಚ್ಚು ಪುರಸ್ಕಾರ ದೊರೆಯಿತು.

ಈ ರೀತಿ ಭಾರತೀಯ ಮುಸಲ್ಮಾನರು ಇತರ ದೇಶಗಳ ಇಸ್ಲಾಂಧರ್ಮದ ಪ್ರಾಚೀನ ಉನ್ನತಿ ಸ್ಮರಣೆಯಿಂದ ಮತ್ತು ಏಕೈಕ ಸ್ವತಂತ್ರ ಮುಸ್ಲಿಂ ರಾಜ್ಯವಾಗಿ ಉಳಿದಿದ್ದ ತುರ್ಕಿಯ ಸ್ಮರಣೆಯಿಂದ ಮನಸ್ಸಿಗೆ ಸ್ವಲ್ಪ ಸಮಾಧಾನ ಪಡೆಯಲೆತ್ನಿಸಿದರು. ಈ ಭಾವನೆಗೂ ಭಾರತೀಯ ರಾಷ್ಟ್ರೀಯ ಭಾವನೆಗೂ ಯಾವ ವಿರೋಧವೂ ಇರಲಿಲ್ಲ. ಅಡ್ಡಿಯೂ ಆಗಲಿಲ್ಲ. ಇಸ್ಲಾಂ ಇತಿಹಾಸವು ಅನೇಕ ಹಿಂದುಗಳಿಗೆ ತಿಳಿದಿದ್ದು ಅವರ ಗೌರವಕ್ಕೆ ಪಾತ್ರವಾಗಿತ್ತು. ಏಷ್ಯದಲ್ಲಿ ತುರ್ಕಿ ಜನರು ಯೂರೋ ಪಿಯನರ ಆಕ್ರಮಣಕ್ಕೆ ಬಲಿಯಾಗುತ್ತಿದ್ದುದರಿಂದ ತುರ್ಕಿಯ ಮೇಲೆ ಸಹಾನುಭೂತಿಯಿತ್ತು.

ಆದರೆ ಆ ದೃಷ್ಟಿಕೋಣವೇ ಬೇರೆ; ಮುಸ್ಲಿಮರಿಗೆ ಒಂದು ಮಾನಸಿಕ ಅವಶ್ಯಕತೆ ಇದ್ದಂತೆ ಹಿಂದೂಗಳಿಗೆ ಇರಲಿಲ್ಲ.

ದಂಗೆಯನಂತರ ಭಾರತೀಯ ಮುಸ್ಲಿಮರು ಯಾವ ಕಡೆ ತಿರುಗೋಣವೆಂದು ಅನುಮಾನ ಗ್ರಸ್ತರಾಗಿದ್ದರು. ಬ್ರಿಟಿಷ್ ಸರಕಾರವು ಅವರನ್ನು ಉದ್ದೇಶಪಟ್ಟು ಹಿಂದೂಗಳಿಗಿಂತ ಹೆಚ್ಚಾಗಿ ತುಳಿದಿದ್ದರು. ಮಧ್ಯಮ ವರ್ಗದವರೂ ಅನುಕೂಲಸ್ಥರೂ ಯಾವ ವರ್ಗದಿಂದ ಬೆಳೆಯಬಹುದಾಗಿತ್ತೋ ಆ ವರ್ಗದ ಜನರೇ ಹೆಚ್ಚು ಕಷ್ಟಕ್ಕೀಡಾಗಿದ್ದರು. ತೀರ ನೆಲಹತ್ತಿ ಅಧೋಗತಿಗಿಳಿದು ಬ್ರಿಟಿಷರ ಪರಮ ವಿರೋಧಿಗಳೂ ತುಂಬ ಧರ್ಮಾಂಧರೂ ಆದರು. ೧೮೭೦ ರ ನಂತರ ಬ್ರಿಟಿಷರ ನೀತಿ ವ್ಯತ್ಯಾಸವಾಗಿ ಮುಸ್ಲಿಮರ ಕಡೆ ಒಲಿಯಲು ಆರಂಭಿಸಿತು. ಒಬ್ಬರನ್ನೊಬ್ಬರ ಮೇಲೆ ಎತ್ತಿಕಟ್ಟಿ ಇಬ್ಬರನ್ನೂ ತಮ್ಮ ಹತೋಟಿಯಲ್ಲಿಟ್ಟುಕೊಳ್ಳಬೇಕೆಂಬ ಬ್ರಿಟಿಷ್ ಭೇದ ನೀತಿಯೇ ಈ ವ್ಯತ್ಯಾಸಕ್ಕೆ ಕಾರಣ. ಈ ಕಾರ್ಯ ನೀತಿಯಲ್ಲಿ ಸರ್ ಸೈಯದ್ ಅಹಮದ್‌ಖಾನ್ ಪ್ರಮುಖ ಪಾತ್ರ ವಹಿಸಿದನು. ಮುಸ್ಲಿಮರನ್ನು ಮೇಲಕ್ಕೆತ್ತಲು ಬ್ರಿಟಿಷ್ ಸಹಕಾರದಿಂದ ಮಾತ್ರ ಸಾಧ್ಯ ಎಂದು ಮನಗಂಡನು. ಇಂಗ್ಲಿಷ್ ವಿದ್ಯೆಯನ್ನು ಅವರಲ್ಲಿ ಹರಡಿ ಅವರ ಸಂಕುಚಿತ ಕೂಪದೊಳಗಿಂದ ಅವರನ್ನು ಹೊರಗೆಳೆಯಲು ಕಾತರನಾದನು. ಯೂರೋಪಿಯನ್ ನಾಗರಿಕತೆಯನ್ನು ಕಂಡು ಬೆರಗಾಗಿದ್ದನು. ಆತನು ಯೂರೋಪಿನಿಂದ ಬರೆದ ಕಾಗದಗಳನ್ನು ಓದಿದರೆ ಮುಗ್ಧನಾಗಿ ಹುಚ್ಚು ಹಿಡಿದಂತೆ ಬರೆದಿದ್ದಾನೆ.

ಸರ್ ಸೈಯದ್ ಒಳ್ಳೆಯ ಉತ್ಸಾಹಶಾಲಿ, ಸಮಾಜ ಸುಧಾರಕ ಇಂದಿನ ಆಧುನಿಕ ವಿಜ್ಞಾನ ದೃಷ್ಟಿಗೂ ಇಸ್ಲಾಂ ಧರ್ಮಕ್ಕೂ ಸಮನ್ವಯಗೊಳಿಸಲು ಬಯಸಿದ. ಯಾವ ಮೂಲಭಾವನೆಯನ್ನೂ ಟೀಕಿಸದೆ ಧರ್ಮಗ್ರಂಥಕ್ಕೆ ತರ್ಕಬದ್ಧ ವಿವರಣೆಕೊಟ್ಟು ಇವನ್ನೂ ಸಾಧಿಸಿದ. ಇಸ್ಲಾಂ ಧರ್ಮಕ್ಕೂ ಕ್ರೈಸ್ತಮತಕ್ಕೂ ಇರುವ ಮೂಲ ಹೋಲಿಕೆಗಳನ್ನು ತೋರಿಸಿದ. ಮುಸ್ಲಿಮರ ಪರದಪದ್ಧತಿ ಮತ್ತು ಸ್ತ್ರೀಯರನ್ನು ಪ್ರತ್ಯೇಕವಿಡುವ ಪದ್ಧತಿಯನ್ನು ವಿರೋಧಿಸಿದ. ತುರ್ಕಿಯ ಖಲೀಫನೊಂದಿಗೆ ಒಪ್ಪಂದಕ್ಕೆ ಬರಲು ನಿರಾಕರಿಸಿದ. ಎಲ್ಲಕ್ಕಿಂತ ಹೆಚ್ಚಾಗಿ ನೂತನ ವಿದ್ಯಾಭ್ಯಾಸ ಪದ್ಧತಿಯ ಪ್ರಚಾರದಲ್ಲಿ ಹೆಚ್ಚು ಆಸಕ್ತಿವಹಿಸಿದ. ರಾಷ್ಟ್ರೀಯ ಚಳುವಳಿಯ ಆರಂಭವಾದೊಡನೆ ಗಾಭರಿಗೊಂಡು ಬ್ರಿಟಿಷರ ವಿರೋಧ ಕಟ್ಟಿಕೊಂಡರೆ ತನ್ನ ವಿದ್ಯಾಪ್ರಚಾರಕ್ಕೆ ಅವರಿಂದ ಸಹಾಯ ದೊರಯುವುದಿಲ್ಲವೆಂದು ಸಂಶಯಗೊಂಡ. ಆ ಸಹಾಯ ಆತನಿಗೆ ಅವಶ್ಯವೆನಿಸಿತು. ಆದ್ದರಿಂದ ಮುಸ್ಲಿಮರಲ್ಲಿನ ಬ್ರಿಟಿಷರ ವಿರೋಧ ಕಡಮೆಮಾಡಿ ಆಗತಾನೆ ರೂಪುಗೊಳ್ಳುತ್ತಿದ್ದ ಅಖಿಲ ಭಾರತ ರಾಷ್ಟ್ರೀಯ ಮಹಾಸಭೆಗೆ ಮುಸ್ಲಿಮರು ಸೇರದಂತೆ ಪ್ರೇರೇಪಿಸಿದ. "ಭಾರತೀಯ ಮುಸಲ್ಮಾನರನ್ನು ಬ್ರಿಟಿಷ್ ದೊರೆಯ ಯೋಗ್ಯ ಮತ್ತು ಉಪಯುಕ್ತ ರಾಜಭಕ್ತರನ್ನಾಗಿ ಮಾಡುವುದು" ಅಲಿಘಡ ಕಾಲೇಜಿನ ಒಂದು ಉದ್ದೇಶ್ಯವಾಗಿತ್ತು. ರಾಷ್ಟ್ರೀಯ ಮಹಾಸಭೆಯಲ್ಲಿ ಹಿಂದೂಗಳೇ ಹೆಚ್ಚು ಇದ್ದರಿಂದು ಅದರ ಮೇಲೆ ಆತನ ವಿರೋಧವೇನೂ ಇರಲಿಲ್ಲ. ಆ ಕಾಲದಲ್ಲಿ ಅದು ತುಂಬ ಸಾಧುವಾಗಿದ್ದರೂ ರಾಜಕೀಯದಲ್ಲಿ ಬಹಳ ಉಗ್ರವಾದಿಯೆಂದು ಅದನ್ನು ವಿರೋಧಿಸಿದ. ದಂಗೆಯಲ್ಲಿ ಮುಸ್ಲಿಮರೆಲ್ಲರೂ ಭಾಗವಹಿಸಲಿಲ್ಲವೆಂದೂ, ಅನೇಕರು ಬ್ರಿಟಿಷರಿಗೆ ಭಕ್ತಿಯುತರಾಗಿದ್ದರೆಂದೂ ತೋರಿಸಲು ಯತ್ನ ಮಾಡಿದ. ಹಿಂದುಗಳ ವಿರೋಧಿಯಾಗಿಯೂ ಇರಲಿಲ್ಲ; ಮತಾಂಧತೆಯಿಂದ ಪ್ರತ್ಯೇಕತಾವಾದಿಯೂ ಆಗಿರಲಿಲ್ಲ. ಭಿನ್ನಧರ್ಮಕ್ಕೂ ರಾಜಕೀಯ ಅಥವ ರಾಷ್ಟ್ರೀಯ ಭಾವನೆಗೂ ಯಾವ ಸಂಬಂಧವೂ ಇಲ್ಲವೆಂದು ಪದೇ ಪದೇ ಹೇಳುತ್ತಿದ್ದ. "ನೀವು ಒಂದೇ ದೇಶದ ಮಕ್ಕಳಲ್ಲವೇ? ಹಿಂದೂ ಅಥವ ಮುಸಲ್ಮಾನನೆಂದರೆ ಧಾರ್ಮಿಕವ್ಯತ್ಯಾಸ ಮಾತ್ರ ತೋರುತ್ತದೆ. ಈ ದೇಶದ ಹಿಂದೂಗಳು, ಮುಸಲ್ಮಾನರು, ಕ್ರೈಸ್ತರು ಎಲ್ಲರೂ ಒಂದೇ ಜನಾಂಗದವರು" ಎಂದಿದ್ದಾನೆ.

ಸರ್ ಸೈಯದ್ ಅಹಮದ್‌ಖಾನನ ಪ್ರಭಾವವೆಲ್ಲ ಮುಸ್ಲಿಂ ಉನ್ನತವರ್ಗದ ಕೆಲವರಲ್ಲಿ ಮಾತ್ರ. ಪಟ್ಟಣ ಅಥವ ಹಳ್ಳಿಗಳ ಸಾಮಾನ್ಯ ಜನರ ಮೇಲೆ ಯಾವ ಪರಿಣಾಮವನ್ನೂ ಮಾಡ

ಲಿಲ್ಲ. ಈ ಜನತೆಗೂ ಉನ್ನತ ಮುಸ್ಲಿಮ ವರ್ಗಕ್ಕೂ ಬಹಳ ಅಂತರವಿತ್ತು. ಹಿಂದೂ ಜನತೆಗೂ ಅವರಿಗೂ ಸಮೀಪ ಬಾಂಧವ್ಯವಿತ್ತು. ಮುಸ್ಲಿಮ್ ಉನ್ನತವರ್ಗದ ಕೆಲವರು ಮೊಗಲರ ಕಾಲದ ರಾಜಮನೆತನಗಳ ಸಂಬಂಧೀಕರಿದ್ದರು. ಮುಸ್ಲಿಮ್ ಜನತೆಗೆ ಅಂತಹ ಹಿನ್ನೆಲೆ ಅಥವ ಸಂಪ್ರದಾಯ ಯಾವುದೂ ಇರಲಿಲ್ಲ. ಅವರಲ್ಲನೇಕರು ಹಿಂದೂ ಸಮಾಜದ ಕೆಳಮಟ್ಟದಿಂದ ಮತಾಂತರ ಹೊಂದಿದ ಬಡವರೂ ಜೀತದಾಳುಗಳೂ ಆದ ಜನರಾಗಿ ಬಹುಕಷ್ಟದಲ್ಲಿದ್ದರು.

ಸರ್ ಸೈಯದ್ ಸಂಗಡ ಕೆಲವು ದಕ್ಷರೂ ಪ್ರತಿಭಾಶಾಲಿಗಳೂ ಆದ ಸಹಾಯಕರಿದ್ದರು. ಆತನ ತರ್ಕಬದ್ಧ ಧರ್ಮವಿವರಣೆಯಲ್ಲಿ ಸೈಯದ್ ಚಿರಾಗ್ ಅಲಿ ಮತ್ತು ನವಾಬ್ ಮೊಹಸೀನ್ ಉಲ್‌ಮುಲ್ಕ್ ಬೆಂಬಲನಿಂತರು. ಆತನ ವಿದ್ಯಾಪ್ರಚಾರ ಕಾರ್ಯದಲ್ಲಿ ಮುನ್ಷಿ ಕರಾಮತ್ ಅಲಿ, ದೆಹಲಿಯ ಮುನ್ಷಿ ಜಕಉಲ್ಲಾ, ಡಾಕ್ಟರ್ ನಜೀರ್ ಅಹಮದ್, ಮೌಲಾನ ಷಿಬ್ಲಿನುಮಾನಿ ಉರ್ದು ಸಾಹಿತ್ಯದಲ್ಲಿ ಉನ್ನತ ವ್ಯಕ್ತಿಯಾದ ಕವಿಹಾಲಿ ಅವನಿಗೆ ಸಹಾಯಕರಾದರು. ಮುಸ್ಲಿಮರಲ್ಲಿ ಇಂಗ್ಲಿಷ್ ವಿದ್ಯಾಭ್ಯಾಸದ ಅಭಿರುಚಿಯನ್ನು ಹುಟ್ಟಿಸುವುದರಲ್ಲಿ ಮತ್ತು ಅವರನ್ನು ರಾಜಕೀಯ ಚಳುವಳಿಯಿಂದ ದೂರ ಇಡುವುದರಲ್ಲಿ ಸರ್‌ಸೈಯದ್ ಕೃತಕೃತ್ಯನಾದನು. ಮುಸ್ಲಿಂ ಶಿಕ್ಷಣ, ಸಮ್ಮೇಳನ ಆರಂಭಿಸಿ ಮುಸ್ಲಿಂ ಮಧ್ಯಮವರ್ಗದ ಯುವಕರನ್ನು ಸರಕಾರದ ಕೆಲಸಕ್ಕೆ ಮತ್ತು ಇತರ ಉದ್ಯೋಗಗಳ ಕಡೆ ಆಕರ್ಷಿಸಿದನು.

ಆದರೂ ಅನೇಕ ಪ್ರಮುಖ ಮುಸ್ಲಿಂ ವ್ಯಕ್ತಿಗಳು ರಾಷ್ಟ್ರೀಯ ಮಹಾ ಸಭೆಯನ್ನು ಸೇರಿದರು. ಬ್ರಿಟಿಷ್ ನೀತಿ ಸ್ಪಷ್ಟ ಮುಸ್ಲಿಂಪರವಾಯಿತು. ರಾಷ್ಟ್ರೀಯ ಚಳವಳಿ ವಿರೋಧಿಸಿದ ಮುಸ್ಲಿಮರೆಲ್ಲರೂ ಬ್ರಿಟಿಷರ ಕೃಪಾಕಟಾಕ್ಷಕ್ಕೆ ಪಾತ್ರರಾದರು. ಇಪ್ಪತ್ತನೆಯ ಶತಮಾನದಲ್ಲಿ ಮುಸ್ಲಿಮ್ ಯುವಕ ವರ್ಗದಲ್ಲಿ ರಾಷ್ಟ್ರೀಯ ಭಾವನೆ ಮತ್ತು ರಾಜಕೀಯ ಜಾಗ್ರತಿ ಹೆಚ್ಚು ಬೆಳೆಯಿತು. ಇದನ್ನು ತಡೆಗಟ್ಟಿ, ಸುರಕ್ಷಿತಮಾರ್ಗದಲ್ಲಿ ಅದನ್ನು ಒಯ್ಯಲು ಬ್ರಿಟಿಷರ ಪ್ರೋತ್ಸಾಹದಿಂದ ಬ್ರಿಟಿಷರ ಮುಖ್ಯ ಸಹಾಯಕನಾದ ಆಗಾಖಾನನ ನೇತೃತ್ವದಲ್ಲಿ ೧೯೦೬ ರಲ್ಲಿ ಮುಸ್ಲಿಂಲೀಗ್ ಸ್ಥಾಪನೆಯಾಯಿತು. ಬ್ರಿಟಿಷ್ ಸರ್ಕಾರದಲ್ಲಿ ರಾಜಭಕ್ತಿ ಮತ್ತು ಮುಸ್ಲಿಮರ ಹಿತರಕ್ಷಣವೆ ಲೀಗಿನ ಎರಡು ಮುಖ್ಯ ಉದ್ದೇಶಗಳು.

ದಂಗೆಯ ನಂತರ ಕಾಲದ ಪ್ರಮುಖ ಮುಸ್ಲಿಂ ವ್ಯಕ್ತಿಗಳೆಲ್ಲರೂ ಹಿಂದಿನ ಪದ್ಧತಿಯಂತೆ ಶಿಕ್ಷಣಪಡೆದು ಅನಂತರ ಸ್ವಲ್ಪ ಇಂಗ್ಲಿಷ್ ಕಲಿತು ಹೊಸಭಾವನೆಗಳ ಪ್ರಭಾವಕ್ಕೆ ಒಳಗಾದವರು. ಆದ್ದರಿಂದ ಹೊಸ ಇಂಗ್ಲಿಷ್ ವಿದ್ಯಾಭ್ಯಾಸಪದ್ಧತಿಯ ಫಲವಾಗಿ ಅವರಲ್ಲಿ ಪ್ರಮುಖ ವ್ಯಕ್ತಿಗಳು ಯಾರೂ ಹುಟ್ಟಿರಲಿಲ್ಲ. ಆ ಶತಮಾನದ ಶ್ರೇಷ್ಠ ಸಾಹಿತಿ ಮತ್ತು ಮುಖ್ಯಕವಿ ಘಲೀಬ್. ಆದರೆ ದಂಗೆಗೆ ಮುಂಚೆಯೇ ಆತನು ಮಧ್ಯವಯಸ್ಸಿನವನಾಗಿದ್ದನು.

ಇಪ್ಪತ್ತನೆಯ ಶತಮಾನದ ಆದಿಯಲ್ಲಿ ಮುಸ್ಲಿಂ ವಿದ್ಯಾವಂತರಲ್ಲಿ ಎರಡು ಮಾರ್ಗಾನುಸರಣೆ ಕಂಡುಬಂದುವು. ಯುವಕರು ಮುಖ್ಯವಾಗಿ ರಾಷ್ಟ್ರೀಯ ಭಾವನೆಯಕಡೆ ತಿರುಗಿದುದು ಒಂದು; ಹಿಂದಿನ ಭಾರತೀಯ ಸಂಸ್ಕೃತಿಯನೆಲ್ಲ ಕಿತ್ತೊಗೆದು ಇಂದಿನದನ್ನೂ ಸ್ವಲ್ಪ ಬಿಟ್ಟು ತುರ್ಕಿಯ ಖಲೀಫ ಮತ್ತು ಇತರ ಇಸ್ಲಾಂ ದೇಶಗಳ ಕಡೆ ನೋಡುವ ದೃಷ್ಟಿ ಇನ್ನೊಂದು. ತುರ್ಕಿಯ ಸುಲ್ತಾನ ಹಮೀದನಿಂದ ಪ್ರೋತ್ಸಾಹಪಡೆದ ಈ ಬೃಹದಿಸ್ಲಾಂ ಚಳವಳಿಗೆ ಭಾರತೀಯ ಮುಸಲ್ಮಾನರಲ್ಲಿ ಉನ್ನತವರ್ಗದವರಿಂದ ಸ್ವಲ್ಪ ಪ್ರೋತ್ಸಾಹ ದೊರೆಯಿತು. ಆದರೂ ಸರ್‌ಸೈಯದ್ ಇದನ್ನು ವಿರೋಧಿಸಿ ಭಾರತೀಯರು ಯಾರೂ ತುರ್ಕಿಯಲ್ಲಾಗಲಿ, ಸುಲ್ತಾನಪದವಿಯಲ್ಲಾಗಲಿ ಆಸಕ್ತಿ ತೋರಬಾರದೆಂದು ಬರೆದನು. ತುರ್ಕಿಯ ಯುವಕ ಚಳವಳಿಯು ಭಾರತದಲ್ಲಿ ಭಿನ್ನ ಪರಿಣಾಮ ಮಾಡಿತು. ಭಾರತದ ಮುಸ್ಲಿಮರು ಅನೇಕರು ಮೊದಲು ಮೊದಲು ಅದನ್ನು ಸಂಶಯದೃಷ್ಟಿಯಿಂದ ಕಂಡರು. ಯುರೋಪಿಯನ್ ಕುತಂತ್ರಗಳಿಗೆ ಸುಲ್ತಾನನು ಬಲಿಬೀಳದೆ ಬಲವಾದ ಕೋಟೆಯಂತಿದ್ದಾನೆಂದು ಆತನಲ್ಲಿ ಇನ್ನು ಕೆಲವರು ಸಹಾನುಭೂತಿ ತೋರಿದರು. ಆದರೆ ಇತರರು-ಮುಖ್ಯವಾಗಿ

ಅಬುಲ್ ಕಲಾಮ ಅಜಾದ್—ತುರ್ಕಿಯ ಯುವಜನ ಚಳುವಳಿಯನ್ನೂ ಅವರ ರಾಜಕೀಯ ಮತ್ತು ಸಾಮಾಜಿಕ ಸುಧಾರಣೆಯ ಧೋರಣೆಯನ್ನೂ ಸ್ವಾಗತಿಸಿದರು. ೧೯೧೧ ನೆಯ ಟ್ರಿಪೋಲಿ ಯುದ್ಧದಲ್ಲಿ ಇಟಲಿಯು ಏಕಾ ಏಕಿ ತುರ್ಕಿಯನ್ನು ಮುತ್ತಿಗೆ ಹಾಕಿದಾಗಲೂ, ಪುನಃ ೧೯೧೨ ಮತ್ತು ೧೯೧೩ ನೆಯ ಬಾಲ್ಕನ್ ಯುದ್ಧದಲ್ಲಿ ತುರ್ಕಿಯ ಮೇಲೆ ಧಾಳಿ ,ಮಾಡಿದಾಗಲೂ ಭಾರತೀಯ ಮುಸ್ಲಿಮರು ತುರ್ಕಿಯ ಮೇಲೆ ಅಸಾಧಾರಣ ಸಹಾನುಭೂತಿ ತೋರಿಸಿದರು. ಈ ಸಹಾನುಭೂತಿ ಮತ್ತು ಕುತೂಹಲ ಎಲ್ಲ ಭಾರತೀಯರಲ್ಲೂ ಇತ್ತು. ಆದರೆ ಮುಸ್ಲಿಮರಲ್ಲಿ ಇದು ತೀಕ್ಷ್ಣ ವೈಯಕ್ತಿಕ ಪ್ರಶ್ನೆಯಾಯಿತು. ಯೂರೋಪಿನಲ್ಲಿ ಉಳಿದ ಒಂದೇ ಮುಸ್ಲಿಂ ರಾಜ್ಯಕ್ಕೆ ವಿಪತ್ತು ಒದಗಿತ್ತು. ಮುಸ್ಲಿಮರ ಧರ್ಮದ ಮೂಲ ಸ್ಥಾನಕ್ಕೇ ಕೊಡಲಿಯ ಪೆಟ್ಟು ಬಿದ್ದಿತ್ತು. ಡಾಕ್ಟರ್ ಎಮ್. ಎ. ಅನ್ಸಾರಿ ತುರ್ಕಿಗೆ ಒಂದು ವೈದ್ಯ ಸಹಾಯ ಪಡೆಯನ್ನೊಯ್ದರು. ಕಡುಬಡವರೂ ಹಣ ಕೊಟ್ಟರು. ಭಾರತೀಯ ಮುಸ್ಲಿಮರ ಉದ್ಧಾರಕ್ಕೆ ಎಂದು ಕೇಳಿದ್ದರೆ ಬರುವುದಕ್ಕಿಂತ ಹೆಚ್ಚು ಹಣ ಸಂಗ್ರಹವಾಯಿತು. ಮೊದಲನೆಯ ಪ್ರಪಂಚ ಯುದ್ಧ ದಲ್ಲಿ ತುರ್ಕಿಯು ಎದುರು ಪಕ್ಷದ ಕಡೆ ಸೇರಿದ್ದರಿಂದ ಮುಸ್ಲಿಮರಿಗೆ ಬಹಳ ಸಂದಿಗ್ಧ ಒದಗಿತು. ನಿಸ್ಸಹಾಯಕ ರಾಗಿ ಅವರು ಏನು ಮಾಡುವುದಕ್ಕೂ ಸಾಧ್ಯವಾಗಲಿಲ್ಲ. ಯುದ್ಧಾನಂತರ ಅವರ ಹುದುಗಿದ್ದ ಕೋಪವೆಲ್ಲ ಖಿಲಾಫತ್ ಚಳವಳಿಯಲ್ಲಿ ಪರ್ಯವಸಾನಗೊಂಡಿತು.

೧೯೧೨ರಲ್ಲಿ ಭಾರತದಲ್ಲಿ ಉರ್ದುಭಾಷೆಯಲ್ಲಿ ಆಲ್‌ಹಿಲಾಲ್ ಮತ್ತು ಇಂಗ್ಲಿಷಿನಲ್ಲಿ 'ಕಾಮರೇಡ್' ಎಂಬ ಎರಡು ವಾರ ಪತ್ರಿಕೆಗಳು ಜನ್ಮತಾಳಿದ್ದರಿಂದ ಮುಸ್ಲಿಂ ಮನೋಭಾವನೆಯು ರೂಪಗೊಳ್ಳಲು ಹೊಸ ಅವಕಾಶ ಉಂಟಾಯಿತು. ಅಬುಲ್ ಕಲಾಮ ಅಜಾದ್ ಆಲ್-ಹಿಲಾಲ್ ಪತ್ರಿಕೆಯನ್ನು ಸ್ಥಾಪಿಸಿದರು. ಆಗ ಅವರಿಗೆ ೨೪ ವರ್ಷ ಮಾತ್ರ ವಯಸ್ಸು. ಕೈರೋ ನಗರದ ಅಲ್ ಅಜಹರ್ ವಿಶ್ವವಿದ್ಯಾ ನಿಲಯದ ಪದವಿಯನ್ನು ಪಡೆದು ಇಪ್ಪತ್ತು ವರ್ಷಕ್ಕೆ ಮುಂಚೆಯೇ ಅರಬ್ಬಿ ಮತ್ತು ಪಾರಸಿ ಭಾಷೆಗಳಲ್ಲಿ ಪೂರ್ಣ ಪಾಂಡಿತ್ಯ ಪಡೆದಿದ್ದರು. ಇದರ ಜೊತೆಗೆ ಭಾರತದ ಆಚೆಯ ಇಸ್ಲಾಂ ಪ್ರಪಂಚದ ಮತ್ತು ಅಲ್ಲಿನ ಸುಧಾರಣಾ ಚಳವಳಿಗಳ ಜ್ಞಾನವನ್ನೂ ಯೂರೋಪಿನ ಚಳವಳಿಗಳ ಜ್ಞಾನವನ್ನೂ ಪಡೆದಿದ್ದರು. ತರ್ಕ ಪೂರ್ಣ ದೃಷ್ಟಿ ಇತ್ತು. ಇಸ್ಲಾಂ ಧರ್ಮದ ಕಥೆ ಮತ್ತು ಇತಿಹಾಸದ ಆಳವಾದ ಪಾಂಡಿತ್ಯವಿತ್ತು. ಆದ್ದರಿಂದ ಇಸ್ಲಾಂ ಧರ್ಮಕ್ಕೆ ತರ್ಕಪೂರ್ಣ ಅರ್ಥವಿವರಣೆ ಕೊಟ್ಟರು. ಇಸ್ಲಾಂ ಸಂಸ್ಕೃತಿಯು ಅವರಿಗೆ ಕರತಲಾಮಲಕ ವಾಗಿದ್ದುದರಿಂದಲೂ, ಈಜಿಪ್ಟ್, ತುರ್ಕಿ, ಸಿರಿಯ, ಪಾಲಸ್ಟೈನ್, ಇರಾಕ್, ಇರಾಣಗಳಲ್ಲಿನ ಪ್ರಮುಖ ಮುಸ್ಲಿಂ ನಾಯಕರ ಮತ್ತು ಸುಧಾರಕರ ವ್ಯಕ್ತಿಶಃ ಪರಿಚಯವಿದ್ದುದರಿಂದಲೂ ಅಲ್ಲಿನ ರಾಜಕೀಯ ಮತ್ತು ಸಾಂಸ್ಕೃತಿಕ ಚಳವಳಿಗಳು ಅವರ ಮೇಲೆ ಅಗಾಧ ಪರಿಣಾಮ ಮಾಡಿದುವು. ಅವರ ಬರೆವಣಿಗೆಗಳಿಂದ ಬೇರಾವ ಭಾರತೀಯ ಮುಸಲ್ಮಾನನಿಗೂ ದೊರೆಯದ ಪರಿಚಯ ಇವರಿಗೆ ಇಸ್ಲಾಂ ಪ್ರಪಂಚದಲ್ಲಿ ಸಿಕ್ಕಿತು. ತುರ್ಕಿಯ ಯುದ್ಧಗಳಿಂದ ಅವರ ಕುತೂಹಲ ಮತ್ತು ಸಹಾನುಭೂತಿ ಇಮ್ಮಡಿಯಾಯಿತು. ಆದರೂ ಅವರ ನಿಲುವು ಇತರ ಮುಸಲ್ಮಾನ ಮುಖಂಡರ ಹಳೆಯ ನಿಲುವಿಗಿಂತ ನವೀನವಾದುದು. ಅವರ ದೃಷ್ಟಿ ವಿಶಾಲವೂ ಕಾರಣಬದ್ಧವೂ ಆಗಿದ್ದು ದರಿಂದ ಹಳೆಯ ಮುಸ್ಲಿಂ ಮುಖಂಡರ ನವಾಬಗಿರಿಯ ಸಂಕುಚಿತ ಮತೀಯ ಮತ್ತು ಪ್ರತ್ಯೇಕ ಮನೋ ಭಾವದ ದೃಷ್ಟಿಯಿಂದ ದೂರವಾಗಿ ಅವರು ಭಾರತದ ರಾಷ್ಟ್ರೀಯ ಮನೋಭಾವಕ್ಕೆ ಹೊಂದಿಕೊಂಡರು. ತುರ್ಕಿಯಲ್ಲಿ ಮತ್ತು ಇತರ ಇಸ್ಲಾಂ ರಾಷ್ಟ್ರಗಳಲ್ಲಿ ರಾಷ್ಟ್ರೀಯ ಚಳವಳಿ ರೂಪುಗೊಂಡಿದ್ದನ್ನು ಕಣ್ಣಾರಕಂಡಿದ್ದರು. ಆ ಜ್ಞಾನವನ್ನೆಲ್ಲ ಭಾರತಕ್ಕೆ ಧಾರೆ ಎರೆದರು. ಭಾರತದರಾಷ್ಟ್ರೀಯ ಚಳವಳಿಯಲ್ಲಿ ಅದೇ ಪುನರುಕ್ತಿ ಕಂಡರು. ಭಾರತದ ಇತರ ಮುಸ್ಲಿಮರು ಯಾರಿಗೂ ಹೊರಗಿನ ಈ ಚಳುವಳಿಗಳ ಪರಿಚಯ ಇರಲಿಲ್ಲ. ನವಾಬಗಿರಿಯ ಪ್ರಪಂಚದಲ್ಲಿಯೇ ಇರುತ್ತ ಅಲ್ಲಿಯ ಪರಿವರ್ತನೆಗೆ ಕುರುಡರಾಗಿದ್ದರು. ಅವರಿಗೆ ಇದ್ದುದು ಧರ್ಮಾಂಧತೆ ಒಂದೇ. ಆ ಧರ್ಮದ ಕಟ್ಟಿಗೆ ಬಿದ್ದು ತುರ್ಕಿಯ ಮೇಲೆ ಸಹಾನುಭೂತಿ ತೋರಿದರು. ಆದರೆ ತುರ್ಕಿಯ ರಾಷ್ಟ್ರೀಯ ಅಥವ ಮತಾತೀತ ಚಳವಳಿ ಅವರಿಗೆ ಸರಿಬೀಳಲಿಲ್ಲ.

ಅವರ ವಾರಪತ್ರಿಕೆಯಾದ 'ಅಲ್-ಹಿಲಾಲ್'ನಲ್ಲಿ ಅಬುಲ್ ಕಲಾಮ ಅಜಾದ್‌ರ ಭಾಷೆಯೇ ನವೀನವಿತ್ತು. ಭಾವನೆ ಮತ್ತು ನಿಲುವಿನಲ್ಲಿ ಮಾತ್ರವಲ್ಲದೆ ಪದ ಜೋಡಣೆಯಲ್ಲಿ ಸಹ ನವೀನತೆ ಇತ್ತು.

ಅಜಾದರ ಶೈಲಿ ಗಡಸಾಗಿಯೂ, ಶಕ್ತಿ ಪೂರ್ಣವೂ ಇದ್ದು, ಪಾರಸಿ ಹಿನ್ನೆಲೆ ಇದ್ದುದರಿಂದ ಸ್ವಲ್ಪ ಕಠಿನವೂ ಇತ್ತು. ಹೊಸ ಭಾವನೆಗಳಿಗೆ ಹೊಸ ಪದ ಸಮುಚ್ಚಯವನ್ನೂ ಉಪಯೋಗ ಮಾಡಿದರು. ಮತ್ತು ಇಂದಿನ ಉರ್ದು ಭಾಷೆಗೆ ಹೊಸ ರೂಪು ಕೊಡುವುದರಲ್ಲಿ ಪರಿಣಾಮಕಾರಿ ಯತ್ನಮಾಡಿದವರೂ ಅವರೇ. ಹಳೆಯ ಮಂದಪಕ್ಷದ ಮುಸಲ್ಮಾನ ನಾಯಕರಿಗೆ ಇದೆಲ್ಲ ಸರಿಬೀಳದೆ ಅಜಾದರ ಅಭಿಪ್ರಾಯಗಳನ್ನೂ, ನಿಲುವನ್ನೂ ಖಂಡಿಸಿದರು. ಆದರೆ ಅವರಲ್ಲಿ ಯಾವ ಪಂಡಿತನಿಗೂ ಧಾರ್ಮಿಕ ವಿಷಯಗಳಲ್ಲಿ, ಇಸ್ಲಾಂ ಸಂಪ್ರದಾಯದಲ್ಲಿ ಅಜಾದರ ಎದುರು ನಿಂತು ವಾದಮಾಡಲು, ಚರ್ಚಿಮಾಡಲು ಧೈರ್ಯವಿರಲಿಲ್ಲ. ಅಜಾದರ ಜ್ಞಾನವು ಅವರೆಲ್ಲರ ಜ್ಞಾನಕ್ಕಿಂತ ಅತ್ಯಧಿಕವಿತ್ತು. ಪ್ರಾಚೀನ ಪಾಂಡಿತ್ಯ, ಹದಿನೆಂಟನೆಯ ಶತಮಾನದ ತಾರ್ಕಿಕ ಮನೋಭಾವ ಮತ್ತು ಆಧುನಿಕ ದೃಷ್ಟಿ ಎಲ್ಲವೂ ಅವರಲ್ಲಿ ಸಮರಸಗೊಂಡಿತ್ತು.

ಹಳಬರಲ್ಲಿ ಅಜಾದರ ಲೇಖನಗಳನ್ನು ಮೆಚ್ಚಿದವರೂ ಕೆಲವರಿದ್ದರು. ಮೌಲಾನ ಷಿಬ್ಲಿನುಮಾನಿ ಅವರಲ್ಲಿ ಒಬ್ಬ. ಆತನು ಸ್ವತಃ ತುರ್ಕಿಯನ್ನು ನೋಡಿ ಬಂದಿದ್ದ ಮತ್ತು ಸರ್ ಸೈಯದ್ ಅಹಮದ್ ಖಾನ್‌ರೊಂದಿಗೆ ಅಲಿಘಡ ಕಾಲೇಜನ್ನು ಸ್ಥಾಪಿಸಿದವರಲ್ಲಿ ಒಬ್ಬನಾಗಿದ್ದ. ಆದರೆ ಅಲಿಘಡ ಕಾಲೇಜಿನ ಸಂಪ್ರದಾಯವೇ ಬೇರೆ ಇತ್ತು. ಅಲ್ಲಿ ರಾಜಕೀಯ ಮತ್ತು ಸಾಮಾಜಿಕ ವಿಚಾರಗಳಲ್ಲಿ ಪ್ರತಿಗಾಮಿ ಮನೋಭಾವವಿತ್ತು. ಅದರ ಪೋಷಕ ವರ್ಗವೆಲ್ಲ ನವಾಬರುಗಳು, ದೊಡ್ಡ ಜಮೀನುದಾರರುಗಳು, ಆದರ್ಶ ಶ್ರೀಮಂತಿಕೆಯ ಪ್ರತಿನಿಧಿಗಳು. ಸರಕಾರದ ಅಧಿಕಾರವರ್ಗದೊಡನೆ ಸಮೀಪ ಸಂಪರ್ಕವುಳ್ಳ ಇಂಗ್ಲಿಷ್ ಪ್ರಾಧ್ಯಾಪಕರ ನೇತೃತ್ವದಲ್ಲಿ ಪ್ರತ್ಯೇಕ ಮನೋಭಾವನೆ ಬೆಳೆಸಿಕೊಂಡು ರಾಷ್ಟ್ರೀಯ ವಿರುದ್ಧ, ಕಾಂಗ್ರೆಸ್ ವಿರುದ್ಧ ಆದ ಭಾವನೆ ತಾಳಿದರು. ಕೆಳದರ್ಜೆಯ ಅಧಿಕಾರದ ಸರಕಾರಿ ನೌಕರಿಯ ಪ್ರವೇಶವೇ ಅದರ ವಿದ್ಯಾರ್ಥಿಗಳ ಆದರ್ಶವಾಗಿತ್ತು. ಆದ್ದರಿಂದ ಸರಕಾರಕ್ಕೆ ಬೆಂಬಲಕೊಡಬೇಕಾದ್ದು ಅವಶ್ಯವಾಯಿತು. ರಾಷ್ಟ್ರೀಯ ಭಾವನೆಗೂ, ಸರಕಾರ ವಿರೋಧಕ್ಕೂ ಎಡೆಯೇ ಇರಲಿಲ್ಲ. ಅಲಿಘಡ ಕಾಲೇಜ್ ವರ್ಗವು ನೂತನ ಮುಸ್ಲಿಂ ವಿದ್ಯಾವಂತ ಪಂಗಡದ ನಾಯಕತ್ವ ವಹಿಸಿತು. ಕೆಲವು ವೇಳೆ ಪ್ರತ್ಯಕ್ಷವಾಗಿ ಇನ್ನೂ ಕೆಲವು ವೇಳೆ ಹಿಂದೆ ನಿಂತು ಪ್ರತಿಯೊಂದು ಮುಸ್ಲಿಂ ಚಳವಳಿಗೂ ಪ್ರೇರಕವಾಯಿತು. ಮುಸ್ಲಿಂ ಲೀಗ್ ಜನ್ಮ ಬಹುಮಟ್ಟಿಗೆ ಅವರ ಪ್ರಯತ್ನದ ಫಲ.

ರಾಷ್ಟ್ರೀಯ ವಿರುದ್ಧ ಭಾವನೆಯ ಮತ್ತು ಪ್ರತಿಗಾಮಿ ಪಕ್ಷದ ಈ ಭದ್ರವಾದ ಕೋಟೆಯನ್ನು ಅಬುಲ್ ಕಲಾಂ ಅಜಾದರು ನೇರ ಎದುರು ಬೀಳದೆ ತಮ್ಮ ಹೊಸ ಭಾವನೆಗಳಿಂದ ಲೇಖನಗಳಿಂದ ಉರುಳಿಸಲು ಯತ್ನಮಾಡಿದರು. ಇದರಿಂದ ಅಲಿಘಡದ ಭಾವನೆಯು ಸಡಿಲಿತು. ಈ ಯುವಕ ಲೇಖಕ ಮತ್ತು ಪತ್ರಿಕೋದ್ಯಮಿ ಮುಸ್ಲಿಮ ವಿದ್ಯಾವಂತವರ್ಗದಲ್ಲಿ ಒಂದು ಕ್ರಾಂತಿಯನ್ನೇ ಎಬ್ಬಿಸಿದ. ಹಿರಿಯರು ಆತನ ಮೇಲೆ ರೊಚ್ಚಿಗೆದ್ದರೂ ಯುವಜನರ ಮನಸ್ಸಿನಲ್ಲಿ ಒಂದು ತಳಮಳವೆದ್ದಿತು. ತುರ್ಕಿ, ಈಜಿಪ್ಟ್ ಮತ್ತು ಇರಾಣಗಳಲ್ಲಿನ ಘಟನೆಗಳಿಂದ ಮತ್ತು ಭಾರತದ ರಾಷ್ಟ್ರೀಯ ಚಳವಳಿಯಿಂದ ಈ ತಳಮಳ ಆಗಲೇ ಆರಂಭವಾಗಿತ್ತು. ಆದರೆ ಇಸ್ಲಾಂ ಧರ್ಮ ಮತ್ತು ಇಸ್ಲಾಂ ದೇಶಗಳ ಮೇಲಿನ ಸಹಾನುಭೂತಿಗೂ ಭಾರತದ ರಾಷ್ಟ್ರೀಯ ಚಳವಳಿಗೂ ವಿರೋಧವಿಲ್ಲವೆಂದು ತೋರಿಸಿಕೊಟ್ಟು ಅಜಾದ್ ಅದಕ್ಕೊಂದು ಹೊಸ ರೂಪು ಕೊಟ್ಟರು. ಇದರಿಂದ ಮುಸ್ಲಿಂ ಲೀಗಿಗೂ ಕಾಂಗ್ರೆಸ್ಸಿಗೂ ಇದ್ದ ಅಂತರವು ಕಡಮೆಯಾಯಿತು. ಇನ್ನೂ ಹುಡುಗರಿದ್ದಾಗಲೇ ೧೯೦೬ನೆ ಇಸವಿಯ ಮೊದಲನೆಯ ಅಧಿವೇಶನದಲ್ಲೇ ಅಜಾದ್ ಸ್ವತಃ ಲೀಗನ್ನು ಸೇರಿದ್ದರು.

ಬ್ರಿಟಿಷ್ ಸರಕಾರದ ಪ್ರತಿನಿಧಿಗಳಿಗೆ 'ಅಲ್-ಹಿಲಾಲ್' ಮೆಚ್ಚುಗೆಯಾಗಲಿಲ್ಲ. ವೃತ್ತ ಪತ್ರಿಕಾ ಶಾಸನ ವಿಧಿಯಂತೆ ಠೇವಣಿ ಕೇಳಿದ್ದರಿಂದ ಕೊನೆಗೆ ೧೯೧೪ರಲ್ಲಿ ಅದು ನಿಲ್ಲಬೇಕಾಯಿತು. ಈರೀತಿ ಎರಡುವರ್ಷ ಕಾಲ ಮಾತ್ರ ಬಾಳಿ 'ಅಲ್-ಹಿಲಾಲ್' ಪರ್ಯವಸಾನ ಹೊಂದಿತು. ಅಜಾದ್ ಅಲ್-ಬಲಾಗ್ ಎಂಬ ಇನ್ನೊಂದು ವಾರಪತ್ರಿಕೆ ಹೊರಡಿಸಿದರು. ೧೯೧೬ರಲ್ಲಿ ಇದರ ಕಥೆಯೂ ಮುಗಿದು ಅಜಾದ್ ಬ್ರಿಟಿಷ್ ಸರಕಾರದ ಬಂದಿಗಳಾಗಿ, ನಾಲ್ಕು ವರ್ಷ ಸೆರೆಮನೆ ಅನುಭವಿಸಬೇಕಾಯಿತು. ಬಂಧನದಿಂದ ಹೊರಗೆ ಬಂದೊಡನೆ ರಾಷ್ಟ್ರೀಯ ಮಹಾಸಭೆಯ ನಾಯಕವರ್ಗದಲ್ಲಿ ಒಂದು ಚಿರಸ್ಥಾನ

ಅವರಿಗಾಯಿತು. ಅಂದಿನಿಂದ ಇಂದಿನವರೆಗೂ ಅವಿಚ್ಛಿನ್ನವಾಗಿ ಕಾಂಗ್ರೆಸ್ ಕಾರ್ಯ ಸಮಿತಿಯಲ್ಲಿ ಉನ್ನತ ಸ್ಥಾನಪಡೆದು ದುಡಿದಿದ್ದಾರೆ. ವಯಸ್ಸು ಕಡಿಮೆ ಇದ್ದರೂ ಕಾಂಗ್ರೆಸ್ಸಿನ ಹಿರಿಯ ನಾಯಕರಾಗಿದ್ದಾರೆ. ರಾಷ್ಟ್ರೀಯ ಮತ್ತು ರಾಜಕೀಯ ವಿಚಾರಗಳಲ್ಲಿ, ಮತೀಯ ಮತ್ತು ಅಲ್ಪ ಸಂಖ್ಯಾತರ ಸಮಸ್ಯೆಗಳಲ್ಲಿ ಅವರ ಸಲಹೆಗೆ ತುಂಬ ಬೆಲೆಇದೆ. ಎರಡುಬಾರಿ ಕಾಂಗ್ರೆಸ್ ಅಧ್ಯಕ್ಷರಾಗಿ ಅನೇಕ ವರ್ಷಗಳಕಾಲ ಸೆರೆಮನೆವಾಸ ಅನುಭವಿಸಿದ್ದಾರೆ.

೧೯೧೨ರಲ್ಲಿ ಅಲ್-ಹಿಲಾಲ್‌ಗಿಂತ ಕೆಲವು ತಿಂಗಳ ಮುಂಚೆ ಆರಂಭವಾದ ಇನ್ನೊಂದು ವಾರಪತ್ರಿಕೆ ಎಂದರೆ "ದಿ ಕಾಮ್‌ರೇಡ್." ಇಂಗ್ಲಿಷ್ ಪತ್ರಿಕೆಯಾದ್ದರಿಂದ ಮುಖ್ಯವಾಗಿ ಇಂಗ್ಲಿಷ್ ವಿದ್ಯಾವಂತ ಮುಸ್ಲಿಮರ ಮೇಲೆ ತುಂಬ ಪರಿಣಾಮಕಾರಿಯಾಯಿತು. ಅದರ ಸಂಪಾದಕ ಮೌಲಾನಾ ಮಹಮ್ಮದ್ ಅಲಿಯಲ್ಲಿ ಇಸ್ಲಾಂ ಸಂಪ್ರದಾಯ ಮತ್ತು ಆಕ್ಸ್‌ಫರ್ಡ್ ಶಿಕ್ಷಣ ಪದ್ಧತಿ ಎರಡೂ ಸಮನ್ವಯಗೊಂಡು ಇದ್ದವು. ಅಲಿಘಡ ಸಂಪ್ರದಾಯದ ಆರಾಧಕನಾಗಿ ಆರಂಭಿಸಿ, ರಾಜಕೀಯ ಪ್ರಗತಿಯನ್ನು ವಿರೋಧಿಸಿದನು. ಆದರೆ ಆತನ ಕಾರ್ಯಶಕ್ತಿ ಮತ್ತು ಚಟುವಟಿಕೆಯು ಆತನನ್ನು ಆ ಸಂಕುಚಿತ ನಿಶ್ಚೇತನ ಚೌಕಟ್ಟಿನೊಳಗೆ ಕೊಳೆಯಲು ಬಿಡಲಿಲ್ಲ. ಆತನ ಭಾಷೆ ಸದಾ ಉಜ್ವಲವೂ, ಪ್ರಚೋದಕವೂ ಇತ್ತು. ೧೯೧೧ರಲ್ಲಿ ಬಂಗಾಲದ ಇಬ್ಭಾಗ ಕೊನೆಗಾಣಿಸಿದ್ದರಿಂದ ಬ್ರಿಟಿಷ್ ಸರಕಾರದ ಮೇಲಿನ ಆತನ ವಿಶ್ವಾಸ ಕಡಮೆಯಾಯಿತು. ಬಾಲ್ಕನ್ ಯುದ್ಧಗಳು ಆತನ ಮನಸ್ಸನ್ನು ಕಲಕಿದವು. ತುರ್ಕಿ ಮತ್ತು ಮುಸ್ಲಿಂ ಸಂಪ್ರದಾಯದ ಪರಇದ್ದ ತನ್ನ ಅಭಿಪ್ರಾಯಗಳನ್ನು ನಿರ್ಭಯವಾಗಿ ತನ್ನ ಪತ್ರಿಕೆಯಲ್ಲಿ ಬರೆದನು. ದಿನದಿನಕ್ಕೂ ಆತನಿಗೆ ಬ್ರಿಟಿಷರ ಮೇಲೆ ವಿರೋಧ ಬೆಳೆಯುತ್ತ ಬಂದಿತು. ತುರ್ಕಿ ಮೊದಲನೆಯ ಪ್ರಪಂಚ ಯುದ್ಧದಲ್ಲಿ ಎದುರು ಪಕ್ಷ ಸೇರಿದೊಡನೆ ಈ ವಿರೋಧ ಭಾವನೆ ಇಮ್ಮಡಿಸಿತು. "ತುರ್ಕಿ ಜನರ ನಿರ್ಧಾರ" ಎಂಬ ಆತನ ಒಂದು ದೀರ್ಘವಾದ ಪ್ರಸಿದ್ಧ ಲೇಖನದಿಂದ 'ದಿ ಕಾಮರೇಡ್' ಪತ್ರಿಕೆಯು ಸರ್ಕಾರದ ಆಗ್ರಹಕ್ಕೆ ಬಲಿಯಾಗಿ ಮುಕ್ತಾಯವಾಯಿತು. ಒಡನೆ ಆತನನ್ನೂ ಆತನ ಸಹೋದರ ಷೌಕತ್ ಆಲಿಯನ್ನೂ ಬ್ರಿಟಿಷ್ ಸರ್ಕಾರ ಬಂಧಿಸಿ ಯುದ್ಧ ಮುಗಿದ ನಂತರ ಒಂದುವರ್ಷದವರೆಗೆ ಸೆರೆಮನೆಯಲ್ಲಿಟ್ಟಿತು. ೧೯೧೯ನೆಯ ಅಂತ್ಯದಲ್ಲಿ ಅವರ ಬಿಡುಗಡೆಯಾದೊಡನೆ ಇಬ್ಬರೂ ರಾಷ್ಟ್ರೀಯ ಮಹಾಸಭೆ ಸೇರಿದರು. ಖಿಲಾಫತ್ ಪ್ರಶ್ನೆಯಲ್ಲಿ ಮತ್ತು ಕಾಂಗ್ರೆಸ್ ರಾಜಕೀಯದಲ್ಲಿ ೧೯೨೦ರಿಂದ ೩೦ರವರೆಗೆ ಆಲಿಸೋದರರು ಬಹಳ ಪ್ರಮುಖ ಪಾತ್ರವಹಿಸಿ, ಸೆರೆಮನೆ ಸಹ ಸೇರಿದರು. ಮಹಮ್ಮದ್ ಆಲಿ ಕಾಂಗ್ರೆಸ್ ವಾರ್ಷಿಕಾಧಿವೇಶನದ ಅಧ್ಯಕ್ಷನಾದುದಲ್ಲದೆ ಅನೇಕ ವರ್ಷ ಕಾರ್ಯಸಮಿತಿಯಲ್ಲೂ ಇದ್ದನು. ಆತನು ೧೯೩೦ರಲ್ಲಿ ಮರಣ ಹೊಂದಿದನು.

ಮಹಮದ್ ಆಲಿಯ ಪರಿವರ್ತನೆಯು ಭಾರತೀಯ ಮುಸ್ಲಿಮರ ಮನೋಭಾವನೆಯ ಪರಿವರ್ತನೆಯನ್ನು ಸೂಚಿಸುತ್ತಿತ್ತು. ಮುಸ್ಲಿಮರನ್ನು ಪ್ರತ್ಯೇಕಿಸಿ, ರಾಷ್ಟ್ರೀಯ ಚಳವಳಿಯಿಂದ ದೂರವಿದ್ದು, ಸಂಪೂರ್ಣ ಪ್ರತಿಗಾಮಿ ಮನೋಭಾವದ ನವಾಬರ ಶ್ರೀಮಂತರ ಕೈಗೊಂಬೆಯಾಗಿದ್ದ ಮುಸ್ಲಿಂಲೀಗ್ ಸಹ ಯುವಕರ ಒತ್ತಾಯಕ್ಕೆ ಬಾಗಬೇಕಾಯಿತು. ಸ್ವಲ್ಪವೂ ಇಷ್ಟವಿಲ್ಲದಿದ್ದರೂ ರಾಷ್ಟ್ರೀಯ ಅಂದೋಲನದ ಪ್ರವಾಹದ ಸುಳಿಗೆ ಸಿಕ್ಕಿ ಕಾಂಗ್ರೆಸ್ ಕಡೆ ತಿರುಗಿತ್ತು. ೧೯೧೩ರಲ್ಲಿ ಸರ್ಕಾರದ ರಾಜಭಕ್ತಿ ಬಿಟ್ಟು ಭಾರತದ ಪ್ರಜಾ ಪ್ರಭುತ್ವವೇ ತನ್ನ ಧ್ಯೇಯವೆಂದು ಸಾರಿತು. ಮೌಲಾನ ಅಬುಲ್ ಕಲಾಂ ಅಜಾದ್ ತಮ್ಮ ಅಲ್–ಹಿಲಾಲ್ ಪತ್ರಿಕೆಯಲ್ಲಿ ಉಜ್ವಲ ಲೇಖನ ಬರೆದು ಈ ಬದಲಾವಣೆ ಸೂಚಿಸಿದ್ದರು.

### ೧೧ ಕೆಮಲ್ ಪಾಷಾ—ಏಷ್ಯದ ರಾಷ್ಟ್ರೀಯ ಭಾವನೆ—ಇಕ್ಬಾಲ್

ಕೆಮಾಲ್ ಪಾಷಾ ಸ್ವಾಭಾವಿಕವಾಗಿ ಭಾರತದ ಹಿಂದೂ ಮುಸ್ಲಿಮರು ಇಬ್ಬರಿಗೂ ವಿಶ್ವಸನೀಯನಾದನು. ತುರ್ಕಿಯನ್ನು ಪರರ ಪ್ರಾಬಲ್ಯದಿಂದ ಬಿಡಿಸಿ, ತುಂಡಾಗುವುದನ್ನು ತಪ್ಪಿಸಿದ್ದು ಮಾತ್ರವಲ್ಲದೆ ಯುರೋಪಿಯನ್ ಸಾಮ್ರಾಜ್ಯ ಶಕ್ತಿಗಳ—ಮುಖ್ಯವಾಗಿ ಇಂಗ್ಲೆಂಡಿನ ಕುತಂತ್ರದಿಂದ ಅದನ್ನು ಪಾರುದ್ದನು. ಆದರೆ ಅತತುರ್ಕ ಕೆಮಾಲ್ ಪಾಷಾನ ಆಡಳಿತ ನೀತಿ ರೂಪಗೊಂಡಂತೆ ಆತನ ಧರ್ಮಾತೀತ

ರಾಜನೀತಿ, ಸುಲ್ತಾನ ಮತ್ತು ಖಿಲಾಫತ ಪದವಿಗಳ ಮುಕ್ತಾಯ, ಧರ್ಮರಹಿತ ರಾಜ್ಯಾಂಗ ರಚನೆ, ಧರ್ಮಾಧಿಕಾರಿಗಳ ತಂಡಗಳ ವಿಸರ್ಜನೆ, ನೋಡಿ ಧರ್ಮನಿಷ್ಠ ಮುಸಲ್ಮಾನರಿಗೆ ಆತನ ಮೇಲಿದ್ದ ಗೌರವ ಕಡಮೆಯಾಯಿತು. ಮತ್ತು ಈ ಆಧುನಿಕ ನೀತಿಯ ವಿರುದ್ಧವಾಗಿ ಒಳಗೊಳಗೇ ಅಸಮಾಧಾನವೂ ಹುಟ್ಟಿತು. ಆದರೆ ಅದೇ ನೀತಿಯ ಫಲವಾಗಿ ಹಿಂದೂ ಮುಸಲ್ಮಾನ ಯುವಕರಲ್ಲಿ ಆತನ ಮೇಲೆ ವಿಶ್ವಾಸ ಅಧಿಕವಾಯಿತು. ದಂಗೆಯ ಕಾಲದಿಂದ ಭಾರತೀಯ ಮುಸ್ಲಿಂ ಮನೋರಂಗದಲ್ಲಿ ಮೂಡಿ ಬಂದಿದ್ದ ಕನಸಿನ ಕಳಶವನ್ನೇ ಕೆಮಾಲ ಪಾಷಾ ನುಚ್ಚುನೂರು ಮಾಡಿದನು. ಪುನಃ ಅವರ ಮನಸ್ಸಿನಲ್ಲಿ ಒಂದು ಶೂನ್ಯತೆ ಹುಟ್ಟಿತು. ಅನೇಕ ಮುಸಲ್ಮಾನರು ರಾಷ್ಟ್ರೀಯ ಚಳವಳಿಯಲ್ಲಿ ಧುಮಿಕಿ ಈ ನಿರಾಶಾ ಭಾವನೆ ಕಳೆದುಕೊಂಡರು, ಕೆಲವರು ಮೊದಲೇ ಸೇರಿದ್ದರು, ಆದರೆ ಇನ್ನೂ ಕೆಲವರು ಅನುಮಾನ ದಿಂದ ಮುಂದೆ ನೋಡುತ್ತ ತಟಸ್ಥರಾಗಿ ನಿಂತರು. ಹಳೆಯ ನವಾಬಗಿರಿಯ ಮನೋಭಾವನೆಗೂ, ಆಧುನಿಕ ಮನೋಭಾವನೆಗೂ ನಿಜವಾದ ಹೋರಾಟ ಆರಂಭವಾಯಿತು. ಖಿಲಾಫತ್ ಚಳವಳಿಯಿಂದ ನವಾಬ ಶಾಹಿ ನಾಯಕತ್ವ ನಾಶವಾಗಿತ್ತು. ಆದರೆ ಅದಕ್ಕೂ ಸಾಮಾನ್ಯ ಜನತೆಯ ಸಾಮಾಜಿಕ ಆರ್ಥಿಕ ಪರಿ ಸ್ಥಿತಿ ಮತ್ತು ಆವಶ್ಯಕತೆಗಳಿಗೂ ಯಾವ ಪ್ರತ್ಯೇಕ ಸಂಬಂಧವೂ ಇಲ್ಲದ ಕಾರಣ ಭಾರತದ ಖಿಲಾಫತ್ ಚಳುವಳಿಯ ಬುಡವೇ ಭದ್ರವಿರಲಿಲ್ಲ. ಅದರ ಕೇಂದ್ರ ಬೇರೆ ಎಲ್ಲೋ ಇತ್ತು. ಆಧಾರ ಸ್ತಂಭವೇ ಉರುಳಿದ್ದರಿಂದ ಕಟ್ಟಡವೂ ಕುಸಿದು ಬಿದ್ದು ಮುಸ್ಲಿಂ ಜನತೆ ದಾರಿಕಾಣದೆ ಕಂಗೆಟ್ಟಿತು. ಯಾವ ರಾಜ ಕೀಯವೂ ಅವರಿಗೆ ಬೇಡವಾಯಿತು. ಇದುವರೆಗೆ ತಲೆಮರೆಸಿ ಅಡಗಿಕೊಂಡಿದ್ದ ಹಳೆಯ ನವಾಬರು ಗಳು ಸದಾ ತಮ್ಮ ಬೆಂಗಾವಲಿಗಿದ್ದ ಬ್ರಿಟಿಷ್ ರಾಜತಂತ್ರದ ಪ್ರೋತ್ಸಾಹದಿಂದ, ಪುನಃ ಪ್ರಖ್ಯಾತಿಗೆ ಬಂದರು. ಆದರೆ ಕಾಲಸ್ಥಿತಿ ಪರಿವರ್ತನೆಯಾಗಿದ್ದರಿಂದ ಏಕೈಕ ನಾಯಕತ್ವ ಅವರಿಗೆ ಲಭಿಸಲಿಲ್ಲ. ತಡವಾಗಿ ಆದರೂ ಮುಸ್ಲಿಮರಲ್ಲೂ ಒಂದು ಮಧ್ಯಮ ವರ್ಗ ಬೆಳೆಯುತ್ತಲಿತ್ತು, ಅಲ್ಲದೆ ರಾಷ್ಟ್ರೀಯ ಮಹಾಸಭೆಯ ನೇತೃತ್ವದಲ್ಲಿ ನಡೆದ ರಾಜಕೀಯ ಆಂದೋಲನದ ಅನುಭವ ವಿಶೇಷ ವ್ಯತ್ಯಾಸಮಾಡಿತ್ತು.

ಮುಸ್ಲಿಂ ಜನತೆಯ ಮತ್ತು ಹೊಸದಾಗಿ ರೂಪುಗೊಳ್ಳುತ್ತಿದ್ದ ಮಧ್ಯಮವರ್ಗದ ಮನೋಭಾವನೆಗೆ ಕಾಲಸ್ಥಿತಿಯೇ ಕಾರಣವಾದರೂ ಮಧ್ಯಮವರ್ಗದ ಮತ್ತು ಮುಖ್ಯ ಯುವಕರ ಮನೋಭಾವನೆ ರೂಪು ಗೊಳಿಸುವುದರಲ್ಲಿ ಸರ್ ಮಹಮದ್ ಇಕ್ಬಲ್ ಪ್ರಮುಖ ಪಾತ್ರ ವಹಿಸಿದನು. ಸಾಮಾನ್ಯ ಜನರಿಗೆ ಆತನ ಪರಿಚಯವೇ ಇರಲಿಲ್ಲ. ಇಕ್‌ಬಲ್ ಉರ್ದು ಭಾಷೆಯಲ್ಲಿ ಬರೆದ ರೋಮಾಂಚಕಾರಕ ರಾಷ್ಟ್ರೀಯ ಗೀತ ಗಳು ಬಹಳ ಜನಜನಿತವಾದುವು. ಬಾಲ್ಕನ್ ಯುದ್ಧಗಳ ಕಾಲದಲ್ಲಿ ಆತನ ದೃಷ್ಟಿ ಎಲ್ಲ ಇಸ್ಲಾಂ ವಿಷಯ ಗಳ ಕಡೆ ತಿರುಗಿತು. ಆಗಿನ ಕಾಲದ ಸ್ಥಿತಿ ಮತ್ತು ಮುಸ್ಲಿಂ ಜನತೆಯ ಮನೋಭಾವನೆಗಳಿಂದ ಆತನ ಮೇಲೆ ಮಹತ್ಪರಿಣಾಮವಾಯಿತು. ಆತನೂ ಸಹ ತನ್ನ ಕೃತಿಗಳಿಂದ ಈ ಭಾವನೆಗಳ ಬೆಳವಣಿಗೆಗೆ ಮತ್ತು ತೀಕ್ಷ್ಣತೆಗೆ ಪುಷ್ಟಿಕೊಟ್ಟನು. ಆದರೆ ಒಬ್ಬ ಮಹಾಜನನಾಯಕನಾಗಲು ಆತನಿಗೆ ಎಂದೂ ಸಾಧ್ಯವಿರಲಿಲ್ಲ. ಆತನೊಬ್ಬ ಕವಿ, ಜ್ಞಾನಿ ಮತ್ತು ದಾರ್ಶನಿಕ. ಹಳೆಯ ಶ್ರೀಮಂತಿಕೆಯ ಮೇಲೆ ವಿಶ್ವಾಸ; ಮತ್ತು ಮೂಲತಃ ಕಾಶ್ಮೀರದ ಬ್ರಾಹ್ಮಣ ಕುಲಕ್ಕೆ ಸೇರಿದವನು. ಉರ್ದು ಮತ್ತು ಪಾರಸಿ ಭಾಷೆಗಳಲ್ಲಿ ಬರೆದ ಆತನ ಸುಂದರ ಕವನಗಳಿಂದ ಮುಸ್ಲಿಂ ವಿದ್ಯಾವಂತ ವರ್ಗಕ್ಕೆ ಒಂದು ದಾರ್ಶನಿಕ ಹಿನ್ನೆಲೆ ದೊರೆಯಿತು, ಮತ್ತು ಪುನಃ ಪ್ರತ್ಯೇಕಭಾವನೆಗೆ ಪ್ರೋತ್ಸಾಹ ದೊರೆಯಿತು. ಆತನ ಜನಪ್ರಿಯತೆಗೆ ಆತನ ಶ್ರೇಷ್ಠ ಕಾವ್ಯವೇ ಕಾರಣವಾದರೂ, ಮುಸ್ಲಿಂ ಮನಸ್ಸಿನ ಶೂನ್ಯತೆಯನ್ನು ನಾಶಮಾಡಿ ಒಂದು ನೆಲೆ ಯನ್ನು ಕೊಟ್ಟುದು ಇನ್ನೂ ಮುಖ್ಯ ಕಾರಣವಾಯಿತು. ಹಳೆಯ ಬೃಹದಿಸ್ಲಾಂ ಆದರ್ಶದಲ್ಲಿ ಯಾವ ಅರ್ಥವೂ ಇರಲಿಲ್ಲ. ಖಿಲಾಫತ್ತೇ ನಿರ್ಮೂಲವಾಗಿತ್ತು. ಪ್ರತಿಯೊಂದು ಇಸ್ಲಾಂ ರಾಷ್ಟ್ರದಲ್ಲಿ, ಮುಖ್ಯ ವಾಗಿ ತುರ್ಕಿಯಲ್ಲಿ ರಾಷ್ಟ್ರೀಯ ಚಳವಳಿಯ ಪ್ರಾಬಲ್ಯ ಹೆಚ್ಚಿತ್ತು. ಇತರ ಇಸ್ಲಾಂ ಜನರ ಕಡೆ ಅವರಲ್ಲಿ ಯಾರಿಗೂ ಆಸಕ್ತಿ ಇರಲಿಲ್ಲ. ಇತರ ಕಡೆಗಳಂತೆ ಏಷ್ಯದಲ್ಲಿ ಸಹ ರಾಷ್ಟ್ರೀಯ ಭಾವನೆಯೇ ಪ್ರಬಲಶಕ್ತಿ ಯಾಯಿತು. ಭಾರತದಲ್ಲಿ ರಾಷ್ಟ್ರೀಯ ಚಳವಳಿ ಬಲಗೊಂಡು ಮೇಲಿಂದಮೇಲೆ ಬ್ರಿಟಿಷರ ಅಧಿಕಾರಕ್ಕೆ ಪೆಟ್ಟುಕೊಡಲು ಪ್ರಯತ್ನಪಟ್ಟಿತ್ತು. ಈ ರಾಷ್ಟ್ರೀಯ ಭಾವನೆಯು ಭಾರತೀಯ ಮುಸ್ಲಿಂ ಜನಮನದ

ಮೇಲೆ ಸಹ ಮಹತ್ಪರಿಣಾಮ ಮಾಡಿತ್ತು. ಈ ಸ್ವಾತಂತ್ರ್ಯದ ಹೋರಾಟದಲ್ಲಿ ಅನೇಕ ಮುಸ್ಲಿಮರು ಪ್ರಮುಖ ಪಾತ್ರ ವಹಿಸಿದ್ದರು. ಆದರೂ ಭಾರತದ ರಾಷ್ಟ್ರೀಯ ಚಳುವಳಿಯಲ್ಲಿ ಹಿಂದೂಗಳೇ ಪ್ರಬಲ ರಾಗಿದ್ದರು. ಮತ್ತು ಅದಕ್ಕೆ ಹಿಂದೂ ದೃಷ್ಟಿಯು ಇತ್ತು. ಆದ್ದರಿಂದ ಮುಸ್ಲಿಮರ ಮನಸ್ಸಿನಲ್ಲಿ ಒಂದು ತಳಮಳವೆದ್ದಿತು. ಅನೇಕರು ಈ ರಾಷ್ಟ್ರೀಯ ಭಾವನೆಯನ್ನೇ ಒಪ್ಪಿ ತಮಗೆ ಸಾಧ್ಯವಾದಂತೆ ಅದರ ಮೇಲೆ ಪ್ರಭಾವ ಬೀರಲು ಯತ್ನಮಾಡಿದರು. ಅನೇಕರು ಯಾವ ನಿರ್ಧಾರಕ್ಕೂ ಬರದೆ ಸಹಾನುಭೂತಿ ತೋರಿ ದೂರ ಸರಿದು ನಿಂತರು; ಇನ್ನೂ ಕೆಲವರು ಇಕ್ಬಲನ ಕಾವ್ಯ ಮತ್ತು ದರ್ಶನದೃಷ್ಟಿಯ ಮಾರ್ಗ ಹಿಡಿದು ಪ್ರತ್ಯೇಕ ದಾರಿಯಲ್ಲಿ ನಡೆಯಹೊರಟು ದೂರವಾದರು.

ಈಚೆಗೆ ಭಾರತ ವಿಭಜನೆಯಾಗಬೇಕೆಂದು ಹೊಡಿರುವ ಕೂಗಿಗೆ ಬೀಜ ಇಲ್ಲಿದೆ. ಅದಕ್ಕೆ ಅನೇಕ ಕಾರಣಗಳು ದೊರೆತವು. ಅನೇಕ ಸಹಾಯಕ ಕಾರಣ ಸಿಕ್ಕವು, ಎಲ್ಲ ಕಡೆಯೂ ತಪ್ಪು ಕಂಡವು. ಮುಖ್ಯ ವಾಗಿ ಬ್ರಿಟಿಷ್ ಸರ್ಕಾರದ ಉದ್ದೇಶಪೂರ್ವಕ ಭೇದ ನೀತಿಯು ಅದಕ್ಕೆ ಪ್ರೋತ್ಸಾಹಕೊಟ್ಟಿತು. ಆದರೆ ಈ ಎಲ್ಲ ಕಾರಣಗಳ ಹಿಂದೆ ಕೆಲವು ಐತಿಹಾಸಿಕ ಕಾರಣಗಳೂ ಮತ್ತು ಭಾರತದ ಮುಸ್ಲಿಮ್ ಮಧ್ಯಮ ವರ್ಗದ ಸಾವಕಾಶದ ಬೆಳೆವಣಿಗೆಯಿಂದ ಹುಟ್ಟಿದ ಮಾನಸಿಕ ಹಿನ್ನೆಲೆಯೂ, ಮುಖ್ಯ ಕಾರಣವಾದವು. ವಿದೇಶೀಯರ ಪ್ರಾಬಲ್ಯದ ವಿರುದ್ಧ ಹುಟ್ಟಿದ ರಾಷ್ಟ್ರೀಯ ಚಳವಳಿಯಲ್ಲದೆ ಭಾರತದ ಇನ್ನೊಂದು ಒಳ ಘರ್ಷಣೆ ಎಂದರೆ ಕಳೆದುಳಿದ ಶ್ರೀಮಂತವರ್ಗಕ್ಕೂ ಮತ್ತು ಆಧುನಿಕ ಭಾವನೆ ಮತ್ತು ಸಂಸ್ಥೆಗಳಿಗೂ ಹುಟ್ಟಿದ ಹೋರಾಟ. ಈ ಹೋರಾಟವು ಇಡೀ ರಾಷ್ಟ್ರದ ಮಟ್ಟದಲ್ಲಿ ಮಾತ್ರವಲ್ಲದೆ ಪ್ರತಿಯೊಂದು ದೊಡ್ಡ ಪಂಗಡದಲ್ಲಿ—ಹಿಂದೂಗಳಲ್ಲಿ, ಮುಸ್ಲಿಮರಲ್ಲಿ ಮತ್ತು ಇತರ ವರ್ಗಗಳಲ್ಲಿ ಸಹ–ನಡೆಯುತ್ತಿದೆ. ರಾಷ್ಟ್ರೀಯ ಮಹಾಸಭೆಯ ಚಳುವಳಿಯು ಮುಖ್ಯವಾಗಿ ಈ ಹೊಸ ಭಾವನೆಗಳ ಮತ್ತು ಸಂಸ್ಥೆಗಳ ಐತಿಹಾಸಿಕ ಬೆಳ ವಣಿಗೆಯ ರೀತಿಯನ್ನು ಪ್ರತಿಬಿಂಬಿಸುತ್ತದೆ. ಇವುಗಳಲ್ಲಿ ಕೆಲವನ್ನು ಹಳೆಯ ತಳಪಾಯದ ಮೇಲೆ ಕಟ್ಟಲು ಪ್ರಯತ್ನಪಟ್ಟಿದೆ. ಇದರಿಂದ ಪರಸ್ಪರ ವಿಶೇಷ ಅಂತರವಿದ್ದರೂ ಅನೇಕ ಬಗೆಯ ಜನರು ಅದರೊಳಗೆ ಬಂದು ಸೇರಿದಾರೆ. ಹಿಂದೂಗಳ ಕಠಿನ ನಿಯಮದ, ಪ್ರತ್ಯೇಕ ಭಾವನೆಯ, ಸಾಮಾಜಿಕ ವ್ಯವಸ್ಥೆಯಿಂದ ಪ್ರಗತಿಯು ಕೊಲೆಯಾಗಿದೆ. ಇದರಿಂದ ಇತರರು ಭಯಗ್ರಸ್ತರಾಗಿದಾರೆ. ಆದರೆ ಈ ಸಮಾಜ ವ್ಯವಸ್ಥೆಯ ಮೂಲಕ್ಕೆ ಈಗ ಏಟುತಗುಲಿದೆ. ಅದರ ಕುಸಿತ್ಯ ಬೇಗ ಬೇಗ ಕಡಮೆಯಾಗು ತ್ತಿದೆ. ಏನೆ ಆಗಲಿ ವಿಶಾಲ ಮನೋಭಾವನೆಯ ರಾಜಕೀಯ ಮತ್ತು ಸಮಾಜ ಪ್ರಗತಿಯು ರಾಷ್ಟ್ರೀಯ ಚಳುವಳಿಯ ಬೆಳವಣಿಗೆಗೆ ಅಡ್ಡ ನಿಲ್ಲುವಷ್ಟು ಶಕ್ತಿ ಅದಕ್ಕಿಲ್ಲ; ಆ ಚಳುವಳಿಗೆ ತೊಂದರೆಗಳೇನೇ ಇರಲಿ ಎದುರಿಸಿ ಮುಂದುವರಿಯುವಷ್ಟು ಬಲವಿದೆ. ಮುಸ್ಲಿಮರಲ್ಲಿ ಹಳೆಯ ನವಾಬಗಿರಿಯ ಪ್ರಾಬಲ್ಯ ಇನ್ನೂ ಬಲವಾಗಿದ್ದು ಮುಸ್ಲಿಂ ಜನತೆ ಅವರ ನಾಯಕತ್ವದ ಹಿಡಿತದಲ್ಲಿಯೇ ಇದೆ. ಹಿಂದೂ ಮತ್ತು ಮುಸ್ಲಿಂ ಮಧ್ಯಮವರ್ಗದ ಬೆಳೆವಣಿಗೆಗಳಲ್ಲಿ ಒಂದು ತಲೆಮಾರು ಅಥವ ಇನ್ನೂ ಹೆಚ್ಚಿನ ಅಂತರವಿದೆ. ಈ ವ್ಯತ್ಯಾಸ ವನ್ನು ರಾಜಕೀಯ, ಆರ್ಥಿಕ ಮತ್ತು ಇತರ ಸಮಸ್ಯೆಗಳಲ್ಲೆಲ್ಲ ಕಾಣಬಹುದು. ಮುಸ್ಲಿಮರ ಭಯಗ್ರಸ್ಥ ಮನೋಭಾವನೆಗೆ ಈ ಅಂತರವೇ ಮುಖ್ಯ ಕಾರಣ.

ಭಾರತವನ್ನು ಇಬ್ಭಾಗಮಾಡುವ ಪಾಕಿಸ್ಥಾನದ ಸಲಹೆ ಕೆಲವರ ಭಾವನಾತಿರೇಕವನ್ನು ತೃಪ್ತಿಗೊಳಿಸ ಬಹುದಾದರೂ ಅದರಿಂದ ಈ ಪ್ರಗತಿಯ ಕೊರತೆ ನಿವಾರಣೆಯಾಗುವುದಿಲ್ಲ. ಅದರಿಂದ ನವಾಬಶಾಹೀ ಜನರ ಹಿಡಿತ ಇನ್ನೂ ಬಿಗಿಯಾಗಬಹುದು ಮತ್ತು ಮುಸ್ಲಿಮರ ಆರ್ಥಿಕ ಉನ್ನತಿ ಹಿಂದೆ ಬೀಳಬಹುದು. ಪಾಕಿಸ್ಥಾನದ ಪರ ವಾದಿಸಿದವರಲ್ಲಿ ಇಕ್ಬಲ್ ಒಬ್ಬ ಮೊದಲಿಗನಾದರೂ ಅದರ ಅಪಾಯ ಮತ್ತು ಅವಿವೇಕ ಈಚೆಗೆ ಆತನಿಗೆ ಮನವರಿಕೆಯಾದಂತೆ ಇದೆ. ಮುಸ್ಲಿಂ ಲೀಗ್ ಅಧ್ಯಕ್ಷನಾದುದರಿಂದ ಪಾಕಿಸ್ಥಾನದ ಪರ ವಾದಿಸಬೇಕಾಯಿತೆಂದೂ, ಆದರೆ ಇಡೀ ಭಾರತಕ್ಕೆ ಮುಖ್ಯವಾಗಿ ಮುಸ್ಲಿಮರಿಗೆ ಅದು ಬಹಳ ಹಾನಿಕರ ವೆಂದೂ ಒಂದು ಸಂಭಾಷಣೆಯಲ್ಲಿ ತಿಳಿಸಿದಂತೆ ಎಡ್ವರ್ಡ್ ಥಾಮ್ಸನ್ ಬರೆಯುತ್ತಾನೆ. ಪ್ರಾಯಶಃ ಇಕ್ಬಲ್ ತನ್ನ ಅಭಿಪ್ರಾಯ ಬದಲಾಯಿಸಿರಬಹುದು ಅಥವ ಆ ಪ್ರಶ್ನೆಗೆ ಆಗ ಹೆಚ್ಚು ಪ್ರಾಮುಖ್ಯತೆ ಇರ ಲಿಲ್ಲವಾದ್ದರಿಂದ ಸರಿಯಾಗಿ ವಿಚಾರಮಾಡದೆ ಬೆಂಬಲಕೊಟ್ಟು ಇರಬಹುದು. ಭಾರತ ವಿಭಜನೆಯ ಸಲಹೆ,

ಪಾಕಿಸ್ಥಾನ ವಿಷಯ ಮುಂದೆ ರೂಪುಗೊಂಡ ಬಗೆ ಎಲ್ಲವೂ ಇಕ್ಬಲನ ಜೀವನ ದೃಷ್ಟಿಗೆ ತೀರವಿರುದ್ಧ.
ತನ್ನ ಕೊನೆಯ ದಿನಗಳಲ್ಲಿ ಇಕ್ಬಲನ ದೃಷ್ಟಿಯು ಸಮಾಜವಾದದ ಕಡೆ ಒಲಿಯಿತು. ಸೋವಿಯಟ್ ರಷ್ಯದ ಮಹತ್ಸಾಧನೆಯು ಆತನ ಮನಸ್ಸನ್ನು ಆಕರ್ಷಿಸಿತು. ಆತನ ಕವಿತೆ ಧಾಟಿ ಸಹ ಪರಿವರ್ತನೆ ಹೊಂದಿತು. ಆತನು ಸಾಯುವ ಕೆಲವು ದಿನಗಳ ಮುಂಚೆ ತನ್ನ ಮರಣ ಶಯ್ಯೆಯ ಬಳಿ ಬರಲು ನನಗೆ ಹೇಳಿಕಳುಹಿಸಿದನು. ಸಂತೋಷದಿಂದ ಆ ಕರೆಗೆ ಓಗೊಟ್ಟೆ. ಆತನೊಂದಿಗೆ ಅನೇಕ ವಿಷಯ ಮಾತನಾಡಿದಾಗ, ವ್ಯತ್ಯಾಸಗಳೆಷ್ಟೇ ಇರಲಿ ನಮ್ಮಿಬ್ಬರಲ್ಲೂ ಸಾಮಾನ್ಯ ವಿಷಯ ಎಷ್ಟೋ ಇದೆ. ಇಬ್ಬರೂ ಸರಿದೂಗಿ ನಡೆಯಲು ಎಷ್ಟು ಸುಲಭ ಎಂದು ಭಾಸವಾಯಿತು. ಆಗ ಆತನ ಮನಸ್ಸು ಪುನರಾವರ್ತನ ಭಾವದಲ್ಲಿದ್ದು ಒಂದು ವಿಷಯದಿಂದ ಇನ್ನೊಂದು ವಿಷಯಕ್ಕೆ ಹಾರುತ್ತಲಿದ್ದ. ನಾನು ಹೆಚ್ಚು ಮಾತನಾಡದೆ ಸುಮ್ಮನೆ ಕುಳಿತು ಕೇಳಿದೆ. ಆತನ ಕವಿತೆಯನ್ನೂ ಆತನನ್ನೂ ಪ್ರಶಂಸೆಮಾಡಿದೆ. ಆತನಿಗೆ ನನ್ನ ಮೇಲೆ ಪ್ರೇಮವಿದ್ದಂತೆ, ನನ್ನ ವಿಷಯ ಒಳ್ಳೆಯ ಅಭಿಪ್ರಾಯವಿದ್ದಂತೆ ಕಂಡು ಹರ್ಷವಾಯಿತು. ನಾನು ಹೊರಡುವ ಸ್ವಲ್ಪ ಮುಂಚೆ "ನಿನಗೂ ಜಿನ್ನಾಗೂ ಸಾಮಾನ್ಯ ಏನಿದೆ? ಆತ ರಾಜಕಾರಣಿ ನೀನು ದೇಶಭಕ್ತ" ಎಂದನು. ಆದರೂ ಜಿನ್ನಾಗೂ ನನಗೂ ಸಾಮಾನ್ಯವಾದುದು ಬಹಳ ಇದೆ. ದೇಶಭಕ್ತ ಎನಿಸಿಕೊಂಡು ಇಂದಿನ ಅದರ ಸಂಕುಚಿತ ಅರ್ಥದಲ್ಲಿ ಒಂದು ಪ್ರಶಂಸೆ ಎಂದು ಭಾವಿಸಬೇಕೋ ಬೇಡವೊ ನಾನರಿಯೆ. ಭಾರತದ ಮೇಲೆ ನನಗೆ ತುಂಬ ವಿಶ್ವಾಸವಿದ್ದರೂ ನಮ್ಮ ಸಮಸ್ಯೆಗಳ ಅರಿವು ಮತ್ತು ಪರಿಹಾರಗಳಿಗೆ ರಾಷ್ಟ್ರಭಕ್ತಿಯೊಂದೇ ಸಾಲದೆಂದು ಬಹುಕಾಲದಿಂದ ನಾನು ಮನಗಂಡಿದ್ದೇನೆ. ಪ್ರಪಂಚದ ಸಮಸ್ಯೆಗಳ ಪರಿಹಾರವಂತೂ ಅದರಿಂದ ಖಂಡಿತ ಆಗದು. ರಾಜಕೀಯದ ಸುಳಿಯಲ್ಲಿ ಸಿಕ್ಕು ನಾನು ಅದಕ್ಕೆ ಬಲಿಯಾಗಿದ್ದರೂ ನಾನು ರಾಜಕಾರಣಿಯಲ್ಲವೆಂದು ಇಕ್ಬಲ್ ಹೇಳಿದುದರಲ್ಲಿ ಸತ್ಯವಿದೆ.

### ೧೨. ದೊಡ್ಡ ಕೈಗಾರಿಕೆಗಳ ಬೆಳವಣಿಗೆ : ತಿಲಕ್ ಮತ್ತು ಗೋಖಲೆ : ಪ್ರತ್ಯೇಕ ಚುನಾವಣೆಗಳು

ಹಿಂದೂ ಮುಸ್ಲಿಂ ಸಮಸ್ಯೆಯ ಹಿನ್ನೆಲೆ ಪತ್ತೆ ಹಚ್ಚುವದರಲ್ಲಿ ಮತ್ತು ಪಾಕಿಸ್ತಾನದ ಬೇಡಿಕೆ ಮತ್ತು ಭಾರತದ ವಿಭಜನೆಯ ಹಿಂದೆ ಯಾವ ಮನೋಭಾವ ಇತ್ತೆಂದು ಅರ್ಥಮಾಡಿಕೊಳ್ಳುವ ಪ್ರಯತ್ನದಲ್ಲಿ ನಾನು ಅರ್ಧಶತಮಾನ ಹಾರಿ ಬಿಟ್ಟಿದ್ದೇನೆ. ಈ ಕಾಲದಲ್ಲಿ ಸರಕಾರದ ಆಡಳಿತ ಯಂತ್ರದ ಬಾಹ್ಯರೂಪದಲ್ಲಿ ಅಲ್ಲದಿದ್ದರೂ, ಜನರ ಮನೋಭಾವನೆಯಲ್ಲಿ ಮಹತ್ವದ ವ್ಯತ್ಯಾಸಗಳಾದವು. ಅಲ್ಲಿ ಸ್ವಲ್ಪ ರಾಜಕೀಯ ಸುಧಾರಣೆಗಳಾದವು. ಇವುಗಳನ್ನೇ ಬಹಳ ದೊಡ್ಡದು ಮಾಡಿ ಹೊಗಳಿದ್ದರೂ ಬ್ರಿಟಿಷರ ಅಧಿಕಾರ ಮತ್ತು ವ್ಯಾಪ್ತಿಗೆ ಸ್ವಲ್ಪವೂ ಕುಂದು ಬರಲಿಲ್ಲ. ದೇಶದ ಬಡತನ ಮತ್ತು ನಿರುದ್ಯೋಗದ ಪ್ರಶ್ನೆ ಬಗೆಹರಿಯಲಿಲ್ಲ. ೧೯೧೧ ರಲ್ಲಿ ಜಮಷೆಡ್‌ಜ ತಾತಾ ಜಮಷೆಡ್‌ಪುರದಲ್ಲಿ ಉಕ್ಕು ಮತ್ತು ಕಬ್ಬಿಣದ ಕಾರ್ಖಾನೆ ಸ್ಥಾಪಿಸಿ ದೊಡ್ಡ ಕೈಗಾರಿಕೆಗೆ ತಳಹದಿ ಹಾಕಿದನು. ಇದನ್ನು ಮತ್ತು ಇತರ ಕೈಗಾರಿಕಾ ಪ್ರಯತ್ನಗಳನ್ನೂ ಸರಕಾರವು ವಿರೋಧ ಭಾವನೆಯಿಂದ ನೋಡಿ ಯಾವ ಪ್ರೋತ್ಸಾಹವನ್ನೂ ಕೊಡಲಿಲ್ಲ. ಉಕ್ಕಿನ ಕೈಗಾರಿಕೆ ಆರಂಭವಾದದ್ದು ಮುಖ್ಯವಾಗಿ ಅಮೆರಿಕನ್ ತಜ್ಞರ ಸಹಾಯದಿಂದ. ಶೈಶವಾವಸ್ಥೆಯಲ್ಲಿ ಅನೇಕ ಸಂಕಟಕ್ಕೀಡಾದರೂ ೧೯೧೪–೧೮ ರ ಯುದ್ಧದಿಂದ ಚೇತರಿಸಿಕೊಂಡಿತು. ಪುನಃ ಕಷ್ಟಕ್ಕೆ ಸಿಕ್ಕು ಬ್ರಿಟಿಷ್ ಬಂಡವಾಳಗಾರರ ಕೈಗೆ ಬೀಳುವುದರಲ್ಲಿತ್ತು. ಆದರೆ ರಾಷ್ಟ್ರೀಯ ಭಾವನೆಯ ಪ್ರೋತ್ಸಾಹದಿಂದ ಬದುಕಿತು.

ಭಾರತದಲ್ಲಿ ಕೈಗಾರಿಕಾ ಶ್ರಮಜೀವಿಗಳು ಹೆಚ್ಚುತ್ತಿದ್ದರು. ಸಂಘಟನೆ ಇಲ್ಲದೆ ಅವರು ನಿಸ್ಸಹಾಯಕರಾಗಿದ್ದರು. ಕಡುಬಡತನದಲ್ಲಿದ್ದ ರೈತಾಪಿ ಜನರು ಬಂದು ಕೆಲಸಕ್ಕೆ ಸೇರಿಕೊಳ್ಳುತ್ತಲಿದ್ದ ಕಾರಣ ಕೂಲಿದರ ಹೆಚ್ಚಿ, ಉತ್ತಮಗೊಳ್ಳಲು ಅವಕಾಶವಾಗಲಿಲ್ಲ. ಲಕ್ಷಗಟ್ಟಲೆ ನಿರುದ್ಯೋಗಿಗಳಿದ್ದುದರಿಂದ ಅಶಿಕ್ಷಿತ ಕೂಲಿಗಾರರು ಎಷ್ಟು ಜನರಾದರೂ ಬರುತ್ತಿದ್ದರು. ಆದ್ದರಿಂದ ಆ ಪರಿಸ್ಥಿತಿಯಲ್ಲಿ ಯಾವ ಮುಷ್ಕರವೂ ಯಶಸ್ವಿಯಾಗುವಂತೆ ಇರಲಿಲ್ಲ. ಮೊದಲನೆಯ ಟ್ರೇಡ್‌ಯೂನಿಯನ್ ಕಾಂಗ್ರೆಸ್ ಸೇರಿದ್ದು

೧೯೩೦ರಲ್ಲಿ ಮಾತ್ರ. ಈ ಶ್ರಮಜೀವಿಗಳ ಸಂಖ್ಯೆಯು ಭಾರತದ ರಾಜಕೀಯ ರಂಗದಲ್ಲಿ ಯಾವ ಪರಿಣಾಮ ಮಾಡುವಷ್ಟು ದೊಡ್ಡದಾಗಿರಲಿಲ್ಲ. ಅಸಂಖ್ಯಾತ ವ್ಯವಸಾಯಗಾರರ ಮತ್ತು ಅವರ ಶ್ರಮಜೀವಿಗಳ ಮಧ್ಯೆ ಸಮುದ್ರದಲ್ಲಿ ಒಂದು ಹನಿಯಂತೆ ಇದ್ದರು. ೧೯೩೦ ರಿಂದ ೧೯೪೦ರವರೆಗೆ ಅವರ ಕೂಗು ಕೇಳಿ ಬರುತ್ತಿದ್ದರೂ ಅವರಲ್ಲಿ ಯಾವ ಶಕ್ತಿಯೂ ಇರಲಿಲ್ಲ; ಅಲಕ್ಷೆ ಸಹ ಮಾಡಬಹುದಾಗಿತ್ತು. ಆದರೆ ರಷ್ಯದ ಕ್ರಾಂತಿಯಿಂದ ಕೈಗಾರಿಕಾ ಶ್ರಮಜೀವಿಗಳಿಗೆ ಒಂದು ಪ್ರಾಮುಖ್ಯತೆ ದೊರೆಯಿತು. ಕೆಲವು ದೊಡ್ಡ ಸುವ್ಯವಸ್ಥಿತ ಮುಷ್ಕರಗಳಿಂದ ಅವರ ಕಡೆ ಗಮನಕೊಡುವುದು ಅನಿವಾರ್ಯವಾಯಿತು.

ವ್ಯವಸಾಯಗಾರನು ಎಲ್ಲ ಕಡೆಯಲ್ಲೂ ಇದ್ದರೂ ಮತ್ತು ಆತನ ಸಮಸ್ಯೆಯೇ ಭಾರತದ ಸಮಸ್ಯೆ ಆದರೂ ಆತನಿಗೆ ಬಾಯಿಯೇ ಇರಲಿಲ್ಲ. ರಾಜಕಾರಣಿಗಳೂ ಸರಕಾರವೂ ಆತನನ್ನು ಮರೆತರು. ರಾಜಕೀಯ ಚಳುವಳಿಯ ಆರಂಭದ ದಿನಗಳಲ್ಲಿ ಮಧ್ಯಮವರ್ಗದ ಉನ್ನತ ಜನರು ಮುಖ್ಯವಾಗಿ ಸರ್ಕಾರದ ಉದ್ಯೋಗಗಳಿಗಾಗಿ ಹಾತೊರೆಯುತ್ತಿದ್ದ ವಿದ್ಯಾವಂತರು ಆ ಚಳವಳಿಯ ನಾಯಕರಾದರು. ೧೮೮೫ರಲ್ಲಿ ಸ್ಥಾಪಿತವಾದ ರಾಷ್ಟ್ರೀಯ ಮಹಾಸಭೆ ಪ್ರಾಪ್ತ ವಯಸ್ಸಿಗೆ ಬಂದಾಗ ಅಧಿಕಾರ ಧಿಕ್ಕರಿಸುವ ಉಗ್ರಪಕ್ಷದ ಹೊಸ ನಾಯಕತ್ವ ರೂಪುಗೊಂಡು ಮಧ್ಯಮವರ್ಗದ ಕೆಳದರ್ಜೆಯ ಜನರನ್ನೂ ವಿದ್ಯಾರ್ಥಿಗಳು ಮತ್ತು ಯುವಕರನ್ನೂ ಆಕರ್ಷಣೆಮಾಡಿತು. ಬಂಗಾಲದ ವಿಭಜನೆ ವಿರುದ್ಧ ಹೂಡಿದ ಚಳುವಳಿಯಲ್ಲಿ ದಕ್ಷರೂ ಉಗ್ರವಾದಿಗಳೂ ಆದ ಈ ಬಗೆಯ ನಾಯಕರು ಬಂಗಾಲದಲ್ಲಿ ಮುಂದೆ ಬಂದರು. ಆದರೆ ಈ ಹೊಸ ಯುಗದ ಮುಖ್ಯ ನಾಯಕನೆಂದರೆ ಮಹಾರಾಷ್ಟ್ರದ ಬಾಲಗಂಗಾಧರ ತಿಲಕ್. ಹಳೆಯ ಮುಖಂಡತ್ವದ ಪ್ರತಿನಿಧಿಯೂ ಮಹಾರಾಷ್ಟ್ರದ ವ್ಯಕ್ತಿಯೇ ಆಗಿದ್ದ. ಬಹಳ ಶಕ್ತನೂ, ಯುವಕನೂ ಆದ ಗೋಪಾಲ ಕೃಷ್ಣ ಗೋಖಲೆ ಆ ವ್ಯಕ್ತಿ. ಕ್ರಾಂತಿಕಾರಕ ಘೋಷಣೆಗಳೆದ್ದವು, ಕೋಪತಾಪಗಳೆದ್ದವು, ಪರಸ್ಪರ ಹೋರಾಟ ಅನಿವಾರ್ಯವಾಯಿತು. ಈ ಘರ್ಷಣೆ ತಪ್ಪಿಸಲು ಕಾಂಗ್ರೆಸ್‌ನ ಅತ್ಯಂತ ಹಳೆಯ ನಾಯಕನಾಗಿ ರಾಷ್ಟ್ರಪಿತ ಎಂದು ಎಲ್ಲರ ಗೌರವಕ್ಕೆ ಪಾತ್ರನಾದ ದಾದಾಭಾಯಿ ನವರೋಜಿ ವಿಶ್ರಾಂತಿ ಪಡೆಯುತ್ತಿದ್ದವನು ಪುನಃ ಕಾರ್ಯಕ್ಕಿಳಿಯಬೇಕಾಯಿತು. ಈ ಶಾಂತಿ ಬಹಳ ದಿನ ಉಳಿಯಲಿಲ್ಲ. ೧೯೦೭ರಲ್ಲಿ ಪುನಃ ಘರ್ಷಣೆಯಾಗಿ ಹಿಂದಿನ ಮಂದಪಕ್ಷದವರಿಗೆ ಗೆಲುವಾಯಿತು. ಸಂಸ್ಥೆಯ ಆಡಳಿತ ತಮ್ಮ ಕೈಯಲ್ಲಿದ್ದುದರಿಂದಲೂ ಮತ್ತು ಕಾಂಗ್ರೆಸ್ಸಿನಲ್ಲೂ ಮತದಾನ ಪದ್ಧತಿ ಬಹಳ ಕಠಿನವಿದ್ದುದರಿಂದಲೂ ಈ ಜಯವು ಸಾಧ್ಯವಾಯಿತು. ಆದರೆ ರಾಜಕೀಯ ಭಾವನೆಯ ಬಹುಸಂಖ್ಯಾತರು ತಿಲಕರ ಪರ ಇದ್ದರೆಂಬುದಕ್ಕೆ ಅನುಮಾನವಿರಲಿಲ್ಲ. ಕಾಂಗ್ರೆಸ್ಸಿನ ಪ್ರಭಾವ ಕಡಮೆಯಾಗಿ ಜನರ ಮನಸ್ಸು ಬೇರೆ ದಾರಿ ಹಿಡಿಯಿತು. ಬಂಗಾಲದಲ್ಲಿ ಕ್ರಾಂತಿಕಾರಕ ಚಟವಟಿಕೆಗಳು ಆರಂಭವಾದವು. ರಷ್ಯ ಮತ್ತು ಐರ್ಲೆಂಡಿನ ಕ್ರಾಂತಿಕಾರಕ ಪಂಗಡದವರ ಮಾರ್ಗಾನುಸರಣೆಗೆ ಇಲ್ಲಿಯೂ ಆರಂಭವಾಯಿತು.

ಮುಸ್ಲಿಂ ಯುವಕರಲ್ಲಿ ಸಹ ಈ ಕ್ರಾಂತಿಕಾರಕ ಭಾವನೆ ಉತ್ಪನ್ನವಾಗಲಾರಂಭಿಸಿತು. ಈ ಮನೋಭಾವನೆ ತಡೆಗಟ್ಟಲು ಅಲಿಘಡದ ಕಾಲೇಜು ಪ್ರಯತ್ನ ಮಾಡಿತ್ತು. ಸರಕಾರದ ಪ್ರೇರಣೆಯಿಂದ ಆಗಖಾನ್ ಮುಂತಾದವರು ಮುಸ್ಲಿಂ ಲೀಗನ್ನು ಸ್ಥಾಪಿಸಿ, ಮುಸ್ಲಿಮರಿಗೆ ಒಂದು ರಾಜಕೀಯ ವೇದಿಕೆ ಕೊಟ್ಟು ಕಾಂಗ್ರೆಸಿನಿಂದ ದೂರ ನಿಲ್ಲಿಸಿದರು. ಭಾರತದ ಮುಂದಿನ ಭವಿಷ್ಯದ ದೃಷ್ಟಿಯಿಂದ ಬಹು ಮುಖ್ಯವಾದ ಇನ್ನೊಂದು ವಿಶೇಷ ಘಟನೆ ಎಂದರೆ ಮುಸ್ಲಿಮರಿಗೆ ಪ್ರತ್ಯೇಕ ಚುನಾವಣೆ ಏರ್ಪಡಿಸಲು ಸರ್ಕಾರ ತೀರ್ಮಾನ ಮಾಡಿತು. ಇನ್ನೂ ಮುಂದೆ ಮುಸ್ಲಿಂ ಕ್ಷೇತ್ರಗಳಾದ ಮುಸ್ಲಿಮರು ಮಾತ್ರ ಚುನಾವಣೆಗೆ ನಿಂತುಕೊಳ್ಳಲು ಸಾಧ್ಯವಿತ್ತು. ಉಳಿದ ಭಾರತೀಯರಿಂದ ಅವರನ್ನು ಪ್ರತ್ಯೇಕಿಸಿ ಒಂದು ರಾಜಕೀಯ ಅಡ್ಡಗೋಡೆ ಹಾಕಿದ. ಅನೇಕ ಶತಮಾನಗಳ ಸಾಮೂಹಿಕ ಜೀವನ ಮತ್ತು ಈಚಿನ ಔದ್ಯೋಗಿಕ ಪ್ರಗತಿಯಿಂದ ತಾನಾಗಿ ಬೆಳೆದು ರೂಪುಗೊಳ್ಳುತ್ತಿದ್ದ ಸಂಘಟನೆ ಮತ್ತು ಸಮ್ಮಿಲನ ಕಾರ್ಯದ ಗತಿಯನ್ನು ಹಿಂದಿರುಗಿಸಿದರು. ಆರಂಭದಲ್ಲಿ ಮತದಾನ ಮಾಡುವವರ ಸಂಖ್ಯೆ ಅತ್ಯಲ್ಪವಿದ್ದುದರಿಂದ ಈ ವಿಭಜನೆ ಅಷ್ಟು ಅನರ್ಥಕಾರಿ ಎನಿಸಲಿಲ್ಲ. ಆದರೆ ಕ್ರಮೇಣ ಮತದಾನ ಮಾಡುವವರ ಸಂಖ್ಯೆ ಅತ್ಯಲ್ಪ ವಿದ್ದುದರಿಂದ ಈ ವಿಭಜನೆ ಅಷ್ಟು ಅನರ್ಥಕಾರಿ ಎನಿಸಲಿಲ್ಲ. ಆದರೆ ಕ್ರಮೇಣ ಮತದಾನ ಮಾಡುವವರ

ಸಂಖ್ಯೆ ಬೆಳೆದಂತೆ ಅದು ಸಾರ್ವಜನಿಕಜೀವನದ ಮತ್ತು ಸಮಾಜದ ಪ್ರತಿಯೊಂದು ಕಾರ್ಯ ಕ್ಷೇತ್ರ ವನ್ನೂ ವ್ಯಾಪಿಸಿ ಜನಜೀವನವನ್ನೇ ವಿಷಮಯವನ್ನಾಗಿ ಮಾಡಿತು. ಪೌರಸಭೆಗಳಲ್ಲಿ, ಸ್ಥಳೀಯ ಸಂಸ್ಥೆ ಗಳಲ್ಲಿ ಸಹ ಈ ವಿಷವಾಹಿನಿ ಹರಡಿ ಕೊನೆಗೆ ಅತಿ ಘೋರರೂಪತಾಳಿತು. ವ್ಯಾಪಾರ ಸಂಸ್ಥೆಗಳು, ವಿದ್ಯಾರ್ಥಿ ಸಂಘಗಳು, ವಾಣಿಜ್ಯ ಸಂಘಗಳು ಯಾವುದನ್ನೂ ಬಿಡಲಿಲ್ಲ. ಈ ಎಲ್ಲ ಕಾರ್ಯ ಚಟುವಟಿಕೆ ಗಳಲ್ಲಿ ಮುಸ್ಲಿಮರು ಹಿಂದುಳಿದಿದ್ದುದರಿಂದ ಈ ಸಂಸ್ಥೆಗಳು ಸ್ವಾಭಾವಿಕವಾಗಿ ಬೆಳೆಯದೆ, ಮೇಲಿನವರ ಪ್ರೋತ್ಸಾಹದಿಂದ ಹುಟ್ಟಿದ ಕೃತಕ ಸಂಸ್ಥೆಗಳಾಗಿದ್ದವು. ಅವುಗಳ ಆಡಳಿತ ಸೂತ್ರಗಳೆಲ್ಲ ಹಳೆಯ ಶ್ರೀಮಂತರ ಕೈಸೇರಿತು. ಈ ರೀತಿ ಮುಸ್ಲಿಂ ಮಧ್ಯವರ್ಗ ಮತ್ತು ಸಾಮಾನ್ಯ ಜನತೆಯು ಸಹ ಉಳಿದ ಭಾರತದ ಪ್ರಗತಿವಾಹಿನಿಯ ಪ್ರವಾಹದಿಂದ ದೂರ ಸರಿದರು. ಬ್ರಿಟಿಷರ ರಕ್ಷಣೆಯನ್ನೇ ನಂಬಿ ಅಸ್ತಿತ್ವ ಪಡೆಯಲು ಹಾತೊರೆಯುತ್ತಿದ್ದ ಪ್ರತಿಗಾಮಿ ಪಕ್ಷದ ಜನರಿಗೆ ಭಾರತದಲ್ಲಿ ಕೊರತೆಯಿರಲಿಲ್ಲ. ಈ ಪ್ರತ್ಯೇಕ ಚುನಾವಣೆಗಳಿಂದ ಹೊಸದೊಂದು ಬಲಿಷ್ಠವಾದ ಹಕ್ಕುದಾರಿ ಪಕ್ಷ ಉದ್ಭವವಾಯಿತು.

ರಾಜಕೀಯ ಭಾವನೆ ಬೆಳೆದಂತೆ ಅದು ತಾನಾಗಿ ಅಡಗುವ ಒಂದು ತಾತ್ಕಾಲಿಕ ಪಿಡುಗಾಗಿರಲಿಲ್ಲ. ಅಧಿಕಾರಿಗಳ ಪ್ರೋತ್ಸಾಹವಿದ್ದುದರಿಂದ ಅದು ಬೆಳೆದು, ಹಬ್ಬಿ, ರಾಜಕೀಯ, ಸಾಮಾಜಿಕ ಆರ್ಥಿಕ ಏನೆ ಇರಲಿ ದೇಶದ ಎಲ್ಲ ನಿಜವಾದ ಸಮಸ್ಯೆಗಳನ್ನು ಕವಿದುಬಿಟ್ಟಿತು. ಹಿಂದೆಂದೂ ಇಲ್ಲದ ಅನೈಕ್ಯತೆಯನ್ನೂ ಪರಸ್ಪರ ವೈಷಮ್ಯವನ್ನೂ ತಂದು ಹಾಕಿತು. ಅಧಿಕಾರಿಗಳ ನೆರವಿಗಾಗಿ ಹಾತೊರೆದು ಕುಳಿತಿದ್ದ ಆ ಪಕ್ಷದ ಸ್ವಾವಲಂಬನ ಧೀಶಕ್ತಿಯನ್ನೇ ನಾಶಮಾಡಿ, ದಾಸ್ಯ ವೃತ್ತಿಯನ್ನು ಹೆಚ್ಚಿಸಿ ಅವರ ಬಲವನ್ನೇ ಕುಗ್ಗಿಸಿತು.

ಆರ್ಥಿಕ ಮಟ್ಟ ಮತ್ತು ವಿದ್ಯೆಯಲ್ಲಿ ಹಿಂದುಳಿದ ಅಲ್ಪಸಂಖ್ಯಾತ ಪಂಗಡಗಳಿಗೆ ಪ್ರತಿಯೊಂದು ವಿಧ ದಲ್ಲೂ ಸಹಾಯಮಾಡಿ ಅವರ ನ್ಯೂನತೆಗಳನ್ನು ಹೋಗಲಾಡಿಸಿ, ಮುಖ್ಯವಾಗಿ ವಿದ್ಯಾವಂತರನ್ನಾಗಿ ಮಾಡಿ ಮುಂದಕ್ಕೆ ತರಬೇಕಾದ್ದು ನ್ಯಾಯ ಮತ್ತು ಆವಶ್ಯಕ. ಮುಸ್ಲಿಮರು, ಹಿಂದುಳಿದ ಇತರ ದಲಿತ ಜನಾಂಗದವರು ಯಾರಿಗೂ ಈ ಅನುಕೂಲತೆಗಳ್ಯಾವುವನ್ನೂ ಒದಗಿಸಲಿಲ್ಲ. ಕೆಳದರ್ಜೆಯ ಸರಕಾರಿ ನೌಕರಿಗಳಲ್ಲಿ ಕೆಲವು ಸ್ಥಾನಗಳಿಗಾಗಿ ಈ ಎಲ್ಲ ವಿವಾದ ಹುಟ್ಟಿದವು. ಈ ಎಲ್ಲರ ಜೀವನ ಮಟ್ಟ ಉತ್ತಮ ಗೊಳಿಸುವದಕ್ಕೆ ಪ್ರತಿಯಾಗಿ ಯೋಗ್ಯತೆಗೆ ಇದ್ದ ಬೆಲೆಯೂ ಹೋಯಿತು.

ಈ ಪ್ರತ್ಯೇಕ ಚುನಾವಣೆಗಳಿಂದ ಮೊದಲೇ ಹಿಂದುಳಿದವರೂ, ದುರ್ಬಲರೂ ಇದ್ದವರು ಇನ್ನೂ ದುರ್ಬಲರಾದರು. ಪ್ರತ್ಯೇಕತಾ ಮನೋಭಾವನೆಗೆ ಪ್ರೋತ್ಸಾಹ ದೊರೆಯಿತು, ರಾಷ್ಟ್ರದ ಐಕ್ಯತೆಗೆ ವಿಘ್ನ ಬಂದಿತು, ಪ್ರಜಾಪ್ರಭುತ್ವದ ಕೊಲೆಯಾಯಿತು. ವಿಶೇಷ ಪ್ರತಿಗಾಮಿ ಮನೋಭಾವನೆಯ ಹೊಸ ವಿರೋಧಪಕ್ಷದ ಅವತಾರವಾಯಿತು. ಜನಜೀವನದ ಮಟ್ಟ ಇನ್ನೂ ತಳಹತ್ತಿತು. ಮತ್ತು ದೇಶದ ಸರ್ವ ಸಾಮಾನ್ಯ ಆರ್ಥಿಕ ಸಮಸ್ಯೆಗಳಿಗೆ ಕೊಡಬೇಕಾದ ಲಕ್ಷ್ಯ ದೊರೆಯದಂತೆ ಆಯಿತು. ಮೊದಲು ಮುಸ್ಲಿಮರಿಂದ ಆರಂಭವಾದ ಪ್ರತ್ಯೇಕ ಚುನಾವಣೆ ಕೊನೆಕೊನೆಗೆ ಎಲ್ಲ ಅಲ್ಪ ಸಂಖ್ಯಾತರಿಗೆ ಮತ್ತು ಪಂಗಡ ಗಳಿಗೆ ದೊರೆತು ಭಾರತವು ಒಂದು ಪಂಚರಂಗಿ ಚಿತ್ರವಾಯಿತು. ನನಗೆ ಏನೂ ಕಾಣದಿದ್ದರೂ ಆರಂಭ ದಲ್ಲಿ ಸ್ವಲ್ಪ ಪ್ರಯೋಜನ ಆಗಿರಬಹುದು. ಆದರೆ ಪ್ರತಿಯೊಂದು ಜೀವನಕ್ಷೇತ್ರದಲ್ಲಿ ಅದರಿಂದ ಆಗಿರುವ ಹಾನಿ ಅಪಾರ. ಎಲ್ಲ ಬಗೆಯ ಪ್ರತ್ಯೇಕ ಮನೋಭಾವನೆಗಳು ಬೆಳೆದಿವೆ ಮತ್ತು ಭಾರತದ ವಿಭಜನೆಗೂ ಕೊನೆಗೆ ಅವಕಾಶಮಾಡಿಕೊಟ್ಟಿದೆ.

ಈ ಪ್ರತ್ಯೇಕ ಚುನಾವಣೆಗಳು ಆಚರಣೆಗೆ ಬಂದಾಗ ಲಾರ್ಡ್ ಮಾರ್ಲೆ ಇಂಗ್ಲೆಂಡಿನಲ್ಲಿ ಭಾರತ ಕಾರ್ಯದರ್ಶಿಯಾಗಿದ್ದ. ಮೊದಲು ಆತ ಇದನ್ನು ವಿರೋಧಿಸಿದರೂ ಕೊನೆಗೆ ವೈಸರಾಯನ ಬಲಾತ್ಕಾರಕ್ಕೆ ಬಲಿಯಾದ. ತನ್ನ ದಿನಚರಿಯಲ್ಲಿ ಈ ಕಾರ್ಯ ನೀತಿಯ ಅಪಾಯ ತೋರಿಸಿ, ಪ್ರಜಾಸತ್ತೆಯ ಸಂಸ್ಥೆ ಗಳ ಬೆಳೆವಣಿಗೆಗೆ ಅಡ್ಡಿಯಾಗುತ್ತದೆ ಎಂದು ಸ್ಪಷ್ಟಪಡಿಸಿದ್ದಾನೆ. ಪ್ರಾಯಶಃ ವೈಸರಾಯ್ ಮತ್ತು ಆತನ ಸಹೋದ್ಯೋಗಿಗಳಿಗೆ ಅದೇ ಬೇಕಾಗಿತ್ತು. ೧೯೧೮ರಲ್ಲಿ ಭಾರತದ ರಾಜಕೀಯ ಸುಧಾರಣೆಗಳಿಗೆಂದು ಹೊರಬಿದ್ದ ಮಾಂಟೆಗೂ ಚೆಮ್ಸ್‌ಫರ್ಡ್ ವರದಿಯಲ್ಲಿ ಪ್ರತ್ಯೇಕ ಚುನಾವಣೆಗಳಿಂದ ಆಗುವ ಹಾನಿಯನ್ನು ಪುನಃ ವಿವರಿಸಿದ್ದಾರೆ. "ಜಾತಿ ಪಂಗಡಗಳಂತೆ ವಿಭಜಿಸುವುದೆಂದರೆ ಪರಸ್ಪರ ಕಾದಾಡುವ ರಾಜಕೀಯ

ಪಂಗಡ ಸೃಷ್ಟಿಸಿದಂತೆ. ನಾಗರಿಕರಂತೆ ವರ್ತಿಸುವ ಬದಲು ವಿರೋಧಿಗಳೆಂಬ ಭಾವನೆ ಹುಟ್ಟುತ್ತದೆ. ಜಾತಿಯ ಆಧಾರದಮೇಲಿನ ಪ್ರತ್ಯೇಕ ಚುನಾವಣೆಗಳು ಪ್ರಜಾಪ್ರಭುತ್ವ ತತ್ವದ ಬೆಳವಣಿಗೆಗೆ ಅಡ್ಡಿ" ಎಂದು ಹೇಳಿದಾರೆ.

## ಅಧ್ಯಾಯ ೮—ಕೊನೆಯ ಅಂಕ (೨): ರಾಷ್ಟ್ರೀಯತೆ ಮತ್ತು ಸಾಮ್ರಾಜ್ಯತತ್ವಗಳ ಘರ್ಷಣೆ

### ೧, ಮಧ್ಯಮವರ್ಗದ ಅಸಹಾಯಕತೆ: ಗಾಂಧಿಯ ಪ್ರವೇಶ

ಮೊದಲನೆಯ ಪ್ರಪಂಚಯುದ್ಧ ಆರಂಭವಾಯಿತು. ಕಾಂಗ್ರೆಸ್ಸಿನಲ್ಲಿ ಉಗ್ರಪಕ್ಷದವರಿಗೂ ಮತ್ತು ಮಂದ ಪಕ್ಷದವರಿಗೂ ಇದ್ದ ಭಿನ್ನಾಭಿಪ್ರಾಯಗಳು, ಯುದ್ಧ ಕಾಲದ ನಿರ್ಬಂಧ ಮತ್ತು ನಿಷೇಧಗಳಿಂದ ರಾಜಕೀಯವು ತಣ್ಣಗಾಗಿತ್ತು. ಮುಸ್ಲಿಮರಲ್ಲಿ ತಲೆ ಎತ್ತುತ್ತಿದ್ದ ಮಧ್ಯಮ ವರ್ಗ ಹೆಚ್ಚು ರಾಷ್ಟ್ರೀಯ ಭಾವನೆ ತೋರುತ್ತ ಮುಸ್ಲಿಂ ಲೀಗ್ ಮತ್ತು ಕಾಂಗ್ರೆಸ್ ಎರಡೂ ಸಮೀಪವರ್ತಿಯಾಗಿ ಏಕೀಭವಿಸಿ ಕೆಲಸ ಮಾಡುವಂತೆ ಮಾಡಿದರು.

ಯುದ್ಧ ಕಾಲದಲ್ಲಿ ಕೈಗಾರಿಕಾ ಪ್ರಗತಿಯಾಗಿ, ಅಪಾರ ಲಾಭ ಸಂಪಾದನೆಯಾಯಿತು. ಬಂಗಾಲದ ಸೆಣಬಿನ ಕಾರ್ಖಾನೆಗಳಿಗೆ ಮತ್ತು ಮುಂಬೈ ಬಟ್ಟೆ ಕಾರ್ಖಾನೆಗಳಿಗೆ ಶೇಕಡ ೧೦೦–೨೦೦ ರಷ್ಟು ಲಾಭ ದೊರೆಯಿತು. ಇದರಲ್ಲಿ ಕೆಲವು ಭಾಗ ಡಂಡಿ ಮತ್ತು ಲಂಡನ್ ನಗರಗಳ ವಿದೇಶಿ ಬಂಡವಾಳಗಾರರಿಗೂ, ಉಳಿದುದು ಭಾರತೀಯ ಕೋಟ್ಯಾಧೀಶ್ವರರ ಸಂಪತ್ತನ್ನು ಹೆಚ್ಚಿಸುವುದಕ್ಕೂ ಹೋಯಿತು. ಆದರೂ ಈ ಸಂಪಾದಿಸಿಕೊಟ್ಟ ಶ್ರಮ ಜೀವಿಗಳ ಜೀವನಮಟ್ಟ ಅದೇ ಅಧೋಗತಿಯಲ್ಲಿತ್ತು. ಕಿಟಕಿ, ಹೊಗೆಯ ಗೂಡು, ಬೆಳಕು, ನೀರು ಮತ್ತು ಯಾವ ಆರೋಗ್ಯ ಸೌಕರ್ಯವೂ ಇಲ್ಲದ 'ಕೊಳಕು ರೋಗ ಕೂಪ'ಗಳಲ್ಲೇ ವಾಸಮಾಡುತ್ತಿದ್ದರು. ಇದೂ ಬ್ರಿಟಿಷ್ ಬಂಡವಾಳಗಾರರ ಹಿಡಿತದಲ್ಲಿದ್ದ ಅರಮನೆಗಳ ನಗರವೆನ್ನುವ ಕಲ್ಕತ್ತೆಯ ಸಮೀಪವೇ. ಭಾರತೀಯ ಬಂಡವಾಳಗಾರರಿದ್ದ ಮುಂಬೈ ನಗರದಲ್ಲಿ ೧೫×೧೨ ಅಡಿ ಚದುರದ ಕೋಣೆಯೊಂದರಲ್ಲಿ ವಯಸ್ಕರು ಮತ್ತು ಮಕ್ಕಳೂ ೩೦ ಜನರ ಆರು ಸಂಸಾರಗಳು ವಾಸಮಾಡುತ್ತಿದ್ದರೆಂದ ವಿಚಾರಣಾ ಸಮಿತಿಯ ವರದಿಯೊಂದರಿಂದ ಗೊತ್ತಾಗುತ್ತದೆ. ಅವರಲ್ಲಿ ಮೂರು ಜನ ಗರ್ಭಿಣಿ ಸ್ತ್ರೀಯರು! ಪ್ರತಿಯೊಂದು ಸಂಸಾರಕ್ಕೂ ಅಲ್ಲಿಯೇ ಒಂದೊಂದು ಒಲೆ. ಇದೆಲ್ಲ ವಿಶೇಷ ಪರಿಸ್ಥಿತಿಯಾದರೂ, ಅತಿ ಸಾಮಾನ್ಯವಿತ್ತು. ಸ್ವಲ್ಪ ಉತ್ತಮಗೊಳಿಸುವ ಪ್ರಯತ್ನ ನಡೆದಿದ್ದರೂ ೧೯೩೦ ರಿಂದ೧೯೪೫ರ ವರೆಗೆ ಇದ್ದ ಪರಿಸ್ಥಿತಿಯೇ ಹೀಗೆ. ಅದಕ್ಕೂ ಮುಂಚಿನ ಸ್ಥಿತಿಯನ್ನು ಊಹಿಸಲು ಸಹ ಸಾಧ್ಯವಿಲ್ಲ.*

ಈ ಶ್ರಮಜೀವಿಗಳ ಕೇರಿಗಳಿಗೂ, ಗುಡಿಸಲುಗಳಿಗೂ ಹೋಗಿ ಮೂಗು ಮುಚ್ಚಿಕೊಂಡು, ಅಸಹ್ಯಪಟ್ಟು ಕೋಪದಿಂದ ದಿಗ್ಭ್ರಾಂತನಾಗಿ ನಾನು ಬಂದುದು ಇನ್ನೂ ನನಗೆ ಜ್ಞಾಪಕವಿದೆ. ಝರಿಯ ಕಲ್ಲಿದ್ದಲು ಗಣಿಯೊಳಗೆ ನಮ್ಮ ಹೆಂಗಸರು ಯಾವ ರೀತಿ ದುಡಿಯುತ್ತಾರೆಂಬುದನ್ನು ನೋಡಿದ್ದೇನೆ. ಮನುಷ್ಯರು ಈ ರೀತಿ ಕೆಲಸಮಾಡುವುದು ನೋಡಿ ನನಗಾದ ನೋವನ್ನು ನಾನೆಂದೂ ಮರೆಯಲಾರೆ. ಗಣಿಗಳ ಒಳಗೆ ಹೆಂಗಸರ ಕೆಲಸ ನಿಷೇಧಿಸಿದ್ದು ಅನಂತರವಲ್ಲ. ಯುದ್ಧಕ್ಕಾಗಿ ಹೆಚ್ಚು ಶ್ರಮಜೀವಿಗಳು ಬೇಕಾದ್ದರಿಂದ ಪುನಃ ಅವರನ್ನು ಕೆಲಸಕ್ಕೆ ನೇಮಿಸಿರುವಂತೆ ಕೇಳಿದ್ದೇನೆ. ಆದರೂ ಕೋಟ್ಯಾಂತರ ಜನ ಗಂಡಸರು ನಿರುದ್ಯೋಗಿಗಳಾಗಿ ಹಸಿವಿನಿಂದ ನರಳುತ್ತಿದ್ದಾರೆ. ಗಂಡಸರಿಗೆ ಕೊರತೆ ಇಲ್ಲ. ಕೂಲಿ ಬಹಳ ಕಡಿಮೆಯಾಗಿ ಕೆಲಸ ಬಹುಕಷ್ಟತಮವಾದ್ದರಿಂದ ಜನರು ಹೋಗುವುದಿಲ್ಲ.

ಬ್ರಿಟಿಷ್ ಟ್ರೇಡ್ ಯೂನಿಯನ್ ಕಾಂಗ್ರೆಸ್ ಕಳುಹಿಸಿದ ನಿಯೋಗಗೋಷ್ಠಿಯೊಂದು ೧೯೨೮ರಲ್ಲಿ ಭಾರತಕ್ಕೆ ಬಂದಿತು. "ಅಸ್ಸಾಮ್ ಚಹಾದಲ್ಲಿ ಹತ್ತು ಲಕ್ಷ ಜನರ ಬೆವರು, ಹಸಿವು ಮತ್ತು ನಿರಾಶೆಗಳ ಕಣ್ಣೀರನ್ನು ವರ್ಷವೂ ವರ್ಷವೂ ಕುಡಿಯುತ್ತಿದೇವೆ" ಎಂದು ಅವರ ವರದಿಯಲ್ಲಿ ಹೇಳಿದ್ದಾರೆ. ೧೯೨೭–

* ಬಿ, ಶಿವರಾಯರ 'ಭಾರತದ ಕೈಗಾರಿಕಾ ಶ್ರಮಜೀವಿಗಳು' ಎಂಬ ಗ್ರಂಥದಿಂದ,

ಅರ ವರದಿಯಲ್ಲಿ ಬಂಗಾಲದ ರೈತರು " ಇಲಿಗಳಿಗೆ ಸಹ ಐದುವಾರ ಬದುಕಲಾಗದಂಥ ಆಹಾರ ತಿನ್ನುತ್ತಿದ್ದಾರೆ " ಎಂದು ಬಂಗಾಲದ ಆರೋಗ್ಯಶಾಖಾ ಮುಖ್ಯಾಧಿಕಾರಿ ಹೇಳಿದ್ದಾನೆ.

ಮೊದಲನೆ ಪ್ರಪಂಚ ಯುದ್ಧ ಕೊನೆಗೂ ಮುಗಿಯಿತು. ಶಾಂತಿಯಿಂದ ನಮಗೆ ಪರಿಹಾರ, ಪ್ರಗತಿಯ ಬದಲು ಪಂಜಾಬಿನಲ್ಲಿ ದಬ್ಬಾಳಿಕೆಯ ಸೈನಿಕ ಶಾಸನದ ಆಡಳಿತ ಆರಂಭವಾಯಿತು. ಅಪಮಾನದ ಕಹಿವಾತಾವರಣವೂ, ರೋಷಾವೇಶವೂ ಜನರ ಮನಸ್ಸಿನಲ್ಲಿ ಮೂಡಿತು. ರಾಜಕೀಯ ಸುಧಾರಣೆ ಮತ್ತು ಸರಕಾರದ ಅಧಿಕಾರವರ್ಗದ ಭಾರತೀಕರಣ ಅಂದು ಅಣಕವಾಡಾಯಿತು. ದೇಶದ ಮನುಷ್ಯತ್ವ ತುಳಿದು ಸತತವೂ ನಿರಾತಂಕ ನಡೆಯುತ್ತಿದ್ದ ಸುಲಿಗೆಯಿಂದ ಜನರ ಬಡತನ ಹೆಚ್ಚಿ, ಸತ್ವ ಶೂನ್ಯರಾಗುತ್ತಿದ್ದುದು ಒಂದು ಅಸಹನೀಯ ಅವಮಾನವಾಯಿತು. ರಾಷ್ಟ್ರ ಅನಾಥರಾಷ್ಟ್ರವಾಗಿತ್ತು.

ಆದರೂ ನಾವು ಮಾಡಬಲ್ಲುದೇನು ? ಈ ವಿಷಮ ಚಕ್ರವನ್ನು ಭೇದಿಸುವುದೆಂತು ? ಯಾವುದೋ ಒಂದು ಪೈಶಾಚಿಕ ಹಿಡಿತದಲ್ಲಿ ಸಿಕ್ಕು ನಿಸ್ಸಹಾಯಕರಾದಂತೆ ಇತ್ತು. ನಮ್ಮ ಕೈಕಾಲುಗಳೆಲ್ಲ ತಣ್ಣಗಾಗಿದ್ದುವು. ಮನಸ್ಸು ಸ್ತಂಭಿತವಾಗಿತ್ತು. ವ್ಯವಸಾಯಗಾರರು ದಾಸ್ಯಭಾವದಿಂದ ಭಯಗ್ರಸ್ತರಾಗಿದ್ದರು. ಕೈಗಾರಿಕಾ ಶ್ರಮಜೀವಿಗಳ ಸ್ಥಿತಿಯೂ ಅದೇ ಇತ್ತು. ದೇಶವನ್ನೇ ಕವಿದಿದ್ದರೂ ಕಾರ್ಗತ್ತಲಿನಲ್ಲಿ ಕೈದೀವಿಗೆಯಾಗಿ ಜನತೆಯ ಮಾರ್ಗದರ್ಶಕರಾಗಬಹುದಾಗಿದ್ದ ಮಧ್ಯಮವರ್ಗ ಮತ್ತು ವಿದ್ಯಾವಂತರು ಸಹ ಈ ಸರ್ವವ್ಯಾಪಕ ಕತ್ತಲಿನಲ್ಲಿ ಪೂರ್ಣ ಕಂಗೆಟ್ಟಿದ್ದರು. ಕೆಲವು ದೃಷ್ಟಿಗಳಿಂದ ಸಾಮಾನ್ಯ ರೈತನಿಗಿಂತ ಅವರ ಸ್ಥಿತಿ ಇನ್ನೂ ಕರುಣಾಜನಕವಿತ್ತು. ಅಸಂಖ್ಯಾತ ವಿದ್ಯಾವಂತರು ತಮ್ಮ ವ್ಯವಸಾಯ ಬಿಟ್ಟು, ಬೇರಾವ ಉದ್ಯೋಗ ಅಥವಾ ಶ್ರಮಜೀವನವನ್ನೂ ನಡೆಸಲು ಶಕ್ತಿ ಇಲ್ಲದೆ, ನಿಸ್ಸಹಾಯಕರಾಗಿ, ನಿರಾಶರಾಗಿ ಇನ್ನೂ ಅಧೋಗತಿಗಿಳಿದು ಸಹೋದ್ಯೋಗಿಗಳ ಸಂಖ್ಯೆಯನ್ನೂ ಹೆಚ್ಚಿಸಿದರು. ಅಲ್ಪಸಂಖ್ಯೆಯ ಅನುಕೂಲಸ್ಥ ನ್ಯಾಯವಾದಿಗಳು, ವೈದ್ಯರು ಮತ್ತು ಇಂಜನಿಯರುಗಳ ಸಂಖ್ಯೆಯಿಂದ ಜನಜೀವನದಲ್ಲಿ ಯಾವ ವ್ಯತ್ಯಾಸವೂ ಆಗಲಿಲ್ಲ. ವ್ಯವಸಾಯಗಾರನಿಗೂ ಹೊಟ್ಟೆಗಿಲ್ಲದಾಯಿತು. ಆದರೆ ನೂರಾರು ವರ್ಷಗಳ ವಿಷಮ ಸನ್ನಿವೇಶ ವಿರುದ್ಧ ಹೋರಾಡಿದ್ದರ ಫಲವಾಗಿ ಆತನಿಗೊಂದು ಸಹನಶಕ್ತಿ ಬಂದಿತ್ತು ಮತ್ತು ಬಡತನರ ಹಸಿವಿನಲ್ಲಿ ಸಹ ಒಂದುಬಗೆಯ ನಿಶ್ಚಲ ಗಾಂಭೀರ್ಯದ ಮತ್ತು ಸರ್ವಸಮರ್ಥ ವಿಧಿವ್ಯಾಪಾರಕ್ಕೆ ತಲೆಬಾಗುವ ಮನೋಭಾವ ಬೆಳೆದಿತ್ತು. ಆದರೆ ಮಧ್ಯಮವರ್ಗದವರಲ್ಲಿ ಅದರಲ್ಲೂ ಅನುಕೂಲಸ್ಥರಲ್ಲಿ ಈ ಹಿನ್ನೆಲೆ ಇರಲಿಲ್ಲ. ಅರೆಬರೆಯ ವಿದ್ಯಾರ್ಜನೆಯಿಂದ, ನಿರಾಶರಾಗಿ ಎಲ್ಲಿ ದಾರಿ ಎಂಬ ಅರಿವು ಅವರಿಗಿರಲಿಲ್ಲ. ಹಳತರಲ್ಲಿ, ಹೊಸದರಲ್ಲಿ ಎರಡರಲ್ಲೂ ಅವರಿಗೆ ವಿಶ್ವಾಸವಿರಲಿಲ್ಲ. ಸಮಾಜ ಧ್ಯೇಯಕ್ಕೆ ಹೊಂದಿಕೊಳ್ಳಲಿಲ್ಲ. ಕಷ್ಟತಮವಾದರೂ ಏನಾದರೂ ಉಪಯುಕ್ತ ಕಾರ್ಯ ಮಾಡೋಣವೆಂಬ ಸಂಕಲ್ಪ ಇರಲಿಲ್ಲ. ಆಧುನಿಕ ಭಾವನೆಗೆ ಮೋಹಗೊಂಡರು. ಆದರೆ ಅದರ ಒಳಸತ್ವ ಅರ್ಥಮಾಡಿಕೊಳ್ಳಲಿಲ್ಲ. ಆಧುನಿಕ ಸಾಮಾಜಿಕ ಮತ್ತು ವೈಜ್ಞಾನಿಕ ಜ್ಞಾನ ಹುಟ್ಟಿರಲಿಲ್ಲ. ಕೆಲವರು ಹಿಂದಿನ ಶುಷ್ಕ ರೀತಿಗಳಿಗೇ ಅಂಟಿಕೊಂಡು ಅದರಲ್ಲೆ ಅಂದಿನ ಅವರ ಸಂಕಟ ಪರಿಹಾರಮಾಡಿಕೊಳ್ಳಲೆತ್ನಿಸಿದರು. ಆದರೆ ಅದರಲ್ಲಿ ಯಾವ ಪರಿಹಾರವೂ ದೊರೆಯಲಿಲ್ಲ. ಏಕೆಂದರೆ ಠಾಕೂರರು ಹೇಳಿರುವಂತೆ ನಿರ್ಜೀವವಸ್ತುವಿಗೆ ನೀರೆರೆದರೆ ನಮಗೂ ಸಾವೇ ಸಿದ್ಧ. ಇನ್ನು ಕೆಲವರು ಮಂಗಗಳಂತೆ ಪಾಶ್ಚಾತ್ಯರ ಅನುಕರಣೆ ಮಾಡಿದರು. ಈ ರೀತಿ ದೇಹ ಮತ್ತು ಮನಸ್ಸಿನ ಭದ್ರತೆಗಾಗಿ ಏನಾದರೊಂದು ನೆಲೆ ಕಾಣಹೋಗಿ ಯಾವ ನೆಲೆಯೂ ದೊರೆಯದ ಅನಾಥರಂತೆ ಭಾರತೀಯ ಜೀವನದ ಬಗ್ಗಡದ ಸುಳಿಯಲ್ಲಿ ಗುರಿ ಇಲ್ಲದೆ ತಿರುಗುತ್ತಿದ್ದರು.

ನಾವೇನು ಮಾಡಬಲ್ಲೆವು ? ಒಳಗಿಂದೊಳಗೆ ಭಾರತದ ಜನಜೀವನದ ರಕ್ತ ಹೀರುತ್ತಿದ್ದ ಬಡತನ ಮತ್ತು ನಿರಾಶೆಯ ಕೋಪದಿಂದ ಮೇಲೇಳುವುದೆಂದು ? ಇದು ಕೆಲವು ವರ್ಷಗಳ ನೋವು, ಸಂಕಟ ಮತ್ತು ದಿಗ್ಭ್ರಮೆಯಲ್ಲ, ಅನೇಕ ತಲೆಮಾರುಗಳಿಂದ ನಮ್ಮ ಜನತೆ ನಮ್ಮ " ರಕ್ತ, ಶ್ರಮ, ಕಣ್ಣೀರು ಮತ್ತು ಬೆವರನ್ನು " ಸುರಿಸಿದ್ದಾರೆ. ಈ ಹಳೆಯ ವ್ಯಾಧಿ ಭಾರತದ ದೇಹ ಮತ್ತು ಹೃದಯವನ್ನು ಅಸ್ಥಿಗತ ಕ್ಷೀಣಿಸಿತ್ತು. ಶ್ವಾಸಕೋಶವನ್ನೇ ಕ್ರಮೇಣ ವ್ಯಾಪಿಸುವುದು ನಿಧಾನ. ಆದರೆ ನಿಶ್ಚಯವಾಗಿ ಕೊಲ್ಲುವ ಕ್ಷಯ ರೋಗದಂತೆ ಈ ಕ್ರೂರ ವ್ಯಾಧಿಯು ಸಮಾಜದ ಎಲ್ಲ ಜೀವನದ ಮುಖವನ್ನೂ ವ್ಯಾಪಿ

ಸಿತ್ತು. ವಾಂತಿಭೇದಿ ಅಥವ ಗಡ್ಡೆಪ್ಲೇಗಿನ ವ್ಯಾಧಿಯಂತೆ ಬೇಗ ಕೊಲ್ಲುವ ಯಾವುದಾದರೂ ಪ್ರತ್ಯಕ್ಷ ವ್ಯಾಧಿ ಉತ್ತಮವೆಂದು ನಮಗೆ ಒಂದೊಂದು ಬಾರಿ ತೋರಿತು. ಆದರೆ ಅದು ತಾತ್ಕಾಲಿಕ ಭಾವನೆ. ಹೆಚ್ಚು ಧೈರ್ಯದಿಂದ ಯಾವ ಸಾಧನೆಯೂ ಸಾಧ್ಯವಿಲ್ಲ. ಹಳೆಯ ರೋಗ ಹರಿಸಲು ಅಲ್ಪ ಮಾನವರಿಂದ ಸಾಧ್ಯವಿಲ್ಲ. ಭಾರತದ ರಾಜಕೀಯದಲ್ಲಿ ಗಾಂಧೀಜಿ ಪ್ರವೇಶವಾದುದು ಇದೆ ಸಮಯದಲ್ಲಿ. ನಿಶ್ಚೇತನ ದೇಹಕ್ಕೆ ಜೀವದುಸಿರು ಕೊಟ್ಟು ಅಂಗಾಂಗಗಳಿಗೆ ಚಲನಶಕ್ತಿ ಕೊಡುವ ಶುಭ್ರಗಾಳಿಯಂತೆ ಕತ್ತಲೆ ಗಡಿಯೊಳಗೆ ತೂರಿ ಬಂದು ನಮ್ಮ ಕಣ್ಣು ಪೊರೆ ತೆಗೆದ ಬೆಳಕಿನ ಕಿರಣದಂತೆ, ಅನೇಕ ವಸ್ತುಗಳನ್ನುರುಳಿಸಿ ಜನಸುನವನ್ನೂ ಅಲ್ಲೋಲ ಕಲ್ಲೋಲ ಮಾಡಿದ ಬಿರುಗಾಳಿಯಂತೆ ಗಾಂಧಿಜಿ ಬಂದರು. ಮೇಲಿನಿಂದ ಕೆಳಗಿಳಿದು ಬಂದವರಲ್ಲಿ ಭಾರತದ ಜನಕೋಟಿಯ ಮಡಿಲಿನಿಂದ ಬಂದು ಅವರ ಭಾಷೆಯಲ್ಲೇ ಮಾತನಾಡಿ ಸದಾ ಅವರು ಮತ್ತು ಅವರ ದಾರುಣಸ್ಥಿತಿಯ ಕಡೆಗೆ ಬೆರಳು ತೋರಿಸಿ ದೃಷ್ಟಿ ಇಟ್ಟರು. ರೈತರ ಕೂಲಿಗಾರರ ರಕ್ತಹೀರಿ ಬಾಳುವ ನೀವು ಅವರ ಸವಾರಿ ಮಾಡಬೇಡಿ, ಈ ದಾರಿದ್ರ್ಯ ಮತ್ತು ಸಂಕಟಕ್ಕೆ ಕಾರಣವಾದ, ಜೀವನ ರೀತಿ ಬಿಡಿ ಎಂದು ಸಾರಿದರು. ರಾಜಕೀಯ ಸ್ವಾತಂತ್ರ್ಯಕ್ಕೆ ಆಗೊಂದು ಹೊಸ. ರೂಪ ಬಂದಿತು. ಬೇರೆ ಅರ್ಥ ಬಂದಿತು. ಅವರು ಹೇಳಿದ ಎಲ್ಲ ವಿಷಯಗಳನ್ನೂ ನಾವು ಒಪ್ಪಲಿಲ್ಲ ಒಪ್ಪಿದುದು ಸ್ವಲ್ಪ ಭಾಗ ಮಾತ್ರ. ಆದರೆ ಇದೆಲ್ಲ ಮುಖ್ಯವಲ್ಲ. ಅವರ ಉಪದೇಶವ ಸಾರಸರ್ವಸ್ವ ಎಂದರೆ ನಿರ್ಭಯತೆ ಮತ್ತು ಸತ್ಯ; ಮತ್ತು ನಿರ್ಭಯತೆ ಮತ್ತು ಸತ್ಯಮಾರ್ಗದಲ್ಲಿ ಕಲ್ಯಾಣವನ್ನೆ ಮುಖ್ಯ ಗುರಿಯಾಗಿಟ್ಟುಕೊಂಡ ಕಾರ್ಯನೀತಿ. ನಮ್ಮ ಪ್ರಾಚೀನ ಸಾಹಿತ್ಯದಂತೆ ವ್ಯಕ್ತಿ ಅಥವ ರಾಷ್ಟ್ರದ ಮುಖ್ಯ ವೈಶಿಷ್ಟ್ಯವೆಂದರೆ ಅಭಯ ಅಥವ ನಿರ್ಭಯತೆ; ಕೇವಲ ಶಾರೀರಕ ಧೈರ್ಯ ಮಾತ್ರವಲ್ಲ, ಕನಸಿನಲ್ಲಿ ಸಹ ಅಧೈರ್ಯಪಡದಿರುವುದು. ಜನನಾಯಕರ ಪ್ರಥಮ ಕರ್ತವ್ಯ ಜನರನ್ನು ನಿರ್ಭಯರನ್ನಾಗಿ ಮಾಡುವುದು ಎಂದು ಜನಕ ಮತ್ತು ಯಾಜ್ಞವಲ್ಕರು ನಮ್ಮ ಇತಿಹಾಸದ ಮುಂಬೆಳಗಿನಲ್ಲೆ ಸಂದೇಶ ಸಾರಿದ್ದರು. ಆದರೆ ಬ್ರಿಟಿಷ್ ಆಡಳಿತದ ಪರಿಣಾಮವಾಗಿ ಸೈನ್ಯದ ಭಯ, ಪೋಲಿಸರ ಭಯ, ದೇಶಾದ್ಯಂತ ಹರಡಿದ ಗುಪ್ತಚಾರರ ಭಯ, ಅಧಿಕಾರಿವರ್ಗದ ಭಯ, ಜನರನ್ನು ತುಳಿಯುವ ಶಾಸನದ ಭಯ, ಸೆರೆಮನೆಯ ಭಯ, ಜಮೀನುದಾರಿ ಆಡಳಿತಗಾರನ ಭಯ, ಸಾಹುಕಾರನ ಭಯ, ಸದಾ ಬಾಗಿಲಲ್ಲೆ ಕಾದಿದ್ದ ನಿರುದ್ಯೋಗ ಮತ್ತು ಉಪವಾಸದ ಭಯ ಈ ರೀತಿ ಜನಜೀವನವನ್ನೇ ಅದುಮಿ ಕತ್ತು ಹಿಸುಕುವ ಭಯವು ದೇಶವನ್ನೇ ಆವರಿಸಿತ್ತು. ಗಾಂಧೀಜಿಯ ಪ್ರಶಾಂತ, ಅಸ್ಖಲಿತವಾಣಿಯ ಮೊದಲ ಕೊಡಲಿ ಪೆಟ್ಟು ದೇಶವನ್ನೇ ಮುಸುಕಿದ್ದ ಈ ಭೀತಿಯ ಭೂತಕ್ಕೆ. ನಿರ್ಭಯರಾಗಿ ಎಂಬುದೇ ಆ ದಿವ್ಯ ಸಂದೇಶ. ಅದು ಅಷ್ಟು ಸುಲಭವೆ? ಎಂದಿಗೂ ಅಲ್ಲ. ಆದರೆ ಭೀತಿಯೇ ವಾಸ್ತವತೆಗಿಂತಲೂ ಹೆಚ್ಚು ಭೀಕರ ಭೂತಗಳನ್ನು ಎಬ್ಬಿಸುತ್ತದೆ, ಮತ್ತು ವಾಸ್ತವತೆಯನ್ನು ಶಾಂತಚಿತ್ತರಾಗಿ ಅರ್ಥಮಾಡಿಕೊಂಡು ಒಪ್ಪಿ ಅದರ ಪರಿಣಾಮಗಳಿಗೆ ಸಿದ್ಧರಾದರೆ ಭಯವು ಬಹುಮಟ್ಟಿಗೆ ಕಡಮೆಯಾಗುತ್ತದೆ.

ಈ ರೀತಿ ಭಾರತದ ಜನತೆಯನ್ನು ಮುಸುಕಿದ್ದ ಈ ಭೀತಿಯ ಕಾರ್ಗತ್ತಲ ತೆರೆಯು ಏಕಾಏಕಿ ಸಂಪೂರ್ಣವಲ್ಲದಿದ್ದರೂ ಬಹುಮಟ್ಟಿಗೆ ಅತ್ಯಾಶ್ಚರ್ಯ ರೀತಿಯಲ್ಲಿ ಮಾಯವಾಯಿತು. ಭೀತಿಗೂ ಸುಳ್ಳಿಗೂ ನೆಂಟತನ ಸಮೀಪವಿರುವಂತೆ, ಅಭಯದ ಹಿಂದೆಯೇ ಸತ್ಯವಿದೆ. ಭಾರತೀಯರು ಮೊದಲಿಗಿಂತ ಹೆಚ್ಚು ಸತ್ಯ ನಿಷ್ಠರಾಗಲಿಲ್ಲ, ಏಕಾಏಕಿ ತಮ್ಮ ಸ್ವಭಾವ ಬದಲಾಯಿಸಲೂ ಇಲ್ಲ. ಆದರೆ ಅಸತ್ಯ ಮತ್ತು ಭಯಕ್ಕೆ ಅವಶ್ಯಕತೆ ಇಲ್ಲವೆಂದು ಮನಗಂಡೊಡನೆ ಒಂದು ಪ್ರಳಯಾಂತಕ ಪರಿವರ್ತನೆ ಆಯಿತು. ಆದರೆ ಮನಶ್ಶಾಸ್ತ್ರಜ್ಞ ವೈದ್ಯನು ರೋಗಿಯ ರೋಗಮೂಲಕ್ಕೇ ಹೋಗಿ ಅವನ ಮನೋವಿಕಲ್ಪದ ಮೂಲಕಾರಣಗಳನ್ನು ಕಂಡು ಹಿಡಿದು ರೋಗಿಗೆ ಮನದಟ್ಟುಮಾಡಿ, ಸೆರೆಯಿಂದ ರೋಗಿಯನ್ನು ಬಿಡುಗಡೆ ಮಾಡಿದಂತೆ ಒಂದು ಮಾನಸಿಕ ಪರಿವರ್ತನೆಯೇ ಆಯಿತು.

ಈ ಪರಿವರ್ತನೆಯ ಫಲವಾಗಿ ಒಂದು ಮಾನಸಿಕ ಪರಿಣಾಮವೂ ಆಯಿತು. ನಮ್ಮನ್ನು ಅಧೋಗತಿಗೆ ತಳ್ಳಿ ಅಪಮಾನಕ್ಕೀಡುಮಾಡಿದ ಬಹುಕಾಲದ ದಾಸ್ಯಜೀವನಕ್ಕೆ ತಲೆಬಾಗಿದ್ದುದಕ್ಕೆ ಅಸಹ್ಯವಾಯಿತು. ಏನೇ ಆಗಲಿ ಇನ್ನು ಒಂದು ನಿಮಿಷವೂ ತಲೆಬಾಗಬಾರದೆಂಬ ಕೆಚ್ಚು ಮೂಡಿತು.

ಮೊದಲಿಗಿಂತ ನಮ್ಮ ಸತ್ಯನಿಷ್ಠೆ ಹೆಚ್ಚಲಿಲ್ಲ. ಆದರೆ ಅಡ್ಡದಾರಿ ಹಿಡಿದಾಗ ನಮಗೆ ಎಚ್ಚರಕೊಟ್ಟು, ನಾಚುವಂತೆಮಾಡಿ, ಸತ್ಯದಕಡೆಗೆ ಎಳೆಯುವುದಕ್ಕೆ ತಾವು ಮಾತ್ರ ಸತ್ಯದಿಂದ ಕೂದಲೆಳೆಯಷ್ಟು ಕದಲದೆ ಸ್ವತಃ ಸತ್ಯಮೂರ್ತಿಯಾಗಿ ಗಾಂಧಿಜಿ ಸದಾ ನಮ್ಮ ಹಿಂದೆ ಇರುತ್ತಿದ್ದರು. ಸತ್ಯ ಎಂದರೇನು? ನನಗಂತೂ ಸ್ಪಷ್ಟತಿಳಿಯದು, ಪ್ರಾಯಶಃ ನಮ್ಮ ಸತ್ಯದ ಕಲ್ಪನೆಗಳೆಲ್ಲ ಸಾಪೇಕ್ಷ್ಯ ಮತ್ತು ನಿಜವಾದ ಸತ್ಯವು ನಮ್ಮ ಅರಿವಿಗೆ ದೂರವೋ ಏನೋ; ಬೇರೆ ಬೇರೆ ಜನರು ಸತ್ಯಕ್ಕೆ ಬೇರೆ ಬೇರೆ ಅರ್ಥಮಾಡುತ್ತಾರೆ; ಪ್ರತಿಯೊಬ್ಬ ವ್ಯಕ್ತಿಯ ಹಿನ್ನೆಲೆ, ಶಿಕ್ಷಣ ಮತ್ತು ಮನಸ್ಸಿನ ಆವೇಗ ಆತನ ಮೇಲೆ ಮಹತ್ಪರಿಣಾಮ ಮಾಡುತ್ತವೆ. ಗಾಂಧೀಜಿಗೂ ಅಷ್ಟೆ. ಯಾವ ವ್ಯಕ್ತಿಗೇ ಆಗಲಿ ತಾನು ಯಾವುದನ್ನು ಸತ್ಯವೆಂದು ತಿಳಿದುಕೊಳ್ಳುತ್ತಾನೆಯೋ ಅದೇ ಅವನಿಗೆ ಸತ್ಯ. ಈ ದೃಷ್ಟಿಯಿಂದ ಗಾಂಧಿಜಿ ಸತ್ಯಕ್ಕೆ ಅಂಟಿಕೊಂಡಂತೆ ಇನ್ನೊಬ್ಬರನ್ನು ನಾನುಕಾಣೆ. ರಾಜಕಾರಣಿಯಾದವನಿಗೆ ಇದು ಬಹಳ ಅಪಾಯಕರ, ಏಕೆಂದರೆ ಆತನು ತನ್ನ ಮನಸ್ಸಿನಲ್ಲಿರುವದನ್ನೆಲ್ಲ ಬಿಚ್ಚಿ ಹೇಳಬೇಕಾಗುತ್ತದೆ; ಮನಸ್ಸಿನ ಪ್ರತಿಯೊಂದು ಪರಿವರ್ತನೆಯೂ ಜನರಿಗೆ ಗೊತ್ತಾಗುತ್ತದೆ.

ಗಾಂಧೀಜಿ ಭಾರತದ ಲಕ್ಷಾಂತರ ಜನರ ಮೇಲೆ ವಿವಿಧ ರೀತಿಯಲ್ಲಿ ಪರಿಣಾಮ ಮಾಡಿದರು. ಕೆಲವರು ತಮ್ಮ ಜೀವನ ರೀತಿಯನ್ನೇ ಪೂರ್ಣ ಮಾರ್ಪಡಿಸಿಕೊಂಡರು, ಇನ್ನು ಕೆಲವರ ಮೇಲೆ ಅಷು ಪರಿಣಾಮ ಆಗಲಿಲ್ಲ. ಅಥವ ಕೆಲವು ದಿನಗಳನಂತರ ಆದ ಪರಿಣಾಮ ಮಾಸಿರಬಹುದು, ಆದರೂ ಪೂರ್ಣ ಮಾಸಲು ಸಾಧ್ಯವೇ ಇಲ್ಲ. ಬೇರೆಬೇರೆ ಜನರ ಮೇಲೆ ಬೇರೆ ಬೇರೆ ಪ್ರತಿಕ್ರಿಯೆ ಆಯಿತು. ಪ್ರತಿಯೊಬ್ಬರೂ ಈ ಪ್ರಶ್ನೆಗೆ ತನ್ನದೇ ಬೇರೆ ಉತ್ತರಕೊಡುತ್ತಾನೆ. ಕೆಲವರಂತೂ ಪ್ಲೇಟೋ ಸಂಭಾಷಣೆಗಳಲ್ಲಿ ಕಂಡುಬರುವ ಆಲ್ಸಿಬಿಯಾಡೀಸನ "ಬೇರೆ ಮಾತನಾಡುವವನು ಎಷ್ಟೇ ವಾಗ್ಮಿಇದ್ದರೂ ಆತನ ಮಾತಿಗೆ ಸ್ವಲ್ಪವೂ ಬೆಲೆ ಕೊಡುವುದಿಲ್ಲ. ಆದರೆ ನಿನ್ನ ಮಾತು ಕೇಳಿದರೆ ಅಥವ ನೀನು ಹೇಳಿದ ಮಾತು ಎಂದು ಯಾರಾದರೂ ಪುನರುಕ್ತಿಮಾಡಿದರೆ ಅದು ಎಷ್ಟೇ ವ್ಯತ್ಯಾಸವಾಗಿರಲಿ, ಮತ್ತು ತಿಳಿಸುವವರು ಹೆಂಗಸೋ, ಗಂಡಸೋ, ಮಗುವೋ ಯಾರೇ ಇರಲಿ ಆ ಮಾತಿನಿಂದ ನಾವು ಚಕಿತರಾಗಿ ಮುಗ್ಧರಾಗುತ್ತೇವೆ. ನನ್ನ ಮಾತನ್ನೇ ಹೇಳುವುದಾದರೆ—ನನ್ನ ಅವಸ್ಥೆ ಮುಗಿದರೂ ಭಯವಿಲ್ಲ—ಆತನ ಮಾತಿನಿಂದ ನನ್ನ ಮೇಲೆ ಒಂದು ವಿಚಿತ್ರ ಪರಿಣಾಮವಾಗುತ್ತಿತ್ತು ಮತ್ತು ಈಗಲೂ ಆಗುತ್ತಿದೆ ಎಂದು ಪ್ರಮಾಣಮಾಡುತ್ತೇನೆ. ಆತನ ಮಾತನ್ನು ಕೇಳಿದೊಡನೆ ಯಾವ ಆರಾಧಕನಿಗೂ ಆಗದ ಒಂದು ಪವಿತ್ರ ಕೋಪಾವೇಶ ನನ್ನನ್ನು ಕೆರಳಿಸುತ್ತದೆ; ನನ್ನ ಗಂಟಲು ಕಟ್ಟಿದಂತಾಗುತ್ತದೆ; ಕಣ್ಣೀರಿನಿಂದ ನನ್ನ ದೃಷ್ಟಿ ಮಬ್ಬಾಗುತ್ತದೆ.–ಓ, ನಾನೊಬ್ಬನೇ ಅಲ್ಲ, ನನ್ನಂತೆ ಸಹಸ್ರಾರು ಜನರಿದ್ದಾರೆ.

"ನಿಜ, ಪೆರಿಕ್ಲೀಸ್ ಮುಂತಾದ ಅನೇಕ ಪ್ರಸಿದ್ಧ ವಾಗ್ಮಿಗಳನ್ನು ಕೇಳಿದ್ದೇನೆ. ಶ್ರೇಷ್ಠ ಭಾಷಣಕಾರರಾದರೂ ಯಾರೂ ನನ್ನ ಮೇಲೆ ಈ ಪರಿಣಾಮ ಮಾಡಲಿಲ್ಲ. ನನ್ನ ಅಂತರಂಗವನ್ನೇ ಕಲಕಿ ದೀನರಲ್ಲಿ ನಾನು ಅತಿ ದೀನ ಎಂಬ ಭಾವನೆಯನ್ನು ಯಾರೂ ನನ್ನಲ್ಲಿ ಮಾಡಲಿಲ್ಲ. ಆದರೆ ಈಚೆಗೆ ಈ ಮರಿಯಾಸನಿಂದ ನನ್ನಲ್ಲಿ ಆ ಭಾವನೆಯುಂಟಾಗಿದೆ. ನನ್ನ ಇದುವರೆಗಿನ ಜೀವನ ಇನ್ನು ಮುಂದೆ ನಡೆಸುವಂತಿಲ್ಲ. . .

"ಬೇರೆ ಯಾರೊಂದಿಗೂ ನಾನು ಅನುಭವಿಸದ ಮತ್ತು ನನ್ನಲ್ಲಿ ನೀವು ಎಂದೂ ಕಾಣದ ಇನ್ನೊಂದು ವಿಷಯವೆಂದರೆ ನಾಚಿಕೆಯ ಭಾವನೆ. ಪ್ರಪಂಚದಲ್ಲಿ ನನ್ನನ್ನು ನಾಚಿಕೆಯಿಂದ ತಲೆ ತಗ್ಗಿಸುವಂತೆ ಮಾಡಬಲ್ಲ ವ್ಯಕ್ತಿ ಎಂದರೆ ಸಾಕ್ರೆಟೀಸ್ ಒಬ್ಬನೇ. ಏಕೆಂದರೆ ಆತನ ಮಾತಿನಿಂದ ತಪ್ಪಿಸಿಕೊಳ್ಳಲು ಸಾಧ್ಯವೇ ಇಲ್ಲ; ಅದರಂತೆ ಮಾಡಲೇಬೇಕೆಂದು ನನಗೆ ಗೊತ್ತು. ಆದರೆ ಆತನು ಸ್ವಲ್ಪ ಕಣ್ಮರೆಯಾದೊಡನೆ ಜನ ಮೆಚ್ಚುವಂತೆ ಏನು ಮಾಡುವುದಕ್ಕೂ ನಾನು ಹಿಂಜರಿಯುವುದಿಲ್ಲ. ಆದ್ದರಿಂದ ಕಳ್ಳ ತಪ್ಪಿಸಿಕೊಂಡ ಗುಲಾಮನಂತೆ ದೂರ ಓಡಿಹೋಗುತ್ತೇನೆ ಮತ್ತು ಆದಷ್ಟು ಕಾಲ ಆತನಿಂದ ಮುಖ ತಪ್ಪಿಸಿಕೊಂಡಿರುತ್ತೇನೆ. ಪುನಃ ಆತನನನ್ನು ಕಂಡಾಗ ಮುಂಚೆ ಒಪ್ಪಿದ ತಪ್ಪುಗಳೆಲ್ಲ ಜ್ಞಾಪಕ ಬರುತ್ತವೆ; ಸ್ವಾಭಾವಿಕವಾಗಿ ತಲೆ ತಗ್ಗಿಸುವಂತಾಗುತ್ತದೆ . . . .

"ಹಾವಿಗಿಂತ ಹೆಚ್ಚು ವಿಷದ ಜಂತು ಯಾವುದೋ ನನ್ನನ್ನು ಕಡಿದಿದೆ; ಆ ವಿಷದ ಕುಟುಕಿನ ನನ್ನ

ನೋವಿಗಿಂತ ಹೆಚ್ಚಿನ ನೋವು ಬೇರೊಂದಿಲ್ಲ. ಹೃದಯದಲ್ಲಿ, ಮನಸ್ಸಿನಲ್ಲಿ ಅಥವ ನೀವು ಬೇರೆಲ್ಲಿ ಎಂದರೂ ಸರಿ, ಅಂತೂ ನನಗೆ ಬಾಧೆಯಾಗಿದೆ'' ಎಂಬ ಮಾತುಗಳಂತೆ ಗಾಂಧೀಜಿಯನ್ನು ಕಾಣುತ್ತಾರೆ.

### ೨. ಗಾಂಧೀಜಿ ನಾಯಕತ್ವದ ಕಾರ್ಯಶೀಲ ಕಾಂಗ್ರೆಸ್

ಗಾಂಧೀಜಿ ಕಾಂಗ್ರೆಸ್ ಪ್ರವೇಶಮಾಡಿದ ತತ್‌ಕ್ಷಣವೇ ಅದರ ಅಂಗರಚನೆ ಪೂರ್ಣ ಬದಲಾಯಿಸಿದರು. ಪ್ರಜಾ ಸತ್ತೆಯ ಜನತಾ ಸಂಸ್ಥೆಯನ್ನಾಗಿ ಮಾಡಿದರು. ಮುಂಚೆಯೂ ಅದು ಪ್ರಜಾ ಸತ್ತಾತ್ಮಕವಿತ್ತು, ಆದರೆ ಉನ್ನತವರ್ಗದ ಸ್ವಲ್ಪಜನರಿಗೆ ಮಾತ್ರ ಮತಾಧಿಕಾರವಿತ್ತು. ಈಗ ಅದು ರೈತರ ಸಂಸ್ಥೆಯಾಗಿ ಹೊಸರೂಪ ತಾಳಿ ಅಲ್ಪ ಸ್ವಲ್ಪ ಮಧ್ಯಮವರ್ಗದವರಿಂದ ಕೂಡಿದ ಒಂದು ದೊಡ್ಡ ಬಂಡಾಯದ ಸಂಸ್ಥೆಯಾಯಿತು. ಈ ಚಳುವಳಿಯ ಸ್ವರೂಪ ಇನ್ನೂ ಬೆಳೆಯುವದರಲ್ಲಿ ಇತ್ತು. ಸಂಘಟಿತ ವಾಗಿ ಅಲ್ಲದಿದ್ದರೂ ವೈಯಕ್ತಿಕವಾಗಿ ಕೈಗಾರಿಕಾ ಶ್ರಮಜೀವಿಗಳೂ ಬಂದು ಸೇರಿದರು.

ಶಾಂತಿ ಮಾರ್ಗದ ಚಳವಳಿಯೇ ಈ ಸಂಸ್ಥೆಯ ಮುಖ್ಯ ತಳಹದಿ ಮತ್ತು ಗುರಿಯಾಯಿತು. ಇದು ವರೆಗೆ ಭಾಷಣಗಳು ಮತ್ತು ನಿರ್ಣಯಗಳು ಅಥವ ಹಿಂಸಾತ್ಮಕ ಚಳವಳಿ ಎರಡೇ ಮಾರ್ಗಗಳಿದ್ದವು, ಇವೆರಡನ್ನೂ ಬದಿಗಿಡಲಾಯಿತು. ಕಾಂಗ್ರೆಸ್ಸಿನ ಮೂಲತತ್ವಕ್ಕೆ ವಿರುದ್ಧವಾದ ಹಿಂಸಾತ್ಮಕ ಚಳವಳಿ ಯನ್ನು ಸ್ಪಷ್ಟ ವಿರೋಧಿಸಲಾಯಿತು. ಪೂರ್ಣಶಾಂತಿಯುತವಾದರೂ ಅನ್ಯಾಯಕ್ಕೆಂದೂ ತಲೆಬಾಗದ ಮತ್ತು ಅದರಿಂದ ಬರುವ ಎಲ್ಲ ನೋವು ಮತ್ತು ಕಷ್ಟವನ್ನು ಸಂತೋಷದಿಂದ ಅನುಭವಿಸಲು ಸಿದ್ಧ ಇರುವ ಒಂದು ಹೊಸಕಾರ್ಯ ವಿಧಾನ ಕಂಡುಹಿಡಿದರು. ಗಾಂಧಿಯೊಬ್ಬ ವಿಚಿತ್ರ ಶಾಂತಿದೂತ, ಏಕೆಂದರೆ ಅವರ ಪ್ರತಿಕೆಲಸದಲ್ಲೂ ಶಕ್ತಿಪೂರ್ಣ ಕಾರ್ಯಪಟುತ್ವ. ಅದೃಷ್ಟಕ್ಕೆ ಅಥವ ಅನ್ಯಾಯಕ್ಕೆ ಎಂದೂ ಶರಣು ಹೋದವರಲ್ಲ. ಶಾಂತಿಯಿಂದ, ಗಾಂಭೀರ್ಯದಿಂದ ಅದನ್ನೆಲ್ಲ ಸಂಪೂರ್ಣ ಎದುರಿಸುವುದೇ ಅವರ ಕಾರ್ಯ ನೀತಿ.

ಆ ಕಾರ್ಯನೀತಿ ಎರಡು ವಿಧವಾಯಿತು. ಪರಕೀಯರ ಆಡಳಿತ ಎದುರಿಸಿ ವಿರೋಧಿಸುವುದು ಒಂದು; ಜನಜೀವನದಲ್ಲಿ ಹರಡಿದ್ದ ಸಾಮಾಜಿಕ ದೋಷಗಳ ನಿರ್ಮೂಲ ಮತ್ತೊಂದು. ಈ ರೀತಿ ಶಾಂತಿಯುತ ದಾರಿಯಲ್ಲಿ ಭಾರತ ಸ್ವಾತಂತ್ರ್ಯ ಗಳಿಸಬೇಕೆಂಬ ಕಾಂಗ್ರೆಸ್ಸಿನ ಮೂಲಧ್ಯೇಯವಲ್ಲದೆ ರಾಷ್ಟ್ರದ ಐಕಮತ್ಯ, ಅಲ್ಪ ಸಂಖ್ಯಾತರ ಪ್ರಶ್ನೆಯ ನಿವಾರಣೆ, ದಲಿತರ ಉದ್ಧಾರ ಮತ್ತು ಅಸ್ಪೃಶ್ಯತಾ ನಿವಾರಣೆ ಸಹ ಕಾಂಗ್ರೆಸ್ಸಿನ ಮುಖ್ಯ ಕಾರ್ಯರಂಗಗಳಾದವು.

ಭಯ, ದರ್ಪ ಮತ್ತು ಒಪ್ಪಿಯೋ ಒಪ್ಪದೆಯೋ ದೊರೆತ ಜನರ ಸಹಕಾರ ಮತ್ತು ಬ್ರಿಟಿಷ್ ಆಡಳಿತವನ್ನೇ ನಂಬಿದ್ದ ಅಧಿಕಾರವರ್ಗ ಇವೇ ಬ್ರಿಟಿಷ್ ಆಡಳಿತದ ಆಧಾರ ಸ್ತಂಭಗಳೆಂದು ಅರಿತು ಕೊಂಡು ಗಾಂಧಿಜಿ ಈ ಆಧಾರ ಸ್ತಂಭಗಳನ್ನು ಉರುಳಿಸಲು ಯತ್ನಿಸಿದರು. ಬಿರುದು ಬಾವಲಿ ಕಿತ್ತೆಸೆ ಯಿರಿ ಎಂದರು. ಬಿರುದಾಂಕಿತರ ಸಹಾನುಭೂತಿ ಹೆಚ್ಚು ದೊರೆಯದಿದ್ದರೂ ಬ್ರಿಟಿಷರ ಬಿರುದುಗಳಿಗೆ ಜನರಲ್ಲಿದ್ದ ಗೌರವ ಮಾಯವಾಯಿತು; ಮತ್ತು ಅವು ಅವನತಿಯ ಲಾಂಛನಗಳಾದವು. ವ್ಯಕ್ತಿಯ ಅಂತಸ್ತು ಮತ್ತು ಬೆಲೆಯಲ್ಲಿ ಹೊಸ ದೃಷ್ಟಿ ಹುಟ್ಟಿತು. ವೈಸರಾಯ್ ದರ್ಬಾರ್ ಮತ್ತು ರಾಜರುಗಳ ಅಲಂಕಾರ ಮತ್ತು ಆಡಂಬರಕ್ಕಿದ್ದ ಗೌರವ ಇದ್ದಕ್ಕಿದ್ದಂತೆ ಮಾಯವಾಗಿ ಜನರ ದಾರಿದ್ರ್ಯ ಮತ್ತು ಸಂಕಟದ ಎದುರು ಅದು ತುಂಬ ನಾಚಿಕೆಗೇಡು, ಅಸಹ್ಯ ಎಂಬ ಭಾವನೆ ಹುಟ್ಟಿತು. ಶ್ರೀಮಂತರು ಶ್ರೀಮಂತಿಕೆಯಿಂದ ಮೆರೆಯುವುದನ್ನು ಬಿಟ್ಟರು. ಹೊರಗಡೆಯಾದರೂ ಅನೇಕರು ಸರಳ ಉಡುಪು ಧರಿಸಿ ಸಾಮಾನ್ಯ ಜನರಂತೆ ಕಾಣಲಾರಂಭಿಸಿದರು.

ಇದಕ್ಕೆಲ್ಲ ತೀರ ಭಿನ್ನವಿದ್ದ ಸಂಪ್ರದಾಯದಲ್ಲಿ ಬೆಳೆದು ಬಂದ ಹಳೆಯ ಮುಂದಗಾಮಿ ಕಾಂಗ್ರೆಸ್ ನಾಯಕರಿಗೆ ಈ ನೂತನ ರೀತಿ ನೀತಿಗಳೂ ಜನತಾ ಚಳುವಳಿಯೂ ಸರಿಬೀಳಲಿಲ್ಲ. ಆದರೆ ದೇಶಾದ್ಯಂತ ಮೂಡಿದ ಈ ಹೊಸ ಭಾವನೆ ಮತ್ತು ಹುರುಪಿನಿಂದ ಅವರಲ್ಲೂ ಕೆಲವರು ತಪ್ಪಿಸಿಕೊಳ್ಳಲಾಗಲಿಲ್ಲ. ಕಾಂಗ್ರೆಸ್‌ನಿಂದ ದೂರ ಸರಿದ ಕೆಲವರಲ್ಲಿ ಜನಾಬ್ ಎಂ. ಎ. ಜಿನ್ನಾ ಒಬ್ಬರು. ಆತ ಕಾಂಗ್ರೆಸ್ ಬಿಟ್ಟದ್ದು

ಹಿಂದೂ ಮುಸ್ಲಿಂ ಪ್ರಶ್ನೆಯ ಭಿನ್ನಾಭಿಪ್ರಾಯದಿಂದ ಅಲ್ಲ. ಈ ಹೊಸ ಪ್ರಗತಿಪರ ಭಾವನೆ ಆತನಿಗೆ ಸರಿಬೀಳದ್ದರಿಂದ ಮತ್ತು ಕಾಂಗ್ರೆಸ್‌ನಲ್ಲಿ ಮನಬಂದಂತೆ ಉಡುಪು ಧರಿಸಿ ಹಿಂದೂಸ್ಥಾನಿಯಲ್ಲಿ ಮಾತನಾಡುವ ಸಾಮಾನ್ಯ ಜನರ ನಾಯಕತ್ವ ಆತನಿಗೆ ಒಪ್ಪಿಗೆಯಾಗಲಿಲ್ಲವಾದ್ದರಿಂದ. ಆತನ ರಾಜಕೀಯವೆಲ್ಲ ಶಾಸನ ಸಭೆಯೋ ಅಥವ ಸಮಿತಿಯ ಕೊಠಡಿಗೋ ಶೋಭಿಸುವ ಉನ್ನತ ಮಟ್ಟದ್ದು. ಕೆಲವು ವರ್ಷ ರಾಜಕೀಯ ರಂಗದಲ್ಲಿ ಆತನಿಗೆ ಸ್ಥಾನವಿಲ್ಲದೆ ಭಾರತವನ್ನೇ ಬಿಟ್ಟುಹೋಗಬೇಕೆಂದು ತೀರ್ಮಾನಿಸಿದ. ಇಂಗ್ಲೆಂಡಿನಲ್ಲಿ ನೆಲೆಸಿ ಅಲ್ಲಿಯೇ ಕೆಲವು ವರ್ಷಗಳನ್ನು ಕಳೆದ.

ಗಾಂಧೀಜಿ ನಮ್ಮನ್ನು ಹಳ್ಳಿಗಳಿಗೆ ಅಟ್ಟಿದರು. ಸಹಸ್ರಾರು ಜನರು ಆತನ ಈ ಹೊಸ ಸಂದೇಶವನ್ನು ಭಾರತದ ಜನಕೋಟಿಗೆ ಸಾರಿದ್ದರಿಂದ ಗ್ರಾಮಜೀವನದಲ್ಲಿ ಒಂದು ನವಚೈತನ್ಯ ಉಂಟಾಯಿತು. ರೈತನು ತನ್ನ ಸುಷುಪ್ತ ಜೀವನದಿಂದ ಹೊಡೆದೆದ್ದು ಕಾರ್ಯತತ್ಪರನಾದನು. ನಮ್ಮ ಮೇಲೂ ಅಷ್ಟೇ ಮಹತ್ಪರಿಣಾಮವಾಯಿತು. ಹಳ್ಳಿಗನ ಮಣ್ಣುಗುಡಿಸಿಲಿನ ಸದಾ ಆತನ ಬೆನ್ನಂಟಿದ ಹಸಿವೆಯ ಕೂಗಿನ ಪರಿಚಯ ನಮಗೆ ಆದದ್ದು ಇದೇ ಮೊಟ್ಟಮೊದಲು. ಪುಸ್ತಕ ಅಥವ ಪ್ರೌಢ ಉಪನ್ಯಾಸಗಳಿಗಿಂತ ಹೆಚ್ಚಾಗಿ ಭಾರತೀಯ ಅರ್ಥಶಾಸ್ತ್ರವು ಈ ನಮ್ಮ ಗ್ರಾಮಭೇಟಿಗಳಿಂದ ಹೆಚ್ಚು ಅರ್ಥವಾಗಲಾರಂಭಿಸಿತು. ನಮ್ಮ ಭಾವೋದ್ರಿಕ್ತ ಅನುಭವಕ್ಕೆ ಇಲ್ಲದ ಪುಷ್ಟಿ ಮತ್ತು ಸಮರ್ಥನೆ ದೊರೆತವು ; ಆದ್ದರಿಂದ ಮುಂದೆ ನಮ್ಮ ದೃಷ್ಟಿ ಎಷ್ಟೇ ಬೇರೆಯಾಗಲಿ ನಮ್ಮ ಹಿಂದಿನ ಜೀವನ ಮತ್ತು ಮೌಲ್ಯಗಳಿಗೆ ಅಂಟಿಕೊಂಡಿರುವುದು, ಅಸಾಧ್ಯವಾಯಿತು.

ಆರ್ಥಿಕ, ಸಾಮಾಜಿಕ ಮತ್ತು ಇತರ ವಿಷಯಗಳಮೇಲೆ ಗಾಂಧೀಜಿ ಅಭಿಪ್ರಾಯಗಳು ಕ್ರಾಂತಿಕಾರಕವಿದ್ದುವು. ಅದನ್ನೆಲ್ಲ ಅವರು ಕಾಂಗ್ರೆಸ್ಸಿನಮೇಲೆ ಹೊರಿಸಲು ಪ್ರಯತ್ನಿಸಲಿಲ್ಲ. ಆ ಅಭಿಪ್ರಾಯಗಳನ್ನು ಸಮರ್ಥಿಸಲು ಯತ್ನಮಾಡಿದರು. ಈ ಪ್ರಯತ್ನದಲ್ಲಿ ಸ್ವಲ್ಪ ವ್ಯತ್ಯಾಸವನ್ನೂ ಅವರ ಲೇಖನಗಳಲ್ಲಿ ಕಾಣಬಹುದು. ಕೆಲವನ್ನು ಕಾಂಗ್ರೆಸ್ಸಿನ ಧ್ಯೇಯಗಳನ್ನಾಗಿ ಮಾಡಲೆತ್ನಿಸಿದರು. ಜನತೆಯ ಸಂಗಡಲೇ ಹೋಗಬೇಕೆಂದು ಬಹಳ ಎಚ್ಚರಿಕೆಯಿಂದ ಮುಂದುವರಿದರು. ಕೆಲವು ಸಮಯದಲ್ಲಿ ಕಾಂಗ್ರೆಸ್ಸಿಗಿಂತ ಬಹಳ ಮುಂದುವರಿದು ಒಮ್ಮೊಮ್ಮೆ ಹಿಂಜರಿಯಬೇಕಾಯಿತು. ಅನೇಕರು ಅವರೊಂದಿಗೆ ಪೂರ್ಣ ಸಮ್ಮತಿಸಲಿಲ್ಲ; ಕೆಲವರು ಮೂಲದೃಷ್ಟಿಯಲ್ಲೇ ಭಿನ್ನಾಭಿಪ್ರಾಯ ತಾಳಿದರು. ಆದರೂ ಕಾಂಗ್ರೆಸ್ ಸಮ್ಮತಿಸಿ ರೂಪಿಸಿದ ಅವರ ಅಭಿಪ್ರಾಯಗಳಲ್ಲದೆ ಅಂದಿನ ಪರಿಸ್ಥಿತಿಗೆ ಬೇರೆ ಮಾರ್ಗವಿಲ್ಲೆಂದು ಬಹುಸಂಖ್ಯಾತ ಜನರು ಮಾನ್ಯಮಾಡಿದರು. ಎರಡು ರೀತಿಯಲ್ಲಿ ಅವರ ಪ್ರತಿಯೊಂದು ಯೋಚನೆಯ ಹಿನ್ನೆಲೆಯು ಅಸ್ಪಷ್ಟವಾದರೂ ಅವುಗಳ ಪರಿಣಾಮ ಅಸಾಧ್ಯವಿತ್ತು. ಪ್ರತಿಯೊಂದು ಕಾರ್ಯವೂ ಭಾರತದ ಜನಕೋಟಿಗೆ ಎಷ್ಟರಮಟ್ಟಿಗೆ ಉಪಯುಕ್ತ ಎಂಬುದು ಒಂದು ; ಮತ್ತು ನಮ್ಮ ಗುರಿ ಎಷ್ಟೇ ಉತ್ತಮವಿರಲಿ ಸಾಧನೆಯ ಮಾರ್ಗದ ಪರಿಣಾಮ ಆದರಮೇಲೆ ಆಗುವುದರಿಂದ ಸಾಧನೆಯ ಮಾರ್ಗವೂ ಅಲಕ್ಷ್ಯ ಮಾಡಲಾಗದ ಅತಿ ಮುಖ್ಯ ವಿಷಯ ಎಂಬುದು ಇನ್ನೊಂದು.

ಗಾಂಧೀಜಿ ಮುಖ್ಯವಾಗಿ ಧರ್ಮಜೀವಿ ; ಅವರ ಪ್ರತಿಯೊಂದು ರಕ್ತಕಣವೂ ಶುದ್ಧ ಹಿಂದೂ ಆದರೂ ಅವರ ಧರ್ಮ ಯಾವ ಒಂದು ಸಿದ್ಧಾಂತ, ಪದ್ಧತಿ ಅಥವ ಪೂಜಾವಿಧಾನವನ್ನು ಅವಲಂಬಿಸಿರಲಿಲ್ಲ.*

---

* ೧೯೩೮ರಲ್ಲಿ ನಡೆದ ಅಂತರ ರಾಷ್ಟ್ರೀಯ ಧರ್ಮ ಸಮ್ಮೇಳನದಲ್ಲಿ ಗಾಂಧೀಜಿ ಈ ರೀತಿ ಹೇಳಿದರು. "ಅನೇಕ ವರ್ಷಗಳ ಅಭ್ಯಾಸ ಮತ್ತು ಅನುಭವದಿಂದ ನನ್ನ ತೀರ್ಮಾನ ಈ ರೀತಿ ಇದೆ—(೧) ಎಲ್ಲ ಧರ್ಮಗಳಲ್ಲೂ ಸತ್ಯವಿದೆ (೨) ಎಲ್ಲ ಧರ್ಮಗಳಲ್ಲೂ ಸ್ವಲ್ಪ ಲೋಪವೂ ಇದೆ (೩) ಹಿಂದೂ ಧರ್ಮದಲ್ಲಿರುವಂತೆ ಎಲ್ಲ ಧರ್ಮಗಳಲ್ಲೂ ನನಗೆ ಮಮತೆ ಇದೆ. ನನ್ನ ಧರ್ಮಕ್ಕೆ ಎಷ್ಟು ಗೌರವ ಇದೆಯೋ ಅಷ್ಟೇ ಗೌರವ ಇತರ ಧರ್ಮಗಳಿಗೂ ನಾನು ಕೊಡುತ್ತೇನೆ. ಮತಾಂತರ ಸಾಧ್ಯವಿಲ್ಲ. ಇತರರಿಗಾಗಿ ನಾವು ಮಾಡುವ ಪ್ರಾರ್ಥನೆ "ದೇವರೆ, ನನಗೆ ತೋರಿದ ಬೆಳಕನ್ನು ಅವರಿಗೆ ತೋರು ಎಂದಲ್ಲ. ಅವರ ಉನ್ನತ ಪ್ರಗತಿಗೆ ಬೇಕಾದ ಎಲ್ಲ ಸತ್ಯವನ್ನೂ, ಬೆಳಕನ್ನೂ ಕೊಡು" ಎಂದು.

ಅವರ ಧರ್ಮವು ಮೂಲತಃ ಸತ್ಯ ಅಥವ ಪ್ರೇಮಮಾರ್ಗ ಎಂಬ ನೀತಿಮಾರ್ಗ. ಸತ್ಯ ಮತ್ತು ಅಹಿಂಸೆ ಎರಡೂ ಅವರಿಗೆ ಒಂದೇ ಆಗಿತ್ತು ಅಥವ ಒಂದು ವಸ್ತುವಿನ ಎರಡು ಮುಖಗಳು; ಈ ಶಬ್ದಗಳನ್ನೂ ಒಂದಕ್ಕೆ ಬದಲು ಇನ್ನೊಂದನ್ನು ಪದೇ ಪದೇ ಉಪಯೋಗಮಾಡಿದ್ದಾರೆ. ಹಿಂದೂ ಧರ್ಮದ ತಿರುಳನ್ನು ಅರಿತಿರುವುದಾಗಿ ತಿಳಿಸಿ ತಮ್ಮ ತಾತ್ವಿಕ ಅಭಿಪ್ರಾಯಕ್ಕೆ ವಿರುದ್ಧವಾದ ಎಲ್ಲ ಶಾಸ್ತ್ರಾಧಾರಗಳನ್ನೂ, ಸಂಪ್ರದಾಯಗಳನ್ನೂ ಪ್ರಕ್ಷಿಪ್ತ ಅಥವ ಈಚೆಗೆ ಬೆಳೆದರೂಢಿ ಎಂದು ತಿರಸ್ಕರಿಸಿದರು. "ನೀತಿ ಧರ್ಮಕ್ಕೆ ವಿರುದ್ಧ ಇರುವ ಯಾವ ಆಚಾರ ಅಥವ ಸಂಪ್ರದಾಯವನ್ನು ನಾನು ಸಮರ್ಥಿಸಲಾರೆ ಮತ್ತು ಅರ್ಥಮಾಡಿಕೊಳ್ಳಲಾರೆ. ಆದ್ದರಿಂದ ಅವುಗಳ ಗುಲಾಮನಾಗಿರಲು ನನಗೆ ಸಾಧ್ಯವಿಲ್ಲ'' ಎಂದರು. ಅವರ ದೃಷ್ಟಿಯಲ್ಲಿ ತಮ್ಮ ನೀತಿಧರ್ಮಕ್ಕೆ ಸಮ್ಮತ ಎಂದು ತೋರಿದರೆ ಸಾಕು; ಇನ್ನೆಲ್ಲ ರೀತಿಯಲ್ಲಿ, ನಿತ್ಯ ಆಚರಣೆಯಲ್ಲಿ ತಮಗೆ ತೋರಿದ ದಾರಿಯನ್ನು ಹಿಡಿಯಲು ಅವರು ಸ್ವತಂತ್ರರಿದ್ದರು. ತಮ್ಮ ಜೀವನದ ದರ್ಶನ ಮತ್ತು ಕಾರ್ಯ ನಿರ್ಧರಿಸಲು ಸ್ವತಂತ್ರರಿದ್ದರು. ಈ ಜೀವನ ದರ್ಶನ ಸರಿಯೋ ತಪ್ಪೋ ವಿವಾದಾಸ್ಪದ ಇರಬಹುದು; ಆದರೆ ಅದೇ ಅಳತೆಗೋಲಿನಿಂದ ಎಲ್ಲವನ್ನೂ–ಮುಖ್ಯವಾಗಿ ತಮ್ಮನ್ನೂ—ಅಳೆಯಬೇಕೆಂದು ಅವರ ಛಲ. ಜೀವನದ ಇತರ ರಂಗಗಳಂತೆ ರಾಜಕೀಯದಲ್ಲಿ ಇದರಿಂದ ಸಾಮಾನ್ಯ ಮನುಷ್ಯನಿಗೆ ಕಷ್ಟವಾದುದು ನಿಜ; ಅನೇಕ ವೇಳೆ ಭಿನ್ನಾಭಿಪ್ರಾಯಕ್ಕೆ ಅವಕಾಶವಾಗುತ್ತದೆ. ವ್ಯತ್ಯಸ್ಥ ಪರಿಸ್ಥಿತಿಗನುಗುಣವಾಗಿ ತಮ್ಮ ಕಾರ್ಯನೀತಿ ಸ್ವಲ್ಪ ಮಾರ್ಪಡಿಸಿಕೊಂಡರೂ, ತೊಂದರೆ ಏನು ಬಂದರೂ ತಾವು ನಿರ್ಧರಿಸಿದ ನೇರಮಾರ್ಗದಿಂದ ಕದಲುತ್ತಿರಲಿಲ್ಲ. ತಾವು ಸೂಚಿಸಿದ ಸುಧಾರಣೆ, ಇತರರಿಗೆ ಹೇಳಿದ ಬುದ್ಧಿವಾದ ತಾವೇ ಮೊದಲು ಆಚರಿಸುತ್ತಿದ್ದರು. ಎಲ್ಲವನ್ನೂ ತಾವೇ ಮೊದಲು ಆರಂಭಿಸಿದರು. ಅವರ ಮಾತು ಮತ್ತು ಕೆಲಸ ಕೈಗೆ ಕೈಚೀಲ ಹೊಂದಿಕೊಳ್ಳುವಂತೆ ಹೊಂದಿಕೊಳ್ಳುತ್ತಿದ್ದವು. ಏನೇ ಆಗಲಿ ಧೃತಿಗೆಡುತ್ತಿರಲಿಲ್ಲ. ಮತ್ತು ಅವರ ಜೀವನದಲ್ಲಿ ಮತ್ತು ಕಾರ್ಯದಲ್ಲಿ ಒಂದು ಪೂರ್ಣತೆಯು ಕಾಣುತ್ತದೆ. ಅವರ ತಾತ್ಕಾಲಿಕ ಸೋಲುಗಳಲ್ಲಿ ಸಹ ಅವರ ವ್ಯಕ್ತಿತ್ವದ ಬೆಳವಣಿಗೆಯ ಔನ್ನತ್ಯ ಕಾಣುತ್ತದೆ.

ಅವರ ಅಭಿಲಾಷೆ ಮತ್ತು ಧ್ಯೇಯಗಳಲ್ಲಿ ಅವರಿಗೆ ರೂಪವೆತ್ತ ಭಾರತದ ಕಲ್ಪನೆ ಯಾವುದು? "ಕಡು ಬಡವನಿಗೂ ಇದು ನನ್ನ ದೇಶ ಎಂದು ಅಭಿಮಾನವಿರಬೇಕು. ದೇಶದ ಆಗುಹೋಗುಗಳಲ್ಲಿ ಆತನ ಮಾತಿಗೆ ಬೆಲೆ ಇರಬೇಕು. ದೇಶದಲ್ಲಿ ಉಚ್ಚರು ನೀಚರು ಎಂಬ ತರಗತಿಗಳಿರಬಾರದು. ಎಲ್ಲ ಪಂಗಡಗಳವರೂ ಪೂರ್ಣ ಮಧುರ ಜೀವನ ನಡೆಸಬೇಕು . . . . . ಆ ಭಾರತದಲ್ಲಿ ಅಸ್ಪೃಶ್ಯತೆಯ ಶಾಪವಾಗಲಿ, ಮಾದಕ ದ್ರವ್ಯಗಳ ಸೇವನೆಯಾಗಲಿ ಇರಬಾರದು. ಹೆಂಗಸರಿಗೆ ಗಂಡಸರಿಗೆ ಸಮಾನ ಹಕ್ಕುಗಳಿರಬೇಕು. ಇದೇ ನನ್ನ ಭಾರತದ ಕನಸು'' ಎಂದರು. ಹಿಂದೂಧರ್ಮದ ಅಸ್ತಿತ್ವದಲ್ಲಿ ಅಪಾರ ಅಭಿಮಾನ ಇದ್ದರೂ, ಅದಕ್ಕೆ ಒಂದು ಬಗೆಯ ವಿಶ್ವವ್ಯಾಪಕತೆ ಕೊಡಲು ಯತ್ನಿಸಿದರು; ಎಲ್ಲ ಧರ್ಮಗಳಿಗೂ ಅದರ ಮಡಿಲಲ್ಲಿ ಸ್ಥಾನಕೊಟ್ಟರು. ತಮ್ಮ ಸಂಸ್ಕೃತಿಯ ಆಸ್ತಿಯನ್ನು ಸಂಕುಚಿತಗೊಳಿಸಲಿಲ್ಲ. "ಭಾರತೀಯ ಸಂಸ್ಕೃತಿಯು ಪೂರ್ಣ ಹಿಂದೂ ಸಂಸ್ಕೃತಿಯೂ ಅಲ್ಲ, ಇಸ್ಲಾಂ ಸಂಸ್ಕೃತಿಯೂ ಅಲ್ಲ, ಬೇರೊಂದು ಸಂಸ್ಕೃತಿಯೂ ಅಲ್ಲ. ಅದು ಎಲ್ಲ ಸಂಸ್ಕೃತಿಗಳ ಪರಿಪಾಕ" ಎಂದರು. ನನ್ನ ಮನೆಯ ಸುತ್ತ ಎಲ್ಲ ದೇಶಗಳ ಸಂಸ್ಕೃತಿಗಳ ಗಾಳಿಯೂ ನಿರಾತಂಕವಾಗಿ ಬೀಸಬೇಕು. ಆದರೆ ನನ್ನ ಬುಡ ಮಾತ್ರ ಭದ್ರವಿರಬೇಕು. ಇತರರ ನೆರಳಿನಲ್ಲಿ ಆಗಂತುಕನಂತೆ, ಭಿಕ್ಷುಕ ಅಥವ ಗುಲಾಮನಂತೆ ಬಾಳಲು ನಾನೆಂದೂ ಒಪ್ಪಲಾರೆ'' ಎಂದರು. ಆಧುನಿಕ ಕಾಲದ ಭಾವನಾಲಹರಿಗಳು ಅವರಮೇಲೆ ಪರಿಣಾಮಮಾಡಿದರೂ ತಮ್ಮ ನೆಲೆ ಮಾತ್ರ ತಾವು ಬಿಡದೆ ಬುಡ ಭದ್ರತೆ ಕಾಯ್ದರು.

ಈ ರೀತಿ ಜನತೆಯ ಧಾರ್ಮಿಕ ಐಕ್ಯತೆಯನ್ನು ಪುನರುಜ್ಜೀವನಗೊಳಿಸ ಹೊರಟರು; ಪಾಶ್ಚಾತ್ಯ ಸಂಸ್ಕೃತಿಗೆ ಮನಸೋತ ಮೇಲ್ತರಗತಿ ಯಜಮಾನರಿಗೂ, ಸಾಮಾನ್ಯ ಜನತೆಗೂ ಮಧ್ಯೆ ಇದ್ದ ಗೋಡೆಯನ್ನು ಉರುಳಿಸಿದರು. ಸನಾತನ ಮೂಲದ ತಾಯಿಬೇರಗಳನ್ನು ಹುಡುಕಿ ಹೊಸದೊಂದು ಬಾಳನ್ನು ಕಟ್ಟಿ ನಿದ್ರಾವಸ್ಥೆಯಲ್ಲಿದ್ದ ಭಾರತದ ಜನತೆಯನ್ನು ಹೊಡೆದೆಬ್ಬಿಸಿ ಕಾರ್ಯಾಸಕ್ತರನ್ನಾಗಿ ಮಾಡಿದರು. ಏಕಮುಖ ದಾರಿಯಾದರೂ ಅವರ ಬಹುಮುಖ ಸ್ವಭಾವದಲ್ಲಿ ಎದ್ದು ಕಾಣುತ್ತಿದ್ದ ಮುಖ್ಯ ಪರಿಣಾಮ

ಎಂದರೆ ಜನಸಾಮಾನ್ಯರೊಡನೆ ಏಕೀಭಾವ, ಅವರೊಂದಿಗೆ ಆತ್ಮೀಯತೆ ಮತ್ತು ಭಾರತದ ದಲಿತರು ದೀನ ಹೀನರು ಮಾತ್ರವಲ್ಲದೆ ಪ್ರಪಂಚದ ಎಲ್ಲ ದಲಿತವರ್ಗದೊಡನೆ ಅದ್ಭುತ ಸಹಾನುಭೂತಿ. ದಲಿತ ಜನರ ಉದ್ಧಾರದ ಎದುರು ಇತರ ಎಲ್ಲ ಪ್ರಶ್ನೆಗಳಂತೆ ಧರ್ಮದ ಪ್ರಶ್ನೆ ಸಹ ಅವರಿಗೆ ಕಿರಿದಾಯಿತು. "ಅರೆ ಹೊಟ್ಟೆಯ ಜನಾಂಗಕ್ಕೆ ಧರ್ಮ, ಕಲೆ ಅಥವ ಸಂಸ್ಥೆ ಯಾವುದೂ ಬೇಕಿಲ್ಲ" ಎಂದರು. "ಅರೆಹೊಟ್ಟೆಯ ಜನಕೋಟಿಗೆ ಯಾವುದು ಉಪಯುಕ್ತವೋ ಅದೇ ನನಗೆ ಸುಂದರ. ಜೀವಧಾರಣೆಗೆ ಅವಶ್ಯವಾದ ಮೂಲ ವಸ್ತು ಮೊದಲು, ಆಮೇಲೆ ಎಲ್ಲ ಗಾಂಭೀರ್ಯ, ಅಲಂಕಾರ. ನನಗೆ ಬೇಕಾದ್ದು ಜನಕೋಟಿಗೆ ಹಿಡಿಸುವ ಕಲೆ ಮತ್ತು ಸಾಹಿತ್ಯ" ಎಂದರು. ಜೀವನಕ್ಕೆ ಗತಿ ಇಲ್ಲದೆ ಸಂಕಟದಲ್ಲಿ ಮುಳುಗಿದ್ದ ಜನಕೋಟಿಯ ಗೋಳು ಸದಾ ಅವರ ಎದುರಿನಲ್ಲಿತ್ತು. ಇತರ ಎಲ್ಲ ಕಾರ್ಯವೂ ಆ ಬಾಳಿನ ಸುತ್ತ ಹೆಣೆದುಕೊಂಡಂತೆ ಕಂಡವು." ಕೋಟ್ಯಂತರ ಜನರಿಗೆ ಅಪಾರ ಸಂಕಟ; ಇಲ್ಲದಿದ್ದರೆ ಶ್ಮಶಾನ ಶಾಂತಿ. ಪ್ರತಿಯೊಬ್ಬನ ಕಣ್ಣೀರು ಒರಸು ವುದೇ ನನ್ನ ಹಿರಿಯಾಸೆ" ಎಂದರು.

ಪೂರ್ಣ ಆತ್ಮವಿಶ್ವಾಸದಿಂದ ತುಂಬಿ ಒಂದು ಬಗೆಯ ಅಸಾಧಾರಣ ಶಕ್ತಿಯುಳ್ಳ ಈ ಅದ್ಭುತ ಕಾರ್ಯಶೀಲ ವ್ಯಕ್ತಿ ಪ್ರತಿಯೊಬ್ಬ ಮಾನವನ ಸಮಾನತೆ ಮತ್ತು ಸ್ವಾತಂತ್ರ್ಯಕ್ಕಾಗಿ ನಿಂತು, ಎಲ್ಲವನ್ನೂ ಕಡುಬಡವನ ದೃಷ್ಟಿಯಿಂದ ಅಳೆಯುತ್ತ ಭಾರತದ ಜನತೆಯ ಹೃದಯವನ್ನು ಸೂರೆಗೊಂಡು ಅಯಸ್ಕಾಂತ ಶಿಲೆಯಂತೆ ಅವರನ್ನು ಆಕರ್ಷಿಸಿದ್ದರಲ್ಲಿ ಆಶ್ಚರ್ಯವೇನೂ ಇಲ್ಲ. ಅವರ ಹಿಂದಿನ ಜೀವನಕ್ಕೂ ಮುಂದಿನ ಜೀವನಕ್ಕೂ ಸಂಬಂಧ ಕಲ್ಪಿಸಿ, ಇಂದಿನ ದುರಂತ ಬಾಳನ್ನು ಮುಂದಿನ ಆಶಾದಾಯಕ ಜೀವನಕ್ಕೆ ಒಂದು ಹಂತವನ್ನಾಗಿ ಮಾಡುವಂತೆ ಅವರಿಗೆ ಕಂಡರು. ಸಾಮಾನ್ಯ ಜನರಿಗೆ ಮಾತ್ರವಲ್ಲದೆ ವಿದ್ಯಾವಂತರಿಗೆ ಮತ್ತು ಇತರರಿಗೆ ಸಹ ತಮ್ಮ ಮನಸ್ಸು ಎಷ್ಟೇ ಬಗೆ ಕದಡಿ ಭ್ರಮೆಗೊಂಡು ತಮ್ಮ ಜೀವನದ ಅಭ್ಯಾಸ ಗಳನ್ನೆಲ್ಲ ಬಿಡಬೇಕಾಗಿ ಬಂದರೂ ಅವರಿಗೂ ಅದೇ ರೀತಿ ಗಾಂಧೀಜಿ ಕಂಡರು. ಆದ್ದರಿಂದ ತನ್ನ ಅನು ಯಾಯಿಗಳಲ್ಲಿ ಮಾತ್ರವಲ್ಲದೆ ವಿರೋಧಿಗಳಲ್ಲಿ ಮತ್ತು ಯಾರ ಯೋಚನೆ ಮತ್ತು ಕಾರ್ಯನೀತಿಯೂ ಇಲ್ಲದ ತಟಸ್ಥರಲ್ಲಿ ಸಹ ಒಂದು ಮಾನಸಿಕ ಕ್ರಾಂತಿಯನ್ನು ಉಂಟುಮಾಡಿದರು.

ಕಾಂಗ್ರೆಸ್ಸಿನ ಮೇಲೆ ಗಾಂಧೀಜಿಯ ಪ್ರಭಾವವು ಬಹಳವಿದ್ದರೂ ಕಾಂಗ್ರೆಸ್ಸಿನಲ್ಲಿ ಅನೇಕ ಅಭಿಪ್ರಾ ಯದ ಮತ್ತು ಸುಲಭವಾಗಿ ಈ ಕಡೆ ಆಕಡೆ ತಿರುಗಿಸಲಾಗದ ಜನರಿದ್ದ ಬಹು ಮುಖ ಸಂಸ್ಥೆಯಾಗಿ ಕಾಂಗ್ರೆಸ್ ಒಂದು ಕ್ರಾಂತಿಕಾರಕ ಕಾರ್ಯಶೀಲ ಸಂಸ್ಥೆಯಾಗಿದ್ದುದರಿಂದ ಆ ಪ್ರಭಾವವು ಬಹಳ ವಿಶಿಷ್ಟ ರೀತಿಯದಿತ್ತು. ಇತರರ ಅಭಿಪ್ರಾಯಕ್ಕೆ ಮನ್ನಣೆ ಕೊಟ್ಟು ಗಾಂಧೀಜಿ ಕೆಲವು ವೇಳೆ ತಮ್ಮ ನಿಲುವನ್ನು ಸಡಿಲಿಸುತ್ತಿದ್ದರು. ಕೆಲವು ವೇಳೆ ವಿರೋಧ ತೀರ್ಮಾನ ಒಪ್ಪುತ್ತಿದ್ದರು. ತಮಗೆ ಅತಿಮುಖ್ಯ ವಿಷಯ ಗಳೆಂದು ಕಂಡಾಗ ಮಾತ್ರ ಜಗ್ಗುತ್ತಿರಲಿಲ್ಲ. ಅನೇಕ ವೇಳೆ ಕಾಂಗ್ರೆಸ್ಸಿಗೂ ಅವರಿಗೂ ಭಿನ್ನಾಭಿಪ್ರಾಯ ಬಂದಾಗ ಕಾಂಗ್ರೆಸ್ಸಿನಿಂದ ದೂರ ಸರಿಯುತ್ತಿದ್ದರು. ಆದರೆ ಯಾವಾಗಲೂ ಭಾರತದ ಸ್ವಾತಂತ್ರ್ಯ ಮತ್ತು ರಾಷ್ಟ್ರೀಯ ಹೋರಾಟದ ಪ್ರತಿನಿಧಿಯಾಗಿ ಭಾರತದ ಬಂಧನ ಶಾಶ್ವತಗೊಳಿಸಲು ಪ್ರಯತ್ನಿಸಿದ ಎಲ್ಲ ಶಕ್ತಿಗಳನ್ನೂ ಎದುರಿಸುವ ಪರಮ ಶತ್ರುವಾದರು. ಅನೇಕ ವಿಷಯಗಳಲ್ಲಿ ಭಿನ್ನಾಭಿಪ್ರಾಯವಿದ್ದರೂ ಜನರು ಅವರ ನಾಯಕತ್ವ ಒಪ್ಪಿ ಹಿಂಬಾಲಿಸಿದರು. ಪ್ರತ್ಯಕ್ಷ ಹೋರಾಟವಿಲ್ಲದಿದ್ದಾಗ ಎಲ್ಲ ಸಮಯದಲ್ಲೂ ಅವರ ನಾಯಕತ್ವ ಒಪ್ಪಲಿಲ್ಲ. ಆದರೆ ಹೋರಾಟ ಅನಿವಾರ್ಯವಾದಾಗ ಎಲ್ಲ ಭಿನ್ನಾಭಿಪ್ರಾಯ ಮಾಯ ವಾಗಿ ಅವರೇ ಏಕೈಕ ನಾಯಕರಾಗುತ್ತಿದ್ದರು.

ಈರೀತಿ ೧೯೨೦ರಲ್ಲಿ ಭಾರತ ರಾಷ್ಟ್ರೀಯ ಮಹಾಸಭೆಯೂ ಬಹುಮಟ್ಟಿಗೆ ಇಡೀದೇಶವೂ ಈ ಹೊಸ ಅನುಭವವಿಲ್ಲದ ಮಾರ್ಗ ಹಿಡಿದು ಬ್ರಿಟಿಷ್ ಆಳರಸರೊಂದಿಗೆ ಪದೇ ಪದೇ ಹೋರಾಟಕ್ಕೆ ನಿಂತವು. ಈ ಹೊಸಮಾರ್ಗದಲ್ಲಿ ಮತ್ತು ಅಂದಿನ ಸನ್ನಿವೇಶದಲ್ಲಿ ಘರ್ಷಣೆ ಅನಿವಾರ್ಯವಾಯಿತು; ಆದರೆ ಇದರ ಹಿನ್ನೆಲೆ ಒಂದು ರಾಜಕೀಯ ಕೌಶಲ್ಯ ಅಥವ ಚದುರಂಗದಾಟವಾಗಿರದೆ, ಭಾರತದ ಜನಶಕ್ತಿಯನ್ನು ವೃದ್ಧಿ ಗೊಳಿಸುವುದಾಗಿತ್ತು. ಸ್ವಾತಂತ್ರ್ಯಗಳಿಸಿ ಉಳಿಸಿಕೊಳ್ಳಬೇಕಾದ್ದೂ ಅದೇ ಶಕ್ತಿಯಿಂದ ಎಂದು ಶಾಸನ ಭಂಗ ಚಳವಳಿಗಳು ಒಂದರ ಮೇಲೊಂದು ಬಂದವು. ಅಪಾರ ಆತ್ಮತ್ಯಾಗಮಾಡಿ ನೋವು ಅನುಭವಿಸ

ಬೇಕಾಯಿತು. ಆದರೆ ಅದೆಲ್ಲ ಸ್ವಾಪೇಕ್ಷೆಯಿಂದಾದ್ದರಿಂದ ಶಕ್ತಿವರ್ಧಕವಿದ್ದವು. ಬೇಡದವನಿಗೆ ನಿರ್ಬಂಧ ಪಡಿಸಿದರೆ ಆಗುವ ನಿರಾಶೆ ಅಸಹಾಯಕತ್ವವಲ್ಲ. ಸರ್ಕಾರದ ದಬ್ಬಾಳಿಕೆಯ ವಿಶಾಲಬಲೆಯಲ್ಲಿ ಇತರರೂ ಬಲಿಬಿದ್ದರು. ಅನೇಕವೇಳೆ ತಾವೇ ಇಷ್ಟಪಟ್ಟು ಬಂದವರು ಆ ಸಂಕಟ ತಾಳಲಾರದೆ ಕಾಲು ಕಿತ್ತರು; ಆದರೆ ಅನೇಕರು ಪುಟಕ್ಕೆಹಾಕಿದ ಚಿನ್ನದಂತೆ ಯಾವ ನೋವಿಗೂ ಕುಗ್ಗದೆ ಭದ್ರನಿಂತರು. ತೀರ ನೆಲಹತ್ತಿದಾಗ ಸಹ ಕಾಂಗ್ರೆಸ್ ಪರಕೀಯರ ಆಡಳಿತಕ್ಕಾಗಲಿ, ಅವರ ಅಪಾರ ಶಕ್ತಿಗಾಗಲಿ ಎಂದೂ ತಲೆಬಾಗಲಿಲ್ಲ. ರಾಷ್ಟ್ರದ ಬಿಡುಗಡೆಯ ಮಹದಾಶೆ ಮತ್ತು ಪರಾಡಳಿತ ಎದುರಿಸಬೇಕೆಂಬ ಸಂಕಲ್ಪಗಳ ಸಂಕೇತವಾಗಿ ಹೆಡೆಎತ್ತಿ ನಿಂತಿತು. ಅಸಂಖ್ಯಾತ ಭಾರತೀಯರು ಸ್ವಭಾವತಃ ಅಶಕ್ತರೂ ಅಂಜುಬುರುಕರೂ ಇದ್ದರೂ ಮತ್ತು ಸ್ವತಃ ತಮ್ಮಿಂದ ಏನೂ ಸಾಧ್ಯವಿಲ್ಲದಿದ್ದರೂ ಅನುಪಮ ಸಹಾನುಭೂತಿ ತೋರಿ, ಕಾಂಗ್ರೆಸ್ಸಿನ ನಾಯಕತ್ವ ಒಪ್ಪಿದುದಕ್ಕೆ ಇದೇ ಕಾರಣ. ಒಂದು ದೃಷ್ಟಿಯಿಂದ ಕಾಂಗ್ರೆಸ್ ಒಂದು ಪಕ್ಷ ನಿಜ; ಇನ್ನೊಂದು ದೃಷ್ಟಿಯಿಂದ ಅದು ಅನೇಕ ಪಕ್ಷಗಳಿಗೆ ಒಂದು ವೇದಿಕೆ. ಆದರೆ ಇದಕ್ಕೆಲ್ಲಕ್ಕೂ ಹೆಚ್ಚಾಗಿ ಅದು ಪ್ರತಿಬಿಂಬಿಸಿದ್ದು ದೇಶದ ಅಸಂಖ್ಯಾತ ಜನರ ಅಂತರಂಗದ ಅಭಿಲಾಷೆಯನ್ನು. ಸದಸ್ಯರ ಪಟ್ಟಿಯಲ್ಲಿ ಕಂಡ ಸಂಖ್ಯೆಯೇ ತಕ್ಕಷ್ಟು ದೊಡ್ಡದಿದ್ದರೂ ಈ ದೃಷ್ಟಿಯಿಂದ ಜನತೆಯ ಪ್ರತಿನಿಧಿತ್ವದ ಅಲ್ಪಾಂಶಮಾತ್ರವಾಗಿತ್ತು. ಎಷ್ಟು ಹಳ್ಳಿಗಳಿಗೆ ಹೋಗಲು ನಮಗೆ ಸಾಧ್ಯವಿತ್ತೋ ಆ ಶಕ್ತಿಯನ್ನು ಅವಲಂಬಿಸಿತ್ತು. ಅನೇಕ ಬಾರಿ ನಮ್ಮ ಸಂಸ್ಥೆ ಶಾಸನ ವಿರುದ್ಧ ಸಂಸ್ಥೆಯಾಯಿತು. ನಮ್ಮ ಪುಸ್ತಕಗಳು, ಕಾಗದ ಪತ್ರಗಳು ಎಲ್ಲವೂ ಪೋಲೀಸರ ಕೈಯಲ್ಲಿ.

ಶಾಸನ ಭಂಗ ಚಳುವಳಿ ಇಲ್ಲದಾಗ ಸಹ ಭಾರತ ಸರಕಾರದ ಬ್ರಿಟಿಷ್ ಆಡಳಿತ ಯಂತ್ರದೊಡನೆ ನಮ್ಮ ಸಾಮಾನ್ಯ ನೀತಿಯು ಉಗ್ರನೀತಿಯದಲ್ಲದಿದ್ದರೂ ಅಸಹಕಾರ ಮನೋಭಾವನೆಯದೇ ಆಗಿತ್ತು. ಇದು ಇಂಗ್ಲಿಷ್ ಜನರೊಡನೆ ಅಸಹಕಾರವಾಗಿರಲಿಲ್ಲ. ಪ್ರಾಂತ್ಯಗಳಲ್ಲಿ ಸರಕಾರಗಳು ಅಧಿಕಾರಕ್ಕೆ ಬಂದಾಗ ಅಧಿಕಾರವರ್ಗದೊಡನೆ ಸರಕಾರಿ ಕೆಲಸಗಳಲ್ಲಿ ಕಾಂಗ್ರೆಸ್ ಸಹಕರಿಸಬೇಕಾದ್ದು ಅನಿವಾರ್ಯವಾಯಿತು. ಆದರೂ ನಮ್ಮ ರಾಜಕೀಯದ ಹಿನ್ನೆಲೆಯಲ್ಲಿ ಯಾವ ವ್ಯತ್ಯಾಸವೂ ಆಗಲಿಲ್ಲ. ಸರಕಾರಿ ಕೆಲಸ ಬಿಟ್ಟು ಉಳಿದ ಸಮಯಗಳಲ್ಲಿ ಕಾಂಗ್ರೆಸ್ಸಿನವರ ವರ್ತನೆ ಏನಿರಬೇಕೆಂದು ಸಲಹೆ ಕೊಡಲಾಯಿತು. ತಾತ್ಕಾಲಿಕ ಒಪ್ಪಂದ ಮತ್ತು ಅನುಸರಣೆ ಕೆಲವುವೇಳೆ ಅವಶ್ಯವಾದರೂ ಭಾರತೀಯ ರಾಷ್ಟ್ರೀಯ ಭಾವನೆಗೂ ಪರಕೀಯ ಸಾಮ್ರಾಜ್ಯಶಕ್ತಿಗೂ ಶಾಂತಿಯು ಅಸಾಧ್ಯವಾಯಿತು. ಸ್ವತಂತ್ರ ಭಾರತ ಮಾತ್ರ ಸಮಾನ ಸೌಹಾರ್ದದಿಂದ ಸಹಕರಿಸಲು ಸಾಧ್ಯವಿತ್ತು.

## ೩. ಪ್ರಾಂತಗಳಲ್ಲಿ ಕಾಂಗ್ರೆಸ್ ಸರಕಾರಗಳು

ಅನೇಕ ವರ್ಷಗಳ ಕಾಲ ಕಮಿಷನ್‌ಗಳು, ಸಮಿತಿಗಳು, ಚರ್ಚೆಗಳು ಆದನಂತರ ಬ್ರಿಟಿಷ್ ಪಾರ್ಲಿಮೆಂಟ್ ೧೯೩೫ರಲ್ಲಿ ಭಾರತ ಸರಕಾರ ಶಾಸನವನ್ನು ಅಂಗೀಕರಿಸಿತು. ಇದರಲ್ಲಿ ಸ್ವಲ್ಪ ಪ್ರಾಂತ್ಯಸ್ವರಾಜ್ಯ ಮತ್ತು ಸಂಯುಕ್ತ ರಾಜ್ಯಪದ್ಧತಿಯ ಸಲಹೆ ಇತ್ತು; ಆದರೆ ರಾಜಕೀಯ ಮತ್ತು ಆರ್ಥಿಕ ಅಧಿಕಾರವೆಲ್ಲ ಬ್ರಿಟಿಷ್ ಸರಕಾರದ ಕೈಯಲ್ಲೆ ಕೇಂದ್ರೀಕೃತವಾಗುವಂತೆ ಅಧಿಕಾರ ಮಿತಿಗಳನ್ನು ಕಲ್ಪಿಸಲಾಗಿತ್ತು. ನಿಜವಾಗಿ ನೋಡಿದರೆ ಕೆಲವು ಸಂದರ್ಭಗಳಲ್ಲಿ, ಆ ಬ್ರಿಟಿಷ್ ಸರಕಾರಕ್ಕೆ ಜವಾಬ್ದಾರರಾದ ಅಧಿಕಾರಿಗಳಿಗೇ ಹೆಚ್ಚು ಅಧಿಕಾರ ಕೊಡಲಾಗಿತ್ತು. ಸಂಯುಕ್ತ ರಾಜ್ಯವಿಧಾನ ರಚನೆಯಲ್ಲಿ ಯಾವ ಪ್ರಗತಿಯೂ ಸಾಧ್ಯವಿರಲಿಲ್ಲ. ಬ್ರಿಟಿಷರ ಹಿಡಿತದಲ್ಲಿದ್ದ ಆಡಳಿತ ಯಂತ್ರ ಅಲುಗಾಡಿಸಲು ಭಾರತೀಯ ಪ್ರತಿನಿಧಿಗಳಿಗೆ ಏನೂ ಸಾಧ್ಯವಿಲ್ಲದಂತೆ ಎಲ್ಲ ಭದ್ರತೆಯನ್ನೂ ಮಾಡಲಾಗಿತ್ತು. ಆಡಳಿತ ಹಂಚಿಕೆ ಅಥವ ಬದಲಾವಣೆ ಏನಿದ್ದರೂ ಬ್ರಿಟಿಷ್ ಪಾರ್ಲಿಮೆಂಟಿನಿಂದಲೇ ಬರಬೇಕು. ಆ ಸಂವಿಧಾನ ರಚನೆಯು ಪ್ರತಿಗಾಮಿ ಇದ್ದುದಲ್ಲದೆ ಕ್ರಾಂತಿ ಒಂದಲ್ಲದೆ ಬೇರೆ ಬೆಳವಣಿಗೆಯ ಮಾರ್ಗ ಯಾವುದೂ ಅದರಲ್ಲಿ ಇರಲಿಲ್ಲ. ಬ್ರಿಟಿಷ್ ಸರಕಾರಕ್ಕೂ, ರಾಜರುಗಳು, ಜಮೀನುದಾರರುಗಳು ಮತ್ತು ಭಾರತದಲ್ಲಿನ ಇತರ ಪ್ರತಿಗಾಮಿ ಶಕ್ತಿಗಳಿಗೂ ಇದ್ದ ಸಂಬಂಧ

ಇನ್ನೂ ಭದ್ರವಾಯಿತು. ಭೇದ ಮನೋಭಾವ ಹೆಚ್ಚಿಸುವ ಪ್ರತ್ಯೇಕ ಚುನಾವಣೆಗಳು ಬಂದವು. ಬ್ರಿಟಿಷರ ವ್ಯಾಪಾರ, ಕೈಗಾರಿಕೆ, ಬಂಡವಾಳ ಮತ್ತು ಹಡಗಿನ ವ್ಯಾಪಾರ ಇವುಗಳ ಹಿಡಿತ ಇನ್ನೂ ಬಲವಾಯಿತು. "ಭೇದ ಭಾವನೆ"ಯ ಹೆಸರಿನಲ್ಲಿ ಆ ಹಿಡಿತ ಸಡಿಲಿಸದಂತೆ ಯಾವ ಶಾಸನವನ್ನೂ ಮಾಡಲಾಗದೆಂದು ನಿಷೇಧಿಸಲಾಯಿತು. ಭಾರತದ ಹಣಕಾಸು, ಸೈನ್ಯ ಮತ್ತು ವಿದೇಶ ವ್ಯವಹಾರವೆಲ್ಲ ಪೂರ್ಣ ಬ್ರಿಟಿಷರ ಅಧಿಕಾರದಲ್ಲೇ ಉಳಿಯಿತು. ವೈಸರಾಯ್‌ನ ಅಧಿಕಾರ ಮೊದಲಿಗಿಂತ ಇನ್ನೂ ಹೆಚ್ಚಿತು.

ಪ್ರಾಂತ್ಯಾಡಳಿತದ ಸಣ್ಣ ಚೌಕಟ್ಟಿನಲ್ಲಿ ಸ್ವಲ್ಪ ಹೆಚ್ಚಿನ ಅಧಿಕಾರ ಭಾರತೀಯರ ಕೈಗೆ ಬಂದಂತೆ ತೋರಿತು. ಆದರೂ ಅದೊಂದು ವಿಚಿತ್ರ ಪ್ರಜಾಪ್ರತಿನಿಧಿ ಪ್ರಭುತ್ವವಾಗಿತ್ತು. ವೈಸರಾಯನ ಕೈಯಲ್ಲಿ ಮತ್ತು ಜವಾಬ್ದಾರಿರಹಿತ ಕೇಂದ್ರ ಸರಕಾರದ ಕೈಯಲ್ಲಿ ಎಲ್ಲ ಅಧಿಕಾರಗಳೂ ಕೇಂದ್ರೀಕೃತವಿದ್ದವು. ವೈಸ್‌ರಾಯ್‌ನಂತೆ ಪ್ರಾಂತ್ಯದ ಗೌವರ್ನರ್ ಸಹ ಮಧ್ಯೆ ಬಂದು ಶಾಸನ ಸಭೆಯ ಶಾಸನವನ್ನು ನಿರಾಕರಿಸಿ, ತನಗೆ ಬೇಕಾದ ಶಾಸನ ರಚಿಸಿ ಜವಾಬ್ದಾರಿ ಮಂತ್ರಿ ಮಂಡಲ ಮತ್ತು ಪ್ರಾಂತ್ಯಶಾಸನ ಸಭೆಗಳಿಗೆ ವಿರುದ್ಧವಾಗಿ ಏನು ಬೇಕಾದರೂ ಮಾಡಲು ಅಧಿಕಾರವಿತ್ತು. ಆದಾಯದ ಬಹು ಭಾಗ ಪಟ್ಟಭದ್ರರಿಗೆ ಮೀಸಲಾಯಿತು; ಅದರಲ್ಲಿ ಬಿಡಿಕಾಸನ್ನು ಮುಟ್ಟುವಂತೆ ಇರಲಿಲ್ಲ. ಉನ್ನತ ಅಧಿಕಾರಿಗಳಿಗೆ ಮತ್ತು ಪೋಲೀಸರಿಗೆ ರಕ್ಷಣೆ ದೊರೆತು ಮಂತ್ರಿಮಂಡಲವು ಅವರನ್ನು ಮಾತನಾಡಿಸುವಂತೆ ಇರಲಿಲ್ಲ. ಅವರ ದೃಷ್ಟಿ ಅಧಿಕಾರ ದರ್ಪದ ದೃಷ್ಟಿ. ಮಂತ್ರಿಗಳಿಂದ ಯಾವ ಸಲಹೆಯನ್ನೂ ಅಪೇಕ್ಷಿಸದೆ ಎಲ್ಲ ಪ್ರೇರಣೆಗೂ ಗೌವರ್ನರ್ ಕಡೆಗೇ ನೋಡುತ್ತಿದ್ದರು. ಆದರೂ ಪ್ರಜಾ ಸರಕಾರ ಇವರ ಮೂಲಕವೇ ಆಡಳಿತ ನಡೆಸಬೇಕಾಯಿತು. ಗೌವರ್ನರಿಂದ ಮೊದಲುಗೊಂಡು ಕೆಳದರ್ಜೆಯ ಪೋಲಿಸಿನವರೆಗೆ ಸರಕಾರದ ಜಟಿಲ ಆಡಳಿತ ಯಂತ್ರವು ಅದೇ ಉಳಿಯಿತು. ಎಲ್ಲೋ ಮಧ್ಯೆ ಚುನಾಯಿತ ಸದಸ್ಯರಿಗೆ ಜವಾಬ್ದಾರರಾದ ಕೆಲವು ಮಂತ್ರಿಗಳು ಮಧ್ಯೆ ತೂರಿಕೊಂಡು ಸಾಧ್ಯವಿರುವ ಮಟ್ಟಿಗೆ ಆಡಳಿತ ನಡೆಸಬೇಕಾಯಿತು. ಬ್ರಿಟಿಷರ ಪ್ರತಿನಿಧಿಯಾದ ಗೌವರ್ನರ್ ಮತ್ತು ಆತನ ಕೈಕೆಳಗಿನ ಅಧಿಕಾರಿಗಳು ಒಪ್ಪಿ ಸಹಕರಿಸಿದರೆ ಮಾತ್ರ ಆಡಳಿತ ಯಂತ್ರ ಸುಗಮವಾಗಿ ನಡೆಯಲು ಸಾಧ್ಯವಿತ್ತು. ಇಲ್ಲದಿದ್ದರೆ ಪ್ರಜಾ ಸರಕಾರದ ನೀತಿ ಮತ್ತು ಮಾರ್ಗಗಳಿಗೂ ಹಳೆಯ ಪೋಲಿಸ್ ರಾಜ್ಯದ ಅಧಿಕಾರ ದರ್ಪದ ನೀತಿಗೂ ವಿರೋಧ ಬಂದು ಸದಾ ಘರ್ಷಣೆ ಶತಸ್ಸಿದ್ಧವಿತ್ತು. ಪ್ರಜಾ ಸರಕಾರದ ನೀತಿಗೆ ಗೌರ್ನರ್ ಮತ್ತು ಅಧಿಕಾರಿಗಳು ವಿರೋಧಿಗಳೂ ದ್ವೇಷಿಗಳೂ ಆಗಿರದಿದ್ದರೂ ಅದಕ್ಕೆ ಅಡ್ಡಿ ಬಂದು, ಕಾಲವಿಳಂಬ ಮಾಡಿ ಪ್ರಜಾಸರಕಾರದ ಧ್ಯೇಯ ಅಥವ ಕಾರ್ಯ ನೀತಿಯನ್ನು ವಿಫಲಮಾಡಲು ಅವಕಾಶವಿತ್ತು. ಮಂತ್ರಿಮಂಡಲದ ಅಥವ ಶಾಸನ ಸಭೆಯ ವಿರುದ್ಧ ತಮಗೆ ಇಷ್ಟ ಬಂದಂತೆ ವರ್ತಿಸಲು ವೈಸ್‌ರಾಯ್‌ಗೆ ಆಗಲಿ, ಗೌರ್ನರ್‌ಗೆ ಆಗಲಿ ಶಾಸನವಿಧಿಯಲ್ಲಿ ಯಾವ ಅಡ್ಡಿಯೂ ಇರಲಿಲ್ಲ; ನಿಜವಾದ ಆತಂಕವೆಂದರೆ ಘರ್ಷಣೆಯ ಭಯ ಒಂದೇ. ಮಂತ್ರಿಮಂಡಲ ರಾಜೀನಾಮೆ ಕೊಡಬಹುದಿತ್ತು ಮತ್ತು ಬೇರೆ ಯಾವ ಮಂತ್ರಿಮಂಡಲಕ್ಕೂ ಬಹುಮತವು ದೊರೆಯುವಂತೆ ಇರಲಿಲ್ಲ. ಇನ್ನುಳಿದುದು ಪುನಃ ಕಾಂಗ್ರೆಸ್ಸಿನೊಡನೆ ಹೋರಾಟ. ಇತರ ದೇಶಗಳಲ್ಲಿ ದೊರೆಗೂ ಶಾಸನ ಸಭೆಗಳಿಗೂ ಹೋರಾಟ ನಡೆದು, ಕ್ರಾಂತಿ ಎದ್ದು, ದೊರೆಯ ಅಧಿಕಾರಕ್ಕೆ ಸಂಚಕಾರ ಬಂದಂತೆ ಇಲ್ಲಿಯೂ ಅದೇ ಹಳೆಯ ವಿಧಿಬದ್ಧ ಹೋರಾಟ. ಆದರೆ ಇಲ್ಲಿ ಆ ದೊರೆ ಆರುಸಾವಿರ ಮೈಲಿಗಳಾಚೆ ಮತ್ತು ಆ ದೊರೆಯ ಬೆಂಬಲಕ್ಕೆ ವಿದೇಶೀ ಸೈನ್ಯ, ವಿದೇಶೀ ಆರ್ಥಿಕ ನೀತಿ ಮತ್ತು ವಿದೇಶೀಯರು ಸೃಷ್ಟಿಸಿದ ಪಟ್ಟದ ಹಕ್ಕುಗಳು ಮತ್ತು ಅವರ ಎಂಜಲಿಗಾಗಿ ಕಾದಿದ್ದ ಅನುಯಾಯಿಗಳ ತಂಡ.

ಇದೇ ಕಾಲದಲ್ಲಿ ಬ್ರಹ್ಮದೇಶವನ್ನು ಭಾರತದಿಂದ ಪ್ರತ್ಯೇಕಿಸಿದರು. ಬ್ರಹ್ಮದೇಶದಲ್ಲಿ ಬ್ರಿಟಿಷರ, ಭಾರತೀಯರ ಮತ್ತು ಸ್ವಲ್ಪಮಟ್ಟಿಗೆ ಚೀಣದ ಆರ್ಥಿಕ ಮತ್ತು ವ್ಯಾಪಾರ ಹಕ್ಕುಗಳಿಗೆ ಘರ್ಷಣೆ ಬಂದಿತ್ತು. ಆದ್ದರಿಂದ ಬ್ರಹ್ಮದೇಶೀಯರಲ್ಲಿ ಭಾರತೀಯರ ಮತ್ತು ಚೀಣದ ವಿರುದ್ಧ ದ್ವೇಷಭಾವನೆ ಹುಟ್ಟಿಸುವುದು ಬ್ರಿಟಿಷರ ನೀತಿಯಾಯಿತು. ಸ್ವಲ್ಪ ಕಾಲ ಇದರಿಂದ ಅವರಿಗೆ ಅನುಕೂಲವಾದರೂ ಬ್ರಹ್ಮದೇಶೀಯರಿಗೆ

ಸ್ವಾತಂತ್ರ್ಯ ನಿರಾಕರಿಸಿದಾಗ ಬ್ರಹ್ಮದೇಶದವರ ಒಲವು ಜಪಾನರ ಕಡೆ ತಿರುಗಿ ೧೯೪೨ರಲ್ಲಿ ಜಪಾನರು ಬ್ರಹ್ಮದೇಶಕ್ಕೆ ಮುತ್ತಿಗೆ ಹಾಕಿದಾಗ ಪ್ರತ್ಯಕ್ಷ ಅದರ ಅನುಭವವಾಯಿತು.

೧೯೩೫ನೆಯ ಶಾಸನವನ್ನು ಭಾರತದ ಎಲ್ಲ ರಾಜಕೀಯ ಪಕ್ಷದ ಜನರೂ ಪ್ರಬಲ ವಿರೋಧಿಸಿದರು. ಗೌರ್ನರ್ ಮತ್ತು ವೈಸರಾಯ್‌ಗೆ ಇದ್ದ ಅನೇಕ ವಿಶೇಷ ಅಧಿಕಾರ ಮತ್ತು ಮೀಸಲು ಹಕ್ಕುಗಳಿಗಾಗಿ ಪ್ರಾಂತ್ಯಾಡಳಿತ ವಿಧಾನವನ್ನು ಉಗ್ರವಾಗಿ ಟೀಕಿಸಿದರು; ಅದರ ಸಂಯುಕ್ತ ರಾಜ್ಯವಿಧಾನ ಇನ್ನೂ ಹೆಚ್ಚು ಖಂಡನೀಯವಿತ್ತು. ಸಂಯುಕ್ತ ರಾಜ್ಯವಿಧಾನ ಪದ್ಧತಿಯನ್ನೇ ದ್ವೇಷಿಸಲಿಲ್ಲ. ಭಾರತಕ್ಕೆ ಸಂಯುಕ್ತ ರಾಜ್ಯವಿಧಾನವೇ ಉತ್ತಮವೆಂದು ಎಲ್ಲರೂ ಒಪ್ಪಿದರು. ಆದರೆ ಬ್ರಿಟಿಷರು ರಚಿಸಿದ ಸಂಯುಕ್ತ ರಾಜ್ಯವಿಧಾನ ಪದ್ಧತಿಯ ಉದ್ದೇಶ, ಬ್ರಿಟಿಷರ ಆಡಳಿತ ಮತ್ತು ಪಟ್ಟಿದ ಹಕ್ಕುಗಳನ್ನು ಭದ್ರಪಡಿಸುವುದೇ ಆಗಿತ್ತು. ಪ್ರಾಂತ್ಯಾಡಳಿತ ವಿಧಾನ ಮಾತ್ರ ಆಚರಣೆಗೆ ಬಂದಾಗ ಚುನಾವಣೆಯಲ್ಲಿ ಕಾಂಗ್ರೆಸ್ ಭಾಗ ವಹಿಸಬೇಕೆಂದು ತೀರ್ಮಾನಿಸಿತು. ಆದರೆ ಶಾಸನದ ಪ್ರಕಾರ ಪ್ರಾಂತ್ಯಾಡಳಿತದ ಜವಾಬ್ದಾರಿ ಹೊರ ಬೇಕೇ ಬೇಡವೆ ಎಂಬ ವಿಷಯ ಕಾಂಗ್ರೆಸ್ಸಿನಲ್ಲಿ ಒಂದು ದೊಡ್ಡ ಸಮಸ್ಯೆಯಾಯಿತು. ಅನೇಕ ಪ್ರಾಂತ್ಯಗಳಲ್ಲಿ ಚುನಾವಣೆಯಲ್ಲಿ ಕಾಂಗ್ರೆಸ್ಸಿಗೆ ಅದ್ಭುತ ಬಹುಮತ ದೊರಕಿತ್ತು. ಆದರೂ ಗೌರ್ನರ್ ಮತ್ತು ವೈಸ್‌ರಾಯ್‌ರು ಆಡಳಿತದಲ್ಲಿ ಅಡ್ಡ ಬರುವುದಿಲ್ಲವೆಂಬ ಭರವಸೆ ಇಲ್ಲದೆ ಮಂತ್ರಿಮಂಡಲದ ಜವಾಬ್ದಾರಿ ಹೊರಬಾರದೆಂಬ ಅಭಿಮತವಿತ್ತು. ಕೆಲವು ತಿಂಗಳಮೇಲೆ ಒಂದು ಬಗೆಯ ಭರವಸೆ ದೊರೆತು, ೧೯೩೭ರಲ್ಲಿ ಕಾಂಗ್ರೆಸ್ ಅಧಿಕಾರ ವಹಿಸಿಕೊಂಡಿತು. ಹನ್ನೊಂದು ಪ್ರಾಂತಗಳ ಪೈಕಿ ಎಂಟು ಪ್ರಾಂತ್ಯಗಳಲ್ಲಿ ಕಾಂಗ್ರೆಸ್ ಮಂತ್ರಿ ಮಂಡಲಗಳೇರ್ಪಟ್ಟವು. ಸಿಂಧ, ಬಂಗಾಲ ಮತ್ತು ಪಂಜಾಬದಲ್ಲಿ ಇದು ಸಾಧ್ಯವಾಗಲಿಲ್ಲ. ಸಿಂಧ ಸಣ್ಣ ಹೊಸ ಪ್ರಾಂತ್ಯವಾಗಿ ಭದ್ರತೆ ಇರಲಿಲ್ಲ. ಬಂಗಾಲದ ಶಾಸನದ ಸಭೆಯಲ್ಲಿ ಕಾಂಗ್ರೆಸ್ ಪಕ್ಷವೇ ಅತಿ ದೊಡ್ಡದಾದರೂ ಬಹುಮತವಿರಲಿಲ್ಲ. ಆದ್ದರಿಂದ ಅಲ್ಲಿ ಮಂತ್ರಿಮಂಡಲ ರಚಿಸಲಿಲ್ಲ. ಬ್ರಿಟಿಷ್ ವರ್ತಕರಿಗೆ ಕಲ್ಕತ್ತನಗರವೇ ಮುಖ್ಯ ಕೇಂದ್ರವಾದ್ದರಿಂದ ಯೂರೋಪಿಯನರಿಗೆ ಬಂಗಾಲ ಶಾಸನ ಸಭೆಯಲ್ಲಿ ವಿಶೇಷ ಪ್ರಾತಿನಿಧ್ಯ ಕೊಡಲಾಗಿತ್ತು. ಸಂಖ್ಯೆಯಲ್ಲಿ ಕೆಲವು ಸಹಸ್ರಜನ ಮಾತ್ರ ಇದ್ದರೂ. ಅವರಿಗೆ ಇಪ್ಪತ್ತೈದು ಸ್ಥಾನಗಳು, ಒಂದು ಕೋಟಿ ಎಪ್ಪತ್ತು ಲಕ್ಷ ಮುಸ್ಲಿಮೇತರರಿಗೆ ಐವತ್ತು ಸ್ಥಾನಗಳು! ಆದ್ದರಿಂದ ಶಾಸನ ಸಭೆಯಲ್ಲಿ ಬ್ರಿಟಿಷ್ ಪ್ರತಿನಿಧಿಗಳ ಸಂಗಡಕ್ಕೆ ಬಂಗಾಲದ ಮಂತ್ರಿ ಮಂಡಲವನ್ನು ಉಳಿಸುವುದಕ್ಕೂ ಉರುಳಿಸುವುದಕ್ಕೂ ಶಕ್ತಿಯಿತ್ತು.

ಭಾರತದ ಸಮಸ್ಯೆಗೆ ತಾತ್ಕಾಲಿಕ ಪರಿಹಾರವೆಂದು ಸಹ ೧೯೩೫ ನೆಯ ಶಾಸನ ಒಪ್ಪಲು ಕಾಂಗ್ರೆಸ್ಸಿಗೆ ಸಾಧ್ಯವಿರಲಿಲ್ಲ. ಈ ಶಾಸನವನ್ನು ವಿರೋಧಿಸಿ ಸ್ವಾತಂತ್ರ್ಯ ಸಾಧಿಸುವುದಾಗಿ ಪ್ರತಿಜ್ಞೆ ಮಾಡಿದ್ದೆವು. ಆದರೂ ಪ್ರಾಂತ್ಯಾಡಳಿತವನ್ನು ಕೈಗೆ ತೆಗೆದುಕೊಂಡು ನಡೆಸಬೇಕೆಂಬುದು ಬಹುಮತಾಭಿಪ್ರಾಯವಾಯಿತು. ಈಗ ಕಾಂಗ್ರೆಸ್ ನೀತಿ ದ್ವಿಮುಖವಾಯಿತು. ಹೊರಗೆ ಸ್ವಾತಂತ್ರ್ಯದ ಹೋರಾಟ ಮುಂದೆ ಸಾಗಿಸುವುದು; ಶಾಸನ ಸಭೆಗಳ ಮೂಲಕ ರಚನಾತ್ಮಕ ಕಾರ್ಯಕ್ರಮ ಸಾಧಿಸುವುದು. ಮುಖ್ಯವಾಗಿ ರೈತರ ಸಮಸ್ಯೆಯನ್ನು ಶೀಘ್ರ ಪರಿಹಾರ ಮಾಡುವುದು ಅವಶ್ಯವಿತ್ತು.

ಕಾಂಗ್ರೆಸ್ಸಿಗೆ ಬಹುಮತವಿದ್ದುದರಿಂದ ಅವಶ್ಯಕತೆ ಇಲ್ಲದಿದ್ದರೂ ಇತರ ಪಕ್ಷಗಳನ್ನು ಸೇರಿಸಿಕೊಂಡು ಮಿಶ್ರ ಮಂತ್ರಿಮಂಡಲ ರಚಿಸುವ ಪ್ರಶ್ನೆಯನ್ನೂ ಯೋಚಿಸಲಾಯಿತು. ಸರಕಾರದ ಕಾರ್ಯನಿರ್ವಹಣೆಯಲ್ಲಿ ಆದಷ್ಟು ಜನರ ಸಹಾಯ ಪಡೆಯುವುದು ಅಪೇಕ್ಷಣೀಯವಿತ್ತು. ಮಿಶ್ರ ಮಂತ್ರಿ ಮಂಡಲ ರಚನೆ ತಪ್ಪು ಎಂಬ ಭಾವನೆ ಎಲ್ಲ ಸಮಯದಲ್ಲೂ ಇರಲಿಲ್ಲ. ವಾಯವ್ಯ ಪ್ರಾಂತ್ಯ ಮತ್ತು ಅಸ್ಸಾಂನಲ್ಲಿ ಒಂದು ಬಗೆಯ ಮಿಶ್ರ ಮಂತ್ರಿ ಮಂಡಲಗಳನ್ನೆ ಒಪ್ಪಲಾಗಿತ್ತು. ಹಾಗೆ ನೋಡಿದರೆ ಭಾರತಕ್ಕೆ ಸ್ವಾತಂತ್ರ್ಯ ಸಾಧನೆಯ ಬಲವತ್ತರ ಆಶೆಯಿಂದ ಕಾಂಗ್ರೆಸ್ಸೇ ಒಂದು ಮಿಶ್ರ ರಾಜಕೀಯ ಪಕ್ಷವಾಗಿತ್ತು. ಒಳಗೆ ಅನೇಕ ಅಭಿಪ್ರಾಯ ಭೇದಗಳಿದ್ದರೂ ಒಂದು ಶಿಸ್ತು, ಒಂದು ಸಾಮಾಜಿಕ ದೃಷ್ಟಿ, ಶಾಂತರೀತಿಯಲ್ಲಿ ಹೋರಾಟ ನಡೆಸುವ ಒಂದು ಶಕ್ತಿ ಬೆಳೆದಿತ್ತು. ಇದಕ್ಕೂ ಹೆಚ್ಚಿನ ಸೇರ್ಪಡೆ ಎಂದರೆ ಭಿನ್ನ ರಾಜಕೀಯ

ಮತ್ತು ಸಾಮಾಜಿಕ ದೃಷ್ಟಿಯವರೊಡನೆ, ಕೇವಲ ಅಧಿಕಾರ ಮತ್ತು ಮಂತ್ರಿ ಪದವಿಗಳಿಗಾಗಿ ಹಾತೊರೆಯುತ್ತಲಿದ್ದವರೊಡನೆ ಸೇರಿಕೊಳ್ಳುವುದಾಗಿತ್ತು. ಆ ಪರಿಸ್ಥಿತಿಯಲ್ಲಿ ಹೋರಾಟ ಅನಿವಾರ್ಯವಾಗಿತ್ತು; ಬ್ರಿಟಿಷ್ ಹಕ್ಕುದಾರಿಗಳ ಪ್ರತಿನಿಧಿಗಳೊಡನೆ, ವೈಸರಾಯ್ ಮತ್ತು ಗೌರ್‍ನರುಗಳೊಡನೆ, ಉನ್ನತ ಅಧಿಕಾರಿಗಳೊಡನೆ, ಭೂಮಿದಾರಿ ವಿಷಯದಲ್ಲಿ ಜಮೀನುದಾರರೊಡನೆ, ಕೂಲಿಗಾರರ ವಿಷಯದಲ್ಲಿ ಬಂಡವಲಗಾರರೊಡನೆ ಹೋರಾಟವೇ ಕಾದಿತ್ತು. ಕಾಂಗ್ರೆಸೇತರ ಪಕ್ಷಗಳೆಲ್ಲ ರಾಜಕೀಯ ಮತ್ತು ಸಾಮಾಜಿಕ ವಿಷಯಗಳಲ್ಲಿ ಸಂಪ್ರದಾಯ ಶರಣರು. ಅವರಲ್ಲಿ ಕೆಲವರಂತೂ ಅಧಿಕಾರದಾಸೆಗೆ ಮನಸೋತವರು. ಅವರೇನಾದರೂ ನಮ್ಮ ಮಂತ್ರಿಮಂಡಲದಲ್ಲಿ ಸೇರಿದರೆ ನಮ್ಮ ಸಮಾಜ ಸುಧಾರಣಾ ಕಾರ್ಯಕ್ರಮಕ್ಕೆ ಅಡ್ಡಿ ಬಂದು, ಕಾಲಹರಣಕ್ಕೆ ಎಡೆಕೊಟ್ಟಂತಾಗುತ್ತಿತ್ತು. ಇತರ ಮಂತ್ರಿಗಳನ್ನು ಬದಿಗಿರಿಸಿ ಗೌರ್‍ನರೊಡನೆ ಕೃತ್ರಿಮ ಸಂಧಾನಕ್ಕೂ ಆಸ್ಪದವಿತ್ತು. ಬ್ರಿಟಿಷ್ ಅಧಿಕಾರವನ್ನು ಎದುರಿಸಲು ಒಮ್ಮತದ ನಾಯಕತ್ವ ಅತಿಅವಶ್ಯವಿತ್ತು. ಇದರಲ್ಲಿ ಸ್ವಲ್ಪ ಒಡಕು ಬಂದರೂ ನಮ್ಮ ವ್ಯೂಹಕ್ಕೇ ಅಪಾಯ. ಒಂದುಗೂಡಿಸುವ ಶಕ್ತಿ ಇಲ್ಲದೆ ಒಂದು ನಿಷ್ಠೆ ಇಲ್ಲದೆ, ಏಕಮುಖ ಧ್ಯೇಯವಿಲ್ಲದೆ ಎತ್ತು ಏರಿಗೆಳೆಯಿತು, ಕೋಣ ನೀರಿಗೆಳೆಯಿತು ಎಂಬಂತೆ ಆಗುತ್ತಲಿತ್ತು.

ನಮ್ಮ ಸಾರ್ವಜನಿಕ ಜೀವನದಲ್ಲಿ ಅನೇಕರು ರಾಜಕೀಯವನ್ನೇ ಧ್ಯೇಯವಾಗಿಟ್ಟುಕೊಂಡು ಸೇರಿದವರಿದ್ದುದು ಸ್ವಾಭಾವಿಕವಿತ್ತು; ಒಳ್ಳೆಯದಿರಲಿ ಕೆಟ್ಟದಿರಲಿ ಪದವಿಯ ಆಶೆಗಾಗಿ ಸೇರಿದವರು ಎನ್ನಬಹುದು. ಕಾಂಗ್ರೆಸ್ಸಿನಲ್ಲಿ ಮತ್ತು ಇತರ ಸಂಸ್ಥೆಗಳಲ್ಲಿ ಸಹ ದಕ್ಷರೂ, ಕಾರ್ಯನಿಷ್ಠರೂ, ಸ್ವದೇಶಾಭಿಮಾನಿಗಳೂ ಆದ ಸ್ತ್ರೀಪುರುಷರಿದ್ದರು; ಪದವಿಯ ಆಶೆಗಾಗಿ ಬಂದವರೂ ಇದ್ದರು. ಆದರೆ ೧೯೨೦ರಿಂದ ಈಚೆಗೆ ಕಾಂಗ್ರೆಸ್ಸು ಕೇವಲ ವಿಧಿ ಬದ್ಧ ರಾಜಕೀಯ ಪಕ್ಷವಾಗಿರದೆ ಪ್ರತ್ಯಕ್ಷ ಮತ್ತು ಮತ್ತು ಪರೋಕ್ಷ ಕ್ರಾಂತಿಕಾರಕ ಭಾವನೆಯಿಂದ ತುಂಬಿತ್ತು. ಅನೇಕವೇಳೆ ಶಾಸನ ಬಾಹಿರವಿತ್ತು. ಹಿಂಸೆ, ಗುಪ್ತ ಸಮಾಲೋಚನೆ, ಪಿತೂರಿ ಮುಂತಾದ ಹಿಂಸಾತ್ಮಕ ಚಳುವಳಿಯ ಸಾಮಾನ್ಯ ರೀತಿ ನೀತಿಗಳು ಯಾವುದೂ ಅದರಲ್ಲಿ ಇಲ್ಲದಿದ್ದರೂ, ಕ್ರಾಂತಿ ಭಾವನೆಯಲ್ಲಿ ಇತರ ಯಾವ ಚಳವಳಿಗೂ ಹಿಂದಿರಲಿಲ್ಲ. ಅದರ ಮಾರ್ಗ ತಪ್ಪಿರಲಿ ಸರಿಯಿರಲಿ, ಪರಿಣಾಮಕಾರಕವಿರಲಿ ಇಲ್ಲದಿರಲಿ, ಅಥವ ವಿವಾದಾಸ್ಪದವಿರಲಿ ಅದರಲ್ಲಿ ಅತ್ಯದ್ಭುತ ಧೈರ್ಯ ಮತ್ತು ಸಹನಶಕ್ತಿ ಇತ್ತು. ದಿನಗಟ್ಟಲೆ, ತಿಂಗಳುಗಟ್ಟಲೆ, ವರ್ಷಗಟ್ಟಲೆ ದೃಢನಿಶ್ಚಯದಿಂದ ಜೀವನದ ಎಲ್ಲ ಸುಖಗಳನ್ನೂ ತ್ಯಾಗಮಾಡಿ ಸಂಕಟಪಡುವುದಕ್ಕಿಂತ ಸಾವನ್ನಾದರೂ ಎದುರಿಸಿ ಅಲ್ಪಾವಧಿಯ ಹಿಂಸಾತ್ಮಕ ಚಳವಳಿಯಲ್ಲಿ ಭಾಗಿಯಾಗುವುದು ಪ್ರಾಯಶಃ ಸುಲಭವಿರಬಹುದು. ಅಲ್ಲದೆ ದೀರ್ಘಕಾಲದ ತ್ಯಾಗಕ್ಕೆ ಸಿದ್ಧರಿರುವರು ಎಲ್ಲೆಡೆಯೂ ಬಹು ವಿರಳ. ಭಾರತದಲ್ಲಿ ಅಷ್ಟು ಅಸಂಖ್ಯಾತ ಜನರು ಅಷ್ಟು ದೀರ್ಘಕಾಲ ಆ ಸೇವಾ ತಪಸ್ಸನ್ನು ಆಚರಿಸಿ ಕೃತಕೃತ್ಯರಾದದ್ದು ಅತ್ಯಾಶ್ಚರ್ಯ.

ಪುನಃ ಹೋರಾಟ ಆರಂಭವಾಗುವ ಮುಂಚೆ ರೈತರು ಮತ್ತು ಕೂಲಿಗಾರರ ಹಿತದೃಷ್ಟಿಯಿಂದ ಶಾಸನ ಪೂರೈಸಬೇಕೆಂದು ಶಾಸನ ಸಭೆಗಳ ಕಾಂಗ್ರೆಸ್ ಪಕ್ಷಗಳು ಕಾತರರಾಗಿದ್ದವು. ಮುಂಬರುವ ಹೋರಾಟದ ಭಯ ಯಾವಾಗಲೂ ಇತ್ತು; ಪರಿಸ್ಥಿತಿಯೇ ಅಷ್ಟು ಸ್ಫೋಟಕವಿತ್ತು; ಪ್ರತಿಯೊಂದು ಪ್ರಾಂತ್ಯದಲ್ಲೂ ಮಿತ ಮತದಾನ ಪದ್ಧತಿಯ ಮೇಲೆ ಜಮೀನ್ದಾರಿ ಮತ್ತು ಕೈಗಾರಿಕಾ ಹಕ್ಕುದಾರಿಗಳ ಪ್ರತಿಗಾಮಿ ಸದಸ್ಯರ ಹಿರಿಯ ಶಾಸನ ಸಭೆಗಳಿದ್ದವು. ಪ್ರಗತಿಪರ ಶಾಸನ ನಿರ್ಮಾಣಕ್ಕೆ ಅವಲ್ಲದೆ ಆತಂಕಗಳೂ ಇದ್ದವು. ಮಿಶ್ರಮಂತ್ರಿಮಂಡಲಗಳು ಈ ತೊಂದರೆ ಹೆಚ್ಚಿಸುತ್ತಿದ್ದವು. ಆದ್ದರಿಂದ ಅಸ್ಸಾಮ್ ಮತ್ತು ವಾಯವ್ಯ ಪ್ರಾಂತ್ಯದಲ್ಲಿ ಹೊರತು ಬೇರೆ ಎಲ್ಲೂ ಮಿಶ್ರಮಂತ್ರಿಮಂಡಲ ರಚಿಸಲಾಗದೆಂದು ಕಾಂಗ್ರೆಸ್ ತೀರ್ಮಾನಿಸಿತು.

ಆದರೆ ಇದೇ ಕೊನೆಯ ಮಾತೂ ಆಗಿರಲಿಲ್ಲ. ಈ ತೀರ್ಮಾನ ಬದಲಾಯಿಸಲು ಅವಕಾಶವಿತ್ತು. ಆದರೆ ದಿನ ದಿನಕ್ಕೂ ಪರಿಸ್ಥಿತಿ ಬಿಗಡಾಯಿಸುತ್ತ ಇದ್ದುದರಿಂದ ಆ ತೀರ್ಮಾನ ಬದಲಾಯಿಸುವುದು ಕಷ್ಟವಾಗಿ ಅವಸರದಿಂದ ತೀರ್ಮಾನಿಸಬೇಕಾದ ಪ್ರಶ್ನೆಗಳಲ್ಲಿಯೇ ಪ್ರಾಂತ್ಯಗಳ ಕಾಂಗ್ರೆಸ್ ಸರಕಾರಗಳಿಗೆ ಬಿಡುವು ಸಾಲದಾಯಿತು. ಈಚೆಗೆ ಈ ತೀರ್ಮಾನದ ಔಚಿತ್ಯದ ವಿಷಯದಲ್ಲಿ ವಾದ ವಿವಾದ ನಡೆದು

ಭಿನ್ನಾಭಿಪ್ರಾಯಗಳು ಹೊರಬಿದ್ದಿವೆ. ಆಮೇಲೆ ಹೀಗೆ ಮಾಡಿದ್ದರೆ ಚೆನ್ನಾಗಿತ್ತೆಂದು ಬುದ್ಧಿ ಹೇಳುವುದು ಸುಲಭ. ಆದರೆ ಅಂದಿನ ರಾಜಕೀಯ ದೃಷ್ಟಿಯಿಂದ ನಾವು ಅನುಸರಿಸಿದ ರೀತಿಯೇ ಸರಿ ಎಂದು ನನ್ನ ಭಾವನೆ. ಆದರೂ ಕೋಮುವಾರು ಪ್ರಶ್ನೆಯ ಮೇಲೆ ಅದರಿಂದ ಅನಿಷ್ಟ ಪರಿಣಾಮವಾಯಿತು. ಅನೇಕ ಮುಸ್ಲಿಮರಲ್ಲಿ ಅಸಮಾಧಾನವೂ, ಪ್ರತ್ಯೇಕತೆಯ ಮನೋಭಾವವೂ ಹೆಚ್ಚಿತು. ಪ್ರತಿಗಾಮಿಗಳು ಇದನ್ನೇ ಉಪಯೋಗಿಸಿಕೊಂಡು ತಮ್ಮ ಪಕ್ಷವನ್ನು ಬಲಪಡಿಸಿಕೊಂಡರು.

ರಾಜಕೀಯ ದೃಷ್ಟಿಯಿಂದ ಆಗಲಿ ಘಟನಾತ್ಮಕ ದೃಷ್ಟಿಯಿಂದ ಆಗಲಿ ಪ್ರಾಂತ್ಯಗಳಲ್ಲಿ ಕಾಂಗ್ರೆಸ್ ಸರಕಾರಗಳು ಏರ್ಪಟ್ಟುದರಿಂದ ಬ್ರಿಟಿಷರ ರಾಜ್ಯಾಡಳಿತ ರಚನೆಯಲ್ಲಿ ಮುಖ್ಯ ಪರಿವರ್ತನೆಯೂ ಆಗಲಿಲ್ಲ. ನಿಜವಾದ ಅಧಿಕಾರ ಇದ್ದಲ್ಲಿಯೇ ಉಳಿಯಿತು. ಆದರೆ ದೇಶದಲ್ಲಿ ಅದ್ಭುತ ಮಾನಸಿಕ ಪರಿವರ್ತನೆ ಯಾಗಿ ಒಂದು ವಿದ್ಯುತ್ ಪ್ರವಾಹ ಹರಿದಂತೆ ಜನರು ಚಕಿತರಾದರು. ಪರಿವರ್ತನೆಯು ಪಟ್ಟಣ ಗಳಿಂದ ಗ್ರಾಮಾಂತರಗಳಲ್ಲಿ ವಿಶೇಷ ಪರಿಣಾಮಕಾರಿಯಾಗಿತ್ತು. ಕೈಗಾರಿಕಾ ಕೇಂದ್ರಗಳ ಶ್ರಮಜೀವಿ ಗಳಲ್ಲೂ ಅದನ್ನು ಕಾಣಬಹುದಿತ್ತು. ಜನರನ್ನು ಅದಮುತ್ತಿದ್ದ ಹೊರೆ ಸ್ವಲ್ಪ ಇಳಿದುದರಿಂದ ಬಿಡುಗಡೆಯ ಬೆಲೆಯನ್ನರಿತರು. ಎಲ್ಲೆಡೆಯಲ್ಲೂ ತಳಹತ್ತಿದ್ದ ಜನಶಕ್ತಿಯ ಉತ್ಸಾಹ ಉಕ್ಕೇರಿ ಹರಿದಿತ್ತು. ಸ್ವಲ್ಪ ಮಟ್ಟಿಗಾದರೂ ಪೋಲೀಸರ ಮತ್ತು ಗುಪ್ತಚಾರರ ಭಯ ಮಾಯವಾಯಿತು. ಕಡುಬಡವ ರೈತನಲ್ಲಿ ಸಹ ಆತ್ಮವಿಶ್ವಾಸ ಮತ್ತು ಆತ್ಮಗೌರವದ ಭಾವನೆ ಬೆಳೆಯಿತು. ರಾಷ್ಟ್ರಜೀವನದಲ್ಲಿ ತನಗೂ ಬೆಲೆ ಇದೆ, ತನ್ನನ್ನು ಯಾರೂ ಮರೆಯುವಂತೆ ಇಲ್ಲ ಎಂಬ ಅರಿವುಂಟಾದದ್ದು ಇದೇ ಅವನಲ್ಲಿ ಪ್ರಪ್ರಥಮ. ಇಂದಿನ ಸರಕಾರವು ತನ್ನನ್ನು ಆದಷ್ಟು ಸುಲಿಗೆ ಮಾಡಿ, ಹತ್ತಿರ ಹೋಗಲು ಅಸಾಧ್ಯವಾದ ಅಸಂಖ್ಯಾತ ಅಧಿಕಾರಿ ಗಳಿಂದ ದೂರವಿರುವ ಒಂದು ಅಪರಿಚಿತ, ಅವ್ಯಕ್ತ ಪೆಡಂಭೂತವಲ್ಲ ಎಂದು ಗೊತ್ತಾಯಿತು. ಇದು ವರೆಗೆ ಅಲಭ್ಯವಿದ್ದ ಅಧಿಕಾರ ಸ್ಥಾನಗಳು ತಾನು ಕಂಡು, ಕೇಳಿ, ಮಾತನಾಡಿದ ಮತ್ತು ಕೆಲವು ಕಾಲ ತನ್ನೊಂದಿಗೆ ಸೆರೆಮನೆಯಲ್ಲಿ ವಾಸವಾಗಿದ್ದು ಸ್ನೇಹಿತರಾಗಿ ಪರಿಚಿತವಿದ್ದ ವ್ಯಕ್ತಿಗಳ ಕೈಗೆ ಬಂದಿದೆ ಎಂಬ ಅರಿವು ಆಯಿತು. ಬ್ರಿಟಿಷ್ ಅಧಿಕಾರಿವರ್ಗದ ಕೋಟೆಗಳಂತಿದ್ದ ಪ್ರಾಂತ್ಯ ಸರಕಾರಗಳ ರಾಜಧಾನಿಗಳಲ್ಲಿ ಅನೇಕ ವಿಚಿತ್ರ ದೃಶ್ಯಗಳು ನಡೆದವು. ಉನ್ನತ ಅಧಿಕಾರಿಗಳ ಆವಾಸಸ್ಥಾನವಾಗಿದ್ದ ಈ ಕೇಂದ್ರಗಳು ಪರಮಾವಧಿ ಸ್ಥಾನಗಳಾಗಿದ್ದವು. ಅಲ್ಲಿಂದ ಹೊರಟ ವಿಚಿತ್ರ ಆಜ್ಞೆಗಳನ್ನು ಎದುರಿಸುವವರೇ ಇರಲಿಲ್ಲ. ಎಲ್ಲಿ ನೋಡಿದರೂ ಥಳಥಳಿಸುವ ಕಠಾರಿಗಳನ್ನು ಸೊಂಟಕ್ಕೆ ಸಿಕ್ಕಿಸಿಕೊಂಡ ಪೋಲೀಸರ ಮತ್ತು ಕೆಂಪು ಕಿನಕಾಪಿನ ಸಮವಸ್ತ್ರ ಧಾರಿಗಳ ಸರ್ಪಕಾವಲು. ತುಂಬ ಅದೃಷ್ಟ ಶಾಲಿಗಳಿಗೋ, ಧೈರ್ಯ ವಾನರಿಗೋ ಅಥವ ಹಣವಂತರಿಗೋ ಮಾತ್ರ ಅಲ್ಲಿ ಪ್ರವೇಶ. ಈಗ ಪಟ್ಟಣಗಳ, ಹಳ್ಳಿಗಳ ಜನರು ಅಸಂಖ್ಯಾತರಾಗಿ ಈ ಪವಿತ್ರ ಸ್ಥಳಗಳಿಗೆ ನುಗ್ಗಿ ಮನಬಂದಂತೆ ತಿರುಗಾಡಲಾರಂಭಿಸಿದರು. ಎಲ್ಲದರಲ್ಲೂ ಅವರಿಗೆ ಕುತೂಹಲ. ಶಾಸನ ಸಭೆ ನಡೆಯುವ ಸಭಾಭವನಕ್ಕೆ ನುಗ್ಗಿದರು; ಮಂತ್ರಿಗಳ ಕೋಣೆಗಳೊಳಗೆ ಸಹ ಇಣಿಕಿಹಾಕಿದರು. ಪರಕೀಯರೆಂಬ ಭಾವನೆ ಹೋದ ಕಾರಣ ಅವರನ್ನು ತಡೆಯಲು ಸಾಧ್ಯವಿರ ಲಿಲ್ಲ. ಅದೆಲ್ಲ ಅವರಿಗೆ ಅರ್ಥವಾಗದಿದ್ದರೂ, ನಮ್ಮದು ಎಂಬ ಅಭಿಮಾನವಿತ್ತು. ಬೆಳಗುವ ಕಠಾರಿಗಳ ಪೋಲೀಸರೂ, ಚಪ್ರಾಸಿಗಳೂ ಬೆರಗಾದರು. ಹಿಂದಿದ್ದ ಬೆಲೆ ಈಗ ಮಾಯವಾಯಿತು. ಅಧಿಕಾರ ಮತ್ತು ದರ್ಪದ ಐರೋಪ್ಯರ ಉಡುಪಿಗೆ ಈಗ ಬೆಲೆ ಇಲ್ಲದಾಯಿತು. ಶಾಸನ ಸಭೆಗಳ ಸದಸ್ಯರನ್ನು ಸಾಮಾನ್ಯ ಹಳ್ಳಿಯ ರೈತನಿಂದ ಅಥವ ಪಟ್ಟಣದ ವರ್ತಕನಿಂದ ಗುರುತಿಸಲು ಕಷ್ಟವಾಯಿತು. ಎಲ್ಲರ ಮೈಮೇಲೂ ಅದೇ ಕೈನೂಲಿನ ಖಾದಿಬಟ್ಟೆ ಮತ್ತು ತಲೆಗೆ ಖಾದಿ ಟೋಪಿ.

ಕೆಲವು ತಿಂಗಳ ಮೊದಲೇ ಮಂತ್ರಿ ಮಂಡಲಗಳೇರ್ಪಟ್ಟ ಪಂಜಾಬ ಮತ್ತು ಬಂಗಾಲದಲ್ಲಿ ಪರಿಸ್ಥಿತಿಯೇ ಬೇರೆ ಇತ್ತು. ಅಲ್ಲಿ ರಾಜಕೀಯ ಬಿಕ್ಕಟ್ಟು ಯಾವುದೂ ಬಂದಿರಲಿಲ್ಲ. ಮಂತ್ರಿಮಂಡಲ ಏರ್ಪಟ್ಟಾಗಲೂ ಮೇಲೆ ಯಾವ ವ್ಯತ್ಯಾಸವೂ ಆಗಲಿಲ್ಲ, ಪಂಜಾಬಿನಲ್ಲಿ ಹಳೆಯ ಆಡಳಿತವೇ ಮುಂದುವರಿ ಯಿತು, ಹೊಸಮಂತ್ರಿಗಳೂ ಹೆಚ್ಚು ಜನರು ಬರಲಿಲ್ಲ. ಮೊದಲೇ ಉನ್ನತ ಅಧಿಕಾರಿಗಳಾಗಿದ್ದವರು,

ಈಗಲೂ ಅದೇ ಸ್ಥಾನಗಳಲ್ಲಿ ಉಳಿದರು. ಮಂತ್ರಿವರ್ಗಕ್ಕೂ ಬ್ರಿಟಿಷ್ ಆಡಳಿತಗಾರರಿಗೂ ಯಾವ ಘರ್ಷಣೆ ಅಥವ ರಾಜಕೀಯ ಬಿಕ್ಕಟ್ಟೂ ಏಳಲಿಲ್ಲ; ಏಕೆಂದರೆ ಅಲ್ಲಿ ಆಡಳಿತ ವರ್ಗದ ಪರಮಾಧಿಕಾರವೇ ಇತ್ತು, ಅದೇ ಮುಂದುವರಿಯಿತು.

ಕಾಂಗ್ರೆಸ್ ಪ್ರಾಂತ್ಯಗಳಿಗೂ, ಬಂಗಾಲ ಮತ್ತು ಪಂಜಾಬಿಗೂ ಇದ್ದ ವ್ಯತ್ಯಾಸ ಒಡನೆ ರಾಜಕೀಯ ಬಂದಿಗಳ ವಿಷಯದಲ್ಲಿ ಮತ್ತು ಪ್ರಜೆಗಳ ಮೂಲಭೂತ ಹಕ್ಕುಗಳ ವಿಷಯದಲ್ಲಿ ಎದ್ದು ಕಾಣಿಸಿತು. ಪಂಜಾಬ್ ಮತ್ತು ಬಂಗಾಲಗಳಲ್ಲಿ ಪೋಲೀಸರ ಮತ್ತು ಗುಪ್ತಚಾರರ ಬಿಗಿತ ಸ್ವಲ್ಪವೂ ಕಡಮೆಯಾಗ ಲಿಲ್ಲ; ರಾಜಕೀಯ ಬಂದಿಗಳ ಬಿಡುಗಡೆ ಆಗಲಿಲ್ಲ. ಯೂರೋಪಿಯನ್‌ರ ಮತಗಳ ಬೆಂಬಲದಿಂದಲೇ ಬಾಳಬೇಕಾಗಿದ್ದ ಮಂತ್ರಿಮಂಡಲದ ಬಂಗಾಲದಲ್ಲಿ ಆರೋಪಣೆ ಅಥವ ವಿಚಾರವಿಲ್ಲದೆ ವರ್ಷಗಟ್ಟಲೆ ಸೆರೆ ಮನೆಯಲ್ಲಿ ಕೊಳೆಯುತ್ತಿದ್ದ ಸಹಸ್ರಾರು ಜನ–ಹೆಂಗಸರು, ಗಂಡಸರು–ಬಂದಿಗಳಿದ್ದರು. ಕಾಂಗ್ರೆಸ್ ಪ್ರಾಂತ್ಯಗಳಲ್ಲಿ ರಾಜಕೀಯ ಬಂದಿಗಳ ಬಿಡುಗಡೆಯೇ ಮೊದಲನೆಯ ಕೆಲಸವಾಗಿತ್ತು. ಹಿಂಸಾತ್ಮಕ ಕಾರ್ಯಗಳಿಗಾಗಿ ಶಿಕ್ಷಿತರಾದವರ ಬಿಡುಗಡೆಗೆ ಗೌರ್ನರುಗಳು ಒಪ್ಪದೇ ಇದ್ದುದರಿಂದ ಸ್ವಲ್ಪ ತಡವಾಗಿ ೧೯೩೮ರಲ್ಲಿ ಸಂಯುಕ್ತಪ್ರಾಂತ ಮತ್ತು ಬೀಹಾರದಲ್ಲಿ ಕಾಂಗ್ರೆಸ್ ಸರಕಾರಗಳು ರಾಜೀನಾಮೆ ಸಹ ಕೊಟ್ಟವು. ಅನಂತರ ಗೌರ್ನರುಗಳು ಒಪ್ಪಿ ರಾಜಕೀಯ ಬಂದಿಗಳ ಬಿಡುಗಡೆ ಮಾಡಬೇಕಾಯಿತು.

## ೪. ಭಾರತ ರಾಷ್ಟ್ರೀಯ ಶಕ್ತಿಗೂ ಬ್ರಿಟಿಷ್ ಸಾಂಪ್ರದಾಯಿಕ ಆಡಳಿತ ಶಕ್ತಿಗೂ ಭಾರತದಲ್ಲಿ ಘರ್ಷಣೆ

ಹೊಸ ಪ್ರಾಂತ ಶಾಸನ ಸಭೆಗಳಲ್ಲಿ ಗ್ರಾಮಾಂತರ ಪ್ರತಿನಿಧಿಗಳ ಸಂಖ್ಯೆಯು ಹೆಚ್ಚು ಇದ್ದಕಾರಣ ಭೂಸ್ವಾಮ್ಯದ ಸುಧಾರಣೆಗೆ ಒತ್ತಾಯವು ಪ್ರಬಲವಾಯಿತು. ಬಂಗಾಲದಲ್ಲಿ ಕಾಯಂ ಹಿಡುವಳಿ ಮತ್ತು ಇತರ ಕಾರಣಗಳಿಂದ ಗೇಣಿದಾರರ ಪರಿಸ್ಥಿತಿಯು ತೀರ ಹದಗೆಟ್ಟಿತ್ತು; ಅನಂತರ ದೊಡ್ಡ ಜಮೀನ್ದಾರಿ ಪ್ರಾಂತಗಳಾದ ಬೀಹಾರ್ ಮತ್ತು ಸಂಯುಕ್ತ ಪ್ರಾಂತಗಳೂ ಮೂರನೆಯದಾಗಿ ಸ್ವಲ್ಪ ರೈತಾಪಿ ಹಿಡುವಳಿ ಗಳು ಆರಂಭದಲ್ಲಿ ಇದ್ದರೂ ದೊಡ್ಡ ಜಮೀನ್ದಾರಿಗಳು ಬೆಳೆದ ಮುಂಬೈ, ಮದರಾಸು ಮತ್ತು ಪಂಜಾಬ ಪ್ರಾಂತಗಳು. ಬಂಗಾಲದಲ್ಲಿ ಜಮೀನ್ದಾರಿ ಸುಧಾರಣೆಗೆ ದೊಡ್ಡ ಆತಂಕವೆಂದರೆ ಅಲ್ಲಿನ ಕಾಯಂ ಹಿಡುವಳಿ ಪದ್ಧತಿ. ಇದು ಹೋಗಬೇಕೆಂದು ಎಲ್ಲರೂ ಒಪ್ಪಿದ್ದರು, ಸರ್ಕಾರಿ ವಿಚಾರಣಾ ಸಮಿತಿಗಳು ಸಹ ಸಿಫಾರಸು ಮಾಡಿದ್ದವು; ಆದರೂ ಹಕ್ಕುದಾರರು ಹೇಗೋ ಅಡ್ಡಿಬಂದು ಸುಧಾರಣೆಯನ್ನು ತಡೆದರು. ಪಂಜಾಬಿನಲ್ಲಿ ಬೇರೆ ಭೂಮಿ ಹೆಚ್ಚು ಇದ್ದುದರಿಂದ ತೊಂದರೆಯಾಗಲಿಲ್ಲ.

ಕಾಂಗ್ರೆಸ್ಸಿಗೆ ಈ ಭೂಸ್ವಾಮ್ಯದ ಪ್ರಶ್ನೆಯೇ ಮುಖ್ಯ ಸಾಮಾಜಿಕ ಪ್ರಶ್ನೆಯಾಯಿತು. ವಿಶೇಷ ಪರಿಶ್ರಮದಿಂದ ವಿಷಯ ವಿಚಾರಮಾಡಿ ಕಾರ್ಯನೀತಿ ನಿರ್ಧರಿಸಲಾಗಿತ್ತು. ಬೇರೆ ಬೇರೆ ಪ್ರಾಂತಗಳ ಪರಿಸ್ಥಿತಿ ಬೇರೆ ಬೇರೆ ಇದ್ದುದರಿಂದ ಮತ್ತು ಅಲ್ಲಿನ ಪ್ರಾಂತ ಕಾಂಗ್ರೆಸ್ ಸಮಿತಿಗಳ ಅಭಿಪ್ರಾಯಕ್ಕೆ ಮನ್ನಣೆ ಕೊಡಬೇಕಾದ್ದರಿಂದ ಈ ಕಾರ್ಯ ನೀತಿಯಲ್ಲಿ ಸ್ವಲ್ಪ ವ್ಯತ್ಯಾಸವಿತ್ತು. ಕೇಂದ್ರ ಕಾಂಗ್ರೆಸ್ ಸಂಸ್ಥೆಯು ಇಡೀ ಭಾರತಕ್ಕೆಲ್ಲ ಒಂದು ಸ್ಥೂಲ ರೂಪು ರೇಖೆ ಹಾಕಿಕೊಟ್ಟಿತು. ಪ್ರಾನ್ತಗಳು ಸ್ವಲ್ಪ ಹೆಚ್ಚು ಕಡಮೆ ಮಾಡಿ ವಿವರಗಳನ್ನು ನಿರ್ಧರಿಸಿದವು. ಇವುಗಳಲ್ಲೆಲ್ಲ ಸಂಯುಕ್ತ ಪ್ರಾಂತವು ತೀರ ಮುಂದೆ ಹೋಗಿ ಜಮೀನ್ದಾರಿ ಪದ್ಧತಿ ಹೋಗಬೇಕೆಂದು ತೀರ್ಮಾನಿಸಿತು. ವೈಸರಾಯ್ ಮತ್ತು ಗೌರ್ನರ್‌ಗಳಿಗೆ ವಿಶೇಷ ಅಧಿಕಾರವಿದ್ದುದರಿಂದಲೂ, ಮತ್ತು ಹಿರಿಯ ಶಾಸನ ಸಭೆಯಲ್ಲಿ ಜಮೀನ್ದಾರರುಗಳೇ ಬಹುಮತದಿಂದ ಇದ್ದುದರಿಂದಲೂ ೧೯೩೫ ನೆಯ ಇಂಡಿಯಾ ಸರಕಾರ ಶಾಸನದ ಪ್ರಕಾರ ಇದು ಅಸಾಧ್ಯವಿತ್ತು. ಆದ್ದರಿಂದ ಏನು ಸುಧಾರಣೆಬೇಕಾದರೂ ಕೇಂದ್ರ ಆಡಳಿತ ವ್ಯೂಹದ ಚೌಕಟ್ಟಿನಲ್ಲಿ ಸುಧಾರಣೆ ಆಗದೆ ಸಾಧ್ಯವಿರಲಿಲ್ಲ. ದೊಡ್ಡ ಕ್ರಾಂತಿಯಿಂದಲ್ಲದೆ ಆ ವ್ಯೂಹ ಭೇದಿಸುವುದು ಸಾಧ್ಯವಿರಲಿಲ್ಲ. ಆದ್ದರಿಂದ ಯಾವ ಸುಧಾರಣೆ ಯಾದರೂ ಬಹು ಕಷ್ಟತಮವೂ, ಅತಿ ಜಟಿಲವೂ ಆಗಿತ್ತು; ಬಹಳ ಕಾಲ ತೆಗೆದುಕೊಳ್ಳುತ್ತಿತ್ತು.

ಆದರೂ ಭೂಮಿದಾರಿ ವಿಷಯದಲ್ಲಿ ಕೆಲವು ಮಹತ್ವದ ಸುಧಾರಣೆಗಳನ್ನು ಮಾಡಿ ರೈತರ ಸಾಲ ಪರಿಹಾರಕ್ಕೆ ಶಾಸನ ಮಾಡಲಾಯಿತು. ಅದೇ ರೀತಿ ಕಾರ್ಖಾನೆಗಳ ಶ್ರಮಜೀವಿಗಳ ಸ್ಥಿತಿ, ಸಾರ್ವಜನಿಕ ಸ್ವಾಸ್ಥ್ಯ ಮತ್ತು ಪಾಕೀಜು, ಸ್ಥಳೀಯ ಸಂಸ್ಥೆಗಳ ಆಡಳಿತ, ಪ್ರಾಥಮಿಕ ವಿದ್ಯಾಭ್ಯಾಸದವರಿಗೆ ಶಿಕ್ಷಣ, ವಯಸ್ಕರ ವಿದ್ಯಾಭ್ಯಾಸ, ಕೈಗಾರಿಕೆ, ಗ್ರಾಮಾಭಿವೃದ್ಧಿ ಮುಂತಾದ ಅನೇಕ ಮುಖ್ಯ ಸಮಸ್ಯೆಗಳ ಕಡೆಗೆ ಗಮನ ಕೊಡಲಾಯಿತು. ಹಿಂದಿನ ಪ್ರಾಂತ್ಯ ಸರಕಾರಗಳು ಈ ಎಲ್ಲ ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಸಮಸ್ಯೆಗಳನ್ನು ಅಲಕ್ಷ್ಯ ಮಾಡಿ ಬದಿಗೊತ್ತಿದ್ದವು. ಪೋಲಿಸ್ ಮತ್ತು ರೆವಿನ್ಯೂ ಇಲಾಖೆಗಳ ದಕ್ಷತೆಗೆ ಮಾತ್ರ ಗಮನ ಕೊಟ್ಟು, ಉಳಿದವುಗಳನ್ನು ಅವುಗಳ ಪಾಡಿಗೆ ಬಿಟ್ಟಿದ್ದರು. ಆಗಾಗ ಅಲ್ಪ ಸ್ವಲ್ಪ ಪ್ರಯತ್ನ ನಡೆದಿತ್ತು. ಕೆಲವು ವಿಚಾರಣಾ ಸಮಿತಿಗಳು ದೇಶಾದ್ಯಂತ ಪ್ರವಾಸಮಾಡಿ ಶ್ರಮವಹಿಸಿ ಬೃಹದಾಕಾರದ ವರದಿಗಳನ್ನು ಮಾತ್ರ ಸಿದ್ಧಪಡಿಸಿದ್ದವು. ಈ ವರದಿಗಳೆಲ್ಲ ಗೊಟ್ಟಕ್ಕೆ ಬಿದ್ದು ಅದರಿಂದ ಯಾವ ಪ್ರಯೋಜನವೂ ಆಗಿರಲಿಲ್ಲ. ಎಷ್ಟು ಒತ್ತಾಯ ಮಾಡಿದ್ದರೂ ಸರಿಯಾದ ಅಂಕಿ ಅಂಶಗಳೂ ಇರಲಿಲ್ಲ. ಸರಿಯಾದ ಅಂಕಿ ಅಂಶಗಳು, ಸುದೀರ್ಘ ಮುನ್ನೋಟ ಮತ್ತು ಅವಶ್ಯವಾದ ವಿವರಗಳಿಲ್ಲದೆ ಯಾವ ದಿಕ್ಕಿನಲ್ಲಿಯೂ ಮುಂದುವರಿಯಲು ಸಾಧ್ಯವಿರಲಿಲ್ಲ; ಈ ರೀತಿ ಪ್ರಾಂತ ಸರಕಾರಗಳು ಸಾಮಾನ್ಯ ಆಡಳಿತ ನಿರ್ವಹಣೆಯಲ್ಲದೆ ಅನೇಕ ವರ್ಷಗಳ ಅಲಕ್ಷ್ಯದಿಂದ ಬಿಟ್ಟಿದ್ದ ಕೆಲಸವನ್ನೆಲ್ಲ ಮಾಡಬೇಕಾಗಿ ಬಂದು ಎಲ್ಲ ಕಡೆಯೂ ಆತುರದ ಸಮಸ್ಯೆಗಳೇ ಎದ್ದವು. ಪೊಲೀಸ್ ರಾಜ್ಯವನ್ನು ಸಮಾಜ ಹಿತದ ರಾಜ್ಯವನ್ನಾಗಿ ಪರಿವರ್ತಿಸಬೇಕಾಯಿತು. ತಮ್ಮ ಅಧಿಕಾರ ಮಿತಿ, ಜನತೆಯ ದಾರಿದ್ರ್ಯ, ಪ್ರಾಂತ ಸರಕಾರಗಳ ದೃಷ್ಟಿಕೋಣಕ್ಕೂ ಕೇಂದ್ರ ಸರಕಾರದ ದೃಷ್ಟಿ ಕೋಣಕ್ಕೂ ಇದ್ದ ಅಪಾರ ಅಂತರ, ವೈಸರಾಯನ ಕೇಂದ್ರೀಕೃತ ನಿರಂಕುಶಾಧಿಕಾರ ಇವುಗಳಿಂದ ಈ ಕೆಲಸ ಸ್ವಲ್ಪವೂ ಸುಗಮವಾಗದೆ ಇನ್ನೂ ಕಷ್ಟತಮವೇ ಆಯಿತು.

ನಮ್ಮ ಅಧಿಕಾರ ಮಿತಿಯ ಮತ್ತು ಇದ್ದ ಆತಂಕಗಳ ಪೂರ್ಣ ಪರಿಚಯ ನಮಗೆ ಇತ್ತು. ಪರಿಸ್ಥಿತಿ ಪೂರ್ಣ ವ್ಯತ್ಯಾಸವಾಗುವವರೆಗೆ ಹೆಚ್ಚು ಏನನ್ನೂ ಮಾಡಲು ಸಾಧ್ಯವಿಲ್ಲವೆಂದೂ ಅಂತರಂಗದಲ್ಲಿ ನಮಗೆ ಮನವರಿಕೆಯಾಗಿತ್ತು. ಆದರೂ ಮುಂದುವರಿಯಬೇಕು, ಅನೇಕ ವಿಷಯಗಳಲ್ಲಿ ನಮಗಿಂತ ಮುಂದುವರಿದಿದ್ದ ದೇಶಗಳಂತೆ ನಾವೂ ಪ್ರಗತಿ ಹೊಂದಬೇಕು ಎಂಬ ಆಶೆ ನಮ್ಮನ್ನು ತುಂಬಿತು; ಸ್ವತಂತ್ರರಾಗಬೇಕೆಂಬ ಉತ್ಕಟೇಚ್ಛೆ ಬೇರೂರಿತು. ಅಮೆರಿಕೆಯ ಸಂಯುಕ್ತ ಸಂಸ್ಥಾನಗಳು ಮತ್ತು ನಮಗಿಂತ ಮುಂದೆ ಹೋದ ಕೆಲವು ಪಾಶ್ಚಾತ್ಯ ದೇಶಗಳ ದೃಷ್ಟಿ ನಮ್ಮ ಎದುರು ನಿಂತವು. ಆದರೆ ಎಲ್ಲಕ್ಕೂ ಹೆಚ್ಚಾಗಿ ಯುದ್ಧ ಮತ್ತು ಅಂತಃಕಲಹಗಳ ಮಧ್ಯೆ ಮಹತ್ತಮ ತೊಂದರೆಗಳನ್ನು ಎದುರಿಸಿ ಎರಡೇ ದಶಕಗಳಲ್ಲಿ ಅದ್ಭುತ ಪ್ರಗತಿ ಸಾಧಿಸಿದ ಸೋವಿಯಟ್ ರಷ್ಯದ ಉದಾಹರಣೆ ನಮ್ಮನ್ನು ಬೆರಗುಗೊಳಿಸಿತು. ಕೆಲವರು ಕಮ್ಯೂನಿಸಮ್‌ಗೆ ಮಾರುಹೋದರು, ಕೆಲವರು ಅದನ್ನು ಒಪ್ಪಲಿಲ್ಲ; ಆದರೆ ಸೋವಿಯಟ್ ಒಕ್ಕೂಟದಲ್ಲಿ ಆದ ವಿದ್ಯೆ, ಸಂಸ್ಕೃತಿ, ವೈದ್ಯ ಸಹಾಯ, ದೇಹದಾರ್ಢ್ಯ, ವಿವಿಧ ಜನಾಂಗಗಳ ಸಮಸ್ಯಾ ಪರಿಹಾರದಲ್ಲಿ ಕಂಡು ಬಂದ ಪ್ರಗತಿಪರನೀತಿ, ಪಾಚಿಗಟ್ಟಿ ಕೊಳೆತು ನಾರುತ್ತಿದ್ದ ಜೀವನದಿಂದ ಹೊಸದೊಂದು ಪ್ರಪಂಚ ಸೃಷ್ಟಿಸಿದ ಅದ್ಭುತ ಕಾರ್ಯಶಕ್ತಿ, ಇವುಗಳನ್ನು ನೋಡಿ ಮನಸೋಲದವರೇ ಇಲ್ಲ. ವ್ಯಕ್ತಿ ವೈಶಿಷ್ಟ್ಯಕ್ಕೆ ವಿಶೇಷ ಮಹತ್ವ ಕೊಟ್ಟವರೂ, ಸಾಮ್ಯವಾದದ ಕೆಲವು ತತ್ತ್ವಗಳನ್ನು ಒಪ್ಪದವರೂ ಆದ ರವೀಂದ್ರನಾಥ ಠಾಕೂರರು ಸಹ ಈ ಹೊಸ ನಾಗರಿಕತೆಯನ್ನು ಕಂಡು ಮುಗ್ಧರಾಗಿ ನಮ್ಮ ದೇಶದ ಇಂದಿನ ಪರಿಸ್ಥಿತಿಗೂ ಅದರ ಪರಿಸ್ಥಿತಿಗೂ ಇರುವ ಅಜಗಜಾಂತರವನ್ನು ಕಂಡು ಮರುಗಿದರು. ಅವರ ಮರಣ ಶಯ್ಯೆಯಿಂದ "ರೋಗರುಜಿನಗಳು ವಿದ್ಯಾವಿಹೀನತೆಯು ನಿರ್ಮೂಲವಾಗಬೇಕೆಂದು ಸರ್ವಶಕ್ತಿಯನ್ನೂ ವಿನಿಯೋಗಿಸಿ ರಷ್ಯ ಬಡತನವನ್ನೂ ಅಜ್ಞಾನವನ್ನೂ ಹೊಡೆದೋಡಿಸಿದೆ. ಆ ಬೃಹತ್ಖಂಡ ತನ್ನ ಅಪಮಾನ ಅಳಿಸಿ ಹಾಕಿದೆ. ಅದರ ನಾಗರಿಕತೆಯಲ್ಲಿ ಪಂಗಡ ಪಂಗಡಕ್ಕೂ, ಜಾತಿ ಜಾತಿಗೂ ಯಾವ ಭೇದವೂ ಇಲ್ಲ. ಅತ್ಯಲ್ಪ ಕಾಲದಲ್ಲಿ ಅದು ಸಾಧಿಸಿದ ಪ್ರಗತಿಯಿಂದ ನನಗೆ

ಆನಂದವೂ ಕರುಬೂ ಏಕಕಾಲದಲ್ಲೇ ಉಂಟಾದವು. ಅಲ್ಪ ಕಾಲದ ಹಿಂದೆ ಬೇರೆ ಬೇರೆ ಜೀವನ ಮಟ್ಟ ದಲ್ಲಿದ್ದ ಸುಮಾರು ಎರಡು ನೂರು ಜನಾಂಗಗಳು ಸೌಹಾರ್ದದಿಂದಲೂ ಶಾಂತಿಯಿಂದಲೂ ಪ್ರಗತಿಮಾರ್ಗ ದಲ್ಲಿ ಸುಖವಾಗಿ ಬಾಳುವುದನ್ನು ನೋಡಿ, ಮತ್ತು ಶ್ರೇಷ್ಠನಾಗರಿಕತೆಯ ಉನ್ನತ ಶಿಖರವನ್ನೇರಿದವರೂ, ಬುದ್ಧಿಶಾಲಿಗಳೂ ಆದ ನಮ್ಮ ದೇಶದ ಜನರು ಮೃಗಗಳಂತೆ ಕಚ್ಚಾಡುವುದನ್ನು ನೋಡಿ, ಎರಡು ಸರಕಾರಗಳನ್ನೂ ಹೋಲಿಕೆ ಮಾಡದೆ ಗತ್ಯಂತರವಿಲ್ಲ. ಒಂದು ಸಹಕಾರ ತತ್ವವನ್ನು ಅವಲಂಬಿಸಿದ್ದು, ಇನ್ನೊಂದು ಜೀವವನ್ನು ಹೀರತಕ್ಕದ್ದು; ಆದರಿಂದಲೇ ಈ ಎಲ್ಲ ವ್ಯತ್ಯಾಸ" ಎಂದು ಸಂದೇಶ ಸಾರಿದರು.

ಇತರರು ಮುಂದುವರಿಯಬಹುದಾದರೆ ನಮಗೇಕೆ ಸಾಧ್ಯವಿಲ್ಲ? ನಮ್ಮ ಕಾರ್ಯ ಶಕ್ತಿ, ಬುದ್ಧಿ ಶಕ್ತಿ, ಉಳಿದು ಬಾಳಿ ಮುಂದುವರಿಯಬೇಕೆಂಬ ಮನೋ ಸಂಕಲ್ಪ, ಇವುಗಳಲ್ಲಿ ವಿಶ್ವಾಸವಿತ್ತು. ನಮ್ಮ ಎದುರಿನ ತೊಂದರೆಗಳು, ಬಡತನ, ಹೀನಸ್ಥಿತಿ, ಪ್ರತಿಗಾಮಿ ಪಂಗಡಗಳು, ಭಿನ್ನತೆಗಳು ಎಲ್ಲವೂ ನಮಗೆ ತಿಳಿದಿದ್ದವು; ಆದರೂ ಅವುಗಳನ್ನೆಲ್ಲ ಎದುರಿಸಿ ಜಯಿಸಲು ನಿಶ್ಚಯಿಸಿದೆವು. ಅದಕ್ಕೆ ಕೊಡಬೇಕಾದ ಬೆಲೆಯೂ ಅಪಾರವೆಂದು ತಿಳಿದಿತ್ತು. ಆದರೆ ಈಗ ನಮ್ಮ ಪರಿಸ್ಥಿತಿಯಲ್ಲಿ ಅನುಭವಿಸುತ್ತಿದ್ದುದಕ್ಕಿಂತ ಹೆಚ್ಚಿನದೇನೂ ಅಲ್ಲವೆಂದು ಭಾವಿಸಿದೆವು. ಆದರೂ ಹೊರಗೆ ಯಾವ ಕಡೆ ತಿರುಗಿದರೂ, ಬ್ರಿಟಿಷರ ದಾಸ್ಯದ ಪ್ರಶ್ನೆಯೇ ನಮ್ಮ ಎದುರು ನಿಂತು ನಮ್ಮ ಎಲ್ಲ ಪ್ರಯತ್ನವನ್ನೂ ವಿಫಲಗೊಳಿಸುತ್ತಿರುವಾಗ ನಮ್ಮ ಒಳಗಿನ ಸಮಸ್ಯೆಗಳನ್ನು ಬಗೆಹರಿಸುವುದೆಂತು?

ಆದರೂ ಈ ಪ್ರಾಂತಾಡಳಿತದಲ್ಲಿ ನಮಗಿದ್ದ ಅವಕಾಶ ಎಷ್ಟೇ ಅಲ್ಪವೂ ಸಂಕುಚಿತವೂ ಇದ್ದರೂ ಅದರಿಂದ ಆದಷ್ಟು ಉಪಯೋಗಪಡೆಯೋಣವೆನಿಸಿತು. ಕಾಯಂ ಆಡಳಿತ ವರ್ಗಕ್ಕೂ ತಮಗೂ ಸೌಹಾರ್ದ ಮತ್ತು ಏಕತ್ರ ದೃಷ್ಟಿ ಇಲ್ಲದ ಕಾರಣ ನಮ್ಮ ಮಂತ್ರಿವರ್ಗಕ್ಕೆ ಈ ಕೆಲಸ ಮತ್ತು ಜವಾಬ್ದಾರಿ ನಿರ್ವಹಣೆ ಅತಿ ಕಷ್ಟವಾಯಿತು. ದುರದೃಷ್ಟವಶಾತ್ ಈ ಮಂತ್ರಿಗಳ ಸಂಖ್ಯೆಯೂ ಬಹಳ ಕಡಿಮೆ ಇತ್ತು. ಅವರ ಸಂಬಳವೂ ಕಡಮೆ ಇತ್ತು. ಸರಳ ಜೀವನದಿಂದ ಮತ್ತು ಮಿತವ್ಯಯದಿಂದ ಮಾದರಿಯಾಗ ಬೇಕಾಗಿತ್ತು. ಇಂಡಿಯ ಸಿವಿಲ್ ಸರ್ವಿಸಿನ, ಅದರ ಕಾರ್ಯದರ್ಶಿಯೋ ಅಥವ ಬೇರೆ ಕಡಮೆ ದರ್ಜೆಯ ಅಧಿಕಾರಿಯೋ ಮಂತ್ರಿಗಳ ನಾಲ್ಕರಷ್ಟೋ, ಐದರಷ್ಟೊ ಸಂಬಳ ತೆಗೆದುಕೊಳ್ಳುತ್ತಿದ್ದನು. ಅಧಿಕಾರಿಗಳ ಸಂಬಳವನ್ನು ನಾವು ಮುಟ್ಟುವಂತೆ ಇರಲಿಲ್ಲ. ಮಂತ್ರಿಗಳು ಎರಡನೆಯ ತರಗತಿ ಯಲ್ಲೋ ಮೂರನೆಯ ತರಗತಿಯಲ್ಲೋ ಪ್ರಯಾಣ ಮಾಡುವ ರೈಲಿನಲ್ಲೇ ಕೆಳ ಅಧಿಕಾರಿಯು ಮೊದಲನೆಯ ತರಗತಿಯಲ್ಲೋ ಅಥವ ಪ್ರತ್ಯೇಕ ಗಾಡಿಯಲ್ಲೋ ಪ್ರಯಾಣಮಾಡುತ್ತಿದ್ದ.

ಮೇಲಿನಿಂದ ಆಜ್ಞೆಮಾಡುತ್ತ ಕೇಂದ್ರ ಕಾಂಗ್ರೆಸ್ ಸಮಿತಿಯು ಪ್ರಾಂತ ಸರಕಾರಗಳ ಆಡಳಿತದಲ್ಲಿ ಕೈಹಾಕುತ್ತದೆ ಎಂಬ ಆಕ್ಷೇಪ ಬಂದಿತ್ತು. ಇದು ಶುದ್ಧ ತಪ್ಪು; ಒಳ ಆಡಳಿತದಲ್ಲಿ ಎಂದಿಗೂ ಕೈ ಹಾಕ ಲಿಲ್ಲ. ಮುಖ್ಯ ರಾಜಕೀಯ ವಿಷಯಗಳಲ್ಲಿ ಎಲ್ಲ ಪ್ರಾಂತ ಸರಕಾರಗಳಿಗೂ ಒಂದೇ ನೀತಿ ಇರಬೇಕೆಂದು ಚುನಾವಣಾ ಘೋಷಣೆಯಲ್ಲಿ ಹೇಳಿದ ಕಾಂಗ್ರೆಸ್ ಕಾರ್ಯಕ್ರಮವನ್ನು ಸಾಧ್ಯವಾದ ಮಟ್ಟಿಗೆ ಕಾರ್ಯ ರೂಪಕ್ಕೆ ತರಬೇಕೆಂದೂ ಕಾಂಗ್ರೆಸ್ ಕಾರ್ಯಸಮಿತಿಯ ಅಭಿಮತವಾಗಿತ್ತು. ಮುಖ್ಯವಾಗಿ ಸರ್ಕಾರ ಗಳಿಗೂ ಗೌರ್ನರುಗಳಿಗೂ ಮಧ್ಯೆ ಒಂದೇ ಬಗೆಯ ಸಂಬಂಧ ಇರಬೇಕೆಂದು ಕಾಂಗ್ರೆಸ್ ನೀತಿಯಾಗಿತ್ತು.

ಕೇಂದ್ರ ಆಡಳಿತದಲ್ಲಿ ಯಾವ ವ್ಯತ್ಯಾಸವೂ ಇಲ್ಲದೆ ಜವಾಬ್ದಾರಿ ರಹಿತವೂ ಕೇಂದ್ರೀಕೃತವೂ ಆಗಿದ್ದಾಗ ಪ್ರಾಂತಾಡಳಿತವು ಜವಾಬ್ದಾರಿಯುತವಾದರೆ ಪ್ರಾಂತಭಾವನೆಯೂ, ಭಿನ್ನತೆಯೂ ಹೆಚ್ಚಿ ಭಾರ ತದ ಐಕ್ಯತೆಗೆ ಪೆಟ್ಟು ಬೀಳುವುದರಲ್ಲಿತ್ತು. ಪ್ರಾಯಶಃ ಈ ಛಿದ್ರ ಮನೋಭಾವನೆಯನ್ನೂ, ಶಕ್ತಿ ಗಳನ್ನೂ ಪ್ರೋತ್ಸಾಹಿಸಬೇಕೆಂದೇ ಬ್ರಿಟಿಷರ ಅಭಿಮತವಿರಬಹುದು. ಭಾರತ ಸರಕಾರ ಅಲುಗಾಡದೆ ಬೇಜವಾಬ್ದಾರಿಯಿಂದ ನಿರ್ಲಕ್ಷ್ಯದಿಂದ, ಮೊದಲಿನ ಬ್ರಿಟಿಷ್ ಸಾಮ್ರಾಜ್ಯವಾದಿಗಳ ಪದ್ಧತಿಯನ್ನೇ ಅನುಸರಿಸಿ ಎಲ್ಲ ಪ್ರಾಂತಗಳಿಗೂ ಒಂದೇ ನೀತಿಯನ್ನು ಹಾಕಿದರು. ಸಿಮುಲಾ ಅಥವ ದೆಹಲಿಯಿಂದ

ಆಜ್ಞಾಪ್ತರಾದ ಗೌರ್ನರುಗಳಿಗೆ ಅದೇ ವೇದವಾಕ್ಯವಾಯಿತು. ಕಾಂಗ್ರೆಸ್ ಮಂತ್ರಿಮಂಡಲಗಳು ತಮಗೆ ಮನಬಂದಂತೆ ನಡೆದಿದ್ದರೆ ಅವುಗಳನ್ನು ಪೂರೈಸಿಬಿಡುತ್ತಿದ್ದರು. ಆದ್ದರಿಂದ ಇವುಗಳೆಲ್ಲ ಒಂದೇ ನೀತಿ ಹಿಡಿದು ಇಂಡಿಯಾ ಸರಕಾರವನ್ನು ಎದುರಿಸುವುದು ಅವಶ್ಯವಿತ್ತು. ಪ್ರಾಂತ ಸರಕಾರಗಳಲ್ಲಿ ಈ ಏಕಮುಖ ಸಹಕಾರ ಅಸಾಧ್ಯವಾಗಲೆಂದೇ ಇಂಡಿಯಾ ಸರಕಾರದ ಅಭಿಮತವಿದ್ದು ಇತರ ಕಡೆ ಅದೇ ಸಮಸ್ಯೆ ಇದ್ದರೂ ಪ್ರತಿಯೊಂದು ಪ್ರಾಂತದೊಡನೆಯೂ ಪ್ರತ್ಯೇಕವಾಗಿಯೇ ವ್ಯವಹರಿಸ ತೊಡಗಿತು.

೧೯೩೭ ರಲ್ಲಿ ಕಾಂಗ್ರೆಸ್ ಪ್ರಾಂತ ಸರಕಾರಗಳು ಏರ್ಪಟ್ಟ ಒಡನೆ ಕಾಂಗ್ರೆಸ್ ಕಾರ್ಯಸಮಿತಿ ಈ ರೀತಿ ನಿರ್ಣಯ ಮಾಡಿತು. "ರಾಷ್ಟ್ರದ ಪುನರುಜ್ಜೀವನ ಮತ್ತು ಸಾಮಾಜಿಕ ಪುನರ್ವ್ಯವಸ್ಥೆಯ ಯೋಜನೆಗೆ ಅತ್ಯವಶ್ಯಕವಾದ ಕೆಲವು ತ್ವರಿತದ ಮುಖ್ಯ ಪ್ರಶ್ನೆಗಳನ್ನು ಪರಿಹರಿಸಲು ತಜ್ಞರ ಒಂದು ಸಮಿತಿಯನ್ನು ರಚಿಸಬೇಕೆಂದು ಕಾಂಗ್ರೆಸ್ ಕಾರ್ಯಕಾರಿ ಸಮಿತಿಯು ಕಾಂಗ್ರೆಸ್ ಮಂತ್ರಿಗಳಿಗೆ ಸಲಹೆ ಮಾಡುತ್ತದೆ. ಆ ಪರಿಹಾರ ಕಂಡುಹಿಡಿಯಲು ಆಳವಾದ ಸಮೀಕ್ಷೆಯೂ, ಅಂಕಿ ಅಂಶಗಳ ವಿಷಯ ಸಂಗ್ರಹಣವೂ, ಸ್ಪಷ್ಟವೂ ನಿರ್ದಿಷ್ಟವೂ ಆದ ಸಾಮಾಜಿಕ ಧ್ಯೇಯವೂ ಅತ್ಯವಶ್ಯಕ. ಈ ಅನೇಕ ಸಮಸ್ಯೆಗಳು ನೆರೆಯ ಪ್ರಾಂತಗಳಿಗೂ ಸಂಬಂಧಿಸಿರುವುದರಿಂದ ಒಂದೇ ಪ್ರಾಂತ ದೃಷ್ಟಿಯಿಂದ ಪರಿಹರಿಸಲು ಸಾಧ್ಯವಿಲ್ಲ; ನದಿಗಳ ಪ್ರವಾಹದ ವಿನಾಶಕಾರಕ ಹಾವಳಿ ತಪ್ಪಿಸುವುದು, ನೀರಾವರಿ ಕೆಲಸಗಳಿಗೆ ನೀರನ್ನು ಉಪಯೋಗಿಸುವುದು, ಭೂಮಿ ಕೊರಕಲು ಬೀಳದಂತೆ ತಡೆಗಟ್ಟುವುದು, ಮಲೇರಿಯಾ ರೋಗದ ಹಾವಳಿ ನಿಲ್ಲಿಸುವುದು, ವಿದ್ಯುಚ್ಛಕ್ತಿಯ ನಿರ್ಮಾಣ ಮುಂತಾದ ಯೋಜನೆಗಳಿಗೆ ಸಮಗ್ರ ದೃಷ್ಟಿಯಿಂದ ನದಿ ಕಣಿವೆಗಳ ಸಮೀಕ್ಷೆಗಳು ಅವಶ್ಯ ಇವೆ. ಇದಕ್ಕಾಗಿ ಇಡೀ ನದೀ ಕಣಿವೆಯನ್ನೇ ಸಮೀಕ್ಷಿಸಿ ವಿಚಾರಮಾಡಿ ದೊಡ್ಡ ಪ್ರಮಾಣದ ರಾಷ್ಟ್ರಯೋಜನೆಯನೆಯನ್ನೇ ಕೈಗೊಳ್ಳಬೇಕಾಗುತ್ತದೆ. ಕೈಗಾರಿಕೆಗಳನ್ನು ಅಭಿವೃದ್ಧಿಗೊಳಿಸಿ ಹತೋಟಿಯಲ್ಲಿಡಲು ಸಹ ಅನೇಕ ಪ್ರಾಂತಗಳ ಒಮ್ಮುಖ ಪ್ರಯತ್ನ ಮತ್ತು ಸಹಕಾರ ಅವಶ್ಯವಿದೆ. ಆದ್ದರಿಂದ ಈ ಸಮಸ್ಯೆಯ ಸಾಮಾನ್ಯ ಸ್ವಭಾವ ಕಂಡುಹಿಡಿದು ಯಾವ ಕ್ರಮದಲ್ಲಿ ಹೇಗೆ ಅದನ್ನು ಎದುರಿಸಬೇಕೆಂದು ಸಲಹೆಮಾಡಲು ಒಂದು ಅಂತರ ಪ್ರಾಂತೀಯ ತಜ್ಞರ ಸಮಿತಿಯನ್ನು ರಚಿಸಬೇಕೆಂದು ಕಾರ್ಯಸಮಿತಿಯು ಸೂಚಿಸುತ್ತದೆ. ಪ್ರತಿಯೊಂದು ಸಮಸ್ಯೆಯನ್ನೂ ಪ್ರತ್ಯೇಕ ವಿಚಾರ ಮಾಡುವದಕ್ಕೂ ಮತ್ತು ಸಂಬಂಧಪಟ್ಟ ಪ್ರಾಂತ ಸರಕಾರಗಳು ಯಾವ ರೀತಿ ಒಮ್ಮುಖ ಕಾರ್ಯನೀತಿ ಅನುಸರಿಸಬೇಕೆಂದು ಸಲಹೆ ಮಾಡುವದಕ್ಕೂ ಸಮಿತಿಯು ವಿಶೇಷ ಉಪಸಮಿತಿಗಳನ್ನು ಏರ್ಪಡಿಸಬಹುದು."

ಪ್ರಾಂತ ಸರಕಾರಗಳಿಗೆ ಕೆಲವು ವೇಳೆ ಕಾಂಗ್ರೆಸ್ ಕಾರ್ಯಸಮಿತಿಯು ಕೊಡುತ್ತಿದ್ದ ಸಲಹೆಗಳು ಏನು ಎಂಬುದಕ್ಕೆ ಈ ನಿರ್ಣಯ ಒಂದು ನಿದರ್ಶನ. ಆರ್ಥಿಕ ಮತ್ತು ಕೈಗಾರಿಕಾ ನೀತಿಯಲ್ಲಿ ಪ್ರಾಂತ ಸರ್ಕಾರಗಳು ಸಹಕರಿಸಿ ಕೆಲಸಮಾಡುವಂತೆ ಪ್ರೋತ್ಸಾಹ ಕೊಟ್ಟದ್ದಕ್ಕೂ ಇದು ನಿದರ್ಶನ. ಈ ಸಲಹೆಯನ್ನು ಕಾಂಗ್ರೆಸ್ ಸರ್ಕಾರಗಳಿಗೆ ಮಾತ್ರ ಕೊಡುತ್ತಿದ್ದರೂ ಅದರ ವ್ಯಾಪ್ತಿಯನ್ನು ಅಷ್ಟಕ್ಕೇ ನಿಲ್ಲಿಸಲಿಲ್ಲ. ಸಮಗ್ರ ನದಿ ಕಣಿವೆಯ ಸಮೀಕ್ಷೆ ಎಂದರೆ ಎರಡು ಮೂರು ಪ್ರಾಂತಗಳ ಗಡಿಯೊಳಗೆ ನಡೆಯಬೇಕಾಗುತ್ತದೆ. ಗಂಗಾ ನದಿ ಕಣಿವೆಯ ಸಮೀಕ್ಷೆಗಾಗಿ ಗಂಗಾನದಿ ಸಮಿತಿಯನ್ನು ನೇಮಿಸಬೇಕಾದ್ದು ಅತಿ ಮುಖ್ಯ ಕೆಲಸ. ಅದು ಇನ್ನೂ ಸಾಧ್ಯವಾಗಿಲ್ಲ. ಆದರೆ ಸಂಯುಕ್ತ ಪ್ರಾಂತ, ಬೀಹಾರ ಮತ್ತು ಬಂಗಾಲ ಸರಕಾರಗಳು ಸಹಕರಿಸದೆ ಅದು ಸಾಧ್ಯವಿಲ್ಲ.

ರಾಷ್ಟ್ರದ ಬೃಹದ್ಯೋಜನೆಗಳಿಗೆ ಕಾಂಗ್ರೆಸ್ ಎಷ್ಟು ಪ್ರಾಮುಖ್ಯತೆ ಕೊಟ್ಟಿತು ಎಂಬುದನ್ನು ಸಹ ಈ ನಿರ್ಣಯದಿಂದ ನೋಡಬಹುದು. ಕೇಂದ್ರದಲ್ಲಿ ಪ್ರಜಾಪ್ರಭುತ್ವವಿಲ್ಲದೆ, ಪ್ರಾಂತ ಸರಕಾರಗಳ ಮೇಲಿನ ಬಂಧನ ಕಳಚದೆ ಅಂತಹ ಯೋಜನೆಗಳಿಗೆ ಸಾಧ್ಯವೇ ಇರಲಿಲ್ಲ. ಆದರೂ ಅತ್ಯವಶ್ಯಕವಾದ ಪೂರ್ವಸಿದ್ಧತೆಯನ್ನು ಮಾಡಬಹುದೆಂದೂ, ಮುಂದಿನ ಯೋಜನೆಗೆ ತಳಹದಿ ಹಾಕಬಹುದೆಂದೂ ಯೋಚಿಸಿದೆವು. ದುರದೃಷ್ಟದಿಂದ ಪ್ರಾಂತಸರಕಾರಗಳು ತಮ್ಮ ಸ್ವಂತ ಸಮಸ್ಯೆಗಳಲ್ಲೇ ಮಗ್ನರಾದುದರಿಂದ ಈ ನಿರ್ಣಯ ಕಾರ್ಯಗತವಾಗಲು ತಡವಾಯಿತು. ೧೯೩೮ ನೆಯ ವರ್ಷದ ಕೊನೆಯಲ್ಲಿ ರಚಿತವಾದ ರಾಷ್ಟ್ರೀಯ ಯೋಜನಾ ಸಮಿತಿಗೆ ನಾನೇ ಅಧ್ಯಕ್ಷನಾದೆನು.

ಕಾಂಗ್ರೆಸ್ ಸರಕಾರಗಳ ಕೆಲಸವನ್ನೂ, ಪ್ರಗತಿಯ ಮಂದಗತಿಯನ್ನೂ ಕಂಡು ಕಟುವಾಗಿ ಟೀಕೆ ಮಾಡಿದೆ; ಕೋಪಗೊಂಡೆ; ಆದರೆ ಈಗ ನೋಡಿದರೆ ಕೇವಲ ಇಪ್ಪತ್ತೆರಡು ತಿಂಗಳುಗಳಲ್ಲಿ ಅವರ ಸುತ್ತಲಿದ್ದ ಅಸಂಖ್ಯಾತ ಆತಂಕಗಳ ಮಧ್ಯೆ ಇವರು ಸಾಧಿಸಿದ ಪ್ರಗತಿಯು ಆಶ್ಚರ್ಯವೆನಿಸುತ್ತದೆ. ದುರದೃಷ್ಟದಿಂದ ಅವರ ಕೆಲವು ಮುಖ್ಯ ಕಾರ್ಯಕ್ರಮಗಳು ಫಲಕಾರಿಯಾಗಲಿಲ್ಲ; ಅಷ್ಟರಲ್ಲಿಯೇ ಅವರು ಅಧಿಕಾರತ್ಯಾಗ ಮಾಡಬೇಕಾಯಿತು. ಅನಂತರ ಅವರ ಸ್ಥಾನ ಆಕ್ರಮಿಸಿದ ಗೌರ್ನರ್ ಅವೆಲ್ಲವನ್ನೂ ಕಸದ ಬುಟ್ಟಿಗೆ ಹಾಕಿದ. ರೈತರಿಗೂ, ಕಾರ್ಮಿಕರಿಗೂ ಉಪಯೋಗವಾಗಿ ಅವರ ಶಕ್ತಿಯು ಬೆಳೆಯಿತು. ಅತಿಮುಖ್ಯವೂ, ಪರಿಣಾಮಕಾರಿಯೂ ಆದ ಒಂದು ಸಾಧನೆ ಎಂದರೆ ಜನತಾ ವಿದ್ಯಾಭ್ಯಾಸಕ್ಕೆಂದು ಆಚರಣೆಗೆ ತಂದ ಮೂಲ ಶಿಕ್ಷಣ ಪದ್ಧತಿ. ಇದು ಆಧುನಿಕ ಶಿಕ್ಷಣ ತತ್ವಕ್ಕನುಗುಣವಾಗಿತ್ತು ಮಾತ್ರವಲ್ಲದೆ ಭಾರತೀಯ ಸ್ಥಿತಿ ಗತಿಗೂ ಬಹಳ ಉಚಿತವಿತ್ತು.

ಪ್ರತಿಯೊಂದು ಪ್ರತಿಗಾಮಿ ಶಕ್ತಿಯೂ ಪ್ರಗತಿಸಾಧನೆಯನ್ನು ವಿರೋಧಿಸಿತು. ಸಂಯುಕ್ತಪ್ರಾಂತ ಸರಕಾರವು ಕಾನ್ಪುರದ ಗಿರಣಿ ಕೆಲಸಗಾರರ ಸ್ಥಿತಿಗತಿಗಳನ್ನು ವಿಚಾರಿಸಲು ನೇಮಿಸಿದ ಸಮಿತಿಯನ್ನು ಯುರೋಪಿಯನ್ ಮತ್ತು ಭಾರತೀಯ ಬಂಡವಾಳಗಾರರು ತೃಣೀಕರಿಸಿದರು. ಸಮಿತಿಯು ಕೇಳಿದ ಅಂಕಿ ಅಂಶಗಳನ್ನು ಒದಗಿಸಲು ಸಹ ನಿರಾಕರಿಸಿದರು. ಬಂಡವಾಳಗಾರರು ಮತ್ತು ಸರಕಾರ ಇಬ್ಬರೂ ಒಟ್ಟಿಗೆ ಬಹುಕಾಲದಿಂದ ಕೂಲಿಗಾರರ ವಿರುದ್ಧವಿದ್ದರು. ಪೊಲೀಸರು ಸದಾ ಬಂಡವಾಳಗಾರರ ಕೈಗೊಂಬೆಗಳಾಗಿದ್ದರು. ಕಾಂಗ್ರೆಸ್ ಸರಕಾರಗಳ ಹೊಸ ಧೋರಣೆಯು ಬಂಡವಲಗಾರರಿಗೆ ಸರಿಬೀಳಲಿಲ್ಲ. ಕೂಲಿಗಾರ ಸಮಸ್ಯೆಯಲ್ಲಿ ದೀರ್ಘಕಾಲದ ಅನುಭವಪಡೆದವರೂ, ಮಿತವಾದಿಗಳೂ ಆದ ಶ್ರೀ ಬಿ. ಶಿವರಾಯರು ಬಂಡವಲಗಾರರು ಅನುಸರಿಸುವ ನೀತಿಯ ವಿಷಯದಲ್ಲಿ "ಮುಷ್ಕರ ಸಮಯದಲ್ಲಿ ಪೊಲೀಸರ ಸಹಾಯದಿಂದ ಬಂಡವಲಗಾರರು ತೋರುವ ಚಾಣಕ್ಯತಂತ್ರ ಮತ್ತು ಅನೈತಿಕಮಟ್ಟವನ್ನು ಭಾರತದ ಸ್ಥಿತಿಗತಿಗಳನ್ನು ತಿಳಿದವರಿಗೆ ಮಾತ್ರವಲ್ಲದೆ ಇತರರಿಗೆ ನಂಬಲು ಸಹ ಸಾಧ್ಯವಿಲ್ಲ" ಎನ್ನುತ್ತಾರೆ. ಈಗಿರುವಂತೆ ಎಲ್ಲ ದೇಶಗಳಲ್ಲೂ ಸರಕಾರವು ಬಂಡವಲಗಾರರ ಕಡೆಯೇ ಒಲಿದಿದೆ. ಶ್ರೀ ಶಿವರಾಯರು ಭಾರತದಲ್ಲಿ ಇನ್ನೊಂದು ಹೆಚ್ಚಿನ ಕಾರಣ ತೋರಿಸುತ್ತಾರೆ. "ವೈಯಕ್ತಿಕ ವಿರೋಧವಲ್ಲದೆ ಭಾರತದ ಅಧಿಕಾರಿಗಳು ಕಾಮಗಾರ ಸಂಘಗಳಿಗೆ ಹೆದರಿದ್ದಾರೆ. ಸಂಘಗಳು ಬೆಳೆದಂತೆ ಜನಜಾಗ್ರತಿ ಆಗುತ್ತೆಂಬುದೇ ಆ ಭಯಕ್ಕೆ ಕಾರಣ; ಮೇಲಿಂದ ಮೇಲೆ ಅಸಹಕಾರ, ಸತ್ಯಾಗ್ರಹ ಚಳುವಳಿಗಳು ಉದ್ಭವಿಸುತ್ತಿರುವಾಗ ಜನಜಾಗ್ರತಿಯನ್ನುಂಟುಮಾಡಿ ಜನತೆಯನ್ನು ಸಂಘಟಿಸುವ ಕಾರ್ಯಕ್ರಮ ಎಲ್ಲವೂ ಅಪಾಯಕರವೆಂದೇ ಅವರ ಅಭಿಪ್ರಾಯ''.

ಸರಕಾರಗಳು ನೀತಿಯನ್ನು ನಿರ್ಧರಿಸುತ್ತವೆ; ಶಾಸನ ಸಭೆಗಳು ಶಾಸನ ಮಾಡುತ್ತವೆ. ಆದರೆ ನೀತಿಯನ್ನು ಕಾರ್ಯಗತಮಾಡಿ ಶಾಸನವನ್ನು ಆಚರಣೆಗೆ ತರುವವರು ಅಧಿಕಾರಿಗಳು ಮತ್ತು ನೌಕರರು. ಎಲ್ಲ ಪ್ರಾಂತ ಸರಕಾರಗಳೂ ಈ ಕಾರ್ಯದಲ್ಲಿ ಇಂಡಿಯನ್ ಸಿವಿಲ್ ಸರ್ವಿಸ್ ಮತು ಪೊಲೀಸ್ ಅಧಿಕಾರಿಗಳನ್ನೇ ನಂಬಬೇಕಾಗಿತ್ತು. ಬೇರೊಂದು ಅಧಿಕಾರ ದರ್ಪದ ವಾತಾವರಣದಲ್ಲಿ ಬೆಳೆದ ಈ ಅಧಿಕಾರಿಗಳು ಹೊಸ ಸನ್ನಿವೇಶವನ್ನೂ, ಜನರ ಜಾಗ್ರತಿಯ ಒತ್ತಾಯದ ಮನೋಭಾವವನ್ನೂ, ತಮಗಿದ್ದ ಪ್ರಾಮುಖ್ಯತೆಯ ಇಳಿಮುಖವನ್ನೂ ಮತ್ತು ಇದುವರೆಗೆ ತಾವೇ ಬಂಧಿಸಿ ಸೆರೆಮನೆಯಲ್ಲಿಡುತ್ತಿದ್ದ ಜನರ ಅಧೀನದಲ್ಲಿ ಕೆಲಸಮಾಡಬೇಕಾಗಿ ಬಂದುದನ್ನೂ ಸಹಿಸಲಿಲ್ಲ. ಮುಂದೆ ಏನಾಗುತ್ತದೆಯೋ ಎಂಬ ಭಯವು ಆರಂಭದಲ್ಲಿ ಅವರಿಗೆ ಇತ್ತು. ಆದರೆ ಯಾವ ಕ್ರಾಂತಿಯೂ ಆಗದ ಕಾರಣ ಪುನಃ ತಮ್ಮ ಹಳೆಯ ಸಂಪ್ರದಾಯವನ್ನೇ ಹಿಡಿದರು. ಸ್ಥಳದ ಅಧಿಕಾರಿಯ ವಿರುದ್ಧ ಹೋಗುವುದು ಮಂತ್ರಿಗಳಿಗೆ ಕಷ್ಟವಿತ್ತು. ವಿಶೇಷ ಸಂದರ್ಭಗಳಲ್ಲಿ ಮಾತ್ರ ಸಾಧ್ಯವಿತ್ತು. ಅಧಿಕಾರಿವರ್ಗವು ಒಂದು ಸುಸಂಘಟಿತ ಸಂಸ್ಥೆಯಾಗಿತ್ತು. ಅವರಲ್ಲಿ ಭಿನ್ನಾಭಿಪ್ರಾಯವಿರಲಿಲ್ಲ; ಒಬ್ಬನನ್ನು ವರ್ಗಮಾಡಿದರೆ, ಆತನ ನಂತರ ಬಂದವನ ನೀತಿಯು ಅದೇ ಇರುತ್ತಿತ್ತು. ಅಧಿಕಾರವರ್ಗದ ಹಳೆಯ ಪ್ರಗತಿಗಾಮಿ ಮತ್ತು ದರ್ಪದ ಮನೋಭಾವವನ್ನು

ಏಕಾಏಕಿ ಪೂರ್ಣ ವ್ಯತ್ಯಾಸಗೊಳಿಸುವುದು ಅಸಾಧ್ಯವಿತ್ತು. ಕೆಲವು ವ್ಯಕ್ತಿಗಳು ಪರಿವರ್ತನೆಗೊಳ್ಳಬಹುದು. ಇನ್ನು ಕೆಲವರು ಹೊಸಸನ್ನಿವೇಶಕ್ಕೆ ಹೊಂದಿಕೊಳ್ಳಬಹುದು; ಆದರೆ ಅವರಲ್ಲಿ ಬಹುಸಂಖ್ಯಾತರ ಭಾವನೆಯು ತೀರ ಭಿನ್ನವಿದ್ದು ಅವರ ವರ್ತನೆಯೂ ಬೇರೆ ಇತ್ತು. ಇವರಲ್ಲಿ ಪ್ರಳಯಾಂತಕ ಪರಿವರ್ತನೆಯಾಗಿ ಅವರು ಹೊಸಬಾಳಿನ ಹರಿಕಾರರಾಗಬೇಕೆಂದರೆ ಹೇಗೆ ಸಾಧ್ಯ ? ಹೆಚ್ಚೆಂದರೆ ಅರೆಮನಸ್ಸಿನಿಂದ ನಿಧಾನವಾಗಿ ಹೊಂದಿಕೊಂಡಾರು. ಅವರ ಅಧಿಕಾರಪಟ್ಟಕ್ಕೇ ಸಂಚಕಾರ ತರುವ ಮತ್ತು ಅವರಿಗೆ ವಿಶ್ವಾಸವಿಲ್ಲದ ಈ ಹೊಸ ಕಾರ್ಯ ವಿಧಾನದಲ್ಲಿ ಉಜ್ವಲ ಕಾರ್ಯೋತ್ಸಾಹ ತೋರುವುದು ಅವರಿಗೆ ಸಾಧ್ಯವಿರಲಿಲ್ಲ. ಆದರೆ ಅರೆಮನಸ್ಸಿನ ವಿಶ್ವಾಸವೂ ಅನೇಕಬಾರಿ ಅವರಲ್ಲಿ ತೋರಲಿಲ್ಲ.

ನಿರಂಕುಶಾಧಿಕಾರ ಮತ್ತು ದರ್ಪದಿಂದ ಬಹುಕಾಲ ಆಡಳಿತ ನಡೆಸಿದ ಸಿವಿಲ್ ಸರ್ವಿಸಿನ ಉನ್ನತ ಅಧಿಕಾರಿಗಳಂತೂ ಈ ಮಂತ್ರಿಗಳು ಮತ್ತು ಶಾಸನ ಸಭಾ ಸದಸ್ಯರನ್ನು ತಮ್ಮ ಮೀಸಲು ರಾಜ್ಯದ ಅತಿಕ್ರಮಣಕಾರರೆಂದು ಭಾವಿಸಿದರು. ಮುಖ್ಯವಾಗಿ ಬ್ರಿಟಿಷ್ ಅಧಿಕಾರಿಗಳಲ್ಲಿದ್ದ "ಇಂಡಿಯ ಎಂದರೆ ತಾವು, ಉಳಿದದ್ದೆಲ್ಲ ಎಣಿಕೆಗೆ ಬಾರದ ವಸ್ತು" ಎಂಬ ಭಾವನೆ ನಾಶವಾಗುವುದು ಕಷ್ಟವಾಯಿತು. ಈ ಆಗುಂತುಕರನ್ನು ಸಹಿಸುವುದೂ, ಅವರಿಂದ ಆಜ್ಞೆಪಡೆಯುವುದೂ ಅವರಿಗೆ ಕಷ್ಟವಾಯಿತು. ಅಸ್ಪೃಶ್ಯರು ತಮ್ಮ ಪವಿತ್ರ ದೇವಸ್ಥಾನದೊಳಗೆ ಪ್ರವೇಶಮಾಡಿದರೆ ಸನಾತನಿ ಹಿಂದೂಗಳಿಗೆ ಯಾವ ಭಾವನೆಯಾಗುತ್ತದೆಯೋ ಅದೇ ಭಾವನೆ ಈ ಉನ್ನತ ಅಧಿಕಾರಿಗಳಲ್ಲೂ ಉಂಟಾಯಿತು. ಅವರಿಗೊಂದು ಜಾತಿಧರ್ಮವಾಗಿದ್ದು ಕಷ್ಟಪಟ್ಟು ಕಟ್ಟಿದ ದರ್ಪ ಮತ್ತು ಜನಾಂಗ ಶ್ರೇಷ್ಠತೆ ಕುಸಿದು ಬೀಳುವುದರಲ್ಲಿತ್ತು. ಚೀಣರಿಗೆ "ಮುಖ" ದಲ್ಲಿ ಬಹಳ ನಂಬಿಕೆಯಂತೆ. ಆದರೂ ಭಾರತದಲ್ಲಿ ಬ್ರಿಟಿಷರಿಗೆ ಇದ್ದ "ಮುಖ"ದರ್ಪವನ್ನು ಬೇರೆಲ್ಲೂ ಕಾಣೆ. ಅವರಿಗೆ ಅದು ತಮ್ಮ ವೈಯಕ್ತಿಕ ಜನಾಂಗ ಮತ್ತು ರಾಷ್ಟ್ರೀಯ ಪ್ರಶ್ನೆಮಾತ್ರವಾಗಿರದೆ ತಮ್ಮ ಅಧಿಕಾರ ಮತ್ತು ಹಕ್ಕಿನ ಪ್ರಶ್ನೆಯೂ ಆಗಿತ್ತು.

ಆದರೂ ಈ ಆಗುಂತಕರನ್ನು ಸಹಿಸಬೇಕಾಗಿತ್ತು; ಆದರೆ ಆಪತ್ತಿನ ಭಯ ಹಿಮ್ಮೆಟ್ಟಿದಂತೆ ಅವರ ಸಹನೆಯೂ ಕಡಮೆಯಾಗುತ್ತ ಬಂದಿತು. ಆಡಳಿತದ ಎಲ್ಲ ಇಲಾಖೆಗಳಲ್ಲೂ ಇದೇ ಭಾವನೆ ಬೆಳೆಯಿತು; ಆದರೆ ಆಡಳಿತಕೇಂದ್ರದಿಂದ ದೂರದ ಜಿಲ್ಲೆಗಳಲ್ಲಿ ಜಿಲ್ಲಾಧಿಕಾರಿ ಮತ್ತು ಪೋಲೀಸರಿಗೆ ಮೀಸಲಾಗಿದ್ದ ಶಾಂತಿಪಾಲನೆ ಮತ್ತು ರಕ್ಷಣೆ ಇಲಾಖೆಗಳಲ್ಲಿ ಈ ಅಸಹನೆ ಇನ್ನೂ ಹೆಚ್ಚಿತು. ವ್ಯಕ್ತಿಸ್ವಾತಂತ್ರ್ಯಕ್ಕೆ ಕಾಂಗ್ರೆಸ್ ಕೊಟ್ಟ ಮಹತ್ವದ ನೆಪದಲ್ಲಿ ಸ್ಥಳೀಯ ಅಧಿಕಾರಿಗಳು ಮತ್ತು ಪೋಲೀಸರು ಆಗಬಾರದ ಕಾರ್ಯಗಳಿಗೆ ಅವಕಾಶಕೊಟ್ಟರು. ಈ ಅನಿಷ್ಟದುಷ್ಕೃತ್ಯಗಳಿಗೆ ಕೆಲವು ಕಡೆ ಸ್ಥಳೀಯ ಅಧಿಕಾರಿಗಳು ಮತ್ತು ಪೋಲೀಸರಿಂದಲೇ ಪ್ರೋತ್ಸಾಹದೊರೆಯಿತೆಂದು ನನಗೆ ಮನವರಿಕೆಯಾಗಿದೆ. ಅನೇಕ ಕೋಮುವಾರು ದಂಗೆಗಳಾದದ್ದು ಬೇರೆ ಬೇರೆ ಕಾರಣಗಳಿಂದ ಆದರೂ ನ್ಯಾಯಾಧೀಶರುಗಳೂ ಪೋಲೀಸರೂ ನಿರ್ದೋಷಿಗಳಾಗಿರಲಿಲ್ಲ. ದಕ್ಷತೆಯಿಂದ ಶೀಘ್ರಕಾರ್ಯಕ್ರಮ ತೆಗೆದುಕೊಂಡರೆ ದಂಗೆ ಅಡಗಿಸುವುದು ಸಾಧ್ಯವೆಂದು ಅನುಭವದಿಂದ ತಿಳಿದಿತ್ತು. ಆದರೆ ಪ್ರತಿಯೊಂದು ಬಾರಿ ಪೋಲೀಸರು ತೋರಿಸುತ್ತಿದ್ದ ನಿಧಾನ ಮತ್ತು ಕಾರ್ಯವಿಮುಖತೆ ಅತ್ಯಾಶ್ಚರ್ಯವಾಗಿತ್ತು. ಕಾಂಗ್ರೆಸ್ ಸರಕಾರಗಳನ್ನು ದೂಷಣೆಗೆ ಗುರಿಮಾಡುವುದೇ ಅವರ ಉದ್ದೇಶವೆಂಬುದು ಸ್ಪಷ್ಟವಾಯಿತು. ಸ್ಥಳೀಯ ಅಧಿಕಾರಿಗಳ ಮನಃಪೂರ್ವಕ ಅಜಾಗರೂಕತೆ ಮತ್ತು ಅವ್ಯವಸ್ಥೆಗೆ ಸಂಯುಕ್ತಪ್ರಾಂತದ ಕೈಗಾರಿಕಾ ಕೇಂದ್ರವಾದ ಕಾನ್ಪುರದ ನಿದರ್ಶನವೇ ಸಾಕು. ೧೯೨೦ ರಿಂದ ೧೯೩೬ ರ ವರೆಗೆ ಕೋಮುವಾರು ತಿಕ್ಕಾಟದಿಂದ ಸ್ಥಳೀಯ ದಂಗೆಗಳು ಕೆಲವು ಕಡೆ ಹೆಚ್ಚಾದವು. ಕಾಂಗ್ರೆಸ್ ಸರಕಾರಗಳು ಅಧಿಕಾರಕ್ಕೆ ಬಂದಮೇಲೆ ಇದು ಸ್ವಲ್ಪಮಟ್ಟಿಗೆ ಕಡಮೆಯಾಯಿತು. ಆದರೆ ಈಗ ಅದರ ಸ್ವಭಾವವು ಬದಲಾಗಿ ಸ್ಪಷ್ಟ ರಾಜಕೀಯ ರೂಪ ತಾಳಿತು; ಮತ್ತು ಅಧಿಕಾರಿಗಳ ಮನಃಪೂರ್ವಕ ಪ್ರೋತ್ಸಾಹವೂ ದೊರೆಯಿತು, ವ್ಯವಸ್ಥಿತವೂ ಆಯಿತು.

ಸಿವಿಲ್ ಸರ್ವಿಸ್ ಅಧಿಕಾರಿಗಳು ಬಹಳ ದಕ್ಷರೆಂದು ಒಂದು ಮುಖ್ಯ ಸ್ವಯಂಕಲ್ಪಿತ ಪ್ರತೀತಿಇತ್ತು. ಆದರೆ ತಮಗೆ ಅಭ್ಯಾಸವಾಗಿದ್ದ ಸಂಕುಚಿತ ಆವರಣ ಬಿಟ್ಟರೆ ಅಸಾಯಕರೂ, ನಿರುಪಯೋಗಿಗಳೂ ಎಂದು

ಈಗ ಸ್ಪಷ್ಟವಾಯಿತು. ಪ್ರಜಾಪ್ರಭುತ್ವಕ್ಕೆ ಅನುಗುಣವಾಗಿ ಕೆಲಸಮಾಡಲು ಅಶಕ್ತರಾದರು. ಜನರ ಸಹಕಾರ ಮತ್ತು ಪ್ರೇಮಗಳಿಸಲು ಸಾಧ್ಯವಿಲ್ಲದೆ ಜನರಿಗೆ ಹೆದರಿ ಅವರನ್ನು ಅವಹೇಳನಮಾಡುತ್ತಿದ್ದರು. ಸಾಮಾಜಿಕ ಪ್ರಗತಿಯ ಬೃಹತ್ಕಲ್ಪನೆ, ತೀವ್ರಕಾರ್ಯಗತಿಯ ಯೋಜನೆಗಳ ಜ್ಞಾನವೇ ಅವರಿಗೆ ಇರಲಿಲ್ಲ. ತಮ್ಮ ಸಂಕುಚಿತ ದೃಷ್ಟಿ ಮತ್ತು ಅಧಿಕಾರ ದರ್ಪದಿಂದ ಆತಂಕಪಡಿಸುವುದು ಮಾತ್ರ ಅವರಿಗೆ ಸಾಧ್ಯವಿತ್ತು. ಕೆಲವು ವ್ಯಕ್ತಿಗಳನ್ನು ಬಿಟ್ಟರೆ ಉನ್ನತ ಅಧಿಕಾರಿಗಳಲ್ಲಿ—ಬ್ರಿಟಿಷರಲ್ಲಿ ಭಾರತೀಯರಲ್ಲಿ—ಯಾವ ವ್ಯತ್ಯಾಸವೂ ಇರಲಿಲ್ಲ. ತಮ್ಮ ಎದುರಿನ ಹೊಸ ಕಾರ್ಯಗಳ ನಿರ್ವಹಣೆಗೆ ಅವರು ಇಷ್ಟು ಅಯೋಗ್ಯರಿದ್ದುದನ್ನು ಕಂಡು ಆಶ್ಚರ್ಯವಾಯಿತು.

ಜನನಾಯಕರ ಕಾರ್ಯದಕ್ಷತೆ ಮತ್ತು ಕಾರ್ಯಪಟುತ್ವಗಳಲ್ಲಿ ಬೇಕಾದಷ್ಟು ನ್ಯೂನತೆಗಳಿದ್ದುವು. ಆದರೆ ಅವರಲ್ಲಿ ಅಪಾರವಾದ ಉತ್ಸಾಹವೂ ಶಕ್ತಿಯೂ ಇದ್ದುವು; ಜನತೆಯ ಸಮೀಪ ಸಂಪರ್ಕವಿತ್ತು; ಮತ್ತು ತಮ್ಮ ತಪ್ಪುಗಳನ್ನು ತಿದ್ದಿಕೊಂಡು ಕಲಿಯಬೇಕೆಂಬ ಆಶೆ ಇತ್ತು. ಅವರ ಕಾರ್ಯಶಕ್ತಿ, ಹೊಸ ಬಾಳಿನ ಉತ್ಸಾಹ,ಆವೇಶಪೂರಿತ ಹುಮ್ಮಸ್ಸು, ಹಿಡಿದ ಕೆಲಸವನ್ನು ಪೂರೈಸಬೇಕೆಂಬ ದೃಢಸಂಕಲ್ಪ ಇವೆಲ್ಲ ಸಂಪ್ರದಾಯ ಶರಣರೂ, ಸೋಮಾರಿಗಳೂ ಆದ ಬ್ರಿಟಿಷ್ ಆಡಳಿತಗಾರರಿಗೆ ಮತ್ತು ಅವರ ಹಿಂಬಾಲಕರಿಗೆ ತೀರ ಹೊಸದಾಗಿ ಕಂಡವು. ಸಂಪ್ರದಾಯ ಶರಣ ಭಾರತದಲ್ಲಿ ಈ ರೀತಿ ಒಂದು ವಿಚಿತ್ರ ವ್ಯಾಪಾರ ಆರಂಭವಾಯಿತು. ಈ ರೀತಿ ಒಂದು ಕಾರ್ಯಾಸಕ್ತ ಸಮಾಜದ ಪ್ರತಿನಿಧಿಗಳಾಗಿ ಬಂದ ಬ್ರಿಟಿಷರು ಸ್ತಬ್ಧ ಪಾಚಿಗಟ್ಟಿದ ಸಂಪ್ರದಾಯದ ಮುಖ್ಯ ಬೆಂಬಲಿಗರಾಗಿ ನಿಂತರು. ಭಾರತೀಯರಲ್ಲಿ ಅನೇಕರು ಈ ನವ ಚೈತನ್ಯದ ಪ್ರೋತ್ಸಾಹಕರಾಗಿದ್ದರು. ರಾಜಕೀಯ ಕ್ರಾಂತಿಯು ಮಾತ್ರವಲ್ಲದೆ ಸಾಮಾಜಿಕ ಮತ್ತು ಆರ್ಥಿಕ ಕ್ರಾಂತಿಯೂ ಅವರಿಗೆ ಸ್ವಾಗತವಿತ್ತು. ತಮ್ಮ ಹಿಂದೆ ಅನೇಕ ಹೊಸ ಪ್ರಬಲ ಶಕ್ತಿಗಳು ಉದ್ಭವಿಸಿವೆ ಎಂಬ ಅರಿವು ಸಹ ಅವರಿಗೆ ಅನೇಕರಿಗೆ ಇರಲಿಲ್ಲ. ಬ್ರಿಟಿಷರು ಮೊದಲು ಭಾರತದಲ್ಲಿ ಯಾವುದಾದರೂ ರಚನಾತ್ಮಕ ಪ್ರಗತಿಪರ ಪಾತ್ರ ವಹಿಸಿದ್ದರೂ ಈಗ ಆ ಪಾತ್ರನಿರ್ವಹಣೆಯಲ್ಲಿ ವಿಮುಖರಾಗಿದ್ದಾರೆಂದೂ, ಎಲ್ಲ ಪ್ರಗತಿಗೂ ವಿರೋಧಿಗಳೆಂದೂ ಅವರ ಈ ವ್ಯತ್ಯಾಸದಿಂದ ಸ್ಪಷ್ಟವಾಯಿತು. ಅವರ ಅಧಿಕಾರ ಜೀವನದ ಕಳೆಯೇ ಕುಂದಿತ್ತು. ಭಾರತದ ಯಾವ ಮುಖ್ಯ ಸಮಸ್ಯೆ ಬಿಡಿಸುವುದಕ್ಕೂ ಅವರಿಗೆ ಶಕ್ತಿ ಇರಲಿಲ್ಲ. ಆರಂಭದಲ್ಲಿ ಅರ್ಥಗರ್ಭಿತವೂ ಸ್ಪಷ್ಟವೂ ಆಗಿದ್ದ ಅವರ ಭಾಷೆ ಸಹ ಅಸ್ಪಷ್ಟವೂ, ಅರ್ಥಶೂನ್ಯವೂ, ಕೃತಕವೂ ಆಗುತ್ತ ಬಂದಿತು.

ಅತಿ ಕಷ್ಟತಮವೂ ಜಟಿಲವೂ ಆದ ಪ್ರಜಾಪ್ರಭುತ್ವದ ಕಲೆಯನ್ನು ತನ್ನ ಉನ್ನತ ಅಧಿಕಾರಿಗಳ ಮೂಲಕ ನಮಗೆ ಕಲಿಸುತ್ತಿರುವುದಾಗಿ ಬ್ರಿಟಿಷ್ ಆಳರಸರು ಬಹು ದಿನಗಳಿಂದ ಕಥೆ ಹೇಳುತ್ತಿದ್ದಾರೆ. ಬ್ರಿಟಿಷರು ಬಂದು ತಮ್ಮ ಶಿಕ್ಷಣದ ಅನುಭವ ನಮಗೆ ಒದಗಿಸುವ ಮುಂಚೆ ಸಾವಿರಾರು ವರ್ಷಗಳಿಂದ ನಾವು ಬಾಳಿ ಬದುಕಿದ್ದೆವು; ಉತ್ತಮ ಬಾಳನ್ನೇ ಬಾಳಿದೆವು. ಅತ್ಯವಶ್ಯ ಕೆಲವು ಗುಣಗಳು ನಮ್ಮಲ್ಲಿ ಇಲ್ಲದೆ ಇರಬಹುದು. ಕೆಲವರು ಈ ಕೊರತೆಯು ಬ್ರಿಟಿಷರ ಆಡಳಿತಕಾಲದಲ್ಲಿ ಹೆಚ್ಚಿದೆ ಎಂದೂ ಹೇಳುತ್ತಾರೆ. ಆದರೆ ನಮ್ಮ ಕೊರತೆ ಏನೇ ಇರಲಿ ಈ ಅಧಿಕಾರವರ್ಗವು ಭಾರತದ ಪ್ರಗತಿ ಸಾಧನೆಗೆ ಸ್ವಲ್ಪವೂ ಸಹಾಯವಾಗುವುದಿಲ್ಲವೆಂಬುದು ನಮಗೆ ಸ್ಪಷ್ಟವಾಯಿತು. ಅವರ ದುರ್ಗುಣಗಳೇ ಅವರಿಗೆ ಅಡ್ಡಿಯಾದವು. ಅವರಲ್ಲಿದ್ದ ಗುಣಗಳೆಲ್ಲ ಪೋಲೀಸ್ ರಾಜ್ಯಕ್ಕೆ ಬೇಕಾದ ಗುಣಗಳು. ಪ್ರಗತಿಪರ ಪ್ರಜಾಪ್ರಭುತ್ವಕ್ಕೆ ಅವಶ್ಯವಾದ ಗುಣಗಳಿಗಿಂತ ತೀರ ಭಿನ್ನವಾದವುಗಳು. ಇತರರಿಗೆ ಶಿಕ್ಷಣ ಕೊಡುವ ಮುಂಚೆ ಅವರಲ್ಲಿದ್ದ ದುರ್ಗುಣ ಕಳೆದುಕೊಳ್ಳಲು ಪಾಪನಾಶನಿಯ ಸ್ನಾನ ಅವರಿಗೆ ಅಗತ್ಯವಿತ್ತು.

ಪ್ರಾಂತಗಳಲ್ಲಿ ಪ್ರಜಾರಾಜ್ಯವೂ ಕೇಂದ್ರದಲ್ಲಿ ನಿರಂಕುಶ ಆಡಳಿತವೂ ಒಂದು ಇಜ್ಜೋಡಿಯಾಗಿ ಅನೇಕ ವಿಚಿತ್ರ ವೈಪರೀತ್ಯಗಳು ಕಂಡವು. ಕಾಂಗ್ರೆಸ್ ಸರಕಾರಗಳು ವ್ಯಕ್ತಿಸ್ವಾತಂತ್ರ್ಯಕ್ಕೆ ಮಹತ್ತರ ಬೆಲೆಕೊಟ್ಟು ಗುಪ್ತಪೋಲಿಸ್ ದಳದವರ ಚಟುವಟಿಕೆಗಳನ್ನು ಮೊಟಕುಮಾಡಿದರು. ರಾಜಕಾರಣಿಗಳನ್ನೂ ಸರಕಾರಕ್ಕೆ ವಿರುದ್ಧ ಅಭಿಪ್ರಾಯ ಉಳ್ಳವರೆಂದು ಅನುಮಾನ ಕಂಡವರನ್ನೂ ಹಿಂಬಾಲಿಸಿ

ಅವರಮೇಲೆ ಗುಪ್ತ ವರದಿಗಳನ್ನು ಕಳುಹಿಸುವುದೇ ಅವರ ಕೆಲಸವಾಗಿತ್ತು. ಪ್ರಾಂತೀಯ ಗುಪ್ತ ಪೋಲಿಸರ ಚಟುವಟಿಕೆ ಕಡಮೆಯಾದರೂ ಸಾಮ್ರಾಜ್ಯ ಸರಕಾರದ ಗುಪ್ತಚಾರರ ಕಾರ್ಯ ಚಟುವಟಿಕೆ ಇಮ್ಮಡಿಯಾಯಿತು. ನಮ್ಮ ಕಾಗದಗಳ ತನಿಖೆ ಹಾಗಿರಲಿ, ಮಂತ್ರಿಗಳ ಕಾಗದ ಪತ್ರಗಳನ್ನೂ ಸಹ ಒಡೆದು ನೋಡುತ್ತಿದ್ದರು. ಕಳೆದ ಇಪ್ಪತ್ತೈದು ವರ್ಷಗಳಿಂದ ಭಾರತದ ಹೊರಗಡೆಯಾಗಲಿ, ಒಳಗಡೆ ಯಾಗಲಿ ನಾನು ಬರೆದ ಕಾಗದಗಳಲ್ಲಿ ಒಂದಾದರೂ ಈ ಗುಪ್ತ ಪೋಲೀಸರ ಕಣ್ಣಿಗೆ ಬೀಳದೆ ಪ್ರತಿ ಮಾಡಲ್ಪಡದೆ ಹೋಗಿದೆ ಎಂದು ನಾನು ಹೇಳಲಾರೆ. ಗುಪ್ತವಾಗಿ ಕೇಳದ ಟೆಲಿಫೋನ್ ಸಂಭಾಷಣೆ ಯಾವುದೂ ಇಲ್ಲ. ನನಗೆ ಬಂದ ಪ್ರತಿಯೊಂದು ಕಾಗದವೂ ಈ ಗುಪ್ತ ಶೋಧನೆಗೆ ಒಳಗಾಗಿಯೇ ಬರ ಬೇಕು. ಕೆಲವು ಬಾರಿ ಎಲ್ಲ ಕಾಗದಗಳು ; ಇನ್ನೂ ಕೆಲವು ಬಾರಿ ಮುಖ್ಯವೆನಿಸಿದವು. ಯುದ್ಧಕಾಲದಲ್ಲಿ ಎರಡೂ ಕಡೆ ಶೋಧನೆಯಾಗುತ್ತಿತ್ತು.

ಅದೃಷ್ಟವಶಾತ್ ನಮ್ಮ ಚಟುವಟಿಕೆ ಎಲ್ಲವೂ ಬಹಿರಂಗವಾಗಿಯೇ ನಡೆದಿದೆ, ಮುಚ್ಚುಮರೆ ಮಾಡ ಬೇಕಾದ್ದು ಯಾವುದೂ ಇರಲಿಲ್ಲ. ಆದರೂ, ಸದಾ ಈ ಶೋಧನೆ, ಮಾತುಗಳನ್ನು, ಸಂಭಾಷಣೆಗಳನ್ನು ಕದ್ದುಕೇಳುತ್ತಾರೆಂಬ ಭಾವನೆ ಒಳ್ಳೆಯದಲ್ಲ. ಕೋಪೋದ್ರೇಕಕ್ಕೂ, ಅಸಮಾಧಾನಕ್ಕೂ ಎಡೆಗೊಟ್ಟು ವ್ಯಕ್ತಿ ಬಾಂಧವ್ಯಕ್ಕೆ ಸಹ ಕುಂದನ್ನು ತರುತ್ತದೆ. ಇಣಿಕಿ ನೋಡುವವನೊಬ್ಬನಿದ್ದಾನೆಂಬ ಭಾವನೆಯುಂಟಾದರೆ ಮನಬಿಚ್ಚಿ ಬರೆಯಲು ಸಹ ಸಾಧ್ಯವಿಲ್ಲ.

ಮಂತ್ರಿಗಳು ಅನೇಕರು ಶಕ್ತಿಮೀರಿ ಕೆಲಸಮಾಡಿ ಜೀವಶವಗಳಾದರು. ಅನಾರೋಗ್ಯದಿಂದ ಅವರ ಹೊಸ ಹುರುಪು ಮಾಸಿತು; ತುಂಬ ಆಯಾಸಗೊಂಡವರಂತೆ ಕಂಡರು. ಆದರೂ ಗುರಿ ಸಾಧಿಸ ಬೇಕೆಂಬ ಸಂಕಲ್ಪವಿದ್ದುದರಿಂದ ತಾವು ಶಕ್ತಿಮೀರಿ ಕೆಲಸಮಾಡಿದ್ದಲ್ಲದೆ ಇಂಡಿಯನ್ ಸಿವಿಲ್ ಸರ್ವಿಸ್ ಅಧಿಕಾರಿಗಳಿಂದಲೂ ಅವರ ನೌಕರರಿಂದಲೂ ಹೆಚ್ಚು ಕೆಲಸ ತೆಗೆದುಕೊಂಡರು. ೧೯೩೯ನೇ ನವಂಬರ್ ತಿಂಗಳಲ್ಲಿ ಕಾಂಗ್ರೆಸ್ ಸರಕಾರಗಳು ರಾಜೀನಾಮೆ ಕೊಟ್ಟಾಗ ಅನೇಕರು ಬದುಕಿದೆವೆಂದು ಬಿಸಿಯುಸಿರು ಬಿಟ್ಟರು. ಮೊದಲಿನಂತೆ ಕಚೇರಿಗಳೆಲ್ಲ ನಾಲ್ಕು ಗಂಟೆಗೇ ಮುಗಿಯಲಾರಂಭಿಸಿದವು. ಜನರ ಓಡಾಟಕ್ಕೆ ಅವಕಾಶ ಕಡಮೆಯಾಗಿ, ಮಡಿವಂತಿಕೆಯ ಶಾಂತವಾತಾವರಣ ಮತ್ತೆ ಆರಂಭವಾಯಿತು. ಹಳೆಯ ಕಂದಾಚಾರ ಪದ್ಧತಿ, ಆಲಸ್ಯ ಭಾವನೆ ಪುನಃ ತಲೆದೋರಿದವು, ಮಧ್ಯಾಹ್ನದ ನಂತರ ಕಾಲವೆಲ್ಲ ಪೋಲೋ ಆಟಕ್ಕೋ ಅಥವ ಕ್ರೀಡಾ ಮಂದಿರದಲ್ಲಿ ಟೆನ್ನಿಸ್ ಅಥವ ಬ್ರಿಜ್ ಆಟಕ್ಕೋ ಮೀಸಲಾಯಿತು. ಕೆಟ್ಟ ಕನಸು ಮರೆತು ಪುನಃ ಮೊದಲಿನಂತೆ ಕೆಲಸದೊಂದಿಗೆ ವಿನೋದವನ್ನೂ ಸೇರಿಸಲು ಅವಕಾಶ ದೊರೆಯಿತು. ಯುದ್ಧವೇನೋ ಆರಂಭವಾಗಿತ್ತು. ಆದರೆ ಅದು ಇನ್ನೂ ಯೂರೋಪಿನಲ್ಲೇ ಇತ್ತು ; ಹಿಟ್ಲರನ ಸೈನ್ಯ ಗಳು ಪೋಲೆಂಡನ್ನು ಆಕ್ರಮಣ ಮಾಡಿದ್ದವು. ಸೈನಿಕರು ಹೋರಾಡಿ ತಮ್ಮ ಕರ್ತವ್ಯ ನಿರ್ವಹಣೆಗೆ ಯುದ್ಧದಲ್ಲಿ ಮಡಿದರೆ ಬಿಳಿಯ ಅಧಿಕಾರಿ ತನಗೆ ಇಲ್ಲಿಯೂ ಒಂದು ಕರ್ತವ್ಯವಿದೆ ಎಂದು ಭಾವಿಸಿದ್ದನು. ದರ್ಪದಿಂದ, ಯೋಗ್ಯರೀತಿಯಿಂದ ಬಿಳಿ ಜನರ ಹೊರೆ ಹೊರುವುದೇ ಆ ಕರ್ತವ್ಯ ಎಂದು ಭಾವಿಸಿದ್ದನು.

ಕಾಂಗ್ರೆಸ್ ಸರಕಾರಗಳು ಅಧಿಕಾರ ನಡೆಸಿದ ಅಲ್ಪಾವಧಿಯಲ್ಲಿ ಭಾರತದ ಪ್ರಗತಿಗೆ ಪ್ರಬಲವಾದ ತೊಂದರೆ ಎಂದರೆ ಬ್ರಿಟಿಷರು ನಮ್ಮ ಮೇಲೆ ಹೇರಿ ಇದ್ದ ರಾಜಕೀಯ ಮತ್ತು ಆರ್ಥಿಕ ವ್ಯವಸ್ಥೆಯೇ ಮುಖ್ಯಕಾರಣವೆಂದು ನಮಗೆ ಸ್ಪಷ್ಟವಾಯಿತು. ಅನೇಕ ಪುರಾತನ ಪದ್ಧತಿಗಳೂ ಸಮಾಜದ ಸಂಪ್ರ ದಾಯ ಮತ್ತು ರೀತಿನೀತಿಗಳೂ ಅಡ್ಡಿಯಾಗಿವೆ ಎಂದೂ, ಅವುಗಳನ್ನು ಕಿತ್ತೊಗೆಯುವುದು ಅವಶ್ಯವೆಂದೂ ನಮಗೆ ತಿಳಿದಿತ್ತು. ಆದರೆ ಭಾರತದ ಆರ್ಥಿಕ ನೀತಿಯ ವಿಕಾಸಕ್ಕೆ ಬೇಕಾದ ಸ್ವಯಂ ಶಕ್ತಿಗೆ ಅಡ್ಡ ಬಂದುದು ಈ ಸಂಪ್ರದಾಯಗಳಿಗಿಂತ ಹೆಚ್ಚಾಗಿ ಬ್ರಿಟಿಷರ ರಾಜಕೀಯ ಮತ್ತು ಆರ್ಥಿಕ ಬಂಧನವೇ ಮುಖ್ಯಕಾರಣವಾಗಿತ್ತು. ಆ ಉಕ್ಕಿನ ಚೌಕಟ್ಟು ಒಂದು ನಾಶವಾದರೆ ಆತ್ಮವಿಕಾಸವು ಶತಸ್ಸಿದ್ಧವಿತ್ತು. ಅದರ ಹಿಂದೆಯೇ ಅನೇಕ ಸಾಮಾಜಿಕ ಪರಿವರ್ತನೆಗಳಾಗಿ ಅರ್ಥಶೂನ್ಯ ಕಂದಾಚಾರ ಪದ್ಧತಿಗಳೂ, ಆಡಂಬರದ ರೀತಿಯೂ ಮಾಯವಾಗುತ್ತಿತ್ತು. ಆದ್ದರಿಂದ ಆ ಚೌಕಟ್ಟನ್ನು ಒಡೆಯುವುದು ಅನಿವಾರ್ಯ

ವೆನಿಸಿತು. ಉಳಿದ ಎಲ್ಲ ಪ್ರಯತ್ನವೂ ಹೊಳೆಯಲ್ಲಿ ಹುಣಿಸೆಹಣ್ಣು ಕದಡಿದಂತೆ ನಿಷ್ಫಲ ತೋರಿತು. ಈ ಚೌಕಟ್ಟಿನ ಮುಖ್ಯ ಆಧಾರವೆಂದರೆ ಹಳೆಯ ಪಾಳೆಯಗಾರಿಕೆಯ ಜಮೀನುದಾರಿ ಪದ್ಧತಿ. ಭಾರತದಲ್ಲಿ ಯಾವ ಪ್ರಜಾಪ್ರಭುತ್ವ ಬಂದರೂ ಬ್ರಿಟಿಷರ ರಾಜಕೀಯ ಮತ್ತು ಆರ್ಥಿಕ ವ್ಯವಸ್ಥೆಯೊಂದಿಗೆ ಹೊಂದಿಕೊಳ್ಳಲು ಅಸಾಧ್ಯವಿತ್ತು ಮತ್ತು ಎರಡರ ಮಧ್ಯೆ ತಿಕ್ಕಾಟ ಅನಿವಾರ್ಯವಿತ್ತು. ಆದ್ದರಿಂದ ೧೯೩೭-೩೯ ರ ಅರೆಬರೆಯ ಪ್ರಜಾಪ್ರಭುತ್ವದಲ್ಲಿ ಹೋರಾಟವು ಸದಾ ಸಿದ್ಧವಿತ್ತು. ಭಾರತದಲ್ಲಿ ಪ್ರಜಾಪ್ರಭುತ್ವಕ್ಕೆ ಎಡೆ ಇಲ್ಲವೆಂಬ ಬ್ರಿಟಿಷರ ಅಭಿಪ್ರಾಯಕ್ಕೂ ಇದೇ ಕಾರಣವಾಯಿತು. ತಾವೆ ಕಟ್ಟಿ ಬೆಳಸಿದ ಸಂಸ್ಥೆಗಳನ್ನು, ಹಕ್ಕುದಾರಿಗಳನ್ನು, ಕೊಟ್ಟ ಬೆಲೆಯನ್ನು ಉಳಿಸಿಕೊಳ್ಳುವುದು ಒಂದೇ ಅವರ ಗುರಿಯಾಯಿತು. ಅವರು ಒಪ್ಪಿದ ಮೃದುಸ್ವಭಾವದ ಪ್ರಜಾಪ್ರಭುತ್ವವನ್ನು ನಾವು ಒಪ್ಪದೆ, ಕ್ರಾಂತಿಕಾರಕ ಬದಲಾವಣೆಗೇ ನಾವು ಪ್ರಯತ್ನ ಪಟ್ಟಕಾರಣ ಪ್ರಜಾಪ್ರಭುತ್ವದ ನಾಟಕವನ್ನು ಮುಕ್ತಾಯಮಾಡಿ ಶುದ್ಧ ಕೇಂದ್ರೀಕೃತ ನಿರಂಕುಶಾಧಿಕಾರ ನಡೆಸುವುದೊಂದೇ ಬ್ರಿಟಿಷ್ ಆಳರಸರಿಗೆ ಉಳಿದ ಮಾರ್ಗವಾಯಿತು. ಈ ದೃಷ್ಟಿಯ ಬೆಳೆವಣಿಗೆಗೂ, ಯೂರೋಪಿನಲ್ಲಿ ಫಾಸಿಸಂನ ಹುಟ್ಟು ಮತ್ತು ಬೆಳವಣಿಗೆಗೂ ಬಹಳ ಸಮೀಪ ಸಾಮ್ಯವಿದೆ. ಭಾರತದಲ್ಲಿ ಬ್ರಿಟಿಷರ ಹೆಮ್ಮೆಯಾಗಿದ್ದ ಶಾಸನ ಸಮ್ಮತ ಅಧಿಕಾರಕ್ಕೆ ಸಹ ಲೋಪ ಬಂದು ಯುದ್ಧಕಾಲದ ವಿಶೇಷ ಶಾಸನಗಳ ಆಡಳಿತ ಆರಂಭವಾಯಿತು.

### ೫. ಅಲ್ಪಸಂಖ್ಯಾತರ ಪ್ರಶ್ನೆ : ಮುಸ್ಲಿಂ ಲೀಗ್—ಜನಾಬ್ ಜಿನ್ನಾ

ಕಳೆದು ಏಳುವರ್ಷಗಳ ಮುಸ್ಲಿಂ ಲೀಗಿನ ಬೆಳವಣಿಗೆ ಮತ್ತು ಪ್ರಭಾವ ಅತ್ಯದ್ಭುತವಾಗಿವೆ. ವಿದ್ಯಾವಂತ ಮುಸ್ಲಿಮರನ್ನು ಕಾಂಗ್ರೆಸ್ಸಿನಿಂದ ದೂರವಿರಿಸಲೆಂದು ಬ್ರಿಟಿಷರ ಪ್ರೋತ್ಸಾಹದಿಂದಲೇ ೧೯೦೬ ರಲ್ಲಿ ಲೀಗಿನ ಜನನವಾಯಿತು. ಅದರ ಆಡಳಿತವೆಲ್ಲ ಉತ್ತಮ ವರ್ಗದ ಶ್ರೀಮಂತರ ಕೈಯಲ್ಲಿ. ಮುಸ್ಲಿಂ ಜನಸಾಮಾನ್ಯರ ಮೇಲೆ ಅದರ ಪ್ರಭಾವ ಏನೂ ಇರಲಿಲ್ಲ. ಅವರಿಗೆ ಅದರ ರಚನೆಯಂತೆ ಆಡಳಿತವೆಲ್ಲ ಒಂದು ಸಣ್ಣ ಗುಂಪಿನ ಕೈಯಲ್ಲಿ, ನಾಯಕಪಟ್ಟವೂ ಅದೇ ಗುಂಪಿಗೆ ಶಾಶ್ವತವಾಯಿತು. ಆದರೂ ದೇಶದ ಪರಿಸ್ಥಿತಿ ಮತ್ತು ಪ್ರಬಲಗೊಳ್ಳುತ್ತಿದ್ದ ಮುಸ್ಲಿಂ ಮಧ್ಯಮ ವರ್ಗ ಲೀಗನ್ನು ಕಾಂಗ್ರೆಸ್ಸಿನ ಕಡೆಗೇ ಒಲಿಸಿದವು. ಮೊದಲನೆಯ ಪ್ರಪಂಚಯುದ್ಧ, ತುರ್ಕಿಯ ಖಲೀಫನ ಪದಚ್ಯುತಿ, ಮುಸ್ಲಿಮರ ಯಾತ್ರಾಸ್ಥಳಗಳ ಪ್ರಶ್ನೆ ಎಲ್ಲವೂ ಭಾರತದ ಮುಸ್ಲಿಮರ ಮೇಲೆ ದೊಡ್ಡ ಪರಿಣಾಮ ಮಾಡಿ ಅವರಲ್ಲಿ ಬ್ರಿಟಿಷರ ಮೇಲೆ ವಿರೋಧ ಭಾವನೆಗೆ ಪುಟಕೊಟ್ಟವು. ಎಚ್ಚೆತ್ತ ಈ ಮುಸ್ಲಿಂ ಜನತೆಯ ಉತ್ಸಾಹಕ್ಕೆ ಪ್ರತಿಗಾಮಿ ಮನೋಭಾವನೆಯ ಲೀಗಿನಿಂದ ಯಾವ ಮಾರ್ಗದರ್ಶಿತ್ವವೂ ದೊರೆಯಲಿಲ್ಲ. ಲೀಗಿನಲ್ಲಿ ನರಗಳ ದೌರ್ಬಲ್ಯ ಒದಗಿದಂತಾಗಿ ಸಾಯುವುದರಲ್ಲಿತ್ತು. ಕಾಂಗ್ರೆಸ್ಸಿಗೆ ಸಮೀಪವರ್ತಿಯಾಗಿ ಖಿಲಾಫತ್ ಸಮಿತಿ ಎಂಬ ಹೊಸ ಮುಸ್ಲಿಂ ಸಂಸ್ಥೆಯೊಂದು ಹುಟ್ಟಿತು. ಮುಸ್ಲಿಮರು ಬಹು ಸಂಖ್ಯಾತರಾಗಿ ಕಾಂಗ್ರೆಸ್ಸಿಗೆ ಸೇರಿ ದುಡಿದರು. ೧೯೨೦-೨೩ ರ ಮೊದಲನೆಯ ಅಸಹಕಾರ ಚಳುವಳಿಯ ನಂತರ ತುರ್ಕಿಯಲ್ಲಿ ಖಲೀಫನ ಅಧಿಕಾರಕ್ಕೇ ಚ್ಯುತಿ ಬಂದ ಕಾರಣ, ಖಲೀಫನ ಸಮಿತಿಗೆ ಇದ್ದ ಧ್ಯೇಯವೂ ಮಾಯವಾಗಿ ಅದೂ ಮುಕ್ತಾಯಗೊಂಡಿತು. ಮುಸ್ಲಿಂ ಜನತೆಯು ರಾಜಕೀಯದಿಂದ ದೂರ ಸರಿಯಿತು. ಆದರೆ ಕೆಲವು ಮಧ್ಯಮ ವರ್ಗದ ಮುಸ್ಲಿಮರು ಮಾತ್ರ ಕಾಂಗ್ರೆಸ್‌ನಲ್ಲೇ ಉಳಿದು ಕೆಲಸ ಮಾಡಿದರು.

ಈ ಕಾಲದಲ್ಲಿ ಅನೇಕ ಸಣ್ಣ ಸಣ್ಣ ಮುಸ್ಲಿಂ ಸಂಸ್ಥೆಗಳು ಹುಟ್ಟಿಕೊಂಡು ಕೆಲವು ವೇಳೆ ತಮ್ಮ ತಮ್ಮಲ್ಲೆ ಕಚ್ಚಾಡುತ್ತಿದ್ದವು. ಅವಕ್ಕೆ ಜನತೆಯ ಬೆಂಬಲವಾಗಲಿ, ಬ್ರಿಟಿಷರು ಕೊಟ್ಟ ಪ್ರಶಸ್ತಿಬಿಟ್ಟರೆ ಬೇರೆಯಾವ ರಾಜಕೀಯ ಪ್ರಾಮುಖ್ಯತೆಯಾಗಲಿ ಇರಲಿಲ್ಲ. ಶಾಸನ ಸಭೆಗಳಲ್ಲಿ ಮತ್ತು ಸರಕಾರದ ನೌಕರಿಗಳಲ್ಲಿ ಮುಸ್ಲಿಮರಿಗೆ ವಿಶೇಷ ಪ್ರಾತಿನಿಧ್ಯ ಮತ್ತು ರಕ್ಷಣೆ ಕೇಳುವುದು ಒಂದು ಕೆಲಸವಾಗಿತ್ತು. ಈ ವಿಷಯದಲ್ಲಿ ಮುಸ್ಲಿಮರ ಒಂದು ದೃಷ್ಟಿಯನ್ನೇನೋ ಅವರು ಪ್ರತಿನಿಧಿಸಿದರು. ಏಕೆಂದರೆ ಹಿಂದೂಗಳು ವಿದ್ಯಾಭ್ಯಾಸ, ಅಧಿಕಾರವರ್ಗ, ಕೈಗಾರಿಕೆ ಮತ್ತು ಸಂಖ್ಯಾ ಪ್ರಮಾಣದಲ್ಲಿ ಬಹುಸಂಖ್ಯಾತರಿದ್ದು ಪ್ರಾಬಲ್ಯಪಡೆದಿದ್ದ ಕಾರಣ ಕೆಲ ಕೆಲವು ಮುಸ್ಲಿಮರಲ್ಲಿ ಭಯವೂ ಅಸಮಾಧಾನವೂ ಹುಟ್ಟಿತು.

ಜನಾಬ್ ಮಹಮ್ಮದ್ ಆಲಿ ಜಿನ್ನಾ ಭಾರತದ ರಾಜಕೀಯದಿಂದ ನಿವೃತ್ತಿಯಾಗಿ ಭಾರತ ಸಹ ಬಿಟ್ಟು ಇಂಗ್ಲೆಂಡಿನಲ್ಲಿ ನೆಲಸಹೋದನು.

೧೯೩೦ ರಲ್ಲಿ ನಡೆದ ಎರಡನೆಯ ಅಸಹಕಾರ ಚಳುವಳಿಯಲ್ಲಿ ೧೯೨೦–೨೨ ರಷ್ಟು ಅಲ್ಲದಿದ್ದರೂ ಮುಸ್ಲಿಮರ ಪಾತ್ರವು ಮಹತ್ವದ್ದಾಗಿಯೇ ಇತ್ತು. ಏನಿಲ್ಲೆಂದರೂ ಹತ್ತು ಸಾವಿರ ಜನರು ಸೆರೆಮನೆಗೆ ಬಂದಿದ್ದರು. ಶೇಕಡ ೯೫ರಷ್ಟು ಜನ ಮುಸ್ಲಿಮರೇ ಇರುವ ವಾಯವ್ಯ ಪ್ರಾಂತ್ಯವು ಈ ಚಳುವಳಿಯಲ್ಲಿ ಅತ್ಯಂತ ಪ್ರಮುಖ ಪಾತ್ರವಹಿಸಿತು. ಆ ಪ್ರಾಂತ್ಯದ ಪಠಾಣರ ಏಕೈಕ ನೆಚ್ಚಿನ ನಾಯಕ ಖಾನ್ ಅಬ್ದುಲ್ ಗಫಾರ್ ಖಾನರ ವ್ಯಕ್ತಿತ್ವವೂ ಮತ್ತು ಆತನ ಅದ್ಭುತ ಕಾರ್ಯವೂ ಅದಕ್ಕೆ ಮುಖ್ಯ ಕಾರಣ, ಸದಾ ಕಲಹ ಪ್ರಿಯರೂ, ಕೋಪಿಷ್ಟರೂ ಆದ ಪಠಾಣರನ್ನು ಶಾಂತಯುತ ರಾಜಕೀಯ ಮಾರ್ಗದಲ್ಲಿ ತಿರುಗಿಸಿ ಅಪಾರ ಕಷ್ಟಸಹಿಷ್ಣುಗಳನ್ನಾಗಿ ಮಾರ್ಪಡಿಸಿದ ಖಾನ್ ಅಬ್ದುಲ್ ಗಫಾರ ಖಾನರ ಕಾರ್ಯವು ಇತ್ತೀಚಿನ ಅದ್ಭುತ ಘಟನೆಗಳಲ್ಲಿ ಅತಿ ಮುಖ್ಯವಾದುದು. ಅವರು ಅನುಭವಿಸಿದ ಸಂಕಟವೂ ಅಸಹನೀಯವಿತ್ತು. ನೆನಸಿಕೊಂಡರೆ ಮೈನವಿರೇಳುತ್ತದೆ. ಆದರೂ ಸರಕಾರದ ಸೈನ್ಯದ ಮೇಲಾಗಲಿ, ಸರಕಾರಕ್ಕೆ ಬೆಂಬಲ ರಾಗಿ ನಿಂತ ಇತರರ ಮೇಲಾಗಲಿ ಈ ಪಠಾನರು ಯಾವ ಹಿಂಸಾಕೃತ್ಯವನ್ನೂ ನಡಸದೆ ಅದ್ಭುತ ಶಿಸ್ತನ್ನೂ ಆತ್ಮಸಂಯಮವನ್ನೂ ತೋರಿದರು. ಪಠಾನನಿಗೆ ತನ್ನ ಸಹೋದರನಿಗಿಂತ ತುಪಾಕಿಯ ಮೇಲೆ ಮಮತೆ ಹೆಚ್ಚು. ಉದ್ರೇಕಗೊಳ್ಳುವುದು ಸುಲಭ, ಸ್ವಲ್ಪ ಸಿಟ್ಟಿಗೆದ್ದರೆ ಸಾವೇ ಸಿದ್ಧ ಎಂಬುದನ್ನು ಜ್ಞಾಪಿಸಿಕೊಂಡರೆ ಈ ಪರಿವರ್ತನೆ ಮತ್ತು ಸಂಯಮ ಒಂದು ವಿಚಿತ್ರ ಆಶ್ಚರ್ಯವೇ ಸರಿ.

ಖಾನ್ ಅಬ್ದುಲ್ ಗಫಾರ್ ಖಾನರ ನೇತೃತ್ವದಲ್ಲಿ ವಾಯವ್ಯ ಪ್ರಾಂತ್ಯವೂ, ಇತರ ಕಡೆಗಳಲ್ಲಿ ರಾಜಕೀಯ ಜ್ಞಾನವುಳ್ಳ ಅನೇಕ ಮಧ್ಯಮ ವರ್ಗದ ಮುಸಲ್ಮಾನರೂ ಕಾಂಗ್ರೆಸ್ಸಿನಲ್ಲಿಯೇ ದೃಢವಾಗಿ ನಿಂತರು. ರೈತರಲ್ಲಿ ಮತ್ತು ಕೂಲಿಗಾರ ಮುಸ್ಲಿಮರಲ್ಲಿ ಕಾಂಗ್ರೆಸ್ ಪ್ರಭಾವವು ಹೆಚ್ಚು ಇತ್ತು, ಆದರೂ ಮುಸ್ಲಿಂ ಜನತೆಯಲ್ಲಿ ಬಹುಸಂಖ್ಯಾತರು ಹಿಂದೂಗಳಿಗಿಂತ ಹೆಚ್ಚಾಗಿ ತಾವೇ ಮುಸ್ಲಿಂ ಹಿತರಕ್ಷಕರೆಂದು ಬಂದ ತಮ್ಮ ಹಳೆಯ ಸ್ಥಳೀಯ ಮುಸ್ಲಿಂ ಶ್ರೀಮಂತರ ನಾಯಕತ್ವದ ಕಡೆಗೇ ಒಲಿದರು.

ಅಲ್ಪ ಸಂಖ್ಯಾಕರ ಬೇಡಿಕೆಗಳಿಗೆ ಮನ್ನಣೆಕೊಟ್ಟು ಬಹು ಸಂಖ್ಯಾತರ ಕಾರ್ಯ ನೀತಿಯಿಂದ ರಕ್ಷಿಸು ವುದೇ ಕೋಮುವಾರು ಪ್ರಶ್ನೆಯಾಯಿತು. ಭಾರತದಲ್ಲಿನ ಅಲ್ಪ ಸಂಖ್ಯಾತರು ಯೂರೋಪಿನಲ್ಲಿರುವಂತೆ ಭಿನ್ನ ಜನಾಂಗ ಅಥವ ರಾಷ್ಟ್ರದವರಲ್ಲ, ಭಿನ್ನ ಧರ್ಮದವರು. ಜನಾಂಗ ದೃಷ್ಟಿಯಿಂದ ಭಾರತದಲ್ಲಿ ವಿಚಿತ್ರ ಕುಲ ಬೆರಕೆಯಾಗಿದೆ. ಭಾರತದಲ್ಲಿ ಜನಾಂಗ ಪ್ರಶ್ನೆ ಯಾವಾಗಲೂ ಎದ್ದೂ ಇಲ್ಲ. ಏಳುವಂತೆಯೂ ಇಲ್ಲ. ಧರ್ಮವು ಜನಾಂಗಪ್ರಶ್ನೆಯನ್ನು ಮೀರಿದ್ದು. ಜನಾಂಗಗಳ ಬೆರಕೆಯಾಗಿ ಅದನ್ನು ಗುರುತಿಸುವುದು ಸಹ ಕಷ್ಟವಾಗಿದೆ. ಮತಾಂತರ ಆಗುತ್ತಲೇ ಇರುವುದರಿಂದ ಧರ್ಮದ ಬಂಧನ ಶಾಶ್ವತವಾದುದಲ್ಲ. ಮತಾಂತರ ಹೊಂದಿದ ಮಾತ್ರಕ್ಕೆ ಆ ವ್ಯಕ್ತಿಯು ತನ್ನ ಜನಾಂಗ ಸಂಸ್ಕೃತಿ ಅಥವ ಭಾಷಾಸಂಪತ್ತನ್ನು ಕಳೆದುಕೊಳ್ಳುವು ದಿಲ್ಲ. ಧರ್ಮದ ಹೆಸರನ್ನು ಎತ್ತಿಕೊಂಡು ಬಹಳ ಉಪಯೋಗಿಸುತ್ತಿದ್ದರೂ ಈಚೆಗೆ ಭಾರತದ ರಾಜ ಕೀಯದಲ್ಲಿ ಧರ್ಮಕ್ಕೆ ಯಾವ ಪ್ರಾಮುಖ್ಯತೆಯೂ ದೊರೆತಿಲ್ಲ. ಪರಸ್ಪರ ಧರ್ಮ ಸಹಿಷ್ಣುತೆ ಇರುವುದ ರಿಂದ ಧರ್ಮಭಿನ್ನತೆಯಿಂದ ಯಾವ ತೊಂದರೆಯೂ ಆಗಿಲ್ಲ. ರಾಜಕೀಯ ವಿಷಯಗಳಲ್ಲಿ ಧರ್ಮದ ಸೋಗಿನಲ್ಲಿ ಕೋಮುವಾರು ಭಾವನೆ ಬೆಳೆಯುತ್ತಿದೆ. ರಾಜಕೀಯ ಅಧಿಕಾರ ಮತ್ತು ಆ ಮೂಲಕ ತನ್ನ ಪಂಗಡದವರಿಗೆ ಸಹಾಯ ಮಾಡಬೇಕೆಂಬ ಸಂಕುಚಿತ ಭಾವನೆ ಬೆಳೆಯುತ್ತಿದೆ.

ಸಂಬಂಧ ಪಟ್ಟ ಎಲ್ಲ ಪಂಗಡಗಳನ್ನೂ ಸೇರಿಸಿ ಅವರ ಸಮ್ಮತಿಯಿಂದ ಈ ಕೋಮುವಾರು ಪ್ರಶ್ನೆ ಬಿಡಿಸಲು ಕಾಂಗ್ರೆಸ್ಸೂ ಮತ್ತು ಇತರ ಸಂಸ್ಥೆಗಳೂ ಮೇಲಿಂದ ಮೇಲೆ ಪ್ರಯತ್ನಮಾಡಿದವು. ಕೆಲವು ಬಾರಿ ಸ್ವಲ್ಪ ಯಶಸ್ಸೂ ದೊರೆಯಿತು. ಆದರೆ ಇದ್ದ ಮುಖ್ಯ ತೊಂದರೆ ಎಂದರೆ ಬ್ರಿಟಿಷ್ ಸರಕಾರ ಮತ್ತು ಅದರ ನೀತಿ. ರಾಜಕೀಯ ಚಳವಳಿಗೆ ಬೆಂಬಲ ಕೊಟ್ಟು ತಮ್ಮ ವಿರುದ್ಧವಾಗಿ ಜನಶಕ್ತಿ ಹೆಚ್ಚಿ ಸುವ ಯಾವ ಒಪ್ಪಂದವನ್ನೂ ಅವರು ಸಹಿಸದಾದರು. ಅದೊಂದು ತ್ರಿಕೋಣ ಸಮಸ್ಯೆಯಾಗಿ ಅನುಕೂಲ

ತೋರಿದಾಗ ತಮಗೆ ಬೇಕಾದವರಿಗೆ ಬೆನ್ನು ತಟ್ಟಿ ಸಹಾಯಮಾಡಿ ಒಬ್ಬರಮೇಲೊಬ್ಬರನ್ನು ಎತ್ತುಗಟ್ಟು ವುದೇ ಅವರ ನೀತಿಯಾಗಿತ್ತು. ಇತರ ಪಕ್ಷಗಳು ಬುದ್ಧಿವಂತರಿದ್ದಿದ್ದರೆ ಈ ತೊಂದರೆ ನಿವಾರಿಸಿಕೊಳ್ಳ ಬಹುದಿತ್ತು. ಆದರೆ ಆ ವಿವೇಕವಾಗಲಿ ದೂರದೃಷ್ಟಿಯಾಗಲಿ ಒದಲಿಲ್ಲ. ಒಪ್ಪಂದವಾಯಿತೆಂದು ತೋರುವ ಸಮಯದಲ್ಲಿ ಸರಕಾರವು ಮಧ್ಯೆ ಪ್ರವೇಶಮಾಡಿ ಎಲ್ಲವನ್ನೂ ತಲೆಕೆಳಗೆ ಮಾಡಿ ಬಿಡುತ್ತಿತ್ತು.

ಅಲ್ಪ ಸಂಖ್ಯಾತರ ರಕ್ಷಣೆಗೆ ಅಂತರ ರಾಷ್ಟ್ರೀಯ ಸಂಘದ ನಿರ್ಣಯದಂತೆ ಸರ್ವಸಾಮಾನ್ಯ ವಿಧಿಗಳನ್ನು ನಿರ್ಮಿಸಲು ಯಾವ ಆಕ್ಷೇಪಣೆಯೂ ಇರಲಿಲ್ಲ. ಇನ್ನೂ ಹೆಚ್ಚಿನ ರಕ್ಷಣೆಯನ್ನೇ ಒಪ್ಪಿ ಒದಗಿಸಲಾಗಿತ್ತು. ಅಲ್ಪಸಂಖ್ಯಾತರ ಧರ್ಮ, ಸಂಸ್ಕೃತಿ, ಭಾಷೆ, ವ್ಯಕ್ತಿ ಮತ್ತು ಪಂಗಡದ ಮೂಲಭೂತ ಹಕ್ಕುಗಳು ಇವೆಲ್ಲಕ್ಕೂ ರಕ್ಷಣೆಕೊಡಲು ಒಪ್ಪಲಾಗಿತ್ತು. ಪ್ರಜಾಪ್ರಭುತ್ವತತ್ವದ ತಳಹದಿಯಮೇಲೆ ರಚಿಸುವ ಸಂವಿಧಾನದಲ್ಲಿ ಎಲ್ಲರಿಗೂ ಅನ್ವಯಿಸುವಂತೆ ಈ ಮೂಲಭೂತ ಹಕ್ಕುಗಳನ್ನು ಒದಗಿಸುವುದಾಗಿ ಭರವಸೆ ಕೊಡಲಾಯಿತು. ಇವೆಲ್ಲಕ್ಕೂ ಹೆಚ್ಚಾಗಿ ಭಾರತದ ಇತಿಹಾಸವೆಂದರೆ ಪರಧರ್ಮ ಸಹಿಷ್ಣುತೆಯ ಇತಿಹಾಸ; ಅಲ್ಪಸಂಖ್ಯಾತರ ಮತ್ತು ವಿದೇಶೀಯರ ಪ್ರೋತ್ಸಾಹದ ಇತಿಹಾಸ. ಯೂರೋಪಿನ ಧರ್ಮಾಂಧತೆಯ ಯುದ್ಧಗಳು ಮತ್ತು ಪರಧರ್ಮೀಯರ ಹಿಂಸೆಗೆ ಸರಿತೂಗುವ ನಿದರ್ಶನ ಒಂದೂ ಇಲ್ಲಿ ದೊರೆಯುವುದಿಲ್ಲ. ಆದ್ದರಿಂದ ಪರಧರ್ಮ ಮತ್ತು ಪರಸಂಸ್ಕೃತಿ ಸಹಿಷ್ಣುತೆಯನ್ನು ಪರದೇಶಗಳಿಂದ ಭಾರತ ಕಲಿಯಬೇಕಾದುದು ಏನೂ ಇರಲಿಲ್ಲ. ಅವು ಭಾರತೀಯರ ಸಹಜಗುಣಗಳಾಗಿದ್ದವು. ವೈಯಕ್ತಿಕ ಮತ್ತು ರಾಜಕೀಯ ಹಕ್ಕುಗಳು ಮತ್ತು ಮೂಲಭೂತ ಹಕ್ಕುಗಳ ವಿಷಯದಲ್ಲಿ ಫ್ರೆಂಚ್ ಮತ್ತು ಅಮೆರಿಕೆಯ ಕ್ರಾಂತಿಗಳಿಂದ, ಬ್ರಿಟಿಷ್ ಪಾರ್ಲಿಮೆಂಟಿನ ಸಂವಿಧಾನದ ಇತಿಹಾಸದಿಂದ ಪಾಠಕಲಿಯಲು ಸಿದ್ಧರಿದ್ದೆವು. ಅನಂತರ ಬಂದ ಸಮಾಜವಾದ ಮತ್ತು ಸೋವಿಯಟ್ ಕ್ರಾಂತಿಗಳು ನಮ್ಮ ಆರ್ಥಿಕಭಾವನೆಗಳಮೇಲೆ ಪ್ರಬಲ ಪರಿಣಾಮಮಾಡಿದವು.

ವ್ಯಕ್ತಿ ಮತ್ತು ಪಂಗಡಗಳ ಹಕ್ಕುಗಳಿಗೆ ಪೂರ್ಣರಕ್ಷಣೆಕೊಡುವದಲ್ಲದೆ ವ್ಯಕ್ತಿ ಮತ್ತು ಪಂಗಡಗಳ ಪೂರ್ಣವಿಕಾಸಕ್ಕೆ ಸಮಾಜದಲ್ಲಿನ ಎಲ್ಲ ಸಾಂಪ್ರದಾಯಕ ನಿರ್ಬಂಧಗಳನ್ನೂ ನಿರ್ಮೂಲಮಾಡಲು ರಾಷ್ಟ್ರವೂ ಮತ್ತು ಖಾಸಗಿ ಸಂಸ್ಥೆಗಳೂ ಎಲ್ಲ ಪ್ರಯತ್ನಮಾಡಬೇಕೆಂದೂ, ವಿದ್ಯೆ ಮತ್ತು ಆರ್ಥಿಕ ಪ್ರಗತಿಯಲ್ಲಿ ಹಿಂದೆ ಉಳಿದಪಂಗಡಗಳಿಗೆ ಆದಷ್ಟುಬೇಗ ತಮ್ಮ ನ್ಯೂನತೆ ಕಳೆದುಕೊಂಡು ಮುಂದೆಬರಲು ಸಹಾಯ ಮಾಡಬೇಕೆಂದೂ ಒಪ್ಪಿದೆವು. ಹೆಂಗಸರಿಗೆ ಗಂಡಸರಂತೆ ಸಮಾನ ನಾಗರಿಕ ಹಕ್ಕು ಇರಬೇಕೆಂದು ಸಹ ತೀರ್ಮಾನಿಸಿದೆವು.

ಇನ್ನು ಉಳಿದುದೇನು ? ಬಹು ಸಂಖ್ಯಾತ ಪಂಗಡದವರು ರಾಜಕೀಯದಲ್ಲಿ ಅಲ್ಪಸಂಖ್ಯಾತರನ್ನು ತುಳಿಯಬಹುದೆಂದು. ಬಹು ಸಂಖ್ಯಾತರೆಂದರೆ ರೈತರು ಮತ್ತು ಶ್ರಮಜೀವಿಗಳು; ಅವರಲ್ಲಿ ಎಲ್ಲಮತದವರೂ ಇದ್ದರು; ಬಹುಕಾಲದಿಂದ ಅವರೆಲ್ಲರನ್ನು ತುಳಿದವರು ಬ್ರಿಟಿಷರು ಮಾತ್ರವಲ್ಲದೆ ಭಾರತೀಯ ಶ್ರೀಮಂತರೂ ಅವರೊಂದಿಗೆ ಸೇರಿದ್ದರು. ಧರ್ಮ ಮತ್ತು ಸಂಸ್ಕೃತಿ ರಕ್ಷಣೆಯ ಭರವಸೆ ದೊರೆತಮೇಲೆ ಉಳಿದ ಮುಖ್ಯ ಪ್ರಶ್ನೆ ಎಂದರೆ ಆರ್ಥಿಕಪ್ರಶ್ನೆ. ವ್ಯಕ್ತಿಯ ಆರ್ಥಿಕ ಪ್ರಶ್ನೆಗೂ ಅವನ ಧರ್ಮಕ್ಕೂ ಯಾವ ಸಂಬಂಧವೂ ಇಲ್ಲ. ಆರ್ಥಿಕ ಘರ್ಷಣೆಗಳಿಗೆ ಅವಕಾಶವಿರುವುದು ಸಹಜ. ಆದರೆ ಆಸ್ತಿರಕ್ಷಣೆಯ ಪ್ರಶ್ನೆ ಇಲ್ಲದೆ ಧರ್ಮದ ಹೆಸರಿನಲ್ಲಿ ಘರ್ಷಣೆಗೆ ಅವಕಾಶವೇ ಇಲ್ಲ. ಆದರೂ ಜನರ ಮನಸ್ಸು ಕೋಮುವಾರು ಭಿನ್ನತೆಯ ಹಿಂದೆಯೇ ಓಡಲಾರಂಭಿಸಿತು; ಕೋಮುವಾರು ಸಂಸ್ಥೆಗಳೂ ಸರ್ಕಾರವೂ ಅದಕ್ಕೆ ಪ್ರೋತ್ಸಾಹಕೊಟ್ಟವು; ಬಹು ಸಂಖ್ಯಾತ ಹಿಂದುಗಳು ತಮ್ಮನ್ನು ತುಳಿಯುತ್ತಾರೆಂಬ ಭಾವನೆ ಮುಸ್ಲಿಂರಲ್ಲಿ ಬಲಗೊಳ್ಳಲಾರಂಭಿಸಿತು. ಮುಸ್ಲಿಮರು ಕೆಲವು ಪ್ರಾಂತಗಳಲ್ಲಿ ಕೇಂದ್ರೀಕೃತರಾಗಿ ಬಹುಸಂಖ್ಯಾತರಿದ್ದು ಪ್ರಾಂತಗಳಿಗೆ ಪೂರ್ಣ ಸ್ವಾಯತ್ತೆಯು ದೊರೆಯತಕ್ಕದಿದ್ದುದರಿಂದ ಅಷ್ಟು ಪ್ರಬಲ ಅಲ್ಪಸಂಖ್ಯಾತ ಪಂಗಡವನ್ನು ಬಹು ಸಂಖ್ಯಾತರು ತುಳಿಯಲು ತಾನೇ ಹೇಗೆ ಸಾಧ್ಯ ಎಂಬುದು ಅರ್ಥವಾಗಲಿಲ್ಲ. ಆದರೆ ಭಯಗ್ರಸ್ತರಿಗೆ ವಿಚಾರಪರತೆ ಎಲ್ಲಿ ?

ಮೊದಲು ಮುಸ್ಲಿಮರಿಗೆ ಅನಂತರ ಇತರ ಪಂಗಡಗಳಿಗೆ ಪ್ರತ್ಯೇಕ ಚುನಾವಣಾ ಪದ್ಧತಿ ಏರ್ಪಡಿಸಿ ಅವರ ಸಂಖ್ಯೆಗಿಂತ ಹೆಚ್ಚು ಪ್ರಾತಿನಿಧ್ಯ ಒದಗಿಸಲಾಯಿತು. ಆದರೆ ಈ ವಿಶೇಷ ಪ್ರಾತಿನಿಧ್ಯದಿಂದ ಸಹ

ಅಲ್ಪಸಂಖ್ಯಾತರು ಬಹು ಸಂಖ್ಯಾತರಾಗಲು ಸಾಧ್ಯವಿರಲಿಲ್ಲ. ಪ್ರತ್ಯೇಕ ಚುನಾವಣೆಗಳಿಂದ ಅಲ್ಪ ಸಂಖ್ಯಾತರಿಗೆ ಹಾನಿಯಾಯಿತೇ ಹೊರತು ಉಪಯೋಗವಾಗಲಿಲ್ಲ. ಬಹು ಸಂಖ್ಯಾತರಿಗೆ ಅವರ ಚುನಾವಣೆಯಲ್ಲಿ ಯಾವ ಆಸಕ್ತಿಯೂ ಇರಲಿಲ್ಲ. ಪ್ರತಿಯೊಬ್ಬ ಅಭ್ಯರ್ಥಿಯೂ ಎಲ್ಲ ಪಂಗಡಗಳ ಸಲಹೆ ಕೇಳಬೇಕಾದ ಜಂಟಿ ಚುನಾವಣೆಯಲ್ಲಿ ಪರಸ್ಪರ ವಿಚಾರವಿನಿಮಯಕ್ಕೆ, ಮಾತುಕತೆಗೆ ಅವಕಾಶವಿದೆ; ಪ್ರತ್ಯೇಕ ಚುನಾವಣೆಯಲ್ಲಿ ಇದಕ್ಕೆ ಅವಕಾಶವೇ ಇಲ್ಲ. ಬಹು ಸಂಖ್ಯಾಕರಿಗೂ, ಭಿನ್ನಧರ್ಮೀಯ ಅಲ್ಪ ಸಂಖ್ಯಾತರಿಗೂ ಯಾವುದಾದರೂ ವಿಶೇಷ ಪ್ರಶ್ನೆಯಮೇಲೆ ಭಿನ್ನಾಭಿಪ್ರಾಯ ಒದಗಿದರೆ ಆ ಪ್ರಶ್ನೆಯನ್ನು ಬಹುಮತದಿಂದ ತೀರ್ಮಾನಿಸದೆ ಯಾವುದಾದರೂ ನಿಷ್ಪಕ್ಷಪಾತ ನ್ಯಾಯಾಲಯ ಅಥವ ಅಂತರ ರಾಷ್ಟ್ರೀಯ ನ್ಯಾಯಾಲಯದ ತೀರ್ಪಿಗೆ ಬಿಡಬೇಕೆಂದೂ, ಆ ತೀರ್ಮಾನವನ್ನು ಇಬ್ಬರೂ ಒಪ್ಪಬೇಕೆಂದೂ ಸಹ ಕಾಂಗ್ರೆಸ್ ಹೇಳಿತು.

ಪ್ರಜಾಸತ್ತೆಯ ಆಡಳಿತದಲ್ಲಿ ಕೋಮುವಾರು ಅಲ್ಪ ಸಂಖ್ಯಾಕರಿಗೆ ಅಥವ ಪಂಗಡಕ್ಕೆ ಇದಕ್ಕಿಂತ ಏನು ಹೆಚ್ಚು ರಕ್ಷಣೆಕೊಡಬೇಕೋ ನನಗೆ ತಿಳಿಯದು. ಕೆಲವು ಪ್ರಾಂತಗಳಲ್ಲಿ ಮುಸ್ಲಿಮರೇ ಬಹು ಸಂಖ್ಯೆಯಲ್ಲಿ ಇದ್ದರು. ಆ ಪ್ರಾಂತಗಳಿಗೆ ಪೂರ್ಣ ಪ್ರಾಂತಾಡಳಿತ ದೊರೆತು ಇದ್ದಕಾರಣ ಅಖಿಲಭಾರತದ ದೃಷ್ಟಿಗೆ ಹೊಂದಿಕೊಂಡು ತಮ್ಮ ಪ್ರಾಂತದಲ್ಲಿ ತಮಗೆ ಇಷ್ಟಬಂದಂತೆ ನಡೆಯಲು ಪೂರ್ಣ ಅಧಿಕಾರವಿತ್ತು. ಕೇಂದ್ರ ಸರಕಾರದಲ್ಲಿ ಮುಸ್ಲಿಮರಿಗೆ ಬಲವಾದ ಪ್ರಾತಿನಿಧ್ಯ ಸಿದ್ಧವಿದ್ದೇ ಇತ್ತು. ಸಂಖ್ಯಾಕ ಮುಸ್ಲಿಂ ಪ್ರಾಂತಗಳಲ್ಲಿ ಈ ಪ್ರಶ್ನೆ ತಿರುಗಮುರುಗವಾಯಿತು. ಅಲ್ಲಿ ಹಿಂದುಗಳು ಮತ್ತು ಸೀಖ್ಖರು ರಕ್ಷಣೆ ಕೇಳಲಾರಂಭಿಸಿದರು. ಈ ರೀತಿ ಪಂಜಾಬದಲ್ಲಿ ಹಿಂದೂ-ಮುಸ್ಲಿಂ-ಸೀಖ ಈ ರೀತಿ ತ್ರಿಕೋಣ ಪ್ರಶ್ನೆಯಾಯಿತು. ಮುಸ್ಲಿಮರಿಗೆ ಪ್ರತ್ಯೇಕ ಚುನಾವಣೆ ಕೊಟ್ಟರೆ ತಮಗೂ ವಿಶೇಷ ರಕ್ಷಣೆ ಕೊಡಬೇಕೆಂದರು. ಒಂದು ಬಾರಿ ಪ್ರತ್ಯೇಕ ಚುನಾವಣೆ ಆಚರಣೆಗೆ ಬಂದಮೇಲೆ ಅದಕ್ಕೆ ಗಡಿಯಾಗಲಿ ಮಿತಿಯಾಗಲಿ ಎಲ್ಲಿ? ಒಂದು ಗುಂಪಿಗೆ ವಿಶೇಷ ಪ್ರಾತಿನಿಧ್ಯ ಕೊಡಬೇಕಾದರೆ ಇನ್ನೊಂದು ಗುಂಪಿನ ಪ್ರಾತಿನಿಧ್ಯ ಕಸಿದುಕೊಳ್ಳಲೇಬೇಕು; ಆ ಗುಂಪಿನ ಜನಸಂಖ್ಯೆಯ ಪ್ರಮಾಣಕ್ಕನುಸಾರ ಬರಬೇಕಾದ ಪ್ರಾತಿನಿಧ್ಯ ಕಡಮೆಯಾಗಲೇ ಬೇಕು. ಇದರಿಂದ ಅತಿ ವಿಚಿತ್ರ ಪರಿಣಾಮವಾಯಿತು; ಅದರಲ್ಲೂ ಯುರೋಪಿಯನರಿಗೆ ವಿಶೇಷ ಪ್ರಾತಿನಿಧ್ಯವಿದ್ದ ಬಂಗಾಲದಲ್ಲಿ ಸಾಮಾನ್ಯ ಕ್ಷೇತ್ರಗಳ ಸಂಖ್ಯೆಯು ಹಾಸ್ಯಾಸ್ಪದವಾಯಿತು. ಭಾರತದ ರಾಜಕೀಯ ಮತ್ತು ಸ್ವಾತಂತ್ರ್ಯದ ಹೋರಾಟದಲ್ಲಿ ಪ್ರಮುಖ ಪಾತ್ರ ವಹಿಸಿದ್ದ ಬಂಗಾಲದ ನಾಯಕರಿಗೆ ಪ್ರಾಂತ ಶಾಸನ ಸಭೆಯಲ್ಲಿನ ತಮ್ಮ ಅತ್ಯಲ್ಪ ಪ್ರಾತಿನಿಧ್ಯದಿಂದ ತಮ್ಮ ರೆಕ್ಕೆಯನ್ನೇ ಕತ್ತರಿಸಿರುವುದಾಗಿಯೂ, ಅದರಿಂದ ಯಾವ ಪ್ರಯೋಜನವೂ ಇಲ್ಲವೆಂದೂ ಇದೆಲ್ಲವನ್ನೂ ಶಾಸನದ ಮೂಲಕ ನಿಬಂಧಿಸಿರುವುದಾಗಿಯೂ ಮನವರಿಕೆಯಾಯಿತು.

ಕಾಂಗ್ರೆಸ್ಸು ಅನೇಕ ತಪ್ಪುಗಳನ್ನು ಮಾಡಿದೆ. ಆದರೆ ಅವೆಲ್ಲ ಕಾರ್ಯಪ್ರವೇಶದಲ್ಲಿ ಅಥವ ಕಾರ್ಯಾರಂಭದಲ್ಲಿ. ಕೇವಲ ರಾಜಕೀಯ ಕಾರಣಗಳಿಗಾಗಿ ಪ್ರಗತಿಗೆ ಅಡ್ಡಬಂದ ಈ ಕೋಮುವಾರು ಪ್ರಶ್ನೆಯನ್ನು ಏನಾದರೂ ಮಾಡಿ ಇತ್ಯರ್ಥಪಡಿಸಬೇಕೆಂದು ಕಾಂಗ್ರೆಸ್ ಬಹಳ ಕಾತರವಿತ್ತು. ಆದರೆ ಅದೇ ಕೋಮುವಾರು ಸಂಸ್ಥೆಗಳಲ್ಲಿ ಇರಲಿಲ್ಲ. ತಮ್ಮ ಪಂಗಡದ ವಿಶೇಷ ಬೇಡಿಕೆಗಳಿಗೆ ಒತ್ತಾಯ ಮಾಡುತ್ತ ಸರ್ಕಾರದ ಪ್ರಾಶಸ್ತ್ಯ ಪಡೆದೇ ಅದು ಬಾಳಬೇಕಾಗಿತ್ತು. ಇದರಿಂದ ಅವುಗಳಲ್ಲಿ ಒಂದು ಬಗೆಯ ಹಕ್ಕುದಾರಿ ಭಾವನೆ ಬೆಳೆಯಲಾರಂಭಿಸಿತು. ಕಾಂಗ್ರೆಸ್ಸಿನಲ್ಲಿ ಹಿಂದೂಗಳೇ ಬಹುಸಂಖ್ಯಾಕರಿದ್ದರೂ, ಮುಸ್ಲಿಮರ ಸೀಖರ ಕ್ರಿಶ್ಚಿಯನರ ಸಂಖ್ಯೆ ದೊಡ್ಡದಿತ್ತು. ಆದ್ದರಿಂದ ರಾಷ್ಟ್ರೀಯ ಭಾವನೆಯಿಂದ ಕದಲುವುದು ಅದಕ್ಕೆ ಸಾಧ್ಯವಿರಲಿಲ್ಲ. ರಾಷ್ಟ್ರದ ಸ್ವಾತಂತ್ರ್ಯವೂ ಮತ್ತು ಸರ್ವ ತಂತ್ರ ಸ್ವತಂತ್ರ ಪ್ರಜಾಸತ್ತಾತ್ಮಕ ರಾಜ್ಯಸ್ಥಾಪನೆಯೂ ಮುಖ್ಯ ಗುರಿಯಾಯಿತು. ಅತಿ ವಿಶಾಲವೂ ವೈವಿಧ್ಯ ಭರಿತವೂ ಆದ ಭಾರತದಲ್ಲಿ ಬಹುಮತಕ್ಕೇ ಪೂರ್ಣ ಅಧಿಕಾರ ಕೊಟ್ಟು ಅಲ್ಪ ಸಂಖ್ಯಾತರನ್ನು ಅದುಮಲು ಅವಕಾಶವಿರುವ ಸರ್ವ ಸಾಮಾನ್ಯ ಪ್ರಜಾಪ್ರಭುತ್ವ ಸ್ಥಾಪಿಸುವುದು ಸಾಧ್ಯವಿದ್ದರೂ ಅದು ಯೋಗ್ಯವೂ ಅಲ್ಲ, ಉಚಿತವೂ ಅಲ್ಲ ಎಂದು ಕಾಂಗ್ರೆಸ್ ನಿಶ್ಚಯಿಸಿತ್ತು. ಒಗ್ಗಟ್ಟು ದೇಶದಲ್ಲಿ ಅತ್ಯಗತ್ಯವಿತ್ತು; ಆದರೆ ಭಾರತೀಯ ಜೀವನದ ಸಂಸ್ಕೃತಿ ಸಂಪತ್ತನ್ನೂ

ವೈವಿಧ್ಯವನ್ನೂ ನಾಶಮಾಡಿ ಒಂದೇ ಮಾದರಿಯಲ್ಲಿ ಮಾರ್ಪಡಿಸುವ ಅವಶ್ಯಕತೆ ಕಾಣಲಿಲ್ಲ. ಆದ್ದರಿಂದ ಪ್ರಾಂತದಲ್ಲಿ ಆದಷ್ಟು ಆಡಳಿತ ಸ್ವಾತಂತ್ರ್ಯವಿರಬೇಕೆಂದೂ, ಸಂಸ್ಕೃತಿಯ ಬೆಳವಣಿಗೆಗೆ, ವ್ಯಕ್ತಿ ಮತ್ತು ಪಂಗಡದ ಸ್ವಾತಂತ್ರ್ಯಕ್ಕೆ ಅವಕಾಶವಿರಬೇಕೆಂದೂ ಒಪ್ಪಿದೆವು.

ಆದರೆ ರಾಷ್ಟ್ರದ ಒಗ್ಗಟ್ಟು ಮತ್ತು ಪ್ರಜಾಪ್ರಭುತ್ವ ಈ ಎರಡು ವಿಷಯಗಳಲ್ಲಿ ಮಾತ್ರ ಕೂದಲೆಳೆಯಷ್ಟೂ ಕದಲಲು ಕಾಂಗ್ರೆಸ್ಸಿಗೆ ಸಾಧ್ಯವಿರಲಿಲ್ಲ. ಅವೇ ಕಾಂಗ್ರೆಸ್ಸಿನ ತಳಹದಿಯೂ, ಕಳೆದ ಐವತ್ತು ವರ್ಷಗಳಿಂದ ಕಾಂಗ್ರೆಸ್ಸಿನ ಪ್ರಮುಖ ಧ್ಯೇಯಗಳೂ ಆಗಿದ್ದವು. ನನಗೆ ತಿಳಿದಂತೆ ಪ್ರಪಂಚದ ಸಂಸ್ಥೆಗಳಲ್ಲೆಲ್ಲ, ತತ್ತ್ವದಲ್ಲಿ ಮತ್ತು ಅನುಷ್ಠಾನದಲ್ಲಿ ಸಹ ಭಾರತದ ಕಾಂಗ್ರೆಸ್ ಒಂದು ದೊಡ್ಡ ಪ್ರಜಾಸತ್ತಾತ್ಮಕ ಸಂಸ್ಥೆ. ದೇಶಾದ್ಯಂತ ದಶ ಸಹಸ್ರ ಗಟ್ಟಲೆ ಹರಡಿರುವ ಸಮಿತಿಗಳ ಮೂಲಕ ಜನರಲ್ಲಿ ಪ್ರಜಾಪ್ರಭುತ್ವದ ರೀತಿ ನೀತಿಗಳನ್ನು ಹರಡಿ ಅದ್ಭುತ ಯಶಸ್ಸು ಪಡೆದಿತ್ತು. ಉನ್ನತ ಲೋಕಪ್ರಿಯ ವ್ಯಕ್ತಿ ಗಾಂಧೀಜಿಯ ಅದ್ಭುತ ಪ್ರಭಾವಕ್ಕೆ ಒಳಗಾಗಿದ್ದರೂ ಕಾಂಗ್ರೆಸ್ಸಿನ ಪ್ರಜಾಸತ್ತಾತ್ಮಕ ನೀತಿಗೆ ಧಕ್ಕೆ ಬರಲಿಲ್ಲ. ಕಷ್ಟ ಸಮಯದಲ್ಲಿ ಹೋರಾಟ ಕಾಲದಲ್ಲಿ ಇತರ ಎಲ್ಲ ದೇಶಗಳಂತೆ ಏಕೈಕ ನಾಯಕನ ಮಾರ್ಗದರ್ಶಿತ್ವದಲ್ಲಿ ನಡೆಯುವುದು ಅಗತ್ಯವಿತ್ತು. ಕಾಂಗ್ರೆಸ್ಸು ಸರ್ವಾಧಿಕಾರ ಸಂಸ್ಥೆ ಎಂದು ದೂರುವುದು ಮೂಢತನ. ಆದರೆ ಸಾಮಾನ್ಯವಾಗಿ ಆರೋಪಣೆ ಮಾಡಿದ ಬ್ರಿಟಿಷರು ಭಾರತದಲ್ಲಿ ಸರ್ವಾಧಿಕಾರ ಮತ್ತು ನಿರಂಕುಶ ಪ್ರವರ್ತನೆಗೆ ತೌರುಮನೆಯಂತಿದ್ದರು.

ಭಾರತದ ಐಕ್ಯತೆ ಮತ್ತು ಪ್ರಜಾಪ್ರಭುತ್ವವೇ ತನ್ನ ಧ್ಯೇಯವೆಂದು ಬ್ರಿಟಿಷ್ ಸರ್ಕಾರ ಮೊದಲಿನಿಂದಲೂ ತತ್ವಶಃ ಒಪ್ಪಿದೆ. ಭಾರತದ ರಾಜಕೀಯ ಐಕ್ಯತೆ ಸಾಧಿಸಿರುವುದಾಗಿ ಬ್ರಿಟಿಷರು ಬಡಾಯಿ ಕೊಚ್ಚಿಕೊಳ್ಳುತ್ತಿದ್ದರು. ದೇಶಾದ್ಯಂತ ದಾಸ್ಯ ಒಂದೇ ಆ ಐಕ್ಯತೆಯಾಗಿತ್ತು. ಪ್ರಜಾಪ್ರಭುತ್ವದ ರೀತಿ ನೀತಿಗಳನ್ನು ತಮಗೆ ಕಲಿಸುತ್ತಿರುವುದಾಗಿಯೂ ಹೇಳುತ್ತಿದ್ದರು. ಆದರೆ ಅವರ ಕಾರ್ಯನೀತಿ ಮಾತ್ರ ಆ ಐಕ್ಯತೆ ಮತ್ತು ಪ್ರಜಾಪ್ರಭುತ್ವ ನಾಶಮಾಡುವುದೇ ಆಯಿತು. ೧೯೪೦ ನೆ ಆಗಸ್ಟ್ ತಿಂಗಳಲ್ಲಿ ಸೇರಿದ ಕಾಂಗ್ರೆಸ್ ಕಾರ್ಯಸಮಿತಿಯು "ಬ್ರಿಟಿಷ್ ಸರಕಾರದ ನೀತಿಯು ಭಾರತದಲ್ಲಿ ಜನರಲ್ಲಿ ದಂಗೆ ಮತ್ತು ಕಲಹವನ್ನು ಪ್ರೇರಿಸಿ ಪ್ರೋತ್ಸಾಹಿಸುತ್ತಿದೆ" ಎಂದು ಸಾರಿತು. ಬ್ರಿಟಿಷ್ ಸರ್ಕಾರದ ರಾಜಕಾರಣ ಪ್ರಮುಖರು ಭಾರತದಲ್ಲಿ ಪ್ರಜಾಪ್ರಭುತ್ವ ಸಾಧ್ಯವಿಲ್ಲವೆಂದೂ, ಭಾರತದ ಐಕ್ಯತೆಯ ಬದಲು ಬೇರೆ ಯಾವುದಾದರೂ ಹೊಸ ಏರ್ಪಾಟಿಗೆ ಒಪ್ಪುವುದು ಒಳ್ಳೆಯದೆಂದೂ ಹೇಳತೊಡಗಿದರು. ಭಾರತದ ಸ್ವಾತಂತ್ರ್ಯ ಮತ್ತು ಪ್ರಜಾಪ್ರಭುತ್ವದ ಬೇಡಿಕೆಗೆ ಇದೇ ಅವರ ಉತ್ತರವಾಯಿತು. ತಮ್ಮ ಮುಖ್ಯ ಎರಡು ಧ್ಯೇಯ ಸಾಧನೆಯಲ್ಲೂ ಬ್ರಿಟಿಷರು ವಿಮುಖರಾದರೆಂಬುದಕ್ಕೆ ಈ ಉತ್ತರ ಒಂದೇ ಸಾಕು. ಆದರೆ ಅದನ್ನು ಮನಗಾಣಲು ಒಂದೂವರೆ ಶತಮಾನ ಹಿಡಿಯಿತು.

ಎಲ್ಲರಿಗೂ ಒಪ್ಪಿಗೆಯಾದ ಕೋಮುವಾರು ಸಮಸ್ಯಾ ಪರಿಹಾರ ಕಂಡು ಹಿಡಿಯಲು ನಮಗೆ ಸಾಧ್ಯವಾಗಲಿಲ್ಲ. ಈ ಸೋಲಿನ ಪರಿಣಾಮ ನಾವೇ ಅನುಭವಿಸಬೇಕಾದ್ದರಿಂದ ಆ ಸೋಲಿನ ಹೊಣೆಗೂ ನಾವೇ ಜವಾಬ್ದಾರರು. ಆದರೆ ಯಾವುದಾದರೊಂದು ಮುಖ್ಯ ಪ್ರಶ್ನೆಗೆ ಅಥವ ಬದಲಾವಣೆಗೆ ಪ್ರತಿಯೊಬ್ಬನನ್ನೂ ಒಪ್ಪಿಸುವುದು ಯಾರಿಗೆ ತಾನೆ ಸಾಧ್ಯ. ಪಾಳೆಯಗಾರಿಕೆಯ ಶ್ರೀಮಂತರಿಗೆ ಮತ್ತು ಪ್ರತಿಗಾಮಿಗಳಿಗೆ ಯಾವ ಬದಲಾವಣೆಯೂ ಬೇಕಿರಲಿಲ್ಲ. ಇನ್ನು ಕೆಲವರಿಗೆ ರಾಜಕೀಯ, ಆರ್ಥಿಕ, ಸಾಮಾಜಿಕ ಎಲ್ಲ ವಿಷಯಗಳೂ ಪರಿವರ್ತನೆಯಾಗಬೇಕು. ಈ ಎರಡು ಪಂಗಡದ ಮಧ್ಯೆ ನಾನಾ ಬಗೆಯ ಅಭಿಪ್ರಾಯದವರು. ಯಾವುದಾದರೂ ಒಂದು ಸಣ್ಣಪಂಗಡ ಬದಲಾವಣೆ ಅವಶ್ಯವಿಲ್ಲವೆಂದರೆ ಯಾವ ಬದಲಾವಣೆಯೂ ಸಾಧ್ಯವಿಲ್ಲ. ಅಂತಹ ಪಂಗಡಗಳನ್ನು ಎತ್ತಿಕಟ್ಟಿ ಪ್ರೋತ್ಸಾಹಿಸುವುದೇ ಸರಕಾರದ ನೀತಿಯಾದಾಗ ಜನತೆಯಲ್ಲಿ ಆ ಪಂಗಡಕ್ಕೆ ಯಾವ ಬೆಲೆಯೂ ಇಲ್ಲದಿದ್ದರೂ ಅದು ಪ್ರಗತಿಗೆ ಮಾತ್ರ ಅಡ್ಡಿಬರಬಹುದು; ಮತ್ತು ಅಂತಹ ಸಂದರ್ಭದಲ್ಲಿ ಕ್ರಾಂತಿಯಿಂದ ಮಾತ್ರ ಪ್ರಗತಿಯು ಸಾಧ್ಯ. ಕೆಲವರು ಇಲ್ಲಿಯೇ ಹುಟ್ಟಿಬೆಳೆದವರು, ಇನ್ನು ಕೆಲವರು ಬ್ರಿಟಿಷರ ಪ್ರೋತ್ಸಾಹದಿಂದ

ಹುಟ್ಟಿ ಬೆಳೆದವರು. ಈ ರೀತಿ ಭಾರತದಲ್ಲಿ ಅನೇಕ ಪ್ರತಿಗಾಮಿ ಪಾಳೆಯಗಾರಿಕೆಯ ಶಕ್ತಿಗಳು ಇರುವುದು ಸ್ಪಷ್ಟವಾಯಿತು. ಅವರ ಸಂಖ್ಯೆ ಅಲ್ಪವಿದ್ದರೂ ಅವರಿಗೆ ಬ್ರಿಟಿಷರ ಪ್ರೋತ್ಸಾಹವಿತ್ತು.

ಮುಸ್ಲಿಂಲೀಗ್ ಅಲ್ಲದೆ ಮುಸ್ಲಿಮರಲ್ಲೇ ಅನೇಕ ಸಂಸ್ಥೆಗಳು ಹುಟ್ಟಿದವು. ಅವುಗಳಲ್ಲಿ ಭಾರತಾದ್ಯಂತ ಧರ್ಮಗುರುಗಳೂ, ಸಂಪ್ರದಾಯ ಶಿಷ್ಟಪಂಡಿತರೂ ಇದ್ದ ಜಮಾಯತ್-ಉಲ್-ಉಲೇಮ ಬಹಳ ಹಳೆಯದು ಮತ್ತು ಪ್ರಾಮುಖ್ಯವಾದುದು. ಅದರ ದೃಷ್ಟಿ ಸಾಂಪ್ರದಾಯಕವೂ ಧಾರ್ಮಿಕವೂ ಇದ್ದರೂ ರಾಜಕೀಯದಲ್ಲಿ ಮಾತ್ರ ಸಾಮ್ರಾಜ್ಯ ವಿರೋಧಿ ಮತ್ತು ಪ್ರಗತಿಪರ. ರಾಜಕೀಯದಲ್ಲಿ ಅನೇಕ ವೇಳೆ ಕಾಂಗ್ರೆಸ್ಸಿನೊಡನೆ ಸಹಕರಿಸಿತು. ಅವರಲ್ಲಿ ಅನೇಕರು ಕಾಂಗ್ರೆಸ್ ಸದಸ್ಯರೂ ಆಗಿ ಕಾಂಗ್ರೆಸ್ಸಿನಲ್ಲೇ ಕೆಲಸಮಾಡಿದರು. ಅಹ್ರಾರ್ ಸಂಸ್ಥೆ ಅನಂತರ ಹುಟ್ಟಿದರೂ ಪಂಜಾಬದಲ್ಲಿ ಪ್ರಬಲ ಸಂಸ್ಥೆಯಾಗಿತ್ತು. ಅವರೆಲ್ಲರೂ ಕಡಮೆ ಮಟ್ಟದ ಮಧ್ಯಮವರ್ಗದ ಮುಸ್ಲಿಮರಾದ್ದರಿಂದ ಮುಸ್ಲಿಂ ಜನತೆಯ ಬೆಂಬಲವಿತ್ತು. ನೇಕಾರರಾದ ಮೊಮಿನರು ಸಂಖ್ಯೆಯಲ್ಲಿ ಬಹಳ ಇದ್ದರೂ ತೀರ ಬಡವರೂ, ಹಿಂದುಳಿದವರೂ ಆದ ಕಾರಣ ಅವರು ಸುಸಂಘಟಿತರಿರಲಿಲ್ಲ. ಆದರೆ ಅವರೆಲ್ಲರೂ ಲೀಗ್‌ವಿರೋಧಿಗಳು ಮತ್ತು ಕಾಂಗ್ರೆಸ್ ಪ್ರೇಮಿಗಳು. ಶಕ್ತಿ ಇಲ್ಲದ್ದರಿಂದ ರಾಜಕೀಯದಿಂದ ದೂರವಿದ್ದರು. ಬಂಗಾಲದಲ್ಲಿ ಕೃಷಿಕ ಸಭೆ ಇತ್ತು. ಜಮಾಯತ್—ಉಲ್—ಉಲೇಮಾ ಮತ್ತು ಅಹ್ರಾರ್ ಸದಸ್ಯರು ಅನೇಕಬಾರಿ ಕಾಂಗ್ರೆಸ್ ಕೆಲಸದಲ್ಲಿ ಚಳವಳಿಗಳಲ್ಲಿ ಸಹಕರಿಸಿ ಬ್ರಿಟಿಷ್ ಸರ್ಕಾರದೊಂದಿಗೆ ಹೋರಾಡಿ ಕಷ್ಟನಷ್ಟ ಅನುಭವಿಸಿದರು. ಮಾತಿನಲ್ಲಿ ಬಿಟ್ಟು ಬೇರೆ ಯಾವ ರೀತಿಯಲ್ಲೂ ಬ್ರಿಟಿಷರೊಂದಿಗೆ ಹೋರಾಡದ ಪ್ರಮುಖ ಮುಸ್ಲಿಂ ಸಂಸ್ಥೆ ಎಂದರೆ ಮುಸ್ಲಿಂ ಲೀಗ್ ಒಂದೇ. ಮೊದಲಿನಿಂದ ಕೊನೆಯವರೆಗೆ ಎಲ್ಲ ಸಮಯ ಸಂದರ್ಭಗಳಲ್ಲಿ ಮತ್ತು ಅದರ ಸದಸ್ಯ ಸಂಖ್ಯೆ ವಿಶೇಷ ಬೆಳೆದಾಗ ಸಹ ಅದರ ನಾಯಕತ್ವ ಮಾತ್ರ ಶ್ರೀಮಂತರ ಕೈಯಲ್ಲೇ ಇತ್ತು.

ಷಿಯಾ ಮುಸ್ಲಿಮರದೇ ಪ್ರತ್ಯೇಕ ಸಂಸ್ಥೆ ಇತ್ತು. ಅದರ ಉದ್ದೇಶವು ರಾಜಕೀಯ ಬೇಡಿಕೆಗಳನ್ನು ಮುಂದಿಡುವುದೇ ಆಗಿತ್ತು. ಇಸ್ಲಾಮಿನ ಆರಂಭ ದಿನಗಳಲ್ಲಿ ಅರೇಬಿಯಾದಲ್ಲಿ ಖಿಲಾಫತ್ ಉತ್ತರಾಧಿಕಾರ ವಿಷಯ ದೊಡ್ಡ ವ್ಯಾಜ್ಯ ಹುಟ್ಟಿ ಸುನ್ನಿ ಮತ್ತು ಷಿಯಾ ಎಂದು ಎರಡು ಪಂಗಡಗಳಾದವು. ಈ ಒಡಕಿನಲ್ಲಿ ಈಗ ಬೇರೆ ರಾಜಕೀಯ ಯಾವುದೂ ಇಲ್ಲದಿದ್ದರೂ ಎರಡೂ ಪ್ರತ್ಯೇಕ ಉಳಿದಿವೆ. ಇರಾಣ ಬಿಟ್ಟರೆ ಭಾರತದಲ್ಲಿ ಮತ್ತು ಇತರ ಮುಸ್ಲಿಂ ರಾಷ್ಟ್ರಗಳಲ್ಲಿ ಸುನ್ನಿಗಳೇ ಬಹು ಸಂಖ್ಯಾಕರು. ಇರಾಣದಲ್ಲಿ ಷಿಯಾಗಳು ಬಹು ಸಂಖ್ಯಾಕರು. ಈ ಎರಡು ಪಂಗಡಗಳಿಗೂ ಹೊಡೆದಾಟಗಳಾಗಿವೆ. ಭಾರತದಲ್ಲಿ ಷಿಯಾ ಸಂಸ್ಥೆ ಲೀಗಿನಿಂದ ಭಿನ್ನಾಭಿಪ್ರಾಯ ಹೊಂದಿ ದೂರ ನಿಂತಿತು. ಸಂಯುಕ್ತ ಚುನಾವಣಾ ಪದ್ಧತಿಗೆ ಅದು ಬೆಂಬಲಕೊಟ್ಟಿತು. ಆದರೆ ಲೀಗಿನಲ್ಲೂ ಕೆಲವರು ಪ್ರಮುಖ ಷಿಯಾಗಳಿದ್ದಾರೆ.

ಮುಸ್ಲಿಂಲೀಗ್ ಒಂದನ್ನು ಬಿಟ್ಟು ಈ ಎಲ್ಲ ಸಂಸ್ಥೆಗಳು ಮತ್ತು ಇನ್ನು ಕೆಲವರು ಅಜಾದ್ ಮುಸ್ಲಿಂ ಸಮ್ಮೇಲನ ಸೇರಿಸಿ ಮುಸ್ಲಿಂ ಲೀಗಿಗೆ ವಿರೋಧ ಪಕ್ಷ ಒಂದನ್ನು ಕಟ್ಟಿದರು. ೧೯೪೦ ನೆಯ ಡಿಸೆಂಬರ್‌ನಲ್ಲಿ ನಡೆದ ಅದರ ಪ್ರಥಮ ಸಮ್ಮೇಲನದಲ್ಲಿ ಒಳ್ಳೆಯ ಪ್ರಾತಿನಿಧ್ಯವಿದ್ದು ಅಧಿವೇಶನವು ತುಂಬ ಯಶಸ್ವಿಯಾಗಿ ಕೊನೆಗಂಡಿತು.

ಮುಸ್ಲಿಂ ಲೀಗಿಗೆ ಪ್ರತಿಯಾಗಿ ಹಿಂದೂಗಳ ಮುಖ್ಯ ಕೋಮುವಾರು ಸಂಸ್ಥೆ ಹಿಂದೂ ಮಹಾಸಭೆ. ಆದರೆ ಅದಕ್ಕೆ ಅಷ್ಟು ಪ್ರಾಮುಖ್ಯತೆ ಇಲ್ಲ. ಲೀಗಿನಂತೆ ಅದು ಸಹ ಉಗ್ರ ಕೋಮುವಾರು ಭಾವನೆಯ ಸಂಸ್ಥೆ. ಆದರೆ ತನ್ನ ಸಂಕುಚಿತ ಕೋಮುವಾರು ನೀತಿಗೆ ರಾಷ್ಟ್ರೀಯ ಸೋಗನ್ನು ಕೊಡಲು ಪ್ರಯತ್ನ ಮಾಡುತ್ತಿದೆ; ಅದರ ದೃಷ್ಟಿ ಎಲ್ಲ ಪ್ರಗತಿಗಿಂತ ಹೆಚ್ಚಾಗಿ ಪುನರುಜ್ಜೀವನದ ಕಡೆಗೆ. ಮುಸ್ಲಿಂ ಲೀಗ್ ಮುಖಂಡರಂತೆ ಹಿಂದೂ ಮಹಾಸಭೆಯ ನಾಯಕರೂ ಜವಾಬ್ದಾರಿ ಇಲ್ಲದ ಆವೇಶಪೂರಿತ ಭಾಷಣಗಳನ್ನು ಮಾಡುತ್ತಿರುವುದು ಬಹು ಶೋಚನೀಯ. ಎರಡು ಕಡೆಯೂ ವಾಗ್ಯುದ್ಧಗಳು; ಸದಾ ಜಗಳಕ್ಕೆ ಕಾಲುಕೆರೆಯುತ್ತಿವೆ. ಅದೇ ಒಂದು ಯುದ್ಧವೂ ಆಗಿದೆ.

ಮುಸ್ಲಿಂ ಲೀಗಿನ ಕೋಮುವಾರು ನೀತಿಯು ಮೊದಲಿನಿಂದಲೂ ಮೊಂಡುತನದ್ದು. ಆದರೆ ಹಿಂದೂ ಮಹಾಸಭೆ ಏನೂ ಕಡಮೆ ಇಲ್ಲ. ಪಂಜಾಬ್ ಮತ್ತು ಸಿಂಧ ಹಿಂದೂಗಳಿಗೆ ಮತ್ತು ಸೀಖರಿಗೆ ಚಿತಾವಣೆ

ಮಾಡಿ ಯಾವ ಒಪ್ಪಂದಕ್ಕೂ ಅವಕಾಶ ಕೊಡಲಿಲ್ಲ. ಕಾಂಗ್ರೆಸ್ಸಿಗೆ ವಿರೋಧವಾಗಿ ಈ ಕೋಮುವಾರು ಸಂಸ್ಥೆಗಳಿಗೆ ಪ್ರಾಮುಖ್ಯತೆ ಕೊಟ್ಟು ಪ್ರೋತ್ಸಾಹಿಸಿ ಭಿನ್ನತೆ ಬೆಳೆಸುವುದೇ ಬ್ರಿಟಿಷ್ ನೀತಿಯಾಯಿತು.

ಯಾವುದೇ ಪಂಗಡ ಅಥವ ಪಕ್ಷದ ಪ್ರಾಮುಖ್ಯತೆ ಅಥವ ಜನ ಬೆಂಬಲ ಕಂಡು ಹಿಡಿಯಲು ಚುನಾವಣೆಗಳೇ ಪರಮೋಪಾಯ. ೧೯೩೭ ರ ಸಾರ್ವತ್ರಿಕ ಚುನಾವಣೆಗಳಲ್ಲಿ ಹಿಂದೂ ಮಹಾಸಭೆಗೆ ಯಾವ ಬೆಂಬಲವೂ ದೊರೆಯಲಿಲ್ಲ. ಮುಸ್ಲಿಂ ಲೀಗ್ ಅದಕ್ಕಿಂತ ಸ್ವಲ್ಪ ಉತ್ತಮವಾದರೂ ಮುಸ್ಲಿಮರೇ ಬಹುಸಂಖ್ಯಾಕರಿದ್ದ ಪ್ರಾಂತ್ಯಗಳಲ್ಲಿ ಅದಕ್ಕೆ ಬೆಂಬಲ ಸಿಗಲಿಲ್ಲ. ಪಂಜಾಬ್ ಮತ್ತು ಸಿಂಧ ಪ್ರಾಂತ್ಯಗಳಲ್ಲಿ ಅದಕ್ಕೆ ಪೂರ್ಣ ಸೋಲಾಯಿತು ; ಬಂಗಾಲದಲ್ಲಿ ಕೆಲ ಮಟ್ಟಿಗೆ ಜಯ ಪಡೆಯಿತು. ವಾಯವ್ಯ ಪ್ರಾಂತ್ಯದಲ್ಲಿ ಸ್ವಲ್ಪಕಾಲಾನಂತರ ಕಾಂಗ್ರೆಸ್ ಮಂತ್ರಿಮಂಡಲವೇರ್ಪಟ್ಟಿತು. ಮುಸ್ಲಿಮರು ಅಲ್ಪ ಸಂಖ್ಯಾಕರಿದ್ದ ಪ್ರಾಂತ್ಯಗಳಲ್ಲಿ ಹೆಚ್ಚಿನ ಜಯ ದೊರಕಿತು. ಆದರೆ ಅಲ್ಲಿಯೂ ಲೀಗ್ ಮುಸ್ಲಿಂರಲ್ಲದೆ ಸ್ವತಂತ್ರ ಮುಸ್ಲಿಮರೂ ಕಾಂಗ್ರೆಸ್ ಮುಸ್ಲಿಮರೂ ಜಯಪಡೆದರು.

ಈಗ ಕಾಂಗ್ರೆಸ್ ಪ್ರಾಂತ ಸರಕಾರಗಳಮೇಲೆ ಮತ್ತು ಕಾಂಗ್ರೆಸ್ ಸಂಸ್ಥೆಯಮೇಲೆ ಮುಸ್ಲಿಂ ಲೀಗಿನ ವಿಚಿತ್ರ ದೋಷಾರೋಪಣೆ ಆರಂಭವಾಯಿತು. ಈ ಸರಕಾರಗಳು ಮುಸ್ಲಿಮರಮೇಲೆ ದೌರ್ಜನ್ಯ ನಡೆಸುತ್ತಿದ್ದಾರೆಂದು ನಿತ್ಯನಿಂದೆ ಆರಂಭವಾಯಿತು. ಈ ಸರಕಾರಗಳಲ್ಲಿ ಮುಸಲ್ಮಾನ್ ಮಂತ್ರಿಗಳೂ ಇದ್ದರು, ಆದರೆ ಅವರು ಮುಸ್ಲಿಂ ಲೀಗಿನವರಾಗಿರಲಿಲ್ಲ. ಈ ದೌರ್ಜನ್ಯಗಳು ಏನೆಂದು ಯಾರೂ ಬಹಿರಂಗಪಡಿಸಲು ಸಿದ್ಧರಿರಲಿಲ್ಲ. ಸರಕಾರಕ್ಕೆ ಏನು ಸಂಬಂಧವಿಲ್ಲದ ಕೆಲವು ಸ್ಥಳೀಯ ಅಲ್ಪ ವಿಷಯಗಳನ್ನೇ ಬೆಟ್ಟದಷ್ಟು ಬೆಳೆಸುತ್ತಿದ್ದರು. ಕೆಲವು ಇಲಾಖೆಗಳ ಸಣ್ಣತಪ್ಪು ಸರಿಪಡಿಸಿದರೆ ಅವೂ ದೌರ್ಜನ್ಯಗಳಾಗಿ ಬಿಡುತ್ತಿದ್ದವು. ಕೆಲವುವೇಳೆ ಏನೂ ಆಧಾರವಿಲ್ಲದ ಸುಳ್ಳು ಆಪಾದನೆ ಮಾಡುತ್ತಿದ್ದರು. ಯಾವ ವಾಸ್ತವಿಕ ಅಂಶವೂ ಇಲ್ಲದ ಉತ್ಪ್ರೇಕ್ಷಿತ ವರದಿಯೂ ಒಂದು ಹೊರಬಿದ್ದಿತು. ಈ ಆಪಾದನೆ ಮಾಡಿದವರಿಗೆ ಕಾಂಗ್ರೆಸ್ ಸರಕಾರಗಳು ವಿಚಾರಣೆ ನಡೆಸಲು ಬಂದು ಸಹಾಯಮಾಡಿರೆಂದೂ, ಅಥವ ಸರಕಾರದ ಸಹಾಯ ಪಡೆದು ಅವರೇ ವಿಚಾರಮಾಡಬಹುದೆಂದೂ ಆಹ್ವಾನಿಸಿದವು. ಆದರೂ ಯಾರೂ ಈ ಅವಕಾಶ ಉಪಯೋಗಿಸಿಕೊಳ್ಳಲಿಲ್ಲ. ಆದರೆ ಅಪಪ್ರಚಾರ ಮಾತ್ರ ನಿಲ್ಲಲಿಲ್ಲ. ಕಾಂಗ್ರೆಸ್ ಮಂತ್ರಿಮಂಡಲಗಳು ರಾಜಿನಾಮೆಕೊಟ್ಟನಂತರ ಆಗ ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಡಾಕ್ಟರ್ ರಾಜೇಂದ್ರಪ್ರಸಾದರು ಕಾಂಗ್ರೆಸ್ ಸರಕಾರಗಳ ಮೇಲಿನ ಆರೋಪಣೆಗಳನ್ನು ವಿಚಾರಣೆಮಾಡಿ ತೀರ್ಮಾನಕೊಡಲು ಫೆಡರಲ್ ನ್ಯಾಯಾಲಯದ ಮುಂದೆ ತರಬೇಕೆಂದು ಜನಾಬ್ ಜಿನ್ನಾರವರಿಗೆ ಪತ್ರಬರೆದು ಒಂದು ಬಹಿರಂಗ ಹೇಳಿಕೆ ಕೊಟ್ಟರು. ಜಿನ್ನಾ ಇದನ್ನು ನಿರಾಕರಿಸಿ ರಾಯಲ್ ಕಮಿಷನ್ ಒಂದು ನೇಮಕವಾಗಲಿದೆ ಎಂದರು. ಅದು ಬ್ರಿಟಿಷ್ ಸರಕಾರದಿಂದ ಮಾತ್ರ ಸಾಧ್ಯವಿತ್ತು. ಆದರೆ ಅಂತಹ ಸಮಿತಿಯ ನೇಮಕಕ್ಕೆ ಅವಕಾಶವೇ ಇರಲಿಲ್ಲ. ಕಾಂಗ್ರೆಸ್ ಸರಕಾರಗಳು ಅಧಿಕಾರದಲ್ಲಿದ್ದಾಗ ಕೆಲವು ಬ್ರಿಟಿಷ್ ಗವರ್ನರುಗಳೇ ಅಲ್ಪಸಂಖ್ಯಾತರ ವಿಷಯದಲ್ಲಿ ಕಾಂಗ್ರೆಸ್ ಸರಕಾರಗಳ ನಡತೆ ದೋಷಾತೀತವಿತ್ತೆಂದು ಬಹಿರಂಗವಾಗಿ ಸಾರಿದ್ದರು. ೧೯೩೫ನೆಯ ಭಾರತ ಸರಕಾರ ಶಾಸನದಂತೆ ಅವಶ್ಯವಿದ್ದರೆ ಅಲ್ಪಸಂಖ್ಯಾಕರ ರಕ್ಷಣೆಗೆಂದು ಅವರು ವಿಶೇಷ ಅಧಿಕಾರ ಉಪಯೋಗಿಸಬಹುದಾಗಿತ್ತು.

ಹಿಟ್ಲರ್ ಅಧಿಕಾರಕ್ಕೆ ಬಂದಂದಿನಿಂದ ನಾಜಿಗಳ ಪ್ರಚಾರನೀತಿಯನ್ನು ನಾನು ಸೂಕ್ಷ್ಮವಾಗಿ ಪರಿಶೀಲನೆಮಾಡಿದ್ದೆ. ಭಾರತದಲ್ಲಿನ ಮುಸ್ಲಿಂಲೀಗ್ ಚಳುವಳಿಗೂ ನಾಜಿಪ್ರಚಾರಕ್ಕೂ ಬಹಳ ಹೋಲಿಕೆ ಇತ್ತು. ಒಂದು ವರ್ಷದನಂತರ ೧೯೩೮ರಲ್ಲಿ ಜೆಕೊಸ್ಲೊವೇಕಿಯಾದಲ್ಲಿ ಸುಡೆಟನ್‌ಲ್ಯಾಂಡ್ ಸಮಸ್ಯೆ ಒದಗಿದಾಗ ಮುಸ್ಲಿಂಲೀಗ್ ನಾಯಕರು ಆ ನಾಜಿಪ್ರಚಾರರೀತಿ ನೀತಿಯನ್ನು ಅಭ್ಯಾಸಮಾಡಿ ತಮ್ಮ ಮೆಚ್ಚುಗೆ ವ್ಯಕ್ತಗೊಳಿಸಿದರು. ಸುಡೆಟ್‌ಲ್ಯಾಂಡಿನ ಜರ್ಮನರೊಂದಿಗೆ ಭಾರತೀಯ ಮುಸ್ಲಿಮರನ್ನು ಹೋಲಿಸಿದರು. ಭಾಷಣಗಳಲ್ಲಿ ಮತ್ತು ವರ್ತಮಾನ ಪತ್ರಿಕೆಗಳಲ್ಲಿ ಹಿಂಸೆಗೆ ಪ್ರೇರಣೆಯೂ ಚಿತಾವಣೆಯೂ ಅಧಿಕವಾಯಿತು. ಒಬ್ಬ ಕಾಂಗ್ರೆಸ್ ಮುಸ್ಲಿಂ ಮಂತ್ರಿಯನ್ನು ಚೂರಿಯಿಂದ ತಿವಿದರೂ ಯಾವ ಮುಸ್ಲಿಂ

ಲೀಗ್ ಮುಖಂಡನೂ ಅದನ್ನು ಖಂಡಿಸಲಿಲ್ಲ. ಅದಕ್ಕೆ ಪ್ರತಿಯಾಗಿ ಆತನಿಗೆ ಅವರ ಮೆಚ್ಚಿಗೆ ದೊರೆಯಿತು; ಇತರ ಹಿಂಸಾತ್ಮಕ ಪ್ರದರ್ಶನಗಳೂ ಹೆಚ್ಚಿದವು.

ಈ ಎಲ್ಲ ಘಟನೆಗಳಿಂದ ನನಗೆ ಬಹಳ ದುಃಖವಾಯಿತು, ನಮ್ಮ ಸಾರ್ವಜನಿಕ ನೀತಿಯು ಈ ರೀತಿ ಅಧೋಗತಿಗೆ ಇಳಿಯುವುದನ್ನು ಕಂಡು ಬೇಸರವಾಯಿತು. ಹಿಂಸೆ, ಅಸಭ್ಯವರ್ತನೆ, ಮತ್ತು ಬೇಜವಾಬ್ದಾರಿ ಅಧಿಕವಾಗುತ್ತಿತ್ತು. ಮುಸ್ಲಿಂಲೀಗಿನ ಪ್ರಮುಖ ವ್ಯಕ್ತಿಗಳು ಇದಕ್ಕೆ ಪ್ರೋತ್ಸಾಹಕೊಡುವಂತೆ ಕಂಡಿತು. ಈ ಅಧೋಗತಿ ತಡೆಗಟ್ಟರೆಂದು ಕೆಲವು ಮುಸ್ಲಿಂ ನಾಯಕರಿಗೆ ನಾನು ಪತ್ರಬರೆದು ಕೇಳಿದೆ; ಆದರೆ ಅದರಿಂದ ಯಾವ ಫಲಿತಾಂಶವೂ ಆಗಲಿಲ್ಲ. ಕಾಂಗ್ರೆಸ್ ಸರಕಾರಗಳು ಪ್ರತಿಯೊಂದು ಅಲ್ಪಸಂಖ್ಯಾತ ಪಂಗಡವನ್ನೂ ಒಲಿಸಿಕೊಳ್ಳಲು ವಿಶ್ವಪ್ರಯತ್ನಮಾಡಿದವು. ಇತರ ಅಲ್ಪಸಂಖ್ಯಾತರನ್ನು ಅಲಕ್ಷ್ಯಮಾಡಿ ಮುಸ್ಲಿಂಲೀಗಿಗೆ ಪಕ್ಷಪಾತಮಾಡುತ್ತಿದ್ದಾರೆಂಬ ದೂರು ಸಹ ಬಂದಿತು. ಯಾವುದಾದರೂ ನಿರ್ದಿಷ್ಟವಾದ ತೊಂದರೆಯಾದರೆ, ಅಥವಾ ಯಾವುದಾದರೂ ನಿರ್ದಿಷ್ಟ ವಿಷಯದ ಕಾರಣಬದ್ಧ ಪರ್ಯಾಲೋಚನೆಯಾದರೆ ಸರಿ. ಆದರೆ ಮುಸ್ಲಿಮರಿಗೆ ಏನೋ ಅನಾಹುತವಾಗುತ್ತಿದೆ ಎಂದೂ, ಅದಕ್ಕೆ ಕಾಂಗ್ರೆಸ್ಸೇ ಕಾರಣವೆಂದೂ ಮುಸ್ಲಿಮರಲ್ಲಿ ಒಂದು ಭಯೋತ್ಪಾದನೆ ಮಾಡುವುದೇ ಮುಸ್ಲಿಂಲೀಗ್ ಸದಸ್ಯರ ಗುರಿಯಾಗಿತ್ತು. ಆ ಅನಾಹುತ ಏನೆಂದು ಯಾರೂ ಹೇಳಲು ಸಿದ್ಧರಿರಲಿಲ್ಲ. ಆದರೆ ಇಲ್ಲಿ ಅಲ್ಲದಿದ್ದರೆ ಎಲ್ಲಾದರೂ ಈ ಕೂಗು ಮತ್ತು ದೂಷಣೆಯ ಹಿಂದೆ ಏನಾದರೂ ಉದ್ದೇಶ ಇರಬೇಕು. ಉಪಚುನಾವಣೆಗಳಲ್ಲಿ " ಇಸ್ಲಾಂ ಧರ್ಮಕ್ಕೆ ಗಂಡಾಂತರ " ಎಂಬ ಕೂಗು ಎದ್ದಿತು. ಮುಸ್ಲಿಂಲೀಗ್ ಉಮೇದುವಾರರಿಗೇ ಮತಕೊಡಬೇಕೆಂದು " ಖುರಾನ್ " ಹಿಡಿದು ಪ್ರಮಾಣಮಾಡಿಸಿದರು.

ಈ ಎಲ್ಲ ಕಾರ್ಯಕ್ರಮಗಳು ಮುಸ್ಲಿಂ ಜನತೆಯ ಮೇಲೆ ತುಂಬ ದುಷ್ಪರಿಣಾಮ ಮಾಡಿದವು. ಆದರೂ ಅನೇಕರು ಈ ಬಲೆಗೆ ಬೀಳಲಿಲ್ಲ. ಉಪಚುನಾವಣೆಗಳಲ್ಲಿ ಲೀಗಿಗೆ ಹೆಚ್ಚು ಜಯ ದೊರೆತರೂ ಕೆಲವು ಕಡೆ ಸೋತರು. ಅವರು ಗೆದ್ದ ಕಡೆಗಳಲ್ಲೂ ಕಾಂಗ್ರೆಸ್ಸಿನ ರೈತ ಚಳವಳಿಯಿಂದ ಮುಸ್ಲಿಂ ಲೀಗಿಗೆ ವಿರೋಧ ಮತಕೊಟ್ಟವರು ಅಲ್ಪಸಂಖ್ಯಾತರಿದ್ದರೂ ಆ ಪ್ರಮಾಣ ಕಡಮೆ ಇರಲಿಲ್ಲ. ಆದರೆ ಮುಸ್ಲಿಂ ಲೀಗಿಗೆ ಜನತೆಯ ಬೆಂಬಲ ದೊರೆತು ಮುಸ್ಲಿಂ ಸಾಮಾನ್ಯರ ಸಂಸ್ಥೆಯಾಗಲು ಇದೇ ಆರಂಭ. ಇದುವರೆಗಿನ ಅದರ ನೀತಿ ನನಗೆ ಸರಿಬೀಳದಿದ್ದರೂ, ಇನ್ನು ಮೇಲಾದರೂ ಪ್ರತಿಗಾಮಿ ಶ್ರೀಮಂತರ ಕೈವಾಡತಪ್ಪಿ ಪ್ರಗತಿಪರ ವ್ಯಕ್ತಿಗಳ ನಾಯಕತ್ವದಲ್ಲಿ ಲೀಗು ಮುಂದುವರಿಯಬಹುದೆಂದು ಈ ಪರಿವರ್ತನೆಯನ್ನು ಸ್ವಾಗತಿಸಿದೆ. ಮುಸ್ಲಿಮರು ರಾಜಕೀಯ ಮತ್ತು ಸಾಮಾಜಿಕ ದೃಷ್ಟಿಯಿಂದ ಬಹಳ ಹಿಂದೆಬಿದ್ದಿದ್ದರಿಂದ ಪ್ರತಿಗಾಮಿ ವ್ಯಕ್ತಿಗಳು ಅವರನ್ನು ದುರುಪಯೋಗಪಡಿಸಿಕೊಳ್ಳುತ್ತಿದ್ದುದೇ ದೊಡ್ಡ ತೊಂದರೆಯಾಗಿತ್ತು.

ಮುಸ್ಲಿಂ ಲೀಗಿನ ಇತರ ಎಲ್ಲ ನಾಯಕರಿಗಿಂತ ಜನಾಬ್ ಜಿನ್ನಾ ತುಂಬ ಪ್ರಗತಿಪರ ವ್ಯಕ್ತಿ, ಅವರೆಲ್ಲರಿಗಿಂತ ಅತ್ಯುನ್ನತ ವ್ಯಕ್ತಿ, ಆದ್ದರಿಂದ ಆತನ ನಾಯಕತ್ವವಿಲ್ಲದೆ ಲೀಗ್ ಮುಂದುವರಿಯುವಂತೆ ಇರಲಿಲ್ಲ. ಅನೇಕವೇಳೆ ತನ್ನ ಸಹೋದ್ಯೋಗಿಗಳ ಸ್ವಾರ್ಥ ಮತ್ತು ಅಯೋಗ್ಯತೆಯನ್ನು ಅನೇಕ ಬಾರಿ ಬಹಿರಂಗ ಸಭೆಗಳಲ್ಲೇ ತಿಳಿಸಿದ್ದನು. ಮುಸ್ಲಿಮರಲ್ಲಿ ಪ್ರಗತಿಪರ ಮನೋಭಾವದ ನಿಃಸ್ವಾರ್ಥಿಗಳೂ, ಧೈರ್ಯಶಾಲಿಗಳೂ ಆದವರನೇಕರು ಕಾಂಗ್ರೆಸ್ ಸೇರಿ ಕೆಲಸ ಮಾಡುತ್ತಿದ್ದುದು ಆತನಿಗೆ ತಿಳಿದಿತ್ತು. ಆದರೂ, ಯಾವುದೋ ಅವ್ಯಕ್ತ ಶಕ್ತಿ ಅಥವ ಸನ್ನಿವೇಶವು ಯಾರ ಮೇಲೆ ಆತನಿಗೆ ಗೌರವವಿರಲಿಲ್ಲವೋ ಅವರಿಗೇ ಆತನನ್ನು ನಾಯಕನನ್ನಾಗಿ ಮಾಡಿತ್ತು. ಆತನು ಅವರ ನಾಯಕನಾದರೂ ಅವರ ಪ್ರತಿಗಾಮಿ ಭಾವನೆಗಳಿಗೆ ತಾನು ಬಲಿಯಾಗಿ ತಲೆ ತಗ್ಗಿಸಿ ಮಾತ್ರ ಅವರನ್ನು ಒಟ್ಟಿಗೆ ಹಿಡಿತದಲ್ಲಿಟ್ಟುಕೊಳ್ಳಲು ಸಾಧ್ಯವಿತ್ತು. ಆರೀತಿ ಬಲಿಬಿದ್ದುದು ಆತನಿಗೆ ಇಷ್ಟವಿರಲಿಲ್ಲವೆಂದಲ್ಲ. ಹೊರಗಡೆ ಆತನು ಅತ್ಯಾಧುನಿಕ ವ್ಯಕ್ತಿಯಂತೆ ಕಂಡರೂ ಆತನ ಭಾವನೆಗಳೆಲ್ಲ ಆಧುನಿಕ ರಾಜಕೀಯ ಭಾವನೆಗಳಿಗೆ ಮತ್ತು ಪ್ರಗತಿಗೆ ದೂರವಾದ ಕಂದಾಚಾರದ ಭಾವನೆಗಳು. ಇಂದಿನ ಪ್ರಪಂಚವನ್ನೇ ಆವರಿಸಿದ ಆರ್ಥಿಕ ಸಮಸ್ಯೆಯ ಕಲ್ಪನೆ ಆತನಿಗೆ ತೀರ ಅಪರಿಚಿತವಿದ್ದಂತೆ ಕಂಡಿತು. ಮೊದಲನೆಯ ಪ್ರಪಂಚ ಯುದ್ಧದ ನಂತರ ಪ್ರಪಂಚದಲ್ಲಿ ಎಲ್ಲೆಡೆಯಲ್ಲೂ ಆದ ಅದ್ಭುತ ಪರಿವರ್ತನೆಗಳು ಆತನ ಮೇಲೆ ಯಾವ ಪರಿಣಾಮವನ್ನೂ ಮಾಡಲಿಲ್ಲ. ಕಾಂಗ್ರೆಸ್ಸು

ರಾಜಕೀಯದಲ್ಲಿ ಒಂದು ಹೆಜ್ಜೆ ಮುಂದೆ ಇಟ್ಟಾಗಲೇ ಆತ ಕಾಂಗ್ರೆಸ್ಸನ್ನು ಬಿಟ್ಟದ್ದು. ಕಾಂಗ್ರೆಸ್ ತನ್ನ ಆರ್ಥಿಕ ನೀತಿಯನ್ನು ಮುಂದುವರಿಸಿ ಜನತೆಯ ಸಂಸ್ಥೆ ಆದಂತೆಲ್ಲ ಈ ಅಂತರ ಇನ್ನೂ ಹೆಚ್ಚುತ್ತ ಬಂದಿತು. ಆದರೆ ಜಿನ್ನಾ ಮಾತ್ರ ಒಂದು ತಲೆಮಾರಿಗೆ ಮುಂಚೆ ಎಲ್ಲಿದ್ದನೋ ಅಲ್ಲಿಯೇ ನಿಂತ. ನಿಜವೆಂದರೆ ಇನ್ನೂ ಒಂದು ಹೆಜ್ಜೆ ಹಿಂದೆ ಹೋಗಿದ್ದ. ಏಕೆಂದರೆ ಈಗ ಆತನು ಭಾರತದ ಐಕ್ಯತೆಯನ್ನೂ ವಿರೋಧಿಸಿದ, ಪ್ರಜಾ ಸ್ವಾತಂತ್ರ್ಯವನ್ನೂ ವಿರೋಧಿಸಿದ. "ಪಾಶ್ಚಿಮಾತ್ಯ ಪ್ರಜಾಪ್ರಭುತ್ವದ ತಿಳಿಗೇಡಿತನದ ಆಧಾರದ ಮೇಲೆ ರಚಿತವಾದ ಯಾವ ಸರ್ಕಾರ ಪದ್ಧತಿಯಲ್ಲೂ ನಾವು ಜೀವಿಸಲು ಒಪ್ಪುವುದಿಲ್ಲ" ಎಂದು ಹೇಳಿದ. ಅದು ವರೆಗೆ ಯಾವ ತತ್ತ್ವಕ್ಕಾಗಿ ನಿಂತು ತನ್ನ ಜೀವನದ ಬಹುಭಾಗ ಸವೆಸಿದ್ದನೋ ಅದೆಲ್ಲ ವ್ಯರ್ಥವೆಂದು ತಿಳಿದುಕೊಳ್ಳಲು ಬಹುಕಾಲ ಬೇಕಾಯಿತು.

ಮುಸ್ಲಿಂ ಲೀಗಿನಲ್ಲೂ ಜಿನ್ನಾ ಏಕಾಂಗಿ; ಆತನ ಅತ್ಯಂತ ಸಮೀಪ ಸಹೋದ್ಯೋಗಿಗಳು ಸಹ ದೂರ ನಿದ್ದು ಗೌರವಿಸುತ್ತಾರೆ; ಪ್ರೀತಿಗಿಂತ ಹೆಚ್ಚು ಆತನಿಗೆ ಹೆದರುತ್ತಾರೆ. ರಾಜಕೀಯ ನೈಪುಣ್ಯತೆಯಲ್ಲಿ ಅತಿ ಶ್ರೇಷ್ಠನೆನ್ನುವುದರಲ್ಲಿ ಸಂಶಯವಿಲ್ಲ; ಆದರೆ ಆ ನೈಪುಣ್ಯವೆಲ್ಲ ಭಾರತದಲ್ಲಿನ ಇಂದಿನ ಬ್ರಿಟಿಷ್ ಅಧಿಕಾರ ದೊಂದಿಗೆ ಹೆಣೆದುಕೊಂಡಿದೆ. ಆತನ ರಾಜಕೀಯ ನೈಪುಣ್ಯತೆಯಲ್ಲಿ ನ್ಯಾಯವಾದಿತ್ವ ಬೆರೆತು ಇದೆ, ಚಲನಚಾತುರ್ಯವಿದೆ; ರಾಷ್ಟ್ರೀಯ ಭಾರತಕ್ಕೂ ಬ್ರಿಟಿಷ್ ಆಡಳಿತಕ್ಕೂ ತಾನು ಮಧ್ಯಸ್ಥಗಾರನೆಂದು ತಿಳಿದಿದ್ದಾನೆ. ಪರಿಸ್ಥಿತಿ ಬದಲಾಯಿಸಿ, ನಿಜವಾದ ರಾಜಕೀಯ ಮತ್ತು ಆರ್ಥಿಕ ಸಮಸ್ಯೆಗಳನ್ನು ಎದುರಿಸ ಬೇಕಾಗಿ ಬಂದರೆ ಆತನ ಸಾಮರ್ಥ್ಯ ಏನಿದೆಯೋ ಹೇಳಲು ಸಾಧ್ಯವಿಲ್ಲ. ಸ್ವಾಭಿಮಾನ ಬೇಕಾದಷ್ಟಿದ್ದರೂ ತನ್ನಲ್ಲಿ ತನಗೇ ಸಂಶಯವಿರುವಂತೆ ತೋರುತ್ತದೆ. ಪ್ರಾಯಶಃ ಇರುವಂತೆ ಇರಲಿ, ಎಂಬ ಮನೋಭಾವಕ್ಕೆ ಮತ್ತು ಭಿನ್ನಾಭಿಪ್ರಾಯವುಳ್ಳವರೆದುರು ಕುಳಿತು, ಶಾಂತಿಯಿಂದ ಕೂಲಂಕಷ ಚರ್ಚೆ ಮಾಡಲು ಒಪ್ಪದಿರುವ ಮನೋಭಾವಕ್ಕೆ ಆ ಸಂಶಯವೇ ಮುಖ್ಯ ಕಾರಣವೋ ಏನೋ. ಈಗಿನ ಚೌಕಟ್ಟಿನಲ್ಲಿ ಹೊಂದಿಕೊಂಡಿರುವುದೇನೋ ನಿಜ; ಬೇರೊಂದು ಚೌಕಟ್ಟಿನಲ್ಲಿ ಆತನಾಗಲಿ, ಆತನ ಅನುಯಾಯಿಗಳಾಗಲಿ ಹೊಂದಿಕೊಳ್ಳುವರೋ ಇಲ್ಲವೋ ಹೇಳುವುದು ಕಷ್ಟ. ಆತನ ರೀತಿಗೆ ಕಾರಣವಾದ ಅನುರಕ್ತಿಯಾದರೂ ಏನು? ಗುರಿ ಏನು? ಅಥವ ರಾಜಕೀಯ ಚದುರಂಗ ದಾಟದಲ್ಲಿ ತಡೆಗಟ್ಟುವ ಅವಕಾಶ ದೊರೆತರೆ ಸಾಕೆಂಬ ತೃಪ್ತಿಯ ಹೊರತು ಬೇರೆ ಉನ್ನತ ಭಾವನೆಯೇ ಇಲ್ಲವೇ? ವಯಸ್ಸಾದಂತೆಲ್ಲ ಕಾಂಗ್ರೆಸ್ಸಿನ ಮೇಲೆ ಆತನ ದ್ವೇಷವೂ ಬೆಳೆಯುತ್ತಿದೆ. ಆತನಿಗೆ ಅಸಹನೀಯವಾದುದು, ಬೇಡವಾದುದು, ಏನೆಂದು ಎಲ್ಲರಿಗೂ ಗೊತ್ತು, ಆದರೆ ಬೇಕಾದುದು ಏನು? ಆತನ ಶಕ್ತಿ ಮತ್ತು ಹಟಮಾರಿತನ ಏನೇ ಇದ್ದರೂ ಆತನ ಭಾವನೆ ಎಲ್ಲ ಶೂನ್ಯ ಭಾವನೆ. ಆತನನ್ನು 'ಶೂನ್ಯ ಪುರುಷ'ನೆಂದರೆ ಒಪ್ಪುತ್ತದೆ. ಆತನ ವಾಸ್ತವಿಕಭಾವನೆ ಅರ್ಥಮಾಡಿಕೊಳ್ಳಲು ಮಾಡಿದ ಪ್ರಯತ್ನವೆಲ್ಲವೂ ವ್ಯರ್ಥವಾಗಿದೆ; ಕೈಗೇ ಸಿಲುಕುವುದಿಲ್ಲ.

ಭಾರತದಲ್ಲಿ ಬ್ರಿಟಿಷ್ ಆಡಳಿತ ಆರಂಭವಾದಮೇಲೆ ಮುಸ್ಲಿಮರಲ್ಲಿ ಆಧುನಿಕ ದೃಷ್ಟಿಯ ಪ್ರಮುಖ ವ್ಯಕ್ತಿಗಳು ಬಂದುದು ಅತಿ ವಿರಳ. ಕೆಲವರು ಪ್ರಸಿದ್ಧ ಪುರುಷರೇನೋ ಬಂದರು. ಆದರೂ ಅವರೆಲ್ಲ ಆಧುನಿಕ ಪ್ರಪಂಚದ ರೀತಿ ನೀತಿಗೆ ದೂರ ಇದ್ದ ಹಳೆಯ ಸಂಸ್ಕೃತಿ ಮತ್ತು ಸಂಪ್ರದಾಯದವರು. ಕಾಲ ಗತಿಗನುಗುಣವಾಗಿ ಮುಂದುವರಿದು ಹೊಸ ಸನ್ನಿವೇಶಕ್ಕನುಗುಣವಾಗಿ ಸಂಸ್ಕೃತಿ ಮತ್ತು ಇತರ ವಿಷಯಗಳಲ್ಲಿ ಹೊಂದಿಕೊಳ್ಳದೆ ಇದ್ದುದಕ್ಕೆ ಕಾರಣ ಅವರ ಆಂತರಿಕ ದೌರ್ಬಲ್ಯವಲ್ಲ; ಆದರೆ ಕೆಲವು ಐತಿಹಾಸಿಕ ಘಟನೆಗಳು. ಮಧ್ಯಮ ವರ್ಗ ಕೈಗಾರಿಕೋದ್ಯಮಿಗಳು ಬೆಳೆಯಲಿಲ್ಲ; ನವಾಬಗಿರಿಯ ಭಾವನೆಯೇ ಹೆಚ್ಚಾಗಿ ಉಳಿದು ಎಲ್ಲ ಪ್ರಗತಿಯ ಮಾರ್ಗಕ್ಕೂ ಅಡ್ಡಿಬಂದು ಜ್ಞಾನ ಪ್ರಚೋದನೆ ತಡೆಗಟ್ಟಿತು. ಬಂಗಾಲದಲ್ಲಂತೂ ಮುಸ್ಲಿಮರು ಬಹಳ ಅಧೋಗತಿಯಲ್ಲಿದ್ದರು. ಅದಕ್ಕೆ ಕಾರಣಗಳೆರಡು. ಬ್ರಿಟಿಷ್ ಆಡಳಿತದ ಆರಂಭದಲ್ಲಿ ಮುಸ್ಲಿಂ ಐಶ್ವರ್ಯವಂತರನ್ನು ನಾಶಮಾಡಿದ್ದು ಮತ್ತು ಮುಸ್ಲಿಂ ಮತಕ್ಕೆ ಮತಾಂತರವಾದವರೆಲ್ಲ ಹಿಂದೂ ಧರ್ಮದಲ್ಲಿ ಯಾವ ಪ್ರಗತಿ ಮತ್ತು ಬೆಳವಣಿಗೆಗೆ ಅವಕಾಶವಿಲ್ಲದ ಅಸ್ಪೃಶ್ಯರಾಗಿದ್ದುದು. ಉತ್ತರ

ಹಿಂದೂಸ್ಥಾನದಲ್ಲಿ ಉತ್ತಮ ವರ್ಗದ ಸುಸಂಸ್ಕೃತ ಮುಸ್ಲಿಮರೆಲ್ಲ ಹಳೆಯ ಕಂದಾಚಾರ ಪದ್ಧತಿ ಮತ್ತು ಜಮೀನುದಾರಿಕೆಗೆ ಅಂಟಿಕೊಂಡವರು. ಈಚೆಗೆ ಬಹಳ ಬದಲಾವಣೆಯಾಗಿದೆ. ಭಾರತೀಯ ಮುಸ್ಲಿಮರಲ್ಲೂ ಹೊಸ ಮಧ್ಯಮವರ್ಗವು ಬೇಗ ಬೆಳೆಯುತ್ತಿದೆ; ಆದರೂ ವಿಜ್ಞಾನ ಮತ್ತು ಕೈಗಾರಿಕೆಯಲ್ಲಿ ಹಿಂದೂಗಳಿಗಿಂತ ಅವರು ಬಹಳ ಹಿಂದೆ ಇದ್ದಾರೆ. ಹಿಂದೂಗಳು ಸಹ ಬಹಳ ಹಿಂದೆ ಬಿದ್ದಿದ್ದಾರೆ. ಕೆಲವು ಸಂದರ್ಭದಲ್ಲಿ ಮುಸ್ಲಿಮರಿಗಿಂತ ಹಿಂದೂಗಳು ಹೆಚ್ಚು ಸಂಪ್ರದಾಯ ಶರಣರು. ಆಚಾರ ನಿಷ್ಠರು. ಆದರೂ ಕೈಗಾರಿಕೆ ವಿಜ್ಞಾನ ಮತ್ತು ಇತರ ಕ್ಷೇತ್ರಗಳಲ್ಲಿ ಹಿಂದೂಗಳಲ್ಲಿ ಉನ್ನತ ವ್ಯಕ್ತಿಗಳು ಹುಟ್ಟಿದಾರೆ. ಚಿಕ್ಕ ಪಾರ್ಸಿಪಂಗಡದಲ್ಲಿ ಆಧುನಿಕ ಕೈಗಾರಿಕೋದ್ಯಮದಲ್ಲಿ ಅತ್ಯುನ್ನತ ವ್ಯಕ್ತಿಗಳು ಹುಟ್ಟಿದ್ದಾರೆ. ಜಿನ್ನಾ ಮೊದಲು ಹಿಂದೂ ಮನೆತನದಿಂದ ಬಂದವನು.

ಹಿಂದೂ ಮುಸಲ್ಮಾನ್ ಇಬ್ಬರಿಗೂ ಸರ್ಕಾರಿನೌಕರಿಯೇ ಹೆಚ್ಚು ಆಕರ್ಷಕವಿದ್ದುದರಿಂದ ಬುದ್ಧಿವಂತರೂ ದಕ್ಷರೂ ಸರ್ಕಾರಿನೌಕರಿಯನ್ನೇ ಮೋಹಿಸಿದರು. ಸ್ವಾತಂತ್ರ್ಯಕ್ಕಾಗಿ ರಾಜಕೀಯ ಹೋರಾಟ ಆರಂಭವಾದ ಒಡನೆ ಆ ಮೋಹ ಕಡಮೆಯಾಗಿ ದಕ್ಷರೂ, ಧೈರ್ಯಶಾಲಿಗಳೂ, ಮನಸ್ಥೈರ್ಯಉಳ್ಳವರೂ ರಾಜಕೀಯದ ಕಡೆ ತಿರುಗಿದರು. ಮುಸ್ಲಿಮರಲ್ಲೂ ಅನೇಕ ಶ್ರೇಷ್ಠ ವ್ಯಕ್ತಿಗಳು ಕಾಂಗ್ರೆಸ್ಸನ್ನು ಸೇರಿದರು. ಈಚೆಗೆ ಕೆಲವು ಮುಸ್ಲಿಂ ಯುವಕರು ಸಮಾಜವಾದಿಗಳೂ ಸಮತಾವಾದಿಗಳೂ ಆಗಿದ್ದಾರೆ. ಈ ಉತ್ಸಾಹಿ ಪ್ರಗತಿಪರ ವ್ಯಕ್ತಿಗಳನ್ನು ಬಿಟ್ಟರೆ ಮುಸ್ಲಿಂ ಮುಖಂಡರು ಉಳಿದವರು ಯಾರೂ ಉನ್ನತ ವ್ಯಕ್ತಿಗಳು ಇರಲಿಲ್ಲ. ಮತ್ತು ಸರ್ಕಾರಿನೌಕರಿ ಇಂದಲೇ ತಮ್ಮ ಅಭಿವೃದ್ಧಿ ಎಂದರು. ಆದರೆ ಜಿನ್ನಾನ ರೀತಿಯೇ ಬೇರೆ ಇತ್ತು. ದಕ್ಷನೂ, ಶಕ್ತನೂ ಮಾತ್ರವಲ್ಲದೆ ಆತನಿಗೆ ಇತರರಂತೆ ಅಧಿಕಾರದ ಆಸೆ ಇರಲಿಲ್ಲ. ಆದ್ದರಿಂದ ಮುಸ್ಲಿಂ ಲೀಗಿನಲ್ಲಿ ಆತನ ಸ್ಥಾನಗೌರವ ಅತ್ಯುನ್ನತವಿತ್ತು. ಇತರರು ಯಾರಿಗೂ ಇಲ್ಲದ ಗೌರವ ಆತನಿಗೆ ಲಭಿಸಿತು. ಆದರೆ ಹಟಮಾರಿತನದಿಂದ ಹೊಸಭಾವನೆಗಳು ಆತನ ತಲೆಯೊಳಗೆ ಹೋಗಲು ಅವಕಾಶವೇ ಇರಲಿಲ್ಲ. ತನ್ನ ಸಂಸ್ಥೆಯ ಸ್ಥಾನಬಲದಿಂದ ಭಿನ್ನಾಭಿಪ್ರಾಯ ವ್ಯಕ್ತಗೊಳಿಸಿದ ವ್ಯಕ್ತಿಗಳನ್ನಾಗಲಿ, ಸಂಸ್ಥೆಗಳನ್ನಾಗಲಿ ಸಹಿಸುವುದು ಆತನಿಗೆ ಅಸಾಧ್ಯವಾಯಿತು. ಮುಸ್ಲಿಂಲೀಗ್ ಎಂದರೆ ಆತನೇ ಆದ. ಆದರೆ ಮುಸ್ಲಿಂ ಲೀಗ್ ಈಗ ಮುಸ್ಲಿಂ ಜನತೆಯ ಸಂಸ್ಥೆಯಾಗುತ್ತ ಬಂದಕಾರಣ ಕಂದಾಚಾರದ ಅಭಿಪ್ರಾಯದ ಆತನ ನವಾಬಗಿರಿ ಇನ್ನೆಷ್ಟುದಿನ ನಡೆಯುವುದೋ ನೋಡಬೇಕು.

ನಾನು ಕಾಂಗ್ರೆಸ್ ಅಧ್ಯಕ್ಷನಾಗಿದ್ದಾಗ ಜನಾಬ್ ಜಿನ್ನಾಗೆ ಅನೇಕ ಬಾರಿ ಪತ್ರಬರೆದು "ನಾವು ಮಾಡಬೇಕಾದ್ದೇನು ತಿಳಿಸಿ'' ಎಂದು ಕೇಳಿದೆ. ಲೀಗಿಗೆ ಬೇಕಾದುದೇನು, ಅದರ ನಿರ್ದಿಷ್ಟ ಧ್ಯೇಯಗಳೇನು ಎಂದು ಕೇಳಿದೆ; ಕಾಂಗ್ರೆಸ್ ಸರಕಾರಗಳಮೇಲೆ ಲೀಗಿನ ದೂರುಗಳೇನೆಂದು ತಿಳಿಸಲು ಹೇಳಿದೆ. ಮೊದಲು ಪತ್ರ ಮುಖೇನ ಸ್ಪಷ್ಟಮಾಡಿಕೊಂಡು ಅದರಲ್ಲಿ ಹೊರಬಿದ್ದ ಮುಖ್ಯ ವಿಷಯಗಳನ್ನು ಮುಖತಃ ಚರ್ಚಿಸಲು ಅನುಕೂಲವಾಗಲೆಂದು ಉದ್ದೇಶವಿತ್ತು. ಜಿನ್ನಾ ಉದ್ದುದ್ದನೆಯ ಉತ್ತರಗಳನ್ನೇನೋ ಕಳುಹಿಸಿದರೂ, ಅವುಗಳಿಂದ ನನಗೆ ಏನೂ ಅರ್ಥವಾಗಲಿಲ್ಲ. ಲೀಗಿನ ದೋಷಾರೋಪಣೆಗಳೇನು, ತನಗೆ ಬೇಕಾದುದೇನು ಎಂಬುದನ್ನು ನನಗಾಗಲಿ ಇತರರಿಗೆ ಆಗಲಿ ತಿಳಿಸಲು ತಪ್ಪಿಸಿಕೊಳ್ಳುತ್ತಿದ್ದುದೆ ಒಂದು ಆಶ್ಚರ್ಯ. ಮೇಲಿಂದ ಮೇಲೆ ಪತ್ರವ್ಯವಹಾರ ನಡೆಯಿತು; ಆದರೂ ಅದೇ ಅಸ್ಪಷ್ಟ ಅಪೂರ್ಣ ಉತ್ತರ; ನನಗಂತೂ ಯಾವ ಸ್ಪಷ್ಟ ಅಭಿಪ್ರಾಯವೂ ದೊರೆಯಲಿಲ್ಲ. ನಾನೇ ಆಶ್ಚರ್ಯಗೊಂಡು ನಿಸ್ಸಹಾಯಕನಾಗುತ್ತಿದ್ದೆ. ಯಾವ ನಿರ್ದಿಷ್ಟ ಅಭಿಪ್ರಾಯಕ್ಕೂ ಕಟ್ಟುಬೀಳಬಾರದೆಂದೂ. ಒಪ್ಪಂದಕ್ಕೂ ಸಿಕ್ಕಬಾರದೆಂದೂ ಜನಾಬ್ ಜಿನ್ನಾ ಅಭಿಮತವಿದ್ದಂತೆ ತೋರಿತು.

ಆಮೇಲೆ ಗಾಂಧಿಜಿ ಮತ್ತು ನಮ್ಮಲ್ಲಿ ಇತರರು ಅನೇಕಬಾರಿ ಜಿನ್ನಾನನ್ನು ನೋಡಿದರು. ಅನೇಕ ಗಂಟೆಗಳ ಕಾಲ ಮಾತನಾಡಿದರೂ ಪೀಠಿಕಾ ಪ್ರಕರಣದಲ್ಲೇ ಮುಗಿಯುತ್ತಿತ್ತು. ಕಾಂಗ್ರೆಸ್ ಮತ್ತು ಲೀಗ್ ಪ್ರತಿನಿಧಿಗಳು ಕಲೆತು ಚರ್ಚೆಮಾಡೋಣವೆಂದು ನಾವು ಸಲಹೆಮಾಡಿದೆವು. ಭಾರತದಲ್ಲಿ ಮುಸ್ಲಿಮರ ಏಕೈಕ ಪ್ರತಿನಿಧಿ ಸಂಸ್ಥೆ ಮುಸ್ಲಿಂ ಲೀಗ್ ಮಾತ್ರವೆಂದೂ, ಕಾಂಗ್ರೆಸ್ ಕೇವಲ ಹಿಂದೂ ಸಂಸ್ಥೆ ಎಂದೂ ಒಪ್ಪಿದರೆ ಮಾತ್ರ ಅದು ಸಾಧ್ಯವೆಂದು ಜನಾಬ್ ಜಿನ್ನಾರಿಂದ ಉತ್ತರಬಂದಿತು. ಆದ್ದ

ದೊಡ್ಡ ಗೋಡೆಯೇ ಬಂದಿತು. ಮುಸ್ಲಿಂ ಲೀಗಿನ ಪ್ರಾಮುಖ್ಯತೆ ನಮಗೆ ತಿಳಿದಿತ್ತು. ಆದ್ದರಿಂದಲೇ ಅದರೊಡನೆ ಒಪ್ಪಂದಕ್ಕೆ ಬರಲು ಯತ್ನಿಸಿದೆವು. ಆದರೆ ದೇಶದಲ್ಲಿನ ಇತರ ಮುಸ್ಲಿಂ ಸಂಸ್ಥೆಗಳನ್ನು-ನಮ್ಮೊಂದಿಗೆ ಸಹಕರಿಸಿ ಹೋರಾಡಿದವರನ್ನು-ನಾವು ಮರೆಯುವದೆಂತು ? ಕಾಂಗ್ರೆಸ್ಸಿನಲ್ಲೇ ಮುಸ್ಲಿಮರ ಸಂಖ್ಯೆ ಬೇಕಾದಷ್ಟು ಇತ್ತು; ನಮ್ಮ ಕಾರ್ಯಕಾರಿ ಸಮಿತಿಯಲ್ಲಿ ಸಹ ಇದ್ದರು. ಜಿನ್ನಾ ಬೇಡಿಕೆಯನ್ನು ಒಪ್ಪುವದೆಂದರೆ ನಮ್ಮ ಹಳೆಯ ಕಾಂಗ್ರೆಸ್ ಮುಸ್ಲಿಂ ಸಹೋದ್ಯೋಗಿಗಳನ್ನು ಕಾಂಗ್ರೆಸ್ಸಿನಿಂದ ಹೊರದೂಡಿದಂತೆ; ಕಾಂಗ್ರೆಸ್ಸಿನಲ್ಲಿ ಅವರಿಗೆ ಸ್ಥಾನವಿಲ್ಲ ಎಂದಂತೆ. ಕಾಂಗ್ರೆಸ್ಸಿನ ಮೂಲನೀತಿಯನ್ನೇ ಕೈಬಿಟ್ಟು ಎಲ್ಲರಿಗೂ ತೆರೆದ ರಾಷ್ಟ್ರೀಯ ಸಂಸ್ಥೆಯನ್ನು ಕೋಮುವಾರು ಸಂಸ್ಥೆಯನ್ನಾಗಿ ಮಾಡಿದಂತೆ. ಅದು ಊಹಿಸಲು ಸಹ ನಮ್ಮಿಂದ ಸಾಧ್ಯವಿರಲಿಲ್ಲ. ಕಾಂಗ್ರೆಸ್ ಮೊದಲೇ ಇರದಿದ್ದರೆ ಎಲ್ಲ ಭಾರತೀಯರಿಗೂ ಪ್ರವೇಶ ಅವಕಾಶವಿರುವ ಬೇರೊಂದು ರಾಷ್ಟ್ರೀಯ ಸಂಸ್ಥೆಯನ್ನು ನಾವು ಕಟ್ಟಬೇಕಾಗಿತ್ತು.

ಜಿನ್ನಾ ಅದೊಂದೇ ಹಟಹಿಡಿದು ಬೇರೆ ಎಲ್ಲ ವಿಷಯ ಚರ್ಚಿಸಲು ನಿರಾಕರಿಸಿದ್ದನ್ನೂ ಕಂಡು ನಮಗೆ ಅರ್ಥವಾಗಲಿಲ್ಲ. ಯಾವ ಒಪ್ಪಂದವೂ ಆತನಿಗೆ ಬೇಕಿಲ್ಲವೆಂದೂ, ಯಾವ ಖಚಿತ ಅಭಿಪ್ರಾಯವನ್ನೂ ಕೊಡಲು ಸಿದ್ಧನಿಲ್ಲವೆಂದೂ ತೀರ್ಮಾನಕ್ಕೆ ಬಂದೆವು. ಪರಿಸ್ಥಿತಿಯನ್ನು ಹೀಗೆ ಹದಗೆಡಲು ಬಿಟ್ಟೇ ಆತ ತೃಪ್ತಿಪಡೆದ. ಪ್ರಾಯಶಃ ಈ ರೀತಿ ಮಾಡುವುದರಿಂದ ಬ್ರಿಟಿಷ್ ಸರಕಾರದಿಂದ ಹೆಚ್ಚು ಸೌಲಭ್ಯ ಪಡೆಯಬಹುದೆಂದು ಯೋಚಿಸಿದ್ದಿರಬಹುದು.

ಜಿನ್ನಾನ ಈ ಬೇಡಿಕೆಗೆ ಭಾರತದಲ್ಲಿ ಹಿಂದೂಗಳು ಮತ್ತು ಮುಸ್ಲಿಮರು ಬೇರೆ ಬೇರೆ ಎರಡು ಜನಾಂಗಗಳೆಂಬ ಹೊಸ ತತ್ವವೇ ಆಧಾರವಾಯಿತು. ಎರಡೇ ಏಕೋ ನನಗೆ ಅರ್ಥವಾಗಲಿಲ್ಲ. ಜನಾಂಗವೂ ಧರ್ಮವೂ ಒಂದೇ ಆದರೆ ಭಾರತದಲ್ಲಿ ಅನೇಕ ಜನಾಂಗಗಳಿರಬೇಕು. ಇಬ್ಬರೂ ಸಹೋದರರಲ್ಲಿ ಒಬ್ಬನು ಹಿಂದೂ ಇರಬಹುದು, ಇನ್ನೊಬ್ಬನು ಮುಸಲ್ಮಾನನಿರಬಹುದು ; ಆದ ಮಾತ್ರಕ್ಕೆ ಇಬ್ಬರು ಬೇರೆ ಜನಾಂಗದವರು ! ಭಾರತದ ಅಸಂಖ್ಯಾತ ಹಳ್ಳಿಗಳಲ್ಲಿ ಬೇರೆ ಬೇರೆ ಪ್ರಮಾಣದಲ್ಲಿ ಈ ಎರಡು ಜನಾಂಗಗಳೂ ಇದ್ದುವು. ಈ ಜನಾಂಗಗಳಿಗೆ ಗಡಿಯೇ ಇರಲಿಲ್ಲ. ಇದ್ದರೂ ಒಂದರ ಮೇಲೊಂದು. ಬಂಗಾಲದ ಮುಸ್ಲಿಂ ಮತ್ತು ಹಿಂದೂ ಒಂದೇ ಭಾಷೆಯನ್ನು ಮಾತನಾಡುತ್ತ, ಒಂದೇ ಸಂಪ್ರದಾಯ ಮತ್ತು ಪದ್ಧತಿಯಲ್ಲಿ ಒಟ್ಟಿಗೆ ಜೀವಿಸುತ್ತಿದ್ದರೂ ಎರಡು ಜನಾಂಗದವರು ! ಇವೆಲ್ಲ ಸುಲಭವಾಗಿ ಅರ್ಥವಾಗಲಿಲ್ಲ. ಯಾವುದೋ ಒಂದು ಮಧ್ಯ ಯುಗಕ್ಕೆ ಹೋದಂತೆ ಕಂಡಿತು. ಜನಾಂಗವೆಂದರೆ ಏನೆಂದು ವಿವರಿಸುವುದು ಸುಲಭವಲ್ಲ. ಪ್ರಾಯಶಃ ರಾಷ್ಟ್ರೀಯ ಭಾವನೆಯ ಮುಖ್ಯಗುಣ ಏಕೀಭಾವನೆ ಮತ್ತು ಉಳಿದ ಮಾನವ ಜನಾಂಗಗಳನ್ನು ಅದೇ ಒಂದೇ ದೃಷ್ಟಿಯಿಂದ ನೋಡುವುದು. ಭಾರತದಲ್ಲಿ ಆ ದೃಷ್ಟಿ ಎಷ್ಟಿದೆ ಎನ್ನುವುದು ಚರ್ಚಾಸ್ಪದವಿರಬಹುದು. ಪ್ರಾಯಶಃ ಹಿಂದೆ ಭಾರತದಲ್ಲಿ ಉಪರಾಷ್ಟ್ರ ಭಾವನೆಯು ಇದ್ದು ಕ್ರಮೇಣ ಒಂದು ರಾಷ್ಟ್ರೀಯ ಭಾವನೆಯು ಬೆಳೆದಿರಬಹುದು. ಈ ತಾತ್ವಿಕ ಚರ್ಚೆ ಈಗ ಅನವಶ್ಯಕ. ಪ್ರಪಂಚದ ಇಂದಿನ ಅತ್ಯಂತ ಬಲಿಷ್ಠ ರಾಷ್ಟ್ರಗಳಾದ ಸಂಯುಕ್ತ ಅಮೆರಿಕ ಸಂಸ್ಥಾನಗಳು ಮತ್ತು ಸೋವಿಯಟ್ ರಷ್ಯ ಅನೇಕ ಜನಾಂಗಗಳ ರಾಜ್ಯಗಳಾದರೂ ಒಂದು ಉನ್ನತ ರಾಷ್ಟ್ರೀಯ ಭಾವನೆಯನ್ನು ಬೆಳೆಸಿವೆ.

ಜನಾಬ್ ಜಿನ್ನಾನ ಎರಡು ಜನಾಂಗಗಳ ತತ್ವವೇ ಭಾರತದ ವಿಭಜನೆಗೆ, ಪಾಕಿಸ್ತಾನದ ಯೋಜನೆಗೆ ಮೂಲ. ಎರಡು ಜನಾಂಗಗಳ ಪ್ರಶ್ನೆಯನ್ನು ಅದೂ ಬಗೆಹರಿಸಲಿಲ್ಲ; ಏಕೆಂದರೆ ಎಲ್ಲ ಕಡೆಯೂ ಆ ಪ್ರಶ್ನೆ ಇದ್ದೇ ಇತ್ತು. ಆದರೆ ಅದರಿಂದ ಒಂದು ತಾತ್ವಿಕಕಲ್ಪನೆಗೆ ರೂಪಕೊಟ್ಟಂತಾಯಿತು. ಭಾರತದ ಐಕ್ಯತೆ ಒಡೆಯಲು ಅವಕಾಶಕೊಡಬಾರದೆಂದು ಅನೇಕರಲ್ಲಿ ಒಂದು ವಿರೋಧಭಾವನೆಗೆ, ಒಂದು ಭಾವೋದ್ರೇಕಕ್ಕೆ ಅವಕಾಶವಾಯಿತು. ಸಾಮಾನ್ಯವಾಗಿ ಭಾರತದ ಐಕ್ಯತೆಯು ಎಲ್ಲರಿಗೂ ಸಮ್ಮತವಿತ್ತು, ಆದರೆ ಅದಕ್ಕೆ ವಿರೋಧ ಬಂದಾಗ, ಪೆಟ್ಟುಬಿದ್ದಾಗ, ಅದನ್ನು ಸಡಿಲಿಸಲು ಯತ್ನಮಾಡಿದಾಗ ಆ ಐಕ್ಯತೆಯ ಮಹತ್ವ ತಿಳಿಯುತ್ತದೆ. ಮತ್ತು ಅದನ್ನು ಏನೇಬರಲಿ ಕಾಪಾಡಬೇಕೆಂಬ ಹಟ ಹುಟ್ಟುತ್ತದೆ.

ಕಾಂಗ್ರೆಸ್ಸಿನ ದೃಷ್ಟಿಕೋನಕ್ಕೂ ಮತ್ತು ಇತರ ಕೋಮುವಾರು ಸಂಸ್ಥೆಗಳ ದೃಷ್ಟಿಕೋನಕ್ಕೂ ಮೂಲದಲ್ಲೇ ವ್ಯತ್ಯಾಸವಿತ್ತು. ಮುಖ್ಯಕೋಮುವಾರು ಸಂಸ್ಥೆಗಳೆಂದ ಮುಸ್ಲಿಂಲೀಗ್ ಮತ್ತು ಅದರ

ಪ್ರತಿಯಾಗಿ ರೂಪುಗೊಂಡ ಹಿಂದೂಮಹಾಸಭೆ. ತತ್ವಶಃ ಭಾರತದ ಸ್ವಾತಂತ್ರ್ಯಕ್ಕೆ ಬೆಂಬಲಕೊಟ್ಟರೂ ಅವುಗಳ ಮುಖ್ಯ ಉದ್ದೇಶ ತಮ್ಮ ಸಂಗಡಕ್ಕೆ ಹೆಚ್ಚು ರಕ್ಷಣೆ ಮತ್ತು ವಿಶೇಷ ಅಧಿಕಾರ ಪಡೆಯುವುದೇ ಆಗಿತ್ತು. ಈ ಅಧಿಕಾರ ಪ್ರಾಪ್ತಿಗೆ ಬ್ರಿಟಿಷ್ ಸರಕಾರದ ಕೃಪಾಕಟಾಕ್ಷ ಅವಶ್ಯವಿದ್ದುದರಿಂದ ಬ್ರಿಟಿಷ್ ಸರಕಾರ ವಿರುದ್ಧ ಯಾವ ಘರ್ಷಣೆಗೂ ಅವು ಸಿದ್ಧವಿರಲಿಲ್ಲ. ಐಕ್ಯಭಾರತದ ಸ್ವಾತಂತ್ರ್ಯ ಸಾಧನೆಯೊಂದೇ ಕಾಂಗ್ರೆಸ್ಸಿನ ಗುರಿಯಾಗಿತ್ತು. ಉಳಿದೆಲ್ಲ ವಿಷಯಗಳೂ ಈ ಧ್ಯೇಯದ ನಂತರ; ಆದ್ದರಿಂದ ಬ್ರಿಟಿಷ್ ಆಡಳಿತಶಕ್ತಿಯೊಡನೆ ನಿರಂತರ ಹೋರಾಟವೂ ಘರ್ಷಣೆಯೂ ಅನಿವಾರ್ಯವಾಯಿತು. ಕಾಂಗ್ರೆಸ್ಸಿನಲ್ಲಿ ಪ್ರತಿಬಿಂಬಿತವಾದ ಭಾರತ ರಾಷ್ಟ್ರೀಯ ಭಾವನೆಯೂ ಬ್ರಿಟಿಷ್ ಸಾಮ್ರಾಜ್ಯಭಾವನೆಯನ್ನು ಎದುರಿಸಿ ನಿಂತಿತು. ಕಾಂಗ್ರೆಸ್ಸಿನ ಕಾರ್ಯಕ್ರಮದಲ್ಲಿ ರೈತರ ಆರ್ಥಿಕ ಮತ್ತು ಸಾಮಾಜಿಕ ಸಮಸ್ಯೆಗಳಮೇಲೆ ಒಂದು ನೀತಿಯು ರೂಪುಗೊಂಡಿತ್ತು. ಮುಸ್ಲಿಂ ಲೀಗ್ ಆಗಲಿ ಹಿಂದೂ ಮಹಾ ಸಭೆಯಾಗಲಿ ಅಂಥ ಯಾವ ಕಾರ್ಯಕ್ರಮವನ್ನೂ ಯೋಚಿಸಿ ರೂಪಿಸಿರಲಿಲ್ಲ. ಸಮಾಜವಾದಿಗಳು ಮತ್ತು ಸಮತಾವಾದಿಗಳಿಗೆ ಅಂಥ ವಿಷಯಗಳಲ್ಲಿ ತುಂಬ ಆಸಕ್ತಿ ಏನೋ ಇತ್ತು. ಅವರು ತಮ್ಮ ಕಾರ್ಯಕ್ರಮವನ್ನು ಕಾಂಗ್ರೆಸ್ಸಿನ ಒಳಗೂ ಹೊರಗೂ ರೂಪಿಸಲು ಪ್ರಯತ್ನಪಟ್ಟರು.

ಕಾಂಗ್ರೆಸ್ಸಿನ ಕಾರ್ಯನೀತಿಗೂ ಮತ್ತು ಈ ಕೋಮುವಾರು ಸಂಸ್ಥೆಗಳಿಗೂ ಇನ್ನೊಂದು ಮುಖ್ಯ ವ್ಯತ್ಯಾಸವಿತ್ತು. ಹೋರಾಟ ಮತ್ತೆ ಶಾಸನ ಸಭಾಕಾರ್ಯವಲ್ಲದೆ ಕಾಂಗ್ರೆಸ್ ಜನತೆಯ ಮಧ್ಯೆ ಮಾಡ ಬೇಕಾದ ಕೆಲವು ರಚನಾತ್ಮಕ ಕಾರ್ಯಗಳಿಗೆ ಮಹತ್ವ ಕೊಟ್ಟಿತ್ತು. ಗ್ರಾಮ ಕೈಗಾರಿಕೆಯನ್ನು ಪುನರುಜ್ಜೀವನಗೊಳಿಸಿ ಬೆಳೆಸುವುದು, ಅಸ್ಪೃಶ್ಯರ ಜೀವನಮಟ್ಟ ಉನ್ನತಿಗೊಳಿಸುವುದು, ಮೂಲಶಿಕ್ಷಣ ಆಚರಣೆಗೆ ತರುವುದು, ಗ್ರಾಮಸೇವೆಯಲ್ಲಿ ಗ್ರಾಮ ಪಾಕೀಜಾ, ವೈದ್ಯಸಹಾಯ ಮುಂತಾದ ಅನೇಕ ಕಾರ್ಯಕ್ರಮಗಳಿದ್ದವು. ಈ ಕಾರ್ಯಗಳಿಗೂ ಕಾಂಗ್ರೆಸ್ ಪ್ರತ್ಯೇಕ ಸಂಸ್ಥೆಗಳನ್ನು ಸ್ಥಾಪಿಸಿತ್ತು. ಅವುಗಳೆಲ್ಲ ರಾಜಕೀಯದಲ್ಲಿ ಪ್ರವೇಶಮಾಡದೆ ಕೆಲಸಮಾಡುತ್ತ ಸಹಸ್ರಾರು ಜನ ಪೂರ್ತಕಾಲದ ಕೆಲಸಗಾರರಿಗೂ ಅದಕ್ಕೂ ಹೆಚ್ಚಿನ ಅಲ್ಪವೇಳೆಯ ಕೆಲಸಗಾರರಿಗೂ ಜೀವನಕ್ಕೆ ಅವಕಾಶಕಲ್ಪಿಸಿತ್ತು. ರಾಜಕೀಯ ಚಟುವಟಿಕೆಯೂ ಓಮ್ಮೆಟ್ಟಿದ ಕಾಲದಲ್ಲಿ ಸಹ ರಾಜಕೀಯದಿಂದ ದೂರವಿದ್ದ ನಿರಾಡಂಬರದ ರಚನಾತ್ಮಕ ಕಾರ್ಯ ನಡೆಯುತ್ತಲೇ ಇತ್ತು. ಆದರೆ ಕಾಂಗ್ರೆಸ್ಸಿಗೂ ಸರಕಾರಕ್ಕೂ ಘರ್ಷಣೆ ಎದ್ದಾಗ ಸರಕಾರವು ಈ ರಚನಾತ್ಮಕ ಕೆಲಸಕ್ಕೂ ಅವಕಾಶಕೊಡುತ್ತಿರಲಿಲ್ಲ. ಈ ಕಾರ್ಯಕ್ರಮದ ಆರ್ಥಿಕಬೆಲೆಯನ್ನು ಕೆಲವರು ಪ್ರಶ್ನಿಸಿದರು ; ಆದರೆ ಅದರ ಸಾಮಾಜಿಕ ಪ್ರಾಮುಖ್ಯತೆಯನ್ನು ಯಾರೂ ಅಲ್ಲಗಳೆಯುವಂತೆ ಇರಲಿಲ್ಲ. ಜನತೆಯೊಂದಿಗೆ ನಮೀಪ ಸಂಪರ್ಕವಿಟ್ಟುಕೊಂಡಿದ್ದ ಪೂರ್ಣಕಾಲದ ಸುಶಿಕ್ಷಿತ ಕೆಲಸಗಾರರ ದೊಡ್ಡದೊಂದು ಪಡೆ ಸಿದ್ಧವಾಯಿತು. ಜನರಲ್ಲಿ ಆತ್ಮಾವಲಂಬನೆ ಮತ್ತು ಸ್ವಸಾಮರ್ಥ್ಯದ ಭಾವನೆ ಬೇರೂರಿತು. ಕಾಂಗ್ರೆಸ್ ಸದಸ್ಯರು-ಹೆಂಗಸರು, ಗಂಡಸರು-ರೈತರ ಮತ್ತು ಶ್ರಮಜೀವಿಗಳ ಸಂಸ್ಥೆಗಳನ್ನು ಕಟ್ಟುವುದರಲ್ಲಿ ಪ್ರಮುಖ ಭಾಗವಹಿಸಿದರು. ಭಾರತದ ಅತ್ಯಂತ ದೊಡ್ಡ ಸುವ್ಯವಸ್ಥಿತ ಅಹಮದಾಬಾದ್ ಗಿರಣಿಕಾಮಗಾರ ಸಂಘ ಸ್ಥಾಪನೆಯಾದುದು ಕಾಂಗ್ರೆಸ್ ಜನರಿಂದ. ಕಾಂಗ್ರೆಸ್ಸಿನೊಂದಿಗೆ ಪೂರ್ಣಸಹಕರಿಸಿಯೇ ಅದು ಕೆಲಸಮಾಡಿತು. ಈ ಎಲ್ಲ ಕಾರ್ಯಕ್ರಮಗಳಿಂದ ಕಾಂಗ್ರೆಸ್ಸಿಗೆ ದೊರೆತ ಭದ್ರವಾದ ಹಿನ್ನೆಲೆ ಉಳಿದ ಕೋಮುವಾರು ಸಂಸ್ಥೆ ಯಾವುದಕ್ಕೂ ದೊರೆಯಲಿಲ್ಲ. ಅವುಗಳೆಲ್ಲ ಹುಚ್ಚು ಎದ್ದಾಗ ಅಥವ ಚುನಾವಣೆಗಳ ಸಮಯಬಂದಾಗ ಸ್ವಲ್ಪ ಚಟವಟಿಕೆ ತೋರಿಸಿ ಕೆಲಸ ಮಾಡುತ್ತಿದ್ದವು. ಸರಕಾರದಿಂದ ಸದಾ ಕಾಂಗ್ರೆಸ್ ಜನರಿಗಿದ್ದ ಬಂಧನದ ಭಯವಾಗಲಿ, ವೈಯಕ್ತಿಕ ತೊಂದರೆಯ ಭೀತಿಯಾಗಲಿ ಅವರಿಗೆ ಯಾವುದೂ ಇರಲಿಲ್ಲ. ಆದ್ದರಿಂದ ಅಧಿಕಾರದ ಆಶೆ ಇರುವವರಿಗೆ ಮತ್ತು ಅವಕಾಶಕ್ಕೆ ಹೊಂಚುಹಾಕುವವರಿಗೆ ಈ ಸಂಸ್ಥೆಗಳಲ್ಲಿ ಒಳ್ಳೆಯ ಅವಕಾಶವಿತ್ತು. ಆದರೆ ಅಹರಾರ್ ಮತ್ತು ಜಮಾಯತ್ ಉಲೇಮಾ ಸಂಸ್ಥೆಗಳು ಕಾಂಗ್ರೆಸ್ಸಿನ ರಾಜಕೀಯ ನೀತಿಯನ್ನೆ ಅನುಸರಿಸಿದ್ದರಿಂದ ಅವು ಸಹ ಸರಕಾರದ ಕೋಪಕ್ಕೆ ಈಡಾಗಿ ತುಂಬ ನಷ್ಟ ಅನುಭವಿಸಬೇಕಾಯಿತು.

ಕಾಂಗ್ರೆಸ್ ಪ್ರತಿಬಿಂಬಿಸಿದ್ದು ಮಧ್ಯಮವರ್ಗದ ಹೊಸ ಪೌರತ್ವದ ಭಾವನೆ ಬೆಳೆದಂತೆ ಬೆಳೆದ ರಾಷ್ಟ್ರೀಯ ಭಾವನೆ ಮಾತ್ರವಲ್ಲ; ಸಾಮಾನ್ಯ ಜನತೆಯ ಸಾಮಾಜಿಕ ಸುಧಾರಣೆಯ ಅಭಿಲಾಷೆಯ ಆತುರವನ್ನೂ ಪ್ರತಿಬಿಂಬಿಸಿತು. ಜಮೀನುದಾರಿ ಪದ್ಧತಿಯಲ್ಲಿ ಕ್ರಾಂತಿಕಾರಕ ಪರಿವರ್ತನೆಯೇ ಅದರ ಮುಖ್ಯ ಗುರಿಯಾಗಿತ್ತು. ಇದರಿಂದ ಕೆಲವು ವೇಳೆ ಕಾಂಗ್ರೆಸ್ಸಿನಲ್ಲೇ ಒಡಕು ಹುಟ್ಟುತ್ತಿತ್ತು. ಜಮೀನು ದಾರರು, ಬಂಡವಾಳಗಾರರು ರಾಷ್ಟ್ರೀಯ ಭಾವನೆಯುಳ್ಳವರಾಗಿದ್ದರೂ, ಸಾಮಾಜಿಕ ಸುಧಾರಣೆಗಳ ಭಯದಿಂದ ಕಾಂಗ್ರೆಸ್ಸಿನಿಂದ ದೂರನಿಲ್ಲುತ್ತಿದ್ದರು. ಕಾಂಗ್ರೆಸ್ಸಿನಲ್ಲಿ ಸಮಾಜವಾದಿಗಳೂ ಇದ್ದರು, ಸಮತಾ ವಾದಿಗಳೂ ಇದ್ದರು. ಕಾಂಗ್ರೆಸ್ ನೀತಿಯಮೇಲೆ ಅವರ ಪ್ರಭಾವವೂ ಇತ್ತು. ಕೋಮುವಾರು ಸಂಸ್ಥೆ ಗಳು ಹಿಂದೂ ಇರಲಿ, ಮುಸ್ಲಿಂ ಇರಲಿ, ಬಂಡವಾಳಗಾರರು ಮತ್ತು ಜಮೀನುದಾರರನ್ನೇ ಆಶ್ರಯಿಸಿದ ಕಾರಣ ಯಾವ ಕ್ರಾಂತಿಕಾರಕ ಸಾಮಾಜಿಕ ಬದಲಾವಣೆಯೂ ಅವರಿಗೆ ಬೇಕಿರಲಿಲ್ಲ. ಆದ್ದರಿಂದ ನಿಜ ವಾದ ಹೋರಾಟಕ್ಕೂ ಧರ್ಮಕ್ಕೂ ಯಾವ ಸಂಬಂಧವೂ ಇರಲಿಲ್ಲ. ಮುಖ್ಯವಾಗಿ ಹೋರಾಟವೆಲ್ಲ ರಾಷ್ಟ್ರೀಯ ಭಾವನೆ—ಪ್ರಜಾಸತ್ತೆ—ಸಾಮಾಜಿಕ ಸುಧಾರಣೆ ಇವುಗಳ ಪರ ನಿಂತವರಿಗೂ ಧರ್ಮದ ಹೆಸ ರಿನಲ್ಲಿ ಸೋಗುಹಾಕಿಕೊಂಡ ನವಾಬಗಿರಿ ಸಂಪ್ರದಾಯ ಸಂರಕ್ಷಕರಿಗೂ ನಡೆಯುತ್ತಿತ್ತು. ಈ ಉತ್ಕಟ ಪರಿಸ್ಥಿತಿಯಲ್ಲಿ ಪ್ರತಿಗಾಮಿ ಶಕ್ತಿಗಳಿಗೆ ವಿದೇಶಿ ಆಡಳಿತಗಾರರ ಬೆಂಬಲವೇ ಬಲ. ಆಡಳಿತಗಾರರಿಗೆ ಯಾವ ಪ್ರಗತಿಯೂ ಬೇಕಿಲ್ಲದಿದ್ದುದೇ ಅದಕ್ಕೆ ಕಾರಣ.

ಪ್ರಪಂಚದ ಎರಡನೆಯ ಯುದ್ಧ ಆರಂಭವಾದೊಡನೆ ಪ್ರಾಂತಗಳಲ್ಲಿ ಕಾಂಗ್ರೆಸ್ ಸರಕಾರಗಳು ರಾಜಿನಾಮೆ ಕೊಡಬೇಕಾಗಿ ಬಂದು ದೇಶದಲ್ಲಿ ಒಂದು ಉತ್ಕಟ ಪರಿಸ್ಥಿತಿ ಒದಗಿತು. ಅದಕ್ಕೆ ಮುಂಚೆ ಜನಾಬ್ ಜಿನ್ನಾ ಮತ್ತು ಮುಸ್ಲಿಂ ಲೀಗಿನೊಂದಿಗೆ ಒಪ್ಪಂದಕ್ಕೆ ಬರಲು ಕಾಂಗ್ರೆಸ್ ಮತ್ತೊಮ್ಮೆ ಪ್ರಯತ್ನ ಮಾಡಿತು. ಯುದ್ಧ ಆರಂಭವಾದೊಡನೆ ಸೇರಿದ ಮೊದಲನೆಯ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಸಭೆಗೆ ಜನಾಬ್ ಜಿನ್ನಾರನ್ನೂ ಆಹ್ವಾನಿಸಿದೆವು. ಆದರೆ ಆತ ಬರಲಿಲ್ಲ. ಪ್ರಪಂಚದ ವಿಷಮ ಪರಿಸ್ಥಿತಿಯ ದೃಷ್ಟಿಯಿಂದ ಇಬ್ಬರಿಗೂ ಒಪ್ಪಿಗೆಯಾಗುವ ಕಾರ್ಯನೀತಿ ರೂಪುಗೊಳಿಸಲು ಸಾಧ್ಯವೇನೋ ಎಂದು ನಾವೇ ಆಮೇಲೆ ನೋಡಿದೆವು. ಒಂದು ಹೆಜ್ಜೆ ಮುಂದುವರಿಯದಿದ್ದರೂ ಮಾತನ್ನು ಮುಂದುವರಿಸಬೇಕೆಂದು ನಿರ್ಧರಿಸಿದೆವು. ಈ ಮಧ್ಯೆ ರಾಜಕೀಯ ಪ್ರಶ್ನೆಗಾಗಿ ಕಾಂಗ್ರೆಸ್ ಸರಕಾರಗಳು ರಾಜಿನಾಮೆಕೊಟ್ಟವು. ಮುಸ್ಲಿಂ ಲೀಗಿಗೂ ಕೋಮುವಾರು ಪ್ರಶ್ನೆಗೂ ಈ ರಾಜಿನಾಮೆಗಳಿಗೂ ಯಾವ ಸಂಬಂಧವೂ ಇರಲಿಲ್ಲ. ಕಾಂಗ್ರೆಸ್ಸಿನಮೇಲೆ ಕೈಮಾಡಲು ಜಿನ್ನಾ ಇದೇ ಸಮಯ ಉಪಯೋಗಿಸಿಕೊಂಡು ಪ್ರಾಂತಗಳು ಕಾಂಗ್ರೆಸ್ ರಾಜ್ಯಭಾರದಿಂದ ಬಿಡುಗಡೆಯಾದುದಕ್ಕೆ "ಬಿಡುಗಡೆಯ ದಿನ" ಆಚರಿಸಿರೆಂದು ತನ್ನ ಅನುಯಾಯಿಗಳಿಗೆ ಆಜ್ಞೆಮಾಡಿದ. ಇದರಜೊತೆಗೆ ಕಾಂಗ್ರೆಸ್ಸಿನಲ್ಲಿದ್ದ ರಾಷ್ಟ್ರೀಯ ಭಾವನೆಯ ಮುಸ್ಲಿಮರಮೇಲೂ, ಹಿಂದೂ ಮುಸ್ಲಿಮರಿಬ್ಬರ ಗೌರವಕ್ಕೆ ಪಾತ್ರರಾದ ಕಾಂಗ್ರೆಸ್ ಅಧ್ಯಕ್ಷ ಮೌಲಾನ ಅಬುಲ್ ಕಲಾಮ್ ಅಜಾದರ ಮೇಲೂ ತುಚ್ಛ ನಿಂದೆಯನ್ನೂ ಮಾಡಿದ. "ಬಿಡುಗಡೆಯ ದಿನ"ವು ಕಳೆಕಟ್ಟಲಿಲ್ಲ, ಕೆಲವು ಕಡೆ ಮುಸ್ಲಿಮರೇ ವಿರೋಧ ಪ್ರದರ್ಶನ ನಡೆಸಿದರು. ಆದರೆ ಮನಸ್ಸಿನ ಕಹಿ ಮಾತ್ರ ಇನ್ನೂ ಹೆಚ್ಚಿತು, ಮತ್ತು ಜಿನ್ನಾಗೆ, ಆತನ ನೇತೃತ್ವದ ಮುಸ್ಲಿಂ ಲೀಗಿಗೆ ಕಾಂಗ್ರೆಸ್‌ನೊಡನೆ ಯಾವ ಒಪ್ಪಂದ ಮತ್ತು ಭಾರತದ ಸ್ವಾತಂತ್ರ್ಯ ಸಾಧನೆ ಬೇಕಿಲ್ಲವೆಂದು ಸ್ಪಷ್ಟವಾಯಿತು. ಇದ್ದಂತೆ ಇರುವುದೇ ಅವರಿಗೆ ಬೇಕಾಗಿತ್ತು.

### ೬. ರಾಷ್ಟ್ರೀಯ ಯೋಜನಾ ಸಮಿತಿ

೧೯೩೮ ರ ಆಖೈರು ಹೊತ್ತಿಗೆ ಕಾಂಗ್ರೆಸ್ ಪ್ರೇರಣೆಯಿಂದ ರಾಷ್ಟ್ರೀಯ ಯೋಜನಾ ಸಮಿತಿ ಒಂದು ರಚಿತವಾಯಿತು. ಅದರಲ್ಲಿ ಹದಿನೈದು ಜನರು ಸದಸ್ಯರೂ, ಪ್ರಾಂತಸರಕಾರಗಳ ಪ್ರತಿನಿಧಿಗಳೂ, ನಮ್ಮೊಂದಿಗೆ ಸಹಕರಿಸಲೊಪ್ಪಿದ ಸಂಸ್ಥಾನ ಪ್ರತಿನಿಧಿಗಳೂ ಇದ್ದರು. ಸದಸ್ಯರಲ್ಲಿ ಪ್ರಸಿದ್ಧರಾದ ಕೈಗಾರಿ ಕೋದ್ಯಮಿಗಳು, ಶ್ರಮಜೀವಿ ಸಂಘಗಳ ಕಾಂಗ್ರೆಸ್ ಪ್ರತಿನಿಧಿಗಳು, ಗ್ರಾಮೋದ್ಯೋಗ ಸಂಘದ ಪ್ರತಿನಿಧಿ

ಗಳೂ ಇದ್ದರು. ಕಾಂಗ್ರೆಸೇತರ ಪ್ರಾಂತಗಳಾದ ಬಂಗಾಲ, ಪಂಜಾಬ್, ಸಿಂಧ ಮತ್ತು ಪ್ರಮುಖ ಸಂಸ್ಥಾನಗಳಾದ ಹೈದರಾಬಾದ್, ಮೈಸೂರು, ಬರೋಡ, ತಿರುವಾಂಕೂರು, ಭೂಪಾಲ್‌ನಿಂದ ಪ್ರತಿನಿಧಿಗಳನ್ನು ಸೇರಿಸಿದೆವು. ಭಾರತ ಸರಕಾರ ತನ್ನ ಪ್ರತಿನಿಧಿಗಳನ್ನು ಕಳುಹದೆ ಅಸಹಕಾರ ತೋರಿದುದನ್ನು ಬಿಟ್ಟರೆ ಯಾವ ರಾಜಕೀಯ ಮಿತಿಯಾಗಲಿ, ಅಧಿಕಾರಿಗಳು ಅನಧಿಕಾರಿಗಳು ಎಂಬ ಭೇದವಾಗಲಿ ಅಡ್ಡಿಬಾರದೆ ಈ ಸಮಿತಿಯು ಪೂರ್ಣಪ್ರಾತಿನಿಧ್ಯ ಉಳ್ಳುದಾಗಿತ್ತು. ಕಾಸಿಗೆ ಕಾಸು ಲೆಕ್ಕ ಹಾಕುವ ವಣಿಕ ಶ್ರೇಷ್ಠರೂ, ತಾತ್ವಿಕ ಭಾವನೆಯ ಅರ್ಥಶಾಸ್ತ್ರಜ್ಞರೂ, ಸಮಾಜವಾದಿಗಳೂ, ಸಾಮ್ಯವಾದಿಗಳೂ ಇದ್ದರಲ್ಲದೆ ಪ್ರಾಂತ ಸರಕಾರಗಳ ಮತ್ತು ಸಂಸ್ಥಾನಗಳ ಕೈಗಾರಿಕಾ ಶಾಖೆಯ ಮುಖ್ಯ ಅಧಿಕಾರಿಗಳೂ, ಕೈಗಾರಿಕಾ ನಿಪುಣರೂ ಇದ್ದರು.

ಎಲ್ಲ ಬಗೆಯ ಅಭಿಪ್ರಾಯವೂ ಅಲ್ಲಿ ಪ್ರತಿಬಿಂಬಿತವಾಗಿತ್ತು. ಕೆಲಸ ಯಶಸ್ವಿಯಾಗಿ ಮುಂದುವರಿಯುತ್ತದೆಯೇ ಎಂದು ಸಂಶಯ ಬಂದಿತು. ಬಹಳ ಯೋಚನೆ ಮಾಡಿ, ಅನುಮಾನದಿಂದ ನಾನು ಅಧ್ಯಕ್ಷನಾಗಲು ಒಪ್ಪಿದೆ. ಈ ಕೆಲಸವು ನನಗೆ ಬಹಳ ಪ್ರಿಯವಾದುದರಿಂದ ಹಿಂದೇಟು ಹಾಕಲು ಮನಸ್ಸು ಒಪ್ಪಲಿಲ್ಲ.

ಯಾವ ಕಡೆ ತಿರುಗಿದರೂ ತೊಂದರೆಯೇ ಇತ್ತು. ನಿಜವಾದ ಯೋಜನೆ ನಿರೂಪಿಸಲು ಸಾಕಾದಷ್ಟು ಅಂಕಿ ಅಂಶಗಳ ಸಂಗ್ರಹವಿರಲಿಲ್ಲ. ಇದ್ದ ಅಂಕಿ ಅಂಶಗಳೇ ಅತ್ಯಲ್ಪ. ಸರಕಾರ ಸಹಕರಿಸುವಂತೆ ಇರಲಿಲ್ಲ. ಪ್ರಾಂತ ಸರಕಾರಗಳು ಸ್ನೇಹಪರವಿದ್ದು ಸಹಾನುಭೂತಿ ತೋರಿದರೂ ಅವುಗಳಿಗೆ ಸಮಗ್ರ ಭಾರತದ ರಾಷ್ಟ್ರೀಯ ಯೋಜನೆಯಲ್ಲಿ ಆಸಕ್ತಿ ಇರಲಿಲ್ಲ. ನಮ್ಮ ಕೆಲಸವೆಲ್ಲ ಅವರಿಗೆ ದೂರದ ಕನಸಾಗಿ ಕಂಡಿತು. ಅವರ ಸಮಸ್ಯೆಗಳೇ, ತೊಂದರೆಗಳೇ ಅವರಿಗೆ ಬೇಕಾದಷ್ಟು ಇದ್ದವು. ಕಾಂಗ್ರೆಸ್ಸಿನ ತೀರ್ಮಾನದಂತೆಯೇ ಸಮಿತಿಯು ರಚನೆಯಾಗಿದ್ದರೂ ಕಾಂಗ್ರೆಸ್ಸಿನ ಕೆಲವು ಪ್ರಮುಖ ವ್ಯಕ್ತಿಗಳಿಗೆ ಅದು ಬೇಡದ ಮಗುವಾಗಿತ್ತು. ಹೇಗೆ ಬೆಳೆದು ತನ್ನ ಮುಂದಿನ ಕಾರ್ಯ ರೂಪಿಸುತ್ತದೆ ನೋಡೋಣ ಎಂದು ಅನುಮಾನಪಟ್ಟಿದ್ದರು. ದೊಡ್ಡ ವ್ಯಾಪಾರಸ್ಥರೂ ಸಂಶಯಾತ್ಮಕ ದೃಷ್ಟಿಯಿಂದ ನೋಡಿ ಟೀಕೆ ಮಾಡುತ್ತಿದ್ದರು. ಆದರೆ ಪ್ರಾಯಶಃ ಹೊರಗೆ ಇರುವುದಕ್ಕಿಂತ ಸಮಿತಿಯ ಒಳಗೆ ಇದ್ದು ತಮ್ಮ ಹಿತರಕ್ಷಣೆ ಮಾಡಿಕೊಳ್ಳುವುದು ಮೇಲೆಂದು ಬಂದಿದ್ದರು.

ಸಮಾಜದ ಆರ್ಥಿಕ ರಚನೆಯಲ್ಲಿ ಪರಿಣಾಮಕಾರಿಯಾದ ಬದಲಾವಣೆಗಳಾಗಬೇಕಾದರೆ ಶಕ್ತಿಯುತವೂ, ಲೋಕಪ್ರಿಯವೂ ಆದ ಸ್ವತಂತ್ರ ರಾಷ್ಟ್ರೀಯ ಸರಕಾರ ಇದ್ದರೆ ಮಾತ್ರ ಸಮಗ್ರ ರಾಷ್ಟ್ರೀಯ ಯೋಜನೆ ಸಾಧ್ಯವೆಂದು ಸ್ಪಷ್ಟವಾಯಿತು. ಆದ್ದರಿಂದ ರಾಷ್ಟ್ರದ ಸ್ವಾತಂತ್ರ್ಯ ಸಾಧನೆ ಮತ್ತು ಪರದಾಸ್ಯದಿಂದ ಬಿಡುಗಡೆ ಎಲ್ಲ ಯೋಜನೆಗೆ ಮುಂಚೆ ಅಗತ್ಯವೆನಿಸಿತು. ನಮ್ಮ ಕೆಳಮಟ್ಟದ ಸಾಮಾಜಿಕ ಜೀವನ ಪದ್ಧತಿಗಳು, ಸಂಪ್ರದಾಯಶರಣ ದೃಷ್ಟಿ, ಮೊದಲಾಗಿ ಇನ್ನೂ ಅನೇಕ ತೊಂದರೆಗಳಿದ್ದವು. ಎಂದಿದ್ದರೂ ಅವುಗಳನ್ನು ಎದುರಿಸಬೇಕಾಗಿತ್ತು. ಯೋಜನೆ ಏನಿದ್ದರೂ ವರ್ತಮಾನ ಕಾಲಕ್ಕಲ್ಲ, ಅನಿರ್ದಿಷ್ಟ ಭವಿಷ್ಯಕಾಲಕ್ಕೆ ಆದ್ದರಿಂದ ಅದರಲ್ಲಿ ಒಂದು ಅನಿಶ್ಚಿತ ನೋಟವಿತ್ತು. ಆದರೂ ಪ್ರಸಕ್ತಕಾಲದ ಆಧಾರದ ಮೇಲೆಯೇ ಅದನ್ನು ಯೋಚಿಸಬೇಕು ಮತ್ತು ಆ ಭವಿಷ್ಯಕಾಲವೂ ನಮಗೆ ದೂರ ಎನಿಸಲಿಲ್ಲ. ಇರುವ ವಿಷಯ ಸಂಗ್ರಹಮಾಡಿ, ಸರಿಯಾಗಿ ಅನುಗೊಳಿಸಿ ಯೋಜನೆಯ ರೂಪು ರೇಖೆ ಸಿದ್ಧಗೊಳಿಸಿದರೆ ಮುಂದಿನ ನಿಜವಾದ ಕಾರ್ಯಶೀಲ ಯೋಜನೆಯ ತಯಾರಿಕೆಗೆ ಸಿದ್ಧತೆಮಾಡಿದ್ದಂತೆ ಆಗುವುದೆಂದೂ ಈ ಮಧ್ಯೆ ಪ್ರಾಂತ ಸರಕಾರಗಳು ಮತ್ತು ಸಂಸ್ಥಾನಗಳು ಯಾವ ರೀತಿ ಮುಂದುವರಿದು ತಮ್ಮ ಪ್ರಕೃತಿದತ್ತ ಸಂಪತ್ತನ್ನು ಅಭಿವೃದ್ಧಿಗೊಳಿಸಬಹುದೆಂದು ಸಲಹೆ ಮಾಡಬಹುದೆಂದೂ ಯೋಚಿಸಿದೆವು. ಯೋಜನೆ ರೂಪಿಸಲು ಯತ್ನಿಸಿದ್ದೂ, ರಾಷ್ಟ್ರದ ವಿವಿಧ ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳು ಯಾವ ರೀತಿ ಒಂದಕ್ಕೊಂದು ಹೊಂದಿಕೊಳ್ಳುತ್ತವೆ ಎಂದು ಯೋಚಿಸಿದ್ದೂ ನಮಗೂ ಮತ್ತು ಸಾರ್ವಜನಿಕರಿಗೂ ಒಂದು ಉತ್ತಮ ಶಿಕ್ಷಣವಾಯಿತು. ಜನರು ತಮ್ಮ ಯೋಚನೆ ಮತ್ತು ಕಾರ್ಯನೀತಿಯಲ್ಲಿ ಹಳೆಯ

ಕೊಳ್ಳಲು ದಾರಿಬಿಟ್ಟು ಸಾಮೂಹಿಕ ಸಮಸ್ಯೆಗಳನ್ನು ಪರಸ್ಪರ ಯೋಚಿಸುವುದಕ್ಕೂ, ವಿಶಾಲ ಸಹಕಾರ ಭಾವನೆಯ ದೃಷ್ಟಿ ಸ್ವಲ್ಪ ಬೆಳೆಯುವುದಕ್ಕೂ ಸಹಾಯವಾಯಿತು.

ಯೋಜನಾ ಸಮಿತಿ ರಚನೆಯ ಮುಖ್ಯ ಮೂಲ ಉದ್ದೇಶ ದೇಶದ ಔದ್ಯೋಗೀಕರಣವಾಗಿತ್ತು. ಬಡತನ, ನಿರುದ್ಯೋಗಗಳ ನಿವಾರಣೆ, ರಾಷ್ಟ್ರ ಸಂರಕ್ಷಣೆ, ಎಲ್ಲ ಸಾಮಾನ್ಯ ಆರ್ಥಿಕ ಪ್ರಗತಿ,—ಔದ್ಯೋಗೀಕರಣವಿಲ್ಲದೆ ಸಾಧ್ಯವಿಲ್ಲ. ಈ ಔದ್ಯೋಗಿಕರಣದ ಮೊದಲ ಹೆಜ್ಜೆಯಾಗಿ ಸಮಗ್ರ ರಾಷ್ಟ್ರೀಯ ಯೋಜನೆಯ ರೂಪುರೇಖೆ ಒಂದು ಸಿದ್ಧವಾಗಬೇಕಾದ್ದು ಅತ್ಯವಶ್ಯಕ. ಈ ಯೋಜನೆಯಲ್ಲಿ ದೊಡ್ಡ ದೊಡ್ಡ ಮೂಲ ಕೈಗಾರಿಕೆಗಳಿಗೂ, ಮಧ್ಯವರ್ತಿ ಕೈಗಾರಿಕೆಗಳಿಗೂ ಗೃಹಕೈಗಾರಿಕೆಗಳಿಗೂ ಸ್ಥಾನಮಾನವನ್ನು ನಿಯೋಜಿಸಬೇಕು. ಆದರೆ ಜನರ ಮುಖ್ಯ ಕಸಬಾದ ವ್ಯವಸಾಯವನ್ನು ಯಾವ ಯೋಜನೆಯೂ ಅಲಕ್ಷ್ಯ ಮಾಡುವಂತಿರಲಿಲ್ಲ. ಸಮಾಜ ಹಿತರಕ್ಷಣೆ ಕೆಲಸಗಳೂ ಅಷ್ಟೇ ಪ್ರಾಮುಖ್ಯವಿದ್ದವು. ಈ ರೀತಿ ಒಂದರಿಂದ ಇನ್ನೊಂದು, ಸರ್ವತೋಮುಖವಾಗಿ ಮುಂದುವರಿಯದೆ ಯಾವ ಒಂದು ಕಡೆಯೂ ಮುಂದುವರಿಯುವಂತಿರಲಿಲ್ಲ. ಈ ಯೋಜನೆ ಯೋಚಿಸಿದಷ್ಟು ಅದರ ವ್ಯಾಪ್ತಿಯೂ, ಆವರಣವೂ ವಿಶಾಲಗೊಂಡು ನಮ್ಮ ಪ್ರತಿಯೊಂದು ಕಾರ್ಯಕ್ರಮದಲ್ಲೂ ಪ್ರವೇಶಿಸಿತು. ಎಲ್ಲವನ್ನೂ ಒಂದೇ ಮಾದರಿಯಲ್ಲಿ ಎರಕ ಹೊಯ್ಯಬೇಕೆಂದು ನಾವು ಯೋಚಿಸಲಿಲ್ಲ. ಆದರೆ ಯೋಜನೆಯ ಯಾವ ಒಂದು ಭಾಗ ಯೋಚಿಸುವಾಗಲೂ ಸಮಗ್ರ ಚಿತ್ರ ಮುಂದಿಟ್ಟುಕೊಂಡೇ ಮುಂದುವರಿಯಬೇಕಾಗಿತ್ತು. ಕೆಲಸ ಮುಂದುವರಿದಂತೆಲ್ಲ ನಮ್ಮ ಸದಸ್ಯರ ಮತ್ತು ನನ್ನ ಮನಸ್ಸೆಲ್ಲ ಪೂರ್ಣ ಅದರಲ್ಲೆ ಮಗ್ನವಾಯಿತು. ಅದರ ಜೊತೆಯಲ್ಲೆ ಒಂದು ಅಸ್ಪಷ್ಟ, ಅನಿಶ್ಚಿತ ಭಾವನೆಯೂ ಉಂಟಾಯಿತು ; ಯೋಜನೆಯ ಮುಖ್ಯ ವಿಷಯಗಳ ಕಡೆ ಲಕ್ಷ್ಯಕೊಡದೆ ಸುಮ್ಮನೆ ಹುಡುಕಲಾರಂಭಿಸಿದೆವು. ಇದರಿಂದ ಉಪಸಮಿತಿಗಳ ಕೆಲಸವೂ ನಿಧಾನವಾಯಿತು. ಆ ಉಪಸಮಿತಿಗಳಿಗೆ ನಿಯತಕಾಲದಲ್ಲಿ ನಿರ್ದಿಷ್ಟಗುರಿ ಸಾಧಿಸುವ ಕಾರ್ಯತತ್ಪರತೆಯಾಗಲಿ, ಆತುರವಾಗಲಿ ಇರಲಿಲ್ಲ.

ನಮ್ಮ ಸಮಿತಿ ರಚನೆಯ ವೈಶಿಷ್ಟ್ಯದಿಂದ ಮುಂದಿನ ಸಾಮಾಜಿಕ ವ್ಯವಸ್ಥೆಯ ಮೂಲನೀತಿಯನ್ನಾಗಲಿ ತತ್ವಗಳನ್ನಾಗಲಿ ಎಲ್ಲರೂ ಒಪ್ಪಲು ಸಾಧ್ಯವೇ ಇರಲಿಲ್ಲ. ಆ ತತ್ವಗಳ ಚರ್ಚೆ ತೆಗೆದಿದ್ದರೆ ಆರಂಭದಲ್ಲೇ ಒಡಕುಹುಟ್ಟಿ ನಮ್ಮ ಸಮಿತಿಯೇ ಪುಡಿಪುಡಿಯಾಗುತ್ತಿತ್ತು. ಆ ರೀತಿ ಒಂದು ಮಾರ್ಗದರ್ಶಕನೀತಿ ಇಲ್ಲದೆ ಹೋದುದು ಒಂದು ಕೊರತೆಯಾಯಿತು ; ಆದರೆ ಯತ್ನವಿರಲಿಲ್ಲ. ಯೋಜನೆಯ ಸಾಮಾನ್ಯ ಸಮಸ್ಯೆಗಳನ್ನೂ ಮತ್ತು ತಾತ್ವಿಕ ವಿಚಾರದ ಗೋಜಿಗೆ ಹೋಗದೆ ಪ್ರತಿಯೊಂದು ಪ್ರತ್ಯೇಕ ಸಮಸ್ಯೆಯನ್ನೂ ವಾಸ್ತವಿಕ ದೃಷ್ಟಿಯಿಂದ ಯೋಚಿಸಬೇಕೆಂದೂ, ಅಂತಹ ಯೋಚನೆಯ ಪರಿಣಾಮವಾಗಿ ತಾತ್ವಿಕ ಪ್ರಶ್ನೆ ರೂಪುಗೊಂಡರೆ ರೂಪುಗೊಳ್ಳಲೆಂದೂ ತೀರ್ಮಾನಿಸಿದೆವು. ಸ್ಥೂಲ ಹೇಳುವುದಾದರೆ ಎರಡು ತಾತ್ವಿಕ ದೃಷ್ಟಿಗಳಿದ್ದವು. ಲಾಭಸಂಪಾದನೆಯ ದೃಷ್ಟಿ ನಾಶಮಾಡಿ ಸಮಪಾಲು ಹಂಚಿಕೆಯಾಗಬೇಕೆಂದು ಒತ್ತಾಯ ಮಾಡುತ್ತಿದ್ದ ಸಮಾಜವಾದಿದೃಷ್ಟಿ ಒಂದು, ಸ್ವಸಾಮರ್ಥ್ಯ ಮತ್ತು ಲಾಭಸಂಪಾದನೆಗೆ ಪೂರ್ಣಅವಕಾಶ ಕೊಟ್ಟು ಉತ್ಪಾದನೆ ಹೆಚ್ಚಿಸಬೇಕೆಂಬ ಬಂಡವಲಗಾರದೃಷ್ಟಿ ಮತ್ತೊಂದು. ಇದಲ್ಲದೆ ದೊಡ್ಡ ದೊಡ್ಡ ಕೈಗಾರಿಕೆಗಳು ಬೇಗ ಬೆಳೆಯ ಬೇಕೆನ್ನುವವರಿಗೂ, ಅದಷ್ಟು ಜನ ನಿರುದ್ಯೋಗಿಗಳಿಗೆ, ಅರೆ ಉದ್ಯೋಗಿಗಳಿಗೆ ಕೆಲಸ ಒದಗಿಸಬೇಕಾದರೆ ಗ್ರಾಮ ಮತ್ತು ಗೃಹಕೈಗಾರಿಕೆಗಳಿಗೆ ಪ್ರಾಮುಖ್ಯತೆ ಬೇಕೆನ್ನುವವರಿಗೂ ಭಿನ್ನಾಭಿಪ್ರಾಯವಿತ್ತು. ಅಂತ್ಯ ತೀರ್ಮಾನಗಳಲ್ಲೂ ಭಿನ್ನಾಭಿಪ್ರಾಯ ಅನಿವಾರ್ಯ ಕಂಡವು. ಎಲ್ಲ ವಿಷಯ ಸಂಗ್ರಹಣೆಮಾಡಿ, ಹೊಂದಿಕೆಯಾಗಿ ಜೋಡಿಸಿ, ಸರ್ವಸಮ್ಮತವಿರುವ ರೂಪುರೇಖೆ ಚಿತ್ರಿಸಿ ಆಮೇಲೆ ಭಿನ್ನಾಭಿಪ್ರಾಯ ವ್ಯಕ್ತಪಡಿಸಿ ಎರಡು ಮೂರು ವರದಿಗಳು ಬಂದರೂ ಉತ್ತಮವೆಂದು ಕಂಡಿತು. ಯೋಜನೆಯನ್ನು ಕಾರ್ಯಗತಮಾಡುವಕಾಲ ಒದಗಿದಾಗ ಆ ಪ್ರಜಾಪ್ರಭುತ್ವ ಸರಕಾರವು ಮೂಲನೀತಿಯನ್ನು ನಿರ್ಧರಿಸಬಹುದು. ಈ ಮಧ್ಯೆ ಅವಶ್ಯವಾದ ಪೂರ್ವಸಿದ್ಧತೆಗಳೆ ಮುಗಿದು ಸಮಸ್ಯೆಯ ವಿವಿಧ ಮುಖಗಳು ಸಾರ್ವಜನಿಕರ ಮತ್ತು ಪ್ರಾಂತ ಮತ್ತು ಸಂಸ್ಥಾನಗಳ ಸರಕಾರಗಳ ಎದುರುಬರಲು ಅನುಕೂಲವಾಗುತ್ತದೆ ಎಂದು ಯೋಚಿಸಿದೆವು.

ಯಾವುದಾದರೂ ನಿರ್ದಿಷ್ಟಗುರಿ ಮತ್ತು ಸಾಮಾಜಿಕ ಧ್ಯೇಯವಿಲ್ಲದೆ ಯಾವ ಪ್ರಶ್ನೆಯನ್ನೂ ಯೋಚಿಸುವಂತಿರಲಿಲ್ಲ, ಯೋಜನೆ ಸಿದ್ಧಗೊಳಿಸುವಂತೆಯೂ ಇರಲಿಲ್ಲ. ಜನ ಜೀವನದ ಮಟ್ಟವನ್ನು ಯೋಗ್ಯಮಟ್ಟಕ್ಕೆ ಏರಿಸಿ ಜನರ ಬಡತನವನ್ನು ನಿವಾರಿಸುವುದೇ ನಮ್ಮ ಗುರಿಯಾಯಿತು. ತಿಂಗಳಿಗೆ ಕನಿಷ್ಟಪಕ್ಷ ೧೫ರಿಂದ ೨೫ ರೂಪಾಯಿಯಾದರೂ ಜೀವನದ ವೆಚ್ಚಕ್ಕೆ ಬೇಕೆಂದು ಯುದ್ಧಕ್ಕೆ ಮುಂಚೆ ಅರ್ಥಶಾಸ್ತ್ರಜ್ಞರು ನಿರ್ಧರಿಸಿದ್ದರು. ಪಾಶ್ಚಾತ್ಯ ಜೀವನಮಟ್ಟದೊಂದಿಗೆ ಇದನ್ನು ಹೋಲಿಸಲು ಸಾಧ್ಯವೇ ಇಲ್ಲ; ಆದರೂ ಭಾರತದಲ್ಲಿನ ಜೀವನಮಟ್ಟಕ್ಕಿಂತ ಒಂದು ದೊಡ್ಡ ಹೆಜ್ಜೆಮುಂದೆ ಹೋದಂತೆ. ಭಾರತೀಯನ ಸರಾಸರಿ ವಾರ್ಷಿಕ ವರಮಾನ ತಲಾ ೬೫ ರೂಪಾಯಿ—ಇದು ಐಶ್ವರ್ಯವಂತರು, ಬಡವರು, ಪಟ್ಟಣಿಗರು, ಗ್ರಾಮಸ್ಥರು ಎಲ್ಲರನ್ನೂ ಸೇರಿಸಿಕೊಂಡು. ಶ್ರೀಮಂತರಿಗೂ ಬಡವರಿಗೂ ಇದ್ದ ಅಂತರ, ಶ್ರೀಮಂತರ ಅಲ್ಪಸಂಖ್ಯೆ ಗಮನಿಸಿದರೆ, ಸಾಮಾನ್ಯ ಗ್ರಾಮಸ್ಥನ ವಾರ್ಷಿಕವರಮಾನ ಸರಾಸರಿ ೩೦-೦-೦ ಎಂದೂ ಊಹಿಸಲಾಗಿತ್ತು. ಈ ಸಂಖ್ಯೆಗಳಿಂದ ಜನರ ಭೀಕರ ಬಡತನ ಮತ್ತು ದಾರುಣಸ್ಥಿತಿ ಎದ್ದು ಕಾಣುತ್ತವೆ. ಆಹಾರ, ಬಟ್ಟೆ, ವಾಸಕ್ಕೆ ಮನೆ, ಮಾನವಸಹಜ ಸಾಮಾನ್ಯ ಜೀವನಕ್ಕೆ ಬೇಕಾದ ಅವಶ್ಯಕತೆಗಳು ಎಲ್ಲದಕ್ಕೂ ಕೊರತೆ. ಈ ಕೊರತೆ ನಿವಾರಿಸಿ ಪ್ರತಿಯೊಬ್ಬ ಪ್ರಜೆಗೂ ಕನಿಷ್ಟಪ್ರಮಾಣದ ಜೀವನಮಟ್ಟ ಒದಗಿಸಬೇಕಾದರೆ ರಾಷ್ಟ್ರದ ವರಮಾನವು ಹೆಚ್ಚಬೇಕು; ಅದರ ಜೊತೆಗೆ ಆ ಸಂಪತ್ತು ಹೆಚ್ಚು ನ್ಯಾಯಬದ್ಧವಾಗಿ ಎಲ್ಲರಲ್ಲೂ ಹಂಚಿರಬೇಕು. ನಿಜವಾದ ಪ್ರಗತಿಪರ ಜೀವನಮಟ್ಟ ಇರಬೇಕೆನ್ನುವುದಾದರೆ ರಾಷ್ಟ್ರದ ವರಮಾನವು ೫೦೦, ೬೦೦ ರಷ್ಟಾದರೂ ಹೆಚ್ಚಬೇಕೆಂದು ಲೆಕ್ಕಹಾಕಿದೆವು. ಅದು ಕಷ್ಟಸಾಧ್ಯಕಂಡು ಹತ್ತು ವರ್ಷಗಳಲ್ಲಿ ೨೦೦, ೩೦೦ ರಷ್ಟಾದರೂ ಹೆಚ್ಚಿಸಲು ತಿರ್ಮಾನಿಸಿದೆವು.

ನಮ್ಮ ಯೋಜನೆಗೆ ಹತ್ತುವರ್ಷದ ಕಾಲ ಕ್ಲುಪ್ತಮಾಡಿ ಯಾವ ಕಾಲಕ್ಕೆ ಯಾವ ಆರ್ಥಿಕಮಟ್ಟವನ್ನು ಎಷ್ಟು ಪ್ರಗತಿ ಸಾಧಿಸಬೇಕೆಂದು ನಿರ್ಧರಿಸಿದೆವು. ಅದಕ್ಕೆ ಒರೆಗಲ್ಲುಗಳನ್ನೂ ಸೂಚಿಸಿದೆವು.

(೧) ಉತ್ತಮ ಆಹಾರ-ಪ್ರತಿಯೊಬ್ಬ ವಯಸ್ಕ ಕೆಲಸಗಾರನಿಗೂ ೨೪೦೦-೨೮೦೦ರವರೆಗೆ ಉಷ್ಣಾಂಶ ಶಕ್ತಿಯ ಆಹಾರವಿರಬೇಕು.

(೨) ಪ್ರತಿಯೊಬ್ಬನಿಗೂ ವರ್ಷಕ್ಕೆ ೩೦ಗಜ ಬಟ್ಟೆಯಾದರೂ ದೊರೆಯಬೇಕು. (ಆಗ ಇದ್ದುದು ೧೫ ಗಜ).

(೩) ಪ್ರತಿಯೊಬ್ಬನಿಗೂ ವಾಸಕ್ಕೆ ೧೦೦ಚದರ ಅಡಿ ಇರುವ ಮನೆಯಾದರೂ ಇರಬೇಕು.

ಇವಲ್ಲದೆ ಈ ಕೆಳಗಿನ ಅಂಶಗಳನ್ನು ದೃಷ್ಟಿಯಲ್ಲಿಟ್ಟುಕೊಳ್ಳಬೇಕು—

(೧) ವ್ಯವಸಾಯದ ಉತ್ಪತ್ತಿ ಹೆಚ್ಚಬೇಕು.

(೨) ಕೈಗಾರಿಕಾವಸ್ತು ನಿರ್ಮಾಣ ಹೆಚ್ಚಬೇಕು.

(೩) ನಿರುದ್ಯೋಗ ಕಡಮೆಯಾಗಬೇಕು.

(೪) ಪ್ರತಿಯೊಬ್ಬನ ವಾರ್ಷಿಕ ಆದಾಯ ಹೆಚ್ಚಬೇಕು.

(೫) ನಿರಕ್ಷರತೆ ನಿರ್ಮೂಲವಾಗಬೇಕು.

(೬) ಸಾರ್ವಜನಿಕೋಪಯುಕ್ತ ಕಾರ್ಯಗಳು ಹೆಚ್ಚಬೇಕು.

(೭) ಪ್ರತಿ ೧೦೦೦ ಪ್ರಜೆಗಳಿಗೆ ಒಂದು ವೈದ್ಯಶಾಲೆ ಇರಬೇಕು.

(೮) ಸರಾಸರಿ ಜೀವನದ ವಯೋಮಾನ ಹೆಚ್ಚಬೇಕು.

ದೇಶದ ಮುಖ್ಯ ಗುರಿ ಆದಷ್ಟು ಮಟ್ಟಿಗೆ ರಾಷ್ಟ್ರವು ಸ್ವಯಂ ಸಂಪೂರ್ಣ ಇರಬೇಕೆಂದು ಇತ್ತು. ವಿದೇಶ ವ್ಯಾಪಾರವನ್ನು ಅಲಕ್ಷ್ಯಮಾಡಲಿಲ್ಲ. ಆದರೆ ಆರ್ಥಿಕ ಸಾಮ್ರಾಜ್ಯನೀತಿಯ ಸುಳಿಗೆ ಬಲಿಯಾಗಲು ಇಷ್ಟಪಡಲಿಲ್ಲ. ಯಾವ ಸಾಮ್ರಾಜ್ಯಶಕ್ತಿಗೂ ಅಡಿಯಾಳಾಗಲು ಇಷ್ಟಪಡಲಿಲ್ಲ. ಆ ಬಗೆಯ ಶಕ್ತಿ ಬೆಳೆಸುವುದು ನಮಗೂ ಇಷ್ಟವಿರಲಿಲ್ಲ. ದೇಶದ ಉತ್ಪತ್ತಿಯಿಂದ ದೇಶಕ್ಕೆ ಬೇಕಾದ ಆಹಾರ, ಕಚ್ಚಾಮಾಲು, ನಯಮಾಲು ಎಲ್ಲವನ್ನೂ ಪೂರೈಸುವುದು ಮೊದಲ ಕರ್ತವ್ಯವಾಗಿರಬೇಕು. ಉಳಿದ ಹೆಚ್ಚು ಮಾಲನ್ನು ಹೊರಗೆ ಯಾರಮೇಲೂ ಬಲಾತ್ಕರಿಸಿ ಹೇರುವುದು ನಮಗೆ ಬೇಕಿರಲಿಲ್ಲ. ಆ ಹೆಚ್ಚು

ವರಿಯಿಂದ ನಮಗೆ ಬೇಕಾದ ಮಾಲುಗಳನ್ನು ವಿನಿಮಯ ಮೂಲಕ ಪಡೆಯಬಹುದೆಂದು ನಿರ್ಧರಿಸಿದೆವು. ರಫ್ತು ಪೇಟೆಗಳ ಮೇಲೆಯೇ ನಮ್ಮ ರಾಷ್ಟ್ರೀಯ ಆರ್ಥಿಕ ನೀತಿ ರಚನೆಯಾದರೆ ಇತರ ರಾಷ್ಟ್ರಗಳೊಡನೆ ಘರ್ಷಣೆಗೆ ಅವಕಾಶವಾಗಬಹುದು ಮತ್ತು ಆ ಪೇಟೆಗಳು ನಮಗೆ ಮುಚ್ಚಿದರೆ ಇದ್ದಕ್ಕಿದ್ದಂತೆ ನಮ್ಮ ರಚನೆಯೂ ಕುಸಿಯಬಹುದು.

ಈ ರೀತಿ ಒಂದು ಖಚಿತ ಸಾಮಾಜಿಕ ತತ್ವದಿಂದ ನಾವು ಕೆಲಸ ಆರಂಭಿಸದಿದ್ದರೂ, ನಮ್ಮ ಸಾಮಾಜಿಕ ಗುರಿ ಸ್ಪಷ್ಟವಿತ್ತು; ಆದ್ದರಿಂದ ನಮ್ಮ ಯೋಜನೆಗೆ ಒಂದು ಸಾಮಾನ್ಯ ತಳಹದಿಯೂ ದೊರೆಯಿತು. ಆದಷ್ಟು ನಿಯಮಬದ್ಧ ನಿಯಂತ್ರಣ ಮತ್ತು ಸಂಯೋಜನೆಯೇ ನಮ್ಮ ಯೋಜನೆಯ ತಿರುಳು. ಈ ರೀತಿ ಸ್ವಪ್ರಯತ್ನಕ್ಕೆ ಪೂರ್ಣ ಅವಕಾಶಕೊಟ್ಟು ಅದಕ್ಕೊಂದು ಎಲ್ಲೆಯನ್ನು ವಿಧಿಸಿದೆವು. ಸಂರಕ್ಷಣೆಯ ಕೈಗಾರಿಕೆಗಳೆಲ್ಲ ರಾಷ್ಟ್ರದ ಸ್ವತ್ತಾಗಿ ಸರಕಾರವೇ ನಡೆಸಬೇಕೆಂದು ತೀರ್ಮಾನಿಸಿದೆವು. ಇತರ ಮುಖ್ಯ ಮೂಲಕೈಗಾರಿಕೆಗಳು ರಾಷ್ಟ್ರದ ಸ್ವತ್ತಾಗಿರಬೇಕೆಂದು ಬಹುಮತವಿತ್ತು, ಆದರೆ ಪ್ರಬಲರಾದ ಅಲ್ಪಸಂಖ್ಯಾತರು ರಾಷ್ಟ್ರದ ನಿಯಂತ್ರಣಕ್ಕೆ ಒಳಗಾದರೆ ಸಾಕೆಂದು ಅಭಿಪ್ರಾಯ ಬಂದಿತು. ಆದರೆ ಈ ನಿಯಂತ್ರಣ ಬಿಗಿಯಾಗಿರಬೇಕೆಂದು ಒಪ್ಪಿದರು. ಸಾರ್ವಜನಿಕೋಪಯುಕ್ತ ಉದ್ಯಮಗಳು ಕೇಂದ್ರ ಸರಕಾರ, ಪ್ರಾಂತ್ಯ ಸರಕಾರ ಅಥವ ಸ್ಥಳೀಯ ಸಂಸ್ಥೆ ಈ ರೀತಿ ಯಾವುದಾದರೂ ರಾಜ್ಯಾಂಗಕ್ಕೆ ಸೇರಿರಬೇಕೆಂದು ತೀರ್ಮಾನ ಮಾಡಿದೆವು. ಲಂಡನ್ ಟ್ರಾನ್ಸ್‌ಪೋರ್ಟ್ ಬೋರ್ಡಿನಂತೆ ಒಂದು ಕೇಂದ್ರ ಸಂಸ್ಥೆ ಎಲ್ಲ ಸಾರ್ವಜನಿಕೋಪಯುಕ್ತ ಸಂಸ್ಥೆಗಳನ್ನು ನೋಡಿಕೊಳ್ಳಬೇಕೆಂದು ಸಲಹೆಬಂದಿತು. ಇನ್ನುಳಿದ ಮುಖ್ಯ ಕೈಗಾರಿಕೆಗಳ ವಿಷಯದಲ್ಲಿ ಯಾವ ನಿಬಂಧನೆಯನ್ನೂ ವಿಧಿಸಲಿಲ್ಲ. ಆದರೆ ಸಮಗ್ರ ಯೋಜನೆಯ ದೃಷ್ಟಿಯಿಂದ ಬೇರೆ ಬೇರೆ ಕೈಗಾರಿಕೆಗೆ ಬೇರೆ ಬೇರೆ ಬಗೆಯದಾದರೂ ಒಂದು ಬಗೆಯ ನಿಯಂತ್ರಣವಿರಬೇಕೆಂದು ತೀರ್ಮಾನಿಸಿದೆವು.

ಸರಕಾರದ ಸ್ವತ್ತಾಗಿ ನಡೆಯತಕ್ಕ ಕೈಗಾರಿಕೆಗಳೆಲ್ಲ ಸಾಮಾನ್ಯವಾಗಿ ಸ್ವತಂತ್ರ ಸಾರ್ವಜನಿಕ ಟ್ರಸ್ಟ್" ಗಳ ಆಡಳಿತದಲ್ಲಿ ಇರಬೇಕೆಂದು ಸಲಹೆಮಾಡಿದೆವು. ಇದರಿಂದ ಸಾರ್ವಜನಿಕ ಸ್ವಾಮ್ಯ ಮತ್ತು ಆಡಳಿತ ಭದ್ರವಿರುವುದಲ್ಲದೆ ಪ್ರಜಾಸತ್ತೆಯ ಆಡಳಿತದಲ್ಲಿ ಕಾಣಬಹುದಾದ ತೊಂದರೆ ಮತ್ತು ದಕ್ಷತೆಯ ಅಭಾವ ನಿವಾರಣೆ ಸಾಧ್ಯವಿತ್ತು. ಕೈಗಾರಿಕೆಗಳಿಗೆ ಸಹಕಾರ ಸಂಘಗಳ ಸ್ವಾಮ್ಯ ಮತ್ತು ಆಡಳಿತವಿರಬೇಕೆಂದು ಸೂಚಿಸಿದೆವು. ಎಲ್ಲ ಯೋಜನೆಗಳಲ್ಲಿ ಕೈಗಾರಿಕೋದ್ಯಮವು ಎಲ್ಲ ಶಾಖೆಗಳಲ್ಲೂ ಮುಂದುವರಿಯುವಂತೆ ಎಚ್ಚರಿಕೆಯಿಂದ ಪರಿಶೀಲಿಸಬೇಕು; ಆಗಿಂದಾಗ ಎಷ್ಟರಮಟ್ಟಿಗೆ ಪ್ರಗತಿಯಾಗಿದೆ ಪರೀಕ್ಷಿಸಬೇಕು; ಕೈಗಾರಿಕೆಗಳ ಹೆಚ್ಚಿನ ಬೆಳವಣಿಗೆಗೆ ಉದ್ಯೋಗ ಶಿಕ್ಷಣ ಪಡೆದ ಕುಶಲ ಕರ್ಮಿಗಳು ಬೇಕು; ಅಂತಹ ಉದ್ಯೋಗ ಕುಶಲರಿಗೆ ಶಿಕ್ಷಣ ಕೊಡಲು ಸರಕಾರವು ಕೈಗಾರಿಕಾ ಕಾರ್ಖಾನೆಗಳನ್ನು ಕೇಳಬಹುದು. ಎಂದು ಮುಂತಾಗಿ ಸೂಚಿಸಿದೆವು.

ವ್ಯವಸಾಯಕ್ಕೆ ಯೋಗ್ಯವಾದ ಭೂಮಿ, ಗಣಿಗಳು, ಕಲ್ಲುಗಣಿಗಳು, ಅರಣ್ಯ ಇವೆಲ್ಲ ರಾಷ್ಟ್ರದ ಸ್ವತ್ತಾಗಿ ಭಾರತ ಜನತೆಯ ಒಟ್ಟು ಆಸ್ತಿಯಾಗಿ ಇರಬೇಕೆಂದು ನಮ್ಮ ಭೂನೀತಿಯಾಯಿತು. ಹೊಸ ಭೂಮಿಯನ್ನು ಸಾಗುವಳಿಗೆ ತರುವಾಗ ಸಹಕಾರ ತತ್ತ್ವದ ಮೇಲೆ ಸಾಮೂಹಿಕ ವ್ಯವಸಾಯ ಕೇಂದ್ರ ಏರ್ಪಡಿಸಬೇಕೆಂದು ತೀರ್ಮಾನಿಸಿದೆವು. ಆರಂಭದಲ್ಲಿ ಸ್ವತಃ ಸಾಗುವಳಿಮಾಡುವ ಸಣ್ಣ ಸಣ್ಣ ಹಿಡುವಳಿಗಳಿಗೆ ಯಾವ ತೊಂದರೆಯೂ ಇರಕೂಡದೆಂದೂ ಆದರೆ ಅಂತರದ ಕಾಲ ಮುಗಿದನಂತರ ತಾಲ್ಲೂಕುದಾರರು ಜಮೀನುದಾರರು ಮುಂತಾದ ಯಾವ ಮಧ್ಯಸ್ಥಗಾರರೂ ಇರಕೂಡದೆಂದು ತೀರ್ಮಾನಿಸಿದೆವು. ಇವರ ಹಕ್ಕು ಬಾಧ್ಯತೆಗಳನ್ನು ಸರಕಾರವು ಕೊಂಡುಕೊಳ್ಳತಕ್ಕದ್ದು; ವ್ಯವಸಾಯಕ್ಕೆ ಯೋಗ್ಯವಿರುವ ಬೀಳುಜಮೀನುಗಳಲ್ಲಿ ಸಾಮೂಹಿಕ ವ್ಯವಸಾಯಕೇಂದ್ರಗಳನ್ನು ಕೂಡಲೆ ಸರಕಾರವು ಸ್ಥಾಪಿಸಬೇಕು; ಬೇರೆ ಬೇರೆ ಹಿಡುವಳಿದಾರರು, ಅಥವ ಜಂಟಿ ಹಿಡುವಳಿದಾರರು ಸಹಕಾರ ತತ್ವದಮೇಲೆ ವ್ಯವಸಾಯ ಮಾಡಬಹುದು; ಬೇರೆ ಬೇರೆ ಬಗೆಯ ವ್ಯವಸಾಯ ಪದ್ಧತಿಗಳು ಮುಂದುವರಿದು ಅನುಭವ ದೊರೆತಂತೆ ಬೇಕಾದ ಪದ್ಧತಿಗೆ ಪ್ರೋತ್ಸಾಹಕೊಡಲು ಸ್ವಲ್ಪಕಾಲಾವಕಾಶಕೊಡಬಹುದು ಎಂದು ಸಲಹೆಮಾಡಿದೆವು.

ನಮ್ಮಲ್ಲಿ ಕೆಲವರು ಬಂಡವಾಳವು ಸಹ ಸಮಾಜವಾದ ತತ್ವದಂತೆ ಬರಬೇಕೆಂದೆವು. ಬ್ಯಾಂಕುಗಳನ್ನು ವಿಮಾ ಕಂಪನಿಗಳನ್ನು ರಾಷ್ಟ್ರೀಕರಣ ಮಾಡಲಾಗದಿದ್ದರೆ ಬಂಡವಾಳ ಮತ್ತು ಸಾಲಗಳಾದರೂ ರಾಷ್ಟ್ರ ನಿಬಂಧನೆಯಂತೆ ರಾಷ್ಟ್ರದ ನಿಯಂತ್ರಣದೊಳಗೆ ಇರಬೇಕೆಂದೆವು. ಆಮದು ರಫ್ತು ವಿದೇಶವ್ಯಾಪಾರದ ನಿಯಂತ್ರಣ ಅವಶ್ಯವಿತ್ತು. ಈ ರೀತಿ ವ್ಯವಸಾಯ ಮತ್ತು ಕೈಗಾರಿಕೆ ಎರಡರ ಮೇಲೂ ಬೇರೆ ಬೇರೆ ರೀತಿಯಲ್ಲಿ ರಾಷ್ಟ್ರದ ನಿಯಂತ್ರಣವಿರಬೇಕೆಂದೂ, ಕೆಲವು ಸಂದರ್ಭ ಅದನ್ನು ವ್ಯತ್ಯಾಸಗೊಳಿಸಬಹುದೆಂದೂ, ಒಂದು ಮಿತಿಯಲ್ಲಿನ ಸ್ವಪ್ರಯತ್ನಕ್ಕೂ ಅವಕಾಶವಿರಬೇಕೆಂದೂ ತೀರ್ಮಾನಿಸಿದೆವು.

ಈ ರೀತಿ ವಿಶೇಷ ಸಮಸ್ಯೆಗಳನ್ನೇ ಆಲೋಚಿಸಿ ಕ್ರಮೇಣ ನಮ್ಮ ಸಾಮಾಜಿಕ ಗುರಿಯನ್ನೂ ಮತ್ತು ನೀತಿಯನ್ನೂ ರೂಪಿಸಿದೆವು. ಕೆಲವುಕಡೆ ಅಪಾರ ಅಂತರ, ಅಸ್ಪಷ್ಟತೆ, ವಿರೋಧಾಭಾಸ ಇದ್ದವು. ತಾತ್ವಿಕ ದೃಷ್ಟಿಯಿಂದ ಸ್ವಯಂಪೂರ್ಣವಿರಲಿಲ್ಲ. ಆದರೆ ಸಮಿತಿಯಲ್ಲಿ ಭಿನ್ನಾಭಿಪ್ರಾಯದ ಸದಸ್ಯರೇ ಹೆಚ್ಚು ಇದ್ದರೂ ದೊರೆತ ಒಮ್ಮತ ಕಂಡು ನನಗೇ ಆಶ್ಚರ್ಯತೋರಿತು. ಬಂಡವಾಳಗಾರರ ಪ್ರತಿನಿಧಿಗಳೇ ಬಹಳ ಜನರಿದ್ದರು. ಅನೇಕ ವಿಷಯಗಳಲ್ಲಿ ಮುಖ್ಯವಾಗಿ ವ್ಯಾಪಾರ ಮತ್ತು ಹಣಕಾಸಿನ ವಿಷಯದಲ್ಲಿ ಅವರ ದೃಷ್ಟಿ ಎಲ್ಲ ಪ್ರತಿಗಾಮಿಯಾದುದು. ಆದರೂ ಬೇಗ ನಾವು ಪ್ರಗತಿಹೊಂದಬೇಕು ಎಂಬ ಕಾತರತೆ; ಆ ಪ್ರಗತಿಯಾದರೆ ಮಾತ್ರ ನಮ್ಮ ದೇಶದ ಬಡತನ ಮತ್ತು ನಿರುದ್ಯೋಗದ ಪರಿಹಾರ ಎಂಬ ಮನೋನಿಶ್ಚಯ. ಇವು ನಮ್ಮ ಕೊರಕಲು ದಾರಿಬಿಟ್ಟು ಹೊಸದಾರಿಯಲ್ಲಿ ಯೋಚಿಸುವಂತೆ ನಮ್ಮನ್ನು ಪ್ರೇರೇಪಿಸಿದವು. ತಾತ್ವಿಕ ಚರ್ಚೆ ನಾವು ಬಿಟ್ಟದ್ದೆವು; ಆದರೂ ಪ್ರತಿಯೊಂದು ಪ್ರತ್ಯೇಕ ಸಮಸ್ಯೆಯನ್ನೂ ಸಮಗ್ರ ದೃಷ್ಟಿಯಿಂದ ಪರಿಶೀಲಿಸಿದಾಗ ನಮಗೆ ಒಂದುದಾರಿ ದೊರಕಿತು. ಈ ಯೋಜನಾ ಸಮಿತಿಯ ಸದಸ್ಯರ ಸಹಕಾರ ಭಾವನೆಯಿಂದ ನಾನು ಬಹಳ ಸಂತೋಷಗೊಂಡೆ, ತೃಪ್ತಿಗೊಂಡೆ. ರಾಜಕೀಯದ ವ್ಯಾಜ್ಯ ಮತ್ತು ಅಂತಃ ಕಲಹಗಳಿಗೂ ಈ ಸಹಕಾರ ದೃಷ್ಟಿಗೂ ಅಜಗಜಾಂತರ. ನಮ್ಮ ಭಿನ್ನಾಭಿಪ್ರಾಯ ನಮಗೆ ತಿಳಿದೇ ಇದ್ದವು. ಆದರೂ ಪ್ರತಿಯೊಂದು ಅಭಿಪ್ರಾಯ ಚರ್ಚೆಮಾಡಿ ಸರ್ವಸಮ್ಮತವಾದ ಅಥವ ಬಹುಮಂದಿಗೆ ಸಮ್ಮತವಾದ ಒಂದು ತೀರ್ಮಾನಕ್ಕೆ ಬರಲು ಪ್ರಯತ್ನಮಾಡಿ ಬಹುಮಟ್ಟಿಗೆ ಯಶಸ್ವಿಯಾದೆವು.

ಆಗಿನ ನಮ್ಮ ಸಮಿತಿಯ ರಚನೆ ಮತ್ತು ಅಂದಿನ ಭಾರತದ ಪರಿಸ್ಥಿತಿಯಲ್ಲಿ ಸಮಾಜವಾದಿ ಯೋಜನೆ ರಚಿಸಲು ಸಾಧ್ಯವಾಗಲಿಲ್ಲ. ಆದರೂ ನಮ್ಮ ಯೋಜನೆ ಮುಂದುವರಿದಂತೆ ಕೆಲವು ಸಮಾಜವಾದದ ಮೂಲತತ್ವಗಳು ಅದರಲ್ಲಿ ಬರುವುದು ಅನಿವಾರ್ಯವೆನಿಸಿತು. ಆ ಯೋಜನೆ ಸಮಾಜದಲ್ಲಿ ವ್ಯಕ್ತಿಯ ಸಂಗ್ರಹಣ ಶಕ್ತಿಯನ್ನು ಮಿತಿಗೊಳಿಸಿತು, ಸಮಾಜದ ಬೆಳೆವಣಿಗೆಗೆ ಇದ್ದ ಅಡಚಣೆಗಳನ್ನು ಕಿತ್ತೊಗೆಯಿತು. ಈ ರೀತಿ ಸಮಾಜರಚನೆಯನ್ನು ಬೇಗ ಹಿಗ್ಗಿಸಲು ಅನುಕೂಲವಾಯಿತು. ಸಾಮಾನ್ಯ ಮನುಷ್ಯನ ಕ್ಷೇಮ, ಆತನ ಜೀವನಮಟ್ಟದ ಉನ್ನತಿ, ಆತನ ಪೂರ್ಣವಿಕಾಸಕ್ಕೆ ಅವಕಾಶ, ಆತನ ಅದ್ಭುತ ಸುಷುಪ್ತ ಬುದ್ಧಿ ಮತ್ತು ಮನಸ್ಸಿನ ಶಕ್ತಿಯನ್ನು ಹೊರಗೆಡಹುವುದು ಇವೇ ಆ ಯೋಚನೆಯ ಮೂಲ ಉದ್ದೇಶ್ಯಗಳಾಗಿದ್ದವು. ಪ್ರಜಾ ಸ್ವಾತಂತ್ರ್ಯದ ದೃಷ್ಟಿಯಿಂದ ಈ ಪ್ರಯತ್ನ ಅವಶ್ಯವಿತ್ತು. ಮತ್ತು ಸಾಮಾನ್ಯವಾಗಿ ಸಮಾಜವಾದಕ್ಕೆ ವಿರುದ್ಧವಿರುವ ಕೆಲವು ಪಂಗಡಗಳ ಸಹಕಾರದಿಂದ ಅದನ್ನು ಸಾಧಿಸಬೇಕಾಗಿತ್ತು. ಈ ಸಹಕಾರ ಪಡೆಯಲು ನಮ್ಮ ಯೋಜನೆ ಕೆಲವು ವಿಷಯಗಳಲ್ಲಿ ಸಪ್ಪೆಯಾದರೂ ಒಳ್ಳೆಯದೆನಿಸಿತು. ಪ್ರಾಯಶಃ ನಾನು ಬಹಳ ಆಶಾವಾದಿ ಎಂದು ತೋರುತ್ತದೆ. ಆದರೆ ಸರಿಯಾದ ಮಾರ್ಗದಲ್ಲಿ ಒಂದು ದೊಡ್ಡ ಹೆಜ್ಜೆಯನ್ನಿಟ್ಟರೆ ಆ ವ್ಯತ್ಯಸ್ತ ಕಾರ್ಯ ಚಟುವಟಿಕೆಯೇ ಮುಂದಿನ ಪ್ರಗತಿಗೂ, ಪರಿವರ್ತನೆಗೂ ದಾರಿಯಾಗುತ್ತದೆ, ಸಂಘರ್ಷಣವೆ ಒದಗಿದರೆ ಅದನ್ನು ಎದುರಿಸಲೇ ಬೇಕು. ಆದರೆ ಸಂಘರ್ಷಣೆಯೇ ಇಲ್ಲದಂತೆ ಮಾಡಬಲ್ಲೆವಾದರೆ ಅಥವ ಅದನ್ನು ಆದಷ್ಟು ಕಡಮೆಮಾಡಿದರೆ ಅದೇ ದೊಡ್ಡಲಾಭ. ರಾಜಕೀಯದಂತೆ ಇಲ್ಲಿಯೂ ಬೇಕಾದಷ್ಟು ಘರ್ಷಣೆ ಇತ್ತು; ಮುಂದೆ ಅದರಿಂದ ಅಸ್ಥಿರ ಪರಿಸ್ಥಿತಿಯೊದಗಿದರೂ ಒದಗಬಹುದು. ಆದ್ದರಿಂದ ನಮ್ಮ ಯೋಜನೆಗೆ ಸಾಮಾನ್ಯ ಒಪ್ಪಿಗೆ ದೊರೆತರೆ ಉತ್ತಮವೆನಿಸಿತು. ತಾತ್ವಿಕ

ಆದರ್ಶವಿಟ್ಟುಕೊಂಡು ರೂಪರೇಖೆ ರಚಿಸುವುದು ಸುಲಭವಿತ್ತು. ಆದರೆ ಆ ಯೋಜನೆಯು ತೃಪ್ತಿಕರವಾಗಿ ಕಾರ್ಯಗತವಾಗಲು ಅವಶ್ಯವಾದ ಸಾಮಾನ್ಯ ಒಪ್ಪಿಗೆ ಮತ್ತು ಸಮ್ಮತಿ ದೊರಕುವುದು ಇನ್ನೂ ಕಷ್ಟತಮಕೆಲಸ.

ಯೋಜನೆಯಿಂದ ಬಹುಮಟ್ಟಿನ ನಿಯಂತ್ರಣ, ಮತ್ತು ವ್ಯಕ್ತಿ ಸ್ವಾತಂತ್ರ್ಯಕ್ಕೆ ಸ್ವಲ್ಪ ಲೋಪ ಬಂದಾಗ್ಯೂ ಇಂದಿನ ಭಾರತದ ಸ್ಥಿತಿಯಲ್ಲಿ ಅದು ಹೆಚ್ಚಿನ ಸ್ವಾತಂತ್ರ್ಯಕ್ಕೆ ಮಾರ್ಗವಾಗುತ್ತದೆ. ಕಳೆದು ಕೊಳ್ಳಲು ನಮಗೆ ಸ್ವಾತಂತ್ರ್ಯವೇ ಇಲ್ಲ. ನಮಗೆ ಇಂದು ಬೇಕಾದುದೇ ಸ್ವಾತಂತ್ರ್ಯ. ಪ್ರಜಾಸತ್ತಾತ್ಮಕ ರಾಜ್ಯ ಸ್ಥಾಪಿಸಿ ಸಹಕಾರೋದ್ಯಮಗಳಿಗೆ ಪ್ರೋತ್ಸಾಹವಿತ್ತರೆ ಅಧಿಕಾರ ಶಕ್ತಿಯ ಕೇಂದ್ರೀಕರಣ ಮತ್ತು ಒಂದೇ ಪಡಿಯಚ್ಚಿನ ಅಪಾಯಗಳನ್ನು ತಡೆಗಟ್ಟಬಹುದು.

ಮೊದಲನೆಯ ನಮ್ಮ ಅಧಿವೇಶನದಲ್ಲಿಯೇ ಒಂದು ದೊಡ್ಡ ಸಮಗ್ರ ಪ್ರಶ್ನಪತ್ರಿಕೆ ಹೊರಡಿಸಿ ಬೇರೆ ಬೇರೆ ಸರಕಾರಗಳಿಗೆ, ವಿಶ್ವವಿದ್ಯಾನಿಲಯಗಳಿಗೆ ವರ್ತಕ ಸಂಘಗಳಿಗೆ ಸಂಶೋಧನಾಲಯಗಳಿಗೆ ಕಳುಹಿಸಿ ಕೊಟ್ಟೆವು. ನಿರ್ದಿಷ್ಟ ವಿಷಯಗಳ ಪೂರ್ಣ ಪರಿಶೀಲನೆಗೆ ಇಪ್ಪತ್ತೊಂಬತ್ತು ಉಪಸಮಿತಿಗಳನ್ನು ನೇಮಿಸಿದೆವು ; ಇವುಗಳಲ್ಲಿ ವ್ಯವಸಾಯ ಸಂಬಂಧ ವಿಷಯಗಳಿಗೆ ಎಂಟು ಸಮಿತಿಗಳು, ಕೈಗಾರಿಕೆಗಳಿಗೆ ಕೆಲವು, ವಾಣಿಜ್ಯ ಹಣಕಾಸಿಗೆ ಐದು, ಸಂಚಾರ ಸೌಕರ್ಯಕ್ಕೆ ಎರಡು, ಸಾರ್ವಜನಿಕ ಸ್ವಾಸ್ಥ್ಯದ ಬಗೆಗೆ ಎರಡು ಜನಾಂಗ ಸ್ಥಿತಿ ಅಭ್ಯಸಿಸಲು ಎರಡು, ರಾಷ್ಟ್ರಜೀವನದ ಯೋಜನೆಯಲ್ಲಿ ಮಹಿಳೆಯರ ಪಾತ್ರ ನಿರ್ಧರಿಸಲು ಒಂದು. ಈ ಉಪಸಮಿತಿಗಳ ಸದಸ್ಯ ಸಂಖ್ಯೆ ೩೫೦ ಇತ್ತು ; ಕೆಲವರು ಒಂದಕ್ಕಿಂತ ಹೆಚ್ಚು ಸಮಿತಿಗಳಲ್ಲಿ ಇದ್ದರು. ಅವರಲ್ಲಿ ಅನೇಕರು ತಮ್ಮ ತಮ್ಮ ವಿಷಯಗಳಲ್ಲಿ ಪ್ರಾಜ್ಞರು—ವಣಿಕ ಶ್ರೇಷ್ಠರು, ಸರಕಾರದ, ಸಂಸ್ಥಾನಗಳ, ಸ್ಥಳೀಯ ಸಂಸ್ಥಾನಗಳ, ಸ್ಥಳೀಯ ಸಂಸ್ಥೆಗಳ ಉನ್ನತ ಅಧಿಕಾರಿಗಳು, ವಿಶ್ವವಿದ್ಯಾನಿಲಯಗಳ ಪ್ರಾಧ್ಯಾಪಕರು ಮತ್ತು ಶಾಸ್ತ್ರಜ್ಞರು, ಕರ್ಮಕುಶಲರು, ವಿಜ್ಞಾನಿಗಳು, ಕೂಲಿಗಾರ ಸಂಘಗಳ ಪ್ರತಿನಿಧಿಗಳು ಮತ್ತು ಸಾರ್ವಜನಿಕ ಪ್ರಮುಖರು ಇದ್ದರು. ದೇಶದ ಘಟಾನುಘಟಿ ವ್ಯಕ್ತಿಗಳನ್ನೆಲ್ಲಾ ಈ ರೀತಿ ತಡೆಹಾಕಿದೆವು. ವ್ಯಕ್ತಿಶಃ ನಮ್ಮೊಂದಿಗೆ ಕೆಲಸಮಾಡಲು ಇಷ್ಟಪಟ್ಟರೂ ನಾವು ಬಿಟ್ಟವರೆಂದರೆ ಇಂಡಿಯಾ ಸರಕಾರದ ಅಧಿಕಾರಿಗಳು. ಇಷ್ಟು ಜನರು ನಮ್ಮೊಂದಿಗೆ ಸಹಕರಿಸ ಬಂದುದು ತುಂಬ ನಮಗೆ ಪ್ರಯೋಜನವಾಯಿತು. ಅದರ ವಿಶೇಷ ಜ್ಞಾನಸಂಪತ್ತು ಮತ್ತು ಅನುಭವ ನಮಗೆ ಒದಗಿದವು; ರಾಷ್ಟ್ರದ ಬೃಹತ್ಸಮಸ್ಯೆಯ ದೃಷ್ಟಿಯಿಂದ ತಮ್ಮ ವಿಶಿಷ್ಟ ವಿಷಯ ಪರಿಶೀಲಿಸಬೇಕೆಂದು ಅವರಿಗೆ ತಿಳಿಸಿದೆವು. ಈ ಯೋಚನೆಯಲ್ಲಿ ದೇಶಾದ್ಯಂತ ಒಂದು ವಿಶೇಷ ಆಸಕ್ತಿ ಹುಟ್ಟಿತು. ಅದರ ಈ ದೊಡ್ಡ ಸದಸ್ಯ ಸಂಖ್ಯೆಯಿಂದ ತೊಂದರೆಯೂ ಇತ್ತು ; ದೇಶದ ಮೂಲೆ ಮೂಲೆಯಿಂದ ಕೆಲಸ ಬಾಹುಳ್ಯದ ಜನರು ಪದೇ ಪದೇ ಸೇರಲು ಕಾಲವಿಳಂಬವಾಗುತ್ತಿತ್ತು.

ರಾಷ್ಟ್ರ ಜೀವನದ ವಿವಿಧ ಕಾರ್ಯಚಟುವಟಿಕೆಗಳಲ್ಲಿ ಇಷ್ಟು ಶ್ರೇಷ್ಠ ಕಾರ್ಯಶಕ್ತಿ ಮತ್ತು ಉತ್ಸಾಹ ಕಂಡು ನನಗೆ ಧೈರ್ಯಬಂದಿತು ; ಈ ಪರಿಚಯದಿಂದ ನನ್ನ ಆತ್ಮ ಶಿಕ್ಷಣವೂ ಉತ್ತಮಗೊಂಡಿತು. ಪ್ರತಿಯೊಂದು ಉಪಸಮಿತಿಯಿಂದ ಒಂದು ಮಧ್ಯವರ್ತಿ ವರದಿ ತರಿಸಿ, ಒಪ್ಪುವುದನ್ನು ಒಪ್ಪಿ, ವಿಮರ್ಶೆ ಮಾಡಬೇಕಾದ್ದನ್ನು ಮಾಡಿ, ಪುನಃ ಉಪಸಮಿತಿಗೆ ನಮ್ಮ ಟೀಕೆಗಳೊಂದಿಗೆ ಕಳುಹಿಸಬೇಕೆಂದು ಕಾರ್ಯಕ್ರಮ ಗೊತ್ತುಮಾಡಿದ್ದೆವು. ಆಮೇಲೆ ಅವರ ಕೊನೆಯ ವರದಿ ಆದನ್ನಿಟ್ಟುಕೊಂಡು ಆ ವಿಷಯದ ಮೇಲೆ ಪುನಃ ನಾವು ತೀರ್ಮಾನಕ್ಕೆ ಬರುತ್ತಿದ್ದೆವು. ಪ್ರತಿಯೊಂದು ವಿಷಯದ ಮೇಲೆ ಮೇಲಿನ ತೀರ್ಮಾನವನ್ನೂ, ಇತರ ವಿಷಯಗಳ ಮೇಲೆ ತೆಗೆದುಕೊಂಡ ತೀರ್ಮಾನಗಳಿಗೆ ಅನುಗುಣವಾಗಿರುವಂತೆ ಸತತ ಪ್ರಯತ್ನ ಮಾಡುತ್ತಿದ್ದೆವು. ಈ ರೀತಿ ಎಲ್ಲ ವಿಷಯಗಳ ಮೇಲಿನ ಅಂತಿಮ ವರದಿಗಳನ್ನು ಯೋಚಿಸಿ ತೀರ್ಮಾನಿಸಿದ ಮೇಲೆ ಯೋಜನಾ ಸಮಿತಿಯು ಸಮಗ್ರ ಯೋಜನೆಯ ವೈಶಾಲ್ಯ, ಮತ್ತು ಜಟಿಲತೆಗಳ ಪೂರ್ಣ ಚಿತ್ರ ಪರಿಶೀಲಿಸಿ ತನ್ನದೇ ಆದ ಸಮಗ್ರವರದಿ ಕೊಡಬೇಕೆಂದೂ ಉಪಸಮಿತಿಗಳ ವರದಿಗಳು ಅದರ ಪರಿಶಿಷ್ಟಗಳಾಗಿರಬೇಕೆಂದೂ ತೀರ್ಮಾನಿಸಿದೆವು. ನಾವು ಉಪಸಮಿತಿಗಳ ವರದಿಗಳನ್ನು ಪರಿಶೀಲಿಸುತ್ತಿದ್ದಾಗ ನಮ್ಮ ಅಂತಿಮ ವರದಿಯ ರೂಪುರೇಖೆಯೂ ತಾನಾಗಿ ಖಚಿತಗೊಳ್ಳುತ್ತಲಿತ್ತು.

ಕೆಲವು ಉಪಸಮಿತಿಗಳು ನಿಯತ ಕಾಲದ ಒಳಗೆ ವರದಿ ಮಾಡಲು ಆಗದೆ ಕಾಲಹರಣವಾಗಿ ಬಹಳ ಬೇಸರವಾಗುತ್ತಿತ್ತು. ಆದರೂ ಬಹಳಮಟ್ಟಿಗೆ ಯಶಸ್ವಿಯಾಗಿ ಮುಂದುವರಿದು ಅಪಾರ ಕೆಲಸ ಮುಗಿಸಿದೆವು. ವಿದ್ಯಾಭ್ಯಾಸ ವಿಷಯದಲ್ಲಿ ಎರಡು ಮುಖ್ಯ ತೀರ್ಮಾನ ಮಾಡಿದೆವು. ವಿದ್ಯಾಭ್ಯಾಸದ ಪ್ರತಿಯೊಂದು ಮಟ್ಟದಲ್ಲಿಯೂ ಹುಡುಗರಿಗೆ ಮತ್ತು ಹುಡುಗಿಯರಿಗೆ ಒಂದು ನಿಯತ ದೇಹದಾರ್ಢ್ಯವಿರುವಂತೆ ವಿಧಾಯಕ ಮಾಡಬೇಕೆಂದೂ, ಪ್ರತಿಯೊಬ್ಬ ಯುವಕ ಮತ್ತು ಯುವತಿಯೂ ತನ್ನ ೧೮ ಮತ್ತು ೨೨ ವರ್ಷಗಳ ಮಧ್ಯೆ ವ್ಯವಸಾಯ, ಕೈಗಾರಿಕೆ, ಸಾರ್ವಜನಿಕೋಪಯುಕ್ತ ಕಾರ್ಯಗಳು, ಮುಂತಾದ ಯಾವುದಾದರೂ ಒಂದು ಬಗೆಯ ಸಾರ್ವಜನಿಕ ಕೆಲಸಗಳಲ್ಲಿ ನಿರತನಾಗಿ ಒತ್ತಾಯದ ಸಮಾಜಸೇವೆ ಅಥವ ಶ್ರಮಜೀವನ ನಡೆಸುವ ಒಂದು ಪದ್ಧತಿ ಏರ್ಪಡಿಸಬೇಕೆಂದು ಸಲಹೆಮಾಡಿದೆವು. ದೇಹ ಅಥವ ಮಾನಸಿಕ ದೌರ್ಬಲ್ಯ ಇದ್ದವರಿಗೆ ಮಾತ್ರ ವಿನಾಯಿತಿ ಮಾಡಿದೆವು.

೧೯೩೯ ನೆಯ ಸೆಪ್ಟೆಂಬರ್‌ನಲ್ಲಿ ಪ್ರಪಂಚದ ೨ ನೇ ಯುದ್ಧ ಆರಂಭವಾದಾಗ ರಾಷ್ಟ್ರೀಯ ಯೋಜನಾ ಸಮಿತಿ ತನ್ನ ಕಾರ್ಯ ನಿಲ್ಲಿಸಬೇಕೆಂದು ಸಲಹೆಬಂದಿತು. ನವೆಂಬರ್ ತಿಂಗಳಲ್ಲಿ ಕಾಂಗ್ರೆಸ್ ಸರಕಾರಗಳು ರಾಜೀನಾಮೆ ಕೊಟ್ಟವು. ಪ್ರಾಂತಗಳಲ್ಲಿ ಗೌರ್ನರುಗಳ ನಿರಂಕುಶಾಧಿಕಾರ ಆರಂಭವಾಗಿ ನಮ್ಮ ಕೆಲಸದಲ್ಲಿ ಅವರು ಯಾರೂ ಆಸಕ್ತಿ ತೋರಲಿಲ್ಲವಾದ್ದರಿಂದ ನಮ್ಮ ಕಷ್ಟ ಇನ್ನೂ ಹೆಚ್ಚಿತು. ವರ್ತಕರು ಯುದ್ಧ ಸರಬರಾಜಿನಿಂದ ಹೆಚ್ಚು ಹಣಗಳಿಸಲು ನಿಂತರು; ಯೋಜನೆಯಲ್ಲಿ ಅವರ ಆಸಕ್ತಿ ಕಡಮೆಯಾಯಿತು. ನಿತ್ಯವು ಪರಿಸ್ಥಿತಿ ಬಿಗಡಾಯಿಸುತ್ತಿತ್ತು. ನಮ್ಮ ಕೆಲಸ ಮಾತ್ರ ನಾವು ಮುಂದುವರಿಸಬೇಕೆಂದೂ, ಯುದ್ಧ ದೆಸೆಯಿಂದಲೇ ಮುಂದುವರಿಸುವುದು ಇನ್ನೂ ಅವಶ್ಯವೆಂದೂ ತೀರ್ಮಾನಿಸಿದೆವು. ಕೈಗಾರಿಕೋದ್ಯಮಗಳ ಬೆಳೆವಣಿಗೆ ಅನಿವಾರ್ಯವಾದುದರಿಂದ ನಮ್ಮ ಇದುವರೆಗಿನ ಕೆಲಸವೂ, ಮುಂದೆ ಮಾಡಲಿದ್ದ ಕೆಲಸವೂ ಅದಕ್ಕೆ ಸಹಾಯಕವಾಗಿತ್ತು. ಆಗ ನಾವು ಯಂತ್ರೋಪಕರಣಗಳ ಕೈಗಾರಿಕೆ, ಸಂಚಾರ ವಾಹನಗಳ ಕೈಗಾರಿಕೆ, ರಾಸಾಯನಿಕ ಕೈಗಾರಿಕೆ, ಕೈಗಾರಿಕಾ ಯಂತ್ರಗಳ ತಯಾರಿಕೆ ಮುಂತಾದ ಯುದ್ಧದ ದೃಷ್ಟಿಯಿಂದ ಬಹು ಮುಖ್ಯವಾದ ಉಪಸಮಿತಿಗಳ ವರದಿಗಳನ್ನು ಪರಿಶೀಲಿಸುತ್ತಿದ್ದೆವು. ಆದರೆ ಸರಕಾರಕ್ಕೆ ನಮ್ಮ ಕೆಲಸ ಬೇಕಿಲ್ಲ; ಅದನ್ನು ತಿರಸ್ಕಾರದಿಂದಲೂ ಕಂಡಿತು. ಭಂಡಾಯ ಕಾಲದ ಯುದ್ಧಾರಂಭದ ದಿನಗಳಲ್ಲಿ ಭಾರತೀಯ ಕೈಗಾರಿಕೆಗೆ ಪ್ರೋತ್ಸಾಹ ಕೊಡುವುದು ಅವರಿಗೆ ಬೇಕಿರಲಿಲ್ಲ. ಆದರೆ ಅನಂತರದ ಘಟನೆಗಳ ಒತ್ತಡದಿಂದ ಅವರು ತಮ್ಮ ಎಲ್ಲ ಅವಶ್ಯಕತೆಗಳನ್ನೂ ಭಾರತದಲ್ಲೇ ಕೊಳ್ಳುವುದು ಅನಿವಾರ್ಯವಾಯಿತು. ಆದರೂ ದೊಡ್ಡ ಕೈಗಾರಿಕೆಗಳಾವುದಕ್ಕೂ ಇಲ್ಲಿ ಅವಕಾಶ ಕೊಡಲಿಲ್ಲ. ಆದರೆ ಯಾವ ಯಂತ್ರೋಪಕರಣ ತರಿಸುವುದಕ್ಕೂ ಅವಕಾಶ ಕೊಡಲಿಲ್ಲ. ಸರಕಾರದ ಅನುಮತಿ ಇಲ್ಲದೆ ಯಂತ್ರೋಪಕರಣಗಳು ದೇಶದ ಒಳಗೆ ಬರುವಂತಿರಲಿಲ್ಲ.

ಯೋಜನಾಸಮಿತಿ ತನ್ನ ಕೆಲಸ ಮುಂದುವರಿಸಿ ಉಪಸಮಿತಿ ವರದಿಗಳ ಬಹುಭಾಗ ಪರಿಶೀಲನೆ ಪೂರೈಸಿತ್ತು. ಉಳಿದ ಅಲ್ಪ ಭಾಗ ಮುಗಿಸಿ ನಮ್ಮ ಸಮಗ್ರ ವರದಿಯ ಪರ್ಯಾಲೋಚನೆ ಮಾತ್ರ ಉಳಿದಿತ್ತು. ೧೯೪೦ ನೇ ಅಕ್ಟೋಬರ್‌ನಲ್ಲಿ ನನ್ನ ಬಂಧನವಾಗಿ ದೀರ್ಘಕಾಲದ ಶಿಕ್ಷೆಯಾಯಿತು. ಯೋಜನಾ ಸಮಿತಿಯ ಇತರ ಅನೇಕ ಸದಸ್ಯರೂ, ಉಪಸಮಿತಿಯ ಕೆಲಸ ಮುಂದುವರಿಯಬೇಕೆಂದು ಹೊರಗೆ ಇದ್ದ ನನ್ನ ಸಹೋದ್ಯೋಗಿಗಳನ್ನು ಪ್ರಾರ್ಥಿಸಿದೆ. ಅದರೆ ನಾನು ಇಲ್ಲದೆ ಅವರು ಕೆಲಸ ಮುಂದುವರಿಸಲು ಒಪ್ಪಲಿಲ್ಲ. ಯೋಜನಾ ಸಮಿತಿಯ ಕಾಗದಪತ್ರಗಳನ್ನೂ ವರದಿಗಳನ್ನೂ ಸೆರೆಮನೆಗೇ ತರಿಸಿ ಅಲ್ಲಿಯೇ ಅಭ್ಯಾಸಮಾಡಿ ಒಂದು ಕರಡು ವರದಿ ಬರೆಯಲು ಯತ್ನಮಾಡಿದೆ. ಇಂಡಿಯಾ ಸರಕಾರ ಅಡ್ಡಬಂದು ಅದಕ್ಕೆ ಅವಕಾಶ ಕೊಡಲಿಲ್ಲ. ಯಾವ ಕಾಗದವೂ ನನಗೆ ಬರಲು ಅವಕಾಶ ಕೊಡಲಿಲ್ಲ. ಯಾವ ಭೇಟಿಗೂ ಅವಕಾಶವಿರಲಿಲ್ಲ.

ಈ ರೀತಿ ನಾನು ಸೆರೆಮನೆಯಲ್ಲಿ ಕೊಳೆಯುತ್ತಿದ್ದಾಗ ರಾಷ್ಟ್ರೀಯ ಯೋಜನಾ ಸಮಿತಿಯೂ ಕುಸಿದು ಬಿತ್ತು. ನಾವು ಮಾಡಿದ ಕೆಲಸ ಅಪೂರ್ಣವಾಗಿದ್ದರೂ ಯುದ್ಧ ಸರಬರಾಜಿಗೆ ಉಪಯುಕ್ತವಿತ್ತು. ಆದರೂ ಅದು ನಮ್ಮ ಕಚೇರಿಯ ಕತ್ತಲು ಕೋಣೆಯಲ್ಲೇ ಉಳಿಯಿತು. ೧೯೪೧ನೇ ಡಿಸೆಂಬರ್ ತಿಂಗಳಲ್ಲಿ

ನನಗೆ ಬಿಡುಗಡೆಯಾಗಿ ನಾಲ್ಕು ತಿಂಗಳು ಮಾತ್ರ ಹೊರಗೆ ಇದ್ದೆ. ಆದರೆ ಇತರರಂತೆ ನನಗೂ ಇದು ಬಹಳ ವಿಷಮಕಾಲ. ಹೊಸ ಪರಿಸ್ಥಿತಿಗಳು ಏನೇನೋ ಉದ್ಭವಿಸಿದ್ದವು. ಶಾಂತಿಸಾಗರದಲ್ಲಿ ಯುದ್ಧ ಆರಂಭವಾಗಿ ಭಾರತದ ಮೇಲಿನ ಮುತ್ತಿಗೆಯ ಭಯ ಹುಟ್ಟಿತ್ತು. ರಾಜಕೀಯ ವಾತಾವರಣ ತಿಳಿಯಾಗುವವರೆಗೆ, ಹಳೆಯ ಎಳೆಗಳನ್ನು ಎತ್ತಿಕೊಂಡು ಯೋಜನಾಸಮಿತಿಯ ಕಾರ್ಯ ಮುಂದುವರಿಸುವುದು ಅಸಾಧ್ಯವೆನಿಸಿತು. ಅಷ್ಟರಲ್ಲೆ ಪುನಃ ಸೆರೆಮನೆಗೆ ಹಿಂದಿರುಗಿದೆ.

೭. ಕಾಂಗ್ರೆಸ್ ಮತ್ತು ಕೈಗಾರಿಕೆ: ದೊಡ್ಡ ಕೈಗಾರಿಕೆ ಮತ್ತು ಗ್ರಾಮೋದ್ಯೋಗ

ಗಾಂಧೀಜಿಯ ನೇತೃತ್ವದಲ್ಲಿ ಕಾಂಗ್ರೆಸ್ ಗ್ರಾಮ ಕೈಗಾರಿಕೆಗಳ ಪುನರುಜ್ಜೀವನಕ್ಕೆ ಮುಖ್ಯವಾಗಿ ಕೈನೂಲು ಮತ್ತು ಕೈಮಗ್ಗದ ಕೈಗಾರಿಕೆಗೆ ಬಹಳ ಕಾಲದಿಂದ ಪ್ರಾಮುಖ್ಯತೆ ಕೊಟ್ಟಿತ್ತು. ಆದರೆ ದೊಡ್ಡ ಕೈಗಾರಿಕೆಗಳ ಬೆಳೆವಣಿಗೆಯನ್ನು ಕಾಂಗ್ರೆಸ್ ಯಾವಾಗಲೂ ವಿರೋಧಿಸಿರಲಿಲ್ಲ; ಶಾಸನ ಸಭೆಗಳಲ್ಲಿ ಮತ್ತು ಇತರ ಕಡೆಗಳಲ್ಲಿ ಅವಕಾಶದೊರೆತಾಗಲೆಲ್ಲ ಆ ಬೆಳವಣಿಗೆಗೆ ಪ್ರೋತ್ಸಾಹ ಕೊಟ್ಟಿತ್ತು. ಕಾಂಗ್ರೆಸ್ ಪ್ರಾಂತ ಸರಕಾರಗಳು ದೊಡ್ಡ ಕೈಗಾರಿಕೋದ್ಯಮಗಳ ಬೆಳೆವಣಿಗೆಯನ್ನು ಪ್ರೋತ್ಸಾಹಿಸಿದ್ದವು. ೧೯೨೦ ರ ನಂತರ ತಾತಾ ಉಕ್ಕು ಮತ್ತು ಕಬ್ಬಿಣ ಕಾರ್ಖಾನೆ ಕಷ್ಟದಲ್ಲಿದ್ದಾಗ ಶಾಸನ ಸಭೆಗಳ ಕಾಂಗ್ರೆಸ್ ಸದಸ್ಯರ ಒತ್ತಾಯದಿಂದ ಸರಕಾರ ಸಹಾಯ ಮಾಡಲು ಮನಸ್ಸುಮಾಡಿತು. ಭಾರತೀಯ ಹಡಗು ನಿರ್ಮಾಣ ಕೈಗಾರಿಕೆ ಮತ್ತು ಹಡಗಿನ ಸಾರಿಗೆಯ ಪ್ರಶ್ನೆಗಳು ಇಂಡಿಯಾ ಸರಕಾರ ಮತ್ತು ರಾಷ್ಟ್ರೀಯರ ಅಭಿಮತದ ಮಧ್ಯೆ ಸದಾ ಘರ್ಷಣೆಯ ವಿಷಯಗಳಾಗಿದ್ದವು. ಇತರ ಎಲ್ಲ ಭಾರತೀಯ ಪಕ್ಷಗಳಂತೆ ಕಾಂಗ್ರೆಸ್ ಸಹ ಭಾರತೀಯ ಹಡಗು ಸಾರಿಗೆಗೆ ಪೂರ್ಣ ಸಹಾಯ ಕೊಡಬೇಕೆಂದು ಹೋರಾಡಿತು. ಬ್ರಿಟಿಷ್ ಹಡಗು ಸಾರಿಗೆ ಕಂಪೆನಿಗಳ ಪ್ರತಿಷ್ಠಿತ ಹಕ್ಕುಗಳ ರಕ್ಷಣೆಗೆ ಸರಕಾರ ನಿಶ್ಚಯಿಸಿತ್ತು. ಭಾರತೀಯ ಕಂಪನಿಗಳಿಗೆ ಬೇಕಾದ ಎಲ್ಲ ಬಂಡವಾಳ, ಉದ್ಯೋಗ ನಿಪುಣರು, ಆಡಳಿತ ದಕ್ಷತೆ ಇದ್ದರೂ ಸರಕಾರದ ಪಕ್ಷಪಾತದಿಂದ ಬೆಳೆಯಲು ಅವಕಾಶ ದೊರೆಯಲಿಲ್ಲ. ಎಲ್ಲೆಲ್ಲಿ ಬ್ರಿಟಿಷ್ ಕೈಗಾರಿಕೆ, ವ್ಯಾಪಾರ ಮತ್ತು ಬಂಡವಾಳ ವಿತ್ತೋ ಅಲ್ಲೆಲ್ಲ ಈ ಪಕ್ಷಪಾತವಿತ್ತು.

ಭಾರತೀಯ ಕೈಗಾರಿಕೆಗೆ ಬೆಳೆಯಲು ಅವಕಾಶ ಆಗಬಾರದೆಂದು ದೊಡ್ಡ ಕೇಂದ್ರೀಕೃತ ಕೈಗಾರಿಕಾ ಸಂಸ್ಥೆಯಾದ ಇಂಪೀರಿಯಲ್ ಕೆಮಿಕಲ್ ಇಂಡಸ್ಟ್ರೀಸ್ ಕಂಪೆನಿಗೆ ಬಹುಕಾಲದಿಂದ ಭಾರತಸರಕಾರದ ಸೌಲಭ್ಯ. ಕೆಲವು ವರ್ಷಗಳ ಕೆಳಗೆ ಪಂಜಾಬಿನ ಅದಿರುಗಳ ಉಪಯೋಗಕ್ಕೆ ದೀರ್ಘಕಾಲದ ಗುತ್ತಿಗೆ ಕೊಡಲಾಗಿತ್ತು. ಆ ಒಪ್ಪಂದದ ಷರತ್ತು ಒಂದು ಚಿದಂಬರರಹಸ್ಯ. ಪ್ರಾಯಶಃ ಬಹಿರಂಗಪಡಿಸಿದರೆ ಸಾರ್ವಜನಿಕ ಹಿತಕ್ಕೆ ವಿರುದ್ಧವೆಂದೋ ಏನೋ!

ಕಾಂಗ್ರೆಸ್ ಸರಕಾರಗಳು "ಪವರ್ ಆಲ್ಕೊಹಾಲ್" ಕೈಗಾರಿಕೆಯನ್ನು ಪ್ರೋತ್ಸಾಹಿಸಬೇಕೆಂದು ಕಾತರವಿದ್ದವು. ಇದು ಅನೇಕ ದೃಷ್ಟಿಯಿಂದ ಅವಶ್ಯವಿದ್ದರೂ ಸಂಯುಕ್ತಪ್ರಾಂತ ಮತ್ತು ಬೀಹಾರದಲ್ಲಿ ಇನ್ನೂ ಹೆಚ್ಚಿನ ಕಾರಣಗಳಿದ್ದವು. ಅಲ್ಲಿನ ಅನೇಕ ಸಕ್ಕರೆ ಕಾರ್ಖಾನೆಗಳಲ್ಲಿ ವಿಶೇಷ ಪ್ರಮಾಣದಲ್ಲಿ ಕಾಕಂಬಿ ಒಂದು ನಿಷ್ಪ್ರಯೋಜಕ ಶೇಷವಸ್ತುವಾಗಿ ಉಳಿದಿತ್ತು. ಇದನ್ನು ಉಪಯೋಗಿಸಿ "ಪವರ್ ಆಲ್ಕೊಹಾಲ್" ತಯಾರಿಸಬೇಕೆಂದಿದ್ದರು. ತಯಾರಿಕೆಯ ವಿಧಾನವೂ ಸುಲಭವಿತ್ತು ಮತ್ತು ಬರ್ಮಷೆಲ್ ಕಂಪೆನಿಗೆ ಏಟು ಬೀಳುತ್ತದೆಂಬ ಒಂದು ದೊಡ್ಡತೊಂದರೆ ಹೊರತು ಬೇರೆಯಾವ ಆತಂಕವೂ ಇರಲಿಲ್ಲ. ಆದರೆ ಇಂಡಿಯಾ ಸರಕಾರ ಆ ವಿದೇಶೀಕಂಪೆನಿಗೇ ಪ್ರೋತ್ಸಾಹಕೊಡಲು, ಭಾರತದಲ್ಲಿ ಪವರ್ ಆಲ್ಕೊಹಾಲ್ ತಯಾರಿಕೆಗೆ ಅವಕಾಶಕೊಡಲಿಲ್ಲ. ಬರ್ಮ ಕೈತಪ್ಪಿ, ಎಣ್ಣೆ ಮತ್ತು ಪೆಟ್ರೋಲ್ ಸರಬರಾಯಿ ತಪ್ಪಿದಮೇಲೆ ಯುದ್ಧ ಆರಂಭವಾದ ಮೂರುವರ್ಷದ ನಂತರ ಭಾರತದಲ್ಲೂ ಪವರ್ ಆಲ್ಕೊಹಾಲ್ ತಯಾರಿಸಬೇಕಾಗಿತ್ತೆಂದು ಇಂಡಿಯಾ ಸರಕಾರಕ್ಕೆ ಜ್ಞಾನೋದಯ ಆಯಿತು. ಅದರ ಪರಿಣಾಮವಾಗಿ ೧೯೪೨ರಲ್ಲಿ ಅಮೆರಿಕನ್ ಗ್ರೇಡಿ ಸಮಿತಿಯ ನೇಮಕವಾಯಿತು.

ಈ ರೀತಿ ಕೈಗಾರಿಕೋದ್ಯಮದ ಬೆಳೆವಣಿಗೆಗೆ ಕಾಂಗ್ರೆಸ್ಸು ಸದಾ ಪ್ರೋತ್ಸಾಹ ಕೊಡುತ್ತ ಜೊತೆ

ಯಲ್ಲಿಯೇ ಗ್ರಾಮಕೈಗಾರಿಕೆಗಳಿಗೂ ಪ್ರಾಮುಖ್ಯತೆಕೊಟ್ಟು ಅವುಗಳನ್ನು ಪುನರುಜ್ಜೀವನಮಾಡಲು ಯತ್ನಿಸಿದೆ. ಈ ಎರಡಕ್ಕೂ ಘರ್ಷಣೆ ಏನಿದೆ ? ಪ್ರಾಯಶಃ ನಾವು ಕೊಟ್ಟ ಪ್ರಾಮುಖ್ಯತೆಯ ಪ್ರಮಾಣದಲ್ಲಿ ವ್ಯತ್ಯಾಸವಿರಬಹುದು. ಮುಂಚಿನಿಂದ ಭಾರತದಲ್ಲಿ ಅಲಕ್ಷ್ಯಮಾಡಿದ ಕೆಲವು ಆರ್ಥಿಕ ಮತ್ತು ಮಾನವೀಯ ಪ್ರಶ್ನೆಗಳ ಅರಿವು ಅದಕ್ಕೆ ಕಾರಣವಾಗಿರಬಹುದು. ದೊಡ್ಡ ಕೈಗಾರಿಕೆಗಳಿಗೆ ಬೆಂಬಲಕೊಟ್ಟ ಭಾರತೀಯ ಕೈಗಾರಿಕೋದ್ಯಮಿಗಳು ಮತ್ತು ರಾಜಕೀಯ ಮುಖಂಡರು ೧೯ನೆಯ ಶತಮಾನದ ಬಂಡವಾಳಶಾಹಿ ಕೈಗಾರಿಕೆ ಬೆಳವಣಿಗೆಯ ಕಡೆಗೇ ಗಮನಕೊಟ್ಟರು. ಇಪ್ಪತ್ತನೆಯ ಶತಮಾನದಲ್ಲಿ ಒದಗಿದ ಅದರ ಅನಿಷ್ಟ ಪರಿಣಾಮಗಳನ್ನು ಅಲಕ್ಷ್ಯಮಾಡಿದರು. ಭಾರತದಲ್ಲಿ ಒಂದುನೂರುವರ್ಷ ಸಾಮಾನ್ಯ ಕೈಗಾರಿಕಾ ಪ್ರಗತಿ ಸಹ ಯಾವುದೂ ಆಗಲಿಲ್ಲ. ಆದ್ದರಿಂದ ಆ ದುಷ್ಪರಿಣಾಮಗಳು ಇನ್ನೂ ಹೆಚ್ಚುವ ಸಂಭವವಿತ್ತು. ಇಂದಿನ ಆರ್ಥಿಕಸ್ಥಿತಿಯಲ್ಲಿ ಆರಂಭವಾಗುತ್ತಿದ್ದ ಮಧ್ಯವರ್ಗದ ಕೈಗಾರಿಕೆಗಳಿಂದ ನಿರುದ್ಯೋಗ ಕಡಮೆ ಯಾಗುವ ಬದಲು ಹೆಚ್ಚುತ್ತಿತ್ತು. ಒಂದುಕಡೆ ಬಂಡವಾಳ ಬೆಳೆಯುತ್ತಿದ್ದರೆ ಇನ್ನೊಂದುಕಡೆ ಬಡತನ ಮತ್ತು ನಿರುದ್ಯೋಗ ಹೆಚ್ಚುತ್ತ ಇತ್ತು. ಬೇರೊಂದು ರೀತಿಯಲ್ಲಿ ದೊಡ್ಡದೊಡ್ಡ ಕೈಗಾರಿಕೆಗಳನ್ನು ಸ್ಥಾಪಿಸಿ, ಅನೇಕ ಜನರಿಗೆ ಉದ್ಯೋಗಕಲ್ಪಿಸಿ, ಒಂದು ಯೋಜನೆಯ ಪ್ರಕಾರ ಕೈಗಾರಿಕೆ ಅಭಿವೃದ್ಧಿಗೊಳಿಸಿ ಈ ತೊಂದರೆ ತಪ್ಪಿಸಬಹುದು.

ಜನತೆಯ ಬಡತನವು, ಈ ರೀತಿ ಹೆಚ್ಚುತ್ತಿರುವುದು ಗಾಂಧೀಜಿಯಮೇಲೆ ಮಹತ್ಪರಿಣಾಮಮಾಡಿತು. ಅವರ ಜೀವನ ದೃಷ್ಟಿಗೂ ಆಧುನಿಕ ದೃಷ್ಟಿಗೂ ವ್ಯತ್ಯಾಸವಿದೆ ಎಂಬುದು ನಿಜ. ನೈತಿಕ ಮತ್ತು ಧಾರ್ಮಿಕ ದೃಷ್ಟಿಯನ್ನು ನಾಶಮಾಡಿ ಜೀವನದಮಟ್ಟ ಏರಿಸುವುದೂ, ಭೋಗಾಸಕ್ತಿ ಹೆಚ್ಚಿಸುವುದೂ ಅವರಿಗೆ ಸಮ್ಮತ ವಿರಲಿಲ್ಲ. ಅವರಿಗೆ ಸುಲಭ ಜೀವನಬೇಕಿರಲಿಲ್ಲ. ಕಷ್ಟ ಜೀವನವೇ ಅವರಿಗೆ ನೇರಜಿವನ. ಭೋಗಾ ಸಕ್ತಿಯು ಮೋಸಕ್ಕೂ ಅನೀತಿಗೂ ಕಾರಣವಾಗುತ್ತದೆ. ಎಲ್ಲಕ್ಕೂ ಹೆಚ್ಚಾಗಿ ಬಡವರಿಗೂ ಶ್ರೀಮಂತರಿಗೂ ಇರುವ ಅಪಾರ ಅಂತರ, ಅವರ ಜೀವನ ರೀತಿಯಲ್ಲಿ, ಜೀವನ ಅವಕಾಶದಲ್ಲಿ ಕಂಡುಬರುವ ವ್ಯತ್ಯಾಸ ಇವುಗಳನ್ನು ಕಂಡು ಮೈನಡುಗಿದ್ದಾರೆ. ತಮ್ಮ ಮಾನಸಿಕ ಮತ್ತು ಆತ್ಮತೃಪ್ತಿಗಾಗಿ ಆ ಅಪಾರ ಅಂತರ ವನ್ನು ದಾಟಿ ಬಡವರ ಜೀವನವನ್ನೇ ತಾವೂ ಅವಲಂಬಿಸಿದ್ದಾರೆ. ತಮ್ಮ ಜೀವನದಲ್ಲಿ, ಉಡುಪು ಅಥವ ಅದರ ಅಭಾವದಲ್ಲಿ ಸ್ವಲ್ಪ ಉತ್ತಮ ರೀತಿಯಲ್ಲಿ ಬಡವರು ಹೇಗೆ ಜೀವಿಸಬಹುದೋ ಹಾಗೆ ಜೀವನ ನಡೆಸುತ್ತಿದ್ದಾರೆ. ಈ ಕೆಲವು ಶ್ರೀಮಂತರು ಮತ್ತು ಅರೆಹೊಟ್ಟೆಯ ಜನಕೋಟಿ ಇವರ ಮಧ್ಯೆ ಇರುವ ಅಂತರಕ್ಕೆ ಮುಖ್ಯಕಾರಣಗಳು ಎರಡೆಂದು ತೋರುತ್ತದೆ. ಪರಕೀಯರ ಆಳ್ವಿಕೆ ಮತ್ತು ಅದನ್ನು ಹಿಂಬಾಲಿಸಿ ಬಂದ ಸುಲಿಗೆ, ಮತ್ತು ಯಂತ್ರದಾಸ್ಯದ ಪಾಶ್ಚಾತ್ಯರ ಬಂಡವಳಶಾಹಿ ಕೈಗಾರಿಕಾ ನಾಗರಿಕತೆ. ಎರಡರ ಮೇಲೂ ಅವರಿಗೆ ಅಸಮಾಧಾನ ಹುಟ್ಟಿತು. ಎಲ್ಲಿ ವಸ್ತು ನಿರ್ಮಾಣ, ಹಂಚಿಕೆ ಮತ್ತು ಉಪಯೋಗ ಇವು ತಮಗೆ ತಾವೆ ಹೊಂದಿಕೊಂಡು ಸ್ವಲ್ಪ ಹೆಚ್ಚುಕಡಮೆ ಸ್ವಯಂ ಪರಿಮಾಣ ಇವೆಯೋ ಎಲ್ಲಿ ಒಂದು ಬಗೆಯ ಸ್ವಯಮಧಿಕಾರ ಇದೆಯೋ ರಾಜಕೀಯ ಮತ್ತು ಆರ್ಥಿಕ ಅಧಿಕಾರ ಇಂದಿನಂತೆ ಕೇಂದ್ರೀಕೃತವಾಗಿರದೆ ಎಲ್ಲರಲ್ಲು ಹರಡಿರುತ್ತದೆಯೋ, ಎಲ್ಲಿ ಬಡವರಿಗೂ ಮತ್ತು ಶ್ರೀಮಂತ ರಿಗೂ ಅಂತರ ಬಹಳ ಕಡಮೆ ಇರುತ್ತದೆಯೋ, ಎಲ್ಲಿ ದೊಡ್ಡ ದೊಡ್ಡ ನಗರಗಳ ದುಷ್ಪರಿಣಾಮ ಗಳಿರುವುದಿಲ್ಲವೊ, ಎಲ್ಲಿ ಜೀವನಾಧಾರವಾದ ಮಣ್ಣಿನ ಮಧ್ಯೆ ಬಾಳಿ, ವಿಶಾಲ ಮೈದಾನಗಳ ಶುಭ್ರಗಾಳಿ ಯಲ್ಲಿ ಉಸಿರಾಡಬಹುದೊ ಅಂತಹ ಪ್ರಾಚೀನ ವೈಭವಯುಕ್ತ ಗ್ರಾಮ ಜೀವನವನ್ನು ಪುನರುಜ್ಜೀವನ ಗೊಳಿಸಬೇಕೆಂದು ಇಚ್ಛಿಸಿದರು.

ಜೀವನೋದ್ದೇಶ ದೃಷ್ಟಿಯಲ್ಲಿ ಗಾಂಧಿಜಿಗೂ ಇತರರಿಗೂ ಈ ಮೂಲ ವ್ಯತ್ಯಾಸವಿದ್ದಕಾರಣ ಅವರ ಎಲ್ಲ ಕಾರ್ಯಕ್ರಮದಲ್ಲೂ ಈ ವ್ಯತ್ಯಾಸದ ಬಣ್ಣ ಕಾಣುತ್ತಲಿತ್ತು. ಅವರ ಭಾಷೆ ಸ್ಪಷ್ಟ ಮತ್ತು ಶಕ್ತಿ ಪೂರ್ಣ. ಅದರ ಪ್ರೇರಣೆ ಎಲ್ಲ ಇಡೀ ಪ್ರಪಂಚದ, ಮುಖ್ಯವಾಗಿ, ಭಾರತದ ಯುಗಾಂತರಗಳ ಧರ್ಮ ಮತ್ತು ನೀತಿ ಯಿಂದ. ನೀತಿಯ ನೆಲಗಟ್ಟು ಇರಲೇಬೇಕು. ಗುರಿ ಶ್ರೇಷ್ಠವೆಂದು ಸಾಧನೆಯ ಮಾರ್ಗ ಯೋಗ್ಯತೆ ಮರೆಯಲು ಸಾಧ್ಯವಿಲ್ಲ ; ಮರೆತರೆ ವ್ಯಕ್ತಿಜನಾಂಗಗಳೆರಡರ ನಾಶವೂ ಖಂಡಿತ.

ಗಾಂಧಿಜಿ ಸ್ವಯಂ ಕಲ್ಪಿತ ಕಲ್ಪನಾ ಪ್ರಪಂಚದಲ್ಲಿ ಜೀವನದಿಂದ ಮತ್ತು ಜೀವನದ ಸಮಸ್ಯೆಗಳಿಂದ ದೂರವಿರುವ ಕನಸುಗಾರರಲ್ಲ. ಕಾಸಿಗೆ ಕಾಸು ಲೆಕ್ಕ ಹಾಕುವ ಕಿಲುಬು ಕೋಮಟಿಗಳತೌರುಮನೆಯಾದ ಗುಜರಾತದಿಂದ ಬಂದವರು. ಭಾರತದ ಹಳ್ಳಿಗಳ ಜ್ಞಾನ, ಮತ್ತು ಅಲ್ಲಿನ ಜೀವನದ ರೀತಿ ಅವರಿಗೆ ತಿಳಿದಂತೆ ಬೇರೆ ಯಾರಿಗೂ ತಿಳಿದಿರಲಿಲ್ಲ. ತಮ್ಮ ವೈಯಕ್ತಿಕ ಅನುಭವದಿಂದ ರಾಟೆ ಮತ್ತು ಗ್ರಾಮ ಕೈಗಾರಿಕೆಯ ಕಾರ್ಯಕ್ರಮವನ್ನು ಯೋಜಿಸಿದರು. ಅಸಂಖ್ಯಾತ ನಿರುದ್ಯೋಗಿಗಳಿಗೆ ಮತ್ತು ಅತಿ ಉದ್ಯೋಗಿಗಳಿಗೆ ತ್ವರಿತ ಸಹಾಯಮಾಡಬೇಕಾದರೆ, ಭಾರತಾದ್ಯಂತ ಹರಡಿ ಜನ ಜೀವನವನ್ನೇ ನಿಶ್ಚೇತನಗೊಳಿಸುತ್ತಿರುವ ಪೀಡೆ ತೊಲಗಬೇಕಾದರೆ, ಎಷ್ಟೇ ಅಲ್ಪವಾಗಲಿ ಸಾಮೂಹಿಕವಾಗಿ ಗ್ರಾಮಸ್ಥನ ಜೀವನಮಟ್ಟ ಏರಬೇಕಾದರೆ, ಅನಾಥರಂತೆ ಇತರರ ಭಿಕ್ಷೆಗಾಗಿ ನಿಸ್ಸಹಾಯಕತೆಯಿಂದ ಕಾಯುವುದುತಪ್ಪಿ ಆತ್ಮಾವಲಂಬಿಗಳಾಗಬೇಕಾದರೆ, ಹೆಚ್ಚು ಬಂಡವಾಳವಿಲ್ಲದೆ ಇವೆಲ್ಲವನ್ನೂ ಸಾಧಿಸಬೇಕಾದರೆ, ಬೇರೆ ಯಾವ ಉಪಾಯವೂ ಇರಲಿಲ್ಲ. ಪರದಾಸ್ಯ ಮತ್ತು ಅದರ ಸುಲಿಗೆಯಿಂದಾಗುವ ಅನರ್ಥಗಳು, ದೊಡ್ಡ ದೊಡ್ಡ ಸುಧಾರಣಾ ಯೋಜನೆಗಳನ್ನು ಆರಂಭಿಸಿ ಮುಂದುವರಿಸಲು ಸ್ವಾತಂತ್ರ್ಯದ ಅಭಾವ, ಈ ಕೊರತೆಗಳಲ್ಲದೆ ಭಾರತದ ಇನ್ನೊಂದು ದೊಡ್ಡಕೊರತೆ ಎಂದರೆ ಬಂಡವಾಳದ ಅಭಾವ, ಅಸಂಖ್ಯಾತ ನಿರುದ್ಯೋಗಿಗಳ ಪ್ರಶ್ನೆ. ಯಾವ ಉಪಯೋಗವೂ ಇಲ್ಲದೆ ವೃಥಾಪ್ರಯವಾಗುತ್ತಿರುವ ಈ ಜನಬಲವನ್ನು ಉಪಯೋಗಮಾಡಿಕೊಳ್ಳುವುದು ಹೇಗೆ? ದೊಡ್ಡ ಯಂತ್ರ ಸಾವಿರ ಅಥವ ಹತ್ತು ಸಾವಿರ ಜನರ ಕೆಲಸ ಮಾಡಬಹುದು. ಆದರೆ ಆ ಸಾವಿರ ಅಥವ ಹತ್ತು ಸಾವಿರ ಜನ ಕೈಕಟ್ಟಿಕೊಂಡು ಕುಳಿತರೆ ಆ ಯಂತ್ರದ ಉಪಯೋಗ ಸಮಾಜಕ್ಕೆ ಲಾಭದಾಯಕವಲ್ಲ. ಸಾಮಾಜಿಕ ಪರಿಸ್ಥಿತಿಯೇ ಬದಲಾಯಿಸಿದಾಗ ಉಪಯುಕ್ತವಾದೀತೆಂಬ ದೂರದೃಷ್ಟಿಯಿಂದ ಲಾಭವಾದರೂ ಆಗಬಹುದು. ದೊಡ್ಡ ಕೈಗಾರಿಕೆಗಳೇ ದೇಶದಲ್ಲಿ ಇಲ್ಲದಿರುವಾಗ ಹೋಲಿಕೆಯಿಂದ ಯಾವ ಪ್ರಯೋಜನವೂ ಇಲ್ಲ. ವ್ಯಕ್ತಿ ಮತ್ತು ರಾಷ್ಟ್ರ ಎರಡರ ದೃಷ್ಟಿಯಿಂದ ಇರುವ ಜನಶಕ್ತಿಯನ್ನು ವಸ್ತು ನಿರ್ಮಾಣಕ್ಕೆ ಉಪಯೋಗಿಸಿಕೊಳ್ಳುವುದು ಒಟ್ಟಿನಲ್ಲಿ ಲಾಭದಾಯಕ. ಆದರೆ ಯಂತ್ರೋಪಕರಣದ ಉಪಯೋಗವಲ್ಲ. ನಿರುದ್ಯೋಗಿಗಳನ್ನು ಹೆಚ್ಚಿಸುವ ಬದಲು, ಹೆಚ್ಚು ನಿರುದ್ಯೋಗಿಗಳಿಗೆ ಕೆಲಸ ಒದಗಿಸುವುದಾದರೆ ದೊಡ್ಡಪ್ರಮಾಣದ ಯಂತ್ರಗಳ ಉಪಯೋಗಕ್ಕೂ ಗಾಂಧಿ ತತ್ವಕ್ಕೂ ಯಾವ ಘರ್ಷಣೆಯೂ ಇಲ್ಲ.

ಇಂಡಿಯಾ ದೇಶವನ್ನು ಕೈಗಾರಿಕಾ ಪ್ರಗತಿಯಲ್ಲಿ ಮುಂದುವರಿದ ಪಾಶ್ಚಿಮಾತ್ಯದ ಸಣ್ಣ ದೇಶಗಳೊಂದಿಗೆ ಆಗಲಿ ಅಥವ ಬಹಳ ಕಡಮೆ ಜನಸಂಖ್ಯೆ ಇರುವ ವಿಶಾಲ ರಾಷ್ಟ್ರಗಳಾದ ಸಂಯುಕ್ತ ಸಂಸ್ಥಾನಗಳು ಅಥವ ಸೋವಿಯಟ್ ರಷ್ಯ ಇವುಗಳೊಂದಿಗೆ ಆಗಲಿ ಹೋಲಿಸುವುದು ಸರಿಯಲ್ಲ. ಪಶ್ಚಿಮ ಯೂರೋಪಿನಲ್ಲಿ ಕಳೆದ ಒಂದು ಶತಮಾನದಿಂದ ಕೈಗಾರಿಕಾ ಪ್ರಗತಿ ಮುಂದುವರಿದಿದೆ; ಜನತೆಯು ಕ್ರಮೇಣ ಅದಕ್ಕೆ ಹೊಂದಿಕೊಂಡಿದೆ. ಜನಸಂಖ್ಯೆ ಬೇಗ ಬೆಳೆದಿದೆ; ಅನಂತರ ಸ್ತಿಮಿತಕ್ಕೆ ಬಂದು ಈಗ ಕಡಮೆಯಾಗುತ್ತಿದೆ. ಸಂಯುಕ್ತ ಸಂಸ್ಥಾನಗಳು ಮತ್ತು ಸೋವಿಯಟ್ ರಷ್ಯದಲ್ಲಿ ವಿಶಾಲ ಪ್ರದೇಶಗಳಲ್ಲಿ ಜನಸಂಖ್ಯೆಯೇ ತೀರ ಕಡಮೆ. ವ್ಯವಸಾಯದ ಭೂಮಿಯ ಉಳುಮೆಗೆ ಟ್ರಾಕ್ಟರ್ ಅವಶ್ಯಕ. ಎಲ್ಲಿಯವರೆಗೆ ಅಸಂಖ್ಯಾತ ಜನರ ಜೀವನಕ್ಕೆ ವ್ಯವಸಾಯವೇ ಆಧಾರವಾಗಿರುತ್ತದೆಯೋ ಅಲ್ಲಿಯವರೆಗೆ ವಿಶೇಷ ದಟ್ಟ ಜನಸಂಖ್ಯೆಯ ಗಂಗಾನದಿ ಕಣಿವೆಯ ಜನರಿಗೆ ಟ್ರಾಕ್ಟರ್‌ನ ಅವಶ್ಯಕತೆ ಇಲ್ಲ. ಅಮೆರಿಕಾದಲ್ಲಿ ಎದ್ದಂತೆ ಇತರ ಪ್ರಶ್ನೆಗಳು ಇಲ್ಲಿಯೂ ಏಳುತ್ತವೆ. ಇಂಡಿಯಾದೇಶದಲ್ಲಿ ಸಾವಿರಾರು ವರ್ಷಗಳ ವ್ಯವಸಾಯದಿಂದ ಭೂಮಿಯ ಸಾರ ಕಡಮೆಯಾಗಿದೆ. ಟ್ರಾಕ್ಟರುಗಳಿಂದ ಈ ಭೂಮಿಯನ್ನು ಆಳವಾಗಿ ಉತ್ತು ಕೆಳಗು ಮೇಲುಮಾಡಿದರೆ ಭೂಮಿಯ ಸಾರ ಇನ್ನೂ ಕಡಮೆಯಾಗುವುದಲ್ಲದೆ ಭೂಮಿ ಕೊರಕಲುಬೀಳಲು ಸಹಾಯವಾಗುತ್ತದೆಯೆ? ಇಂಡಿಯಾದೇಶದಲ್ಲಿ ರೈಲುದಾರಿಗಳಿಗೆಂದು ದೊಡ್ಡದೊಡ್ಡ ಏರಿಗಳನ್ನು ಹಾಕಿದಾಗ ಭೂಮಿಯ ನೀರುದಾರಿಗೆ ಯಾವ ಗಮನವನ್ನೂ ಕೊಡಲಿಲ್ಲ. ಈ ಏರಿಗಳು ನೀರುದಾರಿಗಳಿಗೆ ಅಡ್ಡಬಂದ ಪರಿಣಾಮವಾಗಿ ಮೇಲಿಂದಮೇಲೆ ಪ್ರವಾಹದ ಅನಾಹುತಗಳೂ, ಭೂಮಿ ಕೊರಕಲು ಬೀಳುವುದೂ, ಮಲೇರಿಯಾ ರೋಗವೂ ಹೆಚ್ಚಿದವು.

ಭೂಮಿಯಮೇಲಿನ ಒತ್ತಡ ಕಡಮೆ ಮಾಡುವುದಕ್ಕೆ ಬಡತನ ನಿವಾರಿಸಿ ಜನತೆಯ ಜೀವನಮಟ್ಟ ಹೆಚ್ಚಿಸುವುದಕ್ಕೆ, ದೇಶದ ರಕ್ಷಣೆಯ ಭದ್ರತೆ ಮತ್ತು ಇನ್ನೂ ಅನೇಕ ಕಾರಣಗಳಿಂದ ಟ್ರಾಕ್ಟರುಗಳೂ ಯಂತ್ರಗಳೂ ಬೇಕೆನ್ನುವವನು ನಾನು; ಭಾರತವನ್ನು ಆದಷ್ಟು ಬೇಗ ಯಂತ್ರೀಕರಣಮಾಡಬೇಕೆನ್ನುವವನು; ಆದರೆ ಯಂತ್ರೀಕರಣದ ಪೂರ್ಣ ಉಪಯೋಗಪಡೆಯಲು ಮತ್ತು ಅದರಿಂದ ಒದಗುವ ಅನರ್ಥ ತಪ್ಪಿಸಿಕೊಳ್ಳಲು ಬಹಳ ಎಚ್ಚರಗಿಂದ ತಯಾರಿಸಿದ ಯೋಜನೆಯೂ, ಸಮಜೋಡಣೆಯೂ ಅತ್ಯವಶ್ಯಕ. ತಮ್ಮದೇ ಆದ ಪ್ರಾಚೀನ ಸಂಪ್ರದಾಯ ವೈಶಿಷ್ಟ್ಯಉಳ್ಳ ಭಾರತ, ಚೀನ ಮುಂತಾದ ಎಲ್ಲ ಹಿಂದೆಬಿದ್ದ ರಾಷ್ಟ್ರಗಳಿಗೆ ಈ ಯೋಜನೆ ಇಂದು ಅತ್ಯವಶ್ಯಕ.

ಚೀನರ ಕೈಗಾರಿಕಾ ಸಹಕಾರ ಸಂಘಗಳ ಇಂಡಸ್ಕೊ ಚಳವಳಿ ಕಂಡು ನಾನು ಮುಗ್ಧನಾದೆ. ಅಂತಹ ಒಂದು ಕಾರ್ಯಕ್ರಮ ಇಲ್ಲಿಯೂ ಅತ್ಯವಶ್ಯಕ. ಭಾರತೀಯ ಹಿನ್ನೆಲೆಗೆ ಅದು ಹೊಂದಿಕೊಳ್ಳುತ್ತದೆ, ಸಣ್ಣ ಕೈಗಾರಿಕೆಗಳಿಗೆ ಪ್ರಜಾಸತ್ತಾತ್ಮಕರೂಪ ಕೊಡುತ್ತದೆ; ಮುತ್ತು ಸಹಕಾರ ಮನೋಭಾವ ಬೆಳೆಸುತ್ತದೆ. ದೊಡ್ಡ ಕೈಗಾರಿಕೆಗಳಿಗೆ ಪರಿಪೋಷಕವಾಗಬಹುದು. ಭಾರತದಲ್ಲಿ ದೊಡ್ಡ ಕೈಕಾರಿಕೆಗಳನ್ನು ನಾವು ಎಷ್ಟೇ ಬೆಳೆಸಿದರೂ ಸಣ್ಣ ಮತ್ತು ಗೃಹಕೈಗಾರಿಕೆಗಳಿಗೆ ಬೇಕಾದಷ್ಟು ಅವಕಾಶವಿದೆ. ಸೋವಿಯಟ್ ರಷ್ಯದಲ್ಲಿ ಸಹ ಸ್ವಂತ ಕೆಲಸಗಾರರ ಸಹಕಾರ ಸಂಸ್ಥೆಗಳು ದೇಶದ ಕೈಗಾರಿಕಾ ಪ್ರಗತಿಯಲ್ಲಿ ಬಹಳ ಪ್ರಮುಖ ಪಾತ್ರ ವಹಿಸಿದೆ.

ವಿದ್ಯುಚ್ಛಕ್ತಿಯ ಹೆಚ್ಚು ಬಳಕೆಯಿಂದ ಸಣ್ಣ ಕೈಗಾರಿಕೆ ಬೆಳಸಿದರೆ ಅವು ದೊಡ್ಡ ಕೈಗಾರಿಕೆಗಳೊಂದಿಗೆ ಯಶಸ್ವಿಯಾಗಿ ಪೈಪೋಟಿ ಸಹ ನಡೆಸಬಹುದು. ಕೈಗಾರಿಕೆ ವಿಕೇಂದ್ರೀಕರಣ ಆಗಬೇಕೆಂಬ ವಾದ ಸಹ ಇದೆ. ಹೆನ್ರಿಫೋರ್ಡ್ ಇದನ್ನು ಸಮರ್ಥಿಸಿದ್ದಾನೆ. ದೊಡ್ಡ ದೊಡ್ಡ ಕೈಗಾರಿಕಾ ನಗರಗಳಲ್ಲಿ ಜೀವಿಸುವುದರಿಂದ ಭೂಮಿಯ ಸಂಪರ್ಕ ತಪ್ಪಿ ಅನೇಕ ಮಾನಸಿಕ ಮತ್ತು ದೈಹಿಕ ದುಷ್ಪರಿಣಾಮುಗಳಾಗುತ್ತವೆ ಎಂದು ವಿಜ್ಞಾನಿಗಳ ಮತ. ಇನ್ನು ಕೆಲವರು ಮಾನವಕುಲ ಉಳಿಯಬೇಕಾದರೆ ಮಣ್ಣಿಗೆ ಮರಳಬೇಕು, ಹಳ್ಳಿಗಳಿಗೆ ಹಿಂದಿರುಗಬೇಕು ಎಂದು ವಾದಿಸಿದ್ದಾರೆ. ಅದೃಷ್ಟವಶಾತ್ ವಿಜ್ಞಾನದ ಸಹಾಯದಿಂದ ಜನರು ಭೂಮಿಯ ಸಮಿಾಪವೇ ಇದ್ದು ಆಧುನಿಕ ನಾಗರಿಕ ಜೀವನ ಮತ್ತು ಸಂಸ್ಕೃತಿಯ ಎಲ್ಲ ಸೌಲಭ್ಯಗಳನ್ನೂ ಅನುಭವಿಸಲು ಸಾಧ್ಯವಿದೆ.

ಅದು ಏನೆ ಇರಲಿ ಭಾರತದಲ್ಲಿ ನಮ್ಮ ಎದುರಿನ ಮುಖ್ಯ ಪ್ರಶ್ನೆ ಎಂದರೆ ಪರದಾಸ್ಯ ಮತ್ತು ಬ್ರಿಟಿಷ್ ಬಂಡವಾಲಗಾರರ ಆರ್ಥಿಕ ಬಿಗಿತದ ಮಧ್ಯೆ ಜನಸಾಮಾನ್ಯದ ಬಡತನ ನಿವಾರಿಸಿ ಸ್ವಾವಲಂಬನ ಭಾವನೆಯನ್ನು ಹೇಗೆ ಹುಟ್ಟಿಸಬೇಕೆಂದು ಗ್ರಾಮ ಕೈಗಾರಿಕೆಗಳನ್ನು ಯಾವಾಗ ಬೇಕಾದರೂ ಅಭಿವೃದ್ಧಿಪಡಿಸಬಹುದೆಂದು ವಾದಿಸುವವರೂ ಅನೇಕರಿದ್ದಾರೆ. ಆದರೆ ನಮ್ಮ ಇಂದಿನ ಪರಿಸ್ಥಿತಿಯಲ್ಲಿ ನಮಗೆ ಇರುವುದು ಅದು ಒಂದೇ ಮಾರ್ಗ. ನಾವು ಅನುಸರಿಸಿದ ಮಾರ್ಗ ಅತ್ಯುತ್ತಮವಿಲ್ಲದಿರಬಹುದು. ಸಮಸ್ಯೆಯಂತೂ ಅತಿ ವಿಶಾಲವೂ, ಜಟಿಲವೂ ಕಷ್ಟತಮವೂ ಆದುದು; ಸದಾ ಸರಕಾರದ ಮುಟ್ಟುಗೋಲಿನ ಭಯ ಇದ್ದೇ ಇತ್ತು. ತಪ್ಪುಮಾಡಿ ತಿದ್ದಿಕೊಂಡು ಕ್ರಮೇಣ ಮುಂದುವರಿಯಬೇಕಾಗಿತ್ತು. ಮೊದಲಿನಿಂದಲೂ ಕೈಗಾರಿಕಾ ಸಹಕಾರಸಂಘ ಏರ್ಪಡಿಸಿ ಗ್ರಾಮಗಳಲ್ಲಿ ಮತ್ತು ಉದ್ಯೋಗ ನಿಪುಣರ ಮತ್ತು ವಿಜ್ಞಾನಿಗಳ ಸಲಹೆಯಿಂದ ಮನೆಗಳಲ್ಲಿ ಸಣ್ಣ ಯಂತ್ರೋಪಕರಣಗಳನ್ನು ಉಪಯೋಗಿಸಿ ಮುಂದುವರಿದಿದ್ದರೆ ಒಳ್ಳೆತಾಗುತ್ತೆಂದು ನನ್ನ ಭಾವನೆ. ಈ ಸಂಸ್ಥೆಗಳಲ್ಲಿ ಈಗ ಸಹಕಾರ ತತ್ವ ಆಚರಣೆಯಲ್ಲಿದೆ.

"ಕೈನೂಲಿನ ಕೈಮಗ್ಗದ ಬಟ್ಟೆ ತಯಾರಿಕೆಯ ಪ್ರೋತ್ಸಾಹಕ್ಕಾಗಿ ಗಾಂಧಿಜಿ ನಡೆಸುತ್ತಿರುವ ಪ್ರಚಂಡ ಚಳವಳಿಯು ಹಿಂದಿನ ಅನಾಗರಿಕ ಜೀವನವನ್ನು ಪುನರುತ್ಥಾನಗೊಳಿಸಬೇಕೆಂಬ ಹುಚ್ಚು ಭಾವೋದ್ರೇಕವಲ್ಲ, ಗ್ರಾಮ ಜೀವನದ ಬಡತನ ನಿವಾರಿಸಿ ಆರ್ಥಿಕಮಟ್ಟ ಉನ್ನತಿಗೇರಿಸಲು ಕೈಗೊಂಡ ಸಾಧ್ಯತಮ ಪ್ರಯತ್ನ" ಎಂದು ಅರ್ಥಶಾಸ್ತ್ರಜ್ಞ ಜಿ.ಡಿ.ಎಚ್. ಕೋಲ್ ಹೇಳುತ್ತಾನೆ. ಆ ಪ್ರಯತ್ನವೇ

ನಿಜವಾದರೂ ಅದರ ಹಿಂದೆ ಇನ್ನೂ ದೊಡ್ಡ ಉದ್ದೇಶವಿತ್ತು. ಬಡರೈತನೂ ಒಬ್ಬ ಮನುಷ್ಯ ಎಂದು ಭಾರತವು ಯೋಚಿಸುವುದಕ್ಕೂ ಕೆಲವು ನಗರಗಳ ಶೃಂಗಾರದ ಬೆಡಗುಬಿಟ್ಟರೆ ಉಳಿದುದೆಲ್ಲ ಸಂಕಟ ಮತ್ತು ಬಡತನದ ಬಾಳು ಎಂದು ಅರಿಯುವುದಕ್ಕೂ ಭಾರತದ ಸ್ವಾತಂತ್ರ್ಯದ ಮತ್ತು ಪ್ರಗತಿಯ ನಿಜವಾದ ಒರೆಗಲ್ಲು ಇನ್ನಿಷ್ಟು ಜನರು ಕೋಟ್ಯಾಧೀಶ್ವರರನ್ನೂ, ಪ್ರಸಿದ್ಧ ನ್ಯಾಯವಾದಿಗಳನ್ನೂ ಹೆಚ್ಚಿಸುವುದರಲ್ಲಿ ಅಲ್ಲ; ಶಾಸನ ಸಭೆಗಳನ್ನು ನಿರ್ಮಿಸುವುದರಲ್ಲಿ ಅಲ್ಲ; ಆದರೆ ರೈತನ ಜೀವನಮಟ್ಟ ಹೆಚ್ಚಿಸಿ ಅವನ ಪರಿಸ್ಥಿತಿ ಉತ್ತಮಗೊಳಿಸವುದರಲ್ಲಿ ಎಂಬ ಮೂಲ ಉದ್ದೇಶ ತಿಳಿದುಕೊಳ್ಳುವುದಕ್ಕೂ ಸಹಾಯವಾಯಿತು. ಬ್ರಿಟಿಷರು ಭಾರತದಲ್ಲಿ ಒಂದು ಹೊಸ ಜಾತಿಯನ್ನು ಸೃಷ್ಟಿಸಿದರು. ಜನತೆಯಿಂದ ದೂರವಾಗಿ ತನ್ನದೇ ಒಂದು ಪ್ರಪಂಚದಲ್ಲಿ ವಾಸಮಾಡುತ್ತಿದ್ದ ಇಂಗ್ಲಿಷ್ ಕಲಿತವರ ಜಾತಿ. ತನ್ನ ಅಸಮ್ಮತಿ ಸೂಚಿಸುವಾಗ ಸಹ ಬ್ರಿಟಿಷ್ ಅಧಿಕಾರಿಗಳ ಕಡೆಗೇ ನೋಡುತ್ತಿದ್ದರು. ಗಾಂಧೀಜಿ ಈ ಅಂತರವನ್ನು ಕಡಮೆಮಾಡಿ ಅವರ ದೃಷ್ಟಿಯನ್ನೂ ಅವರ ಜನತೆಯ ಕಡೆಗೆ ತಿರುಗಿಸಿದನು.

ಯಂತ್ರೋಪಕರಣಗಳ ಉಪಯೋಗದ ವಿಷಯದಲ್ಲಿ ಗಾಂಧಿಜಿಯ ಅಭಿಪ್ರಾಯವು ಕ್ರಮೇಣ ವ್ಯತ್ಯಾಸಗೊಳ್ಳುತ್ತಲಿತ್ತು. "ನಾನು ವಿರೋಧಿಸುವುದು ಯಂತ್ರದ ಮೋಹವನ್ನು, ಯಂತ್ರವನ್ನಲ್ಲ" ಎಂದರು. "ಪ್ರತಿಯೊಂದು ಹಳ್ಳಿಮನೆಗೂ ವಿದ್ಯುಚ್ಛಕ್ತಿ ಒದಗಿಸುವುದಾದರೆ ಗ್ರಾಮಸ್ಥರು ತಮ್ಮ ಮುಟ್ಟು ಮತ್ತು ಕೈಕೆಲಸದ ಸಾಮಾನುಗಳನ್ನು ವಿದ್ಯುಚ್ಛಕ್ತಿಯ ಸಹಾಯದಿಂದ ನಡೆಸಲು ನನ್ನ ಅಡ್ಡಿ ಇಲ್ಲ, ಎಂದರು. ಇಂದು ನಾವು ಕಾಣುತ್ತಿರುವಂತೆ ದೊಡ್ಡ ದೊಡ್ಡ ಕಾರ್ಖಾನೆಗಳು ಐಶ್ವರ್ಯ ಮತ್ತು ಅಧಿಕಾರದ ಕೇಂದ್ರೀಕರಣಕ್ಕೆ ಸಹಾಯವಾಗುತ್ತವೆ. "ಕೆಲವರ ಕೈಯಲ್ಲಿ ಮಾತ್ರ ಅಧಿಕಾರ ಮತ್ತು ಐಶ್ವರ್ಯ ಕೇಂದ್ರೀಕೃತಮಾಡುವುದು ಮಹಾ ಅನ್ಯಾಯ ಮತ್ತು ಪಾಪ. ಈಗ ಯಂತ್ರಗಳ ಉಪಯೋಗವೆಲ್ಲ ಅದಕ್ಕಾಗಿ" ಎಂದರು. ರಾಷ್ಟ್ರದ ಸ್ವತ್ತಾಗಿ ನಡೆಸುವುದಾದರೆ, ಮತ್ತು ಮುಖ್ಯ ಗ್ರಾಮಕೈಗಾರಿಕೆಗಳ ಬೆಳವಣಿಗೆಗೆ ಅಡ್ಡಬಾರದಿದ್ದರೆ, ಅನೇಕ ದೊಡ್ಡ ಕೈಗಾರಿಕೆಗಳ ಮುಖ್ಯ ಸಣ್ಣ ಕೈಗಾರಿಕೆಗಳ ಮತ್ತು ಸಾರ್ವಜನಿಕೋಪಯುಕ್ತ ಕಾರ್ಯಗಳ ಅವಶ್ಯಕತೆಯನ್ನು ಒಪ್ಪಿಕೊಂಡರು. ಆರ್ಥಿಕ ಸಮಾನತೆಯ ಭದ್ರವಾದ ತಳಹದಿಯಮೇಲೆ ತಮ್ಮ ಪೂರ್ಣ ಕಾರ್ಯಕ್ರಮ ನಿರೂಪಿಸದಿದ್ದರೆ ಮರಳಿನಲ್ಲಿ ಮನೆಕಟ್ಟಿದಂತೆ ಎಂದು ತಮ್ಮ ಯೋಜನೆಯ ವಿಷಯ ನುಡಿದರು.

ಈ ರೀತಿ ಗ್ರಾಮೋದ್ಯೋಗಗಳ ಮತ್ತು ಸಣ್ಣ ಕೈಗಾರಿಕೆಗಳ ಉತ್ಸಾಹಗಳು ಮತ್ತು ಪ್ರೋತ್ಸಾಹಕರು ಸಹ ಕೆಲವು ದೊಡ್ಡ ಕೈಗಾರಿಕೆಗಳು ಅವಶ್ಯ ಮತ್ತು ಅನಿವಾರ್ಯ ಎಂದು ಒಪ್ಪಿಕೊಳ್ಳುತ್ತಾರೆ; ಆದರೆ ಆದಷ್ಟು ಕಡಮೆಮಾಡಬೇಕೆನ್ನುತ್ತಾರೆ. ಅಂದರೆ ಎರಡು ಬಗೆಯ ವಸ್ತು ನಿರ್ಮಾಣ ಮತ್ತು ಆರ್ಥಿಕ ನೀತಿಯಲ್ಲಿ ಯಾವುದಕ್ಕೆ ಎಷ್ಟು ಪ್ರಾಮುಖ್ಯತೆ ಕೊಡಬೇಕು. ಮತ್ತು ಎಷ್ಟರಮಟ್ಟಿಗೆ ಒಂದನ್ನೊಂದು ಅವಲಂಬಿಸಿ ಇರಬೇಕು, ಎಂಬುದೇ ಮುಖ್ಯಪ್ರಶ್ನೆ. ಇಂದಿನ ಪ್ರಪಂಚದ ಪರಿಸ್ಥಿತಿಯಲ್ಲಿ, ಯಾವ ದೇಶವೇ ಆಗಲಿ ಕೈಗಾರಿಕೋದ್ಯಮದಲ್ಲಿ ಪೂರ್ಣಪ್ರಗತಿ ಹೊಂದಿ ಮತ್ತು ತನ್ನ ಪ್ರಕೃತಿದತ್ತ ಶಕ್ತಿಸಾಧನ ಸಂಪತ್ತನ್ನು ವಿಶೇಷ ಅಭಿವೃದ್ಧಿಪಡಿಸಿಕೊಳ್ಳದೆ ಇಂದಿನ ಅಂತರ ರಾಷ್ಟ್ರೀಯ ಪರಸ್ಪರಾವಲಂಬನೆಯಸಣ್ಣ ಚೌಕಟ್ಟಿನಲ್ಲಿ ರಾಜಕೀಯ ಮತ್ತು ಆರ್ಥಿಕ ಸ್ವಾತಂತ್ರ್ಯ ಅನುಭವಿಸಲು ಅಸಾಧ್ಯವೆಂಬುದು ಸ್ಪಷ್ಟವಿದೆ. ಅಲ್ಲದೆ ಜೀವನದ ಪ್ರತಿಯೊಂದು ಅಂಗದಲ್ಲೂ ಜೀವನ ಮಟ್ಟದ ಉನ್ನತಿ ಅಥವ ಬಡತನದ ನಿವಾರಣೆ ಆಗಬೇಕೆಂದರೆ ಆಧುನಿಕ ಸಲಕರಣೆಗಳ ಸಹಾಯವಿಲ್ಲದೆ ಸಾಧ್ಯವಿಲ್ಲ. ಕೈಗಾರಿಕಾ ಪ್ರಗತಿ ಇಲ್ಲದ ದೇಶದಿಂದ ಪ್ರಪಂಚದ ಸಮತೋಲನ ಪದೇ ಪದೇ ಕೆಡುವುದಲ್ಲದೆ ಮುಂದುವರಿದ ಇತರ ರಾಷ್ಟ್ರಗಳ ದುರಾಶೆಯಿಂದ ಸುಲಿಗೆಯ ಮನೋಭಾವ ಹೆಚ್ಚುತ್ತದೆ. ರಾಜಕೀಯ ಸ್ವಾತಂತ್ರ್ಯವಿದ್ದರೂ ಅದು ನೆಪಮಾತ್ರವಿದ್ದು ಇತರ ರಾಷ್ಟ್ರಗಳ ಆರ್ಥಿಕ ದಾಸ್ಯದಲ್ಲಿ ನರಳಬೇಕಾಗುತ್ತದೆ. ರಾಷ್ಟ್ರ ಜೀವನದ ವ್ಯಕ್ತಿತ್ವ ರಕ್ಷಣೆಗೆಂದು ಆರಂಭಿಸಿದ ಗ್ರಾಮ ಕೈಗಾರಿಕೆಗಳು ಸಹ ಈ ಆರ್ಥಿಕ ದಾಸ್ಯಕ್ಕೆ ಬಲಿಯಾಗುತ್ತವೆ. ಆದ್ದರಿಂದ ಕೇವಲ ಗ್ರಾಮ ಕೈಗಾರಿಕೆ ಮತ್ತು ಗೃಹಕೈಗಾರಿಕೆಗಳನ್ನೇ ನಂಬಿ ದೇಶದ ಆರ್ಥಿಕ ನೀತಿ ರೂಪಿಸುತ್ತೇ

ನೆಂದು ಹೊರಟ ಪ್ರಯತ್ನವೆಲ್ಲ ವ್ಯರ್ಥ. ಯಾವುದೋ ಬೇರೊಂದು ಬಲಿಷ್ಠ ರಾಜ್ಯದ ಆರ್ಥಿಕ ಅಧೀನವಾಗುವುದರ ಹೊರತು ದೇಶದ ಮೂಲ ಸಮಸ್ಯೆಯ ಪರಿಹಾರಕ್ಕೆ ಆಗಲಿ, ಸ್ವಾತಂತ್ರ್ಯ ಉಳಿಸಿಕೊಳ್ಳುವುದಕ್ಕೆ ಆಗಲಿ ಅಥವ ಪ್ರಪಂಚದ ಆರ್ಥಿಕ ಚೌಕಟ್ಟಿನ ಒಳಗೆ ಹೊಂದಿಕೊಳ್ಳುವುದಕ್ಕೆ ಆಗಲಿ ಸಾಧ್ಯವಾಗುವುದಿಲ್ಲ.

ಒಂದೇ ದೇಶದಲ್ಲಿ ಪೂರ್ಣ ಭಿನ್ನ ರೀತಿಯ ಎರಡು ಬಗೆಯ ಆರ್ಥಿಕ ನೀತಿಗಳಿಗೆ ಸ್ಥಾನವಿದೆಯೆ ?—ಒಂದು ದೊಡ್ಡ ಯಂತ್ರಗಳನ್ನು ಮತ್ತು ಕೈಗಾರಿಕೋದ್ಯಮಗಳನ್ನು ಅವಲಂಬಿಸಿದ್ದು, ಎರಡನೆಯದು ಗ್ರಾಮ ಕೈಗಾರಿಕೆಗಳನ್ನು ಅವಲಂಬಿಸಿದ್ದು. ಒಂದನ್ನು ಇನ್ನೊಂದು ಕವಳಿಸುವುದು ಅನಿವಾರ್ಯವಾದ್ದರಿಂದ ಅದೂ ಸಾಧ್ಯವಿಲ್ಲ. ಬಲವಾದ ತಡೆ ಇದ್ದರೆ ಹೊರತು ದೊಡ್ಡ ಯಂತ್ರೋಪಕರಣಗಳ ಗ್ರಾಮ ಕೈಗಾರಿಕೆಗಳು ಉಳಿಯಲು ಸಾಧ್ಯವಿಲ್ಲ. ಆದ್ದರಿಂದ ವಸ್ತುನಿರ್ಮಾಣ ರೀತಿಯಲ್ಲಿ, ಆರ್ಥಿಕ ನೀತಿಯಲ್ಲಿ ಎರಡರ ಸಮಜೋಡಣೆ ಪ್ರಶ್ನೆಯಲ್ಲದೆ, ಒಂದು ಪ್ರಮುಖವೂ ಪ್ರಬಲವೂ ಇರಬೇಕು; ಇನ್ನೊಂದು ಅದಕ್ಕೆ ಪೂರಕವಿದ್ದು ಎಲ್ಲಿ ಸಾಧ್ಯವೋ ಅಲ್ಲಿ ಹೊಂದಿಕೊಳ್ಳಬೇಕು. ಇಂದಿನ ಅತ್ಯಾಧುನಿಕ ಉದ್ಯೋಗ ಪ್ರಗತಿಯನ್ನವಲಂಬಿಸಿದ ಆರ್ಥಿಕ ನೀತಿಯೇ ಪ್ರಮುಖವಿರಬೇಕು. ಉದ್ಯೋಗ ಕೌಶಲ್ಯದ ದೃಷ್ಟಿಯಿಂದ, ಇಂದು ಬಹುಮಟ್ಟಿಗೆ ಅವಶ್ಯವಿರುವಂತೆ, ದೊಡ್ಡ ಯಂತ್ರೋಪಕರಣಗಳೇ ಅವಶ್ಯವಾದರೆ ಅದರ ಸಾಧ್ಯಾಸಾಧ್ಯತೆಯ ಕಷ್ಟ ಅಥವ ಪರಿಣಾಮ ಏನೇ ಇರಲಿ ಅದಕ್ಕೆ ಸಿದ್ಧರಿರಬೇಕು. ಆ ಉದ್ಯೋಗ ನೈಪುಣ್ಯದ ದೃಷ್ಟಿಯಿಂದ ವಸ್ತು ನಿರ್ಮಾಣಕಾರ್ಯದ ವಿಕೇಂದ್ರೀಕರಣ ಅವಶ್ಯವಾದರೆ ಸಾಧ್ಯವಾದ ಎಲ್ಲಕಡೆ ಆ ರೀತಿ ಮಾಡಬೇಕು. ಎಲ್ಲ ಸಂದರ್ಭಗಳಲ್ಲೂ ಆಧುನಿಕ ಪದ್ಧತಿಯನ್ನೇ ಅವಲಂಬಿಸಬೇಕು. ತಾತ್ಕಾಲಿಕ ವಿನಾ ಪುರಾತನ ಜೀರ್ಣಪದ್ಧತಿಗಳಿಂದ ವಸ್ತು ನಿರ್ಮಾಣಕಾರ್ಯ ಆರಂಭಿಸುವುದೆಂದರೆ ಬೆಳವಣಿಗೆ ಮತ್ತು ಪ್ರಗತಿಗೆ ಅಡ್ಡಗಟ್ಟಿದಂತೆ.

ಇಡೀ ಪ್ರಪಂಚವೂ ಮತ್ತು ಅದರ ಎದುರಿನ ಉತ್ಕಟಪರಿಸ್ಥಿತಿಯ ಜಟಿಲಸಮಸ್ಯೆಗಳೂ ದೊಡ್ಡ ಕೈಗಾರಿಕೋದ್ಯಮಗಳನ್ನೇ ಅವಲಂಬಿಸಿರುವಾಗ ದೊಡ್ಡ ಕೈಗಾರಿಕೆಗಳು ಉತ್ತಮವೋ ಸಣ್ಣ ಕೈಗಾರಿಕೆಗಳು ಉತ್ತಮವೋ ಎಂಬ ತಾತ್ವಿಕಚರ್ಚೆ ಅಪ್ರಕೃತ. ಈ ಸನ್ನಿವೇಶಗಳೇ ಭಾರತದ ನಿರ್ಧಾರವನ್ನೂ ಪೂರೈಸಿವೆ. ಸಧ್ಯದಲ್ಲೆ ಭಾರತದಲ್ಲಿ ಭಾರಿ ಕೈಗಾರಿಕೋದ್ಯಮವು ಮುಂದುವರಿಯುತ್ತೆಂಬುದರಲ್ಲಿ ಸಂದೇಹವೇ ಇಲ್ಲ. ಆ ದಾರಿಯಲ್ಲಿ ಆಗಲೇ ಭಾರತ ಮುನ್ನಡೆ ಇಟ್ಟಿದೆ. ನಿರಾತಂಕ ಯೋಜನಾರಹಿತ ಕೈಗಾರಿಕಾ ಪ್ರಗತಿ ತುಂಬ ಹಾನಿಕರ. ಈ ದೊಡ್ಡ ಕೈಗಾರಿಕೋದ್ಯಮದ ಅನಿವಾರ್ಯ ಪರಿಣಾಮವೋ ಅಥವ ಅದರ ಹಿಂದಿನ ಆರ್ಥಿಕ ಮತ್ತು ಸಾಮಾಜಿಕ ರಚನೆಯ ಫಲವೋ ಅದು ಬೇರೆ ವಿಷಯ. ಆರ್ಥಿಕ ರಚನೆಯೇ ಅದಕ್ಕೆ ಮುಖ್ಯ ಕಾರಣವಾದರೆ ಅನಿವಾರ್ಯವೂ, ಅತ್ಯವಶ್ಯವೂ ಆದ ಕೈಗಾರಿಕೋದ್ಯಮದ ಕೌಶಲವನ್ನು ನಿರಾಕರಿಸುವಬದಲು ಆ ಆರ್ಥಿಕರಚನೆ ಬದಲಾಯಿಸಬೇಕು.

ಆದ್ದರಿಂದ ಈಗ ನಿಜವಾದ ಮುಖ್ಯಪ್ರಶ್ನೆ ಎಂದರೆ ವಿವಿಧ ಅಸಂಬದ್ಧ ವಸ್ತು ನಿರ್ಮಾಣ ಸಲಕರಣೆ ಮತ್ತು ರೀತಿಗಳನ್ನು ಯಾವರೀತಿ ಯಾವ ಪ್ರಮಾಣದಲ್ಲಿ ಜೋಡಿಸಬೇಕು, ಮತ್ತು ಸಮ ತೂಗಿಸಬೇಕು, ಎಂಬುದಲ್ಲ; ಆದರೆ ವಿಶೇಷ ಸಾಮಾಜಿಕ ಪರಿಣಾಮಗಳು ದೊರೆಯುವ ಹೊಸ ಪ್ರತ್ಯೇಕಮಾರ್ಗದಲ್ಲಿ ಒಂದು ಉತ್ತಮ ಪರಿವರ್ತನೆಯನ್ನೇ ಮಾಡುವುದು. ಈ ಪರಿವರ್ತನೆಯ ಆರ್ಥಿಕ ರಾಜಕೀಯ ಬದಲಾವಣೆಗಳೇನೋ ಅತಿ ಮುಖ್ಯವಾದವು. ಆದರೆ ಸಾಮಾಜಿಕ ಮಾನಸಿಕ ಬದಲಾವಣೆಗಳೂ ಅಷ್ಟೇ ಮುಖ್ಯವಾದವು. ಬಹುಕಾಲದಿಂದ ಭಾರತದಲ್ಲಿ ನಮ್ಮ ಭಾವನೆ ಮತ್ತು ಕಾರ್ಯರೀತಿಗಳಲ್ಲಿ ಪ್ರಾಚೀನ ಪದ್ಧತಿಯನ್ನೇ ಅವಲಂಬಿಸಿದೇವೆ. ಆದ್ದರಿಂದ ಹೊಸಭಾವನೆಗಳನ್ನು ಮತ್ತು ಹೊಸ ದಿಗಂತಗಳನ್ನು ಕಾಣುವ ಹೊಸಮಾರ್ಗಗಳು ಮತ್ತು ಹೊಸ ಅನುಭವಗಳು ಅತ್ಯವಶ್ಯಕ. ನಮ್ಮ ಇಂದಿನ ತಟಸ್ಥ ಜೀವನರೀತಿ ಶಕ್ತಿಪೂರ್ಣವೂ ಜೀವಂತವೂ ಆಗಿ ನಮ್ಮ ಭಾವನೆಗಳು ಸಾಹಸಯುಕ್ತವೂ ಧೀರೋದಾತ್ತವೂ ಆಗಬೇಕಾದರೆ ಅದೊಂದೇ ಮಾರ್ಗ. ಹೊಸ ಸಮಸ್ಯೆಗಳನ್ನು ಬಿಡಿಸಲು ಮನಸ್ಸು ಯೋಚಿಸಲೇಬೇಕು.

ಮತ್ತು ಹೊಸ ಸಮಸ್ಯೆಗಳಿಗೆ ಹೊಂದಿಕೊಳ್ಳಲೇಬೇಕು. ಆದ್ದರಿಂದ ಹೊಸ ಸನ್ನಿವೇಶಗಳೇ ಹೊಸ ಅನುಭವಗಳಿಗೆ ಕಾರಣವಾಗುತ್ತವೆ.

ಮಕ್ಕಳ ವಿದ್ಯಾಭ್ಯಾಸ ಯಾವುದಾದರೂ ಒಂದು ಕಸಬು ಅಥವ ಕೈಕೆಲಸವನ್ನು ಅವಲಂಬಿಸಿರ ಬೇಕೆಂದು ಈಗ ಸರ್ವಮಾನ್ಯವಿದೆ. ಅದರಿಂದ ಮಾನಸಿಕ ಪ್ರಚೋದನೆಯಾಗಿ ಮನಸ್ಸಿಗೂ ಕೈಗಳಿಗೂ ಒಂದು ವಿಧವಾದ ಸೌಹಾರ್ದ ಉಂಟಾಗುತ್ತದೆ. ಬೆಳೆಯುವ ಯುವಕ ಯುವತಿಯರ ಮನಸ್ಸೂ ಯಂತ್ರದಿಂದ ಪ್ರಚೋದಿತವಾಗುತ್ತದೆ. ದುಡಿಮೆಯ ದಾಸ್ಯದ ಕೂಲಿಗಾರನಂತಲ್ಲ, ಸರಿಯಾದ ಪರಿಸ್ಥಿತಿ ಯಲ್ಲಿ ಯಂತ್ರಪರಿಚಯದಿಂದ ಮನಸ್ಸು ವಿಕಾಸಗೊಳ್ಳುತ್ತದೆ ಮತ್ತು ಹೊಸ ಯೋಜನೆಗಳು ಕಾಣುತ್ತವೆ. ಸುಲಭ ವೈಜ್ಞಾನಿಕ ಪ್ರಯೋಗಗಳು, ಸೂಕ್ಷ್ಮದರ್ಶಕಯಂತ್ರದ ನೋಟಗಳು, ಸಾಮಾನ್ಯ ಪ್ರಕೃತಿ ನಿಯಮಗಳ ವಿವರಣೆಗಳು ಮನಸ್ಸನ್ನು ಚಕಿತಗೊಳಿಸುತ್ತವೆ; ಜೀವನದ ಅನೇಕ ಸಮಸ್ಯೆಗಳನ್ನು ಅರ್ಥ ಮಾಡಿಕೊಳ್ಳಲು ಸಹಾಯವಾಗುತ್ತವೆ; ಹಿಂದಿನ ಪದ್ಧತಿ, ರೀತಿ ನೀತಿಗಳನ್ನೇ ನಂಬಿ ಕುಳಿತುಕೊಳ್ಳದೆ, ಹೊಸ ಪ್ರಯೋಗಮಾಡಿ ಹೊಸ ಮಾರ್ಗಗಳನ್ನು ಕಂಡು ಹಿಡಿಯಬೇಕೆಂಬ ಆಸಕ್ತಿ ಹುಟ್ಟಿಸುತ್ತದೆ; ಆತ್ಮವಿಶ್ವಾಸ ಮತ್ತು ಸಹಕಾರ ಮನೋಭಾವ ಬೆಳೆಯುತ್ತವೆ. ಹಿಂದಿನ ಕಾಲದ ಹೊರೆಯ ನಿರಾಶಾಭಾವನೆ ಮಾಯವಾಗಿ ಸದಾ ಪರಿವರ್ತನೆಗೊಳ್ಳುತ್ತಿರುವ ಮತ್ತು ಪ್ರಗತಿಗೊಳ್ಳುತ್ತಿರುವ ಯಂತ್ರ ಕೌಶಲ್ಯವನ್ನು ಅವಲಂಬಿಸಿರುವ ನಾಗರಿಕತೆಯಿಂದ ಮಾತ್ರ ಇದು ಸಾಧ್ಯ. ಆ ನಾಗರಿಕತೆ ಎಂದರೆ ಪ್ರಾಚೀನ ಸಂಪ್ರ ದಾಯದ ಇಂದಿನ ಜೀವನದಿಂದ ಅಸಾಧ್ಯ ಪರಿವರ್ತನೆ; ಒಂದು ಹೊಸ ಜೀವನಕ್ಕೆ ಹಾರಿದಂತೆ ಎನ್ನ ಬಹುದು; ಆದರೆ ಆ ನಾಗರಿಕತೆಗೂ ಆಧುನಿಕ ಕೈಗಾರಿಕಾ ಪ್ರಗತಿಗೂ ನಿಕಟ ಸಂಬಂಧವಿದೆ. ಹೊಸ ಸಮಸ್ಯೆಗಳು, ಕಷ್ಟಗಳು ಉದ್ಭವಿಸುವುದು ನಿಜ; ಆದರೆ ಅವುಗಳ ನಿವಾರಣೆಗೂ ತಾನೇ ದಾರಿ ತೋರಿಸುತ್ತದೆ.

ವಿದ್ಯಾಭ್ಯಾಸ ಕ್ರಮದಲ್ಲಿ ಸಾಹಿತ್ಯ ವಿಭಾಗದ ಮೇಲೆ ನನಗೆ ತುಂಬ ಪ್ರೇಮ. ಪ್ರಾಚೀನ ಸಾಹಿತ್ಯ ವೆಂದರಂತೂ ನನಗೆ ಪ್ರಾಣ. ಆದರೂ ಎಲ್ಲ ಹುಡುಗ ಹುಡುಗಿಯರಿಗೆ ಭೌತಶಾಸ್ತ್ರ, ರಸಾಯನ ಶಾಸ್ತ್ರ, ಜೀವಶಾಸ್ತ್ರಗಳ ಮತ್ತು ವಿಜ್ಞಾನದ ಪ್ರಯೋಗಗಳ ಸ್ಥೂಲಪರಿಚಯ ಅತ್ಯವಶ್ಯವೆಂದು ನನ್ನ ಮತ. ಆಧುನಿಕ ಪ್ರಪಂಚ ಅರ್ಥವಾಗಬೇಕಾದರೆ, ಅದರೊಳಗೆ ಹೊಂದಿಕೊಳ್ಳಬೇಕಾದರೆ ಮತ್ತು ಕೆಲಮಟ್ಟಿ ಗಾದರೂ ವೈಜ್ಞಾನಿಕ ದೃಷ್ಟಿಯನ್ನು ಬೆಳೆಸಿಕೊಳ್ಳಬೇಕಾದರೆ ಆ ರೀತಿಯ ಶಿಕ್ಷಣದಿಂದ ಮಾತ್ರ ಸಾಧ್ಯ. ಇದುವರೆಗಿನ ಮತ್ತು ಮುಂದೆ ಇನ್ನೂ ಉತ್ತಮಗೊಳ್ಳಬಹುದಾದ ವಿಜ್ಞಾನದ ಉನ್ನತಸಾಧನೆಯಲ್ಲಿ, ಆಧುನಿಕ ಉದ್ಯೋಗ ಕೌಶಲ್ಯದಲ್ಲಿ, ವಿಜ್ಞಾನದ ಪ್ರಾಯೋಗಿಕ ನಲಕರಣೆಗಳ ಅದ್ಭುತ ವೈಚಿತ್ರ್ಯದಲ್ಲಿ, ಅತಿ ಸೂಕ್ಷ್ಮವೂ ಆದರೂ ಅದ್ಭುತ ಶಕ್ತಿಯುತವೂ ಆದ ಯಂತ್ರೋಪಕರಣಗಳಲ್ಲಿ, ವಿಜ್ಞಾನ ಸಂಶೋಧನೆಗಳ ವಿಚಾರ ಸಾಹಸಗಳಲ್ಲಿ ಮತ್ತು ಅವುಗಳ ಪ್ರಯೋಗದಿಂದ ಹೊರಹೊಮ್ಮಿರುವ ಪರಿಣಾಮಗಳಲ್ಲಿ, ಪ್ರಕೃತಿಯ ಪ್ರಯೋಗಶಾಲೆಯ ಮತ್ತು ನಿಯಮಗಳ ದೃಶ್ಯ ವೈಚಿತ್ರ್ಯಗಳ ಕಿರುನೋಟಗಳಲ್ಲಿ, ಸಹಸ್ರಾರು ವಿಜ್ಞಾನಿಗಳ ಸಾಹಸದಲ್ಲಿ, ಭಾವನಾ ಮತ್ತು ಕಾರ್ಯ ಪ್ರಪಂಚದಲ್ಲಿ ದೊರೆತ ವಿಜ್ಞಾನದ ಗಂಭೀರವ್ಯಾಪ್ತಿಯಲ್ಲಿ; ಎಲ್ಲಕ್ಕೂ ಹೆಚ್ಚಾಗಿ ಇದೆಲ್ಲವೂ ಮಾನವನ ಮನೋವಿಕಾಸದ ಫಲ ಎಂಬ ಸತ್ಯದಲ್ಲಿ ಏನೋ ಒಂದು ಅದ್ಭುತ ವೈಚಿತ್ರ್ಯವಿದೆ.

## ೮. ಕೈಗಾರಿಕಾ ಪ್ರಗತಿಗೆ ಸರಕಾರದ ವಿರೋಧ: ಯುದ್ಧಸಾಮಗ್ರಿಗಳ ನಿರ್ಮಾಣಕ್ಕಾಗಿ ಸಾಮಾನ್ಯ ವಸ್ತು ನಿರ್ಮಾಣಸಾಧನೆಗಳ ದುರುಪಯೋಗ

ಭಾರತದಲ್ಲಿ ದೊಡ್ಡ ಕೈಗಾರಿಕೆ ಎಂದರೆ ಜಮಷೆಡ್‌ಪುರದ ತಾತಾಕಂಪೆನಿಯ ಉಕ್ಕು ಮತ್ತು ಕಬ್ಬಿಣದ ಕಾರ್ಖಾನೆ. ಅಂಥದು ಇನ್ನೊಂದು ಇಲ್ಲ; ಉಳಿದ ಎಂಜಿನಿಯರಿಂಗ್ ವರ್ಕ್‌ಷಾಪುಗಳಲ್ಲಿ

ಸಣ್ಣ ಸಣ್ಣ ಕೆಲಸಮಾಡತಕ್ಕವು. ಸರಕಾರದ ನೀತಿಯಿಂದ ತಾತಾಕಾರ್ಖಾನೆಯ ಬೆಳವಣಿಗೆ ಸಹ ನಿಧಾನವಾಯಿತು. ಮೊದಲನೆಯ ಪ್ರಪಂಚಯುದ್ಧ ಸಮಯದಲ್ಲಿ ರೈಲ್ವೆ ಎಂಜಿನ್‌ಗಳು, ಪ್ರಯಾಣಿಕರ ಮತ್ತು ಸಾಮಾನಿನ ಗಾಡಿಗಳು ಸಾಲದಾದವು. ತಾತಾಕಂಪೆನಿ ಎಂಜಿನ್‌ಗಳ ತಯಾರಿಕೆಗೆಂದು ಯಂತ್ರೋಪಕರಣಗಳನ್ನು ಸಹ ತರಿಸಿದರು. ಆದರೆ ಯುದ್ಧ ಮುಗಿದೊಡನೆ ಇಂಡಿಯ ಸರಕಾರ ಮತ್ತು ಅದರ ಅಂಗವಾದ ರೈಲ್ವೆಬೋರ್ಡ್ ಬ್ರಿಟಿಷ್ ಕೈಗಾರಿಕೆಗೇ ಪ್ರೋತ್ಸಾಹಕೊಡಲು ನಿರ್ಧರಿಸಿದರು. ಭಾರತದ ರೈಲ್ವೆಗಳೆಲ್ಲ ಸರಕಾರದ ಅಧೀನವೊ, ಬ್ರಿಟಿಷ್ ಕಂಪೆನಿಗಳ ಅಧೀನವೊ ಇದ್ದುದರಿಂದ ತಾತಾಕಂಪೆನಿ ತಮ್ಮ ಎಂಜಿನ್ ತಯಾರಿಕೆಯ ಉದ್ಯಮ ನಿಲ್ಲಿಸಬೇಕಾಯಿತು.

ಕೈಗಾರಿಕೆಯಲ್ಲಾಗಲಿ ಅಥವ ಬೇರೆ ಯಾವ ರೀತಿಯಲ್ಲೇ ಆಗಲಿ ಭಾರತ ಪ್ರಗತಿಪಡೆಯಬೇಕಾದರೆ ಮೂರು ಮುಖ್ಯ ಅವಶ್ಯಕತೆಗಳಿವೆ. ದೊಡ್ಡ ದೊಡ್ಡ ಯಂತ್ರಗಳ ತಯಾರಿಕೆ, ವಿಜ್ಞಾನ ಸಂಶೋಧನ ಮಂದಿರಗಳು ಮತ್ತು ವಿದ್ಯುಚ್ಛಕ್ತಿಯ ಉತ್ಪಾದನೆ. ಎಲ್ಲ ಯೋಜನೆ ಇವೇ ತಳಹದಿಯಾಗಬೇಕು. ರಾಷ್ಟ್ರೀಯ ಯೋಜನಾ ಸಮಿತಿಯೂ ಇವುಗಳಿಗೇ ಪ್ರಾಮುಖ್ಯತೆ ಕೊಟ್ಟಿತು. ಇವು ಮೂರಕ್ಕೂ ನಮ್ಮಲ್ಲಿ ಅಭಾವ; ಆದ್ದರಿಂದ ಯಾವ ಕೈಗಾರಿಕಾ ಪ್ರಗತಿಯೂ ನಮಗೆ ಸಾಧ್ಯವಿರಲಿಲ್ಲ. ಸರಕಾರವು ದೂರದೃಷ್ಟಿಯ ಉದಾರ ನೀತಿ ಅನುಸರಿಸಿದ್ದರೆ ಈ ಕೊರತೆ ನಿವಾರಿಸಬಹುದಿತ್ತು. ಆದರೆ ರಾಷ್ಟ್ರದ ಪ್ರಗತಿ ವಿರುದ್ಧ ಪ್ರತಿಗಾಮಿ ಮನೋಭಾವದ ನೀತಿ ಅನುಸರಿಸಿ ಸರಕಾರವು ದೊಡ್ಡ ಕೈಗಾರಿಕೆಗಳ ಯಂತ್ರ ನಿರ್ಮಾಣ ಕಾರ್ಯಕ್ಕೆ ಅವಕಾಶಕೊಡಲಿಲ್ಲ. ಪ್ರಪಂಚದ ಎರಡನೆ ಯುದ್ಧ ಆರಂಭವಾದಾಗಲೂ ಆ ಯಂತ್ರೋಪಕರಣ ತರಿಸಲು ಅವಕಾಶ ಕೊಡಲಿಲ್ಲ. ಆಮೇಲೆ ಹಡಗುಗಳಿಲ್ಲನೆಂಬ ನೆಪ ತಂದೊಡ್ಡಿದರು. ಬಂಡವಾಳಕ್ಕಾಗಲಿ ಉದ್ಯೋಗ ಕುಶಲರಿಗಾಗಲಿ ಕೊರತೆ ಇರಲಿಲ್ಲ. ಬೇಕಾಗಿದ್ದುದು ಯಂತ್ರ ಸಾಮಗ್ರಿ ಮಾತ್ರ; ಕೈಗಾರಿಕೋದ್ಯಮಿಗಳು ಮೇಲಿಂದಮೇಲೆ ಬೊಬ್ಬೆ ಇಡುತ್ತಲೇ ಇದ್ದರು. ಯಂತ್ರೋಪಕರಣ ತರಿಸಲು ಅವಕಾಶಕೊಟ್ಟಿದ್ದರೆ ಭಾರತದ ಆರ್ಥಿಕ ಪರಿಸ್ಥಿತಿ ಉತ್ತಮಗೊಳ್ಳುವುದು ಹಾಗಿರಲಿ ದೂರ ಪ್ರಾಚ್ಯದ ಯುದ್ಧದ ಕತೆಯೇ ಬೇರೆಯಾಗುತ್ತಿತ್ತು. ವಿಮಾನಗಳನ್ನೆಲ್ಲ ಅಥವ ಬಹುಶ್ರಮ ಮತ್ತು ವೆಚ್ಚದಿಂದ ತರಬೇಕಾಗಿದ್ದ ಅತ್ಯವಶ್ಯಕ ವಸ್ತುಗಳನ್ನೆಲ್ಲ ಭಾರತದಲ್ಲಿಯೆ ತಯಾರಿಸಬಹುದಿತ್ತು. ಚೀಣಾ ಮತ್ತು ಪೌರ್ವಾತ್ಯ ದೇಶಗಳಿಗೆ ಭಾರತವು ಶಸ್ತ್ರಾಗಾರವಾಗಬಹುದಾಗಿತ್ತು. ಭಾರತದ ಕೈಗಾರಿಕಾ ಪ್ರಗತಿಯೂ ಕೆನಡ ಮತ್ತು ಆಸ್ಟ್ರೇಲಿಯಗಳಷ್ಟೆ ಮುಂದುವರಿಯಬಹುದಿತ್ತು. ಯುದ್ಧ ಪರಿಸ್ಥಿತಿಯ ಅವಶ್ಯಕತೆ ಎಷ್ಟೇ ಆತುರವಿದ್ದರೂ ಬ್ರಿಟಿಷ್ ಕೈಗಾರಿಕೆಗಳ ಭವಿಷ್ಯದ ಅವಶ್ಯಕತೆಗಳಿಗೇ ಪ್ರಾಮುಖ್ಯತೆ ದೊರೆಯಿತು. ಯುದ್ಧಾನಂತರದ ದಿನಗಳಲ್ಲಿ ಬ್ರಿಟಿಷ್ ಕೈಗಾರಿಕೆಗಳೊಂದಿಗೆ ಪೈಪೋಟಿಗೆ ನಿಲ್ಲಬಹುದಾದ ಯಾವ ಕೈಗಾರಿಕೆಗೂ ಭಾರತದಲ್ಲಿ ಅವಕಾಶ ದೊರೆಯಲಿಲ್ಲ. ಇದರಲ್ಲಿ ಮುಚ್ಚುಮರೆಯೇನೂ ಇರಲಿಲ್ಲ. ಬ್ರಿಟಿಷ್ ಪತ್ರಿಕೆಗಳಲ್ಲಿ ಬಹಿರಂಗವಾಗಿಯೇ ಈ ಅಭಿಪ್ರಾಯ ವ್ಯಕ್ತಪಡಿಸುತ್ತಿದ್ದರು. ಭಾರತದಲ್ಲಿ ಅದನ್ನೆ ಎತ್ತಿ ತೋರಿಸಿ ಪ್ರತಿಭಟಿಸುತ್ತಲೂ ಇದ್ದರು.

ತಾತಾಕಂಪೆನಿಯ ಸ್ಥಾಪಕರಾದ ಜಮಷೆಡ್ಜಿ ತಾತಾ ಬೆಂಗಳೂರಲ್ಲಿ (ಇಂಡಿಯನ್ ಇನಸ್ಟಿಟ್ಯೂಟ್ ಆಫ್ ಸೈನ್ಸ್) ಭಾರತೀಯ ವಿಜ್ಞಾನ ಸಂಶೋಧನಾ ಮಂದಿರ ಆರಂಭಿಸಿ ತಮ್ಮ ದೂರದೃಷ್ಟಿ ತೋರಿಸಿದ್ದರು. ಭಾರತದಲ್ಲಿ ಸಂಶೋಧನಾಲಯಗಳಿಗೆ ಇದೇ ಮೊದಲನೆಯದು. ಉಳಿದುವೆಲ್ಲ ಅತ್ಯಲ್ಪಗುರಿಯ ಸರಕಾರಿ ಸಂಸ್ಥೆಗಳು. ಅಮೆರಿಕೆಯ ಸಂಸ್ಥಾನಗಳಲ್ಲಿ, ಸೋವಿಯಟ್ ರಷ್ಯದಲ್ಲಿ ಸಾವಿರಾರು ಸಂಶೋಧನಾಲಯಗಳಲ್ಲಿ, ವಿಶ್ವವಿದ್ಯಾನಿಲಯಗಳಲ್ಲಿ ಮತ್ತು ವಿಶೇಷ ವಿಜ್ಞಾನ ಸಂಶೋಧನ ಮಂದಿರಗಳಲ್ಲಿ ವೈಜ್ಞಾನಿಕ ಮತ್ತು ಕೈಗಾರಿಕಾ ಸಂಶೋಧನೆ ನಡೆಯುತ್ತಿದ್ದರೂ ಬೆಂಗಳೂರಿನ ವಿಜ್ಞಾನ ಸಂಶೋಧನಾಲಯ ಮತ್ತು ಕೆಲವು ವಿಶ್ವವಿದ್ಯಾನಿಲಯಗಳನ್ನು ಬಿಟ್ಟರೆ ಭಾರತದಲ್ಲಿ ಈ ಸಂಶೋಧನಾ ಕಾರ್ಯವನ್ನು ಅಲಕ್ಷ್ಯ ಮಾಡಲಾಯಿತು. ಎರಡನೆಯ ಯುದ್ಧದ ಆರಂಭವಾದ ಮೇಲೆ ಸಂಶೋಧನೆಗೆ ಕೊಟ್ಟ ಅಲ್ಪ ಪ್ರೋತ್ಸಾಹದಿಂದ ಉತ್ತಮ ಪ್ರತಿಫಲ ದೊರೆತಿದೆ.

ಹಡಗುಗಳ ನಿರ್ಮಾಣ, ಎಂಜಿನ್‌ಗಳ ತಯಾರಿಕೆಗೆ ಪ್ರೋತ್ಸಾಹ ದೊರೆಯದೆ ನಿಂತು ಹೋದುದರ ಜೊತೆಗೆ ಮೋಟಾರುಕಾರು ತಯಾರಿಕೆಗೆ ಮಾಡಿದ ಪ್ರಯತ್ನಕ್ಕೂ ಅಡ್ಡಿ ಬಂದರು. ಎರಡನೆಯ ಪ್ರಪಂಚ ಯುದ್ಧಕ್ಕೆ ಮೊದಲು ಇದಕ್ಕೆ ಎಲ್ಲ ಪ್ರಯತ್ನ ಮಾಡಲಾಗಿತ್ತು. ಅಮೆರಿಕೆಯ ಒಂದು ಪ್ರಸಿದ್ಧ ಕಾರು ತಯಾರಿಕೆಯ ಕಾರ್ಖಾನೆಯ ಸಹಾಯ ದೊರೆತು ಎಲ್ಲ ಸಿದ್ಧತೆಯೂ ಆಗಿತ್ತು. ಭಾರತದಲ್ಲಿ ಆಗಲೇ ಕೆಲವು ಜೋಡಣೆ ಕಾರ್ಖಾನೆಗಳು ಕೆಲಸ ಮಾಡುತ್ತಿದ್ದವು. ಈಗ ಭಾರತೀಯ ಬಂಡವಾಳ, ಆಡಳಿತ ಮತ್ತು ಅಧಿಕಾರಿವರ್ಗದ ನೇತೃತ್ವದಲ್ಲಿ ಎಲ್ಲ ಭಾಗಗಳನ್ನೂ ಇಲ್ಲಿಯೇ ತಯಾರಿಸಲು ಪ್ರಯತ್ನ ನಡೆದಿತ್ತು. ಅಮೆರಿಕೆಯ ಕಂಪೆನಿಯವರೊಡನೆ ಆದ ಒಪ್ಪಂದದ ಪ್ರಕಾರ ಅವರ ತಯಾರಿಕಾ ವಿಧಾನ, ಆರಂಭದಲ್ಲಿ ಉದ್ಯೋಗ ಕುಶಲರ ಮೇಲ್ವಿಚಾರಣೆ ದೊರೆತಿದ್ದವು. ಮುಂಬೈ ಸರಕಾರದ ಕಾಂಗ್ರೆಸ್ ಮಂತ್ರಿಮಂಡಲ ಎಲ್ಲ ಬಗೆಯ ಸೌಕರ್ಯ ಕೊಡಲು ಒಪ್ಪಿತ್ತು. ಈ ಉದ್ಯಮದಲ್ಲಿ ರಾಷ್ಟ್ರೀಯ ಯೋಜನಾ ಸಮಿತಿ ಸಹ ತುಂಬ ಆಸಕ್ತಿ ವಹಿಸಿತ್ತು. ಉಳಿದ ಎಲ್ಲ ಸಿದ್ಧತೆಯೂ ಪೂರ್ಣವಾಗಿ ಯಂತ್ರೋಪಕರಣ ತರಿಸುವುದು ಮಾತ್ರ ಉಳಿದಿತ್ತು. ಇಂಗ್ಲೆಂಡಿನ ಭಾರತ ಶಾಖೆಯ ಕಾರ್ಯದರ್ಶಿ ಈ ಪ್ರಯತ್ನಕ್ಕೆ ನಕಾರ ಹೇಳಿ, ಯಂತ್ರೋಪಕರಣ ತರಿಸಲು ಅವಕಾಶಕೊಡಲಿಲ್ಲ. "ಈ ಕಾರ್ಖಾನೆಯ ಸ್ಥಾಪನೆ ಎಂದರೆ ಯುದ್ಧಕ್ಕೆ ಅತ್ಯವಶ್ಯಕವಾದ ಯಂತ್ರೋಪಕರಣಗಳು ಮತ್ತು ಕೂಲಿಗಾರರನ್ನು ಬೇರೆ ಕಡೆಗೆ ತಿರುಗಿಸಿದಂತೆ" ಎಂದು ಆತನ ಅಭಿಪ್ರಾಯ. ಇದು ನಡೆದುದು ಯುದ್ಧಾರಂಭದ ಬ್ರಿಟಿಷ್ ಬಡಾಯಿದಿನಗಳಲ್ಲಿ. ಬೇಕಾದಷ್ಟು ಜನ ಕೂಲಿಗಾರರೂ, ಕುಶಲ ಕರ್ಮಿಗಳೂ ಕೆಲಸವಿಲ್ಲದೆ ಕಾಲಹರಣಮಾಡುತ್ತಿದ್ದಾರೆಂದು ತೋರಿಸ ಲಾಯಿತು. ಯುದ್ಧದ ಅವಶ್ಯಕತೆಯೇ ಒಂದು ಬಲವಾದ ಸಮರ್ಥನೆಯಾಯಿತು; ಏಕೆಂದರೆ ಮೋಟಾರ್ ಸಾರಿಗೆ ಹೆಚ್ಚಿತು. ಆದರೆ ಲಂಡನ್‌ನಲ್ಲಿ ಕುಳಿತಿದ್ದ ಈ ಭಾರತಶಾಖೆಯ ಕಾರ್ಯದರ್ಶಿ ಮಾತ್ರ ಕದಲಲಿಲ್ಲ. ಅಮೆರಿಕೆಯ ಇನ್ನೊಂದು ಪ್ರಬಲ ಎದುರಾಳಿ ಸಂಸ್ಥೆ ಸಹ ಭಾರತದಲ್ಲಿ ಬೇರೆಯವರ ಅಧೀನದಲ್ಲಿ ಮೋಟಾರು ಕೈಗಾರಿಕೆ ಸ್ಥಾಪಿಸಲು ಒಪ್ಪಲಿಲ್ಲವೆಂದೂ ತಿಳಿಯಿತು.

ಭಾರತದಲ್ಲಿ ಯುದ್ಧಕಾಲದಲ್ಲಿ ಸಾರಿಗೆಯು ಒಂದು ದೊಡ್ಡ ಪ್ರಶ್ನೆಯಾಯಿತು. ಮೋಟಾರ್ ಗಾಡಿ ಗಳು, ಪೆಟ್ರೋಲ್, ರೈಲ್ವೆ ಎಂಜಿನಾಗಳು, ರೈಲ್ವೆವ್ಯಾಗನ್‌ಗಳು, ಕೊನೆಗೆ ಕಲ್ಲಿದ್ದಲು ಎಲ್ಲಕ್ಕೂ ಅಭಾವ ವಾಯಿತು. ಭಾರತದ ಪರವಾಗಿ ಯುದ್ಧಕ್ಕೆ ಮುಂಚೆಯೇ ತಯಾರಿಸಿದ ಉದ್ಯಮಗಳನ್ನು ಸರಕಾರವು ಪ್ರೋತ್ಸಾಹಿಸಿದ್ದರೆ ಇದಕ್ಕೆ ಯಾವ ಕೊರತೆಯೂ ಉಂಟಾಗುತ್ತಿರಲಿಲ್ಲ. ರೈಲ್ವೆ ಎಂಜಿನ್‌ಗಳು, ಗಾಡಿಗಳು, ಮೋಟಾರ್ ಗಾಡಿಗಳು, ಸಶಸ್ತ್ರ ಮೋಟಾರ್ ಗಾಡಿಗಳನ್ನು ಸಹ ಇಲ್ಲಿಯೇ ತಯಾರಿಸಬಹುದಿತ್ತು. ಪವರ್ ಆಲ್ಕೊಹಾಲ್ ತಯಾರಿಸಿದ್ದರೆ ಪೆಟ್ರೋಲಿನ ಅಭಾವ ಕಡಮೆಮಾಡಬಹುದಿತ್ತು. ಕಲ್ಲಿದ್ದಲಿಗೆ ಭಾರತದಲ್ಲಿ ಕೊರತೆ ಇರಲಿಲ್ಲ; ಆದರೆ ಅದನ್ನು ತೆಗೆಯುತ್ತಿದ್ದುದೇ ಸ್ವಲ್ಪ. ಕಲ್ಲಿದ್ದಲಿಗೆ ಬೇಕಾದಷ್ಟು ಗಿರಾಕಿ ಇದ್ದರೂ ಯುದ್ಧಕಾಲದಲ್ಲಿ ಗಣಿಯಿಂದ ತೆಗೆಯುವುದೇ ಕಡಮೆಯಾಗಿತ್ತು. ಗಣಿಗಳಲ್ಲಿ ಕೂಲಿಗಾರರ ಕೂಲಿ ಮತ್ತು ಜೀವನರೀತಿ ಬಹಳ ಕಠಿನವಿದ್ದುದರಿಂದ ಕೂಲಿಗಾರರು ಬರುತ್ತಿರಲಿಲ್ಲ. ಹೆಂಗಸರು ಹೊಟ್ಟೆ ಗಿಲ್ಲದೆ ಕಡಿಮೆ ಕೂಲಿಗೆ ಬರುತ್ತಿದ್ದುದರಿಂದ ಹೆಂಗಸರ ಮೇಲಿದ್ದ ನಿರ್ಬಂಧ ತೆಗೆದರು. ಕಲ್ಲಿದ್ದಲು ಕೈಗಾ ರಿಕೆಯನ್ನು ಉತ್ತಮಪಡಿಸುವುದಕ್ಕೆ ಆಗಲಿ, ಕೂಲಿಗಾರರ ಕೂಲಿ ಮತ್ತು ಜೀವನ ಸೌಕರ್ಯ ಹೆಚ್ಚಿಸಿ ಕೂಲಿ ಗಾರರನ್ನು ಆಕರ್ಷಿಸುವುದಕ್ಕೆ ಆಗಲಿ ಯಾವ ಪ್ರಯತ್ನವೂ ನಡೆಯಲಿಲ್ಲ. ಕಲ್ಲಿದ್ದಲಿನ ಅಭಾವದಿಂದ ಕೈಗಾರಿಗಕೆಗಳ ಬೆಳವಣಿಗೆಗೆ ಅಡ್ಡಿಯಾಯಿತಲ್ಲದೆ ಇದ್ದ ಕೈಗಾರಿಕೆಗಳೂ ಕೆಲಸ ನಿಲ್ಲಿಸಬೇಕಾಯಿತು.

ನೂರುಗಟ್ಟಲೆ ರೈಲ್ವೆ ಎಂಜಿನ್‌ಗಳನ್ನು ರೈಲುಗಾಡಿಗಳನ್ನು ಮಧ್ಯ ಪ್ರಾಚ್ಯಕ್ಕೆ ಕಳುಹಿಸಿ ಪ್ರಯಾಣದ ತೊಂದರೆ ಹೆಚ್ಚಿಸಿದರು. ಕೆಲವು ಕಡೆ ರೈಲುಕಂಬಿಗಳನ್ನೂ ಕಿತ್ತು ಬೇರೆ ಕಡೆಗೆ ಸಾಗಿಸಿದರು. ಮುಂದಿನ ಪರಿಣಾಮಗಳೊಂದನ್ನೂ ಲೆಕ್ಕಿಸದೆ ಮನಬಂದಂತೆ ಈ ರೀತಿ ವರ್ತಿಸಿದ್ದು ಆಶ್ಚರ್ಯ. ಯೋಜನೆ ಅಥವ ಮುಂದಾಲೋಚನೆ ಸ್ವಲ್ಪವೂ ಇರಲಿಲ್ಲ. ಒಂದು ಸಮಸ್ಯೆ ಸ್ವಲ್ಪ ನಿವಾರಣೆ ಆಗವುದರಲ್ಲಿ ಇತರ ಕಷ್ಟತಮ ಸಮಸ್ಯೆಗಳು ಏಳುತ್ತಿದ್ದವು.

೧೯೩೯ ರ ಕೊನೆಯಲ್ಲಿ ಅಥವ ೧೯೪೦ ರ ಆದಿಯಲ್ಲಿ ಭಾರತದಲ್ಲಿ ವಿಮಾನ ಕೈಗಾರಿಕೆ ಆರಂಭಿಸಲು ಪ್ರಯತ್ನ ನಡೆಯಿತು. ಪುನಃ ಅಮೆರಿಕೆಯ ಕಾರ್ಖಾನೆಯೊಂದಿಗೆ ಒಪ್ಪಂದ ಮಾಡಿಕೊಂಡು ಇಂಡಿಯ ಸರಕಾರಕ್ಕೂ, ಕೇಂದ್ರ ಸೈನ್ಯ ಕಚೇರಿಗೂ ಒಪ್ಪಿಗೆ ಕೊಡಲು ಆತುರದ ತಂತಿಗಳು ಹೋದವು. ಉತ್ತರವೇ ಇಲ್ಲ. ಪದೇ ಪದೇ ಜ್ಞಾಪಿಸಿದ್ದಕ್ಕೆ ಯೋಜನೆ ಒಪ್ಪಲು ಸಾಧ್ಯವಿಲ್ಲವೆಂದು ಉತ್ತರ. ಇಂಗ್ಲೆಂಡ್ ಮತ್ತು ಅಮೆರಿಕೆಯಲ್ಲಿ ವಿಮಾನ ಕೊಳ್ಳಲು ಸಾಧ್ಯವಿರುವಾಗ ಭಾರತದಲ್ಲಿ ವಿಮಾನ ತಯಾರಿಸುವುದೆಂದರೇನು ?

ಯುದ್ಧಕ್ಕೆ ಮುಂಚೆ ಅನೇಕ ಔಷಧಗಳು, ಔಷಧದ್ರವ್ಯಗಳು, ಮತ್ತು ವ್ಯಾಕ್ಸಿನ್‌ಗಳು ಜರ್ಮನಿಯಿಂದ ಭಾರತಕ್ಕೆ ಬರುತ್ತಿದ್ದವು. ಯುದ್ಧದಿಂದ ಇದು ನಿಂತುಹೋಯಿತು. ಮುಖ್ಯ ಕೆಲವು ವ್ಯಾಕ್ಸಿನ್‌ಗಳನ್ನೂ ಔಷಧಿಗಳನ್ನೂ ಭಾರತದಲ್ಲಿಯೇ ತಯಾರಿಸಲು ಏರ್ಪಾಟು ಮಾಡಬೇಕೆಂದು ಸಲಹೆ ಮಾಡಲಾಯಿತು. ಕೆಲವು ಸರಕಾರಿ ಸಂಸ್ಥೆಗಳಲ್ಲಿ ಸುಲಭವಾಗಿ ತಯಾರಿಸಲು ಸಾಧ್ಯವಿತ್ತು. ಸರಕಾರವು ಇದನ್ನೂ ಒಪ್ಪಲಿಲ್ಲ. ಏನು ಬೇಕಾದರೂ ಇಂಪೀರಿಯಲ್ ಕೆಮಿಕಲ್ ಇಂಡಸ್ಟ್ರೀಸ್ ಸಂಸ್ಥೆಯಿಂದ ಪಡೆಯಬಹುದೆಂದು ವಾದಮಾಡಿತು. ಅದೇ ವಸ್ತುವನ್ನು ಭಾರತದಲ್ಲಿ ಇನ್ನೂ ಸುಲಭ ಬೆಲೆಯಲ್ಲಿ ಮಾಡಬಹುದೆಂದೂ, ಯಾವ ಲಾಭ ಬಡಕತನವೂ ಇಲ್ಲದೆ ಯುದ್ಧಕ್ಕೂ ಸಾರ್ವಜನಿಕರಿಗೂ ಉಪಯೋಗವಾಗುವುದೆಂದೂ ತಿಳಿಸಿದರೆ ಮುಖ್ಯ ರಾಜನೀತಿಯ ದೃಷ್ಟಿ ಬೇರೆ ಇರುವಾಗ ಅಲ್ಪ ವಿಷಯಗಳಿಗೆ ಗಮನ ಕೊಡಲು ಸಾಧ್ಯವಿಲ್ಲವೆಂದು ಉತ್ತರ ಬಂದಿತು. " ಸರ್ಕಾರ ವ್ಯಾಪಾರ ಸಂಸ್ಥೆಯಲ್ಲ " ಎಂಬ ವಾದ !

ಸರಕಾರವೇನೋ ವ್ಯಾಪಾರ ಸಂಸ್ಥೆಯಲ್ಲವೆನ್ನುವುದು ನಿಜ. ಆದರೆ ವ್ಯಾಪಾರ ಸಂಸ್ಥೆಗಳಲ್ಲೇ ಅದರ ಆಸಕ್ತಿ ಹೆಚ್ಚು. ಅವುಗಳಲ್ಲಿ ಇಂಪೀರಿಯಲ್ ಕೆಮಿಕಲ್ಸ್ ಒಂದು ಮುಖ್ಯ ಸಂಸ್ಥೆ. ಈ ದೊಡ್ಡ ಸಂಸ್ಥೆಗೆ ವಿಶೇಷ ಸೌಲಭ್ಯ ಕೊಡಲಾಯಿತು. ಈ ಸೌಲಭ್ಯಗಳಲ್ಲದೇನೇ ಅದರ ಸೌಕರ್ಯವೂ ಸಂಪತ್ತೂ ಅಪಾರವಿತ್ತು. ಪ್ರಾಯಶಃ ತಾತಾ ಕಂಪೆನಿಯೊಂದನ್ನು ಬಿಟ್ಟರೆ ಬೇರೆ ಯಾರಿಗೂ ಅದರೊಡನೆ ಪೈಪೋಟಿ ನಡೆಸಲು ಸಾಧ್ಯವಿರಲಿಲ್ಲ. ಈ ಸೌಕರ್ಯಗಳಲ್ಲದೆ ಅದಕ್ಕೆ ಇಂಡಿಯ ಸರಕಾರ ಮತ್ತು ಇಂಗ್ಲೆಂಡಿನ ಅತ್ಯುನ್ನತ ಅಧಿಕಾರಿವರ್ಗದ ಬೆಂಬಲವಿತ್ತು. ವೈಸರಾಯ್ ಪದವಿ ಬಿಟ್ಟ ಕೆಲವು ತಿಂಗಳಲ್ಲೇ ಲಾರ್ಡ್ ಲಿನ್‌ಲಿತ್‌ಗೊ ಅದರ ಡೈರೆಕ್ಟರ್ ಆದ. ಇಂಗ್ಲೆಂಡಿನ ಭಾರಿ ಬಂಡವಾಳಗಾರರಿಗೂ ಇಂಡಿಯ ಸರಕಾರಕ್ಕೂ ಸಂಬಂಧ ಏನಿತ್ತು ಮತ್ತು ಅದು ಭಾರತ ಸರಕಾರದ ನೀತಿಯನ್ನು ಹೇಗೆ ರೂಪಿಸುತ್ತಿತ್ತು ಎಂಬುದಕ್ಕೆ ಇದೊಂದು ನಿದರ್ಶನವೇ ಸಾಕು. ಭಾರತದ ವೈಸರಾಯ್ ಪದವಿಯಲ್ಲಿರುವಾಗ ಸಹ ಇಂಪೀರಿಯಲ್ ಕೆಮಿಕಲ್ಸ್‌ನಲ್ಲಿ ಲಾರ್ಡ್‌ಲಿನ್‌ಲಿತ್‌ಗೊ ದೊಡ್ಡ ಷೇರುದಾರನಾಗಿರಬೇಕು. ಏನೆ ಇರಲಿ ಭಾರತದೊಂದಿನ ಸಂಬಂಧದ ಘನತೆ ಮತ್ತು ವೈಸರಾಯ್ ಆಗಿ ದೊರೆತ ವಿಶೇಷ ವಿಷಯಜ್ಞಾನ ಎಲ್ಲವೂ ಈಗ ಇಂಪೀರಿಯಲ್ ಕೆಮಿಕಲ್ಸ್ ಕಂಪೆನಿಗೆ ದೊರೆತಿದೆ.

" ಯುದ್ಧ ಸಾಮಗ್ರಿ ಒದಗಿಸುವುದರಲ್ಲಿ ನಾವು ಅದ್ಭುತ ಸಾಹಸ ಸಾಧಿಸಿದ್ದೇವೆ. ಭಾರತದ ಸಹಾಯದ ಪ್ರಾಮುಖ್ಯತೆ ಮತ್ತು ಬೆಲೆ ಅತ್ಯಧಿಕವಿದೆ. ಮೊದಲು ಆರು ತಿಂಗಳಲ್ಲಿ ನಮ್ಮ ಬೇಡಿಕೆಯ ಬೆಲೆ ಸುಮಾರು ೨೯ ಕೋಟಿ ರೂಪಾಯಿಗಳೂ ಅನಂತರ ೧೯೪೨ನೆಯ ಏಪ್ರಿಲ್‌ನಿಂದ ಅಕ್ಟೋಬರ್ ವರೆಗೆ ೧೩೭ ಕೋಟಿ ರೂಪಾಯಿಗಳೂ ಇತ್ತು. ೧೯೪೨ನೆಯ ಅಕ್ಟೋಬರ್‌ವರಗಿನ ಒಟ್ಟು ಬೆಲೆ ೪೨೮ ಕೋಟಿ ರೂಪಾಯಿ. ಇದರಲ್ಲಿ ಸಿಡಿಮದ್ದಿನ ಕಾರ್ಖಾನೆಗಳಲ್ಲಿ ನಡೆದ ಕೆಲಸದ ಬೆಲೆ ಸೇರಿಲ್ಲ. ಅದೂ ಅಪಾರವಿದೆ." ಎಂದು ೧೯೪೨ನೆ ಡಿಸೆಂಬರ್‌ನಲ್ಲಿ ಲಾರ್ಡ್ ಲಿನ್‌ಲಿತ್‌ಗೊ ಹೇಳಿದ. ಇದರಲ್ಲಿ ಎಳ್ಳಷ್ಟೂ ಸುಳ್ಳಿಲ್ಲ. ಅದರ ನಂತರ ಯುದ್ಧ ಸಲಕರಣೆಗಳ ಸರಬರಾಜಿಗಾಗಿ ಭಾರತವು ಮಾಡಿದ ಸಹಾಯ ಇನ್ನೂ ಇಮ್ಮಡಿಸಿದೆ. ಇದರಿಂದ ಹೆಚ್ಚು ಕೈಗಾರಿಕಾ ಪ್ರಗತಿಯಾಗಿರಬೇಕು ಅಥವ ವಸ್ತು ನಿರ್ಮಾಣ ಕಾರ್ಯ ಅಧಿಕಗೊಂಡಿರಬೇಕು ಎಂದು ಊಹೆ ಮಾಡಬಹುದು. ಆದರೆ ಆ ಊಹೆಗೆ ಯಾವ ಆಧಾರವೂ ಇಲ್ಲ. ೧೯೩೭ ರ ಕೈಗಾರಿಕೋತ್ಪತ್ತಿ ೧೦೦ ಎಂದು ಆಧಾರವಾಗಿ ಇಟ್ಟುಕೊಂಡರೆ ೧೯೩೮-೩೯ರಲ್ಲಿ ೧೧೧·೧; ೧೯೩೯-೪೦ರಲ್ಲಿ ೧೧೪·೦, ೧೯೪೦-೪೧ರಲ್ಲಿ ೧೧೬·೧ ರಿಂದ ೧೨೭; ೧೯೪೨ ನೇ ಮಾರ್ಚಿಯಲ್ಲಿ ೧೧೮·೯;

ಅದೇ ಏಪ್ರಿಲ್‌ನಲ್ಲಿ ೧೦೯·೨ ಕ್ಕೆ ಇಳಿಯಿತು; ಪುನಃ ಜುಲೈನಲ್ಲಿ ೧೧೬·೨ ಕ್ಕೆ ಏರಿತು. ಸಿಡಿಮದ್ದಿನ ಕೈಗಾರಿಕೆ ಮತ್ತು ರಾಸಾಯನಿಕ ಕೈಗಾರಿಕೆಗಳು ಇದರಲ್ಲಿ ಸೇರಿಲ್ಲವಾದ್ದರಿಂದ ಈ ಸಂಖ್ಯೆಗಳು ಅಷ್ಟು ಕರಾರುವಾಕ ಅಲ್ಲ. ಆದರೂ ಅದಕ್ಕೂ ಒಂದು ಬೆಲೆ ಮತ್ತು ಪ್ರಾಮುಖ್ಯತೆ ಇದೆ.

ಸಿಡಿಮದ್ದಿನ ಕಾರ್ಖಾನೆಯೊಂದು ಬಿಟ್ಟರೆ ೧೯೪೨ ನೆ ಜುಲೈನಲ್ಲಿ ಸಹ ಭಾರತದ ಕೈಗಾರಿಕಾ ಪ್ರಗತಿ ಯುದ್ಧಕ್ಕೆ ಪೂರ್ವ ಎಷ್ಟಿತ್ತೊ ಅಲ್ಲಿಂದ ಬಹಳ ಮುಂದುವರಿಯಲಿಲ್ಲ. ೧೯೪೨ನೆ ಜುಲೈನಲ್ಲಿ ಸ್ವಲ್ಪ ಉತ್ತಮಗೊಂಡು ೧೨೭ಕ್ಕೆ ಏರಿ ಪುನಃ ಕಡಮೆಯಾಯಿತು. ಆದರೂ ಕೈಗಾರಿಕೆಗಳಿಗೆ ಕೊಟ್ಟ ಸರಕಾರದ ಬೇಡಿಕೆಯ ಬೆಲೆ ಮಾತ್ರ ಏರುತ್ತಲೇ ಇತ್ತು. ೧೯೩೯–೪೦ರಲ್ಲಿ ಅಕ್ಟೋಬರ್‌ನಿಂದ ಮಾರ್ಚಿವರಗಿನ ಆರು ತಿಂಗಳಿನಲ್ಲಿ ಲಿನ್‌ಲಿತ್‌ಗೌ ಹೇಳಿಕೆಯಂತೆಯೇ ಅವುಗಳ ಬೆಲೆ ೨೯೦ ಕೋಟಿ ರೂಪಾಯಿ; ೧೯೪೨ರಲ್ಲಿ ಏಪ್ರಿಲ್‌ನಿಂದ ಅಕ್ಟೋಬರ್ ವರೆಗೆ ೧೩೭ ಕೋಟಿ ರೂಪಾಯಿ.

ಆದ್ದರಿಂದ ಈ ಎಲ್ಲ ದೊಡ್ಡ ಯುದ್ಧದ ಬೇಡಿಕೆಗಳನ್ನು ತೆಗೆದುಕೊಂಡರೆ ಕೈಗಾರಿಕೋತ್ಪತ್ತಿ ಹೆಚ್ಚಿತೆಂದಲ್ಲ; ಆದರೆ ಸಾಧಾರಣ ಉತ್ಪತ್ತಿಯನ್ನೆಲ್ಲ ಸಂಪೂರ್ಣ ಯುದ್ಧ ಸರಬರಾಜಿಗೆ ತಿರುಗಿಸಿದಂತೆ. ತಾತ್ಕಾಲಿಕವಾಗಿ ಯುದ್ಧದ ಅವಶ್ಯಕತೆ ಪೂರೈಸಿದರೂ ಸಾಮಾನ್ಯ ಜನರ ಅವಶ್ಯಕತೆಯ ಪೂರೈಕೆ ಬಹಳ ಹಿಂದೆ ಬಿತ್ತು. ಇದರಿಂದ ವಿಶೇಷ ಪರಿಣಾಮಗಳಾದವು. ಲಂಡನ್‌ನಲ್ಲಿ ಭಾರತದ ಪರವಾಗಿ ಸ್ಟರ್ಲಿಂಗ್ ಮೊತ್ತವು ಏರುತ್ತ ಬಂದಿತು; ಭಾರತದಲ್ಲಿ ಕೇವಲ ಸ್ವಲ್ಪ ಜನರ ಕೈಯಲ್ಲಿ ಹಣ ಸಂಗ್ರಹವಾಯಿತು; ಜನತೆಗೆ ಬೇಕಾದ ಜೀವನಾವಶ್ಯಕತೆಗಳು ದೊರೆಯದಾದವು; ಎಲ್ಲರ ಕೈಯಲ್ಲೂ ಕಾಗದದ ಹಣ ಮಾತ್ರ ಹೆಚ್ಚುತ್ತ ಬಂದಿತು; ಸಾಮಾನುಗಳ ಬೆಲೆ ಅತ್ಯಧಿಕವಾಯಿತು. ೧೯೪೨ರ ಮಧ್ಯದಲ್ಲಿಯೇ ಆಹಾರದ ಅಭಾವ ಆರಂಭವಾಯಿತು. ೧೯೪೩ನೆಯ ಚಳಿಗಾಲದಲ್ಲಿ ಬಂಗಾಲ ಮತ್ತು ಭಾರತದ ಇತರ ಕಡೆಗಳಲ್ಲಿ ಕ್ಷಾಮದಿಂದ ಕೋಟಿಗಟ್ಟಲೆ ಜನ ಸತ್ತರು. ಯುದ್ಧದ ಹೊರೆಯೂ, ಅದರ ಸಂಬಂಧದಲ್ಲಿ ಅಧಿಕಾರಿವರ್ಗ ಅನುಸರಿಸಿದ ನೀತಿಯೂ ಭಾರತದ ಅಶಕ್ತ ಜನಕೋಟಿಯ ಮೇಲೆ ಬಿದ್ದು ಲಕ್ಷಾಂತರ ಜನರು ಹೊಟ್ಟೆಗಿಲ್ಲದೆ ಹಸಿವಿನಿಂದ ಕ್ಷಯಿಸಲಾರಂಭಿಸಿದರು.

ನಾನು ಕೊಟ್ಟಿರುವ ಅಂಕಿ ಅಂಶಗಳು ೧೯೪೨ಕ್ಕೆ ಮುಗಿಯುತ್ತವೆ. ಈಚಿನವು ನನ್ನಲ್ಲಿ ಇಲ್ಲ. ಅಲ್ಲಿಂದೀಚೆಗೆ ಅನೇಕ ಬದಲಾವಣೆಗಳಾಗಿವೆ. ಪ್ರಾಯಶಃ ಭಾರತದ ಕೈಗಾರಿಕೋದ್ಯಮದ ಇಂಡೆಕ್ಸ್ ಸಂಖ್ಯೆ ಈಗ ಹೆಚ್ಚಿರಬಹುದು.* ಆದರೆ ಈ ಸಂಖ್ಯೆಗಳಿಂದ ದೊರೆಯುವ ಚಿತ್ರದಲ್ಲಿ ಸಹ ಮೂಲ ನಿಲುವಿನಲ್ಲಿ ಯಾವ ವ್ಯತ್ಯಾಸವೂ ಆಗಿಲ್ಲ. ಅದೇ ನೀತಿಯೇ ಈಗಲೂ ಅನುಷ್ಠಾನದಲ್ಲಿದೆ, ಒಂದರ ಮೇಲೊಂದು ಅದೇ ಸಮಸ್ಯೆಗಳೇ ಏಳುತ್ತಿವೆ; ತಾತ್ಕಾಲಿಕವಾಗಿ ಅದೇ ರೀತಿ ತೇಪೆ ತಿದ್ದುವ ಕೆಲಸ ನಡೆದಿದೆ; ಯಾವ ಒಂದು ಯೋಜನೆ ಅಥವ ಸಮಗ್ರ ದೃಷ್ಟಿ ಈಗಲೂ ಇಲ್ಲ; ಈಗಲೂ ಮುಂದೆಯೂ ಬ್ರಿಟಿಷ್ ಕೈಗಾರಿಕೆಗೆ ಅದೇ ಪಕ್ಷಪಾತ ದೊರೆಯುತ್ತಿದೆ. ಈ ಮಧ್ಯೆ ಜನರು ಆಹಾರವಿಲ್ಲದೆ ರೋಗೋಪದ್ರವಗಳಿಗೆ ತುತ್ತಾಗಿ ಹುಳುಗಳಂತೆ ಸಾಯುತ್ತಿದಾರೆ.

---

* ಅದು ಸರಿಯಲ್ಲ. ೧೯೪೪ನೆ ಮಾರ್ಚಿ ೯ ರ ಕಲ್ಕತ್ತ ಕ್ಯಾಪಿಟಲ್ ಪತ್ರಿಕೆಯ ಸಂಖ್ಯೆಗಳಂತೆ

| | | | | |
|---|---|---|---|---|
| (೧೯೩೫–೩೬—೧೦೦) | ೧೯೩೮–೩೯ | .... | .... | ೧೧೧.೧ |
| | ೩೯–೪೦ | .... | .... | ೧೧೪.೦ |
| | ೪೦–೪೧ | .... | .... | ೧೧೭·೩ |
| | ೪೧–೪೨ | .... | .... | ೧೨೨·೭ |
| | ೪೨–೪೩ | .... | .... | ೧೦೮·೮ |
| | ೪೩–೪೪ | .... | .... | ೧೦೮·೮ (ಅಂದಾಜು) |
| | ೪೪ನೆಯ ಜನವರಿ | | .... | ೧೧೧·೭ |

ಇದರಲ್ಲಿ ಶಸ್ತ್ರಗಳ ತಯಾರಿಕೆ ಸೇರಿಲ್ಲ. ಈ ರೀತಿ ನಾಲ್ಕು ವರ್ಷಗಳ ಯುದ್ಧದ ನಂತರ ಕೈಗಾರಿಕೋತ್ಪತ್ತಿ ಯುದ್ಧ ಪೂರ್ವಕ್ಕಿಂತ ಹಿಂದೆ ಬಿದ್ದಿದೆ.

ಈಗಿರುವ ಕೆಲವು ಕೈಗಾರಿಕೆಗಳು, ಮುಖ್ಯವಾಗಿ ಬಟ್ಟೆ ಗಿರಣಿಗಳು, ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಗಳು, ಸೆಣಬಿನ ಕೈಗಾರಿಕೆ ಬಹಳ ಅಭಿವೃದ್ಧಿ ಪಡೆದಿವೆ ನಿಜ. ಕೈಗಾರಿಕೋದ್ಯಮಿಗಳಲ್ಲಿ, ಯುದ್ಧ ಕಂಟ್ರಾಕ್ಟರುಗಳಲ್ಲಿ, ಕಳ್ಳಪೇಟೆಯ ಲಾಭ ಬಡಕರಲ್ಲಿ ಕೋಟ್ಯಧೀಶ್ವರರ ಸಂಖ್ಯೆ ಹೆಚ್ಚಿದೆ. ಹೆಚ್ಚಿನ ವರಮಾನ ತೆರಿಗೆ ವಿಧಿಸಿದ್ದರೂ ಭಾರತದಲ್ಲಿ ಮೇಲ್ಮಟ್ಟದ ಕೆಲವು ಜನರ ಕೈಯಲ್ಲಿ ಅಪಾರ ಹಣ ಸಂಗ್ರಹವಾಗಿದೆ. ಆದರೆ ಕೂಲಿಗಾರರ ಸ್ಥಿತಿ ಮಾತ್ರ ಸ್ವಲ್ಪವೂ ಉತ್ತಮಗೊಂಡಿಲ್ಲ. ಲೇಬರ್ ನಾಯಕರಾದ ಶ್ರೀ ಎನ್. ಎಮ್. ಜೋಶಿ ಕೂಲಿಗಾರರ ಪರಿಸ್ಥಿತಿ ಯುದ್ಧ ಕಾಲದಲ್ಲಿ ಇನ್ನೂ ಹದಗೆಟ್ಟಿದೆ ಎಂದರು. ಜಮೀನುದಾರರು, ಮಧ್ಯತರಗತಿಯ ವ್ಯವಸಾಯಗಾರರು ಮುಖ್ಯವಾಗಿ ಪಂಜಾಬ ಮತ್ತು ಸಿಂಧ ಪ್ರಾಂತ್ಯಗಳಲ್ಲಿ ಲಾಭ ಪಡೆದಿದ್ದಾರೆ. ಆದರೆ ವ್ಯವಸಾಯವನ್ನೇ ನಂಬಿರುವ ಬಡಜನಕೋಟಿಯು ಯುದ್ಧ ಪರಿಸ್ಥಿತಿಯಿಂದ ಪೆಟ್ಟುತಿಂದು ಬಹಳ ನಷ್ಟಹೊಂದಿದ್ದಾರೆ. ಹಣದ ಬೆಲೆಯ ಇಳಿತದಿಂದ ಮತ್ತು ಸಾಮಾನಿನ ಧಾರಣೆ ಏರುವಿಕೆಯಿಂದ ಕೊಳ್ಳುವವರಂತೂ ಕುಗ್ಗಿ ಹೋಗಿದ್ದಾರೆ.

೧೯೪೨ ರ ಮಧ್ಯಭಾಗದಲ್ಲಿ ಭಾರತದಲ್ಲಿ ಇರುವ ಕೈಗಾರಿಕೆಗಳನ್ನು ಪರೀಕ್ಷೆಮಾಡಿ ಯುದ್ಧಕಾರ್ಯಗಳಿಗಾಗಿ ಯಾವ ರೀತಿ ವಸ್ತು ನಿರ್ಮಾಣ ಹೆಚ್ಚಿಸಬೇಕೆಂದು ಸಲಹೆಮಾಡಲು ಅಮೆರಿಕೆಯ ಗ್ರೇಡಿ ಸಮಿತಿಯು ಭಾರತಕ್ಕೆ ಬಂದಿತು. ಅವರಿಗೆ ಬೇಕಾಗಿದ್ದುದು ಯುದ್ಧಕ್ಕೆ ಸಹಾಯವಾಗಲೆಂದು ಮಾತ್ರ. ಪ್ರಾಯಶಃ ಇಂಡಿಯಾ ಸರಕಾರಕ್ಕೆ ಒಪ್ಪಿಗೆ ಇಲ್ಲದೆ ಆ ಸಮಿತಿಯ ವರದಿ ಬೆಳಕಿಗೆ ಬರಲೇ ಇಲ್ಲ. ಅವರ ಕೆಲವು ಸಲಹೆಗಳೇನೋ ಬೆಳಕಿಗೆ ಬಂದವು. ಪವರ್ ಆಲ್ಕೋಹಾಲ್ ತಯಾರಿಕೆ, ಹೆಚ್ಚಿನ ಉಕ್ಕಿನ ತಯಾರಿಕೆ, ಹೆಚ್ಚು ವಿದ್ಯುಚ್ಛಕ್ತಿ ಉತ್ಪಾದನೆ, ಅಲ್ಯುಮಿನಿಯಮ್ ಮತ್ತು ಶುದ್ಧ ಗಂಧಕದ ಉತ್ಪಾದನೆ ಮತ್ತು ಬೇರೆ ಬೇರೆ ಕೈಗಾರಿಕೆಗಳನ್ನು ಉತ್ತಮಗೊಳಿಸುವುದು ಇವೇ ಕೆಲವು ಅವರ ಸಿಫಾರಸುಗಳು. ಅಮೆರಿಕದಂತೆ ಸರಕಾರದ ಅಧೀನ ಒಳಪಡದ ಪೂರ್ಣಾಧಿಕಾರದ ಸ್ವತಂತ್ರ ಸಂಸ್ಥೆಗಳು ವಸ್ತುನಿರ್ಮಾಣದ ಪ್ರಗತಿ ನೋಡಿಕೊಳ್ಳುತ್ತಿರಬೇಕೆಂದು ಸಹ ಸಲಹೆ ಮಾಡಿದರು. ಮಹಾ ಯುದ್ಧದ ಪರಿಸ್ಥಿತಿಯಿಂದ ಸಹ ಯಾವ ವ್ಯತ್ಯಾಸ ಹೊಂದದ, ಇಂಡಿಯ ಸರ್ಕಾರದ ಅನಿಶ್ಚಿತ, ನಿಧಾನ, ದಕ್ಷತೆಶೂನ್ಯ, ರೀತಿನೀತಿಗಳು ಪ್ರಾಯಶಃ ಗ್ರೇಡಿ ಸಮಿತಿಯವರಿಗೆ ಸರಿಬರಲಿಲ್ಲವೆಂದು ತೋರುತ್ತದೆ. ಪೂರ್ಣ ಭಾರತೀಯರಿಂದಲೇ ನಡೆಯುತ್ತಿದ್ದ ತಾತಾ ಉಕ್ಕಿನ ಕಾರ್ಖಾನೆಯ ದಕ್ಷತೆ ಕಂಡು ಮೆಚ್ಚಿದರು. ತಮ್ಮ ತಾತ್ಕಾಲಿಕ ವರದಿಯಲ್ಲಿ “ ಭಾರತೀಯ ಕೂಲಿಗಾರರ ಉತ್ತಮ ಕೆಲಸವನ್ನಾದರೂ ನಿರ್ವಹಿಸಬಲ್ಲ ಶಕ್ತಿ ಕಂಡು ಈ ಸಮಿತಿಗೆ ತೃಪ್ತಿಯಾಗಿದೆ: ಭಾರತೀಯರು ಕುಶಲಕರ್ಮಿಗಳು, ಕೆಲಸದ ಭದ್ರತೆ, ಉತ್ತಮ ತೃಪ್ತಿಕರ ಸನ್ನಿವೇಶ ಮಾತ್ರ ದೊರೆತರೆ ಅವರು ಉದ್ಯೋಗ ಕುಶಲರು ಮತ್ತು ನಂಬಿಕಸ್ಥರು ” ಎಂದು ಹೇಳಿದ್ದಾರೆ.*

ಕಳೆದ ಎರಡು ಮೂರು ವರ್ಷಗಳಲ್ಲಿ ರಾಸಾಯನಿಕ ಕೈಗಾರಿಕೆಯು ಭಾರತದಲ್ಲಿ ತುಂಬ ಪ್ರಗತಿ ಹೊಂದಿದೆ; ಹಡಗು ನಿರ್ಮಾಣ ಕಾರ್ಯವೂ ಮುಂದುವರಿದಿದೆ; ವಿಮಾನ ತಯಾರಿಕೆಯೂ ಶೈಶವಾವಸ್ಥೆಯಲ್ಲಿದೆ. ಯುದ್ಧಕಾಲದ ಎಲ್ಲ ಕೈಗಾರಿಕೆಗಳೂ—ಸೆಣಬು, ಮತ್ತು ಬಟ್ಟೆ ಗಿರಣಿಗಳು ಸಹ-ಹೆಚ್ಚಿನ ತೆರಿಗೆ ವಿಧಿಸಿದ್ದರೂ ಅಪಾರ ಲಾಭ ಸಂಪಾದಿಸಿವೆ. ಬೇಕಾದಷ್ಟು ಬಂಡವಾಳವೂ ಸಂಗ್ರಹವಾಗಿದೆ. ಹೊಸ ಕೈಗಾರಿಕೋದ್ಯಮಗಳಿಗೆ ಹೊಸ ಬಂಡವಾಳ ಎತ್ತಬಾರದೆಂದು ಸರಕಾರ ಬಂಡವಾಳ ಶೇಖರಣೆಗೆ ನಿರ್ಬಂಧ ಹಾಕಿತ್ತು. ಈಚೆಗೆ ಈ ನಿರ್ಬಂಧ ಸಡಿಲಿಸಿದ್ದರೂ ಯುದ್ಧ ಮುಗಿಯುವವರೆಗೆ ಏನೂ ಆಗಲಾರದು. ಈ ಸ್ವಲ್ಪ ಅವಕಾಶದಿಂದ ದೊಡ್ಡ ಕೈಗಾರಿಕೋದ್ಯಮಿಗಳಲ್ಲಿ ಕಾರ್ಯ ಚಟುವಟಿಕೆ ಹೆಚ್ಚಿ ದೊಡ್ಡ ಕೈಗಾರಿಕಾ ಯೋಜನೆಗಳು ರೂಪುಗೊಳ್ಳುತ್ತಿವೆ. ಕೈಗಾರಿಕಾ ಪ್ರಗತಿಗೆ ಅವಕಾಶವೇ ಇಲ್ಲದಿದ್ದ ಭಾರತ ಸಹ ದೊಡ್ಡ ಕೈಗಾರಿಕೋದ್ಯಮದ ಮುಂಬೆಳಗಿನಲ್ಲಿರುವಂತೆ ತೋರುತ್ತಿದೆ.

---

* ಗ್ರೇಡಿ ಸಮಿತಿಯ ವರದಿಯನ್ನು ಪ್ರಕಟಿಸದಿದ್ದುದಕ್ಕೆ ಮುಂಬೈ ನಗರದ ‘ ಕಾಮರ್ಸ್ ’ ಪತ್ರಿಕೆ ೧೯೪೨ನೇ ನವಂಬರ್ ೨೮ರಲ್ಲಿ—

“ ಈ ದೇಶದ ಕೈಗಾರಿಕಾ ಪ್ರಗತಿಗೆ ಅಡ್ಡಬರಬೇಕೆಂದು ಪಾಶ್ಚಾತ್ಯ ದೇಶಗಳ ಪ್ರಬಲ ಬಲಿಷ್ಠ ವಿದೇಶೀ ಬಂಡವಲಗಾರರು ವಿಶ್ವಪ್ರಯತ್ನ ಮಾಡುತ್ತಿದಾರೆಂಬುದನ್ನು ಮರೆಯಲಾಗದು. ಯುದ್ಧಾನಂತರದಲ್ಲಿ ಪಾಶ್ಚಾತ್ಯದೇಶಗಳಿಂದ ತಮಗೆ ಯಾವ ಪೈಪೋಟಿಯೂ ಇರಬಾರದೆಂದೇ ಅವರ ಉದ್ದೇಶ ” ಎಂದು ಹೇಳಿದೆ.

# ಅಧ್ಯಾಯ—೯

## ಕೊನೆಯ ಅಂಕ (೩)

### ಎರಡನೆಯ ಪ್ರಪಂಚ ಯುದ್ಧ ೧. ಕಾಂಗ್ರೆಸ್ಸಿಗೊಂದು ವಿದೇಶಾಂಗ ನೀತಿ.

ಭಾರತದ ಇತರ ಎಲ್ಲ ಸಂಸ್ಥೆಗಳಂತೆ ರಾಷ್ಟ್ರೀಯ ಮಹಾ ಸಭೆಯು ಸಹ ಬಹುಕಾಲ ಒಳನಾಡಿನ ಪ್ರಶ್ನೆಗಳಲ್ಲೇ ಮಗ್ನವಿದ್ದು ಅಂತರರಾಷ್ಟ್ರೀಯ ಸಮಸ್ಯೆಗಳಿಗೆ ಯಾವ ಗಮನವನ್ನೂ ಕೊಟ್ಟಿರಲಿಲ್ಲ. ೧೯೨೦ ರಿಂದ ಈಚಿನ ಹತ್ತು ವರ್ಷಗಳಲ್ಲಿ ವಿದೇಶ ಪ್ರಶ್ನೆಗಳಲ್ಲಿ ಕಾಂಗ್ರೆಸ್ ಸ್ವಲ್ಪ ಆಸಕ್ತಿ ವಹಿಸಿತು. ಸಣ್ಣ ಸಮಾಜವಾದಿ ಮತ್ತು ಸಮತಾವಾದಿ ಪಕ್ಷಗಳ ಹೊರತು ಬೇರಾವ ಪಕ್ಷಗಳಿಗೂ ಈ ಆಸಕ್ತಿ ಇರಲಿಲ್ಲ. ಮುಸ್ಲಿಂ ಸಂಸ್ಥೆಗಳಿಗೆ ಪ್ಯಾಲಸ್ಟೈನ್ ವಿಷಯದಲ್ಲಿ ಸ್ವಲ್ಪ ಆಸಕ್ತಿ ಇತ್ತು. ಅಲ್ಲಿನ ಮುಸ್ಲಿಂ ಅರಬರೊಂದಿಗೆ ಸಹಾನುಭೂತಿ ತೋರಲು ಆಗಿಂದಾಗ ಕೆಲವು ನಿರ್ಣಯ ಮಾಡುತ್ತಿದ್ದರು. ತುರ್ಕಿ, ಈಜಿಪ್ಟ್ ಮತ್ತು ಇರಾಣ ದೇಶಗಳ ಉತ್ಕಟ ರಾಷ್ಟ್ರೀಯ ಭಾವನೆಯನ್ನು ಸ್ವಲ್ಪ ಹೆದರಿಕೆಯಿಂದಲೇ ನೋಡುತ್ತಿದ್ದರು. ಏಕೆಂದರೆ ಅವುಗಳಲ್ಲಿ ಮತೀಯ ಭಾವನೆ ಇರಲಿಲ್ಲ. ಅವು ಮತಾತೀತ ಚಳವಳಿಗಾಗಿ ದೊಡ್ಡ ದೊಡ್ಡ ಸುಧಾರಣೆಗಳ ಗುರಿ ಇಟ್ಟುಕೊಂಡಿದ್ದವು. ಇದು ಸಂಪ್ರದಾಯ ಶರಣರಾದ ಭಾರತೀಯ ಮುಸ್ಲಿಮರಿಗೆ ಸರಿಬೀಳಲಿಲ್ಲ. ಎಲ್ಲಿಯೂ ರಾಜಕೀಯ ಮತ್ತು ಆರ್ಥಿಕ ಸಾಮ್ರಾಜ್ಯ ಅಧಿಕಾರ ಇರಬಾರದು, ಸಹಕಾರ ಭಾವನೆಯಿಂದ ಸ್ವತಂತ್ರ ರಾಷ್ಟ್ರಗಳು ಬಾಳಬೇಕು ಎಂಬ ಮೂಲತತ್ವಗಳು ಕಾಂಗ್ರೆಸ್ ವಿದೇಶಾಂಗ ನೀತಿಯ ತಳಹದಿಯಾಯಿತು. ಭಾರತದ ಸ್ವಾತಂತ್ರ್ಯದ ಬೇಡಿಕೆಗೆ ಇದು ಅನುಗುಣವಿತ್ತು. ೧೯೨೦ ರಲ್ಲಿ ವಿದೇಶಾಂಗ ನೀತಿಯ ಒಂದು ನಿರ್ಣಯದಲ್ಲಿ ಇತರ ಜನಾಂಗಗಳೊಡನೆ ಸಹಕಾರವೇ ನಮ್ಮ ನೀತಿ ಎಂದೂ, ನಮ್ಮ ನೆರೆಹೊರೆಯ ರಾಷ್ಟ್ರಗಳೊಂದಿಗೆ ಸ್ನೇಹದಿಂದ ಇರುವುದೇ ನಮ್ಮ ಅಭಿಲಾಷೆಯೆಂದೂ ಕಾಂಗ್ರೆಸ್ಸು ಸಾರಿತು. ಇನ್ನೊಂದು ದೊಡ್ಡ ಯುದ್ಧ ಒದಗುವ ಸಂಭವವನ್ನೂ ಯೋಚಿಸಿ ಎರಡನೆಯ ಪ್ರಪಂಚ ಯುದ್ಧ ಆರಂಭವಾಗುವ ಹನ್ನೆರಡು ವರ್ಷಗಳ ಮುಂಚೆಯೇ ೧೯೨೭ ರಲ್ಲಿ ಯುದ್ಧವೇ ಒದಗಿದರೆ ತನ್ನ ವಿದೇಶಾಂಗ ನೀತಿ ಏನೆಂದು ಕಾಂಗ್ರೆಸ್ ಸ್ಪಷ್ಟಸಾರಿತು.

ಅದು ಹಿಟ್ಲರ್ ಇನ್ನೂ ಅಧಿಕಾರಕ್ಕೆ ಬರುವ ಐದಾರು ವರ್ಷಗಳಿಗೆ ಮುಂಚೆ; ಜಪಾನ್ ಮಂಚೂರಿಯಾ ಆಕ್ರಮಿಸುವ ಮುಂಚೆ. ಮುಸ್ಸೊಲಿನಿ ಇಟಲಿಯಲ್ಲಿ ತನ್ನ ಅಧಿಕಾರ ಬಲಪಡಿಸಿಕೊಳ್ಳುತ್ತಲಿದ್ದರೂ ಪ್ರಪಂಚದ ಶಾಂತಿಗೆ ಕಂಟಕನೆಂಬ ಭಾವನೆಯು ಇನ್ನೂ ಬರುವ ಮುಂಚೆ. ಆಗ ಫ್ಯಾಸಿಸ್ಟ್ ಇಟಲಿಗೂ ಬ್ರಿಟನ್ನಿಗೂ ಸ್ನೇಹ ಬಾಂಧವ್ಯವಿತ್ತು. ಡ್ಯೂಕನನ್ನು ಕಂಡರೆ ಬ್ರಿಟಿಷ್ ರಾಜಕಾರಣಿಗಳು ಹೊಗಳುತ್ತಿದ್ದರು. ಯೂರೋಪಿನಲ್ಲಿ ಅನೇಕ ಸಣ್ಣ ಸಣ್ಣ ಸರ್ವಾಧಿಕಾರಿಗಳಿದ್ದರು. ಬ್ರಿಟನ್ನಿನೊಂದಿಗೆ ಅವರೆಲ್ಲರೂ ಸ್ನೇಹದಿಂದ ಇದ್ದರು. ಇಂಗ್ಲೆಂಡ್ ಮತ್ತು ಸೋವಿಯೆಟ್ ರಷ್ಯಗಳ ಸಂಬಂಧ ಮಾತ್ರ ಪೂರ್ಣ ಕಡಿದು ಹೋಗಿತ್ತು. ಆರ್ಕೊಸ್ ದಂಡಯಾತ್ರೆ ಮುಗಿದು ರಾಯಭಾರಿಗಳನ್ನು ಪರಸ್ಪರ ಹಿಂದಕ್ಕೆ ಕರೆಸಿಕೊಂಡಿದ್ದರು. ರಾಷ್ಟ್ರ ಸಂಘದಲ್ಲಿ, ಅಂತರ ರಾಷ್ಟ್ರೀಯ ಶ್ರಮಜೀವಿ ಸಂಘದ ಕಚೇರಿಯಲ್ಲಿ ಬ್ರಿಟಿಷ್ ಮತ್ತು ಫ್ರೆಂಚರ ನೀತಿಯು ಸ್ಪಷ್ಟ ಪ್ರತಿಗಾಮಿ ಸ್ವಭಾವ ತಾಳಿತು. ಶಸ್ತ್ರ ಸಂನ್ಯಾಸದ ಕೊನೆಗಾಣದ ಚರ್ಚೆಯಲ್ಲಿ ರಾಷ್ಟ್ರ ಸಂಘದ ಪ್ರತಿಯೊಂದು ರಾಷ್ಟ್ರವೂ—ಅಮೆರಿಕದ ಸಂಯುಕ್ತ ಸಂಸ್ಥಾನಗಳು ಸಹ ಸೇರಿ—ವಿಮಾನ ಮುತ್ತಿಗೆಯನ್ನು ಯಾರೂ ಮಾಡಬಾರದೆಂದು ಪೂರ್ಣ ನಿಷೇಧಿಸಲು ಸಿದ್ಧವಿದ್ದವು. ಆದರೆ ಬ್ರಿಟನ್ ಮಾತ್ರ ಕೆಲವು ತಿದ್ದುಪಡಿಗಳೊಂದಿಗೆ ಆ ನಿರ್ಣಯವನ್ನು ಒಪ್ಪಿತು. ಅನೇಕ ವರ್ಷಗಳಿಂದ ಬ್ರಿಟಿಷ್ ಸರಕಾರ ಪೊಲೀಸ್ ಕಾರ್ಯಗಳಿಗೆಂದು ಇರಾಕ್ ಮತ್ತು ವಾಯವ್ಯ ಪ್ರಾಂತದ ಹಳ್ಳಿಗಳು ಮತ್ತು ಪಟ್ಟಣಗಳ ಮೇಲೆ ಬಾಂಬು ಹಾಕುತ್ತಲಿತ್ತು. ಈ ಹಕ್ಕನ್ನು ಬಿಟ್ಟುಕೊಡಲು ಬ್ರಿಟನ್ ಸಿದ್ಧವಿರ

ಲಿಲ್ಲ. ಈ ರೀತಿ ರಾಷ್ಟ್ರ ಸಂಸ್ಥೆಯಲ್ಲಿ ಮತ್ತು ಶಸ್ತ್ರ ಸಂನ್ಯಾಸ ಸಮ್ಮೇಳನದಲ್ಲಿ ಸಾಮಾನ್ಯ ಒಪ್ಪಂದ ವಾಗದಂತೆ ಬ್ರಿಟನ್ ಅಡ್ಡ ಬಂದಿತು.

ವೀಮಾರ್ ಜನತಾರಾಜ್ಯ ಘಟನೆಯ ಜರ್ಮನಿಗೆ ರಾಷ್ಟ್ರ ಸಂಘದ ಪೂರ್ಣ ಸದಸ್ಯತ್ವ ದೊರಕಿತ್ತು. ಯುರೋಪಿನ ಅನಿರ್ಬಾಧಿತ ಶಾಂತಿ ಸ್ಥಾಪನೆಗೆ ಮತ್ತು ಬ್ರಿಟಿಷ್ ರಾಜನೀತಿ ನೈಪುಣ್ಯಕ್ಕೆ ಲೊಕಾರ್ನೊ ಒಂದು ಮುಂಚೂಣಿ ಎಂಬ ಶಹಬಾಸ್‌ಗಿರಿಯ ಸುರಿಮಳೆ ಸುರಿದಿತ್ತು. ರಷ್ಯವನ್ನು ಬಹಿಷ್ಕರಿಸಿ ಪ್ರತ್ಯೇಕಿಸಿ ಅದರ ವಿರುದ್ಧ ಯುರೋಪಿನಲ್ಲಿ ಒಂದು ಬಲವಾದ ಕೋಟೆ ಕಟ್ಟುವದೇ ಈ ಎಲ್ಲ ಘಟನೆಗಳ ಪರಿಣಾಮವಾಯಿತು. ರಷ್ಯ ಆಗತಾನೆ ತನ್ನ ಕ್ರಾಂತಿಯ ಹತ್ತನೆಯ ವಾರ್ಷಿಕೋತ್ಸವವನ್ನು ಆಚರಿಸಿ ತುರ್ಕಿ, ಇರಾಣ, ಆಫ್ಘಾನಿಸ್ತಾನ ಮತ್ತು ಮಂಗೋಲಿಯ ಮುಂತಾದ ಪೌರ್ವಾತ್ಯ ದೇಶಗಳೊಡನೆ ಸ್ನೇಹ ಬಾಂಧವ್ಯ ಬೆಳೆಸಿತ್ತು.

ಚೀನಾ ಕ್ರಾಂತಿಯೂ ಬಹಳ ಮುಂದುವರಿದು ರಾಷ್ಟ್ರೀಯ ಸೈನ್ಯಗಳು ಅರ್ಧ ಚೀಣ ಆಕ್ರಮಣ ಮಾಡಿದ್ದವು. ಬಂದರುಗಳಲ್ಲಿ ಮತ್ತು ದೇಶದ ಒಳಗೆ ಬ್ರಿಟಿಷ್ ಮತ್ತು ಇತರ ವಿದೇಶೀ ವ್ಯಾಪಾರಸ್ಥರೊಡನೆ ಘರ್ಷಣೆ ಆರಂಭವಾಗಿತ್ತು. ಆ ಮೇಲೆ ಅಂತಃಕಲಹಗಳು ಹುಟ್ಟಿ ಕೊಮಿಂಟಾಂಗ್ ಪಕ್ಷ ಒಡೆದು ಎರಡು ಪಂಗಡಗಳಾಗಿತ್ತು. ಯುರೋಪಿಯನ್ ರಾಷ್ಟ್ರಗಳು ಬ್ರಿಟನ್ ಮತ್ತು ಫ್ರಾನ್ಸಿನ ನಾಯಕತ್ವದಲ್ಲೂ, ಪೌರ್ವಾತ್ಯ ರಾಷ್ಟ್ರಗಳು ರಷ್ಯದ ನಾಯಕತ್ವದಲ್ಲೂ ಎರಡು ಗುಂಪುಗಳಾಗಿ ಪ್ರಪಂಚದ ಪರಿಸ್ಥಿತಿಯನ್ನು ಹದಗೆಡಿಸಿ ಯುದ್ಧಾಭಿಮುಖವಾಗಿ ಓಡುತ್ತಿರುವಂತೆ ಕಂಡಿತು. ಅಮೆರಿಕೆಯ ಸಂಯುಕ್ತ ಸಂಸ್ಥಾನಗಳು ಈ ಎರಡು ಗುಂಪುಗಳಿಂದಲೂ ದೂರ ನಿಂತಿತು. ಸಾಮ್ಯವಾದ ಅವರಿಗೆ ಸೇರದ ಕಾರಣ ರಷ್ಯದಿಂದ ದೂರ ನಿಂತರು. ಬ್ರಿಟಿಷ್ ನೀತಿಯಲ್ಲಿ ಅವರಿಗೆ ನಂಬಿಕೆ ಇರಲಿಲ್ಲ. ಬ್ರಿಟಿಷ್ ಬಂಡವಾಳ ಮತ್ತು ಕೈಗಾರಿಕೆಯೊಂದಿಗೆ ಅವರು ಪೈಪೋಟಿ ನಡೆಸಬೇಕಾಗಿತ್ತು. ಆದ್ದರಿಂದ ಬ್ರಿಟಿಷರಿಂದಲೂ ದೂರನಿಂತರು. ಅಲ್ಲದೆ ಯುರೋಪಿನ ಜಗಳಗಳಲ್ಲಿ ತಾವೇಕೆ ಪ್ರವೇಶಿಸಬೇಕೆಂಬ ಭಯವೂ ಮತ್ತು ತಮ್ಮಪಾಡಿಗೆ ತಾವು ಇದ್ದರಾಯಿತೆಂಬ ನೀತಿಯೂ ಇದಕ್ಕೆ ಕಾರಣವಾಯಿತು.

ಈ ಪರಿಸ್ಥಿತಿಯಲ್ಲಿ ಭಾರತೀಯರ ಅಭಿಪ್ರಾಯ ಸೋವಿಯಟ್ ರಷ್ಯ ಮತ್ತು ಪೌರ್ವಾತ್ಯ ದೇಶಗಳ ಕಡೆಗೆ ಒಲಿಯುವುದು ಅನಿವಾರ್ಯವಾಯಿತು. ಅನೇಕರ ಮನಸ್ಸು ಸಮಾಜವಾದದ ಕಡೆ ಒಲಿದರೂ ಬಹುಮತವು ಸಾಮ್ಯವಾದ ಒಪ್ಪಿತೆಂದಲ್ಲ. ಚೀನಾ ಕ್ರಾಂತಿಯ ವಿಜಯವು ಭಾರತದ ಸ್ವಾತಂತ್ರ್ಯೋದಯದ ಸಂಕೇತವೆಂದೂ ಏಷ್ಯದಲ್ಲಿ ಯುರೋಪಿಯನ್ ಆಕ್ರಮಣದ ಅವಸಾನದ ಸೂಚನೆ ಎಂದೂ ಅದನ್ನು ಉತ್ಸಾಹದಿಂದ ಸ್ವಾಗತಿಸಲಾಯಿತು. ಡಚ್ಚರ ಪೂರ್ವ ಇಂಡಿಯ, ಇಂಡೋ ಚೀನಾ, ಪಶ್ಚಿಮ ಏಷ್ಯದ ರಾಷ್ಟ್ರಗಳು, ಈಜಿಪ್ಟ್ ಮುಂತಾದ ದೇಶಗಳ ರಾಷ್ಟ್ರೀಯ ಚಳವಳಿಗಳಲ್ಲಿ ತುಂಬ ಆಸಕ್ತಿ ವಹಿಸಿದೆವು. ಬ್ರಿಟನ್ ಸಿಂಗಪುರವನ್ನು ನಾವಿಕಾಪಡೆಯ ಒಂದು ದೊಡ್ಡ ಮೂಲ ಕೇಂದ್ರ ಮಾಡಿದ್ದೂ, ಸಿಂಹಳದಲ್ಲಿ ಟ್ರಿಂಕೋಮಾಲೆ ಬಂದರು ಅಭಿವೃದ್ಧಿ ಪಡಿಸಿದ್ದೂ ಮುಂಬರುವ ಯುದ್ಧದಲ್ಲಿ ತನ್ನ ಸಾಮ್ರಾಜ್ಯವನ್ನೂ ಸಾಮ್ರಾಜ್ಯ ಶಕ್ತಿಯನ್ನೂ ಭದ್ರಪಡಿಸಿಕೊಂಡು ಸೋವಿಯೆಟ್ ರಷ್ಯವನ್ನೂ ಮತ್ತು ಬಲಗೊಳ್ಳುತ್ತಿದ್ದ ಪೌರ್ವಾತ್ಯ ದೇಶಗಳ ರ್‍ಯಾಷ್ಟ್ರೀಯ ಚಳವಳಿಗಳನ್ನೂ ಮುರಿಯಲು ಬ್ರಿಟನ್ ಮಾಡುತ್ತಿರುವ ಸನ್ನಾಹವೆಂದು ಕಂಡಿತು.

೧೯೨೭ ರಲ್ಲಿ ರಾಷ್ಟ್ರೀಯ ಮಹಾ ಸಭೆಯು ತನ್ನ ವಿದೇಶಾಂಗ ನೀತಿ ರೂಪಿಸಲು ಆರಂಭಿಸಿದ್ದು ಈ ಹಿನ್ನೆಲೆಯಲ್ಲಿ. ಭಾರತವು ಯಾವ ಸಾಮ್ರಾಜ್ಯದ ಯುದ್ಧದಲ್ಲೂ ಭಾಗವಹಿಸಲು ಸಾಧ್ಯವಿಲ್ಲವೆಂದೂ, ಭಾರತ ಜನತೆಯ ಅಭಿಮತ ಪಡೆಯದೆ ಯಾವ ಸಂವರ್ಭದಲ್ಲೂ ಯುದ್ಧಕ್ಕೆ ಸೇರುವಂತೆ ಭಾರತವನ್ನು ಬಲಾತ್ಕರಿಸಲಾಗದೆಂದೂ ಘೋಷಿಸಲಾಯಿತು. ಮುಂದಿನ ವರ್ಷಗಳಲ್ಲಿ ಇದೇ ಘೋಷಣೆಯನ್ನು ಮೇಲಿಂದ ಮೇಲೆ ಸಾರಿ ಅದರಂತೆ ಪ್ರಚಾರ ಮಾಡಿದೆವು. ಇದು ಕಾಂಗ್ರೆಸ್ಸಿನ ಮೂಲ ತತ್ವಗಳಲ್ಲಿ ಒಂದಾಗಿ ಕೊನೆಗೆ ಭಾರತದ ಸಾಮಾನ್ಯ ನೀತಿಯೂ ಆಯಿತು. ಯಾವ ಸಂಸ್ಥೆಯೂ, ವ್ಯಕ್ತಿಯೂ ಈ ನೀತಿಗೆ ವಿರೋಧ ವ್ಯಕ್ತಪಡಿಸಲಿಲ್ಲ.

ಈ ಮಧ್ಯೆ ಯೂರೋಪಿನಲ್ಲಿ ಪ್ರಚಂಡ ಬದಲಾವಣೆಗಳಾಗಿ ಹಿಟ್ಲರ್ ಅಧಿಕಾರಕ್ಕೆ ಬಂದು ನಾಜಿ ತತ್ವವು ಬಲಗೊಂಡಿತ್ತು. ಈ ಬದಲಾವಣೆಗಳನ್ನು ಕಂಡು ಕಾಂಗ್ರೆಸ್ ಅಸಮಾಧಾನಗೊಂಡು ತತ್ಕ್ಷಣವೇ ಅದನ್ನು ಖಂಡಿಸಿತು. ಹಿಟ್ಲರ್ ಮತ್ತು ಆತನ ನೀತಿ ಎಂದರೆ ಕಾಂಗ್ರೆಸ್ಸು ಪ್ರಬಲವಾಗಿ ವಿರೋಧಿಸುತ್ತಿದ್ದ ಸಾಮ್ರಾಜ್ಯವಾದ ಮತ್ತು ಜನಾಂಗದ್ವೇಷದ ಘನೀಭೂತ ಅಪರಾವತಾರವೆಂದು ಕಾಂಗ್ರೆಸ್ಸಿಗೆ ತೋರಿತು. ಚೀನಾಪರ ಸಹಾನುಭೂತಿ ಇದ್ದುದರಿಂದ ಜಪಾನರ ಮಂಚೂರಿಯಾ ಆಕ್ರಮಣವನ್ನು ಕಾಂಗ್ರೆಸ್ಸು ಪ್ರಬಲವಾಗಿ ವಿರೋಧಿಸಿ ಖಂಡಿಸಿತು. ಅಬಿಸೀನಿಯಾ, ಸ್ಪೇನ್, ಚೀಣ ಜಪಾನ್ ಯುದ್ಧ, ಜೆಕೊಸ್ಲೊವೇಕಿಯಾ ಮತ್ತು ಮ್ಯೂನಿಚ್ ಘಟನೆಗಳು ಕಾಂಗ್ರೆಸ್ಸಿನ ಈ ಮನೋಭಾವನೆಗೆ ಪುಷ್ಟಿ ಕೊಟ್ಟುದಲ್ಲದೆ, ಯುದ್ಧದ ಭಯವನ್ನೂ ಹೆಚ್ಚಿಸಿದವು.

ಆದರೆ ಮುಂಬರುವ ಈ ಯುದ್ಧವು ಹಿಟ್ಲರ್ ಅಧಿಕಾರಕ್ಕೆ ಬರುವ ಮುಂಚೆ ಯೋಚಿಸಿದ್ದ ಯುದ್ಧಕ್ಕಿಂತ ತೀರ ಭಿನ್ನವಿತ್ತು. ಆದರೂ ಬ್ರಿಟಿಷರ ನೀತಿ ಎಲ್ಲ ಫ್ಯಾಸಿಸ್ಟ್ ಮತ್ತು ನಾಜಿ ತತ್ವದ ಪರ ಇದ್ದುದರಿಂದ ಅದು ಏಕಾಏಕಿ ಸ್ವಾತಂತ್ರ್ಯ ಮತ್ತು ಪ್ರಜಾಪ್ರಭುತ್ವದ ಪರ ತಿರುಗುತ್ತದೆಂದು ನಂಬುವುದು ಸಹ ಕಷ್ಟವಿತ್ತು. ಇತರ ಸನ್ನಿವೇಶ ಏನೆ ಒದಗಲಿ ತನ್ನ ಸಾಮ್ರಾಜ್ಯ ದೃಷ್ಟಿ ಮತ್ತು ಸಾಮ್ರಾಜ್ಯ ಅಧಿಕಾರದ ಮೋಹ ಮಾತ್ರ ಬ್ರಿಟನ್ನು ಬಿಡುವಂತಿರಲಿಲ್ಲ ಮತ್ತು ಯಾವ ಯಾವ ನೀತಿಗೆ ರಷ್ಯದ ಬೆಂಬಲವಿತ್ತೊ ಅವೆಲ್ಲಕ್ಕೂ ಮೂಲ ವಿರೋಧವಿದ್ದೇ ಇತ್ತು. ಆದರೆ ಬ್ರಿಟಿಷರು ಹಿಟ್ಲರ್‌ನನ್ನೂ ಎಷ್ಟೇ ತೃಪ್ತಿ ಪಡಿಸಿದರೂ ಯೂರೋಪಿನ ಹಿಂದಿನ ಸಮತೂಕವನ್ನೆಲ್ಲ ತಲೆಕೆಳಗೆ ಮಾಡಿ ಯೂರೋಪಿನಲ್ಲಿ ಒಂದು ಪ್ರಬಲ ಶಕ್ತಿಯಾಗುತ್ತ ಬ್ರಿಟಿಷ್ ಸಾಮ್ರಾಜ್ಯದ ತಾಯಿ ಬೇರುಗಳಿಗೇ ಕೊಡಲಿ ಪೆಟ್ಟು ಕೊಡಲಾರಂಭಿಸಿದನು. ಜರ್ಮನಿಗೂ ಬ್ರಿಟನ್ನಿಗೂ ಯುದ್ಧ ಅನಿವಾರ್ಯವೆಂದು ತೋರಿತು. ಆ ಸನ್ನಿವೇಶ ಏನಾದರೂ ಒದಗಿದರೆ ನಮ್ಮ ನೀತಿ ಏನು ? ನಮ್ಮ ನೀತಿಯ ಎರಡೂ ತತ್ವಗಳನ್ನು ಪಾಲಿಸುವುದು ಹೇಗೆ ? ಬ್ರಿಟಿಷರ ಸಾಮ್ರಾಜ್ಯ ಶಕ್ತಿಯನ್ನು ವಿರೋಧಿಸುವುದೆ ? ಅಥವ ಫ್ಯಾಸಿಸ್ಟು ಮತ್ತು ನಾಜಿ ತತ್ವವನ್ನು ವಿರೋಧಿಸುವುದೇ ? ಆಗ ನಮ್ಮ ರಾಷ್ಟ್ರೀಯ ಮತ್ತು ಅಂತರ ರಾಷ್ಟ್ರೀಯ ಭಾವನೆಗಳಲ್ಲಿ ಮತ್ತು ಅವುಗಳಿಗೆ ಯಾವ ಸ್ಥಾನ ? ಅಂದಿನ ಪರಿಸ್ಥಿತಿಯಲ್ಲಿ ಒಂದು ನಿರ್ಧಾರಕ್ಕೆ ಬರುವುದು ನಮಗೆ ಬಹಳ ಕಷ್ಟ ಕೆಲಸವಾಯಿತು. ಆದರೆ ಬ್ರಿಟನ್ನು ಭಾರತದಲ್ಲಿ ತನ್ನ ಸಾಮ್ರಾಜ್ಯ ನೀತಿ ಬಿಟ್ಟು ಜನಾಭಿಪ್ರಾಯದಂತೆ ನಡೆಯುವುದಾಗಿ ಭರವಸೆಕೊಟ್ಟು ಒಂದು ಹೆಜ್ಜೆ ಮುಂದೆ ಬಂದಿದ್ದರೆ ನಮಗೆ ಯಾವ ಕಷ್ಟವೂ ಇರಲಿಲ್ಲ.

ರಾಷ್ಟ್ರೀಯ ಭಾವನೆಗೂ ಅಂತರ ರಾಷ್ಟ್ರೀಯ ಭಾವನೆಗೂ ಘರ್ಷಣೆಯಾಗಿದ್ದರೆ ರಾಷ್ಟ್ರೀಯ ಭಾವನೆಗೇ ಗೆಲವು ಖಂಡಿತ. ಎಲ್ಲ ದೇಶಗಳಲ್ಲಿ ಎಲ್ಲ ವಿಷಮ ಕಾಲಗಳಲ್ಲೂ ರಾಷ್ಟ್ರೀಯ ಭಾವನೆಗೇ ಬೆಂಬಲ. ಪರದಾಸ್ಯದಲ್ಲಿ ತೊಳಲುತ್ತ, ಅನೇಕ ವರ್ಷಗಳ ಹೋರಾಟದ ಸಂಕಟ ಮತ್ತು ನೋವಿನಿಂದ ನರಳುವ ದೇಶದಲ್ಲಂತೂ ಅದು ಯಾರಿಂದಲೂ ತಡೆಯಲಾಗದ ಅನಿವಾರ್ಯ. ಇಂಗ್ಲೆಂಡ್ ಮತ್ತು ಫ್ರಾನ್ಸ್ ಎರಡೂ ಸ್ಪೇನ್ ಜನತಾ ರಾಜ್ಯಕ್ಕೆ ದ್ರೋಹ ಮಾಡಿದ್ದವು; ಜೆಕೋಸ್ಲೋವಿಯವನ್ನು ನಡುನೀರಿನಲ್ಲಿ ಕೈ ಬಿಟ್ಟಿದ್ದವು. ತಮ್ಮ ರಾಷ್ಟ್ರೀಯ ಹಕ್ಕು ಬಾಧ್ಯತೆಗಳಿಗೆ ಧಕ್ಕೆ ಬಾರದಿರಲೆಂದು ಅಂತರ ರಾಷ್ಟ್ರೀಯ ನೀತಿಯನ್ನು ಬಲಿಕೊಟ್ಟಿದ್ದವು. ಆದರೆ ಅವರ ಆಶೆಗಳೆಲ್ಲ ಮಣ್ಣುಗೂಡಿ ಆಮೇಲೆ ತಮ್ಮ ದಾರಿ ತಪ್ಪೆಂದು ತಿಳಿಯಿತು. ಇಂಗ್ಲೆಂಡ್, ಫ್ರಾನ್ಸ್, ಮತ್ತು ಚೀಣಾ ದೇಶಗಳೊಂದಿಗೆ ಪೂರ್ಣ ಸಹಾನು ಭೂತಿ ಇದ್ದರೂ, ಮತ್ತು ನಾಜಿ ತತ್ವ, ಜಪಾನೀ ಸೈನ್ಯ ಮತ್ತು ಆಕ್ರಮಣ ನೀತಿಗೆ ಪೂರ್ಣ ವಿರೋಧವಿದ್ದರೂ ಅಮೆರಿಕೆಯ ಸಂಯುಕ್ತ ಸಂಸ್ಥಾನ ಯಾವ ಗೋಜಿಗೂ ಹೋಗದೆ ತನ್ನ ಪಾಡಿಗೆ ತಾನು ಇತ್ತು. ಪರ್ಲ್ ಹಾರ್ಬರ್ ಘಟನೆಯೇ ಅಮೆರಿಕೆಯ ಸಂಯುಕ್ತ ಸಂಸ್ಥಾನವನ್ನು ಯುದ್ಧಕ್ಕೆ ತಳ್ಳಿತು. ಅಂತರ ರಾಷ್ಟ್ರೀಯ ಭಾವನೆಯೇ ಮೂರ್ತಿವೆತ್ತಂತೆ ಇದ್ದ ರಷ್ಯ ಸಹ ಕೇವಲ ರಾಷ್ಟ್ರೀಯ ಭಾವನೆಯನ್ನೇ ತಾಳಿ ತನ್ನ ಸ್ನೇಹಿತರನ್ನು ಮತ್ತು ತನ್ನೊಂದಿಗೆ ಸಹಾನುಭೂತಿಯುಳ್ಳವರನ್ನು ವಿಸ್ಮಯಗೊಳಿಸಿತು. ಯಾವ ಮುಂಜಾಗ್ರತೆಗೂ ಅವಕಾಶ ಕೊಡದೆ ಏಕಾಏಕಿ ಜರ್ಮನ್ ಸೈನ್ಯಪಡೆಗಳು ರಷ್ಯದ ಮೇಲೆ ಧಾಳಿ ಮಾಡಿದಾಗಲೇ ಸೋವಿಯಟ್ ರಷ್ಯ

ಯುದ್ಧಕ್ಕೆ ಪ್ರವೇಶ ಮಾಡಿದ್ದು. ಸ್ಕಾಂಡಿನೇವಿಯ ದೇಶಗಳು, ಹಾಲೆಂಡ್ ಮತ್ತು ಬೆಲ್ಜಿಯಂ ಜೀವ ಸಹಿತ ಉಳಿದರೆ ಸಾಕೆಂದು ಯಾರ ಸೆಳೆತಕ್ಕೂ ಸಿಕ್ಕದೆ ಯುದ್ಧದಿಂದ ದೂರವಿರಲು ಪ್ರಯತ್ನಿಸಿ ಮೊದಲೇ ಯುದ್ಧದಲ್ಲಿ ಆಹುತಿಯಾದವು. ಕೇವಲ ರಾಷ್ಟ್ರೀಯ ಭಾವನೆಯ ದೃಷ್ಟಿಯಿಂದ ತುರ್ಕಿಯು ಕಳೆದ ಐದು ವರ್ಷಗಳಿಂದ ತಾಟಸ್ಥ್ಯ ನೀತಿಯ ಅಲಗಿನ ಮೇಲೆ ನಿಂತಿದೆ. ನೆಪಮಾತ್ರದ ಸ್ವಾತಂತ್ರ್ಯದಿಂದ ಈಜಿಪ್ಟ್ ಒಂದು ಅಧೀನ ರಾಷ್ಟ್ರವಾಗಿ ತಾನೇ ಒಂದು ದೊಡ್ಡ ಯುದ್ಧ ರಂಗವಾಗಿ ವಿಚಿತ್ರ ಪರಿಸ್ಥಿತಿಯಲ್ಲಿದೆ. ಸಂಯುಕ್ತ ಮಿತ್ರ ರಾಷ್ಟ್ರಗಳ ಶಸ್ತ್ರಸಜ್ಜಿತ ಸೈನ್ಯಗಳ ಅಧೀನದಲ್ಲಿ ಎಲ್ಲ ದೃಷ್ಟಿಯಿಂದ ದೊಡ್ಡ ಯುದ್ಧ ರಂಗವಾದರೂ ತತ್ವಶಃ ಅದು ಯುದ್ಧದಿಂದ ಹೊರಗೆ!

ಭಿನ್ನ ಭಿನ್ನ ಸರಕಾರಗಳು, ದೇಶಗಳು ಅನುಸರಿಸುತ್ತಿರುವ ಈ ಕಾರ್ಯನೀತಿಗೆ ಏನಾದರೂ ಸಮರ್ಥನೆ ಇರಬಹುದು ಅಥವ ಅವು ಕ್ಷಮಾರ್ಹ ಇರಬಹುದು. ತನ್ನ ಜನತೆಯನ್ನು ಸಿದ್ಧಗೊಳಿಸದೆ, ಅವರ ಸಹಾಯ ಪಡೆಯದೆ ಯುದ್ಧದಲ್ಲಿ ಧುಮುಕಲು ಯಾವ ಪ್ರಜಾಪ್ರಭುತ್ವಕ್ಕೂ ಸಾಧ್ಯವಿಲ್ಲ. ನಿರಂಕುಶ ಪ್ರಭುತ್ವಕ್ಕೆ ಸಹ ಪೂರ್ವ ಸಿದ್ಧತೆ ಬೇಕು. ಆದರೆ ಕಾರಣ ಏನೆ ಇರಲಿ ಯುದ್ಧ ಸಮಯದಲ್ಲಿ ರಾಷ್ಟ್ರೀಯ ಭಾವನೆಗೆ ಮಾತ್ರ ಮಹತ್ವ ದೊರೆಯುತ್ತದೆಯೇ ಹೊರತು ಇತರ ಭಾವನೆಗಳಿಗೆ ಅವಕಾಶವೇ ಇಲ್ಲ. ಅವುಗಳಿಗೆ ಅದುವರೆಗೆ ಇದ್ದ ಬೆಲೆಎಲ್ಲ ಕೊಚ್ಚಿ ಹೋಗುತ್ತದೆ. ಮ್ಯೂನಿಚ್ ಘಟನೆ ನಡೆದ ಒಡನೆ ಯುರೋಪಿನ ನೂರಾರು ಅಂತರ ರಾಷ್ಟ್ರೀಯ ಸಂಸ್ಥೆಗಳು, ಫ್ಯಾಸಿಸ್ಟ್ ವಿರೋಧಿ ಸಂಸ್ಥೆಗಳು ಬಾಲ ಮುದುರಿಕೊಂಡು ಶಕ್ತಿಗುಂದಿ, ತೆಪ್ಪಗಾದುದು ಒಂದು ಆಶ್ಚರ್ಯ. ವ್ಯಕ್ತಿಗಳಿಗೆ ಅಥವ ಸಣ್ಣ ಪುಟ್ಟ ಸಂಸ್ಥೆಗಳಿಗೆ ಅಂತರ ರಾಷ್ಟ್ರೀಯ ಭಾವನೆ ಸುಲಭ. ಒಂದು ಉನ್ನತ ಧ್ಯೇಯಕ್ಕಾಗಿ ತಮ್ಮ ಮತ್ತು ತಮ್ಮ ದೇಶದ ರಾಷ್ಟ್ರೀಯ ಹಿತವನ್ನು ತ್ಯಾಗಮಾಡಲು ಸಿದ್ಧವಿರಬಹುದು; ಆದರೆ ಅದು ರಾಷ್ಟ್ರಗಳಿಂದ ಸಾಧ್ಯವಿಲ್ಲ. ಅಂತರ ರಾಷ್ಟ್ರೀಯ ಪ್ರಶ್ನೆಗಳು ರಾಷ್ಟ್ರೀಯ ಪ್ರಶ್ನೆಗಳೊಂದಿಗೆ ಹೊಂದಿಕೊಂಡಾಗ ಮಾತ್ರ ಅಂತರ ರಾಷ್ಟ್ರೀಯ ಭಾವನೆಯಲ್ಲಿ ಸ್ವಲ್ಪ ಆಸಕ್ತಿ ಹುಟ್ಟುತ್ತದೆ. ಈಗ ಕೆಲವು ದಿನಗಳ ಹಿಂದೆ ಲಂಡನ್ "ಎಕಾನಮಿಸ್ಟ್" ಪತ್ರಿಕೆಯು ಬ್ರಿಟಿಷ್ ವಿದೇಶಾಂಗ ನೀತಿ ಚರ್ಚೆಮಾಡುತ್ತ ರಾಷ್ಟ್ರೀಯ ಹಿತಕ್ಕೆ ಪೂರ್ಣ ರಕ್ಷಣೆ ಮತ್ತು ಮನ್ನಣೆ ಕೊಡುವ ವಿದೇಶಾಂಗ ನೀತಿ ಮಾತ್ರ ನಿರಾತಂಕ ಮುಂದುವರಿಯಲು ಸಾಧ್ಯ. ತನ್ನ ರಾಷ್ಟ್ರೀಯ ಹಿತಕ್ಕಿಂತ ಅಂತರ ರಾಷ್ಟ್ರೀಯ ಹಿತಕ್ಕೆ ಯಾವ ರಾಷ್ಟ್ರವೂ ಹೆಚ್ಚಿನ ಬೆಲೆಕೊಡಲು ಸಿದ್ಧವಿಲ್ಲ. ಎರಡರ ಹಿತವೂ ಒಂದೇ ಆದಾಗ ಮಾತ್ರ ಅಂತರ ರಾಷ್ಟ್ರೀಯ ಭಾವನೆ ಪರಿಣಾಮಕಾರಿಯಾಗಬಹುದು" ಎಂದು ಹೇಳಿದೆ.

ಸ್ವತಂತ್ರ ರಾಷ್ಟ್ರದಲ್ಲಿ ಮಾತ್ರ ಅಂತರ ರಾಷ್ಟ್ರೀಯ ಭಾವನೆ ಬೆಳೆಯಲು ಸಾಧ್ಯ. ಪರದಾಸ್ಯದಲ್ಲಿರುವ ರಾಷ್ಟ್ರದ ಯೋಚನೆ ಮತ್ತು ಶಕ್ತಿ ಎಲ್ಲವೂ ತನ್ನ ಬಿಡುಗಡೆಯ ಕಡೆಗೆ. ಗುಲಾಮಗಿರಿ ಎಂದರೆ ದೇಹಕ್ಕೆ ಕುಷ್ಟರೋಗ ಒದಗಿದಂತೆ. ಇತರ ಅಂಗಾಂಗಗಳನ್ನು ನವೆಸುವುದರ ಜೊತೆಗೆ ಮನಸ್ಸನ್ನೂ ಸದಾ ಕೊರೆಯುತ್ತದೆ; ಎಲ್ಲ ಭಾವನೆ ಮತ್ತು ಕಾರ್ಯಕ್ಕೂ ಬೇರೊಂದು ಬಣ್ಣ ಕೊಡುತ್ತದೆ; ಹೆಜ್ಜೆ ಹೆಜ್ಜೆಗೂ ಹೋರಾಟ; ಎಲ್ಲ ದೃಷ್ಟಿಯೂ ಆ ಪೋರಾಟದ ಮೇಲೆ; ಉಳಿದ ಯಾವ ದೊಡ್ಡ ವಿಷಯಗಳಿಗೂ ಅವಕಾಶವೇ ಇಲ್ಲ; ವ್ಯಕ್ತಿಯ ಮತ್ತು ರಾಷ್ಟ್ರದ ಮನಸ್ಸಿನಲ್ಲಿ ಕಳೆದ ಹೋರಾಟದ ಮತ್ತು ಅನುಭವಿಸಿದ ಸಂಕಟಗಳ ಇತಿಹಾಸವೇ ಸದಾ ಮೂಡಿರುತ್ತದೆ; ಅದೇ ಒಂದು ಭಾವೋದ್ರೇಕವಾಗುತ್ತದೆ; ಹುಚ್ಚಾಗುತ್ತದೆ. ಮೂಲಕಾರಣ ನಿವಾರಣೆಯಾಗುವವರೆಗೆ ಆ ಹುಚ್ಚು ಇಳಿಯುವುದಿಲ್ಲ. ಆಗಲೂ ಸಹ, ದಾಸ್ಯದಿಂದ ವಿಮುಕ್ತರಾದೆವೆಂದಾಗಲೂ ದೇಹಾಲಸ್ಯಕ್ಕಿಂತ ಮನೋರೋಗ ಗುಣವಾಗುವುದು ತುಂಬ ನಿಧಾನ; ಅದ್ದರಿಂದ ಮನಸ್ಸು ತಿಳಿಯಾಗಲು ಬಹಳ ಕಾಲ ಬೇಕಾಗುತ್ತದೆ.

ಭಾರತದಲ್ಲಿ ಈ ಹಿನ್ನೆಲೆಯು ಬಹಳ ಕಾಲದಿಂದ ಇತ್ತು. ಆದರೂ ಗಾಂಧೀಜಿ ಭಾರತದ ರಾಷ್ಟ್ರೀಯ ಚಳವಳಿಗೆ ಒಂದು ಹೊಸ ಸ್ವರೂಪಕೊಟ್ಟು ಅದರ ನಿರಾಶಾಭಾವನೆಯನ್ನೂ ಕಹಿಯನ್ನೂ ಬಹಳ ಮಟ್ಟಿಗೆ ಕಡಿಮೆಮಾಡಿದರು. ಆ ನಿರಾಶಾಭಾವನೆಗಳು ಇದ್ದೇ ಇದ್ದವು; ಆದರೂ ದ್ವೇಷರಹಿತ ರಾಷ್ಟ್ರೀಯ

ಚಳುವಳಿಯನ್ನು ಬೇರೆ ಎಲ್ಲಿಯೂ ನಾನು ಕಂಡಿಲ್ಲ. ಗಾಂಧೀಜಿ ಪೂರ್ಣ ರಾಷ್ಟ್ರೀಯವಾದಿ. ಆದರೂ ತಮ್ಮ ಸಂದೇಶ ಭಾರತಕ್ಕೆ ಮಾತ್ರವಲ್ಲದೆ ಇಡೀ ಪ್ರಪಂಚಕ್ಕೆಂದು ತಿಳಿದಿದ್ದರು; ಪ್ರಪಂಚ ಶಾಂತಿಗಾಗಿ ಸದಾ ಕಾತುರರಿದ್ದರು. ಆದ್ದರಿಂದ ಅವರ ರಾಷ್ಟ್ರೀಯ ಭಾವನೆಗೆ ಪ್ರಪಂಚ ಹಿತದ ದೃಷ್ಟಿ ಇತ್ತು; ಆದ್ದರಿಂದ ಅದರಲ್ಲಿ ಯಾವ ದೌರ್ಜನ್ಯಭಾವನೆಯೂ ಇರಲಿಲ್ಲ. ಭಾರತದ ಸ್ವಾತಂತ್ರ್ಯ ಬಯಸುತ್ತಿರುವಾಗಲೇ, ಅದು ಎಷ್ಟೇ ದೂರವಿರಲಿ ಪ್ರಪಂಚಕ್ಕೆಲ್ಲ ಎಲ್ಲ ಸ್ವತಂತ್ರ ರಾಷ್ಟ್ರಗಳನ್ನೊಳಗೊಂಡ ಸಂಯುಕ್ತ ರಾಜ್ಯ ವಿಧಾನ ಬಂದರೇನೆ ಪ್ರಪಂಚದ ಶಾಂತಿ ಎಂದು ನಂಬಿದ್ದರು. ನನ್ನ ರಾಷ್ಟ್ರೀಯ ಭಾವನೆ ಎಂದರೆ ನನ್ನ ದೇಶ ಸ್ವತಂತ್ರವಾಗಲೆಂದು; ಮಾನವ ಕುಲದ ಉದ್ಧಾರಕ್ಕೆ ಅವಶ್ಯಕಂಡರೆ ಭಾರತೀಯರೆಲ್ಲ ನಾಶ ಹೊಂದಿದರೂ ಹೊಂದಲೆಂದು; ಇಲ್ಲಿ ಯಾವ ಜನಾಂಗ ದ್ವೇಷಕ್ಕೂ ಎಡೆ ಇಲ್ಲ. ಇದೇ ನಮ್ಮ ರಾಷ್ಟ್ರೀಯ ಭಾವನೆಯಾಗಿರಲಿ" ಎಂದು ಹೇಳಿದ್ದರು. "ಇಡೀ ಪ್ರಪಂಚದ ದೃಷ್ಟಿಯಿಂದ ನೋಡಬೇಕೆಂದೇ ನನ್ನ ಉದ್ದೇಶ. ನನ್ನ ದೇಶವಾತ್ಸಲ್ಯದಲ್ಲಿ ಮಾನವ ಕುಲ ಅಡಗಿದೆ. ಆದ್ದರಿಂದ ಭಾರತದ ಸೇವೆ ಎಂದರೆ ಮಾನವ ಕುಲದ ಸೇವೆ. ಪ್ರಪಂಚದ ರಾಷ್ಟ್ರಗಳ ಗುರಿಯು ಪ್ರತ್ಯೇಕ ಮನೋಭಾವದ ಸ್ವಾತಂತ್ರ್ಯವಾಗಿ ಇರಕೂಡದು. ಸ್ವಯಂಪ್ರೇರಿತ ಪರಸ್ಪರಾವಲಂಬನೆಯೇ ಗುರಿಯಾಗಬೇಕು. ಪ್ರಪಂಚದ ಇಂದಿನ ಉನ್ನತ ಭಾವನೆಯು ಒಂದಕ್ಕೊಂದು ಕಾದಾಡುವ ಪೂರ್ಣ ಸ್ವತಂತ್ರ ರಾಷ್ಟ್ರಗಳು ಇರಬೇಕೆಂದಲ್ಲ; ಆದರೆ ಸ್ನೇಹ ಭಾವನೆಯಿಂದ ಪರಸ್ಪರ ಅವಲಂಬನೆಯಿಂದ ಬಾಳುವ ಸ್ವತಂತ್ರ ರಾಷ್ಟ್ರಗಳ ಸಂಯುಕ್ತ ಆಡಳಿತವಾಗಲೆಂದು; ಈ ಆಸೆ ಫಲಿಸಲು ಬಹುಕಾಲ ಹಿಡಿಯಬಹುದು. ನನ್ನ ದೇಶಕ್ಕಾಗಿ ಯಾವ ಮಹತ್ವದ ಬೇಡಿಕೆಯನ್ನೂ ನಾನು ಕೇಳುತ್ತಿಲ್ಲ. ಪ್ರತ್ಯೇಕ ಮನೋಭಾವನೆಯ ಸ್ವಾತಂತ್ರ್ಯಕ್ಕೆ ಪ್ರತಿಯಾಗಿ ಪ್ರಪಂಚದಲ್ಲಿ ಪರಸ್ಪರ ಅವಲಂಬನೆಗೆ ನಾವು ಸಿದ್ಧರಿದ್ದೇವೆ ಎಂದು ಹೇಳುವುದರಲ್ಲಿ ಅಸಾಧ್ಯ ಅಥವ ಅತಿ ಮಹತ್ವದ ಬೇರೆ ಯಾವುದೂ ನನಗೆ ಕಾಣುವುದಿಲ್ಲ. ಇತರರ ಎದುರು ನನ್ನ ಸ್ವಾತಂತ್ರ್ಯ ಮೆರೆಸುವುದಕ್ಕಿಂತ ಪೂರ್ಣ ಸ್ವತಂತ್ರನಾಗಲು ಶಕ್ತಿಯಿದ್ದರೆ ನನಗೆ ಸಾಕು" ಎಂದು ಹೇಳಿದರು.

ರಾಷ್ಟ್ರೀಯ ಆಂದೋಲನದ ಶಕ್ತಿಯೂ, ನಮ್ಮ ಆತ್ಮವಿಶ್ವಾಸವೂ ಬೆಳೆದಂತೆ ಅನೇಕರು ಸ್ವತಂತ್ರ ಭಾರತದ ಸ್ವರೂಪ, ಕಾರ್ಯನೀತಿ, ವಿದೇಶಾಂಗ ನೀತಿ ಇವುಗಳ ವಿಷಯ ಯೋಚಿಸಲಾರಂಭಿಸಿದರು. ಭಾರತದ ದೇಶ ವೈಶಾಲ್ಯ, ಅದರ ಅದ್ಭುತ ಅಂತಶ್ಶಕ್ತಿ, ಅಪಾರ ಪ್ರಕೃತಿ ಸಂಪತ್ತುಗಳೇ ಆ ದೊಡ್ಡ ಯೋಚನೆಗಳ ಕಡೆ ಅವರ ಮನಸ್ಸನ್ನು ತಿರುಗಿಸಿದವು. ಯಾವ ಒಂದು ದೇಶ ಅಥವ ರಾಷ್ಟ್ರಗಳ ಗುಂಪಿನ ಬಾಲ ಬಡಿದಿರಲೂ ಭಾರತಕ್ಕೆ ಸಾಧ್ಯವಿರಲಿಲ್ಲ. ಆದ್ದರಿಂದ ಇಂಗ್ಲೆಂಡ್ ಮತ್ತು ಅದರ ಸಾಮ್ರಾಜ್ಯದ ಸಂಬಂಧ ಕಡಿದುಕೊಂಡು ಪೂರ್ಣ ಸ್ವಾತಂತ್ರ್ಯದ ಗುರಿ ಸಾಧಿಸುವುದು ಅನಿವಾರ್ಯವಾಯಿತು. ಭಾರತದ ಸ್ವಾತಂತ್ರ್ಯವೂ, ಪ್ರಗತಿಯೂ ಏಷ್ಯದಲ್ಲಿ ಮತ್ತು ಇಡೀ ಪ್ರಪಂಚದಲ್ಲಿ ಮಹತ್ಪರಿಣಾಮಕಾರಕ ಸಂಗತಿಗಳಾದವು. ಸ್ವಾತಂತ್ರ್ಯಕ್ಕೆ ಸಮಾನವಾದ ಡೊಮಿನಿಯನ್ ಸ್ಟೇಟಸ್ ಸಹ ಅರ್ಥರಹಿತ ಬಂಧನವೆಂದೂ ಪೂರ್ಣ ಪ್ರಗತಿಗೆ ಆತಂಕವೆಂದೂ ತೋರಿತು. ಡೊಮಿನಿಯನ್ ಸ್ಟೇಟಸ್‌ನ ಹಿಂದೆ ಇಂಗ್ಲೆಂಡ್ ಹಿರಿಯ ತಾಯಿ, ಉಳಿದ ಡೊಮಿನಿಯನ್‌ಗಳೆಲ್ಲ ಅದರ ಮಕ್ಕಳು; ತಾಯಿ ಮಕ್ಕಳಂತೆ ಒಂದೇ ಸಂಸ್ಕೃತಿಯ ಸಂಬಂಧವಿದೆ ಎಂಬ ಭಾವನೆಯು ಭಾರತಕ್ಕೆ ಎಷ್ಟರಮಟ್ಟಿಗೂ ಅನ್ವಯಿಸುವಂತೆ ಇರಲಿಲ್ಲ. ಅದರ ಫಲವಾಗಿ ದೊರೆಯುವ ಹೆಚ್ಚಿನ ಅಂತರರಾಷ್ಟ್ರೀಯ ಸಹಕಾರ ಎಷ್ಟೇ ಅಪೇಕ್ಷಣೀಯವಾದರೂ ಸಾಮ್ರಾಜ್ಯ ಅಥವ ಕಾಮನ್‌ವೆಲ್ತ್‌ನ ಹೊರಗಿನ ರಾಷ್ಟ್ರಗಳೊಂದಿಗೆ ಅಷ್ಟರಮಟ್ಟಿನ ಸಹಕಾರವಿಲ್ಲವೆಂದೇ ಅದರ ಅರ್ಥ. ಆದ್ದರಿಂದ ಅದು ನಮಗೆ ಒಂದು ದೊಡ್ಡ ತೊಂದರೆ ಎಂದು ತೋರಿತು. ನಮ್ಮ ಭಾವನೆಗಳೆಲ್ಲ ಯಾವ ಮಿತಿಯೂ ಇಲ್ಲದ ವಿಶಾಲ ವಿಶ್ವ ಸಹಕಾರದ ಕಡೆ ಒಲಿದಿದ್ದವು. ಅದರಲ್ಲೂ ನಮ್ಮ ಪೂರ್ವ ಮತ್ತು ಪಶ್ಚಿಮ ಗಡಿಗಳ ನೆರೆಯ ರಾಷ್ಟ್ರಗಳೊಂದಿಗೆ ಚೀಣ, ಅಫ್ಘಾನಿಸ್ತಾನ, ಇರಾಣ ಮತ್ತು ಸೋವಿಯಟ್ ಯೂನಿಯನ್‌ಗಳೊಂದಿಗೆ ಸ್ನೇಹದಿಂದ ಇರಲು ಬಯಸಿದೆವು. ದೂರದ ಅಮೆರಿಕೆಯೊಂದಿಗೂ ಸ್ನೇಹದಿಂದಿರಬೇಕೆಂದೆವು. ಅಮೆರಿಕ ಮತ್ತು ರಷ್ಯಾದಿಂದ ನಾವು ಕಲಿಯಬೇಕಾದ್ದು ಇನ್ನು ಏನೂ ಇಲ್ಲವೆಂಬ ಭಾವನೆ ನಮ್ಮಲ್ಲಿ ಬೆಳೆದಿತ್ತು. ಉಪ

ಯೋಗ ದೊರೆಯಬೇಕಾದರೆ ದಾಸ್ಯದ ಕಟ್ಟು ಕಳಚಿ, ಸ್ವಾತಂತ್ರ್ಯ ಪಡೆದು ಸಮಾನರಾಗಿ ಕಲೆತಾಗ ಮಾತ್ರ ಅದು ಸಾಧ್ಯವೆನಿಸಿತು.

ಕೆಲವು ಬ್ರಿಟಿಷ್ ಡೊಮಿನಿಯನ್‌ಗಳಲ್ಲಿ ಮತ್ತು ಕಾಲೊನಿಗಳಲ್ಲಿ ಇದ್ದ ವರ್ಣಭೇದ ಭಾರತೀಯರಿಗೆ ಕೊಡುತ್ತಿದ್ದ ತೊಂದರೆಗಳೇ ಆ ಗುಂಪಿನಿಂದ ಹೊರಬೀಳಬೇಕೆಂದು ನಮ್ಮನ್ನು ಪ್ರೇರಿಸಿತು. ಅದರಲ್ಲೂ ದಕ್ಷಿಣ ಆಫ್ರಿಕ ಯಾವಾಗಲೂ ನಮಗೊಂದು ಹುಣ್ಣಾಯಿತು. ಪೂರ್ವ ಆಫ್ರಿಕ ಮತ್ತು ಕೆನ್ಯಾ ಬ್ರಿಟನ್ನಿನ ಅಧೀನ ರಾಷ್ಟ್ರಗಳಾಗಿದ್ದವು. ಕೆನಡ, ಆಸ್ಟ್ರೇಲಿಯ, ನ್ಯೂಜಿಲೆಂಡ್ ಜನರೊಡನೆ ನಮ್ಮ ವ್ಯಕ್ತಿ ಸಂಬಂಧ ಹಿತವಾಗಿಯೇ ಇತ್ತು. ಬ್ರಿಟಿಷರ ದುರಹಂಕಾರ ಮತ್ತು ಸಂಕುಚಿತ ಸಾಮಾಜಿಕ ನೀತಿ ಈ ಹೊಸ ಜನರಲ್ಲಿ ಇರಲಿಲ್ಲ.

ಭಾರತದ ಸ್ವಾತಂತ್ರ್ಯದ ವಿಷಯ ಪ್ರಸ್ತಾಪಿಸುವಾಗ ನಮ್ಮಲ್ಲಿ ಯಾವ ಪ್ರತ್ಯೇಕ ಮನೋಭಾವನೆಯೂ ಇರಲಿಲ್ಲ. ಹಿಂದಿನ ಯುಗದ ರಾಷ್ಟ್ರೀಯ ಸ್ವಾತಂತ್ರ್ಯ ಮುಂದೆ ಸಾಧ್ಯವಿಲ್ಲ ಎಂದು ಇತರರನೇಕರಿಗಿಂತ ಮೊದಲೇ ನಾವು ಅರಿತಿದ್ದೆವು. ಪರಸ್ಪರ ಸಹಕಾರದ ನೂತನ ಯುಗದ ಅವಶ್ಯಕತೆಯನ್ನೂ ಅರಿತಿದ್ದೆವು. ಇತರ ರಾಷ್ಟ್ರಗಳಂತೆ ಯಾವುದಾದರೂ ಒಂದು ಅಂತರರಾಷ್ಟ್ರೀಯ ಚೌಕಟ್ಟಿನೊಳಗೆ ನಮ್ಮ ಸ್ವಾತಂತ್ರ್ಯವನ್ನೂ ಮಿತಿಗೊಳಿಸಲು ನಾವು ಸದಾ ಸಿದ್ಧರಿರುವುದಾಗಿ ಪದೇ ಪದೇ ಸ್ಪಷ್ಟಪಡಿಸಿದೆವು. ಆ ಚೌಕಟ್ಟು ಇಡೀ ಪ್ರಪಂಚದ್ದಾದರೆ ಉತ್ತಮ, ಆದರೆ ಎಷ್ಟು ಹೆಚ್ಚಿನ ಭಾಗವಾದರೆ ಅಷ್ಟು ಉತ್ತಮ. ಅಥವ ಪ್ರಾದೇಶಿಕವಾದರೂ ಆಗಬಹುದು ಎಂದು ಭಾವಿಸಿದೆವು. ಬ್ರಿಟಿಷ್ ಕಾಮನ್‌ವೆಲ್ತ್ ಈ ಯಾವ ಚೌಕಟ್ಟಿನೊಳಗೂ ಬರುವಂತೆ ಇರಲಿಲ್ಲ, ಪ್ರಪಂಚದ ದೊಡ್ಡ ಚೌಕಟ್ಟಿನಲ್ಲಿ ಅದೂ ಒಂದು ಭಾಗವಾಗಲು ಮಾತ್ರ ಸಾಧ್ಯವಿತ್ತು.

ಉಗ್ರ ರಾಷ್ಟ್ರವಾದಿಗಳಾದರೂ ನಮಗೆ ಇಷ್ಟು ಅಂತರರಾಷ್ಟ್ರೀಯ ದೃಷ್ಟಿ ಬಂದುದೇ ಒಂದು ಆಶ್ಚರ್ಯ. ಪರದಾಸ್ಯದಲ್ಲಿನ ಯಾವ ದೇಶದ ರಾಷ್ಟ್ರೀಯ ಚಳವಳಿಗೂ ನಮ್ಮ ಹತ್ತಿರ ಸುಳಿಯಲು ಸಹ ಸಾಧ್ಯವಿಲ್ಲ; ಅವರ ಸಾಮಾನ್ಯ ನೀತಿ ಎಲ್ಲ ಅಂತರರಾಷ್ಟ್ರೀಯ ತೊಡಕುಗಳಿಂದ ದೂರವಿರಬೇಕೆಂದೇ. ಸ್ಪೇನ್ ಜನತಾ ರಾಜ್ಯ, ಚೀಣಾ, ಅಬಿಸೀನಿಯಾ, ಜೆಕೊಸ್ಲೊವೇಕಿಯಾ ರಾಷ್ಟ್ರಗಳಿಗೆ ನಾವು ತೋರಿದ ಸಹಾನುಭೂತಿಗೆ ನಮ್ಮನ್ನು ಭಾರತದಲ್ಲೂ ಆಕ್ಷೇಪಿಸಿದರು. ಅದರಿಂದ ಪ್ರಬಲ ರಾಷ್ಟ್ರಗಳಾದ ಜರ್ಮನಿ, ಇಟಲಿ, ಜಪಾನ್ ನಮಗೆ ಶತ್ರುಗಳಾಗುತ್ತಾರೆ ಎಂದರು; ಬ್ರಿಟನ್ನಿನ ಪ್ರತಿಯೊಂದು ಶತ್ರುರಾಷ್ಟ್ರವನ್ನೂ ನಮ್ಮ ಮಿತ್ರರಾಷ್ಟ್ರವೆಂದು ಪರಿಗಣಿಸಬೇಕೆಂದರು; ಅಧಿಕಾರ ಮತ್ತು ಅದರ ಉಪಯೋಗದ ಅವಕಾಶವೇ ಮುಖ್ಯವಾಗಿರುವ ರಾಜಕೀಯದಲ್ಲಿ ತಾತ್ವಿಕ ದೃಷ್ಟಿಗೆ ಅವಕಾಶವಿಲ್ಲವೆಂದರು. ಆದರೆ ಈ ವಿರೋಧವೆಲ್ಲ ಕಾಂಗ್ರೆಸ್ಸಿನ ಪ್ರಚಂಡ ಜನಬಲದ ಎದುರಿನಲ್ಲಿ ಸದ್ದಿಲ್ಲದೆ ಅಡಗಿಹೋಯಿತು. ಮುಸ್ಲಿಂ ಲೀಗ್ ಮಾತ್ರ ತುಟಿಪಿಟ್ಟೆನ್ನದೆ ಇಂತಹ ಅಂತರರಾಷ್ಟ್ರೀಯ ಪ್ರಶ್ನೆಗಳ ಮೇಲೆ ಬಾಯಿಗೆ ಬೀಗ ಹಾಕಿಕೊಂಡಿರುತ್ತಿತ್ತು.

೧೯೩೮ರಲ್ಲಿ ಕಾಂಗ್ರೆಸ್ಸು, ಕೆಲವು ವೈದ್ಯರನ್ನು ವೈದ್ಯಸಲಕರಣೆಗಳೊಂದಿಗೆ ಚೀಣಾದ ಸಹಾಯಕ್ಕೆ ಕಳುಹಿಸಿಕೊಟ್ಟಿತು. ಈ ಪಡೆಯು ಅನೇಕ ವರ್ಷಗಳ ಕಾಲ ಅಲ್ಲಿ ಉತ್ತಮ ಕೆಲಸಮಾಡಿತು. ಇದನ್ನು ಏರ್ಪಡಿಸಿದಾಗ ಸುಭಾಷ್‌ಚಂದ್ರ ಬೋಸ್ ಕಾಂಗ್ರೆಸ್ ಅಧ್ಯಕ್ಷರಾಗಿದ್ದರು. ಜಪಾನ್, ಜರ್ಮನಿ ಅಥವ ಇಟಲಿಯ ವಿರುದ್ಧ ಕಾಂಗ್ರೆಸ್ ಯಾವ ಕೆಲಸವನ್ನೂ ಮಾಡಬಾರದೆಂದು ಅವರ ಅಭಿಪ್ರಾಯವಿತ್ತು. ಆದರೂ ಕಾಂಗ್ರೆಸ್ಸಿನ ಮತ್ತು ದೇಶದ ಅಭಿಪ್ರಾಯಕ್ಕಾಗಲಿ ಅಥವ ಚೀನಾಕ್ಕೆ ಮತ್ತು ಫ್ಯಾಸಿಸ್ಟ್ ಅಥವ ನಾಜಿ ಆಕ್ರಮಣಕ್ಕೆ ಬಲಿಯಾದ ಇತರ ರಾಷ್ಟ್ರಗಳಿಗೆ ಕಾಂಗ್ರೆಸ್ ಪದೇ ಪದೇ ತೋರಿದ ಸಹಾನುಭೂತಿಗೇ ಆಗಲಿ ಅವರು ಅಡ್ಡಿಬರಲಿಲ್ಲ. ಅವರ ಅಧ್ಯಕ್ಷತೆಯಲ್ಲಿ ಅವರಿಗೆ ಇಷ್ಟವಿಲ್ಲದ ಅನೇಕ ನಿರ್ಣಯಗಳಾದವು. ವಿರೋಧ ಪ್ರದರ್ಶನಗಳನ್ನು ಏರ್ಪಡಿಸಿದೆವು; ದೇಶದಲ್ಲಿ ಅವುಗಳಿಗೆ ಇದ್ದ ಬೆಂಬಲವನ್ನರಿತು ಅವರು ಸುಮ್ಮನಿದ್ದರು. ಕಾಂಗ್ರೆಸ್ ಕಾರ್ಯಕಾರಿ ಸಮಿತಿಯಲ್ಲಿ ಅವರಿಗೂ ಇತರ ಸದಸ್ಯರಿಗೂ ವಿದೇಶಾಂಗ ನೀತಿ ಮತ್ತು ಒಳಾಡಳಿತ ನೀತಿಯಲ್ಲಿ ತೀವ್ರ ಭಿನ್ನಾಭಿಪ್ರಾಯಗಳಿತ್ತು; ಇದರಿಂದ ೧೯೩೯ರಲ್ಲಿ ಒಡಕು ಹುಟ್ಟಿತು. ಆಮೇಲೆ

ಅವರು ಕಾಂಗ್ರೆಸ್ ನೀತಿಯನ್ನು ಬಹಿರಂಗ ವಿರೋಧಿಸಲು ಆರಂಭಿಸಿದರು. ೧೯೩೯ನೆಯ ಆಗಸ್ಟ್ ತಿಂಗಳಲ್ಲಿ ಕಾಂಗ್ರೆಸ್ಸು ತನ್ನ ಹಿಂದಿನ ಅಧ್ಯಕ್ಷರೊಬ್ಬರ ಮೇಲೆ ಶಿಸ್ತಿನ ಕಾರ್ಯಕ್ರಮ ಸಹ ತೆಗೆದುಕೊಳ್ಳಬೇಕಾದ ವಿಚಿತ್ರ ಪ್ರಸಂಗ ಒದಗಿತು.

## ೨. ಕಾಂಗ್ರೆಸ್ಸಿನ ಯುದ್ಧ ನೀತಿ

ಕಾಂಗ್ರೆಸ್ಸು ಈ ರೀತಿ ದ್ವಿಮುಖ ಯುದ್ಧ ನೀತಿಯನ್ನು ಹಾಕಿಕೊಂಡು ಅದನ್ನೇ ಪ್ರತಿಪಾದಿಸುತ್ತ ಬಂದಿತು. ಒಂದು ಕಡೆ ಫ್ಯಾಸಿಸ್ಟ್ ದೇಶಗಳ ಒಳಾಡಳಿತ ನೀತಿ ಮತ್ತು ಪರದೇಶಗಳ ಆಕ್ರಮಣ ನೀತಿಯನ್ನು ಪ್ರತಿಭಟಿಸಿ ಫ್ಯಾಸಿಸಂ, ನಾಜಿಸಂ ಮತ್ತು ಜಪಾನೀ ಸೈನ್ಯ ನೀತಿಗಳಿಗೆ ವಿರೋಧ ವ್ಯಕ್ತಪಡಿಸಿತು ; ಆಕ್ರಮಣಕ್ಕೆ ಬಲಿಯಾದ ರಾಷ್ಟ್ರಗಳಿಗೆ ಪೂರ್ಣ ಸಹಾನುಭೂತಿ ವ್ಯಕ್ತಗೊಳಿಸಿತು ; ಮತ್ತು ಆಕ್ರಮಣ ತಡೆಗಟ್ಟುವ ಯುದ್ಧ ಅಥವ ಇತರ ಪ್ರಯತ್ನಕ್ಕೆ ಯಾವುದೇ ಆಗಲಿ ಬೆಂಬಲ ಕೊಡುವುದಾಗಿ ಘೋಷಿಸಿತು. ಇನ್ನೊಂದು ಕಡೆ ಭಾರತದ ಸ್ವಾತಂತ್ರ್ಯಕ್ಕೆ ಮಹತ್ವಕೊಟ್ಟಿತು. ಅನೇಕ ದಿನಗಳು ನಮ್ಮ ಹೋರಾಟದ ಮೂಲ ಉದ್ದೇಶ ಸ್ವಾತಂತ್ರ್ಯವಾಗಿತ್ತೆಂದು ಮಾತ್ರವಲ್ಲ; ಮುಂದಿನ ಯುದ್ಧ ದೃಷ್ಟಿಯಿಂದ ಅದು ನಮಗೆ ಅಗತ್ಯವೆನಿಸಿತು. ಭಾರತ ಸ್ವತಂತ್ರವಾದರೆ ಮಾತ್ರ ಯುದ್ಧದಲ್ಲಿ ನಿಜವಾದ ಪಾತ್ರ ವಹಿಸಲು ಸಾಧ್ಯವಿತ್ತು. ಸ್ವಾತಂತ್ರ್ಯ ದೊರೆತರೆ ಮಾತ್ರ ಭಾರತ ಮತ್ತು ಬ್ರಿಟನ್ ಮಧ್ಯೆ ಇದ್ದ ಕಹಿನೆನಪು ಮರೆಯಲು ಸಾಧ್ಯವೆನಿಸಿತು. ಜನರಲ್ಲಿ ಉತ್ಸಾಹ ತುಂಬಿ ಅಪಾರ ಯುದ್ಧ ಸಾಮಗ್ರಿ ಒದಗಿಸಲು ಸಾಧ್ಯ. ಆ ಸ್ವಾತಂತ್ರ್ಯವಿಲ್ಲದೆ ಈ ಯುದ್ಧಕ್ಕೂ ಹಿಂದಿನ ಯುದ್ಧಗಳಿಗೂ ಯಾವ ಭೇದವನ್ನೂ ಕಾಣದಾದೆವು ; ಎರಡು ಸಾಮ್ರಾಜ್ಯ ಶಕ್ತಿಗಳ ಮಧ್ಯೆ ಒದಗಿದ ಒಂದು ಹೋರಾಟವೆನಿಸಿತು. ಬ್ರಿಟಿಷ್ ಸಾಮ್ರಾಜ್ಯವನ್ನು ಸಂರಕ್ಷಿಸಿ, ಶಾಶ್ವತಗೊಳಿಸುವ ಪ್ರಯತ್ನವಾಗಿತ್ತು. ಬಹುಕಾಲದಿಂದ ನಾವು ಎದುರಿಸಿದ್ದ ಸಾಮ್ರಾಜ್ಯಕ್ಕೆ ಈಗ ಪುನಃ ಪ್ರೋತ್ಸಾಹಕೊಡುವುದು ತೀರ ಅಸಾಧ್ಯ ಮತ್ತು ಅವಿವೇಕವೆನಿಸಿತು. ಅನಿವಾರ್ಯ ವಿಪತ್ತುಗಳೆರಡರಲ್ಲಿ ಕಡಮೆ ತೊಂದರೆ ಅನುಭವಿಸೋಣವೆಂದು ವಿಶಾಲ ದೃಷ್ಟಿಯಿಂದ ನೋಡಹೋದರೂ ಜನತೆ ಒಪ್ಪುವುದು ಅಸಾಧ್ಯವಿತ್ತು. ಜನರ ಮನಸ್ಸಿನಲ್ಲಿ ನೆಟ್ಟಿದ್ದ ಕಹಿ ಮನೋಭಾವ ಅಳಿಸಿ, ಉತ್ಸಾಹ ತುಂಬಿ ಜನಶಕ್ತಿ ಅಣಿಗೊಳಿಸಲು ಸ್ವಾತಂತ್ರ್ಯ ದೊರೆತರೆ ಮಾತ್ರ ಸಾಧ್ಯವಿತ್ತು. ಬೇರೆ ಮಾರ್ಗವೇ ಇರಲಿಲ್ಲ.

ಭಾರತೀಯರ ಅಥವ ಅವರ ಪ್ರತಿನಿಧಿಗಳ ಒಪ್ಪಿಗೆಯಿಲ್ಲದೆ ಭಾರತವನ್ನು ಯಾವ ಯುದ್ಧದಲ್ಲೂ ತಳ್ಳುವದಿಲ್ಲವೆಂದೂ, ಭಾರತೀಯ ಸೈನ್ಯಪಡೆಗಳನ್ನು ಯುದ್ಧಕ್ಕೆ ಹೊರಗೆ ಕಳುಹಿಸುವದಿಲ್ಲವೆಂದೂ ಕಾಂಗ್ರೆಸ್ಸು ಸರಕಾರದಿಂದ ಸ್ಪಷ್ಟ ಭರವಸೆ ಕೇಳಿತು. ಭಿನ್ನ ರಾಜಕೀಯ ಪಕ್ಷ ಪಂಗಡಗಳಿದ್ದ ಕೇಂದ್ರ ಶಾಸನ ಸಭೆಯು ಸಹ ಭಾರತೀಯ ಸೈನ್ಯಗಳನ್ನು ಹೊರಗೆ ಕಳುಹಿಸಬಾರದೆಂದು ಅಭಿಮತವನ್ನು ವ್ಯಕ್ತಗೊಳಿಸಿತ್ತು. ಯಾರ ಸ್ವಾತಂತ್ರ್ಯದ ಹೋರಾಟದಲ್ಲಿ ಭಾರತೀಯರಿಗೆ ಸಹಾನುಭೂತಿ ಇದೆಯೋ ಮತ್ತು ಯಾರೊಡನೆ ಭಾರತೀಯರಿಗೆ ಯಾವ ವ್ಯಾಜ್ಯವೂ ಇರಲಿಲ್ಲವೊ ಅಂತಹ ಜನರನ್ನು ಗೆಲ್ಲುವುದಕ್ಕೊ, ಹತ್ತಿಕ್ಕುವುದಕ್ಕೊ ಭಾರತೀಯ ಸೈನ್ಯವನ್ನು ಯುದ್ಧಕ್ಕೆ ಕಳುಹಿಸಿ ಬ್ರಿಟಿಷ್ ಸಾಮ್ರಾಜ್ಯದ ರಾಜಕಾರಣಗಳಿಗೆ ಭಾರತದ ಸೈನ್ಯವನ್ನು ದುರುಪಯೋಗಪಡಿಸಿಕೊಳ್ಳುತ್ತಿದ್ದಾರೆಂಬ ದೂರು ಮೊದಲಿನಿಂದಲೂ ಇತ್ತು. ಈ ರೀತಿ ಹಣದ ಆಶೆ ತೋರಿ ಭಾರತೀಯ ಪಡೆಗಳನ್ನು ಬರ್ಮ, ಚೀಣಾ, ಇರಾನ್, ಮಧ್ಯಪ್ರಾಂತ್ಯ ಮತ್ತು ಆಫ್ರಿಕೆಯ ಅನೇಕ ಭಾಗಗಳಲ್ಲಿ ಉಪಯೋಗಿಸಿದ್ದರು. ಈ ದೇಶಗಳಲ್ಲೆಲ್ಲ ಭಾರತೀಯ ಸೈನ್ಯವು ಬ್ರಿಟಿಷ್ ಸಾಮ್ರಾಜ್ಯ ಶಕ್ತಿಯ ಸಂಕೇತವಾಗಿ ಭಾರತದ ಮೇಲೆ ಆ ಜನರ ದ್ವೇಷ ಬೆಳೆಯಲು ಅವಕಾಶವಾಯಿತು. ಒಂದು ಸಲ ಒಬ್ಬ ಈಜಿಪ್ಟ್ ದೇಶಾಭಿಮಾನಿ "ನೀವು ನಿಮ್ಮ ಸ್ವಾತಂತ್ರ್ಯ ಕಳೆದುಕೊಂಡಿರುವುದಲ್ಲದೆ ಇತರರ ಸ್ವಾತಂತ್ರ್ಯ ನಿಮ್ಮ ಸೈನ್ಯ ಒದಗಿಸಿ ಅಪಹರಿಸಲು ಬ್ರಿಟಿಷರಿಗೆ ಸಹಾಯಮಾಡುತ್ತಿದ್ದೀರಿ" ಎಂದು ಮೂದಲಿಸಿದ್ದು ಜ್ಞಾಪಕವಿದೆ.

ಈ ಇಬ್ಬಗೆಯ ನೀತಿಯ ದ್ವಿಮುಖಗಳು ಒಂದಕ್ಕೊಂದು ಹೊಂದಿಕೊಳ್ಳದೆ ಪರಸ್ಪರ ವಿರೋಧ ಬಂದಿತು. ಆದರೆ ಅದಕ್ಕೆ ಹೊಣೆಗಾರರು ನಾವಲ್ಲ ; ಪರಿಸ್ಥಿತಿಯೇ ಆ ರೀತಿ ಇತ್ತು; ಮತ್ತು ಆ ಪರಿಸ್ಥಿತಿ

ಯಲ್ಲಿ ಅನುಸರಿಸಿದ ನಮ್ಮ ನೀತಿಯಲ್ಲಿ ಅದು ಪ್ರತಿಬಿಂಬಿತವಾಗಬೇಕಾದ್ದೂ ಸ್ವಾಭಾವಿಕವಿತ್ತು. ಒಂದು ಕಡೆ ಫ್ಯಾಸಿಸಂ ಮತ್ತು ನಾಜಿಸಂ ಖಂಡಿಸುವುದೂ, ಅದೇ ಉಸಿರಿನಲ್ಲೇ ಸಾಮ್ರಾಜ್ಯ ನೀತಿಗೆ ಬೆಂಬಲ ಕೊಡುವುದೂ ಪರಸ್ಪರ ವಿರುದ್ಧವೆಂದು ಮೇಲಿಂದ ಮೇಲೆ ಹೇಳುತ್ತಲೇ ಬಂದೆವು. ಫ್ಯಾಸಿಸಂ ಮತ್ತು ನಾಜಿಸಂ ಹೆಸರಿನಲ್ಲಿ ಭಯಂಕರ ಅತ್ಯಾಚಾರ ನಡೆದು ಭಾರತ ಮತ್ತು ಇತರ ಕಡೆಗಳಲ್ಲಿ ಸಾಮ್ರಾಜ್ಯ ಆಡಳಿತವು ಸ್ತಿಮಿತದಲ್ಲಿದ್ದುದೂ ನಿಜ. ವ್ಯತ್ಯಾಸ ಏನಿದ್ದರೂ ಕಾಲ ಮತ್ತು ಗತಿಯಲ್ಲೇ ಹೊರತು ನೀತಿಯಲ್ಲಿ ಏನೂ ಇರಲಿಲ್ಲ. ಫ್ಯಾಸಿಸ್ಟ್ ಮತ್ತು ನಾಜಿ ತತ್ವಗಳು ನಮಗೆ ದೂರ ಇದ್ದವು; ಅವುಗಳ ಪರಿಚಯ ಏನಿದ್ದರೂ ಗ್ರಂಥಸ್ತವಿತ್ತು. ಆದರೆ ಸಾಮ್ರಾಜ್ಯದ ಬಿಗಿತವು ಬಾಗಿಲು ದಾಟಿದರೆ ಸಾಕು ಇಡೀ ವಾತಾವರಣವನ್ನೆ ಆವರಿಸಿ ನಮ್ಮ ಉಸಿರನ್ನೆ ಕಟ್ಟಿತ್ತು. ಹೊರಗೆ ಪ್ರಜಾಸತ್ತೆಯ ಧ್ವಜವನ್ನೆತ್ತಿ ಹಿಡಿದು ಭಾರತದಲ್ಲಿ ನಿರಾಕರಿಸುವುದು ತಿಳಿಗೇಡಿತನವೆಂದು ತಿಳಿಸಿದೆವು.

ನಮ್ಮ ದ್ವಿಮುಖ ನೀತಿಯಲ್ಲಿ ಏನೇ ಪರಸ್ಪರ ವಿರೋಧವಿದ್ದರೂ, ದೇಶದ ರಕ್ಷಣೆ ಮತ್ತು ಪರಾಕ್ರಮಣ ವಿರೋಧಕ್ಕೆ ಸೈನ್ಯ ಉಪಯೋಗಿಸಲು ನಮ್ಮ ಅಹಿಂಸಾತತ್ವವು ಅಡ್ಡಿ ಬರಲಿಲ್ಲ.

೧೯೩೮ನೆಯ ಬೇಸಗೆಯಲ್ಲಿ ನಾನು ಇಂಗ್ಲೆಂಡ್ ಮತ್ತು ಯೂರೋಪಿನಲ್ಲಿ ಇದ್ದೆ. ನನ್ನ ಭಾಷಣಗಳಲ್ಲಿ, ಬರವಣಿಗೆಯಲ್ಲಿ ಮತ್ತು ವ್ಯಕ್ತಿಶಃ ಸಂಭಾಷಣೆಗಳಲ್ಲಿ ನಮ್ಮ ಈ ನೀತಿ ವಿವರಿಸಿ ಮುಂದೆಯೂ ಇದೇ ರೀತಿ ಬಿಟ್ಟರೆ ಅಥವ ವ್ಯಥಾ ಕಾಲಹರಣ ಮಾಡಿದರೆ ಅನಾಹುತ ಅನಿವಾರ್ಯವೆಂದು ಎಚ್ಚರಿಸಿದೆ. ಸೂಡೆಟನ್‌ಲ್ಯಾಂಡ್ ಸಮಸ್ಯೆ ಬಿಗಡಾಯಿಸಿದ್ದಾಗ ಯುದ್ಧ ಒದಗಿದರೆ ಭಾರತ ಏನುಮಾಡುತ್ತದೆ ಎಂದು ಅನೇಕ ಜೆಕ್ಕರು ಕಾತರರಾಗಿ ಕೇಳಿದರು. ಅತಿ ಭಯಂಕರ ಅಪಾಯದ ಎದುರಿನಲ್ಲಿದ್ದರು; ನಮ್ಮ ದೀರ್ಘಕಾಲದ ವ್ಯಾಜ್ಯ ಅಥವ ನಯವಾದ ತರ್ಕ ಕೇಳಿ ತಿಳಿದುಕೊಳ್ಳಲು ಅವರಿಗೆ ಸಮಯವಿರಲಿಲ್ಲ. ಆದರೂ ನನ್ನ ವಾದವನ್ನು ಅವರು ಅರಿತು ಅದರ ನ್ಯಾಯಪರತೆಯನ್ನು ಒಪ್ಪಿದರು.

೧೯೩೯ರ ಮಧ್ಯ ಭಾಗದಲ್ಲಿ ಭಾರತೀಯ ಸೈನ್ಯಗಳನ್ನು ಸಮುದ್ರದಾಚೆ ಸಿಂಗಪುರಕ್ಕೊ ಮಧ್ಯ ಪ್ರಾಚ್ಯಕ್ಕೊ ಕಳುಹಿಸುವುದಾಗಿ ತಿಳಿಯಬಂದಿತು. ಭಾರತದ ಪ್ರತಿನಿಧಿಗಳ ಒಪ್ಪಿಗೆಯಿಲ್ಲದೆ ಈ ರೀತಿ ಕಳುಹಿಸಿದ್ದಕ್ಕೆ ವಿರೋಧವೆದ್ದಿತು. ಕಷ್ಟಪರಿಸ್ಥಿತಿಯಲ್ಲಿ ಸೈನ್ಯದ ಓಡಾಟ ಗುಪ್ತವಾಗಿಡಬೇಕಾದ್ದು ಸಾಮಾನ್ಯ ನೀತಿ ನಿಜ. ಆದರೂ ಭಾರತೀಯ ನಾಯಕರ ಅಭಿಮತ ಪಡೆಯಲು ಅನೇಕ ಮಾರ್ಗಗಳಿದ್ದವು. ಕೇಂದ್ರ ಶಾಸನ ಸಭೆಯ ಪಕ್ಷಗಳ ನಾಯಕರು ಇದ್ದರು. ಪ್ರಾಂತ್ಯಗಳಲ್ಲಿ ಪ್ರಜಾಸತ್ತಾತ್ಮಕ ಸರಕಾರಗಳಿದ್ದವು. ಸಾಧಾರಣವಾಗಿ ಕೇಂದ್ರ ಸರಕಾರವು ಪ್ರಾಂತ್ಯ ಮಂತ್ರಿಮಂಡಲಗಳೊಡನೆ ಅನೇಕ ವಿಷಯಗಳಲ್ಲಿ ಗುಪ್ತಾಲೋಚನೆ ಸಲಹೆ ಪಡೆದು ಅವರ ವಿಶ್ವಾಸದಿಂದ ಕೆಲಸಮಾಡಬೇಕಾದ್ದು ಸಹಜ. ಆದರೆ ಈ ವಿಷಯದಲ್ಲಿ ರಾಷ್ಟ್ರದ ಅಭಿಮತಕ್ಕೆ ಮತ್ತು ಪ್ರಜಾಪ್ರತಿನಿಧಿಗಳಿಗೆ ನೆಪಮಾತ್ರ ಯಾವ ಗೌರವವನ್ನು ಸಹ ಕೊಡಲಿಲ್ಲ. ಪ್ರಾಂತ ಸರಕಾರಗಳಿಗೆ ಅಧಿಕಾರಕೊಟ್ಟ ೧೯೩೫ರನೆ ಇಂಡಿಯಾ ಸರಕಾರ ಶಾಸನವನ್ನು ಸಹ ತಿದ್ದುಪಡಿ ಮಾಡಲು ಪಾರ್ಲಿಮೆಂಟಿನಲ್ಲಿ ಪ್ರಯತ್ನ ನಡೆದಿತ್ತು. ಯುದ್ಧ ಒದಗಿದರೆ ಆ ಮೂಲಕ ಎಲ್ಲ ಅಧಿಕಾರವನ್ನು ಕೇಂದ್ರ ಸರಕಾರಕ್ಕೆ ತೆಗೆದುಕೊಳ್ಳುವ ಯತ್ನ ನಡೆದಿತ್ತು. ಪ್ರಜಾಪ್ರಭುತ್ವ ಇರುವ ರಾಷ್ಟ್ರದಲ್ಲಿ, ಪಕ್ಷಗಳ ಅನುಮತಿ ಪಡೆದು ಆ ರೀತಿ ಮಾಡಿದರೆ ಅದು ಸಹಜ ಹೌದು ಸಕಾರಣವೂ ಹೌದು. ಸಂಯುಕ್ತ ರಾಜ್ಯ ಪದ್ಧತಿಯಲ್ಲಿ, ಘಟಕ ರಾಜ್ಯಗಳು, ಪ್ರಾಂತ್ಯಗಳು, ಸ್ವತಂತ್ರ ಭಾಗಗಳು ವಿಷಮ ಪರಿಸ್ಥಿತಿ ಮತ್ತು ಯುದ್ಧಸಮಯಗಳಲ್ಲಿ ಸಹ ಕೇಂದ್ರ ಸರಕಾರಕ್ಕೆ ತಮ್ಮ ಅಧಿಕಾರ ಬಿಟ್ಟುಕೊಡಲು ಒಪ್ಪುವುದು ಸುಲಭವಲ್ಲ. ಅಮೆರಿಕೆಯ ಸಂಯುಕ್ತ ಸಂಸ್ಥಾನಗಳಲ್ಲಿ ಈ ಜಗ್ಗಾಟ ಇದ್ದೇ ಇದೆ. ಯುದ್ಧಕ್ಕಾಗಿ ಮತ್ತು ಯುದ್ಧ ಸಮಯದಲ್ಲಿ ಮಾತ್ರ ರಾಜ್ಯಗಳ ಅಧಿಕಾರ ಮೊಟಕು ಮಾಡಿ ಕೇಂದ್ರ ಕಾಮನ್‌ವೆಲ್ತ್ ಸರಕಾರಕ್ಕೆ ವಹಿಸಲು ಆಸ್ಟ್ರೇಲಿಯ ಜನಗಣತೆಯು ಒಪ್ಪಲಿಲ್ಲವೆಂದು ಈ ಮಸಿಯು ಹಸಿ ಇರುವಾಗಲೇ ಕೇಳುತ್ತಿದ್ದೇನೆ. ಅಮೆರಿಕೆಯ ಸಂಯುಕ್ತ ಸಂಸ್ಥಾನಗಳಲ್ಲಿ, ಆಸ್ಟ್ರೇಲಿಯದಲ್ಲಿ ಕೇಂದ್ರ ಸರಕಾರವು ಪ್ರಜಾಸತ್ತಾತ್ಮಕವಿದೆ; ಅದೇ ರಾಜ್ಯಗಳ ಪ್ರತಿನಿಧಿಗಳೇ ಕೇಂದ್ರದಲ್ಲೂ ಇದ್ದಾರೆ. ಆದರೆ ಭಾರತದಲ್ಲಿನ ಕೇಂದ್ರ ಸರಕಾರ

ಯಾರಿಗೂ ಜವಾಬ್ದಾರಿ ಇಲ್ಲದ ನಿರಂಕುಶ ಆಡಳಿತ; ಪ್ರಜೆಗಳು ಆರಿಸಿದುದಲ್ಲ. ಪ್ರಜೆಗಳಿಗಾಗಲಿ, ಪ್ರಾಂತಗಳಿಗಾಗಲಿ ಹೊಣೆಯಲ್ಲ. ಅದು ಬ್ರಿಟಿಷ್ ಸರಕಾರದ ಕೈಗೊಂಬೆ. ಪ್ರಾಂತ ಸರಕಾರಗಳ ಮತ್ತು ಪ್ರಾಂತಶಾಸನ ಸಭೆಗಳ ಅಧಿಕಾರ ಮೊಟಕು ಮಾಡಿ ಕೇಂದ್ರ ಸರಕಾರದ ಅಧಿಕಾರ ಹೆಚ್ಚಿಸುವುದೆಂದರೆ ಪ್ರಜಾಸತ್ತಾತ್ಮಕ ಪ್ರಾಂತ ಸರಕಾರಗಳನ್ನು ಇನ್ನೂ ದುರ್ಬಲಗೊಳಿಸುವಂತೆ, ಪ್ರಜಾಪ್ರಭುತ್ವದ ಬುಡಕ್ಕೇ ಕೊಡಲಿ ಪೆಟ್ಟು ಇಟ್ಟಂತೆ. ಇದರಿಂದ ದೇಶದಲ್ಲಿ ಬಹಳ ಅಸಮಾಧಾನ ಹೆಚ್ಚಿತು. ಕಾಂಗ್ರೆಸ್ ಸರಕಾರ ಗಳನ್ನು ರಚಿಸುವಾಗ ಕೊಟ್ಟ ವಚನ ಮುರಿಯುವ ಪ್ರಯತ್ನ ಕಂಡಿತು. ಭಾರತದ ಪ್ರತಿನಿಧಿಗಳ ಅಭಿಮತ ಕೇಳದೆ ಭಾರತದ ಮೇಲೆ ಯುದ್ಧದ ಹೊರೆ ಹೊರಸುವ ಪ್ರಯತ್ನವೆಂದು ಸ್ಪಷ್ಟವಾಯಿತು.

ಕಾಂಗ್ರೆಸ್ ಕಾರ್ಯಸಮಿತಿ ಈ ನೀತಿಯನ್ನು ಪ್ರಬಲ ವಿರೋಧಿಸಿತು. ಕಾಂಗ್ರೆಸ್ಸಿನ ಮತ್ತು ಕೇಂದ್ರ ಶಾಸನಸಭೆಯ ಘೋರಣೆಯನ್ನು ಸರಕಾರವು ಕಸಕ್ಕಿಂತ ಕಡಮೆ ಮಾಡುತ್ತಿದೆ ಎಂಬುದು ಸ್ಪಷ್ಟವಾಯಿತು. ಭಾರತದ ಜನತೆಯ ಒಪ್ಪಿಗೆ ಕೈಕೊಂಡ ಈ ಎಲ್ಲ ಪರಿಣಾಮಕಾರಕ ಬಲಾತ್ಕಾರದ ಕಾರ್ಯಾಚರಣೆಗೆ ಭಾರ ತವು ಒಪ್ಪುವುದಿಲ್ಲವೆಂದು ತಿಳಿಸಿ, ಅದನ್ನು ಪ್ರತಿಭಟಿಸಬೇಕೆಂದು ತೀರ್ಮಾನಿಸಿತು. ಪುನಃ ೧೯೩೯ ನೆಯ ಆಗಸ್ಟ್ ತಿಂಗಳಲ್ಲಿ " ಪ್ರಪಂಚದ ಈ ಉತ್ಕಟ ಪರಿಸ್ಥಿತಿಯಲ್ಲಿ ಕಾರ್ಯ ಸಮಿತಿಯ ಸಹಾನುಭೂತಿ ಎಲ್ಲವೂ ಸ್ವಾತಂತ್ರ್ಯ ಮತ್ತು ಪ್ರಜಾಪ್ರಭುತ್ವದ ಪರವಿರುವ ರಾಷ್ಟ್ರಗಳ ಕಡೆ ಇದೆ; ಕಾಂಗ್ರೆಸ್ಸು ಯೂರೋಪಿನಲ್ಲಿ ಆಫ್ರಿಕದಲ್ಲಿ, ಏಷ್ಯದ ದೂರಪ್ರಾಚ್ಯ ದೇಶಗಳಲ್ಲಿ ಫ್ಯಾಸಿಸ್ಟ್ ಆಕ್ರಮಣ ನೀತಿಯನ್ನೂ ಮತ್ತು ಜೆಕೊ ಸ್ಲೊವೇಕಿಯ ಮತ್ತು ಸ್ಪೇನ್‌ನಲ್ಲಿ ಬ್ರಿಟಿಷ್ ಸಾಮ್ರಾಜ್ಯವು ಪ್ರಜಾಪ್ರಭುತ್ವಕ್ಕೆ ಮಾಡಿದ ದ್ರೋಹವನ್ನೂ ತೀವ್ರ ಖಂಡಿಸಿ ಇದೆ" ಎಂದೂ " ಬ್ರಿಟಿಷ್ ಸರಕಾರದ ಹಿಂದಿನ ಮತ್ತು ಇಂದಿನ ನೀತಿಯಿಂದ ಬ್ರಿಟಿಷ್ ಸರಕಾರವು ಪ್ರಜಾಪ್ರಭುತ್ವ ಮತ್ತು ಸ್ವಾತಂತ್ರ್ಯದ ಪರ ಇಲ್ಲವೆಂದೂ, ಯಾವ ಕಾಲದಲ್ಲಾದರು ಅವುಗಳನ್ನು ಕೈಬಿಡಲು ಸಿದ್ಧವಿದೆ ಎಂದೂ ಸ್ಪಷ್ಟವಾಗುತ್ತದೆ; ಇಂತಹ ಸರಕಾರದೊಂದಿಗೆ ಸಹಕರಿಸಲು ಭಾರತಕ್ಕೆ ಸಾಧ್ಯವಿಲ್ಲ; ಯಾವ ಸಮಯದಲ್ಲಾದರೂ ಕೈಬಿಟ್ಟು ನಮಗಿಲ್ಲದ ಸ್ವಾತಂತ್ರ್ಯ ಮತ್ತು ಪ್ರಜಾಪ್ರಭುತ್ವಕ್ಕಾಗಿ ಭಾರತದ ಸರ್ವಸ್ವವನ್ನೂ ಬಲಿದಾನ ಮಾಡಿರೆಂದು ಹೇಳಲು ಇಂಡಿಯ ಸರಕಾರಕ್ಕೆ ಹಕ್ಕಿಲ್ಲ;" ಎಂದೂ ಕಾಂಗ್ರೆಸ್ ಕಾರ್ಯಸಮಿತಿಯು ನಿರ್ಣಯಿಸಿತು. ಈ ವಿರೋಧ ಪ್ರದರ್ಶನದ ಮೊದಲನೆಯ ಹಂತವಾಗಿ ಕೇಂದ್ರ ಶಾಸನ ಸಭೆಯ ಕಾಂಗ್ರೆಸ್ ಸದಸ್ಯರು ಯಾರೂ ಶಾಸನ ಸಭೆಗೆ ಹೋಗಲಾಗದೆಂದು ನಿರೂಪ ಕೊಟ್ಟಿತು.

ಈ ನಿರ್ಣಯ ಆದುದು ಯೂರೋಪಿನಲ್ಲಿ ಯುದ್ಧ ಆರಂಭವಾಗುವ ಮೂರು ವಾರಗಳ ಮುಂಚೆ. ದೊಡ್ಡ ವಿಷಯಗಳಲ್ಲಿ ಅಲ್ಪ ವಿಷಯಗಳಲ್ಲಿ ಸಹ ಬ್ರಿಟಿಷ್ ಸರಕಾರವೂ, ಅದರ ಉತ್ಸವ ಮೂರ್ತಿ ಯಂತಿದ್ದ ಇಂಡಿಯಾ ಸರಕಾರವೂ ಭಾರತದ ಜನಾಭಿಪ್ರಾಯವನ್ನು ಪೂರ್ಣ ಉಪೇಕ್ಷೆ ಮಾಡಲು ನಿರ್ಧರಿ ಸಿದಂತೆ ಕಂಡಿತು. ಪ್ರಾಂತಗಳ ಗೌರ್‍ನರುಗಳೂ, ಸಿವಿಲ್ ಸರ್ವಿಸ್ ಅಧಿಕಾರಿಗಳೂ ಕಾಂಗ್ರೆಸ್ ಸರಕಾರ ಗಳೊಡನೆ ಹೆಚ್ಚಿನ ಅಸಹಕಾರ ಭಾವನೆ ತೋರಿದರು. ಕಾಂಗ್ರೆಸ್ ಸರಕಾರಗಳನ್ನು ನಡೆಸುವುದೇ ಬಹಳ ಕಷ್ಟವಾಗುತ್ತ ಬಂದು ಬಹು ಜನರಲ್ಲಿ ಸಂಶಯವೂ ಒಂದು ಬಗೆಯ ಉದ್ವೇಗವೂ ಕಂಡು ಬರುತ್ತಿತ್ತು. ಹಿಂದೆ ೧೯೧೪ರಲ್ಲಿ ಮಾಡಿದಂತೆ ಪ್ರಾಂತ ಸರಕಾರಗಳನ್ನೂ ಜನಾಭಿಪ್ರಾಯವನ್ನೂ ನಿರ್ಲಕ್ಷಿಸಿ, ಈ ಮಧ್ಯೆ ನಡೆದುದನ್ನೆಲ್ಲ ಮರೆತು ಭಾರತವನ್ನು ಬಲಾತ್ಕಾರದಿಂದ ಯುದ್ಧಕ್ಕೆ ತಳ್ಳಿ ಯುದ್ಧದ ನೆಪದಲ್ಲಿ ಇದ್ದ ಅಲ್ಪ ಸ್ವಲ್ಪ ಸ್ವಾತಂತ್ರ್ಯವನ್ನೂ ಅಪಹರಿಸಿ ಭಾರತದ ಸಂಪತ್ತನ್ನು ನಿರಾತಂಕವಾಗಿ ಬ್ರಿಟಿಷ್ ಸರಕಾರ ಕೊಳ್ಳೆ ಹೊಡೆಯುತ್ತದೆ ಎಂಬ ಭಯ ಬಲಗೊಂಡಿತು.

ಆದರೆ ಈ ಇಪ್ಪತ್ತೈದು ವರ್ಷಗಳ ಅನೇಕ ಘಟನೆಗಳಿಂದ ಜನರ ಮನಸ್ಸೇ ಬೇರೆಯಾಗಿತ್ತು. ಒಂದು ಮಹಾರಾಷ್ಟ್ರವಾದ ಭಾರತವನ್ನು ತಮ್ಮ ಆಸ್ತಿಯಂತೆ ಕಾಣುವುದೂ, ಭಾರತೀಯರನ್ನೂ ಕಡೆಗಣ್ಣಿ ನಿಂದ ನೋಡುವುದೂ ಭಾರತೀಯರಿಗೆ ಅಸಹನೀಯವಾಯಿತು. ಕಳೆದ ಇಪ್ಪತ್ತು ವರ್ಷಗಳ ಹೋರಾಟ ಮತ್ತು ಅನುಭವಿಸಿದ ಸಂಕಟ ಎಲ್ಲವೂ ನಿರರ್ಥಕವೆ? ಈ ಅಪಮಾನ ಅಗೌರವಗಳಿಗೆ ಭಾರತೀಯರು

ಕುರಿಗಳಂತೆ ತಲೆ ತಗ್ಗಿಸಿ ತಮ್ಮ ಮಾತೃಭೂಮಿಗೆ ಅಪಮಾನಮಾಡುವುದೆ ? ದೌರ್ಜನ್ಯ ಎದುರಿಸಿ ಅಪ ಮಾನಕ್ಕೆ ತಲೆ ಬಾಗದಿರುವುದನ್ನು ಅನೇಕರು ಕಲಿತಿದ್ದರು. ಆ ಕೆಚ್ಚಿದೆಯ ಹೋರಾಟದ ಪರಿಣಾಮಗಳ ನ್ನೆಲ್ಲ ಸಂತೋಷದಿಂದ ಸ್ವಾಗತಿಸಲು ಸಿದ್ಧರಿದ್ದರು.

ಯುವಕರನೇಕರಿಗೆ ರಾಷ್ಟ್ರೀಯ ಚಳವಳಿಯ ಕಷ್ಟನಷ್ಟ ಏನೆಂದು ಸ್ವತಃ ಅನುಭವವಿರಲಿಲ್ಲ. ೧೯೨೦ ರಿಂದ ೧೯೩೦ ರವರೆಗೆ ಮತ್ತು ಅನಂತರ ನಡೆದ ಅಸಹಕಾರ ಚಳುವಳಿಗಳು ಅವರಿಗೆ ಹಿಂದಿನ ಕಥೆ ಯಾಗಿತ್ತೆ ಹೊರತು ಆಗುಹೋಗುಗಳ ಅರಿವು ಅವರಿಗಿರಲಿಲ್ಲ. ಅನುಭವದ ಕುಲುಮೆಯಲ್ಲಿ ಸಂಕಟದಲ್ಲಿ ಅವರ ಸತ್ವ ಪರೀಕ್ಷೆಯಾಗಿರಲಿಲ್ಲ. ಆದರೂ ಅವರು ಲಘು ಮಾತನಾಡತೊಡಗಿದರು. ಹಿರಿಯರನ್ನು ದುರ್ಬಲರು, ರಾಜಿಮನೋಭಾವದವರು ಎಂದು ಹಳಿಯ ತೊಡಗಿದರು. ಕಾರ್ಯಸಾಧನೆಗಿಂತ ಕಟು ಮಾತಿಗೆ ಹೆಚ್ಚು ಬೆಲೆ ಕೊಡಲಾರಂಭಿಸಿದರು. ವೈಯಕ್ತಿಕ ನಾಯಕತ್ವದ ಪ್ರಶಸ್ತಿಗಾಗಿ, ರಾಜಕೀಯ ಅಥವ ಆರ್ಥಿಕ ತತ್ವಗಳಿಗಾಗಿ ಪರಸ್ಪರ ಜಗಳ ಹೂಡಲಾರಂಭಿಸಿದರು. ಮೂಲ ಹಿನ್ನೆಲೆಯನ್ನು ಅರ್ಥ ಮಾಡಿಕೊಳ್ಳದೆ ಪ್ರಪಂಚದ ಸಮಸ್ಯೆಗಳ ಚರ್ಚೆ ಮಾಡುತ್ತಿದ್ದರು. ಅವರ ಭಾವನೆಯಲ್ಲಿ ಪರಿಪಕ್ವತೆ ಇರ ಲಿಲ್ಲ; ಮಾತಿನಲ್ಲಿ ತೂಕವಿರಲಿಲ್ಲ. ಅವರಲ್ಲಿ ಅನೇಕರು ಉತ್ತಮ ಯೋಧರಿದ್ದರು, ಶ್ರೇಷ್ಠ ಆದರ್ಶಗಳಿಗಾಗಿ ಅವರಲ್ಲಿ ಅನುಪಮ ಉತ್ಸಾಹವಿತ್ತು; ಆದರೂ ಅವರ ಮೇಲಿನ ಒಟ್ಟು ಪರಿಣಾಮ ನಿರಾಶಾದಾಯಕವೂ ಅಧೈರ್ಯಯುತವೂ ಇತ್ತು. ಪ್ರಾಯಶಃ ಇದು ತಾತ್ಕಾಲಿಕವಿದ್ದು ಮುಂದೆ ಸರಿಹೋಗಬಹುದೋ ಏನೋ ಅಥವ ಇತ್ತೀಚಿನ ಕಹಿ ಅನುಭವಗಳಿಂದ ಈಗ ಸರಿಹೋಗಿದ್ದಾರೋ ಏನೋ.

ಬೇರೆ ವಿಷಯದಲ್ಲಿ ಭಿನ್ನಾಭಿಪ್ರಾಯ ಏನೆ ಇರಲಿ ಭಾರತದ ವಿಷಯದಲ್ಲಿದ್ದ ಬ್ರಿಟಿಷರ ನೀತಿಯನ್ನು ರಾಷ್ಟ್ರೀಯ ಭಾವನೆಯ ಈ ಎಲ್ಲ ಪಕ್ಷಗಳೂ ಈ ವಿಷಮ ಪರಿಸ್ಥಿತಿಯಲ್ಲಿ ಏಕಕಂಠದಿಂದ ವಿರೋಧಿಸಿದವು. ಎಲ್ಲರೂ ಸಿಟ್ಟಿಗೆದ್ದು ಕಾಂಗ್ರೆಸ್ಸು ಅದನ್ನು ಪ್ರತಿಭಟಿಸಬೇಕೆಂದರು. ಆತ್ಮ ಗೌರವದಿಂದ ಎಚ್ಚೆತ್ತ ಭಾರ ತೀಯ ರಾಷ್ಟ್ರೀಯತ್ವವು ಈ ಅಪಮಾನಕ್ಕೆ ತಲೆಬಾಗಲು ಒಪ್ಪಲಿಲ್ಲ. ಉಳಿದ ಎಲ್ಲ ವಿಚಾರಗಳೂ ಹಿಂದೆ ಬಿದ್ದವು.

ಯುರೋಪಿನಲ್ಲಿ ಯುದ್ಧ ಘೋಷಣೆಯಾದೊಡನೆ ಭಾರತದ ವೈಸರಾಯ್ ಭಾರತವನ್ನೂ ಯುದ್ಧಕ್ಕೆ ತಳ್ಳಿದನು. ಅಸಹನೀಯ ಸಾಮ್ರಾಜ್ಯ ಪದ್ಧತಿಯ ಪ್ರತಿನಿಧಿಯಾಗಿ ಒಬ್ಬ ಪರದೇಶದ ವ್ಯಕ್ತಿ ಒಂದು ಮಾತು ಸಹ ಕೇಳದೆ ನಲವತ್ತು ಕೋಟಿ ಜನರನ್ನು ಯುದ್ಧಕ್ಕೆ ನೂಕಿದ. ಈ ರೀತಿ ಕೋಟ್ಯಂತರ ಜನರ ಅದೃಷ್ಟ ನಿರ್ಧರಿಸಬಲ್ಲ ಆ ಪದ್ಧತಿಯಲ್ಲೆ ಏನೋ ಒಂದು ಅಸ್ಥಿಗತ ರೋಗವಿರಬೇಕು, ಅದು ಕೊಳೆತು ನಾರುತ್ತಿರಬೇಕು. ಇತರ ಡೊಮಿನಿಯನ್‌ಗಳಲ್ಲಿ ಜನರ ಪ್ರತಿನಿಧಿಗಳು ಸಾಧಕ ಬಾಧಕಗಳನ್ನು ಪೂರ್ಣ ಚರ್ಚೆಮಾಡಿ ತಮ್ಮದೇ ಒಂದು ತೀರ್ಮಾನಕ್ಕೆ ಬಂದರು. ಭಾರತದಲ್ಲಿ ಮಾತ್ರ ಅದು ಸಾಧ್ಯವಿರಲಿಲ್ಲ. ಇದರಿಂದ ಭಾರತಕ್ಕೆ ಅಸಹನೀಯ ಸಂಕಟವಾಯಿತು.

## ೩. ಯುದ್ಧಕ್ಕೆ ವಿರೋಧ

ಯುರೋಪಿನಲ್ಲಿ ಯುದ್ಧ ಆರಂಭವಾದಾಗ ನಾನು ಚುಂಕಿಂಗ್‌ನಲ್ಲಿ ಇದ್ದೆ. ಕಾಂಗ್ರೆಸ್ ಅಧ್ಯಕ್ಷರು ಕೇಬಲ್ ಕಳಿಸಿದ್ದರಿಂದ ಒಡನೆ ನಾನು ಹಿಂದಿರುಗಿದೆ. ನಾನು ಹಿಂದಿರುಗುತ್ತಿರುವಾಗಲೇ ಕಾಂಗ್ರೆಸ್ ಕಾರ್ಯ ಸಮಿತಿಯ ಸಭೆ ಸೇರಿತ್ತು; ಈ ಸಭೆಗೆ ಬರಲು ಜನಾಬ್ ಜಿನ್ನಾಗೆ ಆಹ್ವಾನ ಕೊಟ್ಟೆವು. ಬರಲು ಸಾಧ್ಯವಿಲ್ಲವೆಂದು ತಿಳಿಸಿದನು. ವೈಸರಾಯ್ ಭಾರತವನ್ನು ಯುದ್ಧಕ್ಕೆ ತಳ್ಳಿದ್ದು ಮಾತ್ರವಲ್ಲದೆ ಅನೇಕ ವಿಶೇಷ ಶಾಸನಗಳನ್ನು ಮಾಡಿದ್ದನು; ಮತ್ತು ಬ್ರಿಟಿಷ್ ಪಾರ್ಲಿಮೆಂಟಿನಲ್ಲಿ ಇಂಡಿಯಾ ಶಾಸನದ ತಿದ್ದು ಪಡಿ ಸಹ ಆಗಿತ್ತು. ಈ ಎಲ್ಲ ಶಾಸನಗಳಿಂದ ಪ್ರಾಂತ ಸರಕಾರಗಳ ಅಧಿಕಾರ ಮತ್ತು ಕಾರ್ಯವಿಸ್ತಾರ ಸಂಕುಚಿತಗೊಂಡಿತು. ಪ್ರಜಾಪ್ರತಿನಿಧಿಗಳ ಅಭಿಪ್ರಾಯ ಪಡೆಯದೆ ಈ ರೀತಿ ವರ್ತಿಸಿದ್ದಕ್ಕೆ ಉಗ್ರ ಪ್ರತಿ ಭಟನೆ ಎದ್ದಿತು. ತಾವೇ ಮೇಲಿಂದ ಮೇಲೆ ಕೊಟ್ಟ ವಾಗ್ದಾನ ಮತ್ತು ಆಶ್ವಾಸನಗಳನ್ನೇ ಪೂರ್ಣ ಅಲ ಕ್ಷಿಸಿ ಮುರಿದಿದ್ದರು.

೧೯೩೯ ನೆಯ ಸೆಪ್ಟೆಂಬರ್ ೧೪ ನೆಯ ತಾರೀಖಿನ ದಿನ ದೀರ್ಘಕಾಲ ಪರ್ಯಾಲೋಚಿಸಿ ಕಾಂಗ್ರೆಸ್ ಕಾರ್ಯ ಸಮಿತಿಯು ಯುದ್ಧ ಪರಿಸ್ಥಿತಿಯ ಮೇಲೆ ದೀರ್ಘ ಹೇಳಿಕೆಯೊಂದನ್ನು ಕೊಟ್ಟಿತು. ವೈಸರಾಯನ ನಡೆವಳಿಕೆ ಹೊಸ ಶಾಸನಗಳು, ವಿಶೇಷ ಅಧಿಕಾರಗಳು ಎಲ್ಲವನ್ನೂ ಅದರಲ್ಲಿ ಉಲ್ಲೇಖಿಸಿ "ಈ ನಡೆವಳಿಕೆ ಗಳೆಲ್ಲ ಅನರ್ಥಕಾರಿಗಳೆಂದು ಕಾರ್ಯಸಮಿತಿಯ ಅಭಿಪ್ರಾಯ" ಎಂದು ಹೇಳಿದೆವು. ಫ್ಯಾಸಿಸಂ ಮತ್ತು ನಾಸಿಸಂಗಳನ್ನು ಸ್ಪಷ್ಟ ಖಂಡಿಸಿದೆವು. ಮುಖ್ಯವಾಗಿ ಜರ್ಮನ್ ನಾಜಿ ಸರಕಾರ ಪೋಲೆಂಡಿನ ಮೇಲೆ ಮಾಡಿದ ಆಕ್ರಮಣ ಖಂಡಿಸಿ, ಅದನ್ನು ಎದುರಿಸುತ್ತಿದ್ದ ಪೋಲರಿಗೆ ಸಹಾನುಭೂತಿಯನ್ನು ತೋರಿ ಸಿದೆವು.

ಸಹಕಾರದ ಭರವಸೆ ಕೊಟ್ಟರೂ "ಬಲಾತ್ಕಾರದ ತೀರ್ಮಾನ ಏನೇ ಇರಲಿ ಅದನ್ನು ಎದುರಿಸಬೇ ಕಾಗುವುದೆಂದೂ, ಕಾರ್ಯವು ಯೋಗ್ಯವಿದ್ದರೂ ಒತ್ತಾಯ ಮತ್ತು ಬಲಾತ್ಕಾರದಿಂದ ಸಹಕಾರ ಪಡೆಯಲು ಸಾಧ್ಯವಿಲ್ಲವೆಂದೂ, ಪರದೇಶೀ ಅಧಿಕಾರ ವರ್ಗ ಕೊಟ್ಟ ಆಜ್ಞೆಗಳಿಗೆ ಭಾರತದ ಜನರು ಮಾನ್ಯ ಮಾಡುವು ದನ್ನು ಕಾರ್ಯ ಸಮಿತಿಯು ಎಂದಿಗೂ ಒಪ್ಪುವದಿಲ್ಲವೆಂದೂ, ಹೇಳಿದೆವು. ಗುರಿಯು ಇಬ್ಬರಿಗೂ ಯೋಗ್ಯ ವೆಂದು ತೋರಿದರೆ, ಪರಸ್ಪರ ಒಪ್ಪಿಗೆಯಿಂದ ಸಮಾನ ಅಧಿಕಾರವಿದ್ದರೆ ಮಾತ್ರ ಸಹಕಾರ ಸಾಧ್ಯ; ಸ್ವಾತಂತ್ರ್ಯ ಪಡೆದು ಪ್ರಜಾಪ್ರಭುತ್ವ ಸರಕಾರ ಸ್ಥಾಪಿಸಲು ಭಾರತದ ಜನತೆ ಇತ್ತೀಚಿನ ವರ್ಷಗಳಲ್ಲಿ ಅಪಾರ ಕಷ್ಟ ಅನುಭವಿಸಿ ಸ್ವಯಂ ಪ್ರೇರಣೆಯಿಂದ ಅದ್ಭುತ ತ್ಯಾಗಮಾಡಿದೆ ; ಅದರ ಸಹಾನುಭೂತಿ ಎಲ್ಲ ಸ್ವಾತಂತ್ರ್ಯ ಮತ್ತು ಪ್ರಜಾಪ್ರಭುತ್ವದ ಕಡೆಗೆ; ಆದರೆ ಯಾವ ಪ್ರಜಾಪ್ರಭುತ್ವದ ಸ್ವಾತಂತ್ರ್ಯಕ್ಕಾಗಿ ಯುದ್ಧ ಘೋಷಣೆ ಆಗಿದೆಯೋ ಆ ಪ್ರಜಾಪ್ರಭುತ್ವದ ಸ್ವಾತಂತ್ರ್ಯವನ್ನೇ ಭಾರತಕ್ಕೆ ನಿರಾಕರಿಸುವಾಗ ಮತ್ತು ಇದ್ದ ಅಲ್ಪ ಸ್ವಾತಂತ್ರ್ಯವನ್ನೂ ಅಪಹರಿಸುವಾಗ ಯಾವ ಯುದ್ಧದಲ್ಲೂ ಭಾಗವಹಿಸಲು ಭಾರತಕ್ಕೆ ಸಾಧ್ಯವಿಲ್ಲ ವೆಂದೆವು.

"ಗ್ರೇಟ್ ಬ್ರಿಟನ್ ಮತ್ತು ಫ್ರಾನ್ಸಿನ ಸರಕಾರಗಳು ಪ್ರಜಾಪ್ರಭುತ್ವ ಮತ್ತು ಸ್ವಾತಂತ್ರ್ಯಕ್ಕಾಗಿ, ಆಕ್ರಮಣ ನೀತಿ ಕೊನೆಗಾಣಿಸುವುದಕ್ಕಾಗಿ ಈ ಯುದ್ಧ ಎಂದು ಹೇಳುತ್ತಿರುವುದನ್ನು ಕಾರ್ಯ ಸಮಿತಿಯು ಗಮನಿಸಿದೆ; ಆದರೆ ಇತ್ತೀಚಿನ ಘಟನೆಗಳನ್ನು ಗಮನಿಸಿದರೆ ಆಡುವ ಮಾತು ಮತ್ತು ಹೇಳುವ ಉನ್ನತ ಆದರ್ಶಗಳಿಗೂ ಮತ್ತು ನಿಜವಾದ ಉದ್ದೇಶ ಮತ್ತು ಗುರಿಗಳಿಗೂ ಅಜಗಜಾಂತರವಿದೆ" ಎಂದು ಹೇಳಿದೆವು. ಮೊದಲನೆ ಪ್ರಪಂಚ ಯುದ್ಧದ ಕಾಲದ ಮತ್ತು ಅನಂತರದ ಕೆಲವು ಘಟನೆಗಳನ್ನು ಉದಹರಿಸಿದೆವು. "ಪವಿತ್ರ ವಚನವೆಂದು ಭರವಸೆಕೊಟ್ಟು ಮಾಡಿದ ಘೋಷಣೆಗಳನ್ನೆಲ್ಲ ಸ್ವಲ್ಪವೂ ಸಂಕೋಚವಿಲ್ಲದೆ ಹೇಗೆ ಕೈಬಿಡಬಹುದೆಂದು ಇತ್ತೀಚಿನ ಐತಿಹಾಸಿಕ ಘಟನೆಗಳಿಂದ ಸ್ಪಷ್ಟವಾಗಿದೆ........, ಪ್ರಜಾಪ್ರಭುತ್ವಕ್ಕೆ ಅಪಾಯ ಒದಗಿದೆ, ಪ್ರಜಾಪ್ರಭುತ್ವದ ರಕ್ಷಣೆಯಾಗಬೇಕು ಎಂಬ ಘೋಷಣೆಯನ್ನು ಕಾರ್ಯಸಮಿತಿ ಪೂರ್ಣ ಒಪ್ಪುತ್ತದೆ; ಪಾಶ್ಚಾತ್ಯ ರಾಷ್ಟ್ರಗಳ ಜನರ ಏಕೈಕ ಧ್ಯೇಯವೇ ಅದೆಂದೂ, ಅದಕ್ಕಾಗಿ ಯಾವ ತ್ಯಾಗವನ್ನಾದರೂ ಮಾಡಲು ಅವರು ಸಿದ್ಧರಿದ್ದಾರೆಂದೂ ಸಮಿತಿಯು ಮನಗಂಡಿದೆ; ಆದರೂ ಭಾರತದ ಜನರ ಉನ್ನತ ಧ್ಯೇಯ ಮತ್ತು ಭಾವನೆಗಳನ್ನೂ, ಮತ್ತು ಅವುಗಳಿಗಾಗಿ ಹೋರಾಟ ಮಾಡಿದ ಅಪಾರ ತ್ಯಾಗವನ್ನೂ ತೃಣೀಕರಿಸಲಾಗುತ್ತಿದೆ; ಮತ್ತು ಅವರು ಭಾರತದ ಜನತೆಯ ವಿಶ್ವಾಸ ಉಳಿಸಿಕೊಂಡಿಲ್ಲ" ಎಂದೆವು. "ಈಗಿರುವಂತೆ ಸಾಮ್ರಾಜ್ಯದ ಆಸ್ತಿ, ಅಧೀನರಾಜ್ಯಗಳು, ಹಕ್ಕುದಾರಿ, ಅಧಿಕಾರ ಇವುಗಳ ರಕ್ಷಣೆಗಾಗಿ ಯುದ್ಧವೆಂದರೆ ಭಾರತಕ್ಕೂ ಅದಕ್ಕೂ ಯಾವ ಸಂಬಂಧವೂ ಇಲ್ಲ; ಆದರೆ ಯುದ್ಧದ ಗುರಿ ಪ್ರಜಾಪ್ರಭುತ್ವ ಮತ್ತು ಅದರ ಆಧಾರದ ಮೇಲೆ ಒಂದು ಪ್ರಪಂಚ ರಚನೆ ಎಂದರೆ ಭಾರತಕ್ಕೆ ಆ ಗುರಿಯಲ್ಲಿ ಆಸಕ್ತಿ ಇದೆ. ಭಾರತದ ಪ್ರಜಾಪ್ರಭುತ್ವಕ್ಕೂ ಬ್ರಿಟಿಷ್ ಅಥವ ಪ್ರಪಂಚದ ಪ್ರಜಾಪ್ರಭುತ್ವಕ್ಕೂ ಯಾವ ವಿರೋಧವೂ ಇಲ್ಲ. ಆದರೆ ಭಾರತದ ಮತ್ತು ಇತರ ದೇಶಗಳ ಸ್ವಾತಂತ್ರ್ಯವೆಂದೊಡನೆ ಸಾಮ್ರಾಜ್ಯ ನೀತಿಗೂ, ಫ್ಯಾಸಿಸ್ಟ್ ನೀತಿಗೂ ವಿರೋಧ ಅನಿವಾರ್ಯ. ಗ್ರೇಟ್ ಬ್ರಿಟನ್ ಪ್ರಜಾಪ್ರಭುತ್ವದ ರಕ್ಷಣೆ ಮತ್ತು ವಿಸ್ತರಣಕ್ಕಾಗಿ ಯುದ್ಧಮಾಡುವುದಾದರೆ ಅದು ಮೊದಲು ತನ್ನ ಅಧೀನ ರಾಷ್ಟ್ರಗಳಲ್ಲಿ ಸಾಮ್ರಾಜ್ಯ

ನೀತಿಯನ್ನು ಬಿಡಬೇಕು...........ಪ್ರಜಾಪ್ರಭುತ್ವ ಪಡೆದ ಸ್ವತಂತ್ರ ಭಾರತವು ಆಕ್ರಮಣ ವಿರೋಧಕ್ಕಾಗಿ ಮತ್ತು ಆರ್ಥಿಕ ಸಹಕಾರಕ್ಕಾಗಿ ಇತರ ಸ್ವತಂತ್ರ ರಾಷ್ಟ್ರಗಳೊಡನೆ ಪರಸ್ಪರ ಸಹಕರಿಸಿ ನಡೆಯಲು ಸಂತೋಷದಿಂದ ಒಪ್ಪುತ್ತದೆ. ಪ್ರಪಂಚದ ಜ್ಞಾನ ಮತ್ತು ಪ್ರಕೃತಿ ಸಂಪತ್ತನ್ನು ಮಾನವ ಕುಲದ ಪ್ರಗತಿ ಮತ್ತು ಅಭ್ಯುದಯಕ್ಕಾಗಿ ಉಪಯೋಗಿಸಿ ಸ್ವಾತಂತ್ರ್ಯ ಮತ್ತು ಪ್ರಜಾಪ್ರಭುತ್ವದ ತಳಹದಿಯ ಮೇಲೆ ಹೊಸದೊಂದು ಪ್ರಪಂಚದ ನಿರ್ಮಾಣಕ್ಕೆ ಭಾರತವು ದುಡಿಯಲು ಸದಾ ಸಿದ್ಧವಿದೆ" ಎಂದು ತಿಳಿಸಿದೆವು.

ಕಾಂಗ್ರೆಸ್ ಕಾರ್ಯಸಮಿತಿಯ ದೃಷ್ಟಿಯು ಪೂರ್ಣ ರಾಷ್ಟ್ರೀಯವಿದ್ದರೂ ತನ್ನ ಅಂತರರಾಷ್ಟ್ರೀಯ ದೃಷ್ಟಿಯನ್ನೂ ಅದರಲ್ಲಿ ವ್ಯಕ್ತಗೊಳಿಸಿತು. ಶಸ್ತ್ರಸಜ್ಜಿತ ಸೈನ್ಯಗಳ ಹೋರಾಟ ಮಾತ್ರ ಯುದ್ಧವಲ್ಲ ಎಂದು ಹೇಳಿತು. "ಯೂರೋಪಿಗೆ ಒದಗಿರುವ ಗಂಡಾಂತರ ಯೂರೋಪಿನದು ಮಾತ್ರವಲ್ಲ; ಅದು ಇಡೀ ಮಾನವ ಪ್ರಪಂಚದ್ದು. ಈ ಯುದ್ಧ ಇತರ ಯುದ್ಧಗಳಂತೆ, ಗಂಡಾಂತರಗಳಂತೆ ಇಂದಿನ ಪ್ರಪಂಚವನ್ನು ಈಗಿರುವಂತೆಯೇ ಬಿಡುವುದಿಲ್ಲ. ಒಳ್ಳೆಯದಕ್ಕೋ ಕೆಟ್ಟುದಕ್ಕೋ ಪ್ರಪಂಚದ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಯನ್ನೇ ವ್ಯತ್ಯಾಸಗೊಳಿಸುತ್ತದೆ. ಕಳೆದ ಮಹಾ ಯುದ್ಧದಿಂದ ಈಚೆಗೆ ವಿಶೇಷ ಬೆಳೆದ ರಾಜಕೀಯ ಮತ್ತು ಸಾಮಾಜಿಕ ದ್ವೇಷ ಮತ್ತು ಘರ್ಷಣೆಗಳ ಅನಿವಾರ್ಯ ಪರಿಣಾಮವೇ ಈ ಯುದ್ಧ. ಈ ದ್ವೇಷಾಸೂಯೆ ಮತ್ತು ತಿಕ್ಕಾಟ ನಿರ್ಮೂಲವಾಗಿ ಪ್ರಪಂಚದಲ್ಲಿ ಒಂದು ಹೊಸ ಸಮ ತೋಲನೆ ಬರುವವರೆಗೂ ಈ ಅಪಾಯ ಮುಂದೆಯೂ ತಪ್ಪಿದ್ದಲ್ಲ, ಆ ಸಮತೋಲನ ದೃಷ್ಟಿ ಬರಬೇಕಾದರೆ ಪರರಾಷ್ಟ್ರಗಳ ಆಕ್ರಮಣ ಮತ್ತೂ ಸುಲಿಗೆಗಳು ನಿಲ್ಲಬೇಕು ; ಸರ್ವರ ಸುಖಕ್ಕಾಗಿ ನ್ಯಾಯಬದ್ಧ ತಳಹದಿಯ ಮೇಲೆ ಹೊಸ ಆರ್ಥಿಕ ನೀತಿ ಏರ್ಪಡಬೇಕು. ಭಾರತವೇ ಈ ಪ್ರಶ್ನೆಯ ಮುಖ್ಯ ಒರೆಗಲ್ಲು ; ಆಧುನಿಕ ಸಾಮ್ರಾಜ್ಯ ನೀತಿಯ ದವಡೆಯಲ್ಲಿ ಸಿಕ್ಕಿ ನರಳುತ್ತಿರುವ ರಾಷ್ಟ್ರಗಳಲ್ಲಿ ಅದೇ ಮುಖ್ಯ ನಿದರ್ಶನ. ಭಾರತದ ಸಮಸ್ಯೆ ಪರಿಹಾರವಾಗುವವರೆಗೆ ಪ್ರಪಂಚದ ಸಮಸ್ಯೆಗಳ ಪರಿಹಾರಕ್ಕೆ ಯಾವ ಹೊಸ ಯೋಜನೆಯೂ ಯಶಸ್ವಿಯಾಗಲು ಸಾಧ್ಯವಿಲ್ಲ. ಅಪಾರ ಪ್ರಕೃತಿ ಸಂಪತ್ತು ಇರುವ ಭಾರತವು ಪ್ರಪಂಚ ವ್ಯವಸ್ಥೆಯಲ್ಲಿ ಯೋಗ್ಯಪಾತ್ರ ವಹಿಸಲೇಬೇಕು. ಆದರೆ ಈ ಮಹತ್ಸಾಧನೆಯಲ್ಲಿ ಯೋಗ್ಯರೀತಿ ಶ್ರಮಿಸಬೇಕಾದರೆ ಭಾರತದ ಬಂಧನಗಳೆಲ್ಲ ಕಳಚಬೇಕು ; ಗರಿಗೆದರಿ ಹೊಸ ಚೈತನ್ಯದಿಂದ ಭಾಗವಹಿಸಲು ಅನುಕೂಲವಾಗ ಬೇಕಾದರೆ ಸ್ವತಂತ್ರ ರಾಷ್ಟ್ರವಾದರೆ ಮಾತ್ರ ಸಾಧ್ಯ. ಸ್ವಾತಂತ್ರ್ಯವು ಇಂದು ಅಖಂಡವಿದೆ. ಸಾಮ್ರಾಜ್ಯ ಹಿಡಿತದ ಭದ್ರತೆಗೆಂದು ಹೂಡಿದ ಪ್ರಯತ್ನವು ಯಾವುದೇ ಇರಲಿ, ಪ್ರಪಂಚದ ಯಾವ ಭಾಗದಲ್ಲೇ ಇರಲಿ ಅದರಿಂದ ಹೊಸ ವಿಪತ್ತು ಖಂಡಿತ" ಎಂದು ಸಾರಿದೆವು.

ಯೂರೋಪಿನ ಪ್ರಜಾಪ್ರಭುತ್ವದ ರಕ್ಷಣೆಗೆಂದು ನಾಮುಂದೆ ತಾಮುಂದೆ ಎಂದು ಹಾತೊರೆಯುತ್ತಿದ್ದ ಭಾರತದ ಸಂಸ್ಥಾನಗಳ ರಾಜರುಗಳಿಗೆ "ನಿರಂಕುಶ ಸರ್ವಾಧಿಕಾರ ತಾಂಡವವಾಡುತ್ತಿರುವ ನಿಮ್ಮ ಸಂಸ್ಥಾನ ಗಳಲ್ಲಿ ಮೊದಲು ಪ್ರಜಾಪ್ರಭುತ್ವ ಸ್ಥಾಪಿಸಿ ಎಂದು ಕಾಂಗ್ರೆಸ್ ಕಾರ್ಯಸಮಿತಿ ಸೂಚನೆಕೊಟ್ಟಿತು.

ಸಾಧ್ಯವಾದ ಎಲ್ಲ ರೀತಿಯ ಸಹಾಯಕೊಡಲು ಕಾರ್ಯ ಸಮಿತಿ ಕಾತರವಿದೆ ಎಂದೂ, ಆದರೆ " ಇಂದಿನ ಮತ್ತು ಹಿಂದಿನ ಬ್ರಿಟಿಷ್ ಕಾರ್ಯನೀತಿಯಲ್ಲಿ ಪ್ರಜಾಪ್ರಭುತ್ವ ಅಥವ ಸ್ವಯಂ ನಿರ್ಣಯಾಧಿ ಕಾರ ಸ್ಥಾಪನೆಗೆ ಯಾವ ಪ್ರಯತ್ನವೂ ಕಾಣುವುದಿಲ್ಲವೆಂದೂ, ಬ್ರಿಟಿಷ್ ಸರಕಾರದ ಇಂದಿನ ಯುದ್ಧ ಘೋಷಣೆಯ ಆದರ್ಶಗಳನ್ನೂ ಭಾರತದಲ್ಲಿ ಕಾರ್ಯರೂಪಕ್ಕೆ ತರಲಾಗುತ್ತದೆ ಅಥವ ತರುವ ಉದ್ದೇಶ ವಿದೆ ಎಂಬ ಯಾವ ಭರವಸೆಯೂ ಇಲ್ಲವೆಂದೂ " ತಿಳಿಸಲಾಯಿತು. " ಇಂದಿನ ಪರಿಸ್ಥಿತಿಯ ಉತ್ಕಟಾ ವಸ್ಥೆಯನ್ನೂ ದೈನಂದಿನ ಘಟನೆಗಳು ಮನೋವೇಗದಿಂದ ಅತಿ ರಭಸದಲ್ಲಿ ಒಂದರಮೇಲೊಂದು ಸಂಭವಿ ಸುತ್ತಿರುವುದನ್ನೂ ಗಮನಿಸಿ ಕಾರ್ಯ ಸಮಿತಿಯು ಈಗಲೇ ಅಂತ್ಯ ತೀರ್ಮಾನಕ್ಕೆ ಬರುವುದಿಲ್ಲವೆಂದೂ ಯುದ್ಧದ ನಿಜವಾದ ಸಮಸ್ಯೆಗಳೇನು, ಗುರಿಗಳೇನು, ಈಗ ಮತ್ತು ಮುಂದೆ ಭಾರತದ ಸ್ಥಾನಮಾನವೇನು ಎಂಬ ಪೂರ್ಣ ವಿವರಣೆಗೆ ಕಾಯುವುದೆಂದೂ '' ತಿಳಿಸಿತು. ಆದ್ದರಿಂದ " ಬ್ರಿಟಿಷ್ ಸರಕಾರ ಪ್ರಜಾ ಪ್ರಭುತ್ವ, ಸಾಮ್ರಾಜ್ಯನೀತಿ, ಪ್ರಪಂಚದ ಹೊಸ ವ್ಯವಸ್ಥೆ ಇವುಗಳ ವಿಷಯದಲ್ಲಿ ತಮ್ಮ ಯುದ್ಧನೀತಿ

ಏನು; ಮತ್ತು ಅವು ಭಾರತಕ್ಕೆ ಎಷ್ಟರ ಮಟ್ಟಿಗೆ ಅನ್ವಯಿಸುತ್ತವೆ; ಮತ್ತು ಈಗ ಮುಂದೆ ಹೇಗೆ ಅವು ಆಚರಣೆಗೆ ಬರುತ್ತವೆ; ಭಾರತದಲ್ಲಿ ಸಾಮ್ರಾಜ್ಯತ್ವ ತೊರೆದು, ಭಾರತವನ್ನು ಸ್ವತಂತ್ರ ರಾಷ್ಟ್ರವೆಂದು ಪರಿಗಣಿಸಿ ಭಾರತದ ಜನರ ಅಭಿಪ್ರಾಯದಂತೆ ತನ್ನ ಕಾರ್ಯನೀತಿ ರೂಪಿಸಿಕೊಳ್ಳಲು ಭಾರತಕ್ಕೆ ಅವಕಾಶ ಇದೆಯೆ ? ತಿಳಿಸಬೇಕೆಂದೆವು. ಯಾವ ಘೋಷಣೆಗೇ ಆಗಲಿ ಇಂದಿನ ಅದರ ಉಪಯುಕ್ತತೆಯೇ ಅದರ ನಿಜವಾದ ಒರೆಗಲ್ಲು. ಇಂದಿನ ನೀತಿಯೇ ನಾಳಿನ ಬಾಳಿಗೆ ದಾರಿ. ಈ ಘೋರ ಯುದ್ಧವು ಸಾಮ್ರಾಜ್ಯ ನೀತಿಯ ಭಾವನೆಯಿಂದಲೇ ನಡೆಯುವುದಾದರೆ, ಮತ್ತು ಯಾವ ನೀತಿಯು ಈ ಮಹಾಯುದ್ಧಕ್ಕೆ ಮತ್ತು ಮಾನವ ಜನಾಂಗದ ಪಾಶವೀವೃತ್ತಿಗೆ ಮೂಲ ಕಾರಣವಾಗಿದೆಯೋ ಆ ನೀತಿಯ ಪರಿಪೋಷಣೆಗೇ ನಡೆಯುವುದಾದರೆ ಅದಕ್ಕಿಂತ ಮಹಾದುರಂತ ಮತ್ತೊಂದಿಲ್ಲ.'' ಎಂದು ನಿರ್ಣಯಮಾಡಿತು.

ಬಹಳ ದೀರ್ಘಕಾಲ ಚರ್ಚೆಮಾಡಿ ಆಲೋಚಿಸಿ ಹೊರಗೆಡಹಿದ ಈ ನಿರ್ಣಯದಲ್ಲಿ ಇಂಗ್ಲೆಂಡಿಗೂ ಭಾರತಕ್ಕೂ ಮಧ್ಯೆ ಇದ್ದ ಅಡ್ಡಗೋಡೆಗಳನ್ನು ಕಿತ್ತೊಗೆದು, ಕಳೆದ ಒಂದೂವರೆ ಶತಮಾನಗಳ ವಿಷಮಯ ವಾತಾವರಣ ನಾಶಮಾಡಿ, ಸ್ವಾತಂತ್ರ್ಯದಾಹದ ತೀವ್ರಾಸಕ್ತಿ ತೃಪ್ತಿಗೊಳಿಸಿ, ಜನರ ಉತ್ಸಾಹ ಪೂರಿತ ಬೆಂಬಲದಿಂದ ಪ್ರಪಂಚದ ಈ ಹೋರಾಟದಲ್ಲಿ ಭಾಗವಹಿಸಲು ಯಾವುದಾದರೂ ಒಂದು ಸಂಧಾನ ಮಾರ್ಗ ಕಂಡುಹಿಡಿಯಲು ಪ್ರಯತ್ನಮಾಡಲಾಗಿತ್ತು. ಭಾರತದ ಸ್ವಾತಂತ್ರ್ಯದ ಬೇಡಿಕೆಯಲ್ಲಿ ಹೊಸದು ಏನೂ ಇರಲಿಲ್ಲ. ಯುದ್ಧ ಅಥವ ಅಂತರರಾಷ್ಟ್ರೀಯ ಬಿಕ್ಕಟ್ಟಿನಿಂದ ಅದು ಆರಂಭವಾದದ್ದೂ ಅಲ್ಲ. ಅನೇಕ ತಲೆಮಾರುಗಳಿಂದ ಆ ಸ್ವಾತಂತ್ರ್ಯದಾಹ ನಮ್ಮ ಎಲ್ಲ ಕಾರ್ಯನೀತಿ ಮತ್ತು ಭಾವನೆಗಳ ತಳಹದಿಯಾಗಿತ್ತು. ಭಾರತಕ್ಕೆ ಸ್ವಾತಂತ್ರ್ಯ ಕೊಡುತ್ತೇವೆಂದು ಹೇಳಿ, ಯುದ್ಧದ ಅವಶ್ಯಕತೆಗಳನ್ನು ಗಮನದಲ್ಲಿಟ್ಟುಕೊಂಡು, ತಾತ್ಕಾಲಿಕ ಪರಿಸ್ಥಿತಿಗನುಗುಣವಾಗಿ ಆ ಬೇಡಿಕೆ ಪೂರೈಸಲು ಯಾವ ಕಷ್ಟವೂ ಇರಲಿಲ್ಲ. ಯುದ್ಧದ ಅವಶ್ಯಕತೆಗಳಿಗೇ ಅದು ಅತ್ಯಗತ್ಯವಿತ್ತು. ಭಾರತದ ಸ್ವಾತಂತ್ರ್ಯ ಒಪ್ಪಲು ಇಂಗ್ಲೆಂಡಿಗೆ ಇಷ್ಟವಿದ್ದು, ಮನಸ್ಸು ಮಾಡಿದ್ದರೆ ದೊಡ್ಡ ತೊಂದರೆ ಯಾವುದೂ ಇರಲಿಲ್ಲ. ಉಳಿದುದೆಲ್ಲ ಪರಸ್ಪರ ಅನುಸರಣೆಯಿಂದ ಸರಿಗೂಡಿಸಲು ಸಾಧ್ಯವಿತ್ತು. ಪ್ರತಿಯೊಂದು ಪ್ರಾಂತದಲ್ಲೂ ಪ್ರಾಂತ ಸರಕಾರವಿತ್ತು. ಕೇಂದ್ರದಲ್ಲಿ ಯುದ್ಧಕಾಲದ ಒಂದು ಜನತಾ ಸರಕಾರ ರಚನೆಮಾಡಲು ಬಹಳ ಸುಲಭವಿತ್ತು. ಜನರ ಬೆಂಬಲದಿಂದ, ದಕ್ಷತೆಯಿಂದ ಯುದ್ಧಸಿದ್ಧತೆಮಾಡಿ, ಸೈನ್ಯಪಡೆಗಳೊಂದಿಗೆ ಪೂರ್ಣ ಸಹಕರಿಸಿ ಒಂದು ಕಡೆ ಜನರಿಗೂ ಮತ್ತು ಪ್ರಾಂತ್ರ್ಯ ಸರಕಾರಗಳಿಗೂ, ಇನ್ನೊಂದು ಕಡೆ ಬ್ರಿಟಿಷ್ ಸರಕಾರಕ್ಕೂ ಮಧ್ಯವರ್ತಿಯಾಗಿ ನಿಂತು ಕೆಲಸಮಾಡಲು ಕೇಂದ್ರ ಸರಕಾರಕ್ಕೆ ಸಾಧ್ಯವಿತ್ತು. ಇತರ ಘಟನಾತ್ಮಕ ಸಮಸ್ಯೆಗಳ ತೀರ್ಮಾನ ಮುಂಚೆಯೇ ಅಗತ್ಯವಿದ್ದರೂ ಯುದ್ಧ ಮುಗಿಯುವವರೆಗೆ ಮುಂದೆ ಹಾಕಬಹುದಿತ್ತು. ಯುದ್ಧಾನಂತರ ಪ್ರಜೆಗಳಿಂದ ಚುನಾಯಿತರಾದ ಸದಸ್ಯರನ್ನು ಸಭೆಸೇರಿಸಿ ಒಂದು ಶಾಶ್ವತ ಸಂವಿಧಾನ ರಚಿಸಿ ಪರಸ್ಪರ ಹಿತದೃಷ್ಟಿಯಿಂದ ಇಂಗ್ಲೆಂಡಿನೊಡನೆ ಒಂದು ಒಪ್ಪಂದಕ್ಕೆ ಬರಲು ಸಾಧ್ಯವಿತ್ತು.

ನಮ್ಮಲ್ಲಿ ಅನೇಕರಿಗೆ ಅಂತರರಾಷ್ಟ್ರೀಯ ಸಮಸ್ಯೆಗಳ ಪರಿಣಾಮ ಏನೆಂದು ಅರ್ಥಮಾಡಿಕೊಳ್ಳಲು ಶಕ್ತಿಯೇ ಇಲ್ಲದಿದ್ದಾಗ, ಇತ್ತೀಚಿನ ಬ್ರಿಟಿಷ್ ನೀತಿಗೆ ಉಗ್ರ ಪ್ರತಿಭಟನೆ ತೋರಿಸುತ್ತಿದ್ದಾಗ ಈ ಸಂಧಾನ ಸೂಚನೆ ಮಾಡುವುದು ಕಾಂಗ್ರೆಸ್ ಕಾರ್ಯಸಮಿತಿಗೆ ಸುಲಭದ ಕೆಲಸವಾಗಿರಲಿಲ್ಲ. ಬಹಳ ದಿನಗಳಿಂದ ಎರಡೂ ಕಡೆ ಬೆಳೆದು ಬಲಿತ ಅಪನಂಬಿಕೆ ಮತ್ತು ಸಂಶಯಗಳನ್ನು ನಿವಾರಿಸಲು ಸುಲಭದ ಮಂತ್ರಶಕ್ತಿ ಯಾವುದೂ ಇಲ್ಲವೆಂದು ನಮಗೆ ತಿಳಿದಿತ್ತು. ಆದರೂ ವಿಷಮ ಪರಿಸ್ಥಿತಿಯ ಒತ್ತಡದಿಂದ ಇಂಗ್ಲೆಂಡಿನ ನಾಯಕರಿಗೆ ಜ್ಞಾನೋದಯವಾಗಿ ತಮ್ಮ ಸಾಮ್ರಾಜ್ಯ ನೀತಿಯ ಡೊಂಕುದಾರಿ ಬಿಟ್ಟು ದೂರಾಲೋಚನೆಯಿಂದ ನಮ್ಮ ಸ್ನೇಹ ಹಸ್ತ ಹಿಡಿದು ಇಂಗ್ಲೆಂಡ್ ಮತ್ತು ಇಂಡಿಯ ಮಧ್ಯೆ ಇದ್ದ ದೀರ್ಘಕಾಲದ ಮನಸ್ತಾಪವನ್ನು ಮುಕ್ತಾಯ ಮಾಡಿ ಭಾರತದ ಉತ್ಸಾಹವನ್ನೂ ಸಂಪತ್ತನ್ನೂ ಯುದ್ಧಕ್ಕಾಗಿ ಅಣಿಗೊಳಿಸಿಕೊಳ್ಳುವರೆಂದು ಆಶಿಸಿದೆವು.

ಆದರೆ ಅದೆಲ್ಲಿ ಸಾಧ್ಯ ? ನಾವು ಕೇಳಿದ್ದಕ್ಕೆಲ್ಲ ನಕಾರವೇ ಉತ್ತರವಾಯಿತು. ಸ್ನೇಹಿತರು, ಸಹೋ

ದ್ರೋಹಿಗಳು ಎಂದು ನಮ್ಮನ್ನು ಕಾಣಲು ಅವರು ಸಿದ್ಧರಿರಲಿಲ್ಲ; ಅವರು ಹೇಳಿದಂತೆ ಕೇಳುವ ದಾಸರಾಗಿ ನಾವು ಉಳಿದಿರಬೇಕೆಂದೇ ಅವರ ಇಷ್ಟವೆಂದು ಸ್ಪಷ್ಟವಾಯಿತು. 'ಸಹಕಾರ' ಎಂಬ ಪದಕ್ಕೆ ಅವರ ಅರ್ಥವೇ ಬೇರೆಯಾಯಿತು, ನಮ್ಮದೇ ಬೇರೆ ಆಯಿತು. ನಮಗೆ ಸಹಕಾರವೆಂದರೆ ಸಮಾನ ವ್ಯಕ್ತಿಗಳ ಮತ್ತು ಸ್ನೇಹಿತರ ಸಹಕಾರ; ಅವರಿಗೆ ಸಹಕಾರವೆಂದರೆ ಅವರು ಆಜ್ಞೆಮಾಡುವುದು, ನಾವು ತುಟಿಪಿಟ್ಟೆನ್ನದೆ ಅವರ ಆಜ್ಞೆ ಪಾಲಿಸುವುದು. ಯಾವುದಕ್ಕಾಗಿ ನಮ್ಮ ಜೀವಮಾನವೆಲ್ಲ ಹೋರಾಡಿದ್ದೆವೊ ಮತ್ತು ಯಾವುದು ನಮ್ಮ ಜೀವನಕ್ಕೊಂದು ಅರ್ಥ ಕೊಟ್ಟಿತ್ತೊ ಆ ಉನ್ನತ ಆದರ್ಶವನ್ನು ಮಣ್ಣುಗೂಡಿಸದೆ, ಅದಕ್ಕೆ ದ್ರೋಹಮಾಡದೆ ಅವರಂತೆ ನಡೆಯಲು ಸಾಧ್ಯವಿರಲಿಲ್ಲ. ನಮ್ಮಲ್ಲಿ ಕೆಲವರು ಒಪ್ಪಿದರೂ ಜನರು ಮಾತ್ರ ನಮ್ಮ ನೀತಿಯನ್ನೆಂದೂ ಒಪ್ಪುತ್ತಿರಲಿಲ್ಲ. ರಾಷ್ಟ್ರೀಯ ಆಂದೋಲನದಿಂದ ನಮ್ಮನ್ನು ಹೊರದೂಡಿ ರಾಷ್ಟ್ರ ಘಾತಕರೆಂದು ಬಹಿಷ್ಕರಿಸುತ್ತಿದ್ದರು. ಅಲ್ಲದೆ ನಮ್ಮ ಅಂತರರಾಷ್ಟ್ರೀಯ ನೀತಿಯೂ ಮಣ್ಣು ಗೂಡುತ್ತಿತ್ತು.

ನಮ್ಮ ಪ್ರಾಂತ ಸರಕಾರಗಳ ಪರಿಸ್ಥಿತಿ ಬಹಳ ಚಿಂತಾಜನಕವಾಯಿತು. ನಿತ್ಯ ಗೌರ್ನರ್ ಅಥವ ವೈಸರಾಯ್ ಮಧ್ಯೆ ಪ್ರವೇಶಿಸಿದುದಕ್ಕೆ ಸಮ್ಮತಿಸಬೇಕು ಅಥವ ಅವರೊಂದಿಗೆ ಹೋರಾಟ ನಡೆಸಬೇಕು. ಉನ್ನತ ಅಧಿಕಾರಿಗಳೆಲ್ಲ ಗೌರ್ನರ್ ಕಡೆ. ಮಂತ್ರಿಗಳನ್ನೂ ಶಾಸನ ಸಭೆಗಳನ್ನೂ ಮೊದಲಿಗಿಂತ ಈಗ ಇನ್ನೂ ಹೆಚ್ಚು ಪರಕೀಯರಂತೆ ಕಂಡರು. ನಿರಂಕುಶ ರಾಜ ಅಥವ ರಾಜ ಪ್ರತಿನಿಧಿಗಳಿಗೂ ಪಾರ್ಲಿಮೆಂಟಿಗೂ ನಡೆದ ಘಟನಾತ್ಮಕ ಹೋರಾಟದಂತೆ ಇಲ್ಲಿಯೂ ಹೋರಾಟ ಆರಂಭವಾಯಿತು. ಒಂದು ವ್ಯತ್ಯಾಸವೆಂದರೆ ಇಲ್ಲಿ ಆ ರಾಜ ಮತ್ತು ರಾಜಪ್ರತಿನಿಧಿಗಳು ಪರಕೀಯರು ಮತ್ತು ಅವರ ಶಕ್ತಿ ಎಲ್ಲ ಅವರ ಸೈನ್ಯಶಕ್ತಿಯಲ್ಲಿ. ಹನ್ನೊಂದು ಪ್ರಾಂತಗಳಲ್ಲಿ ಬಂಗಾಳ, ಪಂಜಾಬ್ ಮತ್ತು ಸಿಂಧ್ ಈ ಮೂರು ಪ್ರಾಂತಗಳನ್ನುಳಿದು ಎಂಟು ಪ್ರಾಂತ್ಯಗಳ ಕಾಂಗ್ರೆಸ್ ಸರಕಾರಗಳು ಪ್ರತಿಭಟಿಸಿ ರಾಜಿನಾಮೆ ಕೊಡಬೇಕೆಂದು ತೀರ್ಮಾನಿಸಿದೆವು. ಕೆಲವರು ಗೌರ್ನರ್ ತಾನಾಗಿ ಮಂತ್ರಿಮಂಡಲ ವಿಸರ್ಜಿಸುವವರೆಗೆ ಅಧಿಕಾರ ನಡೆಸಬೇಕೆಂದರು. ದಿನದಿನವೂ ಘರ್ಷಣೆ ಹೆಚ್ಚುತ್ತ ಬಂದ ಕಾರಣ ರಾಜೀನಾಮೆ ಕೊಡದಿದ್ದರೆ ಗೌರ್ನರ್ ಮಂತ್ರಿಮಂಡಲ ವಿಸರ್ಜಿಸುವುದು ಖಂಡಿತವೆಂದು ಸ್ಪಷ್ಟವಾಯಿತು. ವಿಧಾನ ರೀತಿಯಲ್ಲಿ ರಾಜೀನಾಮೆ ಕೊಟ್ಟು ಶಾಸನ ಸಭೆಗಳನ್ನು ರದ್ದುಗೊಳಿಸಿ ಹೊಸ ಚುನಾವಣೆ ನಡೆಸಲು ಅವಕಾಶ ಕಲ್ಪಿಸಿದೆವು. ಕಾಂಗ್ರೆಸ್ ಮಂತ್ರಿಮಂಡಲಗಳಿಗೆ ಬಹುಮತವಿದ್ದುದರಿಂದ ಬೇರೆ ಮಂತ್ರಿಮಂಡಲ ರಚನೆಯು ಸಾಧ್ಯವೇ ಇರಲಿಲ್ಲ. ಗೌರ್ನರುಗಳಿಗೆ ಹೊಸ ಚುನಾವಣೆ ಬೇಕಿರಲಿಲ್ಲ. ಪುನಃ ಕಾಂಗ್ರೆಸ್ಸಿಗೆ ಇನ್ನೂ ಹೆಚ್ಚಿನ ಬಹುಮತ ದೊರೆಯುವುದೆಂದು ಅವರಿಗೆ ತಿಳಿದಿತ್ತು. ಆದ್ದರಿಂದ ಶಾಸನ ಸಭೆ ವಿಸರ್ಜಿಸದೆ ಪ್ರಾಂತ ಸರ್ಕಾರದ ಮತ್ತು ಶಾಸನ ಸಭೆಗಳ ಅಧಿಕಾರವನ್ನೆಲ್ಲ ತಮ್ಮ ಕೈಗೇ ತೆಗೆದುಕೊಂಡರು. ಪ್ರಾಂತಗಳಲ್ಲಿ ಅವರೇ ಸರ್ವಾಧಿಕಾರಿಗಳಾಗಿ ಯಾವ ಶಾಸನ ಸಭೆಯ ಅಥವ ಸಾರ್ವಜನಿಕ ಅಭಿಪ್ರಾಯದ ಅಂಕೆಯೂ ಇಲ್ಲದೆ ಮನಸ್ಸು ಬಂದ ಶಾಸನ ಮಾಡಿ, ತೀರ್ಪುಕೊಟ್ಟು ನಿರಂಕುಶಾಧಿಕಾರ ನಡೆಸಲು ತೊಡಗಿದರು.

ಪ್ರಾಂತ ಸರಕಾರಗಳಿಗೆ ರಾಜಿನಾಮೆ ಕೊಡ ಹೇಳಿ ಕಾಂಗ್ರೆಸ್ ಕಾರ್ಯಸಮಿತಿಯು ಸರ್ವಾಧಿಕಾರ ತೋರಿಸಿತು ಎಂದು ಬ್ರಿಟಿಷ್ ಪ್ರಮುಖರು ಕಾಂಗ್ರೆಸ್ಸನ್ನು ದೂರಿದ್ದಾರೆ. ಫ್ಯಾಸಿಸ್ಟ್ ಮತ್ತು ನಾಜಿ ದೇಶಗಳನ್ನು ಬಿಟ್ಟರೆ ಬೇರೆ ಎಲ್ಲೂ ಕಾಣದ ನಿರಂಕುಶ ಸರ್ವಾಧಿಕಾರದಿಂದ ಆಡಳಿತ ನಡೆಸಿದವರೇ ಈ ರೀತಿ ದೂರುವುದೂ ಒಂದು ವಿಚಿತ್ರ. ಶಾಸನ ಸಭೆಗಳ ಚುನಾವಣೆಗಳಲ್ಲಿ ಭಾಗವಹಿಸಿ, ಚುನಾಯಿತರಾಗಿ ಬಂದ ಮೇಲೆ ಪ್ರಾಂತಾಡಳಿತ ಸ್ವಾತಂತ್ರ್ಯದಲ್ಲಿ ಗವರ್ನರ್ ಆಗಲಿ ವೈಸರಾಯ್ ಆಗಲಿ ಪ್ರವೇಶಿಸುವುದಿಲ್ಲವೆಂದು ವೈಸರಾಯ್ ಕೊಟ್ಟ ಭರವಸೆಯ ಮೇಲೆಯೇ ಕಾಂಗ್ರೆಸ್ಸು ಪ್ರಾಂತಗಳಲ್ಲಿ ಮಂತ್ರಿ ಮಂಡಲ ರಚಿಸಿ ಅಧಿಕಾರ ವಹಿಸಿಕೊಂಡು ಇತ್ತು. ಆ ಭರವಸೆಯೇ ಕಾಂಗ್ರೆಸ್ ನೀತಿಯ ಆಧಾರವಾಗಿತ್ತು. ಈಗ ಹೆಜ್ಜೆ ಹೆಜ್ಜೆಗೂ ಅಡ್ಡಬರುವುದೇ ನಿತ್ಯ ವಿಧಿಯಾಯಿತು. ೧೯೩೫ ನೇ ಇಂಡಿಯಾ ಶಾಸನದ ಪ್ರಕಾರ ಪ್ರಾಂತಸರಕಾರಗಳಿಗಿದ್ದ ಅಲ್ಪ ಅಧಿಕಾರವನ್ನೂ ಕಿತ್ತುಕೊಂಡರೂ ಯುದ್ಧ ಕಾರ್ಯಗಳಿಗೆಂದು ಪಾರ್ಲಿ

ಮೆಂಟ್ ಒಂದು ತಿದ್ದುಪಡಿ ಒಪ್ಪಿ ಪ್ರಾಂತಗಳ ಆ ವಿಧಾಯಕ ಅಧಿಕಾರವನ್ನೂ ಕಸಿದುಕೊಂಡಿತು. ಪ್ರಾಂತಗಳಲ್ಲಿ ಯಾವಾಗ ಎಷ್ಟರಮಟ್ಟಿಗೆ ಪ್ರವೇಶ ಮಾಡಬೇಕೆಂಬ ಅಧಿಕಾರವನ್ನು ಇಂಡಿಯಾ ಸರಕಾರ ಅಂದರೆ ವೈಸರಾಯ್ ಕೈಯಲ್ಲಿಯೇ ಕೇಂದ್ರೀಕರಿಸಲಾಯಿತು. ಪ್ರಾಂತ ಸರಕಾರಗಳ ಅಧಿಕಾರ ರಕ್ಷಣೆಗೆ ಯಾವ ವಿಧಾಯಕ ಏರ್ಪಾಡೂ ಇಲ್ಲದ್ದರಿಂದ ವೈಸರಾಯ್ ಇಷ್ಟದಂತೆ ಮಾತ್ರ ನಡೆಯಬೇಕಾಗಿತ್ತು. ಯುದ್ಧದ ಆವಶ್ಯಕತೆಯ ಹೆಸರಿನಲ್ಲಿ ವೈಸರಾಯ್ ಮತ್ತು ಗವರ್ನರ್ ಜನರಲ್ ಮತ್ತು ಆತನಿಂದ ನಾಮ ಕರಣವಾದ ಮಂತ್ರಿಮಂಡಲ ಪ್ರಾಂತ ಸರಕಾರಗಳ ಮತ್ತು ಶಾಸನ ಸಭೆಗಳ ಪ್ರತಿಯೊಂದು ತೀರ್ಮಾನ ವನ್ನೂ ತಳ್ಳಿಹಾಕಲು ಅವಕಾಶವಿತ್ತು. ಈ ಪರಿಸ್ಥಿತಿಯಲ್ಲಿ ಜವಾಬ್ದಾರಿಯುತ ಮಂತ್ರಿ ಮಂಡಲ ಯಾವುದೂ ಕೆಲಸ ಮಾಡಲು ಸಾಧ್ಯವಿರಲಿಲ್ಲ. ಗವರ್ನರ್ ಮತ್ತು ಅಧಿಕಾರ ವರ್ಗದ ವಿರೋಧ ಇಲ್ಲ ದಿದ್ದರೆ ಶಾಸನ ಸಭೆ ಮತ್ತು ಚುನಾವಣಾ ಕ್ಷೇತ್ರಗಳ ವಿರೋಧ. ಕಾಂಗ್ರೆಸ್ ಬಹುಮತವಿದ್ದು ಪ್ರತಿ ಯೊಂದು ಶಾಸನ ಸಭೆಯೂ ಯುದ್ಧ ಆರಂಭವಾದೊಡನೆ ಕಾಂಗ್ರೆಸ್ ಬೇಡಿಕೆಯನ್ನೇ ಶಾಸನ ಸಭೆಯ ಮುಂದಿಟ್ಟು ಸಭೆಯ ಒಪ್ಪಿಗೆ ಪಡೆದು ನಿರ್ಣಯ ಮಾಡಿತು. ವೈಸರಾಯ್ ಈ ಬೇಡಿಕೆ ನಿರಾಕರಿಸಿದರೆ ಉಳಿದುದು ತಿಕ್ಕಾಟ ಅಥವ ರಾಜಿನಾಮೆ. ಕಾಂಗ್ರೆಸ್ ನಾಯಕರಿಂದ ಮೊದಲುಗೊಂಡು ಪ್ರತಿಯೊಬ್ಬ ನಲ್ಲೂ ಬ್ರಿಟಿಷ್ ಸರಕಾರದೊಂದಿಗೆ ಹೋರಾಟ ಹೂಡಬೇಕೆಂದು ಅಭಿಪ್ರಾಯವೇ ಬಲಗೊಳ್ಳುತ್ತಲಿತ್ತು. ಸಾಧ್ಯವಾದರೆ ಈ ಹೋರಾಟ ತಪ್ಪಿಸಿ ಶಾಂತರೀತಿಯಲ್ಲಿ ಬಿಕ್ಕಟ್ಟನ್ನು ಪರಿಹರಿಸಬೇಕೆಂದೇ ಕಾರ್ಯ ಸಮಿತಿಯ ಅಭಿಮತವಿತ್ತು. ಹೊಸ ಚುನಾವಣೆ ನಡೆಸಿ, ಮತದಾರರ ಮತ್ತು ಜನಸಾಮಾನ್ಯದ ಅಭಿ ಪ್ರಾಯ ಏನಿದೆ ಎಂದು ಕಂಡು ಹಿಡಿಯಲು ಬ್ರಿಟಿಷ್ ಸರಕಾರಕ್ಕೆ ಸುಲಭವಿತ್ತು. ಹೊಸ ಚುನಾವಣೆ ಎಂದರೆ ಕಾಂಗ್ರೆಸ್‌ಗೆ ಅಖಂಡ ವಿಜಯವೆಂದು ಮನಗಂಡದ್ದರಿಂದ ಅದು ಅವರಿಗೆ ಬೇಕಿರಲಿಲ್ಲ.

ದೊಡ್ಡ ಪ್ರಾಂತಗಳಾದ ಬಂಗಾಲ ಮತ್ತು ಪಂಜಾಬ್‌ನಲ್ಲೂ, ಸಿಂಧ್‌ನಲ್ಲೂ ರಾಜಿನಾಮೆಗಳಾಗಲಿಲ್ಲ. ಬಂಗಾಲ ಮತ್ತು ಪಂಜಾಬ್ ಎರಡರಲ್ಲೂ ಗೌರ್‍ನರ್ ಮತ್ತು ಸಿವಿಲ್ ಸರ್ವಿಸ್ ಅಧಿಕಾರಿಗಳ ಪ್ರಾಬಲ್ಯವೇ ಹೆಚ್ಚು ಇದ್ದ ಕಾರಣ ಅಲ್ಲಿ ತಿಕ್ಕಾಟವೇ ಇರಲಿಲ್ಲ. ಕೆಲವು ದಿನಗಳ ನಂತರ ಬಂಗಾಲದಲ್ಲಿ ಸಹ ಮುಖ್ಯ ಮಂತ್ರಿಗೂ ಗವರ್ನರ್‌ಗೂ ಸರಿಬೀಳದ ಕಾರಣ ಮುಖ್ಯ ಮಂತ್ರಿಯನ್ನೂ ಆತನ ಮಂತ್ರಿಮಂಡಲವನ್ನೂ ರಾಜಿನಾಮೆ ಕೊಡುವಂತೆ ಗೌರ್‍ನರ್ ಒತ್ತಾಯ ಮಾಡಿದನು. ಸಿಂಧನಲ್ಲಿ ಸಹ ಕೆಲವು ದಿನಗಳ ನಂತರ ಅಲ್ಲಿನ ಮುಖ್ಯ ಮಂತ್ರಿಯು ಬ್ರಿಟಿಷ್ ಸರಕಾರದ ನೀತಿಯನ್ನು ಖಂಡಿಸಿ ವೈಸರಾಯ್‌ಗೆ ಒಂದು ಪತ್ರ ಬರೆದು ಪ್ರತಿಭಟನಾ ಸೂಚನೆಯಾಗಿ ಬ್ರಿಟಿಷ್ ಸರಕಾರ ತನಗೆ ಕೊಟ್ಟ ಬಿರುದನ್ನು ತ್ಯಜಿಸಿದನು. ಆತನು ರಾಜಿನಾಮೆ ಕೊಡದಿದ್ದರೂ ಆ ರೀತಿ ಪತ್ರ ಬರೆದದ್ದು ತನ್ನ ಗೌರವಕ್ಕೆ ಮಹಾಕುಂದು ಎಂದು ವೈಸರಾಯ್ ಗವರ್ನರ್‌ಗೆ ಪತ್ರಬರೆದು ಮುಖ್ಯಮಂತ್ರಿಯನ್ನು ಮಂತ್ರಿಪದವಿಯಿಂದ ನಿವೃತ್ತಿ ಮಾಡಿಸಿದನು.

ಕಾಂಗ್ರೆಸ್ ಪ್ರಾಂತ ಸರಕಾರಗಳು ರಾಜಿನಾಮೆ ಕೊಟ್ಟು ಈಗ ಐದು ವರ್ಷಗಳಾದವು. ಈ ಐದು ವರ್ಷ ಎಲ್ಲ ಪ್ರಾಂತ್ರ್ಯಗಳಲ್ಲೂ ಗವರ್ನರ್ ಒಬ್ಬನ ಸರ್ವಾಧಿಕಾರ. ಯುದ್ಧದ ನೆಪದಲ್ಲಿ ಹತ್ತೊಂಭತ್ತನೆಯ ಶತಮಾನದ ಮಧ್ಯಕಾಲದ ಕುರುಡ ಸರ್ವಾಧಿಕಾರಿಯ ನಿರಂಕುಶ ಆಡಳಿತಕ್ಕೆ ಸಾಗಿದ್ದೇವೆ. ಸಿವಿಲ್ ಸರ್ವಿಸ್ ಮತ್ತು ಪೋಲೀಸರದೇ ಅಧಿಕಾರ. ಇಂಗ್ಲಿಷ್‌ನವನಾಗಲಿ, ಭಾರತೀಯನಾಗಲಿ, ಬ್ರಿಟಿಷ್ ಸರಕಾರದ ದಯಾಶೂನ್ಯ ನೀತಿಗೆ ಸ್ವಲ್ಪ ವಿರೋಧಿಸಿದರೂ ಮನೆಕಡೆ ದಾರಿ ಹಿಡಿಯಬೇಕಿತ್ತು. ಕಾಂಗ್ರೆಸ್ ಸರಕಾರಗಳ ಕೆಲಸವೆಲ್ಲ ತಲೆಕೆಳಗಾಗಿ ಅವರ ಯೋಜನೆಗಳನ್ನೆಲ್ಲ ಮಣ್ಣುಗೂಡಿಸಿದವು. ರೈತಾಪಿ ಜನರ ಶಾಸನಮಾತ್ರ ಉಳಿದಿದೆಯಾದರೂ ಆಚರಣೆಯಲ್ಲಿ ಅದರ ಪ್ರಯೋಗವೆಲ್ಲ ರೈತರ ವಿರುದ್ಧ.

ಕಳೆದ ಎರಡು ವರ್ಷಗಳಲ್ಲಿ ಅಸ್ಸಾಮ್, ಒರಿಸ್ಸ ಮತ್ತು ವಾಯುವ್ಯ ಪ್ರಾಂತ್ಯಗಳಲ್ಲಿ ಕಾಂಗ್ರೆಸ್ ಶಾಸನಾ ಸಭಾ ಸದಸ್ಯರನ್ನು ಸೆರೆಮನೆಗೆ ತಳ್ಳಿ ಅಲ್ಪ ಸಂಖ್ಯಾತರನ್ನು ಬಹು ಸಂಖ್ಯಾತರನ್ನಾಗಿ ಮಾಡಿ ಕಾಂಗ್ರೆಸೇತರ ಮಂತ್ರಿಮಂಡಲ ರಚಿಸಲಾಗಿದೆ. ಬಂಗಾಲದ ಮಂತ್ರಿಮಂಡಲ ಯೂರೋಪಿಯನರ ಬೆಂಬಲ ವಿಲ್ಲದೆ ಮೂರು ದಿನವೂ ಬಾಳಲಾರದು. ಒರಿಸ್ಸದ ಮಂತ್ರಿಮಂಡಲ ಬಹಳ ದಿನ ಬಾಳಲಾರದೆ ಪುನಃ

ಗೌರ್ನರನ ಏಕಾಧಿಪತ್ಯಕ್ಕೆ ಹೋಯಿತು. ವಾಯವ್ಯ ಪ್ರಾಂತ್ಯದಲ್ಲಿ ಬಹುಮತವಿಲ್ಲದ ಮಂತ್ರಿಮಂಡಲ ರಚಿಸಿದ್ದರಿಂದ ಶಾಸನ ಸಭೆಯ ಅಧಿವೇಶನವನ್ನೇ ಕರೆಯಲಿಲ್ಲ. ಪಂಜಾಬ ಮತ್ತು ಸಿಂಧ ಪ್ರಾಂತಗಳಲ್ಲಿ ಸೆರೆಮನೆಯಿಂದ ಹೊರಗಿದ್ದ ಕಾಂಗ್ರೆಸ್ ಸದಸ್ಯರು ಶಾಸನ ಸಭೆಗಳಿಗೆ ಹೋಗದಂತೆ ಅಥವ ಯಾವ ಸಾರ್ವಜನಿಕ ಕಾರ್ಯಗಳಲ್ಲೂ ಭಾಗವಹಿಸದಂತೆ ಅವರ ಮೇಲೆ ವಿಶೇಷ ನಿರ್ಬಂಧಕ ಆಜ್ಞೆ ಹೇರಲಾಗಿತ್ತು. ೧೯೪೫ರ ಆದಿಭಾಗದಲ್ಲಿ ವಾಯವ್ಯಪ್ರಾಂತ್ಯದ ಹಣಕಾಸಿನ ಅಧಿವೇಶನ ಸೇರಿದೊಡನೆ ಮಂತ್ರಿಮಂಡಲದ ಮೇಲೆ ಅವಿಶ್ವಾಸದ ಸೂಚನೆ ಬಹುಮತದಿಂದ ಅಂಗೀಕೃತವಾಗಿ ಡಾ. ಖಾನ ಸಾಹೇಬರ ನೇತೃತ್ವದಲ್ಲಿ ಕಾಂಗ್ರೆಸ್ ಮಂತ್ರಿಮಂಡಲ ಏರ್ಪಟ್ಟಿತು.

### ೪. ಮತ್ತೊಮ್ಮೆ ಕಾಂಗ್ರೆಸ್ ಸಹಕಾರ ಹಸ್ತ: ಬ್ರಿಟಿಷ್ ಸರ್ಕಾರದ ನಕಾರ: ವಿನ್‌ಸ್ಟನ್ ಚರ್ಚಿಲ್:

ಎಂಟು ಪ್ರಾಂತಗಳಲ್ಲಿ ನಿರಂಕುಶಾಧಿಕಾರದ ಏಕಾಧಿಪತ್ಯವೆಂದರೆ ಮಂತ್ರಿಮಂಡಲದ ಬದಲಾವಣೆಯಲ್ಲಿ ಆಗುವಂತೆ ಮೇಲಿನ ಅಧಿಕಾರವರ್ಗದ ಬದಲಾವಣೆ ಮಾತ್ರ ಎಂದಲ್ಲ. ಒಟ್ಟು ರಾಜ್ಯಾಡಳಿತದ ಭಾವನೆ ಮತ್ತು ರೀತಿ ನೀತಿಗಳಲ್ಲೇ ಪ್ರಬಲ ಪರಿಣಾಮಕಾರಕ ವ್ಯತ್ಯಾಸಗಳಾದವು. ಕಾರ್ಯಾಂಗ ಮತ್ತು ಅಧಿಕಾರಿವರ್ಗದ ಮೇಲೆ ಒಂದು ಅಂಕುಶದಂತೆ ಇದ್ದ ಶಾಸನ ಸಭೆಗಳು ಮತ್ತು ಇತರ ಸಾರ್ವಜನಿಕ ತಡೆಗಳು ನಿರ್ನಾಮವಾದವು. ಗೌರ್ನರ್ ಮೊದಲುಗೊಂಡು ಸಿವಿಲ್ ಸರ್ವಿಸ್ ಮತ್ತು ಪೋಲೀಸ್ ಅಧಿಕಾರಿಗಳವರೆಗೆ ಎಲ್ಲರೂ ಸಾರ್ವಜನಿಕರನ್ನು ತೃಣೀಕರಿಸಿ ನೋಡತೊಡಗಿದರು. ಕಾಂಗ್ರೆಸ್ ಸರಕಾರಗಳು ಅಧಿಕಾರಕ್ಕೆ ಬರುವ ಮುಂಚೆಗಿಂತ ಈಗ ಪರಿಸ್ಥಿತಿ ಇನ್ನೂ ಕೀಳಾಯಿತು. ವಿಧಾನ ದೃಷ್ಟಿಯಿಂದ ಹತ್ತೊಂಭತ್ತನೆಯ ಶತಮಾನದ ನಿರಂಕುಶಾಧಿಕಾರಕ್ಕೆ ಹಿಂದಿರುಗದಂತಾಯಿತು. ಕಾರ್ಯತಃ ಪರಿಸ್ಥಿತಿ ಇನ್ನೂ ಕಠಿನವಾಯಿತು. ಹಿಂದಿನ ವಿಶ್ವಾಸ ಮತ್ತು ತಂದೆಮಕ್ಕಳೆಂಬ ಭಾವನೆ ಮಾಯವಾಗಿತ್ತು. ತಾನಾಗಿ ಕುಸಿದು ಬೀಳುತ್ತಿರುವ ಅಧಿಕಾರ ದರ್ಪದ ಭಯ ಮತ್ತು ಆಕ್ರೋಶಗಳು ಬ್ರಿಟಿಷ್ ಅಧಿಕಾರಿವರ್ಗವನ್ನು ಕವಿದಿದ್ದವು. ಎರಡು ವರ್ಷ ಮೂರು ತಿಂಗಳು ಕಾಂಗ್ರೆಸ್ ಸರಕಾರ ಸಹಿಸಿ ಕಷ್ಟವಾಗಿತ್ತು. ಮಾತನಾಡಿದರೆ ತಾವು ಸೆರೆಮನೆಗೆ ಅಟ್ಟುತ್ತಿದ್ದವರಿಂದ ಆಡಳಿತ ನೀತಿ ಹೇಳಿಸಿಕೊಂಡು ಅವರ ಆಜ್ಞಾಧಾರಕರಾಗಬೇಕಾಗಿ ಬಂದುದು ಅವರ ಮೈಗೆ ಒಗ್ಗಿರಲಿಲ್ಲ. ಹಿಂದಿನ ದರ್ಪ ಪ್ರದರ್ಶಿಸುವುದು ಮಾತ್ರವಲ್ಲದೆ ಈ ತುಂಟರಿಗೆ ತಕ್ಕ ಬುದ್ಧಿಯನ್ನೂ ಕಲಿಸಬೇಕಾಗಿತ್ತು. ಪ್ರಜಾಪ್ರಭುತ್ವ ವಿಷಯದಲ್ಲಿ ಆಸಕ್ತಿ ತೋರಿಸಿದವನು ಹೊಲದ ರೈತ, ಕಾರ್ಖಾನೆಯ ಕೂಲಿ, ಉದ್ಯೋಗಿ, ವ್ಯಾಪಾರಿ, ಕೈಗಾರಿಕೋದ್ಯಮಿ, ಯುವಕ ಯುವತಿ, ಕೆಳದರ್ಜೆಯ ನೌಕರ, ಉನ್ನತ ಭಾರತೀಯ ಅಧಿಕಾರಿ, ಯಾರೇ ಇರಲಿ ಅವರೆಲ್ಲರಿಗೆ ಬ್ರಿಟಿಷ್ ಆಡಳಿತ ದರ್ಪ ಇನ್ನೂ ಜೀವಂತ ಇದೆ, ಮರೆಯುವಂತಿಲ್ಲ ಎಂದು ತೋರಿಸಬೇಕಾಗಿತ್ತು. ಅವರೆಲ್ಲರ ಭವಿಷ್ಯ ಮತ್ತು ಲಾಭನಷ್ಟ ನಿರ್ಧರಿಸುವವರು ಬ್ರಿಟಿಷ್ ಆಡಳಿತಗಾರರು, ನಾಲ್ಕು ದಿನ ಬಂದು ಹೋದ ಈ ಕಾಂಗ್ರೆಸ್ ಭಿಕಾರಿಗಳಲ್ಲ ಎಂದು ತೋರಿಸಬೇಕಾಗಿತ್ತು. ಮಂತ್ರಿಗಳ ಕೈಕೆಳಗೆ ಕಾರ್ಯದರ್ಶಿಗಳಾಗಿದ್ದವರು ಈಗ ಗೌರ್ನರ್ ಕೆಳಗೆ ಆಡಳಿತಗಾರರಾಗಿ ಹಿಂದಿನ ಅಧಿಕಾರ ಠೀವಿಯಿಂದ ಮೆರೆಯಲಾರಂಭಿಸಿದರು. ಜಿಲ್ಲಾಧಿಕಾರಿಗಳು ತಮ್ಮ ತಮ್ಮ ಜಿಲ್ಲೆಗಳ ಪಾಳೆಯಗಾರರಾದರು. ತಪ್ಪು ಮಾಡಿದರೂ ಉನ್ನತ ಅಧಿಕಾರಿಗಳು ತಮ್ಮನ್ನು ಕೈಬಿಡದೆ ಬೆನ್ನುತಟ್ಟುವರೆಂದು ಪೋಲಿಸರು ತಮ್ಮ ಹಳೆಯ ದಾರಿ ಹಿಡಿದರು. ಯುದ್ಧದ ಕಾರ್ಗತ್ತಲೆಯ ಮಬ್ಬು ಎಲ್ಲವನ್ನೂ ಮುಸುಕಿತು.

ಕಾಂಗ್ರೆಸ್ ಸರಕಾರ ಟೀಕೆ ಮಾಡುತ್ತಿದ್ದವರು ಸಹ ಈ ಪರಿಸ್ಥಿತಿಯಿಂದ ಭಯಗೊಂಡರು. ಅವರಿಗೆ ಈಗ ಕಾಂಗ್ರೆಸ್ ಸರಕಾರಗಳ ಗುಣವಿಶೇಷಗಳ ಅರಿವುಬಂದು ರಾಜಿನಾಮೆ ಕೊಡಬಾರದಾಗಿತ್ತೆಂದರು. ಏನೇ ಆಗಲಿ ಅಧಿಕಾರದಲ್ಲಿ ಇರಬೇಕಾಗಿತ್ತೆಂದರು. ಮುಸ್ಲಿಂ ಲೀಗ್ ಸದಸ್ಯರು ಸಹ ಭಯಗ್ರಸ್ತರಾದರು.

ಕಾಂಗ್ರೆಸೇತರರು ಮತ್ತು ಕಾಂಗ್ರೆಸ್ ಸರಕಾರಗಳನ್ನು ಟೀಕೆ ಮಾಡುತ್ತಿದ್ದವರ ಮೇಲೆಯೇ ಈ ಪರಿಣಾಮವಾದರೆ ಶಾಸನ ಸಭೆಗಳ ಸದಸ್ಯರು ಮತ್ತು ಕಾಂಗ್ರೆಸ್ ಸದಸ್ಯರು ಮತ್ತು ಕಾಂಗ್ರೆಸ್‌ನಲ್ಲಿ ಸಹಾನುಭೂತಿಯುಳ್ಳವರ ಮೇಲೆ ಯಾವ ಪರಿಣಾಮ ಆಗಿರಬೇಕೆಂದು ಊಹಿಸಬಹುದು. ಮಂತ್ರಿಗಳು ಅಧಿಕಾರ ಬಿಟ್ಟಿದ್ದರೇ ಹೊರತು ಶಾಸನ ಸಭೆಗಳ ಸದಸ್ಯತ್ವ ತ್ಯಜಿಸಿರಲಿಲ್ಲ. ಶಾಸನ ಸಭೆಗಳ ಅಧ್ಯಕ್ಷರೂ ಮತ್ತು ಸದಸ್ಯರೂ ರಾಜೀನಾಮೆ ಕೊಟ್ಟಿರಲಿಲ್ಲ. ಆದರೂ ಅವರನ್ನು ತಳ್ಳಿ ಅಲಕ್ಷ್ಯಮಾಡಲಾಯಿತು; ಹೊಸ ಚುನಾವಣೆಗಳನ್ನೂ ನಡೆಸಲಿಲ್ಲ. ವಿಧಾನ ದೃಷ್ಟಿಯಿಂದ ಇದು, ತುಂಬ ಅಸಹನೀಯವಿತ್ತು. ಬೇರೆ ಯಾವ ದೇಶದಲ್ಲಿಯಾದರೂ ಒಂದು ರಾಜಕೀಯ ಬಿಕ್ಕಟ್ಟು ಏಳುತ್ತಿತ್ತು. ದೇಶದ ರಾಷ್ಟ್ರೀಯ ಭಾವನೆಯ ಮೂರ್ತಿಸ್ವರೂಪದಂತೆ, ಶಕ್ತಿಯುತವೂ ಕ್ರಾಂತಿಕಾರಕವೂ ಇದ್ದು ಅನೇಕ ವರ್ಷಗಳಿಂದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಕಾಂಗ್ರೆಸ್ ಸಂಸ್ಥೆ ಕಣ್ಣುಮುಚ್ಚಿ ಕುಳಿತು ಸರ್ವಾಧಿಕಾರಿ ಆಡಳಿತ ಸಹಿಸುವುದಂತೂ ಸಾಧ್ಯವೇ ಇರಲಿಲ್ಲ. ಅದರಲ್ಲೂ ಕಾಂಗ್ರೆಸ್ಸಿನ ಶಕ್ತಿ ಅಡಗಿಸುವುದೇ ಮುಖ್ಯ ಕರ್ತವ್ಯವೆಂದು ಸರ್ವಶಕ್ತಿ ವಿನಿಯೋಗಿಸಿ ಸರಕಾರವು ತನ್ನ ವಿರುದ್ಧ ನಡೆಸುತ್ತಿದ್ದ ಕೃತ್ಯಗಳನ್ನು ಸುಮ್ಮನೆ ನೋಡುತ್ತ ಕುಳಿತಿರಲು ಸಾಧ್ಯವಿರಲಿಲ್ಲ. ಶಾಸನ ಸಭೆಗಳಿಗೆ ಮತ್ತು ಸಾಮಾನ್ಯ ಎಲ್ಲ ಸಾರ್ವಜನಿಕ ಚಟುವಟಿಕೆಗಳಿಗೆ ಬಾಯಿಕಟ್ಟಿದ್ದಕ್ಕಾಗಿ ಮತ್ತು ಭಾರತದ ವಿಷಯದಲ್ಲಿ ಬ್ರಿಟಿಷರ ನೀತಿ ವಿರೋಧಿಸುವುದಕ್ಕಾಗಿ ಏನಾದರೂ ಪರಿಣಾಮಕಾರಕ ಪ್ರತಿಭಟನಾ ಕಾರ್ಯಕ್ರಮ ತೆಗೆದುಕೊಳ್ಳಬೇಕೆಂಬ ಒತ್ತಾಯ ಬಲವಾಯಿತು.

ಬ್ರಿಟಿಷ್ ಸರಕಾರ ತನ್ನ ಯುದ್ಧದ ಗುರಿ ತಿಳಿಸಿ ಭಾರತವನ್ನು ತನ್ನ ಕಡೆ ಒಲಿಸಿಕೊಳ್ಳಲು ನಿರಾಕರಿಸಿದ ಮೇಲೆ “ಕಾಂಗ್ರೆಸ್ಸಿಗೆ ದೊರೆತ ಉತ್ತರ ಸ್ವಲ್ಪವೂ ತೃಪ್ತಿಕರವಿಲ್ಲ. ಬ್ರಿಟಿಷ್ ಸರಕಾರವು ಮೂಲ ತತ್ವದ ಪ್ರಶ್ನೆಯನ್ನೇ ಮರೆಮಾಚಿ, ತಪ್ಪು ಅಭಿಪ್ರಾಯ ಹುಟ್ಟಿಸಲು ಪ್ರಯತ್ನಮಾಡಿದೆ. ದೇಶದ ಪ್ರತಿಗಾಮಿ ಶಕ್ತಿಗಳ ಸಹಾಯದಿಂದ ತನ್ನ ಸಾಮ್ರಾಜ್ಯದ ಹಿಡಿತ ಭದ್ರಪಡಿಸಿಕೊಳ್ಳಲು ಅಲ್ಪ ಪ್ರಶ್ನೆಗಳಿಗೆ ಪ್ರಾಶಸ್ತ್ಯಕೊಟ್ಟು ತಮ್ಮ ಯುದ್ಧ ಗುರಿಯಲ್ಲಿ ಭಾರತದ ಸ್ವಾತಂತ್ರ್ಯ ಪ್ರಶ್ನೆಯ ಮಾತನ್ನೇ ಮರೆಮಾಚಲು ಪ್ರಯತ್ನ ಮಾಡಿದಂತೆ ತೋರುತ್ತದೆ. ಯುದ್ಧದ ವಿಷಮಸ್ಥಿತಿ ಮತ್ತು ಅದರಿಂದ ಉದ್ಭವಿಸುವ ಪ್ರಶ್ನೆಗಳನ್ನೂ ಕಾಂಗ್ರೆಸ್ ಕಾರ್ಯಸಮಿತಿಯು ತಾತ್ವಿಕ ದೃಷ್ಟಿಯಿಂದ ನೋಡಿದೆ. ಅದನ್ನು ದುರುಪಯೋಗಪಡಿಸಿ ಯಾವ ಲಾಭ ಪಡೆಯುವ ಇಷ್ಟವೂ ಸಮಿತಿಗೆ ಇಲ್ಲ. ಯುದ್ಧ ಗುರಿಯ ನೀತಿ ಮತ್ತು ಪ್ರಧಾನ ಪ್ರಶ್ನೆಗಳೂ ಮತ್ತು ಭಾರತದ ಸ್ವಾತಂತ್ರ್ಯದ ಪ್ರಶ್ನೆಯೂ ತೃಪ್ತಿಕರವಾಗಿ ಇತ್ಯರ್ಥವಾಗುವವರೆಗೆ ಬೇರೆ ಯಾವ ಅಲ್ಪ ಪ್ರಶ್ನೆಯನ್ನೂ ಗಮನಿಸಲು ಸಾಧ್ಯವಿಲ್ಲ. ಪ್ರಜೆಗಳ ಪ್ರತಿನಿಧಿಗಳಿಗೆ ನಿಜವಾದ ಅಧಿಕಾರ ದೊರೆಯುವವರೆಗೆ ಈ ವಿಷಮ ಕಾಲದಲ್ಲ ಸರಕಾರದ ಆಡಳಿತದ ಜವಾಬ್ದಾರಿ ಹೊರಲು ಕಾಂಗ್ರೆಸ್ಸು ಸಿದ್ಧವಿಲ್ಲ” ಎಂದು ಕಾಂಗ್ರೆಸ್ ಕಾರ್ಯ ಸಮಿತಿಯು ಘೋಷಿಸಿತು.

ಬ್ರಿಟಿಷ್ ಸರಕಾರದ ಪರ ಕೊಟ್ಟ ಹೇಳಿಕೆಗಳೇ ಬ್ರಿಟಿಷ್ ಸರಕಾರದ ನೀತಿಯಿಂದ ಕಾಂಗ್ರೆಸ್ಸು ದೂರವಿರಲು ಕಾರಣ ಎಂದು ತಿಳಿಸಿದೆವು. ಅಸಹಕಾರದ ಮೊದಲನೆಯ ಹೆಜ್ಜೆಯಾಗಿ ಪ್ರಾಂತಗಳಲ್ಲಿ ಕಾಂಗ್ರೆಸ್ ಸರಕಾರಗಳ ರಾಜಿನಾಮೆ ಅನಿವಾರ್ಯವಾಯಿತು. ಬ್ರಿಟಿಷರು ತಮ್ಮ ನೀತಿ ಬದಲಾಯಿಸುವವರೆಗೆ ಅಸಹಕಾರವೇ ಕಾಂಗ್ರೆಸ್ ನೀತಿಯಾಯಿತು. “ಪ್ರತಿಯೊಂದು ಸತ್ಯಾಗ್ರಹದಲ್ಲೂ ಎದುರಾಳಿಯೊಂದಿಗೆ ಗೌರವಯುತ ಒಪ್ಪಂದಕ್ಕೆ ಬರಲು ಇರುವ ಯಾವ ಅವಕಾಶವನ್ನೂ ಕಳೆದುಕೊಳ್ಳಬಾರದೆಂಬ ಅಂಶ ಪ್ರತಿಯೊಬ್ಬ ಕಾಂಗ್ರೆಸ್ ಸದಸ್ಯನೂ ಜ್ಞಾಪಕದಲ್ಲಿಟ್ಟಿರಬೇಕು. ಬ್ರಿಟಿಷ್ ಸರಕಾರ ಕಾಂಗ್ರೆಸ್ಸಿನ ಎಲ್ಲ ಸಂಧಾನ ಪ್ರಯತ್ನಕ್ಕೂ ಈಗ ಅಡ್ಡಿ ಬಂದಿದ್ದರೂ ಕಾರ್ಯಸಮಿತಿಯು ಗೌರವಯುತ ಒಪ್ಪಂದಕ್ಕೆ ಬರಲು ಸಾಧ್ಯವಾದ ಎಲ್ಲ ಪ್ರಯತ್ನವನ್ನೂ ಮಾಡುತ್ತದೆ” ಎಂದು ಸಹ ತಿಳಿಸಿದೆವು.

ದೇಶದ ಪ್ರಕ್ಷುಬ್ಧ ವಾತಾವರಣ ಕಂಡು, ಯುವಕರು ಹಿಂಸಾಮಾರ್ಗ ಅವಲಂಬಿಸಬಹುದೆಂದು ಸಂಶಯಗೊಂಡು, ಕಾಂಗ್ರೆಸ್ಸಿನ ಮೂಲನೀತಿ ಅಹಿಂಸಾ ಮಾರ್ಗವೆಂದೂ, ಯಾರೂ ಆ ನೀತಿಯಿಂದ ಕೂದಲೆಳೆಯಷ್ಟೂ ಕದಲಬಾರದೆಂದೂ ಕಾರ್ಯಸಮಿತಿಯು ದೇಶಕ್ಕೆ ಎಚ್ಚರಕೊಟ್ಟಿತು. ಕಾಯಿದೆ ಭಂಗ

ಮಾಡಿದರೂ ಅದು ಶಾಂತಿಯುತವಿರಬೇಕು. "ಸತ್ಯಾಗ್ರಹವೆಂದರೆ ಎಲ್ಲರೊಂದಿಗೆ, ಮುಖ್ಯ ಎದುರಾಳಿಯೊಂದಿಗೆ ಪ್ರೀತಿಯಿಂದ ನಡೆದುಕೊಳ್ಳುವುದು." ಪರಾಕ್ರಮಣ ಪ್ರತಿಭಟನೆಗೆ ಅವಶ್ಯವಾದ ರಕ್ಷಣೋಪಾಯ ಮತ್ತು ಯುದ್ಧಕ್ಕೂ ಈ ಅಹಿಂಸಾ ಮಾರ್ಗಕ್ಕೂ ಯಾವ ಸಂಬಂಧವೂ ಇರಲಿಲ್ಲ. ಬ್ರಿಟಿಷ್ ಆಡಳಿತ ವಿರುದ್ಧ, ಭಾರತದ ಸ್ವಾತಂತ್ರ್ಯ ಸಾಧನೆಗಾಗಿ ನಾವು ತೆಗೆದುಕೊಳ್ಳಬಹುದಾದ ಕಾರ್ಯಕ್ರಮಕ್ಕೆ ಮಾತ್ರ ಈ ರೀತಿ ಅನ್ವಯಿಸುವುದಾಗಿತ್ತು. ಪೋಲೆಂಡ್ ಪತನದ ನಂತರ ಅನೇಕ ತಿಂಗಳುಕಾಲ. ಯೂರೋಪಿನ ಯುದ್ಧಪರಿಸ್ಥಿತಿ ಹೀಗೆಂದು ಹೇಳುವಂತಿರಲಿಲ್ಲ. ಅದನ್ನು ಒಂದು ಕೃತ್ರಿಮ ಕಾಲವೆಂದು ಹೇಳಬಹುದು. ಸಾಮಾನ್ಯ ಭಾರತೀಯನಿಗೆ ಯುದ್ಧವು ಬಹುದೂರವಿದ್ದಂತೆ ತೋರಿತು. ಭಾರತದ ಬ್ರಿಟಿಷ್ ಅಧಿಕಾರಿಗಳಿಗಂತೂ ಯುದ್ಧ ಸಾಮಗ್ರಿ ಸರಬರಾಜು ಒಂದು ಬಿಟ್ಟರೆ ಬೇರೆ ಯಾವ ಯುದ್ಧ ಯೋಚನೆಯೂ ಇದ್ದಂತೆ ತೋರಲಿಲ್ಲ. ಭಾರತದ ಸಾಮ್ಯವಾದಿ ಪಕ್ಷವು ಆಗಲೂ ಮತ್ತು ಜರ್ಮನಿ ೧೯೪೧ರಲ್ಲಿ ರಷ್ಯದ ಮೇಲೆ ದಂಡೆತ್ತಿ ಹೋಗುವವರೆಗೂ ಬ್ರಿಟಿಷರ ಯುದ್ಧ ಸಿದ್ಧತೆಗೆ ಸಹಾಯ ಏನನ್ನೂ ಮಾಡಬಾರದೆಂದು ಹೇಳಿತ್ತು. ಈ ಸಂಸ್ಥೆಯನ್ನೂ ಬ್ರಿಟಿಷ್ ಅಧಿಕಾರಿಗಳು ಶಾಸನ ಬಾಹಿರಮಾಡಿದ್ದರು. ಕೆಲವು ಯುವಕರನ್ನು ಬಿಟ್ಟರೆ ಈ ಪಕ್ಷದ ಪ್ರಭಾವ ಹೆಚ್ಚು ಯಾರಮೇಲೂ ಇರಲಿಲ್ಲ. ಆದರೆ ಪ್ರಚಲಿತ ಭಾವನೆಯೊಂದಕ್ಕೆ ವಿಶೇಷ ಪ್ರಾಶಸ್ತ್ಯ ಕೊಟ್ಟ ಕಾರಣ ಸರಕಾರಕ್ಕೆ ಅವರು ಬಾಹಿರವಾದರು.

ಪ್ರಾಂತ ಮತ್ತು ಕೇಂದ್ರಗಳಲ್ಲಿ ಹೊಸ ಚುನಾವಣೆ ನಡೆಸುವುದು ಈಗ ಸುಲಭವಿತ್ತು. ಯುದ್ಧದಿಂದ ಯಾವ ಅಡ್ಡಿಯೂ ಇರಲಿಲ್ಲ. ಚುನಾವಣೆಯಿಂದ ವಾತಾವರಣ ತಿಳಿಗೊಂಡು ದೇಶದ ನಿಜವಾದ ಪ್ರಜಾಭಿಪ್ರಾಯ ಸ್ಪಷ್ಟವಾಗುತ್ತಿತ್ತು; ಬ್ರಿಟಿಷ್ ಅಧಿಕಾರಿಗಳಿಗೆ ಆ ಸತ್ಯ ಪರೀಕ್ಷೆ ಬೇಕಿರಲಿಲ್ಲ. ಏಕೆಂದರೆ ಅವರೇ ಸೃಷ್ಟಿಸಿದ ಬೇರೆಬೇರೆ ಪಕ್ಷ ಪ್ರತಿಪಕ್ಷಗಳ ಪ್ರೋತ್ಸಾಹಕ್ಕೆಂದು ಒಡ್ಡಿದ ಅವರ ಕೃತಕವಾದವೆಲ್ಲ ಬಯಲಾಗುತ್ತಿತ್ತು. ಆದ್ದರಿಂದ ಎಲ್ಲ ಚುನಾವಣೆಗಳಿಗೂ ತಿಲಾಂಜಲಿ ಇತ್ತರು. ಪ್ರಾಂತಗಳಲ್ಲಿ ಗವರ್ನರ್‌ನ ಏಕಾಧಿಪತ್ಯ ಮುಂದುವರಿಯಿತು. ಅಲ್ಪ ಮಿತಿಯ ಮತದಾನದಿಂದ ಮೂರುವರ್ಷಗಳಿಗೆ ಮಾತ್ರ ಚುನಾಯಿತವಾದ ಕೇಂದ್ರ ಶಾಸನ ಸಭೆ ಸಮಯಕ್ಕೇ ಅದರ ವಯಸ್ಸು ಮುಗಿದು ಎರಡು ವರ್ಷ ಜೀವದಾನ ಪಡೆದಿತ್ತು. ವರ್ಷವರ್ಷವೂ ಅದಕ್ಕೇ ಜೀವದಾನ; ಸದಸ್ಯರೆಲ್ಲ ಮುದುಕರಾಗಿ ಹೆಚ್ಚು ಗೌರವಾನ್ವಿತರಾಗಿದಾರೆ; ಚುನಾವಣೆಯ ಜ್ಞಾಪಕ ಸಹ ಮರೆತು ಹೋಗುತ್ತಿದೆ. ಬ್ರಿಟಿಷ್ ಸರಕಾರಕ್ಕೆ ಚುನಾವಣೆ ಬೇಕಿಲ್ಲ. ಅವರ ಜೀವನರೀತಿಗೆ ಅದು ಅಡ್ಡಿಯಾಗುತ್ತದೆ; ಭಾರತವು ಪರಸ್ಪರ ಕತ್ತು ಕುಯ್ಯುವ ಜಾತಿ ಮತಗಳ, ಪಕ್ಷಪ್ರತಿಪಕ್ಷಗಳ ಯುದ್ಧರಂಗವಾಗಿರಬೇಕೆಂಬ ಅವರ ಭಾರತದ ಕಲ್ಪನಾ ಚಿತ್ರಕ್ಕೆ ಭಂಗಬರುತ್ತದೆ. ಚುನಾವಣೆಗಳಿಲ್ಲದ ವೇಳೆ ತಾವು ಹೇಳಿದಂತೆ ಕೇಳುವ ಯಾವ ವ್ಯಕ್ತಿ ಅಥವ ಪಕ್ಷಕ್ಕಾದರೂ ಪ್ರಾಶಸ್ತ್ಯ ಕೊಡುವುದು ಸುಲಭ.

ಒಟ್ಟಿನಲ್ಲಿ, ದೇಶದ ಸಾಮಾನ್ಯ ಪರಿಸ್ಥಿತಿಯು, ಮುಖ್ಯವಾಗಿ ಗವರ್ನರ್‌ಗಳ ಏಕಾಧಿಪತ್ಯವಿದ್ದ ಪ್ರಾಂತಗಳಲ್ಲಿ ದಿನೇ ದಿನೇ ವಿಷಮಿಸುತ್ತ ಬಂದಿತು. ತಮ್ಮ ದೈನಂದಿನ ಕಾರ್ಯಗಳಿಗಾಗಿ ಅನೇಕ ಕಾಂಗ್ರೆಸ್ ಸದಸ್ಯರು ಸೆರೆಮನೆ ಸೇರಿದರು. ಯುದ್ಧದ ನೆಪದಲ್ಲಿ ತಮ್ಮ ಮೇಲಧಿಕಾರಿಗಳ ಮೆಚ್ಚುಗೆ ಪಡೆಯಲು ಪೋಲಿಸರೂ ಸಣ್ಣ ಪುಟ್ಟ ಅಧಿಕಾರಿಗಳೂ ಎಲ್ಲ ರೀತಿಯಿಂದ ಜನರ ಸುಲಿಗೆಗಾರಂಭಿಸಿದರು. ಈ ಸುಲಿಗೆಯಿಂದ ಪಾರುಮಾಡಿರೆಂದು ರೈತರು ಬೊಬ್ಬೆ ಇಡಲಾರಂಭಿಸಿದರು. ಈ ಪರಿಸ್ಥಿತಿ ಎದುರಿಸಲು ಏನಾದರೂ ಕಾರ್ಯಕ್ರಮ ತೆಗೆದುಕೊಳ್ಳಬೇಕಾದ್ದು ಅನಿವಾರ್ಯವಾಯಿತು. ೧೯೪೦ ರಲ್ಲಿ ಬೀಹಾರದ ರಾಮಘಡದಲ್ಲಿ ಮೌಲಾನ ಅಬ್ದುಲ್ ಕಲಾಮ್ ಅಜಾದ್ ಅಧ್ಯಕ್ಷತೆಯಲ್ಲಿ ಸೇರಿದ ಕಾಂಗ್ರೆಸ್ ಅಧಿವೇಶನದಲ್ಲಿ ಶಾಸನ ಭಂಗ ಚಳುವಳಿಯಲ್ಲದೆ ಬೇರೆ ಉಪಾಯವಿಲ್ಲವೆಂದು ಕಾಂಗ್ರೆಸ್ ತೀರ್ಮಾನಿಸಿತು. ಆದರೂ ನೇರ ಚಳವಳಿಯನ್ನೇ ಆರಂಭಿಸದೆ ಜನರಿಗೆ ಸಿದ್ಧರಾಗಲು ಹೇಳಿತು.

ದೇಶದೊಳಗೆ ಪರಿಸ್ಥಿತಿ ದಿನೇ ದಿನೇ ಹದಗೆಡುತ್ತ ಹೋರಾಟ ಅನಿವಾರ್ಯವೆಂದು ಸ್ಪಷ್ಟವಾಗುತ್ತ ಬಂದಿತು. ಯುದ್ಧಕ್ಕೆಂದು ಮಾಡಿದ ಭಾರತ ರಕ್ಷಣಾಶಾಸನವನ್ನು ಜನರ ಸಾಮಾನ್ಯ ಚಟುವಟಿಕೆಗಳ ವಿರುದ ಉಪಯೋಗಿಸಿ ಅನೇಕರನ್ನು ಯಾವ ವಿಚಾರಣೆಗೂ ಇಲ್ಲದೆ ಸೆರೆಮನೆಗೆ ಅಟ್ಟಿದರು.

ನಾರ್ವೆ ಮತ್ತು ಸ್ವೀಡನ್ ಸುತ್ತಿಗೆ, ಆಮೇಲೆ ಅತ್ಯಲ್ಪಕಾಲದಲ್ಲಿ ಫ್ರಾನ್ಸಿನ ಆಶ್ಚರ್ಯ ರೀತಿಯ ಪತನ ಇವುಗಳಿಂದ ಯುದ್ಧ ಪರಿಸ್ಥಿತಿಯಲ್ಲಿ ತೀವ್ರ ವ್ಯತ್ಯಾಸವಾಗಿ ಜನರ ಮನಸ್ಸಿನ ಮೇಲೆ ಅಗಾಧ ಪರಿಣಾಮವಾಯಿತು. ಆ ಪರಿಣಾಮ ವಿವಿಧ ರೀತಿ ಇದ್ದರೂ ಫ್ರಾನ್ಸಿನ ಮೇಲೂ, ಡಂಕರ್ಕ್ ನಂತರ ಮತ್ತು ವಿಮಾನ ಧಾಳಿ ಸಮಯದಲ್ಲಿ ಇಂಗ್ಲೆಂಡಿನ ಮೇಲೂ ಜನರಿಗೆ ವಿಶೇಷ ಸಹಾನುಭೂತಿ ಹುಟ್ಟಿತು. ಶಾಸನ ಭಂಗ ಚಳವಳಿಯನ್ನು ಹೂಡಬೇಕೆಂದಿದ್ದ ಕಾಂಗ್ರೆಸ್ಸು ಸಹ ಸ್ವತಂತ್ರ ಇಂಗ್ಲೆಂಡಿನ ಅಸ್ತಿತ್ವಕ್ಕೆ ಸಂಚಕಾರ ಬಂದೀತೆಂಬ ಸಮಯದಲ್ಲಿ ಶಾಸನ ಭಂಗ ಚಳವಳಿಯ ಯೋಚನೆ ಬಿಟ್ಟಿತು. ಇಂಗ್ಲೆಂಡಿನ ವಿಷಮ ಪರಿಸ್ಥಿತಿ ಉಪಯೋಗಿಸಿಕೊಂಡು ಲಾಭ ಪಡೆಯಲು ಕಾಂಗ್ರೆಸ್ ನಾಯಕರು ಹಿಂದೆಗೆದರು. ತಮ್ಮ ಆ ನೀತಿಯನ್ನು ಸ್ಪಷ್ಟ ಸಾರಿದರು. ಸದ್ಯಕ್ಕಂತೂ ಎಲ್ಲೆಲ್ಲಿಯೂ ಶಾಸನ ಭಂಗ ಚಳವಳಿಯೂ ಹಿಂದೆ ಬಿದ್ದಿತು.

ಬ್ರಿಟಿಷ್ ಸರಕಾರದೊಡನೆ ಒಂದು ಒಪ್ಪಂದಕ್ಕೆ ಬರಲು ಕಾಂಗ್ರೆಸ್ ಇನ್ನೂ ಒಂದು ಪ್ರಯತ್ನ ಮಾಡಿತು. ಹಿಂದಿನ ಪ್ರಯತ್ನದಲ್ಲಿ ಬಹಳ ದೂರದೃಷ್ಟಿ ಇಟ್ಟುಕೊಂಡು, ಭಾರತದ ರಾಜಕೀಯ ಪರಿವರ್ತನೆಯ ಜೊತೆಗೆ ಯುದ್ಧದ ಗುರಿಯನ್ನೂ ತಿಳಿಸಬೇಕೆಂದು ಕೇಳಲಾಗಿತ್ತು. ಆದರೆ ಈ ಬಾರಿ ಭಾರತದ ವಿಷಯ ಮಾತ್ರ ಸ್ಪಷ್ಟಪಡಿಸಲು ಕೇಳಿದೆವು. ಭಾರತದ ಸ್ವಾತಂತ್ರ್ಯ ಒಪ್ಪಿ ಕೇಂದ್ರದಲ್ಲಿ ಎಲ್ಲ ಪಕ್ಷಗಳ ಸಹಕಾರದಿಂದ ರಾಷ್ಟ್ರೀಯ ಸರಕಾರ ನೇಮಿಸಿರೆಂದು ಕೇಳಿದೆವು. ಅದಕ್ಕೆ ಬ್ರಿಟಿಷ್ ಪಾರ್ಲಿಮೆಂಟಿನ ಯಾವ ಹೊಸ ಶಾಸನವೂ ಬೇಕಾಗಿರಲಿಲ್ಲ. ಆಗಿನ ಶಾಸನ ಚೌಕಟ್ಟಿನಲ್ಲಿಯೇ ವೈಸರಾಯ್ ರಾಷ್ಟ್ರೀಯ ಸರಕಾರ ನೇಮಿಸಬೇಕೆಂದು ಸಲಹೆ ಮಾಡಿದೆವು. ಈ ವ್ಯತ್ಯಾಸ ಅತಿ ಮುಖ್ಯವಾದರೂ ಒಪ್ಪಂದದಿಂದ, ಸತ್ಸಂಪ್ರದಾಯದಿಂದ ಮಾಡಲು ಸಾಧ್ಯವಿತ್ತು. ಶಾಸನಬದ್ಧ ವಿಧಾಯಕ ಪರಿವರ್ತನೆ ಅವಶ್ಯವಿದ್ದರೂ ಅವುಗಳನ್ನು ಹಿಂದಿನಿಂದ ಚರ್ಚಿಮಾಡಿ ಅನುಕೂಲ ಸಮಯ ಒದಗಿದಾಗ ಮಾಡಬಹುದಿತ್ತು. ಆದರೆ ಭಾರತದ ಸ್ವಾತಂತ್ರ್ಯದ ಹಕ್ಕುಮಾತ್ರ ಒಪ್ಪುವುದು ಅವಶ್ಯವಿತ್ತು. ಈ ಷರತ್ತು ಒಪ್ಪಿದರೆ ಪೂರ್ಣ ಸಹಕಾರಕೊಡಲು ಸಿದ್ಧರಿದ್ದೇವೆ ಎಂದು ಹೇಳಿದೆವು.

ಶ್ರೀ ಚಕ್ರವರ್ತಿ ರಾಜಗೋಪಾಲಾಚಾರ್ಯರ ಈ ಸಲಹೆಯಿಂದ ಪದೇ ಪದೇ ಸಾರಿದ್ದ ಕಾಂಗ್ರೆಸ್ ಬೇಡಿಕೆ ಸ್ವಲ್ಪ ಕಡಮೆಯಾಯಿತು. ಆದರೆ ಯಾವ ಶಾಸನದ ತೊಂದರೆಯೂ ಇಲ್ಲದೆ ಒಡನೆ ಕಾರ್ಯಗತ ಮಾಡಲು ಅದು ಸಾಧ್ಯವಿತ್ತು. ಇದರಲ್ಲಿ ಇತರ ಪಕ್ಷಗಳ ಮತ್ತು ಪಂಗಡಗಳ ಸಹಕಾರ ಪಡೆಯುವ ಪ್ರಯತ್ನವೂ ಇತ್ತು. ಏಕೆಂದರೆ ಯಾವ ರಾಷ್ಟ್ರೀಯ ಸರಕಾರವೇ ಆಗಲಿ ಅದು ಸಂಯೋಜಿತ ಸರಕಾರವಾಗಿರಬೇಕಾದ ಅವಶ್ಯಕತೆ ಇತ್ತು. ಭಾರತದಲ್ಲಿನ ಬ್ರಿಟಿಷ್ ಸರಕಾರದ ವಿಶೇಷ ಪರಿಸ್ಥಿತಿಯನ್ನು ಸಹ ಗಮನಕ್ಕೆ ತೆಗೆದುಕೊಳ್ಳಲಾಗಿತ್ತು. ರಾಷ್ಟ್ರೀಯ ಸರಕಾರದ ತೀರ್ಮಾನ ತಳ್ಳಿಹಾಕಲು ಅಸಮರ್ಥನಿದ್ದರೂ ವೈಸರಾಯ್‌ಗೂ ಸ್ಥಾನವಿತ್ತು. ಆಡಳಿತ ವರ್ಗದ ಮುಖ್ಯ ಅಧಿಕಾರಿಯಾಗಿ ಸರಕಾರದೊಡನೆ ನಿಕಟ ಸಂಬಂಧ ಇಟ್ಟುಕೊಂಡು ತನ್ನ ಪ್ರಭಾವ ಬೀರಲು ಪೂರ್ಣ ಅವಕಾಶವಿತ್ತು. ನಮ್ಮ ಸಲಹೆಯಂತೆ ಯುದ್ಧ ಯಂತ್ರವೆಲ್ಲ ಸೇನಾಧಿಪತಿಯ ಆಡಳಿತದಲ್ಲಿಯೇ ಇತ್ತು. ಬ್ರಿಟಿಷರು ಕಟ್ಟಿದ ಆಡಳಿತ ವರ್ಗವೂ ಹಾಗೆ ಉಳಿದಿತ್ತು. ಈ ಬದಲಾವಣೆಯ ಒಂದು ಮುಖ್ಯ ಗುರಿ ಎಂದರೆ ಆಡಳಿತದಲ್ಲಿ ಒಂದು ಹೊಸ ಆಸಕ್ತಿ, ಹೊಸದೃಷ್ಟಿ, ಕಾರ್ಯ ದಕ್ಷತೆಗಳನ್ನು ತಂದು ಯುದ್ಧ ಸಿದ್ಧತೆಯಲ್ಲಿ ಮತ್ತು ದೇಶದ ಎದುರಿನ ಕಠಿಣ ಸಮಸ್ಯೆಗಳ ಪರಿಹಾರ ಕಾರ್ಯದಲ್ಲಿ ಜನರ ಹೆಚ್ಚಿನ ಸಹಕಾರ ಪಡೆಯುವುದು ಮಾತ್ರ ಆಗಿತ್ತು. ಯುದ್ಧದನಂತರದ ಭಾರತದ ಸ್ವಾತಂತ್ರ್ಯಕ್ಕೆ ಭರವಸೆ ಕೊಟ್ಟು ಈ ಬದಲಾವಣೆಗೆ ಒಪ್ಪಿದರೆ ಭಾರತದಲ್ಲಿ ಒಂದು ಮಾನಸಿಕ ಪರಿವರ್ತನೆಯಾಗಿ ಹೊಸ ಚೈತನ್ಯ ಮೂಡಿ ಯುದ್ಧ ಪ್ರಯತ್ನದಲ್ಲಿ ಪೂರ್ಣ ಸಹಕಾರ ದೊರೆಯುವುದೆಂದೆವು.

ಹಿಂದಿನ ಎಲ್ಲ ಬೇಡಿಕೆಗಳನ್ನೂ, ಅನುಭವವನ್ನೂ ಗಮನಿಸಿ ಕಾಂಗ್ರೆಸ್ಸು ಈ ನಿರ್ಣಯಕ್ಕೆ ಬಂದುದು ಸುಲಭದ ಕೆಲಸವಾಗಿರಲಿಲ್ಲ. ಈ ರೀತಿ ಬಂಧನಗಳಿಟ್ಟುಕೊಂಡು ರಚಿಸಿದ ರಾಷ್ಟ್ರೀಯ ಸರಕಾರ ಅಶಕ್ತವೂ ಅಸಹಾಯಕವೂ ಆಗುವುದೆಂಬ ಭಯವಿತ್ತು. ಕಾಂಗ್ರೆಸ್ ಪಕ್ಷದಲ್ಲೇ ಬಹಳ ವಿರೋಧವಿತ್ತು. ದೀರ್ಘ

ಕಾಲ ಯೋಚಿಸಿ ಬಹುಕಷ್ಟದಿಂದ ಕೊನೆಗೆ ನಾನು ಒಪ್ಪಲು ಮನಸ್ಸು ಮಾಡಿದೆ. ಅಂತರರಾಷ್ಟ್ರೀಯ ಬೃಹತ್ಸಮಸ್ಯೆಗಳ ದೃಷ್ಟಿಯೇ ಮುಖ್ಯ ಆ ರೀತಿ ನಾನು ಒಪ್ಪುವಂತೆ ಪ್ರೇರಿಸಿತು. ಫಾಸಿಸಂ ಮತ್ತು ನಾಜಿಸಂ ವಿರುದ್ಧ ಹೋರಾಟದಲ್ಲಿ ಗೌರವ ರೀತಿಯಿಂದ ಆದರೆ ನಾವು ಪೂರ್ಣ ಭಾಗವಹಿಸಬೇಕೆಂದೇ ನನ್ನ ಇಷ್ಟವಿತ್ತು.

ಆದರೆ ಎಲ್ಲಕ್ಕೂ ದೊಡ್ಡ ಕಷ್ಟ ನಮ್ಮೆದುರು ಇನ್ನೊಂದು ಇತ್ತು. ಅದು ಗಾಂಧೀಜಿಯ ವಿರೋಧ. ಅವರ ಅಹಿಂಸಾ ಮನೋಭಾವವೇ ಅದಕ್ಕೆ ಮುಖ್ಯ ಕಾರಣ. ಯುದ್ಧ ಪ್ರಯತ್ನದಲ್ಲಿ ಸಹಾಯಮಾಡುವುದಾಗಿ ನಾವು ಹಿಂದೆ ಹೇಳಿದಾಗ ಅವರು ವಿರೋಧಿಸಿರಲಿಲ್ಲ. ಪ್ರಾಯಶಃ ಅವರ ಮನಸ್ಸು ಅಸಾಧ್ಯ ತಲ್ಲಣಿಸಿರಬೇಕು. ಕಾಂಗ್ರೆಸ್ಸು ತನ್ನ ನೈತಿಕ ಬೆಂಬಲ ಮಾತ್ರ ಕೊಡಬಲ್ಲದೆಂದು ಅವರು ವೈಸರಾಯ್‌ಗೆ ಯುದ್ಧ ಆರಂಭವಾದಾಗಲೇ ತಿಳಿಸಿದ್ದರು. ಆದರೆ ಅನಂತರ ಮೇಲಿಂದ ಮೇಲೆ ಕಾಂಗ್ರೆಸ್ ಕೊಟ್ಟ ಹೇಳಿಕೆಗಳ ಉದ್ದೇಶ ಅಷ್ಟು ಮಾತ್ರ ಇರಲಿಲ್ಲ. ಕಾಂಗ್ರೆಸ್ಸು ಹಿಂಸಾತ್ಮಕ ಯುದ್ಧದ ಯಾವ ಸಹಾಯದ ಜವಾಬ್ದಾರಿಯನ್ನೂ ವಹಿಸಿಕೊಳ್ಳಬಾರದೆಂದು ಸ್ಪಷ್ಟ ಹೇಳಿದರು. ಈ ತತ್ವಕ್ಕಾಗಿ ತಮ್ಮ ಸಹೋದ್ಯೋಗಿಗಳಿಂದ, ಕಾಂಗ್ರೆಸ್ಸಿನಿಂದ ದೂರ ನಿಂತರು. ಇಂದಿನ ಕಾಂಗ್ರೆಸ್ಸೇ ಅವರ ಶಿಶುವಾದ್ದರಿಂದ ಅವರನ್ನು ಬಿಟ್ಟು ಕೆಲಸಮಾಡಲು ನಮಗೆ ಬಹಳ ಸಂಕಟವಾಯಿತು. ಆದರೂ ಯುದ್ಧಸಮಯದಲ್ಲಿ ಅವರ ಅಸಹಕಾರ ನೀತಿಗೆ ಕಾಂಗ್ರೆಸ್ ಒಪ್ಪಲಿಲ್ಲ. ಬ್ರಿಟಿಷ್ ಸರಕಾರದೊಡನೆ ಹೇಗಾದರೂ ಒಪ್ಪಂದಕ್ಕೆ ಬರಬೇಕೆಂಬ ಕಾತರತೆಯಲ್ಲಿ ತನ್ನ ನೆಚ್ಚಿನ ನಾಯಕನಿಂದ ಸಹ ದೂರ ಸರಿಯಲು ನಿರ್ಧರಿಸಿತು.

ದೇಶದ ಪರಿಸ್ಥಿತಿ ಅನೇಕ ರೀತಿಯಿಂದ ಹದಗೆಟ್ಟಿತ್ತು. ರಾಜಕೀಯದಲ್ಲಂತೂ ಇದು ಸ್ಪಷ್ಟ ಕಾಣುತ್ತಿತ್ತು. ಯುದ್ಧ ಪರಿಸ್ಥಿತಿಯಿಂದ ಕೆಲವು ರೈತ ಕೂಲಿಗಾರರ ಆರ್ಥಿಕ ಪರಿಸ್ಥಿತಿಯು ಉತ್ತಮಗೊಂಡಿದ್ದರೂ ಬಹು ಸಂಖ್ಯಾಕರು ಕಷ್ಟದಲ್ಲಿ ನರಳುತ್ತಿದ್ದರು. ಲಾಭಬಡಕರು, ಯುದ್ಧ ಸರಬರಾಜಿನವರು, ಯುದ್ಧ ಕೆಲಸಕ್ಕೆಂದು ಬೊಗಸೆಗಟ್ಟಲೆ ಸಂಬಳ ಪಡೆಯುತ್ತಿದ್ದ ಅಧಿಕಾರಿಗಳು—ಅದರಲ್ಲೂ ಬ್ರಿಟಿಷರು-ಸುಖದಿಂದ ಇದ್ದರು. ಲಾಭ ಬಡಕತನ ಪ್ರೋತ್ಸಾಹಿಸಿದರೇನೇ ಯುದ್ಧ ಪ್ರಯತ್ನ ಯಶಸ್ವಿಯಾಗಬಹುದೆಂದು ಅವರ ಅಭಿಪ್ರಾಯವಿದ್ದಂತೆ ತೋರುತ್ತದೆ. ಲಂಚಗುಳಿತನ ಮತ್ತು ಸ್ವೇಚ್ಛಾಪರಿವರ್ತನೆಗೆ ಮಿತಿಯೇ ಇರಲಿಲ್ಲ. ಸಾರ್ವಜನಿಕರ ಹತೋಟಿ ಯಾವುದೂ ಇರಲಿಲ್ಲ. ಸಾರ್ವಜನಿಕರ ಟೀಕೆಯು ಯುದ್ಧಪ್ರಯತ್ನಕ್ಕೇ ಅಡ್ಡಿ ಎಂದು ಅದು ಭಾರತದ ರಕ್ಷಣಾ ಶಾಸನದ ಪ್ರಕಾರ ಶಿಕ್ಷಾರ್ಹವಾಯಿತು. ಎಲ್ಲಿ ನೋಡಿದರೂ ಅಧೈರ್ಯವು ಎದ್ದು ಕಾಣುತ್ತಿತ್ತು.

ಈ ಎಲ್ಲ ವಿಷಯ ಗಮನಿಸಿ ಬ್ರಿಟಿಷ್ ಸರಕಾರದೊಡನೆ ಒಪ್ಪಂದಕ್ಕೆ ಬರಲು ಇನ್ನೊಮ್ಮೆ ಪ್ರಯತ್ನ ಮಾಡುವುದು ಅವಶ್ಯವೆಂದು ನಮಗೆ ತೋರಿತು. ಆದರೆ ಆ ಪ್ರಯತ್ನ ಫಲಕಾರಿಯಾಗುವುದೆ ? ಆ ಆಶೆಯೇನೂ ಹೆಚ್ಚು ಇರಲಿಲ್ಲ. ಕಳೆದ ಇಪ್ಪತ್ತು ವರ್ಷಗಳಿಂದ ದೊರೆಯದ ನಿರಾತಂಕ ನಿರಂಕುಶಾಧಿಕಾರವು ಈಗ ಆಡಳಿತವರ್ಗಕ್ಕೆ ದೊರಕಿತ್ತು. ಅವರ ಮಾತಿಗೆ ಪ್ರತಿ ಹೇಳುವವರೇ ಇರಲಿಲ್ಲ. ತಮಗೆ ಇಷ್ಟ ಬಂದ ಯಾರನ್ನಾದರೂ ವಿಚಾರಣೆ ಮಾಡಿಯೊ ಮಾಡದೆಯೋ ಸುಲಭವಾಗಿ ಸೆರೆಮನೆಗೆ ಕಳುಹಿಸಬಹುದಾಗಿತ್ತು. ಪ್ರಾಂತಗಳಲ್ಲಿ ಗೌರ್‍ನರುಗಳ ಅಧಿಕಾರಕ್ಕೆ ಅಂಕೆಯೇ ಇರಲಿಲ್ಲ. ಇದನ್ನೆಲ್ಲ ಬದಲಾಯಿಸಬೇಕಾದ ಅಸಾಧ್ಯ ಪ್ರಮೇಯವಾದರೂ ಏನು ? ಈ ಸಾಮ್ರಾಜ್ಯ ವ್ಯೂಹದ ಕಲಶದಂತೆ ತನ್ನ ಉನ್ನತ ಪದವಿಗೆ ಯೋಗ್ಯವಾದ ರಾಜ ಠೀವಿ ಮತ್ತು ಮರ್ಯಾದೆಗಳಿಂದ ವೈಸರಾಯ್ ಲಾರ್ಡ್ ಲಿನ್‌ಲಿತ್‌ಗೌ ಇದ್ದ. ಸ್ಥೂಲಕಾಯನೂ, ಜಡಮನಸ್ಸಿನವನೂ, ಆದರೆ ಜಗಬಂಡೆಯಂತೆ ಗೋರ್ಕಲ್ಲ ಮೇಲೆ ಮಳೆಗರೆದಂತೆ ಹಳೆಯಕಾಲದ ಬ್ರಿಟಿಷ್ ಬಂಡವಾಳಗಾರನ ಎಲ್ಲ ಗುಣಾವಗುಣಗಳಿಂದ ತುಂಬಿ ಈ ಸಮಸ್ಯೆಯ ಪರಿಹಾರಕ್ಕೆ ಮಾರ್ಗ ಹುಡುಕಲು ಆತನೇನೋ ನಿಜವಾದ ಪ್ರಮಾಣಿಕತೆಯಿಂದ ಪ್ರಯತ್ನಪಟ್ಟನು. ಆದರೆ ಆತನ ಬಂಧನಗಳು ಅನೇಕವಿದ್ದವು; ಅವನ ಮನಸ್ಸೆಲ್ಲ ಹಳೆಯ ಕೊರಕಲಿನಲ್ಲಿಯೇ ಇದ್ದು ಹೊಸ ದಾರಿ ಎಂದರೆ ಹಿಂಜರಿಯುತ್ತಿತ್ತು; ಹಳೆಯ ಕಾಲದ ಬ್ರಿಟಿಷ್ ಆಡಳಿತಗಾರರ ಸಂಪ್ರದಾಯ ರೀತಿಯಿಂದ ಆತನ ದೃಷ್ಟಿ ಮಂದವಾಗಿತ್ತು; ಸಿವಿಲ್ ಸರ್ವಿಸ್ ಅಧಿಕಾರಿಗಳು ಮತ್ತು ತನ್ನ ಸುತ್ತಲಿನ ಅಧಿಕಾರಿ

ಗಳ ದೃಷ್ಟಿ ಅಭಿಪ್ರಾಯಗಳೇ ಆತನ ದೃಷ್ಟಿ, ಅಭಿಪ್ರಾಯಗಳು ; ರಾಜಕೀಯ ಮತ್ತು ಸಾಮಾಜಿಕ ವಿಷಯ ಗಳಲ್ಲಿ ಮೂಲ ಕ್ರಾಂತಿಕಾರಕ ಬದಲಾವಣೆಯಾಗಬೇಕೆಂದವರೆಲ್ಲ ಆತನ ನಂಬಿಕೆಗೆ ಅನರ್ಹರಾದರು ; ಬ್ರಿಟಿಷ್ ಸಾಮ್ರಾಜ್ಯದ ಉನ್ನತ ಸೇವೆಯಲ್ಲಿ ಮತ್ತು ಭಾರತದಲ್ಲಿನ ಅದರ ಮುಖ್ಯ ಪ್ರತಿನಿಧಿಗಳಲ್ಲಿ ಯೋಗ್ಯ ವಿಶ್ವಾಸ ತೋರಿದವರೆಲ್ಲ ಆತನಿಗೆ ಶತ್ರುಗಳಾದರು.

ಪಶ್ಚಿಮ ಯೂರೋಪಿನ ಜರ್ಮನರ ಕ್ರೂರ ದಂಡಯಾತ್ರೆಯ ಕಾಳದಿನಗಳಲ್ಲಿ ಇಂಗ್ಲೆಂಡಿನಲ್ಲೂ ಬಹಳ ಬದಲಾವಣೆಯಾಗಿತ್ತು. ನೆವಿಲ್ ಚೇಂಬರ್ಲನ್‌ಗೆ ಪದಚ್ಯುತಿಯಾಗಿ ಅನೇಕ ರೀತಿ ಒಳ್ಳೆಯ ಪರಿಣಾಮವಾಗಿತ್ತು. ಶ್ರೀಮಂತಿಕೆಯ ಶಿರೋರತ್ನದಂತೆ ಇದ್ದ ಮಾರ್ಕ್ವಿಸ್ ಆಫ್ ಜೆಟ್‌ಲೆಂಡ್ ಸಹ ಯಾರೂ ಒಂದು ಹನಿ ಕಣ್ಣೀರು ಸುರಿಸದೆ ಇಂಡಿಯ ಕಚೇರಿಯಿಂದ ಹೊರಬಿದ್ದಿದ್ದ. ಆತನ ಸ್ಥಾನದಲ್ಲಿ ಅಮೆರಿ ಬಂದಿದ್ದ. ಅಮೆರಿಯ ವಿಷಯ ಯಾರಿಗೂ ಏನೂ ತಿಳಿಯದು. ಆದರೆ ಅದೇ ಒಂದು ಅರ್ಹತೆಯಾಗಿತ್ತು. ಕಾಮನ್ಸ್ ಸಭೆಯಲ್ಲಿ ಚೀನದ ಮೇಲೆ ಜಪಾನಿನ ಆಕ್ರಮಣವನ್ನು ಬಲವಾಗಿ ಸಮರ್ಥನೆ ಮಾಡಿದ್ದ. ಚೀನದಲ್ಲಿ ಜಪಾನಿನ ವರ್ತನೆ ಖಂಡಿಸುವುದೆಂದರೆ ಇಂಡಿಯ ಮತ್ತು ಈಜಿಪ್ಟ್‌ಗಳಲ್ಲಿನ ಇಂಗ್ಲೆಂಡಿನ ವರ್ತನೆ ಖಂಡಿಸಬೇಕಾಗುತ್ತದೆ ಎಂದು ಹೇಳಿದ್ದ. ವಾದವೇನೋ ಒಳ್ಳೆಯದು ನಿಜ ; ಆದರೆ ತಿರುಗು ಮುರುಗು ವ್ಯಾಪಾರ.

ನಿಜವಾದ ಗುಣಾಢ್ಯವ್ಯಕ್ತಿ ಎಂದರೆ ನೂತನ ಪ್ರಧಾನಿ ವಿನ್‌ಸ್ಟನ್ ಚರ್ಚಿಲ್. ಭಾರತ ಸ್ವಾತಂತ್ರ್ಯದ ವಿಷಯದಲ್ಲಿ ಚರ್ಚಿಲ್ ತನ್ನ ಅಭಿಪ್ರಾಯಗಳನ್ನು ಸ್ಪಷ್ಟವಾಗಿ, ಮುಚ್ಚುಮರೆಯಿಲ್ಲದೆ ಅನೇಕ ಬಾರಿ ವಿಶದ ಪಡಿಸಿದ್ದ. ಮೊದಲಿನಿಂದಲೂ ಆತನು ಭಾರತ ಸ್ವಾತಂತ್ರ್ಯದ ಪರಮ ಶತ್ರು. ೧೯೩೦ ನೆ ಜನವರಿಯಲ್ಲಿ ಗಾಂಧಿಯನ್ನು, ಇಂಡಿಯದ ರಾಷ್ಟ್ರೀಯ ಮಹಾಸಭೆಯನ್ನು ಮತ್ತು ಅದರ ರಚನೆಯ ಎಲ್ಲ ಹುಟ್ಟನ್ನೂ "ಇಂದೋ ನಾಳೆಯೋ ಅಡಗಿಸಲೇ ಬೇಕು" ಎಂದು ಹೇಳಿದ್ದ. ಅದೇ ವರ್ಷ ಡಿಸೆಂಬರ್ ತಿಂಗಳಲ್ಲಿ "ಭಾರತೀಯ ಜೀವನ ಮತ್ತು ಪ್ರಗತಿಯ ಮೇಲಿನ ಹತೋಟಿ ಬಿಟ್ಟುಕೊಡಲು ಬ್ರಿಟಿಷ್ ಜನಾಂಗಕ್ಕೆ ಇಷ್ಟ ವಿಲ್ಲ.... ನಮ್ಮ ಎಲ್ಲ ಡೊಮಿನಿಯನ್‌ಗಳು ಮತ್ತು ಅಧೀನ ರಾಷ್ಟ್ರಗಳಿಗಿಂತ ಹೆಚ್ಚಾಗಿ ಬ್ರಿಟಿಷ್ ಸಾಮ್ರಾಜ್ಯದ ಹಿರಿಮೆಯೂ, ಪೌರುಷವೂ ಆದ ಮತ್ತು ಬ್ರಿಟಿಷ್ ದೊರೆಯ ರತ್ನಖಚಿತ ಕಿರೀಟದ ಅತಿ ಜಾಜ್ವಲ್ಯಯುಕ್ತ, ಶ್ರೇಷ್ಠತಮ ಅಮೂಲ್ಯ ರತ್ನದಂತಿರುವ ಭಾರತವನ್ನು ಬಿಟ್ಟುಕೊಡುವ ಅಭಿಲಾಷೆ ಸ್ವಲ್ಪವೂ ನಮಗಿಲ್ಲ." ಎಂದು ಹೇಳಿದ್ದ.

ಆಮೇಲೆ, ನಮ್ಮ ಮುಂದೆ ಪದೇ ಪದೇ ಹೇಳಿ "ಡೊಮಿನಿಯನ್ ಅಧಿಕಾರಕ್ಕೆ" ಭಾರತದ ವಿಷಯ ದಲ್ಲಿ ಯಾವ ಅರ್ಥ ಎಂಬುದನ್ನೂ ವಿವರಿಸಿದ್ದ. ೧೯೩೧ ನೆಯ ಜನವರಿಯಲ್ಲಿ "ಡೊಮಿನಿಯನ್ ಅಧಿ ಕಾರ ನಮ್ಮ ಅಂತಿಮಗುರಿ ಎಂದು ಯೋಚಿಸಿರುವುದೇನೋ ನಿಜ. ಆದರೆ ಯುದ್ಧಕಾಲದಲ್ಲಿ ಭಾರತದ ಪ್ರತಿನಿಧಿಗಳು ಕೆಲವು ಸಭೆಗಳಿಗೆ ಬಂದುದು ಅಲಂಕಾರ ದೃಷ್ಟಿಯಿಂದ ವಿನಾ ಭಾರತದ ವಿಷಯದಲ್ಲಿ ಈ ತತ್ವವನ್ನು ಯಾವಾಗ ಕಾರ್ಯರೂಪಕ್ಕೆ ತರಲು ಸಾಧ್ಯ ಎಂದು ಯಾರೂ ಯೋಚಿಸಿಲ್ಲ; ಯೋಚಿಸಲು ಸಾಧ್ಯವೂ ಇಲ್ಲ" ಎಂದು ಹೇಳಿದ್ದ. ಪುನಃ ೧೯೩೧ ನೆ ಡಿಸೆಂಬರ್ ನಲ್ಲಿ "ನಮ್ಮ ಸಾರ್ವಜನಿಕ ಪ್ರಮುಖ ರಲ್ಲಿ ಅನೇಕರು—ಅವರಲ್ಲಿ ನಾನೂ ಒಬ್ಬ—ಡೊಮಿನಿಯನ್ ಅಧಿಕಾರದ ವಿಷಯ ಭಾಷಣಮಾಡಿದೆವು ; ನಾನೂ ಮಾಡಿದೆ. ಆದರೆ ಕೆನಡದಲ್ಲಿ ಇರುವ ರಾಜ್ಯ ಪದ್ಧತಿ ಮತ್ತು ಅಧಿಕಾರ ಆಚರಣೆಗೆ ಬರುವುದು ಇಂಡಿಯಾದಲ್ಲಿ ಯಾವಾಗ ಸಾಧ್ಯ ಎಂದು ನಾನು ಮಾತ್ರ ಊಹಿಸಲಾರೆ............ಭಾರತದಲ್ಲಿ ಬ್ರಿಟಿಷ್ ಸಾಮ್ರಾಜ್ಯ ನಾಶವಾದರೆ ಅಂದಿನಿಂದಲೇ ಬ್ರಿಟನ್ ಮಹಾರಾಷ್ಟ್ರಗಳ ಪಂಕ್ತಿಯಿಂದ ಕೆಳಗಿಳಿಯಬೇಕಾಗು ತ್ತದೆ" ಎಂದಿದ್ದ.

ಮುಖ್ಯ ತಿರುಳೇ ಅದು ; ಬ್ರಿಟಿಷ್ ಸಾಮ್ರಾಜ್ಯವೆಂದರೆ ಇಂಡಿಯ. ಭಾರತದ ಪರಾಧೀನತೆ ಮತ್ತು ಸುಲಿಗೆಯಿಂದಲೇ ಇಂಗ್ಲೆಂಡಿನ ಕೀರ್ತಿ ಮತ್ತು ಶಕ್ತಿ. ಅದರಿಂದಲೇ ಇಂಗ್ಲೆಂಡ್ ಪ್ರಪಂಚದ ಒಂದು ಪ್ರಬಲರಾಷ್ಟ್ರವಾಗಿದೆ. ವಿಶಾಲ ಸಾಮ್ರಾಜ್ಯದ ಒಡೆತನ ಮತ್ತು ನಾಯಕತ್ವವಿಲ್ಲದೆ ಹೋದರೆ ಇಂಗ್ಲೆಂಡಿನ ಅಸ್ತಿತ್ವಕ್ಕೇ ಸಂಚಕಾರವೆಂದು ಚರ್ಚಿಲ್ ಮತ. ಆದ್ದರಿಂದ ಭಾರತ ಸ್ವಾತಂತ್ರ್ಯ ಎಂಬುದು ಆತನಿಗೆ

ಊಹಿಸಲಸಾಧ್ಯ. ಇನ್ನೇನು ಸಿಕ್ಕಿತು ಎಂದಿದ್ದ ಡೊಮಿನಿಯನ್ ಆಡಳಿತ ಭಾರತದ ಮಟ್ಟಿಗೆ ಸ್ವಾತಂತ್ರ್ಯ ಮತ್ತು ಅಧಿಕಾರವಿಲ್ಲದ ಬಹು ದೂರದ ಉಪಚಾರದ ಮಾತು; ಕನ್ನಡಿಯೊಳಗಿನ ಗಂಟು ಎನ್ನುವುದು ಸ್ಪಷ್ಟವಾಗಿತ್ತು. ಈಗ ಡೊಮಿನಿಯನ್ ಅಧಿಕಾರ ನಾವು ನಿರಾಕರಿಸಿ ಪೂರ್ಣ ಸ್ವಾತಂತ್ರ್ಯವನ್ನೇ ಕೇಳಿದ್ದೆವು. ಚರ್ಚಿಲ್‌ಗೂ ನಮಗೂ ಇದ್ದ ಅಂತರ ಅಪಾರವಿತ್ತು.

ಆತನ ಮಾತುಗಳೆಲ್ಲ ನಮ್ಮ ಸ್ಮೃತಿಪಥದಲ್ಲಿದ್ದವು; ಆತನು ಕಠಿಣ ಹೃದಯನೆಂದೂ, ರಾಜಿಯ ಮಾತಿನವನಲ್ಲವೆಂದೂ ತಿಳಿದೆವು. ಆತನ ನಾಯಕತ್ವದಲ್ಲಿ ಇಂಗ್ಲೆಂಡಿನಿಂದ ನಮಗೆ ಸಾಮಾನ್ಯ ಸೌಜನ್ಯತೆ ಸಹ ದೊರೆಯುವಂತೆ ಇರಲಿಲ್ಲ. ಅದ್ಭುತ ಧೈರ್ಯ ಮತ್ತು ಮಹಾನಾಯಕನಿಗೆ ಇರಬೇಕಾದ ಅಪಾರ ಸದ್ಗುಣ ಆತನಲ್ಲಿದ್ದರೂ ಆತನು ಇನ್ನೂ ಹತ್ತೊಂಭತ್ತನೆಯ ಶತಮಾನದ ಬಂಡವಾಳಗಾರಿಕೆಯ ಸಾಮ್ರಾಜ್ಯವಾದಿ ಇಂಗ್ಲೆಂಡಿನ ಪ್ರತಿನಿಧಿಯಾಗಿದ್ದ. ಹೊಸ ಪ್ರಪಂಚದ ಜಟಿಲ ಸಮಸ್ಯೆಗಳನ್ನೂ ಪ್ರಚಂಡ ಶಕ್ತಿಗಳನ್ನೂ ಅರ್ಥಮಾಡಿಕೊಳ್ಳಲು ಅಸಮರ್ಥನಿದ್ದ; ತಾನಾಗಿಯೇ ರೂಪುಗೊಳ್ಳುತ್ತಿದ್ದ ಭವಿಷ್ಯದ ರೂಪುರೇಖೆ ಊಹಿಸುವುದಂತೂ ಆತನಿಗೆ ಸಾಧ್ಯವೇ ಇರಲಿಲ್ಲ. ಆದರೂ ಒಂದು ದೊಡ್ಡ ಹೆಜ್ಜೆ ಇಡಲು ದೊಡ್ಡ ವ್ಯಕ್ತಿ ಮಾತ್ರ ಸಾಧ್ಯ. ಘೋರ ವಿಪತ್ತಿನ ಎದುರಿನಲ್ಲಿ ಮಾಡಿದ ಸಲಹೆಯಾದರೂ ಇಂಗ್ಲೆಂಡ್ ಫ್ರಾನ್ಸಿನೊಡನೆ ಸಂಯುಕ್ತ ಆಡಳಿತಕ್ಕೆ ಸಿದ್ಧವಿದೆ ಎಂದು ಆತನ ಸಲಹೆಯಲ್ಲಿ ದೂರದೃಷ್ಟಿಯೂ ಸಂದರ್ಭೋಚಿತ ಸಮೀಕರಣ (adaptation) ವೂ ಇತ್ತು. ಆ ಸಲಹೆಯು ಭಾರತದ ಮೇಲೆ ಒಳ್ಳೆಯ ಪರಿಣಾಮ ಮಾಡಿತು. ಪ್ರಾಯಶಃ ಆತನ ಹೊಸ ಪದವಿಯ ದೊಡ್ಡ ಜವಾಬ್ದಾರಿಗಳಿಂದ ಆತನ ದೃಷ್ಟಿ ವಿಶಾಲಗೊಂಡಿರಬಹುದು; ಮೊದಲಿನ ದುರಭಿಪ್ರಾಯಗಳು, ಸಂಕುಚಿತ ಭಾವನೆಗಳು ಅಳಿಸಿರಬಹುದು; ಯುದ್ಧದ ಅವಶ್ಯಕತೆಯ ದೃಷ್ಟಿಯಿಂದಲೇ ಭಾರತದ ಸ್ವಾತಂತ್ರ್ಯ ಅನಿವಾರ್ಯ ಮತ್ತು ಅಗತ್ಯ ಎಂದು ಆತನಿಗೆ ಮನವರಿಕೆಯಾಗಬಹುದು; ಎಂದು ಊಹಿಸಿದೆವು. ೧೯೩೯ ನೆ ಆಗಸ್ಟ್ ತಿಂಗಳಲ್ಲಿ ನಾನು ಚೀನಾಕ್ಕೆ ಹೊರಟಾಗ ಉಭಯರ ಸ್ನೇಹಿತನೊಬ್ಬನ ಮೂಲಕ ಆ ಯುದ್ಧ ತಪ್ತ ದೇಶದಲ್ಲಿ ನನ್ನ ಪ್ರವಾಸ ಸುಖಮಯವಾಗಲೆಂದು ನನಗೆ ಸಂದೇಶ ಕಳುಹಿಸಿದ್ದ.

ಹೆಚ್ಚು ಆಶೆ ಇಟ್ಟುಕೊಳ್ಳದೆ, ತೀರ ನಿರಾಶರಾಗದೆ ನಮ್ಮ ಬೇಡಿಕೆಯನ್ನು ಸರಕಾರದ ಮುಂದಿಟ್ಟೆವು. ಬ್ರಿಟಿಷ್ ಸರಕಾರದ ಉತ್ತರ ಹಿಂದೆಯೇ ಬಂದಿತು. ಎಲ್ಲಕ್ಕೂ ಪೂರ್ಣ ನಕಾರ. ಅದು ಸಾಲದೆ ಅವರು ಉಪಯೋಗಿಸಿದ ಭಾಷೆಯಿಂದ ಭಾರತದಲ್ಲಿ ಬ್ರಿಟಿಷರಿಗೆ ತಮ್ಮ ಅಧಿಕಾರ ಬಿಟ್ಟುಕೊಡುವ ಯೋಚನೆ ಇಲ್ಲವೆಂದೇ ಸ್ಪಷ್ಟವಾಯಿತು. ದೇಶದಲ್ಲಿ ಅನೈಕ್ಯತೆಗೆ ಪ್ರೋತ್ಸಾಹಕೊಟ್ಟು ಪ್ರತಿಯೊಂದು ಹಳೆಯ ಕಂದಾಚಾರದ ಪ್ರತಿಗಾಮಿ ಶಕ್ತಿಗೂ ಬೆಂಬಲಕೊಟ್ಟರು. ಸಾಮ್ರಾಜ್ಯ ಶೃಂಖಲೆಗಳನ್ನು ಸಡಿಲಿಸುವ ಬದಲು ನಾಡಿನ ಒಳಗೆ ದಂಗೆ ಮತ್ತು ಭಾರತದ ನಾಶವೇ ಅವರಿಗೆ ಉತ್ತಮವೆಂದು ತೋರಿದಂತೆ ಕಂಡಿತು.

ಈ ಬಗೆಯ ವ್ಯವಹಾರ ನಮಗೆ ಹೊಸದಾಗಿರಲಿಲ್ಲ. ಆದರೂ ಈ ಸಮಯದಲ್ಲಿ ಈ ನಡತೆ ಬಹಳ ಆಶ್ಚರ್ಯವೆನಿಸಿತು. ನಮ್ಮ ನಿರಾಶಾಭಾವನೆ ಮೇರೆ ಮೀರಿತು. "ಬೇರೆ ಬೇರೆ ದಾರಿ" ಎಂಬ ಲೇಖನ ಒಂದನ್ನು ನಾನು ಆಗ ಬರೆದುದು ಜ್ಞಾಪಕವಿದೆ. ಪೂರ್ಣ ಸ್ವಾತಂತ್ರ್ಯವಿಲ್ಲದೆ ನಮಗೆ ಪ್ರಗತಿ ಇಲ್ಲವೆಂದೂ, ಜನರು ಮುಂದುವರಿಯಲಸಾಧ್ಯವೆಂದೂ, ಇಂಗ್ಲೆಂಡಿನೊಡನೆ ಸ್ನೇಹ ಮತ್ತು ಸಹಕಾರದಿಂದ ನಡೆಯಲು ಅದೊಂದೇ ಮಾರ್ಗವೆಂದೂ ಅರಿತು ಬಹುಕಾಲದಿಂದ ಸ್ವಾತಂತ್ರ್ಯಕ್ಕಾಗಿ ದುಡಿದಿದ್ದೆ. ಆದರೂ ಸ್ನೇಹಪರ ನಡತೆ ದೊರೆಯಬಹುದೆಂದು ಇದ್ದೆ. ಇಂಗ್ಲೆಂಡ್ ಸಂಪೂರ್ಣ ಪರಿವರ್ತನೆ ಆಗುವವರೆಗೆ ನಮಗೂ ಅವರಿಗೂ ಒಂದು ದಾರಿ ಅಸಾಧ್ಯವೆಂದು ಈಗ ಏಕಾ ಏಕಿ ಅರ್ಥವಾಯಿತು. ನಮ್ಮ ದಾರಿ ನಮಗೆ ಅವರ ದಾರಿ ಅವರಿಗೆ.

## ೫. ವೈಯಕ್ತಿಕ ಶಾಸನ ಭಂಗ

ಸ್ವಾತಂತ್ರ್ಯ ಸಾಧನೆಯ ಆಸೆ ಮತ್ತು ಉತ್ಸಾಹದಿಂದ ತುಂಬಿ ನಮ್ಮ ಸರ್ವಶಕ್ತಿ ವಿನಿಯೋಗಿಸಿ ರಾಷ್ಟ್ರೀಯ ಭಾವನಾ ಪರವಶತೆಯಿಂದ ಪ್ರಪಂಚ ಯುದ್ಧದಲ್ಲಿ ಧುಮ್ಮಿಕ್ಕುವ ಬದಲು ಈ ರೀತಿ ಸ್ವಾತಂತ್ರ್ಯ

ನಿರಾಕರಣೆಯ ನೋವು ಮತ್ತು ನಿರಾಶೆ ನಮ್ಮನ್ನು ಕವಿದವು. ಅದು ಸಾಲದೆ ದುರಹಂಕಾರದಿಂದ ಬ್ರಿಟಿಷರ ಆಳ್ವಿಕೆ ಮತ್ತು ನೀತಿಯನ್ನೇ ಪ್ರಶಂಸೆಮಾಡಿ, ಸ್ವಾತಂತ್ರ್ಯ ಕೇಳುವ ಮುಂಚೆ ಕೆಲವು ಷರತ್ತುಗಳನ್ನು ನಾವು ಪೂರ್ಣಗೊಳಿಸಬೇಕೆಂದು ದುರ್ಭಾಷೆಯಲ್ಲಿ ನಮಗೆ ಅವಶ್ಯ ಎಚ್ಚರಿಸಿದ್ದರು. ಆ ಷರತ್ತುಗಳನ್ನು ಪೂರೈಸಲು ಸಾಧ್ಯವೇ ಇರಲಿಲ್ಲ. ಇಂಗ್ಲೆಂಡಿನಲ್ಲಿ ನಡೆದ ಪಾರ್ಲಿಮೆಂಟಿನ ಚರ್ಚೆ ಮತ್ತು ಮಾತುಗಾರಿಕೆಯ ನಾಟಕಗಳಿಂದ ಉದ್ದುದ್ದನೆಯ ಭಾಷಣಗಳಿಂದ ದೊಡ್ಡ ದೊಡ್ಡ ಮಾತುಗಳಿಂದ ಅದೆಲ್ಲ ರಾಜಕೀಯ ನಟನೆ ಎಂದೂ, ಆದಷ್ಟು ಕಾಲ ಭಾರತವನ್ನು ತಮ್ಮ ಅಧೀನ ಇಟ್ಟುಕೊಂಡು ಸಾಮ್ರಾಜ್ಯ ನಡೆಸುವುದೇ ಅವರ ಇಷ್ಟವೆಂದೂ ಸ್ಪಷ್ಟವಾಯಿತು. ಸಾಮ್ರಾಜ್ಯ ಶಕ್ತಿಯ ನಖಗಳು ಭಾರತದ ಹೃದಯದಲ್ಲಿ ಇನ್ನೂ ಆಳ ನೆಟ್ಟು ಸಂಕಟವನ್ನು ಹೆಚ್ಚಿಸಿದವು. ಪ್ರಪಂಚದಲ್ಲಿ ಪ್ರಜಾಪ್ರಭುತ್ವ ಮತ್ತು ಸ್ವಾತಂತ್ರ್ಯ ರಕ್ಷಣೆಯೇ ಅಂತರರಾಷ್ಟ್ರೀಯ ಮೂಲ ತತ್ವ; ಅದಕ್ಕಾಗಿ ಬ್ರಿಟನ್ ಯುದ್ಧಮಾಡುತ್ತಿದೆ ಎಂಬ ಕೂಗೆಲ್ಲ ಇದೇ ಉದ್ದೇಶದಿಂದ!

ನಮಗೆ ಇನ್ನೂ ಒಂದು ಮುಖ್ಯ ಉದಾಹರಣೆ ಇತ್ತು. ಯುದ್ಧ ಮುಗಿದ ನಂತರ ತನಗೆ ಡೊಮಿನಿಯನ್ ಅಧಿಕಾರ ಕೊಡಬೇಕೆಂದು ಬರ್ಮ ಕೇಳಿತ್ತು. ಆಗ ಇನ್ನೂ ಪೆಸಿಫಿಕ್ ಯುದ್ಧ ಆರಂಭವಾಗಿರಲಿಲ್ಲ. ಕೊಟ್ಟಿದ್ದರೆ ಯಾವ ವಿಧವಾದ ಅಪಾಯವೂ ಯುದ್ಧಕ್ಕೆ ಒದಗುವಂತಿರಲಿಲ್ಲ. ಏಕೆಂದರೆ ಯುದ್ಧ ಮುಗಿದ ಮೇಲೆ ಅದು ಅನುಷ್ಠಾನಕ್ಕೆ ಬರಬೇಕಾಗಿತ್ತು. ಪೂರ್ಣ ಸ್ವಾತಂತ್ರ್ಯ ಸಹ ಕೇಳಲಿಲ್ಲ. ಭಾರತಕ್ಕೆ ಹೇಳುತ್ತಿದ್ದಂತೆ ಅಲ್ಲಿಯೂ ಡೊಮಿನಿಯನ್ ಅಧಿಕಾರವೇ ಬ್ರಿಟಿಷ್ ಸರಕಾರದ ಗುರಿ ಎಂದು ಅನೇಕ ಬಾರಿ ಹೇಳಿದ್ದರು. ಭಾರತದಂತೆ ಅಲ್ಲಿ ಬೇರೆ ಬೇರೆ ಜಾತಿ ಪಂಗಡಗಳಿರದೆ ಒಂದೇ ಬುಡಕಟ್ಟಿನ ಜನರು ಇದ್ದರು. ಭಾರತದ ವಿಷಯದಲ್ಲಿ ಸುಳ್ಳೋ ನಿಜವೋ ಹೇಳುತ್ತಿದ್ದ ಅಡ್ಡಿ ಆತಂಕಗಳು ಯಾವುವೂ ಅಲ್ಲಿ ಇರಲಿಲ್ಲ. ಆದರೂ ಬರ್ಮದ ಒಕ್ಕೊರಲಿನ ಬೇಡಿಕೆಯನ್ನೂ ಈಡೇರಿಸದೆ ಒಂದು ಭರವಸೆ ಸಹ ಕೊಡಲಿಲ್ಲ. ಡೊಮಿನಿಯನ್ ಅಧಿಕಾರ ದೂರದ ಕನಸಿನ ಮಾತೂ ಆಗಿತ್ತು. ನಮ್ಮ ಇಂದಿನ ಪ್ರಪಂಚಕ್ಕೆ ಸೇರದ ಯಾವುದೋ ದೂರದ ಪ್ರಪಂಚದ ತಾತ್ವಿಕಭಾವನೆಯ ಅಸ್ಪಷ್ಟ ನೆರಳಿನಂತೆ ಇತ್ತು. ಚರ್ಚಿಲ್ ಸ್ವತಃ ಹೇಳಿದಂತೆ, ಇಂದಿನ ಅಥವ ನಾಳಿನ ಭವಿಷ್ಯಕ್ಕೆ ಸಂಬಂಧಿಸದ ಹುರುಳಿಲ್ಲದ ಮಾತು ಮಾತ್ರ ಆಗಿತ್ತು. ಭಾರತದ ಸ್ವಾತಂತ್ರ್ಯ ವಿರುದ್ಧ ಹೂಡಿದ ವಾದದಲ್ಲಿ, ಒಡ್ಡಿದ ತೊಂದರೆಗಳಲ್ಲಿ ಯಾವ ಸತ್ಯವೂ ಇರಲಿಲ್ಲ. ಸತ್ಯಾಂಶಗಳೆಂದರೆ ಏನೆ ಬರಲಿ ಭಾರತವನ್ನು ಬಿಡಬಾರದೆಂದು ಬ್ರಿಟಿಷರ ನಿರ್ಧಾರ ಮತ್ತು ಬ್ರಿಟಿಷರ ಬಂಧನದಿಂದ ಮುಕ್ತರಾಗಬೇಕೆಂದು ಭಾರತದ ನಿರ್ಧಾರ. ಉಳಿದುದೆಲ್ಲ ಅರ್ಥಶೂನ್ಯ ಚರ್ಚೆ, ನ್ಯಾಯವಾದಿಯ ವಿತಂಡವಾದ, ರಾಜಕೀಯ ಹಣಾಹಣಿ. ಈ ಎರಡು ವಿರುದ್ಧ ಶಕ್ತಿಗಳ ಮಧ್ಯೆ ಜಯಾಪಜಯಗಳು ಯಾರಿಗೆ ಎನ್ನುವುದನ್ನು ಭವಿಷ್ಯವೇ ನಿರ್ಧರಿಸಬಲ್ಲುದು.

ಬ್ರಿಟಿಷರ ನೀತಿಯ ಪರಿಣಾಮ ಏನೆಂದು ಅತ್ಯಲ್ಪ ಕಾಲದಲ್ಲಿಯೇ ಬರ್ಮದ ಘಟನೆಗಳಿಂದ ನಮಗೆ ಗೊತ್ತಾಯಿತು. ಆ ಕಾಲಕ್ರಮೇಣ ಭಾರತದಲ್ಲಿಯೂ ಭವಿಷ್ಯದ ಉದಯ ಆರಂಭವಾಗಿ ಹೋರಾಟ, ಕಹಿ ಮನಸ್ಸು, ಸಂಕಟ ಒಂದರ ಹಿಂದೆ ಒಂದು ಪ್ರಾಪ್ತವಾದವು.

ಬ್ರಿಟಿಷರ ಈ ಕೊನೆಯ ಮೂದಲಿಕೆಯ ಪೆಟ್ಟಿನ ನೋವು ಸಹಿಸಿ ಭಾರತದ ಸಂಕಟ ಪರಿಸ್ಥಿತಿಯನ್ನು ನೋಡುತ್ತ ಕೈಕಟ್ಟಿ ಕುಳಿತುಕೊಳ್ಳುವುದು ಅಸಾಧ್ಯವಾಯಿತು. ಪ್ರಪಂಚದಲ್ಲೆಲ್ಲ ಸ್ವಾತಂತ್ರ್ಯ ರಕ್ಷಣೆಗೆ ಕೋಟ್ಯನುಕೋಟಿ ಜನರು ಅಪಾರ ತ್ಯಾಗಮಾಡುತ್ತಿರುವಾಗ, ಘೋರ ಯುದ್ಧದ ಮಧ್ಯದಲ್ಲೇ ಬ್ರಿಟಿಷ್ ಸರಕಾರದ ನೀತಿಯು ಈ ರೀತಿ ಆದರೆ ಸಂಕಟದಿಂದ ಪಾರಾದ ಮೇಲೆ, ಜನತೆಯ ಒತ್ತಡ ಕಡಮೆಯಾದ ಮೇಲೆ ಅವರ ನೀತಿ ಏನಾಗಬಹುದು? ಈ ಮಧ್ಯೆ ಭಾರತಾದ್ಯಂತ ನಮ್ಮಲ್ಲಿ ಅನೇಕರನ್ನು ಬಂಧಿಸಿ ಸೆರೆಮನೆಗೆ ಕಳುಹಿಸಿದರು. ನಮ್ಮ ನಿತ್ಯದ ಕಾರ್ಯಗಳಿಗೆ ಅಡ್ಡಿ ಬಂದು, ಇದ್ದ ಸ್ವಾತಂತ್ರ್ಯ ಕಸಿದುಕೊಂಡರು. ಭಾರತದಲ್ಲಿ ಬ್ರಿಟಿಷ್ ಸರಕಾರವು ರಾಷ್ಟ್ರೀಯ ಚಳವಳಿ ಮತ್ತು ಕೂಲಿಗಾರರ ಚಳವಳಿಯ ವಿರುದ್ಧ ಯಾವಾಗಲೂ ಹೋರಾಡುತ್ತಿದೆ. ಅದನ್ನು ಹತ್ತಿಕ್ಕಲು ಶಾಸನ ಭಂಗ ಚಳವಳಿ ಬೇಕಿಲ್ಲ. ಈ ಹೋರಾಟ ಕೆಲವು

ಸಮಯದಲ್ಲಿ ಉಗ್ರ ಸ್ವರೂಪ ತಾಳಿ ಎಲ್ಲ ಕಡೆಯಿಂದ ಉಲ್ಬಣಗೊಂಡೋ ಇನ್ನು ಕೆಲವು ವೇಳೆ ಸೌಮ್ಯವಾಗಿಯೋ ಅಂತೂ ಸದಾ ನಡೆಯುತ್ತಲೇ ಇರುತ್ತದೆ.* ಪ್ರಾಂತಗಳಲ್ಲಿ ಕಾಂಗ್ರೆಸ್ ಸರಕಾರಗಳು ಇದ್ದಾಗ ಈ ಹೋರಾಟ ಸ್ವಲ್ಪ ಸೌಮ್ಯವಾಗಿತ್ತು. ಈಗ ಗರಿಗೆದರಿಕೊಂಡು ಪುನಃ ಆರಂಭವಾಗಿದೆ. ಪ್ರಮುಖ ಕಾಂಗ್ರೆಸ್ ನಾಯಕರನ್ನೂ ಶಾಸನ ಸಭೆಗಳ ಸದಸ್ಯರನ್ನೂ ಸೆರೆಮನೆಗೆ ಕಳುಹಲು ಆಜ್ಞೆಮಾಡಬೇಕೆಂದರೆ ಸಿವಿಲ್ ಸರ್ವಿಸ್ ಅಧಿಕಾರಿಗಳಿಗೆ ಒಂದು ವಿಶೇಷ ಆನಂದ. ಅದೇನೆ ಇರಲಿ, ನಿರ್ದಿಷ್ಟ ಕಾರ್ಯಕ್ರಮ ಅನಿವಾರ್ಯವಾಯಿತು ; ಸುಮ್ಮನಿರುವುದೇ ಒಂದು ದೌರ್ಬಲ್ಯವೆನಿಸಿತು. ಕಾರ್ಯಕ್ರಮ ಏನೇ ಆದರೂ ನಮ್ಮ ಮೂಲ ನೀತಿಗನುಗುಣವಾಗಿ ಅದು ಒಂದು ಬಗೆಯ ಶಾಸನ ಭಂಗವೇ ಆಗಬೇಕಾಯಿತು. ಆದರೂ ಸಾರ್ವಜನಿಕ ಚಳವಳಿಗೆ ಅವಕಾಶ ಕೊಡದಂತೆ ಎಚ್ಚರ ತೆಗೆದುಕೊಂಡು ಕೆಲವು ಆರಿಸಿದ ಪ್ರಮುಖ ವ್ಯಕ್ತಿಗಳು ಮಾತ್ರ ಶಾಸನ ಭಂಗಮಾಡಬೇಕೆಂದು ನಿರ್ಧರಿಸಿದೆವು. ಸಾರ್ವಜನಿಕ ಸತ್ಯಾಗ್ರಹದ ಬದಲು ವ್ಯಕ್ತಿ ಸತ್ಯಾಗ್ರಹ ಹೂಡಿದೆವು. ಅದು ಒಂದು ನೈತಿಕ ಪ್ರತಿಭಟನೆಯಾಗಿತ್ತು. ಆಡಳಿತವರ್ಗ ಉರುಳಿಸಲು ಯತ್ನಿಸದೆ ಸುಲಭವಾಗಿ ಸತ್ಯಾಗ್ರಹಿಗಳನ್ನು ಸೆರೆಮನೆಗೆ ಕಳುಹಿಸಲು ಅವಕಾಶ ಕಲ್ಪಿಸಿಕೊಟ್ಟದು ರಾಜಕಾರಣಿಯ ದೃಷ್ಟಿಗೆ ಆಶ್ಚರ್ಯವೆನಿಸಬಹುದು. ಉಗ್ರ ರಾಜಕೀಯ ಚಳವಳಿ ಅಥವ ಕ್ರಾಂತಿಯು ಬೇರೆ ಎಲ್ಲಿಯೂ ಈ ರೀತಿ ನಡೆದಿಲ್ಲ. ಆದರೂ ಕ್ರಾಂತಿಕಾರಕ ರಾಜಕೀಯ ಹೋರಾಟ ಸಹ ಉನ್ನತ ನೈತಿಕ ಮಟ್ಟದಲ್ಲಿ ನಡೆಯಬೇಕೆಂದು ಗಾಂಧಿಜಿಯ ನೀತಿಯೇ ಆ ರೀತಿ ಇತ್ತು. ಏನು ಚಳವಳಿ ನಡೆದರೂ ಆತನೇ ನಮ್ಮ ಸೇನಾನಾಯಕ. ಬ್ರಿಟಿಷರ ನೀತಿಗೆ ತಲೆಬಾಗದೆ, ಸ್ವಯಂಪ್ರೇರಣೆಯ ದೃಢ ನಿರ್ಧಾರದಿಂದ ಬರುವ ಸಂಕಟ ಎಲ್ಲ ಅನುಭವಿಸಿ ನಮ್ಮ ಪ್ರತಿಭಟನೆ ತೋರಿಸಬೇಕೆಂದೂ, ಗಲಭೆ ಎಬ್ಬಿಸುವುದು ನಮ್ಮ ಉದ್ದೇಶವಲ್ಲವೆಂದೂ ಆತನ ರೀತಿ.

ಈ ವ್ಯಕ್ತಿಸತ್ಯಾಗ್ರಹ ಬಹಳ ಸಣ್ಣದಾಗಿ ಆರಂಭವಾಯಿತು. ಪ್ರತಿಯೊಬ್ಬ ವ್ಯಕ್ತಿಯೂ ಕೆಲವು ಪರೀಕ್ಷೆಗೆ ಗುರಿಯಾಗಿ ಗಾಂಧೀಜಿಯ ಅನುಮತಿ ಪಡೆದೇ ಸತ್ಯಾಗ್ರಹ ಮಾಡಬೇಕಾಗಿತ್ತು. ಆ ರೀತಿ ಆರಿಸಿ ಬಂದವರು ಯಾವುದೋ ಒಂದು ಆಜ್ಞೆ ಮುರಿದು ಬಂಧಿತರಾಗಿ ಶಿಕ್ಷೆಗೆ ಗುರಿಯಾಗುತ್ತಿದ್ದರು. ಮೊದಲು ಕಾರ್ಯಸಮಿತಿಯ ಸದಸ್ಯರು, ಪ್ರಾಂತ ಸರಕಾರಗಳ ಮಂತ್ರಿಮಂಡಲದ ಸದಸ್ಯರು, ಶಾಸನ ಸಭೆಗಳ ಸದಸ್ಯರು, ಅಖಿಲ ಭಾರತ ಮತ್ತು ಪ್ರಾಂತ ಕಾಂಗ್ರೆಸ್ ಸಮಿತಿ ಸದಸ್ಯರು, ಈ ರೀತಿ ಆಯ್ಕೆ ಆಯಿತು. ಈ ರೀತಿ ವೃತ್ತವು ವಿಶಾಲಗೊಳ್ಳುತ್ತ ೨೫-೩೦ ಸಾವಿರ ಸ್ತ್ರೀ ಪುರುಷರು ಸೆರೆಮನೆ ಸೇರಿದರು. ಇವರಲ್ಲಿ ಶಾಸನ ಸಭೆಗಳ ಅಧ್ಯಕ್ಷರುಗಳೂ, ಪ್ರಾಂತ ಶಾಸನ ಸಭೆಗಳ ಸದಸ್ಯರೂ ಇದ್ದರು. ಶಾಸನ ಸಭೆಗಳ ಕರ್ತವ್ಯ ನಿರ್ವಹಣೆಗೆ ಸರಕಾರವು ಅವಕಾಶ ಕೊಡದಿದ್ದರೆ ನಿರಂಕುಶಾಧಿಕಾರಕ್ಕೆ ತಲೆಬಾಗುವುದಕ್ಕಿಂತ ಸೆರೆಮನೆ ಸೇರುವುದೇ ಮೇಲೆಂದು ಈ ರೀತಿ ಪ್ರತಿಭಟನೆ ತೋರಿಸಿದೆವು.

ಸತ್ಯಾಗ್ರಹದಲ್ಲಿ ಭಾಗವಹಿಸಿದವರಲ್ಲದೆ ಅನೇಕ ಸಹಸ್ರಾರು ಜನರನ್ನು ಯಾವುದೋ ಭಾಷಣ ಅಥವ ಇತರ ಕಾರಣಗಳಿಗಾಗಿ ಬಂಧಿಸಿ ಶಿಕ್ಷಿಸಿದ್ದರು; ಅಥವ ವಿಚಾರಣೆ ಇಲ್ಲದೆ ಸೆರೆಮನೆಗೆ ಸೇರಿಸಿದ್ದರು. ಮೊದಲೇ ನನ್ನ ಒಂದು ಭಾಷಣದಿಂದ ಬಂಧನವಾಗಿ ನನಗೆ ನಾಲ್ಕು ವರ್ಷ ಶಿಕ್ಷೆಯಾಗಿತ್ತು.

೧೯೪೦ ನೆ ಅಕ್ಟೋಬರ್‌ನಿಂದ ಒಂದು ವರ್ಷ ಮೇಲ್ಪಟ್ಟು ನಾವೆಲ್ಲ ಸೆರೆಮನೆಯಲ್ಲಿದ್ದೆವು. ಸಾಧ್ಯವಾದ ಮಟ್ಟಿಗೆ ಯುದ್ಧದ, ಮತ್ತು ಪ್ರಪಂಚದ ಪರಿಸ್ಥಿತಿಯನ್ನು ತಿಳಿದುಕೊಳ್ಳಲು ಪ್ರಯತ್ನಪಟ್ಟೆವು. ಅಧ್ಯಕ್ಷ ರೂಸ್‌ವೆಲ್ಟ್‌ನ ಚತುರ್ ಸ್ವಾತಂತ್ರ್ಯಗಳ ವಿಷಯ ಓದಿದೆವು; ಅಟ್ಲಾಂಟಿಕ್ ಪ್ರಣಾಳಿಕೆಯ ವಿಷಯ ಕೇಳಿದೆವು; ಸ್ವಲ್ಪ ದಿನಗಳಲ್ಲಿಯೇ ಭಾರತಕ್ಕೆ ಅದು ಅನ್ವಯಿಸುವುದಿಲ್ಲವೆಂದೂ ಕೇಳಿದೆವು.

---

* ಯುದ್ಧಕ್ಕೆ ಮುಂಚಿನಿಂದಲೂ ಅನೇಕರು ಬಿಡುವಿಲ್ಲದೆ ಸೆರೆಮನೆಯಲ್ಲಿ ಕೊಳೆಯುತ್ತಿದ್ದಾರೆ. ಕೆಲವು ನನ್ನ ಯುವಕ ಸ್ನೇಹಿತರು ಹದಿನೈದು ವರ್ಷಗಳಿಂದ ಇನ್ನೂ ಅಲ್ಲೇ ಇದ್ದಾರೆ. ಶಿಕ್ಷೆಯಾದಾಗ ಹುಡುಗರಾಗಿದ್ದು ಈಗ ಮುದುಕರೊ ಮಧ್ಯವಯಸ್ಕರೋ ಆಗಿದ್ದಾರೆ. ಸಂಯುಕ್ತಪ್ರಾಂತದ ಸೆರೆಮನೆಗಳಲ್ಲಿ ಅನೇಕರನ್ನು ನೋಡಿದ್ದೇನೆ. ನಾನು ಹೋಗಿ ಕೆಲವು ದಿನಗಳಿದ್ದು ಹೊರಗೆ ಬಂದಿದ್ದೇನೆ. ಅವರು ಮಾತ್ರ ಅಲ್ಲಿಯೇ ಉಳಿದಿದ್ದಾರೆ. ಸಂಯುಕ್ತ ಪ್ರಾಂತದವನಾದವರೂ ಪಂಜಾಬಿನಲ್ಲಿ ಶಿಕ್ಷೆಪಡೆದವರು. ಆದ್ದರಿಂದ ಪಂಜಾಬ್ ಸರಕಾರ ಅವರನ್ನು ಬಿಡುಗಡೆ ಮಾಡಬೇಕು. ಸಂಯುಕ್ತ ಪ್ರಾಂತದ ಕಾಂಗ್ರೆಸ್ ಸರಕಾರ ಅವರ ಬಿಡುಗಡೆಗೆ ಸಲಹೆ ಮಾಡಿದರೂ ಪಂಜಾಬ್ ಸರಕಾರ ಒಪ್ಪಲಿಲ್ಲ.

೧೯೪೧ ನೆ ಜೂನ್ ತಿಂಗಳಲ್ಲಿ ಏಕಾಏಕಿ ಹಿಟ್ಲರ್ ರಷ್ಯದ ಮೇಲೆ ಮುತ್ತಿಗೆ ಹಾಕಿದನೆಂದು ತಿಳಿದು ತುಂಬ ಕಳವಳಗೊಂಡೆವು. ದಿನದಿನವೂ ಹೊಸ ಸ್ವರೂಪ ತಾಳುತ್ತಿದ್ದ ಯುದ್ಧರಂಗದ ಈ ನಾಟಕ ಚಿತ್ರ ಪರಿವರ್ತನೆಗಳಲ್ಲಿ ನಮ್ಮ ಕುತೂಹಲ ಮತ್ತು ಆಸಕ್ತಿಗಳು ಹೆಚ್ಚಿದವು.

೧೯೪೧ ನೆ ಡಿಸೆಂಬರ್‌ನಲ್ಲಿ ನಮ್ಮಲ್ಲಿ ಅನೇಕರ ಬಿಡುಗಡೆ ಆಯಿತು. ಅಲ್ಲಿಂದ ಮೂರು ದಿನಗಳಲ್ಲಿ ಪರ್ಲ್ ಹಾರ್ಬರ್ ಮುತ್ತಿಗೆಯಾಗಿ ಪೆಸಿಫಿಕ್ ಯುದ್ಧ ಆರಂಭವಾಯಿತು.

### ಪರ್ಲ್ ಹಾರ್ಬರ್ ನಂತರ: ಗಾಂಧಿ ಮತ್ತು ಅಹಿಂಸೆ

ನಾವು ಸೆರೆಮನೆಯಿಂದ ಹೊರಗೆ ಬಂದಾಗ ರಾಷ್ಟ್ರೀಯ ಭಾವನೆಯ ನಿಲುವು, ಬ್ರಿಟನ್ ಮತ್ತು ಭಾರತಗಳ ಮಧ್ಯೆ ಇದ್ದ ಬಿಕ್ಕಟ್ಟು ಸ್ವಲ್ಪವೂ ವ್ಯತ್ಯಾಸವಾಗಿರಲಿಲ್ಲ. ಸೆರೆಮನೆಯ ವಾಸ ಅನೇಕರ ಮೇಲೆ ಅನೇಕ ಪರಿಣಾಮಮಾಡುತ್ತದೆ. ಕೆಲವರು ಕಷ್ಟ ಸಹಿಸಲಾರದೆ ಸೋಲುತ್ತಾರೆ; ಇನ್ನು ಕೆಲವರು ಪುಟಕ್ಕೆ ಹಾಕಿದ ಚಿನ್ನದಂತೆ ಚೊಕ್ಕನಾಗುತ್ತಾರೆ. ಈ ಚೊಕ್ಕ ಜನರ ಅಭಿಪ್ರಾಯಕ್ಕೇ ಜನತೆಯ ಹೆಚ್ಚಿನ ಮನ್ನಣೆ ದೊರೆಯುತ್ತದೆ. ಆದರೆ ರಾಷ್ಟ್ರೀಯ ದೃಷ್ಟಿಯಿಂದ ನಾವು ಮುಂದೆ ಒಂದು ಹೆಜ್ಜೆ ಹೋಗದೆ ಇದ್ದರೂ ಪರ್ಲ್ ಹಾರ್ಬರ್ ಮತ್ತು ಅನಂತರದ ಘಟನೆಗಳು ಇದ್ದಕ್ಕಿದಂತೆ ಒಂದು ಹೊಸ ಸನ್ನಿವೇಶ ಉಂಟುಮಾಡಿ ಅಂದಿನ ಪರಿಸ್ಥಿತಿಗೆ ಒಂದು ಹೊಸ ಸ್ವರೂಪ ಕೊಟ್ಟವು. ತತ್‌ಕ್ಷಣವೇ ಕಾಂಗ್ರೆಸ್ ಕಾರ್ಯ ಸಮಿತಿಯು ಸಭೆ ಸೇರಿತು. ಜಪಾನರು ಇನ್ನೂ ಯಾವ ದೊಡ್ಡ ಆಕ್ರಮಣ ಆರಂಭಿಸದಿದ್ದರೂ ತತ್ತರಿಸಿಕೊಳ್ಳುವ ಕೆಲವು ಬಲವಾದ ಪೆಟ್ಟು ಕೊಟ್ಟಿದ್ದರು. ಯುದ್ಧ ಈಗ ದೂರದ ದೃಶ್ಯವಾಗದೆ ನಮ್ಮ ಸಮೀಪವೇ ಬಂದಿತ್ತು. ಈ ವಿಷಮ ಪರಿಸ್ಥಿತಿಯಲ್ಲಿ ಸೆರೆಮನೆಗೆ ಹೋಗುವುದರಿಂದ ಯಾವ ಪುರುಷಾರ್ಥವೂ ಇಲ್ಲವೆಂದೂ, ದೇಶದ ರಕ್ಷಣೆಯಲ್ಲಿ ನಾವು ನಮ್ಮ ಯೋಗ್ಯಪಾತ್ರ ವಹಿಸಬೇಕೆಂದೂ ಅನೇಕ ಕಾಂಗ್ರೆಸ್ ನಾಯಕರು ಯೋಚಿಸತೊಡಗಿದರು. ಆದರೆ ಗೌರವಯುತ ಸಹಕಾರಕ್ಕೆ ಅವಕಾಶ ವಿಲ್ಲದಂತೆ ಎಲ್ಲಿ ಬಾಗಿಲನ್ನೂ ಮುಚ್ಚಿದ್ದರಿಂದ ಏನುಮಾಡಲು ಸಾಧ್ಯ ? ಜನರಲ್ಲಿ ನಿಜವಾದ ಕಾರ್ಯೋತ್ಸಾಹ ತುಂಬಿ ಅವರನ್ನು ಹುರಿದುಂಬಿಸುವುದೆಂತು ? ಗಂಡಾಂತರದ ಎದುರಿನಲ್ಲಿ ಅಸಹಾಯಕರೆಂದು ಭಯ ಗ್ರಸ್ತರಾಗಿ ಹಿಂದೆ ಸರಿದು ಏನೂ ಪ್ರಯೋಜನವಿರಲಿಲ್ಲ. ದೇಶದ ಇತರ ಪಕ್ಷಗಳೊಡನೆ ಸಹಕರಿಸಿ ಕೆಲಸ ಮಾಡಲು ಅನುಕೂಲವಾಗುವಂತೆ ರಾಷ್ಟ್ರೀಯ ಸರಕಾರ ರಚಿಸಿ, ಅದರಿಂದ ಜನರ ಮನಸ್ಸಿನ ಮೇಲೆ ಇದೊಂದು ನಿಜವಾದ ರಾಷ್ಟ್ರೀಯ ಪ್ರಯತ್ನ, ಪರಕೀಯರ ಒತ್ತಾಯ ಇಲ್ಲ ಎಂಬ ಭಾವನೆ ಉಂಟು ಮಾಡಲು ಅವಕಾಶ ಕೊಟ್ಟಿದ್ದರೆ ಯುದ್ಧ ಸಿದ್ಧತೆಯಲ್ಲಿ, ಮುಖ್ಯವಾಗಿ ಭಾರತದ ರಕ್ಷಣೆಯಲ್ಲಿ ಪೂರ್ಣ ಸಹಕರಿಸಲು ನಾವು ಕಾತರರಿದ್ದೆವು. ಕಾಂಗ್ರೆಸ್ಸಿನವರಲ್ಲಾಗಲಿ ಇತರರಲ್ಲಾಗಲಿ ಸಾಮಾನ್ಯವಾಗಿ ಈ ವಿಷಯದಲ್ಲಿ ಯಾವ ಭಿನ್ನಾಭಿಪ್ರಾಯವೂ ಇರಲಿಲ್ಲ. ಆದರೆ ಮೂಲ ತತ್ವದಲ್ಲೇ ಬೇರೊಂದು ಕಡೆ ಅನಿರೀಕ್ಷಿತ ವಿರೋಧ ಒದಗಿತು. ಹೊರಗಿನ ಯುದ್ಧ ವಿಷಯದಲ್ಲಿ ಸಹ ಗಾಂಧಿಜಿ ತಮ್ಮ ಮೂಲ ಅಹಿಂಸಾ ತತ್ವ ಕೈ ಬಿಡಲು ಒಪ್ಪಲಿಲ್ಲ. ಆ ಯುದ್ಧದ ಸಾಮೀಪ್ಯವೇ ಅವರ ತತ್ವದ ಸತ್ವ ಪರೀಕ್ಷೆಗೆ ಒಂದು ಒರೆಗಲ್ಲಾಯಿತು. ಈ ವಿಷಮ ಪರೀಕ್ಷೆಯಲ್ಲಿ ಹಿಂಜರಿಯುವುದೆಂದರೆ ತಮ್ಮ ಅಹಿಂಸಾ ತತ್ತ್ವವು ಎಲ್ಲ ವಿಷಮ ಪರಿಸ್ಥಿತಿಗೆ ಪರಮೌಷಧ ಎಂಬ ವಿಶ್ವಾಸ ಬಿಡಬೇಕು. ಮತ್ತು ತಮ್ಮ ತತ್ತ್ವ ಬಿಟ್ಟು ಅಥವ ಮಧ್ಯಮಾರ್ಗ ಹಿಡಿದು ತಪ್ಪುದಾರಿ ನಡೆಯಬೇಕು. ತಮ್ಮ ಜೀವಿತದ ಪ್ರತಿಯೊಂದು ಕಾರ್ಯ ನೀತಿಗೂ ತಳಹದಿಯಾದ ಆ ತತ್ವ ಬಿಟ್ಟುಕೊಡಲು ಗಾಂಧಿಜಿ ಸಿದ್ಧವಿರಲಿಲ್ಲ ಮತ್ತು ಆ ಅಹಿಂಸಾ ಮಾರ್ಗದ ಅನುಸರಣೆಯಿಂದ ಒದಗುವ ಎಲ್ಲ ಪರಿಣಾಮಗಳನ್ನೂ, ಪರಿಸ್ಥಿತಿಯನ್ನೂ ಎದುರಿಸಲು ಸಿದ್ಧರಿದ್ದರು.

೧೯೩೮ ರಲ್ಲಿ ಮ್ಯೂನಿಚ್ ಘಟನೆ ನಡೆದು ಯುದ್ಧ ಒದಗಿದಾಗ ಸಹ ಅವರಿಗೆ ಇದೇ ಧರ್ಮ ಸಂಕಟ ಒದಗಿತ್ತು. ಆಗ ನಾನು ಯೂರೋಪಿನಲ್ಲಿದ್ದುದರಿಂದ ಆ ಚರ್ಚೆಯಲ್ಲಿ ಭಾಗವಹಿಸಿರಲಿಲ್ಲ. ಆದರೆ ಯುದ್ಧದ ಭೀತಿ ತೊಲಗಿ ಪರಿಸ್ಥಿತಿ ತಿಳಿಯಾದ ಒಡನೆ ಈ ಧರ್ಮ ಸಂಕಟವೂ ಮಾಯವಾಗಿತ್ತು.

೧೯೩೯ನೆ ಸೆಪ್ಟಂಬರ್‌ನಲ್ಲಿ ಯುದ್ಧ ಆರಂಭವಾದಾಗ ಈ ಪ್ರಶ್ನೆ ಏಳಲೂ ಇಲ್ಲ ; ನಾವು ಚರ್ಚೆ ಮಾಡಲೂ ಇಲ್ಲ. ೧೯೪೦ ನೆಯ ಬೇಸಗೆಯಲ್ಲಿ ಮಾತ್ರ ಯಾವ ಹಿಂಸಾತ್ಮಕ ಯುದ್ಧದಲ್ಲೂ ಭಾಗಿಯಾಗಲು ತಮ್ಮಿಂದ ಸಾಧ್ಯವಿಲ್ಲವೆಂದೂ ಕಾಂಗ್ರೆಸ್ ಸಹ ಅದೇ ನೀತಿ ಅನುಸರಿಸಿದರೆ ತಮಗೆ ಇಷ್ಟವೆಂದೂ ತಿಳಿಸಿದ್ದರು. ಯುದ್ಧದಲ್ಲಿ ಶಸ್ತ್ರಸಜ್ಜಿತರಾಗಿ ಪ್ರತ್ಯಕ್ಷ ಹೋರಾಟದಲ್ಲಿನ ಸಹಾಯ ಒಂದನ್ನು ಬಿಟ್ಟು ಸೈನಿಕ ಮತ್ತು ಇತರ ಎಲ್ಲ ಬೆಂಬಲ ಕೊಡಲು ತಮ್ಮ ಒಪ್ಪಿಗೆ ಇದೆ ಎಂದರು. ಸ್ವತಂತ್ರ ಭಾರತವು ಸಹ ಅಹಿಂಸಾ ತತ್ತ್ವದಿಂದಲೇ ನಡೆಯುವುದೆಂದು ಕಾಂಗ್ರೆಸ್ಸು ತನ್ನ ನೀತಿಯನ್ನು ಸ್ಪಷ್ಟಪಡಿಸಬೇಕೆಂದರು. ದೇಶದಲ್ಲಿ ಕಾಂಗ್ರೆಸೇತರರಲ್ಲದೆ ಕಾಂಗ್ರೆಸ್ಸಿನಲ್ಲಿ ಸಹ ಅನೇಕರಿಗೆ ಅಂಹಿಸಾತತ್ತ್ವದಲ್ಲಿ ನಂಬಿಕೆ ಇರಲಿಲ್ಲವೆಂದು ಅವರಿಗೆ ತಿಳಿದಿತ್ತು. ದೇಶದ ರಕ್ಷಣೆಯ ಪ್ರಶ್ನೆ ಬಂದಾಗ, ಸೈನ್ಯ, ನಾವೆ ಮತ್ತು ವಿಮಾನದಳ ರಚಿಸುವಾಗ ಸ್ವತಂತ್ರ ಭಾರತದ ಸರಕಾರ ಅಹಿಂಸಾ ತತ್ತ್ವ ಬಿಡುವುದೆಂದು ಸಹ ತಿಳಿದಿದ್ದರು. ಸಾಧ್ಯವಾದರೆ ಕಾಂಗ್ರೆಸ್ಸು ಸಂಸ್ಥೆಯಾದರೂ ಅಹಿಂಸೆಯ ಧ್ವಜ ಇಳಿಸದೆ ಜನರಿಗೆ ಒಂದು ಮಾನಸಿಕ ಶಿಕ್ಷಣ ಕೊಟ್ಟು, ಹೆಚ್ಚು ಶಾಂತಿ ಮಾರ್ಗದಲ್ಲಿ ನಡೆಯುವಂತೆ ಪ್ರೇರೇಪಿಸಬೇಕೆಂದು ಅವರ ಇಚ್ಛೆಯಾಗಿತ್ತು. ಭಾರತವನ್ನು ಶಸ್ತ್ರಸಜ್ಜಿತ ಮಾಡಲು ಅವರಿಗೆ ಇಷ್ಟವಿರಲಿಲ್ಲ. ಭಾರತವು ಅಹಿಂಸಾ ನೀತಿಯ ಸಂಕೇತವೂ ಆದರ್ಶವೂ ಆಗಿ, ಆ ತನ್ನ ಆದರ್ಶದ ಪ್ರಭಾವವನ್ನು ಪ್ರಪಂಚದ ಇತರ ರಾಷ್ಟ್ರಗಳ ಮೇಲೆ ಬೀರಿ, ಅವುಗಳನ್ನು ಯುದ್ಧ ಮತ್ತು ಹಿಂಸಾಮಾರ್ಗಗಳಿಂದ ತಿರುಗಿಸಿ ಶಾಂತಿ ಮಾರ್ಗದಲ್ಲಿ ಕರೆದೊಯ್ಯಬೇಕೆಂದು ಅವರ ಕನಸಾಗಿತ್ತು. ಭಾರತವೆಲ್ಲ ಸಂಪೂರ್ಣ ಈ ತತ್ತ್ವ ಒಪ್ಪದಿದ್ದರೂ ಕಾಂಗ್ರೆಸ್ ಮಾತ್ರ ತನ್ನ ಸತ್ವ ಪರೀಕ್ಷೆ ಕಾಲದಲ್ಲಿ ಹಿಂದೆಗೆಯುವುದು ಅವರಿಗೆ ಇಷ್ಟವಿರಲಿಲ್ಲ.

ನಮ್ಮ ಸ್ವಾತಂತ್ರ್ಯದ ಹೋರಾಟ ಮತ್ತು ರಾಷ್ಟ್ರದ ಐಕ್ಯತೆಗಳ ಸಾಧನೆಗಾಗಿ ಅಹಿಂಸಾ ತತ್ವವನ್ನೂ ಮಾರ್ಗವನ್ನೂ ಬಹಳ ದಿನಗಳ ಮುಂಚೆಯೇ ಕಾಂಗ್ರೆಸ್ ಒಪ್ಪಿತ್ತು. ಅವಕ್ಕಿಂತ ಹೆಚ್ಚು ಮುಂದೆ ಎಂದೂ ಹೋಗಿರಲಿಲ್ಲ ; ಹೊರಗಿನ ಆಕ್ರಮಣ ಪ್ರತಿಭಟನೆ ಅಥವ ಒಳದಂಗೆಯ ಉಪಶಮನಗಳಲ್ಲಿ ಈ ಮಾರ್ಗ ಯಾವಾಗಲೂ ಒಪ್ಪಿರಲಿಲ್ಲ. ಭಾರತೀಯ ಸೈನ್ಯದ ಬೆಳವಣಿಗೆಯಲ್ಲಿ ಕಾಂಗ್ರೆಸ್ಸು ತೀವ್ರ ಆಸಕ್ತಿ ವಹಿಸಿತ್ತು ; ಸೈನ್ಯದ ಅಧಿಕಾರಿವರ್ಗವೆಲ್ಲ ಭಾರತೀಯರೇ ಇರಬೇಕೆಂದು ಪದೇ ಪದೇ ಒತ್ತಾಯಮಾಡಿತ್ತು. ಕೇಂದ್ರ ಶಾಸನ ಸಭೆಯಲ್ಲಿ ಕಾಂಗ್ರೆಸ್ ಸದಸ್ಯರು ಈ ವಿಷಯ ಅನೇಕ ನಿರ್ಣಯಗಳನ್ನು ಮಂಡಿಸಿ ಚರ್ಚೆಯಲ್ಲಿ ಭಾಗವಹಿಸಿದ್ದರು. ಕಾಂಗ್ರೆಸ್ ಪಕ್ಷದ ನಾಯಕರಾಗಿ ನನ್ನ ತಂದೆಯವರು ಭಾರತೀಯ ಸೈನ್ಯದ ಭಾರತೀಕರಣ ಮತ್ತು ಪುನರ್ವ್ಯವಸ್ಥೆಗಾಗಿ ಏರ್ಪಟ್ಟ ಸ್ಕೀನ್ ಸಮಿತಿಯಲ್ಲಿ ಸದಸ್ಯರಾಗಿ ಕೆಲಸಮಾಡಿದ್ದರು. ಆಮೇಲೆ ಅವರು ರಾಜಿನಾಮೆಕೊಟ್ಟರೂ ಅದು ರಾಜಕೀಯ ಕಾರಣಗಳಿಗಾಗಿ ವಿನಾ ಅಹಿಂಸಾತತ್ವಕ್ಕಾಗಿ ಅಲ್ಲ. ೧೯೩೭-೩೮ರಲ್ಲಿ ಕಾಂಗ್ರೆಸ್ ಪ್ರಾಂತಸರ್ಕಾರಗಳ ಅಭಿಪ್ರಾಯ ಪಡೆದು ಭಾರತೀಯ ಸೈನ್ಯದಲ್ಲಿ ಭಾರತೀಯರ ಸಂಖ್ಯೆ ಹೆಚ್ಚಿಸಬೇಕೆಂದೂ, ಯಂತ್ರಸಜ್ಜಿತಗೊಳಿಸಬೇಕೆಂದೂ ಸಣ್ಣ ಆಟಿಕೆಗಳಂತಿದ್ದ ಭಾರತೀಯ ನಾವಿಕಾಪಡೆ ಮತ್ತು ವಿಮಾನಪಡೆಗಳನ್ನು ವಿಸ್ತರಿಸಬೇಕೆಂದೂ ಕ್ರಮೇಣ ಭಾರತದ ಸೇನೆಯ ಬ್ರಿಟಿಷ್ ಅಧಿಕಾರಿಗಳ ಸ್ಥಾನಗಳಲ್ಲಿ ಭಾರತೀಯರನ್ನೇ ನೇಮಿಸಬೇಕೆಂದೂ ಕಾಂಗ್ರೆಸ್ ಪಕ್ಷವು ಕೇಂದ್ರ ಶಾಸನ ಸಭೆಯಲ್ಲಿ ಸಲಹೆಮಾಡಿತ್ತು. ಬ್ರಿಟಿಷ್ ಸೈನ್ಯಗಳ ವೆಚ್ಚವು ಭಾರತೀಯ ಸೈನ್ಯದ ನಾಲ್ಕರಷ್ಟು ಇತ್ತು. ಬ್ರಿಟಿಷ್ ಸೈನ್ಯಗಳ ಬದಲು ಭಾರತೀಯ ಸೈನ್ಯವೇ ಇದ್ದರೆ ಯಾವ ಹೆಚ್ಚಿನ ವೆಚ್ಚವೂ ಇಲ್ಲದೆ ಸೈನ್ಯವನ್ನು ಯಂತ್ರ ಸಜ್ಜಿತಮಾಡಲು ಸಾಧ್ಯವಿತ್ತು. ಮ್ಯೂನಿಚ್ ಘಟನೆಯ ಸಮಯದಲ್ಲಿ ಭಾರತೀಯರ ವಿಮಾನಪಡೆ ಹೆಚ್ಚಿಸಲು ಒತ್ತಾಯಮಾಡಿದ್ದಕ್ಕೆ ನಿಪುಣರ ಅಭಿಪ್ರಾಯಕ್ಕೆ ಅದು ವಿರುದ್ಧ ಎಂದು ಸರಕಾರವು ಉತ್ತರಕೊಟ್ಟಿತ್ತು. ೧೯೪೦ರಲ್ಲಿ ಕಾಂಗ್ರೆಸ್‌ಪಕ್ಷವು ಉದ್ದೇಶಪಟ್ಟು ಕೇಂದ್ರಶಾಸನಸಭೆಗೆ ಹೋಗಿ ಅದೇ ವಾದ ಹೂಡಿ ಭಾರತರಕ್ಷಣೆಯ ಜವಾಬ್ದಾರಿ ವಹಿಸಲು ಇಂಡಿಯ ಸರಕಾರವೂ ಅದರ ಸೈನ್ಯಖಾತೆಯೂ ತೀರ ಅಸಮರ್ಥ ಎಂದು ಖಂಡಿಸಿತ್ತು.

ನನಗೆ ಗೊತ್ತಿರುವಮಟ್ಟಿಗೆ ಸೈನ್ಯ, ನಾವಿಕಾಪಡೆ, ವಿಮಾನಪಡೆ, ಮತ್ತು ಪೋಲೀಸ್ ಪಡೆಗಳ ಸಂಬಂಧದಲ್ಲಿ ಅಹಿಂಸಾತತ್ವ ಸಾಧ್ಯವೆಂದು ನಾವು ಯಾವಾಗಲೂ ಯೋಚಿಸಿ ಸಹ ಇರಲಿಲ್ಲ. ನಮ್ಮ

ಸ್ವಾತಂತ್ರ್ಯದ ಹೋರಾಟ ಮಾತ್ರ ಅಹಿಂಸಾಮಾರ್ಗದಿಂದ ನಡೆಯಬೇಕೆಂದು ಒಪ್ಪಿದ್ದೆವು. ನಮ್ಮ ಬಹು ಮಟ್ಟಿನ ಭಾವನೆಗಳು ಅನೇಕ ರೀತಿ ಮಾರ್ಪಾಟಾದುವೆಂಬುದು ನಿಜ. ಪ್ರಪಂಚದಲ್ಲಿ ಶಸ್ತ್ರ ಸಂನ್ಯಾಸ ಅತ್ಯವಶ್ಯವೆಂದೂ, ರಾಷ್ಟ್ರೀಯ ಮತ್ತು ಅಂತರ ರಾಷ್ಟ್ರೀಯ ವ್ಯಾಜ್ಯಗಳು ಶಾಂತರೀತಿಯಲ್ಲಿ ಬಗೆಹರಿಯ ಬೇಕೆಂದೂ ಕಾಂಗ್ರೆಸ್ಸು ಒತ್ತಾಯಮಾಡುತ್ತಿತ್ತು.

ಪ್ರಾಂತ ಕಾಂಗ್ರೆಸ್ ಸರಕಾರಗಳು ಅಧಿಕಾರದಲ್ಲಿದ್ದಾಗ ವಿಶ್ವವಿದ್ಯಾನಿಲಯಗಳಲ್ಲಿ ಮತ್ತು ಕಾಲೇಜು ಗಳಲ್ಲಿ ಯಾವುದಾದರೂ ಒಂದು ಬಗೆಯ ಸೈನ್ಯಶಿಕ್ಷಣ ಕೊಡಬೇಕೆಂದು ನಾವು ಕಾತರರಿದ್ದೆವು. ಭಾರತ ಸರಕಾರ ಒಪ್ಪದೆ ಅದಕ್ಕೆ ಅಡ್ಡ ಬಂದಿತ್ತು.

ಈ ಎಲ್ಲ ಪ್ರಯತ್ನಗಳನ್ನು ಗಾಂಧಿಜಿ ಒಪ್ಪದಿದ್ದರೂ ಯಾವುದಕ್ಕೂ ಅವರು ಅಡ್ಡಿಮಾಡಿರಲಿಲ್ಲ. ದಂಗೆ ಅಡಗಿಸಲು ಪೋಲೀಸ್‌ಪಡೆ ಉಪಯೋಗಿಸುವುದು ಸಹ ಅವರಿಗೆ ಇಷ್ಟವಿರಲಿಲ್ಲ. ಅನೇಕಬಾರಿ ಅದಕ್ಕಾಗಿ ವ್ಯಥೆಪಟ್ಟಿದ್ದರು. ಕಡಮೆ ಹಾನಿಕರವೆಂದು ಸಹಿಸಿಕೊಂಡಿದ್ದರು. ಕ್ರಮೇಣ ಭಾರತದ ಜನಮನದಲ್ಲಿ ತಮ್ಮ ಅಹಿಂಸಾಭಾವನೆಯೇ ಬೇರೂರುವುದೆಂದು ನಂಬಿದ್ದರು. ಕಾಂಗ್ರೆಸ್ಸಿನ ಏಕೈಕ ನಾಯಕರಾಗಿ ಧರ್ಮ ಗುರುವಿನಂತೆ ಇದ್ದರೂ, ಕಾಂಗ್ರೆಸ್ಸಿನ ಈ ರೀತಿನೀತಿಗಳು ಅವರಿಗೆ ಸರಿಬೀಳದೆ ೧೯೩೪ರ ನಂತರ ಅವರು ಕಾಂಗ್ರೆಸ್ಸಿನ ಸಾಮಾನ್ಯ ಸದಸ್ಯ ಸಹ ಆಗಿರಲಿಲ್ಲ. ನಮಗೆ ಇದೆಲ್ಲ ಅಸಮಾಧಾನ ಕರ, ಅಸಂಬದ್ಧ, ಎನಿಸಿತು. ಆದರೆ ಆಗಾಗ ಕಾಂಗ್ರೆಸ್ ತಮ್ಮ ರೀತಿನೀತಿವಿರುದ್ಧ ಮಾಡುತ್ತಿದ್ದ ಅನೇಕ ತೀರ್ಮಾನಗಳಿಗೆ ತಮ್ಮ ವೈಯಕ್ತಿಕ ಜವಾಬ್ದಾರಿ ಇಲ್ಲವೆಂದು ಸಮಾಧಾನ ಪಡೆಯುತ್ತಿದ್ದರೋ ಏನೋ. ಅವರಲ್ಲಿ ಈ ಅಂತರ್ಯುದ್ಧ ಸದಾ ಇದ್ದೇ ಇತ್ತು; ರಾಷ್ಟ್ರನಾಯಕ ಗಾಂಧಿಗೂ, ಭಾರತ ಮಾತ್ರವಲ್ಲದೆ ಇಡೀ ಮಾನವಕುಲದ ಮತ್ತು ವಿಶ್ವದ ಧರ್ಮಪ್ರವರ್ತಕ ಗಾಂಧಿಗೂ ತನ್ನ ರಾಷ್ಟ್ರದ ರಾಜಕೀಯದಲ್ಲಿ ಈ ತುಮುಲ ಯುದ್ಧ ಇದ್ದೇ ಇತ್ತು. ಜೀವನದ ಅವಶ್ಯಕತೆ ಮತ್ತು ಸಮಯಾನುಕೂಲತೆಗಳ ಎದುರಿನಲ್ಲಿ ಮುಖ್ಯವಾಗಿ ರಾಜಕೀಯದಲ್ಲಿ ತಾನು ಕಂಡ ಸತ್ಯಕ್ಕೆ ಅಂಟಿಕೊಂಡು ನಡೆಯುವುದು, ಬಹು ಕಷ್ಟ. ಸಾಮಾನ್ಯವಾಗಿ ಜನರು ಈ ವಿಷಯ ಯಾವ ಯೋಚನೆ ಹಚ್ಚಿಕೊಳ್ಳುವುದಿಲ್ಲ. ಸತ್ಯ ಏನಾದರೂ ಇದ್ದರೆ ಅದು ಅವರ ಮನಸ್ಸಿನ ಎಲ್ಲೋ ಯಾವುದೋ ಒಂದು ಮೂಲೆಯಲ್ಲಿ ಪ್ರತ್ಯೇಕ ಅಡಗಿರುತ್ತದೆ ಮತ್ತು ಸಮ ಯಕ್ಕೆ ತಕ್ಕಂತೆ ತಮ್ಮ ಕಾರ್ಯ ನೀತಿ ಅನುಸರಿಸುತ್ತಾರೆ. ರಾಜಕಾರಣಿಗಳೆಲ್ಲ ದುರದೃಷ್ಟವಶಾತ್ ವಿಶೇಷ ವಾಗಿ ಸಮಯಾನುವರ್ತಿಗಳಾದುದರಿಂದಲೂ, ವೈಯಕ್ತಿಕ ದೃಷ್ಟಿಯಿಂದ ವರ್ತಿಸಲು ಅವರಿಗೆ ಸಾಧ್ಯವಿಲ್ಲ ದ್ದರಿಂದಲೂ ರಾಜಕೀಯದಲ್ಲಿ ಸಮಯಾನುಕೂಲವೇ ಸಾಮಾನ್ಯ ನೀತಿಯಾಗಿದೆ. ಇತರರಿಂದ ಅವರಿಗೆ ಕೆಲಸ ಆಗಬೇಕು; ಸತ್ಯನಿಷ್ಠೆ, ತಿಳಿವಳಿಕೆ ಮತ್ತು ಪರಿಮಿತಿಗಳನ್ನು ಅವರು ಗಮನಿಸಬೇಕು. ಆದ್ದರಿಂದ ಸತ್ಯಕ್ಕೆ ಸ್ವಲ್ಪ ಲೋಪವಾದರೂ, ಸುತ್ತಲಿನ ಸನ್ನಿವೇಶಕ್ಕನುಗುಣವಾಗಿ ಅದನ್ನು ಹೊಂದಿಸಿಕೊಳ್ಳಬೇಕು. ಈ ರೀತಿ ಸತ್ಯದ ಬೆಲೆ ಇಳಿಯುವುದು ಅನಿವಾರ್ಯವಾಗುತ್ತದೆ; ಆದರೆ ಅದರಲ್ಲಿ ದೊಡ್ಡ ಅಪಾಯವೂ ಇದೆ. ಸತ್ಯವನ್ನು ಅಲಕ್ಷಿಸಿ ಅದನ್ನು ಕೋಲೆಮಾಡುವ ಮನೋಭಾವ ಬೆಳೆಯುತ್ತದೆ. ಬಿಸಿಲು ಬಂದಂತೆ ಕೊಡೆ ಹಿಡಿಯುವುದೇ ಮುಖ್ಯ ಕಾರ್ಯನೀತಿಯಾಗುತ್ತದೆ.

ಗಾಂಧಿಜಿ ಕೆಲವು ಮೂಲ ತತ್ವಗಳಲ್ಲಿ ಕದಲದೆ ಬೆಟ್ಟದಂತೆ ಭದ್ರವಾಗಿದ್ದರು. ಆದರೆ ಅವರು ಇತರರ ಅಭಿಪ್ರಾಯಗಳಿಗೆ ಸಂದರ್ಭೋಚಿತವಾಗಿ ಹೊಂದಿಕೊಳ್ಳುವುದರಲ್ಲೂ, ಇತರರ ಬಲಾಬಲಗಳನ್ನು ಅರಿಯು ವುದರಲ್ಲಿ, ಮುಖ್ಯವಾಗಿ ಜನತೆಯ ಶಕ್ತಿ ಸಾಮರ್ಥ್ಯಗಳನ್ನು ಅಳೆಯುವುದರಲ್ಲಿ ಮತ್ತು ತಮ್ಮ ಸತ್ಯದ ಕಲ್ಪನೆಯಲ್ಲಿ ಎಷ್ಟರಮಟ್ಟಿಗೆ ತಮ್ಮೊಂದಿಗೆ ಜನರು ಬರಲು ಸಾಧ್ಯ ಎಂದು ನಿರ್ಧರಿಸುವುದರಲ್ಲಿ ಬಹಳ ಸಮರ್ಥರಿದ್ದರು. ಆದರೆ ತಮ್ಮ ತತ್ವ ಬಿಟ್ಟು ಬಹುದೂರ ಬಂದಿರಬಹುದೇನೋ ಎಂದು ಭಯಗೊಂಡಂತೆ ಆಗಿಂದಾಗ ಎಚ್ಚತ್ತು ಪುನಃ ತಮ್ಮ ದಾರಿಯ ಸಮೀಪ ಸೇರುತ್ತಿದ್ದರು. ಹೋರಾಟದ ಮಧ್ಯೆ ಜನಮನದ ಧಾಟಿಯೊಂದಿಗೆ ತಾವೂ ನಿಂತು, ಅದರ ಶಕ್ತಿಯನ್ನು ಸದುಪಯೋಗ ಮಾಡಿಕೊಂಡು ಅದರ ಓಟದೊಂದಿಗೆ ತಾವೂ ನಡೆಯುತ್ತಿದ್ದರು; ಇತರ ಕಾಲಗಳಲ್ಲಿ ಹೆಚ್ಚು ತಾತ್ವಿಕ ದೃಷ್ಟಿ ತೋರಿ ಜನಾಭಿಪ್ರಾಯದೊಂದಿಗೆ ನಡೆಯಲು ಅವರಿಗೆ ಕಷ್ಟವಾಗುತ್ತಿತ್ತು. ಈ ವ್ಯತ್ಯಾಸ ಅವರ ಎಲ್ಲ ಕಾರ್ಯಗಳಲ್ಲಿ ಮತ್ತು ಬರವಣಿಗೆಯಲ್ಲಿ

ಎದ್ದು ಕಾಣುತ್ತದೆ. ಜನರಿಗೆ ಇದರಿಂದ ವಿಸ್ಮಯವಾಗುತ್ತಿತ್ತು. ಭಾರತದ ಹಿನ್ನೆಲೆ ಇಲ್ಲದ ಪರಕೀಯರಿಗಂತೂ ಇದು ಅರ್ಥವೇ ಆಗುತ್ತಿರಲಿಲ್ಲ.

ಒಬ್ಬ ವ್ಯಕ್ತಿ ಜನಮನವನ್ನೂ, ಜನದ ಧ್ಯೇಯವನ್ನೂ ಎಷ್ಟರಮಟ್ಟಿಗೆ ರೂಪಿಸಬಲ್ಲನೆಂದು ಹೇಳುವುದು ಬಲುಕಷ್ಟ. ಪ್ರಪಂಚದ ಇತಿಹಾಸದಲ್ಲಿ ಅಂತಹ ಅದ್ಭುತ ಪರಿಣಾಮ ಮಾಡಿದ ವ್ಯಕ್ತಿಗಳು ಕೆಲವರಿದ್ದಾರೆ. ಆದರೂ ಅವರು ಜನರ ಮನಸ್ಸಿನಲ್ಲಿ ಮೊದಲೇ ಇದ್ದ ಒಂದು ಭಾವನೆಗೆ ಪುಷ್ಟಿಕೊಟ್ಟು ಅದನ್ನು ಪ್ರಚೋದಿಸಿರಬಹುದು, ಅಥವ ಆ ಕಾಲದ ಕೆಲವು ಅಸ್ಪಷ್ಟ ಭಾವನೆಗಳನ್ನು ಸ್ಪಷ್ಟಗೊಳಿಸಿ ಅವುಗಳಿಗೆ ವಿಶೇಷ ಮಹತ್ವ ಕೊಟ್ಟಿರಬಹುದು. ಆದರೆ ಭಾರತದ ಜನತೆಯ ಮೇಲೆ ಗಾಂಧಿಜಿಯ ಇಂದಿನ ಪ್ರಭಾವ ಅತ್ಯದ್ಭುತವಿದೆ. ಇದು ಎಷ್ಟು ಕಾಲವಿರುತ್ತದೆ, ಮುಂದೆ ಯಾವ ಸ್ವರೂಪ ತಾಳುತ್ತದೆ ಎಂಬುದು ಭವಿಷ್ಯದ ಮಾತು. ಅವರ ಅಭಿಪ್ರಾಯಗಳನ್ನು ಪೂರ್ಣ ಗೌರವಿಸುವವರ ಮತ್ತು ಅವರನ್ನು ರಾಷ್ಟ್ರದ ಮಹಾನಾಯಕನೆಂದು ಒಪ್ಪುವವರ ಮೇಲೆ ಮಾತ್ರವಲ್ಲದೆ ಅವರಿಂದ ಭಿನ್ನಾಭಿಪ್ರಾಯವುಳ್ಳ ಮತ್ತು ಅವರನ್ನು ಟೀಕಿಸುವ ಜನರ ಮೇಲೆ ಸಹ ಈ ಪ್ರಭಾವವು ಮಹತ್ಪರಿಣಾಮಮಾಡಿದೆ. ಅವರ ಅಹಿಂಸಾ ತತ್ವ ಮತ್ತು ಆರ್ಥಿಕ ನೀತಿಗಳನ್ನು ಭಾರತದಲ್ಲಿ ಸಂಪೂರ್ಣ ಒಪ್ಪುವವರು ಅತ್ಯಲ್ಪ ಜನ; ಆದರೂ ಒಂದಲ್ಲ ಒಂದು ರೀತಿ ಅವರ ಪ್ರಭಾವಕ್ಕೆ ಒಳಗಾಗಿರುವವರೇ ಬಹಳ ಜನ. ಸಾಮಾನ್ಯವಾಗಿ ಧಾರ್ಮಿಕ ದೃಷ್ಟಿಯಿಂದ ಮಾತನಾಡುತ್ತ ರಾಜಕೀಯ ಮತ್ತು ನಿತ್ಯ ಜೀವನದ ಸಮಸ್ಯೆಗಳನ್ನು ನೈತಿಕ ದೃಷ್ಟಿಯಿಂದ ಬಿಡಿಸಿರೆಂದು ಒತ್ತಾಯಮಾಡುತ್ತ ಬಂದಿದಾರೆ. ಧಾರ್ಮಿಕ ಭಾವನೆ ಇರುವವರಿಗೆ ಹೆಚ್ಚಾಗಿ ಧಾರ್ಮಿಕ ಹಿನ್ನೆಲೆಯ ಪರಿಣಾಮವಾಗಿದೆ. ಉಳಿದವರಮೇಲೆ ನೈತಿಕ ದೃಷ್ಟಿಯ ಪರಿಣಾಮವಾಗಿದೆ. ಅನೇಕರ ಕಾರ್ಯಾಚರಣೆ ಉನ್ನತ ನೈತಿಕ ಮತ್ತು ತಾತ್ವಿಕ ಮಟ್ಟದಲ್ಲಿಯೇ ನಡೆದಿದೆ. ಅದಕ್ಕೂ ಮಿಗಿಲಾಗಿ ಅನೇಕರು ಆ ಮಟ್ಟದಲ್ಲಿ ಯೋಚನೆ ಮಾಡಲಾರಂಭಿಸಿದ್ದಾರೆ. ಆ ಯೋಚನೆಯ ಪರಿಣಾಮವಾಗಿ ಅವರ ನಡತೆ ಮತ್ತು ಕಾರ್ಯನೀತಿಗಳು ಪೂರ್ಣ ಮಾರ್ಪಾಟಾಗಿ ಇವೆ. ರಾಜಕೀಯವು ಸಾಮಾನ್ಯವಾಗಿ ಇತರ ಎಲ್ಲ ಕಡೆ ಇರುವಂತೆ ತಾತ್ಕಾಲಿಕ ಅನುಕೂಲ ಅಥವ ಲಾಭದ ವಿಷಯವಾಗದೆ ಪ್ರತಿಯೊಂದು ರಾಜಕೀಯ ಭಾವನೆ ಅಥವ ಕಾರ್ಯನೀತಿ ನಿರ್ಧಾರವಾಗುವ ಮೊದಲು ಒಂದು ನಿರಂತರ ನೈತಿಕ ಹೋರಾಟವೇ ನಡೆಯುತ್ತದೆ. ತಾತ್ಕಾಲಿಕ ಲಾಭ ಅಥವ ಅನುಕೂಲತೆಗಳನ್ನು ಅಲಕ್ಷ್ಯ ಮಾಡಬೇಕೆಂದಲ್ಲ, ಆದರೂ ಮುಂದಿನ ಪರಿಣಾಮಗಳ ದೂರದೃಷ್ಟಿಯಿಂದ ಮತ್ತು ಇತರ ಕಾರಣಗಳಿಂದ ಅವುಗಳಿಗೆ ಅಷ್ಟು ಪ್ರಾಮುಖ್ಯತೆ ಇಲ್ಲ.

ಈ ಎಲ್ಲ ಮಾರ್ಗಗಳಲ್ಲಿ ಗಾಂಧಿಜಿಯ ಪ್ರತಿಭೆಯು ಮಹಾ ಪ್ರಭಾವಕಾರಿಯಾಗಿ ಭಾರತದಲ್ಲಿ ತನ್ನ ಹೆಗ್ಗುರುತನ್ನು ಬಿಟ್ಟಿದೆ. ಆದರೆ ಇಂದು ಭಾರತದ ನಾಯಕರಲ್ಲಿ ಅಗ್ರಗಣ್ಯನಾಗಿರಲು ಮುಖ್ಯ ಕಾರಣ ಅಹಿಂಸಾತತ್ತ್ವ ಅಥವ ಆರ್ಥಿಕ ನೀತಿಗಳಲ್ಲ. ಭಾರತದ ಜನಕೋಟಿಗೆ ಆತನು ರಾಷ್ಟ್ರವು ಸ್ವತಂತ್ರವಾಗಬೇಕೆಂಬ ಭಾರತದ ಜನತೆಯ ಉತ್ಕಟೇಚ್ಛೆಯ ಪ್ರತಿನಿಧಿ, ಕಾರ್ಯಾಸಕ್ತ ರಾಷ್ಟ್ರೀಯ ಭಾವನೆಯ ಪ್ರತಿನಿಧಿ, ದುರಹಂಕಾರದ ದೌರ್ಜನ್ಯಕ್ಕೆ ಎಂದಿಗೂ ಮಣಿಯದ ದೃಢಸಂಕಲ್ಪದ ಪ್ರತಿನಿಧಿ, ರಾಷ್ಟ್ರಗೌರವಕ್ಕೆ ಕುಂದುತರುವ ಯಾವುದನ್ನೂ ಒಪ್ಪಬಾರದೆಂಬ ಭಾರತದ ದೃಢನಿಶ್ಚಯದ ಪ್ರತಿನಿಧಿ. ನೂರು ವಿಷಯಗಳಲ್ಲಿ ಭಿನ್ನಾಭಿಪ್ರಾಯಪಟ್ಟವರು, ಕಟುವಾಗಿ ಟೀಕಿಸಿದವರು ಯಾವುದಾದರೂ ಒಂದು ಸಂದರ್ಭದಲ್ಲಿ ಅವರಿಂದ ದೂರವಾದವರು, ಭಾರತದಲ್ಲಿ ಅನೇಕರು ಇರಬಹುದು, ಆದರೆ ಭಾರತದ ಸ್ವಾತಂತ್ರ್ಯಕ್ಕೆ ಧಕ್ಕೆಬಂದ ಕಾಲದಲ್ಲಿ ಹೋರಾಟ ಆರಂಭವಾದ ಕಾಲದಲ್ಲಿ ಎಲ್ಲರೂ ಅವರ ಸುತ್ತ ಸೇರುತ್ತಾರೆ; ಎಲ್ಲರಿಗೂ ಅವರು ಏಕೈಕ ನಾಯಕರಾಗುತ್ತಾರೆ.

ಯುದ್ಧ ಸಮಯದಲ್ಲಿ ಮತ್ತು ಭವಿಷ್ಯದಲ್ಲಿ ಸ್ವತಂತ್ರ ಭಾರತದ ನೀತಿ ಅಹಿಂಸಾಯುತವಿರಬೇಕೆ ಅಥವ ಬೇಡವೆ ಎಂಬ ಪ್ರಶ್ನೆಯನ್ನು ಗಾಂಧಿಜಿಯೂ ೧೯೪೦ ರಲ್ಲಿ ಎತ್ತಿದಾಗ ಕಾಂಗ್ರೆಸ್ ಕಾರ್ಯ ಸಮಿತಿಯು ಒಂದು ನಿರ್ದಿಷ್ಟ ತೀರ್ಮಾನಕ್ಕೆ ಬರಬೇಕಾಯಿತು. ಗಾಂಧೀಜಿಯಷ್ಟು ದೂರ ತಾವು ಹೋಗಲು ಸಿದ್ಧರಿಲ್ಲವೆಂದೂ, ವಿದೇಶ ವ್ಯವಹಾರದಲ್ಲಿ ಭಾರತವೂ, ಕಾಂಗ್ರೆಸ್ಸೂ ಅಹಿಂಸಾಮಾರ್ಗದಿಂದಲೇ ನಡೆಯು

ವುದಾಗಿ ಭರವಸೆಕೊಟ್ಟು, ಈಗಲೇ ಬಂಧಿಸಲು ಸಾಧ್ಯವಿಲ್ಲವೆಂದೂ ಗಾಂಧಿಜಿಗೆ ಸ್ಪಷ್ಟಪಡಿಸಿತು. ಈ ಭಿನ್ನಾಭಿಪ್ರಾಯದಿಂದ ಕಾಂಗ್ರೆಸ್ ಗಾಂಧಿಜಿಯಿಂದ ದೂರವಾಗಬೇಕಾಯಿತು. ಪುನಃ ಚರ್ಚೆ ಮಾಡಿ ಎರಡು ತಿಂಗಳನಂತರ ನಿರ್ಣಯಿಸಿದ ಒಂದು ಉಭಯ ಸಮ್ಮತ ತೀರ್ಮಾನಕ್ಕೆ ಅಖಿಲ ಭಾರತ ಕಾಂಗ್ರೆಸ್ ಸಮಿತಿ ಒಪ್ಪಿಗೆ ಕೊಟ್ಟಿತು. ಗಾಂಧಿಜಿಯ ಪೂರ್ಣ ಅಭಿಪ್ರಾಯ ಆ ಒಪ್ಪಂದದಲ್ಲಿ ಪ್ರತಿಬಿಂಬಿತವಾಗಿರಲಿಲ್ಲ; ಆದರೆ ಅವರಿಗೆ ಇಷ್ಟವಿಲ್ಲದಿದ್ದರೂ ಕಾಂಗ್ರೆಸ್ಸು ಆ ವಿಷಯದಲ್ಲಿ ಎಷ್ಟು ಹೇಳಬಹುದೆಂದು ಅವರು ಅಭಿಪ್ರಾಯಪಟ್ಟರೊ ಅಷ್ಟು ಮಾತ್ರ ಅದರಲ್ಲಿ ಪ್ರತಿಬಿಂಬಿತವಾಗಿತ್ತು. ಇಷ್ಟುಹೊತ್ತಿಗೆ ರಾಷ್ಟ್ರೀಯ ಸರಕಾರದ ಆಧಾರದ ಮೇಲೆ ಕಾಂಗ್ರೆಸ್ ನೀಡಿದ್ದ ಸಹಕಾರ ಹಸ್ತವನ್ನು ಬ್ರಿಟಿಷ್ ಸರಕಾರ ನಿರಾಕರಿಸಿತ್ತು. ಯಾವುದೋ ಒಂದು ಬಗೆಯ ಹೋರಾಟವು ಅನತಿದೂರದಲ್ಲಿರುವಂತೆ ಕಂಡಿತು; ಗಾಂಧಿಜಿ ಮತ್ತು ಕಾಂಗ್ರೆಸ್ ತಮ್ಮ ಭಿನ್ನಾಭಿಪ್ರಾಯ ಹೇಗಾದರೂ ಸರಿಪಡಿಸಿಕೊಂಡು ಒಟ್ಟಿಗೆ ಸಾಗಬೇಕಾದ್ದು ಅನಿವಾರ್ಯವೆನಿಸಿತು. ಸ್ವಲ್ಪವೂ ಹಿಂದೆ ಮುಂದೆ ನೋಡದೆ ನಮ್ಮ ಸಹಕಾರ ಹಸ್ತವನ್ನು ಸಂಪೂರ್ಣ ನಿರಾಕರಿಸಿದ್ದರಿಂದ ಈ ನಿರ್ಣಯದಲ್ಲಿ ಯುದ್ಧದ ಮಾತನ್ನೇ ಎತ್ತಲಿಲ್ಲ. ಅಹಿಂಸೆಯ ವಿಷಯದಲ್ಲಿ ತಾತ್ವಿಕವಾಗಿ ಕಾಂಗ್ರೆಸ್ಸಿನ ನೀತಿ ಏನೆಂಬುದನ್ನು ಚರ್ಚಿಸಲಾಗಿತ್ತು; ಕಾಂಗ್ರೆಸ್ಸಿನ ಅಭಿಪ್ರಾಯದಲ್ಲಿ ಭಾವಿ ಸ್ವತಂತ್ರ ಭಾರತವು ತನ್ನ ವಿದೇಶಾಂಗ ವ್ಯವಹಾರದಲ್ಲಿ ಸಹ ಅಹಿಂಸಾಮಾರ್ಗವನ್ನೇ ಅನುಸರಿಸಬೇಕೆಂದು ಹೇಳಲಾಗಿತ್ತು. ಆ ನಿರ್ಣಯವು ಈ ರೀತಿ ಇತ್ತು :

"ಸ್ವರಾಜ್ಯ ಸಾಧನೆಗೆ ಮಾತ್ರವಲ್ಲದೆ ಸ್ವತಂತ್ರ ಭಾರತದಲ್ಲಿ ಸಹ ಅಹಿಂಸಾ ನೀತಿ ಮತ್ತು ಮಾರ್ಗ ಅನುಸರಿಸಲು ಸಾಧ್ಯವಿದೆ ಎಂದು ಭಾರತ ಕಾಂಗ್ರೆಸ್ ಸಮಿತಿ ಅಭಿಪ್ರಾಯ ಪಡುತ್ತದೆ. ಪ್ರಪಂಚದ ವಿನಾಶ ತಡೆಗಟ್ಟಬೇಕಾದರೆ ಮತ್ತು ಮಾನವಕುಲ ಪಾಶವೀವೃತ್ತಿಯಿಂದ ವಿಮುಖವಾಗಬೇಕಾದರೆ ಮತ್ತು ಒಂದು ಹೆಚ್ಚು ನ್ಯಾಯಪೂರ್ಣ ನೂತನ ರಾಜಕೀಯ ಮತ್ತು ಆರ್ಥಿಕ ಜೀವನ ಆರಂಭವಾಗಬೇಕಾದರೆ ಪ್ರಪಂಚದಲ್ಲಿ ಪೂರ್ಣ ಶಸ್ತ್ರ ಸಂನ್ಯಾಸ ಅವಶ್ಯವೆಂದು ಇತ್ತೀಚಿನ ಪ್ರಪಂಚದ ಘಟನೆಗಳು ಸ್ಪಷ್ಟಗೊಳಿಸಿವೆ; ಮತ್ತು ಈ ಸಮಿತಿಯ ಅಭಿಪ್ರಾಯವೂ ಅದೇ ಇದೆ. ಆದ್ದರಿಂದ ಸ್ವತಂತ್ರ ಭಾರತದ ಪೂರ್ಣ ಬಲವು ಪ್ರಪಂಚದ ಶಸ್ತ್ರ ಸಂನ್ಯಾಸದ ಕಡೆ ಇದೆ; ಮತ್ತು ಈ ದಾರಿಯಲ್ಲಿ ತಾನೇ ಮಾರ್ಗದರ್ಶಿತ್ವ ತೋರಲು ಸಿದ್ಧವಿದೆ. ಆದರೆ ಅದು ಎಷ್ಟರಮಟ್ಟಿಗೆ ಸಾಧ್ಯ ಎನ್ನುವುದು ಪರದೇಶಗಳ ಮತ್ತು ದೇಶದ ಒಳ ಪರಿಸ್ಥಿತಿಗಳನ್ನು ಅವಲಂಬಿಸಿದೆ; ಆದರೂ ರಾಷ್ಟ್ರವು ಶಸ್ತ್ರ ಸಂನ್ಯಾಸಕ್ಕೆ ಪೂರ್ಣ ಬೆಂಬಲ ಕೊಡುತ್ತದೆ. ಫಲಪ್ರದ ಶಾಸ್ತ್ರಸನ್ಯಾಸವೂ ಪ್ರಪಂಚದಲ್ಲಿ ಚಿರಶಾಂತಿಯೂ ಯಶಸ್ವಿಯಾಗಬೇಕಾದರೆ ರಾಷ್ಟ್ರರಾಷ್ಟ್ರಗಳ ಮಧ್ಯೆ ಯುದ್ಧಗಳು ನಿಲ್ಲಬೇಕು. ಆ ಯುದ್ಧ ನಿಲ್ಲಬೇಕಾದರೆ ರಾಷ್ಟ್ರಗಳ ಘರ್ಷಣೆಗಳು ಮತ್ತು ಯುದ್ಧಗಳಿಗೆ ಇರುವ ಕಾರಣಗಳು ಮಾಯವಾಗಬೇಕು. ಒಂದು ರಾಷ್ಟ್ರದಿಂದ ಇನ್ನೊಂದು ರಾಷ್ಟ್ರದ ಆಕ್ರಮಣ, ಒಂದು ಜನಾಂಗದಿಂದ ಇನ್ನೊಂದು ಜನಾಂಗದ ಸುಲಿಗೆ ತಪ್ಪಿದರೆಮಾತ್ರ ಈ ಕಾರಣಗಳು ನಾಶವಾಗಲು ಸಾಧ್ಯ. ಈ ಗುರಿಯ ಸಾಧನೆಯೇ ಭಾರತದ ಶಾಂತಿಯುತ ಹೋರಾಟದ ಧ್ಯೇಯ. ಭಾರತದ ಜನತೆಯು ಸಂಪೂರ್ಣ ಸ್ವಾತಂತ್ರ್ಯ ಪಡೆಯಬೇಕೆಂದಿರುವುದೂ ಇದೇ ಉದ್ದೇಶಕ್ಕಾಗಿ. ಪ್ರಪಂಚದ ಶಾಂತಿ ಮತ್ತು ಪ್ರಗತಿ ಸಾಧನೆಗಾಗಿ ಪ್ರಪಂಚದ ಸ್ವತಂತ್ರ ರಾಷ್ಟ್ರಗಳು ಸಹಕರಿಸಿ ಕಲೆತು ಕೆಲಸ ಮಾಡುವುದಕ್ಕೂ ಇದು ಸಹಾಯಕವಾಗುತ್ತದೆ.'' ಕಾಂಗ್ರೆಸ್ಸಿನ ಈ ನಿರ್ಣಯದಲ್ಲಿ ಶಾಂತಿಯುತ ಮಾರ್ಗ ಮತ್ತು ಶಸ್ತ್ರ ಸಂನ್ಯಾಸಕ್ಕೆ ಪೂರ್ಣ ಬೆಂಬಲವಿದ್ದರೂ ಅದಕ್ಕೆ ಅನೇಕ ಷರತ್ತುಗಳೂ, ಮಿತಿಗಳೂ ಇದ್ದವು.

೧೯೪೦ ರಲ್ಲಿ ಕಾಂಗ್ರೆಸ್ಸಿನ ಒಳಗಡೆ ಇದ್ದ ಭಿನ್ನಾಭಿಪ್ರಾಯಗಳು ಮಾಯವಾಗಿ ನಮ್ಮಲ್ಲಿ ಅನೇಕರು ಒಂದು ವರ್ಷ ಸೆರೆಮನೆ ಸೇರಬೇಕಾಯಿತು. ೧೯೪೧ ನೆಯ ಡಿಸೆಂಬರ್ ತಿಂಗಳಲ್ಲಿ ಗಾಂಧಿಜಿ ಪೂರ್ಣ ಅಹಿಂಸಾಮಾರ್ಗವೇ ಕಾಂಗ್ರೆಸ್ಸಿನ ನೀತಿಯಾಗಬೇಕೆಂದಾಗ ಪುನಃ ಅದೇ ಸಂದಿಗ್ಧ ಪರಿಸ್ಥಿತಿ ಒದಗಿತು. ಪುನಃ ಒಡಕು ಹುಟ್ಟಿ ಸಾರ್ವತ್ರಿಕ ಭಿನ್ನಾಭಿಪ್ರಾಯ ಒದಗಿ ಕಾಂಗ್ರೆಸ್ ಅಧ್ಯಕ್ಷ ಮೌಲಾನ ಅಬುಲ್

ಕಲಾಮ್ ಅಜಾದರೂ ಇತರರೂ ಗಾಂಧಿಜಿಯ ಅಭಿಪ್ರಾಯ ಒಪ್ಪದೆ ಹೋದರು. ಒಟ್ಟಿನಲ್ಲಿ ಕಾಂಗ್ರೆಸ್ಸೂ ಮತ್ತು ಗಾಂಧಿಜಿಯ ನೆಚ್ಚಿನ ಹಿಂಬಾಲಕರೂ ಈ ವಿಷಯದಲ್ಲಿ ಅವರಿಂದ ಬೇರೆ ನಿಂತರು. ಅಂದಿನ ವಿಷಮಪರಿಸ್ಥಿತಿ ಮತ್ತು ದಿನದಿನಕ್ಕೂ ಬದಲಾಯಿಸುತ್ತಿದ್ದ ಯುದ್ಧರಂಗದ ನಾಟಕೀಯ ದೃಶ್ಯಗಳ ಒತ್ತಡವು ನಮ್ಮೆಲ್ಲರ ಮೇಲೆ ಮಹತ್ಪರಿಣಾಮ ಮಾಡಿದವು. ಗಾಂಧಿಜಿಯ ಮೇಲೆ ಸಹ ಅದರ ಪರಿಣಾಮವಾಗಿ ಕಾಂಗ್ರೆಸ್ಸಿನ ಮೇಲೆ ಬಲಾತ್ಕಾರದಿಂದ ತಮ್ಮ ಅಭಿಪ್ರಾಯ ಹೇರಲು ಅವರು ಒಪ್ಪಲಿಲ್ಲ; ಆದರೆ ಕಾಂಗ್ರೆಸ್ ಅಭಿಪ್ರಾಯವನ್ನೂ ಅವರು ಒಪ್ಪಲಿಲ್ಲ.

ಗಾಂಧಿಜಿ ಮತ್ತೆ ಬೇರೆ ಯಾವ ಸಮಯದಲ್ಲೂ ಕಾಂಗ್ರೆಸ್ಸಿನಲ್ಲಿ ಪ್ರಸ್ತಾಪಿಸಲಿಲ್ಲ. ಮುಂದೆ ಸರ್ ಸ್ಟಾಫರ್ಡ್‌ಕ್ರಿಪ್ಸ್ ತನ್ನ ಸಲಹೆ ತೆಗೆದುಕೊಂಡು ಬಂದಾಗ ಸಹ ಅಹಿಂಸೆಯ ಪ್ರಶ್ನೆ ಏಳಲಿಲ್ಲ. ಆ ಸಲಹೆಗಳನ್ನು ಕೇವಲ ರಾಜಕೀಯ ದೃಷ್ಟಿಯಿಂದ ನೋಡಿದೆವು. ೧೯೪೨ನೆ ಆಗಸ್ಟ್ ವರೆಗಿನ ಕೊನೆಯ ತಿಂಗಳುಗಳಲ್ಲಿ ಸಹ ಭಾರತವು ಸ್ವತಂತ್ರ ರಾಷ್ಟ್ರವಾಗಿ ಕೆಲಸಮಾಡ ಬಲ್ಲದಾದರೆ ಕಾಂಗ್ರೆಸ್ಸು ಯುದ್ಧದಲ್ಲಿ ಸಹ ಭಾಗವಹಿಸಬಹುದೆಂದರು. ಅವರ ಉನ್ನತ ರಾಷ್ಟ್ರೀಯ ಭಾವನೆ ಮತ್ತು ಸ್ವಾತಂತ್ರ್ಯದ ಉತ್ಕಟೇಚ್ಛೆಗಳೇ ಅವರ ಮೇಲೆ ಈ ಪರಿಣಾಮ ಮಾಡಿದವು. ಅವರ ಮನಸ್ಸಿನಲ್ಲಿ ಅಪಾರ ನೋವೂ ತಾತ್ವಿಕ ಹೋರಾಟವೂ ಉಂಟಾಗಿದ್ದರೂ ಅವರ ಮೇಲಿನ ಈ ಪರಿಣಾಮ ಮಾತ್ರ ಅತ್ಯಂತ ಆಶ್ಚರ್ಯಕರವೂ ಅದ್ಭುತವೂ ಇತ್ತು. ತಮ್ಮ ಜೀವನದ ಸಾರ ಸರ್ವಸ್ವವಾಗಿ ಅದಕ್ಕೊಂದು ಅರ್ಥ ಕೊಟ್ಟು ತಮಗೆ ರಕ್ತಗತವಾಗಿದ್ದ ಅಹಿಂಸಾ ತತ್ವಕ್ಕೂ ತಮ್ಮ ಜೀವನದ ಪರಮಧ್ಯೇಯ ಮತ್ತು ಉತ್ಕಟೇಚ್ಛೆಯಾಗಿದ್ದ ಭಾರತದ ಸ್ವಾತಂತ್ರ್ಯಕ್ಕೂ ಘರ್ಷಣೆಯೊದಗಿದಾಗ ಅವರ ಒಲುಮೆ ಭಾರತದ ಸ್ವಾತಂತ್ರ್ಯದ ಕಡೆಗೇ ತಿರುಗಿತು. ಇದರಿಂದ ಅಹಿಂಸೆಯಲ್ಲಿ ಅವರ ನಂಬಿಕೆ ಕಡಮೆಯಾಯಿತೆಂದಲ್ಲ. ಆದರೆ ಕಾಂಗ್ರೆಸ್ಸಿನ ಅಭಿಪ್ರಾಯಕ್ಕೆ ಮನ್ನಣೆಕೊಟ್ಟು ಈ ಯುದ್ಧ ವಿಷಯದಲ್ಲಿ ತಮ್ಮ ಅಹಿಂಸಾ ತತ್ವವನ್ನು ಒತ್ತಾಯ ಪಡಿಸುವುದು ಸರಿಯಲ್ಲವೆಂದು ಒಪ್ಪಿದರು. ಅವರಲ್ಲಿನ ಕೂದಲೆಳೆಯಷ್ಟೂ ಕದಲದ ಧರ್ಮ ಪ್ರವರ್ತಕನಿಗಿಂತ ಸಾಧ್ಯಾಸಾಧ್ಯತೆಯನ್ನರಿತ ರಾಜಕಾರಣಿಗೆ ಜಯವಾಯಿತು.

ವಿರೋಧೋಕ್ತಿಗಳಂತೆ ಕಂಡು ಬಂದ ಅನೇಕ ಅಭಿಪ್ರಾಯಗಳಿಗೆ ಇಂಬುಗೊಟ್ಟು, ನನ್ನ ಮೇಲೆ ಮತ್ತು ನನ್ನ ಕಾರ್ಯನೀತಿಯ ಮೇಲೆ ಮಹತ್ಪರಿಣಾಮ ಮಾಡಿದ ಗಾಂಧೀಜಿಯ ಸಮೀಪ ನಾನು ನಿಂತು ಅವರ ಮನಸ್ಸಿನ ಈ ನಿರಂತರ ಹೋರಾಟ ನೋಡುತ್ತಿರುವಾಗ, ಅವುಗಳ ವಿಷಯ ಯೋಚಿಸಿದಾಗ ಲಿಡ್ಡೆಲ್ ಹಾರ್ಟ್‌ನ ಗ್ರಂಥದ ಲೇಖನ ಒಂದು ಜ್ಞಾಪಕಕ್ಕೆ ಬರುತ್ತದೆ. "ಮಾನವ ಇತಿಹಾಸದಲ್ಲಿ ಮಹತ್ಪರಿಣಾಮಕಾರಕ ವಿಷಯವೆಂದರೆ ಒಂದು ಮನಸ್ಸಿನ ಮೇಲೆ ಇನ್ನೊಂದು ಮನಸ್ಸು ಪ್ರಭಾವ ಬೀರುವ ಎಲ್ಲ ಸಂಧರ್ಭಗಳಲ್ಲಿ ಅಪ್ರತ್ಯಕ್ಷ ಮಾರ್ಗದ ಪರಿಣಾಮವೇ ಬಹಳ ಹೆಚ್ಚು. ಆದರೂ ಭಿನ್ನ ಭಿನ್ನ ವಿಷಯಗಳಲ್ಲಿ ನಮ್ಮ ಗುರಿ ಎಲ್ಲಿಗೆ, ಅಥವ ಪರಿಣಾಮ ಏನು ಎಂದು ಲೆಕ್ಕಿಸದೆ ಸತ್ಯಾನ್ವೇಷಣೆ ಮಾಡಿದರೆ ಮಾತ್ರ, ಸತ್ಯ ನಿರ್ಣಯಕ್ಕೆ ಬರಬಹುದು ಅಥವ ಸತ್ಯದ ಸಮೀಪ ಸೇರಬಹುದು ಎಂಬ ಪಾಠ ಕಲಿಯದೆ ಗತ್ಯಂತರವಿಲ್ಲ.

ಮಾನವ ಪ್ರಗತಿಯಲ್ಲಿ ಧರ್ಮ ಪ್ರವರ್ತಕರ ಪ್ರಮುಖ ಪಾತ್ರ ಏನೆಂಬುದಕ್ಕೆ ಇತಿಹಾಸದಲ್ಲಿ ಅನೇಕ ನಿದರ್ಶನಗಳಿವೆ. ತಾನು ಕಂಡ ಸತ್ಯವನ್ನು ನಿರ್ಭಯವಾಗಿ ಪ್ರತಿಪಾದಿಸುವುದರಲ್ಲಿಯೇ ಅಂತ್ಯದಲ್ಲಿ ಹೆಚ್ಚಿನ ಬೆಲೆಯೂ ಉಪಯುಕ್ತತೆಯೂ ಇದೆ ಎನ್ನಲು ಇತಿಹಾಸವೇ ಸಾಕ್ಷಿ. ಆದರೂ ಆ ದಿವ್ಯ ದರ್ಶನ ಅಂಗೀಕಾರ ಮತ್ತು ಪ್ರಚಾರ ಇನ್ನೊಂದು ಬಗೆಯ ಜನರ ಕೈಯಲ್ಲಿ. ಆದರೆ ಜನತೆಗೆ ಆ ಸತ್ಯವನ್ನೂ ಅರಿಯಲು ಮತ್ತು ಅದನ್ನು ಜೀರ್ಣಿಸಿಕೊಳ್ಳಲು ಇರುವ ಶಕ್ತಿಯನ್ನು ಅವರು ಅಳೆದು ಮಧ್ಯ ಮಾರ್ಗ ಹಿಡಿದ ದಾರ್ಶನಿಕ ನಾಯಕರಿರಬೇಕು. ಸತ್ಯ ಅರಿಯಲು ಸ್ವತಃ ಅವರಿಗಿರುವ ಶಕ್ತಿ ಮತ್ತು ಅದನ್ನು ಜನತೆಗೆ ಸಾರಲು ಇರುವ ಅವರ ಸಾಮರ್ಥ್ಯ ಎಷ್ಟು ಉತ್ತಮವಿದ್ದರೆ ಜನತೆಯ ಮೇಲೆ ಪರಿಣಾಮವೂ ಅಷ್ಟು ಹೆಚ್ಚು ಫಲಕಾರಿಯಾಗುತ್ತದೆ.

ಧರ್ಮಪ್ರವರ್ತಕರಿಗೆ ಕಲ್ಲಿನೇಟು ಖಂಡಿತ. ಅವರ ಹಣೆಯ ಬರಹವೇ ಅದು, ಮತ್ತು ಅದೇ

ಅವರ ತತ್ವ ಸಾಕ್ಷಾತ್ಕರದ ಒರೆಗಲ್ಲು. ಆದರೆ ಕಲ್ಲಿನೇಟು ತಿಂದ ರಾಷ್ಟ್ರನಾಯಕನಿಗೆ ಬುದ್ಧಿಶಕ್ತಿ ಕಡಮೆಯಾಗಿ ತನ್ನ ಕಾರ್ಯದಲ್ಲಿ ಅಪಯಶಸ್ಸು ಪಡೆಯಬಹುದು. ಅಥವ ಧರ್ಮಪ್ರವರ್ತಕ ತನ್ನ ಕೆಲ ಸಕ್ಕೊ ತಾರತಮ್ಯವರಿಯದೆ ಬುದ್ಧಿ ಭ್ರಮೆಯಿಂದ ಅಪಯಶಸ್ಸು ಪಡೆಯಬಹುದು. ಅಂತ್ಯದಲ್ಲಿ ಆತನ ನಾಯಕತ್ವದ ಲೋಪದೋಷಗಳಲ್ಲಿ ಆತನ ಮಹಾತ್ಯಾಗದ ಎದುರು ಮರೆತು ಹೋಗಿ ಆತನ ಮಾನವೀ ಯತೆಗೆ ಗೌರವ ದೊರೆಯುತ್ತದೆಯೆ ಇಲ್ಲವೇ ಎಂಬುದನ್ನು ಭವಿಷ್ಯ ಮಾತ್ರ ನಿರ್ಧರಿಸಬಲ್ಲುದು. ಏನೇ ಆಗಲಿ ಇತರ ನಾಯಕರು ಧ್ಯೇಯ ಸಾಧನೆಗೆ ಸ್ವಲ್ಪವೂ ಉಪಯೋಗವಿಲ್ಲದಿದ್ದರೂ ತಾತ್ಕಾಲಿಕ ಲಾಭಕ್ಕಾಗಿ ಸತ್ಯದ ಕೊಲೆಮಾಡುವ ಸಾಮಾನ್ಯ ತಪ್ಪಿನಿಂದಲಾದರೂ ಆತನು ದೂರ ಇರುತ್ತಾನೆ. ಚಾತುರ್ಯದ ಹೆಸರಿನಲ್ಲಿ ಏಕೆಂದರೆ ಸತ್ಯದ ಕೊಲೆಯೇ ಒಂದು ಅಭ್ಯಾಸವಾದರೆ ಆತನ ಭಾವನಾಗರ್ಭದಿಂದ ಹೊರಬೀಳುವುದೆಲ್ಲ ವಿಕೃತಭಾವನೆಗಳೇ ಆಗುತ್ತವೆ.

ಸತ್ಯಾವಲಂಬನೆಯಲ್ಲೂ ಪ್ರಗತಿ ಹೊಂದುತ್ತ ಸತ್ಯಸಾಧನೆಯಲ್ಲಿ ಎಲ್ಲ ಪ್ರಗತಿಯನ್ನೂ ಒಂದು ಗುರಿಯ ಕಡೆಗೆ ತಿರುಗಿಸಲು ರಾಜಮಾರ್ಗ ಯಾವುದಾದರೂ ಇದೆಯೆ ? ಸಮಯೋಚಿತ ಕೌಶಲ್ಯದಿಂದ ತತ್ತ್ವ ಪ್ರತಿಪಾದನೆ ಮಾಡುತ್ತ ಹೋದರೆ ಪ್ರಾಯಶಃ ಇದು ಸಾಧ್ಯವಾಗಬಹುದು; ಅಂತಿಮ ಧ್ಯೇಯದ ಪ್ರಾಮುಖ್ಯತೆ ಬಿಟ್ಟುಕೊಡದೆ ಸಮಯೋಚಿತ ಮಾರ್ಗದಲ್ಲಿ ಅದನ್ನು ಸಾಧಿಸಹೋದರೆ ಸಾಧ್ಯವಾಗ ಬಹುದು. ಸತ್ಯಕ್ಕೆ ವಿರೋಧವಿದ್ದೇ ಇರುತ್ತದೆ; ಅದರಲ್ಲೂ ಅದು ಹೊಸ ಭಾವನೆಯ ಸ್ವರೂಪ ತಾಳಿದರೆ ಸತ್ಯದ ಗುರಿ ಮಾತ್ರವಲ್ಲದೆ ಅದರ ಸಾಧನೆಯ ಮಾರ್ಗದ ಕಡೆಗೂ ಸ್ವಲ್ಪ ಗಮನ ಕೊಟ್ಟರೆ ವಿರೋಧದ ಪ್ರಮಾಣ ಸ್ವಲ್ಪ ಕಡಮೆ ಮಾಡಬಹುದು. ಎದುರಿನ ವಿರೋಧ ನಿರ್ಮೂಲಮಾಡಿ ಪ್ರವೇಶಮಾಡಲು ಯತ್ನಿಸುವ ಬದಲು ಅಕ್ಕಪಕ್ಕದ ಒಳದಾರಿಯಲ್ಲಿ ಪ್ರವೇಶಮಾಡಿದರೆ ಸತ್ಯಪ್ರವೇಶಕ್ಕೆ ಹೆಚ್ಚು ಇಂಬು ದೊರೆಯುತ್ತದೆ. ಆದರೆ ಈ ಬಗೆಯ ಯಾವ ಅಪ್ರತ್ಯಕ್ಷ ಪ್ರವೇಶದಲ್ಲಿಯೇ ಆಗಲಿ ಸತ್ಯದಿಂದ ದೂರ ಆಗದಂತೆ ಮಾತ್ರ ಎಚ್ಚರದಿಂದ ಇರಬೇಕು; ಏಕೆಂದರೆ ಅಸತ್ಯಕ್ಕೆ ಬೀಳುವುದೆಂದರೆ ಎಲ್ಲ ನಿಜವಾದ ಪ್ರಗ ತಿಗೂ ಅಡ್ಡಗೋಡೆ ಹಾಕಿದಂತೆ. ಹೊಸಭಾವನೆಗಳಿಗೆ ಜನಬೆಂಬಲ ಹೇಗೆ ದೊರೆಯಿತೆಂದು ಬೇರೆ ಬೇರೆ ಹಂತಗಳಿಂದ ನೋಡುತ್ತ ಹೋದರೆ, ಅವುಗಳನ್ನು ಕೇವಲ ಹೊಸ ಭಾವನೆಗಳೆಂದು ಪ್ರಚಾರಮಾಡ ಹೋಗದೆ ಮೊದಲಿನಿಂದ ಆಚರಣೆಯಲ್ಲಿದ್ದು ಈಚೆಗೆ ನಾವು ಮರೆತ ರೀತಿ ನೀತಿಗಳ ಆಧುನಿಕ ರೀತಿಯ ಪುನರುಜ್ಜೀವನ ಎಂದು ಪ್ರಚಾರಮಾಡಿದಾಗ ಮಾರ್ಗ ಸುಗಮವಾಗಿರುವುದು ಕಂಡುಬರುತ್ತದೆ. ಅದಕ್ಕೆ ಬೇಕಾದ್ದು ಮೋಸವಲ್ಲ; ಆದರೆ ಕಳಚಿದ ಕೊಂಡಿಯನ್ನು ಹುಡುಕಿ ಸೇರಿಸುವುದು. ಏಕೆಂದರೆ ಪ್ರಪಂಚ ದಲ್ಲಿ ಹೊಸತೆಂಬುದು ಯಾವುದೂ ಇಲ್ಲ."*

## ೭. ಬಿಕ್ಕಟ್ಟು.

೧೯೪೨ರ ಆರಂಭದ ತಿಂಗಳುಗಳಲ್ಲಿ ಭಾರತದಲ್ಲಿ ಬಿಕ್ಕಟ್ಟು ಬೆಳೆಯುತ್ತ ಬಂದಿತು. ಯುದ್ಧ ರಂಗವೂ ತೀರ ಹತ್ತಿರ ಬಂದಿತಲ್ಲದೆ ಭಾರತದ ನಗರಗಳ ಮೇಲೆ ವಿಮಾನಧಾಳಿಯ ಭಯವೂ ಹೆಚ್ಚಿತು. ಈಗ ಯುದ್ಧರಂಗಗಳಾದ ಪೌರ್ವಾತ್ಯ ದೇಶಗಳ ಭವಿಷ್ಯವೇನು ? ಭಾರತ ಮತ್ತು ಇಂಗ್ಲೆಂಡ್ ಮಧ್ಯೆ ಇರುವ ಸಂಬಂಧದಲ್ಲಿ ಯಾವ ಹೊಸ ಘಟನೆಗಳೇಳುತ್ತವೆ ? ಒಬ್ಬರನೊಬ್ಬರು ಗುರುಗುಟ್ಟಿ ನೋಡುತ್ತ, ಕೈಕಟ್ಟಿ ಕುಳಿತು, ಹಿಂದಿನ ಇತಿಹಾಸದ ಕಹಿ ನೆನಪಿನಿಂದ ದೂರಸರಿದು, ಯಾರಿಂದಲೂ ಬಿಡಿಸಲಾಗದ ದುರಂತ ದುರದೃಷ್ಟವೆಂದು ಹಿಂದಿನಂತೆ ಬಾಳುವುದೆ ? ಇಬ್ಬರ ಎದುರು ನಿಂತ ವಿಪತ್ತಿನ ಸಮಯದಲ್ಲಿ ಇಬ್ಬರೂ ನಮ್ಮ ನಮ್ಮ ಭಿನ್ನ ಭಾವನೆಗಳನ್ನು ಮರೆತು ಸಹಕರಿಸಿ ಮುಂದುವರಿಯುವುದೆ ? ಪೇಟೆಯ ವರ್ತಕರು ಸಹ ತಮ್ಮ ನಿದ್ರೆಯಿಂದ ಎಚ್ಚತ್ತರು; ಎಲ್ಲರಲ್ಲೂ ಒಂದು ಕೌತುಕ ದೃಷ್ಟಿ. ಯಾರ ಬಾಯಲ್ಲಿ ನೋಡಿದರೂ ಏನೇನೋ ಸುದ್ದಿ. ವಿದ್ಯುದ್ವೇಗದ ಪ್ರಳಯ ಮುನ್ನುಗ್ಗುವಂತೆ ಹಣವಂತರು ಭಯಗ್ರಸ್ತರಾದರು; ಭವಿಷ್ಯ

*Liddel Hart—Strategy of Indirect Approach.

ಏನೇ ಇರಲಿ, ಇದುವರೆಗಿನ ಶ್ರೀಮಂತ ಸಮಾಜ ರಚನೆ, ಅದರಲ್ಲಿ ಅವರ ವಿಶೇಷ ಸ್ಥಾನ ಮತ್ತು ಹಕ್ಕು ಬಾಧ್ಯತೆಗಳು ಎಲ್ಲ ತಲೆಕೆಳಗೆ ಆಗುತ್ತವೆ ಎಂಬುದು ನಿಶ್ಚಯವಾಯಿತು. ರೈತ ಮತ್ತು ಕೂಲಿಗಾರರಿಗೆ ಆ ಭಯ ಯಾವುದೂ ಇರಲಿಲ್ಲ; ಏಕೆಂದರೆ ಕಳೆದುಕೊಳ್ಳಬೇಕಾದ್ದು ಅವನಲ್ಲಿ ಏನೂ ಇರಲಿಲ್ಲ. ಇಂದಿನ ಗೋಳಿನ ಬಾಳು ತಪ್ಪಿದರೆ ಯಾವ ಬಾಳಾದರೇನು ಎನ್ನುವಂತಿದ್ದ.

ಭಾರತದಲ್ಲಿ ಚೀನದ ಮೇಲೆ ಯಾವಾಗಲೂ ತುಂಬ ಸಹಾನುಭೂತಿ ಇತ್ತು; ಜಪಾನಿನ ಮೇಲೆ ಸ್ವಲ್ಪ ವಿರೋಧವೂ ಇತ್ತು. ಫೆಸಿಫಿಕ್ ಯುದ್ಧದಿಂದ ಚೀನಾಕ್ಕೆ ಸ್ವಲ್ಪ ಸಹಾಯವಾಗಬಹುದೆಂದು ಮೊದಲು ಯೋಚಿಸಿದೆವು. ನಾಲ್ಕೈದುವರೆ ವರ್ಷಗಳ ಕಾಲ ಚೀನ ಏಕಾಂಗಿಯಾಗಿ ಜಪಾನಿನ ಮೇಲೆ ಯುದ್ಧಮಾಡಿತ್ತು. ಈಗ ಅದಕ್ಕೆ ಪ್ರಬಲ ರಾಷ್ಟ್ರಗಳ ಸ್ನೇಹ ದೊರೆತು ಅದರ ಹೊರೆಯೂ, ಅದಕ್ಕಿಂತ ಹೆಚ್ಚು ಅದರ ಅಪಾಯವೂ ಕಡಮೆಯಾಗಬೇಕು. ಆದರೆ ಮುನ್ನುಗ್ಗುತ್ತಿದ್ದ ಜಪಾನ್ ಸೇನೆಗಳ ಎದುರಿನಲ್ಲಿ ಬ್ರಿಟಿಷ್ ಚಕ್ರಾಧಿಪತ್ಯವು ಕಣ್ಣು ಮಿಟುಕಿಸುವುದರಲ್ಲಿ ಪುಡಿಪುಡಿಯಾಯಿತು, ಮತ್ತು ಮಿತ್ರ ರಾಷ್ಟ್ರಗಳಿಗೆ ಮೇಲಿಂದ ಮೇಲೆ ಪೆಟ್ಟು ಬಿತ್ತು. ಹಾಗಾದರೆ ಈ ಆಡಂಬರದ ವ್ಯೂಹವೆಲ್ಲ ಬುಡವಿಲ್ಲದ, ಸತ್ವಶೂನ್ಯ ಇಸ್ಪೀಟಿನ ಮನೆಯೇನು ? ಯಾವ ಆಧುನಿಕ ಯುದ್ಧ ಸಲಕರಣೆಗಳಿಲ್ಲದೆ ಅನೇಕ ವರ್ಷ ಜಪಾನಿನ ಆಕ್ರಮಣ ಎದುರಿಸಿ ಹೋರಾಡುತ್ತಿದ್ದ ಚೀನಾದೊಂದಿಗೆ ಹೋಲಿಸಿದೆವು. ಚೀನದ ಮೇಲೆ ಜನರ ಅಭಿಮಾನ ಹೆಚ್ಚಿತು. ಜಪಾನಿನ ಮೇಲೆ ವಿಶ್ವಾಸವಿಲ್ಲದಿದ್ದರೂ ಏಷ್ಯದ ಒಂದು ರಾಷ್ಟ್ರದ ಶಕ್ತಿಯ ಎದುರಿನಲ್ಲಿ ಬಹು ಕಾಲದಿಂದ ಬೇರು ಬಿಟ್ಟಿದ್ದ ಯುರೋಪ್ ರಾಷ್ಟ್ರಗಳ ಸಾಮ್ರಾಜ್ಯ ದೇಶಗಳು ನಿರ್ನಾಮವಾದುದನ್ನು ಕಂಡು ಸ್ವಲ್ಪ ತೃಪ್ತಿಯೂ ದೊರೆಯಿತು. ಪೌರ್ವಾತ್ಯ ಏಷ್ಯದವನು ಎಂಬ ಜನಾಂಗ ಭೇದ ಭಾವನೆಯು ಬ್ರಿಟಿಷರಲ್ಲೂ ಇತ್ತು. ಸೋಲು ಮತ್ತು ಸಂಕಟ ಪರಂಪರೆಯ ಅನುಭವ ಬಹು ಕಹಿಯಾಗಿತ್ತು. ಆದರೆ ಏಷ್ಯದ ಒಂದು ಪೌರ್ವಾತ್ಯ ರಾಷ್ಟ್ರದಿಂದ ಒದಗಿದ ಆ ಕಹಿಯು ಇನ್ನೂ ಕಟುವಾಯಿತು. ಅತ್ಯುನ್ನತ ಆಂಗ್ಲ ಪದಪೀಠರನೊಬ್ಬನು "ಪ್ರಿನ್ಸ್ ಆಫ್ ವೇಲ್ಸ್ ಮತ್ತು ರಿಪಲ್ಸ್ ಯುದ್ಧ ಹಡಗುಗಳು ಪೀತವರ್ಣದ ಜಪಾನರಿಂದ ಮುಳುಗುವ ಬದಲು ಜರ್ಮನರಿಂದ ಮುಳುಗಿದ್ದರೆ ಅಷ್ಟು ದುಃಖವಾಗುತ್ತಿರಲಿಲ್ಲ" ಎಂದು ಹೇಳಿದನು.

ಚೀನದ ಮಹಾ ಸೇನಾನಿ ಚಾಂಗ್ ಕೈಷೇಕ್ ಮತ್ತು ಸತಿ ಚಾಂಗ್ ಕೈಷೇಕ್ ಭಾರತಕ್ಕೆ ಬಂದಾಗ ಭಾರತದಲ್ಲಿ ಒಂದು ದೊಡ್ಡ ಸಮಾರಂಭವೇ ಆಯಿತು. ಭಾರತ ಸರಕಾರದ ಅತಿಥಿಗಳಾಗಿದ್ದ ಕಾರಣ ಅವರ ಇಷ್ಟ ಮತ್ತು ಮರ್ಯಾದೆ ಅರಿತು ಅವರು ಜನರೊಂದಿಗೆ ಹೆಚ್ಚು ಬೆರೆಯಲು ಸಾಧ್ಯವಾಗಲಿಲ್ಲ; ಆದರೂ ಆ ಸಂದಿಗ್ಧ ಸಮಯದಲ್ಲಿ ಅವರು ಭಾರತಕ್ಕೆ ಬಂದುದೂ, ಭಾರತದ ಸ್ವಾತಂತ್ರ್ಯಕ್ಕಾಗಿ ಅವರು ಸಹಾನುಭೂತಿ ತೋರಿಸಿದುದೂ, ಭಾರತವು ತನ್ನ ರಾಷ್ಟ್ರೀಯತೆಯ ಚೌಕಟ್ಟಿನ ಸಂಕುಚಿತ ಆವರಣದಿಂದ ಹೊರಬಿದ್ದು ಜಟಿಲ ಅಂತರ ರಾಷ್ಟ್ರೀಯ ಸಮಸ್ಯೆಗಳ ಸ್ವರೂಪ ಅರಿತುಕೊಳ್ಳಲು ಹೆಚ್ಚು ಸಹಾಯಕವಾಯಿತು. ಭಾರತ ಮತ್ತು ಚೀಣಗಳ ಮಧ್ಯೆ ಇದ್ದ ಬಾಂಧವ್ಯ ಹೆಚ್ಚು ಮಧುರವಾಯಿತು ; ಸಾಮಾನ್ಯ ಶತ್ರುವಿನೆದುರು ಚೀಣದ ಮತ್ತು ಇತರ ರಾಷ್ಟ್ರಗಳೊಡನೆ ಭುಜಕ್ಕೆ ಭುಜ ಕೊಟ್ಟು ನಿಲ್ಲಬೇಕೆಂಬ ಬಯಕೆ ಬಲವತ್ತರವಾಯಿತು. ಭಾರತದ ಎದುರಿನ ಅಂದಿನ ವಿಪತ್ತಿನಿಂದ ರಾಷ್ಟ್ರೀಯ ಮತ್ತು ಅಂತರ ರಾಷ್ಟ್ರೀಯ ಭಾವನೆಗಳಿಗಿದ್ದ ಅಂತರ ಕಡಮೆಯಾಯಿತು; ಮಧ್ಯೆ ಇದ್ದ ಒಂದೇ ಒಂದು ಅಡ್ಡ ಗೋಡೆ ಎಂದರೆ ಬ್ರಿಟಿಷ್ ಸರ್ಕಾರದ ನೀತಿ.

ಇಂಡಿಯ ಸರಕಾರಕ್ಕೆ ಸನ್ನಿಹಿತ ಸಂಕಟಗಳ ಸ್ಪಷ್ಟ ಅರಿವು ಆಗಿತ್ತು. ವಿಷಮಕಾಲದ ಕಳವಳ ಕಾತರತೆಗಳಿಂದ ಅವರ ಮನಸ್ಸು ತಳಮಳಿಸಿರಬೇಕು. ಆದರೂ ಭಾರತದಲ್ಲಿ ಬ್ರಿಟಿಷರು, ತಮ್ಮ ಮೊದಲಿನ ರಾಜಠೀವಿಯ ಜೀವನ, ಕುರುಡು ಹಟಮಾರಿತನದ ನಿರಾತಂಕ ಅಧಿಕಾರದರ್ಪ, ಇವುಗಳ ಮಧ್ಯೆ ತಮ್ಮ ದೃಷ್ಟಿಯಲ್ಲಾಗಲಿ, ಕಾರ್ಯಾಚರಣೆಯಲ್ಲಾಗಲಿ ಯಾವ ವ್ಯತ್ಯಾಸವನ್ನೂ ತೋರಲಿಲ್ಲ. ಆತುರ ಅಥವ ವೇಗ ಭಾವನೆಯಾಗಲಿ, ವಿಷಮ ಪರಿಸ್ಥಿತಿ ಅಥವ ಕಾರ್ಯಾತುರದ ಅರಿವಾಗಲಿ ಯಾವುದೂ ಅವರಿಗೆ ಇರಲಿಲ್ಲ; ಅವರು ಕಟ್ಟಿದ ವ್ಯೂಹರಚನೆ ಎಲ್ಲ ಪುರಾತನ ಕಾಲದ್ದು ; ಅದರ ಧ್ಯೇಯವೂ ಬೇರೆ. ಅವರ

ಸೈನ್ಯ ಅಧಿಕಾರಿವರ್ಗ ಎಲ್ಲ ಭಾರತದ ಆಕ್ರಮಣಕ್ಕಾಗಿ ಮತ್ತು ಭಾರತೀಯರ ಸ್ವಾತಂತ್ರ್ಯಸಾಧನೆಯ ಪ್ರಯತ್ನ ಹತ್ತಿಕ್ಕುವುದಕ್ಕಾಗಿ ರಚಿಸಿದ್ದು. ಅಷ್ಟು ಯೋಗ್ಯತೆ ಅದಕ್ಕಿತ್ತು ನಿಜ. ಆದರೆ ಪ್ರಬಲ ದಯಾ ಶೂನ್ಯಶತ್ರುವಿನೊಡನೆ ಆಧುನಿಕ ರೀತಿ ಯುದ್ಧ ಮಾಡುವುದು ಬೇರೆ ವಿಷಯ. ಅದು ಅವರಿಗೆ ಬಹಳ ಕಷ್ಟ ವಾಯಿತು. ಅವರಿಗೆ ಆ ಮನೋಧಾರ್ಢ್ಯವಿರಲಿಲ್ಲ. ಅಲ್ಲದೆ ಅವರ ಶಕ್ತಿ ಎಲ್ಲ ಭಾರತೀಯನ ರಾಷ್ಟ್ರೀಯ ಭಾವನೆ ತುಳಿಯುವುದರಲ್ಲೇ ವಿನಿಯೋಗವಾಗಿತ್ತು. ಈ ಹೊಸ ಸಮಸ್ಯೆಗಳನ್ನು ಎದುರಿಸಲಾಗದೆ ಬರ್ಮ ಮತ್ತೆ ಮಲಯ ಸರಕಾರಗಳು ನಿರ್ನಾಮವಾದ ಮೇಲಾದರೂ ಅವರಿಗೆ ಜ್ಞಾನೋದಯವಾಗಬೇಕಾಗಿತ್ತು. ಆದರೂ ಅವರು ಯಾವ ಪಾಠವನ್ನೂ ಕಲಿಯಲಿಲ್ಲ. ಭಾರತದ ಸಿವಿಲ್ ಸರ್ವಿಸ್ ಅಧಿಕಾರಿವರ್ಗದಂತೆ ಬರ್ಮದಲ್ಲೂ ಒಂದು ಅಧಿಕಾರಿವರ್ಗವಿತ್ತು. ಅದು ಎಷ್ಟು ಹುಳುಕು ನಾರುತ್ತಿತ್ತು. ಎಂಬುದನ್ನು ಬರ್ಮ ಸಿದ್ಧಮಾಡಿಕೊಟ್ಟಿತು. ಆದರೂ ಭಾರತದಲ್ಲಿ ಯಾವ ವ್ಯತ್ಯಾಸವೂ ಆಗದೆ ವೈಸರಾಯ್ ಮತ್ತು ಆತನ ಅಧಿಕಾರಿವರ್ಗ ಮೊದಲಿನಂತೆಯೇ ಆಡಳಿತ ಮುಂದುವರಿಸಿದರು. ಬರ್ಮದಿಂದ ಕಾಲುಕಿತ್ತ ಉನ್ನತ ಅಧಿಕಾರಿಗಳೂ ಅವರ ಜೊತೆಗೆ ಸೇರಿಕೊಂಡರು. ಸಿಮುಲಾದಲ್ಲಿ ಇನ್ನೊಬ್ಬ "ಎಕ್ಸಲೆನ್ಸಿ" ಮನೆಮಾಡಿದನು. ಪಲಾಯನಮಾಡಿದ ಯೂರೋಪಿನ ಸರಕಾರಗಳಿಗೆ ಲಂಡನ್ ನಗರ ನೆರಳು ಕೊಟ್ಟಂತೆ ಬ್ರಿಟಿಷ್ ಅಧೀನ ಸರಕಾರಗಳ ಅಧಿಕಾರಿಗಳಿಗೆ ಆಶ್ರಯ ಕೊಡುವ ಗೌರವ ನಮಗೂ ದೊರೆ ಯಿತು. ಭಾರತದ ಬ್ರಿಟಿಷ್ ಅಧಿಕಾರ ನಗರದ ವ್ಯೂಹದಲ್ಲಿ ಔತನ ಕೊಟ್ಟಂತೆ ಅವರಿಗೆ ಸ್ಥಾನ ದೊರೆಯಿತು.

ರಂಗಸ್ಥಳದ ಛಾಯಾ ಚಿತ್ರಗಳಂತೆ ಈ ಉನ್ನತ ಅಧಿಕಾರಿಗಳು ತಮ್ಮ ಸಾಮ್ರಾಜ್ಯ ವೈಭವದ ಆಡಂಬರ, ರಾಜಸಭಾ ಮರ್ಯಾದೆಗಳು, ದರ್ಬಾರುಗಳು, ಬಿರುದು ಬಾವಲಿಗಳ ವಿನಿಯೋಗ ಸಮಾರಂಭಗಳು, ಕವಾಯಿತುಗಳು, ಔತಣಗಳು, ಸಂಜೆಯ ವೇಷಭೂಷಣಗಳು, ಭಾಷಣ ವೈಖರಿಗಳು ಇವುಗಳಿಂದ ನಮ್ಮನ್ನು ಬೆರಗುಗೊಳಿಸಲು ಯತ್ನಿಸಿ ಮೊದಲಿನಂತೆಯೇ ಮುಂದುವರಿದರು. ಹೊಸ ದೆಹಲಿಯ ವೈಸ ರಾಯನ ಅರಮನೆಯೇ ಈ ಅಧಿಕಾರ ಸೂಚನೆಗೆ ಮುಖ್ಯ ದೇಗುಲ, ವೈಸರಾಯನೇ ಮುಖ್ಯ ಪೂಜಾರಿ. ಇದರಂತೆ ಸಣ್ಣ ಪುಟ್ಟ ದೇಗುಲಗಳೂ ಪೂಜಾರಿಗಳೂ ಅನೇಕ ಇದ್ದರು. ಈ ಸಾಮ್ರಾಜ್ಯ ವೈಭವದ ಆಡಂಬರ ಮತ್ತು ಮರ್ಯಾದೆಗಳೆಲ್ಲ ಜನರ ಮನ ಒಲಿಸಲೆಂದು. ಭಾರತೀಯರಲ್ಲಿ ಈ ಸಭಾ ಮರ್ಯಾದೆ ಮತ್ತು ಆಡಂಬರಗಳು ಮೊದಲಿನಿಂದ ಸಾಂಪ್ರದಾಯಕ ಇದ್ದುದರಿಂದ ಆರಂಭದಲ್ಲಿ ಅವಕ್ಕೆ ಮನ ಸೋತರು. ಆದರೆ ಹೊರಭಾವನೆ ಬೆಳೆದು ಅವುಗಳಿಗೆ ಯಾವ ಬೆಲೆಯೂ ಇಲ್ಲದಂತಾಗಿ ಹಾಸ್ಯಾಸ್ಪದ ವಾದವು. ಭಾರತೀಯರು ಎಮ್ಮೆಗಳಂತೆ ಬಹು ನಿಧಾನಿಗಳು, ಅವಸರ, ನೂಕು ನುಗ್ಗಲು ಅವರಿಗೆ ಬೇಕಿಲ್ಲ ಎಂಬ ಪ್ರತೀತಿ ಇದ್ದರೂ ಈಗ ಅವರೂ ತಮ್ಮ ಕೆಲಸದಲ್ಲಿ ಒಂದು ವೇಗವನ್ನೂ ಶಕ್ತಿಯನ್ನೂ ಪಡೆದಿದ್ದರು. ಹಿಡಿದ ಕೆಲಸ ಪೂರೈಸಬೇಕೆಂಬ ಆಸೆ ತುಂಬ ಬಲಗೊಂಡಿತ್ತು. ಕಾಂಗ್ರೆಸ್ ಪ್ರಾಂತ ಸರಕಾರಗಳ ಲೋಪದೋಷ ಏನೇ ಇರಲಿ, ಹಳೆಯ ಕಂದಾಚಾರ ಪದ್ಧತಿಗಳನ್ನೆಲ್ಲ ಕಿತ್ತೊಗೆದು ಕಷ್ಟ ಪಟ್ಟು ಸತತ ದುಡಿದು ಫಲಸಾಧಿಸಬೇಕೆಂಬ ಕಾತರತೆ ಬಲವಾಗಿತ್ತು. ದೇಶಕ್ಕೆ ಇಷ್ಟು ದೊಡ್ಡ ಗಂಡಾಂತರ ಮತ್ತು ವಿಷಮಪರಿಸ್ಥಿತಿ ಒದಗಿದರೂ ಇಂಡಿಯಾ ಸರಕಾರ ಮತ್ತು ಅದರ ಅಧಿಕಾರಿಗಳ ನಿಧಾನ ಮತ್ತು ಕಾರ್ಯ ಶೂನ್ಯತೆ ಕಂಡು ರಕ್ತ ಕುದಿಯ ತೊಡಗಿತು. ಹೇಗೋ ಇಷ್ಟರಲ್ಲಿ ಭಾರತಕ್ಕೆ ಅಮೆರಿಕನರ ಪ್ರವೇಶವಾಯಿತು. ಅವರಿಗೆ ಎಲ್ಲದರಲ್ಲೂ ಆತುರ; ಕೆಲಸ ಆದರೆ ಸರಿ. ಇಂಡಿಯ ಸರಕಾರದ ಆಡಳಿತ ವೈಖರಿ, ಬಿನ್ನಾಣ ಯಾವುದೂ ಅವರಿಗೆ ತಿಳಿಯದು; ಅದನ್ನು ಕಲಿಯುವುದೂ ಅವರಿಗೆ ಬೇಕಿರಲಿಲ್ಲ. ಈ ನಿಧಾನ ಸಹಿಸಲಾರದೆ, ಅಡಚಣೆ, ಅಧಿಕಾರ ದರ್ಪದ ರೀತಿ ನೀತಿ ಕಿತ್ತೊ ಗೊದು, ಹೊಸ ದೆಹಲಿಯ ಜೀವನ ರೀತಿಯನ್ನು ಸಹ ಕಲಕಿದರು. ಯಾವ ಕೆಲಸಕ್ಕೆ ಯಾವ ಉಡುಪು ಧರಿಸಬೇಕೆಂಬ ನಿಯಮ ಸಹ ಇಲ್ಲದೆ ಆನೇಕ ವೇಳೆ ಸಮಾಜ ರೂಢಿ ಮತ್ತು ಅಧಿಕಾರ ವಿಧಿನಿಯಮ ಗಳನ್ನೂ ಮುರಿದು ಹಾಕಿದರು. ಅವರ ಸಹಾಯ ಅತ್ಯಗತ್ಯವಿದ್ದರೂ ಇಲ್ಲಿನ ಉನ್ನತ ಅಧಿಕಾರಿಗಳಿಗೆ ಅವರ ರೀತಿ ನೀತಿ ಸರಿಬೀಳದೆ ಪರಸ್ಪರ ಬಾಂಧವ್ಯ ಸ್ವಲ್ಪ ಕಹಿಯಾಯಿತು. ಭಾರತೀಯರಿಗೆ ಅವರ

ಮೇಲೆ ಮಮತೆ ಹೆಚ್ಚಿತು ; ಅವರ ಶಕ್ತಿ ಮತ್ತು ಕಾರ್ಯಪಟುತ್ವಗಳು ಸಾಂಕ್ರಾಮಿಕವಾದವು. ಭಾರತದ ಬ್ರಿಟಿಷ್ ಅಧಿಕಾರಿಗಳ ಈ ಗುಣ ಅಭಾವಕ್ಕೂ ಅಮೆರಿಕನರ ಕಾರ್ಯತತ್ಪರತೆಗೂ ಯಾವ ಸಾಮ್ಯವೂ ಇರಲಿಲ್ಲ. ಅಧಿಕಾರದ ಬಿಗುಮಾನವಿಲ್ಲದ ಅವರ ಸ್ವತಂತ್ರ ಮತ್ತು ಸರಳ ಸ್ವಭಾವ ಕಂಡು ಜನ ಮೆಚ್ಚಿದರು. ಈ ಹೊಸಬರಿಗೂ ಅಧಿಕಾರಿವರ್ಗಕ್ಕೂ ಒಳಗೊಳಗೆ ನಡೆಯುತ್ತಿದ್ದ ತಿಕ್ಕಾಟ ಕಂಡು ಜನರಲ್ಲಿ ಒಂದು ಬಗೆಯ ಹರ್ಷವುಂಟಾಯಿತು ; ಸುಳ್ಳೋ ನಿಜವೋ ಅನೇಕ ಕತೆಗಳೂ ಕೇಳಬಂದುವು.

ಯುದ್ಧವು ಭಾರತಕ್ಕೆ ಬಹಳ ಸಮೀಪ ಬಂದುದನ್ನು ಕಂಡು ಗಾಂಧಿಜಿ ಬಹಳ ತಳಮಳಗೊಂಡರು. ಅವರ ಅಹಿಂಸಾ ತತ್ತ್ವವನ್ನೂ, ಅವರ ಕಾರ್ಯನೀತಿಯನ್ನೂ ಈ ಹೊಸ ಸನ್ನಿವೇಶಕ್ಕೆ ಅಳವಡಿಸುವುದು ಕಷ್ಟವಾಯಿತು. ದಂಡೆತ್ತಿ ಬಂದ ಸೈನ್ಯದ ಎದುರಿನಲ್ಲಿ, ಎರಡು ಸೈನ್ಯಗಳು ಯುದ್ಧ ಸನ್ನದ್ಧರಾಗಿ ಎದುರು ನಿಂತ ವೇಳೆಯಲ್ಲಿ ಶಾಸನಭಂಗ ಸಾಧ್ಯವಿರಲಿಲ್ಲ. ಆಕ್ರಮಣ ಒಪ್ಪುವುದೂ ಅಥವ ಸುಮ್ಮನೆ ಕುಳಿತಿರುವುದೂ ಸಾಧ್ಯವಿರಲಿಲ್ಲ. ಹಾಗಾದರೆ ಮಾಡುವುದೇನು ? ಆ ಸಮಯದಲ್ಲಿ ಅಹಿಂಸೆ ಸಾಧ್ಯವಿಲ್ಲವೆಂದೂ, ದಂಡೆತ್ತಿ ಬಂದಾಗ ಸಶಸ್ತ್ರರಾಗಿ ಎದುರಿಸುವ ಬದಲು ಅಹಿಂಸೆಯಿಂದ ಎದುರಿಸಲು ಸಾಧ್ಯವಿಲ್ಲವೆಂದೂ ಅವರ ಸಹೋದ್ಯೋಗಿಗಳೂ, ಕಾಂಗ್ರೆಸ್ಸೂ ಅಹಿಂಸೆಯನ್ನು ನಿರಾಕರಿಸಿದ್ದರು ; ಆ ರೀತಿ ನಿರಾಕರಿಸಲು ನಮಗೆ ಹಕ್ಕೂ ಇದೆ ಎಂದು ಗಾಂಧಿಜಿ ಒಪ್ಪಿಯೂ ಇದ್ದರು. ಆದರೂ ಅವರು ಬಹಳ ಮನನೊಂದರು. ವೈಯಕ್ತಿಕವಾಗಿ ಯಾವ ಹಿಂಸಾತ್ಮಕ ಮಾರ್ಗವನ್ನೂ ಅವಲಂಬಿಸಲು ಅವರಿಂದ ಸಾಧ್ಯವಿರಲಿಲ್ಲ. ಆದರೆ ಅವರು ಕೇವಲ ಒಬ್ಬ ವ್ಯಕ್ತಿಯಾಗಿರಲಿಲ್ಲ. ರಾಷ್ಟ್ರೀಯ ಚಳುವಳಿಯಲ್ಲಿ ಅವರಿಗೆ ಒಂದು ಅಧಿಕಾರ ಸ್ಥಾನವಿರಲಿ ಇಲ್ಲದಿರಲಿ ಅವರಿಗೆ ಒಂದು ಪ್ರಭಾವಶಾಲಿಯಾದ ಉನ್ನತ ಸ್ಥಾನವಿತ್ತು ; ಅವರ ಮಾತು ಅನೇಕರಿಗ ವೇದವಾಕ್ಯವಾಗಿತ್ತು.

ಹಿಂದೆ ಆಗಲಿ ಮುಂದೆ ಆಗಲಿ ಬೇರೆ ಯಾರಿಂದಲೂ ಸಾಧ್ಯವಿಲ್ಲದಂತೆ ಗಾಂಧಿಜಿ ಭಾರತದ ಹೃದಯವನ್ನು ಮುಖ್ಯವಾಗಿ ಭಾರತದ ಜನಕೋಟಿಯ ಮನಸ್ಸನ್ನು ಅರಿತಿದ್ದರು. ದೇಶಾದ್ಯಂತ ಭಾರತದಲ್ಲೆಲ್ಲ ಸಂಚಾರ ಮಾಡಿ ಕೋಟ್ಯಂತರ ಜನರ ಸೂಕ್ಷ್ಮ ಸಂಪರ್ಕ ಇದ್ದುದು ಮಾತ್ರವಲ್ಲದೆ, ಜನತೆಯಲ್ಲಿ ಒಂದು ಭಾವಾವೇಶ ತುಂಬುವ ಯಾವುದೊ ಒಂದು ಅದ್ಭುತ ಶಕ್ತಿ ಅವರಲ್ಲಿತ್ತು. ಜನತೆಯೊಂದಿಗೆ ಅವರು ಐಕ್ಯವಾಗಿ ಜನರ ಹೃದಯದೊಂದಿಗೆ ಮಿಡಿಯುತ್ತಿದ್ದರು. ಜನರಿಗೆ ಇದು ಸಂಪೂರ್ಣ ತಿಳಿದಿದ್ದರಿಂದ ಗಾಂಧಿಜಿಯಲ್ಲಿ ಅವರ ಭಕ್ತಿ ವಿಶ್ವಾಸ ಅಪಾರವಿತ್ತು. ಆದರೂ ಬಾಲ್ಯದಲ್ಲಿ ಗುಜರಾತದಲ್ಲಿ ಪಡೆದ ದೃಷ್ಟಿಯಿಂದಲೇ ಸ್ವಲ್ಪ ಮಟ್ಟಿಗೆ ಭಾರತವನ್ನೂ ನೋಡಿದರು. ಗುಜರಾತಿಗಳು ಜೈನರ ಅಹಿಂಸಾ ತತ್ತ್ವದ ಪ್ರಭಾವಕ್ಕೆ ಒಳಗಾದ ಶಾಂತಪ್ರಿಯ ವರ್ತಕರು ಮತ್ತು ವ್ಯಾಪಾರಿಗಳು. ಭಾರತದ ಇತರ ಭಾಗಗಳಲ್ಲಿ ಈ ಪ್ರಭಾವ ಅಷ್ಟು ಇರಲಿಲ್ಲ ; ಕೆಲವು ಕಡೆ ಆ ಪ್ರಭಾವ ಏನೂ ಇರಲಿಲ್ಲ. ಭಾರತಾದ್ಯಂತ ಎಲ್ಲೆಡೆಯಲ್ಲೂ ಹರಡಿದ್ದ ಯುದ್ಧಪ್ರಿಯ ಕ್ಷತ್ರಿಯರಿಗೆ ಯುದ್ಧದಲ್ಲಿ ಮತ್ತು ಬೇಟೆಯಲ್ಲಿ ಈ ಅಹಿಂಸಾತತ್ತ್ವ ಅಡ್ಡಿ ಬರಲಿಲ್ಲ. ಆದರೆ ಬ್ರಾಹ್ಮಣರ ಇನ್ನೂ ಕೆಲವು ಪಂಗಡಗಳು ಅದರ ಪ್ರಭಾವಕ್ಕೆ ಒಳಗಾಗಿದ್ದರು. ಆದರೂ, ಭಾರತೀಯ ಇತಿಹಾಸದಲ್ಲಿ ಅಹಿಂಸಾತತ್ತ್ವ ನಿರಾಕರಿಸಿದ ಉದಾಹರಣೆಗಳು ಅನೇಕವಿದ್ದರೂ, ಗಾಂಧಿಜಿ ಭಾರತೀಯ ದರ್ಶನದ ಮತ್ತು ಇತಿಹಾಸದ ಬೆಳವಣಿಗೆಯ ವಿಷಯದಲ್ಲಿ ಒಂದು ವಿಶಾಲ ದೃಷ್ಟಿ ಇಟ್ಟು ಅಹಿಂಸೆಯೇ ಅದರ ಮೂಲ ತತ್ತ್ವವೆಂದರು. ಈ ದೃಷ್ಟಿಗೆ ಆಧಾರವಿಲ್ಲವೆಂದು ಅನೇಕ ಭಾರತೀಯ ದಾರ್ಶನಿಕರು. ಚರಿತ್ರಕಾರರು ಭಿನ್ನಾಭಿಪ್ರಾಯ ಸೂಚಿಸಿದರು. ಆಧುನಿಕ ಮಾನವ ಜೀವನ ರೀತಿಯಲ್ಲಿ ಅಹಿಂಸೆಯ ಪಾತ್ರಾಪಾತ್ರತೆ ಏನು ಎಂಬುದಕ್ಕೂ ಈ ದೃಷ್ಟಿಗೂ ಯಾವ ಸಂಬಂಧವೂ ಇಲ್ಲದಿದ್ದರೂ ಗಾಂಧಿಜಿಯ ಮನಸ್ಸಿನಲ್ಲಿ ಒಂದು ಐತಿಹಾಸಿಕ ಒಲವು ಇತ್ತೆಂಬುದು ಸ್ಪಷ್ಟವಿದೆ.

ಭೂಗೋಲದ ಆಕಸ್ಮಿಕಗಳು ರಾಷ್ಟ್ರೀಯ ಶೀಲ ಮತ್ತು ಇತಿಹಾಸ ನಿರ್ಧರಿಸುವುದರಲ್ಲಿ ಬಹು ಮುಖ್ಯ ಪಾತ್ರ ವಹಿಸುತ್ತವೆ. ಉತ್ತರದಲ್ಲಿ ಭದ್ರವಾದ ಕೋಟೆಯಂತಿದ್ದ ಹಿಮಾಲಯ ಪರ್ವತ ಶ್ರೇಣಿ, ಉಳಿದ ಕಡೆಗಳಲ್ಲಿ ಅಪಾರ ಸಮುದ್ರ ಇವುಗಳಿಂದ ಭಾರತಾದ್ಯಂತ ಒಂದು ಬಗೆಯ ಐಕ್ಯತೆಯುಂಟಾಯಿತು. ಜೊತೆಗೆ ಒಂದು ಬಗೆಯ ಪ್ರತ್ಯೇಕತಾ ಭಾವನೆಯೂ ಬೆಳೆಯಿತು. ಈ ವಿಶಾಲ ದೇಶದಲ್ಲಿ ಆಸೇತು

ಹಿಮಾಚಲ ಪರ್ಯಂತ, ಸ್ಪಷ್ಟವಾದ, ಒಂದೇ ಬಗೆಯ ನಾಗರಿಕತೆ ಬೆಳೆಯಿತು; ಅದರ ವಿಸ್ತರಣಕ್ಕೂ, ಪ್ರಗತಿಗೂ ಬೇಕಾದಷ್ಟು ಅವಕಾಶ ದೊರೆಯಿತು; ಮತ್ತು ಭದ್ರವಾದ ಒಂದು ಸಾಂಸ್ಕೃತಿಕ ಐಕ್ಯತೆಯನ್ನೂ ಕಾಪಾಡಿಕೊಂಡು ಬಂದಿತು. ಆದರೆ ಈ ಐಕ್ಯತೆಯಲ್ಲಿ ಅದೇ ಭೂಗೋಲವು ಭಿನ್ನತೆಯನ್ನೂ ತಂದಿತು. ಉತ್ತರ ಮತ್ತು ಮಧ್ಯ ಭಾರತದ ವಿಶಾಲವಾದ ಮೈದಾನಕ್ಕೂ ದಕ್ಷಿಣದ ಪರ್ವತ ಪ್ರದೇಶ ಮತ್ತು ಇತರ ಭಾಗಗಳಿಗೂ ಬಹಳ ವ್ಯತ್ಯಾಸ ಬೆಳೆದವು. ಬೇರೆ ಬೇರೆ ಭೌಗೋಲಿಕ ಪ್ರದೇಶಗಳ ಜನರ ಸ್ವಭಾವಗಳು ಬೇರೆ ಬೇರೆಯಾದವು. ಕೆಲವು ವೇಳೆ ಒಟ್ಟು ಸೇರಿದರೂ ಉತ್ತರದ ಮತ್ತು ದಕ್ಷಿಣದ ಇತಿಹಾಸಗಳು ಬೇರೆ ಬೇರೆ ಆದವು. ಉತ್ತರದ ವಿಶಾಲ ಮೈದಾನಗಳಲ್ಲಿ ಪರಧಾಳಿಯ ರಕ್ಷಣೆಗೆ ರಷ್ಯದಂತೆ ಪ್ರಬಲ ದೊಡ್ಡ ಕೇಂದ್ರ ಸರಕಾರಗಳು ಅವಶ್ಯವಾದವು. ಉತ್ತರದಲ್ಲಿಯೂ ದಕ್ಷಿಣದಲ್ಲಿಯೂ ಚಕ್ರಾಧಿಪತ್ಯಗಳು ಹುಟ್ಟಿ ಬಾಳಿದವು. ಆದರೆ ಸಾಮ್ರಾಜ್ಯದ ಕೇಂದ್ರವು ಉತ್ತರದಲ್ಲೆ ಇದ್ದು ಅನೇಕಬಾರಿ ದಕ್ಷಿಣದ ಮೇಲೂ ತನ್ನ ಪ್ರಭಾವ ಬೀರಿತ್ತು. ಪುರಾತನ ಕಾಲದಲ್ಲಿ ಪ್ರಬಲ ಕೇಂದ್ರ ಸರಕಾರವೆಂದರೆ ನಿರಂಕುಶಾಧಿಕಾರ. ಇತರ ಕಾರಣಗಳಿದ್ದರೂ ಮರಾಠರು ಮೊಗಲ್ ಚಕ್ರಾಧಿಪತ್ಯ ಪುಡಿ ಪುಡಿ ಮಾಡಿದ್ದು ಕೇವಲ ಐತಿಹಾಸಿಕ ಆಕಸ್ಮಿಕವಲ್ಲ. ಮರಾಠರು ದಕ್ಷಿಣದ ಪರ್ವತ ಪ್ರದೇಶಗಳ ಕಟ್ಟಾಳುಗಳು. ಉತ್ತರದ ಮೈದಾನಗಳ ಜನರಲ್ಲಿ ಅನೇಕರು ದಾಸ್ಯಜೀವನದಿಂದ ಮೆತ್ತಗಾಗಿದ್ದರೂ ಈ ಪರ್ವತ ಪ್ರದೇಶದ ಜನರು ಸ್ವಾತಂತ್ರ್ಯ ಪ್ರಿಯರೂ, ಧೈರ್ಯಶಾಲಿಗಳೂ ಆಗಿದ್ದರು. ಬಂಗಾಲದಲ್ಲಿ, ಉತ್ತರ ಭಾರತದ ಮೈದಾನ ಪ್ರದೇಶಗಳಲ್ಲಿ ಬ್ರಿಟಿಷರು ಬಹು ಬೇಗ ತಮ್ಮ ರಾಜ್ಯ ಸ್ಥಾಪಿಸಿದರು. ಅಲ್ಲಿ ಮೊದಲು ಭದ್ರಮಾಡಿಕೊಂಡು ಅನಂತರ ಬೇರೆ ಕಡೆ ತಿರುಗಿದರು.

ಈಗಲೂ, ಮುಂದೆಯೂ, ಭೌಗೋಲಿಕ ವ್ಯತ್ಯಾಸಗಳಿಗೆ ಪ್ರಾಮುಖ್ಯತೆ ಇದ್ದೇ ಇದೆ; ಆದರೆ ಈಗ ಇನ್ನು ಬೇರೆ ಕೆಲವು ಕಾರಣಗಳಿಗೆ ವಿಶೇಷ ಪ್ರಾಮುಖ್ಯತೆ ಬಂದಿದೆ. ಪರ್ವತಗಳು ಸಮುದ್ರಗಳು ಈಗ ಅಭೇದ್ಯ ರಕ್ಷಣೆಗಳಲ್ಲ, ಆದರೆ ಜನರ ಸ್ವಭಾವವನ್ನು, ದೇಶದ ಆರ್ಥಿಕ ಮತ್ತು ರಾಜಕೀಯ ಸ್ಥಾನವನ್ನು ನಿರ್ಧರಿಸುತ್ತವೆ. ವಿಚ್ಛೇದನ ವಿಭಜನೆ ಅಥವ ಸೇರ್ಪಡೆಯ ಹೊಸ ಯೋಜನೆ ಯೋಚಿಸುವಾಗ ಪ್ರಪಂಚದ ಸಮಗ್ರ ದೃಷ್ಟಿಯಿಂದ ಆ ಯೋಜನೆ ಇಟ್ಟುಕೊಳ್ಳಬೇಕು; ಮತ್ತು ಭೌಗೋಲಿಕ ವ್ಯತ್ಯಾಸಗಳನ್ನು ಲಕ್ಷಿಸಬೇಕು.

ಭಾರತದ ಮತ್ತು ಭಾರತೀಯರ ವಿಷಯದಲ್ಲಿ ಗಾಂಧಿಜಿಯ ಜ್ಞಾನ ಅದ್ಭುತವಾದುದು. ಇತಿಹಾಸದಲ್ಲಿ ಆಸಕ್ತಿ, ಇತಿಹಾಸದ ಅಭಿಮಾನ, ಇತರರಂತೆ ಐತಿಹಾಸಿಕ ದೃಷ್ಟಿ ಅವರಲ್ಲಿ ಇರದಿದ್ದರೂ, ಭಾರತೀಯರ ಐತಿಹಾಸಿಕ ಮೂಲ ಎಲ್ಲಿದೆ ಎಂದು ಅವರು ಸಂಪೂರ್ಣ ಅರಿತಿದಾರೆ. ಪ್ರಚಲಿತ ವಿಷಯವನ್ನು ಅವರು ಚೆನ್ನಾಗಿ ತಿಳಿದುಕೊಂಡು ಅವುಗಳ ಗತಿಯನ್ನು ಬಿಡದೆ ಸದಾ ಅವಲೋಕಿಸುತ್ತಿದ್ದಾರೆ. ಆದರೆ ಅವರ ಗಮನವೆಲ್ಲ ಭಾರತದ ಇಂದಿನ ಸಮಸ್ಯೆಗಳ ಕಡೆಗೇ ಹೆಚ್ಚು. ಒಂದು ಸಮಸ್ಯೆಯ ಅಥವ ಸನ್ನಿವೇಶದ ತಿರುಳು ಮಾತ್ರ ಗ್ರಹಿಸಿ ಜಳ್ಳು ತೂರುವ ಶಕ್ತಿ ಅವರಿಗೆ ಇದೆ. ಪ್ರತಿಯೊಂದು ಸಮಸ್ಯೆಯನ್ನೂ ನೈತಿಕ ದೃಷ್ಟಿಯಿಂದ ಅವರು ನಿರ್ಧರಿಸುವುದರಿಂದ ಅವರಿಗೆ ಒಂದು ಹಿಡಿತವೂ, ದೂರದೃಷ್ಟಿಯೂ ಇದೆ. ಗಾಂಧಿಜಿ ಅಚಾತುರ್ಯದಿಂದ ತಪ್ಪು ಬೇಕಾದಷ್ಟು ಮಾಡಬಹುದು, ಆದರೆ ಅವರ ಮುಖ್ಯ ಮಾರ್ಗ ಯಾವಾಗಲೂ ಸರಿ, ಎಂದು ಬರ್ನಾರ್ಡ್‌ಷಾ ಹೇಳಿದ್ದಾನೆ. ಅನೇಕರಿಗೆ ಆ ದೂರದ ಯೋಚನೆ ಬೇಕಿಲ್ಲ; ಅವರಿಗೆ ಬೇಕಾಗಿರುವುದು ಚಾತುರ್ಯದ ತಾತ್ಕಾಲಿಕ ಲಾಭ.

## ೮. ಭಾರತಕ್ಕೆ ಸರ್ ಸ್ಟಾಫರ್ಡ್ ಕ್ರಿಪ್ಸ್ ಆಗಮನ

ಪೆನಾಂಗ್ ಮತ್ತು ಸಿಂಗಪುರ ಆಕ್ರಮಿಸಿ ಜಪಾನರು ಮಲಯಾದಲ್ಲಿ ಮುಂದುವರಿಯುತ್ತ ಬಂದಂತೆ ಭಾರತೀಯರೂ ಮತ್ತು ಇತರರೂ ಅಲ್ಲಿಂದ ಕಾಲುಕಿತ್ತು ಭಾರತದೊಳಗೆ ನುಗ್ಗಲಾರಂಭಿಸಿದರು. ಮೈಮೇಲಿನ ಬಟ್ಟೆ ಬಿಟ್ಟು ಬೇರೆ ಏನನ್ನೂ ತರಲು ಅವರಿಗೆ ಅವಕಾಶವಾಗಲಿಲ್ಲ. ಅನಂತರ ಬರ್ಮದಿಂದ ಲಕ್ಷಗಟ್ಟಲೆ

ಜನರ, ಮುಖ್ಯವಾಗಿ ಹೆಚ್ಚು ಭಾರತೀಯ ನಿರಾಶ್ರಿತರ ಪ್ರವಾಹ ಆರಂಭವಾಯಿತು. ಆಡಳಿತವರ್ಗ ಮತ್ತು ಇತರ ಅಧಿಕಾರಿಗಳು ಅವರನ್ನು ಕೈಬಿಟ್ಟ ಕರುಣಾಜನಕ ಕಥೆಯೂ, ಭಾರತದಲ್ಲಿ ಅವರು ನೆಲೆ ಸಿಕ್ಕಿದಲ್ಲಿ ಹರಡಿಕೊಳ್ಳಬೇಕಾದ ಕಥೆಯೂ ಮನೆಮಾತಾದವು. ಅನೇಕರು ಪರ್ವತಗಳ ಗಿರಿಕಂದರಗಳಲ್ಲಿ, ಅಗಮ್ಯ ಅರಣ್ಯಗಳಲ್ಲಿ, ಶತ್ರುಗಳಿಂದ ಸುತ್ತುವರಿಯಲ್ಪಟ್ಟು, ಭಯದಿಂದಲೋ ದಾರಿಯಲ್ಲಿ ಚೂರಿಯ ಇರಿತ ದಿಂದಲೋ, ಹಸಿವಿನಿಂದಲೋ, ರೋಗಗಳಿಗೆ ತುತ್ತಾಗಿಯೋ ಸಾವುನೋವುಗಳಿಗೆ ಬಲಿಯಾಗಿ ಉಳಿದವರು ನೂರಾರು ಮೈಲುಗಳು ಕಾಲುನಡಗೆ ನಡೆದು ಭಾರತ ಸೇರಿದ್ದರು. ಯುದ್ಧದ ಪರಿಣಾಮವಾದ್ದರಿಂದ ಅದನ್ನು ಅನುಭವಿಸುವುದೂ ಅನಿವಾರ್ಯವಾಯಿತು. ಆದರೆ ಬ್ರಿಟಿಷ್ ನಿರಾಶ್ರಿತರಿಗೂ, ಭಾರತೀಯ ನಿರಾಶ್ರಿತರಿಗೂ ಭೇದ ಮಾಡಿದ್ದು ಯುದ್ಧವಲ್ಲ. ಬ್ರಿಟಿಷ್ ನಿರಾಶ್ರಿತರಿಗೆ ಅಧಿಕಾರಿಗಳು ಸಾಧ್ಯವಾದ ಎಲ್ಲ ರಕ್ಷಣೆ ಕೊಟ್ಟು ಅವರ ಪ್ರಯಾಣಕ್ಕೆ ಮತ್ತು ಸಹಾಯಕ್ಕೆ ಎಲ್ಲ ಏರ್ಪಾಡನ್ನೂ ಮಾಡಿದರು. ಬರ್ಮ್ಮದ ನಿರಾಶ್ರಿತರ ಠಾಣೆಯಿಂದ ಭಾರತಕ್ಕೆ ಎರಡು ದಾರಿಗಳಿದ್ದವು. ಸುಗಮವಾದ ದಾರಿ ಬ್ರಿಟಿಷರಿಗೂ ಯೂರೋಪಿಯನರಿಗೂ ಮೀಸಲಾಗಿ "ಶ್ವೇತಮಾರ್ಗ" ಎಂದು ಹೆಸರಾಯಿತು.

ಈ ವರ್ಣಭೇದ ಮತ್ತು ಸಂಕಟದ ದುರಂತ ಕಥೆಗಳು ನಮ್ಮ ಕಿವಿಗೂ ಮುಟ್ಟಿದವು. ಸತ್ತು ಕೆಟ್ಟು ಉಳಿದ ಜನರು ಭಾರತದ ಆದ್ಯಂತ ಹರಡಿಕೊಂಡು ಅವರ ದಾರುಣ ಕಥೆಗಳನ್ನು ಜನ ಸಾಮಾನ್ಯರಲ್ಲಿ ಹರಡಿದರು. ಭಾರತೀಯರ ಮನಸ್ಸು ಕಲಕಿ ತಲ್ಲಣಿಸಿತು.

ಯುದ್ಧ ಕಾಲದ ಬ್ರಿಟಿಷ್ ಮಂತ್ರಿ ಸಂಪುಟದ ಸಲಹೆಗಳನ್ನು ತೆಗೆದುಕೊಂಡು ಸರ್ ಸ್ಟಾಫರ್ಡ್ ಕ್ರಿಪ್ಸ್ ಭಾರತಕ್ಕೆ ಬಂದುದು ಇದೇ ಸಮಯದಲ್ಲಿ. ಕಳೆದ ಎರಡೂವರೆ ವರ್ಷಗಳಿಂದ ಈ ಸಲಹೆಗಳ ಮೇಲೆ ಪೂರ್ಣ ಚರ್ಚೆಯಾಗಿ ಈಗ ಅವು ಇತಿಹಾಸದ ಮಾತು ಆಗಿವೆ. ಆ ಸಲಹೆಗಳ ಸಂಬಂಧದಲ್ಲಿ ನಡೆದ ಸಂಧಾನಗಳಲ್ಲಿ ಪ್ರತ್ಯಕ್ಷ ಭಾಗವಹಿಸಿದ ನನಗೆ ಹೇಳಬೇಕಾದ ವಿವರಗಳನ್ನೆಲ್ಲ ಭವಿಷ್ಯಕ್ಕೆ ಬಿಡದೆ ಇಲ್ಲಿಯೇ ವಿವರಿಸುವದು ಬಹುಕಷ್ಟ. ಆಗ ಒದಗಿದ ಎಲ್ಲ ಮುಖ್ಯ ಸಮಸ್ಯೆಗಳೂ ವಿಷಯಗಳೂ ಜನರಿಗೆ ಸಂಪೂರ್ಣ ತಿಳಿದಿವೆ.

ನಾನು ಆ ಸಲಹೆ ಮೊಟ್ಟಮೊದಲು ಓದಿದೊಡನೆ ನನ್ನ ಮನಸ್ಸು ಪಾತಾಳಕ್ಕೆ ಇಳಿದುಹೋಯಿತು. ಸರ್ ಸ್ಟಾಫರ್ಡ್ ಕ್ರಿಪ್ಸ್‌ನಿಂದ ಮತ್ತು ಅಂದಿನ ಪರಿಸ್ಥಿತಿಯಿಂದ ಇನ್ನೂ ಹೆಚ್ಚು ಔದಾರ್ಯ ನಿರೀಕ್ಷಿಸಿದ್ದೆ. ಆ ಸಲಹೆ ಓದಿದಷ್ಟೂ, ಅವುಗಳ ಪರಿಣಾಮ ಯೋಚಿಸಿದಷ್ಟೂ ಜಿಗುಪ್ಸೆ ಇನ್ನೂ ಹೆಚ್ಚಾಯಿತು. ಭಾರತದ ಇತಿಹಾಸ ಅರಿಯದವನಿಗೆ ಆ ಸಲಹೆಗಳು ಬಹು ಉದಾರವೆಂದು ತೋರಬಹುದು. ಆದರೆ ಬಿಡಿಬಿಡಿಸಿ ನೋಡಿದಷ್ಟೂ ಅದರಲ್ಲಿ ತೊಡಕುಗಳೇ ಕಂಡವು. ಆತ್ಮ ನಿರ್ಣಯದ ಹಕ್ಕಿಗೆ ವಿಶೇಷ ನಿರ್ಬಂಧಗಳಿದ್ದ ಕಾರಣ ನಮ್ಮ ಭವಿಷ್ಯಕ್ಕೇ ಗಂಡಾಂತರವಿತ್ತು.

ಸಲಹೆಗಳೆಲ್ಲ ಯುದ್ಧಾನಂತರ ಭಾರತದ ಭವಿಷ್ಯವೇನು ಎಂಬ ಮುಖ್ಯ ವಿಷಯ ಇದ್ದವು; ಪ್ರಕೃತ ವಿಷಯದಲ್ಲಿ ಕೊನೆಯ ಒಂದು ವಾಕ್ಯದಲ್ಲಿ ಸಹಕಾರ ಮಾತ್ರ ಕೋರಲಾಗಿತ್ತು. ಆ ಭವಿಷ್ಯದಲ್ಲಿ ಆತ್ಮ ನಿರ್ಣಯದ ಅಧಿಕಾರ ಸಾರಿದ್ದರೂ ಭಾರತದ ಒಕ್ಕೂಟ ಸೇರದೆ ಪ್ರತ್ಯೇಕ ಸ್ವತಂತ್ರ ರಾಷ್ಟ್ರ ನಿರ್ಮಿಸಲು ಪ್ರಾಂತಗಳಿಗೆ ಸ್ವಾತಂತ್ರ್ಯ ಕೊಡಲಾಗಿತ್ತು. ಭಾರತದ ಒಕ್ಕೂಟಕ್ಕೆ ಸೇರದೆ ಇರಬಹುದಾದ ಈ ಸ್ವಾತಂತ್ರ್ಯ ದೇಶೀಯ ಸಂಸ್ಥಾನಗಳಿಗೂ ಲಭಿಸಿತು. ಭಾರತದಲ್ಲಿ ಆರುನೂರು ಸಂಸ್ಥಾನಗಳಿವೆ; ದೊಡ್ಡ ಕೆಲವನ್ನು ಬಿಟ್ಟರೆ ಉಳಿದವುಗಳೆಲ್ಲ ಭಾರತದ ಮಧ್ಯೆ ಹರಡಿರುವ ಸಣ್ಣ ಸಣ್ಣ ನಡುಗುಡ್ಡೆಗಳು. ಈ ಸಂಸ್ಥಾನಗಳು, ಪ್ರಾಂತಗಳು ಭಾರತ ಸಂವಿಧಾನ ರಚನೆಯಲ್ಲಿ ಮೊದಲು ಭಾಗವಹಿಸಿದರೂ ಆಮೇಲೆ ಅದರಿಂದ ಹೊರನಿಲ್ಲಬಹುದು. ಆರಂಭದ ಪೂರ್ಣ ಹಿನ್ನೆಲೆ ಎಲ್ಲ ಪ್ರತ್ಯೇಕ ಭಾವನೆಯ ಹಿನ್ನೆಲೆ. ದೇಶದ ನಿಜವಾದ ರಾಜಕೀಯ ಮತ್ತು ಆರ್ಥಿಕ ಪ್ರಶ್ನೆಗಳಿಗೆ ಎರಡನೆಯ ಸ್ಥಾನ. ತಮ್ಮತಮ್ಮಲ್ಲಿ ಭಿನ್ನಾಭಿಪ್ರಾಯವಿದ್ದರೂ, ಪ್ರತಿಗಾಮಿ ಶಕ್ತಿಗಳೆಲ್ಲ ಒಟ್ಟುಗೂಡಿ ಬಲಯುತ ಪ್ರಗತಿಪರ ರಾಷ್ಟ್ರೀಯ ಒಕ್ಕೂಟ ಸರಕಾರ ಸ್ಥಾಪನೆಗೆ ಅಡ್ಡಬರಲು ಅವಕಾಶವಿತ್ತು. ಸದಾ ಒಂದು ಕಾಲು ಹೊರಗಿಟ್ಟು ಹೆದರಿಸುತ್ತ, ಸಂವಿಧಾನದಲ್ಲಿ ಅನೇಕ ಅನಪೇಕ್ಷಣೀಯ ವಿಧಿಗಳನ್ನು ಒತ್ತಾಯದಿಂದ ಸೇರಿಸಿ, ಕೇಂದ್ರವನ್ನು ದುರ್ಬಲ

ಗೊಳಿಸಿ ಅಶಕ್ತಗೊಳಿಸಿ ಕೊನೆಗೂ ರಾಜ್ಯಾಂಗದಿಂದ ಹೊರಬೀಳಲು ಅವುಗಳಿಗೆ ಅವಕಾಶವಿತ್ತು; ಉಳಿದ ಪ್ರಾಂತ ಮತ್ತು ಸಂಸ್ಥಾನಗಳಿಗೆ ಹೆಚ್ಚು ಉಪಯುಕ್ತವಾಗುವಂತೆ ಪುನಃ ಆ ಸಂವಿಧಾನ ತಿದ್ದುವುದು ತುಂಬ ಕಷ್ಟವಿತ್ತು. ಸಂವಿಧಾನ ಸಭೆಗೆ ಪ್ರಾಂತ ಚುನಾವಣೆಯು ಕೋಮುವಾರು ಪದ್ಧತಿಯ ಪ್ರತ್ಯೇಕ ಚುನಾವಣೆಯಿಂದ ನಡೆಯಬೇಕಾಗಿತ್ತು. ಹಿಂದಿನ ಭಿನ್ನ ಭಾವನೆಗಳೆಲ್ಲ ಪುನಃ ಬೃಹದ್ರೂಪತಾಳಲು ಅವಕಾಶವಿತ್ತು; ಆದರೆ ಅಂದಿನ ಸ್ಥಿತಿಯಲ್ಲಿ ಅದು ಅನಿವಾರ್ಯವಿತ್ತು. ಸಂಸ್ಥಾನಗಳಲ್ಲಿ ಚುನಾವಣೆಗೆ ಯಾವ ಅವಕಾಶವನ್ನೂ ಕಲ್ಪಿಸಿರಲಿಲ್ಲ. ಒಂಭತ್ತು ಕೋಟಿ ಜನರನ್ನು ಕೇಳುವವರೇ ಇರಲಿಲ್ಲ. ಸಂಸ್ಥಾನಗಳ ನಿರಂಕುಶ ಅರಸರಿಗೆ ಪ್ರಜಾ ಸಂಖ್ಯೆಗೆ ಅನುಗುಣವಾಗಿ ತಮ್ಮ ಪ್ರತಿನಿಧಿಗಳನ್ನು ನಾಮಕರಣ ಮಾಡಲು ಅಧಿಕಾರ ಕೊಡಲಾಗಿತ್ತು. ಆಡಳಿತ ಅನುಭವ ಪಡೆದ ದಕ್ಷರಾದ ದಿವಾನರು ಕೆಲವರು ಅವರಲ್ಲಿ ಬರಬಹುದು. ಆದರೆ ಅವರೆಲ್ಲ ನಿರಂಕುಶ ಪಾಳೆಗಾರಿಕೆಯ ರಾಜರುಗಳ ಪ್ರತಿನಿಧಿಗಳೇ ಹೊರತು ಜನರ ಪ್ರತಿನಿಧಿಗಳಲ್ಲ. ಸಂವಿಧಾನ ಸಭೆಯ ಸದಸ್ಯ ಸಂಖ್ಯೆಯ ಕಾಲುಭಾಗವು ಸಂಖ್ಯಾಬಲದಿಂದ, ಪ್ರತಿಗಾಮಿ ಸಾಮಾಜಿಕ ದೃಷ್ಟಿಯಿಂದ ಮತ್ತು ಮುಂದೆ ಎಂದಾದರೂ ಹೊರಬೀಳಬಹುದೆಂಬ ಭಯದಿಂದ ಪ್ರಬಲ ಪರಿಣಾಮ ಮಾಡಲು ಅವಕಾಶವಿತ್ತು. ಸಂವಿಧಾನ ಸಭೆ ಚುನಾಯಿತ ಮತ್ತು ನಾಮಕರಣ ಸದಸ್ಯರ ಒಂದು ವಿಚಿತ್ರ ಕಲಸು ಮೇಲೋಗರವಾಗುತ್ತಿತ್ತು. ಚುನಾವಣೆ ಎಲ್ಲ ಪ್ರತ್ಯೇಕ ಚುನಾವಣಾ ಪದ್ಧತಿಯಿಂದ ಮತ್ತು ಕೆಲವು ಪಟ್ಟಾಧಿಕಾರಿಗಳಿಂದ. ನಾಮಕರಣವೆಲ್ಲ ಸಂಸ್ಥಾನಗಳ ಅರಸರಿಂದ. ಇದರ ಜೊತೆಗೆ ಒಮ್ಮತದಿಂದ ಮಾಡಿದ ತೀರ್ಮಾನವನ್ನು ಒಪ್ಪಲೇ ಬೇಕೆಂದು ಒತ್ತಾಯಪಡಿಸುವಂತೆ ಇರಲಿಲ್ಲ. ಒಮ್ಮತದ ಅಂತಿಮ ನಿರ್ಧಾರವಾಯಿತು ಎಂಬ ಮನೋತೃಪ್ತಿಗೆ ಅವಕಾಶವೇ ಇರಲಿಲ್ಲ. ಯಾವಾಗ ಬೇಕಾದರೂ ಹೊರಬೀಳಲು ಅವಕಾಶವಿದ್ದುದರಿಂದ, ತೀರ್ಮಾನ ಆಚರಣೆಗೆ ತರಲು ಯಾವ ನಿರ್ಬಂಧವೂ ಇಲ್ಲದ್ದರಿಂದ, ಸದಸ್ಯರನೇಕರು ಬೇಜವಾಬ್ದಾರಿಯಿಂದ ವರ್ತಿಸಲು ಆಸ್ಪದವಿತ್ತು.

ಭಾರತವನ್ನು ಬೇರೆ ಬೇರೆ ತುಂಡುಮಾಡುವ ಯಾವ ಸಲಹೆ ಎಂದರೂ ಯೋಚಿಸಲು ಬಹು ಸಂಕಟವಾಗುತ್ತಿತ್ತು. ಇದುವರೆಗೆ ಅದ್ಭುತ ಪರಿಣಾಮ ಮಾಡಿ ಜನಹೃದಯ ಸೂರೆಗೊಂಡಿದ್ದ ನಮ್ಮ ಎಲ್ಲ ಭಾವನೆ ಮತ್ತು ಸಂಕಲ್ಪಗಳಿಗೆ ಅದು ವಿರುದ್ಧವಿತ್ತು. ಭಾರತ ರಾಷ್ಟ್ರೀಯ ಚಳುವಳಿಯನ್ನು ಕಟ್ಟಿದ್ದು ಸಂಪೂರ್ಣ ಭಾರತದ ಐಕ್ಯತೆಯ ತಳಹದಿಯ ಮೇಲೆ. ಆದರೆ ಆ ಐಕ್ಯಭಾವನೆ ಈಗಿನ ರಾಷ್ಟ್ರೀಯ ಭಾವನೆಗಿಂತ ತುಂಬ ಪುರಾತನವಾದುದು ಮತ್ತು ಆಳವಾದುದು. ಭಾರತೀಯ ಇತಿಹಾಸದ ಮುಂಬೆಳಗಿನ ದಿನಗಳಿಂದ ಆ ಭಾವನೆ ಇದೆ. ಆ ಭಾವನೆ ಮತ್ತು ನಂಬಿಕೆಗಳಿಗೆ ಈಚಿನ ಘಟನೆಗಳ ಸಮರ್ಥನೆ ದೊರತಿದೆ ಮತ್ತು ಅನೇಕರಿಗೆ ಒಂದು ಜೀವನ ತತ್ವವಾಗಿ ಬಿಟ್ಟದೆ. ಅವರ ನಿಲುವಿನಿಂದ ಕದಲಿಸುವಂತೆಯೂ ಇಲ್ಲ; ಅವರನ್ನು ಪ್ರಶ್ನಿಸುವಂತೆಯೂ ಇಲ್ಲ. ಮುಸ್ಲಿಂ ಲೀಗ್‌ನಿಂದ ಆ ಒಂದು ಸವಾಲು ಬಂದಿತ್ತು; ಆದರೆ ಯಾರೂ ಅದನ್ನು ವಿಶೇಷ ಮನಸ್ಸಿಗೆ ಹಚ್ಚಿಕೊಳ್ಳಲಿಲ್ಲ. ಅನೇಕ ಮುಸ್ಲಿಮರು ಸಹ ಆ ಸಲಹೆ ವಿರೋಧಿಸಿದರು. ರಾಷ್ಟ್ರ ವಿಭಜನೆಯಾಗಬೇಕೆಂದು ಅಸ್ಪಷ್ಟ ಹೇಳಿದರೂ, ಆ ಸಲಹೆಯ ಮೂಲ ರಾಷ್ಟ್ರ ವಿಭಜನೆಯಲ್ಲ; ಧರ್ಮ ಭಿನ್ನತೆಯಿಂದ ಬೇರೆ ಬೇರೆ ಜನಾಂಗಗಳು ಎಂಬ ಮಧ್ಯಯುಗದ ಭಾವನೆಯೇ ಅದರ ತಳಹದಿಯಾಗಿತ್ತು. ಆದ್ದರಿಂದ ಭಾರತದ ಪ್ರತಿಯೊಂದು ಹಳ್ಳಿಯಲ್ಲೂ ಎರಡು ಮೂರು ಜನಾಂಗಗಳಾಗಬೇಕಾಯಿತು. ಭಾರತ ವಿಭಜನೆಯಾದರೂ ದೇಶಾದ್ಯಂತ ಹರಡಿ ಹೆಣೆದುಕೊಂಡಿದ್ದ ಈ ಧರ್ಮ ಭಿನ್ನತೆಯನ್ನು ನಾಶಮಾಡಲು ಸಾಧ್ಯವಿರಲಿಲ್ಲ. ಯಾವ ಸಮಸ್ಯೆಯ ಪರಿಹಾರಕ್ಕೆಂದು ವಿಭಜನೆ ಸೂಚಿಸಲಾಗಿತ್ತೊ ಆ ಸಮಸ್ಯೆ ಇನ್ನೂ ಕಠಿನವೂ, ಜಟಿಲವೂ ಆಗುವಂತೆ ಇತ್ತು.

ಕೇವಲ ಭಾವನಾತಿರೇಕ ಮಾತ್ರವಲ್ಲದೆ ವಿಭಜನಾ ಸಲಹೆ ವಿರೋಧಿಸಲು ಇತರ ಪ್ರಬಲ ಕಾರಣಗಳೂ ಇದ್ದವು. ಮುಖ್ಯವಾಗಿ ಬ್ರಿಟಿಷ್ ಸರಕಾರದ ಆಡಳಿತ ನೀತಿಯ ಫಲವಾಗಿ ಭಾರತದ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿ ವಿಷಮಾವಸ್ಥೆ ಮುಟ್ಟಿತ್ತು; ಅತಿ ಶೀಘ್ರದಲ್ಲಿ ಸರ್ವತೋಮುಖ ಪ್ರಗತಿ ಸಾಧಿಸದಿದ್ದರೆ ಭಯಂಕರ ಪರಿಣಾಮಗಳು ಕಾದಿದ್ದವು. ಭಾರತದ ವಿವಿಧ ಭಾಗಗಳು ಒಂದರ ಕೊರತೆಯನ್ನೊಂದು ನಿವಾರಿಸುತ್ತಿದ್ದುದರಿಂದ ಆ ಪ್ರಗತಿ ಸಾಧನೆಗಾಗಿ ಸಮಗ್ರ ಭಾರತಕ್ಕೆ ಒಂದು ಯೋಜನೆಯೂ

ಅತ್ಯವಶ್ಯವಿತ್ತು. ಒಟ್ಟಿನಲ್ಲಿ ಭಾರತವು ಸ್ವಸಂಪೂರ್ಣವೂ, ಶಕ್ತಿ ಸಾಮರ್ಥ್ಯವುಳ್ಳದ್ದೂ ಆಗಿತ್ತು, ಆದರೆ ವಿಭಜನೆ ಎಂದರೆ ಒಂದೊಂದು ಭಾಗವೂ ಪ್ರತ್ಯೇಕವಾಗಿ ದುರ್ಬಲವೂ, ಪರಾವಲಂಬಿಯೂ ಆಗುತ್ತಿತ್ತು. ಈ ಎಲ್ಲ ಕಾರಣಗಳು ಹಿಂದಿನ ಕಾಲದಲ್ಲಿಯೇ ಯೋಗ್ಯವೂ ಸೂಕ್ತವೂ ಕಂಡಿದ್ದರೆ ಇಂದಿನ ರಾಜಕೀಯ ಮತ್ತು ಆರ್ಥಿಕ ಪರಿಸ್ಥಿತಿಯಲ್ಲಿ ಅವುಗಳಿಗೆ ಇನ್ನೂ ಹೆಚ್ಚು ಬೆಲೆಯೂ, ಪ್ರಾಮುಖ್ಯತೆಯೂ ಇದೆ. ಎಲ್ಲಿ ನೋಡಿದರೂ ಸಣ್ಣ ರಾಜ್ಯಗಳು ತಮ್ಮ ಸ್ವತಂತ್ರ ಅಸ್ತಿತ್ವ ಕಳೆದುಕೊಂಡು ದೊಡ್ಡ ರಾಷ್ಟ್ರಗಳೊಡನೆ ಮಿಳಿತ ವಾಗುತ್ತಿವೆ. ಅಥವ ಅದರ ಅರ್ಥಿಕ ನೀತಿಗೆ ಹೊಂದಿಕೊಳ್ಳುತ್ತಿವೆ. ಅನೇಕ ಪ್ರಬಲ ರಾಜ್ಯಗಳು ಏಕೀಭವಿಸಿ ವಿಶಾಲ ಸಂಯುಕ್ತ ರಾಜ್ಯ ಸ್ಥಾಪನೆಗೆ ಅಥವ ರಾಜ್ಯ ಸಮೂಹ ಸ್ಥಾಪನೆಗೆ ಹೆಚ್ಚು ಬೆಂಬಲ ಕೊಡುತ್ತಿವೆ. ರಾಷ್ಟ್ರೀಯ ರಾಜ್ಯಗಳ ಬದಲು ಬಹು ರಾಷ್ಟ್ರೀಯ ರಾಜ್ಯಕ್ಕೂ, ಬಹುದೂರ ಕಂಡರೂ ಪ್ರಪಂಚಕ್ಕೆಲ್ಲ ಒಂದು ಸಂಯುಕ್ತ ರಾಜ್ಯಾಂಗ ಆಡಳಿತ ಅವಶ್ಯವೆಂಬ ಭಾವನೆಗೂ ಪ್ರೋತ್ಸಾಹ ದೊರೆಯುತ್ತಿದೆ. ಈ ಸಮಯದಲ್ಲಿ ಭಾರತದ ವಿಭಜನೆ ಎಂದರೆ ಆಧುನಿಕ ಇತಿಹಾಸ ಮತ್ತು ಆರ್ಥಿಕ ನೀತಿಗಳ ಪ್ರಗತಿಗೆ ವಿರೋಧ ನಡೆಯುವಂತೆ ಕಂಡಿತು; ಕಡುಮೂರ್ಖತನವೆಂದು ತೋರಿತು.

ಆದರೂ ಅನಿರ್ವಾಹ ಸಂದರ್ಭದ ಅವಸರದಲ್ಲಿ, ಎದುರಿನ ಯಾವುದೋ ವಿಪತ್ತಿನ ಒತ್ತಾಯದಿಂದ ಇಷ್ಟವಿಲ್ಲದ ಅನೇಕ ಕಾರ್ಯಗಳಿಗೆ ಒಪ್ಪಬೇಕಾಗುತ್ತದೆ. ವಿಭಜನೆಯು ಸಕಾರಣವಾಗಿ ಮತ್ತು ಸಾಮಾನ್ಯ ವಾಗಿ ಸಾಧುವಲ್ಲದಿದ್ದರೂ ಅದರಿಂದ ತಪ್ಪಿಸಿಕೊಳ್ಳಲಾಗದ ಸಂದರ್ಭ ಒದಗಿದರೂ ಒದಗಬಹುದು. ಬ್ರಿಟಿಷ್ ಸರಕಾರದ ಪರ ಮುಂದಿಟ್ಟ ಸಲಹೆಗಳಲ್ಲಿ ಭಾರತ ವಿಭಜನೆಯ ಯಾವ ನಿರ್ದಿಷ್ಟ ನಿಖರ ಸೂಚ ನೆಯೂ ಇರಲಿಲ್ಲ ನಿಜ. ಆದರೆ ಪ್ರಾಂತಗಳನ್ನೂ ಸಂಸ್ಥಾನಗಳನ್ನೂ ಅಸಂಖ್ಯಾತ ಭಾಗಗಳಾಗಿ ವಿಭಜಿ ಸಲು ಅವಕಾಶ ಮಾಡಿಕೊಟ್ಟಿದ್ದರು. ಎಲ್ಲ ಪ್ರತಿಗಾಮಿ, ಪಾಳೆಗಾರಿಕೆ ಮತ್ತು ಸಮಾಜದ ಹಿಂದುಳಿದ ಪಂಗಡಗಳಿಗೆ ಒಂದು ಸದವಕಾಶ ದೊರೆಯಿತು. ಪ್ರತ್ಯೇಕ ಬಾಳಲು ಶಕ್ತಿಯೇ ಇಲ್ಲದ್ದರಿಂದ ಪ್ರಾಯಶಃ ಯಾರಿಗೂ ಅದು ನಿಜವಾಗಿ ಬೇಕಾಗಿರಲಿಲ್ಲ. ಆದರೆ ಬೇಕಾದಷ್ಟು ತೊಂದರೆ ಕೊಟ್ಟು, ಅಡ್ಡಬಂದು ಸ್ವತಂತ್ರ ಭಾರತದ ರಾಜ್ಯ ಸ್ಥಾಪನೆ ಮುಂದೆ ತಳ್ಳಲು ಅವಕಾಶವಿತ್ತು. ಇದಕ್ಕೆ ಬ್ರಿಟಿಷರ ಬೆಂಬಲ ದೊರೆತರೆ ಭಾರತದ ಸ್ವಾತಂತ್ರ್ಯವು ದೀರ್ಘಕಾಲ ಅಸಾಧ್ಯವೆಂದು ಶತಸಿದ್ಧವಿತ್ತು. ಈ ನೀತಿಯ ಅನುಭವದ ಕಹಿ ನಾವು ಬೇಕಾದಷ್ಟು ಸವಿದಿದ್ದೆವು. ಪ್ರತಿಯೊಂದು ಹೆಜ್ಜೆಗೂ ಅಂತಃಕಲಹ ಹುಟ್ಟಿಸುವುದೇ ಅದರ ಗುರಿಯಾಗಿತ್ತು. ಮುಂದೆಯೂ ಅವರು ಈ ನೀತಿ ಅನುಸರಿಸುವುದಿಲ್ಲವೆನ್ನುವುದಕ್ಕೂ, ಅನೇಕ ಮುಖ್ಯ ವಿಧಿಗಳನ್ನು ಮುರಿದು ಇದ್ದ ಕಾರಣ ಕೊಟ್ಟ ವಾಗ್ದಾನ ನಡೆಸಲು ಅಸಾಧ್ಯವೆಂದು ನೆಪ ಹೇಳುವುದಿಲ್ಲ ವೆಂಬುದಕ್ಕೂ ಭರವಸೆ ಏನು ? ನಿಜವಾಗಿ ನೋಡಿದರೆ ಈ ನೀತಿ ಮುಂದುವರಿಯುವ ಸಂಭವವೇ ಹೆಚ್ಚು ಇತ್ತು.

ಆದ್ದರಿಂದ ಆ ಸಲಹೆ ಒಪ್ಪುವುದೆಂದರೆ ಅದು ಎಷ್ಟೇ ಅನಪೇಕ್ಷಣೀಯವಿರಲಿ ಪಾಕಿಸ್ತಾನವೊ ಅಥವ ಬೇರೆ ಯಾವುದೋ ಒಂದು ನಿರ್ದಿಷ್ಟ ವಿಭಜನೆ ಮಾತ್ರ ಒಪ್ಪಿದಂತಲ್ಲ; ಆದರೆ ಇನ್ನೂ ಕೇಡು ಅಸಂಖ್ಯಾತ ವಿಭಜನೆಗೆ ದಾರಿ ಮಾಡಿಕೊಟ್ಟಂತೆ ಆಗುತ್ತಿತ್ತು; ಭಾರತದ ಸ್ವಾತಂತ್ರ್ಯಕ್ಕೆ ಸದಾ ವಿಪತ್ಕಾರಕವಿತ್ತು ಮತ್ತು ಯಾವ ಭಾವನೆ ಆ ಸಲಹೆಯಲ್ಲಿತ್ತೋ ಆ ಭರವಸೆಯ ಪೂರೈಕೆಗೆ ನಾವೇ ಅಡ್ಡಗೋಡೆ ಹಾಕಿದಂತೆ ಆಗುತ್ತಿತ್ತು.

ದೇಶೀಯ ಸಂಸ್ಥಾನಗಳ ಭವಿಷ್ಯ ನಿರ್ಧಾರವನ್ನು ಆ ಸಂಸ್ಥಾನಗಳ ಪ್ರಜೆಗಳ ಅಥವ ಅವರ ಪ್ರತಿ ನಿಧಿಗಳ ಕೈಗೆ ಕೊಡದೆ ನಿರಂಕುಶಾಧಿಕಾರದ ರಾಜರುಗಳ ಕೈಗೆ ಕೊಡಲಾಗಿತ್ತು. ಈ ನೀತಿ ಒಪ್ಪುವು ದೆಂದರೆ ಮೇಲಿಂದ ಮೇಲೆ ದೀರ್ಘಕಾಲದಿಂದ ಕಾಂಗ್ರೆಸ್ ಸಾರಿದ ನೀತಿ ಕೈ ಬಿಟ್ಟು ಸಂಸ್ಥಾನಗಳ ಜನರಿಗೆ ದ್ರೋಹಮಾಡಿದಂತಾಗುತ್ತಿತ್ತು; ಮತ್ತು ದೀರ್ಘಕಾಲ ಅವರನ್ನು ನಿರಂಕುಶಾಧಿಕಾರದ ದಾಸ್ಯಕ್ಕೆ ತಳ್ಳಿದಂತೆ ಆಗುತ್ತಿತ್ತು. ಪ್ರಜಾಪ್ರಭುತ್ವ ಸ್ಥಾಪನೆಯಲ್ಲಿ ರಾಜರುಗಳ ಸಹಕಾರ ಪಡೆಯಲು ಅವರೊಂದಿಗೆ ಸೌಮ್ಯ ರೀತಿಯಿಂದ ವ್ಯವಹರಿಸಲು ಸಿದ್ಧರಿದ್ದೆವು. ಮೂರನೆಯ ಮಾರ್ಜಾಲ ಶಕ್ತಿಯಂತಿದ್ದ ಬ್ರಿಟಿಷ್ ಅಧಿಕಾರ ವಿರದಿದ್ದರೆ ನಾವು ಖಂಡಿತ ಕೃತಕೃತ್ಯರಾಗುತ್ತಿದ್ದೆವು. ಆದರೆ ಬ್ರಿಟಿಷರು ಸಂಸ್ಥಾನಗಳ ನಿರಂಕುಶಾಧಿ

ಕಾರಕ್ಕೆ ಪ್ರೋತ್ಸಾಹ ಕೊಡುತ್ತಿರುವಾಗ ರಾಜರುಗಳು ಭಾರತ ಒಕ್ಕೂಟದಿಂದ ದೂರ ನಿಲ್ಲುವ ಸಂಭವವೇ ಹೆಚ್ಚು ಇತ್ತು; ತಮ್ಮ ಪ್ರಜೆಗಳನ್ನು ಮಟ್ಟ ಹಾಕಲು ಬ್ರಿಟಿಷ್ ಸೈನ್ಯವನ್ನೇ ನೆಚ್ಚಿಕೊಳ್ಳುವ ಸಂಭವವಿತ್ತು. ಅವಶ್ಯ ಬಿದ್ದರೆ ಬ್ರಿಟಿಷ್ ಸೈನ್ಯಪಡೆಗಳನ್ನು ದೇಶೀಯ ಸಂಸ್ಥಾನಗಳಲ್ಲಿ ಇಡಲು ಸಿದ್ಧರಿರುವುದಾಗಿ ಸಹ ನಮಗೆ ತಿಳಿದು ಬಂದಿತ್ತು. ಈ ಸಂಸ್ಥಾನಗಳೆಲ್ಲ ಭಾರತ ಒಕ್ಕೂಟದ ಚೌಕಟ್ಟಿನಲ್ಲಿ ನಡುಗಡ್ಡೆಗಳಾಗಿ ಇದ್ದುದರಿಂದ ಒಂದು ದೇಶೀಯ ಸಂಸ್ಥಾನದಲ್ಲಿನ ವಿದೇಶೀ ಸೈನ್ಯ ಇನ್ನೊಂದು ಸಂಸ್ಥಾನದೊಳಗಿನ ಸೈನ್ಯ ದೊಡನೆ ವ್ಯವಹರಿಸುವುದು ಹೇಗೆ, ಅವರೊಂದಿಗೆ ಸಂಪರ್ಕ ಹೇಗೆ ಎಂಬ ಪ್ರಶ್ನೆ ಸಹ ಎದ್ದಿತ್ತು. ಭಾರತ ಒಕ್ಕೂಟದ ಆವರಣದಲ್ಲಿ ವಿದೇಶೀ ಸೈನ್ಯ ಚಲನೆಗೆ ಒಂದು ಹಕ್ಕು ಬೇಕೆನ್ನುವ ಪ್ರಶ್ನೆ ಉದ್ಭವಿಸಿತ್ತು!

ರಾಜರು ತಮಗೆ ಶತ್ರುಗಳಲ್ಲ ಎಂದು ಗಾಂಧಿಜಿ ಪದೇ ಪದೇ ಸಾರಿದ್ದರು. ರಾಜರ ಆಡಳಿತ ನೀತಿ ಯನ್ನೂ, ಪ್ರಜೆಗಳ ಸಾಮಾನ್ಯ ಮೂಲಭೂತ ಹಕ್ಕುಗಳಿಗೆ ಇರುವ ಲೋಪವನ್ನೂ ಗಾಂಧಿಜಿ ಉಗ್ರ ಟೀಕಿ ಸಿದ್ದರೂ ಗಾಂಧಿಜಿ ಯಾವಾಗಲೂ ಅವರಿಗೆ ತುಂಬ ಸ್ನೇಹಪರರಿದ್ದರು. ಸಂಸ್ಥಾನಗಳ ಜನರೇ ಸ್ವಯಂ ಪ್ರೇರಿತರಾಗಿ ಆತ್ಮವಿಶ್ವಾಸವನ್ನೂ ಶಕ್ತಿಯನ್ನೂ ಬೆಳೆಸಿಕೊಂಡು ತಮ್ಮ ಕಾಲಮೇಲೆ ತಾವು ನಿಲ್ಲುವುದು ಉತ್ತಮವೆಂದು ಅವರು ನಂಬಿದ್ದರಿಂದ ಕಾಂಗ್ರೆಸ್ಸು ಪ್ರತ್ಯಕ್ಷವಾಗಿ ಸಂಸ್ಥಾನಗಳ ವಿಷಯದಲ್ಲಿ ಪ್ರವೇಶಿಸ ಬಾರದೆಂದು ಅನೇಕ ವರ್ಷ ಕಾಂಗ್ರೆಸ್ಸನ್ನು ತಡೆದರು. ಈ ಅವರ ನೀತಿ ನಮ್ಮಲ್ಲಿ ಅನೇಕರಿಗೆ ಸರಿಬೀಳ ಲಿಲ್ಲ. ಆದರೆ ಆ ನೀತಿಯ ಹಿಂದೆ ಒಂದು ದೊಡ್ಡ ತತ್ವವಿತ್ತು. "ಬ್ರಿಟಿಷ್ ಭಾರತದ ಸ್ವಾತಂತ್ರ್ಯ ಕ್ಕಾಗಿ ಸಂಸ್ಥಾನಗಳ ಹಕ್ಕು ಮಾರುವ ಯಾವ ಪ್ರಯತ್ನದಲ್ಲೂ ತಾವು ಭಾಗಿಗಳಾಗಬಾರದೆಂದು" ಅನೇಕ ಬಾರಿ ಹೇಳಿದ್ದರು. ಕಾಮನ್‌ವೆಲ್ತ್ ಮತ್ತು ಭಾರತ ರಾಜ್ಯಶಾಸನ ವಿಷಯಗಳಲ್ಲಿ ಮಹಾ ವಿದ್ವಾಂಸನಾದ ಪ್ರೊಫೆಸರ್ ಬೆರಿಡೇಲ್‌ಕೀತ್ ಗಾಂಧಿಜಿಯ ಅಂದರೆ ಕಾಂಗ್ರೆಸ್ಸಿನ ಈ ಅಭಿಪ್ರಾಯ ಸಮರ್ಥಿಸಿದನು. "ಪ್ರಾಂತ ಭಾರತೀಯರಿಗೆ ದೊರೆಯುವ ರಾಜಕೀಯ ಸ್ವಾತಂತ್ರ್ಯವನ್ನು ದೇಶೀಯ ಸಂಸ್ಥಾನಗಳ ಪ್ರಜೆ ಗಳಿಗೆ ಕೊಡಲಾಗದೆಂದು ಬ್ರಿಟಿಷ್ ಸಲಹೆಗಾರರು ವಾದಮಾಡಲು ಸಾಧ್ಯವೇಇಲ್ಲ. ಪ್ರಜಾ ಸರಕಾರ ಸ್ಥಾಪ ನೆಗೆ ಅವಶ್ಯವಾದ ರಾಜಕೀಯ ಸುಧಾರಣೆಗಳನ್ನು, ಆದಷ್ಟು ಬೇಗ ಆಚರಣೆಗೆ ತರಲು ರಾಜರಿಗೆ ನಿರೂಪ ಕೊಡಲು ಬ್ರಿಟಿಷ್ ದೊರೆಗೆ ಸಲಹೆ ಮಾಡಬೇಕಾದ್ದು ಅವರ ಕರ್ತವ್ಯ. ಪ್ರಾಂತ ಪ್ರತಿನಿಧಿಗಳು ಬೇಜವಾ ಬ್ದಾರಿಯುತ ರಾಜರು ನಾಮಕರಣ ಮಾಡಿದ ಸದಸ್ಯರ ಜೊತೆ ಕುಳಿತು ರಚಿಸಿದ ಸಂಯುಕ್ತ ರಾಜ್ಯ ಪದ್ಧತಿ ಯಿಂದ ಭಾರತಕ್ಕೆ ಯಾವ ಪ್ರಯೋಜನವೂ ಇಲ್ಲ. ಬ್ರಿಟಿಷ್ ದೊರೆ ಬ್ರಿಟಿಷ್ ಭಾರತದ ಪ್ರಜೆಗಳಿಗೆ ಅಧಿ ಕಾರ ವಹಿಸಿಕೊಟ್ಟಂತೆ ರಾಜರು ತಮ್ಮ ಪ್ರಜೆಗಳ ಪ್ರತಿನಿಧಿಗಳಿಗೆ ಅಧಿಕಾರ ವಹಿಸಿಕೊಡಬೇಕು ಎಂಬ ಗಾಂಧಿಜಿಯ ವಾದಕ್ಕೆ ಉತ್ತರ ಹೇಳಲು ಸಾಧ್ಯವಿಲ್ಲ." ಎಂದು ಆತನು ಹೇಳಿದ್ದಾನೆ. ಬ್ರಿಟಿಷ್ ಸರಕಾರ ೧೯೩೫ ರಲ್ಲಿ ಸಂಯುಕ್ತ ರಾಜ್ಯಾಂಗ ವ್ಯವಸ್ಥೆ ಸಲಹೆ ಮಾಡಿದಾಗಲೇ ಕೀತ್ ಈ ಅಭಿಪ್ರಾಯ ಕೊಟ್ಟನು. ಸರ್ ಸ್ಟಾಫರ್ಡ್ ಕ್ರಿಪ್ಸ್ ಸಲಹೆಗಳಿಗೆ ಅದು ಇನ್ನೂ ಚೆನ್ನಾಗಿ ಅನ್ವಯಿಸುತ್ತದೆ.

ಈ ಸಲಹೆಗಳು ಯೋಚಿಸಿದಷ್ಟೂ ಹೆಚ್ಚು ವಿಚಿತ್ರ ಕಂಡವು. ಭಾರತಕ್ಕೆ ನೆಪಮಾತ್ರ ಅಥವ ಅರೆ ಬರೆ ಸ್ವಾತಂತ್ರ ಮಾತ್ರ ಸಾಧ್ಯವಿತ್ತು; ಮತ್ತು ತಮ್ಮ ನಿರಂಕುಶಾಧಿಕಾರ ರಕ್ಷಣೆಗೆ ಬ್ರಿಟಿಷ್ ಸೈನ್ಯದ ಸಹಾಯವನ್ನೇ ಸದಾ ಆಶ್ರಯಿಸಿರಬೇಕಾದ ಅಸಂಖ್ಯಾತ ಸಣ್ಣಪುಟ್ಟ ಸಂಸ್ಥಾನಗಳ ಚದುರಂಗವಾಗು ತ್ತಿತ್ತು. ರಾಜಕೀಯ ಅಥವ ಆರ್ಥಿಕ ಐಕ್ಯತೆ ಸಾಧ್ಯವಿರಲಿಲ್ಲ. ತನ್ನ ಅಧೀನದ ಸಣ್ಣಪುಟ್ಟ ಸಂಸ್ಥಾನ ಗಳ ಮೂಲಕ ರಾಜಕೀಯ ಮತ್ತು ಆರ್ಥಿಕ ನೀತಿ ಎರಡರಲ್ಲೂ ಬ್ರಿಟನ್ನಿನ ಪರಮಾಧಿಕಾರವು ಚ್ಯುತಿ ಯಿಲ್ಲದೆ ಮುಂದುವರಿಯಲು ಅವಕಾಶವಿತ್ತು. ಬ್ರಿಟನ್ನಿನ ಯುದ್ಧ ಮಂತ್ರಿಮಂಡಲ ಭವಿಷ್ಯದ ಯಾವ ಚಿತ್ರವನ್ನು ಕಲ್ಪಿಸಿಕೊಂಡಿತ್ತೊ ನಾನರಿಯೆ. ಸರ್ ಸ್ಟಾಫರ್ಡ್ ಕ್ರಿಪ್ಸ್ ಭಾರತದ ಸ್ನೇಹಿತನೆಂದೂ, ಭಾರತವೂ ಅಖಂಡವಿದ್ದು ಸ್ವತಂತ್ರವಾಗಬೇಕೆಂದು ಇರಾದೆಯುಳ್ಳವನೆಂದೂ ಭಾವಿಸಿದ್ದೆ. ಆದರೆ ವೈಯಕ್ತಿಕ ದೃಷ್ಟಿ, ಅಭಿಪ್ರಾಯ ಅಥವ ಸೌಜನ್ಯತೆಯ ಪ್ರಶ್ನೆಗಳಿಗೆ ಇದರಲ್ಲಿ ಅವಕಾಶ ಇರಲಿಲ್ಲ. ಉದ್ದೇಶ್ಯಪಟ್ಟು ಬಹಳ ಎಚ್ಚರಿಕೆಯಿಂದ ಅನುಮಾನಾಸ್ಪದ ಮಾತು ಜೋಡಿಸಿ ಸಿದ್ಧಮಾಡಿದ ಒಂದು ಹೊಸ ರಾಜ್ಯ ಸಲಹೆಯನ್ನು ನಾವು ಯೋಚಿಸಬೇಕಾಗಿತ್ತು; ಒಪ್ಪಿದರೆ ಪೂರ್ತಿ ಒಪ್ಪಬೇಕು, ಇಲ್ಲ,

ತಿರಸ್ಕರಿಸಬೇಕು. ಆದರೆ ಅದರ ಹಿಂದೆ ಶತಮಾನಗಳಿಂದ ಭಾರತದಲ್ಲಿ ಒಡಕುಹುಟ್ಟಿಸಿ, ಭಾರತದ ಸ್ವಾತಂತ್ರ್ಯ ಮತ್ತು ರಾಷ್ಟ್ರೀಯ ಭಾವನೆಯ ಬೆಳೆವಣಿಗೆಯನ್ನು ವಿರೋಧಿಸಿದ ಶಕ್ತಿಗಳಿಗೆ ಪ್ರೋತ್ಸಾಹ ಕೊಡುತ್ತಿದ್ದ ಬ್ರಿಟಿಷರ ಕುತಂತ್ರವೇ ಎದ್ದು ಕಾಣುತ್ತಿತ್ತು. ಈ ಮೊದಲು ನಾವು ಮುಂದಿಟ್ಟ ಪ್ರತಿ ಹೆಜ್ಜೆಗೂ ಅನೇಕ ನಿರ್ಬಂಧಗಳನ್ನು ಕಲ್ಪಿಸಲಾಗಿತ್ತು; ಆರಂಭದಲ್ಲಿ ಅವು ಸಾಧುವೆಂದು ಕಂಡರೂ ಅಂತ್ಯದಲ್ಲಿ ಸಹಿಸಲಸಾಧ್ಯ ಶೂಲಗಳಾಗಿದ್ದವು.

ಈ ಸಲಹೆಗಳಲ್ಲಿ ನಾವು ಊಹಿಸಿದ ಅನಿಷ್ಟ ಪರಿಣಾಮಗಳು ಪ್ರಾಯಶಃ ಬಾರದೆ ಇರಬಹುದು. ಬುದ್ಧಿವಂತಿಕೆ, ದೇಶಾಭಿಮಾನ, ಪ್ರಪಂಚಕ್ಕೂ ಭಾರತಕ್ಕೂ ಯಾವುದು ಹಿತ ಎಂಬ ಉದಾರ ವಿವೇಚನಾ ದೃಷ್ಟಿಯು ರಾಜರುಗಳಲ್ಲೂ ಅವರ ಸಚಿವರಲ್ಲೂ, ಅನೇಕರಲ್ಲಿ ಸಾಧ್ಯವಿತ್ತು. ನಮ್ಮ ಪಾಡಿಗೆ ನಮ್ಮನ್ನು ಬಿಟ್ಟಿದ್ದರೆ ಧೈರ್ಯದಿಂದ ಎದುರು ಕಲೆತು, ಪ್ರತಿಯೊಂದು ಸಮಸ್ಯೆಯ ತೊಡಕುಗಳನ್ನೆಲ್ಲ ಯೋಚಿಸಿ, ಪ್ರತಿಯೊಂದು ಪಂಗಡದ ತೊಂದರೆ ವಿಚಾರಿಸಿ, ಪೂರ್ಣಚರ್ಚೆಮಾಡಿ ಒಂದು ಸರ್ವಸಮ್ಮತ ಪರಿಹಾರ ಕಂಡು ಹಿಡಿಯಲು ಸಾಧ್ಯವಿತ್ತು. ಸ್ವಯಂ ನಿರ್ಣಯಾಧಿಕಾರ ಉಪಯೋಗಿಸುತ್ತೇವೆಂದು ತಿಳಿಸಿದರೂ ನಮ್ಮನ್ನು ಸುಮ್ಮನೆ ಒಪ್ಪಲು ಅವರು ಸಿದ್ಧರಿರಲಿಲ್ಲ. ಮುಖ್ಯ ಸಮಯಗಳಲ್ಲಿ ಪ್ರವೇಶಮಾಡಿ ಅನೇಕ ರೀತಿ ಅಡ್ಡಿ ಬರಲು ಬ್ರಿಟಿಷ್ ಸರಕಾರ ಸದಾ ಸಿದ್ಧವಿತ್ತು. ಸರಕಾರದ ಪೂರ್ಣ ಆಡಳಿತ ಸೂತ್ರ, ಅಧಿಕಾರಿವರ್ಗಗಳೆಲ್ಲ ಅವರ ಕೈಯ್ಯಲ್ಲಿದ್ದುದಲ್ಲದೆ ಸಂಸ್ಥಾನಗಳ ಸೂತ್ರವೆಲ್ಲ ರೆಸಿಡೆಂಟರ ಮತ್ತು ರಾಜಕೀಯ ಇಲಾಖೆಯ ಅಧಿಕಾರಿಗಳ ಕೈಯಲ್ಲಿತ್ತು. ರಾಜರು ತಮ್ಮ ಪ್ರಜೆಗಳ ಮೇಲೆ ನಿರಂಕುಶಾಧಿಕಾರ ನಡೆಸುತ್ತಿದ್ದರೂ ವೈಸರಾಯ್ ಅಧೀನವಿದ್ದ ರಾಜಕೀಯ ಇಲಾಖೆಯ ಕೈಗೊಂಬೆಗಳಾಗಿದ್ದರು. ಅವರ ಮುಖ್ಯ ಸಚಿವರುಗಳಲ್ಲಿ ಅನೇಕರು ರಾಜಕೀಯ ಇಲಾಖೆಯ ಒತ್ತಾಯದಿಂದ ಬಂದ ಬ್ರಿಟಿಷ್ ಅಧಿಕಾರಿಗಳು ಅಥವ ಅವರ ಭಾರತೀಯ ಪಡಿಯಚ್ಚುಗಳು.

ಬ್ರಿಟಿಷ್ ಸಲಹೆಗಳ ಅನೇಕ ದುಷ್ಪರಿಣಾಮಗಳನ್ನು ನಾವು ಮಾರಿಸಿಕೊಂಡರೂ ಭಾರತದ ಸ್ವಾತಂತ್ರ್ಯಕ್ಕೆ ಧಕ್ಕೆ ತಂದು, ಪ್ರಗತಿ ವಿರೋಧ ಬಂದು ಅಸಾಧ್ಯ ತೊಂದರೆಕೊಡುವ ಅನೇಕ ಹೊಸ ವಿಪತ್ಕಾರಕ ಪ್ರಶ್ನೆಗಳನ್ನು ಎಬ್ಬಿಸಲು ಇನ್ನೂ ವಿಶೇಷ ಅವಕಾಶ ಇತ್ತು. ಇಪ್ಪತ್ತು ವರ್ಷಗಳ ಕೆಳಗೆ ಆಚರಣೆಗೆ ಬಂದ ಪ್ರತ್ಯೇಕ ಕೋಮುವಾರು ಚುನಾವಣಾ ಪದ್ಧತಿಯಿಂದ ಬೇಕಾದಷ್ಟು ಅನಾಹುತವಾಗಿತ್ತು. ತೊಂದರೆ ಕೊಡಬೇಕೆಂಬ ಪ್ರತಿಯೊಂದು ಪ್ರತಿಗಾಮಿ ಪಂಗಡಕ್ಕೂ ಈಗ ರಾಜಮಾರ್ಗ ಕಲ್ಪಿಸಬೇಕಾಯಿತು; ಆ ಭಿನ್ನತೆ ಶಾಶ್ವತಗೊಳಿಸಿ ಭಾರತವನ್ನು ಇನ್ನೂ ತುಂಡುಮಾಡುವ ಭಯ ನಮಗೆ ಹೆಚ್ಚಾಯಿತು. ಯುದ್ಧಾನಂತರದ ಭವಿಷ್ಯಕ್ಕೆ ಈ ಸಲಹೆ ಒಪ್ಪಬೇಕೆಂದು ಬ್ರಿಟಿಷರು ನಮಗೆ ಸೂಚಿಸಿದ್ದರು. ಕಾಂಗ್ರೆಸ್ ಸಂಸ್ಥೆಯ ಮಾತು ಹಾಗಿರಲಿ, ಬ್ರಿಟಿಷ್ ಸರಕಾರದೊಂದಿಗೆ ಸದಾ ಸಹಕರಿಸುತ್ತಿದ್ದ ತೀರ ಸೌಮ್ಯವಾದಿ ಪಕ್ಷದ ರಾಜಕಾರಣಿಗಳು ಸಹ ಈ ಸಲಹೆ ಒಪ್ಪಲು ಸಾಧ್ಯವಿಲ್ಲವೆಂದರು.

ಭಾರತದ ಐಕ್ಯತೆ ಕಾಂಗ್ರೆಸ್ಸಿಗೆ ವಿಶೇಷ ಪ್ರಾಮುಖ್ಯವಿದ್ದರೂ ಎಲ್ಲ ಅಲ್ಪ ಸಂಖ್ಯಾಕರ ಮತ್ತು ಇತರ ಪಂಗಡಗಳ ಸಹಕಾರ ಪಡೆಯಲು ಅದು ಕಾತರವಿತ್ತು; ಮತ್ತು ಯಾವ ಭಾಗದ ಜನರು ಭಾರತದ ಒಕ್ಕೂಟದಲ್ಲಿ ಇರಲು ಒಪ್ಪದಿದ್ದರೂ ಅವರನ್ನು ಬಲಾತ್ಕಾರ ಮಾಡುವುದಿಲ್ಲವೆಂದು ಸಹ ಹೇಳಿತ್ತು. ಬೇರೆ ಉಪಾಯ ಇಲ್ಲವಾದರೆ ವಿಭಜನೆಯ ತತ್ವವನ್ನೂ ಒಪ್ಪಿತ್ತು; ಆದರೂ ಆ ತತ್ವಕ್ಕೆ ಸ್ವಲ್ಪವೂ ಪ್ರೋತ್ಸಾಹ ಕೊಡಲು ಇಷ್ಟಪಡಲಿಲ್ಲ. ಕ್ರಿಪ್ಸ್ ಸಲಹೆಯ ಮೇಲೆ ಕಾಂಗ್ರೆಸ್ ಕಾರ್ಯ ಸಮಿತಿಯ ನಿರ್ಣಯ ಈ ರೀತಿ ಇತ್ತು– "ಭಾರತದ ಸ್ವಾತಂತ್ರ್ಯ ಮತ್ತು ಐಕ್ಯತೆಯೇ ಕಾಂಗ್ರೆಸ್ಸಿನ ಧ್ಯೇಯಗಳಾಗಿವೆ. ಆಧುನಿಕ ಪ್ರಪಂಚದಲ್ಲಿ ಜನರ ಮನಸ್ಸೆಲ್ಲ ಮುಖ್ಯವಾಗಿ ದೊಡ್ಡ ದೊಡ್ಡ ಒಕ್ಕೂಟ ರಾಷ್ಟ್ರ ಸ್ಥಾಪನೆಯೆ ಇರುವಾಗ ಭಾರತದ ಐಕ್ಯತೆ ಒಡೆಯುವುದೆಂದರೆ ಎಲ್ಲರಿಗೂ ಅದರಿಂದ ಹಾನಿ, ಮತ್ತು ಆ ಸಲಹೆಯನ್ನು ಯೋಚಿಸಲು ಸಹ ಅತ್ಯಂತ ಖೇದವಾಗುತ್ತದೆ. ಭಾರತ ಒಕ್ಕೂಟದ ಯಾವ ಭಾಗದ ಜನರನ್ನೇ ಆಗಲಿ ಅವರ ಇಷ್ಟಕ್ಕೆ ವಿರುದ್ಧ ಒಕ್ಕೂಟದಲ್ಲಿರಲು ಒತ್ತಾಯಮಾಡಲು ಕಾರ್ಯಸಮಿತಿಗೆ ಇಚ್ಛೆ ಇಲ್ಲ. ಈ ತತ್ವ ಒಪ್ಪಿಯೂ ದೇಶದ ಬೇರೆ ಬೇರೆ ಭಾಗಗಳ ಜನರು ಸಮಾನತೆಯಿಂದ ಸಹಕಾರದಿಂದ ಒಂದೇ ರಾಷ್ಟ್ರೀಯ ಜೀವನ ನಡೆಸಲು

ಅವಕಾಶ ದೊರೆಯುವಂತೆ ವಿಶ್ವಪ್ರಯತ್ನ ಮಾಡಬೇಕೆಂದು ಈ ಸಮಿತಿಯು ಅಭಿಪ್ರಾಯ ಪಡುತ್ತದೆ. ಆ ತತ್ವ ಒಪ್ಪುವುದೆಂದರೆ ಹೊಸ ಸಮಸ್ಯೆಗಳನ್ನು ಎಬ್ಬಿಸುವ ಯಾವ ಬದಲಾವಣೆಗಳನ್ನೂ ಮಾಡಬಾರದು; ಮತ್ತು ಆ ಭಾಗಗಳ ದೊಡ್ಡ ಪಂಗಡಗಳ ಮೇಲೆ ಯಾವ ಒತ್ತಾಯವನ್ನೂ ಮಾಡಬಾರದು. ಶಕ್ತಿಯುತ ರಾಷ್ಟ್ರೀಯ ಕೇಂದ್ರ ಸರಕಾರ ಏರ್ಪಟ್ಟು ಆದರ ಶಕ್ತಿಯನ್ನು ಕುಂದಿಸದಂತೆ ಪ್ರತಿಯೊಂದು ಭಾಗಕ್ಕೂ ಆದಷ್ಟು ಸಂಪೂರ್ಣ ಸ್ವಾತಂತ್ರ್ಯವಿರಬೇಕು. ಬ್ರಿಟನ್ನಿನ ಯುದ್ಧ ಮಂತ್ರಿಮಂಡಲದ ಸಲಹೆಗಳಿಂದ ಒಕ್ಕೂಟದ ಆರಂಭದಲ್ಲಿಯೇ ಭಾರತವನ್ನು ತುಂಡರಿಸುವ ಪ್ರಯತ್ನಕ್ಕೆ ಪ್ರೋತ್ಸಾಹವಿದೆ. ವಿಶೇಷ ಸಹ ಕಾರವೂ ಸೌಹಾರ್ದವೂ ಅವಶ್ಯವಿರುವಾಗ ಕಚ್ಚಾಟಕ್ಕೇ ಹೆಚ್ಚು ಅವಕಾಶ ದೊರೆಯುತ್ತಿದೆ. ಪ್ರಾಯಶಃ ಒಂದು ಕೋಮಿನ ಬೇಡಿಕೆಯ ತೃಪ್ತಿಗೆಂದು ಈ ಸಲಹೆಮಾಡಿರಬಹುದು. ಆದರೆ ಅದರ ಇತರ ಪರಿಣಾಮ ಗಳು ಬಹಳ ಅನರ್ಥಕಾರಿ ಇವೆ. ರಾಜಕೀಯದಲ್ಲಿ ವಿವಿಧ ಕೋಮುಗಳಿಗೆ ಪ್ರತಿಗಾಮಿ ಪಕ್ಷಗಳು ಮತ್ತು ವಿರೋಧ ಪಂಗಡಗಳಿಗೆ ಅಡ್ಡ ಬರಲು ಅವಕಾಶಕೊಟ್ಟು ದೇಶದ ಪ್ರಮುಖ ವಿಷಯ ಅಲಕ್ಷಿಸಿ ಅಲ್ಪ ವಿಷಯಗಳಿಗೆ ಪ್ರಾಮುಖ್ಯತೆ ಕೊಡುವ ಪ್ರಯತ್ನ ನಡೆದಿದೆ."

"ಇಂದಿನ ವಿಷಮ ಪರಿಸ್ಥಿತಿಯಲ್ಲಿ ಪ್ರಸ್ತುತ ಪ್ರಶ್ನೆಯೇ ಮುಖ್ಯವಾದುದು; ಮುಂದಿನ ಸಲಹೆಗಳು ಸಹ ಪ್ರಸಕ್ತ ಪರಿಸ್ಥಿತಿಯ ಮೇಲೆ ಎಷ್ಟರಮಟ್ಟಿಗೆ ಏನು ಪರಿಣಾಮ ಮಾಡುತ್ತವೆ ಎಂಬುದನ್ನೆ ಅವಲಂಬಿ ಸಿವೆ." ಎಂದು ಸಹ ಅಭಿಪ್ರಾಯ ಪಟ್ಟಿತು. ಭವಿಷ್ಯಕ್ಕಾಗಿ ಮಾಡಿದ ಸಲಹೆ ಒಪ್ಪಲು ಕಾಂಗ್ರೆಸ್ಸಿಗೆ ಸಾಧ್ಯವಿಲ್ಲದೆ ಹೋದರೂ ಭಾರತವು ಯೋಗ್ಯರೀತಿಯಲ್ಲಿ ದೇಶದ ರಕ್ಷಣೆಯ ಕಾರ್ಯದ ಹೊರೆ ನಿರ್ವಹಿಸಲು ಸಾಧ್ಯವಾದ ಯಾವ ಗೌರವಯುತ ಒಪ್ಪಂದಕ್ಕಾದರೂ ಸಿದ್ಧವಿರುವುದಾಗಿ ಸಹ ತಿಳಿಸಿತು. ಇದರಲ್ಲಿ ಅಹಿಂಸೆಯ ಪ್ರಶ್ನೆಯೇ ಏಳಲಿಲ್ಲ, ಯಾವ ಸಮಯದಲ್ಲೂ ಅದರ ಪ್ರಸ್ತಾಪ ಸಹ ಬರಲಿಲ್ಲ. ಅದಕ್ಕೆ ಪ್ರತಿಯಾಗಿ ರಕ್ಷಣಾ ಮಂತ್ರಿ ಒಬ್ಬ ಭಾರತೀಯನಿರಬೇಕೆಂದು ಚರ್ಚೆಸಹ ಮಾಡಲಾಯಿತು.

ಭಾರತಕ್ಕೆ ಒದಗಿದ ಯುದ್ಧ ವಿಪತ್ತಿನ ದೃಷ್ಟಿಯಿಂದ ಭವಿಷ್ಯದ ಪ್ರಶ್ನೆಯನ್ನೆಲ್ಲ ಬದಿಗಿಟ್ಟು, ಯುದ್ಧ ಸನ್ನದ್ಧತೆಯಲ್ಲಿ ಪೂರ್ಣ ಸಹಕರಿಸ ಬಲ್ಲ ಒಂದು ಸ್ವಸಮರ್ಥ ರಾಷ್ಟ್ರೀಯ ಸರಕಾರ ಸ್ಥಾಪನೆಯೇ ಕಾಂಗ್ರೆಸ್ಸಿನ ಅಂದಿನ ನಿಲುವಾಗಿತ್ತು. ವಿನಾಶಕಾರಕ ನಿರ್ಬಂಧಗಳೇ ಹೆಚ್ಚು ಇದ್ದ ಕಾರಣ ಭಾರತದ ಭವಿಷ್ಯ ಕುರಿತು ಬ್ರಿಟಿಷ್ ಸರಕಾರ ಮಾಡಿದ ಸಲಹೆ ಒಪ್ಪಲು ಕಾಂಗ್ರೆಸ್ಸಿಗೆ ಸಾಧ್ಯವಿರಲಿಲ್ಲ. ಬೇಕಾದರೆ ಆ ಸಲಹೆ ಹಿಂದಕ್ಕೆ ತೆಗೆದುಕೊಳ್ಳಲಿ ಅಥವ ಹಾಗೇ ಬಿಡಲಿ. ಆದರೆ ಕಾಂಗ್ರೆಸ್ ಮಾತ್ರ ಅದನ್ನು ಒಪ್ಪಿಲ್ಲ ವೆಂದು ಸ್ಪಷ್ಟ ತಿಳಿದುಕೊಳ್ಳಲಿ; ಮತ್ತು ಪ್ರಸ್ತುತ ಪರಿಸ್ಥಿತಿಯ ಗಂಡಾಂತರ ಎದುರಿಸಲು ನಾವು ಒಂದು ಉಪಾಯ ಕಂಡು ಹಿಡಿಯಲು ಅದು ಅಡ್ಡ ಬರದಿರಲಿ, ಎಂದು ಇಷ್ಟಪಟ್ಟಿತು. ಸಧ್ಯ ಪರಿಸ್ಥಿತಿ ವಿಷಯ ದಲ್ಲಿ ಬ್ರಿಟಿಷ್ ಯುದ್ಧ ಮಂತ್ರಿ ಸಂಪುಟದ ಸಲಹೆ ಅಸ್ಪಷ್ಟವೂ ಅಪೂರ್ಣವೂ ಇತ್ತು. ಭಾರತದ ರಕ್ಷಣೆ ಮಾತ್ರ ಬ್ರಿಟಿಷ್ ಸರಕಾರದ ಏಕಾಧಿಪತ್ಯದಲ್ಲಿ ಇರಬೇಕೆಂದು ಸ್ಪಷ್ಟಪಡಿಸಲಾಗಿತ್ತು. ಸರ್ ಸ್ಟಾಫರ್ಡ್ ಕ್ರಿಪ್ಸ್ ಮೇಲಿಂದ ಮೇಲೆ ಕೊಟ್ಟ ಹೇಳಿಕೆಗಳಿಂದ ಸಂರಕ್ಷಣ ಖಾತೆ ಒಂದುಳಿದು ಎಲ್ಲ ವಿಷಯಗಳೂ ಪೂರ್ಣ ಭಾರತೀಯ ಆಡಳಿತಕ್ಕೆ ಬರುವುವೆಂದು ಸ್ಪಷ್ಟವಾಯಿತು. ಇಂಗ್ಲೆಂಡಿನ ದೊರೆಯಂತೆ ಮಂತ್ರಿ ಮಂಡಲದ ಸಲಹೆ ಪಡೆದು ವೈಸರಾಯ್ ಅಧಿಕಾರ ನಡೆಸಬಹುದೆಂದು ಸಹ ಹೇಳಿದ್ದನು. ಇದರಿಂದ ಉಳಿದ ಪ್ರಶ್ನೆ ಎಂದರೆ ಸಂರಕ್ಷಣಾ ಖಾತೆಯ ವಿಚಾರ ಮಾತ್ರ ಎಂದು ನಾವು ಭಾವಿಸಿದೆವು. ಆದರೆ ರಕ್ಷಣೆಯ ನೆಪದಲ್ಲಿ ರಾಷ್ಟ್ರದ ಎಲ್ಲ ಚಟುವಟಿಕೆ ಮತ್ತು ಕಾರ್ಯಗಳನ್ನೂ ಆಕ್ರಮಿಸಬಹುದೆಂದು ನಮ್ಮ ಭಯ ಇತ್ತು, ಯುದ್ಧ ಕಾಲದಲ್ಲಿ ಆರೀತಿ ಆಗುವುದು ಸಹಜವೂ ಇತ್ತು. ಸಂರಕ್ಷಣ ಖಾತೆ ರಾಷ್ಟ್ರೀಯ ಸರಕಾರದ ಅಧಿಕಾರದಿಂದ ಪೂರ್ಣ ಬೇರೆ ಆದರೆ ರಾಷ್ಟ್ರೀಯ ಸರಕಾರಕ್ಕೆ ಯುದ್ಧ ಕಾಲದಲ್ಲಿ ಬೇರೆ ಯಾವ ಕೆಲಸವೂ ಇರುತ್ತಿರಲಿಲ್ಲ. ಸೈನ್ಯ ಪಡೆಗಳ ಮೇಲೆ ಮತ್ತು ಯುದ್ಧಾಚರಣೆಯಲ್ಲಿ ಬ್ರಿಟಿಷ್ ಸೈನ್ಯಾಧಿಪತಿಯು ಪೂರ್ಣ ಅಧಿಕಾರ ನಡೆಸಬಹುದೆಂದು ನಾವು ಒಪ್ಪಿದೆವು. ಯುದ್ಧದ ಸಾಮಾನ್ಯ ರೀತಿ ನೀತಿ ಎಲ್ಲ ಸಾಮ್ರಾಜ್ಯ ರಕ್ಷಣಾ ಮಂಡಲಿಯ ಆಡಳಿತದಲ್ಲಿ ಇರಬಹುದೆಂದೂ ಒಪ್ಪಿದೆವು. ಆದರೆ ರಾಷ್ಟ್ರೀಯ ಸರಕಾರದಲ್ಲಿ ಒಬ್ಬ ರಕ್ಷಣಾಮಂತ್ರಿ ಇರಬೇಕೆಂದು ಮಾತ್ರ ಕೇಳಿದೆವು.

ಸ್ವಲ್ಪ ಚರ್ಚೆಯನಂತರ ಸಂರಕ್ಷಣಾಖಾತೆ ಒಬ್ಬ ಭಾರತೀಯ ಮಂತ್ರಿಯ ಕೈಯಲ್ಲಿ ಇರಬಹುದೆಂದು ಕ್ರಿಪ್ಸ್ ಒಪ್ಪಿದನು; ಆದರೆ ಆ ಇಲಾಖೆಯ ಕೆಲಸ ಸಾರ್ವಜನಿಕ ಸಂಪರ್ಕ, ಪೆಟ್ರೋಲಿಯಂ, ಮಿಲಿಟರಿ ಉಪಾಹಾರ ಮಂದಿರಗಳು, ಲೇಖನ ಸಾಮಗ್ರಿ ಮತ್ತು ಮುದ್ರಣ, ವಿದೇಶಿ ನಿಯೋಗ ಮಂಡಲಿಗಳ ಸತ್ಕಾರ ವ್ಯವಸ್ಥೆ, ಸೈನಿಕರ ಸೌಕರ್ಯ ವ್ಯವಸ್ಥೆ ಮಾತ್ರ ಎಂದನು. ಈ ವಿಚಿತ್ರ ಅಧಿಕಾರ ಪಟ್ಟಿಯಿಂದ ಭಾರತದ ರಕ್ಷಣಾ ಮಂತ್ರಿಯ ಸ್ಥಾನ ಕೇವಲ ಹಾಸ್ಯಾಸ್ಪದ ಕಂಡಿತು. ಚರ್ಚೆ ಮುಂದುವರಿಸಿದಂತೆ ವಿಷಯ ಪ್ರವೇಶ ಬೇರೆ ಬೇರೆ ಬಣ್ಣ ತಾಳಿತು. ಇಬ್ಬರ ದೃಷ್ಟಿಗೂ ಬಹಳ ಅಂತರವಿದ್ದರೂ ಪರಸ್ಪರ ಸಮೀಪಿಸುತ್ತಿದ್ದಂತೆ ತೋರಿತು. ಮೊಟ್ಟಮೊದಲಿಗೆ ನಾನೂ, ಇತರರೂ ಒಪ್ಪಂದ ಸಾಧ್ಯವೆಂದು ಭಾವಿಸಿದೆವು. ಯುದ್ಧ ಪರಿಸ್ಥಿತಿ ನಿಮಿಷ ನಿಮಿಷಕ್ಕೂ ವಿಷಮಿಸುತ್ತ ಇದ್ದುದರಿಂದ ಹೇಗಾದರೂ ಒಪ್ಪಂದಕ್ಕೆ ಬರಬೇಕೆಂದು ಎಲ್ಲರಲ್ಲೂ ಕಾತರತೆ ಹುಟ್ಟಿತು.

ಯುದ್ಧ ಮತ್ತು ಮುತ್ತಿಗೆಯ ವಿಪತ್ತು ಅತಿ ಸಮೀಪಿಸಿತ್ತು ; ಹೇಗಾದರೂ ಅದನ್ನು ಎದುರಿಸಬೇಕಾಗಿತ್ತು. ಎದುರಿಸಲು ಅನೇಕ ದಾರಿಗಳೇನೋ ಇದ್ದುವು. ಆದರೆ ಇಂದೆಯೂ ಮುಂದೆಯೂ ಯಶಸ್ವಿಯಾಗಿ ಯುದ್ಧ ಎದುರಿಸಬೇಕಾದರೆ ಒಂದೇ ಮಾರ್ಗವಿತ್ತು. ಆದರೆ ಎಣ್ಣೆಬಂದಾಗ ಕಣ್ಣುಮುಚ್ಚಿ ಕುಳಿತರೆ ಸಧ್ಯದ ಪರಂಪರೆ ಹೆಚ್ಚುವುದಲ್ಲದೆ ಮುಂದೆ ಮಹಾ ವಿಪತ್ತು ಒದಗಬಹುದೆಂಬ ಭಯವೂ ನಮಗೆ ಇತ್ತು. ಹಳೆಯ ಶಸ್ತ್ರಾಸ್ತ್ರಗಳಲ್ಲದೆ ಹೊಸ ಶಸ್ತ್ರಾಸ್ತ್ರಗಳು ಬೇಕಿದ್ದವು. ಅವುಗಳ ನವೀನ ರೀತಿಯ ಪ್ರಯೋಗ ಅವಶ್ಯವಿತ್ತು; ಹೊಸ ಉತ್ಸಾಹ, ಹೊಸ ದೃಷ್ಟಿ, ಇದುವರೆಗಿನ ಪರಿಸ್ಥಿತಿಗಿಂತ ತೀರ ಭಿನ್ನವಾದ ಭವಿಷ್ಯದಲ್ಲಿ ಹೊಸ ನಂಬಿಕೆ ಅವಶ್ಯ ಇದ್ದವು. ಆದರೆ ಇಂದಿನ ಪರಿಸ್ಥಿತಿ ಬದಲಾವಣೆಯಾದರೆ ಮಾತ್ರ ಅದೆಲ್ಲ ಸಾಧ್ಯವಿತ್ತು. ಪ್ರಾಯಶಃ ನಮ್ಮ ಅಮಿತ ಉತ್ಸಾಹದ ಭರವೇ ನಮ್ಮನ್ನು ಅಷ್ಟು ಆಶಾವಾದಿಗಳನ್ನಾಗಿ ಮಾಡಿತೋ ಏನೋ ; ನಮಗೂ ಬ್ರಿಟಿಷ್ ಆಡಳಿತಗಾರರಿಗೂ ಮಧ್ಯೆ ಹರಡಿದ್ದ ಅಪಾರ ಅಂತರದ ವಿಸ್ತಾರವನ್ನೂ, ಆಳವನ್ನೂ ತಾತ್ಕಾಲಿಕ ಆದರೂ ಮರೆಯುವಂತೆ ಮಾಡಿತೋ ಏನೋ ? ಆದರೆ ಪ್ರಳಯಾಂತಕ ವಿಪತ್ತಿನ ಎದುರು ನಿಂತಿದ್ದರೂ ಶತಮಾನಗಳ ವ್ಯಾಜ್ಯ ಬಗೆಹರಿಯುವ ಸಂಭವವಿರಲಿಲ್ಲ. ಬೇರೆ ಮಾರ್ಗ ಇಲ್ಲದೆ ಅನಿರ್ವಾಹ ಸಂದರ್ಭ ಹೊರತು ಯಾವ ಸಾಮ್ರಾಜ್ಯವೂ ಅಧೀನ ರಾಷ್ಟ್ರಗಳ ಮೇಲೆ ತನ್ನ ಹಿಡಿತ ಸಡಿಲಿಸಿಲ್ಲ. ಅಂದಿನ ಪರಿಸ್ಥಿತಿಯಲ್ಲಿ ಆ ಒತ್ತಾಯ, ಆ ಭಾವನೆ ಇದ್ದುವೇನು ? ನಮಗೆ ತಿಳಿಯದು ; ಆದರೆ ಇದ್ದುವೆಂದು ಭಾವಿಸಿದೆವು.

ಈರೀತಿ ತುಂಬ ಆಶಾವಾದಿಯಾಗಿದ್ದಾಗ ಏನೇನೋ ವಿಚಿತ್ರ ಘಟನೆಗಳು ಆದವು. ಅಮೆರಿಕದ ಸಂಯುಕ್ತ ಸಂಸ್ಥಾನದಲ್ಲಿ ಎಲ್ಲಿಯೋ ಒಂದು ಕಡೆ ಮಾತನಾಡುತ್ತ ಲಾರ್ಡ್ ಹ್ಯಾಲಿಫ್ಯಾಕ್ಸ್ ಕಾಂಗ್ರೆಸ್ಸಿನ ಮೇಲೆ ಕುತ್ಸಿತ ಟೀಕೆ ಮಾಡಿದನು. ದೂರದ ಅಮೆರಿಕೆಯಲ್ಲಿ ಇದೇ ಸಮಯ ಈ ರೀತಿ ಏಕೆ ಮಾಡಬೇಕಾಗಿತ್ತೋ ಅರ್ಥವಾಗಲಿಲ್ಲ. ಬ್ರಿಟಿಷ್ ಸರಕಾರದ ಅಭಿಪ್ರಾಯ ಮತ್ತು ನೀತಿಯನ್ನೇ ಆತ ಪ್ರತಿಬಿಂಬಿಸದಿದ್ದರೆ ಕಾಂಗ್ರೆಸ್‌ನೊಂದಿಗೆ ಭಾರತದಲ್ಲಿ ಸಂಧಾನ ನಡೆಯುವಾಗಲೇ ಆತನ ಈ ವರ್ತನೆಯ ಔಚಿತ್ಯವೇನು ? ದೆಹಲಿಯಲ್ಲಿ ವೈಸರಾಯ್ ಲಾರ್ಡ್ ಲಿನ್‌ಲಿತ್‌ಗೌ ಮತ್ತು ಸಿವಿಲ್‌ಸರ್ವಿಸಿನ ಉನ್ನತ ಅಧಿಕಾರಿಗಳಿಗೆ ಯಾವ ಒಪ್ಪಂದವೂ ಬೇಕಿರಲಿಲ್ಲವೆಂದೂ, ತಮ್ಮ ಅಧಿಕಾರ ಕಡಮೆಮಾಡಿಕೊಳ್ಳಲು ಸಿದ್ಧರಿರಲಿಲ್ಲವೆಂದೂ ಜನಜನಿತವಾಗಿತ್ತು. ತೆರೆಮರೆಯಲ್ಲಿ ನಡೆದುದೆಲ್ಲ ಗಾಳಿಯ ವರ್ತಮಾನವಾಗಿ ಹೇಗೋ ಹೊರಗೆ ಬೀಳುತ್ತಿತ್ತು.

ಸಂರಕ್ಷಣಾ ಮಂತ್ರಿಯು ಅಧಿಕಾರ ವಿಷಯದಲ್ಲಿ ಹೊಸ ಸಲಹೆ ಚರ್ಚಿಸಲು ನಾವು ಕ್ರಿಪ್ಸ್‌ನನ್ನು ನೋಡಿದಾಗ ನಮ್ಮ ಹಿಂದಿನ ಸಂಭಾಷಣೆ ಎಲ್ಲ ನಿರರ್ಥಕವೆಂದೂ, ನಿಜವಾದ ಅಧಿಕಾರವಿರುವ ಮಂತ್ರಿಗಳಿಗೆ ಅವಕಾಶವಿಲ್ಲವೆಂದೂ ಸ್ಪಷ್ಟವಾಯಿತು. ಈಗಿರುವ ವೈಸರಾಯ್ ಕಾರ್ಯಕಾರಿ ಮಂಡಲವೇ ಇರಬೇಕೆಂದೂ ಆ ಮಂತ್ರಿಮಂಡಲಕ್ಕೆ ರಾಜಕೀಯ ಪಕ್ಷಗಳ ಪ್ರತಿನಿಧಿಗಳು ಕೆಲವರನ್ನು ಹೊಸ ಸದಸ್ಯರನ್ನಾಗಿ ನೇಮಿಸಬಹುದೆಂದೂ ಸಲಹೆ ಮಾಡಿದನು. ಈ ಮಂತ್ರಿಮಂಡಲಕ್ಕೂ ಕ್ಯಾಬಿನೆಟ್ ಬಗೆಯ ಮಂತ್ರಿ ಸಂಪುಟಕ್ಕೂ ಯಾವ ಸಂಬಂಧವೂ ಇರಲಿಲ್ಲ. ಈಗಿನ ಸಲಹಾ ಮಂಡಲವು ಇಲಾಖೆಯ ಅಧಿಕಾರಿಗಳ ಅಥವ

ಕಾರ್ಯನಿರ್ವರ್ಶಿಗಳ ಕೈಗೊಂಬೆಯಾಗಿತ್ತು. ಅಧಿಕಾರವೆಲ್ಲ ವೈಸರಾಯ್ ಕೈಯಲ್ಲೇ ಕೇಂದ್ರೀಕೃತವಾಗಿತ್ತು. ಶಾಸನ ಮಾಡಿ ಬದಲಾವಣೆ ಮಾಡಲು ಕಾಲಾವಕಾಶ ಬೇಕೆಂದೂ ಅರಿತಿದ್ದೆವು; ಆದ್ದರಿಂದ ಅದಕ್ಕೆ ಒತ್ತಾಯಪಡಿಸದೆ ವೈಸರಾಯ್ ಈ ಸಲಹಾಮಂಡಲಿಯನ್ನೇ ಮಂತ್ರಿ ಸಂಪುಟವೆಂದು ಭಾವಿಸಿ ಅವರ ತೀರ್ಮಾನಗಳಿಗೆ ಒಪ್ಪುವ ಒಂದು ಸತ್ಸಂಪ್ರದಾಯ ಸ್ಥಾಪಿಸಬೇಕೆಂದು ಕೇಳಿದೆವು. ಈಗ ಅದು ಸಾಧ್ಯವಿಲ್ಲವೆಂದೂ, ತತ್ವಶಃ ಮತ್ತು ಕಾರ್ಯತಃ ವೈಸರಾಯ್ ಅಧಿಕಾರದಲ್ಲಿ ಯಾವ ವ್ಯತ್ಯಾಸವೂ ಮಾಡಲು ಅಸಾಧ್ಯವೆಂದೂ ತಿಳಿಸಿದನು. ನಮ್ಮ ಹಿಂದಿನ ಸಂಭಾಷಣೆಗಳೆಲ್ಲ ಬೇರೆ ಮಟ್ಟದಲ್ಲಿ ನಡೆದಿದ್ದು ಇಂದಿನ ಪರಿಸ್ಥಿತಿಯೇ ವಿಚಿತ್ರವಾಗಿತ್ತು. ಈ ವ್ಯತ್ಯಾಸ ನಂಬುವುದೇ ಕಷ್ಟವಾಯಿತು.

ಭಾರತವು ಹೆಚ್ಚು ಸಾಮರ್ಥ್ಯದಿಂದ ಯಾವ ರೀತಿ ಎದುರಿಸಬಹುದೆಂದು ಚರ್ಚೆ ಮಾಡಿದೆವು. ಭಾರತದ ಸೈನ್ಯವೂ ಒಂದು ರಾಷ್ಟ್ರೀಯ ಸೈನ್ಯ ಎಂಬ ಭಾವನಾ ದೃಷ್ಟಿಕೊಟ್ಟು, ಯುದ್ಧ ಪ್ರಯತ್ನದಲ್ಲಿ ದೇಶ ವಾತ್ಸಲ್ಯ ಭಾವನೆ ಹುಟ್ಟಿಸಲು ಕಾತರರಿದ್ದೆವು. ಮುತ್ತಿಗೆಯೇ ಒದಗಿದರೆ ಒಳನಾಡಿನ ರಕ್ಷಣೆಗೆ ಹೊಸ ಸೈನ್ಯ ಪಡೆಗಳನ್ನೂ ಮಿಲಿಷಿಯ ಅಥವ ಗೃಹ ರಕ್ಷಕ ಪಡೆಗಳನ್ನೂ ನಿರ್ಮಿಸಲು ಸಿದ್ಧರಿದ್ದೆವು; ಇವೆಲ್ಲ ಸೇನಾಧಿಪತಿಯ ಅಧೀನದಲ್ಲೇ ಇರಬಹುದೆಂದು ಒಪ್ಪಿ ಸಲಹೆ ಮಾಡಿದೆವು. ಅದೆಲ್ಲ ಸಾಧ್ಯವಿಲ್ಲವೆಂದು ಉತ್ತರ ದೊರೆಯಿತು. ಭಾರತದ ಸೈನ್ಯವು ಬ್ರಿಟಿಷ್ ಸೈನ್ಯದ ಒಂದು ಅಂಶವಾಗಿರುವಾಗ ರಾಷ್ಟ್ರೀಯ ಸೈನ್ಯವೆಂದು ಕರೆಯಲು ಅಥವ ಪರಿಗಣಿಸಲು ಸಾಧ್ಯವಿರಲಿಲ್ಲ. ಮಿಲಿಷಿಯ ಅಥವ ಗೃಹರಕ್ಷಕ ಪಡೆಗಳ ಹೊಸ ಸೈನ್ಯ ನಿರ್ಮಿಸಲು ನಮಗೆ ಅವಕಾಶ ಕೊಡುವುದೂ ಅನುಮಾನವಾಗಿತ್ತು.

ಒಟ್ಟಿನಲ್ಲಿ ಈಗಿರುವ ಸರ್ಕಾರ ರಚನೆ ಮೊದಲಿನಂತೆಯೇ ಮುಂದುವರಿಯಬೇಕು, ವೈಸರಾಯನ ನಿರಂಕುಶಾಧಿಕಾರವೆಲ್ಲ ಹಾಗೇ ಉಳಿಯಬೇಕು, ನಮ್ಮಲ್ಲೂ ಕೆಲವರು ಆತನ ಕೈಗೊಂಬೆಗಳಂತಿದ್ದು ಉಪಾಹಾರ ಗೃಹಗಳು ಮುಂತಾದುವನ್ನು ನೋಡಿಕೊಂಡು ಅಲಂಕಾರದ ಮಂತ್ರಿಗಳಾಗಿ ಇರಬಹುದಿತ್ತು, ಹದಿನೆಂಟು ತಿಂಗಳ ಹಿಂದಿನ ಅಮೆರಿ ಸಲಹೆಗೂ ಇದಕ್ಕೂ ಕೂದಲೆಳೆಯಷ್ಟೂ ವ್ಯತ್ಯಾಸ ತೋರಲಿಲ್ಲ. ಅಮೆರಿ ಸಲಹೆಗಳು ಭಾರತಕ್ಕೆ ಅಗೌರವವೆಂದು ತಿರಸ್ಕರಿಸಿದ್ದೆವು. ಈಚಿನ ಘಟನೆಗಳು ಬ್ರಿಟಿಷ್ ಅಧಿಕಾರಿಗಳ ಮೇಲೆ ಒಂದು ಮಾನಸಿಕ ಪರಿವರ್ತನೆ ಮಾಡಬಹುದೆಂದೂ, ವೈಯಕ್ತಿಕ ಪ್ರತಿಭೆಯಿಂದ ಆ ಪರಿವರ್ತನೆ ಸುಲಭವೆಂದೂ ನಾವು ಅರಿತಿದ್ದೆವು. ವೈಸರಾಯ್ ಸಿಂಹಾಸನದ ಸುತ್ತ ಕುರಿಗಳಂತಿದ್ದ ಜನರ ಬದಲು ಶಕ್ತರೂ, ದೃಢಮನಸ್ಕರೂ ಆದ ವ್ಯಕ್ತಿಗಳು ಮಂತ್ರಿಗಳಾದರೆ ಪರಿಸ್ಥಿತಿ ವ್ಯತ್ಯಾಸಗೊಳ್ಳಬಹುದೆಂದೂ ತಿಳಿದಿದ್ದೆ. ಆದರೆ ಬೇರೆ ಕಾಲದಲ್ಲಿ ಹಾಗಿರಲಿ, ಈ ವಿಷಮ ಕಾಲದಲ್ಲಿ ಸಹ ಆ ಸಲಹೆ ಒಪ್ಪಲು ಅಸಾಧ್ಯವೆನಿಸಿತು; ಯೋಚಿಸಲು ಸಹ ಸಾಧ್ಯ ಇರಲಿಲ್ಲ. ಆರೀತಿ ಏನಾದರೂ ನಾವು ಒಪ್ಪಿದ್ದರೆ ಜನರೇ ನಮ್ಮನ್ನು ಹೊರದೂಡಿ ಬಹಿಷ್ಕರಿಸುತ್ತಿದ್ದರು. ವಿವರಗಳೆಲ್ಲ ಕ್ರಮೇಣ ತಿಳಿದ ಮೇಲೆ ಈ ಸಂಧಾನಗಳಲ್ಲಿ ನಾವು ಅಷ್ಟು ತಗ್ಗಿ ನಡೆದುದೇ ತಪ್ಪೆಂದು ಅನೇಕರು ಟೀಕೆ ಮಾಡಿದರು.

ಸರ್ ಸ್ಟಾಫರ್ಡ್ ಕ್ರಿಪ್ಸ್ ಜೊತೆಗೆ ನಡೆಸಿದ ಈ ಎಲ್ಲ ದೀರ್ಘ ಸಂಭಾಷಣೆಯಲ್ಲಿ ಅಲ್ಪ ಸಂಖ್ಯಾತರ ಪ್ರಶ್ನೆಯಾಗಲಿ ಕೋಮುವಾರು ಪ್ರಶ್ನೆಯಾಗಲಿ ಚರ್ಚೆಗೆ ಬರಲೇ ಇಲ್ಲ, ಯೋಚಿಸಲೂ ಇಲ್ಲ. ರಾಜ್ಯಾಂಗ ಪರಿವರ್ತನೆ ಚರ್ಚಿಸುವಾಗ ಅದು ಮುಖ್ಯವಾದ ವಿಷಯವೇನೋ ನಿಜ; ಆದರೆ ಬ್ರಿಟಿಷ್ ಸಲಹೆಗಳ ಮೇಲೆ ನಮ್ಮ ಮೂಲ ಅಭಿಪ್ರಾಯವೇ ಆರೀತಿ ಬೇರೆ ಇದ್ದಾಗ ಈ ಪ್ರಶ್ನೆಗಳನ್ನೆಲ್ಲ ಉದ್ದೇಶಪಟ್ಟು ಬದಿಗಿಟ್ಟೆವು. ರಾಷ್ಟ್ರೀಯ ಸರಕಾರಕ್ಕೆ ನಿಜವಾದ ಅಧಿಕಾರ ವಹಿಸಿಕೊಡುವ ತತ್ವ ಒಪ್ಪಿದ್ದರೆ ಆಮೇಲೆ ಅದರಲ್ಲಿ ಯಾವ ಯಾವ ಪಕ್ಷಗಳ ಸದಸ್ಯ ಸಂಖ್ಯಾಬಲ ಎಷ್ಟು ಇರಬೇಕೆಂಬ ಪ್ರಶ್ನೆ ಉದ್ಭವಿಸುತ್ತಿತ್ತು. ಆದರೆ ಮೂಲ ತತ್ವ ಒಪ್ಪುವ ಘಟ್ಟವನ್ನೇ ನಾವು ಮುಟ್ಟದಿರುವಾಗ ಉಳಿದ ಪ್ರಶ್ನೆಗಳು ಏಳಲೂ ಇಲ್ಲ, ಅವುಗಳನ್ನು ಯೋಚಿಸಲೂ ಇಲ್ಲ. ಪ್ರಮುಖ ಪಕ್ಷಗಳ ವಿಶ್ವಾಸ ಪಡೆದ ರಾಷ್ಟ್ರೀಯ ಸರಕಾರವೇ ನಮ್ಮ ಮುಖ್ಯ ಗುರಿಯಾಗಿತ್ತು; ಪಕ್ಷ ಪ್ರತಿಪಕ್ಷಗಳ ಸಂಖ್ಯಾ ಬಲ ತೊಂದರೆ ಕೊಡುವುದೆಂದು ನಾವು ಎಣಿಸಿಯೆ ಇರಲಿಲ್ಲ. ಮೌಲಾನಾ ಅಬ್ದುಲ್ ಕಲಾಮು ಅಜಾದರು ಸರ್ ಸ್ಟಾಫರ್ಡ್ ಕ್ರಿಪ್ಸ್‌ಗೆ ಬರೆದ ಒಂದು ಪತ್ರದಲ್ಲಿ "ನಾವು ಮಾಡಿರುವ ಸಲಹೆಗಳು ನಮ್ಮದು ಮಾತ್ರವಲ್ಲದೆ, ಭಾರತದ ಜನತೆಯ ಒಮ್ಮತದ ಬೇಡಿಕೆ

ಎಂದು ಭಾವಿಸಬಹುದು. ಈ ವಿಷಯದಲ್ಲಿ ಬೇರೆ ಬೇರೆ ಪಂಗಡಗಳಿಗೂ ಪಕ್ಷಗಳಿಗೂ ಯಾವ ಭಿನ್ನಾಭಿಪ್ರಾಯವೂ ಇರುವುದಿಲ್ಲ. ವ್ಯತ್ಯಾಸವೆಲ್ಲ ಇರುವುದು ಭಾರತದ ಜನತೆ ಮತ್ತು ಬ್ರಿಟಿಷ್ ಸರಕಾರದ ಮಧ್ಯೆ. ಭಾರತೀಯರಲ್ಲಿ ಇರುವ ವ್ಯತ್ಯಾಸವೆಲ್ಲ ಮುಂದೆ ಭಾರತದ ರಾಜಕೀಯ ಭವಿಷ್ಯ ಏನೆಂಬುದರಲ್ಲಿ. ಭಾರತದ ಸಂರಕ್ಷಣೆಯೇ ಮುಖ್ಯವಿರುವ ಇಂದಿನ ವಿಷಮ ಪರಿಸ್ಥಿತಿಯಲ್ಲಿ ನಮ್ಮಲ್ಲಿ ಆದಷ್ಟು ಒಮ್ಮತ ಇರಬೇಕೆಂಬ ದೃಷ್ಟಿಯಿಂದ ಆ ಪ್ರಶ್ನೆ ಮುಂದುವರಿಸಲು ನಾವು ಸಿದ್ಧರಿದ್ದೇವೆ. ಭಾರತದಲ್ಲಿ ಒಮ್ಮತ ಇರುವಾಗ ಸಹ ಸ್ವತಂತ್ರ ರಾಷ್ಟ್ರೀಯ ಸರಕಾರ ಸ್ಥಾಪನೆಗೆ ಮತ್ತು ಭಾರತದ ಜನತೆ ಮತ್ತು ಇಂದು ಪ್ರಪಂಚದಲ್ಲಿ ಸಂಕಟ ಮತ್ತು ಸಾವಿನ ದವಡೆಯಲ್ಲಿ ಸಿಕ್ಕಿ ನರಳುತ್ತಿರುವ ಕೋಟ್ಯಂತರ ಜನರ ಸೇವೆಗೆ ಭಾರತಕ್ಕೆ ಅವಕಾಶಕೊಡದೆ ಬ್ರಿಟಿಷ್ ಸರಕಾರ ಅಡ್ಡ ಬಂದರೆ ಅದಕ್ಕಿಂತ ದೊಡ್ಡ ದುರಂತ ಪ್ರಕರಣ ಇನ್ನೊಂದಿಲ್ಲ" ಎಂದು ಬರೆದಿದ್ದರು.

ಕಾಂಗ್ರೆಸ್ ಅಧ್ಯಕ್ಷರು ಬರೆದ ಮತ್ತೊಂದು ಕೊನೆಯ ಪತ್ರದಲ್ಲಿ "ಕಾಂಗ್ರೆಸ್ ಅಧಿಕಾರಕ್ಕೆ ಬರಬೇಕೆಂಬ ಆಸೆ ನಮಗೆ ಲೇಶವೂ ಇಲ್ಲ. ಆದರೆ ಭಾರತೀಯರಿಗೆ ಸ್ವಾತಂತ್ರ್ಯ ಮತ್ತು ಅಧಿಕಾರ ಬರಬೇಕೆಂದು ಬಲವತ್ತರ ಆಸೆ ಇದೆ . . . . . ಬ್ರಿಟಿಷ್ ಸರಕಾರ ಮಾತ್ರ ತನ್ನ ವಿಚ್ಛೇದನ ನೀತಿ ಬಿಟ್ಟರೆ ಯಾವ ಪಕ್ಷದವರೇ ಇರಲಿ ನಾವೆಲ್ಲ ಒಟ್ಟಿಗೆ ಕಲೆತು ಒಂದು ಸರ್ವಸಮ್ಮತ ದಾರಿ ಕಂಡು ಹಿಡಿಯಲು ಸಾಧ್ಯವಿದೆ. ಆದರೆ ಈ ಮಹಾ ವಿಪತ್ಕಾಲದಲ್ಲಿ ಸಹ ಸರಕಾರವು ತನ್ನ ಛಿದ್ರೀಕರಣ ನೀತಿ ಬಿಡಲು ಮನಸ್ಸು ಮಾಡದಿರುವುದು ತುಂಬ ವ್ಯಸನಕರ. ಮುನ್ನುಗ್ಗಿ ಭಾರತವನ್ನೇ ಆವರಿಸುತ್ತಿರುವ ಪರಧಾಳಿ ಮತ್ತು ಪರಾಕ್ರಮಣವನ್ನು ಯಶಸ್ವಿಯಾಗಿ ಎದುರಿಸುವ ಮಾರ್ಗ ಹುಡುಕುವುದಕ್ಕಿಂತ ಆದಷ್ಟು ಕಾಲ ಭಾರತದಲ್ಲಿ ನಮ್ಮ ಎದುರು ತನ್ನ ನಿರಂಕುಶಾಧಿಕಾರ ನಡೆಸುವುದೂ, ಅದಕ್ಕಾಗಿ ಇಲ್ಲಿ ಪರಸ್ಪರ ವೈಷಮ್ಯ ಮತ್ತು ಭಿನ್ನಾಭಿಪ್ರಾಯ ಪ್ರೋತ್ಸಾಹಿಸುವುದೂ ಬಹಳ ಮುಖ್ಯವೆಂದು ಬ್ರಿಟಿಷ್ ಸರಕಾರ ಭಾವಿಸಿರವಂತೆ ತೋರುತ್ತದೆ. ನಮಗೆ ಮತ್ತು ಎಲ್ಲ ಭಾರತೀಯರಿಗೆ ಇಂದಿನ ಮುಖ್ಯ ಪ್ರಶ್ನೆ ಎಂದರೆ ಭಾರತದ ಸಂರಕ್ಷಣೆ ಮತ್ತು ಸುರಕ್ಷತೆ; ಉಳಿದುದೆಲ್ಲವನ್ನೂ ಈ ಒಂದೇ ಒರೆಗಲ್ಲಿನಿಂದ ಪರೀಕ್ಷಿಸುತ್ತೇವೆ."

ಇದೇ ಪತ್ರದಲ್ಲಿ ಭಾರತದ ಸಂರಕ್ಷಣೆ ವಿಷಯದಲ್ಲಿ ನಮ್ಮ ನಿಲುವನ್ನು ಸಹ ಸ್ಪಷ್ಟಪಡಿಸಿದರು. "ಮುಖ್ಯ ಸೈನ್ಯಾಧಿಪತಿಯ ಸಾಮಾನ್ಯ ಅಧಿಕಾರ ಮೊಟಕು ಮಾಡಬೇಕೆಂದು ಯಾರೂ ಸೂಚಿಸಿಲ್ಲ. ಅದಕ್ಕೆ ಪ್ರತಿಯಾಗಿ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಆತನನ್ನೇ ಯುದ್ಧ ಮಂತ್ರಿಯಾಗಿ ಮಾಡಿ ಆತನಿಗೆ ಇನ್ನೂ ಹೆಚ್ಚಿನ ಅಧಿಕಾರ ಕೊಡಬೇಕೆಂದು ಸಹ ಸಲಹೆ ಮಾಡಿದೆವು. ಆದರೆ ಸಂರಕ್ಷಣೆ ವಿಷಯದಲ್ಲಿ ನಮ್ಮ ಕಲ್ಪನೆಗೂ, ಬ್ರಿಟಿಷ್ ಸರಕಾರದ ಕಲ್ಪನೆಗೂ ಬಹಳ ವ್ಯತ್ಯಾಸವಿದೆ. ನಮ್ಮ ಕಲ್ಪನೆಯಂತೆ ಅದಕ್ಕೆ ಒಂದು ರಾಷ್ಟ್ರೀಯ ದೃಷ್ಟಿಕೊಟ್ಟು, ಭಾರತದ-ಗಂಡಸು ಹೆಂಗಸು-ಪ್ರತಿಯೊಬ್ಬ ಪ್ರಜೆಯನ್ನೂ ಅದರಲ್ಲಿ ಭಾಗವಹಿಸಲು ಕೇಳಬೇಕೆಂದು ಇದೆ. ಅಂದರೆ ಆ ಮಹಾತ್ಯಾಗದಲ್ಲಿ ಜನತೆಯಲ್ಲಿ ವಿಶ್ವಾಸವಿಟ್ಟು, ಅದರ ಪೂರ್ಣ ಸಹಕಾರ ಪಡೆಯಬೇಕೆಂದು. ಬ್ರಿಟಿಷ್ ಸರಕಾರದ ದೃಷ್ಟಿ ಎಲ್ಲ ಭಾರತೀಯರಲ್ಲಿ ಯಾವ ವಿಶ್ವಾಸವನ್ನೂ ಇಡದೆ, ಅವರಿಗೆ ನಿಜವಾದ ಯಾವ ಅಧಿಕಾರವನ್ನೂ ಕೊಡಬಾರದೆಂದು ಇದೆ. ಭಾರತದ ರಕ್ಷಣೆ ಬ್ರಿಟಿಷ್ ಸರಕಾರದ ಪೂರ್ಣ ಕರ್ತವ್ಯ ಮತ್ತು ದೊಡ್ಡ ಹೊಣೆ ಎಂದು ಹೇಳುತೀರಿ. ಈ ಕರ್ತವ್ಯ ಮತ್ತು ಹೊಣೆ ತಮ್ಮದು ಎಂಬ ಭಾವನೆ ಭಾರತೀಯರಲ್ಲಿ ಬರುವವರೆಗೆ ಅದನ್ನು ಪರಿಣಾಮಕಾರಿಯಾಗಿ ನಿರ್ವಹಿಸಲು ನಿಮಗೆ ಸಾಧ್ಯವಿಲ್ಲ; ಇತ್ತೀಚಿನ ಘಟನೆಗಳೇ ಅದಕ್ಕೆ ನಿದರ್ಶನ. ಜನತೆಯ ಬೆಂಬಲ ಮತ್ತು ಉತ್ಸಾಹಗಳಿದ್ದರೆ ಮಾತ್ರ ಯುದ್ಧದಲ್ಲಿ ಜಯ ಸಾಧ್ಯ ಎಂಬ ಭಾವನೆ ಇನ್ನೂ ಇಂಡಿಯ ಸರಕಾರಕ್ಕೆ ಬಂದಿಲ್ಲ." ಎಂದು ತಿಳಿಸಿದರು.

ಕಾಂಗ್ರೆಸ್ ಅಧ್ಯಕ್ಷರ ಈ ಪತ್ರ ತಲ್ಪಿದ ಒಡನೆ ಸರ್ ಸ್ಟಾಫರ್ಡ್ ಕ್ರಿಪ್ಸ್ ಇಂಗ್ಲೆಂಡಿಗೆ ವಿಮಾನದಲ್ಲಿ ಹಿಂತಿರುಗಿದ. ಆದರೆ ಆತನು ಹೊರಡುವ ಮುಂಚೆ ಮತ್ತು ಅನಂತರ ಕೊಟ್ಟ ಕೆಲವು ಸಾರ್ವಜನಿಕ ಹೇಳಿಕೆಗಳು ವಾಸ್ತವ್ಯದಿಂದ ಬಹಳ ದೂರ ಇದ್ದವು; ಭಾರತದಲ್ಲಿ ಕೆಟ್ಟ ಪ್ರತಿಕ್ರಿಯೆಯೂ ಆಯಿತು. ಭಾರತದ ಜವಾಬ್ದಾರಿಯುತ ನಾಯಕರು ಅದನ್ನು ಪ್ರತಿಭಟಿಸಿ ನಿಜಸ್ಥಿತಿ ತಿಳಿಸಿದರೂ ಸರ್ ಸ್ಟಾಫರ್ಡ್ ಮತ್ತು ಆತನ ಸ್ನೇಹಿತರು ಮಾತ್ರ ತಮ್ಮ ಪಲ್ಲವಿಯನ್ನೇ ಹಾಡುತ್ತ ಬಂದರು.

ಬ್ರಿಟಿಷ್ ಸಲಹೆ ತಿರಸ್ಕರಿಸಿದ್ದು ಕಾಂಗ್ರೆಸ್ ಪಕ್ಷ ಮಾತ್ರವಲ್ಲದೆ ಭಾರತದ ಪ್ರತಿಯೊಂದು ಪಕ್ಷವೂ ಪಂಗಡವೂ ಅದನ್ನು ತಿರಸ್ಕರಿಸಿತ್ತು. ನಮ್ಮ ರಾಜಕಾರಣಿಗಳಲ್ಲಿ ತೀರ ಸೌಮ್ಯವಾದಿಗಳೆನಿಸಿಕೊಂಡವರು ಸಹ ಅದನ್ನು ಒಪ್ಪಲಿಲ್ಲ. ಮುಸ್ಲಿಂಲೀಗ್ ಒಂದನ್ನು ಬಿಟ್ಟರೆ ಉಳಿದ ಎಲ್ಲ ಪಕ್ಷಗಳೂ ಅದನ್ನು ತಿರಸ್ಕರಿಸಿದ್ದು ಒಂದೇ ಕಾರಣದಿಂದ ತನ್ನ ನಿತ್ಯಪದ್ಧತಿಯಂತೆ ಉಳಿದ ಎಲ್ಲ ಪಕ್ಷಗಳೂ ತಮ್ಮ ಅಭಿಪ್ರಾಯ ಸೂಚಿಸುವವರೆಗೆ ಮುಸ್ಲಿಂ ಲೀಗ್ ಕಾದಿದ್ದು ಆ ಮೇಲೆ ತನ್ನದೇ ಕಾರಣಗಳಿಂದ ಅದೂ ನಿರಾಕರಿಸಿತು.

ಬ್ರಿಟಿಷ್ ಪಾರ್ಲಿಮೆಂಟಿನಲ್ಲಿ ಮತ್ತು ಇತರ ಕಡೆಗಳಲ್ಲಿ ಗಾಂಧಿಜಿಯ ಸಂಧಾನವಿರುದ್ಧ ಮೊಂಡುತನದಿಂದ ಕಾಂಗ್ರೆಸ್ ಈ ಸಲಹೆಯನ್ನು ನಿರಾಕರಿಸಿತು ಎಂದು ಹೇಳಲಾರಂಭಿಸಿದರು. ಇದು ಶುದ್ಧ ಸುಳ್ಳು. ಇತರರಂತೆ ಗಾಂಧೀಜಿ ಸಹ, ಈ ಸಲಹೆಗಳಲ್ಲಿ ಗಡಿಮಿತಿ ಇಲ್ಲದೆ ಅಸಂಖ್ಯಾತ ವಿಭಜನೆಗಳಿಗೆ ಇರುವ ಅವಕಾಶವನ್ನೂ ಮತ್ತು ತಮ್ಮ ಭವಿಷ್ಯದ ವಿಷಯದಲ್ಲಿ ಒಂಭತ್ತು ಕೋಟಿ ದೇಶೀಯ ಸಂಸ್ಥಾನಗಳ ಪ್ರಜೆಗಳನ್ನು ಅಲಕ್ಷಿಸಿರುವುದನ್ನೂ ಕಂಡು ತಮ್ಮ ವಿಶೇಷ ಅಸಮ್ಮತಿ ಸೂಚಿಸಿದ್ದರು. ಆದರೆ ಭವಿಷ್ಯದ ಮಾತು ಬದಿಗಿಟ್ಟು, ಇಂದಿನ ಆಡಳಿತ ವ್ಯವಸ್ಥೆಯ ಬದಲಾವಣೆ ವಿಷಯದಲ್ಲಿ ನಡೆದ ಸಂಭಾಷಣೆಗಳಲ್ಲಿ ಗಾಂಧೀಜಿಗೆ ಯಾವ ಸಂಬಂಧವೂ ಇರಲಿಲ್ಲ. ಕಸ್ತೂರ ಬಾ ಕಾಹಿಲೆ ಇದ್ದುದರಿಂದ ಈ ಸಂಭಾಷಣೆ ಸಮಯದಲ್ಲಿ ದೆಹಲಿಯಲ್ಲಿ ಇರಲಿಲ್ಲ. ಅವರನ್ನು ಬಿಟ್ಟೆ ಆದನ್ನೆಲ್ಲ ನಡೆಸಿದ್ದೆವು. ಅಹಿಂಸೆಯ ವಿಷಯದಲ್ಲಿ ಕಾಂಗ್ರೆಸ್ ಕಾರ್ಯ ಸಮಿತಿಯು ಹಿಂದೆ ಅನೇಕ ಬಾರಿ ಅವರಿಂದ ಭಿನ್ನಾಭಿಪ್ರಾಯ ವ್ಯಕ್ತಪಡಿಸಿತ್ತು ; ಮತ್ತು ಯುದ್ಧದಲ್ಲಿ ಸಹಕರಿಸುವುದಕ್ಕೂ, ಮುಖ್ಯ ಭಾರತದ ಸಂರಕ್ಷಣೆಗೆ ರಾಷ್ಟ್ರೀಯ ಸರಕಾರ ಸ್ಥಾಪಿಸುವುದಕ್ಕೂ ಬಹಳ ಕಾತರವಿತ್ತು.

ಜನರ ಮನಸ್ಸಿನಲ್ಲಿ ಯುದ್ಧದ ಪ್ರಶ್ನೆ ಮತ್ತು ಯೋಚನೆಗಳೇ ಕವಿದಿದ್ದವು ; ಭಾರತದ ಮುತ್ತಿಗೆ ಅನಿವಾರ್ಯವೆಂದು ಕಂಡಿತು. ಆದರೂ ಒಪ್ಪಂದಕ್ಕೆ ವಿರುದ್ಧ ಬಂದುದು ಯುದ್ಧವಲ್ಲ ; ಅದನ್ನು ನಡೆಸುವವರು ನಿಪುಣರು, ಸಾಮಾನ್ಯ ಜನತೆಯಲ್ಲ. ಯುದ್ಧಾಚರಣೆಯ ವಿಷಯದಲ್ಲಿ ಒಂದು ಒಪ್ಪಂದಕ್ಕೆ ಬರಲು ಸುಲಭವಿತ್ತು. ಆದರೆ ನಿಜವಾದ ಮುಖ್ಯ ಸಮಸ್ಯೆ ರಾಷ್ಟ್ರೀಯ ಸರಕಾರಕ್ಕೆ ಅಧಿಕಾರ ವಹಿಸಿಕೊಡುವ ಪ್ರಶ್ನೆ. ಪುನಃ ಭಾರತೀಯ ರಾಷ್ಟ್ರೀಯತ್ವವೆ ಅಥವ ಬ್ರಿಟಿಷ್ ಸಾಮ್ರಾಜ್ಯವಾದವೆ, ಎಂಬ ಅದೇ ಹಳೆಯ ಪ್ರಶ್ನೆ. ಯುದ್ಧವಿರಲಿ ಇಲ್ಲದಿರಲಿ ಈ ವಿಷಯದಲ್ಲಿ ಇಂಗ್ಲೆಂಡಿನ ಮತ್ತು ಇಲ್ಲಿನ ಬ್ರಿಟಿಷ್ ಆಡಳಿತವರ್ಗ ತಮ್ಮ ಕಪಿಮುಷ್ಟಿ ಸಡಿಲಿಸಲು ಒಪ್ಪಲಿಲ್ಲ. ಅದರ ಹಿಂದೆ ನಿಂತ ನಿಲವು ವಿನ್‌ಸ್ಟನ್ ಚರ್ಚಿಲ್‌ನ ಭೀಕರ ಆಕೃತಿಯ ನಿಲುವು.

## ೯. ಆಶಾಭಂಗ

ಕ್ರಿಪ್ಸ್ ಸಂಧಾನ ಈರೀತಿ ಇದ್ದಕ್ಕಿದ್ದಂತೆ ಕೊನೆಗಂಡು ಸರ್ ಸ್ಟಾಫರ್ಡ್ ಏಕಾಏಕಿ ಬಂದ ದಾರಿ ಹಿಡಿದುದನ್ನು ನೋಡಿ ನಮಗೆ ಬಹಳ ಆಶ್ಚರ್ಯವಾಯಿತು. ಪದೇ ಪದೇ ಹೇಳಿದ ಹಾಡಿನ ಪಲ್ಲವಿಯನ್ನೇ ಮತ್ತೆ ಹಾಡಿ ಇಂದಿನ ಉತ್ಕಟ ಪರಿಸ್ಥಿತಿಯನ್ನು ಎದುರಿಸಲು ನಮ್ಮ ಮುಂದೆ ಈ ಸತ್ವಶೂನ್ಯ ಸಾರರಹಿತ ಸಲಹೆ ಇಡಲು ಬ್ರಿಟನ್ನಿನ ಯುದ್ಧ ಮಂತ್ರಿಮಂಡಲದ ಸದಸ್ಯನೊಬ್ಬನು ಭಾರತಕ್ಕೆ ಪ್ರಯಾಣ ಮಾಡಬೇಕಾಗಿತ್ತೆ, ಅಥವ ಸಂಯುಕ್ತ ಸಂಸ್ಥಾನಗಳ ಜನರಲ್ಲಿ ಅಪಪ್ರಚಾರ ಮಾಡಲು ಈ ನಾಟಕ ಹೂಡಲಾಯಿತೆ ಎಂಬ ಅನುಮಾನ ಹುಟ್ಟಿತು. ಆದರೆ ಪ್ರತಿಕ್ರಿಯೆ ಮಾತ್ರ ಬಹು ಕಹಿಯಾಗಿ, ಅಸಹನೀಯವಿತ್ತು. ಬ್ರಿಟನ್ನಿನೊಡನೆ ಒಪ್ಪಂದದ ಆಸೆ ಇನ್ನು ಯಾವುದೂ ಉಳಿಯಲಿಲ್ಲ ; ಪರಧಾಳಿಯನ್ನು ಎದುರಿಸಿ ನಮ್ಮ ದೇಶ ಸಂರಕ್ಷಿಸಲು ನಮಗೆ ಅವಕಾಶಕೊಡಿ ಎಂದು ಕೇಳಿದರೂ ಅದಕ್ಕೆ ಅವಕಾಶವಿಲ್ಲ !

ಈ ಮಧ್ಯೆ ಮುತ್ತಿಗೆಯ ಸಂಭವ ಇನ್ನೂ ಸಮೀಪಿಸುತ್ತಿರುವಂತೆ ಕಂಡಿತು ; ಭಾರತದ ಪೂರ್ವದ ಗಡಿಯಿಂದ ಹಸಿವಿನ ಬೇಗೆಯಿಂದ ಬೆಂದು ಬೆಂಡಾಗಿದ್ದ ನಿರಾಶ್ರಿತರು ತಂಡೋಪತಂಡ ಬರಲಾರಂಭಿಸಿದರು. ಪೂರ್ವ ಬಂಗಾಲದ ಮುತ್ತಿಗೆ ಅನಿರ್ವಾಯವೆಂಬ ಭಯದಿಂದ ಸಹಸ್ರಗಟ್ಟಲೆ ನದಿ ದೋಣಿಗಳನ್ನು ನಾಶಮಾಡಿದರು. ಅಧಿಕಾರಿಗಳು ಸರಕಾರದ ಆಜ್ಞೆಯನ್ನು ಅಪಾರ್ಥಮಾಡಿ ಈರೀತಿ ವರ್ತಿಸಿದರೆಂದು

ನೆಪ ಹೇಳಿದರು. ಆ ಪ್ರಾಂತದ ಸಂಚಾರ ಮಾರ್ಗವೆಲ್ಲ ಬಹುಮಟ್ಟಿಗೆ ನದಿಗಳಲ್ಲಿ, ಮತ್ತು ನದಿಯ ಕಾಲುವೆಗಳಲ್ಲಿ; ದೋಣಿಗಳಲ್ಲಿ ಮಾತ್ರ ದಾಟಿ ಸಂಚರಿಸಲು ಸಾಧ್ಯವಿತ್ತು. ದೋಣಿಗಳ ನಾಶದಿಂದ ಅನೇಕ ಜನರ ಓಡಾಟಕ್ಕೆ ಅವಕಾಶವಿಲ್ಲದಂತೆ ಆಯಿತು, ಅನೇಕರ ಜೀವನೋಪಾಯಕ್ಕೆ ಮಣ್ಣು ಬಿತ್ತು; ಇದ್ದ ಒಂದು ಸಂಚಾರ ಸೌಕರ್ಯವೂ ಹಾಳಾಯಿತು. ಬಂಗಾಲದ ಕ್ಷಾಮಕ್ಕೆ ಇದೂ ಒಂದು ಕಾರಣ ವಾಯಿತು. ಬಂಗಾಲದಿಂದ ಅನೇಕರನ್ನು ಹೊರಗೆ ಕಳುಹಿಸಲು ಸಿದ್ಧತೆಗಳಾದವು. ರಂಗೂನ್ ಮತ್ತು ದಕ್ಷಿಣ ಬರ್ಮದ ದುರಂತ ಕಥೆ ಇಲ್ಲಿ ಪುನಃ ನಡೆಯುವಂತೆ ತೋರಿತು. ಮದರಾಸಿನಲ್ಲಿ ಜಪಾನೀ ಹಡಗು ಪಡೆ ಬರುತ್ತಿದೆ ಎಂಬ ನಿರಾಧಾರ ಸುದ್ದಿ ಹರಡಿ ಸರಕಾರದ ದೊಡ್ಡ ದೊಡ್ಡ ಅಧಿಕಾರಿಗಳು ಕಾಲು ಕಿತ್ತರು. ಬಂದರಿನ ಕೆಲವು ಸೌಲಭ್ಯ ಸಲಕರಣೆಗಳನ್ನು ಸಹ ನಾಶಮಾಡಿದರು. ಸಾಮಾನ್ಯ ಆಡಳಿತ ವರ್ಗಕ್ಕೆ ಬುದ್ಧಿ ಭ್ರಮೆಯಾಗಿ ದಿಕ್ಕುಗೆಟ್ಟಂತೆ ಸ್ಪಷ್ಟ ಕಂಡಿತು. ಭಾರತದ ರಾಷ್ಟ್ರೀಯತ್ವವನ್ನು ಎದುರಿಸಿ ತುಳಿಯಲು ಮಾತ್ರ ಆದಕ್ಕೆ ಶಕ್ತಿ ಇತ್ತು.

ಈಗ ನಾವು ಮಾಡುವುದೇನು ? ಭಾರತದ ಯಾವ ಭಾಗವೇ ಆಗಲಿ ಯಾವ ಪ್ರತಿಭಟನೆಯೂ ಇಲ್ಲದೆ ಪರಾಕ್ರಮಣಕ್ಕೆ ತಲೆಬಾಗಬೇಕೆನ್ನುವುದು ನನಗೆ ಅಸಾಧ್ಯವೆನಿಸಿತು. ಶಸ್ತ್ರ ಸಜ್ಜಿತ ಪ್ರತಿಭಟನೆಯಂತೂ ಸೈನ್ಯ ಮತ್ತು ವಾಯುಪಡೆ ಕೆಲಸವಾಯಿತು. ಅಮೆರಿಕನ್ ವಿಮಾನಗಳು ಬಂದ ಮೇಲೆ ಯುದ್ಧ ಪರಿಸ್ಥಿತಿಯಲ್ಲಿ ಸ್ವಲ್ಪ ಬದಲಾವಣೆಯಾಗುವುದರಲ್ಲಿತ್ತು. ಜನರಲ್ಲಿ ಉತ್ಸಾಹ ತುಂಬಿ ಹುರಿದುಂಬಿಸಿ ಎಷ್ಟು ನಷ್ಟವಾದರೂ ಪ್ರತಿಭಟಿಸಲೇಬೇಕೆಂಬ ನಮ್ಮ ಸ್ಥಿರಮನಸ್ಸಿನಿಂದ ಸಾರ್ವಜನಿಕ ಸೇವಾ ಪಡೆಗಳು, ಗೃಹ ರಕ್ಷಕದಳಗಳು ಮುಂತಾದ ಸಹಾಯಕ ಪಡೆಗಳನ್ನು ನಿರ್ಮಿಸಿ ದೇಶದ ಒಳಗೆ ವಾತಾವರಣ ಉತ್ತಮಪಡಿಸ ಬಹುದಾಗಿತ್ತು. ಬ್ರಿಟಿಷರ ಸಂಕುಚಿತ ನೀತಿಯಿಂದ ಇದು ನಮಗೆ ಅಸಾಧ್ಯವಾಯಿತು. ನಾಳೆ ಮುತ್ತಿಗೆ ಎಂದಾಗ ಸಹ ಸೈನಿಕರ ಹೊರತು ಬೇರೆ ಯಾವ ಭಾರತೀಯನ ಕೈಯಲ್ಲೂ ಒಂದು ಬಂದೂಕು ಕೊಡಲು ಬ್ರಿಟಿಷರಿಗೆ ಧೈರ್ಯವಿರಲಿಲ್ಲ; ಗ್ರಾಮಾಂತರಗಳಲ್ಲಿ ನಿಶ್ಶಸ್ತ್ರ ಸ್ವಯಂ ಸೇವಕ ಪಡೆ ಏರ್ಪಡಿಸಲು ನಾವು ಮಾಡಿದ ಪ್ರಯತ್ನವನ್ನು ಸಹ ಒಪ್ಪಲಿಲ್ಲ; ಅನೇಕ ವೇಳೆ ಅದಕ್ಕೂ ಅಡ್ಡಿ ಬಂದರು. ಜನರ ಪ್ರತಿಭಟನಾ ಶಕ್ತಿ ಹೆಚ್ಚಲೆಂದು ಅವರಲ್ಲಿ ಸಂಘಟನೆ ಶಕ್ತಿ ಬೆಳೆಸುವ ಬದಲು ಬ್ರಿಟಿಷ್ ಅಧಿಕಾರಿಗಳು ಆದರಲ್ಲಿ ಒಂದು ಪೆಡಂಭೂತವನ್ನು ಕಂಡು ಬೆದರಿದರು. ಏಕೆಂದರೆ ಮೊದಲಿನಿಂದ ಜನರ ಆತ್ಮರಕ್ಷಣಾ ಸಂಸ್ಥೆಗಳನ್ನೆಲ್ಲ ರಾಜದ್ರೋಹ ಸಂಸ್ಥೆಗಳೆಂದೂ ಬ್ರಿಟಿಷರ ಆಳ್ವಿಕೆಗೆ ಅಪಾಯ ಎಂದೂ ಭಾವಿಸಿದ್ದರು. ತಮ್ಮ ಆ ಹಳೆಯ ನೀತಿಯನ್ನೇ ಅವರು ಈಗಲೂ ನಂಬಿ ಅನುಸರಿಸಬೇಕಾಗಿತ್ತು; ಇಲ್ಲವಾದರೆ ಜನರಲ್ಲಿ ಭರವಸೆ ಇಟ್ಟು, ರಾಷ್ಟ್ರೀಯ ಸರಕಾರ ಸ್ಥಾಪಿಸಿ, ಆತ್ಮರಕ್ಷಣೆಗೆ ಅವರನ್ನು ಅಣಿಗೊಳಿಸಬೇಕಾಗಿತ್ತು. ಎರಡನೆಯ ಮಾರ್ಗ ಅವರು ನಿರಾಕರಿಸಿದ್ದರು. ಆದ್ದರಿಂದ ಮಧ್ಯವರ್ತಿ ಮಾರ್ಗ ಯಾವುದೂ ಇರಲಿಲ್ಲ. ಜನರನ್ನು ದನಗಳಂತೆ ನೋಡತೊಡಗಿದರು; ಅವರಿಗೆ ಯಾವ ಸ್ವಯಮಾಚರಣೆ ಅಧಿಕಾರವನ್ನೂ ಕೊಡಲಿಲ್ಲ; ತಮಗೆ ಮನಬಂದಂತೆ ತಾವು ವರ್ತಿಸತೊಡಗಿದರು. ೧೯೪೨ ನೆ ಏಪ್ರಿಲ್ ಕೊನೆಯಲ್ಲಿ ಅಖಿಲಭಾರತ ಕಾಂಗ್ರೆಸ್ ಸಮಿತಿ ಈ ಸರ್ವಾಧಿಕಾರ ನೀತಿಯನ್ನೂ ಆಚರಣೆಯನ್ನೂ ಉಗ್ರವಾಗಿ ಖಂಡಿಸಿತು. ಪರಕೀಯರ ಗುಲಾಮಗಿರಿಯನ್ನು ಭದ್ರಪಡಿಸುವ ಯಾವ ಪರಿಸ್ಥಿತಿಯನ್ನೂ ಇನ್ನು ಎಂದಿಗೂ ಒಪ್ಪಲು ಸಾಧ್ಯವಿಲ್ಲ ವೆಂದಿತು.

ಆದರೂ ಸುಮ್ಮನೆ ಕೈಕಟ್ಟಿ ಕುಳಿತು ನಿಶ್ಚೇತನ ಪ್ರೇಕ್ಷಕರಾಗಿ ಮುಂಬರುವ ದುರಂತ ನಾಟಕ ನೋಡಲು ಸಾಧ್ಯವಿರಲಿಲ್ಲ. ಮುತ್ತಿಗೆಯೇ ಸಂಭವಿಸಿದರೆ ಭಾರತದ ಜನಕೋಟಿ ಏನು ಮಾಡಬೇಕೆಂದು ಜನರಿಗೆ ತಿಳಿವಳಿಕೆ ಕೊಡಬೇಕಾಗಿತ್ತು. ಬ್ರಿಟಿಷರ ನೀತಿಯಿಂದ ಕುಪಿತರಾಗಿ ಅಸಮಾಧಾನಗೊಂಡಿದ್ದರೂ ಬ್ರಿಟಿಷರ ಅಥವ ಮಿತ್ರ ರಾಷ್ಟ್ರಗಳ ಸೈನ್ಯಗಳ ಚಲನವಲನಗಳಿಗೆ ಯಾವ ಆತಂಕವನ್ನೂ ಮಾಡಬಾರ ದೆಂದೂ, ಆ ರೀತಿ ಮಾಡಿದರೆ ಶತ್ರುವಿಗೆ ಪರೋಕ್ಷ ಸಹಾಯ ಮಾಡಿದಂತಾಗುವುದೆಂದೂ, ತಿಳಿಸಿದೆವು. ಯಾವ ಸಂದರ್ಭದಲ್ಲೂ ಶತ್ರುವಿಗೆ ತಲೆಬಾಗಬಾರದೆಂದೂ, ಆತನ ಆಜ್ಞೆಗಳನ್ನು ಪಾಲಿಸಲಾಗದೆಂದೂ, ಆತನಿಂದ ಯಾವ ಉಪಕಾರವನ್ನೂ ಪಡೆಯಬಾರದೆಂದೂ ತಿಳಿಸಿದೆವು. ಜನರ ಮನೆಮಠ, ಭೂಮಿಕಾಣಿ

ಏನನ್ನಾದರೂ ವಶಪಡಿಸಿಕೊಳ್ಳಲು ಯತ್ನಮಾಡಿದರೆ ಸಾಯುವವರೆಗೂ ಹೋರಾಡಿ ರಕ್ಷಿಸಬೇಕೆಂದು ತಿಳಿಸಿದೆವು. ಈ ಹೋರಾಟವು ಶಾಂತಿಯುತ ಇರಬೇಕೆಂದೂ, ಶತ್ರುವಿನೊಂದಿಗೆ ಸಂಪೂರ್ಣ ಅಸಹಕಾರ ದಿಂದ ವರ್ತಿಸಬೇಕೆಂದೂ ಹೇಳಿದೆವು.

ದಂಡೆತ್ತಿ ಮುತ್ತಿಗೆ ಹಾಕಲು ಬಂದ ಶತ್ರುವನ್ನು ಅಹಿಂಸಾತ್ಮಕ ಅಸಹಕಾರದಿಂದ ಎದುರಿಸಲೆತ್ನಿಸು ವುದು ಹುಚ್ಚುತನವೆಂದು ಅನೇಕರು ಅಪಹಾಸ್ಯಮಾಡಿ ಟೀಕಿಸಿದರು. ಹೇಡಿತನದ ಬದಲು ಜನರಿಗೆ ಇದ್ದ ಧೈರ್ಯಯುತ ಮಾರ್ಗವೆಂದರೆ ಇದು ಒಂದೇ ಎಂದು ನಾವು ಮನಗಂಡಿದ್ದೆವು. ಸೈನ್ಯದ ಯೋಧರಿಗೆ ಯಾವ ಸಲಹೆಯನ್ನೂ ಕೊಡಲಿಲ್ಲ. ಶಸ್ತ್ರಸಜ್ಜಿತ ವಿರೋಧಕ್ಕೆ ಪ್ರತಿಯಾಗಿ ಶಾಂತಿಯುತ ಹೋರಾಟ ನಡೆಸಬೇಕೆಂದೂ ಅವರಿಗೆ ಹೇಳಲಿಲ್ಲ. ಬ್ರಿಟಿಷ್ ಶಸ್ತ್ರಸಜ್ಜಿತ ಸೈನ್ಯಗಳು ಸೋತಾಗ ಅಥವ ಹಿಮ್ಮೆಟ್ಟಿ ದಾಗ ಸ್ವಾಭಾವಿಕವಾಗಿ ಶತ್ರುವಿಗೆ ಶರಣು ಹೋಗತಕ್ಕ ನಿಶ್ಶಸ್ತ್ರ ಸಾಮಾನ್ಯ ಪ್ರಜೆಗಳಿಗೆ ಮಾತ್ರ ಈ ಬುದ್ಧಿ ವಾದ ಕೊಟ್ಟೆವು. ಕ್ರಮವಾದ ಶಸ್ತ್ರಸಜ್ಜಿತ ಸೈನ್ಯಪಡೆಗಳಿಲ್ಲದೆ ಶತ್ರುವಿಗೆ ಹಿಂಸೆ ಕೊಡಲು ಮುಸುಕಿನ ದಂಡುಗಳನ್ನು ರಚಿಸಲು ಸಾಧ್ಯವಿದೆ. ಆದರೆ ಇದಕ್ಕೆ ಶಿಕ್ಷಣವೂ, ಶಸ್ತ್ರಾಸ್ತ್ರಗಳೂ, ಕ್ರಮವಾದ ಸೈನ್ಯದ ಪೂರ್ಣ ಸಹಕಾರವೂ ಅವಶ್ಯವಿರುವುದರಿಂದ ಇದು ನಮಗೆ ಸಾಧ್ಯವಿರಲಿಲ್ಲ. ಆ ರೀತಿ ಕೆಲವು ಮುಸುಕಿನ ದಂಡುಗಳನ್ನು ಸಿದ್ಧಪಡಿಸಿದರೂ ಸಾಮಾನ್ಯ ಪ್ರಜೆಗಳು ಕೋಟ್ಯಂತರ ಉಳಿಯುತ್ತಲೇ ಇದ್ದರು. ಸ್ವಾಭಾ ವಿಕವಾಗಿ ದೇಶದ ಸಾಮಾನ್ಯ ಪ್ರಜೆಗಳು ಜಯಶಾಲಿಯಾದ ಶತ್ರುವಿಗೆ ಶರಣು ಹೋಗುವುದೇ ರೂಢಿ. ಸೈನ್ಯವೂ, ಉನ್ನತ ಅಧಿಕಾರಿಗಳೂ ಹಿಮ್ಮೆಟ್ಟಿದನಂತರ ಸಣ್ಣ ಸಣ್ಣ ಅಧಿಕಾರಿಗಳೆಲ್ಲರೂ ಶತ್ರುವಿಗೆ ಶರಣಾ ಗತರಾಗಬೇಕೆಂದು ಬ್ರಿಟಿಷ್ ಅಧಿಕಾರಿಗಳು ಮೊದಲೇ ಸೂಚನೆ ಕೊಟ್ಟಿದ್ದಂತೆ ತಿಳಿಯಿತು.

ಶಾಂತಿಯುತ ಅಸಹಕಾರದಿಂದ ಶತ್ರು ಪಡೆಯ ಮುನ್ನೋಟ ತಡೆಯಲು ಸಾಧ್ಯವಿಲ್ಲವೆಂದು ನಮಗೆ ತಿಳಿದಿತ್ತು. ಎಷ್ಟೇ ಇಷ್ಟವಾದರೂ ಸಾಮಾನ್ಯ ಪ್ರಜೆಗಳನೇಕರಿಗೆ ಈ ಅಹಿಂಸಾತ್ಮಕ ಹೋರಾಟ ಬಹು ಕಷ್ಟವೆಂದೂ ಅರಿತಿದ್ದೆವು. ಆದರೂ ಶತ್ರು ವಶವಾದ ನಗರಗಳಲ್ಲಿ ಮತ್ತು ಹಳ್ಳಿಗಳಲ್ಲಿ ಕೆಲವು ಪ್ರಮುಖ ವ್ಯಕ್ತಿಗಳಾದರೂ ಅಹಿಂಸಾ ರೀತಿಯಲ್ಲಿ ಶತ್ರುವಿಗೆ ತಲೆಬಾಗಲು ಒಪ್ಪದಿರಬಹುದೆಂದೂ, ಅವರ ಆಜ್ಞೆ ಗಳನ್ನು ತೃಣೀಕರಿಸಬಹುದೆಂದೂ, ಆಹಾರ ಸರಬರಾಜು ಮುಂತಾದ ಕೆಲಸಗಳಲ್ಲಿ ಸಹಾಯ ನಿರಾಕರಿಸ ಬಹುದೆಂದೂ ಆಶಿಸಿದ್ದೆವು. ಪ್ರಾಯಶಃ ಅದಕ್ಕೆ ಉಗ್ರ ಶಿಕ್ಷೆಯೂ, ಸಾವು ನೋವುಗಳೂ ಕಾದಿದ್ದವು. ಆದರೆ ಅತ್ಯಲ್ಪ ಜನರಾದರೂ ಕೆಲವರು ಆರೀತಿ ಸಾವನ್ನು ಅಪ್ಪಿ ವಿರೋಧ ವ್ಯಕ್ತಪಡಿಸಿದರೆ ಯುದ್ಧರಂಗ ಪ್ರದೇಶದಲ್ಲಿ ಮಾತ್ರವಲ್ಲದೆ ಭಾರತದ ಉಳಿದ ಕಡೆಗಳಲ್ಲಿ ಸಹ ಸಾಮಾನ್ಯ ಜನರ ಮೇಲೆ ಅದ್ಭುತ ನೈತಿಕ ಪರಿಣಾಮ ಆಗುವುದೆಂದು ನಂಬಿದ್ದೆವು. ಈ ರೀತಿ ಇಡೀ ರಾಷ್ಟ್ರದಲ್ಲೆಲ್ಲ ಒಂದು ಅಹಿಂಸಾತ್ಮಕ ಹೋರಾಟ ನಡೆಸಬೇಕೆಂಬ ದೃಢ ಸಂಕಲ್ಪದ ಭಾವನೆ ಬೆಳೆಯಬೇಕೆಂದು ಯೋಚಿಸಿದೆವು.

ಅಧಿಕಾರಿಗಳ ವಿರೋಧವಿದ್ದರೂ ಅದನ್ನು ಅಲಕ್ಷಿಸಿ ಕೆಲವು ತಿಂಗಳಿಂದ ನಗರ ಮತ್ತು ಹಳ್ಳಿಗಳಲ್ಲಿ ಆಹಾರ ಸಮಿತಿಗಳನ್ನೂ, ಆತ್ಮರಕ್ಷಣಾ ಪಡೆಗಳನ್ನೂ ರಚಿಸಲು ಆರಂಭಿಸಿದ್ದೆವು. ಆಹಾರ ಸಮಸ್ಯೆ ಆಗಲೇ ವಿಷಮ ಪರಿಸ್ಥಿತಿ ಮುಟ್ಟಿತ್ತು. ಯುದ್ಧದೆಸೆಯಿಂದ ಆಹಾರ ಸಾಗಾಟ ಮತ್ತು ಸರಬರಾಜಿಗೆ ತೊಂದರೆ ಹೆಚ್ಚಿ ಸರಬರಾಜು ವ್ಯವಸ್ಥೆಯೇ ಎಂದಾದರೂ ಕುಸಿದು ಬೀಳಬಹುದೆಂದು ಭಯಗೊಂಡೆವು. ಈ ವಿಷಯ ದಲ್ಲಿ ಸರಕಾರವು ಏನನ್ನೂ ಮಾಡಲಿಲ್ಲ. ಗ್ರಾಮಾಂತರಗಳಲ್ಲಿ ಸ್ವಸಂಪೂರ್ಣ ಪಡೆಗಳನ್ನು ಏರ್ಪಡಿಸಿ ಆಧುನಿಕ ಸಂಚಾರ ಸೌಕರ್ಯ ಕುಸಿದು ಬಿದ್ದರೆ ಹಿಂದಿನ ಕಾಲದಂತೆ ಎತ್ತಿನಗಾಡಿಗಳ ಸಾರಿಗೆಗೆ ಪ್ರೋತ್ಸಾಹ ಕೊಡಿರೆಂದು ತಿಳಿಸಿದೆವು. ಪೂರ್ವದಿಂದ ಮುತ್ತಿಗೆಯು ಆರಂಭವಾದರೆ ಚೀನಾದಲ್ಲಿ ಆದಂತೆ ಅನೇಕ ನಿರಾಶ್ರಿತರೂ ದೇಶಾಂತರ ಬಂದವರೂ ಪಶ್ಚಿಮದ ಕಡೆ ಹೊರಳುವ ಸಂಭವವಿತ್ತು. ಅವರನ್ನು ಸ್ವಾಗತಿಸಿ ಅವರಿಗೆ ಸೌಲಭ್ಯ ಕಲ್ಪಿಸಲು ಸಿದ್ಧರಾದೆವು. ಸರಕಾರದ ಸಹಾಯವಿಲ್ಲದೆ ಇದೆಲ್ಲ ಸಿದ್ಧತೆ ಬಹಳ ಕಷ್ಟ ವಿತ್ತು; ಸಾಧ್ಯವೇ ಇರಲಿಲ್ಲ; ಆದರೂ ಸಾಧ್ಯವಾದ ಎಲ್ಲ ಪ್ರಯತ್ನವನ್ನೂ ಮಾಡಿದೆವು. ಸ್ವಯಂ ರಕ್ಷಣಾ ಪಡೆಗಳ ಕರ್ತವ್ಯವು ಈ ಎಲ್ಲ ಕೆಲಸಗಳಲ್ಲಿ ಸಹಾಯಮಾಡಿ, ಜನರು ಭಯಗ್ರಸ್ತರಾಗದಂತೆ ಧೈರ್ಯ ಕೊಟ್ಟು, ಆಯಾ ಸ್ಥಳಗಳಲ್ಲಿ ಕ್ರಮ ಜೀವನವು ನಿರಾತಂಕ ನಡೆಯುವಂತೆ ನೋಡಿಕೊಳ್ಳುವುದಾ

ಗಿತ್ತು. ವಿಮಾನ ದಾಳಿಯೋ, ದೂರದಲ್ಲಿ ಎಲ್ಲಿ ಮುತ್ತಿಗೆಯೋ ಒದಗಿದರೆ ಸಾಮಾನ್ಯ ಜನರಲ್ಲಿ ಭೀತಿ ಹುಟ್ಟುವುದು ಸಹಜವಿತ್ತು; ಇದನ್ನು ತಡೆಗಟ್ಟುವುದು ಅವಶ್ಯವಿತ್ತು. ಅಧಿಕಾರಿಗಳು ತೆಗೆದುಕೊಂಡ ಮುನ್ನೆಚ್ಚರಿಕೆಯ ಕಾರ್ಯಕ್ರಮವು ಏನೂ ತೃಪ್ತಿಕರ ಇರಲಿಲ್ಲ; ಜನರು ಇದನ್ನು ಅಪನಂಬಿಕೆಯಿಂದ ಸಹ ನೋಡುತ್ತಿದ್ದರು. ಗ್ರಾಮಾಂತರಗಳಲ್ಲಿ ದರೋಡೆಗಳೂ, ಸುಲಿಗೆಗಳೂ ಹೆಚ್ಚುತ್ತಿದ್ದವು.

ಈ ಎಲ್ಲ ದೊಡ್ಡ ಯೋಜನೆಗಳನ್ನು ನಾವು ಹಾಕಿಕೊಂಡು, ಸ್ವಲ್ಪ ಮಟ್ಟಿಗೆ ಕಾರ್ಯರೂಪಕ್ಕೂ ತಂದೆವು; ಆದರೂ ನಮ್ಮ ಯತ್ನವೆಲ್ಲ ನಮ್ಮೆದುರು ನಿಂತ ಮಹಾ ಬೃಹತ್ಸಮಸ್ಯೆಯ ಮೇಲ್ಮೈ ಮಾತ್ರ ತುರಿಸಿದಂತೆ ಕಂಡಿತು. ಸರಕಾರದ ಆಡಳಿತ ಯಂತ್ರವೂ ಜನರೂ ಸಂಪೂರ್ಣ ಸಹಕರಿಸಿದರೆ ಮಾತ್ರ ನಿಜವಾದ ಪರಿಹಾರ ಸಾಧ್ಯವಿತ್ತು; ಆದರೆ ಆ ಸಹಕಾರ ಮಾತ್ರ ಸಾಧ್ಯ ಇರಲಿಲ್ಲ. ವಿಷಮ ಪರಿಸ್ಥಿತಿಯ ಕರೆಗೆ ಓಗೊಟ್ಟು ಕಾರ್ಯೋನ್ಮುಖರಾಗಲು ಉತ್ಸಾಹದಿಂದ ನಾವು ಕುದಿಯುತ್ತಿದ್ದರೂ ಪರಿಣಾಮಕಾರಕ ಕಾರ್ಯಕ್ರಮ ಕೈಗೊಳ್ಳಲು ಸಾಧ್ಯವಿಲ್ಲದ ಈ ಸನ್ನಿವೇಶ ಎದೆಬಿರಿಯುವಂತೆ ಇತ್ತು. ಪ್ರಳಯಾಂತಕ ವಿಪತ್ತೂ ಸರ್ವನಾಶವೂ ನಾಗಾಲೋಟದಿಂದ ನಮ್ಮ ಕಡೆ ಮುನ್ನುಗ್ಗುತ್ತಿದ್ದವು; ಆದರೆ ಭಾರತವು ವಿದೇಶಗಳ ಶತ್ರು ಸೈನ್ಯಗಳ ಯುದ್ಧರಂಗವಾಗಿ ಕೋಪದಿಂದ, ಕಹಿ ಮನಸ್ಸಿನಿಂದ ನಿಸ್ಸಹಾಯಕವೂ ನಿಸ್ತೇಜವೂ ಆಗಿ ಕಾಲ ತಳ್ಳುತ್ತಿತ್ತು.

ನಾನು ಪ್ರಬಲ ಯುದ್ಧ ವಿರೋಧಿ ಆದರೂ, ಜಪಾನರು ಭಾರತಕ್ಕೆ ಮುತ್ತಿಗೆ ಹಾಕುವರೆಂದು ನನಗೆ ಭಯವಾಗಲಿಲ್ಲ. ಭಾರತಕ್ಕೆ ಯುದ್ಧವು ತುಂಬ ಹಾನಿಕರವಾದರೂ ನನ್ನ ಮನಸ್ಸಿನ ಹಿನ್ನೆಲೆಯ ಒಂದು ದೃಷ್ಟಿಯಿಂದ ಈ ಯುದ್ಧ ಬರುವುದನ್ನು ಸ್ವಾಗತಿಸಿದ್ದೆ. ಒಮ್ಮೆ ಎಲ್ಲವೂ ತಲೆಕೆಳಕಾಗಿ ಮಂಥನವಾಗಬೇಕೆಂಬ ಇಚ್ಛೆ ಇತ್ತು. ಬ್ರಿಟಿಷರು ನಮ್ಮ ಮೇಲೆ ಹೇರಿದ್ದ ಶ್ಮಶಾನ ಶಾಂತಿಯಿಂದ ಜನಕೋಟಿಯು ಹೊಡೆದೆದ್ದು ಪ್ರತ್ಯಕ್ಷ ಹೊಸ ಅನುಭವ ಪಡೆಯುವದು ಅವಶ್ಯವಿತ್ತು. ಅವರನ್ನು ಬಿಡದೆ ಅಂಟಿಕೊಂಡಿದ್ದ ಗತಕಾಲದ ಜೀರ್ಣ ಪದ್ಧತಿಗಳು ಭಸ್ಮವಾಗಿ, ಪ್ರಕೃತ ಕಾಲದ ನಗ್ನ ವಾಸ್ತವದ ಎದುರಿನಲ್ಲಿ ತಮ್ಮ ಅಲ್ಪ ರಾಜಕೀಯ ಭಿನ್ನತೆಗಳನ್ನು ಮರೆಯುವಂತೆಯೂ, ತಾತ್ಕಾಲಿಕ ಸಮಸ್ಯೆಗಳನ್ನೇ ಪೆಡಂಭೂತ ಮಾಡಿಕೊಂಡು ಮನಸ್ಸು ಕೆಡಿಸಿಕೊಳ್ಳದಂತೆಯೂ ಅವರನ್ನು ಚಾಟಿಯ ಏಟಿನಂತೆ ಹೊಡೆದೆಬ್ಬಿಸಲು ಏನಾದರೂ ಬೇಕಾಗಿತ್ತು. ಹಿಂದಿನ ಬೇರುಗಳನ್ನು ಕಳೆದು ಕೊಳ್ಳದೆ, ಆದರೆ ಅಷ್ಟರಲ್ಲೇ ಅಲ್ಪ ತೃಪ್ತರಾಗಿ ಬಾಳದೆ ಇಂದಿನದನ್ನು ಅರಿತು ಭವಿಷ್ಯದ ಕಡೆಗೂ ದೃಷ್ಟಿ ಇಟ್ಟು . . . . ಜೀವನದ ತಾಳ ಮತ್ತು ಗತಿಗಳನ್ನು ಬದಲಾಯಿಸಿ ಇಂದಿನ ಕಾಲ ಮತ್ತು ಭವಿಷ್ಯದೊಂದಿಗೆ ಸಾಮರಸ್ಯದಿಂದ ನಡೆಯಲು ಪರಿವರ್ತನೆ ಅತ್ಯಗತ್ಯವಿತ್ತು. ಯುದ್ಧದ ವೆಚ್ಚವು ಅಪಾರವಿತ್ತು; ಮುಂದಿನ ಪರಿಣಾಮವೂ ಅನಿಶ್ಚಿತವಿತ್ತು. ಆದರೆ ನಾವೇನೂ ಅದನ್ನು ಬಯಸಿದವರಲ್ಲ. ಅದೇ ನಮ್ಮ ಬಾಗಿಲಿಗೆ ಬಂದಿದ್ದರಿಂದ ರಾಷ್ಟ್ರದ ನರಗಳನ್ನು ಬಿಗಿಮಾಡಿ ಹೊಸ ಜೀವನ ವಿಕಾಸಕ್ಕೆ ಅವಶ್ಯವಾದ ಎಲ್ಲ ಮುಖ್ಯ ಅನುಭವಗಳನ್ನೂ ಅದರಿಂದ ಪಡೆಯಬಹುದಿತ್ತು. ಅನೇಕರು ಸಾಯುವುದು ಅನಿವಾರ್ಯವಿತ್ತು; ಆದರೆ ಕ್ಷಾಮಪೀಡಿತರಾಗಿ ಸಾಯುವುದಕ್ಕಿಂತ ಯುದ್ಧದಲ್ಲಿ ಮಡಿಯುವುದು ಉತ್ತಮವಿತ್ತು; ನಿರಾಸೆಯ ಗೋಳಿನ ಬಾಳಿಗಿಂತ ಸಾವನ್ನು ಅಪ್ಪುವುದು ಹಿತಕರವಿತ್ತು. ಆದರೆ ಸಾವಿನಲ್ಲೆ ಹೊಸ ಬಾಳಿನ ಅಂಕುರ. ಸಾವನ್ನು ಅರಿಯದ ವ್ಯಕ್ತಿಗಳು ಮತ್ತು ರಾಷ್ಟ್ರಗಳು ಜೀವನವನ್ನೂ ಅರಿಯರು. "ಮರಣವೇ ಜೀವನ".

ಯುದ್ಧ ಭಾರತಕ್ಕೆ ಬಂದರೂ ಅದರಿಂದ ನಮಗೆ ಯಾವ ಉತ್ಸಾಹವೂ ಆಗಲಿಲ್ಲ. ಸಾವು ನೋವುಗಳನ್ನು ಮರೆತು, ಸ್ವಾರ್ಥವನ್ನು ನಿರ್ಲಕ್ಷಿಸಿ, ಸ್ವಾತಂತ್ರ್ಯ ರಕ್ಷಣೆಗೆ ಮಾತ್ರ ಬೆಲೆಕೊಟ್ಟು, ಮುಂದಿನ ಭವಿಷ್ಯದ ದೃಷ್ಟಿಯೊಂದನ್ನೇ ಕಾಣುತ್ತ ಯಾವುದೋ ಒಂದು ಸಂತೋಷದ ಉನ್ಮಾದದಲ್ಲಿ ಸರ್ವಶಕ್ತಿಯನ್ನೂ ವಿನಿಯೋಗಿಸಿ ಕಾದಾಡುವ ಅದೃಷ್ಟ ನಮಗೆ ದೊರೆಯಲಿಲ್ಲ. ಸಹಿಸಲಶಕ್ಯವಾದ ಸಂಕಟ ಮತ್ತು ವ್ಯಸನ ಮಾತ್ರ ನಮ್ಮ ಪಾಲಿಗೆ ಬಂದಿತ್ತು; ನಮ್ಮ ಕಣ್ಣು ಕೋರೈಸಿ ನೋವು ಹೆಚ್ಚಿಸಿ ಎದುರುನಿಂತ ನಿವಾರಿಸಲಶಕ್ಯವಾದ ಅಪಘಾತದ ಅರಿವು ಮಾತ್ರ ನಮ್ಮದಾಗಿತ್ತು. ಅನಿವಾರ್ಯವೂ, ತಪ್ಪಿಸಿಕೊಳ್ಳಲಸಾಧ್ಯವೂ ಆದ ಈ ವೈಯಕ್ತಿಕ ಮತ್ತು ರಾಷ್ಟ್ರೀಯ ದುರಂತದ ಚಿಂತೆ ಮಾತ್ರ ನಮ್ಮ ಮನಸ್ಸನ್ನು ಪೂರ್ಣ ಆವರಿಸಿ ಕೊರೆಯತೊಡಗಿತ್ತು.

ಸೋಲು ಗೆಲುವು ಯಾರದೇ ಇರಲಿ, ಯುದ್ಧದ ಜಯಾಪಜಯಕ್ಕೂ ಈ ದುರಂತಕ್ಕೂ ಯಾವ ಸಂಬಂಧವೂ ಇರಲಿಲ್ಲ. ಅಕ್ಷ ರಾಷ್ಟ್ರಗಳ ಗೆಲುವು ನಮಗೆ ಇಷ್ಟವಿರಲಿಲ್ಲ. ಏಕೆಂದರೆ ಅದರಿಂದ ಸರ್ವ ನಾಶ ಖಂಡಿತವಿತ್ತು. ಜಪಾನರು ಬಂದು ಭಾರತದ ಯಾವ ಭಾಗ ಆಕ್ರಮಿಸುವುದೂ ನಮಗೆ ಇಷ್ಟವಿರ ಲಿಲ್ಲ. ಏನೆ ಆಗಲಿ ಅವಶ್ಯ ಅದನ್ನು ಎದುರಿಸಲೇಬೇಕೆಂದು ಜನರಿಗೆ ಮೇಲಿಂದ ಮೇಲೆ ತಿಳಿಸಿದೆವು. ಆದರೆ ಇದೆಲ್ಲ ಅಭಾವ ವೈರಾಗ್ಯದ ಮಾತು. ಈ ಯುದ್ಧದ ನಿಜವಾದ ಗುರಿಯಾದರೂ ಏನು? ನಮ್ಮ ಭವಿಷ್ಯ ಏನು? ಹಿಂದಿನ ಮೂರ್ಖತನ ಮತ್ತು ಗಂಡಾಂತರಗಳ ಪುನರಾವರ್ತನವೆ? ಮಾನವನ ಆಸೆ ಮತ್ತು ಭಾವನೆಗಳಿಗೆ ಯಾವ ಲಕ್ಷ್ಯೆಯನ್ನೂ ಕೊಡದ ಪ್ರಕೃತಿ ಶಕ್ತಿಗಳ ಕುರುಡು ನಾಟಕವೆ? ಭಾರತದ ಭವಿಷ್ಯ ಏನು?

ಒಂದು ವರ್ಷದ ಹಿಂದೆ ರವೀಂದ್ರರು ತಮ್ಮ ಮರಣಶಯ್ಯೆಯಿಂದ ಕೊಟ್ಟ ಅಂತಿಮ ಸಂದೇಶವನ್ನು ನಾವು ಜ್ಞಾಪಿಸಿಕೊಂಡೆವು. "ಪಾಶವೀ ಸ್ವಭಾವದ ರಾಕ್ಷಸೀ ಶಕ್ತಿಯು ಎಲ್ಲ ನಾಚಿಕೆಯನ್ನೂ ಬಿಟ್ಟದೆ, ಮಾನವೀಯತೆಯನ್ನೂ ನುಚ್ಚುನುರಿಮಾಡಿ ಪ್ರಳಯಾಂತಕ ವಿನಾಶದಲ್ಲಿ ಮುಳುಗಿಸಲು ಸಿದ್ಧವಾಗಿ ನಗ್ನ ನಖಗಳನ್ನು ಚಾಚಿ ಹೊರ ಬಿದ್ದಿದೆ. ದಿಗಂತದಿಂದ ದಿಗಂತದವರೆಗೂ ಪ್ರಪಂಚವನ್ನು ಆವರಿಸಿ ದ್ವೇಷದ ವಿಷಮಯ ಹೊಗೆಯು ವಾಯುಮಂಡಲವನ್ನು ಕಪ್ಪುಗಟ್ಟಿ ಮುಸುಕಿದೆ. ಪಾಶ್ಚಾತ್ಯರ ಮನೋಭೀತಿಯ ಹಿಂದೆ ಸುಸುಪ್ತವಿದ್ದ ಹಿಂಸಾ ಮನೋಭಾವವು ಹುಚ್ಚೆದ್ದು ಕೆರಳಿ ಮಾನವೀಯತೆಯ ಭಾವನೆಯನ್ನೇ ಕುಲಗೆಡಿಸುವಂತಿದೆ.

"ಕಾಲಚಕ್ರದ ಒತ್ತಾಯದಿಂದ ಇಂಗ್ಲಿಷರು ಎಂದೋ ಒಂದು ದಿನ ಭಾರತದಲ್ಲಿನ ತಮ್ಮ ಸಾಮ್ರಾ ಜ್ಯದ ಅಧಿಕಾರ ತೊರೆಯಬೇಕಾಗುತ್ತದೆ. ಆದರೆ ಅವರು ಹಿಂದೆ ಬಿಟ್ಟು ಹೋಗುವ ಭಾರತದ ಸ್ಥಿತಿ ಎಂತದು? ಏನು ಸಂಕಟದ ಗೋಳು? ಶತಮಾನಗಳ ಅವರ ಅಧಿಕಾರ ಪ್ರವಾಹ ಬತ್ತಿದಾಗ ಅವರು ಬಿಟ್ಟು ಹೋಗುವ ಕೊಚ್ಚೆ ಎಷ್ಟು? ಕೆಸರು ಎಷ್ಟು? ಯೂರೋಪಿನ ಹೃದಯಕಮಲದಿಂದ ನಾಗರಿಕತೆಯ ಬುಗ್ಗೆ ಉಕ್ಕೇರಿ ಹರಿಯುವುದೆಂದು ಒಂದಾನೊಂದು ಕಾಲ ನಾನು ನಂಬಿದ್ದೆ. ಈ ಪ್ರಪಂಚ ಬಿಟ್ಟು ಹೊರಡುತ್ತಿರುವ ನನಗೆ ಇಂದು ಆ ನಂಬಿಕೆ ಸಂಪೂರ್ಣ ನಾಶವಾಗಿ ಹೋಗಿದೆ.

"ಎತ್ತ ನೋಡಿದರೂ ಕುಸಿದು ಬೀಳುತ್ತಿರುವ ಒಂದು ಗರ್ವಿಷ್ಠ ನಾಗರಿಕತೆಯ ಅವಶೇಷಗಳೂ ದೊಡ್ಡದೊಂದು ವಿಫಲತೆಯ ಕಸದ ರಾಶಿಯಂತೆ ಹರಡಿರುವುದು ಕಣ್ಣಿಗೆ ಕಾಣುತ್ತಿದೆ. ಆದರೂ ಮಾನವ ನಲ್ಲಿ ನಂಬಿಕೆ ಕಳೆದುಕೊಳ್ಳುವ ಮಹಾ ಪಾಪ ನಾನು ಮಾಡುವುದಿಲ್ಲ. ಈ ಪ್ರಳಯ ಕಾಲ ಕೊನೆಗಂಡು ಸೇವೆ ತ್ಯಾಗಗಳಿಂದ ವಾತಾವರಣ ತಿಳಿಗಟ್ಟಿದ ಮೇಲೆ ಮಾನವನ ಇತಿಹಾಸದಲ್ಲಿ ಹೊಸ ಅಧ್ಯಾಯ ಒಂದು ಆರಂಭವಾಗುವುದೆಂದು ನಂಬಿದ್ದೇನೆ. ಸೂರ್ಯೋದಯ ಆಗುವುದು ಇಲ್ಲಿ ಪೂರ್ವದಲ್ಲಿ; ಪ್ರಾಯಶಃ ಇದೇ ದಿಗಂತದಿಂದಲೇ ಉಷಃಕಾಲ ಆರಂಭವಾಗಬಹುದು. ಗೆದ್ದ ಮನುಷ್ಯ ತನ್ನ ಗೆಲುವಿನ ದಾರಿ ಬಿಟ್ಟು, ಎಲ್ಲ ಅಡ್ಡಗೋಡೆಗಳನ್ನೂ ಒಡೆದು, ಕಳಕೊಂಡ ಮಾನವೀಯತೆಯ ಅಸ್ತಿತ್ವವನ್ನು ಪುನಃ ಸಂಪಾದಿಸುವ ದಿನವೂ ಬರುತ್ತದೆ.

"ಪಾಶವೀಶಕ್ತಿಯ ದುರಹಂಕಾರದ ಜೊತೆಗೆ ಇರುವ ವಿಪತ್ತುಗಳೇ ಇಂದು ನಮ್ಮ ಕಣ್ಣಿಗೆ ಕಾಣು ತ್ತಿದ್ದರೂ ಋಷಿವಾಣಿಯಲ್ಲಿ ಉಕ್ತವಿರುವ ಪೂರ್ಣ ಸತ್ಯವು ಒಂದಲ್ಲ ಒಂದು ದಿನ ಬೆಳಕಿಗೆ ಬಂದೇ ಬರುತ್ತದೆ.

"ಅಧರ್ಮದಿಂದ ಮನುಷ್ಯ ಕೀರ್ತಿ ಪಡೆಯಬಹುದು, ಕಾಮಿತ ವಸ್ತುಗಳನ್ನು ಸಂಪಾದಿಸಬಹುದು, ಶತ್ರುಗಳನ್ನು ಜಯಿಸಬಹುದು, ಆದರೆ ಮೂಲತಃ ನಾಶಹೊಂದುತ್ತಾನೆ."

ಇಲ್ಲಿ, ಮಾನವನಲ್ಲಿ ನಂಬಿಕೆ ಕಳೆದುಕೊಳ್ಳಬಾರದು. ದೇವರು ಇಲ್ಲವೆಂದರೂ ಅನ್ನಬಹುದು; ಆದರೆ ಮಾನವನ ಅಸ್ತಿತ್ವದಲ್ಲು ನಂಬಿಕೆ ಇಡದಿದ್ದರೆ ಉಳಿಯುವುದೇನು? ಎಲ್ಲವೂ ನಿಷ್ಫಲ. ಆದರೆ ಯಾವುದರಲ್ಲಿ ನಂಬಿಕೆ ಇಡುವುದೂ ಕಷ್ಟವಾಗಿತ್ತು; ಧರ್ಮಕ್ಕೆ ಜಯ ಸಿದ್ಧವೆಂದು ನಂಬುವುದೂ ಕಷ್ಟವಿತ್ತು.

ದೇಹಾಲಸ್ಯದಿಂದ ಮತ್ತು ಮನಸ್ಸಿನ ತಳಮಳದಿಂದ ನನ್ನ ಸುತ್ತಲಿನ ಸನ್ನಿವೇಶಗಳಿಂದ ತಪ್ಪಿಸಿ ಕೊಳ್ಳಲು ಯತ್ನಿಸಿ ಹಿಮಾಲಯ ಮಧ್ಯದ ಕುಲು ಕಣಿವೆಗೆ ಪ್ರಯಾಣ ಮಾಡಿದೆ.

## ೧೦. ಪ್ರತಿಭಟನೆ—'ಭಾರತ ಬಿಡಿ' ನಿರ್ಣಯ

ಹದಿನೈದು ದಿನಗಳನಂತರ ಕುಲುವಿಂದ ನಾನು ಹಿಂದಿರುಗಿದಾಗ ದೇಶದ ಒಳಸ್ಥಿತಿ ಬಹು ಬೇಗ ಪ್ರಕ್ಷುಬ್ಧಗೊಳ್ಳುತ್ತಿರುವುದು ಗೊತ್ತಾಯಿತು. ಸಂಧಾನಕ್ಕಾಗಿ ನಮ್ಮ ಕೊನೆಯ ಪ್ರಯತ್ನ ಸಹ ವಿಫಲ ವಾದುದನ್ನು ಕಂಡು ಬೇಸರ ಹುಟ್ಟಿ ಆ ಕಡೆ ಯಾವ ಆಶೆಯೂ ಇಲ್ಲವೆಂದೂ ನಿರ್ಧರಮಾಡಿಕೊಂಡೆವು. ಪಾರ್ಲಿಮೆಂಟ್ ಮತ್ತು ಇತರ ಕಡೆಗಳಲ್ಲಿ ಬ್ರಿಟಿಷ್ ಅಧಿಕಾರಿಗಳು ಮಾಡಿದ ಭಾಷಣಗಳಿಂದ ಇದಕ್ಕೆ ಇನ್ನೂ ಸಮರ್ಥನೆ ದೊರೆತು ಜನರ ಕೋಪವು ಅಧಿಕವಾಯಿತು. ಭಾರತದಲ್ಲಿ ನಮ್ಮ ಎಲ್ಲ ಸಾಮಾನ್ಯ ರಾಜಕೀಯ ಮತ್ತು ಸಾರ್ವಜನಿಕ ಕಾರ್ಯಗಳನ್ನು ವಿರೋಧಿಸುವುದೇ ಅಧಿಕಾರಿಗಳ ನಿರ್ದಿಷ್ಟ ನೀತಿಯಾ ಯಿತು; ಎಲ್ಲ ಕಡೆಯೂ ಬಂಧನವು ಬಿಗಿಯಾಯಿತು. ಕ್ರಿಪ್ಸ್ ಸಂಧಾನ ಕಾಲದಲ್ಲೇ ನಮ್ಮ ಅನೇಕ ಕೆಲಸಗಾರರು ಸೆರೆಮನೆಯಲ್ಲಿದ್ದರು. ಭಾರತ ರಕ್ಷಣಾ ಶಾಸನದ ಕೆಳಗೆ ನನ್ನ ತೀರ ಸಮೀಪದ ಆಪ್ತಮಿತ್ರರು ಬಂಧಿತರಾಗಿ ಸೆರೆಮನೆ ಸೇರಿದ್ದರು. ಮೇ ತಿಂಗಳ ಆದಿಭಾಗದಲ್ಲೇ ರಫಿ ಅಹಮದ್ ಕಿದ್ವಾಯ್ ಬಂಧನ ವಾಗಿತ್ತು. ಅನಂತರ ಸಂಯುಕ್ತ ಪ್ರಾಂತ್ಯದ ಕಾಂಗ್ರೆಸ್ ಕಮಿಟಿಯ ಅಧ್ಯಕ್ಷ ಕೃಷ್ಣ ದತ್ತ ಪಲಿವಾಲ್ ಮತ್ತು ಇತರರ ದಸ್ತಗಿರಿಯಾಗಿತ್ತು. ಈ ರೀತಿ ನಮ್ಮಲ್ಲಿ ಅನೇಕರನ್ನು ಒಬ್ಬೊಬ್ಬರನ್ನಾಗಿ ಬಂಧಿಸಿ, ಸಾರ್ವಜನಿಕ ಜೀವನದಿಂದ ಹೊರದೂಡಿ, ನಮ್ಮ ರಾಷ್ಟ್ರೀಯ ಚಳವಳಿಯು ತಲೆ ಎತ್ತದಂತೆ ಮತ್ತು ಕ್ರಮೇಣ ಛಿದ್ರ ಛಿದ್ರವಾಗುವಂತೆ ಮಾಡುವ ಏರ್ಪಾಟಿನಲ್ಲಿ ಸರಕಾರವಿದ್ದಂತೆ ಕಂಡಿತು. ಇದನ್ನೆಲ್ಲ ಸುಮ್ಮನೆ ಕುಳಿತು ನೋಡುವುದೆ? ಆದರೆ ನಮ್ಮ ಶಿಕ್ಷಣ ಆರೀತಿ ಇರಲಿಲ್ಲ. ನಮ್ಮ ವೈಯಕ್ತಿಕ ಮತ್ತು ರಾಷ್ಟ್ರೀಯ ಗೌರವಕ್ಕೆ ಅಪಮಾನವಾಗಿ ಅಧಿಕಾರಿವರ್ಗದ ಈ ನಡತೆಯಿಂದ ನಾವು ಪ್ರಕೋಪ ಗೊಂಡಿದ್ದೆವು.

ಭಯಂಕರ ಯುದ್ಧ ಪರಿಸ್ಥಿತಿಯಲ್ಲಿ, ಮುತ್ತಿಗೆಯ ಭಯದ ಎದುರು ನಾವು ಮಾಡಬಹುದಾದ್ದು ಏನು? ಆದರೆ ನಿಶ್ಚೇತನರಾಗಿ ಕುಳಿತುಕೊಳ್ಳುವದರಿಂದ ನಮ್ಮ ಧ್ಯೇಯ ಸಾಧನೆಗೆ ಯಾವ ಸೇವೆಯನ್ನು ಸಲ್ಲಿಸಿದಂತಾಗಲಿಲ್ಲ. ಈ ಅಶಕ್ತತೆಯ ಪರಿಣಾಮವಾಗಿ ಬೆಳೆಯುತ್ತಿದ್ದ ಭಾವನೆಗಳು ಬಹಳ ಚಿಂತಾ ಜನಕವೂ ಭಯಂಕರವೂ ಇದ್ದವು. ಇಷ್ಟು ದೊಡ್ಡ ವಿಶಾಲ ರಾಷ್ಟ್ರದಲ್ಲಿ, ಮತ್ತು ವಿಷಮ ಸನ್ನಿವೇಶದಲ್ಲಿ ಸಾರ್ವಜನಿಕ ಅಭಿಪ್ರಾಯಗಳಲ್ಲಿ ಭಿನ್ನತೆ ಬರುವುದು ಸ್ವಾಭಾವಿಕವಿತ್ತು. ಯಾರ ಒಲವೂ ಜಪಾನರ ಪರ ಇರಲಿಲ್ಲ, ಏಕೆಂದರೆ ಕೇವಲ ಯಾಜಮಾನ್ಯದ ಬದಲಾವಣೆ ಯಾರಿಗೂ ಬೇಕಿರಲಿಲ್ಲ. ಚೀಣರ ಮೇಲೆ ವಿಶೇಷ ಸಹಾನುಭೂತಿ ಎಲ್ಲರಲ್ಲೂ ಬೇರೂರಿತ್ತು, ಒಂದು ವರ್ಷದ ಹಿಂದೆ ಭಾರತದಿಂದ ತಪ್ಪಿಸಿಕೊಂಡು ಹೋಗಿದ್ದ ಸುಭಾಷ್ ಚಂದ್ರಬೋಸ್‌ರ ಆಕಾಶವಾಣಿಯ ಭಾಷಣಗಳು ಜನರ ಮೇಲೆ ವಿಶೇಷ ಪರಿಣಾಮ ಮಾಡುತ್ತಿದ್ದವು. ಅನೇಕರು ಯಾವ ಕಡೆಯೂ ಒಲವು ತೋರಿಸದೆ ಮುಂದೇನಾಗುವುದೊ ನೋಡೋಣವೆಂದು ಸುಮ್ಮನೆ ಕಾಯುತ್ತಿದ್ದರು. ದುರದೃಷ್ಟವಶಾತ್ ಭಾರತದ ಯಾವ ಪ್ರದೇಶವಾದರೂ ಶತ್ರುವಿನ ಅಧೀನಕ್ಕೆ ಒಳಗಾದರೆ ಅವರೊಂದಿಗೆ ಸಹಕರಿಸುವವರೂ ಇದ್ದರು. ಏಕೆಂದರೆ ವಿಶೇಷ ಉತ್ಪನ್ನ ಉಳ್ಳವರಿಗೆ ತಾವೂ ತಮ್ಮ ಆಸ್ತಿಯೂ ನಾಶವಾಗದಂತೆ ಉಳಿಯುವುದೇ ಬೇಕಾಗಿತ್ತು. ಬ್ರಿಟಿಷ್ ಸರಕಾರ ಹಿಂದಿನಿಂದಲೂ ತಮ್ಮ ಸಮರ್ಥನೆಗಾಗಿ ಈ ಬಗೆಯ ಸ್ವಭಾವ ಮತ್ತು ಮನೋವೃತ್ತಿಯ ಹೌದಪ್ಪಗಳ ಗುಂಪು ಒಂದನ್ನು ತಯಾರಿಸಿದ್ದರು. ಸದಾ ಸ್ವಾರ್ಥದೃಷ್ಟಿಯಿಂದ ಕೆಲಸ ಮಾಡುತ್ತಿದ್ದ ಈ ಗುಂಪಿಗೆ ಹೊಸ ಯಜಮಾನರಿಗೆ ಹಾರ ಹಾಕುವುದು ಸುಲಭವಿತ್ತು. ಫ್ರಾನ್ಸ್, ಬೆಲ್ಜಿಯಮ್, ನಾರ್ವೆ ಮತ್ತು ಇತರ ಯೂರೋಪಿನ ರಾಷ್ಟ್ರಗಳಲ್ಲಿ ವಿರುದ್ಧ ಚಳವಳಿ ಬೆಳೆಯುತ್ತಿದ್ದರೂ ಈ ಬಗೆಯ ಪೂರ್ಣ ಸಹಕಾರ ದೊರೆತ ನಿದರ್ಶನ ನಮ್ಮ ಎದುರು ನಿಂತಿತ್ತು. ಪರ್ಟಿನಾ ಹೇಳಿರುವಂತೆ "ವೀಚಿಯ ಜನರು ನಾಚಿಕೆಯನ್ನೆ ಗೌರವವೆಂದೂ, ಹೇಡಿತನವನ್ನು ಧೈರ್ಯವೆಂದೂ, ಕ್ಲೀಬತನ ಮತ್ತು

ಮೂರ್ಖತನವನ್ನು ದೂರದೃಷ್ಟಿ ಎಂದೂ, ಅಪಮಾನವನ್ನು ಸದ್ಗುಣವೆಂದೂ, ಜರ್ಮನರ ಆಕ್ರಮಣವನ್ನು ಫ್ರಾನ್ಸಿನ ನೈತಿಕ ಉನ್ನತಿ ಎಂದೂ ತಲೆ ಕೆರೆದುಕೊಂಡುಒಪ್ಪಿಕೊಳ್ಳಬೇಕಾಯಿತು." ಉಗ್ರ ದೇಶಾಭಿಮಾನ ಮತ್ತು ಕ್ರಾಂತಿಗಳಿಗೆ ತೌರುಮನೆಯಾಗಿದ್ದ ಫ್ರಾನ್ಸಿನ ಗತಿಯೇ ಈ ರೀತಿಯಾದ ಮೇಲೆ ಬ್ರಿಟಿಷರ ಕೃಪಾಭಿಕ್ಷೆಯಲ್ಲಿಯೇ ಬೆಳೆದು ಅನೇಕ ರೀತಿ ಲಾಭ ಪಡೆದಿದ್ದ ಭಾರತದಲ್ಲಿನ ಅದೇ ಭಾವನೆಯ ಜನರು ಶತ್ರುವಿನೊಂದಿಗೆ ಸಹಕರಿಸುವುದರಲ್ಲಿ ಯಾವ ಅನುಮಾನವೂ ಇರಲಿಲ್ಲ. ಈಗ ಬ್ರಿಟಿಷ್ ಆಡಳಿತಗಾರರೊಂದಿಗೆ ಸಹಕರಿಸಿ ಬ್ರಿಟಿಷರ ರಾಜಭಕ್ತರೆಂದು ಕೂಗಿಕೊಳ್ಳುತ್ತಿದ್ದ ಜನರೇ ಮೊದಲು ಮುಂದೆ ಹೋಗಿ ಶತ್ರುವಿನೊಂದಿಗೆ ಸಹಕರಿಸುವರೆಂದೂ ನಮಗೆ ತಿಳಿದಿತ್ತು. ಈ ಸಹಕಾರ ಅವರಿಗೆ ಒಂದು ಕಲೆಯಾಗಿತ್ತು. ಮೇಲಿನ ಆಡಳಿತ ವರ್ಗ ಯಾವುದೇ ಇರಲಿ ಸ್ವಲ್ಪ ಇಂಬು ಮಾತ್ರ ತಮಗೆ ದೊರೆತರೆ ಸಹಕರಿಸಲು ಯಾವ ಕಷ್ಟವೂ ಅವರಿಗೆ ತೋರುತ್ತಿರಲಿಲ್ಲ. ಆಡಳಿತ ವರ್ಗದಲ್ಲಿ ಬದಲಾವಣೆಯಾದರೆ ಯೂರೋಪಿನಲ್ಲಿ ತಮ್ಮ ಜಾತಿಯವರು ಹೊಂದಿಕೊಂಡಂತೆ ಪುನಃ ಅವರನ್ನೂ ಸರಿಪಡಿಸಿಕೊಳ್ಳುತ್ತಿದ್ದರು. ಅವಶ್ಯಬಿದ್ದರೆ ಕ್ರಿಪ್ಸ್ ಸಂಧಾನಗಳನಂತರ ವಿರೋಧ ತಾಳಿ ಇನ್ನೂ ಕಹಿಯಾದ ಬ್ರಿಟಿಷರಿಂದ ಸಹ ಹೆಚ್ಚು ಉಪಯೋಗ ಪಡೆಯಲು ಸಿದ್ಧರಿದ್ದರು. ಇನ್ನಿತರರು ಸ್ವಾರ್ಥಸಾಧನೆ ಅಥವ ಲಾಭ ಸಂಪಾದನೆಯ ಉದ್ದೇಶಗಳಿಗಾಗಿ ಅಲ್ಲದಿದ್ದರೂ ದೂರದೃಷ್ಟಿ ಇಲ್ಲದೆ ದೊಡ್ಡ ಪ್ರಶ್ನೆಗಳನ್ನೂ ಮರೆತು ಬೇರೆ ಕಾರಣಗಳಿಂದ ಸಹಕರಿಸುವ ಸಂಭವವೂ ಇತ್ತು. ಈ ಎಲ್ಲ ಸಂದರ್ಭಗಳು ನಮ್ಮನ್ನು ವಿಸ್ಮಯಗೊಳಿಸಿದವು. ಭಾರತದಲ್ಲಿ ಬಲಾತ್ಕಾರದಿಂದ ಬ್ರಿಟಿಷರ ನೀತಿಗೆ ಒಪ್ಪಿ ತಲೆಬಾಗಿದರೆ ಭಯಂಕರ ಪರಿಣಾಮಗಳಿಗೆ ಅವಕಾಶವಾಗುವುದೆಂದೂ, ಜನತೆಯ ಪೂರ್ಣ ನೈತಿಕ ಪತನ ಖಂಡಿತವೆಂದೂ ನಮಗೆ ತೋರಿತು.

ಶತ್ರುಗಳು ಪೂರ್ವ ಭಾಗದ ಕೆಲವು ಪ್ರಾಂತಗಳನ್ನು ಮುತ್ತಿಗೆ ಹಾಕಿ ಆಕ್ರಮಿಸಿದರೆ ದೇಶದ ಇತರ ಕಡೆಗಳಲ್ಲೆಲ್ಲ ಆಡಳಿತ ಯಂತ್ರ ಕುಸಿದು ಬೀಳುವುದೆಂದೂ, ಅರಾಜಕತೆ ಪ್ರಾಪ್ತವಾಗಬಹುದೆಂದೂ ಜನರಲ್ಲಿ ಭಯವಿತ್ತು. ಮಲಯ ಮತ್ತು ಬರ್ಮಗಳ ಉದಾಹರಣೆ ನಮ್ಮ ಎದುರಿಗಿತ್ತು. ಯುದ್ಧ ಸನ್ನಿವೇಶವು ಶತ್ರುವಿಗೆ ಅನುಕೂಲವಿದ್ದರೂ ದೊಡ್ಡ ಪ್ರದೇಶ ಆಕ್ರಮಿಸಬಹುದೆಂದು ಯಾರೂ ಎಣಿಸಿರಲಿಲ್ಲ. ಭಾರತವು ಬಹು ವಿಶಾಲದೇಶ. ದೇಶ ವಿಸ್ತಾರದ ಉಪಯುಕ್ತತೆಯನ್ನು ಚೀನಾದ ಉದಾಹರಣೆಯಿಂದ ಅರಿತಿದ್ದೆವು. ಆದರೆ ಆ ವೈಶಾಲ್ಯವನ್ನು ಉಪಯೋಗಿಸಿಕೊಂಡು ಶತ್ರುವನ್ನು ಸದೆಬಡಿಯಬೇಕು, ಸೋತು ತಲೆಬಾಗಬಾರದು ಎಂಬ ಮನೋ ಸಂಕಲ್ಪ ಇದ್ದರೆ ಮಾತ್ರ ಅದರ ಪ್ರಯೋಜನ. ಪ್ರಾಯಶಃ ಮಿತ್ರ ರಾಷ್ಟ್ರಗಳ ಸೈನ್ಯಗಳು ಒಳಗೆ ಭದ್ರವಾದ ರಕ್ಷಣಾ ಸ್ಥಾನಗಳಿಗೆ ಹಿಮ್ಮೆಟ್ಟಿ ಶತ್ರುವಿನ ಆಕ್ರಮಣಕ್ಕೆ ದೊಡ್ಡ ಪ್ರದೇಶ ಬಿಟ್ಟುಕೊಡಬಹುದಾಗಿ ಆಧಾರ ಪೂರ್ಣ ಸುದ್ದಿಯೂ ಹರಡಿತ್ತು. ಆದರೆ ಚೀನಾದಲ್ಲಿ ಮಾಡಿದಂತೆ ಶತ್ರುವು ಆ ಎಲ್ಲ ಭಾಗ ಆಕ್ರಮಿಸದೆ ಇರುವ ಸಂಭವವೂ ಇತ್ತು. ಆದ್ದರಿಂದ ಈ ಆಕ್ರಮಿತ ಪ್ರದೇಶಗಳಲ್ಲಿ ಮತ್ತು ಆಡಳಿತ ಯಂತ್ರ ಕುಸಿದು ಬಿದ್ದ ಪ್ರದೇಶಗಳಲ್ಲಿ ನಾವು ಹೇಗೆ ವರ್ತಿಸಬೇಕೆಂಬ ಪ್ರಶ್ನೆ ಎದ್ದಿತು. ಸ್ಥಳೀಯ ಸಂಸ್ಥೆಗಳು ಆ ಪರಿಸ್ಥಿತಿಯಲ್ಲಿ ಯಾವ ರೀತಿ ವರ್ತಿಸಬೇಕು. ಜನರಲ್ಲಿ ಶಿಸ್ತನ್ನು ಹೇಗೆ ಕಾಪಾಡಬೇಕು ಮತ್ತು ಅದೇ ಕಾಲದಲ್ಲಿ ಏನೇ ಬರಲಿ ಶತ್ರುವನ್ನು ಯಾವ ರೀತಿ ಎದುರಿಸಬೇಕು ಎಂಬುದಕ್ಕೆ ನಮ್ಮ ಕೈಲಾದ ಮಾನಸಿಕ ಧೈರ್ಯವನ್ನೂ ಇತರ ಶಿಕ್ಷಣವನ್ನೂ ಒದಗಿಸಲು ಯತ್ನಿಸಿದೆವು.

ಚೀಣರು ಅನೇಕ ವರ್ಷ ಕಾಲ ಅಷ್ಟು ಧೈರ್ಯದಿಂದ ಹೋರಾಟ ನಡೆಸುತ್ತಿರುವುದರ ಗುಟ್ಟು ಏನು? ರಷ್ಯನರು, ಸೋವಿಯಟ್ ಯೂನಿಯನ್ನಿನ ಇತರ ಜನರು ಅಷ್ಟು ಸಾಹಸದಿಂದ, ಪೂರ್ಣ ಒಮ್ಮನಸ್ಸಿನಿಂದ ಹಲ್ಲುಕಚ್ಚಿ ಕಾದಾಡುತ್ತಿರುವುದರ ರಹಸ್ಯವೇನು ? ಇತರ ಕಡೆಗಳಲ್ಲಿ ಸಹ ಅಸಂಖ್ಯಾತ ಜನರು ಧೈರ್ಯದಿಂದ ಕಾದಾಡಲು ಅವರ ದೇಶ ಪ್ರೇಮ, ಪರಾಕ್ರಮಣದ ಭಯ ಮತ್ತು ಜೀವನ ವೈಶಿಷ್ಟ್ಯ ರಕ್ಷಣೆಯ ಸ್ಫೂರ್ತಿಗಳೇ ಮುಖ್ಯ ಕಾರಣಗಳಾಗಿದ್ದವು. ಆದರೂ ರಷ್ಯದ ಮತ್ತು ಇತರ ರಾಷ್ಟ್ರಗಳ ಯುದ್ಧ ಸಿದ್ಧತೆಯ ಪರಿಪೂರ್ಣತೆ ಮಟ್ಟದಲ್ಲಿ ವ್ಯತ್ಯಾಸವಿತ್ತು. ಇತರರೂ ಡಂಕರ್ಕ್ ಸಮಯದಲ್ಲಿ ಮತ್ತು ಅನಂತರ ಅನುಪಮ ಸಾಹಸದಿಂದ ಕಾದಾಡಿದ್ದರು. ಆದರೆ ಎದುರು ನಿಂತ ತಾತ್ಕಾಲಿಕ ಅಪಾಯ ದೂರವಾದೊಡನೆ ಒಂದು ಬಗೆಯ ನೈತಿಕ ಪತನವಾಗಿತ್ತು. ಏನೇ ಆಗಲಿ ಯುದ್ಧದಲ್ಲಿ ಜಯ ಪಡೆಯಬೇಕಾದ

ಅವಶ್ಯಕತೆ ಇದ್ದರೂ ಭವಿಷ್ಯದ ವಿಷಯದಲ್ಲಿ ಸಂಶಯವಿತ್ತು. ಸೋವಿಯಟ್ ಯೂನಿಯನ್‌ನಲ್ಲಿ ನಮಗೆ ತಿಳಿದ ಮಟ್ಟಿಗೆ ಯಾವ ಅನುಮಾನ ಅಥವ ಚರ್ಚೆಯೂ ಇರಲಿಲ್ಲ (ಅದಕ್ಕೆ ಅವಕಾಶ ಇರಲಿಲ್ಲವೆಂಬುದೂ ನಿಜ.) ತಮ್ಮ ಮುಂದಿನ ಧ್ಯೇಯದಲ್ಲಿ ಸಂಪೂರ್ಣ ಆತ್ಮವಿಶ್ವಾಸವಿತ್ತು.

ಭಾರತದಲ್ಲಿ? ಪ್ರಸಕ್ತ ಪರಿಸ್ಥಿತಿಯಿಂದ ಎಲ್ಲರೂ ಬೇಸರಗೊಂಡಿದ್ದರು, ಭವಿಷ್ಯವಂತೂ ಕಾಣದ ಕಗ್ಗತ್ತಲೆಯಾಗಿತ್ತು. ಜನರಲ್ಲಿ ದೇಶವಾತ್ಸಲ್ಯದಿಂದ ಹೊರಹೊಮ್ಮಿದ ಉನ್ನತ ಧ್ಯೇಯ ಯಾವುದೂ ಇರಲಿಲ್ಲ; ಪರಾಕ್ರಮಣದಿಂದ ಮತ್ತು ದೊಡ್ಡ ವಿಪತ್ತಿನಿಂದ ರಕ್ಷಣೆ ಮಾಡಿಕೊಳ್ಳಲು ಇಷ್ಟ ಮಾತ್ರ ಇತ್ತು. ಕೆಲವರು ಅಂತರ ರಾಷ್ಟ್ರೀಯ ಭಾವನೆಗಳಿಂದ ಮಾತನಾಡುತ್ತಿದ್ದರು. ಈ ಎಲ್ಲ ಭಾವನೆಗಳ ಕಲಸು ಮೇಲೋಗರದಲ್ಲಿ ಪರಕೀಯ ಸಾಮ್ರಾಜ್ಯ ಶಕ್ತಿಯು ಜನರನ್ನು ತುಳಿದು ಸುಲಿಗೆ ಮಾಡಿ ಆಜ್ಞೆಮಾಡುತ್ತ ಇತ್ತು. ಆ ಸಾಮ್ರಾಜ್ಯ ಶಕ್ತಿಯ ಆಡಳಿತ ರಚನೆಯಲ್ಲಿಯೇ ಏನೋ ಒಂದು ದೊಡ್ಡ ನ್ಯೂನತೆ ಇತ್ತು; ಯಾವ ಕೆಲಸ ಇರಲಿ ನಿರಂಕುಶ ಅಧಿಕಾರಿಯ ಇಷ್ಟ ಮತ್ತು ಮನಸ್ಸಿನಂತೆ ನಡೆಯಬೇಕಾಗಿತ್ತು. ಸ್ವಾತಂತ್ರ್ಯ ಎಲ್ಲರಿಗೂ ಬೇಕು; ಆದರೆ ಅದನ್ನು ಕಳೆದುಕೊಂಡವರಿಗೆ ಅಥವ ಕಳೆದುಕೊಳ್ಳುವೆವೆಂಬ ಭಯ ಇರುವವರಿಗೆ ಅದರ ಬೆಲೆ ಇನ್ನೂ ಹೆಚ್ಚು. ಆಧುನಿಕ ಪ್ರಪಂಚದಲ್ಲಿ ಸ್ವಾತಂತ್ರ್ಯಕ್ಕೇ ಅನೇಕ ಮಿತಿಗಳಿವೆ. ಸ್ವಾತಂತ್ರ್ಯ ಕಳೆದುಕೊಂಡವರಿಗೆ ಇದು ಅರ್ಥವಾಗದೆ ಅದಕ್ಕೊಂದು ಆದರ್ಶಭಾವನೆ ಕೊಡುತ್ತಾರೆ. ಅದರ ಪರಿಣಾಮವಾಗಿ ಸ್ವಾತಂತ್ರ್ಯ ಸಾಧನೆಯ ಉತ್ಕಟೇಚ್ಛೆಯು ಒಂದು ಭಾವೋನ್ಮಾದವಾಗುತ್ತದೆ. ಆ ಇಚ್ಛೆಗೆ ಹೊಂದದ ಅಥವ ವಿರುದ್ಧ ಇರುವ ಇತರ ಯಾವ ವಿಷಯಕ್ಕೂ ಅವಕಾಶವೇ ಇಲ್ಲ. ಸಹಸ್ರ ಗಟ್ಟಲೆ ಜನರು ಅಪಾರ ತ್ಯಾಗಮಾಡಿ ಸಂಕಟ ಅನುಭವಿಸಿ ನಿರೀಕ್ಷಿಸಿದ ಸ್ವಾತಂತ್ರ್ಯದ ಆಸೆಗೆ ಭಾರತದಲ್ಲಿ ದೊಡ್ಡ ಪೆಟ್ಟು ಬಿದ್ದಿತು. ಅಷ್ಟೇ ಅಲ್ಲದೆ ಎಟುಕದ ಬಹುದೂರದ ದಿಗಂತಕ್ಕೆ ಅದು ಸರಿದಂತೆಯೂ ಇತ್ತು. ಸುತ್ತಲೂ ಆವರಿಸಿದ್ದ ಪ್ರಪಂಚದ ಘೋರಯುದ್ಧಕ್ಕೆ ಆ ಉತ್ಕಟೇಚ್ಛೆಯನ್ನು ಅಣಿಗೊಳಿಸಿ, ಭಾರತದ ಮತ್ತು ಪ್ರಪಂಚದ ಸ್ವಾತಂತ್ರ್ಯ, ಮತ್ತು ಭಾರತದ ರಕ್ಷಣೆಗೆ ಭಾರತದ ಅಪಾರ ಶಕ್ತಿಯನ್ನು ಉಪಯೋಗಿಸಿಕೊಳ್ಳದೆ ಯುದ್ಧವನ್ನು ಅದರಿಂದ ಪ್ರತ್ಯೇಕಿಸಲಾಯಿತು; ಮತ್ತು ಯುದ್ಧದ ಫಲಾಫಲಗಳಲ್ಲಿ ಯಾವ ಆಸೆಯನ್ನೂ ಹುಟ್ಟಿಸಲಿಲ್ಲ. ಯಾರನ್ನೂ–ಶತ್ರುಗಳನ್ನೂ ಸಹ–ಆಶಾರಹಿತರನ್ನಾಗಿ ಬಿಡುವುದು ಒಳ್ಳೆಯದಲ್ಲ.

ಈ ಯುದ್ಧದಲ್ಲಿ ಧುಮಿಕಿರುವ ವಿವಿಧ ರಾಷ್ಟ್ರಗಳ ರಾಜಕಾರಣಿಗಳ ಅಲ್ಪ ಆಸೆಗಳಿಗಿಂತ ಈ ಯುದ್ಧವು ಮಹತ್ಪರಿಣಾಮಕಾರಿಯಾದುದೆಂದು ಭಾರತದಲ್ಲಿ ಇನ್ನು ಕೆಲವರು ಭಾವಿಸಿದ್ದರು; ಸೈನ್ಯಪಡೆಗಳ ವಿಜಯೋತ್ಸವ, ರಾಜಕಾರಣಿಗಳ ಪ್ರಣಾಳಿಕೆ, ಕೌಲು ಕರಾರುಗಳು ಏನೇ ಇರಲಿ ಯುದ್ಧದ ಪರ್ಯವಸಾನ ಮತ್ತು ಅದರ ಪರಿಣಾಮದಿಂದ ಪ್ರಪಂಚದಲ್ಲಿ ಕ್ರಾಂತಿಕಾರಕ ಪರಿವರ್ತನೆ ಆಗುವುದೆಂಬ ಭಾವನೆ ಇನ್ನು ಕೆಲವರಲ್ಲಿ ಉಂಟಾಗಿ ಆ ಮಹದಾಸೆಯು ಅವರ ರಕ್ತನಾಳಗಳಲ್ಲಿ ಹರಿಯುತ್ತಿತ್ತು. ಆದರೆ ಇವರ ಸಂಖ್ಯೆ ಸ್ವಾಭಾವಿಕವಾಗಿ ಅತ್ಯಲ್ಪವಿತ್ತು; ಆದರೆ ಬಹು ಸಂಖ್ಯಾತರು ಇತರ ಎಲ್ಲ ದೇಶಗಳ ಜನರಂತೆ ಸಂಕುಚಿತ ವಾಸ್ತವಿಕ ದೃಷ್ಟಿಯನ್ನೇ ತಾಳಿದರು; ತಾತ್ಕಾಲಿಕ ಸಮಸ್ಯೆಗಳೇ ಅವರಿಗೆ ಮುಖ್ಯವಾದವು. ಇನ್ನು ಕೆಲವರು ಸ್ವಾರ್ಥ ದೃಷ್ಟಿಯಿಂದ ಬ್ರಿಟಿಷರ ನೀತಿಯನ್ನೇ ಒಪ್ಪಿ ಯಾವ ಅಧಿಕಾರಿವರ್ಗ ಅಥವ ನೀತಿ ಇದ್ದರೂ ಹೊಂದಿಕೊಳ್ಳುವಂತೆ ಅದರೊಂದಿಗೂ ಹೊಂದಿಕೊಂಡರು. ಇನ್ನು ಕೆಲವರು ಈ ನೀತಿಗೆ ಪ್ರತಿಭಟಿಸದೆ ಸಮ್ಮತಿ ತೋರುವುದೆಂದರೆ ಭಾರತದ ಹಿತ ಮಾತ್ರವಲ್ಲದೆ ಪ್ರಪಂಚದ ಹಿತವನ್ನು ಸಹ ಕೊಲೆಮಾಡಿದಂತಾಗುವುದೆಂದರು. ಆದರೆ ಬಹು ಸಂಖ್ಯಾಕ ಜನತೆ ಕ್ರಿಯಾಶೂನ್ಯತೆಯಿಂದ ನಿಶ್ಚೇತನಗೊಂಡು ಸ್ತಂಭೀಭೂತವಾಗಿತ್ತು. ಭಾರತೀಯರ ಬಹುಕಾಲದ ಈ ಲೋಪದೋಷಗಳನ್ನು ನಿರ್ಮೂಲ ಮಾಡಬೇಕೆಂದೇ ಇಷ್ಟು ದಿನ ಹೋರಾಡಿದ್ದೆವು.

ಭಾರತದ ಮನಸ್ಸಿನಲ್ಲಿ ಈ ಹೋರಾಟ ನಡೆಯುತ್ತಿರುವಾಗ ಮತ್ತು ನಿರಾಶಾಭಾವನೆ ಬೆಳೆಯುತ್ತಿದ್ದಾಗ ಗಾಂಧಿಜಿ ಕೆಲವು ಲೇಖನಗಳನ್ನು ಬರೆದರು. ಅವುಗಳಿಂದ ಇದ್ದಕ್ಕಿದ್ದ ಹಾಗೆ ಜನರ ಭಾವನೆಗಳಿಗೆ ಒಂದು ಹೊಸ ಸ್ವರೂಪ ದೊರೆಯಿತು. ಕೆಲವು ಅಸ್ಪಷ್ಟ ಭಾವನೆಗಳಿಗೆ ಸ್ಪಷ್ಟ ಆಕೃತಿ ದೊರೆಯಿತು.

ಆ ವಿಷಮ ಕಾಲದಲ್ಲಿ ನಿಶ್ಚೇತನರಾಗಿ ಕುಳಿತುಕೊಳ್ಳುವುದೂ, ನಡೆವುದಕ್ಕೆಲ್ಲ ತಲೆಬಾಗುವುದೂ ಅವರಿಗೆ ಅಸಹನೀಯವಾಯಿತು. ಆ ಪರಿಸ್ಥಿತಿ ಎದುರಿಸಿ, ಸ್ವತಂತ್ರ ಭಾರತವು ಇತರ ಮಿತ್ರ ರಾಷ್ಟ್ರಗಳೊಂದಿಗೆ ಸಹಕರಿಸಿ, ಆಕ್ರಮಣವನ್ನೂ ಮುತ್ತಿಗೆಯನ್ನೂ ವಿರೋಧಿಸಲು ಭಾರತದ ಸ್ವಾತಂತ್ರ್ಯಕ್ಕೆ ಮನ್ನಣೆ ದೊರೆಯುವುದು ಒಂದೇ ಮಾರ್ಗವಿತ್ತು. ಈ ಮನ್ನಣೆ ದೊರೆಯದಿದ್ದರೆ ಈಗಿರುವ ಅಧಿಕಾರ ವ್ಯೂಹ ಎದುರಿಸುವುದಕ್ಕೂ ಜನರನ್ನು ನಿಶ್ಚೇತನ ಗೊಳಿಸಿ, ಎಲ್ಲ ಆಕ್ರಮಣಕ್ಕೂ ಸುಲಭದ ಬೇಟೆ ಮಾಡಿರುವ ಅಲಸಿಕೆಯಿಂದ ಜನತೆಯನ್ನು ಬಡಿದೆಬ್ಬಿಸುವುದಕ್ಕೂ ಏನಾದರೊಂದು ಕಾರ್ಯಕ್ರಮ ತೆಗೆದುಕೊಳ್ಳಲೇ ಬೇಕು ಎಂದು ಅಭಿಪ್ರಾಯ ಪಟ್ಟರು.

ಈ ಬೇಡಿಕೆಯಲ್ಲಿ ಹೊಸ ವಿಷಯ ಏನೂ ಇರಲಿಲ್ಲ; ಇದುವರೆಗೆ ಹೇಳಿದ್ದನ್ನೇ ಪುನಃ ಅದರಲ್ಲಿ ಹೇಳಲಾಗಿತ್ತು; ಆದರೆ ಗಾಂಧಿಜಿಯ ಭಾಷೆ ಮತ್ತು ಬರೆವಣಿಗೆಗಳಲ್ಲಿ ಒಂದು ಹೊಸ ಆತುರವೂ, ನವೀನ ಕಾರ್ಯಕ್ರಮದ ಸೂಚನೆಯೂ ಇತ್ತು. ಭಾರತದಲ್ಲಿ ಹರಡಿದ್ದ ಅಂದಿನ ಮನೋಭಾವನೆಯನ್ನೇ ಅವರು ಪ್ರತಿನಿಧಿಸಿದರೆಂಬುದಕ್ಕೆ ಯಾವ ಸಂಶಯವೂ ಇಲ್ಲ. ರಾಷ್ಟ್ರೀಯ ಮತ್ತು ಅಂತರ ರಾಷ್ಟ್ರೀಯ ಭಾವನೆಗಳ ಹೋರಾಟದಲ್ಲಿ ಅವರ ರಾಷ್ಟ್ರೀಯ ಭಾವನೆಗೆ ಜಯವಾಯಿತು. ಗಾಂಧಿಜಿಯ ಈ ಹೊಸ ಲೇಖನಗಳು ಭಾರತಾದ್ಯಂತ ಒಂದು ಹೊಸ ಚೈತನ್ಯ ತುಂಬಿದವು. ಆದರೂ ಅದರ ಈ ರಾಷ್ಟ್ರೀಯ ಭಾವನೆ ಅಂತರರಾಷ್ಟ್ರೀಯ ಭಾವನೆಗೆ ವಿರುದ್ಧವಿರಲಿಲ್ಲ; ಆದರೆ ಈ ರಾಷ್ಟ್ರೀಯ ಭಾವನೆಯ ಕಾರ್ಯಾಚರಣೆಯನ್ನು ಪರಿಣಾಮಕಾರಿಯಾಗಿ ಗೌರವಯುತವಾಗಿ ನಡೆಸಲು ಅವಕಾಶ ದೊರೆತರೆ ಆ ರಾಷ್ಟ್ರೀಯ ಭಾವನೆಯೇ ಅಂತರರಾಷ್ಟ್ರೀಯ ವಿಶಾಲದೃಷ್ಟಿಗೆ ಹೊಂದಿಕೊಂಡು ಕೆಲಸ ಮಾಡಲು ದಾರಿ ದೊರೆಯುತ್ತಿತ್ತು. ಎರಡಕ್ಕೂ ಯಾವ ಘರ್ಷಣೆಯೂ ಇರಲಿಲ್ಲ. ಯೂರೋಪಿನ ರಾಷ್ಟ್ರಗಳ ಆಕ್ರಮಣ ನೀತಿಯ ರಾಷ್ಟ್ರೀಯ ಭಾವನೆಗಳಂತೆ ನಮಗೆ ಯಾರ ಮೇಲೂ ಆಕ್ರಮಣದ ಆಶೆ ಇರಲಿಲ್ಲ. ಎಲ್ಲರ ಹಿತಕ್ಕಾಗಿ ಅವರೊಡನೆ ಸಹಕರಿಸಲು ಮಾತ್ರ ಬಯಸಿದೆವು. ನಿಜವಾದ ಅಂತರರಾಷ್ಟ್ರೀಯ ಭಾವನೆಗೆ ರಾಷ್ಟ್ರದ ಸ್ವಾತಂತ್ರ್ಯವೇ ಮುಖ್ಯ ತಳಹದಿ, ಮತ್ತು ದಾರಿ; ಮತ್ತು ನಾಜಿ ಮತ್ತು ಫಾಸಿಸ್ಟ್ ತತ್ವಗಳ ವಿರುದ್ಧ ಎಲ್ಲರಂತೆ ನಾವೂ ಸೇರಿ ಕಾದಾಡಲು ಅವಶ್ಯವಾದ ಸಹಕಾರಕ್ಕೆ ನಿಜವಾದ ತಳಪಾಯ. ಈ ಮಧ್ಯೆ ಎಲ್ಲರೂ ಮೆಚ್ಚಿ ಹೊಗಳಿದ್ದ ಅಂತರ ರಾಷ್ಟ್ರೀಯ ಭಾವನೆಯು ಕೃತಕವೇಷದ ಸಾಮ್ರಾಜ್ಯ ಭಾವನೆಯಂತೆ ಕಂಡಿತು. ಏಕೆಂದರೆ ಹಳೆಯ ಸಾಮ್ರಾಜ್ಯ ಶಕ್ತಿಗಳೇ ಕಾಮನ್‌ವೆಲ್ತ್, ಮ್ಯಾಂಡೇಟರಿ ಎಂಬ ಬೇರೆ ಬೇರೆ ಹೆಸರಿನಿಂದ ಇತರರ ಮೇಲೆ ತಮ್ಮ ಅಧಿಕಾರ ಹೇರಲು ಹೊಸ ಉಡುಪಿನಲ್ಲಿ ತಮ್ಮ ಹಳೆಯ ಆಕ್ರಮಣ ನೀತಿಯ ರಾಷ್ಟ್ರೀಯ ಭಾವನೆಯನ್ನು ಮುಂದುವರಿಸುವಂತೆ ಕಂಡವು.

ಈ ಹೊಸ ಸನ್ನಿವೇಶದಿಂದ ನಮ್ಮಲ್ಲಿ ಕೆಲವರು ದಿಗ್ಭ್ರಮೆಗೊಂಡು ಹೆದರಿದೆವು. ಯಾವ ಕಾರ್ಯಾಚರಣೆಯಾಗಲಿ ಯಶಸ್ವಿಯಾಗದಿದ್ದರೆ ನಿರರ್ಥಕ. ಭಾರತಕ್ಕೆ ಮುತ್ತಿಗೆಯ ಗಂಡಾಂತರ ಒದಗಿದಾಗ ಯಾವ ಯಶಸ್ವಿ ಪ್ರತಿಭಟನಾ ಕಾರ್ಯಾಚರಣೆ ಎಂದರೂ ಅದು ಯುದ್ಧ ಪ್ರಯತ್ನಕ್ಕೆ ಅಡ್ಡಿ ಬರಲೇಬೇಕು. ಗಾಂಧಿಜಿ ಈ ಪ್ರಯತ್ನದಲ್ಲಿ ಸಾಮಾನ್ಯವಾಗಿ ಕೆಲವು ಮುಖ್ಯ ಅಂತರ ರಾಷ್ಟ್ರೀಯ ವಿಷಯಗಳನ್ನು ಉಪೇಕ್ಷಿಸಿದಂತೆಯೂ ಸಂಕುಚಿತ ರಾಷ್ಟ್ರೀಯ ದೃಷ್ಟಿಯ ಆಧಾರದ ಮೇಲೆ ನಿಂತಂತೆಯೂ ಕಂಡಿತು. ಈ ಮೂರು ವರ್ಷ ನಾವು ಯುದ್ಧ ಪ್ರಯತ್ನಕ್ಕೆ ಯಾವ ತೊಂದರೆಯನ್ನೂ ಮಾಡಿರಲಿಲ್ಲ. ಏನು ಕಾರ್ಯಾಚರಣೆ ಆದರೂ ಅದು ಸಾಂಕೇತಿಕ ವಿರೋಧವಾಗಿತ್ತು. ೧೯೪೦-೧೯೪೧ ರಲ್ಲಿ ಮೂವತ್ತು ಸಾವಿರ ಪ್ರಮುಖ ಸ್ತ್ರೀ ಪುರುಷರು ಸೆರೆಮನೆ ಸೇರಿದಾಗ ಈ ಸಂಕೇತವು ವಿರಾಟ್ ಸ್ವರೂಪ ತಾಳಿತ್ತು. ಆದರೆ ಸೆರೆಮನೆ ಯಾತ್ರೆ ಸಹ ವೈಯಕ್ತಿಕವಾಗಿತ್ತು. ಜನರ ದಂಗೆಗೆ ಅವಕಾಶ ಕೊಡಲಿಲ್ಲ; ಸರಕಾರದ ಆಡಳಿತ ವ್ಯವಸ್ಥೆಯೊಂದಿಗೆ ಯಾವ ಘರ್ಷಣೆಗೂ ಎಡೆಕೊಡಲಿಲ್ಲ. ಪುನಃ ಅದೇ ಮಾರ್ಗ ಸರಿಕಾಣಲಿಲ್ಲ. ಕಾರ್ಯಕ್ರಮ ಏನೇ ಇರಲಿ ಅದು ನೂತನವೂ, ಯಶಸ್ವಿಯೂ ಆಗಬೇಕು. ಇದರಿಂದ ಭಾರತದ ಗಡಿಯಲ್ಲಿ ನಡೆಯುತ್ತಿರುವ ಯುದ್ಧ ಕಾರ್ಯಾಚರಣೆಗೆ ಅಡ್ಡಿಮಾಡಿ ಶತ್ರುಗಳಿಗೆ ಪ್ರೋತ್ಸಾಹ ಕೊಟ್ಟಂತೆ ಆಗುವುದಿಲ್ಲವೆ ? ಎಂಬ ಪ್ರಶ್ನೆ ಎದ್ದಿತು.

ಈ ಎಲ್ಲ ತೊಂದರೆಗಳು ಸ್ಪಷ್ಟ ಇದ್ದವು. ಗಾಂಧಿಜಿಯ ಜೊತೆ ದೀರ್ಘ ಚರ್ಚೆ ಮಾಡಿದರೂ ಒಬ್ಬರನ್ನೊಬ್ಬರು ಪರಿವರ್ತಿಸಲು ಸಾಧ್ಯವಾಗಲಿಲ್ಲ. ತೊಂದರೆ, ಅಪಾಯ ಮತ್ತು ಹಾನಿಗಳು ನಾವು ಯಾವ ಕಾರ್ಯಾಚರಣೆ ಅಥವ ಕಾರ್ಯನಿರಸನ ಮಾರ್ಗ ಹಿಡಿದರೂ ಹಿಂದೆ ಕಾದೇ ಇದ್ದವು. ಸರಿಯಾಗಿ ತೂಕಮಾಡಿ ಕಡಮೆ ಅಪಾಯಕರ ಇರುವುದನ್ನು ಆರಿಸುವುದು ಮಾತ್ರ ಉಳಿದಿತ್ತು. ಪರಸ್ಪರ ಚರ್ಚೆಯಿಂದ ಮಸಕಾಗಿದ್ದ ಎಷ್ಟೋ ಅಸ್ಪಷ್ಟ ವಿಷಯಗಳು ತಿಳಿಯಾದವು. ಗಾಂಧಿಜಿಯ ಗಮನಕ್ಕೆ ತಂದ ಅನೇಕ ಅಂತರ ರಾಷ್ಟ್ರೀಯ ಪ್ರಶ್ನೆಗಳನ್ನು ಅವರು ಅರ್ಥಮಾಡಿಕೊಂಡರು. ಆಮೇಲೆ ಅವರ ಬರವಣಿಗೆಗಳಲ್ಲಿ ಒಂದು ವ್ಯತ್ಯಾಸ ಕಂಡು ಬಂದಿತು. ಅಂತರ ರಾಷ್ಟ್ರೀಯ ಪ್ರಶ್ನೆಗಳಿಗೆ ಅವರೂ ಪ್ರಾಮುಖ್ಯತೆ ಕೊಟ್ಟು ಭಾರತದ ಪ್ರಶ್ನೆಯನ್ನು ವಿಶಾಲ ದೃಷ್ಟಿಯಿಂದ ನೋಡತೊಡಗಿದರು. ಆದರೆ ಅವರ ಮೂಲ ನಿಲುವಿನಲ್ಲಿ ಮಾತ್ರ ವ್ಯತ್ಯಾಸವಾಗಲಿಲ್ಲ. ಭಾರತದಲ್ಲಿ ಬ್ರಿಟಿಷರ ನಿರಂಕುಶ ಅಧಿಕಾರ ಮತ್ತು ದಬ್ಬಾಳಿಕೆಗೆ ನಿಶ್ಚೇತನರಾಗಿ ತಲೆಬಾಗಬಾರದೆಂದೂ, ಯಾವ ರೀತಿಯಲ್ಲಾದರೂ ಪ್ರತಿಭಟಿಸಬೇಕೆಂದೂ ಗಾಂಧಿಜಿ ಬಹಳ ಕಾತರರಿದ್ದರು. ಆಗ ತಲೆ ಬಾಗುವುದೆಂದರೆ ಭಾರತದ ಬೆನ್ನುಮೂಳೆ ಪುಡಿ ಪುಡಿಮಾಡಿದಂತೆ, ಆತ್ಮನಾಶಮಾಡಿಕೊಂಡಂತೆ; ಮತ್ತು ಯುದ್ಧ ಯಾವ ಸ್ವರೂಪವನ್ನೇ ತಾಳಲಿ, ಅದರ ಪರಿಣಾಮ ಏನೆ ಆಗಲಿ ಭಾರತದ ಜನತೆಗೆ ಗುಲಾಮಗಿರಿಯೇ ಶಾಶ್ವತ, ಮತ್ತು ಬಹುಕಾಲ ಪರಿಯಂತ ಅವರಿಗೆ ಸ್ವಾತಂತ್ರ್ಯವೂ ಲಭಿಸಲಾರದು ಎಂದು ಅವರ ಅಭಿಮತವಾಗಿತ್ತು. ಅಲ್ಲದೆ ಯುದ್ಧದಲ್ಲಿ ತಾತ್ಕಾಲಿಕ ಸೋಲಾಗಿ ಹಿಮ್ಮೆಟ್ಟಬೇಕಾದರೂ ಯಾವ ಬಗೆಯ ಪ್ರತಿಭಟನೆಯನ್ನೂ ತೋರದೆ ಪರಾಕ್ರಮಣಕ್ಕೆ ದಾರಿ ಬಿಟ್ಟು ತಲೆಬಾಗಿದಂತಾಗುವುದು. ನಮ್ಮ ಜನತೆಯ ಪೂರ್ಣ ನೈತಿಕ ಪತನವೂ ಆಗುತ್ತಿತ್ತು. ಕಳೆದ ಕಾಲು ಶತಮಾನದ ನಿರಂತರ ಸ್ವಾತಂತ್ರ್ಯದ ಹೋರಾಟದಿಂದ ಸಂಪಾದಿಸಿದ ಶಕ್ತಿ ಸಾಮರ್ಥ್ಯವೆಲ್ಲ ನಿರರ್ಥಕವಾಗುತ್ತಿತ್ತು. ಪ್ರಪಂಚವು ಭಾರತದ ಸ್ವಾತಂತ್ರ್ಯದ ಬೇಡಿಕೆಯನ್ನೇ ಮರೆತು ಯುದ್ಧಾನಂತರದ ಪ್ರಶ್ನೆಗಳನ್ನೆಲ್ಲ ಹಿಂದಿನ ಸಾಮ್ರಾಜ್ಯವಾದದ ಆಸೆ ಮತ್ತು ಅವಶ್ಯಕತೆಗಳಿಂದಲೇ ನಿರ್ಣಯ ಮಾಡುವುದಕ್ಕೆ ಅವಕಾಶಕೊಟ್ಟಂತಾಗುತ್ತಿತ್ತು. ಭಾರತ ಸ್ವತಂತ್ರವಾಗಬೇಕೆಂದು ಅವರ ಉತ್ಕಟೇಚ್ಛೆಯಾದರೂ ಭಾರತವು ಅವರಿಗೆ ಕೇವಲ ಮಾತೃಭೂಮಿಯಾಗದೆ ಇನ್ನೂ ದೊಡ್ಡದಿತ್ತು. ಅದು ಅವರಿಗೆ ಪ್ರಪಂಚದ ಎಲ್ಲ ಅಧೀನ ರಾಷ್ಟ್ರಗಳ ಮತ್ತು ದಲಿತ ಜನಾಂಗಗಳ ಸಂಕೇತವಾಗಿತ್ತು. ಪ್ರಪಂಚದ ಎಲ್ಲ ಕಾರ್ಯನೀತಿಯನ್ನು ಈ ದೃಷ್ಟಿಯಿಂದ ನೋಡಿದರು. ಭಾರತವು ಸ್ವತಂತ್ರವಾಗದೆ ಹೋದರೆ ಇತರ ಅಧೀನ ರಾಷ್ಟ್ರಗಳೂ, ದಲಿತ ಜನಾಂಗಗಳೂ ತಮ್ಮ ಗುಲಾಮಗಿರಿಯಲ್ಲೇ ಇರಬೇಕಾಗುವುದಲ್ಲದೆ ಯುದ್ಧವು ನಿರರ್ಥಕ ಹೋರಾಟವಾಗುವುದು. .ಯುದ್ಧದ ನೀತಿಮೂಲದ ಪರಿವರ್ತನೆ ಅತ್ಯವಶ್ಯವಿತ್ತು. ಸೈನ್ಯಗಳು, ನಾವಿಕಾ ಪಡೆಗಳು, ವಿಮಾನಪಡೆಗಳು ತಮ್ಮ ತಮ್ಮ ಕ್ಷೇತ್ರಗಳಲ್ಲಿ ಅಧಿಕ ಹಿಂಸಾತ್ಮಕ ಶಕ್ತಿಯಿಂದ ಕಾರ್ಯಾಚರಣೆ ಕೈಗೊಂಡು ಜಯಗಳಿಸಬಹುದು. ಆದರೆ ಈ ಜಯದಿಂದ ಬರುವ ಫಲವೇನು ? ಶಸ್ತ್ರಸಜ್ಜಿತ ಯುದ್ಧಕ್ಕೆ ಸಹ ಒಂದು ನೈತಿಕ ಬೆಂಬಲ ಬೇಕು. "ದೇಹ ಬಲಕ್ಕಿಂತ ನೈತಿಕ ಬಲ ಒಂದಕ್ಕೆ ಮೂರರಷ್ಟು ಹೆಚ್ಚು" ಎಂದು ನೆಪೋಲಿಯನ್ ಹೇಳಿದನಲ್ಲವೇ ? ಪ್ರಪಂಚದಲ್ಲಿ ಎಲ್ಲ ಕಡೆಯಲ್ಲಿ ಪರದಾಸ್ಯ ಮತ್ತು ಸುಲಿಗೆಯಲ್ಲಿ ಸಿಕ್ಕು ನರಳುತ್ತಿದ್ದ ಕೋಟ್ಯಾನುಕೋಟಿ ಜನರಿಗೆ ತಮ್ಮ ಸ್ವಾತಂತ್ರ್ಯಕ್ಕಾಗಿ ಈ ಯುದ್ಧ ಎಂಬ ಭಾವನೆ ಉಂಟಾದರೆ ಸಣ್ಣ ಯುದ್ಧ ದೃಷ್ಟಿಯಿಂದ ಮಾತ್ರ ಅಲ್ಲದೆ ಮುಂಬರುವ ಶಾಂತಿಯ ದೃಷ್ಟಿಯಿಂದ ಸಹ ಅದರ ನೈತಿಕ ಪರಿಣಾಮ ಅತಿ ಅಮೂಲ್ಯವಾಗುತ್ತದೆ, ಯುದ್ಧದ ನೀತಿ ಮತ್ತು ಗುರಿಯನ್ನು ಬದಲಾಯಿಸಿ, ಸಂಶಯದಿಂದ ಸುಮ್ಮನೆ ಕುಳಿತು ದುರುಗುಟ್ಟಿ ನೋಡುತ್ತಿದ್ದ ಕೋಟ್ಯಂತರ ಜನರ ಹೃದಯ ಪರಿವರ್ತಿಸಿ, ಅವರ ಉತ್ಸಾಹಭರಿತ ಸಹಕಾರ ಪಡೆಯಲು ಯುದ್ಧ ಪರಿಸ್ಥಿತಿಯ ವಿಷಮ ಸನ್ನಿವೇಶವೇ ಸಾಕಾಗಿತ್ತು. ಈ ಒಂದು ಅದ್ಭುತಪವಾಡವು ಮಾತ್ರ ಸಾಧ್ಯವಾದರೆ ಅಕ್ಷ ರಾಷ್ಟ್ರಗಳ ಸೈನ್ಯಶಕ್ತಿ ಎಲ್ಲ ನಿರರ್ಥಕವಾಗಬಹುದು ; ಖಂಡಿತ ಅವರ ಪತನವೂ ಆಗಬಹುದು. ಪ್ರಪಂಚದ ಈ ಅದ್ಭುತ ಶಕ್ತಿಯಿಂದ ಅಕ್ಷ ರಾಷ್ಟ್ರಗಳ ಜನರಲ್ಲಿ ಅಧೈರ್ಯ ಸಹ ಹುಟ್ಟಬಹುದು. ಎಂದು ಗಾಂಧಿಜಿ ಭಾವಿಸಿದರು.

ಭಾರತದ ಜನತೆಯು ಕಾರ್ಯಶೂನ್ಯ ಮನೋಭಾವನೆಯಿಂದ ಕುರಿಗಳಂತೆ ತಲೆಬಾಗದೆ, ಧೈರ್ಯ

ದಿಂದ ಪ್ರತಿಭಟಿಸುವಂತೆ ಅವರನ್ನು ಹುರಿದುಂಬಿಸುವುದು ಅತ್ಯವಶ್ಯವಿತ್ತು. ಮೊದಲು ಮೊದಲು ಬ್ರಿಟಿಷ್ ಅಧಿಕಾರಿಗಳ ನಿರಂಕುಶ ಆಜ್ಞೆಗಳ ವಿರುದ್ಧ ಈ ಪ್ರತಿಭಟನೆಯು ಆರಂಭವಾದರೂ ಅದರಿಂದ ಒಂದು ಶಕ್ತಿ ದೊರೆತು ಅನಂತರ ಆ ಶಕ್ತಿಯನ್ನು ಶತ್ರುವನ್ನು ಎದುರಿಸಲು ಉಪಯೋಗ ಮಾಡಿಕೊಳ್ಳಬಹುದು. ಒಬ್ಬ ನಿಗೆ ತಲೆಬಾಗಿ ಗುಲಾಮರಾಗುವುದೆಂದರೆ ಇನ್ನೊಬ್ಬನ ಎದುರಿನಲ್ಲೂ ಅದೇ ದಾಸ್ಯ ಮನೋಭಾವ ಮೂಡುತ್ತದೆ; ಅಪಮಾನಕ್ಕೂ, ಆತ್ಮಪತನಕ್ಕೂ ಮಾರ್ಗವಾಗುತ್ತದೆ ಎಂದರು.

ಈ ವಾದಸರಣಿ ಎಲ್ಲ ನಮಗೆ ಪರಿಚಯವಿತ್ತು; ಅವುಗಳಲ್ಲಿ ನಮಗೆ ಪೂರ್ಣ ವಿಶ್ವಾಸವಿತ್ತು ಮತ್ತು ಅನೇಕ ಬಾರಿ ಅವನ್ನೇ ನಾವು ಪ್ರತಿಪಾದಿಸಿದ್ದೆವು. ಆದರೆ ಅದ್ಭುತ ನೈತಿಕ ಪರಿವರ್ತನೆಗೆ ಅಡ್ಡಿ ಬಂದುದು ಬ್ರಿಟಿಷರ ನೀತಿ ಒಂದೇ. ಯುದ್ಧಸಮಯದಲ್ಲಿ ತಾತ್ಕಾಲಿಕ ಆದರೂ ಈ ಪ್ರಶ್ನೆ ಬಿಡಿಸಬೇಕೆಂಬ ನಮ್ಮ ಪ್ರಯತ್ನವೆಲ್ಲ ನಿಷ್ಫಲವಾಗಿತ್ತು. ಯುದ್ಧ ಗುರಿ ತಿಳಿಸಿರೆಂದು ಕೇಳಿದ ನಮ್ಮ ಕೂಗು ಎಲ್ಲ ಅರಣ್ಯ ರೋದನವಾಗಿತ್ತು. ಇನ್ನೂ ಒಂದು ಪ್ರಯತ್ನಮಾಡಿದರೆ ಅದರಲ್ಲೂ ಅಪಯಶಸ್ಸು ಖಂಡಿತವಿತ್ತು. ಹಾಗಾದರೆ ಮುಂದೇನು? ಹೋರಾಟವೇ ನಿಶ್ಚಯವಾದರೆ ನೈತಿಕ ಮತ್ತು ಇತರ ಕಾರಣಗಳಿಂದ ಅದು ಎಷ್ಟೇ ಸಾಧು ಇದ್ದರೂ ಭಾರತದ ಮುಕ್ತಿಗೆಯ ವಿಪತ್ತಿನ ಸಮಯದಲ್ಲಿ ಯುದ್ಧ ಪ್ರಯತ್ನಗಳಿಗೆ ಅಡ್ಡಿಬರು ವುದೆಂಬುದರಲ್ಲಿ ಯಾವ ಸಂದೇಹವೂ ಇರಲಿಲ್ಲ. ಆ ಪರಿಸ್ಥಿತಿಯಿಂದ ತಪ್ಪಿಸಿಕೊಳ್ಳಲು ಬೇರೆ ಉಪಾಯವೂ ಇರಲಿಲ್ಲ. ಆದರೆ ಆ ಅಪಾಯದ ಭಯವೇ ನಮ್ಮ ಮನಸ್ಸಿನ ತುಮುಲ ಯುದ್ಧಕ್ಕೂ ಕಾರಣವಾಗಿತ್ತು. ಸುಮ್ಮನೆ ಕೈಕಟ್ಟಿ ಕುಳಿತುಕೊಳ್ಳಲು ಸಾಧ್ಯವಿರಲಿಲ್ಲ. ವಿಷಮ ಪರಿಸ್ಥಿತಿಗೆ ತಕ್ಕ ಸಾಮರ್ಥ್ಯದಿಂದ ಜನ ತೆಯ ಪ್ರತಿಭಟನೆಯ ವ್ಯೂಹರಚಿಸುವ ಜವಾಬ್ದಾರಿ ಹೊರಲಾರದ, ಪೂರ್ಣ ಅಯೋಗ್ಯರೂ, ಅಶಕ್ತರೂ ಆದ ಬ್ರಿಟಿಷ್ ಅಧಿಕಾರಿಗಳ ದುರಾಡಳಿತಕ್ಕೆ ನಮ್ಮ ದೇಶ ಬಲಿಗೊಟ್ಟು ರಾಷ್ಟ್ರ ವಿನಾಶ ನೋಡಲು ಸಾಧ್ಯ ವಿರಲಿಲ್ಲ. ಬಹು ಕಷ್ಟದಿಂದ ಅದುಮಿ ಹಿಡಿದಿದ್ದ ನಮ್ಮ ಕೆಚ್ಚು ಮತ್ತು ಶಕ್ತಿಗಳು ಯಾವುದಾದರೂ ಮಾರ್ಗದಲ್ಲಿ ಹೊರಬೀಳಲು ಕುದಿಯುತ್ತಿದ್ದವು.

ಗಾಂಧಿಜಿಗೆ ವಯಸ್ಸಾಗುತ್ತ ಬಂದಿತ್ತು, ಎಪ್ಪತ್ತು ವರ್ಷ ತುಂಬಿತ್ತು, ತಡೆಯಿಲ್ಲದ ಕಾರ್ಯಾ ಚರಣೆಯ ದೈಹಿಕ, ಮಾನಸಿಕ ಶ್ರಮಗಳ ಕಷ್ಟತಮ ಜೀವನದಿಂದ ಅವರ ಶಕ್ತಿ ಕುಂದಿತ್ತು. ಆದರೂ ಅವರಲ್ಲಿದ್ದ ಶಕ್ತಿ ಅದ್ಭುತವಿತ್ತು; ಮತ್ತು ಯಾವುದಕ್ಕೆ ಅವರು ವಿಶೇಷ ಮಹತ್ವದ ಬೆಲೆ ಕೊಟ್ಟಿದ್ದರೋ ಅದರ ನ್ಯಾಯಪರತೆಯ ಸಾಧನೆಗಾಗಿ ಏನಾದರೂ ಕಾರ್ಯಕ್ರಮ ತೆಗೆದುಕೊಳ್ಳದಿದ್ದರೆ ಮತ್ತು ಅಂದಿನ ವಿಷಮ ಸನ್ನಿವೇಶಕ್ಕೆ ಸುಮ್ಮನೆ ಶರಣು ಹೋದರೆ ತಮ್ಮ ಜೀವನ ಕಾರ್ಯವೆಲ್ಲ ವ್ಯರ್ಥವೆಂದು ಭಾವಿಸಿದರು. ಭಾರತದ ಮತ್ತು ಇತರ ದಾಸ್ಯದಲಿತ ಜನಾಂಗಗಳ ಮತ್ತು ಜನರ ಸ್ವಾತಂತ್ರ್ಯ ಪ್ರೇಮಕ್ಕೆ ಅವರ ಅಹಿಂಸಾ ವಾದ ಅಡ್ಡ ಬರಲಿಲ್ಲ. ದೇಶದ ರಕ್ಷಣೆ ಮತ್ತು ಅವಸರದ ರಾಷ್ಟ್ರ ಕಾರ್ಯಗಳಲ್ಲಿ ಸಹ ಅಹಿಂಸಾ ಮಾರ್ಗ ತ್ಯಜಿಸಲು ತಮಗೆ ಒಪ್ಪಿಗೆ ಇಲ್ಲದಿದ್ದರೂ ಬಹು ಕಷ್ಟ ಮತ್ತು ಸಂಕೋಚದಿಂದ—ಈ ಹಿಂದೆಯೇ ಕಾಂಗ್ರೆ ಸ್ಸಿಗೆ ಅನುಮತಿ ಕೊಟ್ಟಿದ್ದರು. ಆದರೆ ತಾವು ಮಾತ್ರ ಆ ಮಾರ್ಗದಿಂದ ಸರಿದರು. ಅವರ ಈ ಅರೆ ಮನಸ್ಸಿನ ನಿಲುವು ಬ್ರಿಟನ್ ಮತ್ತು ಇತರ ಮಿತ್ರ ರಾಷ್ಟ್ರಗಳೊಡನೆ ಒಪ್ಪಂದಕ್ಕೆ ಅಡ್ಡಿ ಬರಬಹುದೆಂದು ಅರಿತರು. ಆದ್ದರಿಂದ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ, "ಭಾರತದ ಅಪಾರ ರಾಷ್ಟ್ರಶಕ್ತಿ ಮತ್ತು ಸಂಪತ್ತನ್ನೆಲ್ಲ ಸ್ವಾತಂತ್ರ್ಯದ ಹೋರಾಟಕ್ಕೆ, ಆಕ್ರಮಣ ಎದುರಿಸುವುದಕ್ಕೆ ಮತ್ತು ಭಾರತದ ರಕ್ಷಣೆಗೆ ವಿನಿ ಯೋಗಿಸಿ ತನ್ನ ಅಧೀನವಿರುವ ಸೈನ್ಯ ಮತ್ತು ಇತರ ಎಲ್ಲ ರಕ್ಷಣಾ ಪಡೆಗಳ ಸಹಾಯದಿಂದ ಸಂಯುಕ್ತ ಮಿತ್ರರಾಷ್ಟ್ರಗಳೊಂದಿಗೆ ಪೂರ್ಣ ಸಹಕಾರದಿಂದ ಹೋರಾಡುವುದೇ ಸ್ವತಂತ್ರ ಭಾರತದ ತಾತ್ಕಾಲಿಕ ಸರಕಾರದ ಪ್ರಥಮ ಕರ್ತವ್ಯ ಎಂದು ತಾವೇ ಕಾಂಗ್ರೆಸ್ಸಿನಲ್ಲಿ ಒಂದು ನಿರ್ಣಯ ಮಂಡಿಸಿದರು. ಈ ರೀತಿ ಒಂದು ಬಂಧನಕ್ಕೆ ಕಟ್ಟು ಬೀಳುವುದು ಅವರಿಗೆ ಸುಲಭದ ಮಾತಾಗಿರಲಿಲ್ಲ. ಭಾರತ ಸ್ವತಂತ್ರವಾಗಿ ಸ್ವಾತಂತ್ರ್ಯದಿಂದ ಶತ್ರುವನ್ನು ಎದುರಿಸಲು ಸಾಧ್ಯ ಆಗುವುದಾದರೆ ಯಾವ ಒಪ್ಪಂದಕ್ಕಾದರೂ ಸಿದ್ಧ ಎನ್ನು ವಷ್ಟು ಉತ್ಕಟ ಸ್ವಾತಂತ್ರ್ಯಾಭಿಲಾಷೆ ಅವರಲ್ಲಿ ಅಷ್ಟು ಬಲಗೊಂಡಿತ್ತು; ಆದ್ದರಿಂದ ಈ ಕಹಿಯನ್ನೂ ಅವರು ನುಂಗಿದರು.

ನಮಗೂ ಗಾಂಧಿಜಿಗೂ ಇದ್ದ ತಾತ್ವಿಕ ಮತ್ತು ಇತರ ಭಿನ್ನಾಭಿಪ್ರಾಯಗಳು ಈಗ ಮಾಯವಾದವು. ಆದರೂ ಒಂದು ದೊಡ್ಡ ತೊಂದರೆ ಮಾತ್ರ ಎದುರು ನಿಂತಿತು.—ನಮ್ಮ ಕಾರ್ಯಾಚರಣೆ ಏನೇ ಇರಲಿ ಅದು ಯುದ್ಧ ಪ್ರಯತ್ನಕ್ಕೆ ಅಡ್ಡಿಯಾಗಬಹುದೆಂದು. ಬ್ರಿಟಿಷ್ ಸರ್ಕಾರದೊಡನೆ ಒಪ್ಪಂದಕ್ಕೆ ಬರಲು ಇನ್ನೂ ಸಾಧ್ಯವಿದೆ, ಆ ಸಾಧನೆಗೆ ವಿಶ್ವಪ್ರಯತ್ನ ಮಾಡುವುದಾಗಿ ಹೇಳಿದ ಗಾಂಧಿಜಿಯ ವಿಶ್ವಾಸ ಕಂಡು ನಮಗೆ ಅತ್ಯಾಶ್ಚರ್ಯವೆನಿಸಿತು. ಆದ್ದರಿಂದ ಕೃತಿ, ಎಂದು ಅವರು ಅನೇಕ ಬಾರಿ ಹೇಳಿದ್ದರೂ ಅದು ಏನೆಂದು ಅವರು ವಿವರಿಸಲಿಲ್ಲ ಮತ್ತು ತಾವಾದರೂ ಮಾಡುವುದು ಏನು ಎಂದೂ ತಿಳಿಸಲಿಲ್ಲ.

ಈ ರೀತಿ ನಾವು ಅನುಮಾನ ಮತ್ತು ಚರ್ಚೆಯಲ್ಲಿ ಕಾಲಕಳೆಯುತ್ತ ಇದ್ದಾಗ ದೇಶದ ವಾತಾವರಣ ಇದ್ದಕ್ಕಿದ್ದಂತೆ ಬಿಸಿಯಾಯಿತು; ನಿಶ್ಚೇತನ ಕಾರ್ಯಶೂನ್ಯತೆಯ ಸ್ಥಿತಿಯಿಂದ ಮಹೋತ್ಸಾಹಭರಿತ ಆಶಾಪೂರ್ಣ ಮನೋಭಾವ ಮೂಡಿತು. ಕಾಂಗ್ರೆಸ್ ತೀರ್ಮಾನ ಅಥವ ನಿರ್ಣಯವಾಗಲೆಂದು ಘಟನೆಗಳು ಕಾಯಲಿಲ್ಲ. ಗಾಂಧಿಜಿಯ ಸಂದೇಶದಿಂದ ತಾವೇ ಪ್ರವಾಹದೋಪಾದಿಯಲ್ಲಿ ಮುಂದುರುಳಿ ನುಗ್ಗುತ್ತಿದ್ದವು. ತಮ್ಮ ಶಕ್ತಿ ಮತ್ತು ಓಟಗಳನ್ನು ತಾವೇ ನಿರ್ಧರಿಸುತ್ತಿದ್ದವು. ತಪ್ಪೋ ಸರಿಯೋ ಗಾಂಧಿಜಿ ಜನರ ಮನೋಭಿಪ್ರಾಯಕ್ಕೆ ಒಂದು ಹೊಸ ರೂಪುಕೊಟ್ಟಂತೆ ತೋರಿತು. ಅದರಲ್ಲಿ ಒಂದು ಹುಚ್ಚು ಧೈರ್ಯವಿತ್ತು, ಆ ಭಾವೋದ್ರೇಕದ ಆವೇಶದಲ್ಲಿ ಕಾರ್ಯಾಚರಣೆಯ ಪರಿಣಾಮದ ಯೋಚನೆ, ತರ್ಕ, ಮನಸ್ಸಿನ ವಿವೇಚನೆ, ಶಾಂತಿ ಎಲ್ಲ ಮಾಯವಾದವು. ಆ ಪರಿಣಾಮಗಳ ಅರಿವೂ ನಮಗಿತ್ತು, ಮತ್ತು ಫಲ ಏನೇ ದೊರೆಯಲಿ ದೊರೆಯದಿರಲಿ ಅಪಾರ ಸಾವು ನೋವು ಅನಿವಾರ್ಯವೆಂದು ನಮಗೆ ತಿಳಿದಿತ್ತು. ಆದರೂ ನಿತ್ಯ ನಾವು ಅನುಭವಿಸುತ್ತಿದ್ದ ಮನೋವೇದನೆಯ ಬೆಲೆಯೂ ಕಡಮೆ ಇರಲಿಲ್ಲ.'' ಅದರ ನಿವಾರಣೆಗೆ ಯಾವ ಮಾರ್ಗವೂ ಕಾಣಲಿಲ್ಲ. ಕ್ರೂರ ವಿಧಿಗೆ ಕರುಣಾಜನಕ ಯಜ್ಞಪಶುಗಳಾಗಿರುವುದಕ್ಕಿಂತ ಕಾಣದ ಕಡಲಿನೊಳಗೆ ಧುಮಿಕಿ ಮುಳುಗುವುದೂ ಮೇಲೆಂದು ತೋರಿತು. ಇದು ರಾಜಕಾರಣಿಯ ದೃಷ್ಟಿ ಆಗಿರದೆ ಪರಿಣಾಮ ಲೆಕ್ಕಿಸದ ನಿರ್ಭಯ ಹುಚ್ಚು ಸಾಹಸದ ಕಾರ್ಯಕ್ರಮವಾಗಿತ್ತು. ಆದರೂ ಕಾರಣಬದ್ಧವಿರಬೇಕೆಂಬ ಪ್ರಯತ್ನ, ವಿರೋಧ ಭಾವನೆಗಳನ್ನು ಸಮನ್ವಯಗೊಳಿಸಬೇಕೆಂಬ ಪ್ರಯತ್ನ, ಮಾನವನ ಸಹಜ ಗುಣಗಳ ಮೂಲ ಭಿನ್ನತೆಗಳಲ್ಲಿ ಏನಾದರೂ ಐಕ್ಯತೆ ಕಂಡು ಹಿಡಿಯುವ ಪ್ರಯತ್ನ ಸದಾ ಇದ್ದೇ ಇತ್ತು. ಇನ್ನೂ ಅನೇಕ ವರ್ಷ ದೀರ್ಘಕಾಲ ಯುದ್ಧ ನಡೆಯುವಂತೆ ತೋರಿತು; ವಿಪತ್ತುಗಳು ಒದಗಿದ್ದವು; ಇನ್ನೂ ಅನೇಕ ಒದಗುವುದರಲ್ಲಿದ್ದವು; ಆದರೆ ಯಾವ ದ್ವೇಷಾಸೂಯೆಗಳು ಯುದ್ಧಕ್ಕೆ ಮೂಲಕಾರಣಗಳಾಗಿದ್ದವೋ ಮತ್ತು ಯಾವ ದ್ವೇಷಾಸೂಯೆಗಳಿಗೆ ಯುದ್ಧವೇ ಪ್ರೋತ್ಸಾಹ ಕೊಟ್ಟಿತ್ತೋ ಆ ದ್ವೇಷಾಸೂಯೆಗಳನ್ನು ಸಂಪೂರ್ಣ ಹಿಡಿತಕ್ಕೆ ತಂದು ಅವುಗಳ ವಿಷ ನುಂಗುವವರೆಗೂ ಯುದ್ಧ ನಡೆಯಲೇ ಬೇಕು. ಅಪಜಯಕ್ಕಿಂತ ಹೆಚ್ಚು ಸಂಕಟ ಉಂಟುಮಾಡುವ ಅರೆಬರೆಯ ಜಯಗಳಿಂದ ಯಾವ ಪ್ರಯೋಜನವೂ ಇರಲಿಲ್ಲ. ಸೈನ್ಯ ಕಾರ್ಯಾಚರಣೆಯಲ್ಲಿ ತಪ್ಪುದಾರಿ ಹಿಡಿದಿದ್ದುದಲ್ಲದೆ ಯಾವ ಧ್ಯೇಯಕ್ಕಾಗಿ ಯುದ್ಧ ಹೂಡಲಾಗಿತ್ತೋ ಆ ಮೂಲ ಧ್ಯೇಯದ ವಿಷಯದಲ್ಲಿ ಸಹ ಅಡ್ಡದಾರಿ ಹಿಡಿಯಲಾಗಿತ್ತು. ಪ್ರಾಯಶಃ ನಮ್ಮ ಕಾರ್ಯಾಚರಣೆಯಿಂದ ಈ ಎರಡನೆಯ ತಪ್ಪನ್ನಾದರೂ ಅರಿತುಕೊಳ್ಳುವ ಪರಿಸ್ಥಿತಿ ಒದಗಿದರೆ ಒಂದು ಹೊಸ ಆಶಾದಾಯಕ ಮಾರ್ಗ ಗೋಚರವಾಗಬಹುದು. ಒಡನೆ ನಮಗೆ ಜಯ ದೊರೆಯದಿದ್ದರೂ ಕ್ರಮೇಣ ಆ ಉನ್ನತ ಧ್ಯೇಯಕ್ಕಾದರೂ ಜಯ ದೊರೆಯಬಹುದು. ಮುಂದಿನ ಸೈನ್ಯ ಕಾರ್ಯಾಚರಣೆಗೂ ನಾವು ದೊಡ್ಡ ಬೆಂಬಲಕೊಡಲು ಅನುಕೂಲವಾಗಬಹುದು ಎಂದು ಯೋಚಿಸಿದೆವು.

ಜನರ ಉತ್ಸಾಹ ಹೆಚ್ಚಿದಂತೆ ಸರಕಾರದ ದಬ್ಬಾಳಿಕೆಯೂ ಹೆಚ್ಚಿತು. ಅದಕ್ಕೆ ಯಾವ ಭಾವೋದ್ರೇಕವೂ, ಒತ್ತಾಯವೂ ಬೇಕಿರಲಿಲ್ಲ; ಅವರ ಸಹಜಗುಣ, ಸಾಮಾನ್ಯ ಆಡಳಿತ ನೀತಿಗಳೇ ಆ ರೀತಿ ಇದ್ದವು. ಪರಾಕ್ರಮಿತ ದಾಸ್ಯರಾಷ್ಟ್ರಗಳಲ್ಲಿ ವಿದೇಶೀ ಆಡಳಿತಗಾರರ ಸಾಮ್ರಾಜ್ಯ ನೀತಿಯೇ ಆ ರೀತಿ ಇತ್ತು. ತನ್ನ ಇಷ್ಟಕ್ಕೆ ವಿರುದ್ಧ ನಿಂತ ಎಲ್ಲ ಶಕ್ತಿಗಳನ್ನೂ ಒಂದು ಏಟಿನಲ್ಲಿ ನಿರ್ನಾಮಮಾಡಲು ದೊರೆತ ಈ ಅವಕಾಶವನ್ನು ಸರಕಾರವು ಸ್ವಾಗತಿಸುವಂತೆ ತೋರಿತು. ಆ ದಬ್ಬಾಳಿಕೆಗೆ ಎಲ್ಲ ಸಿದ್ಧತೆಗಳನ್ನೂ ಮಾಡಿತು.

ಘಟನೆಗಳಮೇಲೆ ಘಟನೆಗಳು ನಡೆದುಹೋದುವು; ಆದರೂ ಭಾರತದ ಗೌರವ ರಕ್ಷಣೆಗೆ, ಅದರ ಸ್ವಾತಂತ್ರ್ಯಘೋಷಣೆಗೆ ಮತ್ತು ಸ್ವತಂತ್ರ ರಾಷ್ಟ್ರವಾಗಿ ಆಕ್ರಮಣ ವಿರುದ್ಧ ಯುದ್ಧದಲ್ಲಿ ಪೂರ್ಣ ಸಹಕರಿಸಲು ಸಾಧ್ಯವಾಗುವಂತೆ ಏನಾದರೂ ಕಾರ್ಯ ತೆಗೆದುಕೊಳ್ಳಬೇಕೆಂದು ಹೇಳುತ್ತಿದ್ದ ಗಾಂಧಿಜಿ, ಆ ಕಾರ್ಯಾಚರಣೆಯ ಸ್ವಭಾವ ಏನೆಂದು ಒಂದು ಮಾತನ್ನೂ ಹೇಳದಿದ್ದುದು ನಮಗೆ ಆಶ್ಚರ್ಯವೆನಿಸಿತು. ಆ ಕಾರ್ಯಾಚರಣೆ ಶಾಂತಿಯುತ ಇರಬೇಕಾದುದು ಅತ್ಯವಶ್ಯವಿತ್ತು; ಆದರೆ ಇನ್ನೇನು ? ಬ್ರಿಟಿಷ್ ಸರಕಾರದೊಡನೆ ಒಪ್ಪಂದಕ್ಕೆ ಬರಲು ಪುನಃ ಸರಕಾರದ ಬಳಿ ಹೋಗಿ ಸರ್ವಪ್ರಯತ್ನಮಾಡಿ ಯಾವುದಾದರೂ ಒಂದು ರೀತಿ ಸಂಧಾನಕ್ಕೆ ಬರಬೇಕೆಂಬ ಅಭಿಲಾಷೆಗೆ ಗಾಂಧಿಜಿ ಬಹಳ ಪ್ರಾಮುಖ್ಯತೆ ಕೊಟ್ಟರು. ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಅಧಿವೇಶನದಲ್ಲಿ ಅವರ ಭಾಷಣದಲ್ಲಿ ಒಪ್ಪಂದವಾಗಬೇಕೆಂದು ಮನಮುಟ್ಟಿ ಪ್ರಾರ್ಥಿಸಿದ್ದರು ಮತ್ತು ಅದಕ್ಕಾಗಿ ವೈಸರಾಯ್ ನೋಡಲು ನಿಶ್ಚಯಿಸಿರುವುದಾಗಿ ತಿಳಿಸಿದರು. ಹೊರಗೆ ಆಗಲಿ, ಕಾಂಗ್ರೆಸ್ ಕಾರ್ಯಸಮಿತಿಯಲ್ಲಿ ಆಗಲಿ ಈ ಒಂದು ಇಚ್ಛೆ ವಿನಾ ತಮ್ಮ ಮನಸ್ಸಿನಲ್ಲಿದ್ದ ಬೇರಾವ ಕಾರ್ಯಾಚರಣೆಯ ಸ್ವರೂಪವನ್ನೂ ತಿಳಿಸಿರಲಿಲ್ಲ. ಸಂಧಾನ ವಿಫಲವಾದರೆ ಯಾವುದೋ ಒಂದು ಬಗೆಯ ಅಸಹಕಾರ ಹೂಡಬೇಕೆಂದೂ, ರಾಷ್ಟ್ರದ ಪ್ರತಿಭಟನೆ ತೋರಲು ಎಲ್ಲ ಕೆಲಸವನ್ನೂ ನಿಲ್ಲಿಸಿ ಒಂದು ದಿನ ಸಾರ್ವತ್ರಿಕ ಮುಷ್ಕರ ಹೂಡಿ ಹರತಾಳ ಆಚರಿಸಬೇಕೆಂದೂ ಆಪ್ತರಿಗೆ ಪ್ರತ್ಯೇಕ ತಿಳಿಸಿದ್ದರು. ಇದು ಸಹ ಅನುಮಾನದ ಸಲಹೆ. ಸಂಧಾನ ಪ್ರಯತ್ನ ಮುಗಿಯುವವರೆಗೆ ಯಾವ ಸಿದ್ಧತೆಯನ್ನೂ ಮಾಡಲು ಇಷ್ಟ ಇರಲಿಲ್ಲ. ಆದ್ದರಿಂದ ಗಾಂಧಿಜಿ ಆಗಲಿ, ಕಾಂಗ್ರೆಸ್ ಕಾರ್ಯ ಸಮಿತಿಯಾಗಲಿ, ಸಾರ್ವಜನಿಕವಾಗಿ ಅಥವ ಗುಪ್ತವಾಗಿ ಯಾವ ಸಲಹೆಗಳನ್ನೂ ಕೊಟ್ಟರಲಿಲ್ಲ. ಆದರೆ ಯಾವ ಪರಿಸ್ಥಿತಿ ಒದಗಿದರೂ ಜನರು ಎಲ್ಲಕ್ಕೂ ಸಿದ್ಧರಿರಬೇಕೆಂದೂ, ಎಲ್ಲ ಪರಿಸ್ಥಿತಿಯಲ್ಲೂ ಶಾಂತಿಯುತ ಅಹಿಂಸಾಮಾರ್ಗ ಬಿಡಬಾರದೆಂದೂ ಮಾತ್ರ ತಿಳಿಸಿದ್ದೆವು.

ಈ ಬಿಕ್ಕಟ್ಟಿನಿಂದ ಪಾರಾಗಲು ಯಾವುದೋ ಒಂದು ಮಾರ್ಗ ಸಾಧ್ಯವೆಂದು ಗಾಂಧಿಜಿಗೆ ಇನ್ನೂ ಆಸೆ ಇದ್ದರೂ ಆ ಆಸೆ ನಮ್ಮಲ್ಲಿ ಅನೇಕರಿಗೆ ಇರಲಿಲ್ಲ. ಘಟನೆಗಳ ಗಮನರೀತಿಯೂ ಈಚಿನ ಪರಿಸ್ಥಿತಿಯೂ ಎಲ್ಲ ಹೋರಾಟದಕಡೆಗೇ ಕೈತೋರಿದ್ದವು. ಆ ವಿಷಮ ಪರಿಸ್ಥಿತಿಯೊದಗಿದಾಗ ಮಧ್ಯಮಾರ್ಗಗಳೆಲ್ಲ ಮಾಯವಾಗುತ್ತವೆ. ಪ್ರತಿಯೊಬ್ಬ ವ್ಯಕ್ತಿಯೂ ತನ್ನ ನಿಲುವನ್ನು ತಾನು ನಿರ್ಧರಿಸಬೇಕಾಗುತ್ತದೆ, ಕಾಂಗ್ರೆಸ್ಸಿಗೆ ಮತ್ತು ಅದರೊಂದಿಗೆ ಸಹಾನುಭೂತಿಯುಳ್ಳವರಿಗೆ ನಿರ್ಧರಿಸಬೇಕಾದ್ದು ಏನೂ ಇರಲಿಲ್ಲ. ಬಲಿಷ್ಠ ಬ್ರಿಟಿಷ್ ಸರಕಾರ ತನ್ನ ಸರ್ವಶಕ್ತಿ ವಿನಿಯೋಗಿಸಿ ನಮ್ಮ ಜನರನ್ನು ಸದೆಬಡಿಯುತ್ತ ಇರುವಾಗ ಭಾರತ ಸ್ವಾತಂತ್ರ್ಯದ ಆ ಮಹಾ ಹೋರಾಟದ ಕಾಲದಲ್ಲಿ ನಾವು ದೂರ ನಿಂತು ಕಣ್ಣುಮುಚ್ಚಿ ಕುಳಿತು ನೋಡುವುದು ಅಸಾಧ್ಯವೆನಿಸಿತು. ಸಹಾನುಭೂತಿ ಎಷ್ಟೇ ಇದ್ದರೂ ಅನೇಕರು ದೂರ ಸರಿಯುತ್ತಾರೆ ನಿಜ; ಆದರೆ ಪ್ರಮುಖ ಕಾಂಗ್ರೆಸ್ ವ್ಯಕ್ತಿ ಯಾರೇ ಇರಲಿ ತನ್ನ ಹಿಂದಿನ ಕಾರ್ಯ ನೀತಿಯನ್ನೆಲ್ಲ ಮರೆತು ಪರಿಣಾಮಕ್ಕೆ ಅಂಜಿ ಈಗ ದೂರ ನಿಂತರೆ ಅದಕ್ಕಿಂತ ನಾಚಿಕೆಗೇಡು ಅಗೌರವ ಮತ್ತೊಂದು ಇರಲಿಲ್ಲ; ಅಲ್ಲದೆ ಅವರಿಗೆ ಬೇರೆ ದಾರಿಯೂ ಇರಲಿಲ್ಲ. ಭಾರತದ ಹಿಂದಿನ ಇತಿಹಾಸ, ಇಂದಿನ ಸಂಕಟ ಮತ್ತು ಮುಂದಿನ ಬಾಳಿನ ಆಸೆಗಳೇ ಅವರನ್ನು ಒಡಿದೆಬ್ಬಿಸಿ ಕರೆತಂದು, ಮುಂದೆ ತಳ್ಳಿ ಅವರ ಕಾರ್ಯ ನಿರೂಪಿಸುತ್ತಿದ್ದವು. "ಪ್ರಾಚೀನತೆಯು ನಿರಂತರ ಬಿಡುವಿಲ್ಲದೆ ಪದರಮೇಲೆ ಪದರು ಬೆಳೆಯುತ್ತಲೇ ಇದೆ. ನಿಜವಾಗಿ ನೋಡಿದರೆ ಪ್ರಾಚೀನತೆಯು ತನ್ನ ರಕ್ಷಣೆ ತಾನೇ ಮಾಡಿಕೊಳ್ಳುತ್ತದೆ. ತನ್ನ ಪೂರ್ಣ ಶಕ್ತಿಯಿಂದ ಅದು ಪ್ರತಿ ನಿಮಿಷ ನಮ್ಮ ಬೆನ್ನು ಹಿಡಿದೇ ಇದೆ. ನಮ್ಮ ಪ್ರಾಚೀನತೆಯ ಕಲ್ಪತೆಯು ಸಾಮಾನ್ಯವಾಗಿ ಅತ್ಯಲ್ಪ ಭಾಗ ಮಾತ್ರ. ಆದರೆ ನಮ್ಮ ಆತ್ಮದ ಮೂಲ ಒಲವು, ನಮ್ಮ ಇಚ್ಛೆ, ಮನೋದಾರ್ಢ್ಯ, ಕಾರ್ಯತತ್ಪರತೆ ಇವೆಲ್ಲದರಲ್ಲೂ ಅದರ ಪೂರ್ಣ ಪ್ರಭಾವ ಇದೆ" ಎಂದು ಬರ್ಗ್‌ಸನ್ ತನ್ನ "ರಚನಾತ್ಮಕ ವಿಕಾಸ" (Creative Evolution) ಎಂಬ ಗ್ರಂಥದಲ್ಲಿ ಹೇಳಿದ್ದಾನೆ.

೧೯೪೨ನೆ ಆಗಸ್ಟ್ ೭ ಮತ್ತು ೮ನೆಯ ದಿನಗಳಲ್ಲಿ ಅಖಿಲ ಭಾರತ ಕಾಂಗ್ರೆಸ್ ಸಮಿತಿಯು "ಕ್ವಿಟ್ ಇಂಡಿಯಾ" ನಿರ್ಣಯ ಎಂದು ಈಚೆಗೆ ಪ್ರಸಿದ್ಧವಾದ ನಿರ್ಣಯವನ್ನು ಬಹಿರಂಗವಾಗಿ ಯೋಚಿಸಿ ಚರ್ಚಿ

ಮಾಡಿತು. ಆ ಮಹಾ ನಿರ್ಣಯದಲ್ಲಿ ಎಲ್ಲ ವಿಷಯಗಳೂ ಅಡಗಿದ್ದುವಲ್ಲದೆ, ಭಾರತದ ಸ್ವಾತಂತ್ರ್ಯಕ್ಕೆ ಕೂಡಲೇ ಮನ್ನಣೆ ದೊರೆಯಬೇಕೆಂದೂ, "ಭಾರತದ ಹಿತದೃಷ್ಟಿಯಿಂದ ಮತ್ತು ಮಿತ್ರರಾಷ್ಟ್ರಗಳ ಜಯದ ದೃಷ್ಟಿಯಿಂದ" ಭಾರತದಲ್ಲಿ ಬ್ರಿಟಿಷರ ಆಡಳಿತವು ಕೊನೆಗಾಣಬೇಕೆಂದೂ ಸಕಾರಣ ಘೋಷಿಸಲಾಗಿತ್ತು. "ಆ ಆಡಳಿತ ಮುಂದುವರಿದರೆ ಭಾರತವನ್ನು ಅಧೋಗತಿಗೆ ತಳ್ಳಿದಂತೆ, ದುರ್ಬಲಗೊಳಿಸದಂತೆ, ಸ್ವರಕ್ಷಣೆಗೆ ಮತ್ತು ಪ್ರಪಂಚದ ಸ್ವಾತಂತ್ರ್ಯ ರಕ್ಷಣೆಗೆ ಸಹಾಯಮಾಡಲು ಅದಕ್ಕೆ ಇರುವ ಶಕ್ತಿಯನ್ನು ದಿನೇ ದಿನೇ ಕುಗ್ಗಿಸಿದಂತೆ"; "ಸಾಮ್ರಾಜ್ಯ ಸ್ವಾಮ್ಯವು ತನ್ನ ಅಧೀನ ಜನಾಂಗದ ಶಕ್ತಿಯನ್ನು ಹೆಚ್ಚಿಸುವ ಬದಲು ಒಂದು ಹೊರೆಯಾಗಿ ಶಾಪವಾಗಿದೆ; ಆಧುನಿಕ ಸಾಮ್ರಾಜ್ಯ ನೀತಿಗೆ ಉತ್ತಮ ನಿದರ್ಶನವಾದ ಭಾರತದ ಸ್ವಾತಂತ್ರ್ಯವೇ ಈ ಪ್ರಶ್ನೆಯ ಮುಖ್ಯ ತಿರುಳು; ಬ್ರಿಟನ್ನಿನ ಮತ್ತು ಯುಕ್ತ ರಾಷ್ಟ್ರಗಳ ಪರೀಕ್ಷೆ ಭಾರತದ ಸ್ವಾತಂತ್ರ್ಯದಿಂದ; ಭಾರತ ಸ್ವತಂತ್ರವಾದರೆ ಮಾತ್ರ ಏಷ್ಯ ಮತ್ತು ಆಫ್ರಿಕದ ಜನರಲ್ಲಿ ಆಸೆ ಮತ್ತು ಉತ್ಸಾಹ ಉತ್ಪನ್ನವಾಗುತ್ತವೆ.'' ಎಂದೆವು. ಒಂದು ತಾತ್ಕಾಲಿಕ ಸರಕಾರ ಏರ್ಪಡಿಸಬೇಕೆಂದೂ, ಜನತೆಯ ಎಲ್ಲ ಮುಖ್ಯ ಪಂಗಡಗಳ ಪ್ರತಿನಿಧಿಗಳೂ ಅದರಲ್ಲಿ ಇರಬೇಕೆಂದೂ, ಅದರ ಪ್ರಥಮ ಕರ್ತವ್ಯವು ಮಿತ್ರ ರಾಷ್ಟ್ರಗಳೊಂದಿಗೆ ಸಹಕರಿಸಿ ತನ್ನ ಎಲ್ಲ ಶಸ್ತ್ರಸಜ್ಜಿತ ಸೈನ್ಯ ಮತ್ತು ಅಹಿಂಸಾ ಶಕ್ತಿಗಳ ಸಹಾಯದಿಂದ ಪರಾಕ್ರಮಣ ಎದುರಿಸಿ ಭಾರತ ರಕ್ಷಣೆ ನೋಡಿಕೊಳ್ಳುವುದೇ ಎಂದೂ,'' ತಿಳಿಸಿದೆವು. "ಭಾರತದ ಎಲ್ಲ ಪಂಗಡಗಳಿಗೆ ಒಪ್ಪಿಗೆಯಾದ ಒಂದು ಸಂವಿಧಾನ ರಚಿಸಲು ಈ ಸರಕಾರ ಒಂದು ಸಂವಿಧಾನ ಸಭೆ ಏರ್ಪಡಿಸಲು ಯೋಚಿಸಬೇಕೆಂದೂ; ಆ ಸಂವಿಧಾನವು ಹೆಚ್ಚಿನ ಸ್ವಾತಂತ್ರ್ಯವಿರಬೇಕೆಂದೂ ಕಳೆದುಳಿದ ಅಧಿಕಾರ ಸಹ ಸಂಯೋಜಿತ ಪ್ರಾಂತ್ಯಗಳೇ ಇರಬೇಕೆಂದೂ ತಿಳಿಸಿದೆವು.'' "ಜನತೆಯ ಸುಸಂಘಟಿತ ಇಚ್ಛೆ ಮತ್ತು ಶಕ್ತಿಯ ಬೆಂಬಲದಿಂದ ಯಶಸ್ವಿಯಾಗಿ ಪರಾಕ್ರಮಣ ಎದುರಿಸಬೇಕಾದರೆ ಭಾರತ ಸತಂತ್ರವಾದರೆ ಮಾತ್ರ ಸಾಧ್ಯ'' ಎಂದು ಹೇಳಿದೆವು.

ಭಾರತದ ಈ ಸ್ವಾತಂತ್ರ್ಯ ಏಷ್ಯದ ಇತರ ರಾಷ್ಟ್ರಗಳ ಸ್ವಾತಂತ್ರ್ಯಕ್ಕೆ ಸಂಕೇತವೂ ಆರಂಭವೂ ಆಗಬೇಕೆಂದೆವು. ಯುಕ್ತ ರಾಷ್ಟ್ರಸಂಸ್ಥೆಯನ್ನೇ ಮೂಲಾಧಾರ ಇಟ್ಟುಕೊಂಡು, ಇಡೀ ಪ್ರಪಂಚಕ್ಕೊಂದು ಸ್ವತಂತ್ರ ರಾಷ್ಟ್ರಗಳ ಸಂಯುಕ್ತ ರಾಜ್ಯಪದ್ಧತಿ ಇರಬೇಕೆಂದೆವು.

ಚೀನಾ ಮತ್ತು ರಷ್ಯದ ಉದಾಹರಣೆಗಳಿಂದ ಸ್ವಾತಂತ್ರ್ಯದ ಬೆಲೆ ಅರಿತಿರುವೆವೆಂದೂ, ಆ ಸ್ವಾತಂತ್ರ್ಯವನ್ನು ರಕ್ಷಿಸಬೇಕೆಂದೂ, ಆದ್ದರಿಂದ ಆ ರಾಷ್ಟ್ರಗಳು ರಕ್ಷಣೆಗೆ ಯಾವ ವಿಧದಲ್ಲೂ ಅಡ್ಡಿ ಬರಲು ಕಾರ್ಯಸಮಿತಿಗೆ ಇಷ್ಟವಿಲ್ಲವೆಂದೂ, ಮತ್ತು ಯುಕ್ತ ರಾಷ್ಟ್ರಗಳ ರಕ್ಷಣಾಶಕ್ತಿಯನ್ನು ಸಹ ಯಾವ ವಿಧದಲ್ಲೂ ಅಪಾಯಕ್ಕೀಡುಮಾಡಲು ಇಷ್ಟವಿಲ್ಲವೆಂದೂ ತಿಳಿಸಿದೆವು (ಆಗ ಚೀನಾ ಮತ್ತು ರಷ್ಯಗಳ ಪರಿಸ್ಥಿತಿ ಬಹಳ ಚಿಂತಾಜನಕವಿತ್ತು.) "ಆದರೆ ಭಾರತಕ್ಕೂ, ಈ ದೇಶಗಳಿಗೂ ಅಪಾಯ ಹೆಚ್ಚುತ್ತಿದೆ. ಈ ಕಾಲದಲ್ಲಿ ನಿಶ್ಚೇತನರಾಗಿ ಪರಾಡಳಿತಕ್ಕೆ ಅಧೀನವಾಗಿರುವುದು ಭಾರತಕ್ಕೆ ಅಪಮಾನ ಮಾತ್ರವಲ್ಲದೆ, ಭಾರತದ ಆತ್ಮರಕ್ಷಣೆಯ ಮತ್ತು ಪರಧಾಳಿ ಎದುರಿಸುವ ಶಕ್ತಿಯನ್ನು ಕಡಮೆಮಾಡಿದಂತಾಗುತ್ತದೆ, ನಮ್ಮೆದುರು ಬೆಳೆದು ಕವಿಯುತ್ತಿರುವ ವಿಪತ್ತಿಗೆ ಅದು ಉತ್ತರವಲ್ಲ. ಯುಕ್ತರಾಷ್ಟ್ರಗಳ ಜನರ ಸೇವೆ ಸಲ್ಲಿಸಿದಂತೆ ಆಗುವುದಿಲ್ಲ'' ಎಂದೆವು.

"ಪ್ರಪಂಚದ ಸ್ವಾತಂತ್ರ್ಯದ ಹೆಸರಿನಲ್ಲಿ'' ಈ ರೀತಿ ಬ್ರಿಟನ್ ಮತ್ತು ಯುಕ್ತ ರಾಷ್ಟ್ರಗಳಿಗೆ ಕಾರ್ಯಸಮಿತಿ ವಿನಯದಿಂದ ಪ್ರಾರ್ಥಿಸಿತು. ಆಮೇಲೆ ಆ ನಿರ್ಣಯದಲ್ಲಿ ಮುಂದೆ ಒಂದು ಕಹಿಯೂ ಇತ್ತು. "ರಾಷ್ಟ್ರ ಜೀವನವನ್ನೆಲ್ಲ ಆಕ್ರಮಿಸಿ, ರಾಷ್ಟ್ರದ ಹಿತಕ್ಕೆ ಮತ್ತು ಮಾನವೀಯತೆಯ ಹಿತಕ್ಕೆ ಶ್ರಮಿಸಲು ಅಡ್ಡಿ ಬರುತ್ತಿರುವ ನಿರಂಕುಶ ಸಾಮ್ರಾಜ್ಯ ಸರಕಾರವನ್ನು ಪ್ರತಿಭಟಿಸಿ ರಾಷ್ಟ್ರದ ಇಚ್ಛೆ ಪೂರ್ಣಮಾಡಲು ಕಾತರಗೊಂಡ ಜನತೆಯನ್ನು ಹಿಡಿದು ನಿಲ್ಲಿಸಲು ಈ ಕಾಂಗ್ರೆಸ್ ಸಮಿತಿಗೆ ಇನ್ನು ಮುಂದೆ ಸಾಧ್ಯವಿಲ್ಲ. ಆದ್ದರಿಂದ ಭಾರತದ ಆಜನ್ಮಸಿದ್ಧ ಸ್ವಾತಂತ್ರ್ಯದ ಹಕ್ಕನ್ನು ಸ್ಥಾಪಿಸಲು ಗಾಂಧೀಜಿಯ ನೇತೃತ್ವದಲ್ಲಿ ಅಹಿಂಸಾತ್ಮಕ ಜನತಾಚಳುವಳಿ ಹೂಡಲು ಗಾಂಧೀಜಿಗೆ ಅಧಿಕಾರ ಕೊಡುತ್ತದೆ;'' ಗಾಂಧಿಜಿಗೆ ಸೂಕ್ತಕಂಡಾಗ ಮಾತ್ರ ಈ ಅಧಿಕಾರ ಉಪಯೋಗಿಸತಕ್ಕದ್ದು. ಕೊನೆಯಲ್ಲಿ ''ಕಾಂಗ್ರೆಸ್ಸಿಗೆ ಅಧಿಕಾರದ ಆಸೆ ಇಲ್ಲವೆಂದೂ, ಅಧಿಕಾರ ದೊರೆತರೆ ಅದು ಭಾರತದ ಎಲ್ಲ ಜನರಿಗೆ'' ಎಂದೂ ತಿಳಿಸಿದೆವು.

ಇನ್ನು ಬ್ರಿಟಿಷ್ ಪ್ರತಿನಿಧಿ ವೈಸರಾಯನನ್ನು ಕಾಣುವುದೂ, ಮತ್ತು ಭಾರತದ ಸ್ವಾತಂತ್ರ್ಯಕ್ಕೆ ಮನ್ನಣೆ ಕೊಟ್ಟು, ಆಕ್ರಮಣಕಾರ ಅಕ್ಷರಾಷ್ಟ್ರಗಳ ವಿರುದ್ಧ ಹೋರಾಟದಲ್ಲಿ ಯುಕ್ತರಾಷ್ಟ್ರಗಳ ಧ್ಯೇಯಕ್ಕೆ ಸಹಾಯ ವಾಗುವಂತೆ ಭಾರತ ಮತ್ತು ಬ್ರಿಟನ್‌ಗಳಿಗೆ ಒಂದು ಗೌರವಯುತ ಒಪ್ಪಂದವಾಗುವಂತೆ ಮಧ್ಯಸ್ಥಿಕೆ ಮಾಡಿರೆಂದು ಪ್ರಮುಖ ಯುಕ್ತರಾಷ್ಟ್ರಗಳ ರಾಷ್ಟ್ರನಾಯಕರಿಗೆ ಕೇಳಿಕೊಳ್ಳುವುದೂ ಮುಂದಿನ ಹೆಜ್ಜೆ ಎಂದೂ ಗಾಂಧೀಜಿ ಮತ್ತು ಅಧ್ಯಕ್ಷ ಅಜಾದ್ ತಮ್ಮ ಅಂತ್ಯಭಾಷಣಗಳಲ್ಲಿ ತಿಳಿಸಿದರು.

೧೯೪೨ನೆಯ ಆಗಸ್ಟ್ ಎಂಟನೆ ರಾತ್ರಿ ಬಹಳ ಹೊತ್ತಾದ ಮೇಲೆ ಈ ನಿರ್ಣಯ ಅಂಗೀಕಾರ ವಾಯಿತು. ಕೆಲವೇ ಗಂಟೆಗಳ ನಂತರ ಆಗಸ್ಟ್ ಒಂಭತ್ತನೆಯ ಬೆಳಗಿನ ಜಾವ ಮುಂಬೈಯಲ್ಲೂ, ದೇಶಾದ್ಯಂತ ಇತರ ಕಡೆಗಳಲ್ಲೂ ಅಸಂಖ್ಯಾತ ಬಂಧನಗಳಾದುವು. ಅಹಮದ್ ನಗರ ಕೋಟೆಗೆ ನಾನು ಬಂದುದು ಈ ರೀತಿ.

# ಅಧ್ಯಾಯ ಹತ್ತು: ಪುನಃ ಅಹಮದ್ ನಗರ ಕೋಟೆಯಲ್ಲಿ

## ೧. ಘಟನಾ ಪರಂಪರೆ

### ಅಹಮದ್‌ನಗರದ ಕೋಟೆ : ಆಗಸ್ಟ್ ಹದಿಮೂರು : ೧೯೪೪

ಇಲ್ಲಿಗೆ ಬಂದು ಈಗ ಎರಡು ವರ್ಷಗಳ ಮೇಲೆ ಆಯಿತು; ಒಂದೇ ಸ್ಥಳದಲ್ಲಿ ಎರಡು ವರುಷಗಳ ಕನಸಿನ ಬಾಳು; ಎತ್ತ ನೋಡಿದರೂ ಅದೇ ಜನ, ಅದೇ ಸಂಕುಚಿತ ವಾತಾವರಣ, ನಿತ್ಯವೂ ಒಂದೇ ಕಾರ್ಯಕ್ರಮ. ಮುಂದೆ ಎಂದೋ ಒಂದು ದಿನ ಈ ಕನಸು ಕೊನೆಗಂಡಾಗ ವಿಶಾಲ ಪ್ರಪಂಚದ ಜೀವನ ವನ್ನೂ, ಕಾರ್ಯ ಚಟುವಟಿಕೆಯನ್ನೂ ಕಾಣುತ್ತೇವೆ; ಆಗ ಒಂದು ಹೊಸ ಪ್ರಪಂಚವನ್ನೇ ನೋಡು ತ್ತೇವೆ. ಕಣ್ಣಿಗೆ ಬೀಳುವ ವಸ್ತುಗಳು, ಜನರು, ಎಲ್ಲ ಹೊಸಬರಾಗುತ್ತಾರೆ; ಪುನಃ ಜ್ಞಾಪಕಕ್ಕೆ ತಂದು ಕೊಳ್ಳಲು ಯತ್ನಿಸುತ್ತೇವೆ; ಹಿಂದಿನ ಸವಿನೆನಪುಗಳು ನಮ್ಮ ಸ್ಮೃತಿಪಥ ತುಂಬುತ್ತವೆ; ಆದರೂ ಅವು ಅವೇ ಇರುವುದಿಲ್ಲ, ಇರಲು ಸಾಧ್ಯವೂ ಇಲ್ಲ; ಅವುಗಳ ಜೊತೆಗೆ ಹೊಂದಿಕೊಳ್ಳುವುದೂ ಕಷ್ಟವಾಗುತ್ತದೆ. ಅನೇಕ ವೇಳೆ, ಒಂದೇ ದಿನಚರ್ಯೆಯ ಈ ನಿತ್ಯಜೀವನವೇ ಒಂದು ನಿದ್ರೆಯಲ್ಲವೆ, ಎಂದೋ ಒಂದು ದಿನ ಏಕಾಏಕಿ ಒಡೆದೇಳಬಹುದಾದ ಕನಸಲ್ಲವೆ ಎಂದು ಯೋಚನೆ ಹುಟ್ಟುತ್ತದೆ. ಇದರಲ್ಲಿ ಕನಸು ಯಾವುದು ಮತ್ತು ಎಚ್ಚರ ಯಾವುದು ? ಎರಡೂ ಸತ್ಯ ಇರಬಹುದೆ ? ಏಕೆಂದರೆ ಎರಡರ ತೀಕ್ಷ್ಣ ಅನು ಭವದ ಅರಿವೂ ನಮಗೆ ಇದೆ. ಅಥವಾ ಎರಡೂ ಮಿಥ್ಯವೋ ? ಅಥವ ಮುಸುಕು ಚಿತ್ರ ಮಾತ್ರ ಬಿಟ್ಟು ಮಾಯವಾಗುವ ಕ್ಷಣಿಕ ಕನಸಿನಂತೆ ತೋರುವ ಭ್ರಮೆಯೋ ?

ಸೆರೆಮನೆ, ಅದರ ಏಕಾಂತ ಜೀವನ, ಮತ್ತು ಕಾರ್ಯಶೂನ್ಯತೆಗಳ ಮಧ್ಯೆ ಆಲೋಚನೆಗೆ ಬೇಕಾ ದಷ್ಟು ಅವಕಾಶ ದೊರೆಯುತ್ತದೆ; ತನ್ನ ಮತ್ತು ಮಾನವ ಜೀವನದ ಕಾರ್ಯಪರಂಪರೆಯ ದೀರ್ಘ ಇತಿಹಾಸದ ಹಳೆಯ ನೆನವುಗಳಿಂದ ಜೀವನದ ಶೂನ್ಯತೆಯನ್ನು ತುಂಬಲು ಒಳ್ಳೆಯ ಅವಕಾಶ ದೊರೆಯುತ್ತದೆ. ಆದರಂತೆ ಕಳೆದ ನಾಲ್ಕು ತಿಂಗಳಲ್ಲಿ ಈ ಗ್ರಂಥರಚನೆಯಲ್ಲಿ ಭಾರತದ ಹಿಂದಿನ ಐತಿಹಾಸಿಕ ಘಟನೆಗಳನ್ನೂ ಅನುಭವಗಳನ್ನೂ ಕುರಿತು ಯೋಚಿಸುತ್ತಿದ್ದೇನೆ. ನನ್ನ ಮನ ಸ್ಸಿಗೆ ಹೊಳೆದ ಅನೇಕ ಚಿತ್ರಗಳಲ್ಲಿ ಕೆಲವನ್ನು ಆಯ್ದು ಈ ಗ್ರಂಥ ರಚಿಸಿದ್ದೇನೆ. ಈಗ ಪುನಃ ನನ್ನ ಈ ಬರವಣಿಗೆ ನೋಡಿದರೆ ಅದು ಅಪೂರ್ಣವೆಂದೂ, ಅಸಂಬದ್ಧವೆಂದೂ, ಸಮರಸವಿಲ್ಲದ ಅನೇಕ

ವಸ್ತುಗಳ ಕಲುಸುಮೇಲೋಗರವೆಂದೂ, ಇದು ಒಂದು ನಿಜವಾದ ವಿಶ್ಲೇಷಣಗ್ರಂಥ ಆಗಿರಬೇಕೆಂದು ಆರಂಭಿಸಿದ್ದು ನನ್ನ ವೈಯಕ್ತಿಕ ಪ್ರಭಾವದಿಂದ ಬೇರೊಂದು ಬಣ್ಣ ತಾಳಿದೆ ಎಂದೂ ನಾನು ಬಲ್ಲೆ. ನಾನು ಎಷ್ಟೇ ಬಿಗಿಹಿಡಿದರೂ ನನ್ನ ವ್ಯಕ್ತಿತ್ವವು ಅದರೊಳಗೆ ಬೆರೆತುಹೋಗಿದೆ; ಎಷ್ಟೋ ವಿರೋಧಿಸಿ ಅದನ್ನು ತಡೆದೆ; ಆದರೆ ಕೆಲವುವೇಳೆ ಸುಮ್ಮನೆ ಹರಿಬಿಟ್ಟಾಗ ನನ್ನ ಲೇಖನಿಯಿಂದ ಅದು ನಿರರ್ಗಳವಾಗಿ ಹರಿದು ಕೆಲವು ಮಟ್ಟಿಗೆ ನನ್ನ ಮನೋಭಾವನೆಯನ್ನು ಅದರಲ್ಲಿ ಪ್ರತಿಬಿಂಬಿಸಿದೆ.

ಗತಕಾಲದ ಕತೆ ಬರೆದು ನನ್ನ ಮೇಲಿನ ಪ್ರಾಚೀನತೆಯ ಹೊರೆ ಕಳೆದುಕೊಳ್ಳಲು ಯತ್ನಿಸಿದ್ದೇನೆ; ಆದರೆ ವರ್ತಮಾನಕಾಲದ ಜಟಿಲತೆ ಮತ್ತು ಅಸಂಬದ್ಧತೆ ಎಲ್ಲವೂ ಹಾಗೇ ಉಳಿದಿವೆ; ಎದುರಿನಲ್ಲಿ ಭವಿಷ್ಯದ ಕಾರ್ಗತ್ತಲೆ ಕವಿದಿದೆ. ಇವುಗಳ ಹೊರೆ ಪ್ರಾಚೀನತೆಯ ಹೊರೆಗಿಂತ ಕಡಮೆ ಏನೂ ಇಲ್ಲ. ಚಂಚಲಮನಸ್ಸು ಯಾವ ನೆಲೆಯೂ ಇಲ್ಲದೆ ಅಶಾಂತಿಯಿಂದ ಅಲೆಯುತ್ತ ನನಗೂ ಇತರರಿಗೂ ಕಿರಿಕಿರಿ ಪಡಿಸುತ್ತಿದೆ. ಯಾವ ಯೋಚನೆ ಹೊಡೆತಕ್ಕೂ ಸಿಕ್ಕು ತಳಮಳಗೊಳ್ಳದೆ, ಯಾವ ಸಂಶಯದ ನೆರಳನ್ನೂ ಕಾಣದೆ, ಒಂದು ಪಂಜ್ತಿಯನ್ನೂ ಬರೆಯದೆ ಇರುವ ಅಕ್ಲಿಷ್ಟ ಮನಸ್ಸುಳ್ಳ ಜನರನ್ನು ಕಂಡು ಸ್ವಲ್ಪ ಕರುಬು ಹುಟ್ಟುವುದು ನಿಜ. ಕೆಲವು ಬಾರಿ ಸ್ವಲ್ಪ ಕ್ಷೋಭೆ ಮತ್ತು ನೋವು ಉಂಟಾದರೂ ಅವರ ಜೀವನ ಎಷ್ಟೋ ಸುಲಭವಿರಬೇಕು.

ಘಟನೆಗಳು ಒಂದರಮೇಲೊಂದು ಒದಗುತ್ತವೆ. ಅಂತ್ಯವಿಲ್ಲದ ಅಪಾರವಿಷಯ ಪರಂಪರೆ ನಿರಾತಂಕ ಮುಂದುವರಿಯುತ್ತಲೇ ಇದೆ. ಯಾವುದೋ ಒಂದು ನಿರ್ದಿಷ್ಟ ವಿಷಯವನ್ನು ಮಾತ್ರ ಪ್ರತ್ಯೇಕಿಸಿ, ಅದೇ ಆದಿ ಮತ್ತು ಅಂತ್ಯವೆಂದು ಭಾವಿಸಿ, ಅದು ಅದರ ಹಿಂದಿನ ಯಾವುದೊ ಬೇರೊಂದು ಘಟನೆಯ ಪರಿಣಾಮವೆಂದು ಭಾವಿಸಿ ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತೇವೆ. ಆದರೂ ಅದಕ್ಕೆ ಆದಿ ಇಲ್ಲ; ಹಿಂದೆ ಆಗಿಹೋದ ಎಲ್ಲ ಕಾರಣಗಳ ಪರಿಣಾಮವಾಗಿ, ಅಸಂಖ್ಯಾತ ಮಾನವ ಜೀವನಗಳ ಮನೋನಿಶ್ಚಯ, ಪ್ರೇರಣೆಗಳು ಮತ್ತು ಆಸೆಗಳು ಒಂದಕ್ಕೊಂದು ತಾಕಲಾಡಿ ಸೇರಿ ಪರಿಣಾಮವಾಗಿ ಹೊರಹೊಮ್ಮಿದ ಅನಂತ ಸರಪಣಿಯಲ್ಲಿ ಅದು ಒಂದು ಕೊಂಡಿ ಮಾತ್ರ. ಪರಿಣಾಮವು ಯಾವ ಒಬ್ಬ ವ್ಯಕ್ತಿಯ ಮನೋಗತ ಅಭಿಲಾಷೆಗಿಂತಲೂ ತೀರ ಭಿನ್ನವಾದುದು. ಆ ಮನೋ ನಿಶ್ಚಯ, ಪ್ರೇರಣೆ ಮತ್ತು ಆಸೆಗಳೇ ಗತ ವಿಷಯಗಳ ಮತ್ತು ಅನುಭವಗಳ ಪ್ರಭಾವದಿಂದ ರೂಪುಗೊಂಡುವು; ಈ ಹೊಸ ವಿಷಯ ಸಹ ಭವಿಷ್ಯದ ನಿರ್ಧಾರದಲ್ಲಿ ಮತ್ತೊಂದು ಕೊಂಡಿಯಾಗುತ್ತದೆ. ಜನಮನದಮೇಲೆ ಪ್ರಭಾವ ಬೀರುವ ಯುಗಪುರುಷನು ಈ ಪರಂಪರೆಯಲ್ಲಿ ಒಂದು ಪ್ರಮುಖ ಪಾತ್ರವಹಿಸುತ್ತಾನೆಂಬುದು ನಿಶ್ಚಯ. ಆದರೆ ಆತನೇ ಗತವಿಷಯಗಳ ಮತ್ತು ಶಕ್ತಿಗಳ ಒಂದು ಶಿಶು ಮತ್ತು ಆ ಗತ ಶಕ್ತಿಗಳೇ ಪ್ರಭಾವವನ್ನೂ ಮಿತಿಗೊಳಿಸುತ್ತವೆ.

## ೨ ಎರಡು ಹಿನ್ನೆಲೆಗಳು : ಭಾರತೀಯ ಮತ್ತು ಬ್ರಿಟಿಷ್

೧೯೪೨ನೇ ಆಗಸ್ಟ್ ತಿಂಗಳಲ್ಲಿ ಭಾರತದಲ್ಲಿ ನಡೆದ ಘಟನೆಗಳು ಏಕಾ ಏಕಿ ಉದ್ಭವಿಸಿದುದಲ್ಲ; ಅವು ಹಿಂದಿನ ಎಲ್ಲ ಘಟನೆಗಳ ಪರಿಣಾಮ. ಆ ಘಟನೆಗಳನ್ನು ವಿರೋಧಿಸಿ, ಟೀಕೆಮಾಡಿ, ಸಮರ್ಥಿಸಿ ಎಷ್ಟೋ ಲೇಖನಗಳೂ, ಅನೇಕ ವಿವರಣೆಗಳೂ ಬಂದುವು. ಆದರೆ ಈ ಅನೇಕ ಲೇಖಕರು ಆ ಘಟನೆಗಳ ನಿಜವಾದ ಅರ್ಥ ಗ್ರಹಿಸಿಲ್ಲ. ಏಕೆಂದರೆ ಅವೆಲ್ಲವೂ ಎಲ್ಲ ರಾಜಕೀಯವನ್ನೂ ಮೀರಿದ ಒಂದು ಗಾಢವಾದ ಪ್ರಶ್ನೆಗೆ ಕೇವಲ ರಾಜಕೀಯ ಬಣ್ಣಕೊಡುವ ಲೇಖನಗಳು. ಆ ಎಲ್ಲ ಘಟನೆಗಳ ಹಿಂದೆ ಇನ್ನುಮುಂದೆ ವಿದೇಶೀಯರ ನಿರಂಕುಶ ಅಧಿಕಾರದ ಅಧೀನ ಬಾಳಲು ಸಾಧ್ಯವಿಲ್ಲ; ಆ ದಾಸ್ಯಜೀವನ ಶಕ್ಯವಿಲ್ಲ ಎಂಬ ಪ್ರಚಂಡ ಪ್ರತಿಜ್ಞೆ ಇತ್ತು. ಉಳಿದ ಎಲ್ಲ ಪ್ರಶ್ನೆಗಳೂ ಆ ಆಡಳಿತದಲ್ಲಿ ಕೆಲವು ಕಡೆ ಸುಧಾರಣೆ, ಅಥವ ಪ್ರಗತಿ ಸಾಧ್ಯವಿತ್ತೇ ಇಲ್ಲವೆ; ಪ್ರತಿಭಟನೆಯ ಪರಿಣಾಮ ಹೆಚ್ಚು ಹಾನಿಕರವೆ ಎಂಬುದಾವುದೂ ಪ್ರಾಮುಖ್ಯವಲ್ಲ. ಏನು ತ್ಯಾಗಮಾಡಬೇಕಾಗಿ ಬಂದರೂ ಮಾಡಿ ದಾಸ್ಯಜೀವನದಿಂದ ಪಾರಾಗಬೇಕು. ಏನೇ ಆಗಲಿ ಇನ್ನುಮುಂದೆ ಒಂದು ನಿಮಿಷವೂ ಅದನ್ನು ಸಹಿಸಲು ಸಾಧ್ಯವಿಲ್ಲ ಎಂಬ ದೃಢಸಂಕಲ್ಪವಿತ್ತು.

ಈ ಭಾವನೆ ಹೊಸದಾಗಿ ಉದ್ಭವಿಸಿದ ಒಂದು ಕೌತುಕವೇನಲ್ಲ. ಅನೇಕ ವರ್ಷಗಳಿಂದ ಇದ್ದೇ ಇತ್ತು. ಆದರೆ ಘಟನೆಗಳ ಗತಿಗನುಗುಣವಾಗಿ ಮುಂದುವರಿಯುವಂತೆ ಅದಷ್ಟು ಅನೇಕ ವಿಧ ಕಡಿವಾಣ ಹಾಕಿ ಹದ್ದು ಬಸ್ತಿನಲ್ಲಿ ಅದನ್ನು ನಡೆಸಲಾಗಿತ್ತು. ಯುದ್ಧವೇ ಒಂದು ಬಗೆಯಲ್ಲಿ ಈ ಹಿಡಿತ ಬಿಗಿ ಮಾಡುವ ಮತ್ತು ಇನ್ನೊಂದು ಬಗೆಯಲ್ಲಿ ಹಿಡಿತ ಸಡಿಲಿಸುವ ಘಟನೆಯಾಗಿತ್ತು. ಒಂದುಕಡೆ ಅಪಾರ ಪ್ರಗತಿಪರ ಕ್ರಾಂತಿಕಾರಕ ಪರಿವರ್ತನೆಗಳನ್ನು ನಮ್ಮ ದೃಷ್ಟಿಪಥಕ್ಕೆ ತಂದು ಆ ಹಿಡಿತದಿಂದ ತಪ್ಪಿಸಿ ಕೊಳ್ಳಲು ಪ್ರೇರಿಸುತ್ತಿದ್ದಿತು. ಇನ್ನೊಂದು ಕಡೆ ಅಕ್ಷ ರಾಷ್ಟ್ರಗಳ ವಿರುದ್ಧ ಹೋರಾಟದಲ್ಲಿ ಯಾವ ಬಗೆಯ ತೊಂದರೆಯನ್ನೂ ಮಾಡದೆ ಸಹಾಯಮಾಡಬೇಕೆಂಬ ನಮ್ಮ ಇಚ್ಛೆ ಮತ್ತು ಅನೇಕ ಕಾರ್ಯಗಳಿಗೆ ಅಡ್ಡಿಯಾಯಿತು.

ಆದರೆ ಯುದ್ಧ ಮುಂದುವರಿದಂತೆ ಪಾಶ್ಚಾತ್ಯ ಪ್ರಜಾಪ್ರಭುತ್ವ ರಾಷ್ಟ್ರಗಳು ಯಾವ ಪರಿವರ್ತನೆಯೂ ಇಲ್ಲದೆ ತಮ್ಮ ಹಿಂದಿನ ಸಾಮ್ರಾಜ್ಯ ನೀತಿಯನ್ನೇ ಮುಂದುವರಿಸಲು ಯುದ್ಧಮಾಡುತ್ತಿರುವಂತೆ ಸ್ಪಷ್ಟ ವಾಗುತ್ತ ಬಂದಿತು. ಯುದ್ಧಕ್ಕೆ ಮುಂಚೆ ಫ್ಯಾಸಿಸಂ ಬೆನ್ನುಕಟ್ಟಿದ್ದವು. ಅದಕ್ಕೆ ಕಾರಣ ಪರಿಣಾಮಗಳ ಭಯವು ಮಾತ್ರವಲ್ಲ; ಫ್ಯಾಸಿಸ್ಟ್ ತತ್ವದಮೇಲೆ ಒಂದು ಬಗೆಯ ಸಹಾನುಭೂತಿ ಇದ್ದುದಲ್ಲದೆ ಬೇರೆಮಾರ್ಗ ಅನುಸರಿಸಲು ಮನಸ್ಸು ಇಲ್ಲದಿದ್ದುದು. ನಾಜಿ ಮತ್ತು ಫ್ಯಾಸಿಸ್ಟ್ ತತ್ವಗಳು ಐತಿಹಾಸಿಕ ಆಕಸ್ಮಿಕಗಳಲ್ಲ; ಸಾಮ್ರಾಜ್ಯಗಳ ಸ್ಥಾಪನೆ, ವರ್ಣಭೇದ, ರಾಷ್ಟ್ರಗಳ ಹೋರಾಟಗಳು, ಅಧಿಕಾರದ ಕೇಂದ್ರೀಕರಣ, ಅಂದಿನ ಸಮಾಜದ ರಚನೆಯಲ್ಲಿ ಪೂರ್ಣ ವಿಕಾಸಗೊಳ್ಳಲು ಅವಕಾಶವಿಲ್ಲದ ಔದ್ಯೋಗಿಕ ಪ್ರಗತಿ, ಪ್ರಜಾ ಸತ್ತಾತ್ಮಕ ಧ್ಯೇಯಕ್ಕೂ ಮತ್ತು ಅದರ ವಿರುದ್ಧವಿದ್ದ ಸಮಾಜರಚನೆಗೂ ಮಧ್ಯೆ ಇದ್ದ ಮೂಲಘರ್ಷಣೆ ಈ ಎಲ್ಲ ಐತಿಹಾಸಿಕ ಘಟನಾಪರಂಪರೆಗಳ ಸ್ವಾಭಾವಿಕ ಫಲಗಳು. ಪಶ್ಚಿಮ ಯೂರೋಪ್ ಮತ್ತು ಉತ್ತರ ಅಮೆರಿಕೆಯ ರಾಜಕೀಯ ಪ್ರಜಾಸತ್ತೆಯು ರಾಷ್ಟ್ರೀಯ ಮತ್ತು ವೈಯಕ್ತಿಕ ಪ್ರಗತಿಗೆ ಮುಕ್ತ ದ್ವಾರ ಮಾಡಿತ್ತು; ಆರ್ಥಿಕ ಸಮಾನತೆಯೇ ಮುಖ್ಯಗುರಿಯುಳ್ಳ ಹೊಸ ಶಕ್ತಿಗಳಿಗೂ ಜನ್ಮಕೊಟ್ಟ ಆ ಪರಿಸ್ಥಿತಿ ಯಲ್ಲೇ ಘರ್ಷಣೆ ಅನಿವಾರ್ಯವಿತ್ತು. ಆ ಪ್ರಜಾಸತ್ತೆಯು ಇನ್ನೂ ವಿಶಾಲಗೊಳ್ಳಬೇಕು. ಅಥವ ಸಂಕುಚಿತ ಗೊಂಡು ನಿರ್ನಾಮವಾಗಬೇಕು. ಮೇಲಿಂದಮೇಲೆ ವಿರೋಧಬಂದರೂ ಪ್ರಜಾಸತ್ತೆಯ ತಿರುಳು ಮತ್ತು ವೈಶಾಲ್ಯ ಬಲಗೊಂಡವು; ಮತ್ತು ಆದರ್ಶ ರಾಜಕೀಯ ಪದ್ಧತಿ ಎಂದು ಅದು ಸರ್ವಮಾನ್ಯವಾಯಿತು. ಆದರೆ ಇನ್ನೂ ಮುಂದುವರಿದರೆ ಸಮಾಜರಚನೆಯ ಬುಡಕ್ಕೇ ಪೆಟ್ಟು ಎಂಬ ಕಾಲವೂ ಬಂದಿತು. ಆಗ ಸಂಪ್ರದಾಯಶರಣ ಸಂರಕ್ಷಕರು ಪ್ರತಿಭಟಿಸಿ, ಜಗಳಹೂಡಿ, ಸಂಘಟಿತರಾಗಿ ಆ ಬದಲಾವಣೆ ವಿರೋಧಿಸಿ ದರು. ಯಾವ ಯಾವ ದೇಶಗಳಲ್ಲಿ ಪರಿಸ್ಥಿತಿ ವಿಷಮಿಸಲು ಅನುಕೂಲ ಸನ್ನಿವೇಶಗಳು ಬೇಗ ಒದಗಿ ಬಂದವೋ ಅಲ್ಲಿ ಬಹಿರಂಗವಾಗಿ, ಉದ್ದೇಶಪೂರ್ವಕವಾಗಿ ಪ್ರಜಾಸತ್ತೆಯ ಕೊಲೆಯಾಗಿ ಫ್ಯಾಸಿಸ್ಟ್ ಮತ್ತು ನಾಜಿ ತತ್ವಗಳ ಅವತಾರವಾಯಿತು. ಪಶ್ಚಿಮಯೂರೋಪಿನ ಮತ್ತು ಉತ್ತರ ಅಮೆರಿಕೆಯ ಪ್ರಜಾ ಪ್ರಭುತ್ವಗಳ ವಿರುದ್ಧ ಸಹ ಅದೇ ಶಕ್ತಿಗಳು ಹೋರಾಟ ನಡೆಸುತ್ತಿದ್ದವು; ಆದರೆ ಇತರ ಕಾರಣಗಳು ಆ ವಿಷಮಪರಿಸ್ಥಿತಿಯನ್ನು ತಡೆದವು. ಪ್ರಾಯಶಃ ದೀರ್ಘಕಾಲದ ಶಾಂತಿಯುತ ಪ್ರಜಾಸತ್ತೆಯ ಸಂಪ್ರ ದಾಯವೂ ಸಹಾಯಕವಾಗಿರಬೇಕು. ಆದರೆ ಈ ಕೆಲವು ಪ್ರಜಾಪ್ರಭುತ್ವರಾಷ್ಟ್ರಗಳಿಗೆ ಯಾವ ಪ್ರಜಾ ಪ್ರಭುತ್ವದಗಂಧವೂ ಇಲ್ಲದ ಮತ್ತುಫ್ಯಾಸಿಸ್ಟ್ ಮನೋಭಾವದ ಸರ್ವಾಧಿಕಾರದ ಸಾಮ್ರಾಜ್ಯಗಳಿದ್ದವು. ಫ್ಯಾಸಿಸ್ಟ್ ರಾಷ್ಟ್ರಗಳಂತೆ ಈ ಸಾಮ್ರಾಜ್ಯಗಳಲ್ಲಿ ಸಹ ಜನರ ಸ್ವಾತಂತ್ರ್ಯದ ಬೇಡಿಕೆಯನ್ನು ನಿರ್ಮೂಲ ಮಾಡಲು ಆಡಳಿತವರ್ಗವು ಪ್ರತಿಗಾಮಿ ಮನೋಭಾವದ ಪಂಗಡಗಳು, ಸ್ವಾರ್ಥಸಾಧಕರು; ಮತ್ತು ಪಾಳೆಯಗಾರಿಕೆಯ ಶ್ರೀಮಂತ ಮನೆತನಗಳವರೊಂದಿಗೆ ಸ್ನೇಹ ಬೆಳೆಸಿತು. ತಮ್ಮ ತಾಯ್ನಾಡಿಗೆ ಪ್ರಜಾ ಪ್ರಭುತ್ವವು ಒಳ್ಳೆಯ ಮತ್ತು ಯೋಗ್ಯ ಆದರ್ಶವೆಂದು ನಂಬಿದ್ದರೂ ಅಧೀನರಾಷ್ಟ್ರಗಳಿಗೆ ಪ್ರಸ್ತುತ ವಿಶೇಷ ಪರಿಸ್ಥಿತಿಯಲ್ಲಿ ಅದು ಯುಕ್ತವಲ್ಲವೆಂದು ಸಾಧಿಸತೊಡಗಿದರು. ಆದ್ದರಿಂದ ಫ್ಯಾಸಿಸ್ಟರ ಅನೇಕ ಕ್ರೂರ ಪಾಶವೀ ಕೃತ್ಯಗಳನ್ನು ಒಪ್ಪದಿದ್ದರೂ, ಈ ಪಶ್ಚಿಮ ಯೂರೋಪಿನ ಪ್ರಜಾಪ್ರಭುತ್ವಗಳಿಗೂ ಫ್ಯಾಸಿಸ್ಟ್ ರಾಷ್ಟ್ರಗಳಿಗೂ ಒಂದು ಬಗೆಯ ನೈತಿಕ ಸಹಾನುಭೂತಿ ಸ್ವಾಭಾವಿಕವಾಯಿತು.

ಆತ್ಮರಕ್ಷಣೆಗೆ ಹೋರಾಟ ಅನಿವಾರ್ಯವಾದಾಗ ಯಾವ ವ್ಯವಸ್ಥೆಯಿಂದ ಅಪಯಶಸ್ಸು ಒದಗಿತ್ತೋ ಅದೇ ವ್ಯವಸ್ಥೆಯನ್ನು ಪುನರುಜ್ಜೀವನಗೊಳಿಸಲು ಯತ್ನಪಟ್ಟರು. ಈ ಯುದ್ಧವನ್ನು ಆತ್ಮರಕ್ಷಣೆಯ ಯುದ್ಧವೆಂದು ಸಾರಿ ಪ್ರಚಾರಮಾಡಿದರು. ಒಂದು ರೀತಿ ಅದು ನಿಜವೂ ಇತ್ತು. ಆದರೆ ಈ ಯುದ್ಧಕ್ಕೆ ಸೈನಿಕ ಆದರ್ಶ ಮಾತ್ರವಲ್ಲದೆ ಫ್ಯಾಸಿಸ್ಟ್ ತತ್ತ್ವ ಮತ್ತು ದೃಷ್ಟಿಗಳನ್ನು ಪ್ರಬಲವಾಗಿ ಪ್ರತಿಭಟಿಸಿದ ಒಂದು ನೈತಿಕ ದೃಷ್ಟಿಯೂ ಇತ್ತು. ಏಕೆಂದರೆ ಪ್ರಪಂಚದ ಜನತೆಯ ಆತ್ಮಶೋಧನೆಯೇ ಈ ಯುದ್ಧದ ಧ್ಯೇಯ ಎಂದು ಹೇಳಿದ್ದರು. ಈ ಧ್ಯೇಯದಲ್ಲಿ ಫ್ಯಾಸಿಸ್ಟ್ ರಾಷ್ಟ್ರಗಳು ಮಾತ್ರವಲ್ಲದೆ ಯುಕ್ತರಾಷ್ಟ್ರಗಳ ಪರಿವರ್ತನೆಯ ಅಂಕುರವೂ ಇತ್ತು. ಒಂದು ಹೊಸ ಭವಿಷ್ಯದ ರಚನೆಗೆ ಪ್ರಾಧಾನ್ಯತೆ ಕೊಡದೆ ಸ್ವರಕ್ಷಣೆಗೂ ಮತ್ತು ಹಿಂದಿನವೆಲ್ಲ ಅಳಿಯದೆ ಉಳಿಯಲೆಂಬುದಕ್ಕೂ ಪ್ರಾಧಾನ್ಯತೆ ಕೊಟ್ಟು ಪ್ರಚಂಡ ಪ್ರಚಾರದಿಂದ ಯುದ್ಧದ ಆ ಸೈನಿಕ ಧ್ಯೇಯವನ್ನು ಸದ್ದಿಲ್ಲದಂತೆ ಅಡಗಿಸಿದ್ದರು. ಪಾಶ್ಚಾತ್ಯ ದೇಶಗಳಲ್ಲಿ ಸಹ ಯುದ್ಧದ ನೈತಿಕ ದೃಷ್ಟಿಯಲ್ಲಿ ದೃಢನಂಬಿಕೆ ಇಟ್ಟು, ಈ ಯುದ್ಧದಲ್ಲಿ ಹೊರಬಿದ್ದ ಮಾನವ ಸಮಾಜದ ನ್ಯೂನತೆಗಳು ಪುನಃ ತಲೆದೋರದಂತೆ ಬೇರೊಂದು ಹೊಸ ಪ್ರಪಂಚ ಸೃಜಿಸಬೇಕೆಂದಿದ್ದ ಆಶಾವಾದಿಗಳು ಅನೇಕರಿದ್ದರು. ಅಸ್ಪಷ್ಟವಿದ್ದರೂ ಈ ಪರಿವರ್ತನೆಯಲ್ಲಿ ಬಲವತ್ತರ ಆಸೆ ಇಟ್ಟುಕೊಂಡವರನೇಕರು ಯುದ್ಧದಲ್ಲಿ ಹೋರಾಡಿ ಮಡಿದವರಲ್ಲಿ ಸಹ ಎಲ್ಲ ಕಡೆಯೂ ಇದ್ದರು. ಯೂರೋಪ್ ಮತ್ತು ಅಮೆರಿಕೆಯಲ್ಲಿ, ಹೆಚ್ಚಾಗಿ ಏಷ್ಯ ಮತ್ತು ಆಫ್ರಿಕೆಗಳಲ್ಲಿ ಕೋಟ್ಯಂತರ ಜನರು ಪರತಂತ್ರರಾಗಿ ದಾಸ್ಯಜೀವನ ನಡೆಸುತ್ತ, ಪರರಾಷ್ಟ್ರಗಳ ಸುಲಿಗೆಗೂ ಜನಾಂಗ ಭೇದಕ್ಕೂ ಬಲಿಯಾಗಿದ್ದರು. ಹಿಂದಿನ ಕಹಿ ನೆನಪುಗಳಿಂದ, ಇಂದಿನ ಸಂಕಟಗಳಿಂದ ಈ ಯುದ್ಧವನ್ನು ಬೇರ್ಪಡಿಸಲು ಅವರಿಗೆ ಅಸಾಧ್ಯವಾಯಿತು. ಯಾವ ಆಧಾರವೂ ಇಲ್ಲದಿದ್ದರೂ ತಮ್ಮನ್ನು ಅಧೋಗತಿಗೆ ತಳ್ಳುತ್ತಿದ್ದ ದಾಸ್ಯದ ಹೊರೆಯು ಹೇಗಾದರೂ ಈ ಯುದ್ಧದಿಂದ ಇಳಿಯಬಹುದೆಂದು ಅವರು ಆಸೆ ಇಟ್ಟುಕೊಂಡಿದ್ದರು.

ಆದರೆ ಯುಕ್ತರಾಷ್ಟ್ರಗಳ ನಾಯಕರ ದೃಷ್ಟಿ ಎಲ್ಲ ಬೇರೊಂದೆಡೆ ಇತ್ತು. ಹಿಮ್ಮುಖವಿತ್ತೇ ಹೊರತು ಪ್ರಗತಿಪರ ಇರಲಿಲ್ಲ. ತಮ್ಮ ಜನರ ಸಂಶಯ ನಿವಾರಿಸಲು ಭವಿಷ್ಯದ ವಿಷಯ ಕೆಲವುವೇಳೆ ಬಹುದೊಡ್ಡ ಮಾತುಗಳನ್ನಾಡುತ್ತಿದ್ದರು. ಆದರೆ ಆ ಸವಿಮಾತುಗಳಿಗೂ ಅವರ ಕಾರ್ಯನೀತಿಗೂ ಬಹಳ ಅಂತರವಿತ್ತು. ವಿನ್‌ಸ್ಟನ್ ಚರ್ಚಿಲ್‌ಗೆ ಜೀರ್ಣೋದ್ಧಾರವೇ ಯುದ್ಧದ ಗುರಿ; ಕೆಲವು ಅಲ್ಪ ಮಾರ್ಪಾಟುಗಳೊಡನೆ ಇಂಗ್ಲೆಂಡಿನ ಸಾಮಾಜಿಕ ರಚನೆ ಮತ್ತು ಬ್ರಿಟಿಷ್ ಚಕ್ರಾಧಿಪತ್ಯದ ರಚನೆ ಮುಂದುವರಿದರೆ ಸಾಕಿತ್ತು. ಅಧ್ಯಕ್ಷ ರೂಸ್‌ವೆಲ್ಟ್‌ನ ಮಾತುಗಳು ಹೆಚ್ಚು ಆಶಾದಾಯಕವಿದ್ದರೂ ಕಾರ್ಯನೀತಿಯಲ್ಲಿ ಮಹತ್ವದ ಬದಲಾವಣೆ ಯಾವುದೂ ಕಾಣಲಿಲ್ಲ. ಆದರೂ ಪ್ರಪಂಚದ ನಾನಾ ಭಾಗಗಳ ಅನೇಕ ಜನರು ಆತನನ್ನು ದೂರದೃಷ್ಟಿಯುಳ್ಳ ಬಹು ದೊಡ್ಡ ಉನ್ನತ ರಾಜನೀತಿಜ್ಞನೆಂದು ನಂಬಿ ಆಸೆಯಿಂದ ಆತನ ಕಡೆಗೆ ನೋಡುತ್ತಿದ್ದರು.

ಆದ್ದರಿಂದ ಬ್ರಿಟಿಷ್ ಆಡಳಿತಗಾರರ ಇಚ್ಛೆಯಂತೆ ಭಾರತದ ಮತ್ತು ಪ್ರಪಂಚದ ಇತರ ಭಾಗಗಳ ಭವಿಷ್ಯವು ಅಂದಿನಂತೆಯೇ ಇರಬೇಕು; ಇಂದಿನ ವ್ಯವಸ್ಥೆಯು ಸಹ ಅದಕ್ಕನುಗುಣವಾಗಿಯೇ ಇರಬೇಕೆಂದಿತ್ತು. ಇಂದಿನ ಪರಿಸ್ಥಿತಿಯಲ್ಲಿಯೇ ಭವಿಷ್ಯದ ವಿಷಬೀಜಗಳನ್ನೂ ಬಿತ್ತುತ್ತಿದ್ದರು. ಕ್ರಿಪ್ಸ್ ಸಲಹೆಗಳು ಪ್ರಗತಿಪರ ಕಂಡರೂ ನಮ್ಮ ಸ್ವಾತಂತ್ರ್ಯಸಾಧನೆಗೆ ಅಡ್ಡಗೋಡೆಗಳಂತಿದ್ದ ಹೊಸ ಅಪಾರ ವಿಪತ್ಕಾರಕ ಪ್ರಶ್ನೆಗಳನ್ನು ತಂದೊಡ್ಡಿದ್ದವು. ಅವುಗಳ ಪರಿಣಾಮ ಆಗಲೇ ಸ್ವಲ್ಪಮಟ್ಟಿಗೆ ನಮ್ಮ ಅನುಭವಕ್ಕೆ ಬಂದಿದೆ. ಭಾರತದಲ್ಲಿ ಬ್ರಿಟಿಷ್ ಸರಕಾರದ ನಿರಂಕುಶ ಸರ್ವಾಧಿಕಾರದಿಂದ ಯುದ್ಧ ಕಾಲದಲ್ಲಿ ಮತ್ತು ಯುದ್ಧದ ನೆಪದಲ್ಲಿ ಸಾಮಾನ್ಯ ನಾಗರಿಕ ಹಕ್ಕುಗಳೂ ಮತ್ತು ಸ್ವಾತಂತ್ರ್ಯವೂ ಮಾಯವಾಗಿ ದೇಶಾದ್ಯಂತ ದಬ್ಬಾಳಿಕೆಯು ಪರಮಾವಧಿ ಮುಟ್ಟಿ ಸಮಗ್ರ ರಾಷ್ಟ್ರಜೀವನದ ಹಾಸುಹೊಕ್ಕುಗಳನ್ನು ಆವರಿಸಿ ನಮ್ಮ ಪೀಳಿಗೆಯಲ್ಲಿ ಯಾರಿಗೂ ಈ ಬಗೆಯ ಅನುಭವ ಆಗಿರಲಿಲ್ಲ. ನಮ್ಮ ದಾಸ್ಯಜೀವನವೂ ಮತ್ತು ಶಾಶ್ವತ ಅಪಮಾನವೂ ಸದಾ ನಮ್ಮ ಸ್ಮೃತಿಗೆ ಬರುತ್ತಿದ್ದವು. ಅವು ಮುಂಬರುವ ವಿಪದ ಮುಂಚೂಣಿಯೂ ಆಗಿದ್ದವು; ಏಕೆಂದರೆ ಇಂದಿನ ಗರ್ಭದಲ್ಲಿ ಭವಿಷ್ಯದ ಬಾಳು. ಈ ಅಪಮಾನಕ್ಕೆ ತಲೆತಗ್ಗಿಸುವುದಕ್ಕಿಂತ ಬೇರೆ ಏನಾದರೂ ಉತ್ತಮವೆಂದು ಕಂಡಿತು.

ಭಾರತದ ಜನಕೋಟಿಯಲ್ಲಿ ಈ ಭಾವನೆಯುಳ್ಳವರು ಎಷ್ಟು ಜನ? ಅದು ಹೇಳಲು ಅಸಾಧ್ಯ. ಕೋಟ್ಯಂತರ ಜನರ ಪ್ರಜ್ಞಾ ಭಾವನೆಯು ಬಡತನದ ಬೇಗೆ ಮತ್ತು ಸಂಕಟಗಳಿಂದ ಶುಷ್ಕವಾಗಿತ್ತು. ಇನ್ನು ಕೆಲವರ ಮನಸ್ಸು ಅಧಿಕಾರ, ಪ್ರಶಸ್ತಿ, ವಿಶಿಷ್ಟ ಹಕ್ಕುಗಳು, ವಿಶೇಷ ಅನುಕೂಲತೆಗಳಿಂದ ಕಲುಷಿತ ವಾಗಿತ್ತು. ಉದ್ವೇಗದಲ್ಲಿ ವ್ಯತ್ಯಾಸವಿರಬಹುದು, ಬೇರೆ ಭಾವನೆಗಳ ಸೆಳತಕ್ಕೆ ಸಿಕ್ಕಿರಬಹುದು; ಆದರೂ ಆ ಕ್ರಾಂತಿಕಾರಕ ಭಾವನೆಯು ದೇಶಾದ್ಯಂತ ಹರಡಿತ್ತು. ಅದು ಬೇರೆ ಬೇರೆ ಮಟ್ಟದಲ್ಲೂ ಇತ್ತು; ಏನೇ ವಿಪತ್ತು ಒದಗಲಿ ಎದುರಿಸಿ ಮುಂದುವರಿಯಬೇಕೆಂಬ ಉತ್ಕಟೇಚ್ಛೆ ಮತ್ತು ದೃಢ ನಿಶ್ಚಯವಿತ್ತು; ಆದ್ದರಿಂದ ಹೋರಾಟ ಅನಿವಾರ್ಯವೆಂಬ ಜನರಿಂದ ಮೊದಲುಗೊಂಡು ದೂರನಿಂತು ಮುಚ್ಚು ಮರೆಯಲ್ಲಿ ಸಹಾನು ಭೂತಿ ತೋರುವ ಜನರವರೆಗೂ ಇತ್ತು. ದುರಂತ ದೃಷ್ಟಿಯ ಇನ್ನು ಕೆಲವು ಜನರಿಗೆ ಉಸಿರು ಕಟ್ಟಿ ದಂತಿತ್ತು. ತಮ್ಮ ಸುತ್ತಲಿನ ಗೋಳಿನ ವಾತಾವರಣದಲ್ಲಿ ಉಸಿರಾಡಲು ಸಾಧ್ಯವಿಲ್ಲದೆ ಕತ್ತು ಹಿಸುಕಿದಂತೆ ಆಗಿತ್ತು. ಸಾಮಾನ್ಯ ಜನರೂ, ಅಲ್ಪತೃಪ್ತರೂ ಇಷ್ಟವಿಲ್ಲದಿದ್ದರೂ ಹೇಗೋ ಪರಿಸ್ಥಿತಿಗೆ ಹೊಂದಿಕೊಂಡರು.

ಭಾರತದಲ್ಲಿ ಬ್ರಿಟಿಷ್ ಆಡಳಿತ ವರ್ಗದ ಅಧಿಕಾರಿಗಳ ಹಿನ್ನೆಲೆಯೇ ಬೇರೆ ಇತ್ತು. ತಪ್ಪು ಯಾರದೆ ಇರಲಿ ಬ್ರಿಟಿಷರ ಮತ್ತು ಭಾರತೀಯರ ಮನಸ್ಸಿನಲ್ಲಿ ಮಧ್ಯೆ ಇದ್ದ ಅಪಾರ ಅಂತರ ಅತಿ ವಿಚಿತ್ರವಿತ್ತು. ಭಾರತದಲ್ಲಿ ಆಡಳಿತ ನಡೆಸಲು ಬ್ರಿಟಿಷರು ಪೂರ್ಣ ಅಶಕ್ತರು ಎಂಬುದಕ್ಕೆ ಇದೊಂದೇ ನಿದರ್ಶನ ಸಾಕು. ಎಲ್ಲಿ ಒಂದು ಹೆಜ್ಜೆ ಮುಂದುವರಿಯಬೇಕಾದರೂ ಆಡಳಿತ ವರ್ಗಕ್ಕೂ ಪ್ರಜೆಗಳಿಗೂ ಒಂದು ಸಾಮರಸ್ಯ, ಸಾಮಾನ್ಯ ದೃಷ್ಟಿ ಇರಬೇಕು; ಇಲ್ಲದಿದ್ದರೆ ಪ್ರತ್ಯಕ್ಷ ಅಥವ ಆಂತರಿಕ ಹೋರಾಟ ಖಂಡಿತ. ಭಾರತದಲ್ಲಿ, ಬ್ರಿಟಿಷರು ಯಾವಾಗಲೂ ಬ್ರಿಟನ್ನಿನ ಸಂಪ್ರದಾಯ ಪಕ್ಷದ ಪ್ರತಿನಿಧಿಗಳೇ ಇರುತ್ತಿದ್ದರು. ಅವರಿಗೂ ಇಂಗ್ಲೆಂಡಿನ ಪ್ರಗತಿಪರ ದೃಷ್ಟಿಗೂ ಯಾವ ಸಂಬಂಧವೂ ಇರಲಿಲ್ಲ. ಭಾರತದಲ್ಲಿ ಅವರು ಹೆಚ್ಚು ಕಾಲ ಕಳೆದಂತೆ ಅವರ ದೃಷ್ಟಿ ಇನ್ನೂ ಸಂಕುಚಿತಗೊಳ್ಳುತ್ತಿತ್ತು. ನಿವೃತ್ತರಾಗಿ ಇಂಗ್ಲೆಂಡಿಗೆ ಹೋದಮೇಲೆ ಭಾರತದ ಸಮಸ್ಯೆಗಳ ಮೇಲೆ ಸಲಹೆ ಕೊಡಲು ಇವರೇ ನಿಪುಣರಾಗುತ್ತಿದ್ದರು. ತಾವು ಮಾಡಿದುದೆಲ್ಲ ಸರಿ ಎಂಬ ಭಾವನೆಯಲ್ಲೂ, ಭಾರತದಲ್ಲಿ ಬ್ರಿಟಿಷರ ಆಡಳಿತದ ಉಪಯುಕ್ತತೆ ಮತ್ತು ಅವಶ್ಯಕತೆಗಳ ವಿಷಯ ದಲ್ಲೂ, ಸಾಮ್ರಾಜ್ಯ ಸಂಪ್ರದಾಯದ ಪ್ರತಿನಿಧಿಗಳಾಗಿ ಅವರ ಉನ್ನತ ಕರ್ತವ್ಯನಿಷ್ಠೆಯಲ್ಲೂ ಅವರಿಗಿದ್ದ ಅಗಾಧ ವಿಶ್ವಾಸವನ್ನು ಕದಲಿಸಲು ಸಾಧ್ಯವಿರಲಿಲ್ಲ. ರಾಷ್ಟ್ರೀಯ ಮಹಾಸಭೆಯು ಈ ಆಡಳಿತ ಮೂಲ ವನ್ನೇ ಸಂಪೂರ್ಣ ನಿರಾಕರಿಸಿ ಭಾರತದಿಂದ ಅದನ್ನು ಕಿತ್ತೊಗೆಯಲು ಪ್ರಯತ್ನಪಟ್ಟ ಕಾರಣ ಕಾಂಗ್ರೆಸ್ ಈಗ ಅವರ ದೃಷ್ಟಿಯಲ್ಲಿ ಮೊದಲನೆಯ ಸಾರ್ವಜನಿಕ ಶತ್ರು ಆಯಿತು. ಅಂದಿನ ಭಾರತ ಸರಕಾರದಗೃಹ ಸಚಿವ ಸರ್ ರೆಜಿನಾಲ್ಡ್ ಮಾಕ್ಸ್‌ವೆಲ್ ೧೯೪೪ರಲ್ಲಿ ಕೇಂದ್ರ ಶಾಸನ ಸಭೆಯಲ್ಲಿ ಮಾಡಿದ ಭಾಷಣದಲ್ಲಿ ತನ್ನ ಮನಸ್ಸನ್ನು ಬಿಚ್ಚಿ ತೋರಿಸಿದ್ದಾನೆ. 'ವಿಚಾರಣೆಯಿಲ್ಲದೆ ಸೆರೆಮನೆಯಲ್ಲಿದ್ದ ಕಾಂಗ್ರೆಸ್ಸಿನವರು, ಸಮಾಜವಾದಿಗಳು ಮತ್ತು ಸಾಮ್ಯಾವಾದಿಗಳನ್ನು ಜರ್ಮನ್ ಮತ್ತು ಇಟಾಲಿಯನ್ ಯುದ್ಧ ಖೈದಿಗಳಿಗಿಂತ ಕಡೆಯಾಗಿ ನೋಡಿಕೊಳ್ಳಲಾಗುತ್ತಿದೆ' ಎಂಬ ಆರೋಪಣೆಗೆ ಉತ್ತರ ಕೊಡುತ್ತ, "ಜರ್ಮನರು ಮತ್ತು ಇಟಾಲಿಯನರು ತಮ್ಮ ದೇಶಕ್ಕಾಗಿ ಯುದ್ಧಮಾಡುತ್ತಿದಾರೆ. ಕಾಂಗ್ರೆಸ್ಸಿನವರು ಸರಕಾರವ್ಯವಸ್ಥೆಯನ್ನು ಬುಡ ಮೇಲು ಮಾಡಲು ಹೊರಟಿರುವ ದೇಶದ್ರೋಹಿಗಳು" ಎಂದನು. ಭಾರತೀಯನು ತನ್ನ ದೇಶಕ್ಕೆ ಸ್ವಾತಂತ್ರ್ಯ ಬಯಸುವುದೂ ಮತ್ತು ದೇಶದ ಆರ್ಥಿಕ ರಚನೆ ಪರಿವರ್ತನೆ ಮಾಡಲೆತ್ನಿಸುವುದೂ ಸರ್ ರೆಜಿನಾಲ್ಡ್‌ಗೆ ಉದ್ಧಟತನವೆಂದು ಕಂಡಿತು. ಆತನ ಮಾತೃ ಭೂಮಿಯೇ ಜರ್ಮನಿ ಮತ್ತು ಇಟಲಿಗಳ ಮೇಲೆ ಯುದ್ಧಮಾಡು ತ್ತಿದ್ದರೂ ಭಾರತೀಯರು ಮತ್ತು ಜರ್ಮನರು ಇಟಾಲಿಯನರಲ್ಲಿ ಆತನ ಸಹಾನುಭೂತಿ ಎಲ್ಲ ಜರ್ಮನರ ಇಟಾಲಿಯನರ ಮೇಲೆ; ಇದು ನಡೆದದ್ದು ರಷ್ಯ ಯುದ್ಧರಂಗ ಪ್ರವೇಶಿಸುವ ಮುಂಚೆ. ಆಗ ಸಮಾಜರಚನೆ ಪರಿವರ್ತನೆಯ ಎಲ್ಲ ಪ್ರಯತ್ನವನ್ನೂ ಬೇಕಾದಂತೆ ಖಂಡಿಸಬಹುದಿತ್ತು. ಎರಡನೆಯ ಪ್ರಪಂಚ ಯುದ್ಧಕ್ಕೆ ಮೊದಲು ಫ್ಯಾಸಿಸ್ಟ್ ಆಡಳಿತವನ್ನು ಅನೇಕಬಾರಿ ಪ್ರಶಂಸಿಸಲಾಗಿತ್ತು. ಹಿಟ್ಲರನೇ ತನ್ನ "ಮೈನ್ ಕ್ಯಾಂಫ್" ಗ್ರಂಥದಲ್ಲಿ ಮತ್ತು ಅನಂತರ ಸಹ ಬ್ರಿಟಿಷ್ ಚಕ್ರಾಧಿಪತ್ಯವು ಶಾಶ್ವತ ಮುಂದುವರಿಯಬೇಕು ಎಂದು ಹೇಳಿರಲಿಲ್ಲವೆ? ಯುದ್ಧಕ್ಕೆ ಅಕ್ಷ ರಾಷ್ಟ್ರಗಳ ವಿರುದ್ಧ ಎಲ್ಲ ಬಗೆಯ ಸಹಾಯ ಕೊಡಬೇಕೆಂದು

ಇಂಡಿಯಾ ಸರಕಾರ ಬಹಳ ಕಾತರವಾಗಿತ್ತು. ಆದರೆ ಭಾರತದ ರಾಷ್ಟ್ರೀಯ ಚಳವಳಿಯನ್ನು, ಪ್ರತಿನಿಧಿಯಾದ ಕಾಂಗ್ರೆಸನ್ನು ನಿರ್ನಾಮ ಮಾಡದಿದ್ದರೆ—ಈ ಎರಡನೆಯ ಜಯವಿಲ್ಲದೆ—ಯುದ್ಧದಲ್ಲಿ ಮಾತ್ರ ಜಯದೊರೆತರೆ ಅದು ಅವರಿಗೆ ಅಪೂರ್ಣವೆನಿಸಿತು. ಕ್ರಿಪ್ಸ್ ಸಲಹೆಗಳಿಂದ ಇಂಡಿಯಾ ಸರಕಾರಕ್ಕೇ ಅವು ಎಲ್ಲಿ ಯಶಸ್ವಿಯಾಗುವುವೊ ಎಂದು ಬಹಳ ತಲೆನೋವು ಬಂದಿತ್ತು; ಅದು ಮುರಿದು ಬಿದ್ದುದು ಅವರಿಗೆ ದೊಡ್ಡ ಹಬ್ಬವಾಯಿತು. ಈಗ ಕಾಂಗ್ರೆಸ್ಸಿನ ಮೇಲೆ ಮತ್ತು ಅದರೊಂದಿಗೆ ಸಹಾನುಭೂತಿಯುಳ್ಳವರ ಮೇಲೆ ಗದಾಪ್ರಹಾರ ಮಾಡಿ ಅವರ ಹುಟ್ಟಡಗಿಸಲು ಸುಸಂಧಿಯಾಗಿತ್ತು. ಹಿಂದೆ ಯಾವ ಕಾಲದಲ್ಲಿಯೂ ಕೇಂದ್ರೀಕೃತವಾಗಿರದ ಮಿತಿ ಇಲ್ಲದ ಅಧಿಕಾರವು, ಕೇಂದ್ರದಲ್ಲಿ ಮತ್ತು ಪ್ರಾಂತ್ಯಗಳಲ್ಲಿ ವೈಸರಾಯ್ ಮತ್ತು ಆತನ ಅಧೀನ ಅಧಿಕಾರಿಗಳ ಕೈಯಲ್ಲಿ ಕೇಂದ್ರೀಕೃತವಾಗಿದ್ದುದರಿಂದ ಸಮಯಾನುಕೂಲವೂ ಒದಗಿತ್ತು. ಯುದ್ಧ ಪರಿಸ್ಥಿತಿಯೂ ಕಷ್ಟವಿತ್ತು. ಆದ್ದರಿಂದ ಈಗ ಯಾವ ವಿರೋಧ ಅಥವ ಅಡಚಣೆಯನ್ನೂ ಸಹಿಸಲು ಸಾಧ್ಯವಿಲ್ಲವೆಂಬ ವಾದವೂ ಸಹಜ ಕಂಡಿತು. ಇಂಗ್ಲೆಂಡ್ ಮತ್ತು ಅಮೆರಿಕೆಗಳಲ್ಲಿ ಭಾರತಕ್ಕೆ ಸಹಾನುಭೂತಿ ತೋರುತ್ತಿದ್ದ ಲಿಬರಲ್ ಪಂಥದವರು ಸಹ ಕ್ರಿಪ್ಸ್ ಸಂಧಾನದ ಮತ್ತು ಅನಂತರದ ಪ್ರಚಾರದಿಂದ ಮೌನತಾಳಿದರು. ಇಂಗ್ಲೆಂಡಿನಲ್ಲಿ ಭಾರತದ ವಿಷಯ ತಾವು ಮಾಡಬೇಕಾದುದನ್ನೆಲ್ಲ ಮಾಡಿದ್ದೇವೆ ಎಂಬ ಆತ್ಮವಿಶ್ವಾಸ ಬೆಳೆದಿತ್ತು. ಭಾರತೀಯರೆಲ್ಲ ದುರಾಗ್ರಹಿಗಳು, ತಂಟೆಕೋರರು, ಸಂಕುಚಿತ ಮನೋಭಾವದವರು, ಅಪಾಯ ಪರಿಸ್ಥಿತಿಯನ್ನು ಸಹ ಅರಿಯಲಶಕ್ತರು, ಪ್ರಾಯಶಃ ಜಪಾನರೊಂದಿಗೆ ಸಹಾನುಭೂತಿಯುಳ್ಳವರು ಎಂಬ ಭಾವನೆ ಅವರಲ್ಲಿ ಬೆಳೆಯಿತು. "ಗಾಂಧಿಯ ಲೇಖನಗಳು ಮತ್ತು ಹೇಳಿಕೆಗಳಿಂದ ಆತನು ಎಷ್ಟು ಅಸಾಧ್ಯ ಮನುಷ್ಯ ಎಂಬುದು ಸ್ಪಷ್ಟತೋರುತ್ತದೆ; ಆದ್ದರಿಂದ ಗಾಂಧಿಯನ್ನು ಮತ್ತು ಕಾಂಗ್ರೆಸ್ಸನ್ನು ಒಂದುಬಾರಿ ಮಟ್ಟಹಾಕಿ ನಿರ್ನಾಮಮಾಡಿ ಇದನ್ನೆಲ್ಲ ಪೂರೈಸಿ ಬಿಡುವುದು ಒಂದೇ ಮಾರ್ಗ" ಎಂಬ ಭಾವನೆ ಹೆಚ್ಚಿತು.

## ೩. ಸಾಮೂಹಿಕ ವಿಪ್ಲವಗಳು ಮತ್ತು ಅವುಗಳ ದಮನ

೧೯೪೨ನೆ ಆಗಸ್ಟ್ ೯ನೆಯ ದಿನ ಬೆಳಗಿನ ಜಾವದಲ್ಲಿ ಭಾರತಾದ್ಯಂತ ಅಸಂಖ್ಯಾತ ಜನರ ಬಂಧನವಾಯಿತು. ಆಮೇಲೆ ಏನಾಯಿತು? ಅನೇಕವಾರಗಳು ಕಳೆದುಹೋದರೂ ನಮಗೆ ದೊರಕುತ್ತಿದ್ದುದು ಹರಕು ಮುರುಕು ಸುದ್ದಿಮಾತ್ರ. ಅಂದಿನ ಘಟನೆಗಳ ಪೂರ್ಣ ಚಿತ್ರದ ಕಲ್ಪನೆಯು ಈಗಲೂ ನಮಗೆ ಅಸಾಧ್ಯ. ಪ್ರಮುಖ ವ್ಯಕ್ತಿಗಳನ್ನೆಲ್ಲ ಬಂಧಿಸಿದ್ದರಿಂದ ಯಾರಿಗೂ ಏನುಮಾಡುವುದೆಂಬುದೇ ತಿಳಿಯದಾಯಿತು. ಜನರೇ ಸ್ವಯಂ ಸ್ಫೂರ್ತಿಯಿಂದ ವಿರೋಧ ಪ್ರದರ್ಶನ ಆರಂಭಿಸಿದರು. ಕಣ್ಣೀರು ಬಾಂಬುಗಳನ್ನೂ ಉಪಯೋಗಿಸಿ, ಗುಂಡಿನ ಮಳೆಗರೆದು ಆ ಪ್ರದರ್ಶನ ಅಡಗಿಸಲು ಯತ್ನಮಾಡಿದರು. ಸಾರ್ವಜನಿಕ ವಿರೋಧ ಪ್ರದರ್ಶನಕ್ಕೆ ಜನರಿಗಿದ್ದ ಎಲ್ಲ ಮಾರ್ಗಗಳನ್ನೂ ಮುಚ್ಚಿದರು. ಜನತೆಯು ಈ ಬಂಧನದ ನೋವನ್ನು ಸಹಿಸಲಾರದೆ ಎಲ್ಲ ಕಟ್ಟುಗಳನ್ನೂ ಕಿತ್ತೊಗೆದು ನಗರಗಳಲ್ಲಿ, ಪಟ್ಟಣಗಳಲ್ಲಿ, ಹಳ್ಳಿಗಳಲ್ಲಿ ಪೋಲೀಸ್ ಮತ್ತು ಸೈನ್ಯಪಡೆಗಳನ್ನು ಎದುರಿಸಲು ನಿಶ್ಚಯಿಸಿತು. ಬ್ರಿಟಿಷರ ಅಧಿಕಾರ ಮತ್ತು ಶಕ್ತಿಯ ಎಲ್ಲ ಮೂಲಗಳ ಕೇಂದ್ರಗಳ ಮೇಲೂ ಧಾಳಿ ಇಟ್ಟರು. ಪೋಲೀಸ್ ಠಾಣೆಗಳು, ಅಂಚೆ ಕಚೇರಿಗಳು, ರೈಲ್ವೆ ನಿಲ್ದಾಣಗಳು ಅವರ ಕೋಪಾಗ್ನಿಗೆ ಆಹುತಿಯಾದವು. ಟೆಲಿಗ್ರಾಫ್ ಮತ್ತು ಟೆಲಿಫೋನ್ ತಂತಿಗಳನ್ನು ಕತ್ತರಿಸಿದರು. ನಾಯಕತ್ವವಿಲ್ಲದೆ, ನಿಶ್ಶಸ್ತ್ರರಾಗಿ ರೊಚ್ಚಿಗೆದ್ದ ಈ ಜನತೆ ಸರಕಾರೀ ವರದಿಯಂತೆಯೇ ಪೋಲೀಸ್ ಮತ್ತು ಸೈನ್ಯಪಡೆಗಳನ್ನು ಎದುರಿಸಿ ೫೩೮ ಬಾರಿ ಗುಂಡಿನೇಟನ್ನು ಎದುರಿಸಬೇಕಾಯಿತು; ಕೆಳಮಟ್ಟ ಹಾರಿ ವಿಮಾನಗಳಿಂದ ಸಹ ಗುಂಡಿನ ಸುರಿಮಳೆ ಕರೆದರು. ಒಂದೆರಡು ತಿಂಗಳು, ಕೆಲವು ಕಾಲ ದೇಶದ ನಾನಾ ಭಾಗಗಳಲ್ಲಿ ಈ ಗಲಭೆ ನಡೆದು ಅನಂತರ ಕಡಮೆಯಾಗಿ ಎಲ್ಲೋ ಕೆಲವೆಡೆ ಮಾತ್ರ ಆಗಾಗ ಮರುಕಳಿಸುತ್ತಿದ್ದುವು. "ಸರಕಾರದ ಸರ್ವಶಕ್ತಿ ವಿನಿಯೋಗಿಸಿ ಈ ಗಲಭೆ ಅಡಗಿಸಿದ್ದೇವೆ" ಎಂದು ಚರ್ಚಿಲ್ ಕಾಮನ್ಸ್ ಸಭೆಯಲ್ಲಿ ಜಂಭಕೊಚ್ಚಿದ. "ಭಾರತೀಯ ಪೋಲೀಸ್ ದಳದ ರಾಜಭಕ್ತಿ ಮತ್ತು ಕಾರ್ಯನಿಷ್ಠೆಗಳನ್ನೂ ಮತ್ತು ಭಾರತೀಯ ಅಧಿಕಾರಿವರ್ಗದ ನಡತೆಯನ್ನೂ ಎಷ್ಟು ಮೆಚ್ಚಿದರೂ

ಸಾಲದು'' ಎಂದು ಹೊಗಳಿದ. ''ಭಾರತದಲ್ಲಿ ಸೈನ್ಯ ಪಡೆಗಳನ್ನು ಹೆಚ್ಚಿಸಿದ್ದೇವೆ. ಈಗ ಅಲ್ಲಿರುವಷ್ಟು ಬಿಳಿಯ ಸೈನ್ಯ ಸಂಖ್ಯೆ ಬ್ರಿಟಿಷ್ ಆಡಳಿತದ ಇನ್ನಾವ ಕಾಲದಲ್ಲೂ ಇರಲಿಲ್ಲ'' ಎಂದು ಹೇಳಿದ. ಈ ವಿದೇಶೀ ಸೈನ್ಯವೂ ಮತ್ತು ಭಾರತೀಯ ಪೊಲೀಸ್ ಪಡೆಗಳೂ ನಿರಾಯುಧ ಭಾರತ ಜನತೆಯ ಮೇಲೆ ಯುದ್ಧಮಾಡಿ ದಂಗೆ ಅಡಗಿಸಿದರು; ಈ ಕಾರ್ಯದಲ್ಲಿ ಭಾರತೀಯ ಅಧಿಕಾರಿ ವರ್ಗವು ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಬ್ರಿಟಿಷ್ ರಾಜ್ಯದ ನೆರವಾಗಿ ನಿಂತಿತು.

ಜನತೆಯ ಈ ಪ್ರತಿಭಟನೆಯು ಪ್ರತಿ ನಗರಕ್ಕೂ ಹಳ್ಳಿಗೂ ಹಬ್ಬಿ ದೇಶಾದ್ಯಂತ ಮೂಲೆ ಮೂಲೆಗೂ ಹರಡಿತು. ಅಧಿಕಾರಿಗಳ ಪ್ರತಿಬಂಧವೆಷ್ಟಿದ್ದರೂ ಪ್ರತಿಯೊಂದು ಪ್ರಾಂತದಲ್ಲೂ, ಅನೇಕ ದೇಶೀಯ ಸಂಸ್ಥಾನಗಳಲ್ಲೂ ಅಸಂಖ್ಯಾತ ವಿರೋಧ ಪ್ರದರ್ಶನಗಳಾದವು. ಎಲ್ಲಿ ನೋಡಿದರೂ ಹರತಾಳಗಳು; ಅಂಗಡಿಗಳನ್ನೂ, ಪೇಟೆಗಳನ್ನೂ ಮುಚ್ಚಿ ವ್ಯಾಪಾರ ನಿಲ್ಲಿಸುವುದು; ಅನೇಕ ದಿನ, ಅನೇಕ ವಾರ, ಕೆಲವುವೇಳೆ ಅನೇಕ ತಿಂಗಳಾದರೂ ಆ ಹರತಾಳ ನಿಲ್ಲಲಿಲ್ಲ. ಅದೇ ರೀತಿ ಕೂಲಿಗಾರರ ಮುಷ್ಕರಗಳು. ರಾಷ್ಟ್ರನಾಯಕರ ಬಂಧನಕ್ಕಾಗಿ ಸುಸಂಘಟಿತರೂ, ಸಂಯಮಿಗಳೂ ಆದ ಕೈಗಾರಿಕಾ ಕೂಲಿಗಾರರು ಅನೇಕ ಮುಖ್ಯ ಕೈಗಾರಿಕಾ ಕೇಂದ್ರಗಳಲ್ಲಿ ಮುಷ್ಕರ ಹೂಡಿದರು. ಉಕ್ಕಿನ ಪ್ರಮುಖ ನಗರವಾದ ಜಮಷೆಡ್ ಪುರದಲ್ಲಿ ಭಾರತದ ನಾನಾ ಮೂಲೆಗಳಿಂದ ಬಂದು ಕೆಲಸಮಾಡುತ್ತಿರುವ ಕುಶಲ ಕರ್ಮಿಗಳು ಹದಿನೈದು ದಿನಗಳ ಕಾಲ ಕೆಲಸಕ್ಕೆ ಹೋಗದೆ ಮುಷ್ಕರ ಮುಂದುವರಿಸುತ್ತಿದ್ದಾಗ ಕಾರ್ಖಾನೆಯ ಅಧಿಕಾರಿಗಳು ಕಾಂಗ್ರೆಸ್ ನಾಯಕರ ಬಿಡುಗಡೆಗಾಗಿ ಮತ್ತು ರಾಷ್ಟ್ರೀಯ ಸರಕಾರ ಸ್ಥಾಪನೆಗಾಗಿ ಎಲ್ಲ ಪ್ರಯತ್ನ ಮಾಡುವುದಾಗಿ ಭರವಸೆಕೊಟ್ಟಮೇಲೆ ಮಾತ್ರ ಕೆಲಸಕ್ಕೆ ಹಿಂದಿರುಗಿದರು. ಬಟ್ಟೆಯ ಕೈಗಾರಿಕಾ ಕೇಂದ್ರವಾದ ಅಹಮದಾಬಾದಿನಲ್ಲಿ ಸಹ ಅಸಂಖ್ಯಾತ ಕಾರ್ಮಿಕರು ಗಿರಣಿಕಾಮಗಾರ ಸಂಘದ ಯಾವ ಆಜ್ಞೆಯೂ ಇಲ್ಲದೆ ಇದ್ದಕ್ಕಿದ್ದಂತೆ ಕೆಲಸ ಪೂರ್ಣನಿಲ್ಲಿಸಿದರು.* ಅಹಮದಾಬಾದಿನಲ್ಲಿ ಈ ಮುಷ್ಕರ ಮುರಿಯಲು

---

* ಜಮಷೆಡ್ ಪುರ ಮತ್ತು ಅಹಮದಾಬಾದಿನ ಮುಷ್ಕರಗಳಿಗೆ ಮಾಲಿಕರೂ, ಆಡಳಿತ ವರ್ಗದವರೂ ಕಾರಣರೆಂದು ಸರಕಾರದ ಅಧಿಕಾರಿಗಳೂ ಮತ್ತು ಇನ್ನೂ ಕೆಲವರೂ ಹೇಳುತ್ತಿದಾರೆ. ಮಾಲಿಕರಿಗೆ ಅಪಾರ ನಷ್ಟವಾಗುವುದರಿಂದ ನಾನು ಈವಾದ ನಂಬಲಾರೆ. ತಮ್ಮ ಹಿತಕ್ಕೆ ವಿರುದ್ಧ ವರ್ತಿಸುವ ಕೈಗಾರಿಕೋದ್ಯಮಿಗಳನ್ನು ಇನ್ನೂ ನಾನು ಕಂಡಿಲ್ಲ. ಅನೇಕ ಕೈಗಾರಿಕೋದ್ಯಮಿಗಳಿಗೆ ಭಾರತ ಸ್ವತಂತ್ರವಾಗಬೇಕೆಂಬ ಇಚ್ಛೆ ಇದೆ ನಿಜ; ಸ್ವಾತಂತ್ರ್ಯಕ್ಕಾಗಿ ಸಹಾನುಭೂತಿ ತೋರಿರುವುದೂ ನಿಜ. ಆದರೆ ಅವರ ಸ್ವಾತಂತ್ರ್ಯದ ಕಲ್ಪನೆಯಲ್ಲಿ ಅವರ ಸ್ಥಾನಕ್ಕೆ ಯಾವ ಚ್ಯುತಿಯೂ ಬರಬಾರದು. ಯಾವ ಕ್ರಾಂತಿಕಾರಕ ಕಾರ್ಯಕ್ರಮವೂ, ಸಮಾಜ ರಚನೆಯಲ್ಲಿ ವಿಶೇಷ ಪರಿವರ್ತನೆಯೂ ಅವರಿಗೆ ರುಚಿಸವು. ಪ್ರಾಯಶಃ ೧೯೪೨ನೆ ಆಗಸ್ಟ್ ಮತ್ತು ಸೆಪ್ಟಂಬರ್ ತಿಂಗಳುಗಳಲ್ಲಿ ದೇಶಾದ್ಯಂತ ಹರಡಿದ್ದ ಜನರ ಕೋಪಾವೇಶಗಳನ್ನು ಕಂಡು ಹೆದರಿ, ಪೋಲೀಸರೊಂದಿಗೆ ಸಹಕರಿಸಿ, ತಾವೂ ಉಗ್ರ ಕಾರ್ಯಕ್ರಮ ತೆಗೆದುಕೊಂಡು ತಮ್ಮ ಶ್ರಮಜೀವಿಗಳ ಮೇಲೆ ಕೈಮಾಡುವುದನ್ನು ನಿಲ್ಲಿಸಿರಬೇಕು; ಏಕೆಂದರೆ ಮುಷ್ಕರ ಸಮಯಗಳಲ್ಲಿ ಪೋಲೀಸರೊಂದಿಗೆ ಸಹಕರಿಸುವುದೇ ಅವರ ಸಾಮಾನ್ಯ ಕಾರ್ಯನೀತಿಯಾಗಿತ್ತು.

ಬ್ರಿಟಿಷ್ ಅಧಿಕಾರಿಗಳು ಮತ್ತು ಬ್ರಿಟಿಷ್ ಪತ್ರಿಕೆಗಳು ಮಾಡುವ ಇನ್ನೊಂದು ಆರೋಪಣೆ ಎಂದರೆ ದೊಡ್ಡ ಬಂಡವಾಳಗಾರರು ಕಾಂಗ್ರೆಸ್ಸಿಗೆ ಧನಸಹಾಯ ಮಾಡುತ್ತಿದಾರೆಂದು ಇದರಲ್ಲಿ ಯಾವ ಸತ್ಯಾಂಶವೂ ಇಲ್ಲ. ಅನೇಕ ವರ್ಷಗಳ ಕಾಲ ನಾನು ಕಾಂಗ್ರೆಸ್ಸಿನ ಕಾರ್ಯದರ್ಶಿಯಾಗಿ ಮತ್ತು ಅಧ್ಯಕ್ಷನಾಗಿ ಕೆಲಸಮಾಡಿದ್ದೇನೆ. ನನ್ನ ಗಮನಕ್ಕೆ ಅದು ಬರದೆ ಇರಲು ಸಾಧ್ಯವಿಲ್ಲ. ಕೆಲವು ಬಂಡವಾಳಗಾರರು ಆಗಾಗ ಗಾಂಧೀಜಿಯ ಗ್ರಾಮೋದ್ಯೋಗ, ಅಸ್ಪೃಶ್ಯತಾ ನಿವಾರಣೆ, ದಲಿತ ಜನರ ಪುನರುದ್ಧಾರ, ಮೂಲ ಶಿಕ್ಷಣ ಮುಂತಾದ ಸಮಾಜ ಸುಧಾರಣಾ ಕಾರ್ಯಗಳಿಗೆ ಹಣಕೊಡುತ್ತಿದ್ದುದು ನಿಜ. ಆದರೆ ಅವರೆಲ್ಲ ಸಾಮಾನ್ಯವಾಗಿ ಅದರಲ್ಲೂ ಮುಖ್ಯವಾಗಿ ಸರಕಾರದೊಂದಿಗೆ ಹೋರಾಟದ ದಿನಗಳಲ್ಲಿ ಕಾಂಗ್ರೆಸ್ಸಿನ ರಾಜಕೀಯದಿಂದ ಬಹು ದೂರವಿರುತ್ತಿದ್ದರು. ಅವರ ತಾತ್ಕಾಲಿಕ ಸಹಾನುಭೂತಿ ಏನೆ ಇರಲಿ ಶಾಂತಿಪ್ರಿಯರೂ, ಪ್ರತಿಷ್ಠಿತರೂ ಆದ ವ್ಯಕ್ತಿಗಳಂತೆ ಅವರ ದೃಷ್ಟಿ ಎಲ್ಲ ಅವರ ಸ್ಥಾನಭದ್ರತೆಯಮೇಲೆ ಇತ್ತು. ಕಾಂಗ್ರೆಸ್ ಕೆಲಸವೆಲ್ಲ ನಡೆದಿರುವುದು ಬಹು ಸಂಖ್ಯಾಕರ ಅಲ್ಪದೇಣಿಗೆಗಳಿಂದ ಮತ್ತು ಧನಸಹಾಯದಿಂದ. ಅದರಲ್ಲಿ ಬಹುಭಾಗ ನಡೆದಿರುವುದು

ಎಷ್ಟೇ ಪ್ರಯತ್ನಪಟ್ಟರೂ ಸಾಧ್ಯವಾಗದೆ ಅದು ಶಾಂತಿಯುತವಾಗಿ ಮೂರುತಿಂಗಳ ಕಾಲ ನಡೆಯಿತು. ಅದು ಶ್ರಮಜೀವಿಗಳ ಸ್ವಯಂಪ್ರೇರಿತ ರಾಜಕೀಯ ಪ್ರತಿಕ್ರಿಯೆ. ಆಗ ದುಬಾರಿ ಕೂಲಿದರದ ಕಾಲವಾದ್ದರಿಂದ ಬಹಳ ಕಷ್ಟ ಅನುಭವಿಸಿದರು. ಅಷ್ಟು ದೀರ್ಘಕಾಲದ ಮುಷ್ಕರ ಸಮಯದಲ್ಲಿ ಹೊರಗಿನಿಂದ ಯಾರ ಸಹಾಯವನ್ನೂ ಅವರು ಅಪೇಕ್ಷಿಸಲಿಲ್ಲ. ಕೆಲವೇ ದಿನಗಳಾದರೂ ಇತರ ಕೇಂದ್ರಗಳಲ್ಲಿ ಸಹ ಅನೇಕ ಮುಷ್ಕರಗಳು ನಡೆದವು. ಕಾನಪುರದಲ್ಲಿ ಕಮ್ಯೂನಿಸ್ಟರ ಪ್ರಾಬಲ್ಯದಿಂದ ಯಾವ ಮುಷ್ಕರಕ್ಕೂ ಅವಕಾಶದೊರೆಯಲಿಲ್ಲ. ಸರಕಾರದ ಅಧೀನದಲ್ಲೇ ಇದ್ದ ರೈಲ್ವೆಗಳಲ್ಲಿ ದೊಡ್ಡ ಮುಷ್ಕರ ಯಾವುದೂ ಸಾಧ್ಯವಿರಲಿಲ್ಲ. ಆದರೆ ಅಲ್ಲಲ್ಲಿ ನಡೆದ ಗಲಭೆಗಳಿಂದ ಕೆಲಸಕ್ಕೆ ತುಂಬ ಅಡಚಣೆಯಾಯಿತು.

ಪಂಜಾಬದಲ್ಲೂ ಅನೇಕ ಹರತಾಳಗಳೂ ಮುಷ್ಕರಗಳೂ ಆದರೂ ಉಳಿದ ಪ್ರಾಂತಗಳಿಗಿಂತ ಅದು ಹಿಂದೆ ಬಿದ್ದಿತು. ಮುಸ್ಲಿಮರೇ ಬಹು ಸಂಖ್ಯಾತರಿದ್ದ ಗಡಿನಾಡಿನ ವಾಯವ್ಯಪ್ರಾಂತದ ಪರಿಸ್ಥಿತಿ ಅತೀ ವಿಚಿತ್ರವಿತ್ತು. ಇತರ ಪ್ರಾಂತಗಳಂತೆ ಸರಕಾರವು ಅಲ್ಲಿ ಆರಂಭದಲ್ಲಿ ಸಾಮೂಹಿಕ ಬಂಧನಗಳನ್ನು ಮಾಡಲಿಲ್ಲ; ಬೇರೆ ಯಾವ ಉಗ್ರಕಾರ್ಯಕ್ರಮವನ್ನೂ ತೆಗೆದುಕೊಳ್ಳಲಿಲ್ಲ. ಗಡಿನಾಡಿನ ಜನರು ಬಹು ಬೇಗ ಉದ್ರೇಕಗೊಳ್ಳುವವರೆಂಬ ಕಾರಣದಿಂದ ಇದ್ದರೂ ಇರಬಹುದು ಅಥವ ಮುಸ್ಲಿಮರು ಈ ರಾಷ್ಟ್ರೀಯ ಚಳವಳಿಗೆ ಸೇರಿಲ್ಲವೆಂದು ತೋರಿಸಲು ಇದ್ದರೂ ಇರಬಹುದು. ಆದರೆ ಇತರ ಪ್ರಾಂತಗಳ ಘಟನೆಗಳ ಸುದ್ದಿಯು ವಾಯವ್ಯಪ್ರಾಂತಕ್ಕೆ ಮುಟ್ಟಿದೊಡನೆ ಅಲ್ಲಿಯೂ ಅಸಂಖ್ಯಾತ ವಿರೋಧ ಪ್ರದರ್ಶನಗಳು ನಡೆದು ಬ್ರಿಟಿಷ್ ಅಧಿಕಾರವನ್ನೇ ಧಿಕ್ಕರಿಸಲು ಆರಂಭಿಸಿದರು. ಪ್ರದರ್ಶನಕಾರರಮೇಲೆ ಗುಂಡಿನ ಮಳೆಸುರಿಸಿ ಜನರದಂಗೆ ಅಡಗಿಸಲು ಎಲ್ಲ ಕಾರ್ಯಕ್ರಮ ತೆಗೆದುಕೊಂಡರು. ಅನೇಕ ಸಹಸ್ರ ಜನರ ಬಂಧನವಾಗಿ ಪಠಾಣ ಮಹಾನಾಯಕನಾದ ಬಾದಷಾಖಾನ್ ಎಂದು ಪ್ರಸಿದ್ಧರಾದ ಅಬ್ದುಲ್ ಗಫಾರ್‌ಖಾನರಿಗೆ ಪೋಲೀಸರ ಏಟಿನಿಂದ ಬಲವಾದ ಗಾಯವಾಯಿತು. ಜನರನ್ನು ಉದ್ರೇಕಿಸಲು ಇದೊಂದೇ ಸಾಕಿತ್ತು. ಆದರೆ ಅಬ್ದುಲ್ ಗಫಾರ್‌ಖಾನ ತಮ್ಮ ಜನರಲ್ಲಿ ತುಂಬಿದ್ದ ಉತ್ತಮ ಸಂಯಮದಿಂದ ಇತರ ಕಡೆಗಳಂತೆ ಅಲ್ಲಿ ಯಾವ ಹಿಂಸಾತ್ಮಕ ಕಾರ್ಯಗಳೂ ನಡೆಯಲಿಲ್ಲ.

ಹಿಂಸಾತ್ಮಕ ಹೋರಾಟ ಮತ್ತು ವಿನಾಶ ಕೃತ್ಯಗಳಲ್ಲಿ ಕೊನೆಗಂಡ ಜನರ ಈ ಆಕಸ್ಮಿಕ, ಅವ್ಯವಸ್ಥಿತ ಪ್ರದರ್ಶನಗಳು ಮತು ದಂಗೆಗಳು ಜನಮನದ ಉದ್ರೇಕ ಸ್ಥಿತಿಯ ಅಳತೆಗೋಲುಗಳು. ಈ ಜನಶಕ್ತಿಯು ಸರಕಾರದ ಅಸಂಖ್ಯಾತ, ಸುಸಜ್ಜಿತ ಸೈನ್ಯ ಶಕ್ತಿಯನ್ನು ಸಹ ಎದುರಿಸಿತು. ಈ ಉದ್ರೇಕ ಭಾವನೆಯು ನಾಯಕರ ಬಂಧನಕ್ಕೆ ಮುಂಚೆಯೂ ಜನರಲ್ಲಿ ಇತ್ತು. ಆದರೆ ಆ ಬಂಧನಗಳೂ, ಅನಂತರದ ಗುಂಡಿನ ಸುರಿಮಳೆಗಳೂ ಜನರನ್ನು ಸಿಟ್ಟಿಗೆಬ್ಬಿಸಿದವು; ಸಿಟ್ಟಿದ್ದ ಜನತೆ ಹುಚ್ಚೆದ್ದು ಹರಿಯಿತು, ಸ್ವಲ್ಪಕಾಲ ಏನು ಮಾಡಬೇಕೆಂದು ತೋರದೆ ದಿಗ್ಭ್ರಮೆಗೊಂಡಂತೆ ಕಂಡಿತು; ಯಾವ ತಿಳಿವಳಿಕೆಯನ್ನೂ, ಕಾರ್ಯಕ್ರಮವನ್ನೂ ಕೊಟ್ಟರಲಿಲ್ಲ. ಮಾರ್ಗದರ್ಶಿಯಾಗಿ ನಿಂತು ಈರೀತಿ ಮಾಡಿ ಎಂದು ಹೇಳಲು ಒಬ್ಬ ನಾಯಕನೂ ಹೊರಗೆ ಉಳಿದಿರಲಿಲ್ಲ; ಆದರೂ ಆ ಕೋಪಾವೇಶದಲ್ಲಿ, ಉದ್ರೇಕ ಮನಸ್ಸಿನಲ್ಲಿ ಸುಮ್ಮನಿರಲು ಸಾಧ್ಯವೂ ಇರಲಿಲ್ಲ. ಅಂತಹ ಸಂದರ್ಭಗಳಲ್ಲಿ ಎಲ್ಲಕಡೆ ಆಗುವಂತೆ ಸ್ಥಳದಲ್ಲಿಯೇ ನಾಯಕರು ಹುಟ್ಟಿದರು; ಸ್ವಲ್ಪ ಕಾಲ ಜನರು ಅವರ ಮಾತನ್ನು ಕೇಳಿದರು. ಆದರೆ ಅವರಿಗೂ ಏನೂ ತಿಳಿಯದೆ ಜನರೇ ಸ್ವಯಂ

---

ಯಾವ ಪ್ರತಿಫಲಾಪೇಕ್ಷೆಯೂ ಇಲ್ಲದ ನಿಸ್ವಾರ್ಥಸೇವೆಯಿಂದ. ಆಗಾಗ ದೊಡ್ಡ ನಗರಗಳಲ್ಲಿ ವರ್ತಕರು ಸ್ವಲ್ಪ ಹಣಸಹಾಯ ಮಾಡಿದ್ದಾರೆ. ೧೯೩೦ರಲ್ಲಿ ಮಾತ್ರ ಕೆಲವು ದೊಡ್ಡ ಕೈಗಾರಿಕಾ ಬಂಡವಳಗಾರರು ಮಹಾ ಚುನಾಣೆಗಳಿಗೆ ಧನಸಹಾಯ ಮಾಡಿದರು. ನಮ್ಮ ಕಾರ್ಯವಿಸ್ತಾರ ನೋಡಿದರೆ ಈ ಹಣ ಸಹ ಅತ್ಯಲ್ಪ. ರಾಜಕೀಯ ಅದ್ಭುತ ಕಾರ್ಯಚಟುವಟಿಕೆ ಮತ್ತು ವಿಪ್ಲವಗಳಿಂದ ತುಂಬಿದ ಕಳೆದ ಇಪ್ಪತ್ತೈದು ವರ್ಷಗಳಲ್ಲಿ ಕಾಂಗ್ರೆಸ್ ಕೆಲಸ ಎಷ್ಟು ಅತ್ಯಲ್ಪ ಹಣದಿಂದ ನಡೆದಿದೆ ಎಂದು ಹೇಳಿದರೆ ಪಾಶ್ಚಾತ್ಯರು ನಂಬುವುದು ಸಹ ಕಷ್ಟ. ನನಗೆ ಗೊತ್ತಿರುವಂತೆ ತುಂಬ ಕಾರ್ಯೋನ್ಮುಖವೂ ಸುಸಂಘಟಿತವೂ ಆದ ಯುಕ್ತಪ್ರಾಂತದಲ್ಲಿ ನಮ್ಮ ಕೆಲಸವೆಲ್ಲ ನಡೆದುದು ನಮ್ಮ ಸದಸ್ಯರ ನಾಲ್ಕುಆಣೆ ಚಂದಾ ಹಣದಿಂದ ಮಾತ್ರ.

ಪ್ರೇರಣೆಯಿಂದ ಮನಬಂದಂತೆ ವರ್ತಿಸಿದರು. ೧೯೪೨ರ ಚಳುವಳಿಯಲ್ಲಿ ದೇಶಾದ್ಯಂತ ಯುವಕರು, ಮುಖ್ಯವಾಗಿ ವಿಶ್ವವಿದ್ಯಾನಿಲಯಗಳ ವಿದ್ಯಾರ್ಥಿಗಳು—ಹಿಂಸಾತ್ಮಕ ಮತ್ತು ಅಹಿಂಸಾತ್ಮಕ ಕಾರ್ಯಕ್ರಮ ಗಳಲ್ಲಿ ಪ್ರಮುಖ ಪಾತ್ರವಹಿಸಿದರು. ಅನೇಕ ವಿಶ್ವವಿದ್ಯಾನಿಲಯಗಳು ಹಾಕಿದ ಬಾಗಿಲನ್ನು ತೆರೆಯಲಿಲ್ಲ. ಕೆಲವು ಸ್ಥಳೀಯ ನಾಯಕರು ಅಹಿಂಸಾತ್ಮಕ ಮಾರ್ಗದಲ್ಲಿ ಅಸಹಕಾರ ಹೂಡಲು ಯತ್ನಿಸಿದರು ; ಆದರೆ ದೇಶದ ಅಂದಿನ ಪರಿಸ್ಥಿತಿಯಲ್ಲಿ ಅದು ಸಾಧ್ಯವಿರಲಿಲ್ಲ. ಕಳೆದ ಇಪ್ಪತ್ತೈದು ವರ್ಷಗಳಿಂದ ಗಾಂಧಿಜಿ ಬೋಧಿಸಿದ ಅಹಿಂಸೆಯ ಪಾಠವನ್ನು ಮರೆತರು ; ಹಿಂಸಾತ್ಮಕ ಚಳವಳಿಗೆ ಮಾನಸಿಕ ಅಥವ ಬೇರೆ ವಿಧ ವಾದ ಯಾವ ಶಿಕ್ಷಣ ಅಥವ ಸಿದ್ಧತೆಯೂ ಅವರಿಗೆ ಇರಲಿಲ್ಲ. ಅಲ್ಲದೆ ಅಹಿಂಸಾ ಮಾರ್ಗದ ಪಾಠವೇ ಅವರಲ್ಲಿ ಸಂಶಯ ಮತ್ತು ಅನಿಶ್ಚಿತ ಭಾವನೆಗಳನ್ನು ಉಂಟುಮಾಡಿ ಹಿಂಸಾತ್ಮಕ ಕಾರ್ಯಕ್ರಮಕ್ಕೆ ಅಡ್ಡ ಬಂದಿತು. ಅಹಿಂಸೆಯ ಮಾರ್ಗ ಬಿಟ್ಟು ಹಿಂಸಾತ್ಮಕ ಕಾರ್ಯಕ್ರಮ ತೆಗೆದುಕೊಳ್ಳಿ ಎಂದು ಜನರಿಗೆ ಕಾಂಗ್ರೆಸ್ ತಿಳಿಸಿದ್ದರೆ ಅವರ ಹಿಂಸಾತ್ಮಕ ಕಾರ್ಯಬಾಹುಳ್ಯ ಇನ್ನೂ ನೂರು ಪಾಲು ಹೆಚ್ಚಾಗುತ್ತಿತ್ತು.

ಆದರೆ ಆ ರೀತಿ ಯಾವ ಸೂಚನೆಯನ್ನೂ ಕೊಟ್ಟಿರಲಿಲ್ಲ; ಕಾಂಗ್ರೆಸ್ಸಿನ ಕೊನೆಯ ಸಂದೇಶದಲ್ಲಿ ಅಹಿಂಸಾಕಾರ್ಯಕ್ರಮಕ್ಕೆ ಪ್ರಾಮುಖ್ಯತೆಕೊಟ್ಟು ಅದೇ ಮಾರ್ಗ ಹಿಡಿಯಬೇಕೆಂದು ಒತ್ತಾಯಪಡಿಸ ಲಾಗಿತ್ತು. ಆದರೆ ಒಂದು ವಿಷಯ ಮಾತ್ರ ಜನರ ಮನಸ್ಸಿನಮೇಲೆ ಸ್ವಲ್ಪ ಪರಿಣಾಮಮಾಡಿರಬೇಕು. ಹೊರಗಿನ ಶತ್ರುಧಾಳಿ ಎದುರಿಸಲು ಶಸ್ತ್ರಸಜ್ಜಿತ ಸಂರಕ್ಷಣಾಮಾರ್ಗ ನ್ಯಾಯವೂ, ಅಪೇಕ್ಷಣೀಯವೂ ಆದರೆ ಒಳಗಿನ ಶತ್ರುವನ್ನು ಎದುರಿಸಲು ಅದೇ ನೀತಿ ಏಕೆ ಅನುಸರಿಸಬಾರದೆಂದು ಹಿಂಸಾತ್ಮಕಧಾಳಿ ಮತ್ತು ಸಂರಕ್ಷಣೆಗಳಮೇಲಿನ ನಿರ್ಬಂಧ ಹೋದಮೇಲೆ ಅವುಗಳ ದುಷ್ಪರಿಣಾಮವೂ ಅನಿವಾರ್ಯ ಆಯಿತು. ಸೂಕ್ಷ್ಮಧರ್ಮ ಜಿಜ್ಞಾಸೆ ಜನತೆಗೆ ಸುಲಭ ಸಾಧ್ಯವೂ ಇರಲಿಲ್ಲ. ಪ್ರಪಂಚದಲ್ಲಿ ಎಲ್ಲಿ ನೋಡಿದರೂ ಹಿಂಸೆಯು ಪರಮಾವಧಿಮೀರಿ ಮುಟ್ಟಿತ್ತು; ಪ್ರಚಂಡ ಪ್ರಚಾರದ ಪ್ರಬಲ ಪ್ರೋತ್ಸಾಹ ಅದಕ್ಕೆ ದೊರೆತಿತ್ತು. ತಾತ್ಕಾಲಿಕ ಸಾಧ್ಯಾಸಾಧ್ಯತೆ ಮತ್ತು ಮನಸ್ಸಿನ ಉನ್ಮಾದ ಸ್ಥಿತಿ ಎರಡೇ ಮುಖ್ಯ ನಿರ್ಧಾರಕಗಳಾದವು. ಕಾಂಗ್ರೆಸ್ಸಿನ ಹೊರಗೆ ಅಹಿಂಸೆಯಲ್ಲಿ ಯಾವ ವಿಶ್ವಾಸವನ್ನೂ ಇಡದ ಅನೇಕರು ಇದ್ದರು. ಹಿಂಸಾತ್ಮಕ ಮಾರ್ಗಾನುಸರಣೆಯಲ್ಲಿ ಅವರಿಗೆ ಯಾವ ಧರ್ಮಸಂಕಟವೂ ಇರಲಿಲ್ಲ.

ತಾತ್ಕಾಲಿಕ ಆವೇಶದಲ್ಲಿ ಯಾರಿಗೂ ಯಾವ ವಿವೇಚನೆಯೂ ಇರುವುದಿಲ್ಲ. ಅದುಮಿದ್ದ ಶಕ್ತಿ ಗಳೆಲ್ಲ ಹೊರಹೊಮ್ಮಿ ಹುಚ್ಚುಹೊಳೆಯಾಗಿ ಹರಿಯುತ್ತವೆ. ೧೮೫೭ರ ನಂತರ ಭಾರತದಲ್ಲಿ ಅಸಂಖ್ಯಾತ ಜನರು ಬ್ರಿಟಿಷರ ಆಡಳಿತದ ಬೇರುಗಳನ್ನು ಕೀಳಲು ಹಿಂಸಾತ್ಮಕಮಾರ್ಗದಲ್ಲಿ ದಂಗೆ ಎದ್ದದು ಇದೇ ಮೊಟ್ಟಮೊದಲು. ಇತಿಹಾಸದಲ್ಲಿ ಬೇರೆ ಯಾವ ಕಾಲದಲ್ಲೂ ಇಲ್ಲದಷ್ಟು ಶಸ್ತ್ರಬಲವೂ ಸುಸಜ್ಜಿತ ಸೇನೆಯೂ ಬ್ರಿಟಿಷರ ಬಳಿ ಇದ್ದಾಗ ಅದನ್ನು ಎದುರಿಸಲು ಧೈರ್ಯಮಾಡುವುದು ಹುಚ್ಚುತನವೇ ಸರಿ; ಅಲ್ಲದೆ ಸಮಯವೂ ಅನುಕೂಲ ಇರಲಿಲ್ಲ. ಜನರ ಗುಂಪು ಎಷ್ಟೇ ದೊಡ್ಡದಿರಲಿ ಸುಶಿಕ್ಷಿತವೂ ಶಸ್ತ್ರಸಜ್ಜಿತವೂ ಆದ ಸಣ್ಣ ಸೈನ್ಯ ವನ್ನು ಎದುರಿಸಲು ಸಹ ಅದಕ್ಕೆ ಸಾಧ್ಯವಿಲ್ಲ. ಸೈನ್ಯಗಳು ಸರಕಾರದ ಎದುರುಬಿದ್ದರೆ ಹೊರತು ದಂಗೆಯು ಅಡಗಲೇ ಬೇಕು. ಅಲ್ಲದೆ ಜನತೆಯು ಆ ಹೋರಾಟಕ್ಕೆ ಯಾವ ಸಿದ್ಧತೆಯನ್ನೂ ಪಡೆದಿರಲಿಲ್ಲ; ಅಲ್ಲದೆ ಸರಿಯಾದ ಸಮಯವನ್ನೂ ಆರಿಸಿರಲಿಲ್ಲ. ಆಕಸ್ಮಿಕವಾಗಿ ಅದು ಜನರಮೇಲೆ ಒದಗಿತು; ಇದ್ದಕ್ಕಿದ್ದಂತೆ ಜನರು ಉದ್ರೇಕಗೊಂಡು, ಹಿಂದೆ ಮುಂದೆ ನೋಡದೆ ಯಾವ ನಾಯಕತ್ವವೂ ಇಲ್ಲದೆ ತಮ್ಮ ಭಾರತ ಸ್ವಾತಂತ್ರ್ಯ ಪ್ರೇಮವನ್ನೂ, ಪರಕೀಯ ಆಡಳಿತದ್ವೇಷವನ್ನೂ ವ್ಯಕ್ತಗೊಳಿಸಿದರು.

ತಾತ್ಕಾಲಿಕವಾಗಿ ಅಹಿಂಸಾಮಾರ್ಗ ಕೈಬಿಟ್ಟರೂ ದೀರ್ಘಕಾಲದ ಶಿಕ್ಷಣದ ಪರಿಣಾಮವಾಗಿ ಜನತೆಯ ನಡತೆಯಲ್ಲಿ ಒಂದು ದೊಡ್ಡ ವ್ಯತ್ಯಾಸ ಕಂಡಿತು. ಜನರು ಎಷ್ಟೇ ಉದ್ರೇಕಗೊಂಡರೂ ಅವರಲ್ಲಿ ಜನಾಂಗ ದ್ವೇಷವಿರಲಿಲ್ಲ; ಮತ್ತು ಉದ್ದೇಶಪಟ್ಟು ಶತ್ರುಗಳಿಗೆ ಪ್ರಾಣಾಪಾಯಮಾಡಲು ಯತ್ನಿಸಲಿಲ್ಲ. ವಾಹನ ಸಂಚಾರಮಾರ್ಗಗಳನ್ನೂ, ಸರಕಾರದ ಆಸ್ತಿಯನ್ನೂ ನಾಶಮಾಡಿದರು. ಆದರಲ್ಲೂ ಯಾರಿಗೂ ಪ್ರಾಣಾಪಾಯವಾಗದಂತೆ ಎಚ್ಚರ ತೆಗೆದುಕೊಂಡರು. ಆದರೆ ಇದು ಎಲ್ಲ ಸಂದರ್ಭಗಳಲ್ಲಿ ಮುಖ್ಯವಾಗಿ ಪೋಲೀಸರೊಂದಿಗೆ ಮತ್ತು ಸೈನಿಕರೊಂದಿಗೆ ಹೋರಾಡುತ್ತಿದ್ದಾಗ ಸಾಧ್ಯವಿರಲಿಲ್ಲ. ಸರಕಾರದ ವರದಿ

ಗಳಿಂದ ನನಗೆ ಗೊತ್ತಿರುವ ಮಟ್ಟಿಗೆ ಭಾರತಾದ್ಯಂತ ನಡೆದ ಜನರ ಈ ದಂಗೆಯ ಫಲವಾಗಿ ಸುಮಾರು ಒಂದುನೂರು ಜನರು ಮಾತ್ರ ಮಡಿದರು. ಈ ದಂಗೆಗಳ ವ್ಯಾಪ್ತಿ, ದೇಶದ ವಿಸ್ತಾರ ಮತ್ತು ಪೋಲೀಸರೊಂದಿನ ಹೋರಾಟಗಳನ್ನು ಗಮನಿಸಿದರೆ ಈ ಮರಣ ಸಂಖ್ಯೆಯು ಅತ್ಯಲ್ಪ. ಬೀಹಾರದಲ್ಲಿ ಮಾತ್ರ ಕೆನಡದೇಶದ ಇಬ್ಬರು ವೈಮಾನಿಕರನ್ನು ಜನರು ಅತಿ ಕ್ರೌರ್ಯದಿಂದ ಕೊಲೆಮಾಡಿದರು. ಇದು ಬಿಟ್ಟರೆ ಸಾಮಾನ್ಯವಾಗಿ ಯಾವ ಜನಾಂಗದ್ವೇಷವೂ ಅವರಲ್ಲಿ ಇರಲಿಲ್ಲ.*

೧೯೪೨ರ ದಂಗೆಯಲ್ಲಿ ಸರಕಾರದ ಲೆಕ್ಕದಂತೆ ಪೋಲೀಸರ ಅಥವ ಸೈನಿಕರ ಗುಂಡಿನೇಟಿನಿಂದ ಮಡಿದವರು ೧೦೨೮, ಗಾಯಗೊಂಡವರು ೩೨೦೦. ಸರ್ಕಾರದ ವರದಿ ತಿಳಿಸುವಂತೆ ೯೩೮ ಬಾರಿ ಗುಂಡು ಹಾರಿಸಿರುವುದರಿಂದ ಮತ್ತು ಪೋಲೀಸರೂ ಸೈನಿಕರೂ ಚಲಿಸುತ್ತಿದ್ದ ಲಾರಿಗಳಲ್ಲಿ ಕುಳಿತು ಅನೇಕ ಬಾರಿ ಗುಂಡು ಹಾರಿಸುತ್ತಿದ್ದುದರಿಂದ ಈ ಸಂಖ್ಯೆ ಇನ್ನೂ ಅಧಿಕವಿರಬೇಕು; ಉದ್ದೇಶಪಟ್ಟು ಕಡಿಮೆ ಹೇಳಿರಬೇಕು. ಆ ಸಂಖ್ಯೆ ಇಷ್ಟೇ ಎಂದು ಖಚಿತ ಹೇಳಲು ಸಾಧ್ಯವಿಲ್ಲ. ಜನರ ಅಂದಾಜು ೨೫,೦೦೦ ಎಂದಿದ್ದರೂ, ಕೊನೆಯಪಕ್ಷ ಹತ್ತುಸಾವಿರ ಜನರಾದರೂ ಮಡಿದಿರಬೇಕು.

ಅನೇಕ ಕಡೆ ನಗರಗಳಲ್ಲಿ ಮತ್ತು ಗ್ರಾಮಾಂತರಗಳಲ್ಲಿ ಸಹ ಬ್ರಿಟಿಷ್ ಆಡಳಿತವು ಹೇಗೆ ಕುಸಿದು ಬಿತ್ತು, ಪುನಃ ಸ್ಥಾಪಿಸಲು ಅನೇಕ ದಿನಗಳು ಮತ್ತು ವಾರಗಳು ಹಿಡಿಯಿತು ಎನ್ನುವುದೇ ಒಂದು ಆಶ್ಚರ್ಯ. ಬಿಹಾರದಲ್ಲಿ, ಬಂಗಾಲದ ಮಿಡ್ನಾಪುರ ಜಿಲ್ಲೆಯಲ್ಲಿ ಮತ್ತು ಯುಕ್ತ ಪ್ರಾಂತದ ಈಶಾನ್ಯ (South-east) ಜಿಲ್ಲೆಗಳಲ್ಲಿ ಇದೇ ಪರಿಸ್ಥಿತಿ ಇತ್ತು. ಪುನಃ ಗೆದ್ದ ಸಂಯುಕ್ತ ಪ್ರಾಂತದ ಬಲ್ಲಿಯ ಜಿಲ್ಲೆಯ ವಿಶೇಷ ನ್ಯಾಯಾಸ್ಥಾನಗಳ ಮುಂದೆ ಬಂದ ಅನೇಕ ಮೊಕದ್ದಮೆಗಳಲ್ಲಿ ಪ್ರಾಣಾಪಾಯದ ಅಥವ ಹಿಂಸೆಯ ಆರೋಪಣೆ ಯಾವುದೂ ಇರಲಿಲ್ಲ. ಸಾಮಾನ್ಯ ಪೋಲೀಸರಿಂದ ಪರಿಸ್ಥಿತಿಯನ್ನು ಹತೋಟಿಗೆ ತರಲು ಆಗಲಿಲ್ಲ. ೧೯೪೨ರ ಆರಂಭದಲ್ಲಿ ಶಸ್ತ್ರಸಜ್ಜಿತ ವಿಶೇಷ ಪೋಲಿಸ್ ಪಡೆಯೊಂದನ್ನು (Special Armed Constabulary) ನಿರ್ಮಿಸಲಾಯಿತು. ಜನರ ಪ್ರತಿಭಟನೆ ಮತ್ತು ದಂಗೆಗಳನ್ನು ಅಡಗಿಸಲು ಅವರಿಗೆ ವಿಶೇಷ ಶಿಕ್ಷಣ ಕೊಡಲಾಗಿತ್ತು. ಜನರನ್ನು ಹಿಂಸಿಸಿ ಅವರ ದಂಗೆ ಅಡಗಿಸುವುದರಲ್ಲಿ ಪ್ರಮುಖ ಪಾತ್ರವಹಿಸಿ ಈ ಪಡೆಯು ಐರ್ಲೆಂಡಿನ (Black and Taus) ಪಡೆಯಂತೆ ಅತಿ ಕ್ರೌರ್ಯದಿಂದ ವರ್ತಿಸಿತು. ಕೆಲವು ಗುಂಪು ಅಥವ ಸಂಗಡ ಬಿಟ್ಟು ಉಳಿದ ಭಾರತೀಯ ಸೈನ್ಯವನ್ನು ಈ ಕೆಲಸಕ್ಕೆ ಉಪಯೋಗಿಸಲಿಲ್ಲ. ಬ್ರಿಟಿಷ್ ಸೈನಿಕರು ಮತ್ತು ಗೂರ್ಖರನ್ನು ಮಾತ್ರ ಉಪಯೋಗಿಸಿದರು. ಇನ್ನು ಕೆಲವು ವೇಳೆ ಜನರ ಭಾಷೆ ತಿಳಿಯದ ದೂರದ ಪ್ರಾಂತಗಳಿಗೆ ಭಾರತೀಯ ಸೈನಿಕರನ್ನೂ, ವಿಶೇಷ ಪೋಲೀಸರನ್ನೂ ಕಳುಹಿಸುತ್ತಿದ್ದರು. ಅಲ್ಲಿ ಅವರು ಪರಕೀಯರಂತೆ ಜನರಿಂದ ದೂರ ಇರುತ್ತಿದ್ದರು.

ಜನಜಂಗುಳಿಯ ಪ್ರತಿಕ್ರಿಯೆ ಸ್ವಾಭಾವಿಕವಿದ್ದ ಪರಿಸ್ಥಿತಿಯಲ್ಲಿ ಸರಕಾರದ ಪ್ರತಿಕ್ರಿಯೆಯೂ ಸ್ವಾಭಾ

---

* "British Soldier looks at India" ಎಂಬ ತನ್ನ ಗ್ರಂಥದಲ್ಲಿ ಕ್ಲೈವ್ ಬ್ರ್ಯಾನ್ಸನ್ ಒಂದು ಮಹತ್ವದ ವಿಷಯ ವಿವರಿಸಿದ್ದಾನೆ. ಬ್ರ್ಯಾನ್ಸನ್ ಒಬ್ಬ ಕಲಾವಿದ ಮತ್ತು ಸಾಮ್ಯವಾದಿ. ಸ್ಪೇನ್‌ನಲ್ಲಿ ಅಂತರ ರಾಷ್ಟ್ರೀಯ ಪಡೆಯಲ್ಲಿ ಸೇವೆಮಾಡಿದ್ದ; ಮತ್ತು ೧೯೪೧ರಲ್ಲಿ ರಾಯಲ್ ಶಸ್ತ್ರಪಡೆಯಲ್ಲಿ ಸಾರ್ಜೆಂಟ್ ಆಗಿದ್ದ. ೧೯೪೨ರಲ್ಲಿ ತನ್ನ ರೆಜಿಮೆಂಟಿನೊಂದಿಗೆ ಭಾರತಕ್ಕೆ ಬಂದ. ೧೯೪೪ನೇ ಫೆಬ್ರುವರಿಯಲ್ಲಿ ಬರ್ಮ್ಮದಲ್ಲಿ ಅರಕಾನ್ ಯುದ್ಧದಲ್ಲಿ ಆತನು ಮಡಿದ. ಕಾಂಗ್ರೆಸ್ ನಾಯಕರ ಬಂಧನವಾಗಿ ಮುಂಬೈ ನಗರದ ಜನರು ಕೋಪಾವೇಶದಿಂದ ಉದ್ರೇಕಗೊಂಡು ಗುಂಡಿನಬಾಯಿಗೆ ಆಹುತಿಯಾಗುತ್ತಿದ್ದಾಗ ೧೯೪೨ನೇ ಆಗಸ್ಟ್ ತಿಂಗಳಲ್ಲಿ ಆತನು ಮುಂಬೈಯಲ್ಲಿ ಇದ್ದ. ಬ್ರ್ಯಾನ್ಸನ್ "ನಿಮ್ಮ ರಾಷ್ಟ್ರೀಯ ಭಾವನೆ ಎಷ್ಟು ನಿರ್ಮಲವೂ, ಶುಭ್ರವೂ ಇದೆ. ಕಮ್ಯುನಿಸ್ಟ್‌ಪಕ್ಷದ ಕಚೇರಿ ಎಲ್ಲಿದೆ ಎಂದು ನಾನು ಜನರನ್ನು ಕೇಳಿದೆ. ನಾನು ಸಮವಸ್ತ್ರ ಧರಿಸಿದ್ದೆ. ನನ್ನಂತೆ ಸಮವಸ್ತ್ರ ಧರಿಸಿದ್ದ ಸೈನಿಕರು ನಿಶ್ಶಸ್ತ್ರರಾದ ಭಾರತೀಯರನ್ನು ಗುಂಡಿಟ್ಟುಕೊಲ್ಲುತ್ತಿದ್ದರು. ನನಗೂ ಸ್ವಲ್ಪ ಗಾಬರಿಯಾಗಿತ್ತು. ಜನರು ಏನುಮಾಡುತ್ತಾರೋ ಎಂದು ಸಂಶಯವಿತ್ತು. ಆದರೆ ನಾನು ಯಾರನ್ನು ಕೇಳಿದರೂ ಸಹಾಯಮಾಡಲು ಮುಂದೆ ಬಂದರೇ ವಿನಾ ಯಾರೂ ನನಗೆ ಅಗೌರವಮಾಡಲಿಲ್ಲ, ತಪ್ಪುದಾರಿ ತೋರಿಸಲಿಲ್ಲ" ಎಂದು ಹೇಳಿದ್ದಾನೆ.

ವಿಕವಾಯಿತು. ಜನರ ಸ್ವಯಂಪ್ರೇರಿತ ದಂಗೆಯನ್ನೂ, ಇತರರ ಶಾಂತಿಯುತ ಪ್ರದರ್ಶನಗಳನ್ನೂ ಅಡಗಿಸ ಬೇಕಾಯಿತು; ಅಲ್ಲದೆ ಆತ್ಮರಕ್ಷಣೆಯ ದೃಷ್ಟಿಯಿಂದ ಶತ್ರುಗಳೆಂದು ತನಗೆ ಕಂಡವರನ್ನೆಲ್ಲ ಅಡಗಿಸಬೇಕಾ ಯಿತು. ಜನರ ಉದ್ರೇಕಕ್ಕೆ ಕಾರಣ ಅರಿತು ಅರ್ಥಮಾಡಿಕೊಳ್ಳುವ ದೃಷ್ಟಿ ಸರಕಾರಕ್ಕೆ ಇದ್ದಿದ್ದರೆ ಈ ವಿಷಮ ಸನ್ನಿವೇಶವೇ ಬಾರದಂತೆ ಭಾರತದ ಪ್ರಶ್ನೆಯನ್ನೂ ಎಂದೋ ಬಿಡಿಸಬಹುದಾಗಿತ್ತು. ತನ್ನ ಅಧಿ ಕಾರಕ್ಕೆ ವಿರುದ್ಧ ನಿಂತ ಶಕ್ತಿಯನ್ನು ಒಂದು ಬಾರಿ ಪೂರ್ಣ ಅಡಗಿಸಬೇಕೆಂದು ಸರಕಾರ ಯೋಚಿಸಿಪೂರ್ಣ ಸಿದ್ಧತೆ ಮಾಡಿಕೊಂಡಿತ್ತು. ತಾನೇ ಮುಂದೆ ಬಂದು ಮೊದಲು ಏಟುಕೊಟ್ಟಿತ್ತು. ರಾಷ್ಟ್ರೀಯ, ಕಾಮಗಾರ ಮತ್ತು ರೈತರ ಚಳವಳಿಗಳಲ್ಲಿ ಪ್ರಮುಖ ಪಾತ್ರವಹಿಸಿದ್ದ ಸಹಸ್ರಾರು ಜನ ಸ್ತ್ರೀ ಪುರುಷರನ್ನು ಸೆರೆಮನೆಗೆ ತಳ್ಳಿತ್ತು. ಆದರೂ ದೇಶವನ್ನೇ ಆವರಿಸಿದ ಈ ಜನತೆಯ ವಿಪ್ಲವ ಕಂಡು ಆಶ್ಚರ್ಯ ವಿಸ್ಮಯಗಳಿಂದ ದೇಶಾದ್ಯಂತ ಹರಡಿದ್ದ ಸರ್ಕಾರದ ದಬ್ಬಾಳಿಕೆಯ ಯಂತ್ರವು ಸಡಿಲಿ ಕುಸಿಯಿತು. ಆದರೆ ಅದರ ಸಾಧನ ಸಂಪತ್ತು ಅಪಾರವಿತ್ತು; ಅದೆಲ್ಲವನ್ನೂ ಉಪಯೋಗಿಸಿ ಹಿಂಸಾತ್ಮಕವೋ ಅಹಿಂಸಾತ್ಮಕವೋ ಎಲ್ಲ ದಂಗೆ ಯನ್ನೂ ಅಡಗಿಸಲು ನಿರ್ಧರಿಸಿತು. ಹೆದರಿಕೆಯಿಂದ ತಾವೂ ರಾಷ್ಟ್ರಾಭಿಮಾನಿಗಳೆಂದು ಹೇಳಿಕೊಳ್ಳುತ್ತಾ ಕೆಲವುಬಾರಿ ಸರಕಾರವನ್ನು ಟೀಕೆಮಾಡಿದ ಶ್ರೀಮಂತರು ಮತ್ತು ಬಂಡವಳಗಾರರು ದೇಶಾದ್ಯಂತ ಉದ್ಭವಿ ಸಿದ ಈ ಪ್ರಚಂಡ ಚಳವಳಿಯನ್ನು ಕಂಡು ಭಯಗ್ರಸ್ತರಾದರು. ಈ ವಿಪ್ಲವದ ರಾಜಕೀಯ ಮತ್ತು ಸಾಮಾಜಿಕ ಸ್ವರೂಪ ಕಂಡು ತಮ್ಮ ಅಸ್ತಿತ್ವಕ್ಕೆ ಧಕ್ಕೆ ಬರಬಹುದೆಂದು ಭಾವಿಸಿದರು. ಸರಕಾರವು ದಂಗೆ ಅಡಗಿಸುವುದರಲ್ಲಿ ಯಶಸ್ವಿಯಾಗುತ್ತ ಬಂದಂತೆ ಈ ಸ್ವಾರ್ಥಿಗಳ ಮತ್ತು ಗೆದ್ದ ಎತ್ತಿನ ಬಾಲ ಹಿಡಿಯು ವವರ ತಂಡವು ಸರಕಾರಕ್ಕೆ ಬೆಂಬಲ ನಿಂತು ಸರಕಾರ ವಿರೋಧಿಸಿದವರನ್ನೆಲ್ಲ ನಿಂದಿಸ ತೊಡಗಿದರು.

ದಂಗೆಯ ಬಾಹ್ಯ ಚಟುವಟಿಕೆಗಳು ಅಡಗಿದ ನಂತರ ಅದರ ಮೂಲವನ್ನೂ ನಾಶಮಾಡಬೇಕಾ ಯಿತು. ಆದ್ದರಿಂದ ಬ್ರಿಟಿಷರ ಆಡಳಿತಾಧಿಕಾರಕ್ಕೆ ಯಾರೂ ಪ್ರತಿ ಮಾತನಾಡದಂತೆ ಸರ್ಕಾರದ ಸಮಸ್ತ ಶಕ್ತಿಯನ್ನೂ ಉಪಯೋಗಿಸಲಾಯಿತು. ಬೆಳಗಾಗುವುದರ ಒಳಗೆ ವಿಶೇಷ ಶಾಸನಗಳನ್ನು ಹೇರಲು ವೈಸ್‌ರಾಯ್‌ಗೆ ಪೂರ್ಣ ಅಧಿಕಾರವಿತ್ತು. ಅದರ ಎಲ್ಲ ವಿಧಾನ ಕ್ರಮವನ್ನೂ ಬದಿಗೆ ತಳ್ಳಲಾಯಿತು. ಬ್ರಿಟಿಷ್ ಸರಕಾರವೇ ಏರ್ಪಡಿಸಿದ ಫೆಡರಲ್ ಕೋರ್ಟ್ ಮತ್ತು ಹೈಕೋರ್ಟುಗಳ ತೀರ್ಪುಗಳನ್ನು ಸಹ ಅಧಿಕಾರಿವರ್ಗ ಅಲಕ್ಷ್ಯಮಾಡಿತು. ಅವುಗಳಿಗೆ ಯಾವ ಗೌರವವನ್ನೂ ಕೊಡದೆ ಆ ತೀರ್ಪುಗಳ ವಿರುದ್ಧ ಹೊಸ ಶಾಸನ ಬಾಣಗಳನ್ನು ಸೃಷ್ಟಿಸಿದರು. ಸಾಕ್ಷ್ಯಶಾಸನ ಮತ್ತು ವಿಧಿಬದ್ಧ ಕ್ರಮಗಳ ಯಾವ ಬಂಧ ನವೂ ಇಲ್ಲದ ವಿಶೇಷ ನ್ಯಾಯಾಸ್ಥಾನಗಳನ್ನು ಏರ್ಪಡಿಸಿ ಸಹಸ್ರಾರು ಜನರಿಗೆ ದೀರ್ಘಕಾಲದ ಶಿಕ್ಷೆ ಯನ್ನೂ, ಕೆಲವು ಸಂದರ್ಭಗಳಲ್ಲಿ ಮರಣ ದಂಡನೆಯನ್ನೂ ವಿಧಿಸಲಾಯಿತು. ಈ ನ್ಯಾಯಾಸ್ಥಾನಗಳು ಶಾಸನವಿರುದ್ಧವೆಂದು ಆಮೇಲೆ ತೀರ್ಮಾನವೂ ಆಯಿತು. ಪೋಲೀಸರ ಅದರಲ್ಲೂ ಸಶಸ್ತ್ರ ವಿಶೇಷ ಪೋಲೀಸ ದಳದವರ ಮತ್ತು ಗುಪ್ತಚಾರರ ಅಧಿಕಾರಕ್ಕೆ ಮಿತಿಯೇ ಇಲ್ಲದೆ ಸರ್ಕಾರವೇ ಅವರ ಕೈಯ ಲ್ಲಿತ್ತು. ಯಾರ ಅಡ್ಡಿ ಅಥವ ಅಂಕೆ ಇಲ್ಲದೆ ನ್ಯಾಯವಿರುದ್ಧ ದುಷ್ಕೃತ್ಯಗಳನ್ನು ಏನು ಬೇಕಾದರೂ ಮಾಡಲು ಅವರಿಗೆ ಅವಕಾಶವಿತ್ತು. ಲಂಚ ಖುಸುವತ್ತಿಗೆ ಮಿತಿಯೇ ಇರಲಿಲ್ಲ. ಶಾಲಾಕಾಲೇಜಿನ ಅಸಂಖ್ಯಾತ ಹುಡುಗರಿಗೆ ಅನೇಕ ಬಗೆಯ ಕ್ರೂರ ಶಿಕ್ಷೆ ಕೊಟ್ಟರು, ಮತ್ತು ಸಹಸ್ರಾರು ಯುವಕರಿಗೆ ಛಡಿ ಏಟನ್ನು ಕೊಟ್ಟರು. ಸರಕಾರದ ಪ್ರಶಂಸೆ ಒಂದು ಹೊರತು ಎಲ್ಲ ಸಾರ್ವಜನಿಕ ಕಾರ್ಯಕ್ರಮಗಳನ್ನೂ ನಿರೋಧಿಸಿದರು.

ಆದರೆ ಸರಳ ಹೃದಯರೂ ಬಡವರೂ ಆದ ಗ್ರಾಮಾಂತರಗಳ ರೈತರು ಎಲ್ಲರಿಗಿಂತ ಹೆಚ್ಚು ಸಂಕಟ ಕ್ಕೀಡಾದರು. ಶತಮಾನಗಳಿಂದ ಅವರ ನಿತ್ಯ ಜೀವನವೇ ಒಂದು ಗೋಳಿನ ಕಥೆಯಾಗಿತ್ತು. ಈಗ ಆಸೆಯಿಂದ ತಲೆ ಎತ್ತಿ ಹೊಸ ಕನಸು ಕಾಣುವ ಧೈರ್ಯಮಾಡಿದ್ದರು; ರಾಷ್ಟ್ರೀಯ ಆಂದೋಲನದ ಕಾರ್ಯಕ್ರಮದಲ್ಲಿ ಪ್ರತ್ಯಕ್ಷ ಭಾಗವಹಿಸುವಷ್ಟು ಎಚ್ಚತ್ತಿದ್ದರು; ಅದು ಹುಚ್ಚೋ, ತಪ್ಪೋ, ಸರಿಯೋ, ತಮ್ಮ ಸ್ವಾತಂತ್ರ್ಯ ಶಿಷ್ಟೆಯನ್ನಂತೂ ವ್ಯಕ್ತಗೊಳಿಸಿ, ಅವರು ಸೋತಿದ್ದರು; ಆ ಸೋಲಿನ ಭಾರವು ಅವರ ಕುಸಿದ ಹೆಗಲಿನ ಮುರಿದ ಎಲುಬುಗಳ ಮೇಲೆ ಬಿದ್ದಿತ್ತು. ಅನೇಕ ಕಡೆ ಇಡೀ ಹಳ್ಳಿಗಳಿಗೆ ಛಡಿ ಏಟನ

ಶಿಕ್ಷೆಯನ್ನೋ ಮರಣ ದಂಡನೆಯನ್ನೋ ವಿಧಿಸಿದ್ದರು. ೧೯೪೩ರ ದಂಗೆಗೆ ಮುಂಚೆ ಮತ್ತು ಅನಂತರ ಬಂಗಾಲದಲ್ಲಿ ತಾಮ್ಲುಕ್ ಮತ್ತು ಕಾಂತಾಯ್ ಸಬ್‌ಡಿವಿಸಃಗಳಲ್ಲಿ ೧೯೩ ಕಾಂಗ್ರೆಸ್ ಶಿಬಿರಗಳನ್ನೂ ಕಚೇರಿಗಳನ್ನೂ ಸುಟ್ಟಂತೆ ಬಂಗಾಲ ಸರ್ಕಾರವೇ ಹೇಳಿತ್ತು. ಈ ಪ್ರಚಂಡ ಚಳವಳಿಯ ಅನಾಹುತ ದಿಂದ ಸರ್ವನಾಶವಾಗಿದ್ದರೂ ಸರಕಾರದ ನೀತಿಯಲ್ಲಿ ಯಾವ ವ್ಯತ್ಯಾಸವೂ ಆಗಲಿಲ್ಲ. ಹಳ್ಳಿಗಳ ಮೇಲೆ ಮಿತಿಮೀರಿ ಪುಂಡುಗಂದಾಯ ಹೇರಿ ಹಣ ವಸೂಲು ಮಾಡಿದರು. ಒಟ್ಟು ೯೦ ಲಕ್ಷ ರೂಪಾಯಿಗಳ ದಂಡ ವಿಧಿಸಲಾಯಿತೆಂದೂ ಅದರಲ್ಲಿ ೭೮,೫೦,೦೦೦ ದಂಡ ವಸೂಲಾಯಿತೆಂದೂ ಅಮೆರಿಯೇ ಕಾಮನ್ಸ್ ಸಭೆಯಲ್ಲಿ ಹೇಳಿದ್ದ. ಅರಹೊಟ್ಟೆಯ ತಿರುಕರಿಂದ ಇಷ್ಟು ಹಣ ಹೇಗೆ ವಸೂಲಾಯಿತೆಂಬುದೇ ಒಂದು ಆಶ್ಚರ್ಯ. ಆದರೆ ೧೯೪೨ರಲ್ಲಿ ಆಗಲಿ ಅಥವ ಅನಂತರ ಆಗಲಿ ಪೊಲೀಸರು ಗುಂಡು ಹಾರಿಸಿದ್ದರಿಂದ ಅಥವ ಬೆಂಕಿಹಚ್ಚಿದ್ದರಿಂದ ಯಾವುದರಿಂದಲೂ ಈ ಸುಲಿಗೆಯಿಂದಾದಷ್ಟು ಸಂಕಟ ಆಗಲಿಲ್ಲ, ವಿಧಿಸಿದ ದಂಡವನ್ನೆಲ್ಲ ವಸೂಲುಮಾಡಿದ್ದು ಒಂದೇ ಅಲ್ಲದೆ ಆ ವಸೂಲಿ ಕಾಲದಲ್ಲಿ ಹೆಚ್ಚಿನ ಹಣವೂ ಮಾಯ ವಾಗುತ್ತಿತ್ತು.

ಸರಕಾರದ ಕ್ರೌರ್ಯಕ್ಕೆ ಮುಚ್ಚು, ಮರೆ, ಮತ್ತು ಮುಸುಕು ಯಾವುದೂ ಇಲ್ಲವಾಯಿತು. ಸರಕಾರದ ಅಧಿಕಾರ ಮತ್ತು ಶಕ್ತಿಯ ಸಂಕೇತವಾಗಿ ನಗ್ನ ಪಾಶವೀ ಶಕ್ತಿಯೊಂದೇ ತಾಂಡವವಾಡ ತೊಡಗಿತು. ಈ ರೀತಿ ಬ್ರಿಟಿಷರ ಅಧಿಕಾರ ಸ್ಥಾನದಲ್ಲಿ ರಾಷ್ಟ್ರೀಯ ಅಧಿಕಾರ ಸ್ಥಾಪನೆಗೆ ಮಾಡಿದ ಅಹಿಂಸಾತ್ಮಕ ಮತ್ತು ಹಿಂಸಾತ್ಮಕ ಹೋರಾಟವೆಲ್ಲ ಸಧ್ಯಕ್ಕೆ ವ್ಯರ್ಥವಾಗಿ ಬ್ರಿಟಿಷರ ಶಕ್ತಿಗೆ ಜಯದೊರೆತು, ಅದನ್ನು ಎದುರಿಸು ವವರೇ ಇಲ್ಲವಾಯಿತು. ಆದ್ದರಿಂದ ಅದಕ್ಕೆ ಯಾವ ಮುಚ್ಚು ಮರೆಯೂ ಬೇಕಿರಲಿಲ್ಲ, ಬೇರೆ ಎಲ್ಲವೂ ಅಸಂಬದ್ಧ ಪ್ರಲಾಪ ಮತ್ತು ಅನವಶ್ಯಕ ಚರ್ಚೆಯಾಗಿ ಪಾಶವೀಶಕ್ತಿ ಮತ್ತು ಸಾಮರ್ಥ್ಯಗಳಿಗೆ ಮಾತ್ರ ಬೆಲೆ ಇದ್ದ ಸಮಯದಲ್ಲಿ ಭಾರತವು ಸೋತು ಹೋಯಿತು. ಬ್ರಿಟಿಷರ ಶಸ್ತ್ರ ಸಿದ್ಧತೆ ಮತ್ತು ಯುದ್ಧ ಪರಿ ಸ್ಥಿತಿಯಿಂದ ಜನರ ಮನಸ್ಸಿನಲ್ಲಿ ಹುಟ್ಟಿದ ಮನೋವಿಕಲ್ಪಗಳು ಮಾತ್ರವಲ್ಲದೆ ಸ್ವಾತಂತ್ರ್ಯಸಿದ್ಧಿಗಾಗಿ ಅವಶ್ಯವಾದ ಅಂತಿಮ ತ್ಯಾಗಮಾಡಲು ಭಾರತೀಯರನೇಕರು ಸಿದ್ಧರಿಲ್ಲದ ಕಾರಣ ಭಾರತಕ್ಕೆ ಸೋಲಾ ಯಿತು. ಈ ರೀತಿ ಭಾರತದಲ್ಲಿ ಪುನಃ ತಮ್ಮ ಸ್ವಾಮ್ಯ ಸ್ಥಾಪಿಸಿರುವುದಾಗಿಯೂ, ಆ ಹಿಡಿತ ಸಡಿಲಿಸಲು ಯಾವ ಅವಶ್ಯಕತೆಯೂ ಇಲ್ಲವೆಂದೂ ಬ್ರಿಟಿಷರು ಭಾವಿಸಿದರು.

### ೪. ವಿದೇಶಗಳಲ್ಲಿ ಪ್ರತಿಕ್ರಿಯೆ

ಸುದ್ದಿ ಯಾವುದೂ ಹೊರಗೆ ಹೋಗದಂತೆ ಸರ್ಪಗಾವಲು ಹಾಕಿದ್ದರಿಂದ ಭಾರತದಲ್ಲಿ ನಡೆದ ಸಂಗತಿ ಯಾವುದೂ ಹೊರಗಿನ ಪ್ರಪಂಚಕ್ಕೆ ತಿಳಿಯಲಿಲ್ಲ. ಭಾರತದ ವರ್ತಮಾನಪತ್ರಿಕೆಗಳು ಸರಕಾರದ ಒಪ್ಪಿಗೆ ಪಡೆಯದೆ ನಿತ್ಯದ ಸಮಾಚಾರ ಸಹ ಪ್ರಕಟಿಸುವಂತೆ ಇರಲಿಲ್ಲ; ವಿದೇಶಗಳಿಗೆ ಹೋಗುವ ಸುದ್ದಿಗಳಮೇಲೆ ಇನ್ನೂ ಬಲವಾದ ನಿರ್ಬಂಧವಿತ್ತು. ಇದೇ ಸಮಯದಲ್ಲಿ ವಿದೇಶಗಳಲ್ಲಿ ಸರಕಾರದವರ ಪ್ರಚಾರ ಏರ್ಪಡಿಸಿ ಸರಕಾರವು ತನಗೆ ಬೇಕಾದ ಸುಳ್ಳುಸುದ್ದಿ ಹರಡಲು ಆರಂಭಿಸಿತು. ಅಮೆರಿಕೆಯ ವಿಶ್ವಾಸ ಅತ್ಯವಶ್ಯವೆಂದು ಕಂಡದ್ದರಿಂದ ಸಂಯುಕ್ತ ಸಂಸ್ಥಾನದಲ್ಲಿ ಈ ಪ್ರಚಾರಕಾರ್ಯ ಬಹು ಬಿರುಸಿನಿಂದ ನಡೆಯಿತು. ಆಂಗ್ಲ ಮತ್ತು ಭಾರತೀಯ ಉಪನ್ಯಾಸಕರು ಮತ್ತು ಪ್ರಚಾರಕರು ನೂರಾರು ಜನರನ್ನು ಕಳುಹಿಸಿ ಪ್ರಚಂಡ ಪ್ರಚಾರ ನಡೆಸಿದರು. ಯುದ್ಧದ ಭಯ ಮತ್ತು ಹೊರೆಯಿಂದ ನಿತ್ಯ ನರಳುತ್ತಿದ್ದ ಆಂಗ್ಲರಿಗೆ ತಮ್ಮ ಕಷ್ಟ ಸಮಯದಲ್ಲಿ ಭಾರತೀಯರು ಇನ್ನೂ ಹೆಚ್ಚು ಸಂಕಟಕೊಟ್ಟ ಕಾರಣ ಭಾರತೀಯರ ವಿರುದ್ಧ ಅಸಮಾಧಾನ ಹುಟ್ಟಲು ಯಾವ ಪ್ರಚಾರವೇ ಬೇಕಿರಲಿಲ್ಲ. ತಾವು ಮಾಡಿದುದೆಲ್ಲ ನ್ಯಾಯ ಎಂಬ ಭಾವನೆ ಬ್ರಿಟಿಷರಲ್ಲಿ ಬೇರೂರಿತ್ತು. ಏಕ ಪಕ್ಷೀಯ ಪ್ರಚಾರದಿಂದ ಈ ಅಸಮಾಧಾನಕ್ಕೆ ಇನ್ನೂ ಪುಟ ಕೊಟ್ಟಂತಾಯಿತು. ಬೇರೆ ದೃಷ್ಟಿ ಅರಿಯಲು ಅಸಮರ್ಥರಾಗಿದ್ದುದೇ ಅವರ ಸಾಮರ್ಥ್ಯವಾಯಿತು. ತಾವು ಮಾಡಿದುದೆಲ್ಲ ನ್ಯಾಯವೆಂದು ಸಾಧಿಸಿದರು; ಏನಾದರೂ ಅಚಾತುರ್ಯ ನಡೆದರೆ ಅದಕ್ಕೆ ಬ್ರಿಟಿಷರ ಸದುದ್ದೇಶ ಅರ್ಥ ಮಾಡಿಕೊಳ್ಳಲು ಅಸಮರ್ಥರಾದ ದಂಗೆಕೋರರೇ ಕಾರಣ ಎಂದು ದೂರಲಾರಂಭಿಸಿದರು. ಬ್ರಿಟಿಷರ

ಸದುದ್ದೇಶದಲ್ಲಿ ನಂಬಿಕೆ ಇಡದೆ ಬ್ರಿಟಿಷರನ್ನು ಎದುರಿಸಲು ಧೈರ್ಯಮಾಡಿದವರನ್ನು ಬ್ರಿಟಿಷರಸೈನ್ಯ ಮತ್ತು ಭಾರತೀಯ ಪೋಲೀಸ್ ದಳದವರು ಸೋಲಿಸಿ ಬ್ರಿಟಿಷರ ಮತ್ತು ಸಾಮ್ರಾಜ್ಯದ ನ್ಯಾಯ ಪರತೆಯನ್ನು ದೃಢಪಡಿಸಿದ್ದರು. "ಬ್ರಿಟಿಷ್ ಸಾಮ್ರಾಜ್ಯ ಛಿದ್ರಗೊಳಿಸಲು ನಾನು ಬ್ರಿಟಿಷ್ ದೊರೆಯ ಮುಖ್ಯಪ್ರಧಾನಿಯಾಗಿಲ್ಲ" ಎಂದು ಚರ್ಚಿಲ್ ಭಾರತದ ವಿಷಯ ಮಾತನಾಡುತ್ತ ಹೇಳಿದನು. ಚರ್ಚಿಲ್ ಈ ಅಭಿಪ್ರಾಯ ವ್ಯಕ್ತಪಡಿಸಿದಾಗ ಅದು, ಮೊದಲು ಸಾಮ್ರಾಜ್ಯ ತತ್ವ ಮತ್ತು ರೀತಿನೀತಿ ಟೀಕೆ ಮಾಡುತ್ತಿದ್ದ ಜನರ ಅಭಿಪ್ರಾಯ ಸೇರಿ ಎಲ್ಲ ಬ್ರಿಟಿಷರ ಬಹು ಜನಾಭಿಪ್ರಾಯವಾಗಿತ್ತು. ಸಾಮ್ರಾಜ್ಯ ಸಂಪ್ರದಾಯ ರಕ್ಷಣೆಯಲ್ಲಿ ತಾವು ಯಾರಿಗೂ ಹಿಂದೆ ಇಲ್ಲವೆಂದು ತೋರಿಸಲು ಬ್ರಿಟಿಷ್ ಲೇಬರ್ ಪಕ್ಷದ ನಾಯಕರು ಚರ್ಚಿಲ್ ಹೇಳಿಕೆಗೆ ಬೆಂಬಲಕೊಟ್ಟರು. ಮತ್ತು "ಯುದ್ಧಾನಂತರ ಸಹ ಸಾಮ್ರಾಜ್ಯ ಭದ್ರತೆ ಕಾಪಾಡುವುದೇ ಬ್ರಿಟಿಷ್ ಜನರ ಸಂಕಲ್ಪ" ಎಂದು ಸ್ಪಷ್ಟಗೊಳಿಸಿದರು.

ದೂರದ ಭಾರತದ ಮೇಲೆ ಆಸಕ್ತಿ ತೋರಿದ ಅಮೆರಿಕನರಲ್ಲಿ ಭಿನ್ನಾಭಿಪ್ರಾಯವಿತ್ತು. ಬ್ರಿಟಿಷ್ ಆಡಳಿತವರ್ಗದವರೆಲ್ಲ ಸತ್ಯಸಂಧರೆಂದು ಅವರು ನಂಬಿಯೂ ಇರಲಿಲ್ಲ ಮತ್ತು ಪರರ ಸಾಮ್ರಾಜ್ಯವೆಂದರೆ ಅವರಿಗೆ ಒಪ್ಪಿಗೆಯೂ ಇರಲಿಲ್ಲ. ಜಪಾನ್ ಮೇಲಿನ ಯುದ್ಧದಲ್ಲಿ ಭಾರತದ ಪೂರ್ಣ ಸಹಾನುಭೂತಿಯಿಂದ ಭಾರತದ ಪೂರ್ಣ ಸಾಧನ ಸಂಪತ್ತನ್ನು ಉಪಯೋಗಿಸಿಕೊಳ್ಳಬೇಕೆಂಬ ಆಸಕ್ತಿಯೂ ಇತ್ತು. ಆದರೂ ಬ್ರಿಟಿಷರ ಏಕಪಕ್ಷೀಯ ಪ್ರಚಾರದಿಂದ ಸ್ವಲ್ಪ ಪರಿಣಾಮವಾಯಿತು; ಭಾರತದ ಪ್ರಶ್ನೆ ತಮ್ಮಿಂದ ಬಿಡಿಸಲಾಗದ ಸಮಸ್ಯೆ ಎಂಬ ಭಾವನೆ ಬೆಳೆಯಿತು; ಏನೆ ಆಗಲಿ ಮಿತ್ರ ರಾಷ್ಟ್ರವಾದ ಬ್ರಿಟನ್ನಿನ ಪ್ರಶ್ನೆಯಲ್ಲಿ ಪ್ರವೇಶ ಮಾಡಲು ಕಷ್ಟವೆನಿಸಿತು.

ರಷ್ಯದ ಆಡಳಿತವರ್ಗ ಮತ್ತು ಜನತೆಗೆ ಭಾರತದ ವಿಷಯ ಯಾವ ಅಭಿಪ್ರಾಯ ಇತ್ತೊ ತಿಳಿಯದು. ಅವರ ಅದ್ಭುತ ಯುದ್ಧ ಸನ್ನದ್ಧತೆಯಲ್ಲಿ ಮತ್ತು ಶತ್ರುವನ್ನು ತಮ್ಮ ದೇಶದಿಂದ ಹೊರದೂಡುವುದರಲ್ಲಿ ತಮಗೆ ಸಂಬಂಧಪಡದ ಇತರ ವಿಷಯ ಯೋಚಿಸಲು ಅವರಿಗೆ ಬಿಡುವೇ ಇರಲಿಲ್ಲ. ಆದರೂ ಅವರು ಬಹಳ ಮುಂದಾಲೋಚನೆ ಮಾಡುವವರಾದ್ದರಿಂದ ಏಷ್ಯದಲ್ಲಿ ತಮ್ಮ ಗಡಿಗೆ ಹೊಂದಿಕೊಂಡು ಭಾರತದ ವಿಷಯ ಯೋಚಿಸಿರಲೇಬೇಕು. ಅವರ ಮುಂದಿನ ನೀತಿ ಏನೆಂದು ಹೇಳಲು ಯಾರಿಗೂ ಸಾಧ್ಯವಿರಲಿಲ್ಲ; ಆದರೆ ಅದರಿಂದ ಸೋವಿಯಟ್ ರಷ್ಯದ ಸಂಯುಕ್ತ ಸಂಸ್ಥಾನಗಳ ರಾಜಕೀಯ ಮತ್ತು ಆರ್ಥಿಕ ಶಕ್ತಿ ಅಭಿವೃದ್ಧಿಯಾಗಬೇಕೆಂಬ ಮುಖ್ಯ ವಾಸ್ತವಿಕ ಗುರಿ ಇದ್ದಿರಬಹುದೆಂದು ಮಾತ್ರ ಹೇಳಬಹುದಾಗಿತ್ತು. ಭಾರತದ ವಿಷಯ ಏನೂ ಪ್ರಸ್ತಾಪಿಸದೆ ಎಚ್ಚರದಿಂದ ಇದ್ದರು. ಆದರೆ ೧೯೪೨ನೆ ನವಂಬರ್ ತಿಂಗಳಲ್ಲಿ ಸೋವಿಯಟ್ ಕ್ರಾಂತಿಯ ಇಪ್ಪತ್ತೈದನೆಯ ವಾರ್ಷಿಕೋತ್ಸವದಲ್ಲಿ ತಮ್ಮ ಸಾಮಾನ್ಯ ನೀತಿ ಪ್ರತಿಪಾದಿಸುವಾಗ ಸ್ಟಾಲಿನ್ "ಜನಾಂಗ ಬಹಿಷ್ಕಾರ ನಿರ್ಮೂಲನ ರಾಷ್ಟ್ರಗಳ ಮಧ್ಯೆ ಸಮಾನತೆ, ರಾಷ್ಟ್ರಗಳ ಅಸ್ತಿತ್ವ, ರಕ್ಷಣೆ, ದಾಸ್ಯ ರಾಷ್ಟ್ರಗಳ ಬಂಧನ ವಿಮೋಚನೆ ಮತ್ತು ಅವುಗಳಿಗೆ ಪೂರ್ಣ ಸ್ವಾತಂತ್ರ್ಯ ಪ್ರತಿಯೊಂದು ಜನಾಂಗವೂ ತನ್ನ ಇಚ್ಛೆಯಂತೆ ಸ್ವತಂತ್ರ ಜೀವನ ನಡೆಸಲು ಅವಕಾಶ, ನೊಂದ ಜನಾಂಗಗಳಿಗೆ ತಮ್ಮ ಸಾಧನ ಸಂಪತ್ತನ್ನು ಅಭಿವೃದ್ಧಿಗೊಳಿಸಿಕೊಳ್ಳಲು ಸಹಾಯ, ಪ್ರಜಾಸತ್ತಾತ್ಮಕ ಸ್ವಾತಂತ್ರ್ಯಗಳ ಪುನರುತ್ಥಾನ, ಹಿಟ್ಲರನ ಸರ್ವಾಧಿಕಾರ ನಾಶ" ತಮ್ಮ ಧ್ಯೇಯಗಳೆಂದು ಹೇಳಿದ್ದನು.

ನಮ್ಮ ಬೇರೆ ಬೇರೆ ಕಾರ್ಯಕ್ರಮದ ಮೇಲೆ ಜನರ ಪ್ರತಿಕ್ರಿಯೆ ಏನೆ ಇರಲಿ ಚೀಣದ ಜನರ ಸಹಾನುಭೂತಿಯು ಒಟ್ಟಿನಲ್ಲಿ ಭಾರತದ ಸ್ವಾತಂತ್ರ್ಯದ ಪರವಿತ್ತು. ಅದಕ್ಕೆ ಐತಿಹಾಸಿಕ ಕಾರಣವೂ ಇದ್ದುದಲ್ಲದೆ ಭಾರತವು ಸ್ವತಂತ್ರವಾಗದಿದ್ದರೆ ಅದರಿಂದ ಚೀಣದ ಸ್ವಾತಂತ್ರ್ಯಕ್ಕೂ ಅಪಾಯವೆಂದು ಮನಗಂಡಿದ್ದರು. ಚೀಣ ಮಾತ್ರವಲ್ಲದೆ ಏಷ್ಯ, ಈಜಿಪ್ಟ್ ಮತ್ತು ಮಧ್ಯ ಪ್ರಾಚ್ಯದಲ್ಲೆಲ್ಲ ಭಾರತದ ಸ್ವಾತಂತ್ರ್ಯವು ಇತರ ದಾಸ್ಯ ಮತ್ತು ಅಧೀನ ರಾಷ್ಟ್ರಗಳ ವಿಶಾಲ ಸ್ವಾತಂತ್ರ್ಯದ ಸಂಕೇತವಾಯಿತು. ಇಂದಿನ ಸತ್ವ ಪರೀಕ್ಷೆಯಾಗಿ ಮುಂದಿನ ಅಳತೆಕೋಲಾಯಿತು; ವೆಂಡೆಲ್‌ವಿಲ್ಕಿ ತನ್ನ "ಒಂದು ಪ್ರಪಂಚ" (One World) ಎಂಬ ಗ್ರಂಥದಲ್ಲಿ "ಆಫ್ರಿಕಾದಿಂದ ಅಲಾಸ್ಕವರೆಗೆ ನಾನು ಅನೇಕ ಸ್ತ್ರೀ ಪುರುಷರೊಂದಿಗೆ ಮಾತನಾಡಿದ್ದೇನೆ. ಆದರೆ ಏಷ್ಯದಲ್ಲೆಲ್ಲ ಒಂದೇ ದೃಷ್ಟಿ ಇದ್ದಂತೆ ಅವರೆಲ್ಲ ಕೇಳಿದ್ದು ಒಂದೇ ಪ್ರಶ್ನೆ: 'ಭಾರತದ ವಿಷಯವೇನು'

ಎಂದು. . . . ಕೈರೊ ಪಟ್ಟಣ ಬಿಟ್ಟಮೇಲೆ ಎಲ್ಲಿ ತಿರುಗಿದರೂ ಇದೇ ಪ್ರಶ್ನೆ. ಚೀಣದ ವೃದ್ಧನೊಬ್ಬ 'ಭಾರತದ ಸ್ವಾತಂತ್ರ್ಯದ ಆಸೆ ಪೂರೈಸದೆ ಮುಂದೆ ತಳ್ಳಿದ್ದರಿಂದ ದೂರ ಪ್ರಾಚ್ಯದಲ್ಲಿ ತಲೆತಗ್ಗಿಸಬೇಕಾದುದು ಬ್ರಿಟನ್ ಅಲ್ಲ; ಸಂಯುಕ್ತ ಸಂಸ್ಥಾನಗಳು ಎಂದ " ಎಂದು ಹೇಳಿದ್ದಾನೆ.

ಭಾರತದಲ್ಲಿನ ಘಟನೆಗಳಿಂದ ಯುದ್ಧದ ವಿಷಮಸ್ಥಿತಿಯಲ್ಲಿ ಸಹ ಪ್ರಪಂಚವು ಭಾರತದ ಕಡೆನೋಡುವಂತಾಯಿತು. ಪೌರ್ವಾತ್ಯ ದೇಶಗಳ ಮೂಲ ಸಮಸ್ಯೆಯ ಕಡೆ ಗಮನಕೊಡುವುದು ಅವಶ್ಯವಾಯಿತು. ಏಷ್ಯದ ಪ್ರತಿಯೊಂದು ದೇಶದ ಜನತೆಯ ಮನಸ್ಸನ್ನೂ ಹೃದಯವನ್ನೂ ಅವು ಕಲಕಿದ್ದವು. ಬ್ರಿಟಿಷ್ ಸಾಮ್ರಾಜ್ಯದ ಕಪಿಮುಷ್ಟಿಯ ಹಿಡಿತದಲ್ಲಿ ಭಾರತೀಯರು ತಾತ್ಕಾಲಿಕ ದುರ್ಬಲರೆಂದು ಕಂಡರೂ ಭಾರತವು ಸ್ವತಂತ್ರವಾಗುವವರೆಗೆ ಭಾರತದಲ್ಲಿ ಮತ್ತು ಏಷ್ಯದಲ್ಲಿ ಇನ್ನು ಶಾಂತಿ ಇಲ್ಲವೆಂದು ಸ್ಪಷ್ಟವಾಯಿತು.

## ೫. ಭಾರತದಲ್ಲಿ ಪ್ರತಿಕ್ರಿಯೆ

ಒಂದು ನಾಗರಿಕ ಜನಾಂಗವನ್ನು ಪರಕೀಯರು ಆಳುವುದೆಂದರೆ ಅವರಲ್ಲಿ ಅನೇಕ ಅನಾನುಕೂಲತೆಗಳೂ, ಲೋಪಗಳೂ ಇರುವುದು ಅನಿವಾರ್ಯ. ಮುಖ್ಯ ಅನಾನುಕೂಲತೆ ಎಂದರೆ ಸಮಾಜದ ಅಯೋಗ್ಯ ವ್ಯಕ್ತಿಗಳ ಸಹಾಯ ಸದಾ ಅದಕ್ಕೆ ಬೇಕಾಗುತ್ತದೆ. ಉನ್ನತಧ್ಯೇಯ ಉಳ್ಳವರು, ಅಭಿಮಾನಿಗಳು, ಸೂಕ್ಷ್ಮಬುದ್ಧಿಯುಳ್ಳವರು, ಆತ್ಮಗೌರವವುಳ್ಳವರು, ಪರರ ಅಧಿಕಾರಕ್ಕೆ ತಲೆಬಾಗಿ ಅಧೋಗತಿಗಿಳಿಯಲು ಒಪ್ಪದೆ ಸ್ವಾತಂತ್ರ್ಯಕ್ಕೆ ಸ್ವಲ್ಪ ಬೆಲೆಕೊಡುವವರು ಯಾರೇ ಆಗಲಿ ಪರಾಡಳಿತದಿಂದ ದೂರವಿರುತ್ತಾರೆ. ಅಥವ ಅವರೊಂದಿಗೆ ಹೋರಾಡುತ್ತಾರೆ. ಸ್ವತಂತ್ರ ರಾಷ್ಟ್ರಕ್ಕಿಂತ ಅಧೀನ ರಾಷ್ಟ್ರದಲ್ಲಿ ಅಧಿಕಾರಕ್ಕೆ ಆಶೆ ಪಡುವವರ ಮತ್ತು ಸ್ವಾರ್ಥಸಾಧಕರ ಸಂಖ್ಯೆಯೂ ಹೆಚ್ಚು. ರಾಷ್ಟ್ರ ಸ್ವತಂತ್ರವಿದ್ದರೂ ನಿರಂಕುಶಾಧಿಕಾರವಾದರೆ ಅನೇಕ ವಿಚಾರಮತಿಗಳಿಗೆ ಆ ಸರಕಾರದ ಕಾರ್ಯನೀತಿಯಲ್ಲಿ ಸಹಕರಿಸಲು ಕಷ್ಟವಾಗುತ್ತದೆ ಮತ್ತು ಆಧುನಿಕ ನೈಪುಣ್ಯತೆಯ ಅಭಿವೃದ್ಧಿಗೆ ಹೆಚ್ಚು ಅವಕಾಶವು ಇರುವುದಿಲ್ಲ. ಸದಾ ವಿರೋಧಭಾವನೆ ಮತ್ತು ದಮನ ನೀತಿಯ ವಾತಾವರಣದಲ್ಲೇ ಆಡಳಿತವು ಸಾಗಬೇಕಾದ್ದರಿಂದ ಸರ್ವಾಧಿಕಾರದಿಂದಲೇ ಆಳಬೇಕಾದ ಪರಾಡಳಿತದಲ್ಲಿ ಈ ಎಲ್ಲ ಅನನುಕೂಲತೆಗಳೂ ಇವೆ; ಮತ್ತು ಅವು ಹೆಚ್ಚುತ್ತಲೂ ಹೋಗುತ್ತವೆ. ಸರಕಾರ ಮತ್ತು ಜನತೆ ಎರಡಕ್ಕೂ ಭಯವೇ ಪ್ರಧಾನ ಹೇತುವಾಗಿ ಪೋಲೀಸ್ ಮತ್ತು ಗುಪ್ತಚಾರ ದಳದವರೇ ಮುಖ್ಯ ಅಧಿಕಾರಿಗಳಾಗುತ್ತಾರೆ.

ಸರಕಾರಕ್ಕೂ, ಜನತೆಗೂ ಹೋರಾಟ ನಡೆಯುತ್ತಿರುವಾಗ ಜನತೆಯಲ್ಲಿನ ಅಯೋಗ್ಯ ವ್ಯಕ್ತಿಗಳ ಸಹಾಯ ಕೋರಿ ಅವರಿಗೆ ಪ್ರೋತ್ಸಾಹಕೊಡುವುದು ಇನ್ನೂ ಅಧಿಕವಾಗುತ್ತದೆ. ಇನ್ನು ಕೆಲವರು ಆತ್ಮರಕ್ಷಣೆಗಾಗಿ ಅನಿವಾರ್ಯಸಂದರ್ಭದಿಂದ ಇಷ್ಟವಿರಲಿ, ಇಲ್ಲದಿರಲಿ ಸರ್ಕಾರದ ಯಂತ್ರದಲ್ಲಿ ಸಿಕ್ಕಿಬಿದ್ದು ಕೆಲಸಮಾಡಬೇಕಾಗುತ್ತದೆ. ಆದರೆ ಉನ್ನತ ಸ್ಥಾನಗಳಲ್ಲಿ ನಿಂತು ಪ್ರಮುಖ ಪಾತ್ರ ನಿರ್ವಹಿಸಬೇಕಾದ ವ್ಯಕ್ತಿಗಳನ್ನು ಅವರ ರಾಷ್ಟ್ರಘಾತಕಭಾವನೆ, ದಾಸ್ಯಮನೋಭಾವ, ಮತ್ತು ಸ್ವಜನರನ್ನು ಅದುಮಿ ಅಗೌರವ ಪಡಿಸಲು ಅವರಿಗೆ ಇರುವ ಶಕ್ತಿ, ಮುಂತಾದ ರಾಷ್ಟ್ರಘಾತಕ ಸ್ವಭಾವ ಗಮನಿಸಿ ಆರಿಸಬೇಕಾಗುತ್ತದೆ. ಅನೇಕ ಸಂದರ್ಭಗಳಲ್ಲಿ ವೈಯಕ್ತಿಕ ಸ್ಪರ್ಧೆಯ ಪರಿಣಾಮವಾಗಿಯೋ ಅಥವ ನಿರಾಶೆಯಿಂದಲೋ ಜನತೆಯ ಬಹುಮತದ ಆಸೆ ಆಕಾಂಕ್ಷೆಗಳಿಗೆ ಪ್ರತಿಯಾಗಿ ಆ ವ್ಯಕ್ತಿಗಳಲ್ಲಿ ಹುಟ್ಟಿದ ವಿರೋಧವೇ ಅವರ ಅತ್ಯಂತ ಶ್ರೇಷ್ಠ ಯೋಗ್ಯತೆಯಾಗುತ್ತದೆ. ಈ ಹೊಲಸಿನ ಅಹಿತವಾತಾವರಣದಲ್ಲಿ ಯಾವ ಉದಾತ್ತ ಧ್ಯೇಯ ಅಥವ ಉನ್ನತಭಾವನೆಗೂ ಅವಕಾಶವಿರುವುದಿಲ್ಲ; ಉನ್ನತ ಅಧಿಕಾರ ಮತ್ತು ಭಾರಿಸಂಬಳದ ಆಸೆ ಇವೆ ಸರಕಾರ ತೋರಿಸುವ ಗಾಳವಾಗುತ್ತವೆ. ಸರಕಾರಕ್ಕೆ ಬೆಂಬಲವಾಗಿ ನಿಂತ ಅವರ ಅಯೋಗ್ಯತೆ, ಲೋಪದೋಷಗಳಿಗೆಲ್ಲ ಸರಕಾರವು ಕಣ್ಣುಮುಚ್ಚಿಕೊಳ್ಳಬೇಕಾಗುತ್ತದೆ; ಏಕೆಂದರೆ, ಸರಕಾರದ ವಿರುದ್ಧ ವ್ಯಕ್ತಿಗಳನ್ನು ತುಳಿಯುವದರಲ್ಲಿ ಮಾಡಿದ ಪ್ರತ್ಯಕ್ಷ ಸಹಾಯವೇ ಮುಖ್ಯ ಯೋಗ್ಯತೆಯಾಗುತ್ತದೆ. ಇದರಿಂದ ಎಂದೂ ಹತ್ತಿರ ಸೇರಿಸದ ವಿಚಿತ್ರ ಪಂಗಡಗಳನ್ನು ಮತ್ತು ಜನರನ್ನು ಓಲಿಸಿ

ಕೊಳ್ಳಲೆತ್ನಿಸುವುದು ಸರಕಾರಕ್ಕೆ ಅವಶ್ಯವಾಗುತ್ತದೆ. ಲಂಚ, ದುರ್ವರ್ತನೆ, ಅಕ್ಷಮ್ಯ ಅಲಕ್ಷೆ, ಮತ್ತು ಸಾರ್ವಜನಿಕ ಹಿತದ ಕೊಲೆ ಹೆಚ್ಚಿ ದೇಶದ ವಾತಾವರಣವೇ ವಿಷಪೂರಿತವಾಗುತ್ತದೆ.*

ಸರಕಾರದ ಆಚರಣೆಯಿಂದ ಬೇಕಾದಷ್ಟು ಅಸಮಾಧಾನವಾಗಿದ್ದರೂ, ರಾಜನಿಗಿಂತ ರಾಜನಿಷ್ಠರೆಂದು ತೋರಿಸಿಕೊಳ್ಳುವ ಭಾರತೀಯ ಹಿಮ್ಮೇಳದವರು ಜನರ ಅಸಮಾಧಾನಕ್ಕೆ ಇನ್ನೂ ಹೆಚ್ಚು ಕಾರಣರಾಗಿದ್ದಾರೆ. ಇವರನ್ನು ನೋಡಿ ಸಾಮಾನ್ಯ ಭಾರತೀಯನ ರಕ್ತವು ಕುದಿಯುತ್ತದೆ, ಕರುಳು ಕಿವಿಚುವಂತಾಗುತ್ತದೆ. ಜರ್ಮನ್ ಅಥವ ಜಪಾನರು ಏರ್ಪಡಿಸಿರುವ ಕೈಗೊಂಬೆ ಸರಕಾರಗಳಿಗೆ, ವೀಚಿಯ ಮಹಾನುಭಾವರಿಗೂ ಅವರನ್ನು ಹೋಲಿಸುತ್ತಾರೆ. ಈ ಭಾವನೆಯು ಕಾಂಗ್ರೆಸ್‌ನವರಲ್ಲಿ ಮಾತ್ರವಲ್ಲದೆ ಮುಸ್ಲಿಂ ಲೀಗ್ ಮತ್ತು ಇತರ ಸಂಸ್ಥೆಗಳ ಸದಸ್ಯರಲ್ಲಿ ಮತ್ತು ನಮ್ಮ ರಾಜಕಾರಣಿಗಳಲ್ಲಿ ಕೇವಲ ಮಂದ ಪಕ್ಷದವರು ಎನ್ನುವವರಲ್ಲಿ ಸಹ ಬೆಳೆದಿದೆ.

ಸರಕಾರದ ಕ್ರೂರ ರಾಷ್ಟ್ರಘಾತಕ ಕಾರ್ಯಗಳಿಗೆ ಯುದ್ಧವು ಒಂದು ನೆಪವೂ, ಮರೆಯೂ ಆಯಿತು. ವಿಚಿತ್ರ ಬಗೆಯ ಪ್ರಚಾರ ಕಾರ್ಯ ಕೈಗೊಂಡರು. ಶ್ರಮಜೀವಿಗಳ ನೀತಿಯ ಮಟ್ಟ ಹೆಚ್ಚಿಸುವ ನೆಪದಿಂದ ನಾಯಿಕೊಡೆಗಳಂತೆ ಕಾಮುಗಾರ ಸಂಘಗಳನ್ನು ಏರ್ಪಡಿಸಿದರು. ಗಾಂಧಿ ಮತ್ತು ಕಾಂಗ್ರೆಸ್ಸನ್ನು ದೂಷಿಸಲು, ಕಾಗದದ ಮುಗ್ಗಟ್ಟು ಎಷ್ಟೇ ಇದ್ದರೂ, ಕಾಗದ ಒದಗಿಸಿ, ದುಡ್ಡು ಕೊಟ್ಟು, ಹೊಸ ವರ್ತಮಾನ ಪತ್ರಿಕೆಗಳನ್ನು ಸ್ಥಾಪಿಸಿದರು. ಯುದ್ಧ ಪ್ರಯತ್ನ ಮುಂದುವರಿಸುವುದಕ್ಕೆಂದು ಸರಕಾರದ ಪರವಾಗಿ ಸತತ ಪ್ರಚಾರ ನಡೆಸಲು ವಿದೇಶಗಳಲ್ಲಿ ವಾರ್ತಾ ಕೇಂದ್ರಗಳನ್ನು ಸ್ಥಾಪಿಸಿದರು. ಅನಾಮಧೇಯ ವ್ಯಕ್ತಿಗಳ ನೇಕರನ್ನು ತಂಡ ತಂಡವಾಗಿ ಸರಕಾರದ ನಿಯೋಗ ಮಂಡಲಿಗಳಲ್ಲಿ ಸೇರಿಸಿ, ಕೇಂದ್ರ ಶಾಸನ ಸಭೆಯ ಪ್ರತಿಭಟನೆ ಸಹ ಅಲಕ್ಷಿಸಿ ಮುಖ್ಯವಾಗಿ ಅಮೆರಿಕೆಯ ಸಂಯುಕ್ತ ಸಂಸ್ಥಾನಗಳಿಗೆ ಬ್ರಿಟಿಷ್ ಸರಕಾರದ ಪರ ಪ್ರಚಾರ ಮಾಡಲು ಹೊಗಳು ಭಟ್ಟರನ್ನು ಕಳುಹಿಸಿದರು. ಸ್ವತಂತ್ರ ಅಭಿಪ್ರಾಯದ ಅಥವ ಸರಕಾರವನ್ನು ಟೀಕೆ ಮಾಡುವ ಯಾರಿಗೂ ಈ ವಿದೇಶ ಸಂಚಾರಕ್ಕೆ ಅವಕಾಶವಿರಲಿಲ್ಲ. ಅಂಥವರ ಪ್ರಯಾಣಕ್ಕೆ ರಹದಾರಿಯಾಗಲಿ ಪ್ರಯಾಣ ಸೌಕರ್ಯ ಆಗಲಿ ದೊರೆಯುತ್ತಿರಲಿಲ್ಲ.

---

* ಸರ್ ಆರ್ಕಿಬಾಲ್ಡ್ ರೌಲೆಂಡ್ಸ್ ಅಧ್ಯಕ್ಷತೆಯಲ್ಲಿ ಸೇರಿದ ಬಂಗಾಲ ಆಡಳಿತವಿಚಾರಣಾ ಸಮಿತಿಯು ೧೯೪೫ನೇ ಮೇ ತಿಂಗಳಲ್ಲಿ ಪ್ರಕಟಿಸಿದ ತಮ್ಮ ವರದಿಯಲ್ಲಿ "ಲಂಚಕೋರತನವೂ, ಅದರ ನಿರ್ಮೂಲ ಅಸಾಧ್ಯವೆಂಬ ನಿಸ್ಸಹಾಯಕ ಮನೋಭಾವವೂ ಅತಿಯಾಗಿ ಹಬ್ಬಿಬೆಳೆದಿದೆ. ಸಾರ್ವಜನಿಕರ ಆಡಳಿತವರ್ಗವನ್ನೂ ಮತ್ತು ಅವರ ನೀತಿಮಟ್ಟವನ್ನೂ ಅಧೋಗತಿಗೆ ತಳ್ಳಿರುವ ಈ ಹೆಮ್ಮಾರಿಯನ್ನು ನಿರ್ಮೂಲಮಾಡಲು ಅತ್ಯಂತ ಕ್ರೂರ ಕಾರ್ಯಕ್ರಮ ತೆಗೆದುಕೊಳ್ಳಬೇಕು. ಸಾರ್ವಜನಿಕರ ವಿಷಯದಲ್ಲಿ ಕೆಲವು ಅಧಿಕಾರಿಗಳ ವರ್ತನೆಯು ಅಕ್ಷಮ್ಯವಾಗಿದೆಯೆಂದು ಸಮಿತಿಯ ಮುಂದೆ ಸಾಕ್ಷ್ಯ ಬಂದಿರುವುದು ಸಮಿತಿಗೆ ಆಶ್ಚರ್ಯವನ್ನೂ, ಖೇದವನ್ನೂ ಉಂಟುಮಾಡಿದೆ. "ತಮ್ಮ ಹಿತಕ್ಕಿಂತ ನಿರ್ಜೀವ ಆಡಳಿತಯಂತ್ರ ನಡೆಸುವುದರಲ್ಲಿ ಹೆಚ್ಚು ಆಸಕ್ತಿ ತೋರಿಸುತ್ತಾರೆಂದೂ, ಜನರ ಸೇವಕರೆಂದು ಭಾವಿಸುವುದರ ಬದಲು ಅವರಮೇಲೆ ಅಧಿಕಾರ ನಡೆಸುವವರೆಂಬ ಭಾವನೆಯುಳ್ಳವರಾಗಿದ್ದಾರೆಂದೂ ಸಾಕ್ಷ್ಯ ದೊರೆತಿದೆ" ಎಂದು ಹೇಳಿದ್ದಾರೆ.

1. ಇತರರನ್ನು ತನ್ನ ಅಧೀನ ಮಾಡಿಕೊಳ್ಳುವದರಲ್ಲಿ ಅದ್ವಿತೀಯನಾದ ಹಿಟ್ಲರ್ ತನ್ನ "ಮೈನ್‌ಕ್ಯಾಂಫ್" ಎಂಬ ಗ್ರಂಥದಲ್ಲಿ "ದಾಸ್ಯಕೂಪದಲ್ಲಿನ ಈ ಅನೀತಿಯ ಅಪರಾವತಾರಗಳಿಗೆ ಇದ್ದಕ್ಕಿದ್ದಂತೆ ಪಶ್ಚಾತ್ತಾಪ ಬರಬಹುದೆಂದು ನಾವು ಭಯಪಡಬೇಕಾಗಿಲ್ಲ. ಮಾನವನ ಎಲ್ಲ ಅನುಭವವನ್ನೂ ಮತ್ತು ಈ ಪತಿತರ ಬುದ್ಧಿ ಶಕ್ತಿಯನ್ನೂ ಗಮನಿಸಿದರೆ ಬೇರೆ ಮಾರ್ಗ ಹಿಡಿಯಲು ಅವರಿಗೆ ಸಾಧ್ಯವೇ ಇಲ್ಲ. ಅದಕ್ಕೆ ಪ್ರತಿಯಾಗಿ ಅಂತಹ ಎಲ್ಲ ಅವಕಾಶದಿಂದ ತಾವೇ ದೂರವಿರುತ್ತಾರೆ. ಅದು ಎಲ್ಲಿಯವರೆಗೆ ಎಂದರೆ ಇಡೀ ರಾಷ್ಟ್ರವೇ ದಾಸ್ಯದ ಹೊರೆಯನ್ನು ಒಪ್ಪಿಕೊಳ್ಳುವವರೆಗೆ ಅಥವ ಬೇರೆ ಉತ್ತಮ ಜನರು ಬಂದು ಇವರನ್ನು ಓಡಿಸುವವರೆಗೆ. ಮೊದಲನೆಯದಾದರೆ ಇವರು ಸುಖವಾಗಿಯೇ ಇರುತ್ತಾರೆ. ಏಕೆಂದರೆ ಗುಲಾಮರ ಮೇಲ್ವಿಚಾರಣೆ ಎಲ್ಲ ಇವರ ಕೈಯಲ್ಲಿ. ಶತ್ರುವು ನೇಮಿಸುವ ಅಧಿಕಾರಿಗಿಂತ ಈ ಕೆಲಸದಲ್ಲಿ ಈ ನೀತಿ ಬಾಹಿರರು ಹೆಚ್ಚು ಕಠಿಣ ಹೃದಯರಾಗಿ ತಮ್ಮ ರಾಷ್ಟ್ರದ ಮೇಲೆ ಹೆಚ್ಚಿನ ದರ್ಪದಿಂದ ಆಳುತ್ತಾರೆ." ಎಂದು ಹೇಳಿದ್ದಾನೆ.

ಕಳೆದ ಎರಡು ವರ್ಷಗಳಲ್ಲಿ ಸಾರ್ವಜನಿಕ ಶಾಂತಿ ರಕ್ಷಣೆಗೆಂದು ಸರ್ಕಾರವು ಈ ಎಲ್ಲ ಮತ್ತು ಇನ್ನೂ ಅನೇಕ ಉಪಾಯಗಳನ್ನು ಅನುಸರಿಸಿದೆ. ಸೈನ್ಯದ ಅಧೀನ ಮತ್ತು ಆಡಳಿತಕ್ಕೆ ಒಳಪಟ್ಟ ದೇಶದಲ್ಲಿ ಎಲ್ಲ ರಾಜಕೀಯ ಮತ್ತು ಸಾರ್ವಜನಿಕ ಜೀವನವೂ ಉಡುಗಿ ಹೋಗುತ್ತದೆ; ಆದರೆ ಈ ಬಲಾತ್ಕಾರದ ದಬ್ಬಾಳಿಕೆಯಿಂದ ಹೋಗದ ಚಿಹ್ನೆ ನಾಶವಾಗುವ ಬದಲು ಪ್ರಬಲಿಸುತ್ತದೆ; ಅಲ್ಲದೆ ಭಾರತವೂ ಬಹಳ ರೋಗಗ್ರಸ್ತವಾಗಿದೆ. ಸರಕಾರದೊಂದಿಗೆ ಸದಾ ಸಹಕಾರನೀಡಿದ ಪ್ರಮುಖ ಭಾರತೀಯ ಸಂಪ್ರದಾಯ ಶರಣರು ಸಹ ತಾತ್ಕಾಲಿಕ ಬಾಯಿಕಟ್ಟಿದ ಅಗ್ನಿಪರ್ವತವು ಪುನಃ ಯಾವಾಗ ಸಿಡಿಯುವುದೋ ಎಂದು ಭಯಗೊಂಡಿದ್ದಾರೆ. ಬ್ರಿಟಿಷ್ ಸರಕಾರದ ಮೇಲೆ ಇಷ್ಟು ಕಹಿ ಮನಸ್ಸು ಬೇರೆ ಯಾವಾಗಲೂ ಇರಲಿಲ್ಲವೆಂದು ತಿಳಿಸಿದ್ದಾರೆ.

ಈ ಎರಡು ವರ್ಷಗಳಲ್ಲಿ ನಮ್ಮ ಜನರು ಹೇಗೆ ಬದಲಾಯಿಸಿದ್ದಾರೆ, ಅವರ ಭಾವನೆಗಳೇನು ಎಂಬುದು ಅವರ ಸಂಪರ್ಕ ದೊರೆಯುವವರೆಗೆ ನನಗೆ ತಿಳಿಯುವಂತೆ ಇಲ್ಲ; ನಾನು ಹೇಳಲಾರೆ. ಆದರೆ ಈಚಿನ ಅನುಭವಗಳು ಅವರ ಮೇಲೂ ಅನೇಕ ರೀತಿ ಮಹತ್ಪರಿಣಾಮ ಮಾಡಿರಬೇಕು. ನಾನು ನನ್ನ ಮನಸ್ಸಿನಲ್ಲೇ ಚರ್ವಿತಚರ್ವಣ ಮಾಡಿಕೊಂಡಿದ್ದೇನೆ. ಈ ಎಲ್ಲ ಘಟನೆಗಳಿಗೆ ನನ್ನ ಸ್ವಾಭಾವಿಕ ಪ್ರತಿಕ್ರಿಯೆ ಏನೆಂದು ಯೋಚಿಸಿದ್ದೇನೆ. ಇಂಗ್ಲೆಂಡಿನಲ್ಲಿ ಅನೇಕ ಸ್ನೇಹಿತರಿದ್ದು ಅನೇಕ ಹಳೆಯ ನೆನಪುಗಳು ನನ್ನ ಮನಸ್ಸನ್ನು ಸೆಳೆಯುತ್ತಿರುವುದರಿಂದ ಇಂಗ್ಲೆಂಡಿಗೆ ಭೇಟಿ ಕೊಡಲು ಯೋಚಿಸಿದ್ದೆ. ಆದರೆ ಈಗ ಆ ಆಸೆಯೇ ಇಲ್ಲ, ಯೋಚಿಸಲು ಸಹ ಮನಸ್ಸು ಬರುವುದಿಲ್ಲ. ಇಂಗ್ಲೆಂಡಿನಿಂದ ಎಷ್ಟು ದೂರ ಇದ್ದರೆ ಅಷ್ಟು ಒಳ್ಳೆಯದೆಂದು ತೋರುತ್ತದೆ. ಇಂಗ್ಲೀಷ್ ಜನರೊಂದಿಗೆ ಭಾರತದ ಸಮಸ್ಯೆ ಚರ್ಚಿಸಲೂ ಇಷ್ಟವಿಲ್ಲ. ಆಮೇಲೆ ಕೆಲವು ಸ್ನೇಹಿತರನ್ನು ನೆನಸಿಕೊಂಡಾಗ ಮನಸ್ಸು ಸ್ವಲ್ಪ ಮೃದುವಾಯಿತು. ಇಡೀ ಜನಾಂಗವನ್ನೇ ಈ ರೀತಿ ನಿಂದಿಸುವುದು ಎಂತಹ ಮಹಾಪರಾಧ ಎಂದುಕೊಂಡೆ. ಈ ಯುದ್ಧದಲ್ಲಿ ಇಂಗ್ಲೀಷ್ ಜನರು ಅನುಭವಿಸಿದ ಭಯಂಕರ ಸಂಕಟ, ನಿತ್ಯದ ಗೋಳಿನಬಾಳು, ಅನೇಕ ಪ್ರಿಯ ಬಂಧುಗಳ ಸಾವುನೋವು, ಇವುಗಳನ್ನೆಲ್ಲ ಜ್ಞಾಪಿಸಿಕೊಂಡೆ. ಇದರಿಂದ ನನ್ನ ಮನಸ್ಸಿನ ಕಹಿ ಸ್ವಲ್ಪ ಕಡಮೆಯಾಯಿತು. ಆದರೂ ಮೂಲ ಪ್ರತಿಕ್ರಿಯೆ ಮಾಯಲಿಲ್ಲ. ಪ್ರಾಯಶಃ ಕಾಲಗತಿಯಿಂದ ಭವಿಷ್ಯವು ಸರಿಯಾದಂತೆ ಅದು ಮಾಯವಾಗಿ ಬೇರೊಂದು ದೃಷ್ಟಿಬರಬಹುದು. ಆದರೆ ಇಂಗ್ಲೆಂಡಿನಲ್ಲಿ, ಇಂಗ್ಲಿಷ್ ಜನರಲ್ಲಿ ಇಷ್ಟು ಸಮೀಪ ಬಾಂಧವ್ಯವಿದ್ದ ನನ್ನ ಭಾವನೆಯೇ ಈ ರೀತಿಯಾದಮೇಲೆ ಅದಾವುದೂ ಇಲ್ಲದ ಇತರ ಭಾರತೀಯರ ಮನಸ್ಸು ಹೇಗಿರಬೇಕು ?

## ೬. ಭಾರತದ ರೋಗ: ಕ್ಷಾಮ

ಭಾರತದ ಮನಸ್ಸು ಮತ್ತು ದೇಹ ಎರಡೂ ರೋಗಗ್ರಸ್ತವಾದವು. ಯುದ್ಧ ಸಮಯದಲ್ಲಿ ಕೆಲವರು ಅಪಾರ ಧನ ಸಂಪಾದಿಸಿದ್ದರೂ ಉಳಿದವರ ಮೇಲೆ ಅಸಹನೀಯ ಹೊರೆ ಬಿದ್ದು ಅವರ ಬೆನ್ನು ಮೂಳೆ ಮುರಿದಿತ್ತು. ಅದರ ನೆನಪಿಗೋ ಎಂಬಂತೆ ಬಂಗಾಲಿ, ಪೂರ್ವ ಮತ್ತು ದಕ್ಷಿಣ ಭಾರತಗಳಲ್ಲಿ ಭಯಂಕರ ಕ್ಷಾಮ ಹರಡಿತು. ಬ್ರಿಟಿಷರ ೧೭೦ ವರ್ಷಗಳ ಆಡಳಿತದಲ್ಲಿ ಇಷ್ಟು ಭೀಕರ ಕ್ಷಾಮ ಯಾವಾಗಲೂ ಒದಗಲಿಲ್ಲ. ಅವರ ಆಡಳಿತದ ಆರಂಭದಲ್ಲಿ ೧೭೭೬ ರಿಂದ ೧೭೮೦ ರ ವರೆಗೆ ಬಂಗಾಲಿ ಮತ್ತು ಬೀಹಾರದಲ್ಲಿ ಒದಗಿದ ಕ್ಷಾಮಕ್ಕೆ ಮಾತ್ರ ಹೋಲಿಸಬಹುದಿತ್ತು. ಅದರ ಹಿಂದೆಯೇ ಕಾಲರಾ ಮತ್ತು ಮಲೇರಿಯಾ ಸಾಂಕ್ರಾಮಿಕ ಜಾಡ್ಯಗಳು ಹುಟ್ಟಿ, ಇತರ ಪ್ರಾಂತಗಳಿಗೂ ಹರಡಿ ಈಗಲೂ ಸಹಸ್ರಗಟ್ಟಲೆ ಜನರು ಸಾಯುತ್ತಿದಾರೆ. ಕ್ಷಾಮಡಾಮರಗಳಿಂದ ಕೋಟ್ಯಂತರ ಜನರು ಸತ್ತಿದ್ದರೂ ಇನ್ನೂ ಆ ಮಹಾಮಾರಿಯ ಉಪದ್ರವ ತಪ್ಪಿಲ್ಲ; ಜನರು ಸಾಯುತ್ತಲೇ ಇದ್ದಾರೆ.*

* ೧೯೪೩–೪೪ ರ ಬಂಗಾಳ ಕ್ಷಾಮದಲ್ಲಿ ಮಡಿದ ಜನರ ಅಂದಾಜುಗಳನ್ನು ವಿವಿಧ ಜನರು ವಿವಿಧ ರೀತಿ ಹೇಳು

ಮೇಲಿನ ಅತ್ಯಲ್ಪ ಜನರ ಒಣ ಅಟ್ಟಹಾಸದ ಶ್ರೀಮಂತಿಕೆಯನ್ನು ಬಿಟ್ಟರೆ ಬ್ರಿಟಿಷರ ಆಳ್ವಿಕೆಯ ಆರಂಭವಾಗಿ ಅನೇಕ ಪೀಳಿಗೆಗಳಾದರೂ ದೇಶದಲ್ಲಿ ಬೇರೂರಿರುವುದು ಭೀಕರ ಬಡತನ ಮತ್ತು ಮಾನವೀಯತೆಯ ಶೋಷಣೆ ಎಂಬ ಭಯಂಕರ ಚಿತ್ರ ಈ ಕ್ಷಾಮದಿಂದ ಸ್ಪಷ್ಟವಾಯಿತು. ಭಾರತದಲ್ಲಿ ಬ್ರಿಟಿಷರು ಆಳಿ ಸಾಧಿಸಿದ ಕೀರ್ತಿ ಕಲಶ ಮತ್ತು ಪರಿಪೂರ್ಣತೆ ಎಂದರೆ ಇದೇ. ಈ ಕ್ಷಾಮ ಒದಗಿದ್ದು ಪ್ರಕೃತಿಯ ವಿಕೋಪ ಅಥವ ಪ್ರಕೃತಿ ಶಕ್ತಿಗಳ ಭೀಕರ ಪ್ರಳಯನೃತ್ಯದಿಂದ ಅಲ್ಲ; ಯುದ್ಧಾಚರಣೆ ಅಥವ ಶತ್ರುಗಳ ಮುತ್ತಿಗೆಯಿಂದಲೂ ಅಲ್ಲ. ಸ್ವಲ್ಪ ಮುಂದಾಲೋಚನೆಯಿಂದ ಉಚಿತ ಕಾರ್ಯಕ್ರಮ ತೆಗೆದುಕೊಂಡಿದ್ದರೆ ನಿವಾರಣೆಯು ಸಾಧ್ಯವಿತ್ತೆಂದು ಎಲ್ಲರೂ ಒಪ್ಪುತ್ತಾರೆ. ಸಂಬಂಧಪಟ್ಟ ಅಧಿಕಾರಿಗಳು ಅಕ್ಷಮ್ಯ ರೀತಿಯಲ್ಲಿ ಅಲಕ್ಷ್ಯಮಾಡಿದರೆಂದೂ, ದಕ್ಷತೆಯಿಂದ ವರ್ತಿಸಲಿಲ್ಲವೆಂದೂ, ಮಾನಸಿಕರಿದ್ದರೆಂದೂ ಎಲ್ಲರೂ ಒಪ್ಪಿದ್ದಾರೆ. ರಸ್ತೆಗಳಲ್ಲಿ ಸಹಸ್ರಗಟ್ಟಲೆ ಜನರು ಸಾಯುವವರೆಗೆ ಕೊನೆಯವರೆಗೂ ಕ್ಷಾಮವಿದೆ ಎಂದು ಒಪ್ಪಲಿಲ್ಲ; ಕ್ಷಾಮದ ವಿಷಯ ಬಂದ ಸುದ್ದಿ ಯಾವುದನ್ನೂ ವರ್ತಮಾನ ಪತ್ರಿಕೆಗಳಲ್ಲಿ ಪ್ರಕಟಿಸಲಾಗದೆಂದು ಸರಕಾರ ನಿರೋಧಿಸಿತು. ಕಲ್ಕತ್ತನಗರದ ಬೀದಿಗಳಲ್ಲಿ ಹಸಿವಿನಿಂದ ಸಾಯುತ್ತಿದ್ದ ಹೆಂಗಸರು ಮಕ್ಕಳ ಭೀಕರ ದಾರುಣ ಚಿತ್ರಗಳನ್ನು ಕಲ್ಕತ್ತನಗರದ "ಸ್ಟೇಟ್ಸ್‌ಮನ್" ಪತ್ರಿಕೆಯು ಪ್ರಕಟಿಸಿದಾಗ ಇಂಡಿಯಾ ಸರಕಾರದ ಅಧಿಕಾರಿಯು ಕೇಂದ್ರಶಾಸನ ಸಭೆಯಲ್ಲಿ ಮಾತನಾಡುತ್ತ 'ಪರಿಸ್ಥಿತಿಯನ್ನು ಆ ರೀತಿ ನಾಟಕೀಯವಾಗಿ ಮಾಡಿದ್ದಕ್ಕೆ ಪ್ರತಿಭಟಿಸಿದನು. ಭಾರತದಲ್ಲಿ ಆ ರೀತಿ ಹಸಿವಿನಿಂದ ಸಾವಿರಗಟ್ಟಲೆ ಜನ ಸಾಯುವುದು ಆತನಿಗೆ ನಿತ್ಯದ ಸಾಮಾನ್ಯ ವಿಷಯವಾಗಿತ್ತು. ಲಂಡನ್‌ನಲ್ಲಿ ಇಂಡಿಯಾ ಕಛೇರಿಯ ಕಾರ್ಯದರ್ಶಿ ಅಮೆರಿ ತನ್ನ ಹೇಳಿಕೆಗಳಿಂದ ಎಲ್ಲವನ್ನೂ ನಿರಾಕರಿಸಿ ಪ್ರಖ್ಯಾತನಾದನು. ಆದರೆ ದೇಶಾದ್ಯಂತ ಪ್ರಳಯ ತಾಂಡವವಾಡುತ್ತಿದ್ದ ಭಯಂಕರ ಕ್ಷಾಮ ಪರಿಸ್ಥಿತಿ ಮುಚ್ಚಿಡಲು ಅಸಾಧ್ಯವೆಂದಾಗ ಅಧಿಕಾರಿಗಳ ಒಂದು ಗುಂಪು ಇನ್ನೊಂದು ಗುಂಪನ್ನು ನಿಂದಿಸಲಾರಂಭಿಸಿತು. ಇಂಡಿಯಾ ಸರಕಾರ ಪ್ರಾಂತ ಸರಕಾರದ ಮೇಲೆ ತಪ್ಪನ್ನು ಹೊರಿಸಿತು. ಪ್ರಾಂತ ಸರಕಾರವೇ ಗೌರ್ನರ್ ಮತ್ತು ಸಿವಿಲ್ ಸರ್ವಿಸ್ ಅಧಿಕಾರಿಗಳ ಆಡಳಿತದಲ್ಲಿ ಕೇಂದ್ರ ಸರಕಾರದ ಕೈಗೊಂಬೆಯಾಗಿತ್ತು. ಎಲ್ಲರೂ ನಿಂದಾರ್ಹರೆ; ಆದರೆ ಭಾರತದಲ್ಲಿ ಎಲ್ಲಿ ಏನಾದರೂ ಮಾಡಬಲ್ಲ ಒಬ್ಬ ವ್ಯಕ್ತಿ ವೈಸ್‌ರಾಯ್. ಕೈಯಲ್ಲಿ ಕೇಂದ್ರೀಕೃತವಾಗಿದ್ದ ಸರ್ವಾಧಿಕಾರಿ ಸರಕಾರವು ಇದೆಲ್ಲದರ ಜವಾಬ್ದಾರಿ ಹೊರಬೇಕಾಗುತ್ತದೆ. ಪ್ರಜಾಸತ್ತಾತ್ಮಕ ಅಥವ ಅರೆಬರೆ ಪ್ರಜಾಸತ್ತಾತ್ಮಕವಿದ್ದ ರಾಷ್ಟ್ರದಲ್ಲಿ ಏನಾದರೂ ಇಂತಹ ವಿಪತ್ತು ಒದಗಿದ್ದರೆ ಆ ಎಲ್ಲ ಸರಕಾರಗಳೂ ಉರುಳಿ ಮಣ್ಣು ಮುಕ್ಕುತ್ತಿದ್ದವು. ಆದರೆ ಭಾರತದಲ್ಲಿ ಆ ಅವಕಾಶ ಯಾವುದೂ ಇಲ್ಲದೆ ಎಲ್ಲವೂ ಮೊದಲಿನಂತೆಯೇ ನಡೆಯುತ್ತಿತ್ತು.

ಯುದ್ಧದ ದೃಷ್ಟಿಯಿಂದ ಸಹ ಈ ಕ್ಷಾಮ ಒದಗಿದ್ದು ಯುದ್ಧರಂಗಕ್ಕೆ ಅತಿ ಸಮೀಪವಿದ್ದ ಮತ್ತು ಎಂದಾದರೂ ಯುದ್ಧರಂಗವಾಗಬಹುದಾದ ಪ್ರಾಂತದಲ್ಲಿಯೇ ಇತ್ತು. ದೇಶಾದ್ಯಂತ ಕ್ಷಾಮ ಹರಡಿ,ಆರ್ಥಿಕ

---

ತ್ತಾರೆ. ಕಲ್ಕತ್ತ ವಿಶ್ವವಿದ್ಯಾನಿಲಯ ಮಾನವಶಾಸ್ತ್ರ ಶಾಖೆಯ ನಿಪುಣರು ಕ್ಷಾಮಪೀಡಿತ ಸ್ಥಳಗಳ ಜನರಲ್ಲಿ ವೈಜ್ಞಾನಿಕ ರೀತಿಯಿಂದ ಕೆಲವು ಮಾದರಿ ಅಂಕಿಗಳನ್ನು ಸಂಗ್ರಹ ಮಾಡಿದರು. ಅವರ ಪ್ರಕಾರ ಬಂಗಾಲ ಕ್ಷಾಮದಲ್ಲಿ ೩೪ ಲಕ್ಷ ಜನ ಮಡಿದಿರಬೇಕೆಂದು ತಿಳಿದುಬಂದಿದೆ. ಅದೂ ಅಲ್ಲದೆ ೧೯೪೩ ಮತ್ತು ೪೪ ರಲ್ಲಿ ಬಂಗಾಲದಲ್ಲಿ ಶೇಕಡ ೪೬ ಜನರು ಸಾಂಕ್ರಾಮಿಕ ಜಾಡ್ಯಗಳಿಂದ ನರಳುತ್ತಿದ್ದರೆಂದು ತಿಳಿದು ಬಂದಿದೆ. ಗ್ರಾಮಗಳ ಸರಕಾರಿ ಪಟೇಲರು ಮತ್ತು ಶಾನುಭೋಗರಿಂದ ಬಂದ ವರದಿಯಂತೆ ಬಂಗಾಲ ಸರಕಾರ ಕೊಟ್ಟ ಸಂಖ್ಯೆಯು ಬಹಳ ಕಡಮೆ ಇತ್ತು. ಸರ್ ಜಾನ್‌ವುಡ್ ಹೆಡ್‌ರ ಅಧ್ಯಕ್ಷತೆಯಲ್ಲಿ ಸರಕಾರವೇ ಏರ್ಪಡಿಸಿದ್ದ ಕ್ಷಾಮ ವಿಚಾರಣಾ ಸಮಿತಿಯ ವರದಿಯಂತೆ ಬಂಗಾಲದ ಕ್ಷಾಮ ಮತ್ತು ಅನಂತರ ಬಂದ ಸಾಂಕ್ರಾಮಿಕ ರೋಗಗಳಿಂದ ೧೫ ಲಕ್ಷ ಜನ ಸತ್ತರೆಂದು ಗೊತ್ತಾಗುತ್ತದೆ. ಈ ಎಲ್ಲ ಅಂದಾಜು ಬಂಗಾಲ ಒಂದಕ್ಕೆ ಮಾತ್ರ. ದೇಶದ ಇತರ ಭಾಗಗಳಲ್ಲಿ ಅನೇಕ ಕಡೆಗಳಲ್ಲಿ ಸಹ ಕ್ಷಾಮ ಮತ್ತು ರೋಗಗಳಿಂದ ಅನೇಕ ಜನರು ನೊಂದರು.

ರಚನೆ ಕುಸಿದು ಬಿದ್ದರೆ ಸಂರಕ್ಷಣಾ ಶಕ್ತಿಯೇ ನಾಶವಾಗುತ್ತದೆ; ಶತ್ರುವನ್ನು ಎದುರಿಸುವುದಂತೂ ಅಸಾಧ್ಯವೇ ಆಗುತ್ತದೆ. ಭಾರತದ ರಕ್ಷಣೆಗೆ ಮತ್ತು ಜಪಾನೀ ಆಕ್ರಮಣಕಾರರನ್ನು ಎದುರಿಸುವದಕ್ಕೆ ಇಂಡಿಯ ಸರಕಾರ ತನ್ನ ಜವಾಬ್ದಾರಿ ನಿರ್ವಹಿಸಿದ ಬಗೆಯೇ ಈ ರೀತಿ ಇತ್ತು. ಈ ಮುಖ್ಯ ಯುದ್ಧ ಕ್ಷೇತ್ರದಲ್ಲಿ ಸರಕಾರದ ನೀತಿಯ ಸಂಕೇತವಾಗಿ ಕಾಣುತ್ತಿದ್ದುದು ದಗ್ಧ ಭೂಮಿ ನೀತಿಯಲ್ಲ; ಆದರೆ ಲಕ್ಷ ಗಟ್ಟಲೆ ಹಸಿವಿನಿಂದ ಸತ್ತು ಕರಿಕುಗಟ್ಟುವ ಹೆಣಗಳು.

ಭಾರತದ ನಾನಾ ಕಡೆಗಳಿಂದ ಬಂದ ಅನಧಿಕಾರಿ ಸಂಸ್ಥೆಗಳು ಮತ್ತು ಇಂಗ್ಲೆಂಡಿನ ನುರಿತ ಸಾರ್ವ ಜನಿಕ ಸೇವಕರಾದ ಕ್ವೇಕರ್‌ಗಳು ಪರಿಹಾರ ಒದಗಿಸುವುದರಲ್ಲಿ ಉತ್ತಮ ಸೇವೆ ಸಲ್ಲಿಸಿದರು. ಕೊನೆಗೆ ಕೇಂದ್ರ ಮತ್ತು ಪ್ರಾಂತ ಸರಕಾರಗಳು ಸಹ ಎಚ್ಚೆತ್ತು ಭೀಕರ ವಿಷಮ ಪರಿಸ್ಥಿತಿಯನ್ನರಿತು ಪರಿಹಾರ ಕಾರ್ಯದಲ್ಲಿ ಸೈನ್ಯ ಸಹ ಉಪಯೋಗಿಸಿದರು. ಕ್ಷಾಮ ಹರಡದಂತೆ ಮತ್ತು ಅದರ ಪರಿಣಾಮ ಉಲ್ಬಣಿಸ ದಂತೆ ಸ್ವಲ್ಪ ಪರಿಹಾರವನ್ನೇನೊ ತೆಗೆದುಕೊಳ್ಳಲಾಯಿತು. ಆದರೆ ಆ ಪರಿಹಾರವೆಲ್ಲ ತಾತ್ಕಾಲಿಕ; ಕ್ಷಾಮಾನಂತರದ ಪರಿಣಾಮಗಳು ಇನ್ನು ಹೋಗಿಲ್ಲ. ಆರ್ಥಿಕ ಪ್ರಮಾಣದಲ್ಲಿ ಪುನಃ ಯಾವಾಗ ಕ್ಷಾಮ ಒದಗುತ್ತದೆಯೋ ಯಾರೂ ಹೇಳುವಂತೆ ಇಲ್ಲ. ಬಂಗಾಲ ನೆಲ ಹತ್ತಿದೆ. ಆದರ ಆರ್ಥಿಕ ಮತ್ತು ಸಾಮಾ ಜಿಕ ರಚನೆ ಪುಡಿಪುಡಿಯಾಗಿದೆ; ಅಳಿದು ಉಳಿದವರು ಬಲಹೀನರಾಗಿದ್ದಾರೆ.

ಕಲ್ಕತ್ತ ನಗರದ ಬೀದಿಗಳಲ್ಲಿ ಹೆಣಗಳು ಕೊಳೆತು ಈ ಭೀಕರ ನಾಟ್ಯ ನಡೆಯುತ್ತಿರುವಾಗ ನಗರದ ಹತ್ತು ಸಾವಿರ ಶ್ರೀಮಂತರ ಸಮಾಜ ಜೀವನ ಮಾತ್ರ ಅದೇ ವೈಭವದಿಂದ ಮುಂದುವರಿದಿತ್ತು. ಅದೇ ನೃತ್ಯ, ಭೋಜನ, ಒಡವೆ ವಸ್ತುಗಳ ಪ್ರದರ್ಶನ ಮತ್ತು ಸುಖಲೋಲುಪತೆ ಎಂದಿನಂತೆ ನಡೆದಿದ್ದವು. ಆಹಾರ ಹಂಚಿಕೆ ಬಂದುದು ಇದಾದ ಅನೇಕ ದಿನಗಳ ಮೇಲೆ. ಎಂದಿನಂತೆ ನಡೆದ ಕಲ್ಕತ್ತೆಯಲ್ಲಿ ಕುದುರೆ ಜೂಜುಗಳಲ್ಲಿ ಶ್ರೀಮಂತರು ತಮ್ಮ ಠೀವಿಯನ್ನೂ ಪ್ರದರ್ಶಿಸಿದರು. ಆಹಾರ ಸಾಗಿಸಲು ರೈಲು ಗಾಡಿಗಳಿಲ್ಲದಿದ್ದರೂ, ಜೂಜಿನ ಕುದುರೆಗಳು ದೇಶದ ದೂರದೂರದ ಭಾಗಗಳಿಂದ ಬರಲು ವಿಶೇಷ ರೈಲು ಗಳ ಸೌಕರ್ಯವಿತ್ತು. ಈ ರಸಮಯ ಜೀವನದಲ್ಲಿ ಆಂಗ್ಲರೂ ಭಾರತೀಯರೂ ಇಬ್ಬರೂ ಸಮಭಾಗಿಗಳಾ ದರು. ಏಕೆಂದರೆ ಯುದ್ಧದಿಂದ ಇಬ್ಬರ ವ್ಯಾಪಾರವೂ ಲಾಭದಾಯಕವಿತ್ತು; ಹಣಕ್ಕೆ ಯಾವ ಕೊರತೆಯೂ ಇರಲಿಲ್ಲ. ಯಾವ ಆಹಾರದ ಅಭಾವದಿಂದ ನಿತ್ಯವೂ ಸಹಸ್ರಗಟ್ಟಲೆ ಜನರು ಸಾಯುತ್ತಿದ್ದರೊ ಆ ಆಹಾರವನ್ನು ಕಾಳಸಂತೆಯಲ್ಲಿ ಮಾರಾಟ ಮಾಡಿಯೇ ಅನೇಕ ಸಂದರ್ಭದಲ್ಲಿ ಆ ಹಣ ಬಂದಿತ್ತು.

ಅನೇಕ ವೇಳೆ, ಭಾರತವು ಮಹಾ ಧನಿಕರ ಮತ್ತು ಕಡುಬಡವರ, ಆಧುನಿಕತೆಯ ಮತ್ತು ಪ್ರಾಚೀ ನತೆಯ, ರಾಜರುಗಳ ಮತ್ತು ಪ್ರಜೆಗಳ, ಬ್ರಿಟಿಷರ ಮತ್ತು ಭಾರತೀಯರ ವಿರೋಧಾಭಾಸವೆಂದು ಹೇಳಿದಾರೆ. ಆದರೆ ೧೯೪೩ನೆಯ ಕೊನೆಯ ಅರ್ಧಭಾಗದಲ್ಲಿ ಒದಗಿದ ಈ ಭೀಕರ ಕ್ಷಾಮ ಸಮಯದಲ್ಲಿ ಈ ವಿರೋಧಾ ಭಾಸವು ಕಲ್ಕತ್ತನಗರದಲ್ಲಿ ಎದ್ದುಕಂಡಂತೆ ಬೇರಾವ ಸಮಯದಲ್ಲೂ ಕಂಡಿರಲಿಲ್ಲ. ಸಾಮಾನ್ಯವಾಗಿ ಒಂದರ ಪರಿಚಯ ಇನ್ನೊಂದಕ್ಕೆ ಇಲ್ಲದೆ ದೂರದೂರ ಇರುತ್ತಿದ್ದ ಈ ಎರಡು ಪ್ರಪಂಚಗಳು ಇದ್ದಕ್ಕಿದ್ದಂತೆ ಪ್ರತ್ಯಕ್ಷ ಒಟ್ಟುಗೂಡಿ ಅಕ್ಕಪಕ್ಕ ನಿಲ್ಲಬೇಕಾಯಿತು. ಎರಡಕ್ಕೂ ಇದ್ದ ವಿಲಕ್ಷಣ ವ್ಯತ್ಯಾಸವು ಎದೆ ಬಿರಿಯುತ್ತಿತ್ತು. ಆದರೆ ಆಗಲೂ ಅನೇಕರು ಈ ಭೀಕರ ವಿಲಕ್ಷಣಸ್ಥಿತಿ ಸ್ವಲ್ಪವೂ ಅರಿತುಕೊಳ್ಳದೆ ಎಂದಿನಂತೆ ತಮ್ಮ ಹಳೆಯ ದಾರಿಯಲ್ಲಿಯೇ ಮುಂದುವರಿಯುತ್ತಿದ್ದುದು ಇನ್ನೂ ವಿಸ್ಮಯ ಉಂಟುಮಾಡುತ್ತಿತ್ತು. ಅವರ ಮನೋಭಾವನೆ ಏನಿತ್ತೊ ದೇವರೇ ಬಲ್ಲ; ಅವರ ಕಾರ್ಯನೀತಿಯೇ ಅವರ ಒರೆಗಲ್ಲು. ಆಂಗ್ಲರು ತಮ್ಮದೇ ಒಂದು ಜಾತಿ ಮಾಡಿಕೊಂಡು ಪ್ರತ್ಯೇಕ ಜೀವನ ನಡೆಸುತ್ತ ಇದ್ದುದರಿಂದ ಅವರಲ್ಲಿ ಕೆಲವರು ಸಂಕೋಚಪಟ್ಟುಕೊಂಡರೂ ಅನೇಕರಿಗೆ ತಮ್ಮ ಸಾಂಪ್ರದಾಯಿಕ ಜೀವನ ಮಾರ್ಪಡಿಸಿಕೊಳ್ಳಲು ಅವಶ್ಯಕತೆ ಕಾಣಲಿಲ್ಲ. ಆದರೆ ಅದೇ ದಾರಿಯಲ್ಲಿ ನಡೆಯುತ್ತಿದ್ದ ಭಾರತೀಯರು ಮಾತ್ರ ತಮಗೂ ತಮ್ಮ ಜನರಿಗೂ ಮಧ್ಯೆ ಇದ್ದ ಅಪಾರ ಅಂತರವನ್ನು ವ್ಯಕ್ತಗೊಳಿಸಿದರು. ಮಾನವೀಯತೆ ಅಥವ ಮಾನ ಮರ್ಯಾದೆ ಯಾವುದೂ ಅವರ ಮನಸ್ಸಿನಮೇಲೆ ಪರಿಣಾಮ ಮಾಡಲಿಲ್ಲ.

ಎಲ್ಲ ವಿಷಮ ಪರಿಸ್ಥಿತಿಗಳಂತೆ ಈ ಕ್ಷಾಮ ಸಹ ಭಾರತೀಯರ ಸದ್ಗುಣ ಮತ್ತು ದುರ್ಗುಣಗಳೆರಡನ್ನೂ

ಹೊರಗೆಡವಿತು. ಎಲ್ಲ ಪ್ರಮುಖ ವ್ಯಕ್ತಿಗಳೂ ಸೇರಿ ಬಹು ಸಂಖ್ಯಾಕರು ಸೆರೆಮನೆಯಲ್ಲಿದ್ದುದರಿಂದ ಅವರಿಂದ ಯಾವ ಸಹಾಯವೂ ದೊರೆಯುವಂತಿರಲಿಲ್ಲ. ಆದರೂ ಅನಧಿಕಾರಯುತ ಏರ್ಪಟ್ಟ ಪರಿಹಾರ ಸಂಸ್ಥೆಗಳಲ್ಲಿ ಸಮಾಜದ ಪ್ರತಿಯೊಂದು ಮಟ್ಟದಿಂದಲೂ ಸ್ತ್ರೀಪುರುಷರು ಬಂದು ಅದ್ಭುತಶಕ್ತಿ, ಪರಸ್ಪರ ಸಹಾಯ, ಸಹಕಾರದೃಷ್ಟಿ ಮತ್ತು ಆತ್ಮತ್ಯಾಗ ತೋರಿಸಿ ಶಕ್ತಿಮೀರಿ ಕೆಲಸಮಾಡಿದರು. ಇನ್ನೂ ಕೆಲವರು ಸಹಕರಿಸದೆ ತಮ್ಮ ಅಲ್ಪತನ ಮತ್ತು ಪರಸ್ಪರ ವ್ಯಕ್ತಿ ವೈಷಮ್ಯ ತೋರಿಸಿದರು; ಕೆಲವರು ಯಾವ ಸಹಾಯ ಮಾಡದೆ ಸುಮ್ಮನೆ ಹಿಂದೆನಿಂತರು; ಕೆಲವರು ಎಲ್ಲ ಮಾನವೀಯತೆ ಮತ್ತು ರಾಷ್ಟ್ರೀಯತೆ ಮರೆತು ಕಣ್ಣೆದುರಿಗೆ ನಡೆಯುವುದನ್ನೇ ಕಾಣದಷ್ಟು ಕುರುಡಾದರು.

ಯುದ್ಧ ಪರಿಸ್ಥಿತಿ, ಅಧಿಕಾರಿಗಳ ಅಜಾಗರೂಕತೆ, ದೂರದೃಷ್ಟಿಯ ಪೂರ್ಣ ಅಭಾವ ಇವುಗಳ ಪರಿಣಾಮವಾಗಿಯೇ ಕ್ಷಾಮ ಒದಗಿತು. ಸ್ವಲ್ಪ ತಲೆ ಇದ್ದು ಯೋಚಿಸಿದ ಪ್ರತಿಯೊಬ್ಬನಿಗೂ ಏನೋ ವಿಪತ್ತು ನಿಶ್ಚಯವೆಂದು ತಿಳಿದಿದ್ದರೂ ದೇಶದ ಆಹಾರ ಸಮಸ್ಯೆಯ ಕಡೆ ಅಧಿಕಾರಿಗಳು ತೋರಿದ ಅಲಕ್ಷ್ಯ ಮನೋಭಾವ ಅರ್ಥಮಾಡಿಕೊಳ್ಳಲು ಯಾರಿಗೂ ಸಾಧ್ಯವಿಲ್ಲ. ಯುದ್ಧದ ಸೆಳೆತಕ್ಕೆ ಸಿಕ್ಕಿ ಬಿದ್ದ ಪ್ರತಿಯೊಂದು ದೇಶದಲ್ಲೂ ಈ ಮುಖ್ಯ ಆರ್ಥಿಕ ಸಮಸ್ಯೆಗೆ ಯುದ್ಧಕ್ಕೆ ಪೂರ್ವಭಾವಿಯಾಗಿಯೇ ಪೂರ್ಣಗಮನ ಕೊಡಲಾಗಿತ್ತು. ಭಾರತದಲ್ಲಿ ಇಂಡಿಯ ಸರಕಾರ ಯೂರೋಪಿನಲ್ಲಿ ಯುದ್ಧ ಆರಂಭವಾದ ಮೂರು ವರ್ಷ ನಾಲ್ಕು ತಿಂಗಳನಂತರ, ಜಪಾನ್ ಯುದ್ಧ ಆರಂಭವಾದ ಒಂದು ವರ್ಷದ ನಂತರ ಆಹಾರ ಶಾಖೆ ಆರಂಭಿಸಿತು. ಜಪಾನ್ ಬರ್ಮ ಆಕ್ರಮಣ ಮಾಡಿದರೆ ಬಂಗಾಲದ ಆಹಾರ ಸರಬರಾಜಿಗೆ ದೊಡ್ಡ ವಿಪತ್ತು ಎಂದು ಎಲ್ಲರಿಗೂ ಮುಂಚೆಯೇ ತಿಳಿದಿತ್ತು. ಕ್ಷಾಮ ಉಲ್ಬಣಿಸಿ ಘೋರ ಪರಿಸ್ಥಿತಿ ಒದಗಿದ ೧೯೪೩ರ ಮಧ್ಯ ಭಾಗದ ವರೆಗೆ ಆಹಾರ ವಿಷಯದಲ್ಲಿ ಇಂಡಿಯ ಸರಕಾರಕ್ಕೆ ಯಾವ ನೀತಿಯೂ ಇರಲಿಲ್ಲ. ತನ್ನ ವಿರೋಧಿಗಳನ್ನು ಅಡಗಿಸುವ ಕಾರ್ಯ ಒಂದು ಬಿಟ್ಟರೆ ಉಳಿದ ಎಲ್ಲ ವಿಷಯಗಳಲ್ಲಿ ಸರಕಾರ ಎಷ್ಟು ಅಸಮರ್ಥವಿದೆ ಎಂಬುದೇ ಒಂದು ಆಶ್ಚರ್ಯ. ಅಥವ ಈಗಿನ ತನ್ನ ರಚನೆ ವ್ಯತ್ಯಾಸವಾಗದಂತೆ ತನ್ನ ಉಳಿಗಾಲ ನೋಡಿಕೊಳ್ಳುವುದೊಂದೇ ಅದಕ್ಕೆ ಮುಖ್ಯ ಕೆಲಸವೆಂದು ತೋರುತ್ತದೆ. ಸಂಕಟ ಬಂದಾಗ ಮಾತ್ರ ವೆಂಕಟರಮಣ. ಸರಕಾರದ ಸಾಮರ್ಥ್ಯದಲ್ಲಿ ಅಪನಂಬಿಕೆ ಮತ್ತು ಅದರ ಸದುದ್ದೇಶಗಳಲ್ಲಿ ಸಂಶಯ ಸದಾ ಎದುರು ನಿಂತಾಗ ಈ ಸಂಕಟ ಇನ್ನೂ ಅಸಹನೀಯವಾಗುತ್ತದೆ.

---

* ಸರ್ ಜಾನ್ ವುಡ್‌ಹೆಡ್ ಅಧ್ಯಕ್ಷತೆ ವಹಿಸಿದ್ದ ಕ್ಷಾಮ ವಿಚಾರಣಾ ಸಮಿತಿಯು ಅಧಿಕಾರಿಗಳ ಮಿತಭಾಷೆಯನ್ನೇ ಬಳಸಿದ್ದರೂ ಮೇಲಿಂದ ಮೇಲೆ ಅಧಿಕಾರಿಗಳು ಮಾಡಿದ ತಪ್ಪುಗಳ ದುರಂತ ಪರಂಪರೆಯೂ, ವರ್ತಕರ ಹಣದ ದುರಾಸೆಯೂ ಬಂಗಾಲ ಕ್ಷಾಮಕ್ಕೆ ಮುಖ್ಯಕಾರಣ ಎಂದು ಸ್ಪಷ್ಟಪಡಿಸಿದೆ. "ಬಂಗಾಲ ಕ್ಷಾಮವು ಹಬ್ಬಿದ ಬಗೆ ಮತ್ತು ಅದಕ್ಕೆ ಕಾರಣ ಕಂಡುಹಿಡಿಯುವ ದುಃಖಮಯ ಕಾರ್ಯ ನಮ್ಮ ಪಾಲಿಗೆ ಬಂದಿದೆ. ಆ ದುರಂತದ ಭಯಂಕರ ಚಿತ್ರ ಇನ್ನೂ ನಮ್ಮ ಮನಸ್ಸಿನಲ್ಲಿ ಸುಳಿಯುತ್ತಿದೆ. ೧೫ಲಕ್ಷ ಬಂಗಾಲದ ಬಡಜನರು ತಮ್ಮ ತಪ್ಪು ಏನೂ ಇಲ್ಲದೆ ಈ ಕ್ಷಾಮಕ್ಕೆ ಆಹುತಿಯಾದರು. ಸಮಾಜವೂ ಮತ್ತು ಅದರ ಅಂಗಗಳೂ ಸಮಾಜದ ಬಲಹೀನರನ್ನು ರಕ್ಷಿಸಿಕೊಳ್ಳಲು ಅಸಮರ್ಥವಾದವು. ನಿಜವಾಗಿ ನೈತಿಕ, ಸಾಮಾಜಿಕ ಮತ್ತು ಆಡಳಿತವರ್ಗದ ಪತನವಾಯಿತು," ಎಂದು ಹೇಳಿದ್ದಾರೆ. ಪ್ರಾಂತದ ಕೆಳಹತ್ತಿದ ಆರ್ಥಿಕಮಟ್ಟ, ಕೈಗಾರಿಕೆಯ ಅಭಿವೃದ್ಧಿಯಿಂದ ಕಡಮೆಯಾಗದ ಭೂಮಿಯಮೇಲಿನ ಅವಲಂಬನೆಯ ಹೆಚ್ಚಿನ ಒತ್ತಡ, ಜನರಲ್ಲನೇಕರು ಜೀವಶ್ರವಗಳಾಗಿ ಬಾಳಿ ಆರ್ಥಿಕ ವ್ಯತ್ಯಾಸದ ಯಾವ ಹೊಡೆತವನ್ನೂ ಸಹಿಸಲಾರದ ಸ್ಥಿತಿಯ ದುರ್ಬಲಜೀವನ, ಅನಾರೋಗ್ಯ ಸ್ಥಿತಿ, ಸ್ವಲ್ಪವೂ ಪುಷ್ಟಿಯಿಲ್ಲದ ಆಹಾರ ಸೇವನೆ, ಆರೋಗ್ಯ ಮತ್ತು ಐಶ್ವರ್ಯಗಳ ಅಭಾವ ಎಲ್ಲವನ್ನೂ ವಿವರಿಸಿದ್ದಾರೆ. ಆ ವರ್ಷದ ಅಲ್ಪಬೆಳೆ ಬರ್ಮ ಜಪಾನರ ವಶವಾಗಿ ಅಕ್ಕಿ ಬರದೆ ಹೋದುದು, ಸರಕಾರ ನಕಾರ ಹೇಳಿ ಅನೇಕ ಬಡವರನ್ನು ಸಾವಿನ ದವಡೆಗೆ ತಳ್ಳಿದುದು, ಆಹಾರ ಮತ್ತು ಮಾರ್ಗ ಸೌಕರ್ಯವೆಲ್ಲ ಸೈನ್ಯಶಾಖೆಗೆ ಮೀಸಲಾದುದು, ಸರಕಾರದಲ್ಲಿ ಅವಿಶ್ವಾಸ, ಕ್ಷಾಮಕ್ಕೆ ತತ್‌ಕ್ಷಣದ ಕಾರಣಗಳೆಂದಿದ್ದಾರೆ; ಇಂಡಿಯಾ ಸರಕಾರ ಮತ್ತು ಬಂಗಾಲ ಸರಕಾರ ಎರಡರ ನೀತಿಯನ್ನೂ, ಅಥವ ನೀತಿ ಶೂನ್ಯತೆ ಅಥವ ನಿಮಿಷ ನಿಮಿಷಕ್ಕೆ ಬದಲಾಯಿಸುವ ನೀತಿಯನ್ನೂ;

ಯುದ್ಧ ಪರಿಸ್ಥಿತಿಯಿಂದ ಕ್ಷಾಮ ಒದಗಿ ಅದನ್ನು ತಡೆಗಟ್ಟಲು ಸಾಧ್ಯವಿದ್ದಿತಾದರೂ, ಕ್ಷಾಮಕ್ಕೆ ಇನ್ನೂ ಕೆಲವು ಮೂಲ ಕಾರಣಗಳೂ ಇವೆ. ಭಾರತದ ಬಡತನ ವರ್ಷವರ್ಷವೂ ಹೆಚ್ಚಿ ಕೋಟ್ಯಾನು ಕೋಟಿ ಜನರು ಅರೆಹೊಟ್ಟೆಯಲ್ಲಿದ್ದಾರೆ. ೧೯೩೩ರಲ್ಲಿ ಇಂಡಿಯ ವೈದ್ಯ ಇಲಾಖೆಯ ಮುಖ್ಯ ಅಧಿಕಾರಿ ಮೇಜರ್ ಜನರಲ್ ಸರ್ ಜಾನ್ ಮೇಗಾ ಭಾರತದ ಸಾರ್ವಜನಿಕ ಆರೋಗ್ಯದ ವಿಷಯ ಬರೆಯುತ್ತ "ಆಸ್ಪತ್ರೆಯ ಡಾಕ್ಟರುಗಳ ಅಭಿಪ್ರಾಯದಂತೆ ಭಾರತದಲ್ಲಿ ಶೇಕಡ ೩೯ ರಷ್ಟು ಜನರಿಗೆ ಮಾತ್ರ ಪುಷ್ಟಿಕರ ಆಹಾರವೂ ಶೇಕಡ ೪೧ರಷ್ಟು ಜನರಿಗೆ ಸಾಧಾರಣ ಪುಷ್ಟಿಕರ ಆಹಾರವೂ ಶೇಕಡ ೨೦ ರಷ್ಟು ಯಾವ ಪುಷ್ಟಿಯೂ ಇಲ್ಲದ ಆಹಾರವೂ ದೊರೆಯುತ್ತಿದೆ ಎಂದಿದ್ದಾನೆ. ಬಂಗಾಲದಲ್ಲಿ ಶೇಕಡ ೨೨ ರಷ್ಟು ಜನರಿಗೆ ಮಾತ್ರ ಪುಷ್ಟಿಯಾದ ಆಹಾರ ದೊರೆಯುತ್ತಿದೆ, ಶೇಕಡ ೩೧ರಷ್ಟು ಜನ ಏನೂ ಪುಷ್ಟಿ ಇಲ್ಲದ ಆಹಾರ ತಿನ್ನುವವರು.

ಬಂಗಾಲದ ದುರಂತ, ಒರಿಸ್ಸ, ಮಲಬಾರ್ ಮತ್ತು ಇತರ ಕಡೆಗಳ ಕ್ಷಾಮಗಳು ಭಾರತದ ಬ್ರಿಟಿಷ್ ಆಡಳಿತ ದಕ್ಷತೆಗೆ ಅಂತ್ಯ ತೀರ್ಪು. ಬ್ರಿಟಿಷರು ಭಾರತ ಬಿಟ್ಟು ಹೊರಡುವುದು ಖಂಡಿತ; ಅವರ ಭಾರತ ಸಾಮ್ರಾಜ್ಯವೂ ಒಂದು ಕನಸಾಗುತ್ತದೆ; ಆದರೆ ಬಿಟ್ಟು ಹೊರಡುವಾಗ ಇಲ್ಲಿ ಬಿಟ್ಟು ಹೋಗುವುದೇನು ? ಏನು ಮಾನವೀಯತೆಯ ಅಧೋಗತಿ ಮತ್ತು ಎಷ್ಟು ಸಂಕಟ ಪರಂಪರೆ? ಠಾಕೂರರು ತಮ್ಮ ಮರಣ ಶಯ್ಯೆಯಲ್ಲಿಯೇ ಆ ಚಿತ್ರ ಕಂಡರು. "ಅವರು ಬಿಟ್ಟು ಹೋಗುವ ಭಾರತ ಎಂಥದು ? ಏನು ಗೋಳಿನ ಕತೆ ? ಅವರ ಶತಮಾನಗಳ ಆಡಳಿತ ವಾಹಿನಿ ಬತ್ತಿದಾಗ ಕೊನೆಗೆ ಹಿಂದೆ ಉಳಿಯುವುದು ಕೆಸರು ಮತ್ತು ಕೊಚ್ಚೆ ಮಾತ್ರ" ಎಂದರು.

---

ಮುಂಬರುವ ಆಪತ್ಕಾಲಕ್ಕೆ ದೂರದೃಷ್ಟಿಯಿಂದ ಮುಂಜಾಗ್ರತೆ ತೆಗೆದುಕೊಳ್ಳಲು ಅಸಮರ್ಥರಾದುದನ್ನೂ; ಕ್ಷಾಮ ಒದಗಿದ ಮೇಲೆ ಸಹ ಕ್ಷಾಮ ಘೋಷಣೆಮಾಡಿ ಕ್ಷಾಮವಿದೆ, ಎಂದು ಒಪ್ಪಲು ನಿರಾಕರಿಸಿದುದನ್ನೂ; ಆ ವಿಷಮಪರಿಸ್ಥಿತಿ ಎದುರಿಸಲು ಇದ್ದ ಅಲ್ಪ ಅಸಮರ್ಪಕ ಏರ್ಪಾಟನ್ನೂ ಖಂಡಿಸಿದ್ದಾರೆ. ಅಲ್ಲದೆ "ಎಲ್ಲ ಸಂದರ್ಭಗಳನ್ನೂ ಗಮನಿಸಿದರೆ ಬಂಗಾಲ ಸರಕಾರ ಸಕಾಲಕ್ಕೆ ಧೈರ್ಯದಿಂದ, ಸ್ಥಿರ ಮನಸ್ಸಿನಿಂದ ಯೋಗ್ಯಕಾರ್ಯಕ್ರಮ ತೆಗೆದುಕೊಂಡಿದ್ದರೆ ಈ ಕ್ಷಾಮದಿಂದ ಒದಗಿದ ದುರಂತ ತಪ್ಪಿಸಲು ಬಹುಮಟ್ಟಿಗೆ ಸಾಧ್ಯವಿತ್ತು, ಎಂದು ನಾವು ಹೇಳಲೇ ಬೇಕು. ಅಲ್ಲದೆ ಇಂಡಿಯಾ ಸರಕಾರ ಒಂದು ಯೋಜನೆಯ ಪ್ರಕಾರ ಆಹಾರ ಧಾನ್ಯಗಳನ್ನು ಒದಗಿಸಲು ಒಂದು ಕಾರ್ಯಕ್ರಮದ ಅವಶ್ಯಕತೆಯನ್ನು ಮುಂಚೆಯೇ ಕಂಡುಕೊಳ್ಳದೆ ಕರ್ತವ್ಯಲೋಪಮಾಡಿತು. ೧೯೪೩ನೇ ಮಾರ್ಚಿ ತಿಂಗಳಿನಲ್ಲಿಯೇ ಖರ್ಯಾತ ರದ್ದುಗೊಳಿಸುವುದಾಗಿ ಮಾಡಿದ ಆಜ್ಞೆಗೆ ಬಂಗಾಲ ಸರಕಾರದೊಂದಿಗೆ ಇಂಡಿಯ ಸರಕಾರವೂ ಜವಾಬ್ದಾರಿ ವಹಿಸಿಕೊಳ್ಳಬೇಕು. ಭಾರತದ ಬಹು ಭಾಗದಲ್ಲಿ ನಿರಾತಂಕ ವ್ಯಾಪಾರ ನಡೆಯಲು ಅವಕಾಶಕೊಡುವುದಾಗಿ ಇಂಡಿಯ ಸರಕಾರ ನಿರ್ಣಯಿಸಿದ್ದು ಶುದ್ಧ ಅನ್ಯಾಯ ಮತ್ತು ಆ ಸಲಹೆ ಮಾಡಬಾರದಾಗಿತ್ತು. ಅನೇಕ ಪ್ರಾಂತಗಳು ಮತ್ತು ಸಂಸ್ಥಾನಗಳು ವಿರೋಧಿಸಿದ ಈ ಸಲಹೆಯನ್ನೇನಾದರೂ ಆಚರಣೆಗೆ ತಂದಿದ್ದರೆ ಭಾರತದ ಇತರ ಕಡೆಗಳಲ್ಲೂ ಮಹಾ ಅನರ್ಥವುಂಟಾಗುತ್ತಿತ್ತು ಎಂದಿದ್ದಾರೆ. ಕೇಂದ್ರ ಮತ್ತು ಪ್ರಾಂತ ಸರಕಾರಗಳ ಆಡಳಿತ ಯಂತ್ರದ ಅಲಕ್ಷ್ಯ ಮತ್ತು ಅವ್ಯವಸ್ಥೆ ತಿಳಿಸಿ, ಬಂಗಾಲದ ಸಾರ್ವಜನಿಕರಲ್ಲಿ ಕೆಲವರಾದರೂ ಇದಕ್ಕೆ ಜವಾಬ್ದಾರರಿದ್ದಾರೆ ಎಂದು ಹೇಳಿದ್ದಾರೆ. "ನಿಯಂತ್ರಣವಿಲ್ಲದ ಸಮಯದಲ್ಲಿ, ಭಯ ಮತ್ತು ಸಂಶಯದ ವಾತಾವರಣದಲ್ಲಿ ಬೆಲೆ ಹೇಗೆ ಏರುತ್ತದೆ ಎಂಬುದನ್ನು ತಿಳಿಸಿದ್ದೇವೆ. ಈ ಅಪತ್ಸಮಯವನ್ನು ಉಪಯೋಗಮಾಡಿಕೊಂಡು ಕೆಲವರು ಅಪಾರ ಲಾಭ ಸಂಪಾದಿಸಿದರು; ಅಂದರೆ ಜನರ ಸಾವುನೋವು ಕೆಲವರ ಲಾಭ. ಕೆಲವರು ಹಸಿವಿನಿಂದ ಸಾಯುವಾಗ ಇನ್ನೂ ಕೆಲವರು ತಿಂದು ತೇಗುತ್ತಿದ್ದರು; ಸಂಕಟದ ಎದುರಿನಲ್ಲೂ ಅಲಕ್ಷ್ಯಭಾವನೆ. ಪ್ರಾಂತದಲ್ಲಿ ಎಲ್ಲ ಕಡೆಯಲ್ಲಿ ಮತ್ತು ಸಮಾಜದ ಅನೇಕ ಗುಂಪುಗಳಲ್ಲಿ ಲಂಚಕ್ಕೆ ಮಿತಿ ಇರಲಿಲ್ಲ" ಎಂದಿದ್ದಾರೆ. ಈ ಹಸಿವಿನ ಸಾವಿನಿಂದ ಪಡೆದ ಲಾಭ ೧೫ಕೋಟಿ ರೂಪಾಯಿಗಳಾಗಬಹುದೆಂದು ಊಹಿಸಲಾಗಿದೆ. ಅಂದರೆ ಸತ್ತ ೧೫ಲಕ್ಷ ಜನರ ಪ್ರತಿ ಸಾವಿಗೆ ಸಾವಿರ ರೂಪಾಯಿ ಲಾಭ !

## ೭. ಭಾರತದ ಕಾರ್ಯೋನ್ಮುಖ ಶಕ್ತಿ

ಈ ರೀತಿ ಕ್ಷಾಮ ಮತ್ತು ಯುದ್ಧ ಮುಂತಾದ ನೈಸರ್ಗಿಕ ವಿಪರೀತಗಳು ಅನೇಕ ಒದಗಿದರೂ, ಆ ವೈಪರೀತ್ಯಗಳು ಮತ್ತು ಅವುಗಳ ಬೆನ್ನು ಹಿಂದೆ ಬರುವ ನಾಶದಲ್ಲಿಯೇ ಇರುವ ಚೈತನ್ಯದ ಅಂಕುರದಿಂದ ಜೀವನವಾಹಿನಿ ವೃದ್ಧಿಗೊಂಡು ಪ್ರವಹಿಸುತ್ತಲೇ ಇದೆ. ನೆನ್ನೆಯ ರಣರಂಗ ಪ್ರಕೃತಿಮಾತೆಯ ಕರುಣೆಯಿಂದ ಇಂದಿನ ಹಸುರುಡುಗೆಯ ಹೂದೋಟ. ಶೋಣಿತ ತರ್ಪಣದಿಂದಲೇ ಭೂದೇವಿಯು ತಣಿದು ಹೊಸಬಾಳಿಗೆ ಶಕ್ತಿ ಕೊಟ್ಟು ಜೀವನದಾಯಕಳಾಗುತ್ತಾಳೆ. ಮಾನವನು ತನ್ನ ಸ್ಮರಣ ಶಕ್ತಿಯ ಪ್ರಭಾವಕ್ಕೆ ಕಟ್ಟುಬಿದ್ದೆ ಹಿಂದಿನ ಹಳೆಯ ನೆನಪುಗಳ ಮಟ್ಟದಲ್ಲಿಯೇ ತೊಳಲುತ್ತ ನಿತ್ಯ ನೂತನ ಜೀವನದ ಗತಿಯೊಂದಿಗೆ ನಡೆಯಲು ಅಸಮರ್ಥನಾಗುತ್ತಾನೆ. ಅವನು ಅರಿಯುವ ಮುಂಚೆಯೇ ಇಂದು ನಿನ್ನೆಯಾಗುತ್ತದೆ. ನಿನ್ನೆ ಶಿಶು ಇಂದು ತನ್ನ ನಾಳಿನ ಮಗುವಿಗೆ ದಾರಿಬಿಡುತ್ತದೆ. ಇಂದಿನ ಜಯಕ್ಕೆ ನಾಳೆಯ ರಕ್ತಪಂಕದಲ್ಲಿ ಅಂತ್ಯ ಅಪಜಯದ ಘೋರ ಕುಲುಮೆಯಿಂದಲೇ ನವಚೈತನ್ಯದ, ವಿಶಾಲದೃಷ್ಟಿಯ ಹೊಸಬಾಳಿನ ಹುಟ್ಟು. ಜಳ್ಳು ಉದುರಿ ತೂರಿಹೋಗುತ್ತದೆ. ಸತ್ಯ ಶೂರರು ದೀವಿಗೆ ಹಿಡಿದು ಮುಂದೆ ಸಾಗಿ ನಾಳಿನ ಬಾಳಿನ ಹರಿಕಾರರಾಗುತ್ತಾರೆ.

ಭಾರತದ ಕ್ಷಾಮದಿಂದ ಪ್ರಪಂಚಕ್ಕೆ ಭಾರತದ ಸಮಸ್ಯೆಗಳ ಭೀಕರ ಪರಿಸ್ಥಿತಿಯು ಮತ್ತು ಭಾರತಕ್ಕೆ ಒದಗಿದ್ದ ವಿಪತ್ತಿನ ಅರಿವು ಸ್ವಲ್ಪ ಉಂಟಾಯಿತು. ಇಂಗ್ಲೆಂಡಿನ ಜನ ಏನು ಭಾವಿಸಿದರೋ ತಿಳಿಯದು; ಆದರೆ ಅವರಲ್ಲಿ ಕೆಲವರು ಭಾರತ ಮತ್ತು ಭಾರತದ ಜನರ ಮೇಲೆಯೇ ತಪ್ಪು ಹೊರಿಸಿದರು. ಆಹಾರ ವಿರಲಿಲ್ಲ; ವೈದ್ಯರುಗಳಿರಲಿಲ್ಲ; ಆರೋಗ್ಯರಕ್ಷಣೆಯ ಏರ್ಪಾಟು ಮತ್ತು ವೈದ್ಯಕೀಯ ಸಲಕರಣೆಗಳು ಇರಲಿಲ್ಲ. ಸಾರಿಗೆಯ ಸೌಕರ್ಯವಿರಲಿಲ್ಲ; ಆದರೆ ಜನಬಾಹುಳ್ಯ ಮಾತ್ರ ಇತ್ತು. ಏಕೆಂದರೆ, ಜನಸಂಖ್ಯೆ ಹೆಚ್ಚಿ, ಬೆಳೆಯುತ್ತಲೇ ಇತ್ತು. ಮುಂದಾಲೋಚನೆ ಇಲ್ಲದ ಜನಾಂಗವು ಮಿತಿಮೀರಿ ಸರಕಾರಕ್ಕೆ ಯಾವ ತಿಳಿವಳಿಕೆ ಅಥವ ಎಚ್ಚರ ಕೊಡದೆ ಪ್ರಜಾಸಂಖ್ಯೆ ಹೆಚ್ಚಿಸಿ ಸರಕಾರದ ಸದ್ಭಾವನೆಯ ಎಲ್ಲ ಯೋಜನೆ ಅಥವ ಯೋಜನೆಯ ಅಭಾವವನ್ನೂ ತಲೆಕೆಳಗೆ ಮಾಡಿ ಈ ಘೋರ ಕ್ಷಾಮಕ್ಕೆ ಕಾರಣ ಎಂದರು. ಈಗ ಏಕಾಏಕಿ ಈ ಆರ್ಥಿಕ ಸಮಸ್ಯೆಗೆ ಒಂದು ಹೊಸ ಪ್ರಾಮುಖ್ಯತೆ ಕೊಟ್ಟರು. ಆಗಾಗ ಒದಗುವ ದೊಡ್ಡ ಸಮಸ್ಯೆಗಳನ್ನು ಬಿಡಿಸಲಾಗದ ರಾಜಕೀಯಕ್ಕೆ ಬಹಳ ಬೆಲೆ ಇರುವಂತೆ ಸಧ್ಯಕ್ಕೆ ಎಲ್ಲ ರಾಜಕೀಯವನ್ನೂ, ರಾಜಕೀಯ ಪ್ರಶ್ನೆಗಳನ್ನೂ ಬದಿಗಿಡಲು ನಮಗೆ ಬುದ್ಧಿ ಹೇಳಿದರು. ಪ್ರಪಂಚದಲ್ಲಿ "ಸ್ವೇಚ್ಛಾವೃತ್ತಿ ವ್ಯಾಪಾರ" ಪರ ಇರುವ ಇಂದಿನ ಅತ್ಯಲ್ಪ ಸರಕಾರಗಳಲ್ಲಿ ಒಂದಾದ ಇಂಡಿಯಾ ಸರಕಾರ ಯೋಜನೆ ವಿಷಯ ಮಾತನಾಡತೊಡಗಿತು. ಆದರೆ ಸುಸಂಘಟಿತ ಯೋಜನೆಯ ಕಲ್ಪನೆಯೇ ಅದಕ್ಕೆ ಇರಲಿಲ್ಲ. ಅದಕ್ಕೆ ಬೇಕಾದುದು ಇರುವಂತೆ ತನ್ನ ಉಳಿವು, ತನ್ನ ಮತ್ತು ತನ್ನನ್ನು ಅವಲಂಬಿಸಿದವರ ಸಂರಕ್ಷಣೆ ಅಷ್ಟುಮಾತ್ರ.

ಭಾರತದ ಸಂರಕ್ಷಣಾಶಾಸನ ಮತ್ತು ಅದರ ನಿಯಮ ನಿರ್ಬಂಧಗಳ ಹಿಡಿತದಲ್ಲಿ ಉಸಿರಾಡಲು ಅವಕಾಶವಿಲ್ಲದಿದ್ದರೂ ಭಾರತೀಯರ ಮೇಲೆ ಬಹಳ ಆಳವಾದ, ಪ್ರಬಲವಾದ ಪ್ರತಿಕ್ರಿಯೆ ಆಯಿತು. ಬಂಗಾಲದ ಆರ್ಥಿಕ ರಚನೆಯೇ ಕುಸಿದು ಬಿದ್ದಿತ್ತು. ಲಕ್ಷಾಂತರ ಜನ ದಿಕ್ಕುಗೆಟ್ಟಿದ್ದರು. ಅಷ್ಟು ಉಲ್ಬಣಿಸಿರದಿದ್ದರೂ ಬಂಗಾಲದ ಪರಿಸ್ಥಿತಿಯಂತೆ ಭಾರತದ ಇತರ ಕಡೆಗಳಲ್ಲೂ ಇತ್ತು. ಪುನಃ ಮೊದಲಿನ ಆರ್ಥಿಕ ಜೀವನವನ್ನೇ ನಡೆಸುವುದಂತೂ ಸಾಧ್ಯವೇ ಇರಲಿಲ್ಲ. ಯುದ್ಧ ದೆಸೆಯಿಂದ ಅಧಿಕ ಲಾಭ ಸಂಪಾದನೆ ಮಾಡಿದ್ದ ಕೈಗಾರಿಕೋದ್ಯಮಿಗಳು ಸಹ ಚಕಿತರಾಗಿ ಎಚ್ಚತ್ತು ತಮ್ಮ ಸಂಕುಚಿತ ದೃಷ್ಟಿ ಬಿಟ್ಟು ದೂರದೃಷ್ಟಿ ತೋರಲಾರಂಭಿಸಿದರು. ರಾಜಕೀಯ ತತ್ವಗಳಿಗೆ ಹೆದರಿ ಸಾಮಾನ್ಯವಾಗಿ ಕಾಸಿಗೆ ಕಾಸು ಲೆಕ್ಕಾಚಾರ ಮಾಡುವವರಾದರೂ, ಆ ಲೆಕ್ಕಾಚಾರವೇ ಒಂದು ದೂರದೃಷ್ಟಿಯ ತೀರ್ಮಾನಕ್ಕೆ ಬರಲು ಅವರನ್ನು ಪ್ರೇರಿಸಿತು. ಮುಖ್ಯವಾಗಿ ತಾತಾ ಕೈಗಾರಿಕೆಗಳಿಗೆ ಸೇರಿದ ಕೆಲವು ಪ್ರಮುಖ ಮುಂಬೈ ಕೈಗಾರಿಕೋದ್ಯಮಿಗಳು ಭಾರತದ ಪ್ರಗತಿಗಾಗಿ ಹದಿನೈದು ವರ್ಷದ ಒಂದು ಯೋಜನೆ ಸಿದ್ಧಗೊಳಿಸಿದರು.

ಅದು ಇನ್ನೂ ಪೂರ್ಣವಿರದೆ ಅದರಲ್ಲಿ ಅನೇಕ ನ್ಯೂನತೆಗಳೂ ಇವೆ. ಯಾವ ಕ್ರಾಂತಿಕಾರಕ ಪರಿವರ್ತನೆಯೂ ಇಲ್ಲದೆ ಬಂಡವಾಳಗಾರರ ದೃಷ್ಟಿಕೋನಕ್ಕನುಗುಣವಾಗಿ ಅದು ರಚಿತವಾಗಿದೆ. ಆದರೂ ತಮ್ಮ ಹಳೆಯ ಜಾಡು ಬಿಟ್ಟು ಒಂದು ದೊಡ್ಡ ಮಾರ್ಗ ಹಿಡಿಯುವಂತೆ ಭಾರತದ ಘಟನೆಗಳ ಒತ್ತಡವೇ ಅವರನ್ನು ಈ ರೀತಿ ಪ್ರೇರೇಪಿಸಿತು. ಯೋಜನೆಯ ನಿರ್ಮಾಣಕರ್ತರಿಗೆ ಎಷ್ಟೇ ರುಚಿಸದಿದ್ದರೂ ಆ ಯೋಜನೆಯಲ್ಲೇ ಕ್ರಾಂತಿಕಾರಕ ಬೀಜಗಳು ಅಡಗಿವೆ. ಅವರಲ್ಲಿ ಕೆಲವರು ರಾಷ್ಟ್ರೀಯ ಯೋಜನಾ ಸಮಿತಿಯ ಸದಸ್ಯರಿದ್ದ ಕಾರಣ ಆ ಯೋಜನೆಯ ಉಪಯೋಗವನ್ನೂ ಮಾಡಿಕೊಂಡಿದ್ದಾರೆ. ಈ ಯೋಜನೆ ಅನೇಕ ಬಗೆಯಿಂದ ಮಾರ್ಪಾಟಾಗಿ, ಪುಷ್ಟಿಗೊಳ್ಳುವಂತೆ ತಿದ್ದುಪಡಿಯಾಗಬೇಕು. ಆದರೂ ಸಂಪ್ರದಾಯ ಶರಣ ಬಂಡವಲಗಾರರೇ ಭಾರತದ ಪ್ರಗತಿಗೆ ಇದರಲ್ಲಿ ಮಾರ್ಗ ಸೂಚಿಸಿರುವುದರಿಂದ ಇದಕ್ಕೆ ಬಹಳ ಮಹತ್ವವಿದೆ. ಕಾಸುಗಳ್ಳ ಕೋಮಟಿಯ ಕಪಿಮುಷ್ಟಿಯು ಇಲ್ಲಿ ನಮಗೆ ಕಾಣುವುದಿಲ್ಲ; ದೇಶದ ನಿಜವಾದ ಬಂಡವಾಳವೆಂದರೆ ದೇಶದ ಪ್ರಕೃತಿ ಸಂಪತ್ತು ಮತ್ತು ಜನ ಸಂಪತ್ತು ಎಂದು ಒತ್ತಿ ಹೇಳಿದಾರೆ. ಇದರ ಅಥವ ಬೇರೆ ಯೋಜನೆಯ ಯಶಸ್ಸು ಕೇವಲ ವಸ್ತು ನಿರ್ಮಾಣ ಶಕ್ತಿಯನ್ನು ಮಾತ್ರ ಅವಲಂಬಿಸಿರದೆ ಅದರಿಂದ ದೊರೆಯುವ ಸಂಪದ್ವಿನಿಯೋಗ ರೀತಿಯನ್ನೂ ಅವಲಂಬಿಸಿದೆ. ಮತ್ತು ಇದಕ್ಕೆ ಪೂರ್ವಭಾವಿಯಾಗಿ ಭೂಮಿದಾರಿ ಪದ್ಧತಿಯ ಸುಧಾರಣೆಯೂ ಆಗಬೇಕಾಗಿದೆ.

ಯೋಜನೆ ಮತ್ತು ಯೋಜಿತ ಸಮಾಜದ ಕಲ್ಪನೆಯನ್ನು ಸ್ವಲ್ಪ ಹೆಚ್ಚು ಕಡಮೆ ಈಗ ಎಲ್ಲರೂ ಒಪ್ಪಿದ್ದಾರೆ. ಆದರೆ ಕೇವಲ ಒಂದು ಯೋಜನೆ ಸಿದ್ಧಗೊಳಿಸಿದ ಮಾತ್ರಕ್ಕೆ ಅದರಿಂದ ಯಾವ ಫಲವೂ ದೊರೆಯುವುದಿಲ್ಲ; ಯಾವ ಅರ್ಥವೂ ಇಲ್ಲ. ಆ ಯೋಜನೆಯ ಉದ್ದೇಶವೇನು? ಅದರ ಆಗು ಹೋಗುಗಳು ಯಾರ ಕೈಯಲ್ಲಿ? ಮತ್ತು ಸರಕಾರದ ಬೆಂಬಲ ಅದಕ್ಕೆ ಎಷ್ಟಿದೆ? ಎನ್ನುವುದನ್ನು ಅವಲಂಬಿಸಿದೆ. ಜನತೆಯ ಪ್ರಗತಿ ಮತ್ತು ಕಲ್ಯಾಣ ಅದರ ಮುಖ್ಯ ಗುರಿಯೇ? ಎಲ್ಲರ ಪ್ರಗತಿಗೆ ಸಂಪೂರ್ಣ ಸ್ವಾತಂತ್ರ್ಯ ಮತ್ತು ಸದವಕಾಶ ಅದರಲ್ಲಿ ಇದೆಯೇ? ಸಂಘಟನೆ ಮತ್ತು ಕಾರ್ಯ ನೀತಿಯಲ್ಲಿ ಸಹಕಾರ ತತ್ವ ಮತ್ತು ನೀತಿಗೆ ಪೂರ್ಣ ಅವಕಾಶವಿದೆಯೆ? ಎಂಬುದೇ ಮುಖ್ಯ ಪ್ರಶ್ನೆ. ಅಧಿಕ ಪ್ರಮಾಣದಲ್ಲಿ ವಸ್ತು ನಿರ್ಮಾಣ ಅತ್ಯವಶ್ಯಕ ನಿಜ; ಆದರೆ ಅಷ್ಟರಿಂದ ಮಾತ್ರ ನಮ್ಮ ಸಮಸ್ಯೆಗಳು ಪರಿಹಾರವಾಗದೆ ಅವು ಇನ್ನೂ ಹೆಚ್ಚಬಹುದು. ಬೇರುಬಿಟ್ಟು ಬೆಳೆದು ಹಬ್ಬಿದ ಹಳೆಯ ಹಕ್ಕುದಾರಿಗಳನ್ನು ಮತ್ತು ಬಂಡವಲಶಾಹಿಗಳನ್ನು ಉಳಿಸಲು ಪ್ರಯತ್ನ ಪಟ್ಟರೆ ಯೋಜನೆಯ ಮೂಲಕ್ಕೇ ಕೊಡಲಿ ಇಟ್ಟಂತೆ. ಸಮಗ್ರ ಸಮಾಜದ ಹಿತ ಸಾಧನೆಗಾಗಿ ಸಿದ್ಧಗೊಳಿಸಿದ ಕಾರ್ಯಾಚರಣೆಗೆ ಯಾವ ವಿಶೇಷ ಹಕ್ಕುದಾರಿಗಳೂ ಅಡ್ಡ ಬರಬಾರದೆಂದು ಎಲ್ಲ ನಿಜವಾದ ಯೋಜನೆಯೂ ಅರಿತುಕೊಳ್ಳಬೇಕು. ಈ ವಿಶೇಷ ಹಕ್ಕುದಾರಿ ಸಂಸ್ಥೆಗಳನ್ನು ಮುಟ್ಟಬಾರದೆಂದು ೧೯೩೫ರ ಪಾರ್ಲಿಮೆಂಟ್ ಶಾಸನದ ಮೂಲತತ್ವವಾಗಿದ್ದುದರಿಂದ ಪ್ರಾಂತ ಕಾಂಗ್ರೆಸ್ ಸರಕಾರಗಳು ಉಸಿರೆತ್ತುವಂತೆ ಇರಲಿಲ್ಲ. ಭೂಮಿದಾರಿ ಪದ್ಧತಿ ಸ್ವಲ್ಪ ವ್ಯತ್ಯಾಸಗೊಳಿಸಿ, ಭೂ ವರಮಾನದ ಮೇಲೆ ತೆರಿಗೆ ವಿಧಿಸಲು ಮಾಡಿದ ಪ್ರಯತ್ನವನ್ನು ಸಹ ನ್ಯಾಯಾಸ್ಥಾನಗಳಿಗೆ ತೆಗೆದುಕೊಂಡು ಹೋಗಿ ವಿರೋಧಿಸತೊಡಗಿದರು.

ಯೋಜನೆಯ ಆಡಳಿತ ಸೂತ್ರ ಬಂಡವಲಗಾರರ ಕೈಯಲ್ಲೇ ಉಳಿದರೆ ಅವರಿಗೆ ಅಭ್ಯಾಸವಿರುವ ಚೌಕಟ್ಟಿನಲ್ಲೇ ಅದನ್ನು ಕಾರ್ಯಗತ ಮಾಡಲು ಪ್ರಯತ್ನಮಾಡುತ್ತಾರೆ. ಧನದಾಸೆಯಿಂದ ಲಾಭ ಸಂಪಾದನೆಯೇ ಮುಖ್ಯ ಧ್ಯೇಯವಾಗುತ್ತದೆ. ಅವರಿಗೆ ಎಷ್ಟೇ ಸದುದ್ದೇಶವಿರಲಿ—ಅವರಲ್ಲಿ ಅನೇಕರ ಉದ್ದೇಶವೂ ಒಳ್ಳೆಯದಿದೆ—ಹೊಸ ಮಾರ್ಗದಲ್ಲಿ ಯೋಚಿಸುವುದು ಅವರಿಗೆ ಅತಿಕಷ್ಟ. ಕೈಗಾರಿಕೆಯ ಮೇಲೆ ಸರಕಾರದ ಹತೋಟಿ ಇರಬೇಕೆಂದಾಗ ಸಹ ಇಂದಿನ ಸರಕಾರದಂತೆಯೇ ಮುಂದಿನ ಸರಕಾರವೂ ಇರುತ್ತೆಂಬ ಭಾವನೆ ಬಿಡಲು ಅವರಿಗೆ ಸಾಧ್ಯವಿಲ್ಲ.

ರೈಲುಮಾರ್ಗಗಳ ಸ್ವಾಮ್ಯ ಮತ್ತು ಆಡಳಿತ, ಕೈಗಾರಿಕೆ ಹಣ ಕಾಸು ಮತ್ತು ಸಾಮಾನ್ಯ ಜನ ಜೀವನದ ಮೇಲೆ ಹೆಚ್ಚಿನ ಹತೋಟಿ ಮತ್ತು ಪ್ರವೇಶಾಧಿಕಾರ ಈಗಿನ ಸರಕಾರಕ್ಕೆ ಇರುವುದರಿಂದ ಅದು ಸಮಾಜವಾದಿ ಸರಕಾರವಾಗುತ್ತಿದೆ ಎಂದು ಸಹ ವಾದಿಸುತ್ತಿದ್ದಾರೆ. ಆದರೆ ಈ ಹತೋಟಿ ಎಲ್ಲ ಮುಖ್ಯ

ವಿದೇಶೀಯರ ಕೈಯಲ್ಲಿ. ಅಲ್ಲದೆ, ಪ್ರಜಾಪ್ರಭುತ್ವದ ಸೋಂಕಿಲ್ಲದ ಸರಕಾರದ ಆ ವಾದದಲ್ಲಿ ಏನೂ ಹುರುಳಿಲ್ಲ. ಬಂಡವಲಗಾರರ ಸ್ವೇಚ್ಛಾ ಪ್ರವರ್ತನೆಗೆ ಸ್ವಲ್ಪ ಮಿತಿ ಕಲ್ಪಿಸಿದ್ದರೂ, ಅವರ ಹಕ್ಕುದಾರಿ ರಕ್ಷಣೆಯೆ ಆ ನೀತಿಯ ತಳಹದಿ. ಈ ವಿಶೇಷ ಹಕ್ಕುದಾರಿಗಳ ರಕ್ಷಣೆ ಬಿಟ್ಟು ಆರ್ಥಿಕ ಸಮಸ್ಯೆ ಯಾವುದೂ ಆ ಹಳೆಯ ಸಾಮ್ರಾಜ್ಯಷಾಹಿ ಪದ್ಧತಿಗೆ ಬೇಕಿರಲಿಲ್ಲ. ತನ್ನ ಹಿಂದಿನ ತಾಟಸ್ಥ್ಯ ನೀತಿಯಿಂದ ನೂತನ ಪರಿಸ್ಥಿತಿಯ ಅವಶ್ಯಕತೆ ಪೂರೈಸಲು ಸಾಧ್ಯವಾಗದೆ ಇದ್ದರೂ ತನ್ನ ಅಧಿಕಾರ ಸಂರಕ್ಷಣೆಗಾಗಿ ಫಾಸಿಸ್ಟ್ ತತ್ವದ ಸರ್ವಾಧಿಕಾರ ವಹಿಸಿಕೊಳ್ಳುವುದು ಅನಿವಾರ್ಯವಾಯಿತು. ಸರ್ವಾಧಿಕಾರವು ಆರ್ಥಿಕ ಚಲನವಲನಕ್ಕೆ ಅಡ್ಡಿ ಬರುತ್ತದೆ; ಇರುವ ಅಲ್ಪ ಸ್ವಲ್ಪ ನಾಗರಿಕ ಸ್ವಾತಂತ್ರವನ್ನು ಮೊಟಕುಮಾಡುತ್ತದೆ; ತನ್ನ ನಿರಂಕುಶ ಅಧಿಕಾರ ಮತ್ತು ಬಂಡವಲಷಾಹಿ ಪದ್ಧತಿಯನ್ನು ಸ್ವಲ್ಪ ವ್ಯತ್ಯಾಸ ಮಾಡಿಕೊಂಡು ಹೊಸ ಸನ್ನಿವೇಶ ಎದುರಿಸಲು ಸಿದ್ಧವಾಗುತ್ತದೆ. ಆದ್ದರಿಂದ ಅದು ಫ್ಯಾಸಿಸ್ಟ್ ದೇಶಗಳಂತೆ ಕೈಗಾರಿಕೋದ್ಯಮ ಮತ್ತು ರಾಷ್ಟ್ರಜೀವನದ ಮೇಲೆ ಆದಷ್ಟು ಹೆಚ್ಚು ಹತೋಟಿ ಇಟ್ಟುಕೊಂಡು, ವ್ಯಾಪಾರೋದ್ಯಮದಲ್ಲಿ ವ್ಯಕ್ತಿಸ್ವಾತಂತ್ರಕ್ಕೆ ಅನೇಕ ಮಿತಿ ಕಲ್ಪಿಸಿ ತನ್ನ ಹಳೆಯ ತಳಹದಿಯ ಮೇಲೆಯೇ ಒಂದು ಅಖಂಡ ಬಂಡೆಯಂಥ ಕೇಂದ್ರೀಕೃತ ಸರಕಾರ ಸ್ಥಾಪನೆ ಮಾಡಲು ಯತ್ನಮಾಡುತ್ತದೆ. ಈ ಸರ್ವಾಧಿಕಾರಕ್ಕೂ ಸಮಾಜವಾದಕ್ಕೂ ಅಜಗಜಾಂತರ; ಪರಕೀಯರ ಆಡಳಿತ ದಾಸ್ಯಕ್ಕೆ ಸಿಕ್ಕಿ ಬಿದ್ದಿರುವ ದೇಶದಲ್ಲಿ ಸಮಾಜವಾದದ ಮಾತನ್ನಾಡುವುದೇ ಅವಿವೇಕ. ಆ ಪ್ರಯತ್ನಕ್ಕೆ ತಾತ್ಕಾಲಿಕ ಯಶಸ್ಸು ದೊರೆಯುತ್ತೆನ್ನುವುದೂ ಅನುಮಾನ; ಅದರ ಬದಲು ಆ ಸಮಸ್ಯೆಗಳೇ ಇನ್ನೂ ಕಠಿಣವಾಗಬಹುದು. ಆದರೆ ಯುದ್ಧಕಾಲದಲ್ಲಿ ಆರೀತಿ ಕೆಲಸ ಮಾಡಲು ಸ್ವಲ್ಪ ಅನುಕೂಲ ಪರಿಸ್ಥಿತಿ ದೊರೆಯುತ್ತದೆ. ಪ್ರಜಾಪ್ರಭುತ್ವ ಸರಕಾರ ಸ್ಥಾಪನೆ ಮಾಡದೆ ಕೈಗಾರಿಕೆ ಸಂಪೂರ್ಣ ರಾಷ್ಟ್ರೀಕರಣ ಮಾಡಿದರೆ ಬೇರೊಂದು ಬಗೆಯ ಸುಲಿಗೆಗೆ ಅವಕಾಶದೊರೆಯುತ್ತದೆ. ಏಕೆಂದರೆ, ಕೈಗಾರಿಕೆ ಸರಕಾರದ್ದಾದರೂ ಸರಕಾರದ ಮೇಲೆ ಜನರ ಹತೋಟಿ ಏನೂ ಇರುವುದಿಲ್ಲ.

ನಮ್ಮ ಸಮಸ್ಯೆಗಳು ಆರ್ಥಿಕ, ಸಾಮಾಜಿಕ, ಔದ್ಯೋಗಿಕ, ಕೃಷಿಕ, ಸಂಸ್ಥಾನಿಕ ಮತ್ತು ಜಾತೀಯ —ಯಾವುದೇ ಇರಲಿ ಇಂದಿನ ರಾಜಕೀಯ ಚೌಕಟ್ಟಿನಲ್ಲಿ ನಾವು ಅದನ್ನು ಯೋಚಿಸುತ್ತಿರುವುದೇ ನಮ್ಮ ಎಲ್ಲ ಮುಖ್ಯ ತೊಂದರೆಗಳಿಗೂ ಕಾರಣ. ವಿಶೇಷ ಹಕ್ಕುದಾರಿ ಮತ್ತು ಸ್ಥಾನಮಾನಗಳ ರಕ್ಷಣೆ ಆ ಚೌಕಟ್ಟಿನ ಮುಖ್ಯ ಲಕ್ಷಣ. ಅದನ್ನು ಉಳಿಸಿಕೊಂಡು ಸಮಸ್ಯೆ ಪರಿಹಾರಮಾಡುವುದೆಂದರೆ ಅದು ಅಸಾಧ್ಯ. ವಿಷಮ ಪರಿಸ್ಥಿತಿಯಿಂದ ಪಾರಾಗಲು ತೇಪೆ ಕೆಲಸದ ಪರಿಹಾರ ಕಾರ್ಯ ಕೈಗೊಂಡರೆ ಅದು ಬಹು ಕಾಲ ಬಾಳಲಾರದು. ಹಳೆಯ ಸಮಸ್ಯೆಗಳು ಬಗೆಹರಿಯದೆ ಹಾಗೇ ಉಳಿಯುತ್ತವೆ. ಹೊಸ ಸಮಸ್ಯೆಗಳೂ, ಅಥವ ಹಳೆಯ ಸಮಸ್ಯೆಗಳ ಹೊಸ ರೂಪಗಳೂ ಅವುಗಳ ಜೊತೆಯಲ್ಲಿ ಸೇರಿಕೊಳ್ಳುತ್ತವೆ. ನಮ್ಮ ಜೀರ್ಣ ಸಂಪ್ರದಾಯಗಳು ಮತ್ತು ಜೀವನ ರೀತಿ ಈ ನಮ್ಮ ದೃಷ್ಟಿಗೆ ಸ್ವಲ್ಪ ಕಾರಣವಾದರೂ ಅದಕ್ಕೆ ಮುಖ್ಯ ಕಾರಣ ಬ್ರಿಟಿಷ್ ಸರಕಾರದ ಉಕ್ಕಿನ ಚಕ್ರವ್ಯೂಹ. ಅದಿಲ್ಲದಿದ್ದರೆ ಆ ಮುರುಕು ಮನೆ ಎಂದೋ ಮಣ್ಣುಗೂಡುತ್ತಿತ್ತು.

ಭಾರತದ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಭಿನ್ನತೆಗಳು ಯುದ್ಧದಿಂದ ಇನ್ನೂ ಉಲ್ಬಣಿಸಿವೆ. ರಾಜಕೀಯದಲ್ಲಿ ಭಾರತದ ಬಿಡುಗಡೆ ಮತ್ತು ಸ್ವಾತಂತ್ರ್ಯ ವಿಷಯದ ಮಾತಿಗೆ ತುದಿ ಮೊದಲಿಲ್ಲ. ಆದರೆ ನಿರಂಕುಶ ಸರ್ವಾಧಿಕಾರದ ಬಂಧನ ಬಲೆಯಲ್ಲಿ ಬಿದ್ದು ದೇಹಾದ್ಯಂತ ದಬ್ಬಾಳಿಕೆಗೆ ಇಂದು ಬಲಿಯಾಗಿರುವಂತೆ ತಮ್ಮ ಸಾವಿರಾರು ವರ್ಷಗಳ ಇತಿಹಾಸದಲ್ಲಿ ಬೇರೆ ಯಾವಾಗಲೂ ಇರಲಿಲ್ಲ. ಆರ್ಥಿಕ ನೀತಿಯಲ್ಲಿ ಬ್ರಿಟಿಷರ ಪ್ರಾಬಲ್ಯಕ್ಕೇ ಪ್ರಾಧಾನ್ಯ; ಆದರೂ ಭಾರತೀಯ ಆರ್ಥಿಕ ಜೀವನದ ವಿಕಸನ ಪ್ರಯತ್ನವು ಕೊರಳು ಕುಣಿಕೆಯನ್ನೇ ಕೀಳುವಂತೆ ಇದೆ; ಒಂದು ಕಡೆ ಕ್ಷಾಮ ಮತ್ತು ಅಪಾರ ಸಂಕಟ ಇನ್ನೊಂದು ಕಡೆ ಹೊನ್ನಿನ ಹುಚ್ಚು ಹೊಳೆ. ಬಡತನ ಶ್ರೀಮಂತಿಕೆ, ಕಟ್ಟುವುದು ಒಡೆಯುವುದು; ಸಂಘಟನೆ ವಿಭಜನೆ; ಜೀರ್ಣ ಭಾವನೆ ನೂತನ ಭಾವನೆ, ಇವು ಒಂದರ ಹಿಂದೆ ಒಂದು ಬರುತ್ತಲೇ ಇವೆ. ಆದರೂ ಈ ಎಲ್ಲ ಶೂನ್ಯ ನಿರಾಸೆಯ ಕಗ್ಗತ್ತಲ ಮಧ್ಯೆ ಅದುಮಲಾಗದ ಅಂತಃಶಕ್ತಿಯ ಅಮೃತ ಬೀಜದ ಅಂಕುರ ಒಂದಿದೆ.

ಯುದ್ಧದಿಂದ ಕೈಗಾರಿಕೋದ್ಯಮದ ಮತ್ತು ವಸ್ತು ನಿರ್ಮಾಣ ಶಕ್ತಿಯ ಪ್ರಗತಿಯಾಯಿತು. ಆದರೂ ಇದರಿಂದ ಹೊಸ ಕೈಗಾರಿಕೆಗಳ ಸ್ಥಾಪನೆಗೆ ಹೆಚ್ಚು ಪ್ರೋತ್ಸಾಹ ದೊರೆಯಿತೊ ಅಥವ ಹಳೆಯ ಕೈಗಾರಿಕೆಗಳನ್ನೇ ಅಭಿವೃದ್ಧಿಗೊಳಿಸಿ ಮಾರ್ಪಡಿಸಿದರೊ ಹೇಳಲು ಸಾಧ್ಯವಿಲ್ಲ. ಯುದ್ಧಕಾಲದ ಕೈಗಾರಿಕಾ ಚಟುವಟಿಕೆಯ ಅಂಕಿ ಅಂಶವು ಒಂದೇ ರೀತಿ ಇರುವುದನ್ನು ನೋಡಿದರೆ ದೇಶದ ಕೈಗಾರಿಕೋದ್ಯಮದಲ್ಲಿ ಯಾವ ಹೆಚ್ಚಿನ ಪ್ರಗತಿಯೂ ಆಗಿಲ್ಲವೆಂದು ಸ್ಪಷ್ಟವಾಗುತ್ತದೆ. ಇನ್ನೂ ಕೆಲವು ಅರ್ಥಶಾಸ್ತ್ರ ನಿಪುಣರು ಯುದ್ಧ ಮತ್ತು ಯುದ್ಧ ಕಾಲದ ಬ್ರಿಟಿಷರ ನೀತಿಯಿಂದ ಭಾರತದ ಕೈಗಾರಿಕೋದ್ಯಮವು ಬೆಳೆಯುವುದರ ಬದಲು ನಿಜವಾಗಿ ಮೊಟಕಾಗಿದೆ ಎಂದು ಹೇಳುತ್ತಾರೆ. ಪ್ರಮುಖ ಅರ್ಥಶಾಸ್ತ್ರ ನಿಪುಣರಲ್ಲಿ ಒಬ್ಬರೂ, ತಾತಾ ಕಂಪೆನಿಯ ಡೈರೆಕ್ಟರುಗಳಲ್ಲಿ ಒಬ್ಬರೂ ಆದ ಡಾಕ್ಟರ್ ಜಾನ್. ಮಥಾಯ್ "ಯುದ್ಧದಿಂದ ಭಾರತದ ಕೈಗಾರಿಕಾ ಪ್ರಗತಿಗೆ ಬಹಳ ಪ್ರೋತ್ಸಾಹ ದೊರೆತಿದೆ ಎಂಬ ಸಾಮಾನ್ಯ ಭಾವನೆಗೆ ಯಾವ ಆಧಾರವೂ ಇಲ್ಲ. ಮೊದಲೇ ಇದ್ದ ಕೆಲವು ಕೈಗಾರಿಕೆಗಳು ಯುದ್ಧದ ಆವಶ್ಯಕತೆ ಪೂರೈಸಲು ತಮ್ಮ ವಸ್ತು ನಿರ್ಮಾಣ ಶಕ್ತಿ ಹೆಚ್ಚಿಸಿಕೊಂಡಿರುವುದು ನಿಜ. ಆದರೆ ದೇಶದ ಹಿತದೃಷ್ಟಿಯಿಂದ ಯುದ್ಧಕ್ಕೆ ಮುಂಚೆಯೇ ಯೋಚಿಸಿದ್ದ ಕೆಲವು ಅತ್ಯವಶ್ಯಕ ಕೈಗಾರಿಕೆಗಳನ್ನೂ ಯುದ್ಧ ನೆಪದಿಂದ ಕೈಬಿಡಲಾಗಿದೆ. ಎಲ್ಲ ದೃಷ್ಟಿಯಿಂದ ಸೂಕ್ಷ್ಮವಾಗಿ ಹೋಲಿಸಿ ನೋಡಿದರೆ ಕೆನಡ ಮತ್ತು ಆಸ್ಟ್ರೇಲಿಯಾ ದೇಶಗಳಂತೆ ಭಾರತದಲ್ಲೂ ಕೈಗಾರಿಕಾ ಪ್ರಗತಿ ಆಗಬೇಕಾಗಿತ್ತು; ಆದರೆ ಅದಕ್ಕೆ ಬದಲು ಯುದ್ಧದಿಂದ ಪ್ರಗತಿಗೆ ತೊಂದರೆಯೇ ಹೆಚ್ಚಾಗಿದೆ. ಮೂಲವಸ್ತು ನಿರ್ಮಾಣಕ್ಕೆ ಆವಶ್ಯವಾದ ಪ್ರಕೃತಿ ಸಂಪತ್ತು ಎಲ್ಲವೂ ಭಾರತದಲ್ಲಿ ಇದೆ" ಎಂದು ಹೇಳಿದ್ದಾರೆ. ಕೈಗಾರಿಕೋದ್ಯಮದ ಅಂಕಿ ಅಂಶಗಳ ಸಾಕ್ಷ್ಯದಿಂದ ಈ ಅಭಿಪ್ರಾಯಕ್ಕೆ ಸಮರ್ಥನೆ ದೊರೆಯುತ್ತದೆ. ಯುದ್ಧ ಪೂರ್ವದ ವೇಗದಿಂದ ಕೈಗಾರಿಕಾ ಪ್ರಗತಿ ಆಗಿದ್ದರೂ ಹೊಸ ಕೈಗಾರಿಕೆಗಳು ಬೆಳೆಯುತ್ತಿದ್ದವು; ಒಟ್ಟಿನಲ್ಲಿ ಹೆಚ್ಚು ವಸ್ತು ನಿರ್ಮಾಣವೂ ಆಗುತ್ತಿತ್ತು.*

ಆದರೆ ಯುದ್ಧದಿಂದ ಒಂದು ಅಂಶ ಮಾತ್ರ ಯಾವ ಅನುಮಾನಕ್ಕೂ ಆಸ್ಪದವಿಲ್ಲದಂತೆ ಸ್ಪಷ್ಟವಾಯಿತು. ಅವಕಾಶ ಮಾತ್ರ ದೊರೆತರೆ ತನ್ನ ಅಪಾರ ಪ್ರಕೃತಿ ಸಂಪತ್ತು ಉಪಯೋಗಿಸಿ ಅನತಿ ಕಾಲದಲ್ಲಿ ಅಧಿಕ ವಸ್ತು ನಿರ್ಮಾಣಮಾಡುವ ಶಕ್ತಿ ದೇಶಕ್ಕೆ ಇದೆ ಎಂದು. ಕಳೆದ ಐದು ವರ್ಷಗಳಲ್ಲಿ ಎಷ್ಟೇ ಅಡಚಣೆ ತಂದು ಒಡ್ಡಿದರೂ ಒಂದು ಆರ್ಥಿಕ ವ್ಯಕ್ತಿಯಾಗಿ ದೊಡ್ಡ ಬಂಡವಾಳ ಶೇಖರಿಸಿದೆ. ಈ ಬಂಡವಾಳ ಸ್ಟರ್ಲಿಂಗ್ ರೂಪದಲ್ಲಿರುವುದರಿಂದ ಭಾರತಕ್ಕೆ ದೊರಕುವಂತೆ ಇಲ್ಲ; ಮುಂದೆ ದೊರಕದಂತೆ ಅಡ್ಡಿ ಮಾಡುವುದಾಗಿಯೂ ಹೇಳುತ್ತಿದಾರೆ. ಬ್ರಿಟಿಷ್ ಸರಕಾರ ಮತ್ತು ಅಮೆರಿಕದ ಸಂಯುಕ್ತ ಸಂಸ್ಥಾನಗಳಿಗಾಗಿ ಇಂಡಿಯಾ ಸರಕಾರ ವೆಚ್ಚಮಾಡಿದ ಹಣವೇ ಈ ಬಂಡವಾಳ. ಅದು ಭಾರತದ ಅಸಂಖ್ಯಾತ ಜನ

---

* ಶ್ರೀ. ಜೆ. ಆರ್. ಡಿ. ತಾತಾ ೧೯೪೫ನೇ ಮೇ ೩೦ನೇ ದಿನ ಲಂಡನ್‌ನಗರದಲ್ಲಿ ಯುದ್ಧದಿಂದ ಭಾರತದ ಕೈಗಾರಿಕೆಗಳು ಬೆಳೆಯುವುದಕ್ಕೂ ಕೈಗಾರಿಕೋತ್ಪತ್ತಿ ಹೆಚ್ಚುವುದಕ್ಕೂ ಅವಕಾಶವಾಗಿದೆ ಎಂಬ ವಾದ ನಿರಾಕರಿಸಿದರು. "ಎಲ್ಲೋ ಒಂದೆರಡು ಕಡೆ ಸ್ವಲ್ಪ ಪ್ರಗತಿಯಾಗಿರಬಹುದು. ಆದರೆ ಒಟ್ಟಿನಲ್ಲಿ, ಯುದ್ಧ ಶಸ್ತ್ರಾಸ್ತ್ರ ಮತ್ತು ಇತರ ವಿಶೇಷ ಕೈಗಾರಿಕೆಗಳನ್ನು ಬಿಟ್ಟರೆ ಬೇರೆ ಯಾವ ಕೈಗಾರಿಕಾ ಪ್ರಗತಿಯೂ ಆಗಿಲ್ಲ. ಯುದ್ಧವಿಲ್ಲದಿದ್ದರೆ ಅನೇಕ ಕೈಗಾರಿಕೆಗಳನ್ನು ಸ್ಥಾಪಿಸಬಹುದಾಗಿತ್ತು. ಇಟ್ಟಿಗೆ, ಉಕ್ಕು ಮತ್ತು ಯಂತ್ರಸಾಮಗ್ರಿ ದೊರೆಯದೆ ನಾನೇ ಅನೇಕ ಕೈಗಾರಿಕೆಗಳ ಸ್ಥಾಪನೆ ನಿಲ್ಲಿಸಿದ್ದೇನೆ. ಯುದ್ಧಕಾಲದಲ್ಲಿ, ಭಾರತದಲ್ಲಿ ಆರ್ಥಿಕ ಮತ್ತು ಕೈಗಾರಿಕಾ ಪ್ರಗತಿಯಾಗಿದೆ ಎಂದು ಹೇಳುವವರಿಗೆ ಭಾರತದ ನಿಜವಾದ ಪರಿಸ್ಥಿತಿ ತಿಳಿಯದು." ಎಂದು ಹೇಳಿದ್ದಾರೆ. ಪುನಃ "ಈ ಗುಳ್ಳೆ ನಾನು ಒಡೆಯಬೇಕು. ಯುದ್ಧದಿಂದ ಭಾರತದ ಸಂಪತ್ತು ಹೆಚ್ಚಿದೆ; ಭಾರತ ಹೆಚ್ಚು ಲಾಭ ಸಂಪಾದಿಸಿದೆ ಎಂದು ಹೇಳುವುದು ಶುದ್ಧ ಅವಿವೇಕ. ಒಂದಲ್ಲ ಒಂದು ಕಾರಣದಿಂದ ಭಾರತದಲ್ಲಿ ಯಾವ ಮುಖ್ಯಪ್ರಗತಿಯೂ ಆಗಿಲ್ಲ. ಅದಕ್ಕೆ ಪ್ರತಿಯಾಗಿ ವಿಶೇಷ ಹಾನಿಯಾಗಿದೆ. ಯುದ್ಧ. ದೆಸೆಯಿಂದ ಮತ್ತು ಯುದ್ಧಕ್ಕಾಗಿ ಭಾರತ ತೆತ್ತ ನೆರವಿನಿಂದ ಬಂಗಾಲದಲ್ಲಿ ಕೋಟಿಗಟ್ಟಲೆ ಜನ ಕ್ಷಾಮದಿಂದ ಸತ್ತರು. ಈಗ ಬಟ್ಟೆಯ ಕ್ಷಾಮವೂ ಒದಗಿದೆ. ಯಾವ ಆರ್ಥಿಕ ಪ್ರಗತಿಯೂ ಆಗಿಲ್ಲ ಎಂದು ಇದರಿಂದಲೇ ಸ್ಪಷ್ಟವಾಗುತ್ತದೆ" ಎಂದು ಹೇಳಿದ್ದಾರೆ.

ಕೋಟಿ ಅನುಭವಿಸುವ ಹಸಿವು, ಕ್ಷಾಮ, ಸಾಂಕ್ರಾಮಿಕ ಜಾಡ್ಯಗಳು, ನಿರ್ವೀರ್ಯತೆ, ರೋಗ ಎದುರಿಸಲು ದೌರ್ಬಲ್ಯ, ಬೆಳವಣಿಗೆಯ ಅಭಾವ, ಕ್ಷಾಮ ಮತ್ತು ರೋಗಗಳಿಂದ ಒದಗಿದ ಸಾವು ಇವುಗಳ ಮೊತ್ತ.

ಈ ಬಂಡವಾಳ ಶೇಖರಣೆಯಿಂದ ತಾನು ಇಂಗ್ಲೆಂಡಿಗೆ ಕೊಡಬೇಕಾಗಿದ್ದ ಸಾಲವನ್ನೆಲ್ಲ ತೀರಿಸಿ ಭಾರತ ಈಗ ಬಂಡವಾಳಗಾರ ರಾಷ್ಟ್ರವಾಗಿದೆ. ಅಕ್ಷಮ್ಯ ಅಲಕ್ಷ್ಯ ಮತ್ತು ಅನಾಯಕತ್ವದಿಂದ ದೇಶದ ಜನತೆ ಅನಿರ್ವಚನೀಯ ಸಂಕಟ ಅನುಭವಿಸಬೇಕಾಯಿತು. ಆದರೆ ಅತ್ಯಲ್ಪ ಕಾಲದಲ್ಲಿ ಅಪಾರ ಹಣ ಸಂಪಾದಿಸಬಲ್ಲ ಶಕ್ತಿಯನ್ನು ಮಾತ್ರ ಯಾರೂ ಅಲ್ಲಗಳೆಯುವಂತಿಲ್ಲ. ಐದು ವರ್ಷ ಭಾರತವು ಯುದ್ಧಕ್ಕಾಗಿ ವೆಚ್ಚಮಾಡಿದ ಹಣವು ಕಳೆದ ನೂರಾರುವರ್ಷ ಬ್ರಿಟಿಷರು ಭಾರತದಲ್ಲಿ ಹಾಕಿದ ಬಂಡವಾಳಕ್ಕಿಂತ ಬಹಳ ಹೆಚ್ಚಿದೆ. ಇದರಿಂದ ಕಳೆದ ಒಂದು ಶತಮಾನದ ಬ್ರಿಟಿಷ್ ಆಡಳಿತದಲ್ಲಿ ನಿರ್ಮಿಸಿದ ರೈಲುದಾರಿಗಳು, ಕೆರೆಕಟ್ಟೆ ಮುಂತಾದ ಜನೋಪಯುಕ್ತ ಕಾರ್ಯಗಳು ಎಷ್ಟು ಅತ್ಯಲ್ಪ ಎಂಬುದು ವ್ಯಕ್ತವಾಗುತ್ತದೆ; ಮತ್ತು ಎಲ್ಲ ಕಡೆ ಮುಂದುವರಿಯಲು ಭಾರತಕ್ಕೆ ಅಪಾರ ಶಕ್ತಿ ಇದೆ ಎಂದೂ ಸ್ಪಷ್ಟ ಕಾಣುತ್ತದೆ. ಭಾರತದ ಕೈಗಾರಿಕಾ ಪ್ರಗತಿ ವಿರೋಧಿಸುವ ಪರಕೀಯ ಆಡಳಿತದ ನಿರಾಶಾದಾಯಕ ವಾತಾವರಣದಲ್ಲೇ ಇಷ್ಟು ದೊಡ್ಡ ಬಂಡವಾಳ ಸಂಪಾದಿಸ ಬಲ್ಲುದಾದರೆ ಸ್ವತಂತ್ರ ರಾಷ್ಟ್ರೀಯ ಸರಕಾರ ಬಂದು ದೇಶದ ಸಂಪದಭಿವೃದ್ಧಿಗೆ ಒಂದು ಯೋಜನ ಕಾರ್ಯಕ್ರಮ ಇಟ್ಟುಕೊಂಡು ಮುಂದುವರಿದರೆ ಕೆಲವೇ ವರ್ಷಗಳಲ್ಲಿ ಭಾರತ ಪುನಃ ಭೂಸ್ವರ್ಗವಾದೀತು.

ಇಂದಿನ ಭಾರತದ ಆರ್ಥಿಕ ಮತ್ತು ಸಾಮಾಜಿಕ ಪ್ರಗತಿಯನ್ನು ದೂರದ ಹಿಂದಿನ ಯಾವುದೋ ಒಂದು ಕಾಲಕ್ಕೆ ಹೋಲಿಸಿ ಹೆಮ್ಮೆಗೊಳ್ಳುವುದು ಬ್ರಿಟಿಷರಿಗೆ ವಾಡಿಕೆಯಾಗಿದೆ. ನೂರಾರು ವರ್ಷಗಳ ಹಿಂದಿನ ಪರಿಸ್ಥಿತಿಯೊಂದಿಗೆ ತಮ್ಮ ಸಾಧನೆ ಹೋಲಿಸಿ ತೃಪ್ತಿಪಡೆಯುತ್ತಾರೆ. ಔದ್ಯೋಗಿಕ ಕ್ರಾಂತಿ ಮತ್ತು ಕಳೆದ ಐವತ್ತು ವರ್ಷಗಳ ಔದ್ಯೋಗಿಕ ಸಂಶೋಧನೆಗಳು ಜೀವನದ ಗತಿಯನ್ನೂ ಮತ್ತು ಹುಮ್ಮಸ್ಸನ್ನೂ ಪೂರ್ಣ ಬದಲಾಯಿಸಿವೆ ಎಂದು ಭಾರತದ ವಿಷಯ ಮಾತನಾಡುವಾಗ ಪೂರ್ತಾ ಮರೆಯುತ್ತಾರೆ. ತಾವು ಭಾರತಕ್ಕೆ ಕಾಲಿಟ್ಟಾಗ ಭಾರತವು ಬರಡು ಅನಾಗರಿಕ ಮತ್ತು ಸತ್ವಹೀನ ರಾಷ್ಟ್ರವಾಗಿರದೆ ಉನ್ನತ ಸಂಸ್ಕೃತಿಯ ರಾಷ್ಟ್ರವಾಗಿತ್ತು; ಔದ್ಯೋಗಿಕ ಪ್ರಗತಿಯಲ್ಲಿ ಮಾತ್ರ ಮುಂದುವರಿಯಲಾಗದೆ ತಾತ್ಕಾಲಿಕವಾಗಿ ಹಿಂದೆ ಬಿದ್ದಿತ್ತು ಎಂದು ಮರೆಯುತ್ತಾರೆ.

ಈ ರೀತಿ ಹೋಲಿಸುವಾಗ ನಾವು ಉಪಯೋಗಿಸಬೇಕಾದ ಅಳತೆಗೋಲು ಯಾವುದು? ಕೊಡಬೇಕಾದ ಬೆಲೆ ಏನು? ಜಪಾನರು ಮಂಚುಕು ಜನರನ್ನು ತಮ್ಮ ಸ್ವಾರ್ಥಕ್ಕಾಗಿ ಎಂಟೇ ವರ್ಷಗಳಲ್ಲಿ ವಿಶೇಷ ಕೈಗಾರಿಕೋದ್ಯಮಿಗಳನ್ನಾಗಿ ಮಾಡಿದರು. ಭಾರತದಲ್ಲಿ ನೂರಾರು ವರ್ಷಗಳ ಬ್ರಿಟಿಷ್ ಆಡಳಿತದನಂತರ ಅಗೆದ ಕಲ್ಲಿದ್ದಲಿಗಿಂತ ಹೆಚ್ಚು ಕಲ್ಲಿದ್ದಲನ್ನು ಮಂಚುಕೊದಲ್ಲಿ ಅಗೆದರು. ಇತರ ಯಾವ ಸಾಮ್ರಾಜ್ಯಗಳೂ ಮಾಡದಷ್ಟು ಸಂಪತ್ತನ್ನು ಕೊರಿಯದಲ್ಲಿ ಜಪಾನರು ಸೂರೆಮಾಡಿದರು.* ಆದರೂ ಈ ಎಲ್ಲ ಮಹತ್ಸಾಧನೆಯ ಹಿಂದೆ ಗುಲಾಮಗಿರಿ, ದೌರ್ಜನ್ಯ, ಜನತೆಯ ಅಧಃಪತನ, ಸುಲಿಗೆ, ಜನತೆಯ ಆತ್ಮನಾಶದ ಪ್ರಯತ್ನದ ಭೀಕರ ಹಿನ್ನೆಲೆ ಇದ್ದೇ ಇದೆ. ದಲಿತ ಜನಾಂಗಗಳ ಮತ್ತು ರಾಷ್ಟ್ರಗಳ ಮೇಲೆ ರಾಕ್ಷಸೀ ದೌರ್ಜನ್ಯ ನಡೆಸುವುದರಲ್ಲಿ ನಾಜಿಗಳು ಮತ್ತು ಜಪಾನ್ ಇತರ ಎಲ್ಲರನ್ನೂ ಮರೆಸಿದ್ದಾರೆ. ಬ್ರಿಟಿಷರು ಇದನ್ನು ನಮಗೆ ತೋರಿಸಿ ತಾವು ಅಷ್ಟು ಕೆಟ್ಟವರಲ್ಲ ಎಂದು ನಮಗೆ ಹೇಳುತ್ತಿದಾರೆ. ಹೋಲಿಕೆ ಮತ್ತು ಗುಣಾವಗುಣ ನಿರ್ಧಾರದಲ್ಲಿ ಈ ಹೊಸ ಅಳತೆಗೋಲು ಸರಿ ಏನು?

ದೂರ ಪ್ರಾಚ್ಯದಲ್ಲಿ ಅನೇಕ ವರ್ಷಕಾಲ ನ್ಯೂಯಾರ್ಕ್ ಟೈಮ್ಸ್ ಪತ್ರಿಕೆಯ ಪ್ರತಿನಿಧಿಯಾಗಿದ್ದ ಹ್ಯಾಲೆಟ್ ಅಬೆಂಡ್ ತನ್ನ "ಪ್ಯಾಸಿಫಿಕ್ ಛಾರ್ಟರ್" ಎಂಬ ಗ್ರಂಥದಲ್ಲಿ "ಸಂಪದ ಅಭಿವೃದ್ಧಿದೃಷ್ಟಿಯಿಂದ ನೋಡಿದರೆ ಜಪಾನರು ಕೊರಿಯದಲ್ಲಿ ಅತ್ಯದ್ಭುತಕಾರ್ಯ ಸಾಧಿಸಿದ್ದಾರೆಂದು ಒಪ್ಪಲೇಬೇಕು. ಅವರು ಕೊರಿಯದಲ್ಲಿ ಕಾಲಿಟ್ಟಾಗ ಎಲ್ಲಿ ನೋಡಿದರೂ ಕೊಳೆ, ಅನಾರೋಗ್ಯ, ದಾರಿದ್ರ್ಯ ತಾಂಡವವಾಡುತ್ತಿದ್ದವು. ಬೆಟ್ಟಗಳ ಅರಣ್ಯಸಂಪತ್ತನ್ನೆಲ್ಲ ನಾಶಮಾಡಿದ್ದರು. ತಗ್ಗಿನ ಕಣಿವೆಗಳು ಮೇಲಿಂದಮೇಲೆ ಪ್ರವಾಹದ ಅನಾಹುತಕ್ಕೆ ಒಳಗಾಗಿದ್ದವು. ಒಳ್ಳೆಯ ರಸ್ತೆಗಳೇ

ಭಾರತದಲ್ಲಿ ಈಗ ಎಲ್ಲಿ ನೋಡಿದರೂ ನಿರಾಶಾ ಭಾವನೆ ಮತ್ತು ಅಸಹಾಯಕತೆ ಎದ್ದು ಕಾಣುತ್ತಿವೆ; ಮೇಲಿಂದ ಮೇಲೆ ಒದಗಿದ ದುರ್ಘಟನೆಗಳು, ಜನರು ಅನುಭವಿಸಿದ ಅಪಾರ ಸಂಕಟ, ಆಶಾಶೂನ್ಯ ಭವಿಷ್ಯ ಇವುಗಳ ಪರಿಣಾಮವಾಗಿ ನಿರಾಶೆ ಮೂಡಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಆದರೆ ಈ ಪ್ರಶಾಂತತೆಯ ಕೆಳಗಡೆ ಒಂದು ಹೊಸ ಜೀವನದ ಚೈತನ್ಯ ಶಕ್ತಿಯ ತಳಮಳವು, ಚಲನವು ಇದ್ದೇ ಇದೆ; ಕಾಣದ ಶಕ್ತಿಗಳು ಒಳಗೇ ಕೆಲಸಮಾಡುತ್ತಿವೆ. ಅಧಿನಾಯಕರ ಕಾರ್ಯ ಕ್ಷೇತ್ರವೆಲ್ಲ ಮೇಲೆ ಮಾತ್ರ, ಆದರೆ ಹಿಂದಿನ ಬಂಧನವನ್ನೆಲ್ಲ ಕಳಚಿಕೊಂಡು ಚೇತನಗೊಳ್ಳುತ್ತಿರುವ ಜನತೆಯ ಅವ್ಯಕ್ತ, ಅವ್ಯವಸ್ಥಿತ ಪ್ರೇರಣೆಯು ಅವರನ್ನು ತನ್ನದೇ ಒಂದು ದಾರಿಯಲ್ಲಿ ಎಳೆದೊಯ್ಯುತ್ತಿದೆ.

## ೮. ಭಾರತದ ಬೆಳವಣಿಗೆಗೆ ಅಡ್ಡಿ

ವ್ಯಕ್ತಿಯಂತೆ ಪ್ರತಿಯೊಂದು ಜನಾಂಗಕ್ಕೂ ಅನೇಕ ಮುಖಗಳು; ಅದರ ಜೀವನಕ್ಕೆ ಅನೇಕ ಪ್ರವೇಶಗಳು. ಈ ಬಹುಮುಖ ಜನಾಂಗ ಜೀವನದಲ್ಲಿ ಒಂದಕ್ಕೊಂದಕ್ಕೆ ಪ್ರಬಲ ಆತ್ಮೀಯ ಸಂಬಂಧ ವಿದ್ದರೆ ಮಾತ್ರ ಜನಾಂಗ ಜೀವನ ಸುಲಲಿತವಾಗುತ್ತದೆ. ಇಲ್ಲವಾದರೆ ಒಂದಕ್ಕೊಂದಕ್ಕೆ ವಿರೋಧ ಬಂದು, ಜನಾಂಗ ಜೀವನ ಛಿದ್ರಗೊಂಡು ತೊಂದರೆಗೀಡಾಗುತ್ತದೆ. ಸಾಮಾನ್ಯವಾಗಿ ಅನ್ಯೋನ್ಯ ಭಾವನೆ ಬೆಳೆ ಬೆಳೆಯುತ್ತ ಒಂದು ಬಗೆಯ ಸಾಮರಸ್ಯವೇರ್ಪಡುತ್ತದೆ. ಸಾಮಾನ್ಯ ಬೆಳವಣಿ ಗೆಗೆ ತೊಂದರೆ ಬಂದರೆ ಅಥವ ಸುಲಭವಾಗಿ ಜೀರ್ಣಿಸಿಕೊಳ್ಳಲಾಗದ ಯಾವುದಾದರೂ ವಿಶೇಷ ವ್ಯತ್ಯಾಸವಾದರೆ ಆಗ ಆ ವಿವಿಧ ಮುಖಗಳಲ್ಲಿ ವಿರೋಧ ಹುಟ್ಟುತ್ತದೆ. ಮೇಲಿನ ಅಭಿನ್ನತೆ ಮತ್ತು ಘರ್ಷಣೆಯು ಬಹುಕಾಲ ಯಾವ ಬೆಳವಣಿಗೆಗೂ ಅವಕಾಶವಿಲ್ಲದೆ ಭಾರತದ ಮನಸ್ಸಿನಲ್ಲಿ ಮತ್ತು ಭಾವ ನೆಯಲ್ಲಿ ಮೂಲ ಹೋರಾಟ ಒಂದು ಇದ್ದೇ ಇದೆ. ಯಾವ ಸಮಾಜವೇ ಆಗಲಿ ಭದ್ರವೂ ಪ್ರಗತಿಪರವೂ ಇರಬೇಕಾದರೆ ಸ್ವಲ್ಪ ಹೆಚ್ಚು ಕಡಮೆ ಭದ್ರವಾದ ಮೂಲತತ್ತ್ವಗಳ ತಳಹದಿ ಅದಕ್ಕೆ ಬೇಕು ಮತ್ತು ಕಾರ್ಯೋನ್ಮುಖ ದೃಷ್ಟಿಯೂ ಇರಬೇಕು; ಎರಡೂ ಅತ್ಯವಶ್ಯಕ ತೋರುತ್ತದೆ. ಕಾರ್ಯೋನ್ಮುಖ ದೃಷ್ಟಿ ಇಲ್ಲದಿದ್ದರೆ ಜೀವನ ಪಾಚಿಗಟ್ಟಿ ಕೊಳೆತು ನಾರುತ್ತದೆ; ಕೆಲವು ಮೂಲ ತತ್ತ್ವಗಳ ಭದ್ರ ತಳಹದಿ ಇಲ್ಲ ದಿದ್ದರೆ ಸಮಾಜ ಜೀವನ ಛಿದ್ರವಾಗಿ ನಾಶಹೊಂದುತ್ತದೆ.

ಭಾರತದಲ್ಲಿ ಶಾಶ್ವತ, ಸರ್ವ ವ್ಯಾಪಕ, ನಿರುಪಾಧಿಕ, ಮೂಲತತ್ತ್ವಗಳ ಅನ್ವೇಷಣೆ ಅನಾದಿಕಾಲ ದಿಂದ ನಡೆದಿದೆ. ಜೊತೆಗೆ ಕಾರ್ಯೋನ್ಮುಖ ದೃಷ್ಟಿ ಇತ್ತು ಮತ್ತು ವ್ಯತ್ಯಾಸಗೊಳ್ಳುತ್ತಿರುವ ಪ್ರಪಂಚದ ಮತ್ತು ಜೀವನದ ಅಭಿರುಚಿ ಬಿಟ್ಟಿರಲಿಲ್ಲ. ಜನಾಂಗ ಭದ್ರತೆ, ಸುರಕ್ಷತೆ ಮತ್ತು ಉಳಿವಿಗೆ ಹೆಚ್ಚು ಪ್ರಾಮುಖ್ಯತೆ ಕೊಟ್ಟರೂ ಈ ಎರಡೂ ತಳಹದಿಯ ಮೇಲೆ ಒಂದು ಭದ್ರವಾದ ಪ್ರಗತಿಪರ ಸಮಾಜ ಕಟ್ಟಿದರು. ಆದರೆ ಕ್ರಮೇಣ ಕಾರ್ಯೋನ್ಮುಖ ದೃಷ್ಟಿ ಕ್ಷೀಣಗೊಂಡು ಶಾಶ್ವತ ತತ್ತ್ವಗಳ ಹೆಸರಿನಲ್ಲಿ ಸಮಾಜದ ರಚನೆ ಬಿಗಿಯಾಗಿ ಯಾವ ಪರಿವರ್ತನೆಗೂ ಅವಕಾಶವಿಲ್ಲವಾಯಿತು. ನಿಶ್ಚಯವಾಗಿ

---

ಇರಲಿಲ್ಲ. ಅನಕ್ಷರತೆ, ವಿಷಮಶೀತಜ್ವರ, ಮೈಲಿಬೇನೆ, ಕಾಲರ, ಆಮಶಂಕೆ, ಪ್ಲೇಗ್ ಮುಂತಾದ ಜಾಡ್ಯಗಳು ಸಾಂಕ್ರಾಮಿಕವಾಗಿದ್ದವು. ಈಗ ಬೆಟ್ಟಗಳಮೇಲೆಲ್ಲ ದಟ್ಟವಾದ ಕಾಡು ಬೆಳೆದಿದೆ. ರೈಲ್ವೆ, ಟೆಲಿಫೋನ್, ಟೆಲಿಗ್ರಾಫ್ ಸೌಕರ್ಯ ಅತ್ಯುತ್ತಮವಿದೆ. ಸಾರ್ವಜನಿಕ ಆರೋಗ್ಯ ಬಹಳ ಚೆನ್ನಾಗಿದೆ. ಒಳ್ಳೆಯ ರಾಜಮಾರ್ಗಗಳಿವೆ. ಪ್ರವಾಹದ ಹಾವಳಿ ತಪ್ಪಿಸಿ, ಅನೇಕ ನೀರಾವರಿ ಯೋಜನೆ ಕೈಗೊಂಡುದರ ಫಲವಾಗಿ ಆಹಾರ ಸಮೃದ್ಧಿ ಇದೆ. ಒಳ್ಳೆಯ ಬಂದರು ಗಳನ್ನು ಕಟ್ಟಿ ಅವನ್ನು ಉತ್ತಮರೀತಿ ನಡೆಸುತ್ತಿದ್ದಾರೆ. ೧೯೦೫ರಲ್ಲಿ ೧,೧೦,೦೦,೦೦೦ ಇದ್ದ ಜನಸಂಖ್ಯೆ ಈಗ ೨೪೦೦೦೦೦೦ಕ್ಕೆ ಏರಿದೆ ಮತ್ತು ಜನರ ಜೀವನಮಟ್ಟ ಈ ಶತಮಾನದ ಆರಂಭದಲ್ಲಿದ್ದುದಕ್ಕಿಂತ ಈಗ ಬಹಳ ಉನ್ನತ ವಿದೆ. ಇದರಿಂದ ದೇಶದ ಪ್ರಗತಿ ಮತ್ತು ಆರೋಗ್ಯ ಎಷ್ಟು ಉತ್ತಮಗೊಂಡಿದೆ ಯೋಚಿಸಿ" ಎಂದು ಬರೆದಿದ್ದಾನೆ. "ಆದರೆ ಈ ಜೀವನ ಸೌಕರ್ಯವ ಪ್ರಗತಿ ಎಲ್ಲ ಕೊರಿಯನರಿಗಾಗಿ ಮಾಡಿದ್ದಲ್ಲ; ಜಪಾನರಿಗೆ ಹೆಚ್ಚಿನ ಲಾಭ ದೊರೆಯ ಲೆಂದು ಮಾಡಿದ್ದು" ಎಂದು ಅಬೆಂಡ್ ಹೇಳುತ್ತಾನೆ.

ನೋಡಿದರೆ ಸಮಾಜರಚನೆ ಅಷ್ಟು ಕಠಿಣವಿರಲಿಲ್ಲ. ಕ್ರಮೇಣ ಪರಿವರ್ತನೆ ಆಗುತ್ತಲೇ ಇತ್ತು. ಸ್ವಲ್ಪ ಹೆಚ್ಚು ಕಡಮೆ ಸ್ವತಂತ್ರವಿದ್ದ ಜಾತಿಗಳ ಯೋಜನೆ, ಒಟ್ಟು ಕುಟುಂಬ ಜೀವನ, ಸ್ವಯ ಮಾಡಳಿತದ ಗ್ರಾಮಜೀವನ ಈ ಜನಾಂಗ ಜೀವನದ ಆಧಾರಸ್ತಂಭಗಳಾದವು. ಅನೇಕ ನ್ಯೂನತೆ ಗಳಿದ್ದರೂ ಮಾನವ ಸ್ವಭಾವ ಮತ್ತು ಸಮಾಜಕ್ಕೆ ಅವಶ್ಯವಿದ್ದ ಕೆಲವು ಮುಖ್ಯ ಅಂಶಗಳನ್ನು ಅವು ತೃಪ್ತಿಗೊಳಿಸಿದ್ದರಿಂದ ಅಷ್ಟು ದೀರ್ಘಕಾಲ ಅವು ಬಾಳಿದವು. ಪ್ರತಿಯೊಂದು ಜಾತಿಪಂಥಕ್ಕೂ ಭದ್ರತೆ ಮತ್ತು ಸುರಕ್ಷತೆ ಇತ್ತು; ಪ್ರತಿಯೊಂದು ಪಂಥಕ್ಕೂ ಸ್ವತಂತ್ರ ಭಾವನೆ ಇತ್ತು. ಸಮಾಜದ ಸಾಮಾನ್ಯ ಅಧಿಕಾರ ಸಂಬಂಧವನ್ನು ಪ್ರತಿಬಿಂಬಿಸುತ್ತ ಇದ್ದುದರಿಂದ ಜಾತಿ ಪದ್ಧತಿ ಉಳಿಯಿತು. ಸಮಾಜದ ರೂಢಮೂಲ ಭಾವನೆಯ ಬೆಂಬಲ ಮಾತ್ರವಲ್ಲದೆ ಕಾರ್ಯ ಪಟುತ್ವ, ಬುದ್ಧಿಶಕ್ತಿ, ಕಾರ್ಯ ದಕ್ಷತೆ ಮತ್ತು ಆತ್ಮತ್ಯಾಗಕ್ಕೆ ಸಿದ್ಧತೆ ಮತ್ತು ಅವಕಾಶ ಸದಾ ಇರುತ್ತಿದ್ದುದರಿಂದ ಜಾತಿಗಳ ಹಕ್ಕು ಬಾಧ್ಯತೆಗಳಿಗೂ ಬೆಂಬಲ ದೊರೆಯಿತು. ಪರಸ್ಪರ ಹಕ್ಕುಗಳಿಗಾಗಿ ಹೋರಾಟ ನಡೆಸಿ ಈ ಭಾವನೆ ಬೆಳೆಸಲಿಲ್ಲ; ಆದರೆ ಪ್ರತಿ ವ್ಯಕ್ತಿಯೂ ಇತರರಿಗಾಗಿ ಮಾಡಬೇಕಾದ ಕರ್ತವ್ಯ, ಮತ್ತು ಸಮ ರ್ಪಕ ರೀತಿಯಲ್ಲಿ ನಿರ್ವಹಣೆ, ಪ್ರತಿ ಜಾತಿಪಂಥದಲ್ಲಿ ಮತ್ತು ಜಾತಿ ಜಾತಿಗಳಲ್ಲಿ ಸಂಪೂರ್ಣ ಸಹಕಾರ, ಒಟ್ಟಿನಲ್ಲಿ ಹೋರಾಟಕ್ಕಿಂತ ಶಾಂತಿ ಸ್ಥಾಪನೆಗೆ ಹೆಚ್ಚಿನ ಪ್ರಾಶಸ್ತ್ಯ ಇವುಗಳ ಆಧಾರದ ಮೇಲೆ ಬೆಳೆಯಿತು. ಸಮಾಜರಚನೆ ಇಷ್ಟು ಬಿಗಿ ಇದ್ದರೂ ಭಾವನಾ ಸ್ವಾತಂತ್ರ್ಯಕ್ಕೆ ಯಾವ ನಿರ್ಬಂಧವೂ ಇರಲಿಲ್ಲ.

ಯಾವ ಆದರ್ಶವನ್ನು ಭಾರತೀಯ ನಾಗರಿಕತೆ ತನ್ನ ಗುರಿಯಾಗಿ ಇಟ್ಟುಕೊಂಡಿತ್ತೊ ಅದನ್ನು ಬಹುಮಟ್ಟಿಗೆ ಸಾಧಿಸಿತು; ಆದರೆ ಆ ಸಾಧನೆಯಲ್ಲೇ ಜೀವನ ಮಾಸತೊಡಗಿತು. ಏಕೆಂದರೆ ಪರಿವರ್ತ ನೆಗೆ ಅವಕಾಶವಿಲ್ಲದ ಕಠಿನ ವಾತಾವರಣದಲ್ಲಿ ಕಾರ್ಯೋನ್ಮುಖ ಜೀವನ ಬಹುಕಾಲ ಸಾಧ್ಯವಿಲ್ಲ.

ಭಾರತಕ್ಕೆ ಯಾವುದು ಕೊರತೆ ಆಯಿತೊ ಅದು ಆಧುನಿಕ ಪಾಶ್ಚಾತ್ಯದ ಆಸ್ತಿಯಾಯಿತು; ಆಸ್ತಿ ಯಾದುದು ಮಾತ್ರವಲ್ಲದೆ ಮಿತಿಮೀರಿ ಬೆಳೆಯಿತು. ಕಾರ್ಯೋನ್ಮುಖ ದೃಷ್ಟಿ ಇತ್ತು; ಶಾಶ್ವತ ಸರ್ವ ಸಮ್ಮತ ಅಂತಿಮ ಮೂಲತತ್ವಗಳಿಗೆ ಲೆಕ್ಕಿಸದೆ ಜೀವನ ಪರಿವರ್ತನೆಯಲ್ಲಿ ವಿಶೇಷ ಆಸಕ್ತಿ ತೋರಿಸಿತು. ಕರ್ತವ್ಯ ಮತ್ತು ಆಭಾರಗಳಿಗೆ ಯಾವ ಮನ್ನಣೆ ಕೊಡದೆ ಹಕ್ಕು ಬಾಧ್ಯತೆಗಳಿಗೇ ಪ್ರಾಮುಖ್ಯತೆ ಕೊಟ್ಟರು. ಕಾರ್ಯತತ್ಪರತೆ, ಆಕ್ರಮಣಶೀಲತೆ, ಆರ್ಜನ ದೃಷ್ಟಿ, ಅಧಿಕಾರ ಮತ್ತು ದರ್ಪದ ಆಸೆ, ನಾಳಿನ ಪರಿಣಾಮ ಏನೆ ಇರಲಿ ಇಂದಿನ ಸುಖ ಮುಖ್ಯ ಎಂಬ ಭಾವನೆ ಅದರ ಮುಖ್ಯ ಗುಣಗಳಾದವು. ಕಾರ್ಯೋನ್ಮುಖ ದೃಷ್ಟಿಯಿಂದ ಜೀವನ ಪ್ರಗತಿಪರವೂ ಪೂರ್ಣ ಸುಖ ಮಯವೂ ಇತ್ತು; ಆದರೆ ಅದರ ಉಷ್ಣಾಂಶ ದಿನದಿನಕ್ಕೂ ಏರುತ್ತಲೇ ಇದ್ದುದರಿಂದ ಅದು ಜ್ವರ ಪೀಡಿತವಿತ್ತು.

ತನ್ನ ನಿಶ್ಚಲ ಜೀವನದಿಂದ ಭಾರತೀಯ ನಾಗರಿಕತೆ ಸಂಕುಚಿತಗೊಂಡು, ಆತ್ಮಗತವಾಗಿ, ಆತ್ಮ ಪ್ರಶಂಸೆಯಲ್ಲಿ ಮಗ್ನವಾದರೆ ಆಧುನಿಕ ಪಾಶ್ಚಾತ್ಯ ಸಂಸ್ಕೃತಿ ಅನೇಕ ಮಹತ್ಕಾರ್ಯ ಸಾಧಿಸಿದ್ದರೂ ಮಾನವ ಜೀವನದ ಮೂಲಪ್ರಶ್ನೆಗಳ ಪರಿಹಾರದಲ್ಲಿ ಯಾವ ಕೃತಕೃತ್ಯತೆಯನ್ನೂ ಪಡೆದಿಲ್ಲ. ಘರ್ಷಣೆ ಅದರಲ್ಲಿ ಸದಾ ಅಂತರ್ಗತವಿದೆ. ಆಗಾಗ ಪ್ರಳಯಾಂತಕ ಆತ್ಮನಾಶಕ ಕೃತ್ಯಗಳಲ್ಲಿ ತೊಡಗುತ್ತಲೇ ಇದೆ. ಅದಕ್ಕೊಂದು ಭದ್ರತೆ, ಜೀವನಕ್ಕೊಂದು ಅರ್ಥಕೊಡುವ ಒಂದು ಉನ್ನತ ಆದರ್ಶ ಮತ್ತು ಕೆಲವು ಮೂಲ ತತ್ವಗಳು ಇಲ್ಲವೆಂದು ಸ್ಪಷ್ಟ ತೋರುತ್ತದೆ. ಈ ಅಭಾವ ಏನು ಎಂದು ಮಾತ್ರ ನಾನು ಹೇಳಲಾರೆ. ಆದರೂ ಆ ನಾಗರಿಕತೆಯಲ್ಲಿ ಕಾರ್ಯೋನ್ಮುಖತೆ, ಜೀವನಶಕ್ತಿ ಮತ್ತು ಉತ್ಸುಕತೆ ಪೂರ್ಣ ಇರುವುದರಿಂದ ಅದರ ಭವಿಷ್ಯ ಉಜ್ವಲವಿದೆ.

ಆಧುನಿಕ ಪಾಶ್ಚಾತ್ಯದಿಂದ ಭಾರತ ಮತ್ತು ಚೀನ ಎರಡೂ ಕಲಿಯಬೇಕಾದ್ದು ಬಹಳ ಇದೆ. ಏಕೆಂದರೆ ಪಾಶ್ಚಾತ್ಯವು ಇಂದಿನ ಯುಗಧರ್ಮವನ್ನು ಪ್ರತಿಬಿಂಬಿಸುತ್ತದೆ. ಆದರೆ ಪಾಶ್ಚಾತ್ಯಕ್ಕೆ ಸಹ ಅನೇಕ ವಿಷಯಗಳನ್ನು ಕಲಿಯಬೇಕಾದ ಆವಶ್ಯಕತೆ ಇದೆ. ಜೀವನದ ಗಾಢ ರಹಸ್ಯಗಳು ಕೆಲವನ್ನು

ಅದು ಅರಿಯದಿದ್ದರೆ ಅದರ ವೈಜ್ಞಾನಿಕ, ಔದ್ಯೋಗಿಕ ಪ್ರಗತಿಯಿಂದ ಯಾವ ಶಾಂತಿಯೂ ದೊರೆಯ ಲಾರದು. ಈ ಗಾಢ ರಹಸ್ಯಗಳು ಎಲ್ಲ ಕಾಲದ ಎಲ್ಲ ದೇಶಗಳ ದಾರ್ಶನಿಕರ ಮನಸ್ಸನ್ನೂ ಸೆಳೆದಿವೆ.

ಭಾರತದಲ್ಲಿ ಜಡತ್ವ ಬೆಳೆಯಿತು ನಿಜ; ಆದರೆ ಪರಿವರ್ತನೆ ಏನೂ ಆಗಿಲ್ಲವೆಂದು ಭಾವಿಸುವುದು ತಪ್ಪು. ಪರಿವರ್ತನೆಯೇ ಇಲ್ಲವೆಂದರೆ ಸಾವು ಸಿದ್ಧ. ಒಂದು ಉನ್ನತ ನಾಗರಿಕ ಜನಾಂಗವಾಗಿ ಇನ್ನೂ ಉಳಿದಿರುವುದು ನೋಡಿದರೆ ಕಾಲಸ್ಥಿತಿಗನುಗುಣವಾಗಿ ನಿರಂತರ ಪರಿವರ್ತನೆ ಆಗುತ್ತಲೇ ಇದೆ ಎಂದು ಸ್ಪಷ್ಟವಾಗುತ್ತದೆ. ಬ್ರಿಟಿಷರು ಭಾರತಕ್ಕೆ ಕಾಲಿಟ್ಟಾಗ ಔದ್ಯೋಗಿಕ ಪ್ರಗತಿಯಾಗಿ ಭಾರತದಲ್ಲೂ ಅನೇಕ ಪರಿವರ್ತನೆಗಳಾಗುತ್ತಿದ್ದವು. ಆದರೆ ಬ್ರಿಟಿಷರ ಆಕ್ರಮಣದಿಂದ ಭಾರತದ ಸ್ವಾಭಾವಿಕ ಬೆಳೆವಣಿಗೆಗೆ ಅಡ್ಡಿ ಬಂದಿತು. ಔದ್ಯೋಗಿಕ ಪ್ರಗತಿ ಹಿಂದೆ ಬಿತ್ತು; ಅದರ ಪರಿಣಾಮವಾಗಿ ಸಾಮಾಜಿಕ ಪ್ರಗತಿಯೂ ಇಲ್ಲ ದಾಯಿತು. ಎಲ್ಲ ಅಧಿಕಾರವೂ ಪರಕೀಯರ ಕೈಯಲ್ಲಿ ಕೇಂದ್ರೀಕೃತವಾಗಿ, ಹಿಂಸೆಯೇ ಆ ಅಧಿಕಾರ ಮೂಲವಾಗಿ, ಈಗ ನಿಜವಾಗಿ ಅರ್ಥವಿಲ್ಲದ ಜಾತಿಪಂಗಡಗಳಿಗೆ ಪ್ರೋತ್ಸಾಹಿಸಿ ಒಡಕು ತರಲು ಪರಕೀಯರು ಆರಂಭಿಸಿದುದರಿಂದ ಸಮಾಜದ ಸಾಮಾನ್ಯ ಅಧಿಕಾರ ಸಂಬಂಧವು ಕಡಿದು ಪರಸ್ಪರ ಹೊಂದಿಕೊಂಡು ಸಾಮರಸ್ಯದಿಂದ ಮುಂದುವರಿಯಲು ಅಸಾಧ್ಯವಾಯಿತು. ಭಾರತೀಯ ಸಮಾಜ ಜೀವನ ಹೆಚ್ಚು ಹೆಚ್ಚು ಕೃತಕವಾಗತೊಡಗಿತು. ಆ ಸಮಾಜದಲ್ಲಿ ಪ್ರಮುಖಪಾತ್ರವಹಿಸುತ್ತಿದ್ದ ಅನೇಕ ವ್ಯಕ್ತಿಗಳಿಗೆ ಮತ್ತು ಪಂಗಡಗಳಿಗೆ ಯಾವ ಕರ್ತವ್ಯವೂ ಇಲ್ಲದಾಯಿತು. ಪರದೇಶೀಯರ ಬೆಂಬಲವೇ ಅವರ ಆಶ್ರಯ ವಾಯಿತು. ಇತಿಹಾಸದೃಷ್ಟಿಯಿಂದ ಅವರ ಕರ್ತವ್ಯ ಎಂದೋ ಮುಗಿದಿತ್ತು. ಪರದೇಶೀ ಅಧಿಕಾರ ವರ್ಗದ ಬೆಂಬಲ ಇಲ್ಲದಿದ್ದರೆ ಹೊಸ ಶಕ್ತಿಗಳ ಪ್ರವಾಹದಲ್ಲಿ ಎಂದೋ ಕೊಚ್ಚಿಹೋಗುತ್ತಿದ್ದರು. ಈಗ ಹುಲ್ಲುಹೊಟ್ಟನಿಂದ ಮಾಡಿದ ಬೊಂಬೆಗಳಂತೆ ವಿದೇಶೀ ಆಡಳಿತವರ್ಗದ ಕೈಗೊಂಬೆಗಳಾಗಿ ಅವರ ಪ್ರತಿ ನಿಧಿಗಳಾಗಿ ಅವರ ಪ್ರತಿನಿಧಿಗಳಾದರು. ಆ ಮೂಲಕ ರಾಷ್ಟ್ರಜೀವನದ ಗತಿಯಿಂದ ದೂರವಾದರು. ಕ್ರಾಂತಿಯ ಪರಿಣಾಮವಾಗಿಯೋ, ಪ್ರಜಾಸತ್ತಾತ್ಮಕ ಶಕ್ತಿಯ ಹೊಡೆತದಲ್ಲೋ ಸಾಮಾನ್ಯವಾಗಿ ಅವರು ನಿರ್ನಾಮವಾಗುತ್ತಿದ್ದರು ಅಥವ ಬೇರೆ ಒಂದು ಕರ್ತವ್ಯಭಾರ ಹೊರಬೇಕಿತ್ತು. ಆದರೆ ಪರಕೀಯರ ಸರ್ವಾಧಿಕಾರ ನಡೆಯುವವರೆಗೆ ಅದು ಯಾವುದಕ್ಕೂ ಅವಕಾಶವಿರಲಿಲ್ಲ. ಆದ್ದರಿಂದ ಭಾರತದಲ್ಲಿ ಎಲ್ಲೆಲ್ಲೂ ಈ ಪ್ರಾಚ್ಯ ವಸ್ತುಗಳು ಹಾಗೇ ಉಳಿದವು. ಅವುಗಳ ಮೆರೆವಣಿಗೆಯ ತೆರೆಯ ಹಿಂದೆ ನಿಜವಾದ ಪರಿವರ್ತನೆ ನಡೆಯುತ್ತಿತ್ತು. ಸಮಾಜದಲ್ಲಿ ನಿಜವಾದ ಸಾಮಾಜಿಕ ಸಾಮರಸ್ಯ ಅಥವ ಅಧಿಕಾರ ಸಂಬಂಧ ಬೆಳೆಯುವುದಕ್ಕೆ ಆಗಲಿ ವ್ಯಕ್ತಗೊಳ್ಳುವುದಕ್ಕೇ ಆಗಲಿ ಅವಕಾಶ ಇರಲಿಲ್ಲ. ಕೃತಕ ಸಮಸ್ಯೆ ಗಳಿಗೇ ವಿಶೇಷ ಪ್ರಾಮುಖ್ಯತೆ ದೊರೆಯಿತು.

ರಾಷ್ಟ್ರದಜೀವನದ ಸ್ವಾಭಾವಿಕ ಬೆಳೆವಣಿಗೆಗೆ ವಿರೋಧ ನಿಂತು ಸಮಾಜದ ವಿವಿಧ ಅಂಗಗಳು ಪರಸ್ಪರ ಪೋಷಕವಾಗಿ ಸಮರಸ ಜೀವನ ನಡೆಸಲು ಬ್ರಿಟಿಷ್ ಅಧಿಕಾರಿವರ್ಗ ಅಡ್ಡಬಂದುದೇ ಇಂದಿನ ನಮ್ಮ ಎಲ್ಲ ಸಮಸ್ಯೆಗಳಿಗೆ ಮುಖ್ಯಕಾರಣ. ಈ ಹೊರಗಿನ ಶಕ್ತಿ ನಿರ್ಮೂಲವಾದರೆ ಭಾರತೀಯ ಅರಸರ ಪ್ರಶ್ನೆ ತಾನಾಗಿಯೇ ಸರಿಹೋಗುತ್ತದೆ. ಇಲ್ಲಿನ ಅಲ್ಪಸಂಖ್ಯಾತರ ಪ್ರಶ್ನೆಗೂ ಬೇರೆಕಡೆಗಳ ಅಲ್ಪಸಂಖ್ಯಾತರ ಪ್ರಶ್ನೆಯೇ ಅಲ್ಲ. ಅದರಲ್ಲಿ ಅನೇಕ ಪ್ರಶ್ನೆಗಳಿವೆ; ಹಿಂದಿನ ಮತ್ತು ಇಂದಿನ ಪರಿಸ್ಥಿತಿಗೆ ನಾವೇ ಜವಾ ಬ್ದಾರಿ ಹೊರಬೇಕು. ಆದರೂ ಈ ಎಲ್ಲ ಮತ್ತು ಇತರ ಸಮಸ್ಯೆಗಳ ಹಿಂದೆ ಬ್ರಿಟಿಷ್ ಭಾವನೆಯು ಸಾಧ್ಯವಾದ ಮಟ್ಟಿಗೆ ಭಾರತೀಯ ಜೀವನದಲ್ಲಿ ಈಗಿರುವ ಆರ್ಥಿಕ ಮತ್ತು ರಾಜಕೀಯ ರಚನೆ ಮುಂದು ವರಿಯಬೇಕು; ಅದಕ್ಕಾಗಿ ಸಮಾಜದಲ್ಲಿ ಹಿಂದುಳಿದ ಪಂಗಡದವರನ್ನು ಎತ್ತಿಕಟ್ಟಿ ಅದೇ ಸ್ಥಿತಿಯಲ್ಲಿ ಇಟ್ಟು ಪ್ರೋತ್ಸಾಹಿಸಬೇಕು ಎಂದು ಇದೆ. ಆರ್ಥಿಕ ಮತ್ತು ರಾಜಕೀಯ ಪ್ರಗತಿ ಬೇಡವೆಂದು ಪ್ರತ್ಯಕ್ಷ ಹೇಳಿಲ್ಲ ನಿಜ. ಆದರೆ ಪ್ರತಿಗಾಮಿ ಪಂಗಡಗಳ ಮತ್ತು ಹಕ್ಕುದಾರಿ ಗುಂಪುಗಳ ಒಪ್ಪಿಗೆ ಪಡೆದು ಬನ್ನಿ ಎಂದು ಹೇಳುತ್ತಿದಾರೆ. ಆ ಒಪ್ಪಿಗೆ ದೊರೆಯಬೇಕಾದರೆ ಅವರ ವಿಶೇಷ ಅಧಿಕಾರ, ಹಕ್ಕುದಾರಿಗಳನ್ನೆಲ್ಲ ಒಪ್ಪಿ ಮುಂದಿನ ರಾಜ್ಯಾಡಳಿತದಲ್ಲಿ ಅವರಿಗೆ ವಿಶೇಷಸ್ಥಾನ ಕೊಟ್ಟರೆ ಮಾತ್ರ ಸಾಧ್ಯ; ಅಂದರೆ ನಿಜವಾದ ಎಲ್ಲ

ಪ್ರಗತಿ ಮತ್ತು ಪರಿವರ್ತನೆಗೆ ನಾವೇ ಅಡ್ಡಗೋಡೆ ಹಾಕಿದಂತೆ. ಹೊಸ ರಾಜ್ಯವಿಧಾನದಲ್ಲಿ ನಿಜವಾದ ಶಕ್ತಿ ಮತ್ತು ಸಾಮರ್ಥ್ಯ ಇರಬೇಕೆಂದರೆ ಜನತೆಯ ಬಹುಮತದ ಆಸೆ ಮತ್ತು ಆಕಾಂಕ್ಷೆಗಳನ್ನು ಅದು ಪ್ರತಿಬಿಂಬಿಸಬೇಕು. ಆದರೆ ಭಾರತದಲ್ಲಿ ನಮಗೆ ಇರುವ ಮುಖ್ಯ ತೊಂದರೆ ಎಂದರೆ ಬ್ರಿಟಿಷರು ಮತ್ತು ಅನೇಕ ಭಾರತೀಯರು ಭಾವೀ ಭಾರತದ ರಾಜ್ಯವಿಧಾನಕ್ಕೆಂದು ಮಾಡಿರುವ ಎಲ್ಲ ಸಲಹೆಗಳಲ್ಲಿ ಇಂದಿನ ಸಮಾಜ ಶಕ್ತಿಗಳನ್ನೇ ಅಲಕ್ಷೆ ಮಾಡಲಾಗಿದೆ ಮತ್ತು ಬಹುಕಾಲದಿಂದ ಇದುವರೆಗೆ ಅಷ್ಟದಿಗ್ಬಂಧನದಲ್ಲಿ ಸಿಕ್ಕು ಈಗತಾನೆ ಹೊರಹೊಮ್ಮುತ್ತಿರುವ ಆಂತರಿಕ ಶಕ್ತಿಗಳನ್ನು ಉಪೇಕ್ಷೆಮಾಡಲಾಗಿದೆ; ಅದಕ್ಕೆ ಪ್ರತಿಯಾಗಿ, ಇಂದಿನ ಭಾರತಕ್ಕೆ ಯಾವ ಅರ್ಥವೂ ಇಲ್ಲದೆ ಕ್ಷಯದಿಂದ ನಡೆಸುತ್ತಿರುವ ಹಿಂದಿನ ರಚನೆಯನ್ನೇ ಇನ್ನೂ ಕಠಿಣಮಾಡಿ ಭಾರತದಮೇಲೆ ಹೊರಿಸಲು ಪ್ರಯತ್ನ ನಡೆಯುತ್ತಿದೆ.

ಇಂದಿನ ನಮ್ಮ ನಿಜವಾದ ಸಮಸ್ಯೆ ಎಂದರೆ ಬ್ರಿಟಿಷ್ ಸೈನ್ಯದ ಭಾರತ ಆಕ್ರಮಣ ಮತ್ತು ಅದರ ಕಾರ್ಯನೀತಿ. ಆ ನೀತಿಯನ್ನು ಅನೇಕವೇಳೆ ಪ್ರತಿಪಾದಿಸಿದ್ದಾರೆ. ಅನೇಕ ಸವಿ ಮಾತುಗಳಲ್ಲಿ ಹೇಳಿದ್ದಾರೆ, ಆದರೆ ಈಚಿನ ದಂಡನಾಯಕ ವೈಸರಾಯ್ ಒಬ್ಬ ಬಹಳ ಸ್ಪಷ್ಟ ತಿಳಿಸಿದ್ದಾನೆ. ಬ್ರಿಟಿಷರಿಗೆ ಎಲ್ಲಿಯವರೆಗೆ ಸಾಧ್ಯವೋ ಅಲ್ಲಿಯವರೆಗೆ ಸೈನ್ಯದ ಆಕ್ರಮಣ ಮುಂದುರಿಯಲೇಬೇಕು ಎಂದು. ಆದರೆ ಶಕ್ತಿಗಳ ಬೆಳವಣಿಗೆಗೆ ಮಾತ್ರವಲ್ಲದೆ ಸೈನ್ಯಶಕ್ತಿಯನ್ನೇ ನಂಬಿದವರು ಕನಸಿನಲ್ಲಿ ಎಣಿಸದ ದುಷ್ಪರಿಣಾಮಗಳಿಗೆ ಅವಕಾಶವಾಗುತ್ತದೆ.

ಈ ಮಧ್ಯೆ ಭಾರತದ ಬೆಳವಣಿಗೆ ಇಲ್ಲದೆ ಪ್ರಗತಿ ಶೂನ್ಯತೆಯ ಪರಿಣಾಮ ನಾವು ಪ್ರತ್ಯಕ್ಷ ಕಾಣುತ್ತಿದ್ದೇವೆ. ಎದ್ದು ಕಾಣುವ ಮುಖ್ಯ ಪರಿಣಾಮಗಳೆಂದರೆ ಭಾರತದಲ್ಲಿ ಬ್ರಿಟಿಷ್ ಆಡಳಿತದ ಬಂಜೆತನ ಮತ್ತು ಅದರಫಲ. ಭಾರತೀಯರ ನೀರಸಜೀವನ ರಚನಾತ್ಮಕ ಶಕ್ತಿಗೂ ಜನತೆಯಮೇಲೆ ಅಧಿಕಾರ ನಡಸುವ ಪರಕೀಯ ಆಡಳಿತವರ್ಗಕ್ಕೂ ಬಹುದೂರ. ಈ ಆಡಳಿತವರ್ಗಕ್ಕೆ ಅಧೀನರಾಷ್ಟ್ರದಿಂದ ಸಾವಿರಾರು ಮೈಲಿಗಳಾಚೆ ತಮ್ಮದೇ ಒಂದು ಪ್ರತ್ಯೇಕ ಆರ್ಥಿಕ ಮತ್ತು ಸಂಸ್ಕೃತಿ ಕೇಂದ್ರವಿದ್ದು ಅದಕ್ಕೆ ವರ್ಣಭೇದದ ಬೆಂಬಲವೂ ಇರುವಾಗ ಈ ವಿಚ್ಛೇದನ ಇನ್ನೂ ಸಂಪೂರ್ಣವಾಗುತ್ತದೆ ಮತ್ತು ಅಧೀನರಾಷ್ಟ್ರದ ರಚನಾತ್ಮಕ ಶಕ್ತಿಗೆ ಆಗ ಇರುವ ಒಂದೇ ಮಾರ್ಗ ಯಾವ ರೀತಿಯಲ್ಲಾದರೂ ಪರಾಕ್ರಮಣ ಪ್ರತಿಭಟನೆ. ಆದರೆ ಅದಕ್ಕೂ ಒಂದು ಮಿತಿ ಇರುವುದರಿಂದ ರಾಷ್ಟ್ರದ ದೃಷ್ಟಿಯೇ ಸಂಕುಚಿತವಾಗಿ ಒಳಗೆ ಬೆಳೆಯುತ್ತಿರುವ ಜೀವಂತ ಶಕ್ತಿಗಳು ತಮ್ಮಮೇಲಿನ ಕರಟ ಒಡೆದು ಹೊರಬೀಳಲು ವ್ಯಕ್ತವಾಗಿ ಮತ್ತು ಅವ್ಯಕ್ತವಾಗಿ ಮಾಡುವ ಪ್ರಯತ್ನವೇ ಈ ಪ್ರತಿಭಟನೆ. ಆದರೆ ಅದರ ದಾರಿ ನಿರಾಕರಣೆಯ ಕಡಿದಾದ ದಾರಿಯಾದ್ದರಿಂದ ನಮ್ಮ ಜೀವನದ ವಾಸ್ತವಿಕತೆಯ ವಿವಿಧ ಮುಖಗಳೊಂದಿಗೆ ಪೂರ್ಣ ಸಂಪರ್ಕವನ್ನಿಟ್ಟುಕೊಳ್ಳಲು ಅದಕ್ಕೆ ಸಾಧ್ಯವಿಲ್ಲವಾಗಿದೆ. ಮನೋವಿಕಾರಗಳು, ಪೂರ್ವಾಭಿಪ್ರಾಯಗಳು, ಭಯ ಸಂಶಯಗಳು ಬೆಳೆದು ನಮ್ಮ ಮನಸ್ಸನ್ನು ಬಗೆಗೆಡಿಸುತ್ತವೆ; ಜಾತಿ ಪಂಗಡಗಳ ಕಲ್ಪನೆಗಳು ರೂಪಗೊಳ್ಳುತ್ತವೆ; ನಿಜವಾದ ಪ್ರಶ್ನೆಗಳ ವಿಚಾರ ವಿಮರ್ಶೆಯ ಬದುಲು ಗುಂಪುಕೂಗು ಮತ್ತು ಸ್ವಾರ್ಥ ದೃಷ್ಟಿಗಳಿಗೆ ಪ್ರಾಧಾನ್ಯತೆ ದೊರೆಯುತ್ತದೆ. ಸತ್ವಶೂನ್ಯ ಪರಾಡಳಿತದ ಚೌಕಟ್ಟಿನಲ್ಲಿ ಯಾವ ಪರಿಣಾಮಕಾರಕ ಪರಿಹಾರಕ್ಕೂ ಅವಕಾಶವಿರುವುದಿಲ್ಲ; ಅಷ್ಟೇ ಅಲ್ಲದೆ ಅದು ಇನ್ನೂ ಕಠಿನವಾಗುತ್ತದೆ. ಭಾರತದ ಇಂದಿನ ಪರಿಸ್ಥಿತಿಯಲ್ಲಿ ಅರೆ ಬರೆ ಪರಿಹಾರಗಳಿಂದ ನಮ್ಮ ಸಮಸ್ಯೆಗಳು ಬಗೆ ಹರಿಯುವಂತಿಲ್ಲ; ಮತ್ತು ಕೇವಲ ಒಂದು ಮಾರ್ಗದಲ್ಲಿ ಮುಂದುವರಿದರೆ ಸಾಲದು. ಈಗ ಬೇಕಾದ್ದು ಒಂದು ದೊಡ್ಡ ಹೆಜ್ಜೆ ; ಸರ್ವತೋ ಮುಖ ಪ್ರಗತಿಬೇಕು, ಇಲ್ಲವಾದರೆ ಸರ್ವನಾಶ ಖಂಡಿತ.

ಪ್ರಪಂಚದಲ್ಲಿ ಎಲ್ಲ ಕಡೆ ಕಾಣುವಂತೆ ಭಾರತದಲ್ಲಿ ಸಹ ಒಂದು ಕಡೆ ಶಾಂತಿಯುತ ಪ್ರಗತಿ ಮತ್ತು ರಚನಾತ್ಮಕ ಶಕ್ತಿಗಳಿಗೂ, ಇನ್ನೊಂದು ಕಡೆ ವಿಚ್ಛೇದನ ಮತ್ತು ವಿನಾಶಕಾರಕ ಶಕ್ತಿಗಳಿಗೂ ಜೂಜಿನ ಪಂದ್ಯ ನಡೆಯುತ್ತಲೇ ಇದೆ. ಪ್ರತಿಯೊಂದು ವಿಪತ್ತು ಹಿಂದಿನದಕ್ಕಿಂತ ಇಂದು ಘೋರ. ನಮ್ಮ ಪೂರ್ವ ಕಲ್ಪನೆಗಳಂತೆ, ಮನಸ್ಸಿನ ನಿಲುವಿನಂತೆ ಈ ಪರಿಸ್ಥಿತಿಯನ್ನು ನಾವು ಆಶಾವಾದಿಗಳಾಗಿ ಅದರೂ ನೋಡ

ಬಹುದು ಅಥವ ನಿರಾಶಾವಾದಿಗಳಾಗಿ ನೋಡಬಹುದು. ಪ್ರಪಂಚವು ನೈತಿಕ ಬಲದಿಂದ ಮುಂದುವರಿಯುತ್ತದೆ, ಅಂತ್ಯದಲ್ಲಿ ಸತ್ಯಕ್ಕೇ ಜಯ ಎಂದು ನಂಬಿರುವವರು ನಿರ್ಲಿಪ್ತರಾಗಿ ನೋಡುತ್ತ ನಿಲ್ಲಬಹುದು ಅಥವ ಸಹಾಯಕರಾಗಬಹುದು ಮತ್ತು ದೇವರ ಮೇಲೆ ಭಾರ ಹಾಕಬಹುದು. ಇತರರು ತಮ್ಮ ಅಶಕ್ತ ಹೆಗಲ ಮೇಲೆ ಆ ಹೊರೆ ಹೊತ್ತು ಎಲ್ಲಕ್ಕೂ ಸಿದ್ಧರಿದ್ದು ಒಳ್ಳೆಯದನ್ನೇ ಆಶಿಸುತ್ತ ಮುಂದುವರಿಯಬಹುದು.

## ೯. ಧರ್ಮ, ದರ್ಶನ ಮತ್ತು ವಿಜ್ಞಾನ

ಹಿಂದಿನ ಸಂಪ್ರದಾಯಗಳು ಇಂದಿನ ಸಮಸ್ಯೆಗಳನ್ನು ಮುಚ್ಚದಂತೆ ಭಾರತ ಅವುಗಳ ಬಹು ಭಾಗವನ್ನು ತ್ಯಜಿಸಬೇಕು. ಈ ಗತಕಾಲದ ಶುಷ್ಕ ಸೌದೆಯ ಹೊರೆಯ ಭಾರದಿಂದ ನಮ್ಮ ಜೀವನ ಕುಸಿಯುತ್ತಿದೆ. ತನ್ನ ಕಾರ್ಯ ಪೂರೈಸಿದ ನಿರ್ಜೀವ ವಸ್ತು ಎಲ್ಲ ನಾಶವಾಗಬೇಕು. ಆದರೆ ಜೀವಂತವೂ ಸತ್ವಪೂರ್ಣವೂ ಇರುವುದನ್ನು ಸಹ ತೊರೆಯಬೇಕೆಂದಲ್ಲ. ನಮ್ಮ ಜನಾಂಗದ ಆದರ್ಶ ಧ್ಯೇಯಗಳನ್ನು, ಯುಗಯುಗಾಂತರಗಳಲ್ಲಿ ನಮ್ಮ ಜನ ಕಂಡ ದಿವ್ಯ ಕನಸುಗಳನ್ನು, ನಮ್ಮ ಆರ್ಯ ಋಷಿಗಳ ಜ್ಞಾನ ಜ್ಯೋತಿಯನ್ನು, ಅವರ ಅನ್ವೇಷಣೆ ಕುತೂಹಲ ಮತ್ತು ಮಾನಸಿಕ ಸಾಹಸಗಳನ್ನು, ಅವರ ಕಲ್ಪನಾ ವೈಖರಿಯನ್ನು, ಸಾಹಿತ್ಯ, ಕಲೆ, ಸಂಸ್ಕೃತಿಗಳಲ್ಲಿ ಅವರ ಅದ್ಭುತ ಸಾಧನೆಯನ್ನು, ಸತ್ಯ, ಸೌಂದರ್ಯ, ಮತ್ತು ಸ್ವಾತಂತ್ರ್ಯದ ಅವರ ಅಪಾರ ಪ್ರೇಮವನ್ನು, ಅವರು ನಮ್ಮೆದುರು ಇಟ್ಟ ಮೂಲ ಮೌಲ್ಯಗಳನ್ನು, ಜೀವನದ ಗಾಢ ರಹಸ್ಯಗಳ ಅವರ ಜ್ಞಾನ ಸಂಪತ್ತನ್ನು, ಭಿನ್ನ ಮಾರ್ಗಾನುವರ್ತಿಗಳಲ್ಲಿ ಅವರು ತೋರಿದ ಸಹನ ಶೀಲತೆಯನ್ನು, ಭಿನ್ನ ಜನಾಂಗದವರನ್ನೂ ಅವರ ಸಂಸ್ಕೃತಿಯನ್ನೂ ತಮ್ಮದನ್ನಾಗಿ ಮಾಡಿಕೊಂಡು, ಜೀರ್ಣಿಸಿಕೊಂಡು, ಬೇರೊಂದು ಮಿಶ್ರ ಸಂಸ್ಕೃತಿಯನ್ನು ಸೃಜಿಸಬಲ್ಲ ಅವರ ಹಿರಿಕೆ ಶಕ್ತಿಯನ್ನು ಎಂದಿಗೂ ಮರೆಯುವಂತೆ ಇಲ್ಲ. ಈ ಪ್ರಾಚೀನ ಜನಾಂಗವನ್ನು ಭದ್ರವಾಗಿ ಬೆಸೆದು ಕಟ್ಟಲು ಸಹಾಯಕವಾಗಿ ಈಗಲೂ ನಮ್ಮ ಮನಸ್ಸಿನ ಉಪಪ್ರಜ್ಞೆಯಲ್ಲಿ ಅಡಗಿರುವ ಅನಂತ ಅನುಭವಗಳನ್ನು ಎಂದಿಗೂ ಮರೆಯಲಾರೆವು ; ಮರೆಯುವುದೂ ಇಲ್ಲ; ಆ ಪೂರ್ವಾರ್ಜಿತ ಯಶೋರಾಶಿಯಿಂದ ಹೆಮ್ಮೆ ಪಡದಿರಲು ಸಾಧ್ಯವೂ ಇಲ್ಲ. ಭಾರತ ಅದನ್ನು ಮರೆತರೆ ತಾನು ಭಾರತವಾಗಿ ಉಳಿಯುವುದಿಲ್ಲ ; ಮತ್ತು ಅಂದೇ ನಮಗೊಂದು ಜೀವನ ಸೌಖ್ಯ ಮತ್ತು ಗೌರವ ಕೊಟ್ಟಿರುವುದು ಅಂದೇ ಮಣ್ಣುಗೂಡುತ್ತದೆ.

ಇದರಲ್ಲಿ ನಾವು ತ್ಯಜಿಸಬೇಕಾದುದು ಯಾವುದೂ ಇಲ್ಲ ; ಆದರೆ ತ್ಯಜಿಸಬೇಕಾದುದು ಭಾರತದ ಸೌಂದರ್ಯ ಮತ್ತು ಸಂದೇಶ ಮುಚ್ಚಿ ಮರೆಮಾಡಿರುವ ಯುಗಾಂತರಗಳ ಧೂಳು ಮತ್ತು ಕೊಳೆಯನ್ನು, ಭಾರತದ ಆತ್ಮವನ್ನು ಅದುಮಿ ಸಂಕುಚಿತ ಚೌಕಟ್ಟಿನಲ್ಲಿ ಬಂಧಿಸಿ, ಬೆಳವಣಿಗೆಗೆ ಅಡ್ಡ ಬಂದು ಶಿಲಾಮಯ ಮಾಡಿರುವ ದುರ್ಮಾಂಸ ಮತ್ತು ವಿಕಾರಗಳನ್ನು. ಈ ವಿಕಾರಗಳನ್ನೆಲ್ಲ ಕತ್ತರಿಸಿ ಎಸೆದು, ಆ ಪ್ರಾಚೀನ ಜ್ಞಾನ ಭಾಂಡಾರದ ತಿರುಳನ್ನು ಪುನಃ ಅರಿತುಕೊಂಡು, ಇಂದಿನ ನಮ್ಮ ಸ್ಥಿತಿಗತಿಗಳಿಗೆ ಹೊಂದಿಸಿಕೊಳ್ಳಬೇಕಾಗಿದೆ. ಸಾಂಪ್ರದಾಯಿಕ ಭಾವನೆ ಮತ್ತು ಜೀವನದಿಂದ ಇಂದು ಹೊರಬೀಳಬೇಕಾಗಿದೆ ; ಹಿಂದಿನ ಕಾಲದಲ್ಲಿ ಅವು ಎಷ್ಟೇ ಶ್ರೇಷ್ಠವಿದ್ದು ಪ್ರಯೋಜನಕಾರಿ ಇದ್ದರೂ ಇಂದು ಅವುಗಳಿಗೆ ಯಾವ ಅರ್ಥವೂ ಇಲ್ಲ. ಮಾನವ ಕುಲದ ಎಲ್ಲ ಸಾಧನೆಗಳು ನಮ್ಮದಾಗಬೇಕು ; ಪ್ರಗತಿ ಪರ ಮಾನವ ಸಾಹಸ ಕಾರ್ಯಗಳಿಗಿಂತ ಇಂದಿನವು ಹೆಚ್ಚು ಉತ್ಕೃಷ್ಟವೆಂದೂ ಹಳೆಯ ವಿಭಜನೆ ಅಥವ ರಾಷ್ಟ್ರೀಯ ಮೇರೆಗಳು ಇಂದು ನಿರುಪಯುಕ್ತವೆಂದೂ, ಪ್ರಪಂಚದಲ್ಲಿ ಮಾನವ ಕುಲಕ್ಕೆಲ್ಲ ಒಂದೇ ಮೇರೆ ಎಂದೂ ಅರಿಯಬೇಕು. ಜೀವನಕ್ಕೊಂದು ಅರ್ಥ ಕೊಡುವ ಸತ್ಯ, ಸೌಂದರ್ಯ ಮತ್ತು ಸ್ವಾತಂತ್ರ್ಯದ ಹಿರಿಯಾಸೆಯನ್ನು ಪುನರುಜ್ಜೀವಿಸಬೇಕು ; ಮತ್ತು ಭದ್ರವೂ, ಚಿರಕಾಲ ಬಾಳತಕ್ಕದ್ದೂ ಆದ ಈ ತಳಹದಿಯ ಮೇಲೆ ಯುಗಾಂತರಗಳಲ್ಲಿ ನಮ್ಮ ಭವ್ಯ ಸುಂದರ ಭವನ ನಿರ್ಮಾಣಕ್ಕೆ ಕಾರಣವಾಗಿ ನಮ್ಮ ಜನತೆಯ ವೈಶಿಷ್ಟ್ಯವಾದ ಉಜ್ವಲ ಕಾರ್ಯೋತ್ಸಾಹ ಮತ್ತು ಪ್ರೇಮವನ್ನು ಪುನಃ ಬೆಳೆಸಬೇಕು. ಮಾನವ ಕುಲದ ಇತಿಹಾಸ ಮತ್ತು ಸಾಹಸದ ಮುಂಬೆಳಗಿನವರೆಗೆ ಹೋಗುವ ಇತಿಹಾಸ ಪರಂಪರೆ ಇರುವ ಪ್ರಾಚೀನ ಜನಾಂಗ ನಾವು ಆಗಿದ್ದರೂ ಇಂದಿನ ಕಾಲಗತಿಗನುಗುಣವಾಗಿ ಪುನಃ ನಾವು ಯೌವನ ಪಡೆಯಬೇಕಾಗಿದೆ. ನಮ್ಮ ಭವಿಷ್ಯ

ದಲ್ಲಿ ಅಚಲ ವಿಶ್ವಾಸವನ್ನೂ, ಇಂದು ಮತ್ತೊಮ್ಮೆ ಅದುಮಲಾಗದ ಯೌವನ ಸಾಹಸ ಮತ್ತು ಸಂತೋಷ ವನ್ನೂ ತಾಳಬೇಕಾಗಿದೆ.

ಅಂತಿಮ ಸತ್ಯ ಒಂದು ಇದೆಯಾದರೆ ಆ ಸತ್ಯ ಶಾಶ್ವತವೂ, ನಾಶರಹಿತವೂ, ಅಪರಿವರ್ತಿತವೂ ಇರ ಬೇಕು. ಆದರೆ ಆ ಅನಂತ, ಶಾಶ್ವತ, ಅಪರಿವರ್ತಿತ ಸತ್ಯವು ಮಾನವನ ಪರಿಮಿತ ಮನಸ್ಸಿಗೆ ಪೂರ್ಣ ಗೋಚರವಾಗುವುದು ಕಷ್ಟ; ಕಾಲದೇಶಗಳ ಮಿತಿಗೆ ಅನುಗುಣವಾಗಿ, ಆ ಮನಸ್ಸಿನ ಪರಿಪಕ್ವತೆಯ ಮಟ್ಟಕ್ಕನುಗುಣವಾಗಿ ಮತ್ತು ಪ್ರಚಲಿತ ಯುಗ ಧರ್ಮಕ್ಕನುಗುಣವಾಗಿ ಎಲ್ಲೋ ಅದರ ಒಂದು ಅಲ್ಪ ಭಾಗ ಮಾತ್ರ ಗೋಚರವಾಗಬಹುದು. ಮನಸ್ಸು ವಿಕಾರಗೊಂಡು ಸೀಮೋಲ್ಲಂಘನ ಮಾಡುತ್ತ ಹೋದಂತೆ, ಭಾವನೆಗಳು ಬದಲಾಯಿಸಿ ಹೊಸ ಪ್ರತೀಕಗಳಿಂದ ಅದೇ ಸತ್ಯ ಕಾಣುತ್ತ ಬಂದಂತೆ ಒಳಗಿನ ತಿರುಳು ಅದೇ ಇದ್ದರೂ ಅದರ ಹೊಸ ನೋಟ ಕಣ್ಣಿಗೆ ಗೋಚರವಾಗುತ್ತದೆ. ಈ ರೀತಿ ಸತ್ಯಾನ್ವೇಷಣೆ, ಅದರ ಪುನರುಜ್ಜೀವನ, ಪ್ರದರ್ಶನ ಮತ್ತು ಪುಷ್ಟೀಕರಣ ಪಡೆಯುತ್ತಲೇ ಇರಬೇಕು; ಆಗ ಮಾತ್ರ ನಿಜವಾದ ಸತ್ಯ ಮಾನವ ಕಲ್ಪನೆಗೆ ಸಾಧ್ಯವಾಗಿ ಮಾನವನ ಜೀವನ ಮತ್ತು ಭಾವನಾ ಪ್ರಗತಿಗಳ ಜೊತೆಗೆ ಓಡಬಲ್ಲುದು. ಆಗ ಮಾತ್ರ ಮಾನವ ಕುಲದ ಹಸಿವನ್ನು ನಿವಾರಿಸುತ್ತ, ಇಂದಿನ ಮತ್ತು ಮುಂದಿನ ಬಾಳಿಗೆ ಮಾರ್ಗದರ್ಶಿಯಾಗಿ ಮಾನವ ಕುಲಕ್ಕೆ ಅದು ಜೀವಂತ ಸತ್ಯವಾಗುತ್ತದೆ.

ಆದರೆ ಪ್ರಾಚೀನ ಕಾಲದ ಉದ್ಧೃತ ತತ್ತ್ವದಿಂದ ಸತ್ಯದ ಯಾವುದಾದರೂ ಒಂದು ಮುಖ ನಿಸ್ಸತ್ವ ವಾಗಿ ಜಡವಾದರೆ ಅದರ ಪ್ರಗತಿ ನಿಂತು ಹೋಗುತ್ತದೆ ವ ತ್ತು ಪರಿವರ್ತನಗೊಳ್ಳುತ್ತಿರುವ ಮಾನವನ ಆವಶ್ಯಕತೆಗಳಿಗೆ ಹೊಂದಿಕೊಳ್ಳಲಾರದೆ ಅದರ ವಿಚಾರ ನಿಂತು ಹೋಗುತ್ತದೆ. ಅದರ ಇತರ ಮುಖಗಳೂ ಮರೆಯಾಗಿ ಮುಂದಿನ ಯುಗಗಳ ಸಮಸ್ಯೆಗಳನ್ನು ಬಿಡಿಸಲು ಅಶಕ್ತವಾಗುತ್ತದೆ. ಅದರ ಕಾರ್ಯ ಪಟುತ್ವ ಅಡಗಿ ಹೋಗಿ ಅದು ನಿಶ್ಚೇತನವಾಗುತ್ತದೆ; ಅದರ ಜೀವಕಾರ್ಯ ಶಕ್ತಿ ನಾಶವಾಗಿ, ಜಡಭಾವನೆ, ಮತ್ತು ಬಾಹ್ಯ ಶೃಂಗಾರದ ಆಡಂಬರ ಬೆಳೆಯುತ್ತವೆ, ಆಗ ಮನೋವಿಕಾಸಕ್ಕೆ ಮತ್ತು ಮಾನವ ಕುಲದ ಪ್ರಗತಿಗೆ ಅಡ್ಡಿಯಾಗುತ್ತದೆ. ಹಿಂದಿನ ಕಾಲದ ಅದರ ಬೆಳೆವಣಿಗೆ, ಅಲಂಕಾರ ಮತ್ತು ಅದರ ಸಂಕೇತವನ್ನು ಹಿಂದಿನವರು ಅರ್ಥಮಾಡಿಕೊಂಡಷ್ಟು ಸಹ ಪ್ರಾಯಶಃ ನಾವು ಈಗ ಅರ್ಥಮಾಡಿಕೊಂಡು ಇಲ್ಲ. ಏಕೆಂದರೆ ಮುಂದಿನ ಯುಗದ ಸಂದರ್ಭವೇ ಹೊರೆಯಾಗುತ್ತ; ಅದರ ಮಾನಸಿಕ ಪರಿಸ್ಥಿತಿಯೇ ಬೇರೆ ಇರುತ್ತದೆ; ಸಮಾಜದಲ್ಲಿ ಅಭ್ಯಾಸಗಳು ಸಂಪ್ರದಾಯಗಳು ಬೆಳೆದಿರುತ್ತವೆ; ಆದ್ದರಿಂದ ಪ್ರಾಚೀನ ಸಾಹಿತ್ಯದ ಭಾವನೆ ಮತ್ತು ಗೂಢಾರ್ಥ ಅರ್ಥ ಮಾಡಿಕೊಳ್ಳುವುದು ಸಹ ಕಷ್ಟ. ಇದೂ ಅಲ್ಲದೆ ಅರವಿಂದರು ಹೇಳಿರುವಂತೆ ಪ್ರತಿಯೊಂದು ಸತ್ಯವೂ ತನ್ನ ಪಾಡಿಗೆ ತಾನು ಸತ್ಯವಾದರೂ ಅದಕ್ಕೊಂದು ಪೂರ್ಣತೆ ಕೊಡುವ ಸುತ್ತಲಿನ ಇತರ ಸತ್ಯಗಳಿಂದ ಬೇರ್ಪಡಿಸಿದರೆ ಆಗ ಅದು ನಮ್ಮ ಧೀಶಕ್ತಿಯನ್ನೇ ಹಿಸುಕುವ ಉರುಲಾಗುತ್ತದೆ; ಮತ್ತು ನಮ್ಮನ್ನು ಅಡ್ಡದಾರಿಗೆಳೆಯುವ ಒಂದು ಶುಷ್ಕ ತತ್ತ್ವವಾಗುತ್ತದೆ; ಏಕೆಂದರೆ, ಪ್ರತಿಯೊಂದೂ ನೆಯ್ಗೆಯ ಹಾಸುಹೊಕ್ಕಿನ ಒಂದೊಂದು ಎಳೆಯಂತೆ, ನೆಯ್ಗೆಯ ಯಾವ ಒಂದು ಎಳೆಯನ್ನೂ ಪ್ರತ್ಯೇಕಿಸಿ ಇದೇ ಸತ್ಯವೆಂದು ಹೇಳಲು ಸಾಧ್ಯವಿಲ್ಲ.

ಮಾನವನ ಪ್ರಗತಿಗೆ ಧರ್ಮಗಳು ಬಹಳ ಸಹಾಯಕವಾಗಿವೆ. ಮಾನವನ ಜೀವನಕ್ಕೆ ಕೆಲವು ಮೌಲ್ಯಗಳನ್ನೂ ಆದರ್ಶಗಳನ್ನೂ ಕೊಟ್ಟು, ಮಾನವ ಜೀವನದ ಮಾರ್ಗಾನುಸರಣೆಗಾಗಿ ಕೆಲವು ತತ್ತ್ವ ಗಳನ್ನು ಹಾಕಿಕೊಟ್ಟವೆ. ಇಷ್ಟು ಶ್ರೇಷ್ಠ ಉಪಕಾರ ಮಾಡಿದಾಗ್ಯೂ ಅವು ಜಡ ತತ್ತ್ವಗಳಿಂದ, ಸಂಕು ಚಿತ ಆಯಕಟ್ಟುಗಳಿಂದ ಸತ್ಯವನ್ನು ಸಾಧಿಸಲು ಯತ್ನಿಸಿವೆ. ಬಹುಬೇಗ ತಮ್ಮ ಮೂಲ ಅರ್ಥ ಕಳೆದ್ದು ಕೊಂಡು ಸಾಂಪ್ರದಾಯಕ ಕರ್ಮಾಚರಣೆಗಳು ಮತ್ತು ಶಿಷ್ಟಾಚಾರಗಳಿಗೆ ಪ್ರೋತ್ಸಾಹಕೊಟ್ಟವೆ. ಮಾನ ವನ ಸುತ್ತಲೂ ಕವಿದು ಇರುವ ಅವ್ಯಕ್ತದ ಘೋರ ರಹಸ್ಯದ ಕಲ್ಪನೆ ಮಾನವನ ಮನಸ್ಸಿನ ಮೇಲೆ ನಾಟು ವಂತೆ ಮಾಡಿದೆಯೇ ಹೊರತು ಆ ಅವ್ಯಕ್ತ ಅರ್ಥ ಮಾಡಿಕೊಳ್ಳಲು ಮಾಡಿದ ಮಾನವ ಪ್ರಯತ್ನಕ್ಕೆ ಅಡಿ ಬಂದವು. ಅಲ್ಲದೆ ಸಾಮಾಜಿಕ ಪ್ರಗತಿಗೂ ಅಡ್ಡಬಂದವು. ಭಾವನಾ ಸ್ವಾತಂತ್ರ್ಯ ಮತ್ತು ಉತ್ಸಾಹಕ್ಕೆ ಪ್ರೋತ್ಸಾಹಕೊಡುವ ಬದಲು ಪ್ರಕೃತಿಗೆ, ಪ್ರತಿಷ್ಠಿತ ಮತಗಳಿಗೆ, ಪ್ರಚಲಿತ ಸಮಾಜದ ಚೌಕಟ್ಟಿಗೆ, ಪ್ರತಿ

ಯೊಂದು ಅಸ್ತಿತ್ವಕ್ಕೆ ತಲೆಬಾಗುವ ತತ್ತ್ವವನ್ನೇ ಬೋಧಿಸಿವೆ. ಯಾವುದೋ ಒಂದು ಪರಶಕ್ತಿಯ ಇಚ್ಛೆಯಂತೆ ಎಲ್ಲವೂ ವಿಧಾಯಕವಾಗಿದೆ, ಎಂಬ ನಂಬಿಕೆಯಿಂದ ಸಮಾಜ ಜೀವನದಲ್ಲಿ ಒಂದು ಬಗೆಯ ಬೇಜವಾಬ್ದಾರಿ ಬೇರೂರಿದೆ. ಕಾರಣ ಬದ್ಧ ಭಾವನೆ ಮತ್ತು ವಿಚಾರ ಪರತೆಗೆ ಬದಲಾಗಿ ಭಾವಾವೇಶಕ್ಕೆ ಮತ್ತು ಭಾವಾತಿರೇಕಗಳಿಗೆ ಮಾನ್ಯತೆ ಬಂದಿದೆ. ಧರ್ಮವು ಅಸಂಖ್ಯಾತ ಮಾನವ ಜೀವಿಗಳಿಗೆ ಮನಶ್ಶಾಂತಿ ಕೊಟ್ಟು, ಅದರ ಮೌಲ್ಯಗಳಿಂದ ಸಮಾಜಕ್ಕೊಂದು ಭದ್ರತೆ ಕೊಟ್ಟಾಗ್ಯೂ ಮಾನವ ಸಮಾಜಕ್ಕೆ ಸಹಜವಾದ ಎಲ್ಲ ಪರಿವರ್ತನೆ ಮತ್ತು ಪ್ರಗತಿ ಪ್ರಯತ್ನಗಳಿಗೆ ಅಡ್ಡಿ ಬಂದಿದೆ.

ದರ್ಶನ ಶಾಸ್ತ್ರವು ಈ ಅನೇಕ ಕೊರಕಲುಗಳಿಗೆ ಬೀಳದೆ ಭಾವನಾ ಸ್ವಾತಂತ್ರ್ಯಕ್ಕೂ, ವಿಚಾರ ಶೀಲತೆಗೂ ಪ್ರೋತ್ಸಾಹ ಕೊಟ್ಟಿದೆ. ಆದರೆ ಅಂತಿಮ ಧ್ಯೇಯಗಳಿಗೆ ಮಾತ್ರ ಪ್ರಾಮುಖ್ಯತೆ ಕೊಟ್ಟು ಮಾನವ ಜೀವನದೊಂದಿಗೆ ಯಾವ ಸಂಬಂಧವನ್ನೂ ಕಲ್ಪಿಸದೆ ಜೀವನ ಮತ್ತು ಜೀವನದ ದೈನಂದಿನ ಸಮಸ್ಯೆಗಳಿಂದ ದೂರನಿಂತು ದರ್ಶನ ಶಾಸ್ತ್ರವು ಸಾಮಾನ್ಯವಾಗಿ ಕನಸಿನ ಪ್ರಪಂಚದಲ್ಲೇ ವಾಸಮಾಡುತ್ತಿದೆ. ತರ್ಕ ಮತ್ತು ನಿಮಿತ್ತಗಳೇ ಅದರ ಮಾರ್ಗ ಸೂಚಿಗಳಾದವು. ಅನೇಕ ಮುಖಗಳಲ್ಲಿ ಅದನ್ನು ಕೊಂಡೊಯ್ದು ಬೆಳೆಸಿದವು; ಆದರೆ ಆ ತರ್ಕ ಶಾಸ್ತ್ರವೆಲ್ಲ ಮನೋಕಲ್ಪಿತ ರಾಜ್ಯದ್ದು, ವಾಸ್ತವಿಕತೆಗೂ ಅದಕ್ಕೂ ಬಹುದೂರ.

ವಿಜ್ಞಾನವು ವಾಸ್ತವಿಕತೆಗೆ ಮಾತ್ರ ಲಕ್ಷ್ಯಕೊಟ್ಟು ಅಂತಿಮ ಧ್ಯೇಯ ಅಲಕ್ಷಿಸಿಮಾಡಿತು. ಪ್ರಪಂಚವು ಒಂದೇ ಹೆಜ್ಜೆಯಲ್ಲಿ ಕುಪ್ಪಳಿಸಿ ಹಾರುವಂತೆ ಮಾಡಿತು; ಕಣ್ಣು ಕುಕ್ಕುವ ಥಳಥಳಿಪ ನಾಗರಿಕತೆಯೊಂದನ್ನು ನಿರ್ಮಿಸಿತು; ಜ್ಞಾನದ ಬೆಳವಣಿಗೆಗೆ ನಾನಾ ಮಾರ್ಗ ತೋರಿಸಿತು; ತನ್ನ ಸುತ್ತಲಿನ ಪ್ರಕೃತಿಯನ್ನು ಗೆದ್ದು ಅಧೀನಪಡಿಸಿಕೊಂಡು ತನ್ನ ಇಷ್ಟದಂತೆ ಆ ಪ್ರಕೃತಿ ಶಕ್ತಿ ಉಪಯೋಗಿಸಲು ಸಾಧ್ಯವಿದೆ ಎನ್ನುವ ಮಟ್ಟಕ್ಕೆ ಮೊಟ್ಟಮೊದಲು ಅದು ಮಾನವನ ಶಕ್ತಿಯನ್ನು ಹೆಚ್ಚಿಸಿತು. ಭೂಗ್ರಹದ ಸ್ವರೂಪವನ್ನು ರಸಾಯನಿಕವಾಗಿ, ಭೌತಿಕವಾಗಿ ಮತ್ತು ಇನ್ನೂ ಅನೇಕ ರೀತಿಯಲ್ಲಿ ಪರಿವರ್ತನೆ ಮಾಡುತ್ತ ಮಾನವನೂ ಒಂದು ಭೂಶಕ್ತಿಯಾದ. ಈ ದುಃಖ ಪರಿಸ್ಥಿತಿ ಪೂರ್ಣ ತನ್ನ ಅಧೀನದಲ್ಲಿದೆ, ಇನ್ನೇನು ತನ್ನ ಇಚ್ಛೆ ಈಡೇರಬಹುದು ಎನ್ನುವಾಗಲೇ ಏನೋ ಒಂದು ದೊಡ್ಡ ನ್ಯೂನತೆ, ಏನೋ ಒಂದು ಮುಖ್ಯ ವಸ್ತುವಿನ ಅಭಾವ. ಅದಕ್ಕೆ ಅಂತಿಮ ಧ್ಯೇಯಗಳ ಅರಿವೂ ಇರಲಿಲ್ಲ; ಜೀವನಕ್ಕೆ ಒಂದು ಗುರಿ ಇದೆ ಎಂದು ವಿಜ್ಞಾನ ಯಾವಾಗಲೂ ನಮಗೆ ತಿಳಿಸಲಿಲ್ಲ. ಪ್ರಕೃತಿ ಶಕ್ತಿಯನ್ನು ಅಧೀನಪಡಿಸಿಕೊಂಡು ಬಲಶಾಲಿಯಾದ ಮಾನವ ತನ್ನನ್ನು ತಾನು ಹಿಡಿತದಲ್ಲಿಟ್ಟುಕೊಳ್ಳುವ ಆತ್ಮ ಸಂಯಮವನ್ನಾಗಲಿ, ತಾನೇ ಸೃಷ್ಟಿಸಿದ ರಾಕ್ಷಸೀ ಶಕ್ತಿಯನ್ನು ಪೂರ್ಣ ಅಧೀನ ಇಟ್ಟುಕೊಳ್ಳುವ ಶಕ್ತಿಯನ್ನಾಗಲಿ ಸಂಪಾದಿಸಿಕೊಳ್ಳಲಿಲ್ಲ. ಪ್ರಾಯಶಃ ಪ್ರಾಣಿಶಾಸ್ತ್ರ, ಮನಶ್ಶಾಸ್ತ್ರ ಮುಂತಾದ ವಿಜ್ಞಾನಗಳಲ್ಲಿ ನಡೆಯಬಹುದಾದ ಮುಂದಿನ ಪ್ರಗತಿಯಿಂದ, ಪ್ರಾಣಿಶಾಸ್ತ್ರ ಮತ್ತು ಭೌತಶಾಸ್ತ್ರಗಳ ವಿವರಣೆಗಳಿಂದ ಮೊದಲಿಗಿಂತ ತನ್ನನ್ನು ತಾನು ಹೆಚ್ಚು ಅರಿತುಕೊಂಡು ಆತ್ಮಸಂಯಮ ಶಕ್ತಿ ಸಂಪಾದಿಸಲು ಮಾನವನಿಗೆ ಸಾಧ್ಯವಾಗಬಹುದು. ಅಥವ ಮಾನವ ಜೀವನ ಮೇಲೆ ಅಂತಹ ಪ್ರಗತಿಯಿಂದ ಪರಿಣಾಮವಾಗುವ ಮಂಚೆಯೇ ಮಾನವನು ತಾನು ಕಟ್ಟಿದ ನಾಗರಿಕತೆಯ ಸೌಧವನ್ನೇ ಒಡೆದು ಪುಡಿಪುಡಿ ಮಾಡಿ ಹೊಸದಾಗಿ ಪುನಃ ಆರಂಭಿಸಬೇಕಾಗಿ ಬರಬಹುದು.

ವಿಜ್ಞಾನದ ನಿರಾತಂಕ ಪ್ರಗತಿಗೆ ಅವಕಾಶಕೊಟ್ಟರೆ ಯಾವ ಮಿತಿಯೂ ಇರುವಂತೆ ಕಾಣುವುದಿಲ್ಲ. ಆದರೂ ವಿಜ್ಞಾನ ಮಾರ್ಗದ ವೀಕ್ಷಣೆ ಮಾನವನ ಅನುಭವದ ವೈವಿಧ್ಯತೆಗಳಿಗೆ ಎಲ್ಲ ಸಂದರ್ಭಗಳಲ್ಲೂ ಸರಿಹೊಂದುವಂತೆ ತೋರುವುದಿಲ್ಲ; ಮತ್ತು ನಮ್ಮ ಸುತ್ತಲಿನ ಅನಂತ ಅಪಾರ ಸಾಗರವನ್ನು ದಾಟಲು ಅದಕ್ಕೆ ಸಾಧ್ಯವಿರುವಂತೆ ತೋರುವುದಿಲ್ಲ. ದರ್ಶನ ಶಾಸ್ತ್ರದ ಸಹಾಯದಿಂದ ಇನ್ನು ಸ್ವಲ್ಪ ಮುಂದೆ ಹೋಗಿ ಆ ಅನಂತ ಸಾಗರದ ಯಾನಕ್ಕೆ ಧೈರ್ಯ ಮಾಡಬಹುದು. ವಿಜ್ಞಾನ ಮತ್ತು ದರ್ಶನ ಶಾಸ್ತ್ರ ಎರಡೂ ನಮ್ಮ ಸಹಾಯಕ್ಕೆ ಒದಗದಿದ್ದಾಗ ನಮಗೆ ಸಾಧ್ಯವಿರುವ ಇತರ ಜ್ಞಾನ ಶಕ್ತಿಯನ್ನು ನಾವು ನಂಬಬೇಕಾಗುತ್ತದೆ. ನಮ್ಮ ಇಂದಿನ ಮಾನಸಿಕ ಸ್ಥಿತಿಯಲ್ಲಿ ಯಾವುದೋ ಒಂದು ನಿರ್ದಿಷ್ಟ ನಿಲುವಿನಾಚೆ

ನಿಮಿತ್ತ ಹೋಗಲು ಸಾಧ್ಯವಿಲ್ಲವೆಂದು ತೋರುತ್ತದೆ. ತನ್ನ ನಿಲುವಿಗೆ ನಿಲುಕದ ಇನ್ನೂ ಅನೇಕ ವಿಷಯಗಳು ಇವೆ ಎಂದು ಅರಿತುಕೊಳ್ಳುವುದೇ ದರ್ಶನ ಶಾಸ್ತ್ರದ ಕೊನೆಯ ಹಂತ; ಅಷ್ಟು ದೂರ ಅದು ಹೋಗಲಾರದಾದರೆ ಅದು ಸತ್ವಶೂನ್ಯ" ಎಂದು ಪ್ಯಾಸ್ಕಲ್ ಹೇಳುತ್ತಾನೆ.

ದರ್ಶನ ಮತ್ತು ವಿಜ್ಞಾನ ಮಾರ್ಗಗಳ ಈ ಮಿತಿ ನಾವು ಅರಿತೂ ಸಹ ಅವುಗಳಿಗೆ ಬಲವಾಗಿ ಅಂಟಿಕೊಳ್ಳಬೇಕಾಗಿದೆ. ಏಕೆಂದರೆ ಆ ಭದ್ರ ತಳಹದಿ ಮತ್ತು ಹಿನ್ನೆಲೆ ಇಲ್ಲದೆ ಸತ್ಯ ಅಥವ ನೈಜಭಯ ಯಾವ ಬಗೆಯ ಹಿಡಿತವೂ ನಮಗೆ ದೊರೆಯುವುದಿಲ್ಲ. ಯಾವ ಸತ್ಯವನ್ನೂ ಅರ್ಥಮಾಡಿಕೊಳ್ಳದೆ ಜೀವನದ ರಹಸ್ಯ ಅರಿತುಕೊಳ್ಳಲು ವ್ಯರ್ಥ ಪ್ರಯತ್ನ ಪಟ್ಟು ಅಸಹಾಯರಾಗಿ ಕುಸಿದು ಬೀಳುವ ಬದಲು ಸತ್ಯದ ಅಲ್ಪ ಭಾಗ ಆದರೂ ಅರಿತು ಅದನ್ನು ನಮ್ಮ ಜೀವನಕ್ಕೆ ಅನ್ವಯಿಸಿಕೊಳ್ಳುವುದು ಉತ್ತಮ. ಈ ಕಾಲದಲ್ಲಿ ಯಾವ ದೇಶ ಅಥವ ಜನಾಂಗವಾಗಲಿ ವಿಜ್ಞಾನ ಸಂಶೋಧನೆಗಳಿಂದ ಮತ್ತು ಪ್ರಯೋಗಗಳಿಂದ ದೂರವಿರಲು ಸಾಧ್ಯವಿಲ್ಲ. ಆದರೆ ಕೇವಲ ವೈಜ್ಞಾನಿಕ ಪ್ರಯೋಗಗಳ ಉಪಯೋಗ ಮಾತ್ರ ಸಾಲದು. ಸಾಹಸಯುಕ್ತ ವಿಜ್ಞಾನದ ವಿಮರ್ಶಾತ್ಮಕ ದೃಷ್ಟಿ, ಸತ್ಯ ಮತ್ತು ಹೊಸ ಜ್ಞಾನದ ಅನ್ವೇಷಣೆ, ಪ್ರಯೋಗ ಮಾಡಿ ಒರೆಗೆ ಹಚ್ಚದೆ ಏನನ್ನೂ ಒಪ್ಪಲಾಗದೆಂಬ ದೃಷ್ಟಿ, ಹೊಸ ಸಾಕ್ಷ್ಯ ದೊರೆತಂತೆ ಹಿಂದಿನ ಸಿದ್ಧಾಂತ ತ್ಯಜಿಸಲು ಸದಾ ಸಿದ್ಧತೆ, ಪೂರ್ವ ಸಿದ್ಧಾಂತವನ್ನೇ ನಂಬದೆ ಪ್ರತ್ಯಕ್ಷ ಪ್ರಾಯೋಗಿಕ ಸಾಕ್ಷ್ಯದ ಆಧಾರದಲ್ಲಿ ವಿಶ್ವಾಸ, ಕಠಿಣ ಮಾನಸಿಕ ಶಿಕ್ಷಣ—ಈ ಎಲ್ಲ ವೈಜ್ಞಾನಿಕ ಪ್ರವೇಶಗಳು ವೈಜ್ಞಾನಿಕ ಸಂಶೋಧನೆಗಳ ಉಪಯೋಗಕ್ಕೆ ಮಾತ್ರವಲ್ಲದೆ ನಮ್ಮ ಜೀವನಕ್ಕೂ ಮತ್ತು ಜೀವನದ ಅನೇಕ ಸಮಸ್ಯೆಗಳ ಪರಿಹಾರಕ್ಕೂ ಅತ್ಯವಶ್ಯಕ ಇವೆ. ಆದರೆ ವಿಜ್ಞಾನದ ಶ್ರೇಷ್ಠ ಆರಾಧಕರಾದ ಇಂದಿನ ಅನೇಕ ಪ್ರಸಿದ್ಧ ವಿಜ್ಞಾನಿಗಳು ತಮ್ಮ ಅಲ್ಪ ವಿಜ್ಞಾನ ವಿಭಾಗದ ಆಚೆ ವಿಶಾಲಪ್ರಪಂಚ ಒಂದು ಇದೆ ಎನ್ನುವುದನ್ನು ಮರೆತಿದ್ದಾರೆ. ವೈಜ್ಞಾನಿಕ ಪ್ರವೇಶ ಮತ್ತು ಮಾರ್ಗಗಳು ಮಾನವ ಜೀವನದ ಗತಿಯೊಂದಿಗೆ ನಡೆಯಬೇಕು, ವಿಚಾರ ವಿನಿಮಯದ ಮಾರ್ಗವಾಗಬೇಕು; ಮಾನವ ಕುಲದ ಪರಸ್ಪರ ನಡೆನುಡಿಯ ಮತ್ತು ಸಹಕಾರದ ಮಾರ್ಗವಾಗಬೇಕು. ಆದರೆ ಇದು ಬಹು ದೊಡ್ಡ ಆಜ್ಞೆ. ಅದರಲ್ಲೂ, ಬಹು ಸ್ವಲ್ಪ ಜನರಿಗೆ ಅರೆಬರೆ ಆ ರೀತಿ ವರ್ತಿಸಲು ಸಾಧ್ಯವಾದೀತು. ಆದರೆ ದರ್ಶನ ಶಾಸ್ತ್ರ ಮತ್ತು ಧರ್ಮಗಳು ನಮ್ಮ ಮೇಲೆ ವಿಧಿಸಿರುವ ಎಲ್ಲ ನಿರ್ಬಂಧಗಳನ್ನು ಈ ವಿಮರ್ಶೆಯ ಒರೆಗಲ್ಲಿಗೆ ಹಚ್ಚುವುದು ಅವಶ್ಯವಿದೆ. ಮಾನವನ ಪ್ರಗತಿಮಾರ್ಗವನ್ನು ವೈಜ್ಞಾನಿಕ ಭಾವನೆ ತೋರಿಸಿ ಕೊಡುತ್ತದೆ. ಅದು ಸ್ವತಂತ್ರ ಜೀವಿಯ ಭಾವನೆ. ನಾವು ವೈಜ್ಞಾನಿಕ ಯುಗದಲ್ಲಿದ್ದೇವೆ ಎಂದು ಎಲ್ಲರೂ ಹೇಳುತ್ತಿದೇವೆ. ಆದರೆ ಆ ದೃಷ್ಟಿ ತಮ್ಮ ನಾಯಕ ವರ್ಗದಲ್ಲಾಗಲಿ, ಬೇರೆ ಜನರಲ್ಲಾಗಲಿ ಎಲ್ಲೂ ಕಾಣುವುದಿಲ್ಲ.

ವಿಜ್ಞಾನದ ವ್ಯವಹಾರವೆಲ್ಲ ವಾಸ್ತವಿಕ ಜ್ಞಾನ ಪ್ರಪಂಚದಲ್ಲಿ; ಆದರೆ ಅದರಿಂದ ದೊರೆಯುವ ಮನೋಪರಿಪಾಕವು ಈ ಮೇರೆ ಮೀರಿ ಹೋಗುತ್ತದೆ. ಜ್ಞಾನಸಂಪಾದನೆ, ಸತ್ಯದ ಸಾಕ್ಷಾತ್ಕಾರ, ಸದ್ಗುಣ ಮತ್ತು ಸೌಂದರ್ಯದ ಉಪಾಸನೆ ಮಾನವನ ಅಂತಿಮ ಧ್ಯೇಯಗಳಾಗಿರಬೇಕು. ವಿಜ್ಞಾನ ಮಾರ್ಗದ ವಾಸ್ತವಿಕ ವಿಚಾರ ಸರಣಿ ಇವು ಯಾವುದಕ್ಕೂ ಅನ್ವಯಿಸುವುದಿಲ್ಲ. ಜೀವನದ ಅನೇಕ ಬಹು ಮುಖ್ಯ ವಿಷಯಗಳು ಅದರ ಪರಿಮಿತಿಯ ಆಚೆ ಇವೆ. ಕಲೆ ಮತ್ತು ಕಾವ್ಯ ಪ್ರೇಮ, ಸೌಂದರ್ಯಾನುಭವದಿಂದ ಒದಗುವ ಭಾವಪರವಶತೆ, ಸಾತ್ವಿಕ ಜೀವನದಿಂದೊದಗುವ ಆತ್ಮತೃಪ್ತಿ ಇವೆಲ್ಲ ವಿಜ್ಞಾನ ಮಾರ್ಗಕೆ ಎಟುಕದವು. ಸಸ್ಯ ಶಾಸ್ತ್ರಜ್ಞನಾಗಲಿ, ಪ್ರಾಣಿಶಾಸ್ತ್ರಜ್ಞನಾಗಲಿ ಪ್ರಕೃತಿಯ ಸೌಂದರ್ಯ ಮತ್ತು ಸೊಬ್ಗನ್ನು ಎಂದಿಗೂ ಅನುಭವಿಸದಿರಬಹುದು; ಸಮಾಜ ಶಾಸ್ತ್ರಜ್ಞನಲ್ಲಿ ಮಾನವ ಪ್ರೇಮ ಸ್ವಲ್ಪವೂ ಇಲ್ಲದಿರಬಹುದು. ಆದರೆ ವಿಜ್ಞಾನ ಮಾರ್ಗಕ್ಕೆ ಎಟುಕದ ಈ ಪ್ರಪಂಚಕ್ಕೆ ನಾವು ಹೋದಾಗ, ಉನ್ನತ ಗಿರಿ ಶಿಖರ ಏರಿ, ದರ್ಶನ ಮಗ್ನರಾಗಿ, ಭಾವಪರವಶರಾಗಿ, ದಿಗಂತದಾಚೆಯ ಅನಂತ ವಿಶ್ವರಹಸ್ಯದೆಡೆಗೆ ದೃಷ್ಟಿ ನೆಟ್ಟಾಗ ಸಹ ಆ ವೈಜ್ಞಾನಿಕ ಪ್ರವೇಶ ಮತ್ತು ಮನಃ ಪರಿಪಾಕ ಅತ್ಯವಶ್ಯ ಇವೆ.

ಧರ್ಮದ ಮಾರ್ಗ ಇದಕ್ಕೆ ತೀರ ಭಿನ್ನವಾದುದು. ವಾಸ್ತವಿಕ ಪ್ರಪಂಚದ ವಿಚಾರಕ್ಕೆ ಮೀರಿದ ವಿಷಯಗಳೇ ಅದರ ವಿಚಾರ ವಿಷಯಗಳಾದ್ದರಿಂದ ಅದು ಭಾವಪರವಶತೆ ಮತ್ತು ಅಂತರ್ಜ್ಞಾನವನ್ನು

ಅವಲಂಬಿಸಿವೆ. ಅಲ್ಲದೆ ಈ ಮಾರ್ಗವನ್ನು ಜೀವನದ ಎಲ್ಲ ವಿಷಯಗಳಿಗೆ, ಬುದ್ಧಿಶಕ್ತಿಯಿಂದ ವಿಚಾರ ಮಾಡಿ ತಿಳಿದುಕೊಳ್ಳಬಹುದಾದ ವಿಷಯಗಳಿಗೆ ಸಹ ಅನ್ವಯಿಸುತ್ತದೆ. ವ್ಯವಸ್ಥಿತ ಧರ್ಮವು ದೇವತಾ ಶಾಸ್ತ್ರದೊಂದಿಗೆ ಸೇರಿಕೊಂಡು ಧರ್ಮ ವಿಚಾರಗಳಿಗಿಂತ ಹೆಚ್ಚಾಗಿ ಹಕ್ಕುದಾರಿ ರಕ್ಷಣೆಯನ್ನೇ ಮುಖ್ಯ ಮಾಡಿಕೊಂಡು ವಿಜ್ಞಾನಕ್ಕಿಂತ ಒಂದು ತೀರ ಭಿನ್ನ ಮನೋಭಾವ ಉಂಟುಮಾಡುತ್ತದೆ. ಸಂಕುಚಿತ ದೃಷ್ಟಿ, ಅಸಹನೆ, ಅಂಧಶ್ರದ್ಧೆ ಮತ್ತು ಮೂಢಕಲ್ಪನೆ, ಭಾವಪರವಶತೆ ಮತ್ತು ತರ್ಕಶೂನ್ಯತೆಗಳಿಗೆ ಅವಕಾಶ ಕೊಡುತ್ತದೆ. ಮಾನವನ ಮನಸ್ಸಿಗೆ ಒಂದು ಬಂಧನ ಬಿಗಿದು ನಿಶ್ಚೇತನಗೊಳಿಸಿ ಅಸ್ವತಂತ್ರ ದಾಸ್ಯ ಮನೋಭಾವಕ್ಕೆ ಅವಕಾಶ ಕೊಡುತ್ತದೆ.

"ದೇವರು ಇಲ್ಲದಿದ್ದರೂ ಆತನನ್ನು ಸೃಷ್ಟಿಸುವುದು ಅವಶ್ಯಕ" ಎಂದು ವೋಲ್ಟೇರ್ ಹೇಳಿದ್ದು ಅದು ನಿಜವೆಂದು ತೋರುತ್ತದೆ. ಮಾನವನ ಮನಸ್ಸು ಬೆಳೆದಂತೆಲ್ಲ ಆಬಗೆಯ ಒಂದು ಮನೋಚಿತ್ರ ಅಥವ ವಿಗ್ರಹ ಕಲ್ಪಿಸಲು ಸದಾ ಯತ್ನಮಾಡಿದರೆ ಅದರ ವಿರೋಧ ಪ್ರಮೇಯದಲ್ಲೂ ಒಂದು ಸತ್ಯವಿದೆ. ದೇವರು ಇದ್ದರೂ ಸಹ ಆತನನ್ನೇ ಅವಲಂಬಿಸುವುದು, ಶರಣು ಹೋಗುವುದು ಒಳ್ಳೆಯದಲ್ಲ. ನೈಸರ್ಗಾತಿರಿಕ್ತ ಶಕ್ತಿಗಳನ್ನೇ ಸದಾ ನಂಬುವುದರಿಂದ ಮಾನವನ ಆತ್ಮಾವಲಂಬನ ಶಕ್ತಿ ನಾಶವಾಗುತ್ತದೆ; ನಾಶವಾಗಿಯೂ ಇದೆ. ಅಲ್ಲದೆ ಆತನ ಆತ್ಮಶಕ್ತಿಯೂ, ಉತ್ಪಾದಕ ಶಕ್ತಿಯೂ ಕಡಮೆಯಾಗುತ್ತವೆ. ಆದರೂ ನಮ್ಮ ಭೌತಪ್ರಪಂಚದಾಚೆಯ ಆಧ್ಯಾತ್ಮಿಕ ವಿಷಯಗಳಲ್ಲಿ ಒಂದು ಬಗೆಯ ಶ್ರದ್ಧೆ ಅತ್ಯಾವಶ್ಯಕ ತೋರುತ್ತದೆ; ಯಾವುದೋ ನೈತಿಕ ಆದರ್ಶದಲ್ಲಿ ಶ್ರದ್ಧೆ ಅವಶ್ಯವೆಂದು ತೋರುತ್ತದೆ. ಅದಿಲ್ಲದಿದ್ದರೆ ಬಂಗರಿಲ್ಲದ ನಾವೆಯಂತೆ ನಮ್ಮ ಜೀವನಕ್ಕೂ ಯಾವ ಒಂದು ಗುರಿ ಅಥವ ಧ್ಯೇಯ ಇಲ್ಲವಾಗುತ್ತದೆ. ದೇಶದಲ್ಲಿ ನಮಗೆ ನಂಬಿಕೆ ಇರಲಿ ಇಲ್ಲದಿರಲಿ, ಏನನ್ನಾದರೂ ನಂಬದೆ ಇರಲು ಅಸಾಧ್ಯ; ಅದನ್ನು ಜೀವದಾಯಕ ಸೃಷ್ಟಿ ಶಕ್ತಿ ಎಂದು ಕರೆಯಲಿ, ಭೌತವಸ್ತುವಿಗೆ ಚಲನೆ, ಪರಿವರ್ತನ ಮತ್ತು ವಿಕಾಸನ ಶಕ್ತಿಗಳನ್ನು ಕೊಡುವ ಅಂತರ್ಗತ ಜೀವನ ಶಕ್ತಿ ಎಂದು ಕರೆಯಲಿ ಅಥವ ಬೇರೆ ಯಾವ ಹೆಸರಿನಿಂದೇ ಕರೆಯಲಿ ಸಾವಿನೆದುರು ಜೀವನ ಸತ್ಯವಿರುವಂತೆ ಅದು ನಮಗೆ ಎಷ್ಟೇ ಅಗ್ರಾಹ್ಯವಿರಲಿ ಅದು ಮಾತ್ರ ಸತ್ಯ. ತಿಳಿದೋ ತಿಳಿಯದೆಯೋ ನಮ್ಮಲ್ಲಿ ಅನೇಕರು ನಮ್ಮ ಜ್ಞಾನಕ್ಕೆ ನಿಲುಕದ ಯಾವುದೋ ಒಬ್ಬ ದೇವನ ಅಗೋಚರ ಪವಿತ್ರ ಪಾದಾರವಿಂದಗಳಲ್ಲಿ ಪೂಜೆ ಸಲ್ಲಸುತ್ತಿದೇವೆ, ಯಜ್ಞಸಲ್ಲಿಸುತ್ತಿದೇವೆ. ಆ ಯಜ್ಞವು ಯಾವುದೋ ಒಂದು ಆದರ್ಶಕ್ಕಾಗಿರಬಹುದು, ವೈಯಕ್ತಿಕವಿರಬಹುದು, ರಾಷ್ಟ್ರೀಯವಿರಬಹುದು ಅಥವ ಅಂತರ ರಾಷ್ಟ್ರೀಯವಿರಬಹುದು; ಯಾವುದೋ ಒಂದು ದೂರದ ಧ್ಯೇಯ ನಮ್ಮನ್ನು ಸೆಳೆಯುತ್ತಿದೆ; ಅದರಲ್ಲಿ ತರ್ಕಕ್ಕೆ ಎಡೆ ಇಲ್ಲದಿರಬಹುದು, ಆದರೂ ಶ್ರೇಷ್ಠ ಮಾನವ ಜೀವನದ ಮತ್ತು ಉತ್ತಮ ಪ್ರಪಂಚದ ಅದೃಷ್ಟ ಕಲ್ಪನೆ ಅದರಲ್ಲಿ ಅಡಗಿದೆ. ಪೂರ್ಣತೆ ಪಡೆಯಲು ಅಸಾಧ್ಯವಿರಬಹುದು; ಆದರೂ ನಮ್ಮಲ್ಲಿ ಅಡಗಿರುವ ಯಾವುದೋ ಒಂದು ಅದ್ಭುತ ಶಕ್ತಿ, ಯಾವುದೋ ಜೀವನ ಶಕ್ತಿ ನಮ್ಮನ್ನು ಮುನ್ನೂಕುತ್ತಲೇ ಇದೆ, ಪೀಳಿಗೆಯಿಂದ ಪೀಳಿಗೆಗೆ ಅದೇ ಮಾರ್ಗದಲ್ಲಿ ನಡೆಯುತ್ತಿದೇವೆ.

ಜ್ಞಾನ ಭಾಂಡಾರ ವಿಶಾಲಗೊಂಡಂತೆ ಸಂಕುಚಿತ ದೃಷ್ಟಿಯ ಧರ್ಮದ ಹಿಡಿತ ಸಡಿಲವಾಗುತ್ತದೆ. ಪ್ರಕೃತಿ ಮತ್ತು ಜೀವನ ಹೆಚ್ಚು ಹೆಚ್ಚು ಅರ್ಥವಾದಂತೆ ಪರಶಕ್ತಿಗಳ ಮೇಲಿನ ಅವಲಂಬನೆ ಕಡಮೆಯಾಗುತ್ತದೆ. ಅರ್ಥ ನಮ್ಮ ಅಂಕೆಯಲ್ಲಿ ಇರಬಹುದಾದ ವಿಷಯಗಳ ರಹಸ್ಯವೆಲ್ಲ ಬಯಲಾಗುತ್ತದೆ. ವ್ಯವಸಾಯ ಕ್ರಮಗಳು, ನಾವು ತಿನ್ನುವ ಆಹಾರ, ಉಡುವ ಬಟ್ಟೆ, ಸಾಮಾಜಿಕ ವ್ಯವಹಾರ ಎಲ್ಲವೂ ಒಂದಾನೊಂದು ಕಾಲದಲ್ಲಿ ಧರ್ಮ ಮತ್ತು ಧರ್ಮಗುರುಗಳ ನಿರ್ಬಂಧಕ್ಕೆ ಒಳಗಾಗಿದ್ದವು. ಕ್ರಮೇಣ ಅವೆಲ್ಲ ಅವರ ಕೈತಪ್ಪಿ ಈಗ ವಿಜ್ಞಾನ ಸಂಶೋಧನೆಯ ವಿಷಯಗಳಾಗಿವೆ. ಆದರೂ ಈಗಲೂ ಈ ಎಷ್ಟೋ ಕೆಲಸಗಳು ಧರ್ಮ ಶ್ರದ್ಧೆ ಮತ್ತು ಅದರ ಜೊತೆ ಬರುವ ಕುರುಡು ನಂಬಿಕೆಗಳ ಬಲವತ್ತರ ಪ್ರಭಾವಕ್ಕೆ ಒಳಗಾಗಿವೆ. ಅಂತಿಮ ರಹಸ್ಯವು ಮಾನವನ ಮನಸ್ಸಿನ ಹಿಡಿತಕ್ಕೆ ಸಿಲುಕದೆ ಬಹುದೂರ ಇರುವಂತೆ ಇದೆ; ಸಧ್ಯ ಸಿಲುಕುವಂತೆಯೂ ತೋರುವುದಿಲ್ಲ. ಜೀವನದ ಅನೇಕ ರಹಸ್ಯ ಸಮಸ್ಯೆಗಳ ಪರಿಹಾರ ಸುಲಭವಾದರೂ ಇನ್ನೂ ಪರಿಹಾರವಾಗಿಲ್ಲ. ಅವುಗಳ ಪರಿಹಾರದಲ್ಲಿ ತೊಡಗುವುದರ ಬದಲು ಅಂತ್ಯ ರಹಸ್ಯದ

ಕಡೆಗೇ ಎಲ್ಲ ದೃಷ್ಟಿ ಇಡುವ ಅವಶ್ಯಕವೂ ಇಲ್ಲ, ಅದು ಯೋಗ್ಯವೂ ಅಲ್ಲ. ಪ್ರಪಂಚದ ಸೌಂದರ್ಯಾನುಭವ ಮಾತ್ರವಲ್ಲದೆ ಅನಂತ ನೂತನ ಸಂಶೋಧನೆಗಳ ಹೊಸ ಜೀವನದ ಬಾಳಿನ, ಹೊಸ ಪ್ರಪಂಚದ ನೋಟದ ಮತ್ತು ಹೆಚ್ಚಿನ ಜೀವನ ಪೂರ್ಣತೆ ಮತ್ತು ಸವಿಯ, ಉತ್ಸಾಹಭರಿತ ಸಾಹಸಗಳು ಜೀವನದಲ್ಲಿ ಇನ್ನೂ ಅನೇಕ ಇವೆ.

ಆದ್ದರಿಂದ ವೈಜ್ಞಾನಿಕ ಪ್ರವೇಶ ಮತ್ತು ಮನೋಭಾವಗಳನ್ನು ದಾರ್ಶನಿಕ ದೃಷ್ಟಿಯೊಡನೆ ಅಳವಡಿಸಿಕೊಂಡು, ನಮ್ಮ ಜ್ಞಾನಕ್ಕೆ ನಿಲುಕದ ಅವ್ಯಕ್ತದಲ್ಲಿ ಗೌರವವನ್ನಿಟ್ಟು ನಾವು ಜೀವನ ಎದುರಿಸಬೇಕು. ಈ ರೀತಿ ಹಿಂದಿನ ಮತ್ತು ಇಂದಿನ ಉನ್ನತಿ ಮತ್ತು ಅವನತಿಗಳೆಲ್ಲವನ್ನು ಅರಿತು ಗಾಂಭೀರ್ಯದಿಂದ ಭವಿಷ್ಯದ ಕಡೆ ನೋಡುವ ಜೀವನದ ಪೂರ್ಣ ದೃಷ್ಟಿ ನಮಗೆ ದೊರೆಯಬಹುದು. ಹಳ್ಳಗಳು ಇದ್ದೇ ಇವೆ ಎಂದಿಗೂ ಅವನ್ನು ಮರೆಯುವಂತಿಲ್ಲ. ನಮ್ಮ ಸುತ್ತಲಿನ ಪ್ರಪಂಚದ ಸೌಂದರ್ಯದ ಪಕ್ಕದಲ್ಲಿಯೇ ಸಾವು ನೋವು. ಮಾನವನ ಜೀವನ ಯಾತ್ರೆಯಲ್ಲಿ ಸುಖದ ಹಿಂದೆಯೇ ದುಃಖ, ಅವನು ಅರಿತು ಮುಂದುವರಿಯುವುದೂ ಅಂತೆಯೇ. ಆತ್ಮದ ತಳಮಳವೂ ಒಂದು ದುರಂತ ಏಕಾಂತ ವಿಷಯ. ಬಾಹ್ಯವಿಷಯಗಳು ಮತ್ತು ಅವುಗಳ ಪರಿಣಾಮಗಳಿಂದ ನಮ್ಮ ಮೇಲೆ ಮಹತ್ವಭಾವ ಆಗುವುದು ದಿಟ; ಆದರೆ ನಮ್ಮ ಮನಸ್ಸಿಗೆ ದೊಡ್ಡ ಆಘಾತ ಬರುವುದು ನಮ್ಮ ಆಂತರಿಕ ಭಯ ಮತ್ತು ಘರ್ಷಣೆಗಳಿಂದ. ಜೀವಂತ ಉಳಿಯಬೇಕಾದರೆ ಬಾಹ್ಯ ಪ್ರಪಂಚದಲ್ಲಿ ನಾವು ಪ್ರಗತಿ ಸಾಧಿಸಲೇಬೇಕು; ಆದರೆ ನಮಗೆ ವೈಯಕ್ತಿಕ ಆತ್ಮಶಾಂತಿ, ಸಾಮೂಹಿಕ ಪರಸ್ಪರ ಶಾಂತಿ, ನಮ್ಮ ಸುತ್ತಲಿನ ಪ್ರಪಂಚದೊಂದಿಗೆ ಶಾಂತಿ ಅತ್ಯವಶ್ಯಕ. ಆಗವಾತ ನಮ್ಮ ದೈಹಿಕ ಮತ್ತು ವಿಷಯ ತೃಪ್ತಿ ದೊರೆಯುವುದಲ್ಲದೆ, ಭಾವನಾ ಮತ್ತು ಕ್ರಿಯಾ ಪ್ರಪಂಚಗಳ ಕಡೆಗಿನ್ರ ತನ್ನ ಘೋರತಮ ಯಾತ್ರೆಯಲ್ಲಿ ಮಾನವನ ವೈಶಿಷ್ಟ್ಯಗಳಾದ ಭಾವಪರವಶತೆಯ ಆತ್ಮಪ್ರೇರಣೆ ಮತ್ತು ಸಾಹಸ ಮನೋವೃತ್ತಿಗೂ ತೃಪ್ತಿ ದೊರೆಯುತ್ತದೆ. ಆ ಯಾತ್ರೆಗೆ ಒಂದು ಅಂತಿಮ ಧ್ಯೇಯ ಇದೆಯೋ ಇಲ್ಲವೋ ನಾನು ಅರಿಯೆ; ಆದರೆ ಅದರಿಂದ ಕೆಲವು ಲಾಭಗಳೇನೋ ಇವೆ. ಅನೇಕರಿಗೆ ಸುಲಭ ಸಾಧ್ಯವಾದ ಒಂದು ಹತ್ತಿರದ ಗುರಿ ತೋರಿಸುತ್ತದೆ. ಆ ಹಂತವೇ ಮತ್ತೊಂದು ಹೊಸ ಪ್ರಗತಿಗೆ ಒಂದು ಹೊಸ ಮೂಲವಾಗಬಹುದು.

ಪಾಶ್ಚಾತ್ಯ ಪ್ರಪಂಚದಲ್ಲಿ ವಿಜ್ಞಾನದ ಸರ್ವಾಧಿಕಾರ ನಡೆಯುತ್ತಿದೆ, ಎಲ್ಲರೂ ಅದಕ್ಕೆ ಕಾಣಿಕೆ ಸಲಿಸುತ್ತಿದಾರೆ. ಆದರೂ ಪಾಶ್ಚಾತ್ಯರಲ್ಲಿ ವೈಜ್ಞಾನಿಕ ಮನೋಪ್ರವೃತ್ತಿ ಬೆಳೆದಿದೆ ಎಂದು ನಾನು ಹೇಳಲಾರೆ. ದೇಹ ಮತ್ತು ಆತ್ಮಗಳ ಸಮರಸ ಜೀವನ ಅಲ್ಲಿ ಇನ್ನೂ ಬಂದಿಲ್ಲ. ಭಾರತದಲ್ಲಿ ನಾವು ಬಹುಮುಖವಾಗಿ ಬಹಳ ಮುಂದುವರಿಯಬೇಕಾಗಿದೆ. ನಮ್ಮ ದಾರಿಯಲ್ಲಿ ಅಗಾಧ ಆತಂಕಗಳು ಯಾವುವೂ ಬರಲಾರವೆಂದು ನನ್ನ ಭಾವನೆ. ಏಕೆಂದರೆ ಇತ್ತೀಚೆಗೆ ಇಲ್ಲದಿದ್ದರೂ ಪ್ರಾಚೀನ ಕಾಲದಲ್ಲಿ ಬಹುಕಾಲದ ಭಾರತೀಯ ಭಾವನೆಯ ಮುಖ್ಯ ಮೂಲತತ್ತ್ವವು ಈ ವೈಜ್ಞಾನಿಕ ಮನೋವೃತ್ತಿ ಮತ್ತು ಪ್ರವೇಶವಾಗಿತ್ತು ಮತ್ತು ಅಂತರ ರಾಷ್ಟ್ರೀಯ ಭಾವನೆಗಳೊಂದಿಗೂ ಅದು ಸರಿಹೊಂದಿಕೊಳ್ಳುತ್ತದೆ. ನಿರ್ಭಯ ಸತ್ಯಾನ್ವೇಷಣೆ, ಮಾನವನ ಅಸ್ತಿತ್ವ, ಸರ್ವ ಜೀವಗಳಲ್ಲಿ ಈಶ್ವರ ಪ್ರತಿಪಾದನೆ, ವ್ಯಕ್ತಿ ಮತ್ತು ಸಮಾಜದ ಸ್ವತಂತ್ರ ಸಹಕಾರ ಜೀವನ, ಸದಾ ಹೆಚ್ಚಿನ ಸ್ವಾತಂತ್ರ್ಯದ ಮತ್ತು ಉನ್ನತ ಮಟ್ಟದ ಮಾನವ ಪ್ರಗತಿ ಇವೇ ಅದರ ತಳಹದಿಯಾಗಿದ್ದವು.

## ೧೦. ರಾಷ್ಟ್ರೀಯ ಭಾವನೆಯ ಪ್ರಾಮುಖ್ಯತೆ: ಭಾರತದಲ್ಲಿ ಅವಶ್ಯ ಬದಲಾವಣೆಗಳು

ಪುರಾತನವೆಂದುದನ್ನೆಲ್ಲ ಕುರುಡು ಭಕ್ತಿಯಿಂದ ಪೂಜಿಸುವುದು ತಪ್ಪು; ಹಾಗೆಯೇ ಅದನ್ನು ತೃಣೀಕರಿಸುವುದೂ ತಪ್ಪು. ಈ ಎರಡು ಮಾರ್ಗದಿಂದಲೂ ನಮ್ಮ ಭವಿಷ್ಯ ರಚಿಸಲು ಸಾಧ್ಯವಿಲ್ಲ. ವರ್ತಮಾನ ಮತ್ತು ಭವಿಷ್ಯಗಳೆರಡರ ಹುಟ್ಟು ಪುರಾತನದಿಂದ; ಪ್ರಾಚೀನತೆಯ ಮುದ್ರೆ ಇವುಗಳ ಮೇಲೆ ಇದ್ದೇ ಇರುತ್ತದೆ. ಅದನ್ನು ಮರೆಯುವುದೆಂದರೆ ತಳಪಾಯವಿಲ್ಲದೆ ಮನೆ ಕಟ್ಟಿದಂತೆ; ಮತ್ತು ರಾಷ್ಟ್ರೀಯ ಬೆಳೆ

ವಣಿಗೆಯ ಬೇರುಗಳನ್ನೇ ಕತ್ತರಿಸಿದಂತೆ. ಅದರ ಅಲಕ್ಷ್ಯ ಎಂದರೆ ಜನತೆಯ ಮೇಲೆ ಮಹಾ ಪ್ರಭಾವ ಕಾರಿಯಾದ ಒಂದು ಅದ್ಭುತ ಶಕ್ತಿಯ ಅಲಕ್ಷ್ಯ. ರಾಷ್ಟ್ರೀಯ ಭಾವನೆ ಎಂದರೆ ಜನತೆಯ ಹಿಂದಿನ ಸಾಧನೆ ಸಂಪ್ರದಾಯ, ಮತ್ತು ಅನುಭವಗಳ ಸಾಮೂಹಿಕ ನೆನಹು; ಮತ್ತು ಹಿಂದೆ ಎಂದೂ ಇಲ್ಲದಕ್ಕಿಂತ ಹೆಚ್ಚು ಇಂದು ರಾಷ್ಟ್ರೀಯ ಭಾವನೆ ಬಲಗೊಂಡಿದೆ. ಅನೇಕರು ರಾಷ್ಟ್ರೀಯ ಭಾವನೆಯ ಕಾಲ ಮುಗಿದು ಹೋಯಿತು; ಆಧುನಿಕ ಪ್ರಪಂಚದಲ್ಲಿ ಬಲಗೊಳ್ಳುತ್ತಿರುವ ಅಂತರರಾಷ್ಟ್ರೀಯ ಭಾವನೆಗೇ ಇನ್ನು ಕಾಲ ಎಂದು ನಂಬಿದ್ದರು. ಜನ ಸಾಮಾನ್ಯದ ಹಿನ್ನೆಲೆಯಿಂದ ರಾಷ್ಟ್ರೀಯ ಸಂಸ್ಕೃತಿಯನ್ನು ಪಾಳುಬೀಳು ತ್ತಿರುವ ಮಧ್ಯಮ ವರ್ಗದ ಕೆಲಸವೆಂದು ಸಮಾಜವಾದ ಹೀಯಾಳಿಸಿತು. ಬಂಡವಾಳಗಾರಿಕೆಯೇ ತನ್ನ ಸಂಘಟನೆಗಳಿಂದ ರಾಷ್ಟ್ರೀಯ ಮೇರೆ ಮೀರಿ ಕ್ರಮೇಣ ಅಂತರ ರಾಷ್ಟ್ರೀಯವಾಯಿತು. ವಾಣಿಜ್ಯ ಮತ್ತು ವ್ಯಾಪಾರ, ಸುಲಭ ವಾರ್ತಾ ಪ್ರಸಾರ ಮತ್ತು ವೇಗದ ವಾಹನ ಸೌಕರ್ಯ, ಆಕಾಶವಾಣಿ ಮತ್ತು ಚಲಚ್ಚಿತ್ರ ಗಳು ಒಂದು ಅಂತರ ರಾಷ್ಟ್ರೀಯ ವಾತಾವರಣ ರೂಪುಗೊಳ್ಳಲು ಪ್ರೋತ್ಸಾಹ ಕೊಟ್ಟವು ಮತ್ತು ರಾಷ್ಟ್ರಿಯ ಭಾವನೆಗೆ ಇನ್ನು ಅವಕಾಶವಿಲ್ಲವೆಂಬ ಭ್ರಮೆಗೆ ಅವಕಾಶಕೊಟ್ಟವು.

ಆದರೂ ಸಂಕಟ ಸಮಯ ಒದಗಿದಾಗಲೆಲ್ಲ ರಾಷ್ಟ್ರೀಯ ಭಾವನೆ ಪುನರುಜ್ಜೀವನಗೊಂಡು ಪ್ರಬಲ ಗೊಂಡಿದೆ. ತಮ್ಮ ಹಳೆಯ ಸಂಪ್ರದಾಯಗಳಿಂದ ಜನರಿಗೆ ತೃಪ್ತಿಯೂ, ಶಕ್ತಿಯೂ ದೊರೆತಿವೆ. ಇಂದಿನ ಯುಗದ ಒಂದು ಮುಖ್ಯ ಅದ್ಭುತ ಸಾಧನೆ ಎಂದರೆ ಪ್ರಾಚೀನ ಯುಗದ ಮತ್ತು ರಾಷ್ಟ್ರೀಯತ್ವದ ಪುನರು ತ್ಥಾನ, ರಾಷ್ಟ್ರೀಯ ಪಾರಂಪರ್ಯದ ಕಡೆಗಿನ ಈ ಹಿನ್ನಡೆಯು ಅಂತರ ರಾಷ್ಟ್ರೀಯ ಕಾರ್ಯಾಚರಣೆಯ ಪ್ರಮುಖ ಮುಂದಾಳುಗಳೆಂಬ ಶ್ರಮಜೀವಿಗಳಲ್ಲಿ ಮತ್ತು ಜನಸಾಮಾನ್ಯರಲ್ಲೇ ಹೆಚ್ಚಾಗಿದೆ. ಯುದ್ಧ ಮುಂತಾದ ವಿಷಮ ಸನ್ನಿವೇಶಗಳಲ್ಲಿ ಅವರ ಅಂತರ ರಾಷ್ಟ್ರೀಯ ಭಾವನೆ ಎಲ್ಲ ಕರಗಿ ನೀರಾಗುತ್ತಿದೆ. ಇತರ ಪಂಗಡಗಳಿಗಿಂತ ರಾಷ್ಟ್ರೀಯ ದ್ವೇಷ ಮತ್ತು ಭಯ ಅವರಲ್ಲೇ ಹೆಚ್ಚುತ್ತಿದೆ. ಇದಕ್ಕೆ ಶ್ರೇಷ್ಠ ನಿದರ್ಶನವೆಂದರೆ ಸೋವಿಯಟ್ ರಷ್ಯದಲ್ಲಿ ಈಚೆಗೆ ನಡೆದ ಘಟನೆ. ತನ್ನ ಸಾಮಾಜಿಕ ಮತ್ತು ಆರ್ಥಿಕ ರಚನೆಯಲ್ಲಿ ಮುಖ್ಯ ಯಾವುದನ್ನೂ ಬಿಡದೆ ಉನ್ನತ ರಾಷ್ಟ್ರೀಯ ಭಾವನೆ ಬೆಳಸಿಕೊಂಡಿದೆ. ಅಂತರ ರಾಷ್ಟ್ರೀಯ ಜನಸಾಮಾನ್ಯರ ಉದ್ಧಾರ ಎಂಬುದಕ್ಕಿಂತ ಪಿತೃಭೂಮಿಯ ರಕ್ಷಣೆ ಎಂಬ ಉದ್ಗಾರಕ್ಕೆ ಪ್ರಾಮುಖ್ಯತೆ ದೊರೆತಿದೆ. ರಾಷ್ಟ್ರ ಇತಿಹಾಸದ ಪ್ರಮುಖ ವ್ಯಕ್ತಿಗಳ ಪೂಜೆಗೆ ಪುನಃ ಪ್ರಾಶಸ್ತ್ಯ ಬಂದಿದೆ; ಮತ್ತೊಮ್ಮೆ ಅವರು ಸೋವಿಯಟ್ ಜನರ ಆರಾಧಕರಾಗಿದ್ದಾರೆ. ಈ ಯುದ್ಧದಲ್ಲಿ ಸೋವಿಯಟ್ ತೋರಿ ಸಿದ ಅದ್ಭುತ ಪರಾಕ್ರಮ, ಶಕ್ತಿ ಮತ್ತು ಸಂಘಟನೆಗಳು ಬಹು ವಿಶಾಲ ಕ್ಷೇತ್ರದಲ್ಲಿ ದೊಡ್ಡ ಪ್ರಗತಿಗೆ ಕಾರಣವಾದ ಅವರ ಸಾಮಾಜಿಕ ಮತ್ತು ಆರ್ಥಿಕ ರಚನೆ, ಯೋಜಿತ ಕ್ರಮದಿಂದ ವಸ್ತು ನಿರ್ಮಾಣ ಮತ್ತು ವಿನಿಯೋಗ, ವಿಜ್ಞಾನ ಮತ್ತು ಅದರ ಪ್ರಯೋಗದಲ್ಲಿ ಪ್ರಗತಿ, ನಾಯಕತ್ವ ವಹಿಸಲು ಅವಕಾಶ ದೊರೆತು ಮುಂದೆ ಬಂದ ಜನ ಸಂಪತ್ತಿನ ಹೊಸ ಬುದ್ಧಿ ಶಕ್ತಿ ಕಾರ್ಯಶಕ್ತಿ ಮತ್ತು ಅಪ್ರತಿಮ ನಾಯಕತ್ವ ಇವು ಮುಖ್ಯ ಕಾರಣ ನಿಜ. ಆದರೆ ರಾಷ್ಟ್ರೀಯ ಇತಿಹಾಸ ಪರಂಪರೆಯ ಮತ್ತು ಸಂಪ್ರದಾಯಗಳ ಸ್ಮರಣೆ, ಇಂದಿನ ಬಾಳಿಗೆ ಜನ್ಮದಾಯಕವಾದ ಹಿಂದಿನ ಇತಿಹಾಸದ ಅರಿವು ಸಹ ಸ್ವಲ್ಪಮಟ್ಟಿಗೆ ಕಾರಣ ವಾಗಿರಬಹುದು. ರಷ್ಯದ ಇಂದಿನ ರಾಷ್ಟ್ರೀಯ ದೃಷ್ಟಿಯು ಹಿಂದಿನ ರಾಷ್ಟ್ರೀಯ ಭಾವನೆಯ ಪುನರವ ತಾರವೆಂದು ಭಾವಿಸುವುದು ತಪ್ಪು, ಅದು ಖಂಡಿತ ಅಲ್ಲ. ಕ್ರಾಂತಿಯ ಅದ್ಭುತ ಅನುಭವಗಳನ್ನು ಮತ್ತು ಅನಂತರದ ಘಟನೆಗಳನ್ನು ಎಂದೂ ಅವರು ಮರೆಯುವಂತಿಲ್ಲ; ಸಮಾಜ ರಚನೆಯಲ್ಲಿ ಮಾನಸಿಕ ಸ್ಥಿತಿ ಯಲ್ಲಿ ಆದ ಪರಿವರ್ತನೆಗಳು ಉಳಿಯಲೇ ಬೇಕು. ಆ ಸಮಾಜ ರಚನೆಯಲ್ಲಿ ಅಂತರ ರಾಷ್ಟ್ರೀಯ ಭಾವನೆ ಅನಿವಾರ್ಯ. ಆದರೂ ಈ ಹೊಸ ವಾತಾವರಣಕ್ಕೆ ಹೊಂದಿಕೊಂಡು, ಜನರ ಶಕ್ತಿ ಹೆಚ್ಚಿಸಿದ ರಾಷ್ಟ್ರೀಯ ಭಾವನೆ ಬೆಳೆಯಲು ಅಲ್ಲಿ ಅವಕಾಶ ದೊರೆತಿದೆ.

ಸೋವಿಯಟ್ ರಾಷ್ಟ್ರದ ಪ್ರಗತಿಯನ್ನು ಇತರ ದೇಶಗಳ ಸಾಮ್ಯವಾದಿ ಪಕ್ಷಗಳ ಏರಿಳಿತಗಳೊಡನೆ ಹೋಲಿಸಿ ನೋಡುವುದು ಉತ್ತಮ. ಸೋವಿಯಟ್ ಕ್ರಾಂತಿಯ ನಂತರ ಆರಂಭದ ದಿನಗಳಲ್ಲಿ ಎಲ್ಲ ರಾಷ್ಟ್ರಗಳ ಜನರಲ್ಲಿ ಅದರಲ್ಲೂ ಸಾಮಾನ್ಯ ಜನರಲ್ಲಿ ಅದ್ಭುತ ಉತ್ಸಾಹ ಉಕ್ಕೇರಿತು. ಆ ಉತ್ಸಾಹದ

ಪರಿಣಾಮವಾಗಿ ಸಾಮ್ಯವಾದಿ ಪಕ್ಷ ಪಂಗಡಗಳು ಹುಟ್ಟಿಕೊಂಡವು. ಅನಂತರ 'ಈ ಪಂಗಡಗಳಿಗೂ ರಾಷ್ಟ್ರೀಯ ಶ್ರಮಜೀವಿಗಳ ಪಕ್ಷಗಳಿಗೂ ತಿಕ್ಕಾಟ ಆರಂಭವಾಯಿತು. ಸೋವಿಯಟ್ ರಷ್ಯದ ಪಂಚ ವಾರ್ಷಿಕ ಯೋಜನೆಗಳಿಂದ ಇನ್ನೊಂದು ಕುತೂಹಲ ಮತ್ತು ಉತ್ಸಾಹದ ಅಲೆ ಉಕ್ಕಿ ಬಂದಿತು. ಶ್ರಮ ಜೀವಿಗಳಿಗಿಂತ ಮಧ್ಯಮ ವರ್ಗದ ಪ್ರಜ್ಞಾಶಾಲಿಗಳ ಮೇಲೆ ಪ್ರಬಲ ಪರಿಣಾಮವಾಯಿತು. ಸೋವಿ ಯಟ್ ರಾಷ್ಟ್ರದಲ್ಲಿ ಕೆಲವರ ಮೇಲೆ ಉಗ್ರ ಕಾರ್ಯಕ್ರಮ ತೆಗೆದುಕೊಂಡು ಪಕ್ಷದಿಂದ ಹೊರದೂಡಿದಾಗ ಈ ಕಾವು ಸ್ವಲ್ಪ ತಣ್ಣಗಾಯಿತು. ಕೆಲವು ದೇಶಗಳಲ್ಲಿ ಸಾಮ್ಯವಾದಿ ಪಕ್ಷಗಳನ್ನು ಮಟ್ಟ ಹಾಕಿದರು; ಇನ್ನು ಕೆಲವು ಕಡೆ ಅವು ಬೆಳೆಯಲು ಅವಕಾಶ ದೊರೆಯಿತು. ಆದರೆ ಸಾಮಾನ್ಯವಾಗಿ ಎಲ್ಲ ಕಡೆಯಲ್ಲೂ ವ್ಯವಸ್ಥಿತ ರಾಷ್ಟ್ರೀಯ ಶ್ರಮಜೀವಿಗಳಿಗೂ ಅವರಿಗೂ ಘರ್ಷಣೆ' ಅನಿವಾರ್ಯವಾಯಿತು. ಶ್ರಮಜೀವಿಗಳ ಪಕ್ಷದ ಸಾಂಪ್ರದಾಯಕ ನೀತಿಯೂ ಇದಕ್ಕೆ ಕಾರಣವಿರಬಹುದು. ಆದರೆ ಸಾಮ್ಯವಾದಿ ಪಕ್ಷ ವಿದೇಶೀ ಪಕ್ಷ, ಅದರ ಕಾರ್ಯ ನೀತಿ ಎಲ್ಲಾ ರಷ್ಯದಿಂದ ಪ್ರೇರಿತವಾದದ್ದು ಎಂಬ ಭಾವನೆ ಮುಖ್ಯ ಕಾರಣ. ಶ್ರಮ ಜೀವಿಗಳಲ್ಲಿ ಅನೇಕರಿಗೆ ಸಾಮ್ಯವಾದದ ಮೇಲೆ ಪ್ರೇಮವಿದ್ದರೂ ಸಾಮ್ಯವಾದಿಗಳ ಸಹಕಾರ ಪಡೆಯಲು ಅವರ ಉನ್ನತ ರಾಷ್ಟ್ರೀಯ ಭಾವನೆಯು ಅಡ್ಡಬಂದಿತು. ರಷ್ಯದ ವಿಶೇಷ ಪರಿಸ್ಥಿತಿ ಅರಿತವರಿಗೆ ಮಾತ್ರ ಅರ್ಥವಾಗುವ ಸೋವಿಯಟ್ ನೀತಿಯಲ್ಲಿನ ಅನೇಕ ವ್ಯತ್ಯಾಸಗಳು, ಇತರ ದೇಶಗಳ ಸಾಮ್ಯವಾದಿಗಳು ಅನುಸರಿಸ ಹೋದರೆ ಪೂರ್ಣ ಅರ್ಥ ಶೂನ್ಯವಾದವು. ರಷ್ಯಕ್ಕೆ ಉತ್ತಮವಾದುದೆಲ್ಲ ಇತರ ರಾಷ್ಟ್ರಗಳಿಗೂ ಉತ್ತಮ ಇರಲೇ ಬೇಕೆಂಬ ಪೂರ್ವಭಾವನೆಯಿಂದ ಹೊರಟರೆ ಮಾತ್ರ ಅರ್ಥವಾಗುತ್ತಿತ್ತು. ಈ ಸಾಮ್ಯ ವಾದಿ ಪಕ್ಷಗಳಲ್ಲಿ ಕೆಲವು ದಕ್ಷರೂ ತೀವ್ರ ಆಸಕ್ತರೂ ಆದ ಸ್ತ್ರೀಪುರುಷರಿದ್ದರೂ ಆ ಪಕ್ಷಗಳು ಜನರ ರಾಷ್ಟ್ರೀಯ ಭಾವನೆಗಳ ಸಂಪರ್ಕವಿಲ್ಲದೆ ಶಕ್ತಿಗುಂದಿದವು. ರಾಷ್ಟ್ರೀಯ ಪರಂಪರೆಯಿಂದ ಸೋವಿಯಟ್ ರಾಷ್ಟ್ರವು ಹೊಸ ಶಕ್ತಿ ಸಂಪಾದಿಸಿಕೊಳ್ಳುತ್ತಿದ್ದಾಗ ಇತರ ದೇಶಗಳ ಸಾಮ್ಯವಾದಿ ಪಕ್ಷಗಳು ರಾಷ್ಟ್ರೀಯ ಭಾವನೆಯಿಂದ ದೂರವಾಗುತ್ತಿದ್ದವು.

ಇತರ ಕಡೆಗಳಲ್ಲಿ ಹೇಗೋ ನಾನರಿಯೆ. ಆದರೆ ಭಾರತದ ಸಾಮ್ಯವಾದಿ ಪಕ್ಷ ಮಾತ್ರ ಜನರ ಮನಸ್ಸಿನಲ್ಲಿ ನೆಲೆಸಿರುವ ರಾಷ್ಟ್ರೀಯ ಪರಂಪರೆಯಿಂದ ಮಾತ್ರ ದೂರವಿದೆ, ಅದರ ಗಂಧ ಅವರಿಗೆ ಇಲ್ಲ. ಸಾಮ್ಯವಾದವೆಂದರೆ ಹಿಂದಿನದನ್ನೆಲ್ಲ ಹಳಿಯಬೇಕೆಂದು ಅವರ ಭಾವನೆ. ಪ್ರಪಂಚದ ಇತಿಹಾಸ ಅವರಿಗೆ ಆರಂಭವಾದುದು ೧೯೧೭ ರಿಂದ ಮಾತ್ರ. ಅದಕ್ಕೆ ಮುಂಚಿನದೆಲ್ಲ ಪೂರ್ವ ಸಿದ್ಧತೆಯ ಒಂದು ದಾರಿ ಮಾತ್ರ. ಸಾಮಾನ್ಯವಾಗಿ ಬಹುಜನ ಅರೆಹೊಟ್ಟೆಯಲ್ಲಿದ್ದು ಆರ್ಥಿಕ ರಚನೆ ಕುಸಿದು ಬೀಳುತ್ತಿರುವ ಭಾರತದಲ್ಲಿ ಸಾಮ್ಯವಾದದ ಬೆಳೆವಣಿಗೆಗೆ ಒಳ್ಳೆಯ ಅವಕಾಶ ದೊರೆಯಬೇಕು. ಒಂದು ದೃಷ್ಟಿಯಿಂದ ಅದಕ್ಕೆ ಒಂದು ರೀತಿಯ ಅಸ್ಪಷ್ಟ ಸಹಾನುಭೂತಿ ಇದೆ. ಆದರೆ ಅದರ ಉಪಯೋಗ ಪಡೆ ಯಲು ಭಾರತದ ಸಾಮ್ಯವಾದಿ ಪಕ್ಷಕ್ಕೆ ಶಕ್ತಿ ಇಲ್ಲ. ರಾಷ್ಟ್ರೀಯ ಭಾವನೆಯ ಧ್ವಜಜಲದಿಂದ ಅದು ದೂರ ವಾಗಿರುವುದೇ ಮುಖ್ಯ ಕಾರಣ. ಹೃದಯದ ತಂತಿಯನ್ನು ಮೀಟಿ ಪ್ರತಿಧ್ವನಿ ಗೈದ ಭಾಷೆಯಲ್ಲಿ ಅದು ಮಾತನಾಡುತ್ತಿದೆ. ಶಕ್ತಿ ಇದ್ದರೂ ಅದು ಬುಡ ಭದ್ರವಿಲ್ಲದ ಒಂದು ಸಣ್ಣ ಗುಂಪು ಮಾತ್ರ.

ಭಾರತದಲ್ಲಿ ಬೇರು ಬಿಡದೆ ಸೋಲು ಪಡೆದಿರುವುದು ಸಾಮ್ಯವಾದಿ ಪಕ್ಷ ಒಂದೇ ಅಲ್ಲ. ನವೀನತೆ, ನವೀನ ರೀತಿಗಳು ಎಂದು ಸುಲಭ ಮಾತನಾಡುತ್ತ ನವೀನ ಯುಗಧರ್ಮದ ನಿಜವಾದ ಅರಿವು ಲೇಶವೂ ಇಲ್ಲದೆ, ಪಾಶ್ಚಾತ್ಯ ಸಂಸ್ಕೃತಿಯ ತಿರುಳಿನ ಅಥವ ನಮ್ಮ ಸಂಸ್ಕೃತಿಯ ಪರಿಚಯ ಸಹ ಇಲ್ಲದ ಮಾತಿನ ಮಲ್ಲರೂ ಕೆಲವರಿದ್ದಾರೆ. ಸಾಮ್ಯವಾದಿಗಳಂತೆ ಮುಂದೂಡುವ ಒಂದು ಧ್ಯೇಯವಾಗಲಿ ಪ್ರೇರಕ ಶಕ್ತಿ ಯಾಗಲಿ ಅವರಿಗೆ ಇಲ್ಲ. ಪಾಶ್ಚಿಮಾತ್ಯದ ಬಾಹ್ಯರೂಪ ಮತ್ತು ಅಲಂಕಾರ ಮಾತ್ರ ಅನುಕರಿಸಿ ತಾವೇ ಪ್ರಗತಿಪರ ನಾಗರಿಕತೆಯ ಮುಂದಾಳುಗಳೆಂದು ಭಾವಿಸಿದ್ದಾರೆ. ಅಂಧರೂ ಅಲ್ಪಮತಿಗಳೂ ಆಗಿ ತಮ್ಮದೇ ಒಂದು ದುರಹಂಕಾರದಿಂದ ಪಾಶ್ಚಾತ್ಯ ಸಂಸ್ಕೃತಿ ಅಥವ ಪೌರ್ವಾತ್ಯ ಸಂಸ್ಕೃತಿಯ ಯಾವ ಸಜೀವ ಸಂಪರ್ಕವೂ ಇಲ್ಲದೆ ಒಂದುಕೃತಕ ಜೀವನ ನಡೆಸುವ ದೊಡ್ಡ ದೊಡ್ಡ ನಗರವಾಸಿಗಳು ಇವರು.

ಆದ್ದರಿಂದ ಹಿಂದಿನದನ್ನೆಲ್ಲ ಅನುಕರಿಸಿ ಅಥವ ಪೂರ್ಣ ನಿರಾಕರಿಸಿ ರಾಷ್ಟ್ರೀಯ ಪ್ರಗತಿ ಸಾಧಿಸುತ್ತೇ

ನೆಂದರೆ ಸಾಧ್ಯವಾಗುವುದಿಲ್ಲ. ಹೊಸ ಆದರ್ಶ ಅನುಸರಿಸಬೇಕಾದ್ದು ಅನಿವಾರ್ಯ ಆದರೆ ಅವು ಹಿಂದಿನ ಆದರ್ಶಗಳ ಸಮೀಕರಣವಾಗಿರಬೇಕು. ಆಗ ಕೆಲವು ವೇಳೆ ಹೊಸದು ತೀರ ಭಿನ್ನವಾದರೂ ಅದು ಹಿಂದಿನ ಆದರ್ಶಗಳ ಮೇಲೆಯೇ ರಚಿತವಾದಂತೆ ತೋರಿ ಪ್ರಗತಿಯು ಹಿಂದಿನಿಂದ ಹರಿದು ಬಂದ ಅವಿಚ್ಛಿನ್ನ ವಾಹಿನಿಯೋ ಏನೋ ಎಂಬ ಭಾವನೆ ಹುಟ್ಟುತ್ತದೆ. ಮತ್ತು ಮಾನವ ಕುಲದ ಇತಿಹಾಸಪರಂಪರೆಯಲ್ಲಿ ಒಂದು ಘಟ್ಟವಾಗುತ್ತದೆ. ಈ ರೀತಿ ಹಳೆಯ ಭಾವನೆಗಳನ್ನು ಹೊಸ ಸನ್ನಿವೇಶಕ್ಕೆ, ಹಳೆಯ ಆದರ್ಶ ಗಳನ್ನು ಹೊಸ ಆದರ್ಶಗಳಿಗೆ ಪರಂಪರಾನುಗತಅಣಿಗೊಳಿಸಿ ಬೆಳೆಸಿದ ಪರಿವರ್ತನೆಗಳ ಅದ್ಭುತ ಕಥೆಯೇ ಭಾರತದ ಇತಿಹಾಸ. ಆದ್ದರಿಂದ ನಮ್ಮ ಸಂಸ್ಕೃತಿವಾಹಿನಿಯಲ್ಲಿ ಯಾವ ಭಗ್ನತೆಯೂ ಇಲ್ಲ. ಮೊಹೆಂಜೊ ದಾರೊ ಯುಗದಿಂದ ಇಂದಿನವರೆಗೆ ಅನೇಕ ಪರಿವರ್ತನೆಗಳಾಗಿದ್ದರೂ ಒಂದು ಅನಂತ ವಾಹಿನಿ ಪ್ರವಹಿ ಸಿದೆ. ಸನಾತನತೆಗೂ ಸನಾತನ ಸಂಪ್ರದಾಯಗಳಿಗೂ ಗೌರವವಿತ್ತು, ಆದರೆ ಮನಸ್ಸಿನ ಸ್ವಾತಂತ್ರ್ಯಕ್ಕೆ ಮತ್ತು ನಮ್ರತೆಗೆ ಅವಕಾಶವಿತ್ತು ಮತ್ತು ಆತ್ಮ ಸಹಿಷ್ಣುತೆ ಇತ್ತು. ಬಾಹ್ಯರೂಪ ಅದೇ ಉಳಿದರೂ ಅಂತಸ್ಸತ್ವ ಮಾತ್ರ ಈ ರೀತಿ ಪರಿವರ್ತನಗೊಳ್ಳುತ್ತಲೇ ಇತ್ತು, ಹಾಗಿರದಿದ್ದರೆ ಆ ಸಮಾಜ ಸಹಸ್ರಾರು ವರ್ಷಕಾಲ ಉಳಿದು ಬಾಳಲು ಸಾಧ್ಯ ಇರುತ್ತಿರಲಿಲ್ಲ. ಚೈತನ್ಯ ಯುಕ್ತ ಪ್ರಗತಿಪರ ಮನಸ್ಸು ಮಾತ್ರ ಸಾಂಪ್ರದಾಯಕ ರೂಪಗಳ ಕಾಠಿಣ್ಯತೆ ನಿವಾರಿಸಿಕೊಳ್ಳಬಲ್ಲುದು; ಮತ್ತು ಆ ಸಂಪ್ರದಾಯಗಳೇ ಒಂದು ಅವಿಚ್ಛಿನ್ನತೆ ಮತ್ತು ಭದ್ರತೆ ಕೊಡಬಲ್ಲುವು.

ಆದರೂ ಸಮತೂಕಕ್ಕೆ ಅಪೋಹ ಬಂದು ಒಂದು ದೃಷ್ಟಿ ಇನ್ನೊಂದನ್ನು ಅಡ್ಡತಡೆದು ಸ್ವಲ್ಪ ಅದು ಮಲೂ ಬಹುದು. ಸಮಾಜದ ಕೆಲವು ಕಠಿಣ ಬಂಧನಗಳಿದ್ದರೂ ಮನಸ್ಸಿನ ಸ್ವಾತಂತ್ರ್ಯಕ್ಕೆ ಮತ್ತು ವಿಕಾ ಸಕ್ಕೆ ಭಾರತದಲ್ಲಿ ಯಾವ ಮಿತಿಯೂ ಇರಲಿಲ್ಲ. ಕ್ರಮೇಣ ಈ ಸಮಾಜ ಬಂಧನಗಳು ಮನಸ್ಸಿನ ಸ್ವಾತಂತ್ರ್ಯಕ್ಕೆ ಸಹ ಅಡ್ಡಿಬಂದು ತತ್ತ್ವಶಃ ಇಲ್ಲದಿದ್ದರೂ ವಾಸ್ತವಿಕವಾಗಿ ಮನಸ್ಸಿನ ಕಾಠಿಣ್ಯವನ್ನು ಹೆಚ್ಚಿಸಿ ಮಿತಿಯನ್ನು ಸಂಕುಚಿತಗೊಳಿಸಿದವು. ಪಾಶ್ಚಾತ್ಯ ಯೂರೋಪಿನಲ್ಲಿ ಆ ಬಗೆಯ ಮಾನಸಿಕ ಸ್ವಾತಂತ್ರ್ಯ ಯಾವುದೂ ಇರಲಿಲ್ಲ; ಸಾಮಾಜಿಕ ಕಟ್ಟುಗಳೂ ಕಠಿಣವಿರಲಿಲ್ಲ. ಮನೋಸ್ವಾತಂತ್ರ್ಯ ಕ್ಕಾಗಿ ಯೂರೋಪಿನಲ್ಲಿ ಬಹು ಧೀರ್ಘಕಾಲ ಹೋರಾಡಬೇಕಾಯಿತು. ಅದರ ಪರಿಣಾಮವಾಗಿ ಸಮಾಜ ಬಂಧನಗಳೂ ಪರಿವರ್ತನೆಯಾದವು.

ಚೀನಾದಲ್ಲಿ ಭಾರತಕ್ಕಿಂತ ಮನಸ್ಸಿನ ನಮ್ರತೆ ಹೆಚ್ಚು; ಸಂಪ್ರದಾಯ ಪ್ರೇಮ ಮತ್ತು ಶರಣತೆ ಎಷ್ಟೇ ಪ್ರಬಲವಿದ್ದರೂ ಮನಸ್ಸಿನ ನಮ್ರತೆ ಮತ್ತು ಸಹನ ಶಕ್ತಿ ಎಂದೂ ಕಡಮೆಯಾಗಲಿಲ್ಲ. ಸಂಪ್ರ ದಾಯ ಶರಣತೆಯಿಂದ ಪರಿವರ್ತನೆಗೊಳ್ಳಲು ಸ್ವಲ್ಪ ಕಾಲ ಹಿಡಿಯಿತು; ಆದರೆ ಪರಿವರ್ತನೆಯ ಭಯ ಮನಸ್ಸಿಗೆ ಸ್ವಲ್ಪವೂ ಆಗಲಿಲ್ಲ; ಮತ್ತು ಆ ಪರಿವರ್ತನೆಯೂ ಹಳೆಯ ರೂಪದಲ್ಲೇ ಬಂದಿತು. ಚೀನೀ ಸಮಾಜದಲ್ಲಿ ಭಾರತಕ್ಕಿಂತ ಹೆಚ್ಚಾಗಿ ಬಹುಕಾಲ ಬಾಳಿದ ಒಂದು ಸಮತೋಲನೆಯನ್ನೂ ಅಂಗ ಸೌಷ್ಠವ ವನ್ನೂ ಅವರು ನಿರ್ಮಿಸಿದರು. ಪ್ರಾಯಶಃ ಚೀನಾಕ್ಕೆ ಇದ್ದ ಮುಖ್ಯ ಅನುಕೂಲತೆ ಎಂದರೆ ಸಂಕುಚಿತ ವ್ಯಾಪ್ತಿರಹಿತ ಮತದೃಷ್ಟಿ ಮತ್ತು ಮತಾಂಧತೆಗಳಿಂದ ಅದು ಪೂರ್ಣ ಸ್ವತಂತ್ರವಿದ್ದುದು ಮತ್ತು ವಿಚಾರ ಶಕ್ತಿ ಮತ್ತು ವಿವೇಕಪರತೆಯನ್ನೇ ಆಧಾರ ಇಟ್ಟುಕೊಂಡುದು. ಅಷ್ಟು ಕಡಮೆ ಧರ್ಮಾವಲಂಬಿಯಾದ ಸಂಸ್ಕೃತಿ ಬೇರಾವ ದೇಶದಲ್ಲೂ ಇಲ್ಲ. ಸದ್ಗುಣಗಳಿಗೆ, ನೀತಿಶಾಸ್ತ್ರಕ್ಕೆ ಬಹುಮುಖ ಮಾನವ ಜೀವನದ ಅಂತರಾರ್ಥಕ್ಕೆ ಅಷ್ಟು ಬೆಲೆ ಯಾವ ದೇಶವೂ ಕೊಟ್ಟಿಲ್ಲ.

ವ್ಯವಹಾರದಲ್ಲಿ ಅತ್ಯಲ್ಪವೆಂದರೂ ಮನೋಸ್ವಾತಂತ್ರ್ಯಕ್ಕೆ ಭಾರತದಲ್ಲಿ ಬಹಳ ಬೆಲೆ ಇದ್ದುದರಿಂದ ಹೊಸ ಭಾವನೆಗಳಿಗೆ ತಡೆ ಇರಲಿಲ್ಲ. ಜೀವನ ಕಾಠಿಣ್ಯವೂ ಮತಾಂಧ ದೃಷ್ಟಿಯೂ ಬಹಳವಿದ್ದ ರಾಷ್ಟ್ರ ಗಳಿಗಿಂತ ಹೆಚ್ಚಾಗಿ ಇಲ್ಲಿ ವಿಚಾರ ವಿನಿಮಯಕ್ಕೂ, ಸ್ವೀಕಾರಕ್ಕೂ ಅವಕಾಶವಿತ್ತು. ಭಾರತ ಸಂಸ್ಕೃತಿಯ ಮೂಲ ತತ್ವಗಳಲ್ಲಿ ವಿಶಾಲ ದೃಷ್ಟಿ ಇದೆ. ಯಾವ ಸನ್ನಿವೇಶಕ್ಕಾದರೂ ಅವು ಹೊಂದಿಕೊಳ್ಳುತ್ತವೆ. ಹತ್ತೊಂಭತ್ತನೆಯ ಶತಮಾನದಲ್ಲಿ ಯೂರೋಪಿನ ಧರ್ಮ ಮತ್ತು ವಿಜ್ಞಾನಗಳಿಗೆ ನಡೆದ ಭಯಂಕರ ಹೋರಾಟಕ್ಕೆ ಭಾರತದಲ್ಲಿ ಆಸ್ಪದವಿರಲಿಲ್ಲ. ವೈಜ್ಞಾನಿಕ ಪ್ರಯೋಗಗಳ ಆಧಾರದ ಮೇಲೆ ರೂಪುಗೊಂಡ

ಪರಿವರ್ತನೆಗೂ ಭಾರತೀಯ ಮೂಲತತ್ವಗಳಿಗೂ ಯಾವ ವಿರೋಧವೂ ಬರುವುದಿಲ್ಲ. ಅಂತಹ ಪರಿವರ್ತನೆಗಳು ಭಾರತದ ಮನೋಪ್ರಪಂಚದಲ್ಲಿ ಕೋಲಾಹಲ ಎಬ್ಬಿಸುವುದು ನಿಜ. ಆದರೆ ಅವನ್ನು ವಿರೋಧಿಸಿ ತಿರಸ್ಕರಿಸದೆ ತನ್ನ ಆದರ್ಶಕ್ಕೆ ಹೊಂದಿಸಿ ತನ್ನ ಮಾನಸಿಕ ಚೌಕಟ್ಟಿನೊಳಗೆ ಸೇರಿಸಿ ತನ್ನದನ್ನಾಗಿ ಮಾಡಿಕೊಳ್ಳುತ್ತದೆ. ಈ ಪರಿವರ್ತನ ಕ್ರಮವೆಲ್ಲ ಹಳೆಯ ದೃಷ್ಟಿಯಲ್ಲಿಯೇ ಮಹತ್ಪರಿವರ್ತನೆಗಳಾಗಬಹುದು. ಆದರೆ ಅವು ಹೊರಗಿನವರು ಹೇರಿದ ಪರಕೀಯ ವಿಷಯಗಳಾಗದೆ ಜನತೆಯ ಸಂಸ್ಕೃತಿಯ ಹಿನ್ನೆಲೆಯಿಂದ ಸ್ವಾಭಾವಿಕವಾಗಿ ವಿಕಾಸಗೊಂಡ ವಿಷಯಗಳಾಗುತ್ತವೆ. ಬಹುಕಾಲ ಪ್ರಗತಿಯೇ ಇಲ್ಲದ ಭಾರತದಲ್ಲಿ ಗೌಣವೂ ಮಹತ್ಪರಿಣಾಮಕಾರಿಯೂ ಆದ ಪರಿವರ್ತನೆಗಳು ಅತ್ಯಂತ ಅವಶ್ಯವಿದ್ದರೂ ಈಗ ಅದು ಕಷ್ಟವಾಗಬಹುದು.

ಈ ಮೂಲ ತತ್ವಗಳ ಸುತ್ತಲೂ ಹೆಮ್ಮರವಾಗಿ ಬೆಳೆದುಕೊಂಡು ಇಂದು ನಮ್ಮ ಉಸಿರುಕಟ್ಟುತ್ತಿರುವ ಮೇಲ್ಕಟ್ಟಡದ ಬಹುಭಾಗವನ್ನು ತೆಗೆಯಲೇ ಬೇಕು. ಈ ಮೇಲ್ಕಟ್ಟಡ ಯುಗಧರ್ಮಕ್ಕೆ ವಿರೋಧವೂ ಅಸಾಧುವೂ ಇರುವುದರಿಂದ ಅದು ನಾಶವಾಗಲೇ ಬೇಕು. ಅದನ್ನು ಉಳಿಸಿಕೊಳ್ಳಬೇಕೆನ್ನುವವರು ಭಾರತೀಯ ಸಂಸ್ಕೃತಿಯ ಮೂಲ ತತ್ವಗಳಿಗೆ ಬಹಳ ಅನ್ಯಾಯಮಾಡುತ್ತಾರೆ; ಸಾಧುವಾದುದನ್ನೂ ಅಸಾಧುವಾದುದನ್ನೂ ಬೆರಸಿ ಸಾಧುವಾದುದನ್ನೂ ಕುಲಗೆಡಿಸುತ್ತಾರೆ. ಎರಡನ್ನೂ ಪ್ರತ್ಯೇಕಿಸಿ ಮಧ್ಯೆ ಖಚಿತವಾದ ಒಂದು ಗೆರೆ ಕೊಯ್ಯುವುದು ಸುಲಭವಲ್ಲ; ಮತ್ತು ಪ್ರಬಲ ಭಿನ್ನಾಭಿಪ್ರಾಯಗಳೂ ಇವೆ. ಆ ಬಗೆಯ ತರ್ಕಬದ್ಧ, ತತ್ವಪೂರ್ಣ ಗೆರೆ ಎಳೆಯುವುದೂ ಅನವಶ್ಯಕ. ಪರಿವರ್ತಿತ ಜೀವನದ ಅವಶ್ಯಕತೆ, ಪ್ರಪಂಚದ ಘಟನೆಗಳ ಓಟವೇ ಕ್ರಮೇಣ ನಮಗೆ ಆ ಗೆರೆ ಎಳೆದುಕೊಡುತ್ತವೆ. ಔದ್ಯೋಗಿಕವಿರಲಿ ದಾರ್ಶನಿಕವಿರಲಿ ಎಲ್ಲ ಬಗೆಯ ಪ್ರಗತಿಗೂ ಜನಜೀವನ ಮತ್ತು ಸಮಾಜದ ಅವಶ್ಯಕತೆಗಳ ಮತ್ತು ಪ್ರಪಂಚದ ಪ್ರಗತಿವಾಹಿನಿಗಳ ಸಂಪರ್ಕ ಅತ್ಯವಶ್ಯಕವಿದೆ. ಆ ಸಂಬಂಧವಿಲ್ಲದಿದ್ದರೆ ಜೀವನ ಕೊಳೆತು ನಾರುತ್ತದೆ, ಮೃತ್ಯುಮುಖವಾಗುತ್ತದೆ. ಆದರೆ ಆ ಸಂಪರ್ಕ ಇಟ್ಟುಕೊಂಡು, ತೆರೆದ ಮನಸ್ಸಿನಿಂದ ಮುಂದುವರಿದರೆ ಯಾವ ಮುಖ್ಯ ಅಮೂಲ್ಯ ವಸ್ತುವನ್ನೂ ಕಳೆದುಕೊಳ್ಳದೆ ಜೀವನಗತಿಯೊಂದಿಗೆ ಹೊಂದಿಕೊಳ್ಳುತ್ತೇವೆ.

ಹಿಂದೆ ನಮ್ಮ ಜ್ಞಾನ ಪ್ರವೇಶ ಸಂಯೋಗಿಕವಿತ್ತು; ಆದರೆ ಭಾರತದೊಳಗೆ ಮಾತ್ರವಿತ್ತು. ಆ ಮಿತಿ ಮಾತ್ರ ಮುಂದುವರಿದು ಸಂಯೋಗಿಕ ಪ್ರವೇಶವು ಕ್ರಮೇಣ ಹೆಚ್ಚು ವಿಶ್ಲೇಷಣ ಮಾರ್ಗಕ್ಕೆ ಎಡೆ ಕೊಟ್ಟಿತು. ಪುನಃ ಸಂಯೋಗಿಕ ರೀತಿಗೆ ಪ್ರಾಧಾನ್ಯತೆ ಕೊಟ್ಟು ಇಡೀ ಪ್ರಪಂಚವನ್ನೇ ನಮ್ಮ ಜ್ಞಾನ ಕ್ಷೇತ್ರವನ್ನಾಗಿ ಈಗ ಮಾಡಿಕೊಳ್ಳಬೇಕಾಗಿದೆ. ಇಷ್ಟು ದೀರ್ಘಕಾಲ ಸಂಕುಚಿತ ಭಾವನೆ ಮತ್ತು ಕರ್ಮ ಮಾರ್ಗಗಳಲ್ಲಿ ತೊಳಲಿದ ಜನತೆ ಆ ಜಾಡಿನಿಂದ ಹೊರಬಿದ್ದು ಉನ್ನತ ಮಟ್ಟಕ್ಕೆ ಬೆಳೆಯಬೇಕಾದರೆ ಪ್ರತಿಯೊಬ್ಬ ವ್ಯಕ್ತಿಯೂ, ಪ್ರತಿಯೊಂದು ಜನಾಂಗವೂ ಈ ಸಂಯೋಗಿಕ ಮಾರ್ಗಕ್ಕೆ ಪ್ರಾಶಸ್ತ್ಯ ಕೊಡುವುದು ಅತ್ಯವಶ್ಯಕ. ವಿಜ್ಞಾನದ ಪ್ರಗತಿ ಮತ್ತು ಅದರ ಪ್ರಯೋಗಗಳಿಂದ ಅದು ನಮಗೆ ಸಾಧ್ಯವಿದೆ. ಆದರೆ ಆ ಜ್ಞಾನದ ಅಪಾರ ಹೊರೆಯೇ ಈಗ ಇನ್ನೊಂದು ಕುತ್ತಾಗಿದೆ. ಯಾವುದೋ ಒಂದು ವಿಶೇಷ ವಿಷಯದಲ್ಲಿ ನೈಪುಣ್ಯತೆ ಪಡೆದು ವ್ಯಕ್ತಿ ಜೀವನ ಸಂಕುಚಿತವಾಗುತ್ತದೆ. ಕೈಗಾರಿಕೆಯಲ್ಲಿ ಮಾನವನು ನಿರ್ಮಿಸುವ ವಸ್ತುವಿನ ಯಾವುದೋ ಒಂದು ಅತ್ಯಲ್ಪ ಭಾಗಕ್ಕೆ ಮಾತ್ರ ಅವನ ಶ್ರಮದ ಸಂಬಂಧವಿದೆ. ಜ್ಞಾನದಲ್ಲಿ, ಕೆಲಸದಲ್ಲಿ ವಿಶೇಷ ನೈಪುಣ್ಯತೆ ಬೇಕೇ ಬೇಕು; ಆದರೆ ಯುಗಾಂತರಗಳಿಂದ ನಡೆದ ಮಾನವ ಸಾಹಸದ ಮತ್ತು ಜೀವನದ ಸಂಯೋಗಿಕ ದೃಷ್ಟಿಗೆ ಪ್ರೋತ್ಸಾಹ ಕೊಡುವುದು ಎಂದಿಗಿಂತಲೂ ಇಂದು ಅತ್ಯವಶ್ಯ ತೋರುತ್ತದೆ. ಈ ದೃಷ್ಟಿಯು ಹಿಂದಿನದನ್ನೂ ಇಂದಿನದನ್ನೂ ಗಮನದಲ್ಲಿಡಬೇಕಲ್ಲದೆ ಎಲ್ಲ ದೇಶಗಳನ್ನೂ, ಜನರನ್ನೂ ಒಳಗುಮಾಡಿಕೊಂಡು ವಿಶ್ವವ್ಯಾಪಕವಿರಬೇಕು. ಈರೀತಿ ನಮ್ಮ ರಾಷ್ಟ್ರೀಯ ಹಿನ್ನೆಲೆ ಮತ್ತು ಸಂಸ್ಕೃತಿಗಳ ಜೊತೆಗೆ ಇತರ ದೇಶಗಳ ಜನರನ್ನು ಅರ್ಥಮಾಡಿಕೊಳ್ಳುವ ಶಕ್ತಿಯನ್ನೂ ಪ್ರಾಯಶಃ ಅವರ ಮೆಚ್ಚುಗೆಯನ್ನೂ ನಾವು ಪಡೆಯಬಹುದು. ಅಲ್ಲದೆ ಇಂದಿನ ಏಕಪಕ್ಷೀಯ ದೃಷ್ಟಿ ಮತ್ತು ವ್ಯಕ್ತಿತ್ವಗಳಿಗೆ ಬದಲಾಗಿ ಸರ್ವ ಸಮದೃಷ್ಟಿ ಮತ್ತು ವ್ಯಕ್ತಿತ್ವಗಳನ್ನು ಬೆಳೆಯಿಸಲು

ಸ್ವಲ್ಪ ಸಾಧ್ಯವಾಗಬಹುದು. ಪ್ಲೇಟೋನ ಮಾತುಗಳಲ್ಲಿ ಹೇಳಬಹುದಾದರೆ "ಸರ್ವ ಕಾಲಗಳ ಸರ್ವ ಜೀವಗಳ ದಿಗ್ದರ್ಶಕರಾಗಬಹುದು". ಮಾನವನು ಶೇಖರಿಸಿಟ್ಟಿರುವ ಅಪಾರ ಅನುಭವ ಸಂಪತ್ತಿನಿಂದ ಜೀವಾಮೃತ ಸವಿದು, ನಮ್ಮದನ್ನೂ ಅದಕ್ಕೆ ಸೇರಿಸಿ ಎರಡನ್ನೂ ಭವ್ಯಭವಿಷ್ಯದ ನಿರ್ಮಾಣ ಕಾರ್ಯದಲ್ಲಿ ವಿನಿಯೋಗಿಸಬಹುದು.

ಆಧುನಿಕ ವೈಜ್ಞಾನಿಕ ಪ್ರಗತಿ ಮತ್ತು ಅಂತರ ರಾಷ್ಟ್ರೀಯತೆಯ ಮಾತು ಬೇಕಾದಷ್ಟು ಇದ್ದರೂ ಜನಾಂಗದ್ವೇಷ ಮುಂತಾದ ವಿಧ್ವಂಸಕ ಶಕ್ತಿಗಳು ಮಾನವನ ಇತಿಹಾಸದಲ್ಲಿ ಹಿಂದೆ ಎಂದೂ ಇಲ್ಲದಷ್ಟು ಈಗ ಕಾಣುವುದು ಆಶ್ಚರ್ಯಕರ ಮತ್ತು ಎಚ್ಚರದಿಂದ ಗಮನಿಸಬೇಕಾದ ವಿಷಯ. ಈ ಎಲ್ಲ ಪ್ರಗತಿಯಲ್ಲಿ ರಾಷ್ಟ್ರ ರಾಷ್ಟ್ರಗಳ ಮಧ್ಯೆ ಮತ್ತು ಮಾನವನ ಆತ್ಮಕ್ಕೆ ಸೌಹಾರ್ದ ಕೊಡಲಾಗದ ಯಾವುದೋ ಒಂದು ನ್ಯೂನತೆ ಇದೆ. ಪ್ರಾಯಶಃ ಮಾನವ ಕುಲದ ಅನುಭವ ಸಂಪತ್ತಾದ ಪ್ರಾಚೀನ ಪ್ರಾಜ್ಞತೆಯ ಕಡೆ ಹೆಚ್ಚಿನ ನಮ್ರತೆ ಮತ್ತು ಸಂಯೋಗ ದೃಷ್ಟಿಯಿಂದ ನೋಡಿದರೆ ನಾವು ಒಂದು ಹೊಸ ನೋಟ ಕಂಡು ಹೆಚ್ಚು ಸಾಮರಸ್ಯ ಪಡೆಯಬಹುದು. ಅದರಲ್ಲೂ ಹಿಂದಿನದನ್ನೆಲ್ಲ ಮರೆತ ಇಂದಿನ ಜ್ವರಪೀಡಿತ ಜೀವನದ ಜನರಿಗೆ ಅದು ಇನ್ನೂ ಅತ್ಯವಶ್ಯಕ. ಆದರೆ ಭಾರತದಂಥ ದೇಶಗಳಲ್ಲಿ ಬೇರೊಂದು ಬಗೆಯ ಪ್ರಾಮುಖ್ಯತೆ ಕೊಡಬೇಕಾಗಿದೆ. ಏಕೆಂದರೆ ನಾವು ಇಂದಿನದನ್ನು ಅಸಡ್ಡೆಮಾಡಿ ಎಲ್ಲಕ್ಕೂ ಹಿಂದಿನದನ್ನೆ ನೆಚ್ಚಿ ಕೂತಿದ್ದೇವೆ. ಸಂಕುಚಿತ ಮತದೃಷ್ಟಿಯನ್ನೂ, ನಿಸರ್ಗಾತೀತ ಕಲ್ಪನಾತ್ಮಕ ಊಹಾಪೋಹಗಳಲ್ಲಿ ಮೂಢ ನಂಬಿಕೆಯನ್ನೂ, ನಮ್ಮನ್ನೂ ಮತ್ತು ಪ್ರಪಂಚವನ್ನೂ ಅರ್ಥಮಾಡಿಕೊಳ್ಳಲು ಅಡ್ಡ ನಿಂತಿರುವ ಮತೀಯ ಕರ್ಮಾಚರಣೆ ಮತ್ತು ಗೂಢ ತಾತ್ವಿಕಭಾವ ಪರವಶತೆಗಳಲ್ಲಿ ನಮ್ಮ ಮನಸ್ಸನ್ನು ಓಡಿಸುವ ಅಭ್ಯಾಸವನ್ನೂ ತ್ಯಜಿಸಬೇಕು; ಇಂದಿನ ಯುಗವನ್ನು ಇಂದಿನ ಜೀವನವನ್ನು ಇಂದಿನ ಪ್ರಪಂಚವನ್ನು ಮತ್ತು ಅನಂತ ಮುಖಗಳಿಂದ ನಮ್ಮ ಸುತ್ತಲೂ ಹರಡಿರುವ ಈ ಪ್ರಕೃತಿಯ ಸಮಸ್ಯೆಗಳನ್ನು ಅರಿತುಕೊಳ್ಳಬೇಕು. ಹಿಂದೂಗಳಲ್ಲಿ ಕೆಲವರು ವೇದಕಾಲಕ್ಕೆ ಹೋಗೋಣ ಎನ್ನುವವರಿದ್ದಾರೆ; ಮುಸ್ಲಿಮರಲ್ಲಿ ಕೆಲವರು ಇಸ್ಲಾಂ ಧರ್ಮ' ಸಾಮ್ರಾಜ್ಯ ಸ್ಥಾಪಿಸಬೇಕೆನ್ನುವವರಿದ್ದಾರೆ. ಹುಚ್ಚು ಭ್ರಮೆಗಳು, ಕಾಲಗತಿಯನ್ನು ಹಿಂದಕ್ಕೆ ತಿರುಗಿಸಲು ಸಾಧ್ಯವಿಲ್ಲ; ಎಷ್ಟೇ ಅಪೇಕ್ಷಣೀಯವೆಂದರೂ ಅದು ಅಸಾಧ್ಯ. ಕಾಲಚಕ್ರ ತಿರುಗುವುದು ಒಂದೇ ಕಡೆಗೆ.

ಆದ್ದರಿಂದ ಭಾರತವು ತನ್ನ ಮತೀಯತೆ ಕಡಮೆಮಾಡಿ ವಿಜ್ಞಾನದ ಕಡೆ ತಿರುಗಬೇಕು. ತನ್ನ ಆತ್ಮವನ್ನು ಹಿಸುಕಿ, ಪ್ರಗತಿಗೆ ಅಡ್ಡ ಒಂದು ಸೆರೆಯಾಗಿರುವ, ವಿಚಾರಪರತೆ ಮತ್ತು ಸಮಾಜ ವ್ಯವಹಾರಗಳ ಮೇಲಿನ ಬಹಿಷ್ಕಾರ ಮನೋಬುದ್ಧಿ ಬಿಟ್ಟುಬಿಡಬೇಕು. ಕರ್ಮಾಚರಣೆಯ ಪಾವಿತ್ರ್ಯತೆಯು ಸಾಮಾಜಿಕ ವ್ಯವಹಾರಕ್ಕೆ ಅಡ್ಡಗೋಡೆ ಕಟ್ಟಿದೆ; ಸಾಮಾಜಿಕ ಕಾರ್ಯಕ್ಷೇತ್ರ ಸಂಕುಚಿತಗೊಳಿಸಿದೆ. ಸಂಪ್ರದಾಯ ಶೀಲ ಹಿಂದೂವಿನ ಇಂದಿನ ಧರ್ಮವೆಲ್ಲ ಏನು ಊಟ ಮಾಡಲಿ, ಏನು ಬಿಡಲಿ, ಯಾರೊಂದಿಗೆ ಊಟ ಮಾಡಲಿ ಯಾರಿಂದ ದೂರವಿರಲಿ ಎಂಬುದರಲ್ಲೇ ಆಗಿದೆ; ತಾತ್ವಿಕ ಮೌಲ್ಯಗಳು ಮಾಯವಾಗಿವೆ. ಅಡಿಗೆ ಮನೆಯ ನಿಯಮ ನಿಬಂಧನೆಗಳೇ ಆತನ ಸಾಮಾಜಿಕ ಜೀವನದಮೇಲೆ ಅಧಿಕಾರ ನಡೆಸುತ್ತಿವೆ. ಮುಸ್ಲಿಮರಲ್ಲಿ ಈ ಪ್ರತಿಬಂಧಕಗಳು ಇಲ್ಲ ನಿಜ; ಆದರೆ ತನ್ನ ಧರ್ಮ ಬೋಧಿಸಿದ ಸಹೋದರ ಭಾವ ಮರೆತು ತನ್ನ ಸಂಕುಚಿತ ನೀತಿ ಮತ್ತು ಕರ್ಮಾಚರಣೆ ಚಾಚೂತಪ್ಪದೆ ನಿತ್ಯವಿಧಿಯಾಗಿ ಆಚರಿಸುತ್ತಾನೆ. ಇಂದಿನ ಸಾಮಾನ್ಯ ಹಿಂದೂ ಅನೇಕ ರೀತಿ ಜೀವನಶ್ರೀಯನ್ನು ವೃದ್ಧಿಗೊಳಿಸುವ ಹಿನ್ನೆಲೆ ಮತ್ತು ಭಾವನಾ ಸ್ವಾತಂತ್ರ್ಯ ಕಳೆದುಕೊಂಡಿರುವುದರಿಂದ ಹಿಂದೂ ಧರ್ಮದ ಪ್ರತಿನಿಧಿ ಎಂದು ಹೇಳಿಕೊಳ್ಳಲು ಯೋಗ್ಯತೆ ಬಹುಮಟ್ಟಿಗೆ ಕಳೆದುಕೊಂಡಿದ್ದರೂ ಮುಸ್ಲಿಮನ ಜೀವನ ದೃಷ್ಟಿ ಈ ಹಿಂದೂ ದೃಷ್ಟಿಗಿಂತ ಹೆಚ್ಚು ಸಂಕುಚಿತ ಮತ್ತು ನಿಷ್ಪ್ರಯೋಜಕ.

ಹಿಂದೂಗಳಲ್ಲಿ ಈ ಪ್ರತ್ಯೇಕತೆಯ ಸಂಕೇತ ಮತ್ತು ಮೂರ್ತಿ ಸ್ವರೂಪವೇ ಜಾತಿ. ಜಾತಿಯ ಮೂಲ ಭಾವನೆ ಮಾತ್ರ ಉಳಿದು, ಈಚೆಗೆ ಬೆಳೆದು ಹಬ್ಬಿ ಹೆಣೆದಿರುವ ಜಟಿಲತೆಯ ಕಾಠಿಣ್ಯ ಹೋದರೆ ಸಾಕೆಂದು ಹೇಳುತ್ತಾರೆ. ಹುಟ್ಟಿಗೆ ಪ್ರತಿಯಾಗಿ ಯೋಗ್ಯತೆ ಇದ್ದರೆ ಸಾಕೆನ್ನುತ್ತಾರೆ. ಈ ಪ್ರವೇಶವೇ

ಅಸಂಬದ್ಧ, ಅದರಿಂದ ಮುಖ್ಯ ವಿಷಯವೇ ಮಸಕಾಗುತ್ತದೆ. ಐತಿಹಾಸಿಕ ದೃಷ್ಟಿಯಿಂದ ಜಾತಿಯ ಬೆಳವಣಿಗೆಯ ಅಭ್ಯಾಸಕ್ಕೆ ಸ್ವಲ್ಪ ಬೆಲೆ ಇದೆ. ಆದರೆ ಜಾತಿ ಪದ್ಧತಿ ಹುಟ್ಟಿದ ಯುಗಕ್ಕೆ ಮತ್ತೊಮ್ಮೆ ಹಿಂದಿರುಗಲು ಸಾಧ್ಯವಿಲ್ಲ. ಇಂದಿನ ಸಮಾಜ ರಚನೆಯಲ್ಲಿ ಅದಕ್ಕೆ ಸ್ಥಾನವಿಲ್ಲ. ಯೋಗ್ಯತೆಯೊಂದನ್ನೇ ಒರೆಗಲ್ಲಾಗಿ ಇಟ್ಟುಕೊಂಡು, ಸರ್ವರಿಗೂ ಅವಕಾಶಕೊಟ್ಟರೆ ಇಂದು ಜಾತಿಗಿರುವ ಪ್ರಾಮುಖ್ಯತೆ ಎಷ್ಟೋ ಕಡಮೆಯಾಗುತ್ತದೆ, ತಾನೇ ತಾನಾಗಿ ಹೋಗುತ್ತದೆ. ಜಾತಿಯ ಹೆಸರಿನಲ್ಲಿ ಹಿಂದಿನ ಕಾಲದಲ್ಲಿ ಕೆಲವು ಪಂಗಡಗಳನ್ನು ತುಳಿಯಲಾಯಿತು ; ತಾತ್ವಿಕ ಮತ್ತು ಪಾಂಡಿತ್ಯ ಜ್ಞಾನವು ಉದ್ಯೋಗ ಧರ್ಮದಿಂದ ದೂರವಾಯಿತು ; ದರ್ಶನ ಶಾಸ್ತ್ರಕ್ಕೂ ಪ್ರಸಕ್ತ ಜೀವನ ಮತ್ತು ಅದರ ಸಮಸ್ಯೆಗಳಿಗೂ ಸಂಬಂಧ ಕಡಿದು ಹೋಯಿತು. ಅದೊಂದು ಸಂಪ್ರದಾಯ ಶರಣ ತಳಹದಿಯನ್ನೇ ಅವಲಂಬಿಸಿದ ಕುಲೀನದ ಪಂಥವಾಯಿತು. ಆಧುನಿಕ ಸ್ಥಿತಿಗತಿಗಳಿಗೆ, ಪ್ರಜಾಪ್ರಭುತ್ವ ದೃಷ್ಟಿಗೆ ಇದು ಸಂಪೂರ್ಣ ವಿರುದ್ಧವಿರುವುದರಿಂದ ಈ ದೃಷ್ಟಿ ಇಂದು ಪೂರ್ಣ ಹೋಗಬೇಕು. ಸಮಾಜದ ಪಂಗಡಗಳ ಔದ್ಯೋಗಿಕ ರಚನೆ ಉಳಿಯಬಹುದು. ಆದರೆ ಆಧುನಿಕ ಕೈಗಾರಿಕೋದ್ಯಮದ ವೈಶಿಷ್ಟ್ಯದಿಂದ ಅನೇಕ ಹೊಸ ಉದ್ಯೋಗಗಳಿಗೆ ಆಸ್ಪದ ದೊರಕಿ ಅನೇಕ ಹಳೆಯ ಉದ್ಯಮಗಳು ನಾಶವಾಗಿ ವಿಶೇಷ ಪರಿವರ್ತನೆ ಆಗಬಹುದು. ಈಗ ಎಲ್ಲಿ ನೋಡಿದರೂ ಉದ್ಯೋಗ ಧರ್ಮದಂತೆ ಸಮಾಜ ರಚಿಸುವ ಪ್ರಯತ್ನ ನಡೆಯುತ್ತಿದೆ. ಆಜನ್ಮಸಿದ್ಧ ಹಕ್ಕುಗಳ ಸ್ಥಾನದಲ್ಲಿ ಉದ್ಯೋಗ ಧರ್ಮದ ಹಕ್ಕುಗಳಿಗೆ ಪ್ರಾಧಾನ್ಯತೆ ದೊರೆಯುತ್ತಿದೆ. ಪ್ರಾಚೀನ ಭಾರತೀಯ ಆದರ್ಶದ ಧ್ವನಿಯೂ ಇದೇ ಇತ್ತು.

ಯುಗಧರ್ಮವು ಯೋಗ್ಯತೆಗೆ ಪ್ರಾಧಾನ್ಯತೆ ಕೊಟ್ಟಿದ್ದರೂ ಆಚರಣೆಯಲ್ಲಿ ಅದಕ್ಕೆ ಮನ್ನಣೆ ಇಲ್ಲ. ಒಬ್ಬ ಮನುಷ್ಯ ಇನ್ನೊಬ್ಬನ ಗುಲಾಮನಾಗಿರಬಾರದೆಂಬ ಸಂಕುಚಿತ ಅರ್ಥದಲ್ಲಿ ಗುಲಾಮಗಿರಿ ನಾಶ ಮಾಡಿದ್ದೇವೆ. ಆದರೆ ಹಳೆಯ ಗುಲಾಮಗಿರಿಗಿಂತ ಕಠಿಣವಾದ ಇನ್ನೊಂದು ಬಗೆಯ ಗುಲಾಮಗಿರಿ ಪ್ರಪಂಚದಲ್ಲಿ ಎಲ್ಲೆಡೆಯಲ್ಲೂ ತಾಂಡವವಾಡುತ್ತಿದೆ. ವ್ಯಕ್ತಿ ಸ್ವಾತಂತ್ರ್ಯದ ಹೆಸರಿನಲ್ಲಿ ಆರ್ಥಿಕ ಮತ್ತು ರಾಜಕೀಯ ಪದ್ಧತಿಗಳು ಮಾನವ ಜನಾಂಗಗಳಮೇಲೆ ಅಧಿಕಾರ ಮಾಡುತ್ತ ಅವರನ್ನು ನಿರ್ಜೀವ ವಸ್ತುಗಳಂತೆ ಕಾಣುತ್ತಿವೆ; ಒಬ್ಬ ವ್ಯಕ್ತಿಯು ಇನ್ನೊಬ್ಬವ್ಯಕ್ತಿಯ ಆಸ್ತಿಯಾಗಲು ಅವಕಾಶವಿಲ್ಲದಿದ್ದರೂ ಒಂದು ದೇಶ ಅಥವ ಜನಾಂಗವೇ ಇನ್ನೊಂದರ ಆಸ್ತಿಯಾಗಬಹುದು. ಈ ರೀತಿ ಸಾಮೂಹಿಕ ಗುಲಾಮಗಿರಿಗೆ ಯಾವ ಆತಂಕವೂ ಇಲ್ಲ. ನಮ್ಮ ಕಾಲದ ಇನ್ನೊಂದು ವಿಶೇಷಲಕ್ಷಣವೆಂದರೆ ಜನಾಂಗ ದ್ವೇಷ. ಭರ್ತೃ ರಾಷ್ಟ್ರಗಳು ಮಾತ್ರವಲ್ಲದೆ ಭರ್ತೃ ಜನಾಂಗಗಳೂ ಇವೆ.

ಆದರೂ ಯುಗಧರ್ಮ ಗೆಲ್ಲಲೇಬೇಕು. ಭಾರತದಲ್ಲಿ ಸಮಾನತೆಯೇ ನಮ್ಮ ಗುರಿಯಾಗಬೇಕು. ಅಂದರೆ ಪ್ರತಿಯೊಬ್ಬ ವ್ಯಕ್ತಿಯೂ ದೈಹಿಕ ಬೌದ್ಧಿಕ ಮತ್ತು ಆಧ್ಯಾತ್ಮಿಕ ವಿಷಯಗಳಲ್ಲಿ ಸಮವೆಂದಾಗಲಿ ಅಥವ ಸಮಗೊಳಿಸಲು ಸಾಧ್ಯವೆಂದಾಗಲಿ ಅಲ್ಲ; ಆದರೆ ಎಲ್ಲರಿಗೂ ಸಮಾನ ಅವಕಾಶವಿರಬೇಕೆಂದು. ಯಾವ ವ್ಯಕ್ತಿ ಅಥವ ಪಂಗಡಕ್ಕೂ ರಾಜಕೀಯ, ಆರ್ಥಿಕ ಅಥವ ಸಾಮಾಜಿಕ ಪ್ರತಿಬಂಧವಿರಕೂಡದು. ಅಂದರೆ ಮಾನವೀಯತೆಯಲ್ಲಿ ವಿಶ್ವಾಸವಿರಬೇಕು ; ಅವಕಾಶಕೊಟ್ಟರೆ ಮುಂದುವರಿಯದ ಅಥವ ತನಗೆ ಕಂಡ ಮಾರ್ಗದಲ್ಲಿ ವಿಕಾಸಗೊಳ್ಳದ ಯಾವ ಪಂಗಡ ಅಥವ ಜನಾಂಗವೂ ಇಲ್ಲವೆಂಬ ನಂಬಿಕೆ ಇರಬೇಕು. ಯಾವದೇ ಗುಂಪಿನ ಹಿನ್ನಡೆ ಅಥವ ಅಧೋಗತಿ ಅದರ ಅಂತರ್ಗತ ಅಶಕ್ತತೆಯಿಂದಲ್ಲ; ಆದರೆ ಮುಖ್ಯವಾಗಿ ಅವಕಾಶಗಳ ಅಭಾವದಿಂದ ಮತ್ತು ಇತರ ಪಂಗಡಗಳ ದುರುಪಯೋಗದಿಂದ ಎಂಬುದರ ಅರಿವು. ಆಧುನಿಕ ಪ್ರಪಂಚದಲ್ಲಿ ನಿಜವಾದ ಪ್ರಗತಿ ಮತ್ತು ಮುನ್ನಡೆ ಎಂದರೆ—ರಾಷ್ಟ್ರೀಯವಿರಲಿ, ಅಂತರ ರಾಷ್ಟ್ರೀಯವಿರಲಿ—ವಿಶೇಷತಃ ಅದೊಂದು ಸಾಮೂಹಿಕ ವಿಷಯ, ಯಾವ ಒಂದು ಗುಂಪು ಹಿಂದೆ ಬಿದ್ದರೂ ಇತರರನ್ನೂ ಅದು ಹಿಂದಕ್ಕೆಳೆಯುತ್ತದೆ, ಎಂಬ ಜ್ಞಾನ. ಆದ್ದರಿಂದ ಎಲ್ಲರಿಗೂ ಸಮಾನ ಅವಕಾಶ ಮಾತ್ರ ಸಾಲದು, ವಿದ್ಯೆಯಲ್ಲಿ ಆರ್ಥಿಕ ಉನ್ನತಿಯಲ್ಲಿ ಸಂಸ್ಕೃತಿ ಪ್ರಗತಿಯಲ್ಲಿ ಹಿಂದುಳಿದವರು ತಮಗಿಂತ ಮುಂದಿರುವವರ ಜೊತೆಗೆ ಬಂದು ಸೇರಿಕೊಳ್ಳಲು ಅನುಕೂಲಿಸುವಂತೆ ಅವರಿಗೆ ವಿಶೇಷ ಅವಕಾಶ ಕಲ್ಪಿಸ ಕಲ್ಪಿಸಬೇಕು. ಭಾರತದಲ್ಲಿ ಎಲ್ಲರಿಗೂ ಈ ರೀತಿ ಅವಕಾಶದ ಮಹಾದ್ವಾರ ತೆರೆಯಲು ಪ್ರಯತ್ನಮಾಡಿದರೆ

ಪ್ರಚಂಡಶಕ್ತಿ ಸಾಮರ್ಥ್ಯಗಳು ಹೊರಹೊಮ್ಮಿ ಬಹುಬೇಗ ದೇಶದ ಸ್ವರೂಪವೇ ಬದಲಾಯಿಸುತ್ತದೆ.

ಯುಗಧರ್ಮ ಸಮಾನತೆ ಕೇಳಿದರೆ ಅದಕ್ಕೆ ಅನುಗುಣವಾದ ಮತ್ತು ಪೂರಕವಾದ ಆರ್ಥಿಕ ರಚನೆಯನ್ನೂ ಕೇಳುತ್ತದೆ. ಅದಕ್ಕೂ ಮತ್ತು ಭಾರತದ ಇಂದಿನ ಸಾಮ್ರಾಜ್ಯವಾದಿ ಆಡಳಿತ ಪದ್ಧತಿಗೂ ಅಜಗಜಾಂತರ. ಅಸಮಾನತೆಯೇ ಸರ್ವಾಧಿಕಾರದ ಮೂಲ, ಜೀವನದ ಎಲ್ಲ ಕಾರ್ಯರಂಗಗಳಲ್ಲಿ ಅದನ್ನು ಶಾಶ್ವತಗೊಳಿಸುತ್ತದೆ; ಬುದ್ಧಿಶಕ್ತಿಯನ್ನೂ ಕಾರ್ಯಶಕ್ತಿಯನ್ನೂ ಹಿಸುಕುತ್ತದೆ; ಜವಾಬ್ದಾರಿ ಮನೋಭಾವನೆಗೆ ಅಡ್ಡಿ ಮಾಡುತ್ತದೆ. ಅದರ ದೌಷ್ಟ್ಯಕ್ಕೆ ಸಿಕ್ಕಿದವರಲ್ಲಿ ಆತ್ಮಗೌರವವೂ, ಆತ್ಮಾವಲಂಬನ ಶಕ್ತಿ ನಾಶವಾಗುತ್ತವೆ. ಭಾರತದ ಸಮಸ್ಯೆಗಳು ಬಹು ಕಠಿಣ ಕಂಡರೂ ಹಿಂದಿನ ರಾಜಕೀಯ ಮತ್ತು ಆರ್ಥಿಕ ರಚನೆ ಉಳಿಸಿಕೊಂಡು ಮುಂದುವರಿಯಲು ಪ್ರಯತ್ನ ಮಾಡುತ್ತಿರುವುದೇ ಅವೆಲ್ಲಕ್ಕೂ ಮುಖ್ಯ ಕಾರಣ. ಈ ರಚನೆಯನ್ನೂ, ಇರುವ ಹಕ್ಕುದಾರಿಗಳನ್ನೂ ಕಾಪಾಡಿಕೊಂಡು ಬರುವುದಾದರೆ ಮಾತ್ರ ರಾಜಕೀಯ ಪ್ರಗತಿ ಎಂದು ಹೇಳಿದಾರೆ. ಅದು ಸಾಧ್ಯವೇ ಇಲ್ಲ.

ರಾಜಕೀಯ ಪರಿವರ್ತನೆ ಆಗಲೇಬೇಕು, ಆದರೆ ಆರ್ಥಿಕ ಪರಿವರ್ತನೆಯೂ ಅಷ್ಟೇ ಅವಶ್ಯವಿದೆ. ಪ್ರಜಾಸತ್ತಾತ್ಮಕ ದೃಷ್ಟಿಯಿಂದ ಯೋಜಿಸಿದ ಸಾಮೂಹಿಕ ಪ್ರಯತ್ನದ ಕಡೆ ಪರಿವರ್ತನೆಯದಾರಿ ಇರಬೇಕು. "ನಾವು ಇಂದು ನಿರ್ಧರಿಸಬೇಕಾದ್ದು ಪೈಪೋಟಿಯೇ ಅಥವ ಏಕಸ್ವಾಮ್ಯವೇ ಎಂದಲ್ಲ; ಬೇಜವಾಬ್ದಾರಿ ವೈಯಕ್ತಿಕ ಏಕಸ್ವಾಮ್ಯವೇ ಅಥವಾ ಜವಾಬ್ದಾರಿಯುತ ಸಾರ್ವತ್ರಿಕ ಏಕಸ್ವಾಮ್ಯವೇ ಎಂದು" ಎಂಬುದಾಗಿ ಆರ್. ಎಚ್. ರಾನೆ ಹೇಳುತ್ತಾನೆ. ಬಂಡವಾಳಶಾಹಿ ರಾಜ್ಯಗಳಲ್ಲಿ ಸಹ ಸಾರ್ವಜನಿಕ ಏಕಸ್ವಾಮ್ಯಗಳು ಬೆಳೆಯುತ್ತವೆ ಮತ್ತು ಮುಂದೆ ಇನ್ನೂ ಹೆಚ್ಚುತ್ತವೆ. ವೈಯಕ್ತಿಕ ಏಕಸ್ವಾಮ್ಯಗಳು ನಿರ್ನಾಮವಾಗುವವರೆಗೂ ವೈಯಕ್ತಿಕ ಏಕಸ್ವಾಮ್ಯಗಳಿಗೂ ಸಾರ್ವಜನಿಕ ಏಕಸ್ವಾಮ್ಯಗಳಿಗೂ ಘರ್ಷಣೆ ತಪ್ಪಿದ್ದಲ್ಲ. ಪ್ರಜಾಸತ್ತಾತ್ಮಕ ಸಮಷ್ಟಿ ಸ್ವಾಮ್ಯವೆಂದರೆ ವೈಯಕ್ತಿಕ ಆಸ್ತಿಯೇ ಇರಬಾರದೆಂದಲ್ಲ, ಆದರೆ ದೊಡ್ಡ ದೊಡ್ಡ ಮೂಲ ಕೈಗಾರಿಕೆಗಳೆಲ್ಲ ಸಾರ್ವಜನಿಕರ ಸ್ವತ್ತಾಗಿರಬೇಕೆಂದು ಅರ್ಥ. ಭೂ ಆಸ್ತಿಯು ಸಹಕಾರ ತತ್ತ್ವದಿಂದಲೋ ಸಾಮೂಹಿಕವಾಗಿಯೋ ರೂಢಿಯಾಗಬೇಕು. ಭಾರತದಲ್ಲಿ ದೊಡ್ಡ ದೊಡ್ಡ ಕೈಗಾರಿಕೆಗಳ ಜೊತೆಗೆ ಸಹಕಾರ ತತ್ತ್ವದ ಮೇಲೆ ನಡೆಯುವ ಸಣ್ಣ ಗ್ರಾಮ ಕೈಗಾರಿಕೆಗಳು ಅತ್ಯವಶ್ಯಕ. ಆ ಬಗೆಯ ಪ್ರಜಾಸತ್ತಾತ್ಮಕ ಸಮಷ್ಟಿವಾದ ಪದ್ಧತಿಯೂ ಕಾರ್ಯಗತವಾಗಬೇಕಾದರೆ ಜನರ ಅವಶ್ಯಕತೆಗಳು ವ್ಯತ್ಯಾಸಗೊಂಡಂತೆ ಬಹು ಎಚ್ಚರಿಕೆಯಿಂದ ಸದಾ ಯೋಚಿಸುತ್ತಲೇ ಇರಬೇಕಾಗುತ್ತದೆ. ಯಾವುದಾದರೂ ಒಂದು ರೀತಿಯಲ್ಲಿ ರಾಷ್ಟ್ರದ ಎಲ್ಲ ಸಶ್ರಮ ಶಕ್ತಿಯನ್ನು ಉಪಯೋಗಿಸಿಕೊಂಡು, ನಿರುದ್ಯೋಗ ನಾಶಮಾಡಿ ಸರ್ವತೋಮುಖ ರಾಷ್ಟ್ರದ ನಿರ್ಮಾಣ ಶಕ್ತಿಯನ್ನು ವೃದ್ಧಿಗೊಳಿಸುವುದೇ ಗುರಿಯಾಗಬೇಕು. ಸಾಧ್ಯವಾದ ಮಟ್ಟಿಗೂ ಪ್ರತಿಯೊಬ್ಬ ವ್ಯಕಿಗೂ ತನಗೆ ಇಷ್ಟವಿರುವ ಉದ್ಯೋಗ ಅವಲಂಬಿಸಲು ಸ್ವಾತಂತ್ರ್ಯವಿರಬೇಕು. ಇದರಿಂದ ಎಲ್ಲರ ವರಮಾನವೂ ಒಂದೇ ಆಗುವುದಿಲ್ಲ; ಆದರೆ ಹೆಚ್ಚು ನ್ಯಾಯಸಮ್ಮತ ಲಾಭ ದೊರೆಯುತ್ತವೆ; ಕ್ರಮೇಣ ಸಮಾನ ಲಾಭವನ್ನೂ ಪಡೆಯಬಹುದು. ಏನೇ ಆಗಲಿ ಈಗಿರುವ ಅಪಾರ ಅಂತರ ನಾಶವಾಗುತ್ತದೆ; ವರಮಾನದ ಆಧಾರದ ಮೇಲೆ ನಿಂತಿರುವ ಪಂಗಡ ಭೇದಗಳು ಮಾಯವಾಗುತ್ತವೆ.

ಈ ಪರಿವರ್ತನೆ ಸಾಧಿಸುವುದೆಂದರೆ ಲಾಭದ ಗುರಿಯೇ ಮುಖ್ಯ ಆಧಾರವಾಗಿರುವ ಈಗಿನ ಲಾಭಬಡಕ ಸಮಾಜ ಬುಡಮೇಲಾಗಬೇಕು. ಸ್ವಲ್ಪ ಮಟ್ಟಿಗೆ ಲಾಭದ ದೃಷ್ಟಿ ಇದ್ದೇ ಇರಬೇಕು. ಆದರೆ ಅದೇ ಮುಖ್ಯಗುರಿಯಾಗುವುದಿಲ್ಲ ಮತ್ತು ಲಾಭಸಂಪಾದನೆಗೆ ಈಗ ಇರುವಷ್ಟು ಅವಕಾಶವೂ ಇರುವುದಿಲ್ಲ. ಸಾಮಾನ್ಯ ಭಾರತೀಯನಿಗೆ ಲಾಭದಾಸೆ ಇಲ್ಲವೆಂದು ಹೇಳುವುದು ಶುದ್ಧತಪ್ಪು, ಆದರೆ ಪಾಶ್ಚಾತ್ಯರಷ್ಟು ಇಲ್ಲವೆಂದು ಮಾತ್ರ ಹೇಳಬಹುದು. ಹಣವಂತನನ್ನು ಕಂಡು ಕರುಬಬಹುದು, ಆದರೆ ವಿಶೇಷಗೌರವ, ಪ್ರಶಂಸೆ ಯಾರೂ ತೋರುವುದಿಲ್ಲ. ಗುಣ ಅಥವ ಬುದ್ಧಿ ಇರುವ ಸ್ತ್ರೀಪುರುಷರಿಗೆ ಮಾತ್ರ ಗೌರವವೂ, ಪ್ರಶಂಸೆಯೂ ದೊರೆತಿದೆ. ಅದರಲ್ಲೂ ಮುಖ್ಯವಾಗಿ ಸಾರ್ವಜನಿಕ ಹಿತಕ್ಕಾಗಿ ತಮ್ಮ ಸರ್ವಸ್ವತ್ಯಾಗಮಾಡುವವರಿಗೆ ಮತ್ತು ಆತ್ಮತ್ಯಾಗಿಗಳಿಗೆ ವಿಶೇಷ ಗೌರವ ದೊರೆತಿದೆ. ಸಾಮಾನ್ಯ ಭಾರತೀಯ ದೃಷ್ಟಿಯಲ್ಲಿ ಸಹ ಲಾಭಬಡಕರಿಗೆ ಯಾವ ಮನ್ನಣೆಯೂ ದೊರೆತಿಲ್ಲ.

ಸಮಷ್ಟಿ ಸ್ವಾಮ್ಯವೆಂದರೆ ಸಹಕಾರ ಪ್ರಯತ್ನದಿಂದ ಸಾಮೂಹಿಕಕಾರ್ಯ ನಡೆಸಬೇಕಾಗುತ್ತದೆ. ಇದು ಸಹ ಸಮಷ್ಟಿಭಾವನೆಯ ಆಧಾರದಮೇಲೆ ರಚಿತವಾದ ಪ್ರಾಚೀನ ಭಾರತೀಯ ಸಮಾಜಕಲ್ಪನೆಗೆ ಸರಿಹೋಗುತ್ತದೆ. ಬ್ರಿಟಿಷ್ ಆಡಳಿತದಲ್ಲಿ ಈ ಸಮಷ್ಟಿಪದ್ಧತಿ ನಾಶವಾಗಿ ಅದರಲ್ಲೂ ಪ್ರಜಾಸತ್ತಾತ್ಮಕ ಗ್ರಾಮಾಡಳಿತ ವ್ಯವಸ್ಥೆ ಕುಸಿದುಬಿದ್ದು ಭಾರತದ ಜನತೆಗೆ ಆರ್ಥಿಕ ಪೆಟ್ಟಿಗಿಂತ ಹೆಚ್ಚಾಗಿ ಮಾನಸಿಕ ಖೇದದಿಂದ ಬಲವಾದ ಗಾಯವಾಗಿದೆ. ಅದರ ಸ್ಥಾನದಲ್ಲಿ ಬೇರೆಯಾವ ವ್ಯವಸ್ಥೆಯೂ ಬರಲಿಲ್ಲ; ಭಾರತೀಯರ ಸ್ವತಂತ್ರಭಾವನೆ ನಾಶವಾಯಿತು, ಅವರ ಹೊಣೆಗಾರಿಕೆ ದೃಷ್ಟಿ ಹಾಳಾಯಿತು. ಸರ್ವರ ಹಿತಕ್ಕಾಗಿ ಒಟ್ಟಿಗೆ ಸಹಕರಿಸಿ ಕೆಲಸಮಾಡುವಶಕ್ತಿ ಕುಂದಿತು. ಸಜೀವ ಸತ್ವಪೂರ್ಣ ಗ್ರಾಮಜೀವನ ಕ್ರಮೇಣ ಮಣ್ಣುಗುಡಿಸಲುಗಳ, ವಿಲಕ್ಷಣವ್ಯಕ್ತಿಗಳ ಪಾಳುಕೊಂಪೆಯಾಯಿತು. ಆದರೆ ಯಾವುದೋ ಒಂದು ಅವ್ಯಕ್ತತಂತು ಆ ಗ್ರಾಮಜೀವನವನ್ನು ಪೂರ್ಣ ಛಿದ್ರವಾಗದಂತೆ ಇನ್ನೂ ಬಂಧಿಸಿದೆ. ಹಳೆಯಕನಸುಗಳು ಅಳಿದಿಲ್ಲ. ಈ ಅನಾದಿಕಾಲದ ಸತ್ಸಂಪ್ರದಾಯಗಳ ಸದುಪಯೋಗದಿಂದ ಭೂವ್ಯವಸಾಯದಲ್ಲಿ, ಸಣ್ಣಗ್ರಾಮ ಕೈಗಾರಿಕೆಗಳ ಸ್ಥಾಪನೆಯಲ್ಲಿ ಸಾಮೂಹಿಕ ಸರಕಾರ ಉದ್ಯಮಗಳ ಉಪಕ್ರಮದಲ್ಲಿ ಸುಲಭವಾಗಿ ಮುಂದುವರಿಯಬಹುದು. ಸಾಮೂಹಿಕ ಅಥವ ಸಹಕಾರ ವ್ಯವಸಾಯ ಕೇಂದ್ರಸ್ಥಾಪನೆ ಸಾಧ್ಯವಿದ್ದರೂ ಗ್ರಾಮಜೀವನ ಇನ್ನುಮುಂದೆ ಒಂದು ಸ್ವಯಂಪೂರ್ಣ ಆರ್ಥಿಕ ಏಕಮಾನವಾಗಲು ಮಾತ್ರ ಸಾಧ್ಯವಿಲ್ಲ; ಆದರೆ ಸರ್ಕಾರದ ಆಡಳಿತದಲ್ಲಿ ಚುನಾವಣೆಗಳಲ್ಲಿ ಒಂದು ಕೇಂದ್ರವಾಗಿ ದೊಡ್ಡ ರಾಜಕೀಯ ರಚನೆಯ ಒಂದು ಸ್ವಯಮಾಡಳಿತವುಳ್ಳ ಮುಖ್ಯ ಅಂಗವಾಗಿ ಕೆಲಸಮಾಡುತ್ತ ತಾನೇ ತನ್ನ ಮುಖ್ಯ ಅವಶ್ಯಕತೆ ಪೂರೈಸುತ್ತ ವಿಕಾಸಗೊಳ್ಳಲು ಅವಕಾಶವಿದೆ. ಗ್ರಾಮವನ್ನೇ ಒಂದು ಚುನಾವಣಾ ವ್ಯಕ್ತಿ ಎಂದು ಭಾವಿಸಿದರೆ ಪ್ರತ್ಯಕ್ಷ ಮತ ಕೊಡುವ ಮತದಾರರ ಸಂಖ್ಯೆ ಕಡಮೆಯಾಗಿ ಪ್ರಾಂತ್ಯ ಮತ್ತು ಅಖಿಲ ಭಾರತದ ಚುನಾವಣೆಗಳು ಸುಲಭವಾಗಬಹುದು. ಗ್ರಾಮದ ವಯಸ್ಕ ಸ್ತ್ರೀ ಪುರುಷರಿಂದ ಚುನಾಯಿತರಾದ ಗ್ರಾಮ ಪಂಚಾಯಿತಿಯ ಸದಸ್ಯರು ರಾಷ್ಟ್ರದ ಮಹಾಚುನಾವಣೆಗಳಿಗೆ ಮತದಾರರಾಗಬಹುದು. ಅಪ್ರತ್ಯಕ್ಷ ಚುನಾವಣೆಗಳಲ್ಲಿ ಕೆಲವು ತೊಂದರೆಗಳಿರಬಹುದು. ಆದರೆ ಭಾರತೀಯ ಇತಿಹಾಸ ಪರಂಪರೆಯ ಹಿನ್ನೆಲೆಯ ದೃಷ್ಟಿಯಿಂದ ಗ್ರಾಮವು ಒಂದು ಏಕಮಾನವಾಗುವುದು ಒಳ್ಳೆಯದೆಂದು ನನ್ನ ಭಾವನೆ. ಇದರಿಂದ ಹೆಚ್ಚು ಜವಾಬ್ದಾರಿಯ ನಿಜವಾದ ಪ್ರಾತಿನಿಧ್ಯ ದೊರೆಯುತ್ತದೆ.

ಈ ಕ್ಷೇತ್ರ ಪ್ರಾತಿನಿಧ್ಯದ ಜೊತೆಗೆ ವ್ಯವಸಾಯ ಮತ್ತು ಕೈಗಾರಿಕೆಯಲ್ಲಿ ಸಮಷ್ಟಿ ಸಂಘಗಳಿಗೆ ಮತ್ತು ಸಹಕಾರ ಸಂಸ್ಥೆಗಳಿಗೆ ನೇರ ಪ್ರಾತಿನಿಧ್ಯವಿರಬೇಕು. ರಾಷ್ಟ್ರದ ಪ್ರಜಾಸತ್ತಾತ್ಮಕ ರಚನೆಯಲ್ಲಿ ಈರೀತಿ ಔದ್ಯೋಗಿಕ ಮತ್ತು ಕ್ಷೇತ್ರ ಪ್ರತಿನಿಧಿಗಳಿರುತ್ತಾರೆ. ಅಲ್ಲದೆ ಅದು ಸ್ಥಳೀಯ ಸ್ವಾತಂತ್ರ್ಯದ ಆಧಾರದ ಮೇಲೆ ರಚಿತವಾಗುತ್ತದೆ. ಈ ಬಗೆಯ ಒಂದು ವ್ಯವಸ್ಥೆ ಭಾರತದ ಇತಿಹಾಸ ಮತ್ತು ಇಂದಿನ ಅವಶ್ಯಕತೆ ಎರಡಕ್ಕೂ ಸಮಂಜಸವಾಗುತ್ತದೆ. ಬ್ರಿಟಿಷರು ಬಲಾತ್ಕಾರದಿಂದ ಹೇರಿದ ಕೆಲವು ವಿಷಯ ಬಿಟ್ಟು ಏನೂ ನಾಶವಾಗುವುದಿಲ್ಲ. ಈಗಲೂ ಮಮತೆಯಿಂದ ಸ್ಮರಿಸಿ ಜನರು ಹೆಮ್ಮೆಪಡುವ ಹಿಂದಿನ ವ್ಯವಸ್ಥೆಯೇ ಪುನರುತ್ಥಾನವಾಗಿದೆ ಎಂದು ಜನತೆ ಹರ್ಷಿಸುತ್ತದೆ.

ಆ ಬಗೆಯ ಒಂದು ಪ್ರಗತಿ ಭಾರತದಲ್ಲಿ ಆದರೆ ಅದು ಅಂತರ ರಾಷ್ಟ್ರೀಯ ರಾಜಕೀಯ ಮತ್ತು ಆರ್ಥಿಕ ಭಾವನೆಗಳಿಗೂ ಸರಿಹೊಂದುತ್ತದೆ. ಇತರ ರಾಷ್ಟ್ರಗಳೊಂದಿಗೆ ಯಾವ ಘರ್ಷಣೆಗೂ ಅವಕಾಶವಿರುವುದಿಲ್ಲ ಐಕ್ಯದ ಮತ್ತು ಪ್ರಪಂಚದ ಶಾಂತಿಸ್ಥಾಪನೆಗೆ ಒಂದು ಮಹಾಶಕ್ತಿಯಾಗುತ್ತದೆ. ನಮ್ಮ ಮನೋವಿಕಾರಗಳಿಂದ ನಾವು ಮೋಸಹೋದರೂ, ನಮ್ಮ ಮನಸ್ಸಿನ ನಿಲುವಿಗೆ ಅದು ಎಟುಕದಿದ್ದರೂ, ನಾವು ಮಾತ್ರ ನಿಸ್ಸಂದೇಹವಾಗಿ ಯಾವ ಒಂದು ಪ್ರಪಂಚದ ಕಡೆ ಓಡುತ್ತಿರುವೆವೊ ಆ ಒಂದು ಪ್ರಪಂಚದ ಸಾಕ್ಷಾತ್ಕಾರಕ್ಕೂ ಅದು ಸಹಾಯಕವಾಗುತ್ತದೆ. ಭೀಕರ ದಾಸ್ಯ ಮತ್ತು ನಿರಾಶೆಯ ಭಾವನೆಗಳಿಂದ ಒಂದು ಬಾರಿ ಭಾರತೀಯರು ಮುಕ್ತರಾದರೆ ಅವರ ನಿಲುವು ಪುನಃ ಉನ್ನತವಾಗುವುದಲ್ಲದೆ ಸಂಕುಚಿತ ರಾಷ್ಟ್ರೀಯ ಭಾವನೆಯೂ, ಬಹಿಷ್ಕಾರ ದೃಷ್ಟಿಯೂ ಮಾಯವಾಗುತ್ತವೆ. ತಮ್ಮ ಭಾರತೀಯ ಸಂಸ್ಕೃತಿಯ

ಹಿರಿಮೆಯಲ್ಲಿ ಹೆಮ್ಮೆಗೊಂಡು, ಇತರ ಜನಾಂಗಗಳನ್ನು ರಾಷ್ಟ್ರಗಳನ್ನು ತೆರೆದ ಮನಸ್ಸು ಮತ್ತು ಮಮತೆಯಿಂದ ಕಂಡು, ವಿಶಾಲ ಮನಮೋಹಕ ಪ್ರಪಂಚದ ನಾಗರಿಕರಾಗಿ, ತಮ್ಮ ಪೂರ್ವಿಕರು ಯಾವ ಪ್ರಾಚೀನ ಸತ್ಯಾನ್ವೇಷಣೆಯಲ್ಲಿನ ಅದ್ಭುತ ಸಾಧನೆಯಿಂದ ಅಗ್ರಸ್ಥಾನ ಪಡೆದರೊ ಆ ಅನ್ವೇಷಣೆಯಲ್ಲಿ ಇತರರೊಂದಿಗೆ ಭುಜಕ್ಕೆ ಭುಜಕೊಟ್ಟು ಮತ್ತೊಮ್ಮೆ ಮುಂದುವರಿಯುತ್ತಾರೆ.

## ೧೧. ಭಾರತದ ವಿಭಜನೆಯೇ? ಶಕ್ತಿಯುತ ರಾಷ್ಟ್ರೀಯ ಸರಕಾರವೇ ಅಥವ ಸಂಯೋಜಿತ ರಾಷ್ಟ್ರೀಯ ಸರಕಾರಗಳ ಸಡಿಲು ಕೇಂದ್ರವೆ?

ನಮ್ಮ ಆಸೆಗಳಿಗೂ ಭೀತಿಗಳಿಗೂ ಒಂದು ಸರಿಯಾದ ಸಮತೋಲನ ಕಂಡು ಹಿಡಿಯುವುದೂ, ನಮ್ಮ ಆಸೆಗಳು ನಮ್ಮ ಮನಸ್ಸಿನ ಭಾವನೆಗಳ ಮೇಲೆ ಪರಿಣಾಮ ಮಾಡದಂತೆ ತಡೆಯುವುದೂ ಅತಿಕಷ್ಟ. ನಮ್ಮ ಆಸೆಗಳು ತಮ್ಮನ್ನು ಪುಷ್ಟೀಕರಿಸುವ ಕಾರಣಗಳನ್ನೇ ಹುಡುಕುತ್ತವೆ ಮತ್ತು ತಮಗೆ ಸರಿಹೊಂದದ ವಾಸ್ತವಿಕ ವಿಷಯಗಳನ್ನೂ, ಪ್ರಮಾಣಗಳನ್ನೂ ಉಪೇಕ್ಷೆ ಮಾಡಲು ಯತ್ನಿಸುತ್ತವೆ. ನ್ಯಾಯವಾದ ತೀರ್ಮಾನಕ್ಕೆ ಬಂದು ಕಾರ್ಯಾಚರಣೆಯ ನಿಜವಾದ ತಳಹದಿ ಕಂಡುಕೊಳ್ಳೋಣವೆಂದು ಆ ಸಮತೋಲನ ಪಡೆಯಲು ಪ್ರಯತ್ನಪಡುತ್ತಿದ್ದೇನೆ; ಆದರೆ ಆ ಸಾಧನೆಯಿಂದ ಎಷ್ಟು ದೂರವಿದ್ದೇನೆಂದು ನನಗೆ ಗೊತ್ತಿದೆ; ಮತ್ತು ನನ್ನ ವ್ಯಕ್ತಿತ್ವ ರೂಪಿಸಿ ತಮ್ಮ ಅಗೋಚರ ಬಂಧನಗಳಿಂದ ನನ್ನನ್ನು ಬಿಗಿದಿರುವ ನನ್ನ ಭಾವನೆಗಳ ಮತ್ತು ಅನುಕಂಪಗಳ ಹೊರೆಯಿಂದ ನಾನು ತಪ್ಪಿಸಿಕೊಳ್ಳಲಾರೆನೆಂದು ಅರಿತಿದ್ದೇನೆ. ಅದೇ ರೀತಿ ಇತರರೂ ಬೇರೆ ದಾರಿಯಲ್ಲಿ ತಪ್ಪುಮಾಡಬಹುದು. ಭಾರತದ ವಿಷಯ ಮತ್ತು ಪ್ರಪಂಚದಲ್ಲಿ ಭಾರತದ ಸ್ಥಾನದ ವಿಷಯವಾಗಿ ಭಾರತೀಯನ ದೃಷ್ಟಿ ಮತ್ತು ಆಂಗ್ಲೇಯನ ದೃಷ್ಟಿ ಉತ್ತರ ದಕ್ಷಿಣಧ್ರುವಗಳಿದ್ದಂತೆ ತೀರ ಭಿನ್ನ. ಇಬ್ಬರ ಭಿನ್ನವ್ಯಕ್ತಿತ್ವದ ಮತ್ತು ಭಿನ್ನ ರಾಷ್ಟ್ರೀಯತೆಯ ಹಿನ್ನೆಲೆಯೇ ಅದಕ್ಕೆ ಕಾರಣ. ವ್ಯಕ್ತಿಯೂ, ರಾಷ್ಟ್ರೀಯ ಸಂಗಡಗಳೂ ತಮ್ಮ ತಮ್ಮ ಕಾರ್ಯಾಚರಣೆಗಳಿಂದ ತಮ್ಮ ಭವಿಷ್ಯ ರೂಪಿಸುತ್ತವೆ. ಹಿಂದಿನ ಕಾರ್ಯಾಚರಣೆ ಇಂದಿನದಕ್ಕೆ ದಾರಿ, ಇಂದಿನ ಕಾರ್ಯಾಚರಣೆ ನಾಳೆಗೆ ಮೂಲ. ಭಾರತದಲ್ಲಿ ಇದನ್ನೇ ನಾವು ಕರ್ಮವೆನ್ನುತ್ತವೆ; ಕಾರ್ಯಕಾರಣ ವಿಧಿ ಅದು; ನಮ್ಮ ಹಿಂದಿನ ಕಾರ್ಯಾಚರಣೆಯು ನಮಗೆ ರೂಪಿಸುವ ಭವಿಷ್ಯ ಅದು. ಅದೇನು ವ್ಯತ್ಯಾಸವಾಗದ ಭವಿಷ್ಯವಲ್ಲ. ಇನ್ನೂ ಅನೇಕ ಅಂಶಗಳು ಅದರಮೇಲೆ ಪರಿಣಾಮಮಾಡುತ್ತವೆ. ವ್ಯಕ್ತಿಯ ಮನೋನಿಶ್ಚಯ ಸಹ ಅದರಮೇಲೆ ಪ್ರಭಾವ ಸ್ವಲ್ಪ ಬೀರುತ್ತದೆ. ಪೂರ್ವಕರ್ಮದ ಪರಿಣಾಮವನ್ನು ಈ ರೀತಿ ವ್ಯತ್ಯಾಸಗೊಳಿಸುವ ಸ್ವಾತಂತ್ರ್ಯವು ನಮಗೆ ಇರದಿದ್ದರೆ ನಾವೆಲ್ಲರೂ ಅನಿವಾರ್ಯ ಅದೃಷ್ಟದ ಕಪಿಮುಷ್ಟಿಯ ಹಿಡಿತದಲ್ಲಿನ ಕೀಲು ಗೊಂಬೆಗಳಾಗುತ್ತಿದ್ದೆವು. ಆದರೂ ವ್ಯಕ್ತಿ ಮತ್ತು ರಾಷ್ಟ್ರ ನಿರೂಪಣೆಯಲ್ಲಿ ಪೂರ್ವ ಕರ್ಮವು ಒಂದು ಪ್ರಬಲವಾದ ಶಕ್ತಿ. ನಮ್ಮ ರಾಷ್ಟ್ರೀಯ ಭಾವನೆಯೇ ಹಿಂದಿನ ಎಲ್ಲ ಒಳ್ಳೆಯ ಮತ್ತು ಕೆಟ್ಟ ಸ್ಮರಣೆಗಳೊಂದಿಗೆ ಆ ಪೂರ್ವ ಕರ್ಮದ ನೆರಳು.

ಪ್ರಾಯಶಃ ಈ ಪೂರ್ವಾರ್ಜಿತ ಕರ್ಮವು ವ್ಯಕ್ತಿಗಿಂತ ಹೆಚ್ಚಾಗಿ ರಾಷ್ಟ್ರೀಯ ಸಂಗಡಗಳ ಮೇಲೆ ಇನ್ನೂ ಹೆಚ್ಚು ಪರಿಣಾಮಕಾರಿಯಾಗಿರುವಂತೆ ತೋರುತ್ತದೆ. ಏಕೆಂದರೆ ವ್ಯಕ್ತಿಗಿಂತ ಹೆಚ್ಚಾಗಿ ಬಹು ಸಂಖ್ಯಾತ ಜನರ ಸಮುದಾಯಗಳು ಯಾವುದೋ ಅಗೋಚರ ಪೌರುಷ ಶಕ್ತಿಗಳ ಸೆಳೆತಕ್ಕೆ ಸಿಕ್ಕಿ ಮುನ್ನುಗ್ಗುತ್ತಿವೆ; ಅವರನ್ನು ಆ ಮಾರ್ಗದಿಂದ ಕದಲಿಸುವುದು ಇನ್ನೂ ಬಹು ಕಷ್ಟ. ವ್ಯಕ್ತಿಯ ಮೇಲೆ ನೈತಿಕ ಭಾವನೆಗಳ ಪ್ರಭಾವ ಬೀಳಬಹುದು; ಆದರೆ ಜನಸಮುದಾಯ ದೊಡ್ಡದಾದಷ್ಟೂ ನೈತಿಕ ಪ್ರಭಾವ ಅದರ ಮೇಲೆ ಕಡಮೆಯಾಗುತ್ತ ಹೋಗುತ್ತದೆ. ಅದರಲ್ಲೂ ಇಂದಿನ ಆಧುನಿಕ ಪ್ರಪಂಚದಲ್ಲಿ ದುಷ್ಟ ಪ್ರಚಾರದಿಂದ ಜನಸಮುದಾಯ ಕೆರಳಿಸುವುದು ಬಹು ಸುಲಭ. ಆದರೂ ಬಹು ವಿರಳವಾದರೂ ಒಂದೊಂದು ವೇಳೆ, ಜನಸಮುದಾಯವೇ ಒಂದು ಉನ್ನತ ನೈತಿಕ ಮಟ್ಟಕ್ಕೆ ಏರಿ ವ್ಯಕ್ತಿಯೇ ತನ್ನ ಸಂಕುಚಿತ ಸ್ವಾರ್ಥ ಬುದ್ಧಿ ಬಿಡುವಂತೆ ಪ್ರೇರಿಸುತ್ತದೆ. ಆದರೆ ಅನೇಕ ಸಂದರ್ಭಗಳಲ್ಲಿ ವ್ಯಕ್ತಿಗಿಂತ ಸಮುದಾಯವೇ ಕೆಳಮಟ್ಟದಲ್ಲಿ ಇರುತ್ತದೆ.

ಯುದ್ಧದಿಂದ ಈ ಎರಡು ಪರಿಣಾಮಗಳೂ ಆಗುತ್ತವೆ; ಆದರೆ ನೈತಿಕ ಜವಾಬ್ದಾರಿಯಿಂದ ಜಾರಿಕೊಳ್ಳುವುದೂ ಮತ್ತು ನಾಗರಿಕತೆಯು ಶತಮಾನಗಳಿಂದ ಬಹು ಪ್ರಯಾಸದಿಂದ ಕಟ್ಟಿದ ಮೌಲ್ಯಗಳನ್ನು ನಾಶಮಾಡುವುದೂ ಯುದ್ಧ ರಾಷ್ಟ್ರಗಳ ಪ್ರಮುಖ ಪ್ರವೃತ್ತಿಯಾಗುತ್ತದೆ. ಯುದ್ಧದಲ್ಲಿ ಗೆಲುವು ಮತ್ತು ಆಕ್ರಮಣಗಳು ಆ ನೀತಿಗೆ ನ್ಯಾಯಸಮರ್ಥನೆ ಕೊಟ್ಟು ಅದಕ್ಕೊಂದು ಅಸ್ತಿತ್ವ ಕೊಡುತ್ತವೆ. ಮತ್ತು ಸಾಮ್ರಾಜಷಾಹಿ ಆಕ್ರಮಣಕ್ಕೂ, ಆಳರಸ ಜನಾಂಗವೆಂಬ ಅಹಂಕಾರಕ್ಕೂ ಮೂಲವಾಗುತ್ತದೆ. ಅಪಜಯವು ನಿರಾಶಾಭಾವನೆಗೂ, ಸೇಡಿನ ಮನೋಭಾವಕ್ಕೂ ಕಾರಣವಾಗುತ್ತದೆ. ಈ ಎರಡರಿಂದಲೂ ದ್ವೇಷವೂ ಹಿಂಸಾಪ್ರವೃತ್ತಿಯೂ ಬೆಳೆಯುತ್ತವೆ. ನಿಷ್ಕರುಣ ಪಾಶವೀವೃತ್ತಿಗೆ ಮಿತಿ ಇಲ್ಲದೆ ಪರರ ದೃಷ್ಟಿ ಅರಿಯಲು ಸಹ ತಿರಸ್ಕಾರ ಮನೋಭಾವ ಹುಟ್ಟುತ್ತದೆ. ನಮ್ಮ ಭವಿಷ್ಯದ ನಿರ್ಧಾರವಾಗುತ್ತಿರುವುದೇ ಹೀಗೆ; ಇನ್ನೂ ಯುದ್ಧಗಳು, ಇನ್ನೂ ಹೋರಾಟಗಳು; ಇನ್ನೂ ಸಾವುನೋವುಗಳು.

ಭಾರತ ಮತ್ತು ಇಂಗ್ಲೆಂಡ್ ಎರಡರ ಕಳೆದ ಎರಡು ಮೂರು ವರ್ಷಗಳ ಬಲಾತ್ಕಾರದ ಬಂಧನದಿಂದ ಎರಡಕ್ಕೂ ಈ ಪ್ರಾಚೀನ ಕರ್ಮ, ಈ ಅದೃಷ್ಟ ಬೆಳೆದು ಅಂಟಿವೆ; ಎರಡರ ಪರಸ್ಪರ ಸಂಬಂಧವನ್ನೂ ಅದೇ ನಿರ್ಧರಿಸುತ್ತದೆ. ಅದರ ಬಂಧನದಲ್ಲಿ ತೊಳಲುತ್ತ, ಆ ಕರ್ಮಬಂಧನದಿಂದ ಪಾರಾಗಿ, ಬೇರೊಂದು ತಳಹದಿಯ ಮೇಲೆ ಹೊಸಬಾಳನ್ನು ನಡೆಸಲೆಂದು ಹೋರಾಡಿ ವಿಮುಖರಾಗಿದ್ದೇವೆ. ಕಳೆದ ಐದು ವರ್ಷಗಳ ಯುದ್ಧದಿಂದ ಆ ಪ್ರಾಚೀನ ದುಷ್ಕರ್ಮ ದುರದೃಷ್ಟವಶಾತ್ ಇನ್ನೂ ಹೆಚ್ಚಿದೆ; ಸಂಧಾನವೂ, ಸಾಮಾನ್ಯ ಪರಸ್ಪರ ವ್ಯವಹಾರವೂ ಇನ್ನೂ ಕಠಿಣವಾಗಿವೆ ಉಳಿದೆಲ್ಲದರಂತೆ ಕಳೆದ ಎರಡುನೂರು ವರ್ಷಗಳ ಇತಿಹಾಸದಲ್ಲಿ ಒಳ್ಳೆಯದೂ ಇದೆ ಕೆಟ್ಟದೂ ಇದೆ. ಆಂಗ್ಲೇಯನ ದೃಷ್ಟಿಯಲ್ಲಿ ಕೆಟ್ಟದಕ್ಕಿಂತ ಒಳ್ಳೆಯದೇ ಹೆಚ್ಚು. ಭಾರತೀಯನ ದೃಷ್ಟಿಯಲ್ಲಿ ಆ ಇತಿಹಾಸವೆಲ್ಲ ದುರಂತ ಕರಾಳ ಭೀಕರ ಚಿತ್ರ. ಒಳ್ಳೆಯದು ಮತ್ತು ಕೆಟ್ಟದರ ಪ್ರಮಾಣ ಎಷ್ಟೇ ಇರಲಿ ಬಲಾತ್ಕಾರ ಸಂಬಂಧದಿಂದ ದ್ವೇಷವೂ, ಪರಸ್ಪರ ಕಹಿ ಮನೋವೃತ್ತಿಯೂ ಬೆಳೆದು ದುಷ್ಪರಿಣಾಮಗಳಾಗುವುದು ಅನಿವಾರ್ಯ.

ಭಾರತದ ರಾಜಕೀಯ ಮತ್ತು ಆರ್ಥಿಕ ರಚನೆಯಲ್ಲಿ ಕ್ರಾಂತಿಕಾರಕ ಪರಿವರ್ತನೆಗಳು ಅತ್ಯವಶ್ಯಕವೂ ಅನಿವಾರ್ಯವೂ ಇವೆ. ಯುದ್ಧಾರಂಭದ ೧೯೩೯ರ ಕೊನೆಯಲ್ಲಿ, ಮತ್ತೆ ಪುನಃ ೧೯೪೨ರ ಏಪ್ರಿಲ್ ತಿಂಗಳಲ್ಲಿ ಇಂಗ್ಲೆಂಡ್ ಮತ್ತು ಭಾರತಗಳ ಸಮ್ಮತಿಯಿಂದ ಆ ಬಗೆಯ ಪರಿವರ್ತನೆಗಳಾಗಬಹುದೆ·ಬ ಆಸೆ ಇತ್ತು. ಎಲ್ಲ ಮೂಲ ಪರಿವರ್ತನೆಗೂ ಭಯಗೊಂಡ ಕಾರಣ ಆ ಅವಕಾಶಗಳೂ, ಸಾಧ್ಯಪ್ರಮೇಯಗಳೂ ಕಳೆದು ಹೋದವು. ಆದರೆ ಪರಿವರ್ತನೆಯಾಗಲೇ ಬೇಕು ಒಮ್ಮತದ ಕಾಲ ಮಿಂಚಿಹೋಯಿತೇನು? ಸಾಮಾನ್ಯ ವಿಪತ್ತುಗಳ ಎದುರಿನಲ್ಲಿ ಹಿಂದಿನ ಮನೋವಿಕಾರ ಸ್ವಲ್ಪ ಕಡಮೆಯಾಗುತ್ತದೆ, ಪ್ರಸ್ತುತ ಸಮಸ್ಯೆಗಳನ್ನು ಭವಿಷ್ಯ ದೃಷ್ಟಿಯಿಂದ ಕಾಣುತ್ತೇವೆ. ಆದರೆ ಹಳೆಯ ದುರಂತ ಕಥೆ ಮತ್ತೊಮ್ಮೆ ಹಿಂದಿರುಗಿದೆ ಮತ್ತು ಅಧಿಕಗೊಂಡಿದೆ. ಗ್ರಾಹಕ ಮನೋಭಾವ ಮಾಯವಾಗಿ ಮನಸ್ಸನ್ನು ಕಹಿಮಾಡಿ ಕಲ್ಲುಮಾಡಿದೆ. ಇಂದೋ ನಾಳೆಯೋ, ಇನ್ನೂ ಹೆಚ್ಚು ಹೋರಾಡಿಯೋ, ಇಲ್ಲದೆಯೋ ಯಾವುದಾದರೂ ಒಂದು ಬಗೆಯ ಇತ್ಯರ್ಥವಾಗಲೇ ಬೇಕು; ಆದರೆ ಅದು ನಿಜವಾದ ವಿಶ್ವಾಸದಿಂದ, ಸಹಕಾರದಿಂದ ಆಗುವುದು ಬಹಳ ಕಷ್ಟ. ಪ್ರಾಯಶಃ ವಿಷಮ ಸಂದರ್ಭದ ಒತ್ತಾಯದಿಂದ, ಪರಸ್ಪರ ವೈರ ಮತ್ತು ಅಪನಂಬಿಕೆಯಿಂದ ಪ್ರಾಯಶಃ ಉಭಯ ಪಕ್ಷಗಳೂ ಇಷ್ಟವಿಲ್ಲದಿದ್ದರೂ ಒಂದು ಒಪ್ಪಂದಕ್ಕೆ ಬರುವುದು ಅನಿವಾರ್ಯವಾಗುತ್ತದೆ. ಭಾರತದ ಒಂದು ಅಂಗುಲ ಭೂಮಿ ಬ್ರಿಟಿಷ್ ಸಾಮ್ರಾಜ್ಯದ ಭಾಗವಾಗಿ ಉಳಿದಿರಬೇಕೆಂದರೂ ಆ ಪರಿಹಾರ ಏನೆ ಇರಲಿ ಅದನ್ನು ಒಪ್ಪುವ ಸಂಭವವೇ ಇಲ್ಲ. ಹಳೆಯ ಪಾಳೆಪಟ್ಟು ಉಳಿಸಿ ಅವುಗಳ ಬಲದ ಮೇಲೆ ರೂಪಿಸುವ ಪರಿಹಾರ ದೀರ್ಘಕಾಲ ಉಳಿಯುವುದೂ ಇಲ್ಲ.

ಭಾರತದಲ್ಲಿ ಜೀವನ ಬಹು ಸುಲಭ. ಆದ್ದರಿಂದ ನಮ್ಮ ಜೀವನ ಶೂನ್ಯವೂ ವಕ್ರವೂ, ಹುರುಳಿಲ್ಲದುದೂ ಆಗಿದೆ. ಬಡತನದ ಭಯಂಕರ ಬೇಗೆ ಸದಾ ಅದನ್ನು ಆವರಿಸಿದೆ. ಬಾಹ್ಯವೋ ಅಂತರ್ಗತವೋ, ಭಾರತದ ಇಂದಿನ ದುರ್ಬಲ ವಾತಾವರಣಕ್ಕೆ ಮುಖ್ಯ ಬಡತನ ಮತ್ತು ಹಸಿವಿನ ಪರಿಣಾಮಗಳೇ ಮೂಲ. ನಮ್ಮ ಜೀವನದ ಮಟ್ಟ ಅಧೋಗತಿಗೆ ಇಳಿದಿದೆ, ಸಾವಿನ ಸಂಖ್ಯೆ ಪರಮಾವಧಿಗೆ ಏರಿದೆ. ಸಿರಿವಂತರು

ಅದೃಷ್ಟಹೀನ ಬಡವರನ್ನು ಕಡೆಗಣ್ಣಿನಿಂದ ನೋಡುವಂತೆ ಕೈಗಾರಿಕೋದ್ಯಮದಲ್ಲಿ ಪ್ರಗತಿಪಡೆದ ಧನಿಕ ರಾಷ್ಟ್ರಗಳು ಹಿಂದೆ ಬಿದ್ದು ಬಡತನದಲ್ಲಿ ನರಳುವ ರಾಷ್ಟ್ರಗಳನ್ನು ಅಲಕ್ಷೆ ಮಾಡುತ್ತವೆ. ತನ್ನ ಅಪಾರ ಹಣ ಮತ್ತು ಅವಕಾಶಗಳಿಂದ ಉನ್ನತಮಟ್ಟ ಏರಿ, ಉತ್ತಮ ಅಭಿರುಚಿ ಪಡೆದು ಶ್ರೀಮಂತ ಬಡವರನ್ನು ದುರಭ್ಯಾಸಿಗಳು, ಸಂಸ್ಕೃತಿಹೀನರು ಎಂದು ತೆಗಳುತ್ತಾನೆ. ಅವರ ಪರಿಸ್ಥಿತಿ ಅವರು ಉತ್ತಮಪಡಿಸಿ ಕೊಳ್ಳಲು ಅವಕಾಶ ಕೊಡದೆ ಅವರ ಬಡತನ ಮತ್ತು ಅದರ ಪರಿಣಾಮಗಳನ್ನೇ ಕಾರಣಮಾಡಿಕೊಂಡು ಪುನಃ ಆ ಅವಕಾಶ ನಿರಾಕರಿಸುತ್ತಾನೆ.

ಭಾರತ ದರಿದ್ರ ದೇಶವಲ್ಲ. ಒಂದು ದೇಶ ಸಂಪದ್ಯುಕ್ತವಿರಲು ಅವಶ್ಯವಾದ ಎಲ್ಲ ಪ್ರಕೃತಿ ಸಂಪತ್ತೂ ಭಾರತದಲ್ಲಿ ಇದೆ; ಆದರೂ ಭಾರತೀಯರು ಬಡವರು. ವಿಶ್ವತೋಮುಖ ಬೆಳೆದು ಹಬ್ಬಿದ ಶ್ರೇಷ್ಠಸಂಸ್ಕೃತಿ ಪರಂಪರೆ ಇದೆ. ಇನ್ನೂ ಅತ್ಯುನ್ನತಿ ಪಡೆಯಲು ಶಕ್ತಿಯೂ ಇದೆ. ಆದರೆ ಅನೇಕ ನವ ವಿಕಸನಗಳು, ಪೋಷಕ ವಸ್ತುಗಳು ಆ ಸಂಸ್ಕೃತಿಗೆ ಅವಶ್ಯವಿವೆ. ಈ ಅಭಾವಕ್ಕೆ ಕಾರಣ ಅನೇಕ ಇರಬಹುದು; ಆದರೆ ಉದ್ದೇಶಪಟ್ಟು ಅವಕಾಶ ಕೊಡದಿರುವುದೇ ಮುಖ್ಯ ಕಾರಣ. ಆದ್ದ ರಿಂದ ಜನರ ಆತ್ಮಶಕ್ತಿ ಕೆರಳಿ ಬಂಧನಗಳನ್ನೆಲ್ಲ ಕಳಚಿಕೊಂಡು ಅವಶ್ಯಕತೆ ಪೂರೈಸಬೇಕು. ಅದೇ ಇಂದು ಭಾರತದಲ್ಲಿ ನಡೆಯುತ್ತಿರುವುದು. ಭಾರತದಲ್ಲಿ ಪ್ರಕೃತಿದತ್ತ ಸಂಪತ್ಸಮೃದ್ಧಿ ಇದೆ, ಬುದ್ಧಿಶಕ್ತಿ ಇದೆ, ಅತ್ಯಲ್ಪಕಾಲದಲ್ಲಿ ಪ್ರಗತಿ ಪಡೆಯಲು ಕೌಶಲವೂ, ಶಕ್ತಿಯೂ ಇವೆ. ಯುಗಯುಗಗಳ ಸಂಸ್ಕೃತಿ ಮತ್ತು ಆತ್ಮಾನುಭವಗಳ ಸಂಪತ್ಸಮೃದ್ಧಿಯ ಹಿನ್ನೆಲೆ ಇದೆ. ತಾತ್ವಿಕ ಮತ್ತು ಪ್ರಾಯೋಗಿಕ ವಿಜ್ಞಾನಗಳೆರಡರಲ್ಲೂ ಪ್ರಗತಿಪಡೆದು ಕೈಗಾರಿಕೋದ್ಯಮದಲ್ಲಿ ಒಂದು ಮಹಾರಾಷ್ಟ್ರವಾಗಲು ಶಕ್ತಿ ಇದೆ; ಅನೇಕ ಬಂಧನಗಳಿಂದ ವಿಜ್ಞಾನ ಸಂಶೋಧನೆಗೆ ಭಾರತೀಯ ಯುವಕ ಯುವತಿಯರಿಗೆ ಅವಕಾಶಗಳು ಇಲ್ಲದಿದ್ದರೂ ವಿಜ್ಞಾನ ಪ್ರಪಂಚದಲ್ಲಿ ಸಹ ಭಾರತೀಯರಪಾತ್ರ ಆಗಲೇ ಸುಪ್ರಸಿದ್ಧ ಇದೆ. ದೇಶ ವೈಶಾಲ್ಯ ಮತ್ತು ದೇಶದ ಸಾಧ್ಯಾಸಾಧ್ಯತೆ ದೃಷ್ಟಿಯಿಂದ ಅದು ಹೆಚ್ಚಲ್ಲ. ಆದರೆ ದೇಶದ ಸಮಸ್ತ ಶಕ್ತಿಗಳನ್ನು ಅಣಿಗೊಳಿಸಿ ಅವಕಾಶ ಕಲ್ಪಿಸಿಕೊಟ್ಟರೆ ಏನು ಸಾಧಿಸಬಹುದು ಎಂಬುದರ ಕಿರುನೋಟ ಅದು. ಆದರೆ ಎರಡು ದೊಡ್ಡ ಆತಂಕ ಅದಕ್ಕೆ ಒದಗಬಹುದು. ಅಂತರ ರಾಷ್ಟ್ರೀಯ ಸಮಸ್ಯೆಗಳು ಮತ್ತು ಭಾರತದ ಮೇಲೆ ಹೊರಗಿನವರ ಒತ್ತಾಯ ಮೊದಲನೆಯದು. ದೇಶದಲ್ಲಿ ಒಮ್ಮತ ಧ್ಯೇಯದ ಅಭಾವ ಎರಡನೆಯದು. ಆದರೆ ದೇಶದ ಒಮ್ಮತ ದೃಷ್ಟಿಯೇ ಅಂತ್ಯದಲ್ಲಿ ಮುಖ್ಯ ನಿರ್ಧಾರಕ ವಸ್ತುವಾಗುತ್ತದೆ. ಭಾರತವನ್ನು ಎರಡು ಮೂರು ತುಂಡುಮಾಡಿ ಒಂದು ರಾಜಕೀಯ ಮತ್ತು ಆರ್ಥಿಕ ಕ್ಷೇತ್ರವಾಗಿ ಮುಂದುವರಿಯಲು ಅವಕಾಶ ಕೊಡದಿದ್ದರೆ ಅದರ ಪ್ರಗತಿ ಬಹಳ ಕ್ಷೀಣಿಸುತ್ತದೆ. ಪ್ರತ್ಯಕ್ಷ ದೌರ್ಬಲ್ಯ ಹೆಚ್ಚುವುದಂತೂ ಸರಿ, ಅದಕ್ಕೂ ಹೆಚ್ಚಿನ ದುಷ್ಪರಿಣಾಮವೆಂದರೆ ಪುನಃ ಒಂದುಗೂಡಿಸ ಬೇಕೆನ್ನುವವರಿಗೂ ಅದನ್ನು ವಿರೋಧಿಸುವವರಿಗೂ ಒದಗುವ ವೈಮನಸ್ಸು ಮತ್ತು ಅಂತಃಕಲಹಗಳು. ಹೊಸ ಪ್ರತಿಗಾಮಿ ಶಕ್ತಿಗಳು ಹುಟ್ಟಿ ಎಲ್ಲ ಪರಿವರ್ತನೆ ಮತ್ತು ಪ್ರಗತಿಯನ್ನು ವಿರೋಧಿಸುತ್ತವೆ. ಒಂದು ಹೊಸ ದುಷ್ಕರ್ಮ ನಮ್ಮ ಭವಿಷ್ಯದ ಬೆನ್ನು ಹತ್ತುತ್ತದೆ. ಒಂದು ತಪ್ಪು ಹೆಜ್ಜೆಯಿಂದ ಮತ್ತೊಂದು, ಹಿಂದಿನ ಕಥೆಯೂ ಇದೇ; ಮುಂದೆಯೂ ಅದೇ ಪಾಡೋ ಏನೋ ? ಆದರೂ ಇನ್ನೂ ಹೆಚ್ಚಿನ ಕೇಡಿನಿಂದ ಪಾರಾಗಲು ಕೆಲವುವೇಳೆ ತಪ್ಪು ಹೆಜ್ಜೆ ಇಡುವುದೇ ಅವಶ್ಯವಾಗುತ್ತದೆ. ರಾಜಕೀಯದಲ್ಲಿ ದೊಡ್ಡ ವಿರೋಧಾ ಭಾಸವೇ ಇದು. ಯಾವ ವಿಪತ್ತಿನಿಂದ ಪಾರಾಗಲು ಇಂದು ಒಂದು ತಪ್ಪು ಹೆಜ್ಜೆ ಇಡುವೆವೋ ಆ ವಿಪತ್ತನ್ನು ಎದುರಿಸುವುದು ಕ್ಷೇಮವೇ ಅಥವ ಈ ತಪ್ಪು ಹೆಜ್ಜೆ ಇಡುವುದು ಕ್ಷೇಮವೇ ಎಂದು ಕೇಳಿದರೆ ಯಾರೂ ಉತ್ತರ ಹೇಳಲಾರರು. ಅನೈಕ್ಯತೆಗಿಂತ ಐಕ್ಯತೆ ಉತ್ತಮ. ಆದರೆ ಬಲಾತ್ಕಾರದ ಐಕ್ಯತೆ ಒಂದು ನಟನೆ, ಬಹು ಅಪಾಯಕರ, ಮತ್ತು ಎಂದಾದರೂ ಸಿಡಿದು ಒಡೆಯಬಹುದು. ಮನಸ್ಸು ಮತ್ತು ಹೃದಯಗಳು ಒಂದಾಗಿ, ನಾವೇ ಅವರು ಅವರೇ ನಾವು, ಐಕ್ಯತೆ ಒಡೆಯ ಬಂದ ಶತ್ರುವನ್ನು ಒಟ್ಟಿಗೆ ನಿಂತು ಎದುರಿಸ ಬೇಕು ಎಂಬ ಭಾವನೆ ಇದ್ದರೆ ಅದು ಐಕ್ಯತೆ. ಆ ಬಗೆಯ ಮೂಲ ಐಕ್ಯತೆ ಭಾರತದಲ್ಲಿ ಇದೆ ಎಂದು ನನ್ನ ಭಾವನೆ. ಆದರೆ ಇತರ ಶಕ್ತಿಗಳು ಅದರ ಮೇಲೆ ಕೋಟೆ ಕಟ್ಟಿ ಅದನ್ನು ಅದುಮಿವೆ. ಈ ಇತರ

ಶಕ್ತಿಗಳು ತಾತ್ಕಾಲಿಕವಿರಬಹುದು, ಕೃತಕವಿರಬಹುದು, ಕ್ರಮೇಣ ನಾಶವೂ ಆಗಬಹುದು. ಆದರೆ ಇಂದು ಅವು ರೆಕ್ಕೆಗಟ್ಟಿ ಬಲಿತಿವೆ; ಅವುಗಳನ್ನು ಯಾರೂ ಅಲಕ್ಷ್ಯಮಾಡುವಂತಿಲ್ಲ.

ಈ ಎಲ್ಲ ತಪ್ಪುಗಳಿಗೆ ನಾವೇ ಕಾರಣ; ನಮ್ಮ ಅಪರಾಧದ ಫಲ ನಾವೇ ಉಣ್ಣಬೇಕು. ಆದರೆ ಭಾರತ ವಿಭಜನೆಯಲ್ಲಿ ಬ್ರಿಟಿಷ್ ಅಧಿಕಾರಿಗಳು ಉದ್ದೇಶಪೂರ್ವಕ ವಹಿಸಿದ ಪಾತ್ರ ನಾನು ಎಂದೂ ಮರೆಯಲಾರೆ, ಎಂದೂ ಕ್ಷಮಿಸಲಾರೆ. ಉಳಿದೆಲ್ಲ ಗಾಯವಾಯಬಹುದು; ಆದರೆ ಈ ಗಾಯದಿಂದ ನಾವು ಬಹು ದೀರ್ಘಕಾಲ ನರಳಬೇಕಾಗುತ್ತದೆ. ಭಾರತದ ವಿಷಯ ಯೋಚಿಸಿದಾಗಲೆಲ್ಲ ಐರ್ಲೆಂಡ್ ಮತ್ತು ಚೀಣಾ ನನಗೆ ಜ್ಞಾಪಕಕ್ಕೆ ಬರುತ್ತವೆ. ಇಂದಿನ ಮತ್ತು ಹಿಂದಿನ ಸಮಸ್ಯೆಗಳಲ್ಲಿ ದೃಷ್ಟಿಯಿಂದ ಎರಡೂ ಭಾರತದಿಂದ ತೀರ ಭಿನ್ನ; ಅಲ್ಲದೆ ತಮ್ಮೊಳಗೂ ಭಿನ್ನ; ಆದರೂ ಅನೇಕ ಸಾಮ್ಯಗಳಿವೆ. ನಮಗೂ ಮುಂದೆ ಅದೇ ಮಾರ್ಗ ಗತಿಯೇನು?

ಜಿಮ್ ಫೇಲಾನ್ ತನ್ನ "ಜೈಲುಪ್ರವಾಸ" ಎಂಬ ಗ್ರಂಥದಲ್ಲಿ ಮಾನವನ ವ್ಯಕ್ತಿತ್ವದ ಮೇಲೆ ಸೆರೆಮನೆಯ ಪರಿಣಾಮ ತಿಳಿಸುತ್ತಾನೆ. ದೀರ್ಘಕಾಲ ಸೆರೆಮನೆವಾಸ ಅನುಭವಿಸಿದವರಿಗೆಲ್ಲ ಅದರ ಸತ್ವ ತಿಳಿದಿದೆ. "ಸೆರೆಮನೆ ಮಾನವನ ವ್ಯಕ್ತಿತ್ವಕ್ಕೆ ಒಂದು ಭೂತಕನ್ನಡಿ. ಪ್ರತಿಯೊಂದು ಅವಗುಣವನ್ನೂ ಹೊರಗೆಡವಿ, ಪ್ರಾಧಾನ್ಯತೆಕೊಟ್ಟು, ಪ್ರಚೋದಿಸಿ ದುರ್ಗುಣಿ ಖೈದಿಯ ಬದಲು ದುರ್ಗುಣವೇ ಮೂರ್ತಿವೆತ್ತು ಖೈದಿಯ ರೂಪದಲ್ಲಿ ಕಾಣುತ್ತದೆ" ಎಂದಿದಾನೆ. ಪರಾಡಳಿತದಿಂದ ರಾಷ್ಟ್ರಶೀಲದ ಮೇಲೆ ಇದೇ ಬಗೆಯ ಪರಿಣಾಮವಾಗುತ್ತದೆ. ಜೊತೆಗೆ ಕೆಲವು ಸದ್ಗುಣಗಳೂ ಬೆಳೆಯುತ್ತವೆ; ಪರಾಡಳಿತ ವಿರೋಧಿಸುವ ಶಕ್ತಿಯೂ ಕ್ರಮೇಣ ಅಭಿವೃದ್ಧಿಯಾಗುತ್ತದೆ. ಆದರೆ ಆಡಳಿತ ವರ್ಗ ಒಂದನ್ನು ಪ್ರೋತ್ಸಾಹಿಸಿ ಇನ್ನೊಂದನ್ನು ತುಳಿಯುತ್ತದೆ. ಸೆರೆಮನೆಯಲ್ಲಿ ಬಂದಿಗಳೇ ತಮ್ಮ ಸಹಬಂದಿಗಳ ಮೇಲೆ ಗುಪ್ತಚಾರರಾಗುವುದು ಒಂದು ಪ್ರಶಸ್ತಿ ಎಂದು ಭಾವಿಸುವಂತೆ ಅಧೀನ ರಾಷ್ಟ್ರದಲ್ಲಿ ಸಹ ಅಧಿಕಾರದ ದಂಡಿಗೆ ಧರಿಸಿ ಅಧಿಕಾರಿಗಳಪರ ಕೆಲಸ ಮಾಡುವ ಕೈಗೊಂಬೆಗಳಿಗೆ, ಅವರ ಪಾದಸೇವಕರಿಗೆ ಏನೂ ಕೊರತೆ ಇಲ್ಲ. ಇನ್ನು ಕೆಲವರು ಉದ್ದೇಶ ಪೂರ್ವಕ ಆ ಸಾಲಿಗೆ ಸೇರದಿದ್ದರೂ ಅಧಿಕಾರ ಬಲದ ರೀತಿ ನೀತಿ ಮತ್ತು ಕಪಟೋಪಾಯಗಳಿಗೆ ಬಲಿಬೀಳುತ್ತಾರೆ.

ಭಾರತ ವಿಭಾಗ ಮಾಡಬೇಕು, ಬಲಾತ್ಕಾರದ ಐಕ್ಯತೆ ಬೇಡ ಎಂಬ ತತ್ತ್ವ ಒಪ್ಪಿಕೊಳ್ಳುವ ಮುಂಚೆ ಶಾಂತ ರೀತಿ ಭಾವೋದ್ರೇಕವಿಲ್ಲದೆ ಅದರ ಪರಿಣಾಮ ಯೋಚನೆ ಮಾಡಿದರೆ ಎಲ್ಲರ ಕ್ಷೇಮದೃಷ್ಟಿಯಿಂದ ಐಕ್ಯತೆಯೇ ಉತ್ತಮವೆಂದು ತೋರಬಹುದು. ಆದರೂ ಒಮ್ಮೆ ಒಂದು ತಪ್ಪು ಹೆಜ್ಜೆ ಇಟ್ಟರೆ ಹಿಂದೆಯೇ ಅನೇಕ ತಪ್ಪು ಹೆಜ್ಜೆ ಇಡಬೇಕಾಗುವ ಅಪಾಯವಿದ್ದೇ ಇದೆ. ತಪ್ಪು ಮಾರ್ಗದಲ್ಲಿ ಒಂದು ಸಮಸ್ಯೆ ಬಿಡಿಸಲು ಯತ್ನಿಸಿದರೆ ಅದರ ಹಿಂದೆಯೇ ಅನೇಕ ಹೊಸ ಸಮಸ್ಯೆಗಳು ಉದ್ಭವಿಸಬಹುದು. ಎರಡು ಮೂರು ಭಾಗವಾಗಿ ಭಾರತ ವಿಭಜನೆ ಮಾಡುವುದೆಂದರೆ ದೊಡ್ಡ ದೊಡ್ಡ ದೇಶೀಯ ಸಂಸ್ಥಾನ ಒಳಗೂಡಿಸುವುದು ಕಷ್ಟವಾಗುತ್ತದೆ; ಏಕೆಂದರೆ ತಾವೂ ಪ್ರತ್ಯೇಕ ಉಳಿದು ತಮ್ಮ ಸರ್ವಾಧಿಕಾರವನ್ನೇ ಮುಂದುವರಿಸಲು ಹೊಸದೊಂದು ಕಾರಣ ಅವುಗಳಿಗೆ ದೊರೆಯುತ್ತದೆ.*

---

* ಒಟ್ಟಿನಲ್ಲಿ ದೇಶೀಯ ಸಂಸ್ಥಾನಗಳಿಗೆ ತಮ್ಮ ಅಂತರಿಕ ಸ್ವಾತಂತ್ರ್ಯ ಉಳಿಸಿಕೊಳ್ಳಬೇಕೆಂದು ಕಾತರತೆ ಇದ್ದರೂ ಸಮಾನ ಹಕ್ಕು ದೊರೆತರೆ ಶಕ್ತಿಯುತ ಸಂಯುಕ್ತ ಭಾರತ ರಚನೆಯಲ್ಲಿ ತಾವು ಸೇರಲು ಸಿದ್ಧ ಎಂದು ತಮ್ಮ ಅಭಿಪ್ರಾಯ ತಿಳಿಸಿವೆ. ಭಾರತದ ವಿಭಜನೆಯನ್ನು ಪ್ರಮುಖ ಸಂಸ್ಥಾನ ಸಚಿವರುಗಳೂ, ರಾಜಕಾರಣಿಗಳೂ ಬಲವಾಗಿ ವಿರೋಧಿಸಿದ್ದಾರೆ. ಆ ರೀತಿ ಏನಾದರೂ ವಿಭಜನೆಯಾದರೆ ಸಂಸ್ಥಾನಗಳು ವಿಭಕ್ತ ಭಾರತದ ಯಾವ ಭಾಗಕ್ಕೂ ಸೇರದೆ ತಮ್ಮ ಪಾಡಿಗೆ ತಾವು ಪ್ರತ್ಯೇಕವಿರಲು ಇಷ್ಟಪಡಬಹುದು. ತಿರುವಾಂಕೂರಿನ ದಿವಾನರೂ, ಸಂಸ್ಥಾನ ಸಚಿವರಲ್ಲಿ ಬಹಳ ಶಕ್ತರೂ ಅನುಭವಸ್ಥರೂ ಆದ ಸರ್. ಸಿ. ಪಿ. ರಾಮಸ್ವಾಮಿ ಅಯ್ಯರ್ (ತಮ್ಮ ವಿರೋಧಿಗಳನ್ನು ಸದೆಬಡಿದು ನಿರಂಕುಶಾಧಿಕಾರ ನಡೆಸುವುದರಲ್ಲಿ ಪ್ರಸಿದ್ಧರಾದಾಗ್ಯೂ) ದೇಶೀಯ ಸಂಸ್ಥಾನಗಳಲ್ಲಿ ಪೂರ್ಣ ಒಳಾಡಳಿತ ಸ್ವಾತಂತ್ರ್ಯ ಇರಬೇಕೆಂದು ವಾದಿಸುವವರಲ್ಲಿ ಒಬ್ಬರು. ಆದರೂ ಪಾಕಿಸ್ತಾನ ಅಥವ ಯಾವುದೇ ಬಗೆಯ ವಿಭಜನೆಯನ್ನು ಬಲವಾಗಿ ವಿರೋಧಿಸುತ್ತ

ಮುಸ್ಲಿಂ ಲೀಗ್ ಕೇಳುವಂತೆ ಭಾರತವನ್ನು ಮತದ ದೃಷ್ಟಿಯಿಂದ ಹಿಂದೂಗಳು, ಮುಸ್ಲಿಮರು ಎಂದು ವಿಭಾಗಿಸುವುದಾದರೆ ಭಾರತದ ಈ ಎರಡು ಧರ್ಮಗಳ ಜನರನ್ನು ಪ್ರತ್ಯೇಕಿಸಿದಂತೆ ಆಗುವುದಿಲ್ಲ; ಏಕೆಂದರೆ ದೇಶಾದ್ಯಂತ ಅವರು ಹರಡಿದ್ದಾರೆ. ಒಂದು ಧರ್ಮದ ಬಹುಸಂಖ್ಯಾತರಿರುವ ಭಾಗವನ್ನೇ ಪ್ರತ್ಯೇಕಿಸಿದರೂ ಇನ್ನೊಂದು ಧರ್ಮದ ಅಲ್ಪಸಂಖ್ಯಾತರ ದೊಡ್ಡ ಗುಂಪು ಎರಡು ಕಡೆಯೂ ಉಳಿಯುತ್ತದೆ. ಈ ರೀತಿ ಅಲ್ಪಸಂಖ್ಯಾತರ ಪ್ರಶ್ನೆ ನಿವಾರಿಸುವ ಬದಲು ಒಂದು ಸಮಸ್ಯೆ ಅನೇಕ ಆಗುತ್ತದೆ. ಪರಧರ್ಮೀಯರಾದ ಸೀಖರು ಅವರ ಇಷ್ಟಕ್ಕೆ ವಿರುದ್ಧ ಎರಡು ಕಡೆಯೂ ಹಂಚಿ ಹೋಗುತ್ತಾರೆ. ಒಂದು ಪಂಗಡಕ್ಕೆ ಪ್ರತ್ಯೇಕವಾಗಲು ಸ್ವಾತಂತ್ರ್ಯ ಕೊಟ್ಟು ಅಲ್ಪಸಂಖ್ಯಾಕರಾದ ಇತರ ಪಂಗಡಗಳಿಗೆ ಅದೇ ಸ್ವಾತಂತ್ರ್ಯ ನಿರಾಕರಿಸುತ್ತೇವೆ. ಅವರ ಇಚ್ಛೆಗೆ ವಿರುದ್ಧ ಅವರ ಪ್ರಬಲ ವಿರೋಧ ಅಲಕ್ಷಿಸಿ ಭಾರತದಿಂದ ಹೊರ ದೂಡುತ್ತೇವೆ. ಪ್ರತಿಯೊಂದು ಭಾಗದಲ್ಲೂ ಬಹುಸಂಖ್ಯಾಕರ ಅಭಿಪ್ರಾಯಕ್ಕೇ ಮನ್ನಣೆ ದೊರೆಯಬೇಕೆಂದರೆ ವಿಭಜನೆಯ ಪ್ರಶ್ನೆಯನ್ನು ಒಟ್ಟು ಭಾರತದ ಬಹುಸಂಖ್ಯಾಕರ ಅಭಿಪ್ರಾಯದಂತೆ ಏಕೆ ತೀರ್ಮಾನಿಸಬಾರದೊ ನನಗೆ ಅರ್ಥವಾಗುವುದಿಲ್ಲ. ಪ್ರತಿಯೊಂದು ಸಣ್ಣ ಪ್ರದೇಶವೂ ತನ್ನ ಸ್ವಾತಂತ್ರ್ಯದ ಪ್ರಶ್ನೆಯನ್ನು ತಾನೇ ತೀರ್ಮಾನಿಸಿ ಅಸಂಖ್ಯಾತ ಸಣ್ಣ ರಾಜ್ಯಗಳನ್ನು ರಚಿಸುವುದೆಂದರೆ ಯಾರೂ ಒಪ್ಪದ, ಅರ್ಥವಿಲ್ಲದ ಹುಚ್ಚು ಕೆಲಸ. ಎರಡೂ ಧರ್ಮಗಳ ಜನರು ದೇಶದ ಎಲ್ಲ ಕಡೆಗಳಲ್ಲೂ ಹರಡಿ ಹಬ್ಬಿದ್ದಾರೆ.

ಜನಾಂಗ ವಿಭಜನೆ ಅತಿ ಕಷ್ಟತಮ ಕೆಲಸ, ಅದನ್ನು ಧರ್ಮದೃಷ್ಟಿಯಿಂದ ವಿಭಜಿಸುವುದೆಂದರೆ ಯಾವ ರೀತಿ ನೋಡಿದರೂ ಅಸಾಧ್ಯವೆಂದು ತೋರುತ್ತದೆ. ಇಂದಿನ ಆಧುನಿಕ ಪ್ರಪಂಚದಲ್ಲಿ ಯಾವುದೋ ಮಧ್ಯ ಯುಗಕ್ಕೆ ಹಿಂದಿರುಗುವ ಈ ಭಾವನೆಯು ಸರಿಹೊಂದುವುದಿಲ್ಲ.

---

ಬಂದಿರುವವರು. ೧೯೪೪ನೆ ಅಕ್ಟೋಬರ್ ೬ನೆಯ ದಿನ ಮುಂಬೈ ನಗರದಲ್ಲಿ ಇಂಡಿಯನ್ ಕೌನ್ಸಿಲ್ ಆಫ್ ವರ್ಲ್ಡ್ ಅಫೇರ್ಸ್ ಸಂಸ್ಥೆಯ ಸಭೆಯಲ್ಲಿ ಮಾತನಾಡುತ್ತ "ಭಾರತದ ಬೇರೆ ಬೇರೆ ರಾಜಕೀಯ ಮತ್ತು ಆಡಳಿತದ ವಿಭಾಗಗಳು ತಮ್ಮ ಒಡಾಳಿತದಲ್ಲಿ ಪೂರ್ಣ ಸ್ವತಂತ್ರ ಉಳಿದು ಕೇಂದ್ರ ಶಾಸನಸಭೆ ಮತ್ತು ಆಡಳಿತ ವರ್ಗಗಳ ರಚನೆ ಮತ್ತು ಕಾರ್ಯ ನಿರ್ವಹಣೆಗಾಗಿ ಸಹಕಾರದಿಂದ ಒಪ್ಪಿ ಏರ್ಪಡಿಸಿದ ಸಂಸ್ಥೆಗಳಲ್ಲಿ ಎಲ್ಲ ಸಂಸ್ಥಾನಗಳೂ ಸೇರಬೇಕು ಮತ್ತು ಸೇರುತ್ತವೆ ಎಂದು ನನ್ನ ಅಭಿಪ್ರಾಯ. ಆ ಸಂಸ್ಥೆಗಳು ಭಾರತದ ಒಳಗಡೆ ಮತ್ತು ಹೊರಗೆ ರಾಷ್ಟ್ರ ಅಂಗಾಂಗಗಳಾಗಿ, ಪ್ರತಿನಿಧಿ ಸಂಸ್ಥೆಗಳಾಗಿ ಯಶಸ್ವಿಯಾಗಿ ಕೆಲಸಮಾಡಲು ಸಾಧ್ಯವಿದೆ. ಭಾರತದ ಒಳಗೆ ಪ್ರತಿಯೊಂದು ವಿಭಾಗಕ್ಕೂ ಸಮಾನ ಅಧಿಕಾರ ಇರಬೇಕು. ಒಂದರ ಮೇಲೆ ಇನ್ನೊಂದರ ಪರಮಾಧಿಕಾರ ಇರಬಾರದು, ಕೇಂದ್ರವು ಅವಶಿಷ್ಟ ಮತ್ತು ಇತರರ ಹಕ್ಕುಗಳನ್ನು ಭದ್ರವಾಗಿ ಸ್ಥಾಪಿಸಿ ಪಾಲಿಸಬೇಕು" ಎಂದು ಹೇಳಿದ್ದಾರೆ. ಪುನಃ "ಕೌಲು ಕರಾರಿನ ಹಕ್ಕುಗಳು ಇರಲಿ, ಇಲ್ಲದಿರಲಿ, ದೇಶೀಯ ಸಂಸ್ಥಾನಗಳು ಮತ್ತು ಬ್ರಿಟಿಷ್ ಭಾರತ ಎರಡಕ್ಕೂ ಸಂಬಂಧಿಸಿದ ವಿಷಯಗಳಲ್ಲಿ ಕೇಂದ್ರದ ಸಲಹೆ ಮತ್ತು ಕೇಂದ್ರದ ಆಡಳಿತಕ್ಕೆ ಒಳಪಡದೆ, ಭಾರತದ ರಾಜ್ಯಾಡಳಿತಕ್ಕಾಗಿ ಒಪ್ಪಿದ ರಾಜಕೀಯ ವ್ಯವಸ್ಥೆಗೆ ದೃಢನಿಷ್ಠೆ ತೋರಿಸದ, ಸ್ವಾತಂತ್ರ್ಯ ಮತ್ತು ಸಮಾನತೆಯಿಂದ ಚರ್ಚೆಮಾಡಿ, ರಾಜಿಯಿಂದ ಒಪ್ಪಿದ ವಿಧಾನ ಪರಿಪಾಲಿಸದ ಯಾವ ಸಂಸ್ಥಾನಕ್ಕೂ ಭಾರತದಲ್ಲಿ ಸ್ಥಾನವಿಲ್ಲ, ಈ ನನ್ನ ಹೇಳಿಕೆಗೆ ಸ್ವಲ್ಪ ವಿರೋಧ ಬಂದರೂ ಜನರ ಹಿತ ಸಾಧನೆಯಲ್ಲಿ ಬ್ರಿಟಿಷ್ ಭಾರತಕ್ಕಿಂತ ಮುಂದೆ ಇರದಿದ್ದರೂ ಸರಿಸಮಾನ ಆದರೂ ಇರದ ಯಾವ ದೇಶೀಯ ಸಂಸ್ಥಾನಕ್ಕೂ ಸ್ಥಾನವಿಲ್ಲವೆಂದು ಘಂಟಾಘೋಷ ಹೇಳುತ್ತೇನೆ" ಎಂದಿದಾರೆ.

ರಾಮಸ್ವಾಮಿ ಅಯ್ಯರ್ ೬೦೧ ಸಂಸ್ಥಾನಗಳನ್ನೂ ಸಮಾನ ದೃಷ್ಟಿಯಿಂದ ನೋಡಲು ಸಾಧ್ಯವಿಲ್ಲ ಎಂದು ಹೇಳಿದ್ದಾರೆ. ಈ ೬೦೧ ಸಂಸ್ಥಾನಗಳು ೧೫–೨೦ ದೊಡ್ಡ ಸಂಸ್ಥಾನಗಳಾಗಿ ಒಟ್ಟುಗೂಡಬೇಕೆಂದೂ ಉಳಿದವು ದೊಡ್ಡ ಸಂಸ್ಥಾನಗಳಲ್ಲೋ, ಪ್ರಾಂತಗಳಲ್ಲೋ, ಸೇರಬೇಕೆಂದೂ ಹೇಳಿದಾರೆ. ಸಂಸ್ಥಾನಗಳ ಒಳಗಿನ ರಾಜಕೀಯ ಪ್ರಗತಿಗೆ ರಾಮಸ್ವಾಮಿ ಅಯ್ಯರ್ ಅಷ್ಟು ಪ್ರಾಮುಖ್ಯತೆ ಕೊಡುವುದಿಲ್ಲ. ಅಥವ ಹೆಚ್ಚು ಪ್ರಾಮುಖ್ಯತೆ ಕೊಡುವುದಿಲ್ಲ. ಆದರೆ ಸಂಸ್ಥಾನಗಳಲ್ಲಿ ಮುಖ್ಯವಾಗಿ ಇತರ ವಿಷಯಗಳಲ್ಲಿ ಮುಂದುವರಿದ ಸಂಸ್ಥಾನಗಳಲ್ಲಿ ಆ ರಾಜಕೀಯ ಪ್ರಗತಿ ಇಲ್ಲದಿದ್ದರೆ ಜನರಿಗೂ ಸಂಸ್ಥಾನಗಳ ಅಧಿಕಾರವರ್ಗಕ್ಕೂ ಹೋರಾಟ ತಪ್ಪಿದ್ದಲ್ಲ.

ವಿಭಜನೆಯ ಆರ್ಥಿಕ ಸಮಸ್ಯೆ ಯೋಚಿಸಿದರೆ ಅಖಂಡ ಭಾರತ ಬಲಿಷ್ಟವೂ ಸ್ವಯಂ ಸಂಪೂರ್ಣವೂ ಆದ ಆರ್ಥಿಕ ಪ್ರದೇಶವಾಗಿದೆ. ಅದನ್ನು ವಿಭಜಿಸುವುದೆಂದರೆ ಅದರ ಶಕ್ತಿಯನ್ನು ಮುರಿದಂತೆ ಒಂದು ಭಾಗ ಇನ್ನೊಂದನ್ನು ಅವಲಂಬಿಸಬೇಕಾಗುತ್ತದೆ. ಹಿಂದೂ ಮುಸ್ಲಿಂ ಪ್ರದೇಶಗಳೆಂದು ವಿಭಜಿಸುವುದಾದರೆ ಖನಿಜ ಸಂಪತ್ತು, ಕೈಗಾರಿಕೋದ್ಯಮಗಳು ಎಲ್ಲ ಒಂದು ಕಡೆ ಬರುತ್ತವೆ. ಈ ದೃಷ್ಟಿಯಿಂದ ಹಿಂದೂ ವಿಭಾಗಗಗಳಿಗೆ ಅಷ್ಟು ತೊಂದರೆಯಾಗುವುದಿಲ್ಲ. ಆದರೆ ಮುಸ್ಲಿಂ ವಿಭಾಗಗಳು ಆರ್ಥಿಕ ದೃಷ್ಟಿಯಿಂದ ಹಿಂದೆಬಿದ್ದು ಪರರ ನೆರವಿಗೆ ಕೈಯೊಡ್ಡುವ ಕೊರತೆಯ ಭಾಗಗಳಾಗುತ್ತವೆ. ಯಾರು ಈಗ ವಿಭಜನೆ ಅಪೇಕ್ಷೆ ಸುತ್ತಿದ್ದಾರೋ ಅವರೇ ನಾಳೆ ಸಂಕಟಕ್ಕೀಡಾಗುತ್ತಾರೆ. ಇದು ಸ್ವಲ್ಪ ತಲೆಗೆ ಹೊಳೆದು, ಈಗ ಆರ್ಥಿಕ ಸಮತೋಲನೆ ಇರುವಂತೆ ವಿಭಜನೆಯಾಗಬೇಕೆಂದು ಕೇಳುತ್ತಿದ್ದಾರೆ. ಇದು ಸಾಧ್ಯವೆ ನನಗೆ ತಿಳಿಯದು ; ಅನುಮಾನ ಹಾಗೆ ಆಗಬೇಕೆಂದರೆ ಹಿಂದೂ ಮತ್ತು ಸೀಖ ಬಹು ಸಂಖ್ಯಾತರ ಭಾಗಗಳನ್ನು ಬಲಾತ್ಕಾರವಾಗಿ ಮುಸ್ಲಿಂ ಭಾಗಕ್ಕೆ ಸೇರಿಸಬೇಕು. ಅಂದರೆ ಸ್ವಯಂ ನಿರ್ಣಯ ತತ್ವಕ್ಕೆ ತಿಲಾಂಜಲಿ ಕೊಟ್ಟಂತೆ. ತಾನೆ ತಂದೆ ತಾಯಿ ಕೊಂದು ಅನಾಥನೆಂದು ನ್ಯಾಯಾಸ್ಥಾನ ಮರೆಹೊಕ್ಕ ಮೂರ್ಖನ ಕಥೆ ಜ್ಞಾಪಕಕ್ಕೆ ಬರುತ್ತದೆ.

ಇನ್ನೊಂದು ವಿಚಿತ್ರ ವಿರೋಧ ಪರಿಸ್ಥಿತಿ ಎಂದರೆ ಸ್ವಯಂ ನಿರ್ಣಯಾಧಿಕಾರ ಎಂದು ಕೂಗುತ್ತಿದ್ದರೂ ಜನ ಮತಗಣನೆಗೆ ಒಪ್ಪುತ್ತಿಲ್ಲ ; ಒಪ್ಪಿದರೆ ಮುಸ್ಲಿಮರ ಮತ ಮಾತ್ರ ಕೇಳಬೇಕಂತೆ. ಬಂಗಾಳ ಮತ್ತು ಪಂಜಾಬ್‌ಗಳಲ್ಲಿ ಮುಸ್ಲಿಮರ ಜನಸಂಖ್ಯೆ ಶೇಕಡ ೫೪% ಅಥವ ಇನ್ನೂ ಕಡಮೆ. ಈ ೫೪%ರಷ್ಟು ಜನ ಮಾತ್ರ ಮತಕೊಟ್ಟು ಉಳಿದ ೪೬%ರಷ್ಟು ಜನರ ಯಾವ ಅಭಿಪ್ರಾಯ ಕೇಳದೆ ಅವರ ಭವಿಷ್ಯ ನಿರ್ಧರಿಸಬೇಕಂತೆ ! ೨೮% ಜನರು ಉಳಿದ ೭೨% ಜನರ ಅದೃಷ್ಟ ನಿರ್ಧರಿಸಬಹುದು !

ಒಪ್ಪಿಗೆ ದೊರೆಯುತ್ತೆಂದು ಭಾವಿಸಿ ಈ ವಾದ ಮುಂದಿಡುವ ಧೈರ್ಯ ಸ್ವಲ್ಪ ವಿವೇಕ ಇದ್ದವರು ಮಾಡತಕ್ಕುದಲ್ಲ, ಮತ ತೆಗೆದುಕೊಳ್ಳುವವರೆಗೆ ಸಂಬಂಧಪಟ್ಟ ಪ್ರದೇಶಗಳ ಮುಸ್ಲಿಮರು ಎಷ್ಟು ಜನ ವಿಭಜನೆಗೆ ಮತ ಕೊಡುತ್ತಾರೆ ಎಂದು ನಾನು ನಿರ್ಧರ ಹೇಳಲಾರೆ. ಹೇಳಲು ಯಾರಿಂದಲೂ ಸಾಧ್ಯವಿಲ್ಲ. ಅನೇಕ ಮುಸ್ಲಿಂ ಸಂಸ್ಥೆಗಳು ಅದಕ್ಕೆ ವಿರುದ್ಧ ಇವೆ. ಮುಸ್ಲಿಮೇತರರು ಹಿಂದೂ, ಸೀಖ, ಪಾರ್ಶಿ, ಕ್ರಿಶ್ಚಿಯನ್ ಯಾರೇ ಇರಲಿ ಅದನ್ನು ವಿರೋಧಿಸಿದಾರೆ. ಮುಂದೆ ಭಾರತದಲ್ಲೇ ಉಳಿಯಬೇಕಾದ ಭಾಗಗಳ ಅಲ್ಪ ಸಂಖ್ಯಾತ ಮುಸ್ಲಿಮರಲ್ಲಿ ಮಾತ್ರ ಈ ವಿಭಜನೆಯ ಭಾವನೆ ಹೆಚ್ಚು ಬೆಳೆದಿರುವುದು. ಮುಸ್ಲಿಮರೇ ಬಹು ಸಂಖ್ಯಾತರಾಗಿರುವ ಪ್ರಾಂತಗಳ ಮುಸ್ಲಿಮರಿಗೆ ಅದು ಬೇಕಿಲ್ಲ ; ಅದು ಸ್ವಾಭಾವಿಕವೂ ಇದೆ. ಅವರು ತಮ್ಮ ಕಾಲ ಮೇಲೆ ತಾವು ನಿಲ್ಲಬಲ್ಲರು ; ಇತರ ಪಂಗಡಗಳ ಭಯ ಅವರಿಗಿಲ್ಲ. ಶೇಕಡ ೯೫% ರಷ್ಟು ಮುಸ್ಲಿಮರೇ ಇರುವ ವಾಯುವ್ಯ ಪ್ರಾಂತ್ಯದ ಧೀರ, ಆತ್ಮಾವಲಂಬಿ ಪಠಾಣರಿಗೆ ಇದು ಬೇಕಿಲ್ಲ. ಅವರಿಗೆ ಭಯವೆಂಬುದೇ ತಿಳಿಯದು. ಈ ರೀತಿ ಮುಸ್ಲಿಂ ಲೀಗಿನ ವಿಭಜನೆಯ ಸಲಹೆಗೆ ಮುಸ್ಲಿಮರು ಬಹು ಸಂಖ್ಯಾಕರಿರುವ ಪ್ರಾಂತಗಳಿಗಿಂತ ಹೆಚ್ಚಾಗಿ ಮುಸ್ಲಿಮರು ಅಲ್ಪ ಸಂಖ್ಯಾತರಿರುವ ಪ್ರದೇಶಗಳಲ್ಲೇ ಬೆಂಬಲ ಹೆಚ್ಚು ಆದರೂ ಅನೇಕ ಮುಸ್ಲಿಮರು ಈ ಪ್ರಶ್ನೆಯ ಲಾಭಾಲಾಭ ಯೋಚಿಸದೆ ಈ ವಿಭಜನೆಯ ಭಾವನೆಗೆ ಮನ ಸೋತಿದ್ದಾರೆ. ಆ ಭಾವನೆಯೇ ಇನ್ನೂ ಅಸ್ಪಷ್ಟ ಕಲ್ಪನಾ ಪ್ರಪಂಚದಲ್ಲಿಯೇ ಇದೆ. ವಿವರ ತಿಳಿಸಲು ಎಷ್ಟು ಕೇಳಿದಾಗ್ಯೂ ಇನ್ನೂ ತಿಳಿಸಿಲ್ಲ.

ಅದೊಂದು ಕೃತಕ ಕಲ್ಪನೆ ; ಮುಸ್ಲಿಂ ಮನಸ್ಸಿನಲ್ಲಿ ಅದು ನಾಟಿಲ್ಲವೆಂದು ನನ್ನ ಭಾವನೆ. ಆದರೆ ತಾತ್ಕಾಲಿಕ ಭಾವನೆಯಾದರೂ ಮುಂದೆ ಮಹತ್ಪರಿಣಾಮಮಾಡಿ ಹೊಸ ಪರಿಸ್ಥಿತಿಯನ್ನೇ ತಂದೊಡ್ಡಬಹುದು. ಸಾಮಾನ್ಯವಾಗಿ ಕಾಲಕ್ಕೆ ತಕ್ಕಂತೆ ಹೊಂದಿಕೊಳ್ಳಬೇಕಾಗುತ್ತದೆ ; ಆದರೆ ಅಧಿಕಾರವೆಲ್ಲ ವಿದೇಶೀಯರ ಕೈಲಿ ಕೇಂದ್ರೀಕೃತವಾಗಿರುವ ಇಂದಿನ ಭಾರತದ ವಿಚಿತ್ರ ಪರಿಸ್ಥಿತಿಯಲ್ಲಿ ಏನು ಬೇಕಾದರೂ ಆಗಬಹುದು. ನಿಜವಾದ ಒಪ್ಪಂದ ಏನೇ ಆಗಲಿ ಅದು ಸಂಬಂಧಪಟ್ಟವರೆಲ್ಲರ ಪರಸ್ಪರ ಸೌಹಾರ್ದದಿಂದ, ಮತ್ತು ಸರ್ವರ ಹಿತಕ್ಕಾಗಿ ಎಲ್ಲ ಪಕ್ಷಗಳೂ ಸಹಕರಿಸಬೇಕೆಂಬ ಪ್ರೇರಣೆಯಿಂದ ಆಗಬೇಕಾದ್ದು. ಅಂಥ ಧ್ಯೇಯ ಸಾಧನೆಗೆ ಯಾವ ತ್ಯಾಗವಾದರೂ ಅಲ್ಪ. ಪ್ರತಿಯೊಂದು ಪಂಗಡಕ್ಕೂ ತತ್ವಶಃ ಮತ್ತು

ಕಾರ್ಯತಃ ಸ್ವಾತಂತ್ರ್ಯವೂ ಆತ್ಮ ವಿಕಾಸಕ್ಕೆ ಸಮಾನ ಅವಕಾಶವೂ ಇರಬೇಕು ಮಾತ್ರವಲ್ಲದೆ ಆ ಸ್ವಾತಂತ್ರ್ಯದ ಮತ್ತು ಸಮಾನತೆಯ ಅರಿವು ಅದಕ್ಕೆ ಉಂಟಾಗಬೇಕು. ನಮ್ಮ ಕೋಪಾವೇಶ ಬದಿಗಿಟ್ಟರೆ ವಿಚಾರ ಶೂನ್ಯ ಭಾವಾವೇಶ ಬಿಟ್ಟರೆ ಪ್ರಾಂತ ಮತ್ತು ಸಂಸ್ಥಾನಗಳಿಗೆ ಆದಷ್ಟು ಸ್ವಾತಂತ್ರ್ಯ ಕೊಟ್ಟು ಶಕ್ತಿಪೂರ್ಣ ಕೇಂದ್ರ ಸರಕಾರ ಒಂದನ್ನು ರಚಿಸಲು ಕಷ್ಟ ತೋರುವುದಿಲ್ಲ. ಸೋವಿಯಟ್ ರಷ್ಯದಲ್ಲಿರುವಂತೆ ದೊಡ್ಡ ದೊಡ್ಡ ಪ್ರಾಂತ ಮತ್ತು ಸಂಸ್ಥಾನಗಳಲ್ಲಿ ಸಹ ಆಡಳಿತ ಸ್ವಾತಂತ್ರ್ಯವಿರುವ ಭಾಗಗಳು ಇರಲು ಅವಕಾಶವಿದೆ. ಇದರ ಜೊತೆಗೆ ಅಲ್ಪ ಸಂಖ್ಯಾತರ ಹಕ್ಕುಗಳ ರಕ್ಷಣೆಗೆ ಅವಶ್ಯ ತೋರುವ ಎಲ್ಲ ರಕ್ಷಣೆ ಮತ್ತು ಭರವಸೆಯನ್ನೂ ರಾಜ್ಯವಿಧಾನದಲ್ಲಿ ಸೇರಿಸಬಹುದು.

ಇದೆಲ್ಲ ಸಾಧ್ಯವಿದ್ದರೂ ಅನೇಕ ಅನಿಶ್ಚಿತ ಪ್ರಮೇಯ ಮತ್ತು ಶಕ್ತಿಗಳ ಪ್ರಭಾವದಿಂದ ಭವಿಷ್ಯ ಏನಾಗುವುದೊ ನಾನು ಹೇಳಲಾರೆ, ಅವುಗಳಲ್ಲಿ ಬ್ರಿಟಿಷ್ ನೀತಿ ಎಲ್ಲಕ್ಕಿಂತ ಅತ್ಯಂತ ಪ್ರಬಲವಾದುದು. ವಿಭಜಿತ ಪ್ರದೇಶಗಳಿಗೆ ಒಂದು ಸೂಕ್ಷ್ಮ ಸಂಬಂಧ ಕಲ್ಪಿಸಿ ಯಾವುದೋ ರೀತಿಯಲ್ಲಿ ಭಾರತದ ಮೇಲೆ ಬಲಾತ್ಕಾರದ ವಿಭಜನೆ ಹೊರಿಸಬಹುದು. ಆ ರೀತಿ ವಿಭಜನೆ ಆದ ಮೇಲೂ ಮೂಲ ಐಕ್ಯತೆಯ ಭಾವನೆಯಿಂದ, ಪ್ರಪಂಚದ ಘಟನೆಗಳ ಒತ್ತಡದಿಂದ ವಿಭಜಿತ ಭಾಗಗಳು ಕ್ರಮೇಣ ಪರಸ್ಪರ ಸಮೀಪ ಬಂದು ನಿಜವಾದ ಐಕ್ಯ ಬೆಳೆಯಬಹುದು.

ಭೂಗೋಲ, ಇತಿಹಾಸ, ಸಂಸ್ಕೃತಿ ಮತ್ತು ಎಲ್ಲ ದೃಷ್ಟಿಯಿಂದ ಈ ಐಕ್ಯತೆಯ ಅವಶ್ಯಕತೆ ಇದೆ. ಆದರೆ ಎಲ್ಲಕ್ಕೂ ಹೆಚ್ಚಿನ ಅವಶ್ಯಕತೆ ಎಂದರೆ ಪ್ರಪಂಚದ ಘಟನೆಗಳ ಪ್ರವೃತ್ತಿ ಭಾರತ ಒಂದು ಜನಾಂಗ ಎಂದೇ ನಮ್ಮಲ್ಲಿ ಅನೇಕರ ಭಾವನೆ. ಜನಾಬ್ ಜಿನ್ನಾ ಎರಡು ಜನಾಂಗಗಳ ತತ್ತ್ವವನ್ನು ಪ್ರತಿಪಾದಿಸಿ ಈಚೆಗೆ ಪ್ರತಿಯೊಂದು ಧಾರ್ಮಿಕ ಪಂಗಡವೂ ಒಂದೊಂದು ಉಪಜನಾಂಗವೆಂದು ಬೇರೆ ಸೇರಿಸಿದ್ದಾರೆ. ಅವನ ಭಾವನೆಯಲ್ಲಿ ಜನಾಂಗವೆಂದರೆ ಧರ್ಮ, ಆದರೆ ಇಂದಿನ ಜನಾಂಗದ ಅಭಿಪ್ರಾಯ ಪ್ರಪಂಚದಲ್ಲಿ ಅದಲ್ಲ. ಭಾರತ ಒಂದೋ ಎರಡೋ ಅಥವ ಹೆಚ್ಚೊ ಜನಾಂಗಗಳ ದೇಶವಾದರೂ ಬಾಧಕವಿಲ್ಲ; ಏಕೆಂದರೆ ರಾಜ್ಯತ್ವಕ್ಕೂ ರಾಷ್ಟ್ರೀಯತೆಗೂ ಸಂಬಂಧವಿಲ್ಲ. ರಾಷ್ಟ್ರೀಯ ರಾಜ್ಯ ಇಂದಿನ ಕಾಲಕ್ಕೆ ಬಹಳ ಸಣ್ಣ ರಾಜ್ಯ. ಸಣ್ಣ ರಾಜ್ಯಗಳು ಸ್ವತಂತ್ರ ಬಾಳಲು ಇಂದು ಸಾಧ್ಯವಿಲ್ಲ. ಆದ್ದರಿಂದ ರಾಷ್ಟ್ರೀಯ ರಾಜ್ಯಗಳು ಬಹು ರಾಷ್ಟ್ರೀಯ ರಾಜ್ಯಕ್ಕೆ ಅಥವ ದೊಡ್ಡ ಸಂಯುಕ್ತ ರಾಜ್ಯಗಳಿಗೆ ಸ್ಥಾನಕೊಡುತ್ತಿವೆ. ಸೋವಿಯಟ್ ರಷ್ಯ ಅದಕ್ಕೊಂದು ಉತ್ತಮ ನಿದರ್ಶನ. ಅಮೆರಿಕೆಯ ಸಂಯುಕ್ತ ಸಂಸ್ಥಾನಗಳಲ್ಲಿ ಬಲವತ್ತರ ರಾಷ್ಟ್ರೀಯ ಭಾವನೆಗಳಿದ್ದರೂ ಅನೇಕ ದೃಷ್ಟಿಯಿಂದ ಅದೂ ಒಂದು ಬಹುರಾಷ್ಟ್ರೀಯ ರಾಜ್ಯ. ಹಿಟ್ಲರನ ಯೂರೋಪ್ ದಾಳಿಯ ಹಿಂದೆ ನಾಜಿಗಳ ರಾಜ್ಯ ಸಂಪಾದನೆಯ ಆಸೆ ಮಾತ್ರವಲ್ಲದೆ ಬೇರೊಂದು ದೊಡ್ಡ ಭಾವನೆ ಇತ್ತು. ಯೂರೋಪಿನ ಸಣ್ಣ ರಾಜ್ಯಗಳ ವಿನಾಶವಾದುದು ಅನೇಕ ಪ್ರಬಲ ಶಕ್ತಿಗಳ ಪ್ರಭಾವದಿಂದ. ಹಿಟ್ಲರನ ಸೈನ್ಯಗಳು ಇಂದು ಕಾಲಿಗೆ ಬುದ್ಧಿ ಹೇಳಿ ವಿನಾಶದ ಕಡೆ ಓಡುತ್ತಿರಬಹುದು, ಆದರೆ ಅವರ ಬೃಹತ್ಸಂಯುಕ್ತ ರಾಷ್ಟ್ರ ಕಲ್ಪನೆ ಮಾತ್ರ ಇನ್ನೂ ಉಳಿದಿದೆ.

ಪ್ರಾಚೀನ ಧರ್ಮಸಂಸ್ಥಾಪಕರ ಉಜ್ವಲ ವಾಣಿಯಿಂದ "ಮಾನವತೆ ಇಂದು ಒಂದು ಯುಗಾಂತ್ಯದಲ್ಲಿದೆ; ಮಾನವ ವ್ಯವಹಾರ ನಿರ್ವಹಣೆಯಲ್ಲಿ ಪ್ರತ್ಯೇಕ ವ್ಯಾಪಾರದ ಯುಗ ಮುಗಿಯಿತು, ರಾಜಕೀಯದಲ್ಲಿ ವಿಶಿಷ್ಟ ಪರಮಾಧಿಕಾರದ ಪ್ರತ್ಯೇಕ ಸಣ್ಣ ಸಣ್ಣ ರಾಜ್ಯಗಳ ಕಾಲ ಮುಗಿಯಿತು, ಲಾಭದಾಸೆಯ ಮಿತಿಯಿಲ್ಲದ ಪೈಪೋಟಿಯ ವ್ಯಾಪಾರ ಸಂಸ್ಥೆಗಳ ಆರ್ಥಿಕ ದೃಷ್ಟಿಯ ಕಾಲ ಆಯಿತು" ಎಂದು ಎಚ್.ಜಿ. ವೆಲ್ಸ್ ಪ್ರಪಂಚಕ್ಕೆ ಸಂದೇಶ ಸಾರಿದ್ದಾನೆ. ರಾಷ್ಟ್ರೀಯ ಪ್ರತ್ಯೇಕತೆ, ಸಂಯೋಜನಾ ರಹಿತ ವ್ಯಾಪಾರ ವ್ಯವಹಾರ ಪದ್ಧತಿಗಳೇ ಪ್ರಪಂಚದ ರೋಗಕ್ಕೆ ಕಾರಣ ಎಂದಿದ್ದಾನೆ. ಈ ರಾಷ್ಟ್ರೀಯ ಭಾವನೆಯ ರಾಜ್ಯಗಳು ಕೊನೆಗಾಣಬೇಕು. ಆತ್ಮನಾಶಮಾಡದ, ದಾಸ್ಯಕ್ಕೆ ಎಡೆಗೊಡದ ಸಮಷ್ಟಿ ಪದ್ಧತಿ ನೆಲೆಗೊಳ್ಳಬೇಕು. ಧರ್ಮೋಪದೇಶಕರಿಗೆ ತಮ್ಮ ಕಾಲದಲ್ಲಿ ದೊರೆಯುವ ಸನ್ಮಾನ ಎಂದರೆ ಅಲಕ್ಷ್ಯ, ಅನೇಕ ವೇಳೆ ಕಲ್ಲಿನೇಟು. ವೆಲ್ಸ್ ಮುಂತಾದವರ ಈ ಎಚ್ಚರಿಕೆ ಅಧಿಕಾರಮತ್ತರ ಮಧ್ಯೆ ಅರಣ್ಯರೋದನವೇ ಸರಿ. ಆದರೂ ಅಂತ್ಯದಲ್ಲಿ ಅದೇ ದಾರಿ ಹಿಡಿಯಬೇಕಾದ್ದು ಎಲ್ಲರಿಗೂ ಅನಿವಾರ್ಯ. ಈ ಪ್ರವರ್ತನೆಗಳಿಗೆ ಪ್ರೋತ್ಸಾಹ ಕೊಡ

ಬಹುದು ಅಥವ ಅಡ್ಡ ತಡೆಯಬಹುದು. ಅಧಿಕಾರಿವರ್ಗ ಮದಾಂಧವಾದರೆ ಆ ಪರಿವರ್ತನೆಗೆ ಪೂರ್ವ ಭಾವಿಯಾಗಿ ಇನ್ನೊಂದು ಮಹಾಪ್ರಳಯವೇ ಆದೀತು.

ಇತರ ಕಡೆಗಳಂತೆ ಭಾರತದಲ್ಲಿ ಸಹ ಇಂದು ಅರ್ಥಶೂನ್ಯ ಪ್ರಾಚೀನ ಇತಿಹಾಸ ಪರಂಪರೆಯ ಆದರ್ಶ ಮತ್ತು ಆದೇಶಗಳ ಬಂಧನದಲ್ಲಿ ಕಟ್ಟುಬಿದ್ದಿದ್ದೇವೆ. ನಿಷ್ಪಕ್ಷಪಾತ ದೃಷ್ಟಿಯಿಂದ ವಿಚಾರ ಪೂರ್ಣ ಭಾವನೆಯಿಂದ ಪ್ರಸ್ತುತ ಪರಿಸ್ಥಿತಿ ಯೋಚಿಸಲು ಅವಕಾಶ ಕೊಡದೆ ತಡೆಯುವುದೇ ಅವುಗಳ ಮುಖ್ಯ ಕೆಲಸ. ಯಾವುದೋ ಅವ್ಯಕ್ತದಕಡೆ, ಅಸ್ಪಷ್ಟ ಆದರ್ಶಗಳ ಕಡೆ ಮನಸ್ಸನ್ನು ಹರಿಬಿಟ್ಟಿದ್ದೇವೆ. ಅದರಿಂದ ದೊರೆಯುವ ಭಾವಪರವಶತೆಯೂ ಒಂದು ದೃಷ್ಟಿಯಿಂದ ಒಳ್ಳೆಯದಾದರೂ ಮನಸ್ಸು ಚಂಚಲವಾಗುತ್ತದೆ ಮತ್ತು ಅಸ್ವಾಭಾವಿಕವಾಗುತ್ತದೆ. ಈಚೆಗೆ ಭಾರತದ ಭವಿಷ್ಯ, ವಿಭಜನೆ ಮತ್ತು ಐಕ್ಯತೆಯ ವಿಷಯ ವಿಪುಲ ಗ್ರಂಥರಾಶಿ ಬೆಳೆದಿದೆ. ಆದರೂ ಪಾಕಿಸ್ತಾನ ಅಥವ ವಿಭಜನೆಯ ಪಕ್ಷಪಾತಿಗಳು ಪಾಕಿಸ್ತಾನ ವೆಂದರೇನು ಎಂದು ತಿಳಿಸಿಲ್ಲ; ಅದರ ಪರಿಣಾಮಗಳೇನೆಂದು ಯೋಚಿಸಿಲ್ಲ. ಅವರೂ, ಅವರ ವಿರೋಧಿ ಗಳನೇಕರೂ ಭಾವಪರವಶತೆಯ ಪ್ರಪಂಚದಲ್ಲೇ ಇದ್ದಾರೆ. ಊಹಾಪೋಹದ ಅಸ್ಪಷ್ಟ ಆಶಾಪ್ರಪಂಚ ದಲ್ಲಿ; ಆಶೆಯ ಹಿಂದೆ ಸ್ವಾರ್ಥದ ಕಲ್ಪನೆಯಲ್ಲಿ ಈ ಎರಡು ಭಾವಪರವಶತೆ ಕಲ್ಪನೆಗಳಿಗೆ ಸಾಮರಸ್ಯ ಸಾಧ್ಯವೇ ಇಲ್ಲ. ಈ ರೀತಿ ಒಂದು ಕಡೆ ಪಾಕಿಸ್ತಾನದ ಕೂಗು, ಇನ್ನೊಂದು ಕಡೆ ಅಖಂಡ ಹಿಂದೂ ಸ್ಥಾನದ ಕೂಗು. ಇಬ್ಬರಿಗೂ ಮುಷ್ಟಾಮುಷ್ಟಿ ಸಾಮೂಹಿಕ ಭಾವನೆಗಳನ್ನು, ಅಭಿಲಾಷೆಗಳನ್ನು, ಪ್ರಜ್ಞಾ ಪೂರ್ಣವೊ, ಅರೆ ಪ್ರಜ್ಞೆಯವೋ-ಅಲ್ಲಗಳೆಯುವಂತೆ ಇಲ್ಲ; ವಿಚಾರ ಮಾಡಲೇಬೇಕು. ಅಲಕ್ಷೆ ಮಾಡಿ ದರೆ ಅಥವ ಭಾವಪರವಶತೆಯ ಮುಸುಕು ಮುಚ್ಚಿಕೊಂಡರೆ ನಿಜಪರಿಸ್ಥಿತಿ ಅಥವ ವಾಸ್ತವಿಕತೆ ಮರೆ ಮಾಚಲು ಸಾಧ್ಯವಾಗುವುದಿಲ್ಲ; ಅವು ಹೋಗುವುದಿಲ್ಲ. ಇಷ್ಟವಿಲ್ಲದಾಗ ಅನಿರೀಕ್ಷಿತವಾಗಿ ಹೇಗೋ ಹೊರಬೀಳುತ್ತವೆ. ಭಾವಪರವಶತೆಯ ಆಧಾರದಿಂದ ಭಾವೋದ್ರಿಕ್ತ ಸಮಯದಲ್ಲಿ ಮಾಡಿದ ತೀರ್ಮಾನ ಗಳಿಂದ ಅಡ್ಡದಾರಿ ಹಿಡಿವುದೂ, ಭಯಂಕರ ಪರಿಣಾಮಗಳಾಗುವುದೂ ಖಂಡಿತ.

ಭಾರತದ ಭವಿಷ್ಯ ಏನೇ ಆಗಲಿ, ಕ್ರಮವಾದ ವಿಭಜನೆಯೇ ಅನಿವಾರ್ಯವಾಗಲಿ, ಭಾರತದ ಆ ವಿಭಜಿತಭಾಗಗಳು ನೂರಾರು ರೀತಿ ಪರಸ್ಪರ ಸಹಕರಿಸಬೇಕು. ಸ್ವತಂತ್ರ ರಾಷ್ಟ್ರಗಳೇ ಒಂದಕ್ಕೊಂದು ಸಹಕರಿಸುತ್ತವೆ. ಆದ್ದರಿಂದ ವಿಭಜನೆಯಿಂದ ಹುಟ್ಟುವ ಪ್ರಾಂತಗಳು ಮತ್ತು ಭಾಗಗಳು ಸಹಕರಿಸಲೇ ಬೇಕಾದ್ದು ಇನ್ನೂ ಹೆಚ್ಚು ಅವಶ್ಯಕ. ಪರಸ್ಪರ ಸ್ನೇಹದಿಂದ ಒಗ್ಗಟ್ಟಿನಿಂದ ಬಾಳಬೇಕು, ಇಲ್ಲವಾದರೆ ಶಕ್ತಿಗುಂದಿ, ಛಿದ್ರಗೊಂಡು, ಸ್ವಾತಂತ್ರ್ಯ ನಾಶಮಾಡಿಕೊಳ್ಳಬೇಕು. ಆದ್ದರಿಂದ ಮೊದಲೆ ಮುಖ್ಯ ವ್ಯವಹಾರಯೋಗ್ಯ ಪ್ರಶ್ನೆ ಎಂದರೆ ಭಾರತದ ಸ್ವಾತಂತ್ರ್ಯ ರಕ್ಷಣೆ ಮತ್ತು ಪ್ರಗತಿ ಸಾಧನೆಗೂ, ಭಾರತದ ನಾನಾ ಭಾಗಗಳ ಒಳಾಡಳಿತ ಸ್ವಾತಂತ್ರ್ಯ ಮತ್ತು ಸಾಂಸ್ಕೃತಿಕ ಪ್ರಗತಿಗೂ ಅತ್ಯವಶ್ಯಕವಾದ ಬಾಂಧವ್ಯ ಯಾವುದು ? ಎಂದು. ಸಂರಕ್ಷಣೆಯ ಜೊತೆಗೆ ಅದಕ್ಕೆ ಪೋಷಕವಾದ ಕೈಗಾರಿಕೆ, ವಾಹನ ಸೌಕರ್ಯ, ವಾರ್ತಾ ಸೌಕರ್ಯ, ಮತ್ತು ಸ್ವಲ್ಪಮಟ್ಟಿನ ಆರ್ಥಿಕಯೋಜನೆ ಅಷ್ಟೇ ಮುಖ್ಯ ಇವೆ. ಸುಂಕ, ನಾಣ್ಯ ಚಲಾವಣೆ, ಹಣವಿನಿಮಯ ಮತ್ತು ಒಳನಾಡಿನ ವ್ಯಾಪಾರಗಳಲ್ಲಿ ಹೆಜ್ಜೆಹೆಜ್ಜೆಗೆ ನಿರ್ಬಂಧಗಳಿಲ್ಲದೆ ಇಡೀ ಭಾರತವೇ ಒಂದು ಸ್ವತಂತ್ರ ವ್ಯಾಪಾರ ಪ್ರದೇಶವಾದರೆ ಕ್ಷೇಮ. ದೇಶದ ಒಳಗೆ ಸುಂಕದ ಅಡ್ಡಗೋಡೆ ಹಾಕಿದರೆ ದೇಶದ ಪ್ರಗತಿಗೆ ಅಪಾಯ. ಇದೇರೀತಿ ಸಮಗ್ರ ದೇಶದ ಮತ್ತು ಪ್ರಾಂತಗಳ ದೃಷ್ಟಿಯಿಂದ ಕೇಂದ್ರದಿಂದ ಮತ್ತು ಒಟ್ಟುಗೂಡಿ ನಡೆಸಬೇಕಾದ ಅನೇಕ ವಿಷಯಗಳಿವೆ. ಪಾಕಿಸ್ತಾನ ಬರಲಿ ಬಿಡಲಿ ತಾತ್ಕಾಲಿಕ ಭಾವೋದ್ರೇಕದಿಂದ ಕುರುಡರಾದರೆ ವಿನಾ ಈ ಪ್ರಶ್ನೆಯಾವುದನ್ನೂ ನಾವು ಮರೆಯುವಂತಿಲ್ಲ. ವಿಮಾನಯಾನ ಸೌಕರ್ಯ ವಿಶೇಷ ಬೆಳೆಯುತ್ತಿರುವುದರಿಂದ ಯಾವುದಾದರೊಂದು ಬಗೆಯ ಅಂತರರಾಷ್ಟ್ರೀಯ ಹತೋಟಿ ಅವಶ್ಯವೆಂದು ಅಂತರರಾಷ್ಟ್ರೀಕರಣ ಸಮಸ್ಯೆ ಎದ್ದಿದೆ. ಎಲ್ಲ ದೇಶಗಳೂ ಒಪ್ಪುವ ಬುದ್ಧಿ ವಂತಿಕೆ ತೋರುವುವೋ ಇಲ್ಲವೊ ತಿಳಿಯದು. ಆದರೆ ಭಾರತದಲ್ಲಿ ಮಾತ್ರ ವಿಮಾನಮಾರ್ಗಗಳ ಪ್ರಗತಿ ಅಖಿಲ ಭಾರತದ ದೃಷ್ಟಿಯಿಂದಲೇ ಆಗಬೇಕು. ಭಾರತವು ವಿಭಜನೆಯಾದರೆ ಎರಡು ಭಾಗಗಳಲ್ಲೂ ಪ್ರತ್ಯೇಕ ವಿಮಾನಮಾರ್ಗ ಬೆಳೆಸಲು ಸಾಧ್ಯವೆನ್ನಲಾರೆ. ರಾಷ್ಟ್ರದ ಗಡಿದಾಟಿ ಬೆಳೆಯಬೇಕಾದ ಎಲ್ಲ

ಚಟುವಟಿಕೆಗಳಿಗೂ ಇದು ಅನ್ವಯಿಸುತ್ತದೆ. ಸಮಗ್ರಭಾರತದಲ್ಲಿ ಈ ಎಲ್ಲ ಪ್ರಗತಿಗೂ ಬೇಕಾದಷು ಅವಕಾಶವಿದೆ. ಆ ಅವಕಾಶ ವಿಭಜಿತ ಭಾರತದಲ್ಲಿ ದೊರೆಯಲಾರದು.

ಭಾರತವು ಒಂದು ಸ್ವತಂತ್ರ ಪ್ರಗತಿಪರ ರಾಷ್ಟ್ರವಾಗಿ ಉಳಿಯಬೇಕಾದರೆ ಪಾಕಿಸ್ತಾನ ಬರಲಿ, ಬಾರದೆ ಇರಲಿ ಅಖಿಲಭಾರತದ ದೃಷ್ಟಿಯಿಂದ ಕೆಲವು ಮುಖ್ಯ ಮೂಲ ಕೆಲಸ ಆಗಬೇಕಾದ್ದು ಅತ್ಯವಶ್ಯಕ. ಇಲ್ಲದಿದ್ದರೆ ಛಿದ್ರಗೊಂಡು, ಕ್ಷೀಣಿಸಿ ಕೊಳೆತು, ಪಾಚಿಗಟ್ಟಿ, ಭಾರತದ ಮತ್ತು ವಿಭಜಿತ ಭಾಗಗಳ ರಾಜಕೀಯ ಮತ್ತು ಆರ್ಥಿಕ ಸ್ವಾತಂತ್ರ್ಯ ಕಳೆದುಕೊಳ್ಳುವುದೇ ಉಳಿದ ಮಾರ್ಗ. ಒಬ್ಬ ಸುಪ್ರಸಿದ್ಧ ರಾಜಕಾರಣಿ ಹೇಳಿರುವಂತೆ “ ಭಾರತಕ್ಕೆ ಯುಗಧರ್ಮ ತೋರುವುದು ಎರಡು ಪರಸ್ಪರ ತೀರ ವಿರುದ್ಧ ಸ್ಪಷ್ಟ ದಾರಿಗಳು, ಒಂದು ಐಕಮತ್ಯ, ಮತ್ತು ಸ್ವಾತಂತ್ರ್ಯ, ಇನ್ನೊಂದು ವಿಭಜನೆ ಮತ್ತು ದಾಸ್ಯ.” ಆ ಐಕಮತ್ಯ ಯಾವರೀತಿ ಇರಬೇಕು, ಒಕ್ಕೂಟ ಎನ್ನೋಣವೇ? ಬೇರೆ ಏನಾದರೂ ಹೆಸರಿನಿಂದ ಕರೆಯಬೇಕೆ?–ಹೆಸರುಗಳಿಗೆ ತಮ್ಮದೇ ಒಂದು ಪ್ರಾಧಾನ್ಯತೆ ಮತ್ತು ಮೌಲ್ಯ ಇದ್ದರೂ ಅದೇ ಮುಖ್ಯ ವಲ್ಲ. ಮುಖ್ಯ ವಿಷಯವೆಂದರೆ ಕೆಲವು ಬೇರೆಬೇರೆ ಕಾರ್ಯಾಚರಣೆಗಳು ಅಖಿಲಭಾರತದ ದೃಷ್ಟಿಯಿಂದ ಒಟ್ಟಿನಲ್ಲಿ ನಡೆಯಬೇಕು. ಪ್ರಾಯಶಃ ಅವುಗಳಲ್ಲಿ ಕೆಲವು ಅಂತರ ರಾಷ್ಟ್ರೀಯ ಆಡಳಿತಕ್ಕೆ ಸೇರ ಬಹುದು. ಪ್ರಪಂಚವೇ ಸಂಕುಚಿತವಾಗುತ್ತಿದೆ. ಅದರ ಸಮಸ್ಯೆಗಳು ಎಲ್ಲ ರಾಷ್ಟ್ರಗಳ ಸಮಸ್ಯೆ ಯಾಗಿವೆ. ಮೂರುದಿನಗಳಿಗಿಂತ ಕಡಮೆ ಕಾಲದಲ್ಲಿ ಪ್ರಪಂಚದ ಯಾವ ಸ್ಥಳದಿಂದ ಹೊರಟರೂ ವಿಮಾನದಲ್ಲಿ ಭೂಪ್ರದಕ್ಷಿಣೆ ಮಾಡಬಹುದು. ವಾಯುಮಂಡಲದಾಚೆಯ ಪ್ರಯಾಣ ಸಾಧ್ಯವಾದರೆ ಈ ಪ್ರದಕ್ಷಿಣೆ ಇನ್ನೂ ಅತ್ಯಲ್ಪಕಾಲದಲ್ಲಿ ಮುಗಿಯಬಹುದು. ಪ್ರಪಂಚದ ವಿಮಾನ ಯಾನ ಸೌಕರ್ಯ ದಲ್ಲಿ ಭಾರತವು ಒಂದು ಪ್ರಮುಖ ಕೇಂದ್ರವಾಗಬೇಕು. ಪಶ್ಚಿಮ ಏಷ್ಯ ಮತ್ತು ಯೂರೋಪಿಗೂ, ಆಕಡೆ ಬರ್ಮ, ಚೀನಾಗಳಿಗೂ ರೈಲುಮಾರ್ಗವಾಗಬೇಕು. ಹಿಮಾಲಯದಾಚೆ ಭಾರತದಿಂದ ಉತ್ತರದಲ್ಲಿ ಅನತಿ ದೂರದಲ್ಲಿ ಕೈಗಾರಿಕೋದ್ಯಮದಲ್ಲಿ ಅಸಾಧ್ಯ ಪ್ರಗತಿ ಸಾಧಿಸಿ, ಭವಿಷ್ಯದಲ್ಲಿ ಇನ್ನೂ ಮಹತ್ಸಾಧನೆ ಮಾಡ ಬಲ್ಲ ಶಕ್ತಿಯಿರುವ ಸೋವಿಯಟ್ ರಷ್ಯ ಇದೆ. ಇದರ ಪ್ರಭಾವದಿಂದ ಭಾರತ ತಪ್ಪಿಸಿಕೊಳ್ಳಲು ಸಾಧ್ಯ ವಿಲ್ಲ; ಅನೇಕ ಕ್ರಿಯೆ ಪ್ರತಿಕ್ರಿಯೆಗಳಾಗುತ್ತಲಿವೆ.

ಐಕಮತ್ಯವೇ ಅಥವ ಪಾಕಿಸ್ಥಾನವೇ ಎಂಬ ಪ್ರಶ್ನೆಯನ್ನು ತಾತ್ವಿಕ ದೃಷ್ಟಿಯಿಂದ ಮತ್ತೆ ಭಾವಾ ವೇಶದಿಂದ ನೋಡತಕ್ಕದ್ದಲ್ಲ, ಇಂದಿನ ಪ್ರಪಂಚವನ್ನು ಕಣ್ಣುತೆರೆದು ನೋಡಿ ವ್ಯವಹಾರ ದೃಷ್ಟಿಯಿಂದ ವಿಷಯ ಪ್ರವೇಶಮಾಡಬೇಕಾಗಿದೆ. ಆ ಪ್ರವೇಶದಿಂದ ನಾವು ಕೆಲವು ತೀರ್ಮಾನಕ್ಕೆ ಬರುತ್ತೇವೆ. ಸಮಗ್ರ ಭಾರತ ದೃಷ್ಟಿಯಿಂದ ಕೆಲವು ಮುಖ್ಯ ಕಾರ್ಯಕ್ರಮ ಮತ್ತು ವಿಷಯಗಳಲ್ಲಿ ನಮ್ಮನ್ನು ಒಟ್ಟುಗೂಡಿಸುವ ಒಂದು ಲೇಪ ಇಂದು ನಮಗೆ ಬೇಕಾಗಿದೆ. ಅದು ಒಂದು ಉಳಿದು ಒಕ್ಕೂಟದ ಅಂಗಗಳಿಗೆ ಆದಷ್ಟು ಹೆಚ್ಚು ಸ್ವಾತಂತ್ರ್ಯವಿರತಕ್ಕದ್ದು. ಈ ಎರಡರ ಮಧ್ಯೆ ಒಟ್ಟಾಗಿ ಮತ್ತು ಪ್ರತ್ಯೇಕವಾಗಿ ನಡೆಸಬಹುದಾದ ಕೆಲವು ಅಧಿಕಾರಗಳಿರತಕ್ಕದ್ದು. ಈ ಅಧಿಕಾರವ್ಯಾಪ್ತಿ ಎಲ್ಲಿ ಮುಗಿಯುತ್ತದೆ, ಎಲ್ಲಿ ಆರಂಭವಾಗುತ್ತದೆ ಎಂಬ ವಿಷಯ ಭಿನ್ನಾಭಿಪ್ರಾಯ ಬರಬಹುದು. ಆ ಭಿನ್ನಾಭಿಪ್ರಾಯಗಳನ್ನು ವ್ಯವಹಾರ ದೃಷ್ಟಿಯಿಂದ ಪರಿಶೀಲಿಸಿದರೆ ಪರಿಹಾರವು ಸಾಮಾನ್ಯವಾಗಿ ಸುಲಭಸಾಧ್ಯವಾಗಬಹುದು.

ಇದೆಲ್ಲಕ್ಕೂ ಸ್ವಯಂಪ್ರೇರಿತ ಸಹಕಾರ ಭಾವನೆ, ಒತ್ತಾಯವಿಲ್ಲವೆಂಬ ನಂಬಿಕೆ ಮತ್ತು ಪ್ರತಿ ಯೊಂದು ಅಂಗ ಮತ್ತು ವ್ಯಕ್ತಿಗೆ ಸ್ವಾತಂತ್ರ್ಯ ಇದೆ ಎಂಬ ಅರಿವು ಅತ್ಯವಶ್ಯಕ. ಹಳೆಯ ಪಾಳೆಯಪಟ್ಟು ಗಳು ಹೋಗಬೇಕಲ್ಲದೆ ಹೊಸ ಪಾಳೆಯ ಪಟ್ಟುಗಳು ನಿರ್ಮಾಣ ಆಗದಿರುವುದೂ ಅಷ್ಟೇ ಮುಖ್ಯ. ಕೆಲವು ಸಲಹೆಗಳಂತೆ ಪಂಗಡ ಎಂಬ ತಾತ್ವಿಕ ಭಾವನೆಯಿಂದ, ಆ ಪಂಗಡದ ವ್ಯಕ್ತಿಗಳನ್ನೇ ಮರೆತು ಒಂದು ಪಂಗಡದ ಒಬ್ಬನನ್ನು ಬೇರೊಂದು ಪಂಗಡದ ಎರಡು ಅಥವ ಮೂರು ಜನರಿಗೆ ಸಮಮಾಡಿದರೆ ಹೊಸ ಪಾಳೆಗಾರಿಕೆ ಸೃಷ್ಟಿಸಿದಂತಾಗುತ್ತದೆ. ಅದರಿಂದ ಅಸಮಾಧಾನವೂ ಅಭದ್ರತೆಯೂ ವಿಶೇಷ ಹೆಚ್ಚುತ್ತದೆ.

ಒಂದು ನಿರ್ದಿಷ್ಟ ಪ್ರದೇಶ ಯಾವುದೇ ಇರಲಿ ಸಂಯುಕ್ತ ಭಾರತ ಅಥವ ಭಾರತದ ಒಕ್ಕೂಟದಿಂದ ಬೇರೆಯಾಗಲು ಸ್ವತಂತ್ರವಿರಬೇಕು ಎಂದು ವಾದ ಹೂಡಿ ಸೋವಿಯಟ್ ರಷ್ಯದ ಉದಾಹರಣೆ

ಕೊಡಲಾಗುತ್ತಿದೆ. ರಷ್ಯದಿಂದ ಪೂರ್ಣಭಿನ್ನ ಪರಿಸ್ಥಿತಿ ಇರುವ ಭಾರತಕ್ಕೆ ಅದು ಅನ್ವಯಿಸುವುದಿಲ್ಲ. ಆ ಹಕ್ಕಿಗೆ ಯಾವ ವ್ಯವಹಾರಿಕ ಬೆಲೆಯೂ ಇಲ್ಲ. ಭಾರತದ ಇಂದಿನ ಭಾವೋದ್ರಿಕ್ತ ವಾತಾವರಣ ದಲ್ಲಿ ಬಲಾತ್ಕಾರವಿಲ್ಲ, ಬಿಡುಗಡೆಗೆ ಅವಕಾಶವಿದೆ ಎಂಬ ಭರವಸೆ ಬಹಳ ಅವಶ್ಯವಿರುವುದ ರಿಂದ ಭವಿಷ್ಯದ ದೃಷ್ಟಿಯಿಂದ ಅದಕ್ಕೆ ಒಪ್ಪಿದರೂ ಒಪ್ಪಬಹುದು. ಒಂದು ರೀತಿ ಕಾಂಗ್ರೆಸ್ ಆಗಲೇ ಈ ತತ್ವ ಒಪ್ಪಿದೆ, ಆದರೆ ಈ ಹಕ್ಕು ಕೇಳುವ ಮುಂಚೆ ಈ ಮೊದಲೇ ತಿಳಿಸಿದ ಎಲ್ಲ ಸಾಮಾನ್ಯ ಸಮಸ್ಯೆ ಗಳನ್ನು ಮುಂಜಾಗ್ರತೆಯಿಂದ ಯೋಚಿಸಿ ನಿರ್ಧಾರಕ್ಕೆ ಬರುವ ಅವಶ್ಯಕತೆ ಇದೆ. ಅಲ್ಲದೆ ವಿಭಜನೆಯಲ್ಲಿ, ಪಾಲಿನಲ್ಲಿ ಆರಂಭದಲ್ಲೆ ಸ್ವಾತಂತ್ರ್ಯದ ಸಸಿ ಕಂದಿಸುವ ಮತ್ತು ಸ್ವತಂತ್ರ ರಾಷ್ಟ್ರೀಯ ರಾಜ್ಯಸ್ಥಾಪನೆಗೆ ಅಡ್ಡಿಬರುವ ವಿನಾಶಕಾರಕ ಘೋರ ಅಪಾಯವಿದೆ. ಸಹಿಸಲಸಾಧ್ಯವಾದ ಸಮಸ್ಯೆಗಳು ಉದ್ಭವಿಸಿ ಮುಖ್ಯ ಪ್ರಶ್ನೆಯನ್ನು ಹಿಂದಕ್ಕೆ ತಳ್ಳುತ್ತವೆ. ಎಲ್ಲೆಲ್ಲೂ ವಿಚ್ಛೇದನ ಭಾವನೆ ಹರಡುತ್ತದೆ. ಒಟ್ಟಿಗೆ ಒಗ್ಗಟ್ಟಿನಿಂದ ಬಾಳಲು ಸಿದ್ಧವಿದ್ದ ಇತರ ಪಂಗಡಗಳು ಸಹ ತಮಗೂ ಪ್ರತ್ಯೇಕ ರಾಷ್ಟ್ರಗಳನ್ನೋ ಅಥವ ಇತರರ ಹಕ್ಕು ಮೊಟಕುಮಾಡಿ ವಿಶೇಷ ಹಕ್ಕು ಕೊಡ್ಡಿರೆಂದೋ ಕೇಳುತ್ತಾರೆ. ದೇಶೀಯ ಸಂಸ್ಥಾನಗಳ ಸಮಸ್ಯೆ ಇನ್ನೂ ಕಠಿನವಾಗುತ್ತದೆ; ಅವುಗಳಿಗೆ ಹೊಸ ಜೀವದಾನ ದೊರೆಯುತ್ತದೆ. ಸಾಮಾಜಿಕ ಮತ್ತು ಆರ್ಥಿಕ ಸಮಸ್ಯೆಗಳ ಪರಿಹಾರ ಇನ್ನೂ ಕಠಿನವಾಗುತ್ತದೆ. ಈ ಎಲ್ಲ ಪ್ರಳಯಾಂತಕ ಪ್ರಶ್ನೆಗಳ ಪರಿಹಾರವಾಗಿ ಒಂದು ಸ್ವತಂತ್ರ ರಾಷ್ಟ್ರ ಬದುಕಬಹುದೆಂದು ಊಹಿಸುವುದು ಸಹ ಕಷ್ಟ; ಬದುಕಿದರೂ ಅನೇಕ ಅಪರಿ ಹಾರ್ಯ ಸಮಸ್ಯೆಗಳ, ವೈಪರೀತ್ಯಗಳ ಭಾರದಿಂದ ಕುಸಿದ ಒಂದು ಕರುಣಾಜನಕ ವ್ಯಂಗ್ಯಚಿತ್ರವಾಗುತ್ತದೆ.

ಭಾರತದಿಂದ ಪ್ರತ್ಯೇಕವಾಗುವ ಅಧಿಕಾರ ಉಪಯೋಗಿಸುವ ಮುಂಚೆ ನ್ಯಾಯವಾಗಿ ವಿಧಾಯಕ ವಾಗಿ, ಅಧಿಕಾರ ನಡೆಸುವ, ಸ್ವತಂತ್ರ ಭಾರತ ಮೊದಲು ಅಸ್ತಿತ್ವದಲ್ಲಿ ಬರಬೇಕು. ಪರಕೀಯ ಶಕ್ತಿಗಳು ಇಲ್ಲಿಂದ ಕಾಲು ಕಿತ್ತಮೇಲೆ, ನಿಜವಾದ ಸಮಸ್ಯೆಗಳು ದೇಶದ ಎದುರು ನಿಂತಾಗ ಇಂದಿನ ಭಾವೋನ್ಮಾದಕ್ಕೆ ಬಲಿಬಿದ್ದು ಮುಂದೆ ವ್ಯಸನಕರ ದುಷ್ಪರಿಣಾಮಗಳಿಗೆ ಒಳಗಾಗದಂತೆ ವಾಸ್ತವಿಕ ದೃಷ್ಟಿಯಿಂದ ನಿಷ್ಪಕ್ಷಪಾತ ಬುದ್ಧಿಯಿಂದ ಆ ಪ್ರಶ್ನೆ ಯೋಚಿಸಲು• ಅವಕಾಶವಾಗಬಹುದು. ಆದ್ದರಿಂದ ಸ್ವತಂತ್ರಭಾರತದ ಸ್ಥಾಪನೆಯ ನಂತರ ಹತ್ತುವರ್ಷಗಳ ಒಂದು ಮಿತಿ ಕಲ್ಪಿಸಬಹುದು. ಅನಂತರ ವಿಧಾಯಕ ರೀತಿಯಲ್ಲಿ ಸಂಬಂಧಪಟ್ಟ ಪ್ರದೇಶದ ಜನರು ಸ್ಪಷ್ಟ ಇಷ್ಟವಿದ್ದರೆ ಆ ಭಾಗ ಪ್ರತ್ಯೇಕವಾಗಬಹುದು.

ಭಾರತದ ಇಂದಿನ ಪರಿಸ್ಥಿತಿಯಿಂದ ನಮ್ಮಲ್ಲಿ ಅನೇಕರಿಗೆ ಬಹು ಬೇಸರವಾಗಿದೆ. ಏನಾದರೂ ಒಂದು ಮಾರ್ಗ ಕಂಡುಹಿಡಿಯಲು ಕಾತರರಿದ್ದೇವೆ. ಇದುವರೆಗೆ ಕತ್ತು ಹಿಸುಕಿ ಉಸುರುಗಟ್ಟಿರುವ ಸ್ಥಿತಿಯಿಂದ ಸ್ವಲ್ಪ ಉಸಿರಾಡಲು ಅವಕಾಶ ಸಿಕ್ಕೀತೆಂದು ಆಸೆಪಟ್ಟು, ಕೈಗೆಸಿಕ್ಕ ಯಾವ ಹುಲ್ಲುಕಡ್ಡಿ ಯಾದರೂ ಹಿಡಿದು ಕೊಳ್ಳೋಣವೆಂದು ಕೆಲವರು ಸಿದ್ಧರಿದ್ದೇವೆ. ಅದು ಸ್ವಾಭಾವಿಕ ಸರಿ. ಆದರೂ ಕೋಟ್ಯಂತರ ಜನರಹಿತ ಮತ್ತು ಪ್ರಪಂಚ ಶಾಂತಿಯ ಭವಿಷ್ಯದ ಪ್ರಶ್ನೆಗಳಿಗೆ ಸಂಬಂಧಿಸಿದ ಈ ಜೀವ ಸಾವಿನ ಪ್ರಶ್ನೆಗಳನ್ನು ಉನ್ಮಾದಗ್ರಸ್ತ ಮನಸ್ಸಿನಿಂದ, ಜೂಜುಗಾರಿಕೆ ದೃಷ್ಟಿಯಿಂದ ಬಿಡಿಸಲೆತ್ನಿಸುವುದರಲ್ಲಿ ಬಹಳ ಅಪಾಯವಿದೆ. ಭಾರತದಲ್ಲಿ ನಾವು ಸದಾ ವಿನಾಶದ ಅಂಚಿನಲ್ಲಿ ವಾಸಮಾಡುತ್ತಿದ್ದೇವೆ. ಕಳೆದ ವರ್ಷ ಬಂಗಾಲ ಮತ್ತು ಇತರ ಕಡೆಗಳಲ್ಲಿ ಆದಂತೆ ಅನೇಕಬಾರಿ ವಿಪತ್ತಿಗೆ ಈಡಾಗಿದ್ದೇವೆ. ಬಂಗಾಲ ಕ್ಷಾಮ ಮತ್ತು ಅದರ ಪರಿಣಾಮಗಳು ಹಿಡಿತಕ್ಕೆ ತರಲಾಗದಿದ್ದ ಅಥವ ಮುನ್ನೆಚ್ಚರಿಕೆಯಿಂದ ನಿವಾರಿಸಲಾ ಗದಿದ್ದ ದುರಂತ ಆಕಸ್ಮಿಕಗಳಲ್ಲಿ ಶತಮಾನಗಳಿಂದ ಅದರ ಜೀವ ಸತ್ವವನ್ನೇ ಕ್ಷೀಣಿಸುತ್ತಿರುವ ಪ್ರಬಲ ಜನ್ಮಾಂತರ ಅಂತರ್ಗತ ರೋಗದಿಂದ ನರಳುತ್ತಿರುವ ಭಾರತದ ಭೀಕರ ವಾಸ್ತವ ಚಿತ್ರ. ಆ ರೋಗ ನಿರ್ಮೂಲನ ಚಿಕಿತ್ಸೆಗೆ ನಮ್ಮ ಸರ್ವಶಕ್ತಿ ಉಪಯೋಗಿಸದಿದ್ದರೆ ಆ ರೋಗ ಇನ್ನೂ ಉಲ್ಬಣಿಸಿ ಇನ್ನೂ ವಿಪತ್ಕಾರಕ ಸ್ವರೂಪ ತಾಳಬಹುದು. ವಿಭಜಿತ ಭಾರತದ ಪ್ರತಿಯೊಂದು ಭಾಗವೂ ತನ್ನ ಪಾಡು ತಾನು ನೋಡಿಕೊಂಡು ಇತರ ಭಾಗಗಳೊಂದಿಗೆ ಸಹಕರಿಸದೆ ಅಲಕ್ಷ್ಯಮಾಡಿದರೆ ಈ ರೋಗ ಇನ್ನೂ ವಿಷಮಿಸಿ ನಿರಾಶೆಯ ನಿಸ್ಸಹಾಯಕತೆಯ ಗೋಳಿನ ಪರಂಪರೆ ಅನುಭವಿಸಬೇಕಾಗುತ್ತದೆ. ಈಗಾಗಲೇ ಕಾಲ ಮಿಂಚಿ ಹೋಗಿದೆ, ಇನ್ನಾದರೂ ಮುಂದುವರಿಯಬೇಕು. ಬಂಗಾಲ ಕ್ಷಾಮದಿಂದ ಸಹ ನಮಗೆ

ಬುದ್ಧಿ ಬರಬಾರದೆ? ಇನ್ನೂ ರಾಜಕೀಯ ಶತಾದೇಯಗಳು, ವಿಶೇಷ ಪ್ರಾತಿನಿಧ್ಯಗಳು, ರಾಜಕೀಯ ಸಮತೋಲನೆ, ಪ್ರತಿಬಂಧಕಗಳು, ವಿಶಿಷ್ಟ ಸಂಗಡಗಳ ಹಕ್ಕುದಾರಿ, ಹೊಸ ಹಕ್ಕುದಾರಿಗಳ ಸ್ಥಾಪನೆ, ತಾವು ಮುಂದುವರಿಯಲು ಇಷ್ಟ ಅಥವ ಸಾಧ್ಯವಿಲ್ಲದೆ ಇದ್ದರೂ ಇತರರ ಪ್ರಗತಿಗೆ ಅಡ್ಡಬರುವುದು, ಬಂಡವಾಳಗಾರಿಕೆ, ವಿಶೇಷ ಆರ್ಥಿಕ ಮತ್ತು ಸಾಮಾಜಿಕ ಪ್ರಗತಿಗೆ ವಿರೋಧ, ಮೇಲೆ ಮೇಲೆ ತೋರುಗಾಣಿಕೆಯ ಕೆಲವು ಬದಲಾವಣೆಗಳಿಂದ ಭಾರತದ ಇಂದಿನಂತೆ ಮುಂದುವರಿದರೆ ಸಾಕೆಂಬ ಭಾವನೆ ಈ ರೀತಿ ಯೋಚಿಸುವವರೇ ಭಾರತದಲ್ಲಿ ಇನ್ನೂ ಅನೇಕರಿದ್ದಾರೆ. ಇದು ಮೂರ್ಖತನದ ಮಾರ್ಗ.

ಇಂದಿನ ಸಮಸ್ಯೆಗಳೇ ಬೃಹದಾಕಾರ ತಾಳಿ ನಮ್ಮ ಮನಸ್ಸು ಕದಡಿವೆ. ಆದರೂ ದೂರದೃಷ್ಟಿಯಿಂದ ಅವುಗಳಿಗೆ ವಿಶೇಷ ಮಹತ್ವ ಕೊಡಬಾರದು. ಬುರುಗಿನ ಬೆಟ್ಟದಂತೆ ಮೇಲೆ ತೇಲುವ ಕ್ಷುಲ್ಲಕ ವಿಷಯಗಳ ಕೆಳಗೆ ಪ್ರಬಲ ಪ್ರಳಯಾಂತಕ ಶಕ್ತಿಗಳು ಪ್ರವಹಿಸುತ್ತಿರಬಹುದು. ಆದ್ದರಿಂದ ಇಂದಿನ ಸಮಸ್ಯೆ ಸ್ವಲ್ಪ ಬದಿಗಿಟ್ಟು ದೂರ ದೃಷ್ಟಿಯಿಂದ ಭವಿಷ್ಯದ ಭವ್ಯತೆ ನೋಡಿದರೆ ಭಾರತವು ಸ್ವತಂತ್ರ ಅಂಗಾಂಗ ರಾಜ್ಯಗಳ ಶಕ್ತಿಯುತ ಸಂಯುಕ್ತ ರಾಜ್ಯವಾಗಿ, ನೆರೆಯವರೊಂದಿಗೆ ಸ್ನೇಹದಿಂದ ಬಾಳಿ, ಪ್ರಪಂಚ ಸಮಸ್ಯೆಗಳಲ್ಲಿ ಪ್ರಮುಖ ಪಾತ್ರವಹಿಸಿ, ಮುಂದುವರಿಯುವ ದಿವ್ಯ ನೋಟ ಕಾಣಬಹುದು. ಪ್ರಪಂಚದಲ್ಲಿ ತಮ್ಮ ಕಾಲಮೇಲೆ ತಾವು ನಿಲ್ಲಬಹುದಾದಷ್ಟು ಸಂಪತ್ಸಮೃದ್ಧಿ ಮತ್ತು ಶಕ್ತಿಯುಳ್ಳ ಅತ್ಯಲ್ಪ ಸಂಖ್ಯೆಯ ರಾಷ್ಟ್ರಗಳಲ್ಲಿ ಭಾರತವೂ ಒಂದು. ಇಂದು ಅಂಥ ರಾಷ್ಟ್ರಗಳೆಂದರೆ ಅಮೆರಿಕೆಯ ಸಂಯುಕ್ತ ಸಂಸ್ಥಾನಗಳು ಮತ್ತು ಸೋವಿಯಟ್ ರಷ್ಯ. ತನ್ನ ಸಾಮ್ರಾಜ್ಯ ಸಂಪತ್ತು ಸೇರಿದರೆ ಮಾತ್ರ ಬ್ರಿಟನ್ ಆ ಶ್ರೇಣಿಯಲ್ಲಿ ಸೇರಿಸಬಹುದು. ಆಗಲೂ ಪ್ರಪಂಚದ ಮೂಲೆ ಮೂಲೆಗಳಲ್ಲಿ ಹರಡಿ ಅಸಮಾಧಾನದಿಂದ ತುಂಬಿದ ಸಾಮ್ರಾಜ್ಯ ಒಂದು ದೌರ್ಬಲ್ಯ. ಆ ಶ್ರೇಣಿಯಲ್ಲಿ ಸೇರಲು ಚೀಣಾ ಮತ್ತು ಭಾರತ ಎರಡು ದೇಶಗಳಿಗೂ ಶಕ್ತಿ ಇದೆ. ಎರಡರಲ್ಲೂ ಒಂದು ಬಗೆಯ ಐಕಮತ್ಯ; ಒಂದೇ ಬುಡಕಟ್ಟು, ಅಪಾರ ಪ್ರಕೃತಿ ಸಂಪತ್ತು, ಜನಸಂಪತ್ತು, ಕಾರ್ಯ ಕೌಶಲ್ಯ ಮತ್ತು ಶಕ್ತಿಗಳು ಇವೆ. ಕೈಗಾರಿಕೋದ್ಯಮದ ಪ್ರಗತಿಗೆ ಪ್ರಾಯಶಃ ಭಾರತದ ಪ್ರಕೃತಿ ಸಂಪತ್ತು ನಾನಾರೀತಿಯಿಂದ ಹೆಚ್ಚು ಸಮೃದ್ಧವಿದೆ. ಪರದೇಶಗಳಿಗೆ ಬೇಕಾದ ಸಾಮಾನು ಕಳುಹಿಸಿ ತನಗೆ ಬೇಕಾದ ಸಾಮಾನು ಪರದೇಶಗಳಿಂದ ತರಿಸಿಕೊಳ್ಳಲು ಬೇಕಾದ ಸಾಧನ ಸಂಪತ್ತೂ ಇದೆ. ಈ ನಾಲ್ಕು ರಾಷ್ಟ್ರ ಬಿಟ್ಟರೆ ಬೇರೆ ಯಾವ ರಾಷ್ಟ್ರಕ್ಕೂ ಇಂದಾಗಲಿ ಮುಂದಾಗಲಿ ಆ ಸೌಲಭ್ಯವಿರುವುದಿಲ್ಲ. ಯೂರೋಪಿನಲ್ಲಿ ಅಥವ ಇತರ ಕಡೆ ಅನೇಕ ರಾಷ್ಟ್ರಗಳು ಸೇರಿ ದೊಡ್ಡ ಸಂಯುಕ್ತ ರಾಷ್ಟ್ರಗಳಾಗಬಹುದು, ಒಂದುಗೂಡಬಹುದು ಮತ್ತು ಬಹುರಾಷ್ಟ್ರ ರಾಜ್ಯಸ್ಥಾಪಿಸಬಹುದು.

ಹಿಂದೆ ಅಟ್ಲಾಂಟಿಕ್ ಸಾಗರವಿದ್ದಂತೆ ಮುಂದೆ ಪೆಸಿಫಿಕ್ ಸಾಗರ ಪ್ರಪಂಚದ ಜೀವನಾಡಿಯಾಗಬಹುದು. ಪೆಸಿಫಿಕ್ ಸಾಗರದ ರಾಷ್ಟ್ರವಲ್ಲದಿದ್ದರೂ ಭಾರತವು ಮುಂದೆ ಅಲ್ಲಿ ವಿಶೇಷ ಪ್ರಭಾವ ಬೀರುತ್ತದೆ. ಹಿಂದೂ ಸಾಗರ, ಆಗ್ನೇಯ ಏಷ್ಯ ಮತ್ತು ಮಧ್ಯ ಪ್ರಾಚ್ಯಗಳವರೆಗಿನ ಆರ್ಥಿಕ ಮತ್ತು ರಾಜಕೀಯ ಚಟುವಟಿಕೆಗಳಿಗೆ ಭಾರತ ಒಂದು ದೊಡ್ಡ ಕೇಂದ್ರವಾಗುತ್ತದೆ. ಅತಿವೇಗದಿಂದ ಪ್ರಗತಿಹೊಂದುವ ಪ್ರಪಂಚದ ಒಂದು ಮುಖ್ಯ ಭಾಗದಲ್ಲಿ ಅದಕ್ಕಿರುವ ಸ್ಥಾನಬಲದಿಂದ ಮುಂದೆ ಭಾರತಕ್ಕೆ ಆರ್ಥಿಕ ಮತ್ತು ಆಯಕಟ್ಟಿನ ಪ್ರಾಮುಖ್ಯತೆ ದೊರೆಯುತ್ತದೆ. ಭಾರತದ ಅಕ್ಕಪಕ್ಕದ ಹಿಂದೂ ಸಾಗರದ ರಾಷ್ಟ್ರಗಳಾದ ಇರಾಣ, ಇರಾಕ್, ಆಫ್ಘಾನಿಸ್ಥಾನ, ಭಾರತ, ಸಿಂಹಳ, ಬರ್ಮ, ಮಲಯ, ಜಾವ ಮುಂತಾದ ರಾಷ್ಟ್ರಗಳು ಪ್ರಾದೇಶಿಕ ದೃಷ್ಟಿಯಿಂದ ಒಟ್ಟುಗೂಡಿದರೆ ಅಲ್ಪ ಸಂಖ್ಯಾತರ ಪ್ರಶ್ನೆಯೇ ಉಳಿಯುವುದಿಲ್ಲ; ಉಳಿದರೂ ಬೇರೊಂದು ದೃಷ್ಟಿಯಿಂದ ನೋಡಬೇಕಾಗುತ್ತದೆ.

ಕ್ರಮೇಣ ಭಾರತವು ಮಧ್ಯ ಪ್ರಾಚ್ಯವನ್ನೆಲ್ಲ ಒಳಗೊಂಡು, ಪೂರ್ವದಲ್ಲಿ ಚೀನಾ ಜಪಾನ್‌ಗಳ ಜನತಾರಾಜ್ಯ ಪಶ್ಚಿಮದಲ್ಲಿ ಈಜಿಪ್ಟ್—ಅರೇಬಿಯಾ—ತುರ್ಕಿಗಳ ಹೊಸ ಸಂಯುಕ್ತ ರಾಷ್ಟ್ರಕ್ಕೂ, ಮತ್ತು ಉತ್ತರದಲ್ಲಿ ಸೋವಿಯಟ್ ರಷ್ಯ ಈ ಮಧ್ಯೆ ರಾಷ್ಟ್ರೀಯತೆ ಮೇರೆ ಮೀರಿದ ಒಂದು ಬೃಹದ್ರಾಷ್ಟ್ರವಾಗಲು ಅವಕಾಶವಿದೆ; ಭಾರತ ಒಂದು ಏಕರಾಷ್ಟ್ರೀಯತಾತೀತ ರಾಜ್ಯ ಎಂದು ಜಿ.ಡಿ.ಎಚ್. ಕೋಲ್ ಹೇಳು

ತ್ತಾನೆ. ಇದೆಲ್ಲ ಕೇವಲ ಕಲ್ಪನೆ. ಆ ಬಗೆಯ ಪರಿವರ್ತನೆಗಳು ಆಗುತ್ತವೆಯೋ ಇಲ್ಲವೊ ಹೇಳಲು ಸಾಧ್ಯವಿಲ್ಲ. ಯಾವುದಾದರೂ ಒಂದು ಪ್ರಬಲ ವಿಶ್ವಬಾಂಧವ್ಯ ಪ್ರೇಮದಿಂದ ಏಕೀಭವಿಸಿ ಕೆಲಸಮಾಡಲು ಸಾಧ್ಯವಿದ್ದರೆ ಆರೀತಿ ದೊಡ್ಡ ದೊಡ್ಡ ಜನಾಂಗ ಅತೀತ ಪ್ರದೇಶಗಳನ್ನಾಗಿ ಸಹ ಪ್ರಪಂಚ ವಿಭಜಿಸಲು ನನಗೆ ಇಷ್ಟವಿಲ್ಲ. ಪ್ರಪಂಚದ ಜನತೆ ಪ್ರಪಂಚದ ಐಕಮತ್ಯ, ಮತ್ತು ಪ್ರಪಂಚ ಸಂಸ್ಥೆಯನ್ನು ಮೂಢತನದಿಂದ ನಿವಾರಿಸಿದರೆ ಒಳಾಡಳಿತ ಸ್ವಾತಂತ್ರ್ಯ ಇಟ್ಟುಕೊಂಡು ರೂಪುಗೊಂಡ ಈ ಜನಾಂಗ ಅತೀತ ಮಹಾರಾಷ್ಟ್ರಗಳು ಜನ್ಮತಾಳುವುದೇ ನಿಶ್ಚಯ. ಸಣ್ಣ ಜನಾಂಗಗಳ ರಾಜ್ಯಗಳ ಕಾಲ ಮುಗಿಯಿತು. ಸಂಸ್ಕೃತಿ ದೃಷ್ಟಿಯಿಂದ ಸ್ವತಂತ್ರ ಉಳಿಯಬಹುದು, ಆದರೆ ಸ್ವತಂತ್ರ ರಾಜಕೀಯ ಪ್ರದೇಶವಾಗಿ ಉಳಿಯಲು ಸಾಧ್ಯವಿಲ್ಲ.

ಭವಿಷ್ಯ ಏನೇ ಇರಲಿ ಪ್ರಪಂಚದ ಮೇಲೆ ಭಾರತ ತನ್ನ ಪ್ರಭಾವ ಬೀರಬಲ್ಲುದಾದರೆ ಪ್ರಪಂಚಕ್ಕೆ ಕ್ಷೇಮ. ಏಕೆಂದರೆ ಅದು ಯಾವಾಗಲೂ ಶಾಂತಿ ಮತ್ತು ಸಹಕಾರದ ಪರ ಮತ್ತು ಆಕ್ರಮಣದ ವಿರುದ್ಧ.

## ೧೨. ವಾಸ್ತವಿಕ ಪರಿಜ್ಞಾನ ಮತ್ತು ಪ್ರಪಂಚ ರಾಜಕೀಯ : ಪ್ರಪಂಚ ಆಕ್ರಮಣವೇ ? ಅಥವ ಪ್ರಪಂಚ ಸಂಸ್ಥೆಯೆ? ಅಮೆರಿಕೆಯ ಸಂಯುಕ್ತ ಸಂಸ್ಥಾನಗಳು ಮತ್ತು ಸೋವಿಯಟ್ ರಷ್ಯದ ಸಂಯುಕ್ತ ಸಂಸ್ಥಾನಗಳು

ಯೂರೋಪಿನ ಯುದ್ಧ ಕೊನೆಯ ಅಂಕ ಪ್ರವೇಶಮಾಡಿದಂತೆ ಇದೆ. ಪೂರ್ವ ಪಶ್ಚಿಮ ದಿಕ್ಕುಗಳೆರಡರಿಂದಲೂ ಮುನ್ನುಗ್ಗುತ್ತಿರುವ ಸೈನ್ಯಗಗಳೆದುರು ನಾಜಿಶಕ್ತಿ ಕುಸಿದು ಬೀಳುತ್ತಿದೆ. ಸ್ವಾತಂತ್ರ್ಯದ ಹೋರಾಟಕ್ಕೆ ಮಾತೃಸ್ಥಾನವಾದ ಸುಂದರ, ಗಂಭೀರ ಪ್ಯಾರಿಸ್ ಪುನಃ ಸ್ವತಂತ್ರವಾಗಿದೆ. ಯುದ್ಧ ಸಮಸ್ಯೆಗಳಿಗಿಂತ ಕಠಿಣ ಶಾಂತಿ ಸಮಸ್ಯೆಗಳು ಮಾನವನ ಮನಸ್ಸು ಕದಡಲು ಆರಂಭಿಸುತ್ತವೆ. ಇವೆಲ್ಲದರ ಹಿಂದೆ ಮೊದಲನೆಯ ಪ್ರಪಂಚ ಯುದ್ಧಾನಂತರದ ವರ್ಷಗಳ ಮಹಾ ಅಪಯಶಸ್ಸಿನ ಬೃಹದಾಕಾರದ ಕರಿನೆರಳು ಕಣ್ಣನ್ನು ಕವಿಯುತ್ತಿದೆ. ಇನ್ನು ಸಾಕು, ಎಂಬ ಕೂಗು ಕೇಳುತ್ತಿದೆ, ೧೯೧೮ ರಲ್ಲಿ ಸಹ ಅದೇ ಶ್ರುತಿ ಇತ್ತು.

ಹದಿನೈದು ವರ್ಷಗಳ ಹಿಂದೆ ೧೯೨೯ ರಲ್ಲಿ "ಈ ಕತೆಯಿಂದ ನಮ್ಮ ಭವಿಷ್ಯದ ನಿರೂಪಣೆಗೆ ಆವಶ್ಯವಿರುವ ಜ್ಞಾನ ಮತ್ತು ಅರ್ಥವನ್ನು ಮಾನವ ಕುಲ ಕಲಿಯಬೇಕು. ರಾಷ್ಟ್ರ ರಾಷ್ಟ್ರಗಳ ಮಧ್ಯೆ ಏಳುವ ಕಲಹಗಳಿಗೂ ಆ ಕಲಹ ಕೊನೆಗಾಣಿಸಲು ಹೂಡುವ ಯುದ್ಧದಿಂದ ಒದಗುವ ಸಂಕಟಕ್ಕೂ ಯುದ್ಧದ ಘೋರ ಮಹಾಯಜ್ಞಕುಂಡದಲ್ಲಿ ಕೊಟ್ಟ ಪೂರ್ಣಾಹುತಿಯಿಂದ ದೊರಕುವ ಶುಷ್ಕಲಾಭಕ್ಕೂ ನಿದಾನವಾಗಿ ಪುನರ್ರಚನೆ ಮಾಡಬೇಕಾದ ದೀರ್ಘಕಾಲಕ್ಕೂ ಅತಿ ಕಷ್ಟದಿಂದ ಎದುರಿಸಬೇಕಾದ ಭಯಂಕರ ಅಪಾಯಗಳಿಗೂ ಕೂದಲೆಳೆಯಿಂದ, ಒಂದು ನಾಣ್ಯದ ಒಂದು ತಿರುವಿನಲ್ಲಿ ಅಥವ ಕೇವಲ ಆಕಸ್ಮಿಕದಿಂದ ಪಾರಾದ ಗಂಡಾಂತರಗಳಿಗೂ ಇರುವ ಅಪಾರ ಅಂತರವನ್ನು ಅರಿತರೆ ಇನ್ನೊಂದು ಮಹಾಯುದ್ಧ ತಪ್ಪಿಸುವ ಕಾರ್ಯವೆ ಮಾನವಕುಲದ ಪ್ರಥಮ ಕರ್ತವ್ಯ ಆಗಬೇಕು." ಎಂದು ವಿನ್‌ಸ್ಟನ್ ಚರ್ಚಿಲ್ ಹೇಳಿದಾನೆ.

ಯುದ್ಧಕಾಲದಲ್ಲೂ ಶಾಂತಿ ಸಮಯದಲ್ಲೂ ಪ್ರಮುಖ ಪಾತ್ರವಹಿಸಿ ಮಹಾವಿಪತ್ತಿನ ಸಂಕಟ ಸಮಯದಲ್ಲಿ ಅದ್ಭುತ ಧೈರ್ಯದಿಂದ ತನ್ನ ದೇಶದ ನಾಯಕತ್ವ ವಹಿಸಿ, ವಿಜಯೋತ್ಸವದಲ್ಲಿ ತನ್ನ ದೇಶಕ್ಕಾಗಿ ಮಹಾ ಕನಸು ಕಂಡ ಚರ್ಚಿಲ್‌ಗೆ ಪೂರ್ಣ ಜ್ಞಾನೋದಯವಾಗಿರಬೇಕು. ಮೊದಲನೆ ಪ್ರಪಂಚ ಯುದ್ಧದ ನಂತರ ಬ್ರಿಟಿಷ್ ಸೈನ್ಯಗಳು ಭಾರತದ ಗಡಿಯಿಂದ ಇರಾಣ, ಇರಾಕ್, ಪ್ಯಾಲೆಸ್ಟೈನ್ ಮತ್ತು ಕಾನ್‌ಸ್ಟಾಂಟಿನೋಪಲ್‌ವರೆಗೆ ಸಿರಿಯ ಮುಂತಾಗಿ ಪಶ್ಚಿಮ ಏಷ್ಯ ಎಲ್ಲವನ್ನೂ ಆಕ್ರಮಣ ಮಾಡಿದವು. ಆಗ ಚರ್ಚಿಲ್ ಬ್ರಿಟನ್ನಿನ ಮಧ್ಯಪ್ರಾಚ್ಯ ಸಾಮ್ರಾಜ್ಯದ ಕನಸು ಕಂಡನು. ಆದರೆ ವಿಧಿವೈಚಿತ್ರ್ಯ ಬೇರೆ ಇತ್ತು. ಆತನಿಗೆ ಈಗ ಕಾಣುತ್ತಿರುವ ಮುಂದಿನ ಮಹಾ ಕನಸುಗಳೇನು? ಈಗ ಸೆರೆಮನೆಯಲ್ಲಿರುವ ಧೀರ, ಪ್ರಸಿದ್ಧ, ನನ್ನ ಸಹೋದ್ಯೋಗಿಯೊಬ್ಬರು "ಯುದ್ಧವು ಒಂದು ಅದ್ಭುತ ಮಂತ್ರವಾದಿ. ಜಯಾಪಜಯ ಪಡೆದ ಇಬ್ಬರ ಕನಸುಗಳನ್ನೂ ಪುಡಿಪುಡಿಮಾಡಬಲ್ಲ ಪ್ರಚಂಡ ಶಕ್ತಿಗಳನ್ನು ತಯಾರಿಸಿ,

ಘನೀಭೂತಮಾಡಿ ತನ್ನ ಗರ್ಭದಲ್ಲಿ ಅಡಗಿಸಿಕೊಂಡಿರುತ್ತದೆ. ಕಳೆದ ಯುದ್ಧದ ನಂತರ ನಡೆದ ಶಾಂತಿ ಸಮ್ಮೇಳನದಲ್ಲಿ ಯೂರೋಪ್ ಮತ್ತು ಏಷ್ಯದ ನಾಲ್ಕು ಮಹಾ ಸಾಮ್ರಾಜ್ಯಗಳು—ರಷ್ಯ, ಜರ್ಮನಿ, ಆಸ್ಟ್ರಿಯ ಮತ್ತು ತುರ್ಕಿ ಸಾಮ್ರಾಜ್ಯಗಳು ಮಣ್ಣು ಮುಕ್ಕಬೇಕೆಂದು ಯಾರೂ ನಿರ್ಣಯ ಮಾಡಿರಲಿಲ್ಲ; ರಷ್ಯ, ಜರ್ಮನಿ ಮತ್ತು ತುರ್ಕಿಗಳಲ್ಲಿ ಕ್ರಾಂತಿ ಹೂಡಲು ಲಾಯಡ್ ಜಾರ್ಜ್, ಕ್ಲೆಮೆಂಕೊ ಅಥವ ವಿಲ್ಸನ್ ಯಾರೂ ಆಜ್ಞೆಮಾಡಲಿಲ್ಲ'' ಎಂದು ಬರೆದಿದ್ದಾರೆ.

ಯುದ್ಧದಲ್ಲಿ ಜಯಗಳಿಸಿದ ನಂತರ ಗೆದ್ದ ರಾಷ್ಟ್ರಗಳ ಪ್ರತಿನಿಧಿಗಳು ಏನುಹೇಳುತ್ತಾರೆ? ಭವಿಷ್ಯದ ವಿಷಯದಲ್ಲಿ ಅವರ ಮನಸ್ಸಿನ ಕಲ್ಪನೆ ಏನು? ತಮ್ಮತಮ್ಮಲ್ಲಿ ಒಪ್ಪಿಗೆ ಇದೆಯೆ? ಅಥವ ವಿರೋಧವಿದೆಯೆ? ಯುದ್ಧದ ರೋಷ ಕಡಮೆಯಾದಾಗ ಮತ್ತು ಮರೆತ ಶಾಂತಿಮಾರ್ಗಗಳ ಕಡೆ ಜನರ ಮನಸ್ಸು ತಿರುಗಿದಾಗ ಆಗುವ ಪ್ರತಿಕ್ರಿಯೆಗಳೇನು? ಯೂರೋಪಿನಲ್ಲಿ ಗುಪ್ತಗಾಮಿ ಇರುವ ವಿರೋಧಶಕ್ತಿಗಳ ಮತ್ತು ತಾವೇ ಎತ್ತಿ ಕಟ್ಟಿದ ಹೊಸಶಕ್ತಿಗಳ ಬಗೆ ಎಂತು? ಮನಸ್ಸಿನಲ್ಲೂ ಅನುಭವದಲ್ಲೂ ಹಳಬರಾಗಿ ಹಿಂದಿರುಗಿದ ಕೋಟ್ಯಂತರ ಯುದ್ಧ ಯೋಧರು ಹೇಳುವುದೇನು? ಮತ್ತು ಮಾಡುವುದೇನು? ಹೊರಗೆ ಯುದ್ಧಮಾಡುತ್ತಿದ್ದಾಗ ಪರಿವರ್ತನಗೊಳ್ಳುತ್ತಲೇ ಇದ್ದ ಜೀವನಕ್ಕೆ ಅವರು ಸರಿಹೊಂದಿಕೊಳ್ಳುವುದು ಹೇಗೆ? ಬಲಿದಾನಮಾಡಿ ಸರ್ವನಾಶಹೊಂದಿದ ಯುರೋಪ್, ಏಷ್ಯ ಮತ್ತು ಆಫ್ರಿಕ ಖಂಡಗಳ ಭವಿಷ್ಯವೇನು? ವೆಂಡಲ್ ವಿಲ್ಕಿ ಹೇಳುವಂತೆ ಏಷ್ಯದ "ಕೋಟ್ಯಾನುಕೋಟಿ ಜನರ ಸ್ವಾತಂತ್ರ್ಯ ದಾಹದ ಸಮಸ್ಯೆ ಬಗೆಹರಿಯುವುದೆಂತು? ಈ ಎಲ್ಲ ಮತ್ತು ಇತರ ಅನೇಕ ವಿಷಯಗಳ ಪರಿಯೆಂತು? ದೀರ್ಘಾಲೋಚನೆ ಮಾಡಿ ನಮ್ಮ ನಾಯಕರು ಹೂಡಿದ ಯೋಜನೆಗಳನ್ನೆಲ್ಲ ತಲೆಕೆಳಗೆ ಮಾಡುವ ವಿಧಿಯ ವಿಚಿತ್ರ ಆಟಗಳ ಗತಿ ಏನು?

ಯುದ್ಧವು ಮುಂದುವರಿದಂತೆ, ಫಾಸಿಸ್ಟ್ ಶಕ್ತಿಗಳ ಗೆಲುವಿನ ಆಸೆ ದೂರವಾದಂತೆ ಯುಕ್ತರಾಷ್ಟ್ರಗಳ ನಾಯಕರ ಮನಸ್ಸು ಕ್ರಮೇಣ ಕಲ್ಲಾಗುತ್ತಿದೆ, ಹೆಚ್ಚು ಸಂಕುಚಿತವಾಗುತ್ತಿದೆ. ಚತುಃಸ್ವಾತಂತ್ರ್ಯಗಳ: ಅಟ್ಲಾಂಟಿಕ್ ಪ್ರಣಾಳಿಕೆ ಆರಂಭದಲ್ಲೇ ಅಸ್ಪಷ್ಟ, ಪರಿಮಿತ. ಈಗ ಅವು ಇನ್ನೂ ಹಿಂದೆ ಸರಿದಿವೆ, ಆದಷ್ಟು ಹೆಚ್ಚು ಹೆಚ್ಚಾಗಿ ಹಿಂದಿನದನ್ನೆ ಮುಂದೆಯೂ ಮುಂದುವರಿಸುವಂತೆ ಭವಿಷ್ಯ ಭಾಸವಾಗುತ್ತಿದೆ. ಹೋರಾಟವು ಈಗ ಶುದ್ಧ ಸೈನ್ಯಾಚರಣೆಯಾಗಿದೆ. ಒಂದು ಪಾಶವೀ ಶಕ್ತಿಯ ಎದುರು ಇನ್ನೊಂದು ಪಾಶವೀಶಕ್ತಿ; ನಾಜಿ ಮತ್ತು ಫ್ಯಾಸಿಸ್ಟ್ ತತ್ತ್ವಗಳ ವಿರುದ್ಧ ಎನ್ನುವ ಭಾವನೆ ನಿಂತಿದೆ. ಜನರಲ್ ಫ್ರಾಂಕೋ ಮತ್ತು ಯೂರೋಪಿನ ಸಣ್ಣ ಪುಟ್ಟ ಸರ್ವಾಧಿಕಾರಿಗಳಿಗೆ ಪ್ರೋತ್ಸಾಹ ದೊರೆತಿದೆ. ಚರ್ಚಿಲ್ ಇನ್ನೂ ಸಾಮ್ರಾಜ್ಯಭಾವನೆಯಲ್ಲಿ ಮೆರೆಯುತ್ತಿದ್ದಾನೆ. "ಅಪಾದ ಮಸ್ತಕ ಅಧಿಕಾರಲಾಲಸೆಯಿಂದ ತುಂಬಿದ ಶಕ್ತಿ ಎಂದರೆ ಬ್ರಿಟಿಷ್ ಸಾಮ್ರಾಜ್ಯಕ್ಕಿಂತ ಬೇರೊಂದಿಲ್ಲ. ಮಾತನಾಡಲು ಹೊರಟರೂ "ಸಾಮ್ರಾಜ್ಯ'' ಶಬ್ದ ಚರ್ಚಿಲ್ ಗಂಟಲಲ್ಲಿ ಸಿಕ್ಕಿಕೊಳ್ಳುತ್ತದೆ" ಎಂದು ಇತ್ತೀಚೆಗೆ ಜಾರ್ಜ್ ಬರ್ನಾರ್ಡ್ ಷಾ ಹೇಳಿದ್ದಾನೆ. *

---

* ಬ್ರಿಟಿಷ್ ಅಧಿಕಾರಿವರ್ಗಕ್ಕೆ ಸಾಮ್ರಾಜ್ಯಯುಗ ಮುಗಿಸಲು ಇಷ್ಟವಿಲ್ಲವೆಂಬುದು ಸ್ಪಷ್ಟವಿದೆ. ಹೆಚ್ಚೆಂದರೆ ಅವರ ಸಾಮ್ರಾಜ್ಯ ಆಡಳಿತ ಸ್ವರೂಪಕ್ಕೆ ಹೊಸ ಬಣ್ಣ ಕೊಡಬೇಕೆಂದು ಇದ್ದಾರೆ. ಅಧೀನ ರಾಷ್ಟ್ರಗಳು ಅವರಿಗೆ ಅತ್ಯವಶ್ಯಕ ಮತ್ತು ಅದೊಂದು ಆಸ್ತಿ ಎಂಬು ಅವರ ಭಾವನೆ. ಬ್ರಿಟನ್ನಿನ ಪ್ರಮುಖ ಪತ್ರಿಕೆ ಲಂಡನ್ ಎಕಾನಮಿಸ್ಟ್ ೧೯೪೪ನೆ ಸೆಪ್ಟಂಬರ್ ೧೬ರಲ್ಲಿ "ಅಮೆರಿಕನರು ಬ್ರಿಟಿಷ್, ಫ್ರೆಂಚ್ ಮತ್ತು ಡಚ್ ಸಾಮ್ರಾಜ್ಯ ವಿರೋಧಿಗಳೆಂದು ಯುದ್ಧಾನಂತರದ ಅನೇಕ ಯೋಜನೆಗಾರರು ಆಗ್ನೇಯ ಏಷ್ಯದಲ್ಲಿ ಹಳೆಯ ಸಾಮ್ರಾಜ್ಯಗಳು ಪುನಃ ತಲೆ ಎತ್ತುವುದಿಲ್ಲವೆಂದೂ, ಆ ಸಾಮ್ರಾಜ್ಯಗಳ ಅಧಿಕಾರ ಯಾವುದಾದರೂ ಒಂದು ಬಗೆಯ ಅಂತರ ರಾಷ್ಟ್ರೀಯ ಆಡಳಿತದ ಅಧೀನಕ್ಕೋ ಅಥವ ಪ್ರಜೆಗಳಿಗೋ ಹೋಗುವುದೆಂದೂ ಯೋಚಿಸುವಂತೆ ತೋರುತ್ತದೆ. ಈ ಭಾವನೆ ಹೆಚ್ಚುತ್ತ ಇರುವುದರಿಂದ ಮತ್ತು ಅಮೆರಿಕದ ಅನೇಕ ಮಾಸ ಪತ್ರಿಕೆಗಳು ಮತ್ತು ವೃತ್ತ ಪತ್ರಿಕೆಗಳು ಈ ಭಾವನೆ ಪುಷ್ಟೀಕರಿಸುವುದರಿಂದ ಬ್ರಿಟಿಷರ, ಫ್ರೆಂಚರ ಮತ್ತು ಡಚ್ಚರ ಮುಂದಿನ ಕಾರ್ಯ ರೀತಿ ಏನೆಂದು ಪೂರ್ಣ, ಸ್ಪಷ್ಟ ತಿಳಿಸುವುದು ಅವಶ್ಯವಿದೆ.

ಭವಿಷ್ಯ ಪ್ರಪಂಚ ಹಿಂದಿನದಕ್ಕಿಂತ ತೀರ ಹೊಸದಾಗಬೇಕೆಂದೂ, ಇಲ್ಲದಿದ್ದರೆ ಇನ್ನೂ ಭಯಂಕರ ಯುದ್ಧ ಮತ್ತು ವಿಪತ್ತುಗಳೇ ನಿಶ್ಚಯವೆಂದೂ ನಂಬಿದವರು ಇಂಗ್ಲೆಂಡ್, ಅಮೆರಿಕ ಮತ್ತು ಇತರ ದೇಶಗಳಲ್ಲಿ ಅನೇಕರು ಇದ್ದಾರೆ. ಆದರೆ ಅಧಿಕಾರ ಮತ್ತು ಶಕ್ತಿ ಕೈಲಿ ಇರುವವರಮೇಲೆ ಈ ಭಾವನೆಗಳು ಹೆಚ್ಚು ಯಾವ ಪರಿಣಾಮವನ್ನೂ ಮಾಡಿರುವಂತೆ ತೋರುವುದಿಲ್ಲ; ತಮಗೆ ಮೀರಿದ ಶಕ್ತಿಗಳಿಗೆ ತಾವೇ ಸೆರೆಯಾಗಿದ್ದಾರೆ. ಇಂಗ್ಲೆಂಡ್, ಅಮೆರಿಕ ಮತ್ತು ರಷ್ಯಗಳಲ್ಲಿ ಪುನಃ ಹಿಂದಿನ ಅಧಿಕಾರ ಲಾಲಸೆಯ ಬೃಹದ್ರಾಜಕೀಯಕ್ಕೆ ಆರಂಭವಾಗುತ್ತಿದೆ. ಅಮೆರಿಕದ ಪ್ರಸಿದ್ಧ ಪ್ರಪಂಚ ರಾಜನೀತಿಜ್ಞನಾದ ಎಸ್. ಜೆ. ಸ್ಪೈಕ್‌ಮನ್ ಈಚಿನ ತನ್ನ ಒಂದು ಗ್ರಂಥದಲ್ಲಿ "ವಿದೇಶಾಂಗ ವ್ಯವಹಾರ ನಡೆಸುವ ರಾಜನೀತಿಜ್ಞರು ನ್ಯಾಯಪರತೆ, ನಿಷ್ಪಕ್ಷಪಾತ ದೃಷ್ಟಿ ಮತ್ತು ಸಹನ ಶಕ್ತಿ ಎಲ್ಲಿ ಎಲ್ಲವೂ ತಮ್ಮ ಅಧಿಕಾರದಾಸೆಗೆ ಎಷ್ಟರ ಮಟ್ಟಿಗೆ ಅವು ವಿರೋಧ ಬರುವುದಿಲ್ಲವೊ ಅಷ್ಟರಮಟ್ಟಿಗೆ ಮಾತ್ರ. ತಮ್ಮ ಅಧಿಕಾರ ಹೆಚ್ಚಿಸಲು ಬೇಕಾದ ನೈತಿಕ ಬೆಂಬಲ ಪಡೆಯಲು ಅವುಗಳನ್ನೇ ಸಾಧನ ಮಾಡಿಕೊಳ್ಳುತ್ತಾರೆ; ಅವುಗಳಿಂದ ಅಧಿಕಾರ ಮೊಟಕು ಆಗುವ ಸಂಭವ ಬಂದರೆ ನಿರುಪಯೋಗ ವಸ್ತುಗಳೆಂದು ಅವನ್ನು ಕಸದ ಬುಟ್ಟಿಗೆ ಎಸೆಯುತ್ತಾರೆ. ಅಧಿಕಾರದ ಅನ್ವೇಷಣೆ ನೈತಿಕ ಉನ್ನತಿ ಸಾಧನೆಗೆ ನಡೆಯುತ್ತಿಲ್ಲ; ಆದರೆ ಅಧಿಕಾರ ಸಾಧನೆಗೆ ಸಹಾಯವಾಗುವಂತೆ ನೈತಿಕತತ್ವಗಳ ದುರುಪಯೋಗ ಆಗುತ್ತಿದೆ." ಎಂದು ಬರೆದಿದ್ದಾನೆ.*

ಈ ಭಾವನೆ ಅಮೆರಿಕನ್ನರ ಭಾವನೆಯನ್ನು ಪ್ರತಿಬಿಂಬಿಸುತ್ತಿಲ್ಲ; ಅದು ಒಂದು ಪ್ರಬಲ ಪಂಗಡದ ಅಭಿಪ್ರಾಯ. ಪ್ರಪಂಚವನ್ನೆಲ್ಲ ಅಟ್ಲಾಂಟಿಕ್ ಜನತೆ, ರಷ್ಯನರು, ಚೀಣರು, ದಕ್ಷಿಣ ಏಷ್ಯದಲ್ಲಿ ಹಿಂದೂ ಮುಸ್ಲಿಮರು ಎಂದು ಮೂರು ನಾಲ್ಕು ಜನ ಸಮುದಾಯ ಪ್ರದೇಶಗಳಾಗಿ ವಿಂಗಡಿಸಬಹುದೆಂಬ ವಾಲ್ಟರ್ ಲಿಪ್‌ಮನ್ನನ ಕನಸು ಸಹ ಇನ್ನೂ ವಿಶಾಲವ್ಯಾಪ್ತಿಯ ಅಧಿಕಾರಲಾಲಸೆಯ ಪ್ರಪಂಚ ರಾಜನೀತಿ; ಅದರಿಂದ ಪ್ರಪಂಚಶಾಂತಿ ಅಥವ ಸಹಕಾರ ಸಾಧನೆಯಾಗುತ್ತೆಂದು ಹೇಗೆ ಭಾವಿಸುತ್ತಾನೋ ನಾನರಿಯೆ ಇದರಲ್ಲಿ ಭವಿಷ್ಯದ ಒಲವು ಯಾವ ಕಡೆಗೆ? ಇವೆರಡು ನೀತಿಗಳು ಒಂದುಗೂಡಿ ಯಾವ ಪರಿಣಾಮವಾಗುತ್ತದೆ? ಜನತೆಯ ಅಭಿಪ್ರಾಯ ಏನೇ ಇರಲಿ ವಿದೇಶಾಂಗ ನೀತಿ ವಿಶೇಷ ತಜ್ಞರ ಕೈಲಿರುವ ಅತಿಗಹನ ವಿಷಯ. ಹಳೆಯ ಸಂಪ್ರದಾಯಗಳಿಗೆ ಬಿಡದೆ ಅಂಟಿಕೊಳ್ಳುವುದೇ ಆ ತಜ್ಞರ ಇಂದಿನ ಮನೋಭಾವನೆ; ತಮ್ಮ ರಾಷ್ಟ್ರಗಳನ್ನು ಹೊಸ ಅಪಾಯಕ್ಕೆ ಗುರಿಮಾಡುವ ಯಾವ ನೂತನ ರೀತಿಯೂ ಅವರಿಗೆ ಬೇಕಿಲ್ಲ. ವಾಸ್ತವಿಕತೆ ಇರಲೇಬೇಕು. ಏಕೆಂದರೆ ಯಾವ ರಾಷ್ಟ್ರದ ಒಳಾಡಳಿತ ಅಥವ ವಿದೇಶಾಂಗ ನೀತಿಯೂ ಎಷ್ಟೇ ಉನ್ನತ ಮತ್ತು ಉದಾರವಿದ್ದರೂ ಕೇವಲ ತಾತ್ತ್ವಿಕ ಕಲ್ಪನೆಗಳ ಮೇಲೆ ನಿಲ್ಲುವಂತಿಲ್ಲ. ಆದರೆ ಗತ ಕಾಲದ ಒಳಕರಟವನ್ನೇ ನಂಬಿದ ಇಂದಿನ ಸಮಸ್ಯೆಗಳ ಕಠಿಣ ಪರಿಸ್ಥಿತಿ ಅರಿಯಲು ನಿರಾಕರಿಸುವ ವಾಸ್ತವಿಕತೆ ನನಗೆ ಅರ್ಥವಾಗುವುದಿಲ್ಲ. ಇಂದಿನ ನಿಜವಾದ ವಾಸ್ತವಿಕತೆ ರಾಜಕೀಯ ಮತ್ತು ಆರ್ಥಿಕ ಮಾತ್ರವಲ್ಲದೆ ಅನೇಕ ಜನರ ಭಾವನೆ ಮತ್ತು ಪ್ರೇರಣೆಗಳ ಪರಿಣಾಮವಾಗಿದೆ. ಆ ವಾಸ್ತವಿಕತೆಯು, ಅನೇಕರ ಆದರ್ಶ ತತ್ತ್ವಗಳಿಗಿಂತ ಮತ್ತು ಇಂದಿನ ಮತ್ತು ನಾಳಿನ ಸಮಸ್ಯೆಗಳಿಗಿಂತ ಭಾವಪ್ರಧಾನವೂ ದೂರವೂ ಇದೆ.

ಇಂದಿನ ವಿಶ್ವರಾಜಕೀಯ ವಾಸ್ತವವಾದಿಯ ಲಂಗರು. ಆದರ ಹೃದಯ ಭೂಮಿ ಅಂಥ ಕಂಠಭೂಮಿ ಎಂಬ ಶೋಷಣೆಯೇ ರಾಷ್ಟ್ರೀಯತ್ವದ ಅಭಿವೃದ್ಧಿಗೂ, ನಾಶಕ್ಕೂ ಕಾರಣವೆಂದು ಹೇಳಲಾಗಿದೆ. ಈ

---

ಇವರಲ್ಲಿ ಯಾರಿಗೂ ಅಧೀನ ಸಾಮ್ರಾಜ್ಯ ಬಿಟ್ಟುಕೊಡಲು ಇಷ್ಟವಿಲ್ಲದ್ದರಿಂದ ಮತ್ತು ಜಪಾನಿನ ಪ್ರಭಾವಕ್ಕೆ ಒಳಗಾದ ಪ್ರದೇಶ ನಾಶಮಾಡಲು ಮಲಯ ಬ್ರಿಟಿಷರಿಗೂ, ಈಸ್ಟ್ ಇಂಡೀಸ್ ದ್ವೀಪಗಳು ಡಚ್ಚರಿಗೂ ಫ್ರೆಂಚ್ ಇಂಡೋ ಚೀನಾ ಫ್ರೆಂಚರಿಗೂ ಸೇರಬೇಕಾದ್ದು ಅತ್ಯವಶ್ಯಕ. ಆದ್ದರಿಂದ ಈ ವಿಷಯದಲ್ಲಿ ಅಮೆರಿಕನರ ಮನಸ್ಸಿನಲ್ಲಿ ಯಾವ ಅನುಮಾನಕ್ಕೆ ಎಡೆಕೊಟ್ಟರೂ ಈ ಮೂರು ರಾಷ್ಟ್ರಗಳೂ ದೊಡ್ಡ ತಪ್ಪು ಮಾಡಿದಂತೆ ಆಗುತ್ತದೆ ಮತ್ತು ನಂಬಿಕೆ ದ್ರೋಹ ಮಾಡಿದಂತಾಗುತ್ತದೆ" ಎಂದು ಹೇಳಿದೆ.

* America's Strategy in World Politics.

ತತ್ತ್ವವು ಇಂಗ್ಲೆಂಡಿನಲ್ಲೋ ಸ್ಕಾಟ್‌ಲೆಂಡಿನಲ್ಲೋ ಆರಂಭವಾಗಿ ಆಮೇಲೆ ನಾಜಿಗಳ ಕೈದೀವಿಗೆಯಾಯಿತು. ವಿಶ್ವಸಾಮ್ರಾಜ್ಯ ಅಧಿಕಾರದ ಕನಸುಗಳಿಗೆ, ಆಸೆಗಳಿಗೆ ಆಧಾರವಾಯಿತು ಮತ್ತು ಅಂತ್ಯದಲ್ಲಿ ಅದರ ನಾಶಕ್ಕೂ ಕಾರಣವಾಯಿತು. ಸುಳ್ಳಿಗಿಂತ ಅರೆಸತ್ಯ ಇನ್ನೂ ಅಪಾಯಕರ. ಯಾವುದೋ ಒಂದು ಕಾಲದ ಸತ್ಯ ಇಂದಿನ ವಾಸ್ತವತೆಗೆ ನಮ್ಮನ್ನು ಕುರುಡುಮಾಡುತ್ತದೆ. ಆಮೇಲೆ ಜರ್ಮನಿಯಲ್ಲಿ ಬಲಗೊಂಡ ಹೆಚ್. ಜೆ. ಮ್ಯಾಕಿಂಡರನ ವಿಶ್ವಸಾಮ್ರಾಜ್ಯ ತತ್ತ್ವವು ಏಷ್ಯ ಮತ್ತು ಯೂರೋಪ್ ಖಂಡಗಳ ಸಮುದ್ರ ತೀರದ ನಾಗರಿಕತೆಗಳ ಬೆಳವಣಿಗೆಯ ಆಧಾರದ ಮೇಲೆ ಪ್ರತಿಪಾದಿಸಿದ್ದು. ಯುರೇಷ್ಯದ ಮಧ್ಯ ಭಾಗವು ಯುರೇಷ್ಯನರ ಕೇಂದ್ರವಾಗಿ, ಹೃದಯಭೂಮಿ ಎಂದು ಹೆಸರಾಯಿತು. ಅಲ್ಲಿಂದ ಬಂದ ಆಕ್ರಮಣಕಾರರ ಒತ್ತಡ ಎದುರಿಸಬೇಕೆಂಬ ತತ್ತ್ವದ ಮೇಲೆ ಮ್ಯಾಕಿಂಡರನ ತತ್ತ್ವ ಪುಷ್ಟಿಗೊಂಡಿತು. ಆ ಹೃದಯಸ್ಥಾನ ಅಧೀನ ಮಾಡಿಕೊಂಡರೆ. ಪ್ರಪಂಚ ಗೆದ್ದಂತೆ. ಆದರೆ ನಾಗರಿಕತೆಯು ಸಮುದ್ರ ತೀರದ ಜನರ ಮೀಸಲು ಸ್ವತ್ತಲ್ಲ. ಅದು ತನ್ನ ವ್ಯಾಪ್ತಿಯಲ್ಲಿ ಮತ್ತು ಪುಷ್ಟಿಯಲ್ಲಿ ವಿಶ್ವವ್ಯಾಪಕವಾಗಲೆತ್ನಿಸುತ್ತದೆ. ಯುರೇಷಿಯನರ ಹೃದಯ ಭೂಮಿಯ ವಿಶ್ವಸಾಮ್ರಾಜ್ಯ ಕಲ್ಪನೆಗೆ ಅಮೆರಿಕೆಗಳ ಪ್ರಗತಿ ಸಹ ಸರಿಹೊಂದುವುದಿಲ್ಲ. ಸಮುದ್ರ ಬಲಕ್ಕೂ ಭೂಬಲಕ್ಕೂ ಇದ್ದ ಸಮತೂಕವು ಈಗ ವಿಮಾನಬಲದಿಂದ ತಲೆಕೆಳಗೆ ಆಗಿದೆ.

ವಿಶ್ವಸಾಮ್ರಾಜ್ಯ ಸ್ಥಾಪನೆಯ ಕನಸಿನ ಮನೆ ಕಟ್ಟುತ್ತ ಜರ್ಮನಿಗೆ ಅಷ್ಟದಿಗ್ಬಂಧನ ಭಯದ ಪೀಡೆ ಹಿಡಿಯಿತು. ತನ್ನ ಶತ್ರುಗಳು ಒಟ್ಟಾದರೆಂದು ಸೋವಿಯಟ್ ರಷ್ಯ ಭಯಗೊಂಡಿತು. ಯೂರೋಪಿನಲ್ಲಿ ರಾಷ್ಟ್ರ ಶಕ್ತಿಗಳ ಸಮತೂಕದಿಂದ ಯಾವರಾಷ್ಟ್ರವೂ ಬಲಗೊಳ್ಳದಂತೆ ನೋಡಿಕೊಂಡಿರುವುದೇ ಇಂಗ್ಲೆಂಡಿನ ರಾಷ್ಟ್ರನೀತಿಯಾಯಿತು. ಇತರರ ಭಯ ಸದಾ ಇದ್ದೇ ಇದೆ. ಎಲ್ಲ ಆಕ್ರಮಣಕ್ಕೂ, ಕುಟಿಲ ಮತ್ತು ಕೃತ್ರಿಮ ಸಂಧಾನಗಳಿಗೂ ಈ ಭಯವೇ ಕಾರಣ. ಯುದ್ಧಾನಂತರ ಅಮೆರಿಕದ ಸಂಯುಕ್ತ ಸಂಸ್ಥಾನಗಳು ಮತ್ತು ರಷ್ಯದ ಸೋವಿಯಟ್ ಸಂಯುಕ್ತ ರಾಷ್ಟ್ರ, ಈ ಎರಡೇ ಶಕ್ತಿಗಳು ಪ್ರಪಂಚದಲ್ಲಿ ಪ್ರಬಲಗೊಂಡು, ಉಳಿದ ಇತರ ರಾಷ್ಟ್ರಶಕ್ತಿಗಳು ತಮ್ಮದೇ ಒಂದು ರೀತಿಯ ಗುಂಪುಕಟ್ಟಿಕೊಳ್ಳದಿದ್ದರೆ, ಬಹಳ ಹಿಂದೆ ಬಿದ್ದು ಪೂರ್ಣ ನೂತನ ಪರಿಸ್ಥಿತಿ ಒದಗುತ್ತದೆ. "ಅಮೆರಿಕ ಸಹ ದಿಗ್ಬಂಧನಕ್ಕೆ ಒಳಗಾಗಬಹುದೆಂದೂ, ಯಾವುದಾದರೊಂದು ತೀರದ ರಾಷ್ಟ್ರದೊಡನೆ ಸೇರಿಕೊಳ್ಳಬೇಕೆಂದೂ, ಏನೇ ಆಗಲಿ 'ಹೃದಯಭೂಮಿ' ರಾಷ್ಟ್ರವು (ಈಗ ಸೋವಿಯಟ್ ರಷ್ಯ) ತೀರ ರಾಷ್ಟ್ರದೊಡನೆ ಸಂಬಂಧ ಬೆಳೆಸದಂತೆ ಎಚ್ಚರವಾಗಿದ್ದು ತಡೆ ಹಾಕಬೇಕೆಂದೂ" ಪ್ರೊಫೆಸರ್ ಸ್ಪೈಕ್‌ಮನ್ ತನ್ನ ಇತ್ತೀಚಿನ ಸಂದೇಶ ಸಾರಿದ್ದಾನೆ.

ಇದೆಲ್ಲ ಅತಿ ಬುದ್ಧಿವಂತಿಕೆ, ವಾಸ್ತವಿಕತೆ, ಎಂದು ತೋರುತ್ತದೆ; ಆದರೂ ಶುದ್ಧ ಅವಿವೇಕ. ಏಕೆಂದರೆ ಹಳೆಯ ಆಕ್ರಮಣ ನೀತಿ, ಸಾಮ್ರಾಜ್ಯ ಕಲ್ಪನೆ, ರಾಷ್ಟ್ರಶಕ್ತಿಗಳ ಸಮತೋಲನ, ಅಂತ್ಯ ಘರ್ಷಣೆ ಮತ್ತು ಯುದ್ಧ-ಇವುಗಳ ಆಧಾರದ ಮೇಲೆಯೇ ಈ ನೀತಿಯ ರಚನೆ. ಈ ಮಾರ್ಗದಲ್ಲಿ ಅಷ್ಟ ದಿಗ್ಬಂಧನಗಳು ತಪ್ಪಬೇಕಾದರೆ ಒಪ್ಪಂದ, ಪ್ರತಿ ಒಪ್ಪಂದ, ಆಕ್ರಮಣ, ವಿಸ್ತರಣ, ಈ ರೀತಿ ಅಧಿಕಾರದ ರಾಜಕೀಯ ಮುಂದುವರಿಯಲೇಬೇಕು. ಆದರೆ ಒಂದು ದೇಶದ ಅಧಿಕಾರ ವ್ಯಾಪ್ತಿ ಅಥವ ಪ್ರಭಾವ ಎಷ್ಟೇ ದೊಡ್ಡದಿರಲಿ ಅದರ ಹೊರಗಿರುವವರಿಂದ ದಿಗ್ಬಂಧನದ ಅಪಾಯ ಎಂದೂ ತಪ್ಪಿದ್ದಲ್ಲ; ಅವರೂ ಸಹ ಎದುರಾಳಿಯ ಶಕ್ತಿ ವಿಶೇಷ ಬೆಳೆಯಬಾರದೆಂದು ಸದಾ ಎಚ್ಚರದಿಂದಿರುತ್ತಾರೆ. ಈ ಭಯ ನಿವಾರಣೆಗೆ ಇರುವುದು ಒಂದೇ ಮದ್ದು, ಈ ವಿಶ್ವವನ್ನೆಲ್ಲ ಗೆಲ್ಲಬೇಕು; ಅಥವ ಇರುವ ಮತ್ತು ಬರುವ ಎಲ್ಲ ಶತ್ರುಗಳನ್ನೂ ನಿರ್ನಾಮ ಮಾಡಬೇಕು. ಪ್ರಪಂಚ ಗೆಲ್ಲಲು ಇತ್ತೀಚೆಗೆ ಮಾಡಿದ ಪ್ರಯತ್ನ ಮಣ್ಣುಗೂಡಿದ್ದನ್ನು ಇಂದು ನಾವು ನೋಡುತ್ತಿದ್ದೇವೆ. ಈ ಪಾಠವು ಸಾಕೆ? ಅಥವ ಆಸೆ, ಜನಾಂಗಮದ ಅಧಿಕಾರ ಮದದಿಂದ ಪ್ರೇರಿತರಾಗಿ ಇನ್ನೂ ಕೆಲವರು ತಮ್ಮ ಅದೃಷ್ಟ ಪರೀಕ್ಷೆಗೆಂದು ದುರಂತ ರಂಗಸ್ಥಳದ ಮೇಲೆ ಧುಮುಕುವರೆ?

ಪ್ರಪಂಚದ ಒಡೆತನ ಮತ್ತು ಪ್ರಪಂಚದ ಸಹಕಾರ ಈ ಎರಡು ಮಾರ್ಗವಲ್ಲದೆ ಬೇರೆ ಯಾವ ದಾರಿಯೂ ಮಧ್ಯೆ ಇರುವಂತೆ ಕಾಣುವುದಿಲ್ಲ; ಮಧ್ಯವರ್ತಿ ಮಾರ್ಗ ಆರಿಸುವಂತೆಯೂ ಇಲ್ಲ. ಹಿಂದಿನ ವಿಭಜನೆಗಳಲ್ಲಿ, ರಾಜ್ಯಾಧಿಕಾರದ ಅನ್ವೇಷಣೆಯಲ್ಲಿ ಇಂದು ಯಾವ ಅರ್ಥವೂ ಇಲ್ಲ; ಇಂದಿನ ವಾತಾವರಣಕ್ಕೆ ಅವು ಸರಿಹೋಗುವುದಿಲ್ಲ; ಆದರೂ ಅವಕ್ಕೆ ಕೊನೆ ಇಲ್ಲ. ರಾಷ್ಟ್ರಗಳ ಹಿತಾಹಿತಗಳು,

ಕಾರ್ಯಾಚರಣೆಗಳು ಇಂದು ಅವುಗಳ ಸರಹದ್ದು ಮೀರಿ ವಿಶ್ವವ್ಯಾಪಕವಾಗಿವೆ. ಯಾವ ಜನಾಂಗವೂ ತನ್ನ ಪಾಡಿಗೆ ತಾನು ಪ್ರತ್ಯೇಕ ಇದ್ದು, ಉಳಿದ ಜನಾಂಗಗಳ ರಾಜಕೀಯ ಮತ್ತು ಆರ್ಥಿಕ ಗತಿಯನ್ನು ಅಲಕ್ಷ್ಯಮಾಡುವಂತೆ ಇಲ್ಲ. ಸಹಕಾರವಿಲ್ಲದಿದ್ದರೆ ಘರ್ಷಣೆ ಮತ್ತು ಅದರ ಪರಿಣಾಮಗಳು ಶತಸ್ಸಿದ್ಧ. ಸಹಕಾರವಿರಬೇಕಾದರೆ ಸಮಾನತೆ ಮತ್ತು ಪರಸ್ಪರ ಕ್ಷೇಮಚಿಂತನೆ ತಳಹದಿಯಾಗಬೇಕು. ಹಿಂದುಳಿದ ರಾಷ್ಟ್ರಗಳನ್ನು ಮತ್ತು ಜನಾಂಗಗಳನ್ನು ಸಮಾನ ಆರ್ಥಿಕ ಮತ್ತು ಸಂಸ್ಕೃತಿ ಮಟ್ಟಕ್ಕೆ ತರಬೇಕು. ಜನಾಂಗ ದ್ವೇಷ ಮತ್ತು ಆಕ್ರಮಣ ನೀತಿಯು ಸಂಪೂರ್ಣ ನಾಶವಾಗಬೇಕು. ಈ ತಳಹದಿಯ ಮೇಲೆ ಮಾತ್ರ ಸಹಕಾರ ಸಾಧ್ಯ. ಯಾವ ರಾಷ್ಟ್ರ ಅಥವ ಜನರೇ ಆಗಲಿ ಇನ್ನೊಂದು ರಾಷ್ಟ್ರದ ಮೇಲಿನ ತಮ್ಮ ಅಧಿಕಾರ ಅಥವ ಆಕ್ರಮಣವನ್ನು ಯಾವ ಸವಿಮಾತಿನಿಂದ ಕರೆದರೂ ಸಹಿಸಲು ಸಾಧ್ಯವಿಲ್ಲ. ಪ್ರಪಂಚದ ಇತರ ರಾಷ್ಟ್ರಗಳು ಉಚ್ಛ್ರಾಯ ಸ್ಥಿತಿಯಲ್ಲಿರುವಾಗ ತಮ್ಮ ಬಡತನ ಮತ್ತು ಸಂಕಟ ನುಂಗಿಕೊಂಡು ಸುಮ್ಮನೆ ಕುಳಿತಿರಲೂ ಸಾಧ್ಯವಿಲ್ಲ. ಇತರ ದೇಶಗಳ ಪರಿಸ್ಥಿತಿಯ ಪರಿಜ್ಞಾನವಿಲ್ಲದಾಗ ಅದು ಸಾಧ್ಯವಿತ್ತು.

ಇದೆಲ್ಲ ಸ್ಪಷ್ಟವಿದೆ. ಆದರೆ ಹಿಂದಿನ ಘಟನೆಗಳ ಇತಿಹಾಸ ಪರಂಪರೆ ನೋಡಿದರೆ ಮಾನವನ ಮನಸ್ಸು ಆ ಪರಂಪರೆಯ ಹಿಂದೆಯೇ ಉಳಿಯುತ್ತದೆ; ಅವುಗಳಿಗೆ ಹೊಂದಿಕೊಳ್ಳುವುದು ಬಹು ನಿಧಾನ. ಮುಂದೆ ವಿನಾಶದಿಂದ ತಪ್ಪಿಸಿಕೊಳ್ಳಬೇಕಾದರೆ ತನ್ನ ಸ್ವಾರ್ಥ ದೃಷ್ಟಿಯಿಂದಲೇ ಪ್ರತಿಯೊಂದು ಜನಾಂಗವೂ ಈ ವಿಶಾಲ ದೃಷ್ಟಿಯ ಸಹಕಾರದ ಕಡೆ ಗಮನ ಕೊಡಬೇಕು ಮತ್ತು ಇತರ ಜನಾಂಗಗಳ ಸ್ವಾತಂತ್ರ್ಯದ ಆಧಾರದ ಮೇಲೆ ತನ್ನ ಸ್ವತಂತ್ರ ಜೀವನ ನಡೆಸಬೇಕು. ಆದರೆ ವಾಸ್ತವವಾದಿಯ ಸ್ವಾರ್ಥವು ಹಳೆಯ ಕಲ್ಪನೆ ಮತ್ತು ತತ್ವಗಳಿಂದ ಬಹಳ ಸಂಕುಚಿತವಾಗಿದೆ; ಯಾವುದೋ ಒಂದು ಕಾಲಕ್ಕೆ ಸರಿತೋರಿದ ಭಾವನೆಗಳು ಮತ್ತು ಸಮಾಜ ರೀತಿಗಳು ಎಲ್ಲ ಕಾಲದ ಮಾನವ ಸಮಾಜ ಮತ್ತು ಸ್ವಭಾವಕ್ಕೆ ಸ್ಥಿರವಾದವು, ಪರಿವರ್ತಿಸಲಾಗದವು ಎಂದು ಭಾವಿಸುತ್ತಾನೆ. ಮಾನವ ಸ್ವಭಾವ ಮತ್ತು ಸಮಾಜ ಪರಿವರ್ತನೆ ಹೊಂದುವಷ್ಟು ಬೇರೆವಸ್ತುಗಳು, ಹೊಂದುವುದಿಲ್ಲ ಎಂದು ಮರೆಯುತ್ತಾನೆ. ಧರ್ಮ ಸ್ವರೂಪ ಮತ್ತು ಭಾವನೆಗಳು ಶಾಶ್ವತರೂಪ ತಾಳುತ್ತವೆ; ಸಮಾಜ ಸಂಸ್ಥೆಗಳು ಕಠಿಣವಾಗುತ್ತವೆ; ಯುದ್ಧ ಜೀವಶಾಸ್ತ್ರ ತತ್ವದಂತೆ ಒಂದು ಅವಶ್ಯಕತೆ ಎಂಬ ಭಾವನೆ ಹುಟ್ಟುತ್ತದೆ; ಸಾಮ್ರಾಜ್ಯ ಮತ್ತು ರಾಜ್ಯ ವಿಸ್ತಾರ ಕಾರ್ಯಾಸಕ್ತ ಪ್ರಗತಿಪರ ಜನತೆಯ ಹಕ್ಕು ಎಂಬ ಭಾವನೆ ಬೇರೂರುತ್ತದೆ; ಮಾನವ ವ್ಯವಹಾರದಲ್ಲಿ ಲಾಭದೃಷ್ಟಿಗೇ ಅಗ್ರಪೂಜೆ ಸಲ್ಲುತ್ತದೆ. ಕುಲಮದ, ತಮ್ಮ ಜನಾಂಗ ಸಮಾನ ಇಲ್ಲ ಎಂಬ ಮದಾಂಧತೆ ಒಂದು ಜೀವನ ತತ್ವವಾಗುತ್ತದೆ. ಆ ರೀತಿ ಹೇಳದಿದ್ದರೂ ಆ ಆಧಾರದ ಮೇಲೆ ಎಲ್ಲ ಕೆಲಸ ನಡೆಯುತ್ತವೆ, ಈ ಕೆಲವು ಭಾವನೆಗಳು ಪೌರ್ವಾತ್ಯ ಪಾಶ್ಚಿಮಾತ್ಯ ನಾಗರಿಕತೆಗಳೆರಡಕ್ಕೂ ಸಾಮಾನ್ಯವಾದವು. ಇವುಗಳಲ್ಲಿ ಅನೇಕ ಗುಣಗಳು ಫಾಸಿಸಂ ಮತ್ತು ನಾಜಿಸಂಗೆ ಜನ್ಮಕೊಟ್ಟ ಪಾಶ್ಚಾತ್ಯ ಸಂಸ್ಕೃತಿಯ ವೈಶಿಷ್ಟ್ಯಗಳಾಗಿವೆ. ಫಾಸಿಸ್ಟ್ ತತ್ವವು ಮಾನವ ಜೀವನ ಮತ್ತು ಮಾನವೀಯತೆಯನ್ನು ತೃಣೀಕರಿಸುವುದರಲ್ಲಿ ಎಲ್ಲವನ್ನೂ ಮೀರಿಸಿದರೂ ನೈತಿಕ ದೃಷ್ಟಿಯಿಂದ ಫಾಸಿಸ್ಟ್ ತತ್ವಕ್ಕೂ ಈ ಭಾವನೆಗಳಿಗೂ ಬಹಳ ವ್ಯತ್ಯಾಸವಿಲ್ಲ. ಬಹುಕಾಲ ಯೂರೋಪಿನ ದೃಷ್ಟಿಯಲ್ಲಿ ಪ್ರಧಾನ ಗುಣವಾಗಿದ್ದ ಮಾನವೀಯತೆಯು ಈಗ ಅಲ್ಲಿ ಮಾಯವಾಗುತ್ತಿದೆ. ಪಾಶ್ಚಾತ್ಯದ ರಾಜಕೀಯ ಮತ್ತು ಆರ್ಥಿಕ ರಚನೆಯಲ್ಲೇ ಫಾಸಿಸ್ಟ್ ತತ್ವದ ಬೀಜಗಳಿದ್ದವು. ಈ ಹಳೆಯ ಭಾವನೆ ನಾಶವಾಗುವವರೆಗೆ ಯುದ್ಧದ ಗೆಲುವಿನಿಂದ ಯಾವ ಪರಿವರ್ತನೆಯೂ ಆಗುವುದಿಲ್ಲ. ಹಳೆಯ ಕಲ್ಪನೆಗಳು ಮತ್ತು ಭಾವನೆಗಳು ಹಾಗೇ ಉಳಿದು ಪುನಃ ಅದೇ ಪೈಶಾಚಿಕ ಶಕ್ತಿಗಳಿಗೆ ಬಲಿಯಾಗಿ ಅದೇ ಚಕ್ರವ್ಯೂಹದಲ್ಲಿ ತೊಳಲುತ್ತೇವೆ.

ಯುದ್ಧದಿಂದ ಸ್ಪಷ್ಟಕಾಣುವ ಎರಡು ಪ್ರಾಮುಖ್ಯ ವಿಷಯಗಳೆಂದರೆ ಅಮೆರಿಕೆಯ ಸಂಯುಕ್ತ ಸಂಸ್ಥಾನಗಳ ಮತ್ತು ಸೋವಿಯಟ್ ರಷ್ಯದ ಶಕ್ತಿಯಲ್ಲಿ ಮತ್ತು ವಾಸ್ತವಿಕ ಮತ್ತು ಸಂಭವನೀಯ ಸಂಪತ್ಸಮೃದ್ಧಿಯಲ್ಲಿ ಅದ್ಭುತ ಪ್ರಗತಿ. ಯುದ್ಧದಲ್ಲಿ ಅನುಭವಿಸಿದ ಅಪಾರ ನಷ್ಟದಿಂದ ಸೋವಿಯಟ್ ರಷ್ಯಕ್ಕೆ ಯುದ್ಧ ಪೂರ್ವಕ್ಕಿಂತ ಪ್ರಾಯಶಃ ಈಗ ಹೆಚ್ಚು ಬಡತನ ಒದಗಿರಬಹುದು. ಆದರೆ ಅದರ ಅಂತಶ್ಶಕ್ತಿ

ಅತ್ಯದ್ಭುತವಿದೆ. ಶೀಘ್ರದಲ್ಲೇ ಚೇತರಿಸಿಕೊಂಡು ಮುಂದೆ ನುಗ್ಗುತ್ತದೆ. ನೈಸರ್ಗಿಕ ಮತ್ತು ಆರ್ಥಿಕ ಶಕ್ತಿಯಲ್ಲಿ ಯುರೇಷಿಯ ಖಂಡದಲ್ಲಿ ಅದರ ಎದುರು ನಿಲ್ಲುವವರು ಯಾರೂ ಇಲ್ಲ. ರಾಜ್ಯವಿಸ್ತರಣ ಮನೋಭಾವನೆ ಈಗಾಗಲೇ ಅದಕ್ಕೂ ಬರುತ್ತಿದೆ. ಝಾರ್ ಸಾಮ್ರಾಜ್ಯದಂತೆಯೇ ಸ್ವಲ್ಪಹೆಚ್ಚು ಕಡಮೆ ಅದೂ ರಾಜ್ಯವಿಸ್ತಾರ ಮಾಡುತ್ತಿದೆ. ಇದು ಎಷ್ಟುದೂರ ಹೋಗುವುದೋ ಹೇಳಲು ಸಾಧ್ಯವಿಲ್ಲ. ಅದರ ಸಮಾಜವಾದಿ ಆರ್ಥಿಕ ನೀತಿಗೆ ರಾಜ್ಯ ವಿಸ್ತರಣ ಒಂದು ಆವಶ್ಯಕತೆಯಲ್ಲ, ಏಕೆಂದರೆ ಅದನ್ನೆ ಸ್ವಯಂ ಸಂಪೂರ್ಣಮಾಡಬಹುದು. ಆದರೆ ಇತರ ಶಕ್ತಿಗಳು, ಹಳೆಯ ಸಂಶಯಗಳು ಮಧ್ಯೆಬಂದು ಪುನಃ ಹಿಂದಿನ ಅಷ್ಟದಿಗ್ಬಂಧನ ಭಯ ಹುಟ್ಟಿಸಿವೆ. ಏನೆ ಆಗಲಿ ಯುದ್ಧದ ವಿನಾಶಕೃತ್ಯ ಸರಿಪಡಿಸಿಕೊಳ್ಳು ವುದಕ್ಕೇ ಸೊವಿಯಟ್ ರಷ್ಯಕ್ಕೆ ಅನೇಕವರ್ಷ ಹಿಡಿಯುತ್ತವೆ. ಆದರೂ ರಾಜ್ಯವಿಸ್ತಾರ ಅಲ್ಲದಿದ್ದರೂ ಇತರ ರೀತಿಯ ವಿಸ್ತರಣ ಮನೋಭಾವ ಬೆಳೆಯುತ್ತಿದೆ. ಈಚಿನ ಅಲ್ಲಿನ ಕೆಲವು ಘಟನೆಗಳು ರಷ್ಯದ ಪ್ರಶಂಸಕರಿಗೆ ಭೀಕರ ಕಂಡರೂ ರಾಜಕೀಯ ಮತ್ತು ಆರ್ಥಿಕ ಸಮತೋಲನೆಯಲ್ಲಿ ರಷ್ಯದಷ್ಟು ಭದ್ರವಾದ ದೇಶ ಇನ್ನೊಂದಿಲ್ಲ. ಇಂದಿನ ಅದರ ನಾಯಕರನ್ನು ಪ್ರಶ್ನೆಮಾಡುವವರೇ ಇಲ್ಲ; ಅವರ ದೃಷ್ಟಿಯನ್ನೇ ಎಲ್ಲ ಭವಿಷ್ಯ ಅವಲಂಬಿಸಿದೆ.

ಅಮೆರಿಕದ ಅಪಾರ ವಸ್ತು ನಿರ್ಮಾಣ ಶಕ್ತಿ ಮತ್ತು ಸಂಘಟನ ಶಕ್ತಿಗಳಿಂದ ಪ್ರಪಂಚ ಬೆರಗು ಗೊಂಡಿದೆ. ಯುದ್ಧದಲ್ಲಿ ಈ ರೀತಿ ಒಂದು ಪ್ರಮುಖಪಾತ್ರ ವಹಿಸಿದ್ದಲ್ಲದೆ ತನ್ನ ಆರ್ಥಿಕ ನೀತಿಯಲ್ಲೇ ಅಂತರ್ಗತ ಇರುವ ಒಂದು ನೂತನ ಶಕ್ತಿಯನ್ನು ಪ್ರಚೋದಿಸಿದೆ. ತಮ್ಮ ಎಲ್ಲ ಕೌಶಲವನ್ನೂ ಶಕ್ತಿ ಯನ್ನೂ ಉಪಯೋಗಿಸಿ ಆ ಶಕ್ತಿಯನ್ನು ಒಂದು ಮಿತಿಯಲ್ಲಿಡುವುದು ಅವರಿಗೆ ಒಂದು ಹೊಸ ಸಮಸ್ಯೆ. ಒಳಗೂ ಹೊರಗೂ ಪ್ರಬಲ ಘರ್ಷಣೆಗೆ ಇಂದಿನ ಆರ್ಥಿಕ ರಚನೆಯ ಮಿತಿಯಲ್ಲಿ ಅದನ್ನು ಹೇಗೆ ಬಗೆಹರಿ ಸುತ್ತಾರೋ ನಾನು ಹೇಳಲಾರೆ. ಅಮೆರಿಕ ತನ್ನ ಏಕಾಂತ ನೀತಿ ತ್ಯಜಿಸಿದೆ ಎಂದು ಹೇಳುತ್ತಿದಾರೆ. ಬೇರೆ ವಿಧಿಯೇ ಇಲ್ಲ. ಏಕೆಂದರೆ ಪರದೇಶಗಳ ರಫ್ತು ವ್ಯಾಪಾರವಿಲ್ಲದೆ ಅದು ಉಳಿಯುವಂತೆ ಇಲ್ಲ. ಯುದ್ಧಕ್ಕೆ ಪೂರ್ವ ಅತ್ಯಲ್ಪವಿದ್ದು ಅಲಕ್ಷೆ ಮಾಡಬಹುದಾಗಿದ್ದ ರಫ್ತು ವ್ಯಾಪಾರ ಇಂದು ಅದರ ಪ್ರಮುಖ ಸಮಸ್ಯೆ ಯಾಗಿದೆ. ಯುದ್ಧ ಸಾಮಗ್ರಿಯ ಬದಲು ಶಾಂತಿ ಸಮಯದ ವಸ್ತು ನಿರ್ಮಾಣ ಆರಂಭಿಸಿದರೆ ಘರ್ಷಣೆ ಇಲ್ಲದೆ, ಹೋರಾಟವಿಲ್ಲದೆ ಆ ವಸ್ತುಗಳನ್ನು ರಫ್ತು ಮಾಡುವುದು ಎಲ್ಲಿಗೆ? ಯುದ್ಧದಿಂದ ಹಿಂದಿರುಗುವ ಲಕ್ಷಾಂತರ ಸೈನಿಕರನ್ನು ಉಪಯೋಗಿಸಿಕೊಳ್ಳುವುದೆಂತು? ಪ್ರತ್ಯಕ್ಷ ಯುದ್ಧದಲ್ಲಿ ತೊಡಗಿರುವ ಪ್ರತಿಯೊಂದು ದೇಶಕ್ಕೂ ಈ ಸಮಸ್ಯೆ ಇದ್ದರೂ ಸಂಯುಕ್ತ ಸಂಸ್ಥಾನಗಳಿಗೆ ಇರುವಷ್ಟು ಬೇರೆ ಯಾವ ದೇಶಕ್ಕೂ ಇಲ್ಲ. ವಸ್ತು ನಿರ್ಮಾಣ ಕಾರ್ಯದಲ್ಲಿ ನಡೆದಿರುವ ಔದ್ಯೋಗಿಕ ಸಂಶೋಧನೆಗಳ ಫಲವಾಗಿ ಅಪಾರ ವಸ್ತು ನಿರ್ಮಾಣ ಆಗಲೇಬೇಕು, ಅಥವ ಸಾಮೂಹಿಕ ನಿರುದ್ಯೋಗ ಹೆಚ್ಚಬೇಕು. ಸಾಮಾಜಿಕ ನಿರುದ್ಯೋಗ ವನ್ನು ಯಾರೂ ಸಹಿಸುವುದಿಲ್ಲ. ಅದಕ್ಕೆ ಅವಕಾಶ ಕೊಡುವುದಿಲ್ಲವೆಂದು ಅಮೆರಿಕ ಸಂಯುಕ್ತ ಸಂಸ್ಥಾನ ಸರಕಾರ ಸಾರಿದೆ. ಹಿಂದಿರುಗುವ ಸೈನಿಕರನ್ನು ಉಪಯುಕ್ತ ಕಾರ್ಯಗಳಲ್ಲಿ ನಿಯೋಜಿಸಿ ಲಾಭದಾಯಕ ಕೆಲಸಗಳಲ್ಲಿ ಸೇರಿಸಿ, ನಿರುದ್ಯೋಗ ತಡೆಗಟ್ಟಲು ಈಗಾಗಲೇ ಪ್ರಯತ್ನ ನಡೆಯುತ್ತಿವೆ. ನಾಡಿನ ಒಳ ಸಮಸ್ಯೆ ಏನೆ ಇರಲಿ ಮೂಲ ಪರಿವರ್ತನೆಯಾಗದಿದ್ದರೆ ಆ ಪ್ರಯತ್ನ ಇನ್ನೂ ಕಠಿಣವೇ ಆಗುತ್ತದೆ. ಅದರ ಅಂತರ ರಾಷ್ಟ್ರೀಯ ದೃಷ್ಟಿಯು ಅತಿ ಮುಖ್ಯವಾದುದು.

ಸಾಮೂಹಿಕ ವಸ್ತು ನಿರ್ಮಾಣದ ಇಂದಿನ ಆರ್ಥಿಕ ಪರಿಸ್ಥಿತಿಯು ಎಷ್ಟು ವಿಚಿತ್ರವಿದೆ ಎಂದರೆ ಪ್ರಪಂಚದ ಮಹಾ ಶಕ್ತಿಯುತ ಸಂಪತ್ಸಮೃದ್ಧಿ ರಾಷ್ಟ್ರವಾದ ಅಮೆರಿಕ ಸಂಯುಕ್ತ ಸಂಸ್ಥಾನ ಸಹ ತನ್ನ ಹೆಚ್ಚಿನ ಸಮಾನುಗಳ ಮಾರಾಟಕ್ಕೆ ಇತರ ರಾಷ್ಟ್ರಗಳನ್ನು ಅವಲಂಬಿಸಬೇಕಾಗುತ್ತದೆ. ಯುದ್ಧದ ನಂತರ ಕೆಲವು ವರ್ಷ ಯೂರೋಪ್, ಚೀಣಾ ಮತ್ತು ಭಾರತಗಳಲ್ಲಿ ಯಂತ್ರ ಸಾಮಗ್ರಿಗಳಿಗೆ ಮತ್ತು ನಯಮಾಲುಗಳಿಗೆ ದೊಡ್ಡ ಗಿರಾಕಿ ಇರುತ್ತದೆ. ತನ್ನ ವಿಶೇಷ ವಸ್ತುಗಳ ಮಾರಾಟಕ್ಕೆ ಅದರಿಂದ ಅಮೆರಿಕೆಗೆ ತುಂಬ ಸಹಾಯವಾಗುತ್ತದೆ. ಆದರೆ ಪ್ರತಿಯೊಂದು ರಾಷ್ಟ್ರವೂ ತನಗೆ ಬೇಕಾಗುವ ಸಾಮಾನುಗಳನ್ನು ತಾನೇ ಬೇಗ ತಯಾರಿಸಿಕೊಳ್ಳುವ ಶಕ್ತಿ ಪಡೆಯಲು ಪ್ರಯತ್ನ ಮಾಡು

ತ್ತದೆ; ಇತರ ಕಡೆ ದೊರೆಯದ ವಸ್ತುಗಳ ರಫ್ತಿಗೆ ಮಾತ್ರ ಅವಕಾಶ ದೊರೆಯುತ್ತದೆ. ಜನರ ಕೊಳ್ಳುವ ಶಕ್ತಿಗೆ ಅನುಸಾರವಾಗಿ ವೆಚ್ಚದಶಕ್ತಿ ಮಿತಿಗೊಳಿಸಬೇಕಾಗುತ್ತದೆ. ಜನರ ಕೊಳ್ಳುವ ಶಕ್ತಿ ವೃದ್ಧಿಗೊಳ್ಳಬೇಕಾದರೆ ಮೂಲ ಬದಲಾವಣೆಗಳಾಗದೆ ಸಾಧ್ಯವಿಲ್ಲ. ಪ್ರಪಂಚದ ಎಲ್ಲ ಕಡೆಗಳಲ್ಲಿ ಜನರ ಜೀವನಮಟ್ಟ ತಕ್ಕಮಟ್ಟಿಗೆ ಉನ್ನತಿಗೊಂಡರೆ ಮಾತ್ರ ಅಂತರ ರಾಷ್ಟ್ರೀಯ ವ್ಯಾಪಾರ ಮತ್ತು ವಸ್ತು ವಿನಿಮಯ ಹೆಚ್ಚು ಅಭಿವೃದ್ಧಿಯಾಗುತ್ತವೆ. ಆದರೆ ಆ ಜೀವನಮಟ್ಟ ಏರುವ ಮುಂಚೆ ಹಿಂದುಳಿದ ಮತ್ತು ಅಧೀನ ಸಾಮ್ರಾಜ್ಯ ರಾಷ್ಟ್ರಗಳಲ್ಲಿ ವಸ್ತು ನಿರ್ಮಾಣ ಮತ್ತು ಹಂಚಿಕೆಯ ಮೇಲಿನ ರಾಜಕೀಯ ಮತ್ತು ಆರ್ಥಿಕ ನಿರ್ಬಂಧಗಳು ನಾಶವಾಗಬೇಕು. ಅಂದರೆ ಮಹಾಪರಿವರ್ತನೆಗಳ ಪರಿಣಾಮವಾಗಿ ಇಂದಿನ ವ್ಯವಸ್ಥೆಗಳ ಕೀಲುತಪ್ಪಿ ಹೊಸ ವ್ಯವಸ್ಥೆ ಅನುಷ್ಠಾನಕ್ಕೆ ಬರಬೇಕು.

ಈ ಹಿಂದೆ ಇಂಗ್ಲೆಂಡಿನ ಆರ್ಥಿಕ ರಚನೆಯು ದೊಡ್ಡ ರಫ್ತು ವ್ಯಾಪಾರ, ಪರದೇಶಗಳಲ್ಲಿ ಬಂಡವಾಳ ವಿನಿಯೋಗ, ಲಂಡನ್ ನಗರದ ಹಣಕಾಸಿನ ನಾಯಕತ್ವ, ವಿಶಾಲ ಸಮುದ್ರ ವ್ಯಾಪಾರದ ಸಾರಿಕೆ ಇವುಗಳ ಆಧಾರದ ಮೇಲೆ ರಚಿತವಾಗಿತ್ತು. ಯುದ್ಧಕ್ಕೆ ಮುಂಚೆ ಬ್ರಿಟನ್ನಿನ ಆಹಾರದಲ್ಲಿ ಶೇಕಡ ೫೦ ರಷ್ಟು ಹೊರಗಿನಿಂದ ಬರಬೇಕಾಗಿತ್ತು. ವಿಶೇಷ ಶ್ರಮಪಟ್ಟು ಆಹಾರ ಉತ್ಪತ್ತಿ ಹೆಚ್ಚಿಸಿರುವುದರಿಂದ ಈಚೆಗೆ ಈ ಪರಾವಲಂಬನೆ ಸ್ವಲ್ಪ ಕಡಮೆಯಾಗಿರಬಹುದು. ಈ ಆಹಾರ ಆಮದು ಮತ್ತು ಕಚ್ಚಾ ಮಾಲುಗಳಿಗೆ ತಾನು ತಯಾರಿಸಿದ ನಯಮಾಲು, ಬಂಡವಾಳ, ಹಡಗಿನ ಸಾರಿಗೆ, ಹಣಕಾಸಿನ ಸಲಹೆ ಮತ್ತು ಇವರ 'ಅವ್ಯಕ್ತ' ರಫ್ತುಗಳೇ ಅದು ತೆರುವ ಬೆಲೆಯಾಗಿತ್ತು. ವಿದೇಶ ವ್ಯಾಪಾರ, ಅದರಲ್ಲೂ ಮುಖ್ಯವಾಗಿ ರಫ್ತು ವ್ಯಾಪಾರ, ಬ್ರಿಟಿಷ್ ಆರ್ಥಿಕ ರಚನೆಯ ಮುಖ್ಯ ಜೀವಮೂಲವಾಗಿತ್ತು. ಅಧೀನ ರಾಷ್ಟ್ರಗಳ ಮೇಲೆ ಸರ್ವಾಧಿಕಾರ ಆಡಳಿತ ನಡೆಸುತ್ತ ಸಾಮ್ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ಒಂದು ಬಗೆಯ ಸಮತೋಲನ ಕಲ್ಪಿಸಿಕೊಂಡು ಈ ಆರ್ಥಿಕ ರಚನೆ ಕಾಪಾಡಿಕೊಂಡರು. ಈ ಸರ್ವಾಧಿಕಾರದ ಹತೋಟಿ ಮತ್ತು ವ್ಯವಸ್ಥೆಗಳಿಂದ ಅಧೀನ ರಾಷ್ಟ್ರಗಳಿಗೆ ಅಪಾರ ನಷ್ಟವಾಯಿತು. ಮುಂದೆ ಪುನಃ ಈ ಆಡಳಿತ ನಡೆಸಲು ಸಾಧ್ಯವಿಲ್ಲ. ಬ್ರಿಟನ್ನಿನ ಹೊರದೇಶದ ಬಂಡವಾಳ ಕರಗಿ ಹೋಗಿದೆ; ಅಪಾರ ಸಾಲದ ಹೊರೆ ಅದರ ಮೈಮೇಲೆ ಬಂದಿದೆ; ಲಂಡನ್ನಿನ ಹಣಕಾಸಿನ ನಾಯಕತ್ವ ದಿವಾಳಿ ಎದ್ದಿದೆ. ಅಂದರೆ ಯುದ್ಧಾನಂತರ ದಿನಗಳಲ್ಲಿ ಇನ್ನು ಮುಂದೆ ಇಂಗ್ಲೆಂಡ್ ತನ್ನ ರಫ್ತು ವ್ಯಾಪಾರ ಮತ್ತು ಸಾಮಾನು ಸಾರಿಗೆಯನ್ನೇ ಹೆಚ್ಚು ಅವಲಂಬಿಸಬೇಕಾಗಿದೆ. ಆದರೂ ರಫ್ತು ವ್ಯಾಪಾರ ಹೆಚ್ಚಿಸುವುದೂ ಹಾಗಿರಲಿ ಹಿಂದಿನ ಮಟ್ಟದಲ್ಲಿ ಇಟ್ಟು ಕೊಳ್ಳುವುದೂ ಸಹ ಬಹಳ ಕಠಿಣವಿದೆ.

ಗ್ರೇಟ್ ಬ್ರಿಟನ್ನಿನ ಆಮದು ವ್ಯಾಪಾರ (ಪುನಃ ಹೊರಗೆ ಕಳುಹಿಸಿದ್ದನ್ನು ಬಿಟ್ಟು) ೧೯೩೬ ರಿಂದ ೩೮ರ ವರೆಗೆ ಮೂರು ವರ್ಷಗಳಲ್ಲಿ ೮೬೬,೦೦೦,೦೦೦ ಪೌಂಡುಗಳಾಗಿತ್ತು. ಅದರ ತೀರ್ಮಾನ ವಿವರ ಎಂದರೆ

| | | | |
|---|---|---|---|
| ರಫ್ತು ವ್ಯಾಪಾರ | ೪೬೮ | ಮಿಲಿಯನ್ | ಪೌಂಡುಗಳು |
| ಹೊರದೇಶದ ಬಂಡವಾಳದ ಉತ್ಪತ್ತಿ | ೨೦೩ | ,, | ,, |
| ಹಡಗಿನ ಸಾರಿಗೆ | ೧೦೫ | ,, | ,, |
| ಹಣಕಾಸಿನ ಸಲಹೆ | ೪೦ | ,, | ,, |
| ಒಳಗೆ ಬಂದದ್ದು | ೪೦ | ,, | ,, |
| ಒಟ್ಟು | ೮೬೬ | ,, | ,, |

ಹೊರಗಿನ ಬಂಡವಾಳದಿಂದ ಬರುವ ಉತ್ಪತ್ತಿಯ ಬದಲು (ಅಮೆರಿಕದ 'ಲೆಂಡ್-ಲೀಸ್' ಸಾಲ ಬಿಟ್ಟು) ಈಗ ಭಾರತ, ಈಜಿಪ್ಟ್, ಅರ್ಜೆಂಟೈನಾ ಮತ್ತು ಇತರ ದೇಶಗಳಿಂದ ಸಾಮಾನು ಮತ್ತು ಇತರ ಸಹಾಯ ಪಡೆದುದರ ಸಲುವಾಗಿ ದೊಡ್ಡ ಸಾಲದ ಹೊರೆ ಬಂದಿದೆ. ಯುದ್ಧ ಮುಗಿವ ಹೊತ್ತಿಗೆ ಈ ಸಾಲದ ಮೊತ್ತ ೩೦೦೦ ಮಿಲಿಯ ಪೌಂಡುಗಳಾಗಬಹುದೆಂದು ಲಾರ್ಡ್ ಕೇನ್ ಅಂದಾಜುಮಾಡಿದ್ದಾನೆ. ಶೇಕಡ ೫%

ರಂತೆ ಆದರೂ ವರ್ಷಕ್ಕೆ ೧೫೦ ಮಿಲಿಯನ್ ಪೌಂಡ್ ಬಡ್ಡಿಯಾಗುತ್ತದೆ. ಆದ್ದರಿಂದ ಯುದ್ಧ ಪೂರ್ವ ವರ್ಷಗಳ ಲೆಕ್ಕದಂತೆ ಗ್ರೇಟ್ ಬ್ರಿಟನ್‌ಗೆ ೩೦೦ ಮಿಲಿಯನ್ ಪೌಂಡು ಹಣ ಒಳಗೆ ಬರುತ್ತದೆ. ರಫ್ತು ವ್ಯಾಪಾರ ಮತ್ತು ಇತರ ಕೆಲಸಗಳಿಂದ ಉತ್ಪತ್ತಿ ಹೆಚ್ಚದಿದ್ದರೆ ಜನರ ಜೀವನಮಟ್ಟ ಕೆಳಗೆ ಇಳಿಯ ಬೇಕಾಗುತ್ತದೆ.

ಬ್ರಿಟನ್ನಿನ ಯುದ್ಧಾನಂತರ ನೀತಿಯಲ್ಲಿ ಇದೇ ಮುಖ್ಯ ಸಮಸ್ಯೆ. ತನ್ನ ಆರ್ಥಿಕ ರಚನೆ ಉಳಿಸಿ ಕೊಳ್ಳಬೇಕಾದರೆ ಕೆಲವು ಅನಿರ್ವಾಹ ಬದಲಾವಣೆ ಮಾತ್ರ ಮಾಡಿಕೊಂಡು ಅಧೀನವಿರುವ ಸಾಮ್ರಾಜ್ಯ ಉಳಿದರೆ ಸಾಕೆಂದು ಅದರ ಇಷ್ಟ. ಅಧೀನ ಸಾಮ್ರಾಜ್ಯವಿರಲಿ ಇಲ್ಲದಿರಲಿ, ಯಾವುದಾದರೊಂದು ರಾಷ್ಟ್ರ ಸಮುದಾಯದ ಪಾಲುಗಾರಿಕೆ ಮತ್ತು ಬೆಂಬಲದಿಂದ ಮಾತ್ರ ಅಪಾರ ಸಂಪತ್ಸಮೃದ್ಧಿ ಇರುವ ಅಮೆರಿಕದ ಸಂಯುಕ್ತ ಸಂಸ್ಥಾನ ಮತ್ತು ಸೋವಿಯಟ್ ಯೂನಿಯನ್ ಮಹಾರಾಷ್ಟ್ರಗಳ ಜೊತೆಗೆ ರಾಜಕೀಯ ಮತ್ತು ಆರ್ಥಿಕ ಸಮಸ್ಯೆಗಳಲ್ಲಿ ಸರಿಸಮಾನತೆಯಿಂದ ಪ್ರಮುಖ ಪಾತ್ರವಹಿಸಲು ಸಾಧ್ಯ. ಆದರೆ ತನ್ನ ಸಾಮ್ರಾಜ್ಯ ಮುಂದುವರಿಸಿಕೊಂಡು, ಇದ್ದುದು ಉಳಿಸಿಕೊಂಡು, ಸಾಧ್ಯವಾದರೆ ಹೊಸರಾಜ್ಯಗಳ ಮೇಲೆ—ಉದಾಹರಣೆಗೆ ತಾಯ್‌ಲೆಂಡ್—ತನ್ನ ಪ್ರಭಾವ ಹೆಚ್ಚಿಸಿಕೊಂಡು ಬಾಳಬೇಕೆಂದೇ ಅದರ ಆಸೆ. ಅದೇ ಉದ್ದೇಶದಿಂದ ಡೊಮಿನಿಯನ್ ರಾಷ್ಟ್ರಗಳು ಮತ್ತು ಪಶ್ಚಿಮ ಯೂರೋಪಿನ ಸಣ್ಣ ಸಣ್ಣ ರಾಷ್ಟ್ರಗಳ ಸಮೀಪ ಸಂಘಟನೆ ಸಾಧಿಸಬೇಕೆಂದು ಅದರ ಪ್ರಯತ್ನ. ಫ್ರೆಂಚ್ ಮತ್ತು ಡಚ್ ಸಾಮ್ರಾಜ್ಯಗಳು ಬ್ರಿಟಿಷ್ ನೀತಿಯನ್ನು ಸಂಪೂರ್ಣ ಸಮರ್ಥಿಸುತ್ತವೆ. ಡಚ್ ಸಾಮ್ರಾಜ್ಯ ಬ್ರಿಟಿಷ್ ಸಾಮ್ರಾಜ್ಯದ ಒಂದು ಉಪಗ್ರಹ, ಬ್ರಿಟಿಷ್ ಸಾಮ್ರಾಜ್ಯವಿಲ್ಲದೆ ಡಚ್ ಸಾಮ್ರಾಜ್ಯ ಉಳಿಯುವಂತೆ ಇಲ್ಲ.

ಹಳೆಯ ಭಾವನೆಗಳಿಗೆ ಶರಣುಹೋದ ಜನರಿಗೆ ಹಳೆಯ ದೃಷ್ಟಿ ಮತ್ತು ಆದರ್ಶಗಳ ಆಧಾರದ ಮೇಲೆ ರಚಿತವಾದ ಬ್ರಿಟಿಷ್ ನೀತಿಯ ನಿಲುವು ಅರ್ಥಮಾಡಿಕೊಳ್ಳುವುದು ಸುಲಭ. ಆದರೂ ಈ ಹಳೆಯ ಹತ್ತೊಂಭತ್ತನೆಯ ಶತಮಾನದ ಆರ್ಥಿಕನೀತಿಯಲ್ಲಿ ಬ್ರಿಟನ್ನು ಇಂದು ಎದುರಿಸಬೇಕಾದ ತೊಂದರೆಗಳು ಅನೇಕ ಇವೆ. ಒಟ್ಟಿನಲ್ಲಿ ಅದಕ್ಕೆ ಬುಡ ಭದ್ರವಿಲ್ಲ; ಅದರ ಆರ್ಥಿಕ ನೀತಿ ಆಧುನಿಕ ಪರಿಸ್ಥಿತಿಗೆ ಅನು ಗುಣವಾಗಿಲ್ಲ; ಅದರ ಆರ್ಥಿಕ ಸಂಪತ್ತು ಅತ್ಯಲ್ಪ, ಮತ್ತು ಅದರ ಕೈಗಾರಿಕೋದ್ಯಮದ ಮತ್ತು ಸೈನ್ಯಶಕ್ತಿ ಮೊದಲಿನ ಮಟ್ಟದಲ್ಲಿರಲು ಸಾಧ್ಯವಿಲ್ಲ. ಹಳೆಯ ಆರ್ಥಿಕ ರಚನೆ ಮುಂದುವರಿಸಲು ಮಾಡಿರುವ ಸಲಹೆ ಗಳಲ್ಲಿ ಅತ್ಯವಶ್ಯ ಬೇಕಾದ ಭದ್ರತೆ ಇಲ್ಲ; ಏಕೆಂದರೆ ಅಧೀನರಾಜ್ಯಗಳಲ್ಲಿ ಸದಾ ಕೊನೆಇಲ್ಲದ ಘರ್ಷಣೆ, ಸುರಕ್ಷತೆಯ ಅಭಾವ, ವಿರೋಧ ಭಾವನೆ ಬೆಳೆದು ಬ್ರಿಟನ್ನಿನ ಭವಿಷ್ಯ ಇನ್ನೂ ಕಠಿಣತಮವಾಗುತ್ತದೆ. ತಮ್ಮ ಜೀವನ ಮಟ್ಟ ಮೊದಲಿನ ಅಂತಸ್ತಿನಲ್ಲೇ ಇರಬೇಕು, ಸಾಧ್ಯವಾದರೆ ಉತ್ತಮಪಡಿಸಬೇಕು ಎಂಬ ಬ್ರಿಟಿಷರ ಇಚ್ಛೆ ಸುಲಭ ಅರ್ಥವಾಗುತ್ತದೆ. ಆದರೆ ಬ್ರಿಟನ್ನಿನ ರಫ್ತು ಪದಾರ್ಥಗಳಿಗೆ ಸುರಕ್ಷಿತಪೇಟೆ ಕಾದಿರಿಸಿ, ಅಗ್ಗದ ಕಚ್ಚಾಮಾಲು ಮತ್ತು ಆಹಾರ ಸರಬರಾಜಿಗೆ ಅಧೀನ ರಾಜ್ಯಗಳ ಮತ್ತು ಇತರ ರಾಷ್ಟ್ರ ಗಳ ಹತೋಟಿ ಪೂರ್ಣ ಅವರ ಕೈಯಲ್ಲಿ ಇದ್ದರೆ ಮಾತ್ರ ಅದು ಸಾಧ್ಯ. ಅಂದರೆ ಏಷ್ಯ ಮತ್ತು ಆಫ್ರಿಕದ ಕೋಟ್ಯಾನುಕೋಟಿ ಜನ ಅರೆಹೊಟ್ಟೆಯಲ್ಲಿದ್ದು ಬ್ರಿಟನ್ನಿನ ಜೀವನ ಮಟ್ಟವನ್ನು ಉನ್ನತ ಮಟ್ಟದಲ್ಲಿ ಉಳಿಸಬೇಕೆಂದು. ಬ್ರಿಟನ್ನಿನ ಜೀವನ ಮಟ್ಟ ಕಡಿಮೆಮಾಡಿರೆಂದು ಯಾರೂ ಹೇಳುವುದಿಲ್ಲ; ಆದರೆ ಅಮಾನುಷ ಜೀವನ ಕೂಪಕ್ಕೆ ತಮ್ಮನ್ನು ತಳ್ಳಿರುವ ಸಾಮ್ರಾಜ್ಯನೀತಿ ಮುಂದುವರಿಸಿ ಆ ಮಟ್ಟ ಕಾಪಾ ಡಲು ಏಷ್ಯ ಮತ್ತು ಆಫ್ರಿಕದ ಜನ ಯಾರೂ ಒಪ್ಪುವುದಿಲ್ಲ. ಯುದ್ಧ ಪೂರ್ವದಲ್ಲಿ ಬ್ರಿಟನ್ನಿನ ಪ್ರತಿ ಯೊಬ್ಬ ವ್ಯಕ್ತಿಯ ಕೊಳ್ಳುವ ಶಕ್ತಿ ವರ್ಷಕ್ಕೆ ೯೭ ಪೌಂಡು ಇತ್ತು; (ಅಮೆರಿಕದಲ್ಲಿ ಇದು ಇನ್ನೂ ಹೆಚ್ಚು) ಭಾರತದಲ್ಲಿ ಅದು ೬ ಪೌಂಡುಗಳಿಗಿಂತ ಕಡಮೆ ಇತ್ತು. ಈ ಅಗಾಧ ವ್ಯತ್ಯಾಸ ಸಹಿಸುವಂತೆ ಇಲ್ಲ. ಸಾಮ್ರಾಜ್ಯ ಆರ್ಥಿಕ ನೀತಿಯಿಂದ ವರಮಾನ ಕ್ರಮೇಣ ಕಡಮೆಯಾಗುತ್ತ ಬಂದು ಕೊನೆಗೆ ಅಧಿಕಾರ ನಡೆಸುವ ಸಾಮ್ರಾಟ ರಾಷ್ಟ್ರಕ್ಕೇ ಹಾನಿ ತರುತ್ತದೆ. ಅಮೆರಿಕೆಯ ಸಂಯುಕ್ತ ಸಂಸ್ಥಾನಗಳ ಜನರಿಗೆ ಇದು ಸಂಪೂರ್ಣ ಅರ್ಥವಾಗಿದೆ. ಆದ್ದರಿಂದಲೇ ಕೈಗಾರಿಕೋದ್ಯಮ ಮತ್ತು ಆಡಳಿತ ಸ್ವಾತಂತ್ರ್ಯ ಹೆಚ್ಚಿಸಿ ಅಧೀನ ರಾಜ್ಯಗಳ ಜನರ ಕೊಳ್ಳುವ ಶಕ್ತಿ ಹೆಚ್ಚಿಸಬೇಕೆಂದು ಅವರ ಇಚ್ಛೆ.

ಬ್ರಿಟನ್ನಿಗೆ ಸಹ ಭಾರತದಲ್ಲಿ ಕೈಗಾರಿಕಾಭಿವೃದ್ಧಿ ಮಾಡಬೇಕೆಂದು ಈಗ ಜ್ಞಾನೋದಯವಾಗುತ್ತಿದೆ. ಬಂಗಾಲ ಕ್ಷಾಮದಿಂದ ಅನೇಕರು ಆ ಕಡೆ ಯೋಚಿಸತೊಡಗಿದರು. ಆದರೆ ಭಾರತದಲ್ಲಿ ಏನು ಕೈಗಾರಿಕಾ ಪ್ರಗತಿಯಾದರೂ ಅದು ಬ್ರಿಟಿಷರ ಅಧೀನ ಇರಬೇಕು. ಬ್ರಿಟಿಷ್ ಕೈಗಾರಿಕೆಗೆ ಅಡಿಯಾಳಾಗಿರಬೇಕೆಂದೇ ಬ್ರಿಟಿಷರ ನೀತಿ. ಏಷ್ಯದ ಇತರ ರಾಷ್ಟ್ರಗಳಂತೆ ಭಾರತದಲ್ಲಿ ಸಹ ಕೈಗಾರಿಕಾ ಪ್ರಗತಿಯಾಗುವುದು ನಿಶ್ಚಯ, ಆದರೆ ಎಷ್ಟು ಬೇಗ ಎಂಬುದೇ ಮುಖ್ಯ ಪ್ರಶ್ನೆ. ಅಲ್ಲದೆ ಬೇರೊಂದು ಸಾಮ್ರಾಜ್ಯ ನೀತಿ ಅಥವ ವಿದೇಶೀಯರ ಅಧಿಕಾರಕ್ಕೆ ಅಡಿಯಾಳಾಗಿರಲು ಸಾಧ್ಯವೇ ಎಂಬುದು ಅನುಮಾನ.

ಬ್ರಿಟಿಷ್ ಸಾಮ್ರಾಜ್ಯ ಈಗಿರುವಂತೆ ಒಂದು ಭೌಗೋಲಿಕ ಪ್ರದೇಶವಲ್ಲ; ಆರ್ಥಿಕ ಅಥವ ಸೈನ್ಯ ದೃಷ್ಟಿಯಿಂದ ಒಂದು ಪ್ರದೇಶವೂ ಅಲ್ಲ. ಅದು ಕೇವಲ ಅಭಿಮಾನದಿಂದ ಮುಂದುವರಿಯುತ್ತಿರುವ ಐತಿಹಾಸಿಕ. ಆಕಸ್ಮಿಕ ಅಭಿಮಾನ ಮತ್ತು ಹಳೆಯ ಬಾಂಧವ್ಯಗಳಿಗೆ ಇನ್ನೂ ಅದರಲ್ಲಿ ಬೆಲೆ ಇದೆ ; ಆದರೆ ಕ್ರಮೇಣ ಇನ್ನೂ ಮುಖ್ಯ ವಿಷಯ ಮರೆಮಾಚುವಂತೆ ಇಲ್ಲ. ಈ ಭಾವನೆ ಸಹ ಬ್ರಿಟಿಷರ ರಕ್ತ ಸಂಬಂಧ ವಿರುವ ಜನ ವಾಸಿಸುವ ಪ್ರದೇಶಗಳಿಗೆ ಮಾತ್ರ ಅನ್ವಯಿಸುತ್ತದೆ ; ಭಾರತ ಮತ್ತು ಇತರ ಅಧೀನ ರಾಷ್ಟ್ರ ಗಳಿಗೆ ಖಂಡಿತ ಅನ್ವಯಿಸುವುದಿಲ್ಲ. ಅದಕ್ಕೆ ಪ್ರತಿಯಾಗಿ ವಿರೋಧವೇ ಹೆಚ್ಚು. ದಕ್ಷಿಣ ಆಫ್ರಿಕ ಬೋಅರ್ ಗಳಿಗೂ ಅದು ಅನ್ವಯಿಸುವುದಿಲ್ಲ. ದೊಡ್ಡ ದೊಡ್ಡ ಡೊಮಿನಿಯನ್‌ಗಳಲ್ಲಿ ಸಹ ಅಸಾಧ್ಯ ಪರಿವರ್ತನೆ ಗಳಾಗಿ ಬ್ರಿಟನ್ ಜೊತೆಗೆ ಇದ್ದ ಸಾಂಪ್ರದಾಯಿಕ ಬಾಂಧವ್ಯ ಸಡಿಲುವಂತೆ ಇದೆ ಯುದ್ಧ ಸಮಯದಲ್ಲಿ ಕೈಗಾರಿಕೋದ್ಯಮದಲ್ಲಿ ಉನ್ನತ ಪ್ರಗತಿಸಾಧಿಸಿ ಪ್ರಬಲ ರಾಷ್ಟ್ರವಾದ ಕೆನಡ ದೇಶದ ಭವಿಷ್ಯವು ಅಮೆರಿಕದ ಸಂಯುಕ್ತ ಸಂಸ್ಥಾನಗಳನ್ನು ಅವಲಂಬಿಸಿದೆ. ಸರ್ವತೋಮುಖ ಬೆಳೆಯುತ್ತಿರುವ ಅದರ ಆರ್ಥಿಕ ರಚನೆ ಯಿಂದ ಅನೇಕ ವಿಷಯಗಳಲ್ಲಿ ಬ್ರಿಟಿಷ್ ಕೈಗಾರಿಕೆಗೆ ಪ್ರತಿಸ್ಪರ್ಧಿ ಬರಬಹುದು. ಅದೇ ರೀತಿ ಪ್ರಗತಿಪರ ಆರ್ಥಿಕ ನೀತಿಯ ಆಸ್ಟ್ರೇಲಿಯಾ ಮತ್ತು ನ್ಯೂಜಿಲೆಂಡ್ ತಮ್ಮ ಸ್ಥಾನ ಬ್ರಿಟನ್ ಇರುವ ಯೂರೋಪಿನ ವಲಯದಲ್ಲಿಲ್ಲ, ಸಂಯುಕ್ತ ಸಂಸ್ಥಾನಗಳ ಮುಖ್ಯ ಕಾರ್ಯರಂಗವಾದ ಶಾಂತಿ ಸಾಗರದ ಏಷ್ಯ ಮತ್ತು ಅಮೆರಿಕೆಗಳ ವಲಯದಲ್ಲಿ ಎಂದು ಅರಿತುಕೊಳ್ಳುತ್ತಿವೆ. ಸಂಸ್ಕೃತಿ ದೃಷ್ಟಿಯಿಂದ ಸಹ ಕೆನಡ ಮತ್ತು ಆಸ್ಟ್ರೇಲಿಯ ಅಮೆರಿಕದ ಸಂಯುಕ್ತ ಸಂಸ್ಥಾನಗಳ ಕಡೆಗೇ ನೋಡುತ್ತಿವೆ.

ಇಂದಿನ ಬ್ರಿಟಿಷರ ಅಧೀನರಾಷ್ಟ್ರ ನೀತಿಗೂ ಅಮೆರಿಕನರ ನೀತಿ ಮತ್ತು ವಿಶ್ವವ್ಯಾಪಕತೆಯ ಮನೋ ಭಾವಕ್ಕೂ ಪರಸ್ಪರ ವಿರುದ್ಧವಿದೆ. ತಮ್ಮ ರಫ್ತು ಸಾಮಾನುಗಳಿಗೆ ತೆರೆದ ಪೇಟೆ ಬೇಕೆಂದು ಅಮೆರಿಕದ ಸಂಯುಕ್ತ ಸಂಸ್ಥಾನದ ನೀತಿ. ಇತರ ರಾಷ್ಟ್ರಗಳ ಯಾವ ಮಿತಿ ಅಥವ ಹತೋಟಿಯನ್ನೂ ಅದು ಸಹಿಸ ಲಾರದು. ಏಷ್ಯದ ಕೋಟ್ಯಂತರ ಜನ ಕೈಗಾರಿಕೆಯಲ್ಲಿ ಮುಂದುವರಿದು ಅವರ ಜೀವನಮಟ್ಟ ಹೆಚ್ಚ ಬೇಕೆಂಬ ಅವರ ಅಭಿಪ್ರಾಯ ಉದಾರ ದೃಷ್ಟಿಯಿಂದ ಬಂದುದಲ್ಲ; ಆದರೆ ತಮ್ಮ ಹೆಚ್ಚುವರಿ ಸಾಮಾನುಗಳು ಮಾರಾಟವಾಗಲೆಂದು ; ಅಮೆರಿಕ ಮತ್ತು ಬ್ರಿಟನ್ನುಗಳ ರಫ್ತು ಮತ್ತು ಹಡಗಿನ ವ್ಯಾಪಾರಕ್ಕೆ ಘರ್ಷಣೆ ಅನಿವಾರ್ಯವೆಂದು ತೋರುತ್ತದೆ. ವಿಶೇಷ ಅನುಕೂಲ ಇರುವುದರಿಂದ ಪ್ರಪಂಚದ ಎಲ್ಲ ರಾಷ್ಟ್ರಗಳ ವಿಮಾನ ಬಲ ಉತ್ತಮಗೊಳ್ಳಲೆಂಬ ಅಮೆರಿಕದ ಇಷ್ಟಕ್ಕೆ ಇಂಗ್ಲೆಂಡಿನ ವಿರೋಧವಿದೆ. ಅಮೆರಿಕ ತಾಯ್‌ಲ್ಯಾಂಡ್ ಸ್ವತಂತ್ರವಾಗಲಿ ಎಂದರೆ ಇಂಗ್ಲೆಂಡಿಗೆ ಅದು ಅಧೀನ ರಾಷ್ಟ್ರವಾಗಿರಬೇಕು. ಅವರವರ ಆರ್ಥಿಕ ನೀತಿಯ ಸ್ವಭಾವಕ್ಕೆ ಸಹಜವಾಗಿ ಈ ವಿರೋಧ ಪ್ರಕೃತಿಗಳು ಎಲ್ಲ ಅಧೀನ ರಾಷ್ಟ್ರಗಳಲ್ಲೂ ಕಾಣುತ್ತಿವೆ.

ಇಂದಿನ ವಿಶೇಷ ಕಠಿನ ಪರಿಸ್ಥಿತಿಯಲ್ಲಿ ಕಾಮನ್‌ವೆಲ್ತ್ ಮತ್ತು ಇತರ ಸಾಮ್ರಾಜ್ಯ ರಾಷ್ಟ್ರಗಳಲ್ಲಿ ಹೆಚ್ಚಿನ ಐಕಮತ್ಯ ಸಾಧಿಸಬೇಕೆಂಬ ಬ್ರಿಟಿಷ್ ನೀತಿ ಸುಲಭವಾಗಿ ಅರ್ಥವಾಗುತ್ತದೆ. ಆದರೆ ಅದಕ್ಕೆ ಪ್ರತಿ ವಿರೋಧ ಹುಟ್ಟುವುದೂ ವಾಸ್ತವಿಕ ಸತ್ಯ. ಪ್ರಪಂಚದಗತಿ, ಅಧೀನ ರಾಷ್ಟ್ರಗಳ ರಾಷ್ಟ್ರೀಯ ಚಳವಳಿ ಮತ್ತು ಅವುಗಳ ಶೈಥಿಲ್ಯ ಆಗಲೇ ಎದುರು ನಿಂತಿವೆ. ಹಳೆಯ ತಳಹದಿಯ ಮೇಲ್ಮೆ, ಗತಕಾಲದ ಭಾವನೆಗಳನ್ನೇ ನಂಬಿ, ಸಾಮ್ರಾಜ್ಯದ ಕನಸಿನ ಭ್ರಮೆಯಲ್ಲೇ ಮಾತನಾಡುತ್ತ ಪ್ರಪಂಚದ ವ್ಯಾಪಾರದ ಹತೋಟಿಯನ್ನೆಲ್ಲ ತನ್ನ ಕೈಯಲ್ಲಿಟ್ಟುಕೊಳ್ಳುತ್ತೇನೆಂದು—ಬೇರೆ ರಾಷ್ಟ್ರಗಳ ಮಾತು ಹಾಗಿರಲಿ—ಬ್ರಿಟನ್ ಯೋಚಿಸುವುದು ಶುದ್ಧ ಮೂರ್ಖತನದ ಸಂಕುಚಿತ ನೀತಿ ; ಏಕೆಂದರೆ ರಾಜಕೀಯ, ಆರ್ಥಿಕ ಕೈಗಾರಿಕಾ

ಪ್ರಗತಿ ಸಾಧಿಸಿ ಪ್ರಪಂಚದ ಪ್ರಮುಖ ರಾಷ್ಟ್ರವಾಗಲು ಯಾವ ಕಾರಣಗಳಿದ್ದವೋ ಅವೆಲ್ಲ ಇಂದು ಮಾಯವಾಗಿ ಇವೆ. ಆದರೂ ಬ್ರಿಟನ್ನಿಗೆ ಹಿಂದೆ ಇದ್ದ ಕೆಲವು ಅದ್ಭುತ ಶಕ್ತಿಗಳೂ—ಅಪ್ರತಿಹತ ಧೈರ್ಯ, ಒಮ್ಮತದ ಕಾರ್ಯಶಕ್ತಿ, ವೈಜ್ಞಾನಿಕ ಮತ್ತು ರಚನಾತ್ಮಕ ಬಲ ಮತ್ತು ಸಮಯೋಚಿತ ವ್ಯವಹಾರ ನೀತಿ—ಈಗಲೂ ಅದಕ್ಕೆ ಇವೆ. ಈ ಗುಣಗಳು ಮತ್ತು ಅದರ ಇತರ ವೈಶಿಷ್ಟ್ಯಗಳು ಇದ್ದರೆ ಯಾವ ರಾಷ್ಟ್ರವಾದರೂ ಮಹಾರಾಷ್ಟ್ರವಾಗಬಲ್ಲುದು ; ಯಾವ ಸಂಕಟ ಮತ್ತು ಅಪಾಯ ಒದಗಿದರೂ ಎದುರಿಸಬಲ್ಲುದು. ಬೇರೊಂದು ಸಮತೂಕದ ಆರ್ಥಿಕ ರಚನೆ ಅವಲಂಬಿಸಿ ತನ್ನ ಇಂದಿನ ಪ್ರಮುಖ ಸಮಸ್ಯೆ ನಿವಾರಿಸಿಕೊಳ್ಳಬಹುದು. ಆದರೆ ಮುಂದೆಯೂ ಸಾಮ್ರಾಜ್ಯವನ್ನೇ ನೆಟ್ಟ ಅದರ ಬಲದಿಂದಲೇ ಮುಂದುವರಿಯುತ್ತೇನೆಂದರೆ ಯಶಸ್ವಿಯಾಗುವುದು ಅಸಂಭವ.

ಆದರೂ ಅಮೆರಿಕ ಮತ್ತು ಸೋವಿಯಟ್ ನೀತಿಗಳಿಗೆ ಇರುವ ಮೈತ್ರಿ ಅಥವ ವಿರೋಧ ಮತ್ತು ಆ ದೇಶಗಳಿಗೂ ಬ್ರಿಟನ್ನಿಗೂ ಇರುವ ಸಂಬಂಧ ಇವುಗಳನ್ನೆ ಇದೆಲ್ಲ ಅವಲಂಬಿಸಿದೆ. ಪ್ರಪಂಚ ಶಾಂತಿ ಮತ್ತು ಸಹಕಾರ ದೃಷ್ಟಿಯಿಂದ ಮೂರೂ ಮಹಾರಾಷ್ಟ್ರಗಳ ಒಮ್ಮತದ ಕಾರ್ಯಾಚರಣೆ ಅವಶ್ಯವೆಂದು ಎಲ್ಲರೂ ಕೂಗುತ್ತಿದ್ದಾರೆ. ಆದರೆ ಯುದ್ಧ ನಡೆಯುತ್ತಿರುವಾಗ ಸಹ ಪ್ರತಿಯೊಂದು ಹೆಜ್ಜೆಗೂ ಒಡಕು ಮತ್ತು ಭಿನ್ನಾಭಿಪ್ರಾಯಗಳೇ ಎದ್ದು ನಿಲ್ಲುತ್ತಿವೆ. ಭವಿಷ್ಯ ಏನೇ ಇರಲಿ ಯುದ್ಧದ ನಂತರ ಅಮೆರಿಕದ ಸಂಯುಕ್ತ ಸಂಸ್ಥಾನಗಳ ಆರ್ಥಿಕ ನೀತಿಯು ವಿಸ್ತೃತವೂ, ಪರಿಣಾಮದಲ್ಲಿ ಸ್ಫೋಟಕವೂ ಆಗುತ್ತದೆ. ಇದರಿಂದ ಹೊಸ ಬಗೆಯ ಸಾಮ್ರಾಜ್ಯವೇನಾದರೂ ಜನ್ಮತಾಳುತ್ತದೆಯೆ ? ಪ್ರಪಂಚದ ಭವಿಷ್ಯದ ಗತಿ ನಿರ್ಧಾರಕ ಶಕ್ತಿ ಅಮೆರಿಕೆಗೆ ಇರುವುದರಿಂದ ಆ ನೂತನ ಸಾಮ್ರಾಜ್ಯವೇನಾದರೂ ಜನ್ಮತಾಳಿದರೆ ಅದು ಇನ್ನೊಂದು ಪ್ರಪಂಚ ದುರಂತವೇ ಸರಿ.

ಸೋವಿಯಟ್ ಸಂಯುಕ್ತರಾಷ್ಟ್ರದ ಭಾವೀನೀತಿ ಇನ್ನೂ ಗುಪ್ತವೇ ಇದೆ; ಆದರೂ ತೆರೆಮರೆಯ ಕಿರುನೋಟ ಒಮ್ಮೊಮ್ಮೆ ದೊರಕುತ್ತದೆ. ತನ್ನ ಗಡಿಯ ಸುತ್ತಮುತ್ತ ಆದಷ್ಟು ಅಧೀನವೋ ಅಥವ ಅರೆಬರೆಯ ಸ್ವಾತಂತ್ರ್ಯದವೋ ಆದ ಮಿತ್ರರಾಷ್ಟ್ರಗಳ ವ್ಯೂಹ ಕಟ್ಟಿಕೊಳ್ಳಬೇಕೆಂಬುದೇ ಅದರ ಗುರಿ. ಇತರ ರಾಷ್ಟ್ರಗಳೊಂದಿಗೆ ಸಹಕರಿಸಿ ಒಂದು ಪ್ರಪಂಚ ಸಂಸ್ಥೆಯ ರಚನೆ ಬೆಂಬಲಕೊಡುತ್ತಿದ್ದರೂ ತನ್ನ ಅಜೇಯ ಅಂತಃಶಕ್ತಿಯ ಆಧಾರದಮೇಲೆ ಸ್ವಶಕ್ತಿಯನ್ನು ವೃದ್ಧಿಗೊಳಿಸುವುದರಲ್ಲೇ ಅದಕ್ಕೆ ವಿಶ್ವಾಸ ಹೆಚ್ಚು. ಇತರ ರಾಷ್ಟ್ರಗಳದೃಷ್ಟಿಯೂ ಸಾಧ್ಯವಾದಷ್ಟು ಅದೇ ಇರುವಂತೆ ಇದೆ. ಪ್ರಪಂಚದ ಸೌಹಾರ್ದಕ್ಕೆ ಇದು ಶುಭಸೂಚನೆಯಲ್ಲ. ಅಮೆರಿಕ ಸಂಯುಕ್ತ ಸಂಸ್ಥಾನಗಳು ಮತ್ತು ಬ್ರಿಟನ್ನಿಗೆ ಇರುವ ರಫ್ತು ವ್ಯಾಪಾರ ಪೈಪೋಟಿ ಸೋವಿಯಟ್ ರಾಷ್ಟ್ರಕ್ಕೂ ಮತ್ತು ಇತರ ದೇಶಗಳಿಗೂ ಇಲ್ಲ. ಆದರೆ ಅಭಿಪ್ರಾಯ ಭೇದದ ಆಳ ಅಪಾರವಿದೆ. ಅವರ ದೃಷ್ಟಿಕೋಣವೇ ಬೇರೆ ಬೇರೆ. ಯುದ್ಧ ಕಾಲದ ಏಕೀ ಭಾವನೆಯ ಹೋರಾಟದ ಮೈತ್ರಿಯಿಂದ ಸಹ ಪರಸ್ಪರ ಸಂಶಯ ನಾಶವಾಗಿಲ್ಲ. ಈ ಭಿನ್ನಾಭಿಪ್ರಾಯ ಪ್ರಬಲವಾದರೆ ಅಮೆರಿಕದ ಸಂಯುಕ್ತ ಸಂಸ್ಥಾನ ಮತ್ತು ಬ್ರಿಟನ್ ಒಂದು ಕಡೆ ಸೇರಿ ಸೋವಿಯಟ್ ರಾಷ್ಟ್ರದ ವಿರುದ್ಧ ನಿಲ್ಲುವುದು ನಿಶ್ಚಯ.

ಈ ಚಿತ್ರದಲ್ಲಿ ಏಷ್ಯ ಮತ್ತು ಆಫ್ರಿಕದ ಕೋಟ್ಯಾನುಕೋಟಿ ಜನರ ಸ್ಥಾನ ಏನು ? ಅವರ ಆತ್ಮಪ್ರಜ್ಞೆ ಈಗ ಹೆಚ್ಚುತ್ತಿದೆ. ತಮ್ಮ ಭವಿಷ್ಯದಲ್ಲಿ ಅವರಿಗೆ ಹೆಚ್ಚು ವಿಶ್ವಾಸವಿದೆ ; ವಿಶ್ವದೃಷ್ಟಿಯೂ ಅವರಲ್ಲಿದೆ. ಅವರಲ್ಲನೇಕರು ಪ್ರಪಂಚ ಘಟನೆಗಳನ್ನು ಅತಿ ಕುತೂಹಲದಿಂದ ಅಭ್ಯಾಸಮಾಡುತ್ತಿದಾರೆ. ಪ್ರತಿಯೊಂದು ಘಟನೆಯನ್ನೂ ಅವರು ತಮ್ಮ ಸ್ವಾತಂತ್ರ್ಯಕ್ಕೆ ಅದರಿಂದ ಸಹಾಯವಾಗುತ್ತದೆಯೆ, ತಮ್ಮ ರಾಷ್ಟ್ರದ ಮೇಲಿನ ಪರರಾಷ್ಟ್ರದ ಸ್ವಾಮ್ಯ ಮುಕ್ತಾಯವಾಗುತ್ತದೆಯೆ, ಇತರರೊಂದಿಗೆ ಸಹಕರಿಸಿ ತಮಗೆ ಇಷ್ಟಬಂದ ಜೀವನ ನಡೆಸಲು ಸ್ವಾತಂತ್ರ್ಯ ಮತ್ತು ಶಕ್ತಿ ದೊರೆಯುವುದೆ, ಎಲ್ಲ ರಾಷ್ಟ್ರಗಳಿಗೆ ಮತ್ತು ರಾಷ್ಟ್ರಗಳ ಒಳ ಪಂಗಡಗಳಿಗೆ ಸಮಾನತೆ ಮತ್ತು ಸಮಾನ ಅವಕಾಶ ದೊರೆಯುವುದೆ, ಬಡತನ, ಅಜ್ಞಾನ ಬೇಗ ನಿವಾರಣೆಮಾಡಿ ಜೀವನಮಟ್ಟ ಉತ್ತಮಗೊಳಿಸಲು ಅವಕಾಶ ದೊರೆಯುವುದೆ, ಎಂಬ ದೃಷ್ಟಿಯಿಂದ ಎಲ್ಲ ಘಟನೆಗಳನ್ನು ನೋಡುತ್ತಿದಾರೆ. ರಾಷ್ಟ್ರೀಯ ಭಾವನೆ ಅವರಲ್ಲಿದ್ದರೂ ಅದು

ಇತರರ ಬಾಳನ್ನು ನಾಶಮಾಡಿ ಅವರ ಮೇಲೆ ಅಧಿಕಾರ ನಡೆಸಲಿಕ್ಕಲ್ಲ. ವಿಶ್ವ ಸಹಕಾರದ ಎಲ್ಲ ಪ್ರಯತ್ನಗಳಿಗೆ, ವಿಶ್ವದಲ್ಲಿ ಒಂದು ಅಂತರ ರಾಷ್ಟ್ರೀಯ ವ್ಯವಸ್ಥೆ ಏರ್ಪಡಲೆಂಬ ಸಲಹೆಗೆ ಅವರ ಸ್ವಾಗತವಿದೆ; ಆದರೆ ಹಿಂದಿನ ಆಕ್ರಮಣ ನೀತಿ ಮುಂದುವರಿಸಲು ಅದು ಒಂದು ಉಪಾಯವೇ ಎಂದು ಸಂಶಯ ಮತ್ತು ವಿಸ್ಮಯದಿಂದ ಅದನ್ನು ನೋಡುತ್ತಿದ್ದಾರೆ. ಏಷ್ಯ ಮತ್ತು ಆಫ್ರಿಕದ ಬಹು ಭಾಗದಲ್ಲಿ ಜನ ಎಚ್ಚತ್ತು, ಇಂದಿನ ಅಸಹ್ಯ ಪರಿಸ್ಥಿತಿಯನ್ನು ಒಂದು ನಿಮಿಷವೂ ಸಹಿಸಲಾರದೆಂದು ಅಸಮಾಧಾನದಿಂದ ಕುದಿಯುತ್ತಿದಾರೆ. ಏಷ್ಯದ ಬೇರೆ ಬೇರೆ ದೇಶಗಳಲ್ಲಿ ಜೀವನ ರೀತಿ ಮತ್ತು ಸಮಸ್ಯೆಗಳು ಭಿನ್ನ ಭಿನ್ನ ಇವೆ, ನಿಜ; ಆದರೆ ಯಾವುದೋ ಒಂದು ಅವ್ಯಕ್ತ ಶಕ್ತಿಯು ಚೀಣ, ಭಾರತ, ಆಗ್ನೇಯ ಏಷ್ಯ, ಪಶ್ಚಿಮ ಏಷ್ಯ, ಅರಬ್ಬಿ ಪ್ರಪಂಚ ಈ ಎಲ್ಲ ಕಡೆ ಜನರಲ್ಲಿ ಒಂದೇ ಭಾವನೆ ತುಂಬಿ ಒಂದು ಬಾಂಧವ್ಯ ಕಲ್ಪಿಸಿ ಜನರನ್ನು ಒಟ್ಟುಗೂಡಿಸಿದೆ.

ಯೂರೋಪ್ ಅಜ್ಞಾನಾಂಧಕಾರದಲ್ಲಿ ಮುಳುಗಿ ಹಿಂದೆ ಬಿದ್ದಾಗ, ಸಾವಿರಾರು ವರ್ಷಗಳ ಕಾಲ ಏಷ್ಯ ಮಾನವನ ಪ್ರಗತಿ ಶೀಲ ಮನೋಭಾವದ ಪ್ರತಿನಿಧಿಯಾಗಿತ್ತು. ಒಂದರ ಮೇಲೊಂದು ದಿವ್ಯ ಸಂಸ್ಕೃತಿಗಳ ಯುಗ ಯುಗಗಳಾಗಿ, ಮಹಾ ನಾಗರಿಕತೆ ಮತ್ತು ಶಕ್ತಿ ಕೇಂದ್ರಗಳಿಗೆ ಜನ್ಮಸ್ಥಾನವಾಯಿತು. ಸುಮಾರು ಐದು ನೂರು ವರ್ಷಗಳ ಹಿಂದೆ ಯೂರೋಪು ಚೇತನಗೊಂಡು, ಪೂರ್ವಕ್ಕೂ ಪಶ್ಚಿಮಕ್ಕೂ ತನ್ನ ಪ್ರತಿಭೆ ಹರಡಿ ಕೆಲವೇ ಶತಮಾನಗಳಲ್ಲಿ ಪ್ರಪಂಚದ ಶಕ್ತಿ, ಸಂಪತ್ತು ಮತ್ತು ಸಂಸ್ಕೃತಿಗಳಲ್ಲಿ ಮುಂದಾಳುತನ ವಹಿಸಿತು. ಕಾಲಚಕ್ರ ಪರಿವರ್ತನೆಯಾಯಿತೆ? ಪುನಃ ಈ ಪರಿಸ್ಥಿತಿ ವ್ಯತ್ಯಾಸಗೊಳ್ಳುವುದೆ? ನಿಶ್ಚಯ ನೋಡಿದರೆ ಶಕ್ತಿ ಮತ್ತು ಅಧಿಕಾರ ಎರಡೂ ಈಗ ದೂರ ಪಾಶ್ಚಾತ್ಯದ ಅಮೆರಿಕೆಗೂ ಮತ್ತು ಎಂದೂ ಯೂರೋಪ್ ಸಂಸ್ಕೃತಿಯ ಅಂಗವಲ್ಲದ ಪ್ರಾಚ್ಯಯೂರೋಪಿಗೂ ಹೋಗಿದೆ. ಪೂರ್ವದ ಸೈಬೀರಿಯಾದಲ್ಲಿ ಸಹ ಮಹತ್ವ ಪರಿವರ್ತನೆಗಳಾಗಿವೆ, ಮತ್ತು ಇತರ ಪ್ರಾಚ್ಯದೇಶಗಳು ಸಹ ಪರಿವರ್ತನೆಗೊಂಡು ಪ್ರಗತಿಪಥದಲ್ಲಿ ಓಡುತ್ತಿವೆ. ಭವಿಷ್ಯದಲ್ಲಿ ಪೂರ್ವ ಪಶ್ಚಿಮಗಳೆರಡಕ್ಕೂ ಘರ್ಷಣೆ ಕಾದಿದೆಯೋ ಅಥವ ಒಂದು ಬಗೆಯ ಸಮತೂಕವೋ? ನೋಡಬೇಕು.

ಆ ಭವಿಷ್ಯವು ಇನ್ನೂ ಬಹುದೂರವಿದೆ; ಅದರ ಚರ್ಚೆ ಇಂದು ಅಪ್ರಕೃತ. ಇಂದಿನ ಹೊರೆ ಹೊತ್ತು ಎದುರುನಿಂತ ಸಮಸ್ಯೆಗಳನ್ನು ಬಿಡಿಸಿಕೊಂಡರೆ ಸಾಕು. ಇತರ ದೇಶಗಳಂತೆ ಭಾರತದಲ್ಲಿ ಸಹ ಈ ಎಲ್ಲ ಸಮಸ್ಯೆಗಳ ಹಿಂದೆ, ಹತ್ತೊಂಭತ್ತನೆಯ ಶತಮಾನದ ಯೂರೋಪಿನಂತೆ ಇಲ್ಲಿ ಸಹ ಪ್ರಜಾ ಸರಕಾರ ಸ್ಥಾಪನೆ ಮತ್ತು ಮಹತ್ತರ ಸಾಮಾಜಿಕ ಕ್ರಾಂತಿ ಮೊದಲು ಆಗಬೇಕಾಗಿವೆ. ಅನಿವಾರ್ಯವೆನಿಸುವ ಈ ಪರಿವರ್ತನೆಯ ದವಡೆಯಲ್ಲಿ ಪ್ರಜಾಸತ್ತೆಯೂ ಸಿಕ್ಕಿಕೊಂಡಿದೆ; ಆದ್ದರಿಂದ ಪರಿವರ್ತನೆ ಬೇಡವೆನ್ನುವವರಿಗೆ ಪ್ರಜಾಸತ್ತೆಯ ಉಪಯುಕ್ತತೆಯಲ್ಲಿ ಸಂಶಯ ಮತ್ತು ನಿರಾಕರಣ ಭಾವನೆ ಹುಟ್ಟಿದೆ; ಅದರ ಪರಿಣಾಮವಾಗಿ ಫಾಸಿಸ್ಟ್ ಮನೋಭಾವವೂ, ಸಾಮ್ರಾಜ್ಯ ದೃಷ್ಟಿಯೂ ಬಲಗೊಳ್ಳುತ್ತಿವೆ. ಭಾರತದ ನಮ್ಮ ಇಂದಿನ ಸಮಸ್ಯೆಗಳೆಲ್ಲ ಕೋಮುವಾರು ಅಥವ ಅಲ್ಪಸಂಖ್ಯಾತರ ಪ್ರಶ್ನೆ, ಭಾರತೀಯ ರಾಜರುಗಳು, ಮತ ಪಂಗಡಗಳ ವಿಶಿಷ್ಟ ಹಕ್ಕುಗಳು, ದೊಡ್ಡ ಜಮಿನ್ದಾರರು, ಭಾರತದಲ್ಲಿ ಬೇರುಬಿಟ್ಟುಕೊಂಡಿರುವ ಬ್ರಿಟಿಷ್ ಅಧಿಕಾರ ಮತ್ತು ಕೈಗಾರಿಕೆಗಳು—ಎಲ್ಲ ಅಂತ್ಯದಲ್ಲಿ ಸಾಮಾಜಿಕ ಪರಿವರ್ತನೆಗೆ ವಿರುದ್ಧ ಇವೆ. ನಿಜವಾದ ಪ್ರಜಾರಾಜ್ಯ ಸ್ಥಾಪನೆಯಾದರೆ ಪರಿವರ್ತನೆ ಅನಿವಾರ್ಯವೆಂದು ಅರಿತು ಪ್ರಜಾರಾಜ್ಯವು ಭಾರತದ ಪರಿಸ್ಥಿತಿಗೆ ಸರಿ ಹೋಗುವುದಿಲ್ಲವೆಂದು ಪ್ರಜಾಸತ್ತೆಯನ್ನೇ ವಿರೋಧಿಸುತ್ತಿದಾರೆ. ಆದ್ದರಿಂದ ಮೇಲೆ ಅನೇಕ ವ್ಯತ್ಯಾಸ ಮತ್ತು ಭಿನ್ನತೆ ಕಂಡರೂ ಯುದ್ಧದಿಂದ ಮೇಲೆ ಎದ್ದ ಚೀನ, ಸ್ಪೇನ್, ಅಥವ ಯೂರೋಪಿನ ಇತರ ರಾಷ್ಟ್ರಗಳಂತೆ ಭಾರತದ ಸಮಸ್ಯೆಗಳ ಮೂಲ ಸ್ವಭಾವವೂ ಒಂದೇ ಇದೆ. ಯೂರೋಪ್ ರಾಷ್ಟ್ರಗಳ ವಿರೋಧ ಚಳವಳಿಗಳು ಪ್ರತಿಬಿಂಬಿಸುವುದು ಇವೇ ಘರ್ಷಣೆಯನ್ನು. ಪ್ರತಿಯೊಂದು ಕಡೆಯೂ ಹಳೆಯ ಸಾಮಾಜಿಕ ಶಕ್ತಿಗಳ ಸಮತೂಕ ತಪ್ಪಿದೆ. ಹೊಸ ಸಮತೂಕ ಏರ್ಪಡುವವರೆಗೆ ತಿಕ್ಕಾಟ ತೊಂದರೆ ಮತ್ತು ಘರ್ಷಣೆ ಅನಿವಾರ್ಯಗಳ ಈ ತಾತ್ಕಾಲಿಕ ಪ್ರಶ್ನೆಗಳಿಂದ ನಮ್ಮ ಇಂದಿನ ಏಕೈಕ ಮುಖ್ಯ ಪ್ರಶ್ನೆ ಏಳುತ್ತದೆ ಪ್ರಜಾಸತ್ತೆಯನ್ನೂ ಸಮಾಜವಾದವನ್ನೂ ಸರಿಗೂಡಿಸುವುದೆಂತು? ವೈಯಕ್ತಿ

ಸ್ವಾತಂತ್ರ್ಯ ಮತ್ತು ಪ್ರಯತ್ನಕ್ಕೆ ಧಕ್ಕೆ ಮಾಡದಂತೆ ಕೇಂದ್ರೀಕೃತ ಸಮಾಜ ವ್ಯವಸ್ಥೆಯನ್ನೂ, ಜನರ ಆರ್ಥಿಕ ಜೀವನದ ಯೋಜನೆಯನ್ನೂ ರಾಷ್ಟ್ರೀಯ ಮತ್ತು ಅಂತರ ರಾಷ್ಟ್ರೀಯ ಮಟ್ಟದಲ್ಲಿ ರೂಪುಗೊಳಿಸುವುದೆಂತು ?

## ೧೩. ಸ್ವಾತಂತ್ರ್ಯ ಮತ್ತು ಸಾಮ್ರಾಜ್ಯ

ಭವಿಷ್ಯದಲ್ಲಿ ಅಮೆರಿಕದ ಸಂಯುಕ್ತ ಸಂಸ್ಥಾನ ಮತ್ತು ಸೋವಿಯಟ್ ರಷ್ಯ ಪ್ರಮುಖ ಪಾತ್ರ ವಹಿಸುವುದು ಅನಿವಾರ್ಯ ತೋರುತ್ತದೆ. ಎರಡು ಪ್ರಗತಿಪರ ರಾಷ್ಟ್ರಗಳ ಮಧ್ಯೆ ಎಷ್ಟು ವ್ಯತ್ಯಾಸವಿರಬಹುದೋ ಅಷ್ಟೂ ವ್ಯತ್ಯಾಸ ಇವೆರಡಕ್ಕೂ ಇವೆ. ಅವುಗಳ ತಪ್ಪುಗಳು ಸಹ ಬೇರೆ ಬೇರೆ ದಾರಿಯಲ್ಲಿ. ಕೇವಲ ರಾಜಕೀಯ ಪ್ರಜಾಸತ್ತೆಯ ದೋಷಗಳೆಲ್ಲ ಅಮೆರಿಕದ ಸಂಯುಕ್ತ ಸಂಸ್ಥಾನಗಳಲ್ಲಿವೆ. ರಾಜಕೀಯ ಪ್ರಜಾಸತ್ತೆಯ ಅಭಾವದ ದೋಷಗಳೆಲ್ಲ ಸೋವಿಯಟ್ ರಷ್ಯದಲ್ಲಿದೆ. ಆದರೆ ಸಮಾನ ಸನ್ನಿವೇಶಗಳೂ ಅನೇಕ ಇವೆ—ಕಾರ್ಯಶೀಲ ದೃಷ್ಟಿ, ಅಪಾರ ಪ್ರಕೃತಿ ಸಂಪತ್ತು, ಸಾಮಾಜಿಕ ನಮ್ರತೆ, ಪ್ರಾಚೀನ ಯುಗದ ಹಿನ್ನೆಲೆಯ ಅಭಾವ, ವಿಜ್ಞಾನ ಮತ್ತು ಅದರ ಪ್ರಯೋಗದಲ್ಲಿ ದೃಢ ವಿಶ್ವಾಸ, ಸಾರ್ವಜನಿಕ ವಿದ್ಯಾಪ್ರಸಾರ ಮತ್ತು ಅವಕಾಶ. ಅಮೆರಿಕ ಜನರ ವರಮಾನದಲ್ಲಿ ಅಪಾರ ಅಂತರವಿದ್ದರೂ ಇತರ ದೇಶಗಳಂತೆ ಕಟ್ಟುನಿಟ್ಟಾದ ಪಂಗಡಗಳಿಲ್ಲ ; ಒಂದು ಬಗೆಯ ಸಮಾನತೆ ಇದೆ. ಕಳೆದ ಇಪ್ಪತ್ತು ವರ್ಷಗಳ ಮಹತ್ಸಾಧನೆ ಎಂದರೆ ಜನ ಸಾಮಾನ್ಯರ ವಿದ್ಯೆ ಮತ್ತು ಸಂಸ್ಕೃತಿಯ ಅದ್ಭುತ ಪ್ರಗತಿ. ಆದ್ದರಿಂದ ಈ ಎರಡು ದೇಶಗಳಲ್ಲೂ ಪ್ರಗತಿಪರ ಪ್ರಜಾಸತ್ತಾತ್ಮಕ ಸಮಾಜಕ್ಕೆ ಅವಶ್ಯವಾದ ತಳಹದಿ ಇದೆ ; ಅದಿರದೆ ಜ್ಞಾನಾಂಧ ನಿರುತ್ಸಾಹಿ ಜನರ ಮೇಲೆ ಸಣ್ಣ ವಿದ್ಯಾವಂತರ ಗುಂಪು ಒಂದು ರಾಜ್ಯಭಾರ ಮಾಡುತ್ತಿದ್ದರೆ ಸಮಾಜರಚನೆ ಸಾಧ್ಯವಾಗುತ್ತಿರಲಿಲ್ಲ ; ಅಲ್ಲದೆ ವಿದ್ಯೆ ಮತ್ತು ಸಂಸ್ಕೃತಿಯಲ್ಲಿ ಮುಂದುವರಿದ ಜನರ ಮೇಲೆ ಅಂತಹ ಒಂದು ಪಂಗಡ ಬಹು ಕಾಲ ಅಧಿಕಾರ ನಡೆಸಲು ಸಹ ಸಾಧ್ಯವಿಲ್ಲ.

ಒಂದು ನೂರು ವರ್ಷಗಳ ಹಿಂದೆ ಅಂದಿನ ಅಮೆರಿಕನರ ವಿಚಾರ ಬರೆಯುತ್ತ " ಪ್ರಜಾಸತ್ತೆಯ ದೃಷ್ಟಿಯು ಒಂದು ಕಡೆ ವಿಜ್ಞಾನಕ್ಕಾಗಿ ವಿಜ್ಞಾನ " ಎಂಬ ಜನರನ್ನು ಪ್ರೋತ್ಸಾಹಿಸದಿದ್ದರೆ ಇನ್ನೊಂದೆಡೆ ಅದರ ಪೂಜಾರರ ಸಂಖ್ಯೆ ಬೆಳೆಯುತ್ತಲೇ ಇರುತ್ತದೆ. ಜೀವನ ಸ್ಥಿತಿಯಲ್ಲಿ ಅಸಮಾನತೆಯೇ ಶಾಶ್ವತವಾದರೆ ಜನರಲ್ಲಿ ನಿರುಪಯುಕ್ತ ಸ್ವಾಭಿಮಾನದ ತಾತ್ವಿಕ ವಿಷಯ ಸಂಶೋಧನೆಗಳೇ ಹೆಚ್ಚುತ್ತವೆ. ಆದರೆ ಪ್ರಜಾಸತ್ತಾತ್ಮಕ ಸಾಮಾಜಿಕ ಮತ್ತು ಸಂಸ್ಥೆಗಳಲ್ಲಿ ಪ್ರಸ್ತುತ ಜೀವನಕ್ಕೇ ಉಪಯುಕ್ತ ಫಲಿತಾಂಶದ ಕಡೆ ಸಂಶೋಧನೆಯ ದೃಷ್ಟಿ ಹೋಗುತ್ತದೆ. ಈ ಪ್ರವೃತ್ತಿ ಸ್ವಾಭಾವಿಕ ಮತ್ತು ಅನಿವಾರ್ಯ ಎಂದು ತೂಕೆವಿಲ್ ಹೇಳಿದ್ದಾನೆ. ಅಂದಿನಿಂದ ಅಮೆರಿಕ ಪ್ರಗತಿ ಸಾಧಿಸಿ, ಪರಿವರ್ತನೆಗೊಂಡು, ಅನೇಕ ಜನಾಂಗಗಳ ಸಂಮಿಶ್ರಣವಾಗಿದೆ, ಆದರೆ ಅದರ ಮೂಲ ಗುಣ ಮಾತ್ರ ಕಳೆದುಕೊಂಡಿಲ್ಲ.

ಅಮೆರಿಕನರ ಮತ್ತು ರಷ್ಯನರ ಇನ್ನೊಂದು ಮುಖ್ಯ ಗುಣ ಏಷ್ಯ ಮತ್ತು ಯೂರೋಪುಗಳ ಜನರಂತೆ, ಅವರ ಕಾರ್ಯ ಚಟುವಟಿಕೆ ಮತ್ತು ಹೋರಾಟಗಳನ್ನೂ ಮಿತಿಗೊಳಿಸುವ ಪ್ರಾಚೀನತೆಯ ಹೊರೆ ಅವರನ್ನು ಬಾಧಿಸುತ್ತಿಲ್ಲ. ಇಂದಿನ ಪೀಳಿಗೆಯ ಘೋರ ಭಾರವನ್ನು ನಮ್ಮಲ್ಲಿಯಂತೆ ಅವರೂ ಅನುಭವಿಸಲೇಬೇಕು. ಆದರೆ ಇತರರೊಂದಿಗೆ ಅವರ ಪೂರ್ವ ಸಂಬಂಧ ಶುಭ್ರವಿದೆ ; ಭವಿಷ್ಯ ಸಾಧನೆಯ ಮಾರ್ಗದಲ್ಲಿ ಯಾವ ಬಂಧನಕ್ಕೂ ಅವರು ಸೆರೆಯಾಗಿಲ್ಲ.

ಇದರಿಂದ ಇವರಿಗೆ ಒಂದು ದೊಡ್ಡ ಅನುಕೂಲವಿದೆ. ಹಳೆಯ ಬೇರು ಬಿಟ್ಟ ಸಾಮ್ರಾಜ್ಯರಾಷ್ಟ್ರಗಳು ಇತರರೊಂದಿಗೆ ವ್ಯವಹರಿಸುವಾಗ ಹುಟ್ಟುವ ಪರಸ್ಪರ ಸಂಶಯಗಳ ಹಿನ್ನೆಲೆ ಯಾವುದೂ ಇಲ್ಲದೆ ಇವರು ಇತರ ರಾಷ್ಟ್ರಗಳೊಂದಿಗೆ ವ್ಯವಹರಿಸಬಹುದು. ಅವರ ಪೂರ್ವೇತಿಹಾಸದಲ್ಲಿ ಪರಿಶುದ್ಧವಿದೆ. ಕಳಂಕ, ಕಶ್ಮಲ, ಸಂಶಯ ಇಲ್ಲವೆಂದಲ್ಲ ಅಮೆರಿಕನರ ನೀಗ್ರೋ ಪ್ರಶ್ನೆ ಅವರ ಪ್ರಜಾಸತ್ತೆಯ ಮತ್ತು ಸಮಾನತೆಯ ಸೋಗಿಗೆ ಒಂದು ದೊಡ್ಡ ಕಳಂಕ. ಪೂರ್ವ ಯೂರೋಪಿನಲ್ಲಿ ರಷ್ಯನರ ಹಳೆಯ ದ್ವೇಷಾಸೂಯೆಗಳು ಇನ್ನೂ ಅಳಿಸಿಲ್ಲ ; ಇಂದಿನ ಯುದ್ಧ ಅದನ್ನೂ ಇನ್ನೂ ಹೆಚ್ಚಿಸುತ್ತಿದೆ. ಆದರೂ ಇತರ ರಾಷ್ಟ್ರಗಳೊಂದಿಗೆ ಅಮೆರಿಕನರು ಸ್ನೇಹ ಬೆಳೆಸುತ್ತಲಿದ್ದಾರೆ ; ರಷ್ಯನರಲ್ಲಿ ಯಾವ ಬಗೆಯ ಜನಾಂಗ ವೈರವೂ ಇರುವುದಿಲ್ಲ.

ಯೂರೋಪಿಯನ್ ರಾಷ್ಟ್ರಗಳಲ್ಲಿ ಎಲ್ಲೆಲ್ಲೂ ಪರಸ್ಪರ ದ್ವೇಷ, ಹಳೆಯ ಹೋರಾಟಗಳ ಮತ್ತು ಅನ್ಯಾಯಗಳ ನೆನಪು ತುಂಬಿವೆ. ಸಾಮ್ರಾಜ್ಯ ರಾಷ್ಟ್ರಗಳು ಜೊತೆಗೆ ತಮ್ಮ ಅಧೀನ ರಾಷ್ಟ್ರಗಳ ಜನರ ದ್ವೇಷವನ್ನೂ ಗಳಿಸಿದ್ದಾರೆ. ದೀರ್ಘಕಾಲದ ಸಾಮ್ರಾಜ್ಯ ಆಡಳಿತದ ಕಥೆಯ ಹೊರೆ ಇಂಗ್ಲೆಂಡಿಗೆ ಬಹಳ ಇದೆ. ಈ ಕಾರಣದಿಂದಲೋ ಅಥವ ತಮ್ಮ ಸಹಜ ಗುಣದಿಂದಲೋ ಆಂಗ್ಲರು ಬಹಳ ಮಿತಭಾಷಿಗಳು, ಇತರರೊಂದಿಗೆ ಬೆರೆಯದೆ ತಮ್ಮ ಪಾಡಿಗೆ ತಾವು ಇರುವವರು ಆದರೆ, ಹೊರಗಡೆ ದುರದೃಷ್ಟವಶಾತ್ ಅವರ ಅಧಿಕೃತ ಪ್ರತಿನಿಧಿಗಳು ಆಂಗ್ಲರ ಗುಣಾವಗುಣ ನಿರ್ಧರ ಮಾಡುತ್ತಾರೆ. ಅನೇಕ ವೇಳೆ ಆಂಗ್ಲರ ಉದಾರ ನೀತಿಯೂ ಅವರಲ್ಲಿ ಇರುವುದಿಲ್ಲ. ಅವರ ಉತ್ತಮ ಸಂಸ್ಕೃತಿಯೂ ಇರುವುದಿಲ್ಲ; ಮೇಲೆ ಭಕ್ತಿ, ಶ್ರದ್ಧೆ ತೋರಿದರೂ ಒಳಗೆ ಪ್ರತಿಷ್ಠೆಯ ದಾಸಯ್ಯಗಳು. ಇತರರ ದ್ವೇಷ ಸಂಪಾದನೆ ಇವರಿಗೆ ಒಂದು ಸ್ವಭಾವವಾಗಿ ಹೋಗಿದೆ. ಕೆಲವು ತಿಂಗಳ ಕೆಳಗೆ ಇಂಡಿಯಾ ಸರಕಾರದ ಕಾರ್ಯದರ್ಶಿಯೊಬ್ಬ. ಗಾಂಧೀಜಿಗೆ ಸೆರೆಮನೆಯಲ್ಲಿ ಇದ್ದಾಗ ಒಂದು ಪತ್ರ ಬರೆದ. ಆ ಭಾಷೆಗಿಂತ ಉದ್ಧಟತನ ಬೇರೊಂದು ಬೇಕಿರಲಿಲ್ಲ; ಅನೇಕರು ಭಾರತ ಜನತೆಗೇ ಅದು ಅಗೌರವವೆಂದರು. ಏಕೆಂದರೆ ಭಾರತದ ಪ್ರತಿನಿಧಿ ಗಾಂಧಿ.

ಮುಂದೆ ಬರುವುದು ಇನ್ನೊಂದು ಸಾಮ್ರಾಜ್ಯಯುಗವೆ? ಅಂತರ ರಾಷ್ಟ್ರೀಯ ಸಹಕಾರ ಯುಗವೆ? ಅಥವ ಪ್ರಪಂಚದ ಪ್ರಜಾಸ್ವಾಸ್ಥ್ಯವೆ? ಸಾಮ್ರಾಜ್ಯಯುಗದ ಕಡೆಗೇ ತಕ್ಕಡಿ ಹೊಡೆಯುತ್ತಿದೆ. ಅದೇ ಪ್ರಾಮಾಣಿಕತೆ ಅಲ್ಲದಿದ್ದರೂ ಪುನಃ ಅದೇ ಶ್ರುತಿ ಕೇಳಿಬರುತ್ತಿದೆ. ಮಾನವನ ಉನ್ನತ ನೈತಿಕ ಪ್ರೇರಣೆ ಮತ್ತು ಅಪಾರ ತ್ಯಾಗವೆಲ್ಲ ತುಚ್ಛ ಧ್ಯೇಯಗಳಿಗಾಗಿ ದುರುಪಯೋಗ ಆಗುತ್ತಿವೆ; ಅಧಿಕಾರದಲ್ಲಿರುವವರು ಮಾನವ ಸದ್ಗುಣವನ್ನು, ಔದಾರ್ಯವನ್ನು ದುಷ್ಕೃತ್ಯಗಳಿಗೆ ದುರುಪಯೋಗಿಸಿ ಜನರ ಭಯ, ದ್ವೇಷ ಮತ್ತು ತಪ್ಪು ಧ್ಯೇಯಗಳಿಂದ ಪ್ರಯೋಜನ ಪಡೆಯುತ್ತಿದಾರೆ. ಹಿಂದಿನ ಕಾಲದಲ್ಲಿ ಸಾಮ್ರಾಜ್ಯ ವಿಷಯದಲ್ಲಿ ಮುಚ್ಚುಮರೆ ಇಲ್ಲದೆ ಮಾತನಾಡುತ್ತಿದ್ದರು. ಅಥೆನಿಯನ್ ಸಾಮ್ರಾಜ್ಯದ ವಿಷಯ ಮಾತನಾಡುತ್ತ "ಇತರರ ಸಹಾಯವಿಲ್ಲದೆ ಏಕಾಂಗಿಯಾಗಿ ಬಾರ್ಬರರನ್ನು ಸೋಲಿಸಿರುವ ಕಾರಣ, ನಮ್ಮ ಅಧೀನ ಜನರಿಗಾಗಿ ನಮ್ಮ ನಾಗರಿಕತೆಗಾಗಿ ನಮ್ಮ ಅಸ್ತಿತ್ವವನ್ನೇ ಪರೀಕ್ಷೆಗೆ ಪಣಕೊಟ್ಟ ಕಾರಣ ಸಾಮ್ರಾಜ್ಯವಾಳಲು ನಮಗೆ ಹಕ್ಕು ಇದೆ ಎಂದು ನಾವು ಜಂಭಕೊಚ್ಚುವುದಿಲ್ಲ. ನಮ್ಮ ಭಯವೇ ನಮ್ಮನ್ನು ಇಲ್ಲಿಗೆ ಕರೆತಂದಿದೆ, ನಮ್ಮ ಸ್ನೇಹಿತರ ಸಹಾಯದಿಂದ ಸಿಸಿಲಿ ಪರಿಸ್ಥಿತಿ ಸರಿಪಡಿಸುತ್ತೇವೆ" ಎಂದು ತ್ಯೂಸಿಡಿಡೀಸ್ ಹೇಳಿದ್ದಾನೆ. ಅಥೀನಿಯನ್ ಅಧೀನ ರಾಷ್ಟ್ರಗಳ ಕಾಣಿಕೆ ವಿಷಯ ಬರೆಯುತ್ತ "ಅದನ್ನು ಗೆದ್ದುದು ದೌರ್ಜನ್ಯವಿರಬಹುದು, ಬಿಟ್ಟಿದ್ದರೆ ಮೂರ್ಖತನವಾಗುತಿತ್ತು" ಎಂದಿದ್ದಾನೆ.

ಅಥೆನ್ಸಿನ ಇತಿಹಾಸವೆಲ್ಲ ಪ್ರಜಾಸತ್ತೆಗೂ ಸಾಮ್ರಾಜ್ಯಕ್ಕೂ ಇರುವ ವಿರೋಧ, ಪ್ರಜಾಸತ್ತೆಯ ರಾಷ್ಟ್ರ ತನ್ನ ಅಧೀನ ರಾಷ್ಟ್ರಗಳ ಮೇಲೆ ನಡೆಸಿದ ಅತ್ಯಾಚಾರ ಮತ್ತು ಅತ್ಯಲ್ಪ ಕಾಲದಲ್ಲೇ ಅದರಿಂದ ಪಡೆದ ದೌರ್ಬಲ್ಯ ಮತ್ತು ಅಂತ್ಯದಲ್ಲಿ ಅನುಭವಿಸಿದ ಸಾಮ್ರಾಜ್ಯನಾಶ ಇವುಗಳ ಕಥೆಯಿಂದ ತುಂಬಿದೆ. ಸ್ವಾತಂತ್ರ್ಯ ಮತ್ತು ಸಾಮ್ರಾಜ್ಯ ಸಮರ್ಥಿಸುವವರು ಇಂದಿನವರು ಯಾರೂ ತ್ಯೂಸಿಡಿಡೀಸನನ್ನು ಮೀರಿಸಲಾರರು. "ನಾಗರಿಕತೆಯ ನಾಯಕರು ನಾವು; ಮಾನವಕುಲದ ಮುಂದಾಳುಗಳು ನಾವು; ನಮ್ಮ ಸಹವಾಸ ಮತ್ತು ಸಂಪರ್ಕ ಮಾನವನಿಗೆ ದೊರೆಯುವ ಅತ್ಯುತ್ತಮ ವರಗಳು; ನಮ್ಮ ಪ್ರಭಾವದ ಆವರಣದೊಳಗೆ ಇರುವುದು ದಾಸ್ಯವಲ್ಲ, ಅದೊಂದು ಮಹಾಪ್ರಸಾದ; ಪೂರ್ವದೇಶದ ಐಶ್ವರ್ಯವೆಲ್ಲ ಕೊಟ್ಟರೂ ನಾವು ಕರುಣಿಸುವ ಸಂಪತ್ತು ದೊರೆಯಲಾರದು ಆದ್ದರಿಂದ ಅವರ ಪ್ರಯತ್ನ ಎಷ್ಟೇ ಇರಲಿ ಮೂಲಧನ ನಮ್ಮದು ಎಂಬ ದೃಢವಿಶ್ವಾಸದಿಂದ ನಮಗೆ ಬರುವ ಹಣ ಮತ್ತು ಸಂಪತ್ಸಾಧನ ಉಪಯೋಗಿಸಿ ಸಂತೋಷದಿಂದ ಕೆಲಸ ಮಾಡೋಣ. ಏಕೆಂದರೆ ಅನೇಕ ಯುದ್ಧ ರಂಗಗಳಲ್ಲಿ ಅಪಾರ ತ್ಯಾಗಮಾಡಿ ಮಾನವ ಸುಖದ ಮೂಲ ಮಾನವ ಶಕ್ತಿ ಎಂಬ ರಹಸ್ಯವನ್ನು ಬಹು ಪ್ರಯಾಸದಿಂದ ಕಲಿತುಕೊಂಡಿದ್ದೇವೆ. ಅನೇಕರು ಅನೇಕ ಹೆಸರಿನಿಂದ ಕರೆಯಬಹುದು, ಆದರೆ ಅದರ ಗೂಢಾರ್ಥ ನಮಗೆ ಮಾತ್ರ ಗೊತ್ತು; ನಮ್ಮ ನಗರವೇ ಅದಕ್ಕೆ ತೌರುಮನೆ ಆಗಬೇಕು. ಅದರ ಹೆಸರು ಸ್ವಾತಂತ್ರ್ಯ; ಸ್ವಾತಂತ್ರ್ಯ ಬೇಕಾದರೆ ಸೇವೆ ಮಾಡು ಎಂದು ಅದು ನಮಗೆ ಕಲಿಸಿದೆ, ನಮ್ಮ ಉಪಕೃತಿಗಳನ್ನು ಸ್ವಾರ್ಥದೃಷ್ಟಿ ಇಲ್ಲದೆ,

ನಿರ್ಭಯವಾಗಿ ಸ್ವಾತಂತ್ರ್ಯದ ನಂಬಿಕೆಯಿಂದ ಹಂಚಲು ಇತರರಿಗಿಂತ ನಮಗೆ ಮಾತ್ರ ಏಕೆ ಹೆಚ್ಚು ಸಾಧ ತಿಳಿದಿದೆಯೇ ? '' ಎಂದು ಕೇಳಿದ್ದಾನೆ.

ಸ್ವಾತಂತ್ರ್ಯ ಮತ್ತು ಪ್ರಜಾಸತ್ತೆಯ ಘೋಷಣೆ ಎಲ್ಲ ಕಡೆ ಕೇಳಿ ಬಂದರೂ ಅವು ಕೆಲವರಿಗೆ ಮಾತ್ರ ಮೀಸಲಾಗಿರುವ ಈ ಕಾಲದಲ್ಲಿ ತ್ಯೂಸಿಡಿಡಿಸನ ಈ ಮಾತು ತೀರ ಪರಿಚಿತವಿರುವಂತೆ ತೋರುತ್ತದೆ. ಅದರಲ್ಲಿ ಸತ್ಯವೂ ಇದೆ. ಸತ್ಯದ ನಿರಾಕರಣೆಯೂ ಇದೆ. ತ್ಯೂಸಿಡಿಡೀಸನ ಪರಿಚಯವೆಲ್ಲ ಮೆಡಿಟರೇನಿಯನ್ ರಾಜ್ಯ ಗಳದು, ಬೇರೆ ಜನರ ಪರಿಚಯ ಅವನಿಗೆ ಇರಲಿಲ್ಲ. ತನ್ನ ಸುಪ್ರಸಿದ್ಧ ನಗರದ ಸ್ವಾತಂತ್ರ್ಯದಲ್ಲಿ ಹೆಮ್ಮೆ ಗೊಂಡು ಆ ಸ್ವಾತಂತ್ರ್ಯವೇ ಮಾನವನ ಶಕ್ತಿ ಮತ್ತು ಸುಖದ ಗುಟ್ಟು ಎಂದು ಹೊಗಳುವುದರಲ್ಲಿ ಇತರರಿಗೂ ಆ ಸ್ವಾತಂತ್ರದ ಆಸೆ ಇದೆ, ಎಂದು ಮರೆತನು. ಸ್ವಾತಂತ್ರ್ಯ ಪ್ರೇಮಿಯಾದ ಅಥೆನ್ಸ್ ನಗರವೇ ಮೀಲೋಸ್ ನಗರ ಕೊಳ್ಳೆ ಹೊಡೆದು, ನಾಶಮಾಡಿ ಅಲ್ಲಿನ ಗಂಡಸರನ್ನೆಲ್ಲ ಕೊಲೆಮಾಡಿ, ಹೆಂಗಸರು ಮಕ್ಕಳನ್ನು ದಾಸ್ಯ ಕೂಪಕ್ಕೆ ತಳ್ಳಿತು. ತ್ಯೂಸಿಡಿಡೀಸ್ ಅಥೆನ್ಸಿನ ಸಾಮ್ರಾಜ್ಯ ಮತ್ತು ಸ್ವಾತಂತ್ರ್ಯದ ವಿಷಯ ಬಗೆಯುತ್ತಿರು ವಾಗಲೇ ಆ ಸಾಮ್ರಾಜ್ಯವು ನುಚ್ಚುನೂರಾಗಿ ತನ್ನ ಸ್ವಾತಂತ್ರ್ಯ ಕಳೆದುಕೊಂಡಿತು.

ಸ್ವಾತಂತ್ರ್ಯವೂ, ಆಕ್ರಮಣ ಮತ್ತು ದಾಸ್ಯವೂ ಒಟ್ಟಿಗೆ ಬಹುಕಾಲ ಬಾಳಲು ಸಾಧ್ಯವಿಲ್ಲ. ಒಂದಕ್ಕೆ ಇನ್ನೊಂದು ಸೋಲಲೇಬೇಕು; ಸಾಮ್ರಾಜ್ಯ ಮದ ಮತ್ತು ಠೀವಿ ಮಣ್ಣುಮುಕ್ಕಲು ಬಹುಕಾಲ ಬೇಕಿಲ್ಲ. ಎಂದಿಗಿಂತ ಹೆಚ್ಚಾಗಿ ಇಂದು ಸ್ವಾತಂತ್ರ್ಯ ವಿಭಜನೆ ಸಾಧ್ಯವಿಲ್ಲ. ಪೆರಿಕ್ಲೀಸ್ ತನ್ನ ನೆಚ್ಚಿನ ಆಕ್ರೊಪೋಲೀಸ್ ನಗರವನ್ನು ಮುಕ್ತಕಂಠದಿಂದ ಹೊಗಳಿದ ಮರುಕ್ಷಣದಲ್ಲಿಯೆ ಸ್ಪಾರ್ಟಾ ಸೈನ್ಯ ಆ ನಗರ ವಶಪಡಿಸಿಕೊಂಡು ಆಕ್ರಮಿಸಿತು. ಆದರೂ ಅಥೆನ್ಸ್ ಜನರ ಸೌಂದರ್ಯ ಪ್ರೇಮ, ಬುದ್ಧಿಶಕ್ತಿ, ಸ್ವಾತಂತ್ರ್ಯಾಭಿಲಾಷೆ ಮತ್ತು ಧೈರ್ಯಗಳ ವಿಷಯ ಆತನು ಆಡಿದ ಮಾತುಗಳು ಅಂದಿನ ಅಥೆನ್ಸಿಗೆ ಮಾತ್ರವಲ್ಲದೆ ಇಂದಿನ ವಿಶಾಲ ಪ್ರಪಂಚಕ್ಕೆ ಸಹ ಅನ್ವಯಿಸಿ ತಮ್ಮ ಉದಾರ ದೃಷ್ಟಿಯಿಂದ ಇಂದಿಗೂ ನಮ್ಮ ಹೃದಯ ಕಲಕುತ್ತವೆ. ನಾವು ಸೌಂದರ್ಯ ಪ್ರೇಮಿಗಳು ಆದರೆ ಮರ್ಯಾದೆ ಮೀರಿದವರಲ್ಲ; ಜ್ಞಾನಪ್ರೇಮಿಗಳು ಆದರೆ ಷಂಡರಲ್ಲ. ಐಶ್ವರ್ಯ ನಮಗೆ ಕೇವಲ ಡಂಭಾಚಾರದ ಒಂದು ಸಾಮಗ್ರಿಯಲ್ಲ, ಅದು ಒಂದು ಸಾಧನಸಾಮಗ್ರಿ; ಬಡತನ ಒಪ್ಪುವುದರಲ್ಲಿ ಯಾವ ಅಗೌರವವೂ ಇಲ್ಲ, ಆದರೆ ಅದರ ನಿವಾರಣೆಗೆ ಪ್ರಯತ್ನಮಾಡದಿರುವುದು ನಿಜವಾದ ಅವನತಿ............ಯುದ್ಧ ಪರಾಕ್ರಮವು ಪರಮಧರ್ಮ, ಒಂದು ಉದಾತ್ತಧ್ಯೇಯ ಎಂಬ ನಾಣ್ಣುಡಿಯಿಂದ ಮಾತ್ರ ನಮ್ಮ ಶಕ್ತಿವೃದ್ಧಿಯಾಗುವುದಿಲ್ಲ. ಈ ನಮ್ಮ ಮಹಾನಗರದ ಕಾರ್ಯಾಸಕ್ತ ಜೀವನ, ಈ ಮಹಾನಗರವು ನಮ್ಮ ಕಣ್ಮನಗಳಿಗೆ ಕೊಡುವ ಸೌಂದರ್ಯದಸೊಬಗು, ಈ ಎಲ್ಲ ವೈಭವಸೃಷ್ಟಿಗೆ ಕಾರಣರಾದ ಶೂರಸಾಹಸಿಗಳೂ, ಕಾರ್ಯತತ್ಪರರಾದ ಮಹಾಜ್ಞಾನಿಗಳೂ, ಆತ್ಮಸಂಯಮಿಕಾರ್ಯ ನಿರ್ವಾ ಃ ನಿಪುಣರೂ ಆದ ನಗರ ಜನರು—ಎಂದರೆ ಸೋಲುಸಿದ್ಧವೆನ್ನುವ ಸತ್ವಪರೀಕ್ಷೆಯ ಸಮಯದಲ್ಲಿ ಹೇಡಿಗಳಂತೆ ಕಾರ್ಯವಿಮುಖರಾಗಿ ಕಾಲುಕೀಳದೆ ನಗರ ರಕ್ಷಣೆಗಾಗಿ ಪ್ರಾಣಾರ್ಪಣೆಮಾಡಿದ ತ್ಯಾಗವೀರರ ಸ್ಮರಣೆ ಆ ನಮ್ಮ ಶಕ್ತಿಯ ಉಗಮಸ್ಥಾನ. ರಾಷ್ಟ್ರಕ್ಕಾಗಿ ಅವರು ತಮ್ಮ ದೇಹ ಅರ್ಪಿಸಿದರು; ಶಾಶ್ವತ ಕೀರ್ತಿಪಡೆದು ಅಮರರಾದರು. ಆ ಪ್ರಶಂಸೆ ಅವರ ಮೃತದೇಹಗಳಮೇಲೆ ಕಟ್ಟಿದ ಭವ್ಯಸ್ಮಾರಕಗಳಲ್ಲ; ಆದರೆ ಜನತೆಯ ಹೃದಯದಲ್ಲಿ ಮೂರ್ತಿವೆತ್ತ ಯಶೋರಾಶಿ. ಜನತೆಯು ತನ್ನ ನಡೆನುಡಿಯಲ್ಲಿ ತೋರುವ ಆ ಮಹಾಪುರುಷರ ಆದರ್ಶದ ಅನುಷ್ಠಾನದ ಚಿರನೂತನ ಪ್ರಶಂಸೆ. ಆ ಮಹಾಪುರುಷರಿಗೆ ಪ್ರಪಂಚವೇ ಒಂದು ಬೃಂದಾವನ. ಅವರ ಚಾರಿತ್ರವು ಅವರ ಜನ್ಮಭೂಮಿಯ ಶಿಲ್ಪಕಲಾಕೃತಿಯಲ್ಲಿ ಮಾತ್ರವಲ್ಲದೆ ಯಾವ ಸ್ಮಾರಕವೂ ಕಣ್ಣಿಗೆ ತೋರದ ದೂರದೇಶದ ಜನಜೀವನದಲ್ಲಿ ಸಹ ಹಾಸುಹೊಕ್ಕಾಗಿ ಹೆಣೆದು ಹೋಗಿ ಜೀವಂತ ಇದೆ. ಅವರು ಸಾಧಿಸಿದ ಕಾರ್ಯಮೀರಿ ದುಡಿದು ಮಡಿಯುವುದು ಈಗ ನಿಮ್ಮ ಕೆಲಸ. ಸುಖದ ರಹಸ್ಯ ಸ್ವಾತಂತ್ರ್ಯದಲ್ಲಿ, ಸ್ವಾತಂತ್ರ್ಯದ ರಹಸ್ಯ ಕೆಚ್ಚೆದೆಯ ಕಟ್ಟಾಳ್ತನದಲ್ಲಿ, ಮುನ್ನುಗ್ಗುವ ಶತ್ರುವಿನೆದುರು ಸೋಮಾರಿಗಳಾಗಿ ಸರಿದು ನಿಲ್ಲುವುದರಲ್ಲಿ ಅಲ್ಲ" ಎಂದಿದ್ದಾನೆ ತ್ಯೂಸಿಡಿಡೀಸ್

## ೧೪. ಜನಸಂಖ್ಯೆಯ ಸಮಸ್ಯೆ ; ಜನನ ಗತಿಯ ಇಳಿಮುಖ : ರಾಷ್ಟ್ರೀಯ ಶೋಷಣೆ.

ಈ ಐದುವರ್ಷಗಳ ಯುದ್ಧದಿಂದ ಮಾನವ ಇತಿಹಾಸದಲ್ಲಿ ಯಾವ ಕಾಲದಲ್ಲೂ ಆಗದ ದೊಡ್ಡ ಪ್ರಮಾಣದ ಅದ್ಭುತ ಪರಿವರ್ತನೆಗಳೂ ಮತ್ತು ಅಸಂಖ್ಯಾತ ಜನರ ಸ್ಥಾನಾಂತರಗಳೂ ಆಗಿವೆ. ವಿಶೇಷ ವಾಗಿ ಚೀನ, ರಷ್ಯ, ಪೋಲೆಂಡ್, ಜರ್ಮನಿಗಳಲ್ಲಿ ಕೋಟಿಗಟ್ಟಲೆ ಜನರು ಯುದ್ಧದಲ್ಲಿ ಮಡಿದಿರುವುದಲ್ಲದೆ ಅಸಂಖ್ಯಾತ ಜನರು ಮನೆಮಠ ಕಳೆದುಕೊಂಡು ದೇಶಭ್ರಷ್ಟರಾಗಿದ್ದಾರೆ. ಸೈನ್ಯದ ಅವಶ್ಯಕತೆಗಳಿಗೆ ಕೂಲಿ ಗಾರರ ಬೇಡಿಕೆಗಳಿಗೆ, ಬಲಾತ್ಕಾರದ ಸ್ಥಾನಾಂತರಗಳಿಗೆ ಕೊನೆ ಮೊದಲೇ ಇಲ್ಲ. ಆಕ್ರಮಣಕಾರ ಸೈನ್ಯ ಗಳೆದುರು ನಿರಾಶ್ರಿತರ ತಂಡೋಪತಂಡಗಳು ಪಲಾಯನಮಾಡಿವೆ. ಯುರೋಪಿನಲ್ಲಿ ಯುದ್ಧಕ್ಕೆ ಪೂರ್ವ ಸಹ ನಾಜಿ ನೀತಿಯ ಪರಿಣಾಮವಾಗಿ ನಿರಾಶ್ರಿತರ ಸಮಸ್ಯೆ ಒಂದು ಬೃಹತ್ಸಮಸ್ಯೆಯಾಗಿತ್ತು. ಆದರೆ ಯುದ್ಧ ಪರಿಣಾಮಗಳೆದುರು ಅದೆಲ್ಲ ತೃಣಕ್ಕೆ ಕಡೆಯಾಯಿತು. ಯುದ್ಧದ ಪ್ರತ್ಯಕ್ಷ ಪರಿಣಾಮಗಳಲ್ಲದೆ ನಾಜಿಗಳು ಉದ್ದೇಶಪೂರ್ವಕ ಅನುಸರಿಸಿದ ಜನಾಂಗದ್ವೇಷ ನೀತಿಯೇ ಯೂರೋಪಿನ ಈ ಪರಿಸ್ಥಿತಿಗೆ ಮುಖ್ಯಕಾರಣ. ಲಕ್ಷಗಟ್ಟಲೆ ಯಹೂದ್ಯರನ್ನು ಕೊಲೆಮಾಡಿದರು ; ಅವರು ಆಕ್ರಮಿಸಿದ ರಾಷ್ಟ್ರಗಳ ಜನತೆಯ ಆಯಕಟ್ಟನ್ನೇ ಪುಡಿಪುಡಿಮಾಡಿದರು. ಸೋವಿಯಟ್ ಒಕ್ಕೂಟದಲ್ಲಿ ಯುದ್ಧದಿಂದ ಲಕ್ಷಾಂತರ ಜನರು ಪೂರ್ವಪ್ರಾಂತಗಳಿಗೆ ಹೊರಳಿ ಯೂರಲ್ ಪರ್ವತಗಳ ಆಚೆ ಹೊಸ ವ್ಯವಸಾಯ ಕೇಂದ್ರಸ್ಥಾಪಿಸಿದ್ದಾರೆ ; ಪ್ರಾಯಶಃ ಶಾಶ್ವತ ಅಲ್ಲಿಯೇ ಉಳಿಯಬಹುದು. ಚೀನಾದಲ್ಲಿ ಐದುಕೋಟಿ ಜನರು ಸ್ಥಾನಭ್ರಷ್ಟರಾಗಿ ದ್ದಾರೆಂದು ಅಂದಾಜು ಮಾಡಲಾಗಿದೆ.

ಈ ಜನರನ್ನೆಲ್ಲ ಅಥವ ಯುದ್ಧದಲ್ಲಿ ಬದುಕಿ ಉಳಿದವರನ್ನು ಹಿಂದಕ್ಕೆ ಕರೆಸಿಕೊಳ್ಳಲು ಅಥವ ಪುನಃ ನೆಲೆನಿಲ್ಲಿಸಲು ಪ್ರಯತ್ನ ಏನೋ ಮಾಡಬಹುದು; ಆದರೆ ಅದು ಅಸಾಧ್ಯತೊಡಕಿನ ಕೆಲಸ. ಅನೇಕರು ತಮ್ಮ ಮೊದಲಿನ ಊರುಗಳಿಗೆ ಬರಬಹುದು ; ಅನೇಕರು ಇರುವಲ್ಲಿಯೇ ಉಳಿಯಲು ಇಷ್ಟಪಡಬಹುದು. ಆದರೆ ಮುಂದೆ ಯೂರೋಪಿನಲ್ಲಿ ಆಗಬಹುದಾದ ರಾಜಕೀಯ ಬದಲಾವಣೆಗಳಿಂದ ಇನ್ನೂ ಹೆಚ್ಚಿನ ಜನರ ಸ್ಥಾನಾಂತರವೂ ಆದಲು ಬದಲೂ ಕಾದಿದೆ.

ಇವೆಲ್ಲಕ್ಕೂ ಹೆಚ್ಚುಗಾಢವೂ ಅತ್ಯಂತ ವಿನಾಶಕಾರಕವೂ ಆದ ಪರಿವರ್ತನೆ ಎಂದರೆ ಪ್ರಪಂಚದ ಜನಸಂಖ್ಯೆ ವ್ಯತ್ಯಾಸಗೊಳಿಸುತ್ತಿರುವ ಮಾನಸಿಕ ಮತ್ತು ಜೀವನ ಬಾಂಧವ್ಯದ ಪರಿವರ್ತನೆ. ಕೈಗಾರಿ ಕೋದ್ಯಮ ಕ್ರಾಂತಿ ಮತ್ತು ಆಧುನಿಕ ವಿಜ್ಞಾನ ಸಂಶೋಧನೆಗಳಿಂದ ಯೂರೋಪಿನ ಜನಸಂಖ್ಯೆ ಮುಖ್ಯ ವಾಗಿ ವಾಯವ್ಯ ಮತ್ತು ಮಧ್ಯ ಯೂರೋಪಿನಲ್ಲಿ ಬಹುಬೇಗ ಬೆಳೆಯಿತು. ಹೊಸ ಆರ್ಥಿಕರಚನೆ ಮತ್ತು ಇತರ ಕಾರಣಗಳ ಜೊತೆಗೆ ಈ ಸಂಶೋಧನೆಯ ಜ್ಞಾನ ಸೋವಿಯಟ್ ಒಕ್ಕೂಟಕ್ಕೂ ಹರಡಿ ಅಲ್ಲಿನ ಜನಸಂಖ್ಯೆ ಇನ್ನೂ ಹೆಚ್ಚಿನ ವೇಗದಲ್ಲಿ ಬೆಳೆಯುತ್ತಿದೆ. ಔದ್ಯೋಗಿಕ ವಿಜ್ಞಾನಪ್ರಗತಿ, ವಿದ್ಯಾಪ್ರಗತಿ, ಸಾರ್ವಜನಿಕ ನೈರ್ಮಲ್ಯ ಮತ್ತು ಆರೋಗ್ಯಜ್ಞಾನ ಪೂರ್ವಕ್ಕೂ ಹಬ್ಬಿ, ಏಷ್ಯದ ಅನೇಕ ರಾಷ್ಟ್ರಗಳಿಗೆ ಹರಡುತ್ತದೆ. ಭಾರತದಂತೆ, ಇನ್ನು ಕೆಲವು ರಾಷ್ಟ್ರಗಳಲ್ಲಿ ಜನಸಂಖ್ಯೆ ಕಡಿಮೆಯಾದರೆ ಜೀವನ ಹೆಚ್ಚು ಸುಖಮಯವಾಗಬಹುದು.

ಈ ಮಧ್ಯೆ ಪಶ್ಚಿಮ ಯೂರೋಪಿನಲ್ಲಿ ಜನನಸಂಖ್ಯೆ ಕಡಮೆಯಾಗುತ್ತ ಜನಸಂಖ್ಯೆಯಲ್ಲಿ ಇನ್ನೊಂದು ತಿರುಗು ಮುರುಗು ಸಮಸ್ಯೆ ಆರಂಭವಾಗಿದೆ. ಚೀನಾ, ಭಾರತ, ಯವಾದ್ವೀಪ ಮತ್ತು ಸೋವಿಯಟ್ ಒಕ್ಕೂಟ ಬಿಟ್ಟರೆ ಉಳಿದ ಎಲ್ಲ ರಾಷ್ಟ್ರಗಳಲ್ಲೂ ಈ ಸಮಸ್ಯೆ ಉದ್ಭವಿಸಿರುವಂತೆ ತೋರುತ್ತದೆ. ಕೈಗಾರಿ ಕೋದ್ಯಮದಲ್ಲಿ ಮುಂದುವರಿದ ರಾಷ್ಟ್ರಗಳಲ್ಲೇ ಇದು ಹೆಚ್ಚು. ಫ್ರಾನ್ಸಿನ ಜನಸಂಖ್ಯೆಯ ಬೆಳವಣಿಗೆ ಅನೇಕ ವರ್ಷಗಳ ಹಿಂದೆಯೇ ನಿಂತು ಈಗ ಕ್ರಮೇಣ ಕಡಮೆಯಾಗುತ್ತಿದೆ. ಇಂಗ್ಲೆಂಡಿನಲ್ಲಿ ೧೮೮೦ರಿಂದ ಈಚೆಗೆ ಜನಸಂಖ್ಯೆ ಕ್ರಮೇಣ ಕ್ಷೀಣಿಸುತ್ತಿದೆ. ಫ್ರಾನ್ಸ್ ಬಿಟ್ಟರೆ ಯೂರೋಪ್‌ನಲ್ಲಿ ತೀರ ಕಡಮೆ ಜನನಗಳಾಗುತ್ತಿರುವುದು ಇಂಗ್ಲೆಂಡಿನಲ್ಲೇ. ಹಿಟ್ಲರ್ ಮತ್ತು ಮುಸಲಿನಿ ಜನಸಂಖ್ಯೆಯಗತಿ ಹೆಚ್ಚಿಸಲು ಮಾಡಿದ ಪ್ರಯತ್ನದಿಂದ ದೊರೆತಫಲ ತಾತ್ಕಾಲಿಕವಾಯಿತು ಸೋವಿಯಟ್ ಒಕ್ಕೂಟ ಬಿಟ್ಟರೆ ಪೂರ್ವ

ಮತ್ತು ದಕ್ಷಿಣ ಯೂರೋಪ್‌ಗಳಿಗಿಂತ ಉತ್ತರ, ಪಶ್ಚಿಮ ಮತ್ತು ಮಧ್ಯ ಯೂರೋಪಿನಲ್ಲಿ ಈ ಕ್ಷೀಣಗತಿಯ ವೇಗ ಇನ್ನೂ ಹೆಚ್ಚು; ಕ್ಷೀಣಗತಿ ಮಾತ್ರ ಎಲ್ಲ ಕಡೆಯೂ ಇದೆ. ಇಂದಿನ ಲೆಕ್ಕಾಚಾರದಂತೆ ರಷ್ಯ ಬಿಟ್ಟು ಯೂರೋಪಿನ ಜನಸಂಖ್ಯೆ ೧೯೫೫ ರಲ್ಲಿ ಪರಮಾವಧಿ ಮುಟ್ಟಿ ಅನಂತರ ಇಳಿಮುಖವಾಗಬೇಕು. ಇದಕ್ಕೂ ಯುದ್ಧ ಸಾವಿಗೂ ಏನೂ ಸಂಬಂಧವಿಲ್ಲ; ಯುದ್ಧದಿಂದ ಜನಸಂಖ್ಯೆ ಇನ್ನೂ ಬೇಗ ಇಳಿಮುಖವಾಗುತ್ತದೆ.

ಇದಕ್ಕೆ ಪ್ರತಿಯಾಗಿ ಸೋವಿಯಟ್ ಒಕ್ಕೂಟದ ಜನಸಂಖ್ಯೆ ಅತಿವೇಗದಿಂದ ವೃದ್ಧಿಯಾಗಿ ೧೯೭೦ರ ಹೊತ್ತಿಗೆ ೨೫ ಕೋಟಿ ಆಗಬಹುದೆಂದು ಅಂದಾಜು ಮಾಡಲಾಗಿದೆ. ಯುದ್ಧದ ಫಲವಾಗಿ ದೇಶ ವಿಸ್ತಾರಗೊಂಡು ಅದರಿಂದ ಹೆಚ್ಚಬಹುದಾದ ಜನಸಂಖ್ಯೆ ಇದರಲ್ಲಿ ಸೇರಿಲ್ಲ. ಈ ಅಪಾರ ಜನಸಂಖ್ಯೆ ಔದ್ಯೋಗಿಕ ಮತ್ತು ಇತರ ಪ್ರಗತಿಗಳಿಂದ ರಷ್ಯ ದೇಶವು ಯೂರೋಪ್ ಮತ್ತು ಏಷ್ಯ ಖಂಡಗಳಲ್ಲಿ ಅತ್ಯಂತ ಪ್ರಬಲ ರಾಷ್ಟ್ರವಾಗುತ್ತದೆ. ಏಷ್ಯದ ಭವಿಷ್ಯವೇ ಚೀನ ಮತ್ತು ಭಾರತದ ಕೈಗಾರಿಕಾ ಪ್ರಗತಿಯನ್ನು ಅವಲಂಬಿಸಿದೆ. ಈ ದೇಶಗಳ ಅಪಾರ ಜನ ಸಮುದಾಯವನ್ನು ರಾಷ್ಟ್ರದ ಶಕ್ತಿ ಸಂಪತ್ತು ಹೆಚ್ಚಿಸಲು ಅಣಿಗೊಳಿಸುವುದರಲ್ಲಿಯೇ ಅವುಗಳ ಶಕ್ತಿ ದೌರ್ಬಲ್ಯಗಳೆರಡೂ ಅಡಗಿವೆ. ಯೂರೋಪಿನ ಹಳೆಯ ಸಾಮ್ರಾಜ್ಯ ರಾಷ್ಟ್ರಗಳು ತಮ್ಮ ವಿಸ್ತರಣ ಮತ್ತು ಆಕ್ರಮಣದ ಕೊನೆಯ ಘಟ್ಟ ಮುಟ್ಟಿದಂತೆ ತೋರುತ್ತದೆ. ಅವುಗಳ ಆರ್ಥಿಕ ಮತ್ತು ಸಾಮಾಜಿಕ ರಚನೆ ಮತ್ತು ಜನರ ಕೌಶಲ ಮತ್ತು ಶಕ್ತಿಗಳಿಂದ ಅವು ಇನ್ನೂ ಸ್ವಲ್ಪಕಾಲ ಪ್ರಪಂಚ ಸಮಸ್ಯೆಗಳಲ್ಲಿ ಪ್ರಮುಖ ಪಾತ್ರ ವಹಿಸಬಹುದು; ಅವೆಲ್ಲ ಒಂದು ಒಕ್ಕೂಟದಲ್ಲಿ ಸೇರದಿದ್ದರೆ ಕ್ರಮೇಣ ಪ್ರಪಂಚದ ಮಹಾರಾಷ್ಟ್ರಗಳ ಶ್ರೇಣಿಯಲ್ಲಿ ತಮ್ಮ ಸ್ಥಾನ ಕಳೆದುಕೊಳ್ಳುತ್ತವೆ. "ವಾಯವ್ಯ ಅಥವ ಮಧ್ಯ ಯುರೋಪಿನ ಯಾವ ಜನಾಂಗವೂ ಇನ್ನು ಮುಂದೆ ಪ್ರಪಂಚದ ಶಾಂತಿ ಕಲಕುವ ಭಯವಿಲ್ಲ. ಯಂತ್ರೋಪಕರಣ ನಾಗರಿಕತೆಯ ಬಹುವೇಗದಿಂದ ಇತರ ಪ್ರಗತಿಪರ ರಾಷ್ಟ್ರಗಳಿಗೂ ಹರಡಿರುವುದರಿಂದ ಜರ್ಮನಿ ಸಹ ತನ್ನ ಪಶ್ಚಿಮದ ನೆರೆಯವರಂತೆ ಪ್ರಪಂಚದ ಮಹಾಶಕ್ತಿಯಾಗುವ ಅವಕಾಶ ಕಳೆದುಕೊಂಡಿದೆ'' ಎಂದು ಫ್ರಾಂಕ್ ನೋಟ್‌ಸ್ಟೀನ್ ಹೇಳಿದ್ದಾನೆ.

ಯಂತ್ರೋಪಕರಣ ಮತ್ತು ಕೈಗಾರಿಕಾ ಪ್ರಗತಿಯಿಂದ ಅನೇಕ ಪಾಶ್ಚಾತ್ಯ ದೇಶಗಳಿಗೆ ಮತ್ತು ಜನರಿಗೆ ಪ್ರಬಲಶಕ್ತಿ ಬಂದಿತು. ಈ ಶಕ್ತಿ ಮೂಲವು ಕೆಲವು ರಾಷ್ಟ್ರಗಳ ಸ್ವಾಮ್ಯವಾಗಿ ಮಾತ್ರ ಉಳಿಯುವುದು ತೀರ ಅಸಂಭವ. ಆದ್ದರಿಂದ ಪ್ರಪಂಚದ ಬಹು ಭಾಗದ ಮೇಲೆ ಯೂರೋಪಿಗೆ ಇರುವ ರಾಜಕೀಯ ಮತ್ತು ಆರ್ಥಿಕ ಸ್ವಾಮ್ಯ ಬೇಗ ಹೋಗಲೇಬೇಕು; ಯುರೇಷ್ಯ ಮತ್ತು ಆಫ್ರಿಕ ಖಂಡಗಳಿಗೆ ಅದು ಜೀವನಾಡಿಯಾಗಿರುವುದು ನಿಲ್ಲಲೇಬೇಕು. ಯೂರೋಪಿಯನ್ ರಾಷ್ಟ್ರಗಳು ಯುದ್ಧ ವಿರೋಧಿಸಿ ಪ್ರಪಂಚದ ಶಾಂತಿ ಮತ್ತು ಸಹಕಾರಕ್ಕೆ ಸಾಧ್ಯವಾದ ತಮ್ಮ ಪೂರ್ಣಬೆಂಬಲ ಕೊಡಲು ನಿರ್ಧರಿಸಲು ಈ ಒಂದು ಮುಖ್ಯ ಕಾರಣ ಬೇಗ ಸಾಗಬೇಕು, ಆಕ್ರಮಣದಿಂದ ಸರ್ವನಾಶ ಖಂಡಿತವೆಂದಾಗ ಮಾತ್ರ ಈ ತಾತ್ವಿಕ ಪ್ರೇಮ ಮಾಯವಾಗಬಹುದು. ಆದರೆ ಈ ಸಹಕಾರ ಭಾವನೆಯ ಅವಶ್ಯಕತೆ ಪ್ರಪಂಚದ ಬಲಿಷ್ಠ ರಾಷ್ಟ್ರಗಳ ಮನಸ್ಸಿಗೆ ಇನ್ನೂ ಹೊಳೆದಿಲ್ಲ. ನೈತಿಕ ಪ್ರೇರಣೆಯಾಗುವವರೆಗೆ ಹೊಳೆಯುವುದು ಇಲ್ಲ, ಅಧಿಕಾರ ದರ್ಪದಿಂದ ಅಂಧರಾದವರಿಗೆ ಆ ನೈತಿಕ ಪ್ರೇರಣೆಯಾಗುವುದೂ ಕಷ್ಟ.

ಪ್ರಪಂಚದ ಇಷ್ಟು ದೇಶಗಳಲ್ಲಿ ಜನಸಂಖ್ಯೆ ಕ್ಷೀಣಿಸುತ್ತಿರುವುದಕ್ಕೆ ಕಾರಣವೇನು? ಸಂತಾನ ನಿರೋಧ ಸಾಮಗ್ರಿಗಳ ಉಪಯೋಗ ಹೆಚ್ಚಿ ಮಿತಸಂತಾನದ ವ್ಯವಸ್ಥಿತ ಸಂಸಾರ ನಡೆಸುವುದು ಸ್ವಲ್ಪ ಮಟ್ಟಿಗೆ ಕಾರಣ ಇರಬಹುದು; ಆದರೆ ಇದೇ ಮುಖ್ಯ ಕಾರಣವಲ್ಲವೆಂದು ತಜ್ಞರ ಅಭಿಪ್ರಾಯ. ಸಂತಾನ ನಿರೋಧ ಸಾಮಗ್ರಿಗಳನ್ನೇ ಉಪಯೋಗಿಸದ ಕ್ಯಾಥೊಲಿಕ್ ಐರ್ಲೆಂಡಿನಲ್ಲಿ ಇತರ ದೇಶಗಳಿಗಿಂತ ಮುಂಚೆಯೇ ಸಂತಾನ ಕ್ಷೀಣತೆ ಆರಂಭವಾಯಿತು. ಬಹಳ ವಯಸ್ಸಾದ ಮೇಲೆ ಮದುವೆಮಾಡಿಕೊಳ್ಳುವ ಅಭ್ಯಾಸ ಒಂದು ಕಾರಣವಿರಬಹುದು. ಆರ್ಥಿಕ ಪರಿಸ್ಥಿತಿಯೂ ಸ್ವಲ್ಪ ಪರಿಣಾಮ ಮಾಡಿರಬಹುದು; ಆದರೆ ಇದಾವುದೂ ಮುಖ್ಯಕಾರಣವಲ್ಲ. ಶ್ರೀಮಂತರಿಗಿಂತ ಬಡವರಲ್ಲೂ, ನಗರ ನಿವಾಸಿಗಳಿಗಿಂತ ಹಳ್ಳಿಗಾಡಿನ ಜನರಲ್ಲೂ ಮಕ್ಕಳಾಗುವುದು ಹೆಚ್ಚೆಂದು ಎಲ್ಲರೂ ತಿಳಿದ ವಿಷಯ. ಸಣ್ಣ ಗುಂಪೊಂದು ಉನ್ನತ

ಮಟ್ಟ ಕಾಪಾಡಿಕೊಂಡು ಬರುವುದು ಸುಲಭ; ವ್ಯಕ್ತಿತ್ವಕ್ಕೆ ಬೆಲೆ ಹೆಚ್ಚಿದಂತೆ ಪಂಗಡ ಅಥವ ಜನಾಂಗದ ಪ್ರಾಮುಖ್ಯತೆ ಕಡಮೆಯಾಗುತ್ತದೆ. ಯಾವ ನಾಗರಿಕ ಸಮಾಜ ನೋಡಿದರೂ ಆ ಸಮಾಜದ ಯಾವ ಗುಂಪಿಗೆ ಆದರ್ಶ ಜೀವಿಗಳೆಂದು ಗೌರವಸಲ್ಲುತ್ತಿದೆಯೋ ಆ ಗುಂಪಿನಲ್ಲಿ ಸಾಮಾನ್ಯ ಜನರಿಗಿಂತ ಸಂತಾನ ಫಲ ಬಹು ಕಡಮೆ ಎಂದು ಜೆ.ಬಿ.ಎಸ್. ಹಾಲ್ಡೇನ್ ಹೇಳುತ್ತಾನೆ. ಆ ಸಮಾಜಗಳು ಭದ್ರವಲ್ಲವೆಂದು ಜೀವಶಾಸ್ತ್ರದ ಮತ. ಅನೇಕ ಸಂಸಾರಗಳ ಬುದ್ಧಿ ಶಕ್ತಿ ಸಹ ಬಹಳ ಕಡಮೆ ಮಟ್ಟದಲ್ಲಿ ಇರುತ್ತದೆ. ಆರ್ಥಿಕ ಅಭಿವೃದ್ಧಿಯೂ ಸಂತಾನ ಅಭಿವೃದ್ಧಿಯೂ ಉತ್ತರ ದಕ್ಷಿಣ ಧ್ರುವಗಳು ಎಂದು ಹೇಳುತ್ತಾರೆ.

ಉಪ ಕಾರಣಗಳು ಅನೇಕ ಇದ್ದರೂ, ಈ ಸಂತಾನ ಕ್ಷೀಣತೆಗೆ ಮುಖ್ಯಕಾರಣ ಏನೆಂದು ಯಾರಿಗೂ ತಿಳಿದಂತಿಲ್ಲ. ಕೈಗಾರಿಕೋದ್ಯಮದಲ್ಲಿ ಮುಂದುವರಿದ ಜನಾಂಗಗಳು ನಡೆಸುವ ಜೀವನರೀತಿ, ಅವರ ಸುತ್ತಲಿನ ವಾತಾವರಣದಿಂದ ಆಗುವ ಕೆಲವು ಮಾನಸಿಕ ಮತ್ತು ವೈಜ್ಞಾನಿಕ ಪರಿಣಾಮಗಳೇ ಅದಕ್ಕೆ ಕಾರಣವಿರಬಹುದು. ಪುಷ್ಟಿ ಇಲ್ಲದ ಆಹಾರ, ಕುಡಿತ, ಮನೋದೌರ್ಬಲ್ಯ, ಮತ್ತು ದೈಹಿಕ ಅಥವ ಮಾನಸಿಕ ರೋಗ, ಇವು ಸಾಮಾನ್ಯವಾಗಿ ಸಂತಾನಾಭಿವೃದ್ಧಿ ಶಕ್ತಿಯ ಮೇಲೆ ಪರಿಣಾಮ ಮಾಡುತ್ತವೆ. ಆದರೂ ರೋಗರುಜಿನಗಳ ತವರುಮನೆಯಾದ ಅರೆಹೊಟ್ಟೆಯ ಭಾರತದಲ್ಲಿ ಮಿತಿ ಇಲ್ಲದೆ ಮಕ್ಕಳು ಹುಟ್ಟು ತ್ತಿದಾರೆ. ಪ್ರಾಯಶಃ ಆಧುನಿಕ ಜೀವನದ ಕಷ್ಟ ನಿಷ್ಠುರಗಳು ಕೊನೆ ಇಲ್ಲದ ಪೈಪೋಟಿ ಮತ್ತು ಚಿಂತೆ ಇವು ಸಂತಾನೋತ್ಪತ್ತಿ ಕ್ಷೀಣಿಸಲು ಕಾರಣ ಇರಬಹುದು. ಜೀವದಾಯಕ ಭೂಮಾತೆಯಿಂದ ದೂರ ಇರು ವುದೂ ಪ್ರಾಯಶಃ ಒಂದು ಮುಖ್ಯ ಕಾರಣವಿರಬಹುದು. ಅಮೆರಿಕದಲ್ಲಿ ಸಹ ಇತರ ಉದ್ಯಮಿಗಳಿಗಿಂತ ರೈತರಲ್ಲಿ ಮಕ್ಕಳ ಸಂಖ್ಯೆ ಎರಡರಷ್ಟು ಮೀರಿ ಇದೆ.

ಪಾಶ್ಚಾತರಲ್ಲಿ ಮೊದಲು ವಿಕಾಸವಾಗಿ ಕ್ರಮೇಣ ಇತರ ಕಡೆ ಹಬ್ಬಿದ ಆಧುನಿಕ ನಾಗರಿಕತೆಯು ಅದ ರಲ್ಲೂ ಅದರ ಮುಖ್ಯ ಲಕ್ಷಣವಾದ ನಗರಜೀವನವು ಜೀವ ಸತ್ವವನ್ನೇ ಕ್ಷೀಣಿಸಿ ಒಂದು ಬುಡ ಭದ್ರವಿಲ್ಲದ ಸಮಾಜಕ್ಕೆ ಕ್ರಮೇಣ ಅವಕಾಶ ಕೊಡುವಂತೆ ಕಾಣುತ್ತದೆ. ಜೀವನವು ಬಹುಮುಖವಾಗಿ ವಿಕಾಸ ಹೊಂದಿ ದರೂ, ಅದರ ಹಿಡಿತ ಸಡಿಲುತ್ತದೆ; ಅದು ಹೆಚ್ಚು ಹೆಚ್ಚು ಕೃತಕವಾಗಿ ಕ್ರಮೇಣ ನಾಶಹೊಂದುತ್ತದೆ. ನಿದ್ರೆಮಾಡಲು ಔಷಧ; ಸ್ವಾಭಾವಿಕ ನಿತ್ಯವಿಧಿಗಳಿಗೆ ಔಷಧ; ನಾಲಗೆರುಚಿ ಕೆರಳಿಸಿ, ದೇಹಕ್ಕೆ ಅಪಾಯ ತಂದರೂ ತಾತ್ಕಾಲಿಕ ಉನ್ಮಾದ ಕೊಡುವ ಆಹಾರ ಪಾನೀಯಗಳು; ಸುಖ ಮತ್ತು ಅತಿರೇಕದ ತಾತ್ಕಾಲಿಕ ಭಾವಪರವಶತೆ ಕೊಡುವ ವಿಶೇಷ ಸಾಧನಗಳು; ಈ ರೀತಿ ಹೆಚ್ಚು ಹೆಚ್ಚು ಪ್ರಚೋದಕವಸ್ತುಗಳ ಅವಶ್ಯಕತೆ; ಕೊನೆಯಲ್ಲಿ ಈ ಭಾವೋದ್ರೇಕದ ಪ್ರತಿಕ್ರಿಯೆ, ಶೂನ್ಯತಾಭಾವನೆ. ಈ ಅದ್ಭುತ ನಾಗರಿಕತೆ ಬಹುಮುಖ ಬೆಳೆದು ಮಹತ್ಕಾರ್ಯ ಸಾಧಿಸಿದ್ದರೂ ಅದರಲ್ಲಿ ಏನೋ ಕೃತಕವಿದೆ. ಕೃತಕಗೊಬ್ಬರದ ಕೃತಕ ಆಹಾರ ತಿಂದು, ಕೃತಕ ಭಾವೋದ್ರೇಕ ಅನುಭವಿಸುತ್ತೇವೆ. ಮಾನವ ಭಾಂಧವ್ಯವು ಬಾಹ್ಯ ಉಪಚಾರ ಬಿಟ್ಟು ಒಳಗೆ ಇಳಿಯುವುದೇ ಇಲ್ಲ. ನಮ್ಮ ಯುಗದ ಮುಖ್ಯ ವೈಶಿಷ್ಟ್ಯ ಪ್ರಕಟನೆ. ತನ್ನ ನಿರಂತರ ಬೊಬ್ಬೆಯಿಂದ ನಮ್ಮನ್ನು ಅಡ್ಡದಾರಿಗೆಳೆದು, ನಮ್ಮನ್ನು ಬುದ್ಧಿಭ್ರಮೆಗೊಳಿಸಿ ಅನವಶ್ಯಕ ಅನೇಕವೇಳೆ ಅಪಾಯಕರ ವಸ್ತುಪ್ರೇಮಕ್ಕೆ ಪ್ರೇರಿಸುತ್ತದೆ. ಈ ಪರಿಸ್ಥಿತಿಗೆ ಬೇರೆ ಯಾರನ್ನೂ ನಾನು ದೂಷಿಸುತ್ತಿಲ್ಲ. ನಾವೆಲ್ಲರೂ ಈ ಯುಗದ ಶಿಶುಗಳು. ನಮ್ಮ ಪೀಳಿಗೆಯ ಗುಣದೋಷಗಳೆರಡಕ್ಕೂ ನಾವೇ ಹೊಣೆ. ನಾನೂ ಆ ನಾಗರಿಕತೆಯ ಒಂದು ಶಿಶು. ಅದನ್ನು ಹೊಗಳಲು ಅಥವ ತೆಗಳಲು ಇತರರಿಗೆ ಎಷ್ಟು ಹಕ್ಕು ಇದೆಯೋ ಅಷ್ಟು ಹಕ್ಕು ನನಗೂ ಇದೆ. ನನ್ನ ಎಲ್ಲ ಭಾವನೆಗಳು, ರೀತಿ ನೀತಿಗಳು ರೂಪಿತವಾಗಿರುವುದು ಅದರಿಂದ.

ಈ ರೀತಿ ನಪುಂಸಕತ್ವ ಮತ್ತು ಜನಾಂಗ ಕ್ಷೀಣತೆಯ ಲಕ್ಷಣಗಳು ಅಂತರ್ಗತವಿರುವ ಈ ನಮ್ಮ ಆಧುನಿಕ ನಾಗರಿಕತೆಯ ನ್ಯೂನತೆಗಳು ಯಾವುವು? ಈ ರೋಗ ಹೊಸದೇನೂ ಅಲ್ಲ. ಹಿಂದೆಯೂ ಈ ರೀತಿ ಆದ ನಿದರ್ಶನಗಳು ಇತಿಹಾಸದಲ್ಲಿ ಎಷ್ಟೋ ಇವೆ. ರೋಮ ಸಾಮ್ರಾಜ್ಯದ ಅವನತಿ ಕಾಲದಲ್ಲಿ ಪರಿಸ್ಥಿತಿ ಇನ್ನೂ ಹದಗೆಟ್ಟಿತ್ತು. ಈ ಅಸ್ಥಿಗತಕ್ಷಯರೋಗದ ಗತಿಗೆ ನಿರ್ಧಾರಕ ನಿಯಮಚಕ್ರ ಏನಾದರೂ ಇದೆಯೇ–ಕಂಡುಹಿಡಿದು ನಿವಾರಿಸಿಕೊಳ್ಳಲು ಸಾಧ್ಯವೆ? ಇಂದಿನ ಸಮಾಜದ ಆಧುನಿಕ ಕೈಗಾರಿಕೋದ್ಯಮ

ಮತ್ತು ಬಂಡವಳಶಾಹಿ ಪದ್ಧತಿಯೇ ಮುಖ್ಯಕಾರಣ ಇರಲಾರವು ; ಏಕೆಂದರೆ ಅದು ಯಾವುದೂ ಇಲ್ಲದ ನಾಗರಿಕತೆಗಳೂ ನಾಶವಾಗಿವೆ. ಆದರೆ ಅವುಗಳ ಇಂದಿನ ಸ್ವರೂಪಗಳಿಂದ ಮಾನವನ ದೈಹಿಕ ಮತ್ತು ಮಾನಸಿಕಸ್ಥಿತಿ ಹದಗೊಳಿಸಿ ಒಂದು ಅನುಕೂಲ ಸನ್ನಿವೇಶ ಕಲ್ಪಿಸಿ ಮೂಲಕಾರಣಗಳ ಪರಿಣಾಮವನ್ನು ತ್ವರಿತಗೊಳಿಸಬಹುದು. ಈ ಮೂಲಕಾರಣ ಮಾನವನ ಮನಸ್ಸು ಮತ್ತು ಆತ್ಮದಮೇಲೆ ಪರಿಣಾಮಮಾಡುವ ತಾತ್ವಿಕ ವಿಷಯವಾದರೆ ಅದನ್ನರಿಯಲು ಬಹಿರಂಗ, ಅಂತರಂಗ ಪ್ರಯತ್ನ ಎಷ್ಟುಮಾಡಿದರೂ ಅದರ ಅನುಭವ ಮತ್ತು ಅರಿವು ದೊರೆಯುವುದು ಕಷ್ಟ. ಆದರೆ ಒಂದು ವಿಷಯ ಮಾತ್ರ ಸ್ಪಷ್ಟಕಾಣುತ್ತದೆ. ಜೀವದಾತೃ ಭೂಮಾತೆಯನ್ನು ಮರೆತರೆ ವ್ಯಕ್ತಿಗಾಗಲಿ, ಜನಾಂಗಕ್ಕಾಗಲಿ ವಿನಾಶಖಂಡಿತ. ಭೂಮಿಯೂ ಸೂರ್ಯರಶ್ಮಿಯೂ ಜೀವನ ಮೂಲಗಳು ; ಬಹುಕಾಲ ಅವುಗಳಿಂದ ದೂರವಿದ್ದರೆ ವಿನಾಶದ ದಾರಿ ಹಿಡಿಯುತ್ತೇವೆ. ಆಧುನಿಕ ಕೈಗಾರಿಕೋದ್ಯಮಿ ಜನಾಂಗಗಳು ಭೂಸಂಪರ್ಕ ಕಳೆದುಕೊಂಡಿವೆ. ಪ್ರಕೃತಿ ಸೌಂದರ್ಯದ ಸುಖವೂ ಭೂಸಂಪರ್ಕದಿಂದ ಒದಗುವ ಆರೋಗ್ಯಭಾಗ್ಯ ಮತ್ತು ತೇಜಸ್ಸಿನ ಅನುಭವವೂ ಅವರಿಗೆ ಇಲ್ಲ. ಪ್ರಕೃತಿ ಸೌಂದರ್ಯದ ವಿಷಯ ಮಾತನಾಡಬಹುದು ; ಆಗಾಗ್ಗ ವಾರಕ್ಕೊಮ್ಮೆ ಪ್ರಕೃತಿ ಸೌಂದರ್ಯದೆಡೆಗೆ ಹೋಗಿ ತಮ್ಮ ಕೃತಕಜೀವನದ ಭೋಗ ಸಾಮಗ್ರಿಗಳಿಂದ ಗ್ರಾಮಾಂತರ ಪ್ರದೇಶ ವಿರೂಪಗೊಳಿಸಬಹುದು ; ಆದರೆ ಪ್ರಕೃತಿಯೊಂದಿಗೆ ತಾದಾತ್ಮ್ಯಭಾವ ಪಡೆಯಲು ಅಥವ ಏಕೀಭವಿಸಲು ಅವರಿಂದ ಸಾಧ್ಯವಿಲ್ಲ. ಪರರು ಹೊಗಳುವರೆಂದು ತಾವೂ ನೋಡಿ ಪ್ರಶಂಸೆಮಾಡಿ, ನಿಟ್ಟುಸಿರುಬಿಟ್ಟು ತಮ್ಮ ಗೂಡಿಗೆ ಮರಳಿದರೆ ಮುಗಿಯಿತು. ಮಹಾಕಾವ್ಯವನ್ನೋ ಮಹಾಕವಿಯನ್ನೋ ಓದಿ ಆನಂದಾಮೃತ ಸವಿಯಲೆತ್ನಿಸಿ ಸಾಧ್ಯವಾಗದೆ ಯಾವ ಮನೋಸಾಧನೆಯೂ ಇಲ್ಲದೆ ಅರ್ಥಮಾಡಿಕೊಳ್ಳಬಹುದಾದ ತಮ್ಮ ನೆಚ್ಚಿನ ಕಾದಂಬರಿಗೋ, ಪತ್ತೆದಾರಿ ಕತೆಗೋ ಪುನಃ ಹಿಂದಿರುಗಿದಂತೆ ಈ ಅನುಭವ ಪುರಾತನ ಗ್ರೀಕರಂತೆ ಅಥವ ಭಾರತೀಯರಂತೆ ಅವರು ಪ್ರಕೃತಿಯ ಮಡಿಲಶಿಶುಗಳಲ್ಲ ; ಯಾವುದೋ ದೂರದ ನೆಂಟನಮನೆಗೆ ಬಲಾತ್ಕಾರದ ಔತನಕ್ಕೆ ಹೋದ ಪರಕೀಯರಂತೆ ಅವರ ಈ ಪ್ರಕೃತಿ ಉಪಾಸನೆ. ಆದ್ದರಿಂದ ನಮ್ಮ ಪೂರ್ವಜರು ಸ್ವಾಭಾವಿಕವಾಗಿ ಕಂಡು ಅನುಭವಿಸಿದ ಪ್ರಕೃತಿಯ ಜೀವನ ಸಂಪತ್ಸಮೃದ್ಧಿ ಬಹುಮುಖ ವೈಚಿತ್ರ್ಯ ಆನಂದ ಮತ್ತು ಉತ್ಕಟ ಜೀವನಾಸಕ್ತಿಗಳನ್ನು ಅವರು ಅನುಭವಿಸಲು ಸಾಧ್ಯವಿಲ್ಲ. ಆದ್ದರಿಂದ ಪ್ರಕೃತಿಯು ತನಗೆ ಬೇಡದ ಮಲಮಕ್ಕಳಂತೆ ಅವರನ್ನು ಕಂಡರೆ ಅದರಲ್ಲಿ ತಪ್ಪೇನು ?

ಅವರ ವಿಶ್ವದೇವೈಕ್ಯದೃಷ್ಟಿ ನಮಗೆ ಸರಿಬೀಳದೆ ಇರಬಹುದು, ಆದರೂ ಪ್ರಕೃತಿರಹಸ್ಯ ಅನುಭವಿಸ ಬಹುದು. ಜೀವನಗಾನ ಮಾಧುರ್ಯ ಮತ್ತು ಜೀವನ ಸೌಂದರ್ಯ ಸವಿಯಬಹುದು ; ಮತ್ತು ಅದ ರಿಂದ ಒಂದು ಜೀವಪುಷ್ಟಿ ಪಡೆಯಬಹುದು. ಆ ಗಾನದ ಸವಿ ಕೇಳಲು ವಿಶಿಷ್ಟ ಸ್ಥಳಗಳಿಗೆ ಹೋಗ ಬೇಕಾಗಿಲ್ಲ ; ಕೇಳುವ ಕಿವಿಯೊಂದಿದ್ದರೆ ಎಲ್ಲಾದರೂ ಕೇಳಬಹುದು. ಆದರೆ ಕೇಳಲು ಒಲ್ಲದ ಜನರನ್ನೂ ಮುಗ್ಧಗೊಳಿಸುವ ಕೆಲವು ಸ್ಥಳಗಳಿವೆ. ದೂರದ ಯಾವುದೋ ಒಂದು ಪ್ರಬಲ ಭೇರಿಯ ಗಂಭೀರ ನಿನಾದ ದಂತೆ ಕೇಳಿಬರುತ್ತದೆ. ಈ ವಿಶಿಷ್ಟ ಸ್ಥಳಗಳಲ್ಲಿ ಕಾಶ್ಮೀರ ಒಂದು ಸೌಂದರ್ಯದ ನೆಲೆವೀಡು, ಅನುಪಮ ಮನಮೋಹಕತೆಯಿಂದ ಮೈಮರೆಯುತ್ತೇವೆ. ಕಾಶ್ಮೀರ ವಿಷಯ ಬರೆಯುತ್ತ ಫ್ರೆಂಚ್ ವಿದ್ವಾಂಸನಾದ ಫೂಷೆ "ಯಾರೂ ಅರಿಯಲೆತ್ನಿಸದಿದ್ದರೂ ಎಲ್ಲರೂ ಅರಸುವ ಕಾಶ್ಮೀರದ ಮನಮೋಹಕ ಸೌಂದರ್ಯಕ್ಕೆ ನಿಜ ವಾದ ಕಾರಣ ತಿಳಿಸುತ್ತೇನೆ. ಅದರ ವೈಭವ ಪೂರ್ಣ ವನರಾಶಿ, ಸರೋವರಗಳ ನಿರ್ಮಲ ಸಲಿಲ, ಹಿಮ ಆಚ್ಛಾದಿತ ಗಿರಿ ತಟಗಳ ಭವ್ಯ ಸೌಂದರ್ಯ, ಮಧುರ ತಂಗಾಳಿಯಲ್ಲಿ ಸುಳಿದು ಹರಿಯುವ ಅಸಂಖ್ಯಾತ ತೊರೆಗಳ ಮರ್ಮರದ ನಿನಾದಗಳು ಮಾತ್ರ ಅಲ್ಲ. ಭೂಶಿರದ ಮೇಲಿನ ಗ್ರೀಕ್ ದೇವಾಲಯದ ಗಾಂಭೀರ್ಯ ದಂತೆ ಕರೇವಾ ಗಿರಿನೆತ್ತಿಯ ಮೇಲೆ ಪಾಳುಗೋಡೆಗಳಿಂದ ಕಂಗೊಳಿಸುವ ಮಾರ್ತಾಂಡ ದೇವಾಲಯ ವಾಗಲಿ ಲಿಸಿಕ್ರೆಟೀಸನ (choralic) ಸ್ಮಾರಕಗಳಂತೆ ಸುಂದರ ಮೈಕಟ್ಟಿನ ಹತ್ತು ಶಿಲಾ ವಿಗ್ರಹ ಗಳಿರುವ ಪ್ರಾಚೀನ ಪಾಯಾರ್ ಕ್ಷೇತ್ರಗಳ ಗಾಂಭೀರ್ಯ ಮತ್ತು ಭವ್ಯತೆಯಾಗಲಿ ಕಾರಣವಲ್ಲ. ಪ್ರಕೃತಿ ಮಡಿಲಿನ ಕಲಾಪೂರ್ಣತೆಯಿಂದ ಬಂದುದು ಎಂದು ಹೇಳಲೂ ಸಾಧ್ಯವಿಲ್ಲ ; ಏಕೆಂದರೆ ಅನೇಕ ದೇಶಗಳಲ್ಲಿ ಪ್ರಕೃತಿ ಸೌಂದರ್ಯದ ಮಧ್ಯೆ ಅನೇಕ ಸುಂದರ ಸೌಧಗಳಿವೆ. ಆದರೆ ಪ್ರಕೃತಿಯ ಸೊಬಗಿನ ಮಡಿಲಿನ ಈ

ಎರಡು ಸುಂದರ ಸನ್ನಿವೇಶಗಳಲ್ಲದೆ ನಮ್ಮ ಕವಿಯ ಬಳಿ ಬಂದು ತನ್ನ ಪಿಸುಮಾತಿನಿಂದ ನಮ್ಮ ಅಸಂಸ್ಕೃತ ಜೀವನ ಕಲಕಿ

ಋಷಿಯ ಜನತೆ ದೇವರನ್ನು
ನಂಬಿದಂದು ದೇವಲೋಕ
ಬೆಳಗಿ ಬಾಳ್ವುದಿಲ್ಲೆ ಉಸಿರಿ

ಎಂದು ದುಃಖದಿಂದ ಪ್ರಪಂಚದ ಮುಂಬೆಳಗಿನಲ್ಲಿ ಹಾಡಿದ ಕವಿಯ ಪ್ರಾಚೀನ ಯುಗಕ್ಕೆ ವ್ಯಕ್ತವಾಗಿಯೋ ಅವ್ಯಕ್ತವಾಗಿಯೋ ಕರೆದೊಯ್ಯುವ ಅಂತರ್ಧಾನ ಜೀವಶಕ್ತಿಯೊಂದು ಕಾಶ್ಮೀರದಲ್ಲಿ ದೊರೆಯುವುದೇ ಮುಖ್ಯ ಕಾರಣ.'' ಎಂದಿದಾನೆ.

ನನ್ನ ಕಾಶ್ಮೀರ ಪ್ರೇಮ ನನ್ನನ್ನು ಅನೇಕ ವೇಳೆ ಅಡ್ಡದಾರಿಗೆಳೆದರೂ, ಕಾಶ್ಮೀರ ಹೊಗಳುವುದು ನನ್ನ ಉದ್ದೇಶವಲ್ಲ. ಸ್ವಲ್ಪ ವಿಶ್ವ ದೇವತ್ವವಾದವು ಮೈಗೂ ಮನಸ್ಸಿಗೂ ಒಳ್ಳೆಯದೆಂದು ನಂಬುವಷ್ಟು ವಿಶ್ವದೇವತ್ವವಾದಿ ನಾನಿದ್ದರೂ, ವಿಶ್ವದೇವತ್ವವಾದ ಸಮರ್ಥನೆಯೂ ನನ್ನ ಉದ್ದೇಶವಲ್ಲ. ಭೂಮಿಯ ಸಂಪರ್ಕ ಪೂರ್ಣ ಅಲಕ್ಷ್ಯಮಾಡಿದ ನಾಗರಿಕತೆಗೆ ಅಂತ್ಯ ನಾಶವೇ ನಿಶ್ಚಯ ಎಂದು ತೋರುವುದು ನನ್ನ ಉದ್ದೇಶ. ಆದರೆ ಆ ವಿನಾಶ ಏಕಾಏಕಿ ಒದಗುವುದಿಲ್ಲ. ಎಲ್ಲ ಪ್ರಕೃತಿ ನಿಯಮಗಳಿಗೂ ಕಾಲಬೇಕು. ಆದರೆ ಆಧುನಿಕ ನಾಗರಿಕತೆಯು ಕ್ರಮೇಣ ನಿಸರ್ಗ ಜೀವಸತ್ವಗಳಿಂದ ದೂರ ದೂರ ಹೋಗುತ್ತಿರುವುದು ಅದರ ಒಂದು ಮುಖ್ಯ ದೌರ್ಬಲ್ಯ. ಆಧುನಿಕ ಬಂಡವಲಶಾಹಿ ಸಮಾಜದ ಲಾಭಬಡಕತನ, ದುಡ್ಡೇ ದೇವರೆಂಬ ಐಶ್ವರ್ಯೋಪಾಸನೆ, ಅನೇಕರ ಸ್ಥಿಮಿತರಹಿತ ಜೀವನ ಇವುಗಳಿಂದ ಒದಗುವ ಮನೋರೋಗ ಮತ್ತು ಮನೋವಿಕಾರಗಳೇ ಆ ದುರ್ಬಲತೆಗಳು. ಹೆಚ್ಚು ಮನೋಸ್ಥೈರ್ಯ ಮತ್ತು ಸಮತೂಕಗಳಿದ್ದರೆ ಈ ಸ್ಥಿತಿ ಉತ್ತಮಗೊಳ್ಳಬಹುದು. ಆದರೂ ಭೂಮಿಯೊಂದಿಗೆ, ನಿಸರ್ಗದೊಂದಿಗೆ ಹೆಚ್ಚಿನ ಸಜೀವ ಸಂಪರ್ಕ ಬೇಕೇ ಬೇಕು. ಅಂದರೆ ಭೂಮಿಗೆ ಮರಳಿ ಹಿಂದಿನ ಅಸಂಸ್ಕೃತ ಜೀವನ ನಡೆಸಬೇಕೆಂಬ ಸಂಕುಚಿತ ಅರ್ಥದಲ್ಲಿ ಅಲ್ಲ. ಅದರಿಂದ ರೋಗಕ್ಕಿಂತ ಚಿಕಿತ್ಸೆಯೇ ಅಪಾಯಕರವಾಯಿತು. ಸ್ತ್ರೀ ಪುರುಷರ ಭೂಮಿಯ ಸಮೀಪ ಸಂಪರ್ಕ ಸಾಧ್ಯವಾದಮಟ್ಟಿಗೆ ತಪ್ಪದಂತೆ ಮತ್ತು ಗ್ರಾಮಾಂತರ ಪ್ರದೇಶ ಗಳ ಸಂಸ್ಕೃತಿ ಮಟ್ಟ ಉನ್ನತಿಗೊಳ್ಳುವಂತೆ ಆಧುನಿಕ ಕೈಗಾರಿಕೋದ್ಯಮ ರಚಿಸುವುಕ್ಕೆ ಸಾಧ್ಯವಿದೆ. ದೈಹಿಕ ಮತ್ತು ಮಾನಸಿಕ ಬೆಳವಣಿಗೆಗೆ ಮತ್ತು ಸರ್ವ ಸಮೃದ್ಧಿ ತುಂಬುವ ಜೀವನ ನಡೆಸುವುದಕ್ಕೆ ಗ್ರಾಮ ಮತ್ತು ನಗರಗಳೆರಡರಲ್ಲೂ ಪೂರ್ಣ ಅವಕಾಶವಿರುವಂತೆ ಜೀವನದ ಅವಶ್ಯಕತೆಗಳ ಪೂರೈಕೆಯಲ್ಲಿ ಗ್ರಾಮ ಮತ್ತು ನಗರಗಳೆರಡಕ್ಕೂ ಪರಸ್ಪರ ಸಾಮ್ಯವಿರಬೇಕು. ಸಾಧಿಸಬೇಕೆಂಬದೃಢಸಂಕಲ್ಪ ಮಾತ್ರ ಇದ್ದರೆ ಕೃತಕೃತ್ಯರಾಗುವುದು ಕಷ್ಟವಾಗಲಾರದು. ಆದರೆ ಪ್ರಕೃತದಲ್ಲಿ ಬಹು ಜನರಿಗೆ ಆ ಇಚ್ಛೆ ಇಲ್ಲ. ನಮ್ಮ ಶಕ್ತಿ ಎಲ್ಲ ಪರಸ್ಪರ ಕೊಲೆ, ಬಿಟ್ಟರೆ ಕೃತಕ ವಸ್ತುಗಳ ಮತ್ತು ಕೃತಕ ವಿನೋದಗಳ ನಿರ್ಮಾಣ ಕಾರ್ಯದಲ್ಲಿ ವಿನಿಯೋಗವಾಗುತ್ತಿದೆ; ಅವುಗಳ ಅನೇಕ ವಸ್ತುಗಳಿಗೆ ನಾನು ವಿರೋಧಿಯಲ್ಲ, ಕೆಲವಂತೂ ಬೇಕೇ ಬೇಕು ಆದರೆ ಇನ್ನೂ ಉಪಯುಕ್ತ ಕಾರ್ಯದಲ್ಲಿ ಉಪಯೋಗಿಸಬಹುದಾದ ಶಕ್ತಿಯನ್ನೆಲ್ಲ ಇದರಲ್ಲೆ ಕಳೆಯುತ್ತೇವೆ; ಮತ್ತು ಅವುಗಳಿಂದ ಜೀವನಕ್ಕೊಂದು ತಪ್ಪು ದೃಷ್ಟಿ ಕೊಡುತ್ತಿದೇವೆ. ಎಲ್ಲೆಲ್ಲೂ ಕೃತಕ ಗೊಬ್ಬರಗಳಿಗೆ ಗಿರಾಕಿ ಇದೆ, ಒಂದು ರೀತಿಯಲ್ಲಿ ಅವುಗಳಿಂದ ತುಂಬ ಪ್ರಯೋಜನವೂ ಆಗಿದೆ. ಆದರೆ ಕೃತಕ ಗೊಬ್ಬರದ ಅಭಿಮಾನದಲ್ಲಿ ನೈಸರ್ಗಿಕ ಗೊಬ್ಬರ ಮರೆತು, ಅವನ್ನು ದುರ್ವ್ಯಯ ಮಾಡಿ ಹಾಳುಮಾಡುತ್ತಿರುವುದು ನನಗೆ ಅರ್ಥವಾಗುತ್ತಿಲ್ಲ. ಈ ನೈಸರ್ಗಿಕ ಗೊಬ್ಬರದ ಪೂರ್ಣ ಉಪ ಯೋಗ ಪಡೆಯುವ ಜ್ಞಾನ ಚೀನಾ ದೇಶ ಒಂದಕ್ಕೆ ಮಾತ್ರ ಇದೆ. ಕೆಲವು ತಜ್ಞರು ಕೃತಕ ಗೊಬ್ಬರದ ಉಪಯೋಗದಿಂದ ಸ್ವಲ್ಪ ಕಾಲ ಹೆಚ್ಚು ಬೆಳೆಬರಬಹುದಾದರೂ ಭೂಮಿಯ ಕೆಲವು ಮುಖ್ಯವಾದ ವಸ್ತು ಗಳನ್ನು ಹೀರಿ ಕ್ರಮೇಣ ಭೂಮಿಯನ್ನು ಬರಡು ಮಾಡುತ್ತದೆ ಎಂದು ಹೇಳುತ್ತಾರೆ. ಭೂಮಿಯಂತೆಯೇ ನಮ್ಮ ವ್ಯಕ್ತಿ ಜೀವನ. ಒಟ್ಟಿನಲ್ಲಿ ಹಾಗೂ ಕೆಡುತ್ತಿದ್ದೇವೆ, ಹೀಗೂ ಕೆಡುತ್ತಿದ್ದೇವೆ. ಒಂದೇ ಸವನೆ ಪ್ರಕೃತಿಯನ್ನು ಸೂರೆಗೊಳ್ಳುತ್ತಿದ್ದೇವೆ; ನಾವು ಮಾತ್ರ ಯಾವ ಪ್ರತಿಫಲವನ್ನೂ ಕೊಡುತ್ತಿಲ್ಲ.

ರಾಸಾಯನಿಕ ಪ್ರಯೋಗಶಾಲೆಯಲ್ಲಿ ಏನನ್ನಾದರೂ ಸೃಷ್ಟಿಸಬಲ್ಲೆವೆಂಬ ಅಹಂಕಾರ ಬಂದಿದೆ. ಆವಿಯ ಯುಗದಿಂದ ವಿದ್ಯುಚ್ಛಕ್ತಿಯ ಯುಗಕ್ಕೆ ಬಂದು ಈಗ ಜೀವಾಣು ಮತ್ತು ಪರಮಾಣುಗಳ ಯುಗ ದಲ್ಲಿದ್ದೇವೆ; ನಮ್ಮ ಇಂದಿನ ಜೀವನ ಕ್ಷೋಭೆಗೆ ಕಾರಣವಾದ ಅನೇಕ ಸಮಸ್ಯೆಗಳಿಗೆ ಪರಿಹಾರ ತೋರಬಲ್ಲ ಸಮಾಜವಿಜ್ಞಾನದ ಆಶಾಯುಗದ ಮುಂಬೆಳಗಿನಲ್ಲಿ ನಾವಿದ್ದೇವೆ; ಮ್ಯಾಗ್ನೀಷಿಯಂ-ಅಲ್ಯುಮಿನಿಯಂ ಯುಗದ ಹೊಸ್ತಿಲಲ್ಲಿ ಇದ್ದೇವೆ, ಎಂದು ಹೇಳುತ್ತಿದ್ದೇವೆ. ಈ ಎರಡು ಲೋಹಗಳೂ ಪ್ರಪಂಚದಲ್ಲಿ ಎಲ್ಲೆಲ್ಲೂ ಹರಡಿ ಇರುವುದರಿಂದ ಯಾರಿಗೂ ಏನೂ ಕೊರತೆಯಾಗಲಾರದು. ಹೊಸ ರಾಸಾಯನಿಕ ಶಾಸ್ತ್ರ ಮಾನವನಿಗೊಂದು ಹೊಸ ಪ್ರಪಂಚವನ್ನೇ ಸೃಷ್ಟಿಸುತ್ತಿದೆ. ಮಾನವ ಶಕ್ತಿಮೂಲಗಳ ಅದ್ಭುತ ಪ್ರಮಾಣದ ಅಭಿವೃದ್ಧಿಯಿಂದ ಪ್ರಳಯಾಂತಕ ಸಂಶೋಧನೆಗಳ ಭವಿಷ್ಯವು ನಮ್ಮೆದುರು ನಿಂತಂತೆ ಇದೆ.

ಇದೆಲ್ಲ ಮನಸ್ಸಿಗೊಂದು ಸಮಾಧಾನಕೊಟ್ಟರೂ ಒಂದು ಸಂಶಯ ಮಾತ್ರ ಮನಸ್ಸಿನಲ್ಲಿ ಸುಳಿಯು ತ್ತಲೇ ಇದೆ. ನಮ್ಮ ಇಂದಿನ ಸಂಕಟಕ್ಕೆ ಕಾರಣ ನಮ್ಮ ಶಕ್ತಿಯ ಅಭಾವವಲ್ಲ. ಆದರೆ ಇರುವ ಶಕ್ತಿಯ ದುರುಪಯೋಗ ಅಥವ ಉಪಯೋಗ ಮಾರ್ಗದ ಅಜ್ಞಾನ. ವಿಜ್ಞಾನವು ಅದ್ಭುತಶಕ್ತಿ ಕೊಡುತ್ತದೆ; ಆದರೆ ಅದಕ್ಕೆ ವ್ಯಕ್ತಿತ್ವವಾಗಲಿ, ಧ್ಯೇಯವಾಗಲಿ ಯಾವುದೂ ಇಲ್ಲ. ನಮ್ಮ ಕೈಗೆ ಕೊಡುವ ಶಕ್ತಿಯ ಉಪಯೋಗ ಎಂತೆಂಬ ಯೋಚನೆ ಅದಕ್ಕಿಲ್ಲ. ವಿಜ್ಞಾನವು ಯಶಸ್ಸಿನಮೇಲೆ ಯಶಸ್ಸೂ ಪಡೆಯಬಹುದು. ಆದರೆ ಪ್ರಕೃತಿಯನ್ನು ಅದು ಬಹಳ ಅಲಕ್ಷಿಸುತ್ತದೆ; ಪ್ರಕೃತಿಯೂ ಭಯಂಕರ ರೀತಿಯಲ್ಲಿ ತನ್ನ ಸೇಡು ತೀರಿಸಿಕೊಳ್ಳಬಹುದು. ಜೀವನದ ಬಾಹ್ಯಶೃಂಗಾರ ಮನಮೋಹಕ ಕಂಡರೂ ವಿಜ್ಞಾನದ ಕೈಗೆ ಯಾವುದೋ ಒಂದು ಜೀವಸತ್ವದ ಅಭಾವದಿಂದ ಅದೆಲ್ಲ ಹೆಣದ ಶೃಂಗಾರವಾಗಬಹುದು.

## ೧೫. ಹಳೆಯ ಸಮಸ್ಯೆಗೆ ಹೊಸಪ್ರವೇಶ.

ಆಧುನಿಕ ಮಾನವನ ಮನಸ್ಸು ಅಂದರೆ ಉತ್ತಮ ಮಟ್ಟದ ಆಧುನಿಕ ಮನಸ್ಸು ಪ್ರಾಯೋಗಿಕ ಮತ್ತು ಕಾರ್ಯತತ್ಪರವೂ, ನೈತಿಕ ಮತ್ತು ಸಾಮಾಜಿಕವೂ, ಮಾನವೀಯ ಮತ್ತು ಪರಹಿತಕಾರಿಯೂ ಇದೆ. ಸಾಮಾಜಿಕ ಉನ್ನತಿಯಾಗಬೇಕೆಂಬ ಒಂದು ವಾಸ್ತವ ಆದರ್ಶವಿದೆ. ಆ ಮನಸ್ಸಿನಮೇಲೆ ಪರಿಣಾಮ ಮಾಡುವ ಧ್ಯೇಯಗಳೇ ಯುಗಧರ್ಮ, ಪುರಾತನದ ದಾರ್ಶನಿಕದೃಷ್ಟಿ ಬಹುಮಟ್ಟಿಗೆ ಕಡಿಮೆಯಾಗಿದೆ. ಅವರ ಮಧ್ಯಯುಗದ ಅಂತಿಮ ಸತ್ಯದ ಅನ್ವೇಷಣೆ, ಭಕ್ತಿ ಮತ್ತು ಭಾವಪರವಶತೆಗಳು ಇಂದಿನ ಯುಗ ಧರ್ಮಕ್ಕೆ ಪ್ರಾಮುಖ್ಯವಲ್ಲ. ಮಾನವೀಯತೆಯೇ ಅದರ ದೇವರು, ಸಮಾಜಸೇವೆಯೇ ಅದರ ಧರ್ಮ. ಪ್ರತಿಯೊಂದು ಯುಗದಲ್ಲೂ ಆ ಯುಗದ ಸನ್ನಿವೇಶವೇ ಮನಸ್ಸಿಗೊಂದು ಮಿತಿಕಲ್ಪಿಸಿ, ತಾನು ಕಂಡ ಅರೆ ಸತ್ಯವೇ ಎಲ್ಲ ಸತ್ಯದ ಕೀಲಿಕೈ ಎಂದು ಭಾವಿಸುವುದರಿಂದ ಈ ಭಾವನೆ ತಪ್ಪಿರಬಹುದು. ಪ್ರತಿಯೊಂದು ಪೀಳಿಗೆಯೂ ಪ್ರತಿಯೊಂದು ಜನಾಂಗವೂ ತನ್ನ ದೃಷ್ಟಿಯೇ ಸರಿಯಾದ ದೃಷ್ಟಿ ಅಥವ ಅದಕ್ಕೆ ಸಮೀಪದ ದೃಷ್ಟಿ ಎಂಬ ಮೋಹಕ್ಕೆ ಕಟ್ಟುಬೀಳುತ್ತದೆ. ಸ್ವಕಲ್ಪಿತ ಮಿತಿ ಮತ್ತು ಸ್ಥಿತಿಗಳಿಗೆ ಒಳಗಾಗಿ ಪ್ರತಿಯೊಂದು ಸಂಸ್ಕೃತಿಯಲ್ಲೂ ಕೆಲವು ಶ್ರೇಷ್ಠಗುಣಗಳಿವೆ. ಆ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾದ ಜನರು ಅವನ್ನೇ ನಂಬಿ ಅವುಗಳಿಗೆ ಒಂದು ಶಾಶ್ವತ ಪ್ರಾಮಾಣ್ಯ ಕೊಡುತ್ತಾರೆ. ಆದ್ದರಿಂದ ಆಧುನಿಕ ಸಂಸ್ಕೃತಿಯ ಮೌಲ್ಯಗಳು ಶಾಶ್ವತವೂ ಅಲ್ಲ; ಕೊನೆಯಮಾತೂ ಅಲ್ಲ. ಆದರೂ ನಾವು ಜೀವಿಸುವ ಯುಗದ ಧರ್ಮ ಮತ್ತು ಭಾವನೆಗಳನ್ನು ಅವು ಪ್ರತಿಬಿಂಬಿಸುವುದರಿಂದ ನಮಗೆ ಅವುಗಳಲ್ಲಿ ಒಂದು ಮುಖ್ಯವೈಶಿಷ್ಟ್ಯ. ಭವಿಷ್ಯದ ನೋಟ ನೋಡಬಲ್ಲ ಕೆಲವು ಸಾಧಕರಿಗೆ ಮತ್ತು ಮಹಾಪುರುಷರಿಗೆ ಮಾನವಕುಲದ ಮತ್ತು ಪ್ರಪಂಚದ ಪೂರ್ಣತರ ನೋಟ ನೋಡಲು ಸಾಧ್ಯವಾಗಬಹುದು. ನಿಜವಾದ ಪ್ರಗತಿಗೆ ಉಗಮ ಮೂಲವಾದ ಜೀವ ಸತ್ವವು ಅವರಲ್ಲಿದೆ. ಜನತೆಯಲ್ಲಿ ಅಸಂಖ್ಯಾತರಿಗೆ ಯುಗಧರ್ಮದ ನವೌಲ್ಯಗಳ ಪರಿ ಜ್ಞಾನ ಸಹ ಇರುವುದಿಲ್ಲ; ಕಾಲಕ್ಕೆ ತಕ್ಕಂತೆ ಲೊಟಗುಟ್ಟಿದರೂ ಹಿಂದಿನ ಯುಗದ ಬಂಧನಗಳಲ್ಲೇ ಸೆರೆಸಿಕ್ಕಿದ್ದಾರೆ.

ಆದ್ದರಿಂದ ನಮ್ಮ ಜೀವಿತಕಾಲದ ಯುಗಧರ್ಮದ ಉನ್ನತ ಆದರ್ಶಗಳ ದಾರಿಯಲ್ಲಿ ನಾವು ನಡೆಯ

ಬೇಕು. ಅವುಗಳನ್ನು ಪುಷ್ಟೀಕರಿಸಬಹುದು, ಅಥವ ನಮ್ಮ ರಾಷ್ಟ್ರೀಯ ವೈಶಿಷ್ಟ್ಯಕ್ಕೆ ಅನುಗುಣವಾಗಿ ಬೇರೊಂದು ರೂಪದಲ್ಲಿ ಎರಕ ಹೊಯ್ಯಬಹುದು. ಈ ಧ್ಯೇಯಗಳನ್ನು ಎರಡು ಗುಂಪುಗಳಾಗಿ ವಿಂಗಡಿಸ ಬಹುದು. ಮಾನವತಾ ಪ್ರಾಧಾನ್ಯದೃಷ್ಟಿ ಮತ್ತು ವಿಜ್ಞಾನದೃಷ್ಟಿ. ಇವೆರಡಕ್ಕೂ ಒಂದು ಘರ್ಷಣೆ ಇರುವಂತೆ ತೋರುತ್ತದೆ. ಆದರೆ ಇಂದಿನ ಮಹಾಭಾವನಾಕ್ರಾಂತಿಯು ಎಲ್ಲ ಮೌಲ್ಯಗಳನ್ನೂ ವಿಮರ್ಶೆಯ ಕುಲುಮೆಯಲ್ಲಿ ಒರೆಹಚ್ಚಿ ಇವೆರಡರ ಮಧ್ಯೆ ಮತ್ತು ವಿಜ್ಞಾನದ ಬಾಹ್ಯಪ್ರಪಂಚ ಮತ್ತು ಆತ್ಮವೀಕ್ಷಣೆಯ ಅಂತರಂಗ ಪ್ರಪಂಚಕ್ಕೆ ಮಧ್ಯೆ ಅಡ್ಡಲಾಗಿದ್ದ ಗೋಡೆಗಳನ್ನೂ ಒಡೆದು ಹಾಕುತ್ತಿದೆ. ಮಾನವತಾ ಪ್ರಾಧಾನ್ಯದೃಷ್ಟಿಗೂ ವಿಜ್ಞಾನದೃಷ್ಟಿಗೂ ಒಂದು ಬಗೆಯ ಸಂಯೋಜನೆಯಾಗಿ ವೈಜ್ಞಾನಿಕ ಮಾನವತಾ ಪ್ರಾಧಾನ್ಯದೃಷ್ಟಿ ರೂಪುಗೊಳ್ಳುತ್ತಿದೆ. ವಿಜ್ಞಾನವು ಸಹ ವಾಸ್ತವತೆಯ ತಳಹದಿಗೆ ಭದ್ರವಾಗಿ ಅಂಟಿ ಕೊಂಡಿದ್ದರೂ ಇತರಕಡೆಗೂ ಅದರ ದೃಷ್ಟಿಬೀಳುತ್ತಿದೆ; ಉಳಿದುದನ್ನೆಲ್ಲ ಹಳಿಯುವ ಮನೋಭಾವ ಹೋಗುತ್ತಿದೆ. ನಮ್ಮ ಪಂಚೇಂದ್ರಿಯಗಳಿಗೆ ಗೋಚರವಾಗುವ ಪ್ರಪಂಚ ಮಾತ್ರ ವಿಶ್ವವಲ್ಲ ಎಂಬ ಅರಿವು ಬಂದಿದೆ. ಕಳೆದ ಇಪ್ಪತ್ತೈದು ವರ್ಷಗಳ ಭೌತಶಾಸ್ತ್ರಜ್ಞಾನ ಪ್ರಪಂಚದ ಕಲ್ಪನೆಯಲ್ಲಿ ಅದ್ಭುತ ಬದಲಾವಣೆ ಗಳಾಗಿವೆ. ಮನುಷ್ಯನಿಗೂ ಪ್ರಕೃತಿಗೂ ಯಾವ ಸಂಬಂಧವೂ ಇಲ್ಲವೆಂದೇ ವಿಜ್ಞಾನದ ದೃಷ್ಟಿಯಾಗಿತ್ತು. "ಪ್ರಕೃತಿಯು ತನಗಿಂತ ಒಂದು ಭಿನ್ನವಸ್ತು ಎಂದು ಇನ್ನು ಮುಂದೆ ನೋಡುವಂತೆ ಇಲ್ಲ" ಎಂಬುದೇ ವಿಜ್ಞಾನದ ತಿರುಳು ಎಂದು ಈಗ ಸರ್‌ಜೇಮ್ಸ್ ಜೀನ್ಸ್ ಹೇಳುತ್ತಿದ್ದಾನೆ. ಪುನಃ, ಉಪನಿಷತ್ಕಾರರ ಮನಸ್ಸನ್ನು ಕೆಣಕಿದ ಅದೇ ಹಳೆಯ ಪ್ರಶ್ನೆ: ಜ್ಞಾತೃವನ್ನು ಅರಿಯುವುದೆಂತು ? ಬಾಹ್ಯ ವಸ್ತುಗಳನ್ನು ನೋಡುವ ಕಣ್ಣುಗಳು ತಮ್ಮನ್ನೇ ತಾವು ಅರಿಯುವುದೆಂತು ? ಬಾಹ್ಯಪ್ರಪಂಚವೂ ನಮ್ಮ ಅಂತರಂಗ ಪ್ರಪಂಚವೂ ಒಂದೇ ಆದರೆ ನಾವು ಹೊರಗೆ ಕಾಣುವುದು, ಭಾವಿಸುವುದು ನಮ್ಮ ಮನಸ್ಸಿನ ಪ್ರಲಂಬನ ಮಾತ್ರ; ವಿಶ್ವ, ಪ್ರಕೃತಿ, ಆತ್ಮ, ಮನಸ್ಸು, ದೇಹ ಮತ್ತು ಉಪಲಬ್ಧ ಮತ್ತು ಅಂತರ್ವರ್ತಿ ವಿಷಯಗಳು ಎಲ್ಲವೂ ಮೂಲತಃ ಒಂದೇ ಆದ್ದರಿಂದ ನಮ್ಮ ಮನಸ್ಸಿನ ಮಿತಿಯಿಂದ ವಿಶ್ವದ ಈ ಮಹಾವ್ಯೂಹದ ವಾಸ್ತವಿಕ ಅರ್ಥ ಅರಿಯುವುದು ಹೇಗೆ ? ವಿಜ್ಞಾನವು ಈಗ ಈ ವಿಷಯಗಳ ಹೊರವಲಯದಲ್ಲಿದೆ, ಕೈಗೆ ಎಟಕದಿದ್ದರೂ ಇಂದಿನ ನಿಜವಾದ ವಿಜ್ಞಾನಿ ಯುಗಾಂತರದ ದಾರ್ಶನಿಕ ಮತ್ತು ಧರ್ಮಪ್ರವರ್ತಕ ಋಷಿಯಂತೆ, "ನಮ್ಮ ಇಂದಿನ ಪ್ರಾಪಂಚಿಕ ಯುಗದಲ್ಲಿ ನಿಷ್ಠವಿಜ್ಞಾನ ಸಂಶೋಧಕರೆಂದರೆ ಪರಮ ಧಾರ್ಮಿಕ ಮನೋಭಾವದವರು" ಎಂದು ಪ್ರೊಫೆಸರ್ ಆಲ್ಬರ್ಟ್ ಐನ್‌ಸ್ಟೀನ್ ಹೇಳಿದ್ದಾನೆ. ಐವತ್ತು ವರ್ಷಗಳ ಹಿಂದೆ ಸ್ವಾಮಿ ವಿವೇಕಾನಂದ ಸಹ "ಆಧುನಿಕ ವಿಜ್ಞಾನವು ನಿಜವಾದ ಧಾರ್ಮಿಕ ಮನೋ ಭಾವದ ಪ್ರತಿಸ್ವರೂಪ, ಏಕೆಂದರೆ ಪ್ರಾಮಾಣಿಕ ಪ್ರಯತ್ನದಿಂದ ಸತ್ಯವನ್ನರಿಯಲು ಪ್ರಯತ್ನಪಡುತ್ತಿದೆ" ಎಂದರು.

ಇದರಲ್ಲೆಲ್ಲ ವಿಜ್ಞಾನದಲ್ಲಿ ಒಂದು ದೃಢವಾದ ನಂಬಿಕೆ ಇರುವಂತಿದೆ; ಆದರೂ ಕೇವಲ ಧ್ಯೇಯ ರಹಿತ ವಾಸ್ತವಿಕ ವಿಜ್ಞಾನ ಸಾಲದು ಎಂಬ ಜ್ಞಾನವೂ ಇದೆ. ಜೀವನ ಸೌಖ್ಯಕ್ಕೆ ಅಷ್ಟು ಉಪಕರಣ ಒದಗಿಸಿಕೊಟ್ಟ ವಿಜ್ಞಾನ ಜೀವನದಮೂಲ ಉದ್ದೇಶ ಅಲಕ್ಷ್ಯಮಾಡಿತೇನು ? ವಾಸ್ತವಿಕ ಪ್ರಪಂಚಕ್ಕೂ ತಾತ್ವಿಕ ಪ್ರಪಂಚಕ್ಕೂ ಒಂದು ಸಾಮರಸ್ಯ ಕಲ್ಪಿಸುವ ಪ್ರಯತ್ನವಿದೆ. ಏಕೆಂದರೆ ವಾಸ್ತವಿಕ ಪ್ರಪಂಚ ಮಾನವನ ಆತ್ಮವನ್ನೇ ಹಿಸುಕುತ್ತಿದೆ ಎಂಬ ಅರಿವು ಹೆಚ್ಚುತ್ತಿದೆ. ಸನಾತನ ದಾರ್ಶನಿಕರ ಮನಸ್ಸನ್ನು ಸೆಳೆದ ಈ ಪ್ರಶ್ನೆ ಪುನಃ ಬೇರೊಂದು ರೂಪದಲ್ಲಿ ಬೇರೊಂದು ಸನ್ನಿವೇಶದಲ್ಲಿ ಉದ್ಭವಿಸಿದೆ. ಪ್ರಪಂಚದ ಈ ಅದ್ಭುತ ಜೀವನವನ್ನು ವ್ಯಕ್ತಿಯ ಅಂತರಾತ್ಮೀಯ ಜೀವನದೊಂದಿಗೆ ಸರಿಹೊಂದಿಸುವುದೆಂತು ಎಂಬುದೇ ಮುಖ್ಯಪ್ರಶ್ನೆ. ವ್ಯಕ್ತಿಯ ದೇಹಕ್ಕೆ ಅಥವ ಇಡೀ ಸಮಾಜಕ್ಕೆ ಚಿಕಿತ್ಸೆ ಮಾಡಿದರೆ ಮಾತ್ರ ಸಾಲದೆಂದು ವೈದ್ಯ ಪ್ರವೀಣರು ಕಂಡುಕೊಂಡಿದಾರೆ. ಆಧುನಿಕ ಮನೋನಿದಾನ ಅರಿತ ವೈದ್ಯರನೇಕರು ಈಚೆಗೆ ಶಾರೀರಿಕ ವ್ಯಾಧಿಗಳಿಗೂ, ಕ್ರಿಯಾವ್ಯಾಧಿಗಳಿಗೂ ಮಾಡುತ್ತಿದ್ದ ವ್ಯತ್ಯಾಸ ಮರೆತು ಈಗ ಮಾನಸಿಕ ಕಾರಣಗಳಿಗೇ ಪ್ರಾಮುಖ್ಯತೆ ಕೊಡುತ್ತಿದ್ದಾರೆ. "ರೋಗಚಿಕಿತ್ಸೆಗೆ ಇರುವ ದೊಡ್ಡ ನ್ಯೂನತೆ ಶರೀರ ರೋಗಗಳಿಗೆ, ಆತ್ಮ ರೋಗಗಳಿಗೆ ಬೇರೆ ಬೇರೆ ವೈದ್ಯರಿರುವುದು; ಆದರೆ ಎರಡೂ ಒಂದೇ, ಒಂದನ್ನು

ಇನ್ನೊಂದರಿಂದ ಪ್ರತ್ಯೇಕಿಸಲು ಸಾಧ್ಯವಿಲ್ಲ ಎಂದು ಇಬ್ಬರೂ ಮರೆಯುತ್ತಾರೆ'' ಎಂದು ಪ್ಲೇಟೋ ಹೇಳಿದ್ದಾನೆ.

ಪ್ರಸಿದ್ಧ ವಿಜ್ಞಾನಿಗಳಲ್ಲಿ ಅತ್ಯಂತ ಶ್ರೇಷ್ಠನಾದ ಐನ್‌ಸ್ಟೀನ್ "ಇಂದು ಮಾನವ ಕುಟುಂಬದ ಅದೃಷ್ಟ ನೈತಿಕ ಬಲವನ್ನು ಅವಲಂಬಿಸಬೇಕಾದಷ್ಟು ಅವಶ್ಯಕತೆ ಹಿಂದೆ ಯಾವಾಗಲೂ ಇರಲಿಲ್ಲ. ಮಾನವ ಜೀವನದಲ್ಲಿ ಆನಂದ ಮತ್ತು ಸುಖಬೇಕಾದರೆ ಎಲ್ಲ ಕಡೆಯೂ ತ್ಯಾಗ ಮತ್ತು ಆತ್ಮಸಂಯಮ ಮನೋಭಾವ ಬರಬೇಕು'' ಎಂದಿದ್ದಾನೆ. ಗರ್ವದಿಂದ ಮೆರೆಯುವ ಈ ವಿಜ್ಞಾನ ಯುಗದಿಂದ ಏಕಾ ಏಕಿ ಪೂರ್ವದ ಋಷಿಗಳ ಬಳಿಗೆ ಕರೆದೊಯ್ಯುತ್ತಾನೆ; ಅಧಿಕಾರಮೋಹ ಮತ್ತು ಲಾಭದಾಸೆಯ ಬೆನ್ನು ಬಿಟ್ಟು ಭಾರತಕ್ಕೆ ಚಿರಪರಿಚಯವಿದ್ದ ತ್ಯಾಗದೃಷ್ಟಿಯ ಕಡೆ ಕರೆದೊಯ್ಯುತ್ತಾನೆ. "ಪ್ರಪಂಚದ ಅತುಲೈಶ್ವರ್ಯವೆಲ್ಲ ಮಾನವ ಪ್ರಗತಿಗೆ ಕಾರಣವಾಗಲಾರದು; ಪರಮ ಶ್ರದ್ಧಾಳುಗಳಿಂದ ಸಹ ಅದು ಸಾಧ್ಯವಿಲ್ಲ. ಮಹಾನುಭಾವರೂ ನಿರ್ಮಲ ಚಾರಿತ್ರರೂ ಆದ ಸತ್ಪುರುಷರ ಆದರ್ಶಮಾತ್ರ ಉನ್ನತ ಧ್ಯೇಯಗಳನ್ನು ಮಹಾಕಾರ್ಯಗಳನ್ನು ಸಾಧಿಸಬಹುದು. ಹಣ ಬೆಳೆಸುವುದು ಸ್ವಾರ್ಥದೃಷ್ಟಿ ಮಾತ್ರ. ಹಣವಿದ್ದವರನ್ನು ಸದಾ ದುರ್ಮಾರ್ಗಕ್ಕೆಳೆಯುವುದೇ ಹಣದ ಕೆಲಸ'' ಎಂಬ ಐನ್‌ಸ್ಟೀನನ ಮಾತುಗಳು ಇಂದಿನ ಅನೇಕ ವಿಜ್ಞಾನಿಗಳಿಗೆ ಪ್ರಾಯಶಃ ಒಪ್ಪಿಗೆಯಾಗಲಾರದು.

ನಾಗರಿಕತೆಯಷ್ಟೆ ಹಳೆಯದಾದ ಈ ಪ್ರಶ್ನೆ ಬಿಡಿಸುವುದರಲ್ಲಿ ಹಿಂದಿನ ದಾರ್ಶನಿಕರಿಗೆ ದೊರೆಯದ ಅನೇಕ ಸೌಲಭ್ಯ ಸಲಕರಣೆಗಳು ಇಂದಿನ ವಿಜ್ಞಾನಿಗಳಿಗೆ ದೊರೆತಿದೆ; ಅನಾದಿಯಿಂದ ಸಂಗ್ರಹಿಸಿಟ್ಟ ಅಪಾರ ಜ್ಞಾನಭಾಂಡಾರವಿದೆ. ತನ್ನ ಸಾರ್ಥಕತೆ ಸಾಧಿಸಿಕೊಟ್ಟ ಒಂದು ಮಾರ್ಗವಿದೆ. ಪ್ರಾಚೀನರಿಗೆ ಅಗೋಚರವಾಗಿದ್ದ ಅನೇಕ ಕ್ಷೇತ್ರ ಪ್ರವೇಶಮಾಡಿ ನಿರ್ದಿಷ್ಟ ಮಾರ್ಗ ತೋರಿಸಿದೆ. ಮನುಷ್ಯನ ಜ್ಞಾನ ವೃದ್ಧಿಗೊಳಿಸಿ ಅನೇಕ ವಿಷಯಗಳ ಮೇಲೆ ಅವನ ಅಧಿಕಾರ ಹೆಚ್ಚಿಸಿರುವುದರಿಂದ ಮಠಾಧಿಕಾರಿಗಳು ಗಾಢರಹಸ್ಯಗಳೆಂದು ಅವುಗಳನ್ನು ದುರುಪಯೋಗಪಡಿಸುವಂತಿಲ್ಲ. ಆದರೆ ಅದರಲ್ಲಿ ಕೆಲವು ತೊಂದರೆಗಳೂ ಇವೆ. ಈ ಜ್ಞಾನ ಸಂಪತ್ತಿನ ಹೊರೆಯೇ ಮನುಷ್ಯನನ್ನು ದುರ್ಬಲಗೊಳಿಸಿ ಅದರ ಪೂರ್ಣತೆಯ ಸಂಯೋಜಕದೃಷ್ಟಿ ಪಡೆಯದಂತೆ ಅಂಧನನ್ನಾಗಿ ಮಾಡಿದೆ. ಯಾವುದೋ ಒಂದು ಭಾಗ ವಿಶ್ಲೇಷಣ ಮಾಡಿ, ಅಭ್ಯಾಸದಲ್ಲೇಮಗ್ನನಾಗಿ, ಆ ಒಂದು ಭಾಗ ಮಾತ್ರ ಅರ್ಥಮಾಡಿಕೊಂಡು ಅದಕ್ಕೂ ಪೂರ್ಣಜ್ಞಾನಕ್ಕೂ ಇರುವ ಸಂಬಂಧ ಕಾಣದೆ ಹೋಗುತ್ತಾನೆ. ವಿಜ್ಞಾನ ತನ್ನ ಕೈಗೆಕೊಟ್ಟ ಶಕ್ತಿಗಳಿಗೆ ತಾನೇ ಬಲಿಯಾಗಿ ಅವುಗಳ ಸುಳಿಗೆ ಸಿಕ್ಕು ಎಳೆದತ್ತ ತೇಲಿ ಯಾವುದೋ ಕಾಣದ ದಡ ಸೇರುತ್ತಾನೆ. ಆಧುನಿಕ ಜೀವನದ ವೇಗ, ದುರ್ಘಟನೆಯ ಮೇಲೆ ದುರ್ಘಟನೆ ಇವುಗಳ ದೆಸೆಯಿಂದ ನಿಷ್ಪಕ್ಷಪಾತ ಸತ್ಯಾನ್ವೇಷಣೆ ನಡೆಯುವಂತಿಲ್ಲ. ನಿಜವಾದ ಜ್ಞಾನಾನ್ವೇಷಣೆ, ಅತ್ಯಾವಶ್ಯಕ ಶಾಂತಿ ಮತ್ತು ನಿರ್ಲಿಪ್ತ ಭಾವನೆ ದೊರೆಯದಂತೆ ಆವಸರದಲ್ಲಿ ಬುದ್ಧಿ ಓಡಿಸಲಾಗುತ್ತಿದೆ. "ಜ್ಞಾನಮಾರ್ಗ ಶಾಂತಿಯುಕ್ತವಿದೆ. ಆದರ ಕಾವು ಕಂಪಿಸುವುದಿಲ್ಲ.''

ನಾವು ಜೀವಿಸುವುದು ಪ್ರಾಯಶಃ ಮಾನವ ಕುಲದ ಒಂದು ಮಹಾಯುಗ. ಅದಕ್ಕೆ ಅವಶ್ಯವಾದ ಬೆಲೆ ನಾವು ತರಲೇಬೇಕು. ಎಲ್ಲ ಯುಗಾಂತರಗಳಲ್ಲಿ ಜೀರ್ಣವಾದುದು ಬಿಟ್ಟು ಹೊಸದು ಸೃಷ್ಟಿಸುವ ಪ್ರಯತ್ನ ನಡೆದಿದೆ. ಆ ಪ್ರಯತ್ನದಲ್ಲಿ ಘರ್ಷಣೆ, ಅಸ್ಥಿರತೆ ಕಂಡು ಬರುವುದು ಸಹಜ. ಜೀವನದಲ್ಲಿ ಯಾವುದೂ ಶಾಶ್ವತವಲ್ಲ, ಸ್ಥಿರವಲ್ಲ, ಅಪರಿವರ್ತಿತವಲ್ಲ; ಪರಿವರ್ತನೆ ಇಲ್ಲದೆ ಜೀವನವೇ ಶೂನ್ಯವಾಗುತ್ತದೆ. ಹೆಚ್ಚೆಂದರೆ ಸಾಪೇಕ್ಷ ನಿತ್ಯತೆ ಕಾಣಬಹುದು, ಚಲನಾತ್ಮಕ ಸಮತೋಲನೆ ನೋಡಬಹುದು. ಜೀವನವು ಮಾನವ ಮಾನವನಿಗೂ ಮಾನವನ ಸನ್ನಿವೇಶಗಳಿಗೂ ನೈಸರ್ಗಿಕ, ಬೌದ್ಧಿಕ ಮತ್ತು ನೈತಿಕ ಮಟ್ಟದಲ್ಲಿ ನಿರಂತರ ನಡೆಯುವ ಒಂದು ಹೋರಾಟ. ಈ ಮಂಥನದಿಂದ ನೂತನ ವಸ್ತುಗಳೂ, ಭಾವನೆಗಳೂ ರೂಪುಗೊಳ್ಳುತ್ತಿವೆ. ಮಾನವನಲ್ಲಿ, ಪ್ರಕೃತಿಯಲ್ಲಿ ಜನನ ಮರಣ ಒಂದರ ಹಿಂದೆ ಒಂದು. ಪ್ರಗತಿಯೇ ಜೀವನತತ್ವ, ನಿಶ್ಚಲತೆಯಲ್ಲ, ಪ್ರಗತಿ ಒಂದು ನಿರರ್ಗಳ ಅನಂತವಾಹಿನಿ.

ಇಂದಿನ ಪ್ರಪಂಚದ ರಾಜಕೀಯ ಮತ್ತು ಆರ್ಥಿಕ ಸಮಸ್ಯೆಗಳಲ್ಲಿ ಅಧಿಕಾರದಾಸೆ ಇದ್ದೇ ಇದೆ.

ಆದರೆ ಆ ಅಧಿಕಾರ ದೊರಕಿದ ಒಡನೆ ಅನೇಕ ಅಮೂಲ್ಯಗುಣಗಳೂ ಮಾಯವಾಗುತ್ತವೆ. ಉನ್ನತ ಧ್ಯೇಯಗಳ ಸ್ಥಾನದಲ್ಲಿ ರಾಜಕೀಯ ಮೋಸ ಮತ್ತು ಕಪಟಸಂಧಾನ, ನಿಷ್ಕಾಮ ಧೈರ್ಯದ ಬದಲು ಹೇಡಿತನ ಮತ್ತು ಸ್ವಾರ್ಥ ತಾಂಡವಾಡುತ್ತವೆ. ತಿರುಳು ಬಿಟ್ಟು ಕರಟಕ್ಕೆ ಪ್ರಾಮುಖ್ಯತೆ ದೊರೆಯುತ್ತದೆ. ಅಷ್ಟು ಶ್ರದ್ಧೆಯಿಂದ ಸಂಪಾದಿಸಿದ ಅಧಿಕಾರಕ್ಕೆ ತನ್ನ ಉದ್ದೇಶ ಸಾಧಿಸಲು ಅಸಮರ್ಥವಾಗುತ್ತದೆ. ಅಧಿಕಾರಕ್ಕೂ ಒಂದು ಮಿತಿ ಇದೆ; ತನ್ನ ಮೇಲೆ ತಾನೇ ಶಕ್ತಿಯು ಹಿಂದೊದೆಯುತ್ತದೆ. ಅಧಿಕಾರ ಶಕ್ತಿಗಳೆರಡೂ ಆತ್ಮನಾಶ ಮಾಡಲು ಸಾಧ್ಯವಿಲ್ಲ. ಅದಕ್ಕೆ ಪ್ರತಿಯಾಗಿ ಆತ್ಮಶಕ್ತಿ ಇನ್ನೂ ಬಲಗೊಂಡು ವಜ್ರದೇಹಿಯಾಗುತ್ತದೆ. "ಸೈನ್ಯದ ಮಹಾ ಸೇನಾನಾಯಕನನ್ನು ಸೆರೆ ಹಿಡಿಯಬಹುದು; ಆದರೆ ಒಬ್ಬ ಕನಿಷ್ಠ ಸೈನಿಕನ ಮನಸ್ಥೈರ್ಯ ಮಾತ್ರ ಸೆರೆಹಿಡಿಯಲು ಸಾಧ್ಯವಿಲ್ಲ" ಎಂದು ಕನ್‌ಫೂಷಿಯಸ್ ಹೇಳಿದ್ದಾನೆ.

ಜಾನ್ ಸ್ಟುಅರ್ಟ್ ಮಿಲ್ ತನ್ನ ಆತ್ಮಕಥೆಯಲ್ಲಿ "ಎಲ್ಲಿಯವರೆಗ ಮಾನವನ ಭಾವನಾ ರೀತಿಗಳ ಮೂಲರಚನೆಯಲ್ಲಿ ಮಹತ್ತರ ಪರಿವರ್ತನೆಯಾಗುವುದಿಲ್ಲವೊ ಅಲ್ಲಿಯವರೆಗೆ ಮಾನವನ ಸ್ಥಿತಿಗತಿಗಳಲ್ಲಿ ಯಾವ ವಿಶೇಷ ಅಭಿವೃದ್ಧಿಯೂ ಸಾಧ್ಯವಿಲ್ಲವೆಂದು ಈಗ ಮನಗಂಡಿದ್ದೇನೆ." ಎಂದು ಹೇಳಿದ್ದಾನೆ. ಆದರೆ ಭಾವನಾರೀತಿಗಳಲ್ಲಿ ಆ ಮೂಲ ಪರಿವರ್ತನೆ ಬರುವುದೇ ಸನ್ನಿವೇಶ ವ್ಯತ್ಯಾಸಗಳಿಂದ ಮತ್ತು ಜೀವನದ ಅನಂತ ಹೋರಾಟದ ಹಿಂದಿನ ನೋವು ಮತ್ತು ಸಂಕಟದಿಂದ. ಆದ್ದರಿಂದ ಭಾವನಾರೀತಿ ಪರಿವರ್ತನೆಯ ಪ್ರತ್ಯಕ್ಷ ಪ್ರಯತ್ನದ ಜೊತೆಗೆ ಯಾವ ಸನ್ನಿವೇಶದಲ್ಲಿ ಬೆಳೆದು ಪುಷ್ಟಿ ಪಡೆಯುತ್ತವೆಯೋ ಆ ಸನ್ನಿವೇಶದ ಪರಿವರ್ತನೆಗೂ ಪ್ರಯತ್ನ ಮಾಡುವುದು ಅತ್ಯವಶ್ಯಕ. ಒಂದಕ್ಕೊಂದು ಅವಲಂಬಿತ ಮತ್ತು ಒಂದರ ಮೇಲೊಂದು ಪ್ರಭಾವ ಬೀರುತ್ತವೆ. ಮಾನವನ ಮನಸ್ಸು ಅನಂತ ಮುಖಗಳಲ್ಲಿ ಓಡುತ್ತದೆ. ಪ್ರತಿಯೊಬ್ಬ ವ್ಯಕ್ತಿಯೂ ತನ್ನ ದೃಷ್ಟಿಯಲ್ಲೇ ಸತ್ಯ ಕಂಡು, ಇನ್ನೊಂದು ವ್ಯಕ್ತಿಯ ಅಭಿಪ್ರಾಯ ಒಪ್ಪುವುದಿಲ್ಲ. ಘರ್ಷಣೆ ಎಲ್ಲ ಈ ಅಭಿಪ್ರಾಯ ಭೇದದಿಂದ. ಈ ಘರ್ಷಣೆಯಿಂದಲೇ ಸತ್ಯಕ್ಕೆ ಹೆಚ್ಚು ಪೂರ್ಣತೆ ದೊರೆಯುವುದು. ಏಕೆಂದರೆ ಸತ್ಯ ಬಹುಮುಖವಾದುದು; ಯಾರೊಬ್ಬರ ವಿಶಿಷ್ಟ ಸ್ವತ್ತಲ್ಲ ಎಂಬುದನ್ನು ಜ್ಞಾಪಕದಲ್ಲಿಟ್ಟರ ಬೇಕು. ಕಾರ್ಯಾಚರಣೆಯ ಮಾರ್ಗವೂ ಅಷ್ಟೇ. ಭಿನ್ನ ಭಿನ್ನ ಜನರಿಗೆ ಭಿನ್ನ ಭಿನ್ನ ಸನ್ನಿವೇಶಗಳಲ್ಲಿ ಭಿನ್ನ ಭಿನ್ನ ಮಾರ್ಗ ತೋರಬಹುದು. ಭಾರತ, ಚೀಣ ಮತ್ತು ಇತರ ರಾಷ್ಟ್ರಗಳು ತಮ್ಮದೇ ಜೀವನ ರೀತಿಯ ವೈಶಿಷ್ಟ್ಯ ಬೆಳೆಸಿಕೊಂಡು ಬಂದು ಅದಕ್ಕೊಂದು ಭದ್ರವಾದ ತಳಹದಿ ಕೊಟ್ಟರು. ತಮ್ಮ ಮಾರ್ಗ ಬಿಟ್ಟು ಬೇರೆ ಮಾರ್ಗ ಇಲ್ಲವೆಂದು ಭಾವಿಸಿದರು. ಈಗಲೂ ಅವರಲ್ಲಿ ಅನೇಕರ ಭಾವನೆ ಅದೇ ರೀತಿ ಇದೆ. ಇಂದು ಯೂರೋಪ್ ಮತ್ತು ಅಮೆರಿಕ ಜನ ಪ್ರಪಂಚದ ಬಹು ಭಾಗ ಆಕ್ರಮಿಸಿರುವ ಒಂದು ವಿಶಿಷ್ಟ ಜೀವನ ರೀತಿ ನಿರ್ಮಿಸಿಕೊಂಡಿದ್ದಾರೆ. ತಮಗೆ ಬೇರೆ ಮಾರ್ಗ ಇಲ್ಲವೇ ಇಲ್ಲವೆಂದು ಆ ಜನರ ಭಾವನೆ. ಪ್ರಾಯಶಃ ಈ ಎರಡರಲ್ಲಿ ಯಾವುದನ್ನೂ ಇದು ಒಂದೇ ಮಾರ್ಗವೆಂದು ಹೇಳಲು ಸಾಧ್ಯವಿಲ್ಲ. ಎರಡೂ, ಒಂದರಿಂದ ಇನ್ನೊಂದು ಸ್ವಲ್ಪ ಕಲಿಯುವುದು ಅವಶ್ಯವೆಂದು ತೋರುತ್ತದೆ. ಆದರೆ ಚೀನಾ ಮತ್ತು ಭಾರತದಲ್ಲಿ ಜೀವನ ನಿಶ್ಚೇತನವಾಗಿ ಸ್ಥಗಿತವಾದುದರಿಂದಲೂ ಪಾಶ್ಚಾತ್ಯವು ಯುಗಧರ್ಮ ಪ್ರತಿಬಿಂಬಿಸುವುದು ಮಾತ್ರವಲ್ಲದೆ, ಕಾರ್ಯಶೀಲವೂ, ಸದಾ ಪರಿವರ್ತಿತವೂ ಇರುವುದರಿಂದಲೂ ಮತ್ತು ಆಗಾಗ ಆತ್ಮ ವಿನಾಶ ಮತ್ತು ಮಾನವ ಕೊಲೆ ಆದರೂ ಮೂಲತಃ ಅದು ಪ್ರಗತಿಪರವಿರುವುದರಿಂದಲೂ ಭಾರತ ಮತ್ತು ಚೀನಾ ಪಾಶ್ಚಾತ್ಯರಿಂದ ಹೆಚ್ಚು ಕಲಿಯಬೇಕಾಗಿದೆ.

ಭಾರತದಲ್ಲಿ ಮತ್ತು ಪ್ರಾಯಶಃ ಇತರ ದೇಶಗಳಲ್ಲಿ ಆತ್ಮಪ್ರಶಂಸೆ ಮತ್ತು ಆತ್ಮನಿಂದೆಯ ಕಾಲ ಒಂದರ ಮೇಲೊಂದು ತೆರೆತೆರೆಯಾಗಿ ಬಂದಿವೆ. ಎರಡೂ ಅನಿಷ್ಟ ಮತ್ತು ಅಯೋಗ್ಯ. ಭಾವೋದ್ರೇಕ ಮತ್ತು ಭಾವಪರವಶತೆಯಿಂದ ಜೀವನ ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ; ಆದರೆ ಧೈರ್ಯದಿಂದ ಮುಚ್ಚು ಮರೆ ಇಲ್ಲದೆ ವಾಸ್ತವ ಪ್ರಪಂಚ ಎದುರಿಸುವುದರಿಂದ ಮಾತ್ರ ಸಾಧ್ಯ. ಜೀವನ ಸಮಸ್ಯೆಗಳಿಗೆ ಸಂಬಂಧವಿಲ್ಲದ ಗೊತ್ತು ಗುರಿ ಇಲ್ಲದ ಭಾವಾವೇಶದ ಅನ್ವೇಷಣೆಯಲ್ಲಿ ಮಗ್ನರಾಗಿ ವ್ಯರ್ಥಕಾಲ ಕಳೆಯಲು ಆಗುವುದಿಲ್ಲ. ಏಕೆಂದರೆ ಕಾಲಚಕ್ರ ಸಮನಾಗಿ ಕಾಯದೆ ಉರುಳುತ್ತಲೇ ಇದೆ. ಮಾನವನ ಅಂತರಂಗ

ಜೀವನದ ಮಹತ್ವ ಮರೆತು ಬಾಹ್ಯಾಡಂಬರದಲ್ಲೇ ಮಗ್ನರಾಗುವುದೂ ಒಳ್ಳೆಯದಲ್ಲ. ಎರಡಕ್ಕೂ ಒಂದು ಸಮತೋಲನವಿರಬೇಕು. ಎರಡಕ್ಕೂ ಒಂದು ಸಾಮರಸ್ಯ ಕಲ್ಪಿಸಲು ಯತ್ನಮಾಡಬೇಕು. "ಪ್ರಕೃತಿ ಮನಸ್ಸುಗಳ ಐಕ್ಯತೆಯ ಜ್ಞಾನವಿದ್ದರೆ ಅದಕ್ಕಿಂತ ಹೆಚ್ಚು ಶ್ರೇಯಸ್ಕರವಾದುದು ಬೇರೆ ಇಲ್ಲ. ಮನಸ್ಸಿನ ಜ್ಞಾನ ಹೆಚ್ಚಿದಂತೆ ತನ್ನ ಶಕ್ತಿಯ ಅರಿವೂ, ಪ್ರಕೃತಿ ನಿಯಮದ ಅರಿವೂ ಹೆಚ್ಚುತ್ತದೆ. ತನ್ನ ಶಕ್ತಿ ಅಥವ ಬಲದ ಅರಿವು ಹೆಚ್ಚಿದಂತೆ ತನ್ನ ದಾರಿ ತಾನು ಕಂಡುಕೊಂಡು ತನ್ನ ನಿಯಮ ತಾನೇ ರಚಿಸಿ ಕೊಳ್ಳಲು ಅನುಕೂಲವಾಗುತ್ತದೆ. ಪ್ರಕೃತಿ ನಿಯಮದ ಅರಿವು ಹೆಚ್ಚಿದಂತೆ ನಿಷ್ಪ್ರಯೋಜಕ ವಸ್ತುಗಳ ಮೋಹ ತ್ಯಜಿಸುವುದೂ ಸುಲಭವಾಗುತ್ತದೆ; ಇದೇ ಪೂರ್ಣಮಾರ್ಗ" ಎಂದು ಹದಿನೇಳನೆಯ ಶತಮಾನದ ಸ್ಪಿನೋಜ ಹೇಳಿದ್ದಾನೆ.

ನಮ್ಮ ವ್ಯಕ್ತಿಜೀವನಗಳಲ್ಲಿ ಸಹ ದೇಹಕ್ಕೂ ಆತ್ಮಕ್ಕೂ, ಪ್ರಕೃತಿಯ ಅಂಗವಾದ ಮನುಷ್ಯನಿಗೂ ಸಮಾಜದ ಅಂಗವಾದ ಮನುಷ್ಯನಿಗೂ ಒಂದು ಸಮತೂಕ ಕಂಡುಕೊಳ್ಳಬೇಕು. "ನಾವು ಪೂರ್ಣತೆ ಪಡೆಯಬೇಕಾದರೆ ಸಿಂಹದ ದೇಹಶಕ್ತಿ ಇರಬೇಕು- ಆದರೆ ಮನಸ್ಸು ಸುಸಂಸ್ಕೃತವಿರಬೇಕು; ಪ್ರಕೃತಿಯೊಂದಿಗೆ ನೈಸರ್ಗಿಕ ಜೀವನ ನಡೆಸುವ ಮಾನವ ಸಮಾಜದಲ್ಲಿ ಮಾನವೀಯತೆ ವ್ಯಕ್ತಪಡಿಸುವ ಯೋಗ್ಯತೆ ಇರಬೇಕು" ಎಂದು ರವೀಂದ್ರನಾಥ ಠಾಕೂರರು ಹೇಳಿದ್ದಾರೆ. ಪೂರ್ಣತೆ ಒಂದು ಅಂತಿಮ ಗುರಿ; ಆದ್ದರಿಂದ ಅದು ನಮಗೆ ಎಟುಕದ ವಸ್ತು, ನಮ್ಮ ಪಯಣ ಮಾತ್ರ ಸದಾ ಅದೇ ಕಡೆಗೆ ಇರಲಿ; ದಾರಿ ನಡೆದಷ್ಟೂ ಅದು ಹಿಂದೆ ಹೋಗುತ್ತದೆ. ನಮ್ಮಲ್ಲಿ ಪ್ರತಿಯೊಬ್ಬರಲ್ಲೂ ಪರಸ್ಪರ ಸರಿಬೀಳದ, ವಿರೋಧ ಪ್ರಕೃತಿಯ ಒಂದೊಂದೂ ಒಂದೊಂದು ದಾರಿಗೆಳೆಯುವ ಅನೇಕ ವ್ಯಕ್ತಿಗಳು ಕೆಲಸ ಮಾಡುತ್ತಿವೆ. ಜೀವನ ಪ್ರೇಮವಿದೆ, ಜೀವನ ನಿರಸನವಿದೆ, ಜೀವನಕಾರ್ಯ ಪುರಸ್ಕಾರವಿದೆ, ಅದರ ಬಹುಭಾಗದ ತಿರಸ್ಕಾರವಿದೆ. ಈ ವಿರೋಧ ಪ್ರಕೃತಿಗಳಲ್ಲಿ ಸಮರಸತೆ ಕಲ್ಪಿಸುವುದು ಬಹುಕಷ್ಟ. ಒಂದು ಬಾರಿ ಒಂದು ಇನ್ನೊಂದು ಬಾರಿ ಇನ್ನೊಂದು ಯಾಜಮಾನ್ಯ ನಡೆಸುತ್ತವೆ. ಅನೇಕ ವೇಳೆ

"ಬಾಳೊಂದು ಹಿರಿಯೊಗಟೆ
ಅರಿಯೆ ತುಸು ರಾಗ ಬಿಡು,
ಬಾಳು ತುಸು ರಾಗದಿಂ
ಲೀಲೆ ಜಾಲವ ನೋಡೆ"

ಎಂದು ಲಾ ಓಜೆ ಹೇಳುತ್ತಾನೆ.

ನಮ್ಮ ತರ್ಕ ಮತ್ತು ಅರಿವಿನ ಆಳ ನಮ್ಮ ಜ್ಞಾನ ಮತ್ತು ಅನುಭವಭಾಂಡಾರ ಎಷ್ಟೇ ಅಪಾರವಿದ್ದರೂ ನಮಗೆ ತಿಳಿದಿರುವ ಜೀವನ ರಹಸ್ಯ ಅತ್ಯಲ್ಪ; ಅದರ ಅಗಾಧ ಗೂಢನಿಯಮಗಳ ಊಹೆ ಮಾತ್ರ ಸಾಧ್ಯ. ಆದರೆ ಅದರ ಸೌಂದರ್ಯೋಪಾಸನೆ ಸದಾ ಸಾಧ್ಯವಿದೆ. ಮತ್ತು ಕಲೆಯ ಮೂಲಕ ನಮ್ಮ ಆಚರಣೆಯಲ್ಲಿ ಸೃಷ್ಟಿಯ ದೇವಸಮಾನ ಕಾರ್ಯ ತೋರಬಹುದು. ನಮ್ಮ ಜೀವನ ಸದಾ ತಪ್ಪುಮಾಡುವ, ಅತ್ಯಲ್ಪ, ಅನಿಶ್ಚಿತ ಕಾಲದ ದುರ್ಬಲ ಜೀವನವಾದರೂ, ಅಮರ ದೈವತ್ವದ ಸತ್ವ ಸ್ವಲ್ಪ ನಮ್ಮಲ್ಲಿದೆ "ನಾವು ಅಲ್ಪ ಮಾನವರು, ನಶ್ವರ ಜೀವಿಗಳು ಆದ್ದರಿಂದ ಮಾನವ ಸಹಜ ನಶ್ವರ ಭಾವನೆಗಳನ್ನೇ ಯೋಚಿಸಿ ಎಂದು ಉಪದೇಶಿಸುವವರನ್ನು ನಂಬಬಾರದು. ಸಾಧ್ಯವಾದಷ್ಟು ಅಮರತ್ವ ಅನುಷ್ಠಾನ ಮಾಡಬೇಕು. ನಮ್ಮ ಶ್ರೇಷ್ಠತೆಗೆ ಅನುಚಿತವಾದ ಯೋಗ್ಯ ಜೀವನ ನಡೆಸಲು ಸರ್ವ ಪ್ರಯತ್ನ ಮಾಡಬೇಕು" ಎಂದು ಅರಿಸ್ಟಾಟಲ್ ಹೇಳಿದ್ದಾನೆ.

## ೧೬. ಉಪಸಂಹಾರ

ಈ ಗ್ರಂಥ ಆರಂಭಿಸಿ ಐದು ತಿಂಗಳಾಗುತ್ತ ಬಂದವು. ನನ್ನ ಮನೋಭಾವನೆಗಳ ಕಲಸುಮೇಲೋಗರದ ಸಾವಿರ ಪುಟಗಳ ಈ ಹಸ್ತಪ್ರತಿ ಈಗ ಮುಗಿಸಿದೇನೆ. ಈ ಐದು ತಿಂಗಳಲ್ಲಿ ಬಹು ದೂರದ ಪ್ರಾಚೀನ ಯುಗಕ್ಕೆ ಹೋಗಿದ್ದೇನೆ, ಭವಿಷ್ಯದೊಳಗೂ ಇಣಿಕಿ ನೋಡಿದ್ದೇನೆ. "ಕಾಲವು ಅನಂತ

ದೊಂದಿಗೆ ಸಂಧಿಸುವ ಬಿಂದು '' ವಿನ ಮೇಲೆ ನನ್ನ ಸಮತೋಲನೆ ನಿಲ್ಲಿಸುವುದಕ್ಕೂ ಪ್ರಯತ್ನಪಟ್ಟಿದೇನೆ. ಈ ಐದು ತಿಂಗಳಲ್ಲಿ ಪ್ರಪಂಚದಲ್ಲಿ ಅನೇಕ ಮಹಾ ಘಟನೆಗಳಾಗಿವೆ. ಸೈನಿಕನ ಗೆಲುವಿನ ದೃಷ್ಟಿಯಿಂದ ಯುದ್ಧದ ಗತಿ ವಿಜಯೋತ್ಸವದ ಕಡೆ ಅತಿವೇಗದಿಂದ ಸಮೀಪಿಸಿದೆ. ನನ್ನ ತಾಯ್ನಾಡಿನಲ್ಲಿ ಸಹ ದೂರದ ನೋಟ ಮಾತ್ರ ದೊರೆತಿದ್ದರೂ ಅನೇಕ ಘಟನಾ ಪರಂಪರೆಗಳು ಆಗಿವೆ. ಅನೇಕ ಬಾರಿ ಅಲೆ ಅಲೆ ಯಾಗಿ ಬಂದ ತಾತ್ಕಾಲಿಕ ಸಂಕಟಗಳ ಉಬ್ಬರ'ವಿಳಿತಕ್ಕೆ ಸಿಕ್ಕು ಪಾರಾಗಿದ್ದೇನೆ. ಈ ಆಲೋಚನಾ ಕಾರ್ಯದಲ್ಲಿ ಮಗ್ನನಾಗಿ, ನನ್ನ ಭಾವನೆಗಳಿಗೆ ಒಂದು ರೂಪು ಕೊಡುವ ಪ್ರಯತ್ನದಲ್ಲಿ ಇಂದಿನ ಭೀಷಣ ಘಟನೆಗಳ ಮೊನೆಯಲುಗಿನಿಂದ ಸ್ವಲ್ಪ ದೂರ ಸರಿದು ಗತಕಾಲದ ಮತ್ತು ಭವಿಷ್ಯದ ವಿಶಾಲ ನೋಟದ ಕಡೆ ತಿರುಗಿದ್ದೇನೆ.

ಆದರೆ ಈ ತಿರುಗಾಟಕ್ಕೂ ಒಂದು ಕೊನೆಬೇಕು. ಬೇರೆ ಯಾವ ಕಾರಣವಿಲ್ಲದಿದ್ದರೂ ಉಪೇಕ್ಷಿಸ ಲಾಗದ ಒಂದು ವಾಸ್ತವಿಕ ಕಾರಣ ಇದೆ. ಬಹು ಪ್ರಯಾಸದಿಂದ ತರಿಸಿಕೊಂಡ ಕಾಗದ ಮುಗಿದು ಹೋಗಿದೆ; ಹೆಚ್ಚು ಸಿಗುವಂತಿಲ್ಲ.

"ಭಾರತ ದರ್ಶನ"—ಹೊಸದು ಏನು ನಾನು ಕಂಡಿರುವುದು ? ಭಾರತದ ಇಂದಿನ ಚಿತ್ರ ಮತ್ತು ಹಿಂದಿನ ಬಹುಕಾಲದ ಚಿತ್ರವನ್ನು ನಾನು ಕಂಡುಹಿಡಿದು ತೋರಿಸುತ್ತೇನೆಂದು ಭಾವಿಸಿದ್ದು ಒಂದು ಎದೆ ಗಾರಿಕೆ. ಭಾರತದ ನಲವತ್ತು ಕೋಟಿ ಜನ ಸ್ತ್ರೀ ಪುರುಷರೂ ಇಂದು ಬೇರೆ ಬೇರೆ, ಒಬ್ಬರಿಗೊಬ್ಬರಿಗೆ ವ್ಯತ್ಯಾಸ, ಪ್ರತಿಯೊಬ್ಬರಿಗೂ ಒಂದೊಂದು ಪ್ರತ್ಯೇಕ ಭಾವನಾ ಮತ್ತು ಯೋಜನಾ ಪ್ರಪಂಚ ಜೀವನ. ಈಗಲೇ ಹೀಗಿರುವಾಗ ಅಗಾಧ ಗತಕಾಲದ ಅಸಂಖ್ಯಾತ ಮಾನವಕೋಟಿಯ ಅಲೆಗಳ ಚಿತ್ರ ನನ್ನ ಕಲ್ಪನೆಯ ಹಿಡಿತಕ್ಕೆ ಸಿಗುವುದೆಂತು ? ಆದರೂ ಯಾವುದೋ ಒಂದು ಅವ್ಯಕ್ತ ಶಕ್ತಿ ಅದನ್ನೆಲ್ಲ ಒಟ್ಟಿಗೆ ಹೆಣೆದಿದೆ, ಇನ್ನೂ ಹೆಣೆಯುತ್ತಿದೆ. ಭೌಗೋಲಿಕ ಮತ್ತು ಆರ್ಥಿಕ ದೃಷ್ಟಿಯಿಂದ ಭಾರತ ಒಂದು. ಅದರ ಸಂಸ್ಕೃತಿ ವೈವಿಧ್ಯದಲ್ಲಿ ಒಂದು ಐಕ್ಯತೆ ಇದೆ. ಅನೇಕ ವಿರೋಧಗಳ ಹೊರೆಯಾದರೂ ಯಾವುದೋ ಅವ್ಯಕ್ತ ತಂತುಗಳು ಅವನ್ನು ಬಲವಾಗಿ ಬಿಗಿದು ಹಿಡಿದಿವೆ. ಮೇಲಿಂದ ಮೇಲೆ ಎಷ್ಟೋ ಆಘಾತಗಳು ಬಂದು ಒದಗಿದ್ದರೂ ಭಾರತದ ಆತ್ಮ ಜಯಿಸಲು ಮಾತ್ರ ಯಾವುದಕ್ಕೂ ಸಾಧ್ಯವಾಗಿಲ್ಲ; ಇಂದು ಮದೋನ್ಮತ್ತ ವಿಜಯಶಾಲಿಯ ಕೈಯೊಳಗಿನ ಒಂದು ಆಟದ ಬೊಂಬೆಯಾದರೂ ಭಾರತವು ಇನ್ನೂ, ಅಗಮ್ಯವೂ ಅಜೇಯವೂ ಆಗಿ ಉಳಿದಿದೆ. ಪುರಾತನ ಕತೆಯಂತೆ ಯಾವುದೋ ಒಂದು ಕಂಡೂ ಕಾಣದ ಗುಣ, ಒಂದು ಮೋಹಿನೀ ಶಕ್ತಿ ಭಾರತಕ್ಕೆ ಇರುವಂತೆ ಇದೆ. ಭಾರತವೆಂದರೆ ಒಂದು ಕಲ್ಪನೆಯೂ ಹೌದು ಭಾವನೆಯೂ ಹೌದು, ಕನಸೂ ಹೌದು ದೃಶ್ಯವೂ ಹೌದು; ಆದರೂ ಅದು ಸತ್ಯ, ವಾಸ್ತವ ಮತ್ತು ಸರ್ವ ವ್ಯಾಪಕ. ಕತ್ತಲೆಯ ಕೂಪಕ್ಕೆ ತಳ್ಳುವಂತೆ ತೋರುವ ಕಾರ್ಗತ್ತಲು ಕವಿದ ಕಾಲು ದಾರಿಗಳ ಭೀಕರ ದೃಶ್ಯಗಳೂ ಇವೆ; ಹಗಲಿನ ಪೂರ್ಣತೆ ಮತ್ತು ಶಾಖವೂ ಇದೆ. ಈ ವೃದ್ಧ ಮಾತೆಯನ್ನು ಕಂಡರೆ ಒಂದೊಂದು ಬಾರಿ ನಾಚಿಕೆಯಿಂದ ತಲೆ ತಗ್ಗಿಸುವಂತೆ ಬಹು ಅಸಹ್ಯವಾಗುತ್ತದೆ. ದುರಾಗ್ರಹ ಮತ್ತು ಮೊಂಡುತನ ತೋರುವುದಲ್ಲದೆ ಕೆಲವು ವೇಳೆ ಹುಚ್ಚುತನ ಸಹ ತೋರುತ್ತಾಳೆ. ಆದರೆ ಆಕೆ ಬಹು ಪ್ರೇಮಮಯಿ. ಆಕೆಯ ಮಕ್ಕಳು ಎಲ್ಲಿಗೆ ಹೋಗಲಿ ಏನೆ ಆಗಲಿ ಆಕೆಯನ್ನು ಮಾತ್ರ ಯಾರೂ ಮರೆಯಲಾರರು. ಏಕೆಂದರೆ ಆಕೆಯ ಮಹೋನ್ನತಿ ಅಥವ ಅವಗುಣ ಏನಿದ್ದರೂ ಅದಕ್ಕೆ ಅವರೇ ಕಾರಣರು. ಜೀವನಾಶಕ್ತಿ, ಆನಂದ ಮತ್ತು ಮುಗ್ಧತೆ ಹೊರ ಸೂಸುತ್ತ, ಅಪಾರ ಜ್ಞಾನಾಂಬುಧಿಯನ್ನಳೆದ ಆಕೆಯ ಆ ಆಳವಾದ ಕಣ್ಣುಗಳಲ್ಲಿ ಆ ಗುಣಾವ ಗುಣಗಳೆಲ್ಲ ಪ್ರತಿಬಿಂಬಿತ ಇವೆ. ಪ್ರತಿಯೊಬ್ಬ ವ್ಯಕ್ತಿಯೂ ಆಕೆಯನ್ನು ಕಂಡು ಮುಗ್ಧನಾಗಿದ್ದಾನೆ. ಕಾರಣ ಬೇರೆ ಇರಬಹುದು ಅಥವ ಏನೂ ಇಲ್ಲದೆ ಇರಬಹುದು; ಮತ್ತು ಆಕೆಯ ಬಹುಮುಖ ವ್ಯಕ್ತಿತ್ವದ ಯಾವುದೋ ಒಂದು ಪ್ರತ್ಯೇಕ ಮುಖಕಂಡು ಇರಬಹುದು. ಯುಗ ಯುಗಾಂತರಗಳಿಂದ ಅನೇಕ ಮಹಾ ಪುರುಷರು, ಸ್ತ್ರೀರತ್ನಗಳು ಆಕೆಯ ಗರ್ಭದಿಂದ ಅವತರಿಸಿ ಸನಾತನ ಸಂಪ್ರದಾಯ ಮುಂದುವರಿಸಿದ್ದಾರೆ. ಮತ್ತು ಕಾಲಪರಿವರ್ತನೆಗೆ ತಕ್ಕಂತೆ ಆ ಸಂಪ್ರದಾಯಕ್ಕೆ ಹೊಸಸ್ವರೂಪ ಕೊಟ್ಟಿದ್ದಾರೆ. ಈ ಮಹಾ

ವ್ಯಕ್ತಿಗಳ ಶ್ರೇಣಿಯಲ್ಲಿ ಒಬ್ಬರಾದ ರವೀಂದ್ರನಾಥ ಠಾಕೂರರಿಗೆ ಆಧುನಿಕ ಯುಗದ ಕಾವು ಮತ್ತು ಆಸಕ್ತಿ ಪೂರ್ಣ ಇದ್ದವು; ಆದರೂ ಅವರ ನಿಲುವು ಎಲ್ಲ ಭಾರತದ ಪ್ರಾಚೀನತೆಯಲ್ಲಿ; ಅವರ ಜೀವನವೇ ಪ್ರಾಚೀನ ಮತ್ತು ಆಧುನಿಕ ಸಂಸ್ಕೃತಿಗಳ ಒಂದು ಸುಂದರ ಸಾಮರಸ್ಯ. "ನನ್ನ ಭಾರತಪ್ರೇಮ ಭೌಗೋಲಿಕ ಭಾರತದ ನನ್ನ ಪೂಜೆಯಿಂದ ಬಂದುದಲ್ಲ; ಭಾರತದಲ್ಲಿ ನಾನು ಜನ್ಮತಾಳಿದ್ದರಿಂದಲೂ ಅಲ್ಲ; ಆದರೆ ಯುಗಯುಗಗಳ ಪ್ರಳಯಾಂತಕ ಸನ್ನಿವೇಶಗಳಲ್ಲಿ ಸಹ ಅದು ಮಹಾಜ್ಞಾನಿಗಳಾದ ಆರ್ಯ ಋಷಿಗಳ ದಿವ್ಯ ಅಮೃತವಾಣಿಯನ್ನು ಕಾಪಾಡಿಕೊಂಡು ಬಂದಿರುವುದರಿಂದ" ಎಂದು ರವೀಂದ್ರರು ಹೇಳಿದ್ದಾರೆ. ಅನೇಕರು ಅದೇ ರೀತಿ ಹೇಳಬಹುದು; ಇತರರು ತಮ್ಮ ಭಾರತಪ್ರೇಮಕ್ಕೆ ಬೇರೆಕಾರಣ ಕೊಡಬಹುದು.

ಹಿಂದೆ ಆಕೆಯನ್ನು ಮುಸುಕಿದ್ದ ಮೋಹ ಈಗ ಮಾಯವಾಗುವಂತೆ ಇದೆ. ಈಗ ಆಕೆ ಎಚ್ಚತ್ತು ಕಣ್ತೆರೆದು ಸುತ್ತಲೂ ನೋಡುವಂತಿದೆ. ಆದರೆ ಎಷ್ಟೇ ಹೊಸರೂಪ ಧರಿಸಿದರೂ ಹೊಸರೂಪ ತಾಳಲೇ ಬೇಕು. ಆ ಹಳೆಯ ಮನಮೋಹಕಶಕ್ತಿ ಮಾತ್ರ ಇದ್ದೇ ಇರುತ್ತದೆ; ತನ್ನ ಜನರ ಹೃದಯ ಸೂರೆಗೊಳ್ಳುತ್ತಲೇ ಇರುತ್ತಾಳೆ. ಆಕೆಯ ಬಾಹ್ಯ ಅಲಂಕಾರ ಬೇರೆ ಆದರೂ ಆಕೆ ಮಾತ್ರ ಅದೇ ಪುರಾತನ ವ್ಯಕ್ತಿ; ಈ ಸೇಡಿನ ಮನೋಭಾವದ, ಕಠಿನ, ದುರಾಸೆಯ ಪ್ರಪಂಚದಲ್ಲಿ ಸತ್ಯ, ಸುಂದರ, ಶ್ರೇಷ್ಠ ವಸ್ತುಗಳು ಯಾವುದನ್ನೂ ಬಿಡದೆ ಬಾಳ್ವೆ ನಡೆಸಲು ಆಕೆಯ ಜ್ಞಾನಸಂಪತ್ತು ಸಹಾಯಕವಾಗುತ್ತದೆ.

ಪ್ರಪಂಚವು ಮಹತ್ಕಾರ್ಯಗಳನ್ನೇನೋ ಸಾಧಿಸಿದೆ. ಆದರೂ ಮಾನವಪ್ರೇಮ ಮಾನವಪ್ರೇಮ, ಎಂದು ಎಷ್ಟು ಕೂಗಿದರೂ ಅದರ ತಳಹದಿ ಮಾತ್ರ ಮಾನವನ ಮಾನವೀಯತೆಯ ಗುಣಗಳಲ್ಲಿರದೆ ಹೆಚ್ಚಾಗಿ ದ್ವೇಷ ಮತ್ತು ಹಿಂಸೆಯಮೇಲೆ ನಿಂತಿದೆ. ಯುದ್ಧವು ಸತ್ಯ ಮತ್ತು ಮಾನವೀಯತೆಯ ನಕಾರ. ಕೆಲವು ವೇಳೆ ಯುದ್ಧ ಅನಿವಾರ್ಯವಾಗಬಹುದು. ಆದರೆ ಅದರ ಪರಿಣಾಮ ಊಹಿಸುವುದು ಸಹ ಅಸಾಧ್ಯ. ಮರಣ ಮಾತ್ರವಲ್ಲ, ಏಕೆಂದರೆ ಹುಟ್ಟಿದವನು ಸಾಯಲೇ ಬೇಕು; ಆದರೆ, ಕ್ರಮೇಣ ಮುಂದೆ ಜನತೆಯ ಸಾಮಾನ್ಯ ಸ್ವಭಾವವಾಗುವ ದ್ವೇಷ ಮತ್ತು ಸುಳ್ಳಿನ ಸತತ ಮನಃಪೂರ್ವಕ ಅಪಪ್ರಚಾರ. ದ್ವೇಷ ಮತ್ತು ತಿರಸ್ಕಾರಗಳೇ ನಮ್ಮ ಜೀವನಮಾರ್ಗದ ದಿಗ್ದರ್ಶಕಗಳಾದರೆ ಅದರಿಂದ ಒದಗುವ ಅಪಾಯ ಮತ್ತು ಹಾನಿ ಅಪಾರ. ಏಕೆಂದರೆ ಆ ಶಕ್ತಿ ವ್ಯಯವೆಲ್ಲ ದುರ್ವ್ಯಯ ಮತ್ತು ಅದರಿಂದ ಮನಸ್ಸೇ ವಿಕಾರಹೊಂದಿ, ಕರಟಗಟ್ಟಿ ಸತ್ಯಕ್ಕೆ ಕುರುಡಾಗುತ್ತದೆ. ಭಾರತದಲ್ಲಿ ಈಗ ದ್ವೇಷಾಸೂಯೆಗಳು ಬೆಳೆದಿರುವುದು ತೀರ ವ್ಯಸನಕರ; ಆದರೆ ಅದೆಲ್ಲ ಹಿಂದಿನ ಕರ್ಮಫಲ. ಇಂದಿಗೂ ಅದರಲ್ಲಿ ಏನೂ ವ್ಯತ್ಯಾಸವಾಗಿಲ್ಲ. ಆತ್ಮಾಭಿಮಾನವುಳ್ಳ ಜನಾಂಗದ ಗೌರವಕ್ಕೆ ಮೇಲಿಂದ ಮೇಲೆ ಮಸಿಬಳಿಯುವ ಪ್ರಯತ್ನ ಮರೆಯಲು ಸಾಧ್ಯವಿಲ್ಲ. ಆದರೂ ಭಾರತೀಯರು ಬಹುಕಾಲ ದ್ವೇಷಸಾಧನೆ ಮಾಡುವವರಲ್ಲ, ಬಹುಬೇಗ ತಮ್ಮ ಉದಾರ ಸ್ವಭಾವ ತೋರುತ್ತಾರೆ.

ಸ್ವಾತಂತ್ರ್ಯದ ಹೊಸ ದಿಗಂತಗಳನ್ನು ಕಂಡು ಭಾರತ ಪುನಃ ಚೇತರಿಸಿಕೊಳ್ಳುತ್ತದೆ. ಹಿಂದಿನ ನಿರಾಸೆ ಮತ್ತು ಅವಹೇಳನ ಎಲ್ಲ ಮರೆತು ಭವಿಷ್ಯದ ಭವ್ಯತೆಯಲ್ಲಿ ಮಗ್ನವಾಗುತ್ತದೆ. ತನ್ನ ನೆಲೆಯಲ್ಲಿ ತಾನು ಬೇರು ಬಿಟ್ಟರೂ ಇತರರಿಂದ ಕಲಿತು ಅವರೊಡನೆ ಸಹಕರಿಸಬೇಕೆಂಬ ಇಚ್ಛೆ ಮತ್ತು ಆತ್ಮ ವಿಶ್ವಾಸದಿಂದ ಮುಂದುವರಿಯುತ್ತದೆ. ಭಾರತವು ಇಂದು ಪೂರ್ವಾಚಾರಗಳ ಅಂಧಶ್ರದ್ಧೆ ಮತ್ತು ಪಾಶ್ಚಾತ್ಯ ಪದ್ಧತಿಗಳ ಕುರುಡು ಅನುಕರಣಗಳ ಮಧ್ಯೆ ತೊನೆದಾಡುತ್ತಿದೆ. ಇವೆರಡರಲ್ಲೂ ಹರ್ಷವಾಗಲಿ, ಜೀವನವಾಗಲಿ, ಪ್ರಗತಿಯಾಗಲಿ ದೊರೆಯಲು ಸಾಧ್ಯವಿಲ್ಲ. ಮೇಲೆ ಹೆಪ್ಪುಗಟ್ಟಿರುವ ಕರಟ ಒಡೆದುಕೊಂಡು ಹೊರಬಿದ್ದು ಆಧುನಿಕ ಯುಗದ ಜೀವನ ಮತ್ತು ಕಾರ್ಯ ಚಟುವಟಿಕೆಗಳಲ್ಲಿ ಪೂರ್ಣ ಪಾತ್ರ ವಹಿಸಬೇಕು. ಕೇವಲ ಅನುಕರಣದಿಂದ ಯಾವ ಸಂಸ್ಕೃತಿ ಅಥವ ಆತ್ಮ ಪ್ರಗತಿಸಾಧನೆ ಸಾಧ್ಯವಿಲ್ಲವೆಂದು ಸ್ಪಷ್ಟ ಅರಿಯಬೇಕು. ಜನ ಜೀವನದಿಂದ ಮತ್ತು ರಾಷ್ಟ್ರ ಜೀವನದಿಂದ ದೂರವಿರುವ ಕೆಲವರು ಮಾತ್ರ ಅನುಕರಣದಿಂದ ತೃಪ್ತಿ ಹೊಂದಬಹುದು. ನಿಜವಾದ ಸಂಸ್ಕೃತಿಯು ಪ್ರಪಂಚದ ಎಲ್ಲ ಮೂಲೆಗಳಿಂದಲೂ ರಸಾಸ್ವಾದನೆ ಮಾಡುತ್ತದೆ. ಆದರೆ ತನ್ನ ವಿಶಾಲಜನತೆಯ ಆಧಾರದ ಮೇಲೆ ಸ್ವಂತ ಮನೆಯಲ್ಲಿ ಬೆಳೆಯ

ಬೇಕು. ವಿದೇಶದ ಪ್ರತಿಮೆಗಳನ್ನೇ ಸದಾ ಯೋಚಿಸುತ್ತಿದ್ದರೆ ಕಲೆ ಮತ್ತು ಸಾಹಿತ್ಯ ನಿರ್ಜೀವವಾಗುತ್ತವೆ. ಸಂಸ್ಕೃತಿಯು ಅತಿಗಾಂಭೀರ್ಯದ ಸಣ್ಣ ಗುಂಪಿನ ಸಂಕುಚಿತ ಸ್ವತ್ತಾಗಿರುವ ದಿನಗಳು ಕಳೆದು ಹೋದವು; ಈಗ ಎಲ್ಲವನ್ನೂ ಸಾಮಾನ್ಯ ಜನತೆಯ ದೃಷ್ಟಿಯಿಂದ ನೋಡಬೇಕಾಗಿದೆ. ಅವರ ಸಂಸ್ಕೃತಿಯು ಹಿಂದಿನ ಸಂಸ್ಕೃತಿ ಪರಂಪರೆಯ ವಿಕಾಸವಾಗಿ ಅವರ ಹೊಸ ಆಶೋತ್ತರಗಳನ್ನು ಮತ್ತು ರಚನಾತ್ಮಕ ದೃಷ್ಟಿಯನ್ನು ಪ್ರತಿಬಿಂಬಿಸಬೇಕು.

ಎಮರ್ಸನ್ ಯೂರೋಪಿನ ಸಂಸ್ಕೃತಿಯನ್ನು ಬಹಳ ಅನುಕರಿಸಬೇಡಿ, ಅವಲಂಬಿಸಬೇಡಿ ಎಂದು ಅಮೆರಿಕನರಿಗೆ ಒಂದು ನೂರು ವರ್ಷಗಳ ಹಿಂದೆಯೇ ಎಚ್ಚರಿಸಿದನು. ಹೊಸ ಜನಾಂಗವಾದ್ದರಿಂದ ತಮ್ಮ ಹಿಂದಿನ ಯೂರೋಪಿಯನ್ ಜೀವನದ ಕಡೆ ಹೆಚ್ಚು ನೋಡದೆ ತಮ್ಮ ಹೊಸ ದೇಶದ ಸಮೃದ್ಧ ಜೀವನದಿಂದ ಪ್ರೇರಣೆ ಪಡೆಯಲೆಂದು ಅವನ ಇಷ್ಟ. "ಇತರ ದೇಶಗಳ ಜ್ಞಾನಕ್ಕೆ ನಾವು ದಾಸರಾಗಿ, ಅವರಿಂದ ಶಿಕ್ಷಣ ಪಡೆಯುವ ಕಾಲ ಮುಗಿಯಿತು. ನಮ್ಮ ಸುತ್ತಲೂ ಹೊಸಬಾಳಿಗೆ ಜನ್ಮದಾತರಾಗುವ ಪೀಳಿಗೆಗಳಿಗೆ ಪರದೇಶಗಳ ಬೆಳೆಯಿಂದ ಎರವಲು ತಂದ ಜೀರ್ಣವಸ್ತುಗಳಿಂದ ಹೊಟ್ಟೆ ತುಂಬಿಸಲು ಸಾಧ್ಯವಿಲ್ಲ. ಪ್ರಶಂಸನೀಯ ಸಂಭವಗಳು ಕಾರ್ಯಗಳು ತಾವೇ ಉದ್ಭವಿಸುತ್ತವೆ; ತಮ್ಮ ಪ್ರಶಂಸೆ ತಾವೇ ಹಾಡುತ್ತವೆ. ಯಾವ ಸಂಪ್ರದಾಯ ಅಥವ ಅಧಿಕಾರ ಬಂಧವೂ ಇಲ್ಲದ ರಚನಾತ್ಮಕ ನಡೆ, ನುಡಿ ಮತ್ತು ಕಾರ್ಯಗಳಿವೆ. ಮನಸ್ಸಿನ ಸದ್ಭಾವನೆ ಸಮದೃಷ್ಟಿ ಮತ್ತು ಸ್ವಯಂಸ್ಫೂರ್ತಿಯೇ ಅವುಗಳ ಪ್ರೇರಕಗಳು" ಎಂದು ಹೇಳಿದ್ದಾನೆ. ಪುನಃ ತನ್ನ "ಆತ್ಮಾವಲಂಬನ" ಎಂಬ ಪ್ರಬಂಧದಲ್ಲಿ "ಆತ್ಮ ಸಂಸ್ಕಾರವಿಲ್ಲದ ವಿದ್ಯಾವಂತ ಅಮೆರಿಕನರು ಇಟಲಿ ಇಂಗ್ಲೆಂಡ್, ಈಜಿಪ್ಟ್ ದೇಶಗಳನ್ನೆ ಆದರ್ಶ ಇಟ್ಟುಕೊಂಡುಮೂಢಭಕ್ತಿಯಿಂದ ಅಲ್ಲಿಗೆ ಪ್ರವಾಸ ಹೋಗುತ್ತಿದಾರೆ. ಇಂಗ್ಲೆಂಡ್, ಇಟಲಿ, ಈಜಿಪ್ಟ್ ದೇಶಗಳಿಗೆ ಗೌರವತಂದವರು ಭೂಮಿಯ ಅಕ್ಷಾಂಶದಂತೆ ತಾವು ಇದ್ದಲ್ಲಿಯೇ ಇದ್ದು ಆ ಕಾರ್ಯ ಸಾಧಿಸಿದರು. ಪುಂಸತ್ವದ ಸಮಯದಲ್ಲಿ ನಮ್ಮ ಸ್ಥಾನವೇ ನಮ್ಮ ಕರ್ತವ್ಯ ಎಂಬ ಭಾವನೆ ಬರುತ್ತದೆ. ಆತ್ಮ ಪ್ರವಾಸಿಯಲ್ಲ; ಜ್ಞಾನಿಯ ಆವಾಸ ಸದಾ ತನ್ನ ಆಶ್ರಮದಲ್ಲಿ. ತನ್ನ ಅವಶ್ಯಕತೆ ಮತ್ತು ಕರ್ತವ್ಯ ನಿರ್ವಹಣೆಗೆ ಮನೆಯಿಂದ ಹೊರಗೆ ಅಥವ ವಿದೇಶಗಳಿಗೆ ಹೋದವೇಳೆ ಸಹ ಆತನು ತನ್ನ ಮನೆಯಲ್ಲಿದ್ದಂತೆಯೇ ಇರುತ್ತಾನೆ; ಮತ್ತು ಜ್ಞಾನ ಮತ್ತು ಗುಣದ ಪ್ರಚಾರಕನಾಗಿ ಹೋಗಿದ್ದೇನೆಂದು ತನ್ನ ಮುಖಭಾವದಿಂದಲೇ ಜನರನ್ನು ತಿದ್ದುತ್ತಾನೆ. ಓಡುಗಳ್ಳ ಅಥವ ಗುಲಾಮನಂತೆ ಹೋಗುವುದಿಲ್ಲ" ಎಂದಿದ್ದಾನೆ. "ತನ್ನ ಕಾಲಮೇಲೆ ತಾನು ನಿಂತು, ಹೆಚ್ಚಿನದೇನೂ ಕಲಿಯಲಾರೆನೆಂದು, ಕಲೆ, ಜ್ಞಾನಾರ್ಜನೆ ಅಥವ ವಿಶಾಲ ದೃಷ್ಟಿಯಿಂದ ಪ್ರಪಂಚ ಪರಿಚಯಕ್ಕಾಗಿ ಪ್ರಪಂಚ ಪರ್ಯಟನ ಮಾಡುವುದಾದರೆ ನನ್ನ ಅಡ್ಡಿ ಇಲ್ಲ. ಆದರೆ ತನಗೆ ಇಲ್ಲಿ ದೊರೆಯದ ಮಹಾಪಾಂಡಿತ್ಯ ಏನೊ ಸಂಪಾದಿಸುತ್ತೇನೆಂದು ಹೋದರೆ, ಅಥವ ಕೇವಲ ಸಂತೋಷಕ್ಕಾಗಿ ಹೋದರೆ ತನ್ನನ್ನೇ ತಾನು ಮರೆತು ಹಳೆಯದರ ಜೊತೆಗೆ ತಾನೂ ಮುದಿಯಾಗಿ ತನ್ನ ಯೌವನದೃಷ್ಟಿ ಸಹ ಕಳೆದುಕೊಳ್ಳುತ್ತಾನೆ. ಥೀಬಸ್‌ನಲ್ಲಿ ಪಾಲ್ಮೈರಾದಲ್ಲಿ ಹಳೆಯ ಪಾಳು ಗೋಡೆಗಳ ಮಧ್ಯೆ ಅವನ ಇಚ್ಛೆ ಮತ್ತು ಮನಸ್ಸೂ ಹಳೆಯದಾಗುತ್ತವೆ. ಪಾಳಿಗೆ ಪಾಳನ್ನು ಸೇರಿಸುತ್ತಾನೆ.

"ಪ್ರವಾಸದ ಈ ನಮ್ಮ ದುರಾಸೆ ನಮ್ಮ ಮಾನಸಿಕ ಕಾರ್ಯರಂಗವನ್ನೇ ಪೂರ್ಣ ಮುತ್ತಿರುವ ಒಂದು ಅಂತರಂಗ ರೋಗದ ಚಿಹ್ನೆ. . . . ಎಲ್ಲದರಲ್ಲೂ ಅನುಕರಣ . . . ನಮ್ಮ ಮನೆ ಕಟ್ಟುವುದು ವಿದೇಶೀಯರ ಅಭಿರುಚಿಯಂತೆ; ನಮ್ಮ ಪೆಟ್ಟಿಗೆಗಳಲ್ಲೆಲ್ಲ ವಿದೇಶೀ ತೊಡಿಗೆಗಳು; ಅಭಿಪ್ರಾಯ, ಅಭಿರುಚಿ ಮತ್ತು ಜ್ಞಾನ ಎಲ್ಲವೂ ಯಾವುದೋ ದೂರದ ಹಳೆಯ ವಸ್ತುವಿನ ಅನುಕರಣ. ಎಲ್ಲೆಲ್ಲಿ ಕಲಾಭಿವೃದ್ಧಿಯಾಗಿದೆಯೋ ಅದೆಲ್ಲ ಆತ್ಮ ಪ್ರೇರಿತ. ಕಲಾವಿದನ ಮಾದರಿ ಮೊದಲು ತನ್ನ ಮನೋಮಂದಿರದಲ್ಲಿ, ಆತ ನಿರ್ಮಿಸ ಹೊರಟ ವಸ್ತುವಿಗೆ ಮತ್ತು ಅನುಸರಿಸಬೇಕಾದ ನಿಯಮಗಳಿಗೆ ಆತನ ಭಾವನೆಗಳೇ ಆದರ್ಶ . . . ನಿನ್ನನ್ನು ನೀನು ಅರಿತುಕೊ; ಅನುಕರಣ ಬೇಡ. ಒಂದು ತುಂಬುಜೀವನದ ವ್ಯವಸಾಯದಿಂದ ಸಂಗ್ರಹಿಸಿದ ಶಕ್ತಿಯಿಂದ ಪ್ರತಿಗಳಿಗೆ ನೀನು ಒಂದೊಂದು ಉತ್ತಮ ಕೃತಿ ಪ್ರದಾನ ಮಾಡಬಹುದು" ಎಂದು ಹೇಳಿದಾನೆ.

ಭಾರತದಲ್ಲಿ ನಾವು ಹಿಂದಿನದನ್ನಾಗಲಿ, ದೂರದ ವಸ್ತುವನ್ನಾಗಲಿ ಅರಸಿಕೊಂಡು ಹೋಗಬೇಕಾದ್ದಿಲ್ಲ. ನಮ್ಮ ಕಣ್ಣೆದುರಿಗೇನೆ ಅಪಾರ ರಾಶಿ ಇದೆ. ನಾವು ಹೊರಗೆ ಹೋಗಿ ಅರಸುವುದಿದ್ದರೆ ಆಧುನಿಕತೆ ಅರಸಬೇಕು. ಆ ಅನ್ವೇಷಣೆ ಅತ್ಯವಶ್ಯಕ, ಏಕೆಂದರೆ ಏಕಾಂತ ಭಾವನೆ ಎಂದರೆ ಪರಾಙ್ಮುಖತೆ ಮತ್ತು ವಿನಾಶ. ಎಮರ್ಸನ್ ಕಾಲದ ಪ್ರಪಂಚ ಇಂದು ಬದಲಾಯಿಸಿದೆ; ಅಡ್ಡಗೋಡೆಗಳು ಕುಸಿದು ಬೀಳುತ್ತಿವೆ; ಜೀವನ ಹೆಚ್ಚು ಹೆಚ್ಚು ಅಂತರ ರಾಷ್ಟ್ರೀಯವಾಗುತ್ತಿದೆ. ಈ ಅಂತರ ರಾಷ್ಟ್ರೀಯ ರಂಗದಲ್ಲಿ ನಾವು ನಮ್ಮ ಪಾತ್ರ ವಹಿಸಬೇಕು; ಅದಕ್ಕಾಗಿ ಪ್ರವಾಸಮಾಡಿ, ಇತರರನ್ನು ಕಂಡು ಅವರಿಂದ ಕಲಿತು, ಅರ್ಥಮಾಡಿಕೊಳ್ಳಬೇಕು. ಆದರೆ ನಿಜವಾದ ಅಂತರ ರಾಷ್ಟ್ರೀಯತ್ವ ಬೇರು ಅಥವ ಲಂಗರಿಲ್ಲದ ಆಕಾಶ ಕುಸುಮವಲ್ಲ, ರಾಷ್ಟ್ರ ಸಂಸ್ಕೃತಿಗಳಿಂದ ಅದು ಬೆಳೆಯಬೇಕು; ಸ್ವಾತಂತ್ರ್ಯ, ಸಮಾನತೆ ಮತ್ತು ನಿಜವಾದ ಅಂತರ ರಾಷ್ಟ್ರಿಯತ್ವದ ಆಧಾರದಿಂದ ಮಾತ್ರ ಇಂದು ಅದು ಬೆಳೆಯಲು ಸಾಧ್ಯ. ಆದರೂ ಎಮರ್ಸನ್‌ನ ಎಚ್ಚರಿಕೆ ಅಂದು ಹೇಗೋ ಹಾಗೆ ಇಂದೂ ಸತ್ಯ. ಆತನು ತಿಳಿಸಿರುವ ದೃಷ್ಟಿಯಿಂದ ಮಾತ್ರ ನಮ್ಮ ಅನ್ವೇಷಣೆ ಫಲದಾಯಕವಾದೀತು; ಆಗಂತುಕರಾಗಿ ಹೋಗಲು ಸಾಧ್ಯವಿಲ್ಲ; ಆದರೆ ಸಾಮಾನ್ಯ ಅನ್ವೇಷಣೆಯಲ್ಲಿ ಸಮಾನರಾಗಿ, ಸಹೋದ್ಯೋಗಿಗಳೆಂದು ಸ್ವಾಗತವಿದ್ದರೆ ಮಾತ್ರ ಸಾಧ್ಯ. ಕೆಲವು ದೇಶಗಳಲ್ಲಿ ಮುಖ್ಯವಾಗಿ ಬ್ರಿಟಿಷ್ ಡೊಮಿನಿಯನ್‌ಗಳಲ್ಲಿ ನಮ್ಮ ಜನರಿಗೆ ಅಪಮಾನಗೊಳಿಸುವ ಯತ್ನ ನಡೆದಿದೆ. ನಮಗೆ ಆ ಡೊಮಿನಿಯನ್ ಜನ ಬೇಕಿಲ್ಲ. ಈಗ ನಾವು ಪರದಾಸ್ಯದಲ್ಲಿ ನರಳುತ್ತಿರಬಹುದು; ಅದರ ಎಲ್ಲ ಗೋಳಿನ ಹೊರೆಯಿಂದ ಕುಗ್ಗಿರಬಹುದು, ಆದರೆ ಬಿಡುಗಡೆಯ ದಿನ ಬಹಳ ದೂರಿಲ್ಲ. ಯಾವ ದೇಶಕ್ಕೂ ಕಡಮೆ ಇಲ್ಲದ ದೇಶದ ನಾಗರಿಕರು ನಾವು; ನಮ್ಮ ಜನ್ಮಭೂಮಿ, ನಮ್ಮ ಜನ, ನಮ್ಮ ಸಂಸ್ಕೃತಿ ಮತ್ತು ನಮ್ಮ ಸಂಪ್ರದಾಯಗಳಲ್ಲಿ ಉಜ್ವಲ ಅಭಿಮಾನವಿದೆ. ಆದರೆ ಆ ಅಭಿಮಾನ ಭಾವಾವೇಶದ ಜೀರ್ಣವಸ್ತುವಾಗಬಾರದು ಮತ್ತು ಅದಕ್ಕೇ ಅಂಟಿಕೊಂಡು ಕುಳ್ಳಿರಬಾರದು. ಅದರಲ್ಲಿ ಏಕಾಂತ ಭಾವನೆಯಾಗಲಿ, ನಮಗಿಂತ ಭಿನ್ನರೀತಿಯದನ್ನು ಹೀಯಾಳಿಸುವ ಮನೋಬುದ್ಧಿಯಾಗಲಿ ಇರಬಾರದು ನಮ್ಮ ಅನೇಕ ದೌರ್ಬಲ್ಯಗಳನ್ನೂ, ದೋಷಗಳನ್ನೂ ಮತ್ತು ಅವುಗಳ ನಿವಾರಣಾಸಕ್ತಿಯನ್ನೂ ಎಂದೂ ಮರೆಯಬಾರದು. ಮಾನವ ನಾಗರಿಕತೆ ಮತ್ತು ಪ್ರಗತಿಯಲ್ಲಿ ಇತರರೊಂದಿಗೆ ನಮ್ಮ ಸರಿಯಾದ ಸ್ಥಾನ ಪಡೆಯಬೇಕಾದರೆ ನಾವು ಬಹು ದೂರ ಮತ್ತು ಬಹಳ ಮುಂದೆ ಹೋಗಬೇಕು. ನಮಗಿರುವ ಕಾಲಅತ್ಯಲ್ಪ, ವಿಳಂಬಿಸುವಂತಿಲ್ಲ; ಓಡಬೇಕು; ಪ್ರಪಂಚದ ಗತಿಯೂ ನಾಗಾಲೋಟದಿಂದ ಸಾಗುತ್ತಿದೆ. ಇತರ ಸಂಸ್ಕೃತಿಗಳನ್ನು ಸ್ವಾಗತಿಸಿ ಜೀರ್ಣಿಸಿಕೊಳ್ಳುವುದು ಭಾರತದ ನೀತಿಯಾಗಿತ್ತು. ರಾಷ್ಟ್ರ ಸಂಸ್ಕೃತಿಗಳು ಮಾನವಕುಲದ ಅಂತರರಾಷ್ಟ್ರೀಯ ಸಂಸ್ಕೃತಿಯೊಂದಿಗೆ ಬೆರೆತು ನಾಳಿನ "ಒಂದು ಪ್ರಪಂಚ"ದ ಕಡೆ ನಾವು ಹೋಗುತ್ತಿರುವುದರಿಂದ ಆಗುಣದ ಆವಶ್ಯಕತೆ ಇಂದು ಇನ್ನೂ ಹೆಚ್ಚು ಇದೆ. ಆದ್ದರಿಂದ ವಿದ್ಯೆ, ಜ್ಞಾನ, ಸ್ನೇಹ ಮತ್ತು ಸಹಕಾರ ಎಲ್ಲೆಲ್ಲಿ ದೊರೆಯುತ್ತದೆಯೋ ಅಲ್ಲೆಲ್ಲಿ ಸೇರಿ ಸಾಮಾನ್ಯ ಕೆಲಸಗಳಲ್ಲಿ ಸಹಕರಿಸೋಣ; ಆದರೆ ಯಾರ ಭಿಕ್ಷೆಯೂ, ಔದಾರ್ಯವೂ ನಮಗೆ ಬೇಕಿಲ್ಲ. ಈ ರೀತಿ ನಿಜವಾದ ಭಾರತೀಯರಾಗಿ, ಏಷ್ಯನರಾಗಿ ಜೊತೆಗೆ ಉತ್ತಮ ಅಂತರ ರಾಷ್ಟ್ರೀಯವಾದಿಗಳೂ ಪ್ರಪಂಚದ ನಾಗರಿಕರೂ ಆಗೋಣ.

ಭಾರತದಲ್ಲಿ ಮತ್ತು ಪ್ರಪಂಚದಲ್ಲಿ ನಮ್ಮ ತಲೆಮಾರಿನ ಕಥೆ ಎಂದರೆ ಗೋಳಿನ ಕಥೆ. ಇನ್ನೂ ಸ್ವಲ್ಪ ಕಾಲ ತಳ್ಳೇವು, ಆದರೆ ನಮ್ಮ ದಿನವೂ ಮುಗಿಯುತ್ತದೆ; ಇತರರಿಗೆ ದಾರಿಕೊಡುತ್ತೇವೆ, ಅವರು ತಮ್ಮ ಬಾಳು ಬಾಳಿ ಮುಂದಿನ ಘಟ್ಟಕ್ಕೆ ತಮ್ಮ ಹೊರೆ ಸಾಗಿಸುತ್ತಾರೆ. ಕೊನೆಗೊಳ್ಳುತ್ತಿರುವ ಈ ಸಣ್ಣ ಅಂಕದಲ್ಲಿ ನಮ್ಮ ಪಾತ್ರ ನಾವು ಯಾವ ರೀತಿ ಅಭಿನಯಿಸಿದ್ದೇವೆ? ನಾನರಿಯೆ. ಅದನ್ನು ಬೇರೊಂದು ಯುಗದವರು ನಿರ್ಣಯಿಸುತ್ತಾರೆ. ಜಯಾಪಜಯ ಅಳೆಯಲು ನಮಗೆ ಇರುವ ಮಾಪನ ಯಾವುದು? ಅದೂ ನಾನರಿಯೆ. ಜೀವನವು ನಮ್ಮನ್ನು ಕಠಿಣ ಕಂಡಿದೆ ಎಂದು ನಾವು ದೂರುವಂತಿಲ್ಲ; ಏಕೆಂದರೆ ನಮ್ಮ ಆತ್ಮನಿರ್ಣಯದ ದಾರಿಯೇ ಅದು. ಪ್ರಾಯಶಃ ನಮ್ಮ ಮೇಲೆ ಅಷ್ಟು ಕ್ರೌರ್ಯವನ್ನೂ ತೋರಿಸಿಲ್ಲ. ಸಾವಿಗೆ ಅಂಜಿ ಜೀವನ ನಡೆಸದೆ, ಸಾವಿನ ಅಂಚಿನಲ್ಲಿ ಇರುವವರು ಮಾತ್ರ ಜೀವನದ ಸವಿ ಬಲ್ಲರು. ನಮ್ಮ ತಪ್ಪುಗಳು ಏನೇ ಇರಲಿ ಅಲ್ಪ ಮನಸ್ಸು, ನಾಚಿಕೆ ಮತ್ತು ಹೇಡಿತನ ತೋರಿಸಿಲ್ಲ. ವ್ಯಕ್ತಿಶಃ ನಮಗೆ

ಇದೇ ಒಂದು ಸಾಧನೆ. " ಮನುಷ್ಯನ ಅತ್ಯಂತ ಪ್ರೇಮ ವಸ್ತುವೆಂದರೆ ಅವನ ಬಾಳು ; ಅವನಿಗಿರುವುದು ಒಂದೇ ಬಾಳು; ಆದ್ದರಿಂದ ಹೇಡಿತನ ಮತ್ತು ಅಲ್ಪತನದ ಅಪಮಾನ ಸೋಂಕದಂತೆ, ಮುಂದೆ ನಿಷ್ಕಾರಣ ಕೊರಗದಂತೆ, ಸಾಯುವಾಗ ಸಹ " ನನ್ನ ಪೂರ್ಣ ಜೀವನ ಮತ್ತು ಶಕ್ತಿಗಳು ಪ್ರಪಂಚದ ಅತ್ಯುತ್ತಮ ಧ್ಯೇಯಕ್ಕೆ ; ಮಾನವನ ಬಿಡುಗಡೆಗೆ ವಿನಿಯೋಗವಾಗಿದೆ ಎಂದು ಹೇಳುವಂತೆ ಬಾಳಬೇಕು " ಎಂದು ಲೆನಿನ್ ಹೇಳಿದ್ದಾನೆ.

---

## ಹಿನ್ನುಡಿ

### ಇಲಾಹಾಬಾದ್ : ಡಿಸೆಂಬರ್ ಇಪ್ಪತ್ತೊಂಬತ್ತು : ೧೯೪೫

೧೯೪೫ ನೆ ಮಾರ್ಚ್ ಮತ್ತು ಏಪ್ರಿಲ್ ತಿಂಗಳಲ್ಲಿ ಅಹಮದ್ ನಗರ ಕೋಟೆಯಲ್ಲಿ ಸೆರೆ ಇಟ್ಟದ್ದ ಕಾಂಗ್ರೆಸ್ ಕಾರ್ಯಕಾರಿ ಸಮಿತಿಯ ಸದಸ್ಯರನ್ನೆಲ್ಲ ಚದುರಿಸಿ ಅವರವರ ಪ್ರಾಂತಗಳಿಗೆ ಕಳುಹಿಸಿದರು. ಸೆರೆಮನೆ ಮುಚ್ಚಿ ಪ್ರಾಯಶಃ ಆ ಕೋಟೆಯನ್ನು ಸೈನ್ಯಾಧಿಕಾರಿಗಳ ವಶ ಕೊಟ್ಟಿರಬಹುದು. ಶ್ರೀ ಗೋವಿಂದ ವಲ್ಲಭ ಪಂತ, ಆಚಾರ್ಯ ನರೇಂದ್ರ ದೇವ ಮತ್ತು ನಾನು ಮೂರು ಜನರನ್ನು ಮಾರ್ಚ್ ೨೮ ನೆಯ ದಿನ ಅಹಮದ್‌ನಗರದಿಂದ ನೈನಿ ಸೆರೆಮನೆಗೆ ಕರೆತಂದರು. ನಮ್ಮ ಹಳೆಯ ಸಹೋದ್ಯೋಗಿಗಳು ಅನೇಕರಿದ್ದರು. ರಫಿ ಅಹಮದ್ ಕಿದ್ವಾಯ್ ಅಲ್ಲಿದ್ದವರಲ್ಲಿ ಒಬ್ಬರು. ೧೯೪೨ ರ ಆಗಸ್ಟ್ ತಿಂಗಳಲ್ಲಿ ನಮ್ಮ ಬಂಧನವಾದ ಮೇಲೆ ನಡೆದ ಘಟನೆಗಳ ನಿಜವಾದ ಸಮಾಚಾರ ನಮಗೆ ದೊರೆತದ್ದು ಅದೇ ಮೊದಲು ; ಏಕೆಂದರೆ ನೈನಿ ಯಲ್ಲಿದ್ದವರೆಲ್ಲ ಅನಂತರ ಬಂಧನವಾದವರು. ನೈನಿಯಿಂದ ಬರೇಲಿಯ ಬಳಿ ಇಜತ್ ನಗರ ಸೆರೆಮನೆಗೆ ನಾವು ಮೂರು ಜನರನ್ನು ಕರೆದೊಯ್ದರು. ಅನಾರೋಗ್ಯದ ನಿಮಿತ್ತ ಗೋವಿಂದ ವಲ್ಲಭ ಪಂತರ ಬಿಡುಗಡೆ ಯಾಯಿತು. ನರೇಂದ್ರ ದೇವ ಮತ್ತು ನಾನು ಈ ಸೆರೆಮನೆಯ ಒಂದು ಕೋಣೆಯಲ್ಲಿ ಎರಡು ತಿಂಗಳು ಇದ್ದೆವು. ಜೂನ್ ಆರಂಭದಲ್ಲಿ ನಮ್ಮಿಬ್ಬರನ್ನೂ ಹತ್ತು ವರ್ಷಗಳಿಗೆ ಮೊದಲೇ ನನಗೆ ಚಿರಪರಿಚಿತವಾಗಿದ್ದ ಅಲ್ಮೋರ ಬೆಟ್ಟದ ಸೆರೆಮನೆಗೆ ಕರೆದೊಯ್ದರು. ಜೂನ್ ಹದಿನೈದನೆಯ ದಿನ, ೧೯೪೨ ರಲ್ಲಿ ನಮ್ಮ ಬಂಧನವಾದ ೧,೦೪೧ ದಿನಗಳ ನಂತರ ನಮ್ಮಿಬ್ಬರ ಬಿಡುಗಡೆಯಾಯಿತು. ಈ ರೀತಿ ಅತಿ ದೀರ್ಘವಾದ ನನ್ನ ಒಂಭತ್ತನೆ ಸೆರೆಮನೆವಾಸ ಮುಕ್ತಾಯಗೊಂಡಿತು.

ಅಲ್ಲಿಂದೀಚೆಗೆ ಆರುವರೆ ತಿಂಗಳು ಕಳೆದಿವೆ. ಬಹು ದೀರ್ಘ ಕಾಲದ ಸೆರೆಮನೆಯ ಏಕಾಂತವಾಸ ದಿಂದ ಜನಜಂಗುಳಿ, ಎಡೆಯಿಲ್ಲದ ಕೆಲಸ ಮತ್ತು ಬಿಡುವಿಲ್ಲದ ಪ್ರಯಾಣ ಆರಂಭವಾಯಿತು. ಮನೆಯಲ್ಲಿ ಒಂದು ರಾತ್ರಿ ಮಾತ್ರ ಕಳೆದು ಮುಂಬೈಗೆ ಕಾರ್ಯಕಾರಿ ಸಭೆಗೆ ಹೊರಟೆ. ಅನಂತರ ವೈಸರಾಯ್ ಕರೆದ ಸಿಮಲಾ ಸಮ್ಮೇಳನ. ಹೊಸ ಪರಿವರ್ತಿತ ವಾತಾವರಣಕ್ಕೆ ಹೊಂದಿಕೊಳ್ಳುವುದು ಸ್ವಲ್ಪ ಕಷ್ಟವಾಯಿತು ; ಸುಲಭವಾಗಿ ಸೇರಿಕೊಳ್ಳಲು ಆಗಲಿಲ್ಲ. ಎಲ್ಲ ಪರಿಚಿತವಿದ್ದ, ಹಳೆಯ ಸ್ನೇಹಿತ ಸಹೋದ್ಯೋಗಿಗಳನ್ನು ನೋಡುವುದು ಒಳ್ಳೆಯದೆನಿಸಿದರೂ ನಾನು ಯಾರೋ ಹೊರಗಿನವನಂತೆ ಪರಕೀಯನಂತೆ ಕಂಡೆ. ಬೆಟ್ಟ ಸಾಲುಗಳು, ಹಿಮ ಆಚ್ಛಾದಿತ ಗಿರಿ ಶಿಖರಗಳ ಕಡೆ ನನ್ನ ಮನಸ್ಸು ಹೋಯಿತು. ಸಿಮಲಾ ಕೆಲಸ ಮುಗಿದೊಡನೆ ಕಾಶ್ಮೀರಕ್ಕೆ ಓಡಿದೆ. ಕಾಶ್ಮೀರ ಕಣಿವೆಯಲ್ಲಿ ಕಾಲ ಕಳೆಯದೆ ಎತ್ತರದ ಗಿರಿ ಕಂದರಗಳಿಗೆ ಕಾಲು ನಡಗೆ ಹೊರಟೆ. ಒಂದು ತಿಂಗಳು ಕಾಶ್ಮೀರದಲ್ಲಿ ಕಳೆದು ಜನಜಂಗುಳಿ ಮತ್ತು ನಿತ್ಯ ಜೀವನದ ಸಡಗರ ಮತ್ತು ಬೇಸರಗಳಿಗೆ ಹಿಂದುರುಗಿದೆ.

ಕಳೆದ ಮೂರು ವರ್ಷಗಳ ಘಟನೆಗಳ ಚಿತ್ರ ಬಂದು ಕ್ರಮೇಣ ನನ್ನ ಮನಸ್ಸಿನ ಮೇಲೆ ಮೂಡಿತು. ನಾವು ನಿರೀಕ್ಷಿಸಿದ್ದಕ್ಕಿಂತ ಹೆಚ್ಚು ಘಟನೆಗಳು ನಡೆದವೆಂದು ಇತರರಂತೆ ನನಗೂ ತೋರಿತು. ನಮ್ಮ ಜನರು ಈ ಮೂರು ವರ್ಷಗಳ ಕಾಲ ನರಕ ಯಾತನೆ ಅನುಭವಿಸಿದ್ದರು ; ಯಾರ ಮುಖ ಕಂಡರೂ ಆ ನರಕಯಾತನೆಯ ಚಿಹ್ನೆ. ಭಾರತವೇ ಅದ್ಭುತ ಪರಿವರ್ತನೆ ಹೊಂದಿತ್ತು. ಮೇಲೆ ಶಾಂತಿಯುತವಿದ್ದರೂ

ಒಳಗೆ ಸಂಶಯ, ಪ್ರಶ್ನೆ, ನಿರಾಶೆ ಮತ್ತು ಕೋಪ; ಮತ್ತು ಒಂದು ಬಗೆಯ ಅದುಮಿದ ಆವೇಗವಿತ್ತು. ನಮ್ಮ ಬಿಡುಗಡೆ ಮತ್ತು ಘಟನೆಗಳು ರೂಪುಗೊಂಡ ರೀತಿಯಲ್ಲಿ ಸನ್ನಿವೇಶವೇ ಪರಿವರ್ತನೆಯಾಯಿತು. ಮೇಲಿನ ಪ್ರಶಾಂತ ವಾತಾವರಣ ಕದಡಿ ಭಯಂಕರ ಅಲೆಗಳೆದ್ದವು. ದೇಶಾದ್ಯಂತ ಉತ್ಸಾಹದ ಅಲೆ ಎದ್ದಿತು. ಮೂರು ವರ್ಷದ ಕಟ್ಟು ಕಳಚಿ ಕಿತ್ತೊಗೆದು ಜನತೆಯು ತನ್ನ ಮೇಲೆ ಮುಸುಕಿದ್ದ ಚಿಪ್ಪು ಒಡೆದು ಹೊರಬಿದ್ದಿತು. ಅಷ್ಟು ದೊಡ್ಡ ಜನಸ್ತೋಮ, ಅವರ ಉತ್ಸಾಹದ ಉದ್ವೇಗ, ಸ್ವಾತಂತ್ರ್ಯದ ಮಹದಾಸೆ ಹಿಂದೆ ನಾನೆಂದೂ ಕಂಡಿರಲಿಲ್ಲ. ಯುವಕರು, ಸ್ತ್ರೀಯರು, ಹುಡುಗರು, ಹುಡುಗಿಯರು, ಎಲ್ಲರೂ ಏನಾದರೂ ಮಾಡಬೇಕೆಂದು ಕೆಂಡಕಾರುತ್ತಿದ್ದರು; ಏನು ಮಾಡಬೇಕೆಂದು ಮಾತ್ರ ಯಾರಿಗೂ ತಿಳಿದಿರಲಿಲ್ಲ.

ಯುದ್ಧ ಅಂತ್ಯಗೊಂಡು ಅಣುಬಾಂಬು ಹೊಸ ಯುಗದ ಸಂಕೇತವಾಯಿತು. ಈ ಬಾಂಬಿನ ಪ್ರಯೋಗದಿಂದ, ಅಧಿಕಾರದಾಸೆಯ ರಾಜಕೀಯದ ಡೊಂಕು ಮಾರ್ಗಗಳಿಂದ ಇನ್ನೂ ನಿರಾಸೆಯಾಯಿತು. ಹಳೆಯ ಸಾಮ್ರಾಜ್ಯಗಳು ಮುಂದುವರಿದೇ ಇದ್ದವು. ಇಂಡೊನೇಷ್ಯ ಮತ್ತು ಇಂಡೋಚೀನದ ಘಟನೆಗಳು ಇನ್ನೂ ಅಸಹ್ಯವಾದವು. ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿದ್ದ ಆ ದೇಶಗಳ ಜನರ ಮೇಲೆ ಭಾರತೀಯ ಸೈನ್ಯ ಉಪಯೋಗಿಸಿ ನಮ್ಮ ಮನಸ್ಸಿನ ಖೇದವನ್ನೂ ಕಹಿಯನ್ನೂ ಇಮ್ಮಡಿಸಿದರು. ಇದರಿಂದ ನಮ್ಮ ಅಸಹಾಯಕತೆ ಇನ್ನೂ ಸ್ಪಷ್ಟವಾಯಿತು. ದೇಶದ ವಾತಾವರಣ ಬಿಸಿಯಾಗತೊಡಗಿತು.

ಯುದ್ಧ ವರ್ಷಗಳಲ್ಲಿ, ಮಲಯ ಮತ್ತು ಬರ್ಮದಲ್ಲಿ ಸಿದ್ಧಗೊಳಿಸಿದ ಭಾರತೀಯ ರಾಷ್ಟ್ರೀಯ ಸೈನ್ಯಪಡೆಯ ಕಥೆಯು ಏಕಾಏಕಿ ದೇಶದ ಮೂಲೆ ಮೂಲೆಗೂ ಹರಡಿ ಅದ್ಭುತ ಉತ್ಸಾಹ ಹುಟ್ಟಿಸಿತು. ಸೈನ್ಯ ಶಾಸನದ ಪ್ರಕಾರ ಕೆಲವು ಅಧಿಕಾರಿಗಳ ಮೇಲೆ ನಡೆಸಿದ ವಿಚಾರಣೆಯಿಂದ ಎಂದೂ ಯಾವ ಘಟನೆಯಿಂದಲೂ ಆಗದ ತಳಮಳವೆದ್ದು ಅದು ಇಡೀ ದೇಶವನ್ನೇ ಕಲಕಿತು. ಅವರೆಲ್ಲರೂ ದೇಶಕ್ಕೆ ಭಾರತದ ಸ್ವಾತಂತ್ರ್ಯ ಯುದ್ಧದ ಸಂಕೇತವಾದರು. ಭಾರತದ ನಾನಾ ಧರ್ಮಗಳ ಹಿಂದೂ, ಮುಸ್ಲಿಂ, ಸೀಖ, ಕ್ರೈಸ್ತ ಧರ್ಮಗಳ ಜನರೆಲ್ಲರೂ ಆ ಸೈನ್ಯದಲ್ಲಿದ್ದುದರಿಂದ ಅವರು ನಾನಾ ಧರ್ಮಗಳ ಐಕ್ಯತೆಯ ಸಂಕೇತವಾದರು. ತಮ್ಮಲ್ಲಿನ ಕೋಮುವಾರು ಸಮಸ್ಯೆ ಅವರು ಬಗೆಹರಿಸಿದ್ದರು. ನಾವೇಕೆ ಬಗೆಹರಿಸಲು ಸಾಧ್ಯವಿಲ್ಲ?

ಭಾರತದಲ್ಲಿ ಸಾರ್ವತ್ರಿಕ ಚುನಾವಣೆಗಳು ನಾಳೆ ನಡೆಯಬೇಕು. ಈಗ ಎಲ್ಲರ ದೃಷ್ಟಿ ಈ ಚುನಾವಣೆಗಳ ಮೇಲೆ- ಆದರೆ ಚುನಾವಣೆಗಳೂ ಮುಗಿಯುತ್ತವೆ. ಆಮೇಲೆ? ಮುಂದಿನ ವರ್ಷ ಭೀಕರ ಬಿರುಗಾಳಿ, ಸಂಕಟ, ನೋವು ನಮಗೆ ಸಿದ್ಧವೆಂದು ತೋರುತ್ತದೆ- ಸ್ವಾತಂತ್ರ್ಯದ ತಳಹದಿಯ ಮೇಲಲ್ಲದೆ ಭಾರತದಲ್ಲಾಗಲಿ, ಬೇರೆಡೆಯಲ್ಲಾಗಲಿ ಶಾಂತಿ ನೆಲೆಸಲು ಸಾಧ್ಯವೇ ಇಲ್ಲ.

---

# ಕಾವ್ಯಾಲಯದ ಪ್ರಕಟನೆಗಳು

**ಕಥೆ, ಕಾದಂಬರಿ, ಚಿತ್ರಗಳು :**

| | | | |
|---|---|---|---|
| ಆರು ಹಂಸಗಳು .... | ೦ | ೮ | ೦ |
| ಇದ್ದರೂ ಇರಬಹುದು .... | ೨ | ೪ | ೦ |
| ಇಂದ್ರವಜ್ರ .... | ೦ | ೧೪ | ೦ |
| ಈಸೋಪನ ನೀತಿ ಕಥೆಗಳು—(ಸಚಿತ್ರ) .... | ೨ | ೮ | ೦ |
| ಗೌರಿಯ ಮದುವೆ (ಕಿರುಕಾದಂಬರಿ) | ೧ | ೪ | ೦ |
| ಚಂದ್ರನನ್ನು ತಂದರು .... | ೦ | ೮ | ೦ |
| ದೇಶವೇ ಅವರ ತಾಯಿ .... | ೧ | ೪ | ೦ |
| ನಿರಾಶ್ರಿತೆ .... | ೧ | ೧೨ | ೦ |
| ನೀತಿ ಚಿಂತಾಮಣಿ .... | ೩ | ೨ | ೦ |
| ಪತಾಕ್ಷಿ .... | ೧ | ೪ | ೦ |
| ಪುಟ್ಟರಸು .... | ೧ | ೦ | ೦ |
| ಪೋರಿ .... | ೦ | ೮ | ೦ |
| ಬೆಕ್ಕೋಜಿ .... | ೦ | ೮ | ೦ |
| ಭೂಗರ್ಭಯಾತ್ರೆ .... | ೧ | ೧೨ | ೦ |
| ಮಲೆನಾಡಿನ ಚಿತ್ರಗಳು .... | ೧ | ೧೨ | ೦ |
| ಮಾಡಿದ್ದುಣ್ಣೋ ಮಹಾರಾಯ .... | ೩ | ೦ | ೦ |
| ರಥಸಪ್ತಮಿ ಮತ್ತು ಇತರ ಚಿತ್ರಗಳು .... | ೧ | ೦ | ೦ |
| ರಾಬಿನ್ಸನ್ ಕ್ರೂಸೋಕಥೆ .... | ೨ | ೪ | ೦ |
| ರಾಮಾಚಾರಿಯ ನೆನಪು .... | ೧ | ೪ | ೦ |
| ರುದ್ರವೀಣೆ .... | ೧ | ೮ | ೦ |
| ಶಿವರಾತ್ರಿ .... | ೨ | ೪ | ೦ |
| ಶ್ರೀಪತಿಯ ಕಥೆಗಳು .... | ೨ | ೪ | ೦ |
| ಹೂವಿನ ಹಾಸಿಗೆ .... | ೧ | ೪ | ೦ |
| ಸುಮತಿ ಮದನ ಕುಮಾರರ ಚರಿತ್ರೆ | ೩ | ೪ | ೦ |

**ನಾಟಕಗಳು :**

| | | | |
|---|---|---|---|
| ಅಹಲ್ಯೆ (ಗೀತನಾಟಕ) .... | ೨ | ೪ | ೦ |
| ಅಷಾಢಭೂತಿ .... | ೧ | ೦ | ೦ |
| ಗೋಕುಲ ನಿರ್ಗಮನ (ಗೀತ ರೂಪಕ) .... | ೧ | ೦ | ೦ |
| ದಹನ ಚಿತ್ರ .... | ೦ | ೮ | ೦ |
| ದೋಣಿಯ ದಿನದ ಮತ್ತು ಕವಿ .... | ೧ | ೦ | ೦ |
| ನನ್ನ ಗೋಪಾಲ (ಮಕ್ಕಳ ನಾಟಕ) | ೦ | ೮ | ೦ |
| ಬಿರುಗಾಳಿ .... | ೧ | ೮ | ೦ |
| ಮೂರು ನಾಟಕಗಳು .... | ೧ | ೧೨ | ೦ |
| ಯಮನ ಸೋಲು ; ವಾಲ್ಮೀಕಿಯ ಭಾಗ್ಯ .... | ೧ | ೦ | ೦ |
| ವಿಕಟಕವಿ ವಿಜಯ—(ರಾಜಕೀಯ ಪ್ರಹಸನ)— .... | ೨ | ೪ | ೦ |
| ಶಬರಿ .... | ೦ | ೮ | ೦ |
| ಶೂದ್ರ ತಪಸ್ವಿ ಮತ್ತು ಬಲಿದಾನ .... | ೧ | ೪ | ೦ |

**ಪ್ರಬಂಧಗಳು, ಭಾಷಣಗಳು, ಗದ್ಯ ಲೇಖನಗಳು :**

| | | | |
|---|---|---|---|
| ಅರ್ಥಶಾಸ್ತ್ರ .... | ೫ | ೦ | ೦ |
| ಈಚಲಮರದ ಕೆಳಗೆ .... | ೧ | ೧೨ | ೦ |
| ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ : ಭಾಗ ೧ .... | ೩ | ೦ | ೦ |
| ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ : ಭಾಗ ೨ .... | ೧ | ೧೨ | ೦ |
| ಕುಣಿಗಲ ರಾಮಶಾಸ್ತ್ರಿಗಳ ಚರಿತ್ರೆ .... | ೨ | ೪ | ೦ |
| ಜಗತ್ತುಗಳ ಹುಟ್ಟುಸಾವು | | | |
| ಕಾವ್ಯ ವಿಹಾರ .... | ೧ | ೧೨ | ೦ |
| ಕಾವ್ಯ ಸಮೀಕ್ಷೆ .... | ೨ | ೦ | ೦ |
| ತಪೋನಂದನ .... | ೧ | ೧೨ | ೦ |
| ಪಕ್ಷಿಗಾನ .... | ೧ | ೪ | ೦ |
| ಬಾಪೂಜಿಗೆ ಬಾಷ್ಪಾಂಜಲಿ .... | ೦ | ೮ | ೦ |
| ರಾಜ್ಯಶಾಸ್ತ್ರ .... | ೫ | ೦ | ೦ |
| ಶೈಲಿ : ಭಾಗ ೧ .... | ೨ | ೦ | ೦ |
| ಶ್ರೀರಾಮಕೃಷ್ಣಪರಮಹಂಸ .... | ೩ | ೧೨ | ೦ |
| ಸಾಹಿತ್ಯ ಪ್ರಚಾರ .... | ೧ | ೪ | ೦ |
| ಸಾಹಿತ್ಯ ಶಕ್ತಿ .... | ೩ | ೪ | ೦ |
| ಹಗಲುಗನಸುಗಳು .... | ೧ | ೪ | ೦ |

**ಕವಿತೆ :**

| | | | |
|---|---|---|---|
| ಅಗ್ನಿಹಂಸ .... | ೧ | ೮ | ೦ |
| ಅನ್ತಃಪುರಗೀತೆ .... | ೩ | ೮ | ೦ |
| ಉಯ್ಯಾಲೆ .... | ೧ | ೧೨ | ೦ |
| ಕಟ್ಟುವೆವು ನಾವು .... | ೧ | ೪ | ೦ |
| ಕಥನ ಕವನಗಳು .... | ೧ | ೮ | ೦ |
| ಕನ್ನಡ ಋತುಸಂಹಾರ .... | ೦ | ೧೨ | ೦ |
| ಕಲಾಸುಂದರಿ .... | ೧ | ೮ | ೦ |
| ಕಿಂಕಿಣಿ (ವಚನಕವನಗಳು) .... | ೧ | ೪ | ೦ |
| ಕೃತ್ತಿಕೆ (ಸಾನೆಟ್‌ಗಳು) .... | ೧ | ೪ | ೦ |
| ಕೊಳಲು .... | ೧ | ೮ | ೦ |
| ಗಣೇಶ ದರ್ಶನ .... | ೧ | ೮ | ೦ |
| ಗದಾಯುದ್ಧ ಸಂಗ್ರಹ (ರನ್ನ) .... | ೩ | ೦ | ೦ |
| ಚಟಾಕಿ (ಮಕ್ಕಳ ಪದ್ಯಗಳು) .... | ೦ | ೮ | ೦ |
| ಚಂದುಮಾಮ (ಮಕ್ಕಳ ಪದ್ಯಗಳು) | ೦ | ೮ | ೦ |
| ಚಿತ್ರಾಂಗದಾ .... | ೧ | ೮ | ೦ |
| ಜೇನಾಗುವಾ ! .... | ೧ | ೪ | ೦ |
| ನವಿಲು .... | ೧ | ೪ | ೦ |
| ಪಕ್ಷಿಕಾಶಿ .... | ೧ | ೮ | ೦ |

ಇವೇ ಮೊದಲಾದುವು

ಕಾವ್ಯಾಲಯ : : ಪ್ರಕಾಶಕರು : : ಮೈಸೂರು